सत्यमेवोद्धराम्यहम्



# RIG-VEDA

# ಋಗ್ವೇದ

ಭಾಗ—೩೨

ಐತರೇಯ ಬ್ರಾಹ್ಮಣ—ಭಾಗ ೨

(ಅಧ್ಯಾಯಗಳು ೧೬—೩೦)

ಅನುವಾದಕ:

ಆಸ್ಥಾನ ಮಹಾವಿದ್ವಾನ್

ಹೆಚ್. ಪಿ. ವೆಂಕಟರಾವ್

ಶ್ರೀ ಪಂಚಾಚಾರ್ಯ

ಎಲೆಕ್ಟ್ರಿಕ್ ಪ್ರೆಸ್

ಮೈಸೂರು


ಋಗ್ವೇದಸಂಹಿತಾ
ಐತರೇಯಬ್ರಾಹ್ಮಣ— ಎರಡನೇ ಭಾಗ
(ಅಧ್ಯಾಯಗಳು ೧೪—೩೦)

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಭಾಗ—೩೨



# RIG-VEDA

# ಋಗ್ವೇದ



ಸಾಯಣಭಾಷ್ಯಯುತವೂ, ಕರ್ನಾಟಕಭಾಷಾವಿವರಣೆಸಹಿತವೂ ಆದ

## ಐತರೇಯಬ್ರಾಹ್ಮಣ— ಎರಡನೇ ಭಾಗ

(ಅಧ್ಯಾಯಗಳು ೧೬—೩೦)



*Translated with Exhaustive Critical Notes and Explanations*

*by*

ASTHANA MAHAVIDWAN

**H. P. VENKATA RAO**

*Editor*





*Printed at*
SREE PANCHACHARYA ELECTRIC PRESS MYSORE
1962



ಯದುವಂಶಪಯಃಪಾರಾವಾರಸುಧಾಕರರೂ, ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ,
ಧರ್ಮಪರಾಯಣರೂ, ಮೈಸೂರು ದೇಶದ ರಾಜ್ಯಪಾಲರೂ ಆದ ಶ್ರೀಮನ್ಮಹಾರಾಜ

**ಶ್ರೀಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ. ಸಿ. ಬಿ., ಜಿ. ಸಿ. ಎಸ್. ಐ., ರವರು**

# ಪೀಠಿಕೆ

ಋಗ್ವೇದಕ್ಕೆ ಸೇರಿದ ಈ ಐತರೇಯಬ್ರಾಹ್ಮಣವು ನಲವತ್ತು ಅಧ್ಯಾಯಗಳನ್ನು ಒಳಗೊಂಡು ಯಜ್ಞಯಾಗಾದಿ ವಿಷಯಗಳನ್ನೂ ಅವುಗಳ ವಿಸ್ತಾರವಾದ ವಿಮರ್ಶೆಯನ್ನೂ ಪ್ರತಿಪಾದಿಸುವ ಗ್ರಂಥವಾಗಿದೆ. ಇದರಲ್ಲಿರುವ ೪೦ ಅಧ್ಯಾಯಗಳನ್ನು ಮೂರು ಭಾಗಗಳಲ್ಲಿ ಮುದ್ರಿಸಲಾಗಿದೆ. ಮೊದಲನೇ ಭಾಗದಲ್ಲಿ ಸಾಮಾನ್ಯವಾಗಿ ಯಜ್ಞದಲ್ಲಿ ಅನುಸರಿಸಬೇಕಾದ ಕ್ರಮಗಳನ್ನೂ ವಿಧಿಗಳನ್ನೂ ವಿವರಿಸುವ ಮೊದಲಿನ ಹದಿಮೂರು ಅಧ್ಯಾಯಗಳಿವೆ. ಎಂದರೆ ಅಗ್ನಿಷ್ಟೋಮಯಾಗವೆಂಬ ಅತಿಮುಖ್ಯವಾದ ಯಜ್ಞದ ವಿವರಣೆ ಇದೆ. ಇದಕ್ಕೆ ಪ್ರಕೃತಿಯಾಗವೆಂದು ಹೆಸರು. ಎಂದರೆ ಇದು ಇತರ ಯಜ್ಞಗಳಿಗೆ ಮೂಲಭೂತವಾದುದು. ಮುಖ್ಯವಾದ ವಿಷಯಗಳಲ್ಲಿ ಈ ಪ್ರಕೃತಿಯಾಗವನ್ನನುಸರಿಸಿ ಕೆಲವು ವ್ಯತ್ಯಾಸಗಳೊಡನೆ ಆಚರಿಸುವ ಯಾಗಗಳಿಗೆ ವಿಕೃತಿಯಾಗಗಳೆಂದು ಹೆಸರು. ಎರಡನೇ ಭಾಗವಾದ ಈ ಗ್ರಂಥದಲ್ಲಿ ಈ ವಿಧವಾದ ವಿಕೃತಿಯಾಗಗಳಾದ ಅನೇಕ ಯಜ್ಞಗಳ ವಿವರಣೆ ಇದೆ. ಮೂರನೇ ಭಾಗದಲ್ಲಿ ಈ ಗ್ರಂಥವು ಪರಿಸಮಾಪ್ತಿಯಾಗಿರುವುದು ಮತ್ತು ಆರಣ್ಯಕವೆಂಬ ಭಾಗವೂ ಇದರಲ್ಲಿ ಅಂತರ್ಗತವಾದ ಐತರೇಯವೆಂಬ ಬಹುಮುಖ್ಯವಾದ ಉಪನಿಷತ್ತಿನ ವಿವರಣೆಯೂ ಇರುವುದು. ಈ ಐತರೇಯೋಪನಿಷತ್ತು ಮುಖ್ಯವಾದ ಮತ್ತು ಪ್ರಸಿದ್ಧಿಯಾದ ದಶೋಪನಿಷತ್ತುಗಳಲ್ಲಿ ಒಂದಾಗಿರುವುದು. ಇದಕ್ಕೆ ಅನೇಕರು ಭಾಷ್ಯವನ್ನು ಬರೆದಿರುವರು.

ಪ್ರಕೃತ ವಿಮರ್ಶೆಮಾಡುತ್ತಿರುವ ಈ ಗ್ರಂಥದಲ್ಲಿ ವಿಕೃತಿಯಾಗಗಳ ವಿಮರ್ಶೆಯಲ್ಲದೆ ಬ್ರಹ್ಮೋದ್ಯವೆಂಬ ಪರಬ್ರಹ್ಮ ಸ್ವರೂಪದ ವಿಸ್ತಾರವಾದ ವಿವರಣೆಯೂ ಪ್ರಣವ(ಓಂ ಎಂಬ)ಮಹಾಮಂತ್ರದ ಉತ್ಪತ್ತಿಸ್ವರೂಪ ಮೊದಲಾದವುಗಳ ವಿವರಣೆಯೂ ಇದೆ. ಬ್ರಹ್ಮೋದ್ಯದ ವಿಷಯದಲ್ಲಿ—

**ತೇಜಸಾ ವಾ ಏಷ ಬ್ರಹ್ಮವರ್ಚಸೇನ ವ್ಯೃಧ್ಯತೇ । ಯೋಽಶ್ವಮೇಧೇನ ಯಜತೇ ಹೋತಾ ಚ ಬ್ರಹ್ಮಾ ಚ ಬ್ರಹ್ಮೋದ್ಯಂ ವದತಃ । ತೇಜಸಾ ಚೈವೈನಂ ಬ್ರಹ್ಮವರ್ಚಸೇನ ಚ ಸಮರ್ಧಯತಃ । ದಕ್ಷಿಣತೋ ಬ್ರಹ್ಮಾ ಭವತಿ । ದಕ್ಷಿಣತ ಆಯತನೋ ವೈ ಬ್ರಹ್ಮಾ । ಬಾರ್ಹಸ್ಪತ್ಯೋ ವೈ ಬ್ರಹ್ಮಾ । ಬ್ರಹ್ಮವರ್ಚಸಮೇವಾಸ್ಯ ದಕ್ಷಿಣತೋ ದಧಾತಿ । ತಸ್ಮಾದ್ದಕ್ಷಿಣೋಽರ್ಧೋ ಬ್ರಹ್ಮವರ್ಚಸಿತರಃ । ಉತ್ತರತೋ ಹೋತಾ ಭವತಿ । ಉತ್ತರತ ಆಯತನೋ ವೈ ಹೋತಾ । ಆಗ್ನೇಯೋ ವೈ ಹೋತಾ । ತೇಜೋ ವಾ ಅಗ್ನಿಃ । ತೇಜ ಏವಾಸ್ಯೋತ್ತರತೋ ದಧಾತಿ । ತಸ್ಮಾದುತ್ತರೋಽರ್ಧಸ್ತೇಜಸ್ವಿತರಃ ॥** (ತೈ. ಬ್ರಾ. ೩-೯-೫-೨೦, ೨೧)

ಎಂದು ತೈತ್ತಿರೀಯಬ್ರಾಹ್ಮಣದಲ್ಲಿ ಹೇಳಿದೆ. ಎಂದರೆ, ಮುಖ್ಯವಾದ ಅಶ್ವಮೇಧ ಮೊದಲಾದ ಯಜ್ಞಗಳಲ್ಲಿ ಯಜ್ಞಾಗ್ನಿಯ ಉತ್ತರಭಾಗದಲ್ಲಿ ಕುಳಿತಿರುವ ಹೋತೃವೆಂಬ ಋತ್ವಿಜನೂ, ದಕ್ಷಿಣಭಾಗದಲ್ಲಿ ಕುಳಿತಿರುವ ಬ್ರಹ್ಮನೆಂಬ ಋತ್ವಿಜನೂ ಪರಬ್ರಹ್ಮ ಸ್ವರೂಪವನ್ನು (ಇದಕ್ಕೆ ಬ್ರಹ್ಮೋದ್ಯವೆಂದು ಹೆಸರು) ಪರಸ್ಪರ ಚರ್ಚೆಮಾಡುವರು ಎಂದಿದೆ. ಋಗ್ವೇದದಲ್ಲಿಯೂ ಸಹ—

**ಏತಾ ವಿಶ್ವಾ ಸವನಾ ತೂತುಮಾ ಕೃಷೇ ಸ್ವಯಂ ಸೂನೋ ಸಹಸೋ ಯಾನಿ ದಧಿಷೇ ।**
**ವರಾಯ ತೇ ಪಾತ್ರಂ ಧರ್ಮಣೇ ತನಾ ಯಜ್ಞೋ ಮಂತ್ರೋ ಬ್ರಹ್ಮೋದ್ಯತಂ ವಚಃ ॥**

(ಋ. ಸ. ೧೦-೫೦-೬)

ಎಂದಿದೆ. ಎಂದರೆ ಮುಖ್ಯವಾದ ಯಜ್ಞಗಳಲ್ಲಿ ಋತ್ವಿಜರಲ್ಲಿ ಮುಖ್ಯರಾದ ಹೋತೃವೂ ಬ್ರಹ್ಮನೂ [ಯಜ್ಞಕುಂಡದ ಉತ್ತರ ದಕ್ಷಿಣ ಭಾಗಗಳಲ್ಲಿ ಕುಳಿತು ಪರಬ್ರಹ್ಮಸ್ವರೂಪವನ್ನು ವಿಮರ್ಶೆಮಾಡುವರು ಎಂದಿದೆ. ಈ ಬ್ರಹ್ಮಸ್ವರೂಪವನ್ನು ವಿವರಿಸುವ ಕೆಲವು ಋಗ್ವೇದ ಮಂತ್ರಗಳನ್ನು ಅರ್ಥಸಹಿತವಾಗಿ ಇಲ್ಲಿ ವಿವರಿಸಲಾಗಿದೆ. ಈ ಗ್ರಂಥದ ವಿಷಯವಾಗಿ ಹೇಳಬೇಕಾದ ಸಂಗತಿಗಳನ್ನೆಲ್ಲಾ ೩೧ ನೇ ಭಾಗದ ಪೀಠಿಕೆಯಲ್ಲೇ ವಿಸ್ತಾರವಾಗಿ ತಿಳಿಸಿರುವುದರಿಂದ, ಹೆಚ್ಚಾಗಿ ಹೇಳಬೇಕಾದ ವಿಷಯಗಳೇನೂ ಇರುವುದಿಲ್ಲ.

ವೇದಸಾಹಿತ್ಯದಲ್ಲಿ ಅತಿಮುಖ್ಯವೂ ಪ್ರಾಚೀನವೂ ಆದ ಋಗ್ವೇದಸಂಹಿತೆಯು ಮತ್ತು ಇದರ ಮುಂದಿನ ಗ್ರಂಥಗಳು ಕನ್ನಡಭಾಷೆಯಲ್ಲಿ ಇದೇ ಪ್ರಥಮವಾಗಿ ಅಚ್ಚಾಗಿ ಕನ್ನಡ ಸಾಹಿತ್ಯಾಭಿವೃದ್ಧಿಗೆ ಕಾರಣವಾಗಿವೆ. ಇದುವರೆಗೆ ಋಗ್ವೇದಕ್ಕೆ ಸಂಬಂಧಪಟ್ಟ ೩೩ ಗ್ರಂಥಗಳು ಪ್ರಕಟವಾಗಿವೆ. ಈ ಪುಸ್ತಕಗಳು ದೊಡ್ಡ ಸೈಜಿನ (ಡೆಮ್ಮಿ ಕಾಲುಭಾಗ) ಸುಮಾರು ೩೬೦೦೦ ಪೇಜುಗಳಿಗಿಂತಲೂ ಹೆಚ್ಚಾಗಿ ಒಳಗೊಂಡು ಕನ್ನಡ ಭಾಷೆಯಲ್ಲಿಯೇ ಅತಿ ದೊಡ್ಡ ಗ್ರಂಥವೆಂದು ಪರಿಗಣಿಸಲ್ಪಡತಕ್ಕುದಾಗಿದೆ ಇದರಂತೆ ಇತರ ಮೂರು ವೇದಗಳೂ ಉಪನಿಷತ್ತುಗಳೂ ಪ್ರಕಟವಾಗಲು ನಮ್ಮ ಘನಸರ್ಕಾರದವರೂ ಕೇಂದ್ರಸರ್ಕಾರದವರೂ ಪ್ರಗತಿಪರವಾದ ಈಗಿನ ಮಂತ್ರಿಮಂಡಲವೂ ನೆರವನ್ನು ನೀಡಿ ಉದಾರವಾಗಿ ಆಶ್ರಯವನ್ನೂ ಪ್ರೋತ್ಸಾಹವನ್ನೂ ನೀಡಿದರೆ, ವೇದಸಾಹಿತ್ಯವನ್ನು ಕನ್ನಡಿಸುವ ಕಾರ್ಯವು ಸಂಪೂರ್ಣವಾಗುತ್ತದೆ.

ಅತಿ ಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ ಸರ್ವಶಾಸ್ತ್ರಗಳಿಗೂ ಮೂಲಭೂತವೂ ಆದ ಇಂತಹ ಋಗ್ವೇದ ಸಂಹಿತೆಯನ್ನೂ, ವೇದಸಾಹಿತ್ಯಕ್ಕೆ ಸಂಬಂಧಪಟ್ಟ ಇತರ ಗ್ರಂಥಗಳನ್ನೂ ಸರಳವಾದ ಕನ್ನಡಭಾಷೆಯಲ್ಲಿ ವಿಮರ್ಶಾನುವಾದ ಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ ಕರ್ನಾಟಕ ಸಿಂಹಾಸನಾಧೀಶ್ವರರೂ ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ.** ಮಹಾಪ್ರಭುವರ್ಯರೂ, ಘನ ಸರ್ಕಾರದವರೂ ಬಹು ದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯ ನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಮಾಡುತ್ತಿರುವುದು ಕರ್ನಾಟಕರಾಜ್ಯದ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ ಅವರ ಕುಟುಂಬಕ್ಕೂ ಪ್ರಗತಿಪರರಾದ ಸಚಿವರಾದಿಯಾಗಿ ಸಮಸ್ತಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕಫಲಗಳಾದ ಆಯುರಾರೋಗ್ಯೈಶ್ವರ್ಯಾದಿ ಸಕಲಸಂಪತ್ತನ್ನೂ, ಪಾರಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು
ಪ್ಲವನಾಮ ಸಂ|| ಪುಷ್ಯ ಬಹುಳ
ತ್ರಯೋದಶಿ ಶುಕ್ರವಾರ
೧೯೬೨ ನೇ ಫೆಬ್ರವರಿ, ೨ನೇ ತಾ||

ಅನುವಾದಕ
**ಹೆಚ್. ಪಿ. ವೆಂಕಟರಾವ್**
ಆಸ್ಥಾನ ಮಹಾವಿದ್ವಾನ್.

# ಐತರೇಯಬ್ರಾಹ್ಮಣದ ವಿಷಯಾನುಕ್ರಮಣಿಕೆ ಭಾ-೨.

## ಅಧ್ಯಾಯಗಳು ೧೪ ರಿಂದ ೩೦ ರ ವರೆವಿಗೆ.



ಪುಟಸಂಖ್ಯೆ

ಪುಟಸಂಖ್ಯೆ



ಹದಿನೆಂಟನೆಯ ಅಧ್ಯಾಯವು—

ಪುಟಸಂಖ್ಯೆ

ಪುಟಸಂಖ್ಯೆ

ಪುಟಸಂಖ್ಯೆ

ಪುಟಸಂಖ್ಯೆ



ಇಪ್ಪತ್ತೊಂಭತ್ತನೆಯ ಅಧ್ಯಾಯವು—

ಪುಟಸಂಖ್ಯೆ

ಮೂವತ್ತನೆಯ ಅಧ್ಯಾಯವು—



ವಿಷಯಾನುಕ್ರಮಣಿಕೆ ಸಮಾಪ್ತವು.



॥ ಶ್ರೀಃ ॥

॥ ಶ್ರೀಮಹಾಗಣಾಪತಯೇ ನಮಃ ॥

ಸಾಯಣಭಾಷ್ಯಸಹಿತಂ

# ಐತರೇಯಬ್ರಾಹ್ಮಣಂ



**ಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯ ಬ್ರಾಹ್ಮಣವು**



## ಚತುರ್ದಶಾಧ್ಯಾಯೇ ಪ್ರಥಮಃ ಖಂಡಃ

**ಹದಿನಾಲ್ಕನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು**



[ಇತರ ಯಜ್ಞಗಳ ವಿಷಯದಲ್ಲಿ ಅಗ್ನಿಷ್ಟೋಮಯಾಗವು ಎಲ್ಲಾ ಯಜ್ಞಗಳಿಗೂ ಮಾದರಿಯಾಗಿರುವುದೆಂಬ ವಿಚಾರವು ಮತ್ತು ಅಗ್ನಿಷ್ಟೋಮದ ಮೂಲಸ್ವರೂಗ, ಅರ್ಥವಿವರಣೆ ಮತ್ತು ಎಲ್ಲಾ ಯಜ್ಞಗಳಿಗೂ ಇದಕ್ಕೂ ಇರುವ ಸಾಧಾರಣ ಸ್ವರೂಪವು ಮತ್ತು ಚತುಷ್ಟೋಮ ಮತ್ತು ಜ್ಯೋತಿಷ್ಟೋಮದ ಸ್ವರೂಪವು.]

[ಅಗ್ನಿಷ್ಟೋಮಯಾಗದ ಮೂಲ, ಅದರ ಹೆಸರು ಮತ್ತು ಅರ್ಥವಿವರಣೆ.]



**ತ್ರಯೋದಶೇ ಸೋಮಕಥಾ ಪ್ರಕೀರ್ತಿತಾ**
**ರಾಜಕ್ರಯಾರ್ಥಾ ಸವನಾನ್ವಿತಾಪಿ ಚ ।**
**ಸ್ಯಾದ್ವೈಶ್ವದೇವಂ ಚ ಮರುತ್ವತೀಯಂ**
**ತತ್ತದ್ವಿಶೇಷಾ ಉದಿತಾ ಕ್ರಮೇಣ ॥**

ಇದುವರೆಗೂ ವಿವರಿಸಿದ ಹದಿಮೂರನೆಯ ಅಧ್ಯಾಯದಲ್ಲಿ ಸೋಮಯಾಗದ ವಿವರಗಳನ್ನೂ, ಸೋಮವಿಕ್ರಯಣ, ಪ್ರಾತಸ್ಸವನಾದಿ ಮೂರು ಸವನಗಳು, ವೈಶ್ವದೇವಶಸ್ತ್ರ, ಮರುತ್ವತೀಯ ಶಸ್ತ್ರಮಂತ್ರಗಳು ಮೊದಲಾದ ವಿಶೇಷ ವಿಷಯಗಳನ್ನು ವಿವರಿಸಿದ್ದಾಯಿತು. ಈಗ ಈ ಹದಿನಾಲ್ಕನೆಯ ಅಧ್ಯಾಯದಲ್ಲಿ ಅಗ್ನಿಷ್ಟೋಮಯಾಗವು ಸಮಸ್ತ ಯಜ್ಞಗಳಿಗೂ ಮೂಲಭೂತ ಅಥವಾ ಮಾದರಿಯಾಗಿರುವುದೆಂಬ ವಿಷಯವನ್ನು ತಿಳಿಸಲಾಗುವುದು. ಈ ವಿಷಯದಲ್ಲಿ ಒಂದು ಪೂರ್ವೇತಿಹಾಸವನ್ನು ತಿಳಿಸುತ್ತಾರೆ—

ದೇವಾ ವಾ ಅಸುರೈರ್ಯುದ್ಧಮುಪಪ್ರಾಯನ್ವಿಜಯಾಯ ತಾನಗ್ನಿ-
ರ್ನಾನ್ವಕಾಮಯತೈತುಂ ತಂ ದೇವಾ ಅಬ್ರುವನ್ನಪಿ ತ್ವಮೇಹ್ಯ-
ಸ್ಮಾಕಂ ವೈ ತ್ವಮೇಕೋಽಸೀತಿ ಸ ನಾಸ್ತುತೋಽನ್ವೇಷ್ಯಾಮೀತ್ಯಬ್ರ-
ವೀತ್ಸ್ತುತ ನು ಮೇತಿ ತಥೇತಿ ತಂ ತೇ ಸಮುತ್ಕ್ರಮ್ಯೋಪನಿವೃ-
ತ್ತ್ಯಾಸ್ತುವಂಸ್ತಾಂಸ್ತುತೋಽನು ಪ್ರೈತ್ ॥

ಅಥ ಚತುರ್ದಶಾಧ್ಯಾಯೇ ಪೂರ್ವೋಕ್ತೋಽಗ್ನಿಷ್ಟೋಮಃ ಸರ್ವಕ್ರತೂನಾಂ ಪ್ರಕೃತಿತ್ವೇನ ಸ್ತೂಯತೇ—ತದರ್ಥಮುಪಾಖ್ಯಾನಮಾಹ—

ಯದಾ ದೇವಾ ವಿಜಯಾರ್ಥಮಸುರೈಃ ಸಹ ಯುದ್ಧಮುಪಕ್ರಾಂತವಂತಸ್ತದಾನೀಂ ಅಗ್ನಿಸ್ತಾನ್ದೇವಾನನುಪಶ್ಚಾದೈತುಮಾಗಂತುಂ ನಾಕಾಮಯತ ॥ ಅಗ್ನಿಮಿಚ್ಛಾರಹಿತಂ ದೇವಾ ಏವಮಬ್ರುವನ್ ॥ ಹೇಽಗ್ನೇ ತ್ವಮಪ್ಯೇಹ್ಯಾಗಚ್ಛ ಅಸ್ಮಾಕಮೇವಮಧ್ಯೇ ತ್ವಮೇಕೋಽಸಿ ನ ತ್ವತ್ತೋಽನ್ಯ ಇತಿ ತತಃ ಸೋಽಗ್ನಿರೇವಮಬ್ರವೀದ್ಯುಷ್ಮಾಭಿರಸ್ತುತಃ ಸನ್ನಹಂ ನಾನ್ವೇಷ್ಯಾಮಿ ಯುಷ್ಮಾಕಂ ಪೃಷ್ಠತೋ ನ ಗಮಿಷ್ಯಾಮಿ ತಸ್ಮಾನ್ಮಾಂ ಕ್ಷಿಪ್ರಮೇವ ಮಾ ಸ್ತುತ ಸ್ತೋತ್ರಂ ಕುರುತೇತಿ ॥ ದೇವಾಸ್ತಥೇತ್ಯಂಗೀಕೃತ್ಯ ಸಮುತ್ಕ್ರಮ್ಯೋತ್ಥಾಯೋಪನಿವೃತ್ಯಾಗ್ನೇರಭಿಮುಖತ್ವೇನ ನಿವೃತ್ತಿಂ ಕೃತ್ವಾ ತಮಗ್ನಿಮಸ್ತುವನ್ ॥ ಸೋಽಪ್ಯಗ್ನಿಃ ಸ್ತುತಃ ಸಂಸ್ತಾನ್ದೇವಾನನುಸೃತ್ಯ ಪ್ರೈದ್ಯುದ್ಧಾರ್ಥಂ ಪ್ರಕರ್ಷೇಣಾಗಚ್ಛತ್ ॥

ಪೂರ್ವದಲ್ಲಿ ದೇವತೆಗಳಿಗೂ ಅಸುರರಿಗೂ ಯುದ್ಧವು ಸಂಭವಿಸಿತು. ಆಗ ದೇವತೆಗಳೆಲ್ಲರೂ ಯುದ್ಧಸನ್ನದ್ಧರಾಗಿ ಹೊರಟರೂ ಅಗ್ನಿಯು ಮಾತ್ರ ಅವರ ಜತೆಯಲ್ಲಿ ಹೊರಟು ಯುದ್ಧಮಾಡಲು ಇಷ್ಟಪಡಲಿಲ್ಲ. ಈ ವಿಷಯವನ್ನು ತಿಳಿದ ದೇವತೆಗಳು ಅಗ್ನಿಯನ್ನು ಕುರಿತು ಇಂತೆಂದರು—ಎಲೈ ಅಗ್ನಿಯೇ ನಾವೆಲ್ಲರೂ ಅಸುರರೊಡನೆ ಯುದ್ಧಮಾಡುವುದಕ್ಕಾಗಿ ಹೊರಟಿರುವೆವು. ನೀನೂ ನಮ್ಮಲ್ಲಿ ಒಬ್ಬನಷ್ಟೆ. ಆದ್ದರಿಂದ ನೀನೂ ನಮ್ಮೊಡನೆ ಬಂದು ಯುದ್ಧಮಾಡಿ ನಾವು ಜಯವನ್ನು ಗಳಿಸುವುದಕ್ಕೆ ಸಹಾಯಮಾಡಬೇಕಾದುದು ನ್ಯಾಯವು. ಆದ್ದರಿಂದ ನಮ್ಮೊಡನೆ ಬಾ ಎಂದರು. ಇದನ್ನು ಕೇಳಿ ಅಗ್ನಿಯು—ಎಲೈ ದೇವತೆಗಳೇ, ನೀವು ನನ್ನನ್ನು ಸ್ತುತಿಸದಿರುವುದರಿಂದ ನೀವು ಹೇಳಿದಂತೆ ಮಾಡಲು ನನಗಿಷ್ಟವಿಲ್ಲ ಎಂದರೆ ನಿಮ್ಮೊಡನೆ ನಾನು ಬರುವುದಿಲ್ಲ. ನಾನು ಬರಬೇಕೆಂದು ನಿನಗೆ ಇಷ್ಟವಿದ್ದಲ್ಲಿ ನನ್ನನ್ನು ಸ್ತುತಿಸಿ ಎಂದನು. ದೇವತೆಗಳು ಹಾಗೆಯೇ ಅಗ್ನಿಯ ಮಾತನ್ನಂಗೀಕರಿಸಿ ಎಲ್ಲರೂ ಅಗ್ನಿಗಭಿಮುಖವಾಗಿ ಎದ್ದು ನಿಂತುಕೊಂಡು ಅಗ್ನಿಯನ್ನು ಸ್ತುತಿಸಿದರು. ದೇವತೆಗಳಿಂದ ಸ್ತುತನಾದ ಅಗ್ನಿಯು ಸಂತೋಷಪಟ್ಟು ಆ ದೇವತೆಗಳನ್ನು ಅನುಸರಿಸಿ ಯುದ್ಧಮಾಡುವುದಕ್ಕಾಗಿ ಹೊರಟನು.

ಸ ತ್ರಿಶ್ರೇಣಿರ್ಭೂತ್ವಾ ತ್ರ್ಯನೀಕೋಽಸುರಾನ್ಯುದ್ಧಮುಪಪ್ರಾಯದ್ವಿಜ-
ಯಾಯ ತ್ರಿಶ್ರೇಣಿರಿತಿ ಛಂದಾಂಸ್ಯೇವ ಶ್ರೇಣೀರಕುರುತ ತ್ರ್ಯನೀಕ
ಇತಿ ಸವನಾನ್ಯೇವಾನೀಕಾನಿ ತಾನಸಂಭಾವ್ಯಂ ಪರಾಭಾವಯ-
ತ್ತತೋ ವೈ ದೇವಾ ಅಭವನ್ಪರಾಸುರಾಃ ಭವತ್ಯಾತ್ಮನಾ ಪರಾಸ್ಯ
ದ್ವಿಷನ್ಪಾಪ್ಮಾ ಭ್ರಾತೃವ್ಯೋ ಭವತಿ ಯ ಏವಂ ವೇದ ॥

**ಅಗ್ನೇಯರ್ಯುದ್ಧಪ್ರಕಾರಂ ದರ್ಶಯತಿ– ಸೋಽಗ್ನಿರ್ವಿಜಯಾಯ ತ್ರಿಶ್ರೇಣಿಃ ಸೋಮ-ಪಾನಪಂಕ್ತಿಪ್ರಯುಕ್ತಸ್ತ್ರ್ಯನೀಕಸ್ತ್ರಿಭಿರನೀಕೈಃ ಸೇನಾಪತಿರೂಪೈಃ ಸೇನಾಮುಖ್ಯೈರ್ಯುಕ್ತೋಽ-ಸುರಾನ್ಪ್ರತಿ ಯುದ್ಧಮುಪಪ್ರಾಯತ್ತತ್ಸಮೀಪಂ ಪ್ರಕರ್ಷೇಣ ಗತವಾನ್ ॥ ತ್ರಿಶ್ರೇಣಿರಿತಿ ಯದುಕ್ತಂ ತತ್ರ ಗಾಯತ್ರೀತ್ರಿಷ್ಟುಬ್ಜಗತೀರೂಪಾಣಿ ಛಂದಾಸ್ಯೇವ ತಿಸ್ರಃ ಶ್ರೇಣೀರಕುರುತ ॥ ತ್ರ್ಯನೀಕ ಇತಿಯದುಕ್ತಂ ತತ್ರಪ್ರಾತಃಸವನಮಾಧ್ಯಂದಿನಸವನತೃತೀಯಸವನಾನ್ಯೇವ ತ್ರೀಣ್ಯ-ನೀಕಾನಿ ಸೇನಾಮುಖಾನ್ಯಕುರುತ ॥ ತತಸ್ತಾನಸುರಾನ್ಪುನಃ ಶತ್ರುಶೇಷೋ ಯಥಾ ನ ಸಂಭಾವ್ಯತೇ ತಥಾ ಪರಾಭವಯತ್ಪರಾಭೂತಾನಕರೋತ್॥ ತತೋ ಯುದ್ಧಾದ್ದೇವಾ ವಿಜಯಿ-ನೋಽಭೂವನ್ನಸುರಾಃ ಪರಾಭೂತಾಃ । ವೇದನಂ ಪ್ರಶಂಸತಿ ॥**

ಅನಂತರ ಅಗ್ನಿಯು ದೇವತೆಗಳನ್ನು ಮೂರು ಪ್ರಾಕಾರಗಳಿಂದಲೂ ಸೈನ್ಯವನ್ನು ಮೂರು ಸಾಲುಗಳಿಂದಲೂ ಆವರಿಸಿ ಯುದ್ಧಮಾಡಲು ಪ್ರಾರಂಭಿಸಿದನು. ಇಲ್ಲಿ ಮೂರು ಶ್ರೇಣಿ ಅಥವಾ ಪ್ರಾಕಾರಗಳೆಂದರೆ ಗಾಯತ್ರೀ, ತ್ರಿಷ್ಟುಪ್, ಜಗತೀ ಎಂಬ ಮೂರು ಛಂದಸ್ಸುಗಳು. ಸೇನಾಪಂಕ್ತಿಗಳೆಂದರೆ (ಸಾಲುಗಳು) ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯಸವನಗಳೆಂಬ ಮೂರು ಸೋಮಪಾನ ಪಂಕ್ತಿಗಳು. ಈರೀತಿ ಅಗ್ನಿಯು ತಮ್ಮ ಸೇನೆಯನ್ನು ಸಜ್ಜುಗೊಳಿಸಿ ಅಸುರರೊಡನೆ ಯುದ್ಧಮಾಡಿ ಶತ್ರುಶೇಷವು ಸ್ವಲ್ಪವೂ ಉಳಿಯದಂತೆ ಯುದ್ಧಮಾಡಿದನು. ಇದರಿಂದ ದೇವತೆಗಳು ಅಸುರರನ್ನು ಸೋಲಿಸಿ ಯುದ್ಧದಲ್ಲಿ ಜಯವನ್ನು ಗಳಿಸಿದರು. ಅಸುರರು ಸೋತು ಓಡಿಹೋದರು. ಈ ವಿಷಯವನ್ನು ತಿಳಿದಿರುವ ಪುರುಷನು ತನ್ನ ಶತ್ರುವನ್ನು ನಾಶಮಾಡಿ ಜಯವನ್ನು ಪಡೆಯುವನು. ಇಲ್ಲಿ ಶತ್ರುವೆಂದರೆ ಪಾಪ ಮೊದಲಾದ ದುಷ್ಕೃತ್ಯಗಳು.

## ಸಾ ವಾ ಏಷಾ ಗಾಯತ್ರ್ಯೇವ ಯದಗ್ನಿಷ್ಟೋಮಶ್ಚತುರ್ವಿಂಶತ್ಯಕ್ಷರಾ ವೈ ಗಾಯತ್ರೀ ಚತುರ್ವಿಂಶತಿರಗ್ನಿಷ್ಟೋಮಸ್ಯ ಸ್ತುತಶಸ್ತ್ರಾಣಿ ॥

**ಏವಮಗ್ನಿಶ್ಛಂದಸ್ತ್ರಯಸವನತ್ರಯಯುಕ್ತೋಽಗ್ನಿಷ್ಟೋಮರೂಪೋಽಭವದಿತ್ಯೇ-ಕೇನ ಪ್ರಕಾರೇಣಾಗ್ನಿಷ್ಟೋಮಂ ಸ್ತುತ್ವಾ ಪುನರಪಿ ಪ್ರಕಾರಾಂತರೇಣ ಸ್ತೌತಿ ॥ ಯೋಽಯಂ ಪೂರ್ವೋಕ್ತೋಽಗ್ನಿಷ್ಟೋಮೋಽಸ್ತಿ ಸಾ ವಾ ಏಷಾ ಗಾಯತ್ರ್ಯೇವ ॥ ಅಗ್ನಿಷ್ಟೋಮಗಾ-ಯತ್ರ್ಯೋಃ ಸಂಖ್ಯಾಸಾಮ್ಯಾತ್ ॥ ಗಾಯತ್ರೀಗತೇಷ್ವಕ್ಷರೇಷು ಯಾ ಸಂಖ್ಯಾ ಸೈವಾಗ್ನಿಷ್ಟೋ-ಮಗತೇಷು ಸ್ತೋತ್ರಶಸ್ತ್ರೇಷು। ತಥಾಹಿ–ಬಹಿಷ್ಪವಮಾನೋ ಮಾಧ್ಯಂದಿನಪವಮಾನ ಆರ್ಭವಃ-ಪವಮಾನ ಇತಿ ತ್ರೀಣಿ ಪವಮಾನಸ್ತೋತ್ರಾಣಿ ಚತ್ವಾರ್ಯಾಜ್ಯಸ್ತೋತ್ರಾಣಿ ಚತ್ವಾರಿ ಪೃಷ್ಠ-ಸ್ತೋತ್ರಾಣ್ಯೇಕಂ ಯಜ್ಞಾಯಜ್ಞೀಯಂ ಸ್ತೋತ್ರಮೇವಮೇತಾನಿ ದ್ವಾದಶ ಸಂಪನ್ನಾನಿ । ಶಸ್ತ್ರಾಣ್ಯಪಿ ತಾವಂತ್ಯೇವ । ಆಜ್ಯಪ್ರಉಗೇ ನಿಷ್ಕೇವಲ್ಯೇ ಮರುತ್ವತೀಯೇ ವೈಶ್ವದೇವಾಗ್ನಿಮಾ-ರುತೇ ಇತಿ ಹೋತುಃ ಶಸ್ತ್ರಾಣಿ ಷಟ್ । ತಥಾ ಹೋತ್ರಕಾಣಾಮಪಿ ಷಟ್ ॥ ಏವಂ ಹೋತ್ರ-ಸಂಖ್ಯಯಾಽಗ್ನಿಷ್ಟೋಮಸ್ಯ ಗಾಯತ್ರೀರೂಪತ್ವಂ ॥**

ಹಿಂದೆ ಹೇಳಿದಂತೆ ಅಗ್ನಿಗೆ ಮೂರು ಪ್ರಾಕಾರಗಳೂ, ಮೂರು (ಸೈನ್ಯದ) ಪಂಕ್ತಿಗಳೂ ಇರುವುವು ಎಂದು ಹೇಳಿದೆಯಷ್ಟೆ. ಈ ಮೂರು ವಿಭಾಗಗಳೇ ಗಾಯತ್ರೀಛಂದಸ್ಸಿನ ಮೂರು ಪಾದಗಳು ಮತ್ತು ಗಾಯತ್ರೀಛಂದಸ್ಸಿನಲ್ಲಿ ಇಪ್ಪತ್ತುನಾಲ್ಕು ಅಕ್ಷರಗಳಿರುವವು. ಅದರಂತೆ ಅಗ್ನಿಷ್ಟೋಮಯಾಗದಲ್ಲಿಯೂ ಹನ್ನೆರಡು ಶಸ್ತ್ರಗಳೂ, ಹನ್ನೆರಡು ಸ್ತೋತ್ರಗಳೂ ಸೇರಿ ಒಟ್ಟು ಇಪ್ಪತ್ತು

ನಾಲ್ಕು ಸ್ತುತಶಸ್ತ್ರಗಳುದಕ್ಕೆ. ಅದ್ದರಿಂದ ಗಾಯತ್ರೀ ಛಂದಸ್ಸಿಗೂ ಅಗ್ನಿಷ್ಟೋಮಯಾಗಕ್ಕೂ ಸಾಮ್ಯವಿದ್ದಂತಾಯಿತು. ಹೇಗೆಂದರೆ ಬಹಿಷ್ಪವಮಾನ, ಮಾಧ್ಯಂದಿನಪವಮಾನ, ಆರ್ಭವಪವಮಾನ ಎಂಬ ಮೂರು ಪವಮಾನಸ್ತೋತ್ರಗಳೂ ನಾಲ್ಕು ಆಜ್ಯಸ್ತೋತ್ರಗಳೂ, ನಾಲ್ಕು ಪೃಷ್ಠಸ್ತೋತ್ರಗಳೂ ಒಂದು ಯಜ್ಞಾಯಜ್ಞೀಯಸ್ತೋತ್ರವೂ ಸೇರಿ ಒಟ್ಟು ಹನ್ನೆರಡು ಸ್ತೋತ್ರಗಳಾಗುವುವು. ಹಾಗೆಯೇ ಆಜ್ಯ, ಪ್ರಉಗ, ನಿಷ್ಕೇವಲ್ಯ, ಮರುತ್ವತೀಯ, ವೈಶ್ವದೇವ, ಆಗ್ನಿಮಾರುತ ಎಂಬ ಆರೂ ಹೋತೃವು ಪಠಿಸಬೇಕಾದ ಶಸ್ತ್ರಮಂತ್ರಗಳು; ಹೋತೃವರ್ಗದವರು ಎಂದರೆ ಹೋತೃವಿಗೆ ಸಹಾಯಕರಾದ ಇತರ ಋತ್ವಿಜರು ಪಠಿಸಬೇಕಾದ ಶಸ್ತ್ರಮಂತ್ರಗಳು ಆರು. ಇವು ಹನ್ನೆರಡು ಶಸ್ತ್ರಮಂತ್ರಗಳು. ೯.ಆದ್ದರಿಂದ ಹನ್ನೆರಡು ಸ್ತೋತ್ರಗಳೂ, ಹನ್ನೆರಡು ಶಸ್ತ್ರಗಳೂ ಸೇರಿ ಒಟ್ಟು ಇಪ್ಪತ್ತುನಾಲ್ಕು ಸ್ತುತಶಸ್ತ್ರಗಳೆಂದು ಇಲ್ಲಿ ಹೇಳಿದೆ. ಗಾಯತ್ರೀಛಂದಸ್ಸಿನಲ್ಲಿಯೂ ಇಪ್ಪತ್ತನಾಲ್ಕು ಅಕ್ಷರಗಳಿರುವುದರಿಂದ ಅಗ್ನಿಷ್ಟೋಮಕ್ಕೂ ಗಾಯತ್ರೀಛಂದಸ್ಸಿಗೂ ಸಾಮ್ಯವಿದ್ದಂತಾಯಿತು.

ತದ್ವೈ ಯದಿದಮಾಹುಃ ಸುಧಾಯಾಂ ಹ ವೈ ವಾಜೀ ಸುಹಿತೋ ದಧಾ-
ತೀತಿ ಗಾಯತ್ರೀ ವೈ ತನ್ನ ಹ ವೈ ಗಾಯತ್ರೀ ಕ್ಷಮಾ ರಮತ
ಊರ್ಧ್ವಾ ಹ ವಾ ಏಷಾ ಯಜಮಾನಮಾದಾಯ ಸ್ವರೇತೀತ್ಯಗ್ನಿ-
ಷ್ಟೋಮೋ ವೈ ತನ್ನ ಹ ವಾ ಅಗ್ನಿಷ್ಟೋಮಃ ಕ್ಷಮಾ ರಮತ
ಊರ್ಧ್ವೋ ಹ ವಾ ಏಷ ಯಜಮಾನಮಾದಾಯ ಸ್ವರೇತಿ ॥

ಪ್ರಕಾರಾಂತರೇಣ ಗಾಯತ್ರೀಸಾಮ್ಯಂ ಸಂಪಾದ್ಯ ಪ್ರಶಂಸತಿ । ತದ್ವೈ ತತ್ರೈವ ಯಜ್ಞಸಭಾಯಾಂ ವೇದವಾದಿನೋ ಯದಿದಮಾಹುಃ । ಕಿಂ ವಚನಮಿತಿ ತದುಚ್ಯತೇ । ಸುಷ್ಠು ಧೀಯಂತೇ ಸುಕೃತಿನೋಽಸ್ಯಾಂ ದಿವಿ ಸಾ ದ್ಯೌಃ ಸುಧಾ ತಸ್ಯಾಮೇವ ವಾಜೀ ವಾಜೋಽನ್ನಂ ಸೋಮರೂಪಂ ಯಸ್ಮಿನ್ನಸ್ತೀತ್ಯಗ್ನಿಷ್ಟೋಮ ಉಚ್ಯತೇ ॥ ಸ ಚ ಸುಹಿತಃ ಸಾದ್ಗುಣ್ಯೇನಾನುಷ್ಠಿತೋ ದಧಾತಿ ಸುಧಾಶಬ್ದವಾಚ್ಯಾಯಾಂ ದಿವಿ ಯಜಮಾನಂ ಸ್ಥಾಪಯತೀತಿ ಯದ್ವೇದವಾದಿನಾಂ ವಚನಂ ತದ್ಗಾಯತ್ರೀ ವೈ ಗಾಯತ್ರೀಸಾಮ್ಯಮಭಿಪ್ರೇತ್ಯೈವೋಕ್ತಮಿತ್ಯರ್ಥಃ । ನ ಹ ವಾ ಇತ್ಯಾದಿನಾ ತದೇವ ಸ್ಪಷ್ಟೀಕ್ರಿಯತೇ । ಕ್ಷಮೇತಿ ಸಪ್ತಮ್ಯರ್ಥೋ ವಿವಕ್ಷಿತಃ । ಕ್ಷಮಾಯಾಂ ಭೂಮೌ ಗಾಯತ್ರ್ಯಾಖ್ಯಾ ದೇವತಾ ನ ಹ ವೈ ರಮತೇ ನೈವ ಕ್ರೀಡತಿ ಕಿಂ ತ್ವೇಷಾ ಗಾಯತ್ರೀ । ಊರ್ಧ್ವಾ ಹ ವಾ ಊರ್ಧ್ವಗಾಮಿನ್ಯೇವ ಭೂತ್ವಾನುಷ್ಠಿತವಂತಂ ಯಜಮಾನಮಾದಾಯ ಸ್ವರೇತಿ ಸ್ವರ್ಗಂ ಪ್ರಾಪ್ನೋತಿ । ಏವಂ ಪ್ರಕಾರೇಣ ಯೇಯಂ ಗಾಯತ್ರೀ ವರ್ಣಿತಾ ತದ್ಗಾಯತ್ರೀರೂಪೋಽಗ್ನಿಷ್ಟೋಮ ಏವ ತಯೋಃ ಸಮತ್ವಾತ್ ॥ ಅಗ್ನಿಷ್ಟೋಮೋಽಪಿ ಕ್ಷಮಾಯಾಂ ನ ರಮತೇ ಕಿಂತು ಅನುಷ್ಠಿತ ಊರ್ಧ್ವಗಾಮೀ ಸನ್ನೇಷ ಯಜಮಾನಮಾದಾಯ ಸ್ವರ್ಗಮಾಪ್ನೋತಿ ॥

ಗಾಯತ್ರೀಸಾಮ್ಯವನ್ನು ಪ್ರಕಾರಾಂತರವಾಗಿ ವಿವರಿಸುವರು—ಯಜ್ಞಸಭೆಯಲ್ಲಿ ವೇದವನ್ನು ದಿಳಿದ ವಿದ್ವಾಂಸರಾದವರು ಈರೀತಿ ಹೇಳುವರು—ಅಗ್ನಿಷ್ಟೋಮಯಾಗವನ್ನು ಮಾಡಿದ ಪುರುಷನು ಯಾವ ಸ್ಥಳದಲ್ಲಿ (ಎಂದರೆ ಸ್ವರ್ಗದಲ್ಲಿ) ಸ್ಥಿರಿಸಲ್ಪಡುವನೋ ಆ ಸ್ಥಳಕ್ಕೆ ಸುಧಾ ಎಂದು ಹೆಸರು. ಸುಧಾ ಎಂದರೆ ಸ್ವರ್ಗವು. ವಾಜೀ ಎಂದರೆ ಅನ್ನವು ಅಥವಾ ಅನ್ನರೂಪವಾದ ಆಹಾರವು. ಎಂದರೆ ಸೋಮರೂಪವಾದ ಅನ್ನವು. ಇಂತಹ ಸೋಮವು ಯಾವ ಸ್ವರ್ಗದಲ್ಲಿರುವುದೋ

ಆ ಸ್ವರ್ಗಕ್ಕೆ ಗಾಯತ್ರಿಯು ಪುರುಷನನ್ನು ಒಯ್ಯುವುದು. ಅದರಂತೆ ಅಗ್ನಿಷ್ಟೋಮವೆಂಬ ಯಜ್ಞವೂ ಅದನ್ನು ಅನುಷ್ಠಾನ ಮಾಡುವ ಪುರುಷನನ್ನು ಸ್ವರ್ಗಕ್ಕೆ ಒಯ್ಯುವುದು. ಗಾಯತ್ರೀಮಂತ್ರದಲ್ಲಿ ಇಪ್ಪತ್ತುನಾಲ್ಕು ಅಕ್ಷರಗಳಿರುವವು. ಅಗ್ನಿಷ್ಟೋಮದಲ್ಲಿಯೂ ಇಪ್ಪತ್ತುನಾಲ್ಕು ಸ್ತುತಶಸ್ತ್ರಮಂತ್ರಗಳಿರುವವು. (ಎಂದರೆ ಹನ್ನೆರಡು ಸ್ತೋತ್ರಗಳೂ ಹನ್ನೆರಡು ಶಸ್ತ್ರ ಮಂತ್ರಗಳೂ ಇರುವವು. ಇಲ್ಲಿ ಸ್ತೋತ್ರವೆಂದರೆ ಸಾಮಗಾನವನ್ನು ಮಾಡುವ ಸಾಮವೇದಮಂತ್ರವು. ಶಸ್ತ್ರವೆಂದರೆ ದೇವತೆಗಳನ್ನು ಯಜ್ಞಗಳಲ್ಲಿ ಸ್ತುತಿಸುವ ಋಗ್ವೇದಮಂತ್ರಗಳು). ಆದ್ದರಿಂದ ಗಾಯತ್ರೀಮಂತ್ರವೂ ಅಗ್ನಿಷ್ಟೋಮಯಾಗವೂ ಅದನ್ನು ಮಾಡುವ ಪುರುಷನಿಗೆ ಎಂದರೆ ಯಜಮಾನನಿಗೆ ಉಂಟುಮಾಡುವ ಫಲವು ಈ ಲೋಕದ ಭೋಗಕ್ಕೆ ಮಾತ್ರ ಸಂಬಂಧಪಟ್ಟಿರುವುದಿಲ್ಲ. ಅದು ಯಜಮಾನನಿಗೆ ಸ್ವರ್ಗವನ್ನೂ ದೊರಕಿಸಿಕೊಡುವುದು. ಈ ವಿಷಯದಲ್ಲಿ ಗಾಯತ್ರಿಗೂ ಅಗ್ನಿಷ್ಟೋಮಕ್ಕೂ ಪರಸ್ಪರ ಸಾಮ್ಯವಿರುವುದು

**ಸ ವಾ ಏಷ ಸಂವತ್ಸರ ಏವ ಯದಗ್ನಿಷ್ಟೋಮಶ್ಚತುರ್ವಿಂಶತ್ಯರ್ಧಮಾಸೋ ವೈ ಸಂವತ್ಸರಶ್ಚತುರ್ವಿಂಶತಿರಗ್ನಿಷ್ಟೋಮಸ್ಯ ಸ್ತುತಶಸ್ತ್ರಾಣಿ ।**

ಇತ್ಥಂ ಗಾಯತ್ರೀಸಾಮ್ಯೇನ ಸ್ತುತ್ವಾ ಸಂವತ್ಸರಸಾಮ್ಯೇನ ಸ್ತೌತಿ—ಯೋಽಯಮಗ್ನಿಷ್ಟೋಮಃ ಸ ಏಷ ಸಂವತ್ಸರ ಏವ ॥ ಅರ್ಧಮಾಸಸಂಖ್ಯಾಯಾಃ ಸ್ತೋತ್ರಶಸ್ತ್ರಸಂಖ್ಯಾಯಾಶ್ಚ ಸಮಾನತ್ವಾತ್ ॥

ಗಾಯತ್ರೀಮಂತ್ರಕ್ಕೂ ಅಗ್ನಿಷ್ಟೋಮಯಜ್ಞಕ್ಕೂ ಸಾಮ್ಯವನ್ನು ಹೇಳಿ ಈಗ ಅಗ್ನಿಷ್ಟೋಮಯಜ್ಞಕ್ಕೂ ಸಂವತ್ಸರಕ್ಕೂ ಇರುವ ಸಾಮ್ಯವನ್ನು ವಿವರಿಸುವರು—ಅಗ್ನಿಷ್ಟೋಮವೇ ಸಂವತ್ಸರಸ್ವರೂಪವೆಂದು ಹೇಳಲ್ಪಡುವುದು. ಹೇಗೆಂದರೆ ಅಗ್ನಿಷ್ಟೋಮಯಾಗದಲ್ಲಿ ಸ್ತೋತ್ರಗಳು ಹನ್ನೆರಡು, ಶಸ್ತ್ರಗಳು ಹನ್ನೆರಡು ಒಟ್ಟು ಇಪ್ಪತ್ತುನಾಲ್ಕು ಸ್ತುತಶಸ್ತ್ರಗಳಿರುವವು. ಸಂವತ್ಸರದಲ್ಲಿಯೂ ಇಪ್ಪತ್ತುನಾಲ್ಕು ಅರ್ಧಮಾಸಗಳು (ಪಕ್ಷಗಳು) ಇರುವವು. ಆದ್ದರಿಂದ ಇವುಗಳಿಗೆ ಪರಸ್ಪರ ಸಾಮ್ಯವಿರುವುದು.

**ತಂ ಯಥಾ ಸಮುದ್ರಂ ಸ್ರೋತ್ಯಾ ಏವಂ ಸರ್ವೇ ಯಜ್ಞಕ್ರತವೋಽಪಿಯಂತಿ ॥**

ಸಮುದ್ರಸಾಮ್ಯೇನ ಪ್ರಶಂಸತಿ—ಸ್ರೋತ್ಯಾಃ ಪ್ರವಾಹರೂಪಾ ನದ್ಯೋ ಲೋಕೇ ಯಥಾ ಸಮುದ್ರಂ ಪ್ರಾಪ್ನುವಂತಿ ತಥೈವೋಕ್ಥ್ಯಷೋಡಶ್ಯತಿರಾತ್ರಾಹೀನಸತ್ರರೂಪಾಃ ಸರ್ವೇ ಕ್ರತವೋ ವಿಕೃತಿರೂಪಾಃ ಪ್ರಕೃತಿರೂಪಂ ತಮಗ್ನಿಷ್ಟೋಮಮಪಿಯಂತಿ ಪ್ರಾಪ್ನುವಂತಿ । ಅಗ್ನಿಷ್ಟೋಮಾತ್ಪ್ರಾಚೀನಾ ಇಷ್ಟಿಪಶುಬಂಧಾದಯೋಽಪಿ ತಮಗ್ನಿಷ್ಟೋಮಂ ಪ್ರಾಪ್ನುವಂತಿ ॥ ತಥಾ ಸತಿ ಸರ್ವಶಬ್ದೋ ಮುಖ್ಯಾರ್ಥಃ ಸಂಪದ್ಯತೇ ನ ತು ಸಂಕೋಚಃ ॥

ಈಗ ಅಗ್ನಿಷ್ಟೋಮಕ್ಕೂ ಸಮುದ್ರಕ್ಕೂ ಇರುವ ಸಾಮ್ಯವನ್ನು ತಿಳಿಸುವರು—ಭೂಮಿಯ ಮೇಲೆ ಪ್ರವಾಹರೂಪದಿಂದ ಹರಿಯುವ ಸಮಸ್ತ ನದಿಗಳೂ ತಮ್ಮ ಅಂತಿಮಸ್ಥಾನವಾದ ಸಮುದ್ರವನ್ನು ಸೇರಿ ಅದರಲ್ಲಿ ವಿಲೀನಗೊಳ್ಳುತ್ತವೆ. ಅದರಂತೆಯೇ ಸಮಸ್ತ ಯಜ್ಞಗಳೂ ಎಂದರೆ ಉಕ್ಥ್ಯ, ಷೋಡಶೀ, ಅತಿರಾತ್ರ, ಅಹೀನ ಮೊದಲಾದ ಸತ್ರರೂಪವಾದ ವಿಕೃತಿಯಾಗಗಳೂ ಅಗ್ನಿಷ್ಟೋಮದಲ್ಲಿಯೇ ಸೇರಿರುತ್ತವೆ ಎಂದರೆ ಕೆಲವು ವ್ಯತ್ಯಾಸಗಳೊಡನೆ ಪ್ರಕೃತಿಯಾಗವಾದ ಅಗ್ನಿಷ್ಟೋಮವನ್ನೇ ಹೋಲು

ತ್ತವೆ ಮತ್ತು ಅದರಲ್ಲಿ ವಿಲೀನಗೊಳ್ಳುತ್ತವೆ. ಹಾಗೆಯೇ ಅಗ್ನಿಷ್ಟೋಮಯಾಗವನ್ನು ಮಾಡುವುದಕ್ಕೆ ಪೂರ್ವಭಾವಿಯಾಗಿ ಮಾಡಬೇಕಾದ ದರ್ಶಪೂರ್ಣಮಾಸೇಷ್ಟಿ ಪಶುಬಂಧ ಮೊದಲಾದ ಯಜ್ಞಗಳೂ ಸಹ ಅಗ್ನಿಷೋಮದಲ್ಲಿಯೇ ಸೇರಿರುತ್ತವೆ. ಆದ್ದರಿಂದ ಸಮಸ್ತ ಯಜ್ಞಗಳಿಗೂ ಅಗ್ನಿಷ್ಟೋಮವೇ ಮೂಲವು ಮತ್ತು ಮಾದರಿಯಾಗಿ (ಪ್ರಕೃತಿ) ಇರುವುದು. ಎಲ್ಲಾ ಯಜ್ಞಗಳ ಸ್ವರೂಪವೂ ಅಗ್ನಿಷ್ಟೋಮಯಾಗದಲ್ಲಿಯೇ ಅಂತರ್ಗತವಾಗಿರುವುದು ಎಂದಭಿಪ್ರಾಯವು.

## *English Translatison*

(On the origin, meaning and universal nature of the Agnishtoma as the model of other sacrifices. On the Chatushtoma and Jyotishtoma.)

**(On the origin of the name "Agnishtoma" and its meaning)**

The Devas went to war with the Asuras, in order to defeat them. Agni was not willing to follow them. The Devas then said to him, "go thou also, for thou art one of us." He said, "I shall not go unless a ceremony of praise is performed for me. Do ye that now." So they did. They all rose up from their places, turned towards Agni, and performed the ceremony of praising him. After having been praised, he followed them. He having assumed the shape of three rows, attacked in three battle lines the Asuras in order to defeat them. The three rows were made only of the metres (Gayatri, Trishtubh, Jagati). The three battle lines are only the three libations, He defeated them beyond expectation. Thence the Devas put down the Asuras. The enemy, the incarnate sin (papman), the adversary of him who has such a knowledge, perishes by himself.

The Agnishtoma is just as the Gayatri. The latter has twenty-four syllables (if all its three padas are counted) and the Agnishtoma has twenty-four Stotras and Shastras.

It is just as they say: a horse if well managed (suhita) puts the rider inte ease (sudha). This does also the Gayatri. She does not stop on the earth, but takes the sacrificer up to heaven. This does also the Agnishtoma; It does not stop on earth, but takes the sacrificer up to heaven. The Agnishtoma is the year. The year has twenty-four half months, and the Agnishtoma twenty-four Stotras and Shastras. Just as waters flow into the sea, so go all sacrificial performances into the Agnishtoma (i.e. are contained in it).

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಚತುರ್ದಶಾಧ್ಯಾಯೇ ಪ್ರಥಮಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನಾಲ್ಕನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವಾದುದು.**

# ಅಥ ಚತುರ್ದಶಾಧ್ಯಾಯೇ ದ್ವಿತೀಯಃ ಖಂಡಃ

## ಹದಿನಾಲ್ಕನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ ಎಲ್ಲಾ ಯಜ್ಞಗಳ ಸ್ವರೂಪವೂ ಅಗ್ನಿಷ್ಟೋಮಯಾಗದಲ್ಲಿ ಅಂತರ್ಗತವಾಗಿ ವ್ಯಾಪಿಸಿರುವವು ]



ದೀಕ್ಷಣೀಯೇಷ್ಟಿಸ್ತಾಯತೇ ತಾಮೇವಾನು ಯಾಃಕಾಶ್ಚೇಷ್ಟಯಸ್ತಾಃ ಸರ್ವಾ ಅಗ್ನಿಷ್ಟೋಮಮಪಿಯಂತಿ ॥

ಅಗ್ನಿಷ್ಟೋಮಾದಪಿ ಪ್ರಾಚೀನಾನಾಂ ಯಜ್ಞಾನಾಮಗ್ನಿಷ್ಟೋಮಪ್ರಾಪ್ತಿಂ ದರ್ಶಯತಿ—ಅಗ್ನಿಷ್ಟೋಮಸ್ಯ ಪ್ರಾರಂಭೇ ದೀಕ್ಷಣೀಯೇಷ್ಟಿಸ್ತಾಯತೇ ವಿಸ್ತಾರ್ಯತೇ ತಾಮನು ತತ್ಸಾದೃಶ್ಯೇನ ವೇದೋಕ್ತಾಃ ಸರ್ವಾ ಅಪೀಷ್ಟಯೋ ಅಗ್ನಿಷ್ಟೋಮಂ ಪ್ರಾಪ್ನುವಂತಿ । ಅತ್ರ ವಿಕೃತಿರೂಪಾ ಏವೇಷ್ಟಯೋ ವಿವಕ್ಷಿತಾಃ ಪ್ರಕೃತಿರೂಪಯೋರ್ದರ್ಶಪೂರ್ಣಮಾಸಯೋರ್ವಕ್ಷ್ಯಮಾಣತ್ವಾತ್ ॥

ಅಗ್ನಿಷ್ಟೋಮಯಾಗವನ್ನು ಮಾಡುವುದಕ್ಕೆ ಪೂರ್ವಭಾವಿಯಾಗಿ ಆಚರಿಸಬೇಕಾದ ಸಮಸ್ತ ಇಷ್ಟಿಗಳೂ (ಇಷ್ಟಿಯೆಂದರೆ ಸಂಗ್ರಹರೂಪವಾದ ಯಜ್ಞವು) ಅಗ್ನಿಷ್ಟೋಮದಲ್ಲಿ ಸೇರಿಹೋಗಿವೆ ಎಂಬುದನ್ನು ಇಲ್ಲಿ ತಿಳಿಸುತ್ತಾರೆ—ಅಗ್ನಿಷ್ಟೋಮದ ಪ್ರಾರಂಭದಲ್ಲಿ ಯಜ್ಞಮಾಡುವ ಯಜಮಾನನು ದೀಕ್ಷೆಯನ್ನು ಕೈಗೊಳ್ಳುವಾಗ ಮಾಡಬೇಕಾದ ದೀಕ್ಷಣೀಯೇಷ್ಟಿಯನ್ನು ಹಿಂದೆಯೇ ವಿವರಿಸಲಾಗಿದೆಯಷ್ಟೆ. ಆ ದೀಕ್ಷಣೀಯೇಷ್ಟಿಯೇ ಇಷ್ಟಿಯೆಂದು ಕರೆಯಲ್ಪಡುವ ಎಲ್ಲಾ ಯಜ್ಞಗಳಿಗೂ ಮಾದರಿಯಾಗಿದೆ. ಆದ್ದರಿಂದ ಎಲ್ಲಾ ಇಷ್ಟಿಗಳೂ ಅಗ್ನಿಷ್ಟೋಮದಲ್ಲಿ ಇದ್ದಂತಾಯಿತು. ಮತ್ತು ವಿಕೃತಿರೂಪವಾದ ಇಷ್ಟಿಗಳೆಲ್ಲವೂ ಪ್ರಕೃತಿರೂಪವಾದ ದರ್ಶಪೂರ್ಣಮಾಸೇಷ್ಟಿಗಳನ್ನೇ ಅನುಸರಿಸಿರುವುದರಿಂದ ಪ್ರಕೃತಿ ಮತ್ತು ವಿಕೃತಿ ಎಂಬ ಎರಡು ವಿಧವಾದ ಇಷ್ಟಿಗಳೆಲ್ಲವೂ ಅಗ್ನಿಷ್ಟೋಮಯಾಗದಲ್ಲಿಯೇ ಇದ್ದಂತಾಯಿತು.

ಇಳಾಮುಪಹ್ವಯತ ಇಳಾವಿಧಾ ವೈ ಪಾಕಯಜ್ಞಾ ಇಳಾಮೇವಾನು ಯೇ ಕೇ ಚ ಪಾಕಯಜ್ಞಾಸ್ತೇ ಸರ್ವೇಽಗ್ನಿಷ್ಟೋಮಮಪಿಯಂತಿ ॥

ದೀಕ್ಷಣೀಯೇಷ್ಟಿಗತಚೋದಕಪ್ರಾಪ್ತೇಡೋಪಾಹ್ವಾನಸಾದೃಶ್ಯೇನ ಪಾಕಯಜ್ಞಾನಾಮಗ್ನಿಷ್ಟೋಮಪ್ರಾಪ್ತಿಂ ದರ್ಶಯತಿ—ಪಾಕಯಜ್ಞಾಶ್ಚ ಸಪ್ತಸಂಖ್ಯಾಕಾ ಹುತಃ ಪ್ರಹುತ ಆಹುತಃ ಶೂಲಗವೋ ಬಲಿಹರಣಂ ಪ್ರತ್ಯವರೋಹಣ ಮಷ್ಟಕಾಹೋಮ ಇತಿ । ಸೋಽಯಂ ಸೂತ್ರಾಂತರಕಾರಸ್ಯ ಪಕ್ಷಃ ॥ ಆಶ್ವಲಾಯನಸ್ತುಹುತಾದೀಂಸ್ತ್ರೀನೇವ ಪಾಕಯಜ್ಞಾನಾಹ ।

ತೇ ಚ ಪಾಕಯಜ್ಞಾ ಇಳಾವಿಧಾ ಇಳಾಸದೃಶಾಃ ಇಳಾ ಖಲು ವೈಷಾ ಪಾಕಯಜ್ಞ ಇತಿ ಶ್ರುತ್ಯಂತರಾತ್ । ದೀಕ್ಷಣೀಯೇಷ್ಟಾವಿಡೋಪಾಹ್ವಾನೇನ ತತ್ಸದೃಶಾಃ ಪಾಕಯಜ್ಞಾಃ ಸರ್ವೇಽಪ್ಯಗ್ನಿಷ್ಟೋಮಂ ಪ್ರಾಪ್ನುವಂತಿ ॥

ದೀಕ್ಷಣೀಯೇಷ್ಟಿಸಾಮ್ಯದಿಂದ ಸಕಲ ಇಷ್ಟಿಗಳೂ ಅಗ್ನಿಷ್ಟೋಮದಲ್ಲಿ ಇದ್ದಂತಾಯಿತು ಎಂದೂ ಹೇಳಲಾಯಿತಷ್ಟೆ. ಈಗ ಇಳಾವಿಧವನ್ನು ಅನುಸರಿಸಿರುವ ಎಲ್ಲಾ ಯಜ್ಞಗಳೂ ಪಾಕಯಜ್ಞಗಳೆಂದು ಭಾವಿಸಲ್ಪಟ್ಟು ಅಗ್ನಿಷ್ಟೋಮದಲ್ಲಿ ಅದಗಿವೆ ಎಂಬುದನ್ನು ತೋರಿಸುತ್ತಾರೆ—ಪಾಕಯಜ್ಞವೆಂದರೆ ಅಗ್ನಿಯಲ್ಲಿ ಪಕ್ವಮಾಡಿದ ಹೋಮದ್ರವ್ಯವನ್ನು ಹೋಮಮಾಡುವ ಯಜ್ಞವಿಶೇಷವು ಎಂದರ್ಥವು. ಈ ಪಾಕಯಜ್ಞವು ಏಳು ಎಂದು ಕೆಲವು ಸೂತ್ರಕಾರರು ಹೇಳಿರುವರು. ಅವು ಯಾವವೆಂದರೆ— **ಹುತಃ ಪ್ರಹುತಃ ಆಹುತಃ ಶೂಲಗವಃ ಬಲಿಹರಣಂ ಪ್ರತ್ಯವರೋಹಣಂ ಅಷ್ಟಕಾಹೋಮ** ಎಂದು. ಆಶ್ವಲಾಯನರು ಮೊದಲ ಮೂರನ್ನು ಮಾತ್ರ ಹೇಳಿರುವರು. ಈ ಪಾಕಯಜ್ಞವು ಇಳಾ ಇಳಾಸದೃಶವಾಗಿರುವವು. **ಇಳಾ ಖಲು ವೈಷಾ ಪಾಪಯಜ್ಞ** ಎಂದು ತೈತ್ತಿರೀಯಸಂಹಿತೆಯಲ್ಲಿ (ತೈ. ೧-೭-೩-೧) ಹೇಳಿದೆ. ದೀಕ್ಷಣೀಯೇಷ್ಟಿಯಲ್ಲಿ ಹೇಳಿರುವ ಇಡೋಪಾಹ್ವಾನವು ಪಾಕಯಜ್ಞವನ್ನೇ ಹೋಲುವುದರಿಂದ ಸಕಲ ಪಾಕಯಜ್ಞಗಳೂ ಅಗ್ನಿಷ್ಟೋಮದಲ್ಲಿದ್ದಂತಾಯಿತು.

**ಸಾಯಂ ಪ್ರಾತರಗ್ನಿಹೋತ್ರಂ ಜುಹ್ವತಿ ಸಾಯಂ ಪ್ರಾತರ್ವ್ರತಂ-ಪ್ರಯಚ್ಛಂತಿ ಸ್ವಾಹಾಕಾರೇಣಾಗ್ನಿಹೋತ್ರಂ ಜುಹ್ವತಿ ಸ್ವಾಹಾ-ಕಾರೇಣ ವ್ರತಂ ಪ್ರಯಚ್ಛಂತಿ ಸ್ವಾಹಾಕಾರಮೇವಾನ್ವಗ್ನಿಹೋತ್ರ ಮಗ್ನಿಷ್ಟೋಮಮಪ್ಯೇತಿ ॥**

ಅಗ್ನಿಹೋತ್ರಸ್ಯ ತತ್ಪ್ರಾಪ್ತಿಂ ದರ್ಶಯತಿ—ಯಥಾ ಪ್ರತಿದಿನಂ ಕಾಲದ್ವಯೇಽಗ್ನಿ-ಹೋತ್ರಹೋಮಸ್ತಥಾ ದೀಕ್ಷಿತಸ್ಯ ಕಾಲದ್ವಯೇ ಕ್ಷೀರಪಾನರೂಪಂ ವ್ರತಪ್ರದಾನಂ ॥ ಅಗ್ನಿ-ರ್ಜ್ಯೋತಿರಗ್ನಿಃ ಸ್ವಾಹೇತಿ ಯಥಾ ಸ್ವಾಹಾಕಾರೇಣಾಗ್ನಿಹೋತ್ರಹೋಮಸ್ತಥಾ ತೇ ನಃ ಪಾಂತು ತೇ ನೋಽವಂತು ತೇ ಭ್ಯೋನಮಸ್ತೇಭ್ಯಃ ಸ್ವಾಹೇತಿ ಸ್ವಾಹಾಕಾರೇಣ ದೀಕ್ಷಿತೋ ವ್ರತಪ್ರದಾನ-ಮಾಚರತಿ—ಅತೋ ವ್ರತಗತಸ್ವಾಹಾಕಾರಮೇವಾನುಸೃತ್ಯಾಗ್ನಿಹೋತ್ರಸ್ಯಾಗ್ನಿಷ್ಟೋಮ-ಪ್ರಾಪ್ತಿಃ ॥

ಈಗ ಅಗ್ನಿಹೋತ್ರಕ್ಕೂ ಅಗ್ನಿಷ್ಟೋಮಕ್ಕೂ ಇರುವ ಸಾದೃಶ್ಯವನ್ನು ವಿವರಿಸುವರು—ಸಾಯಂಕಾಲ ಮತ್ತು ಪ್ರಾತಃ ಕಾಲಗಳೆಂಬ ಎರಡು ವೇಳೆಗಳಲ್ಲಿಯೂ (ಪ್ರತಿದಿನದಲ್ಲಿಯೂ) ಅಗ್ನಿಹೋತ್ರವನ್ನು ಮಾಡುವರು. ಅಗ್ನಿಷ್ಟೋಮದಲ್ಲಿಯೂ ದೀಕ್ಷಿತ ನಾದವನು ಸಾಯಂಪ್ರಾತಃಕಾಲಗಳಲ್ಲಿ ಕ್ಷೀರ (ಹಾಲು) ಪಾನರೂಪವಾದ ವ್ರತವನ್ನು ಆಚರಿಸುವನು. ಅಗ್ನಿಹೋತ್ರದಲ್ಲಿ **ಅಗ್ನಿರ್ಜ್ಯೋತಿರ್ಜ್ಯೋತಿರಗ್ನಿಃ ಸ್ವಾಹಾ** ಎಂದು ಸ್ವಾಹಾಕಾರಪೂರ್ವಕವಾಗಿ ಅಗ್ನಿಹೋತ್ರದಲ್ಲಿ ಆಹುತಿಯನ್ನರ್ಪಿಸುವರು. ಅಗ್ನಿಷ್ಟೋಮದಲ್ಲಿಯೂ **ತೇ ನಃ ಪಾಂತು ತೇ ನೋಽವಂತು ತೇಭ್ಯೋ ನಮಸ್ತೇಭ್ಯಃ ಸ್ವಾಹಾ** ಎಂದು ಅಗ್ನಿಷ್ಟೋಮದಲ್ಲಿ ದೀಕ್ಷಿತನಾದವನೂ ಸ್ವಾಹಾಕಾರಪೂರ್ವಕವಾಗಿ ವ್ರತವನ್ನು ಆಚರಿಸುವನು. ಈರೀತಿಯಾಗಿ ಅಗ್ನಿಹೋತ್ರಕ್ಕೂ ಅಗ್ನಿಷ್ಟೋಮಯಾಗಕ್ಕೂ ಸಾದೃಶ್ಯವಿರುವುದು.

**ಪಂಚದಶ ಪ್ರಾಯಣೀಯೇ ಸಾಮಿಧೇನೀರನ್ವಾಹ ಪಂಚದಶ ದರ್ಶಪೂರ್ಣಮಾಸಯೋಃ ಪ್ರಾಯಣೀಯಮೇವಾನು ದರ್ಶಪೂರ್ಣಮಾಸಾವಗ್ನಿಷ್ಟೋಮಮಿತಃ ।**

ಅಗ್ನಿಷ್ಟೋಮಗತಪ್ರಾಯಣೀಯೇಷ್ಟಿಸಾದೃಶ್ಯೇನ ದರ್ಶಪೂರ್ಣಮಾಸಯೋರಗ್ನಿಷ್ಟೋಮಪ್ರಾಪ್ತಿಂ ದರ್ಶಯತಿ ॥ ಪ್ರಾಯಣೀಯಕರ್ಮಣಿ ಧಾಯ್ಯಾರಹಿತತ್ವಾತ್ಸಾಮಿಧೇನ್ಯಃ ಶ್ಟೋದಕಪ್ರಾಪ್ತಾಃ ಪಂಚದಶೈವ ತಥಾ ಪ್ರಕೃತಿಭೂತಯೋರ್ದರ್ಶಪೂರ್ಣಮಾಸಯೋರಪಿ ॥

ಅಗ್ನಿಷ್ಟೋಮದಲ್ಲಿ ನೆರವೇರಿಸುವ ಪ್ರಾಯಣೀಯೇಷ್ಟಿಗೂ ದರ್ಶಪೂರ್ಣಮಾಸೇಷ್ಟಿಗಳಿಗೂ ಸಾದೃಶ್ಯವನ್ನು ಹೇಳುವರು–(ಅಗ್ನಿಷ್ಟೋಮದ) ಪ್ರಾಯಣೀಯೇಷ್ಟಿಯಲ್ಲಿ ಪಠಿಸುವ ಸಾಮಿಧೇನೀಮಂತ್ರಗಳಲ್ಲಿ ಧಾಯ್ಯಾಮಂತ್ರಗಳನ್ನು ಸೇರಿಸದೆ ಇರುವುದರಿಂದ ಅವು ಹದಿನೈದು ಸಾಮಿದೇನೀಮಂತ್ರಗಳು ಮಾತ್ರ ಆಗುವವು. ಪ್ರಕೃತಿಭೂತವಾದ ದರ್ಶಪೂರ್ಣಮಾಸೇಷ್ಟಿಗಳಲ್ಲಿಯೂ ಹನಿನೈದು ಸಾಮಿಧೇನೀಮಂತ್ರಗಳನ್ನು ಮಾತ್ರ ಪಠಿಸುವುದರಿಂದ ಅಗ್ನಿಷ್ಟೋಮಕ್ಕೂ ದರ್ಶಪೂರ್ಣಮಾಸೇಷ್ಟಿಗಳಿಗೂ ಸಾಮ್ಯವಿದ್ದಂತಾಯಿತು.

**ಸೋಮಂ ರಾಜಾನಂ ಕ್ರೀಣಂತ್ಯೌಷಧೋ ವೈ ಸೋಮೋ ರಾಜೌಷಧಿಭಿಸ್ತಂ ಭಿಷಜ್ಯಂತಿ ಯಂ ಭಿಷಜ್ಯಂತಿ ಸೋಮಮೇವ ರಾಜಾನಂ ಕ್ರೀಯಮಾಣಮಾನು ಯಾನಿ ಕಾನಿ ಚ ಭೇಷಜಾನಿ ತಾನಿ ಸರ್ವಾಣ್ಯಗ್ನಿಷ್ಟೋಮಮಪಿಯಂತಿ ॥**

ಅಗ್ನಿಷ್ಟೋಮಗತಸೋಮದ್ವಾರಾ ಲೌಕಿಕಾನಾಮಪಿ ಸರ್ವೇಷಾಮೌಷಧಾನಾಮಗ್ನಿಷ್ಟೋಮಪ್ರಾಪ್ತಿಂ ದರ್ಶಯತಿ—ಲೋಕೇ ಯಂ ವ್ಯಾಧಿಗ್ರಸ್ತಂ ಚಿಕಿತ್ಸಕಾ ಭಿಷಜ್ಯಂತಿ ಚಿಕಿತ್ಸಂತೇ ತಂ ಪುರುಷಮೋಷಧಿಭಿರಮೃತವಲ್ಯಾದಿಭಿಶ್ಚಿಕಿತ್ಸಂತೇ ಸೋಮಸ್ಯಾಪಿ ಔಷಧತ್ವಾತ್ತಮನು ಸರ್ವಾಣ್ಯಪ್ಯೌಷಧಾನ್ಯಗ್ನಿಷ್ಟೋಮಂ ಪ್ರಾಪ್ನುವಂತಿ ।

ಅಗ್ನಿಷ್ಟೋಮಯಾಗದಲ್ಲಿ ಸೋಮವು ಮುಖ್ಯಪಾತ್ರವನ್ನು ವಹಿಸುವುದರಿಂದ ಅಗ್ನಿಷ್ಟೋಮಕ್ಕೂ ಲೋಕವ್ಯವಹಾರದಲ್ಲಿ ಬಳಸುವ ಸಮಸ್ತ ಔಷಧಿಗಳಿಗೂ ಸಂಬಂಧವಿರುವುದೆಂಬ ಸಾದೃಶ್ಯವನ್ನು ವಿವರಿಸುವರು—ಪ್ರಪಂಚವ್ಯವಹಾರದಲ್ಲಿ ರೋಗಪೀಡಿತನಾದ ಪುರುಷನನ್ನು ಅಮೃತವಲ್ಲೀ ಮೊದಲಾದ ಮೂಲಿಕೆಗಳಿಂದ ವೈದ್ಯರು ಚಿಕಿತ್ಸೆಮಾಡಿ ಗುಣಪಡಿಸುತ್ತಾರೆ. ಸೋಮವು ಸಹ ಓಷಧಿವನಸ್ಪತಿಗಳ ರಾಜನೆಂದು ಹೇಳಲ್ಪಡುವುದರಿಂದ ಸೋಮವು ಓಷಧಿರೂಪವಾಗಿದ್ದು ಅಗ್ನಿಷ್ಟೋಮಯಾಗದಲ್ಲಿ ವಿಶೇಷವಾಗಿ ಪ್ರಶಂಸೆಮಾಡಲ್ಪಡುವುದರಿಂದ ಅಗ್ನಿಷ್ಟೋಮಕ್ಕೂ ಸೋಮಕ್ಕೂ ಸಂಬಂಧವಿದ್ದಂತಾಯಿತು.

**ಅಗ್ನಿಮಾತಿಥ್ಯೇ ಮಂಥಂತ್ಯಗ್ನಿಂ ಚಾತುರ್ಮಾಸ್ಯೇಷ್ವಾತಿಥ್ಯಮೇವಾನು ಚಾತುರ್ಮಾಸ್ಯಾಗ್ನಿಷ್ಟೋಮಮಪಿಯಂತಿ ॥**

ಅಗ್ನಿಷ್ಟೋಮಗತಾತಿಥ್ಯಕರ್ಮದ್ವಾರಾ ಚಾತುರ್ಮಾಸ್ಯಯಾಗಾನಾಂ ತತ್ಪ್ರಾಪ್ತಿಂ ದರ್ಶಯತಿ—

ಆತಿಥ್ಯೇಷ್ಟಿಗೂ ಅಗ್ನಿಷ್ಟೋಮಕ್ಕೂ ಸಾದೃಶ್ಯವನ್ನು ತೋರಿಸುವರು—ಆತಿಥ್ಯೇಷ್ಟಿಯಲ್ಲಿ (ಅಗ್ನಿಷ್ಟೋಮದಲ್ಲಿ ಆಚರಿಸುವಾಗ) ಅರಣಿಗಳನ್ನು ಕಡೆದು ಅಗ್ನಿಯನ್ನು ಉತ್ಪತ್ತಿಮಾಡುವರು. ಅದರಂತೆಯೇ ಚಾತುರ್ಮಾಸ್ಯವೆಂಬ ಇಷ್ಟಿಯಲ್ಲಿಯೂ ಆತಿಥ್ಯೇಷ್ಟಿಯನ್ನು ಆಚರಿಸುವಾಗ ಅರಣಿಗಳಲ್ಲಿ ಅಗ್ನಿಮಂಥನವನ್ನು ಮಾಡುವರು. ಆದ್ದರಿಂದ ಅಗ್ನಿಷ್ಟೋಮಕ್ಕೂ ಚಾತುರ್ಮಾಸ್ಯೇಷ್ಟಿಗೂ ಅಗ್ನಿಮಂಥನದ ಮೂಲಕ ಸಾದೃಶ್ಯವಿರುವುದು.

**ಪಯಸಾ ಪ್ರವರ್ಗ್ಯೇ ಚರಂತಿ ದಾಕ್ಷಾಯಣಯಜ್ಞೇ ಪ್ರವರ್ಗ್ಯಮೇವಾನು ದಾಕ್ಷಾಯಣಯಜ್ಞೋಽಗ್ನಿಷ್ಟೋಮಮಪ್ಯೇತಿ ॥**

ಪ್ರವರ್ಗ್ಯಸಾಮ್ಯೇನ ದಾಕ್ಷಾಯಣಯಜ್ಞಸ್ಯಾಗ್ನಿಷ್ಟೋಮಪ್ರಾಪ್ತಿಂ ದರ್ಶಯತಿ— ದರ್ಶಪೂರ್ಣಮಾಸಯೋರೇವ ಗುಣವಿಕೃತಿರೂಪಃ ಕಶ್ಚಿದ್ದಾಕ್ಷಾಯಣಾಖ್ಯೋ ಯಜ್ಞಃ ॥ ತಥಾಚ ಶಾಖಾಂತರೇ ದರ್ಶಪೂರ್ಣಮಾಸಸಂನಿಧೌ ಶ್ರೂಯತೇ—'ದಾಕ್ಷಾಯಣಯಜ್ಞೇನ ಸ್ವರ್ಗಕಾಮೋ ಯಜೇತ' ಇತಿ ॥ ತಸ್ಯ ಚ ಪ್ರವರ್ಗ್ಯಸ್ಯ ಚ ಕ್ಷೀರದ್ರವ್ಯೇಣ ಸಾಮ್ಯಂ ॥

ದಾಕ್ಷಾಯಣಯಜ್ಞಕ್ಕೂ ಅಗ್ನಿಷ್ಟೋಮಯಾಗಕ್ಕೂ ಪ್ರವರ್ಗ್ಯಸಾಮ್ಯದಿಂದ ಸಾದೃಶ್ಯವನ್ನು ವಿವರಿಸುವರು—ಪ್ರಕೃತಿರೂಪವಾದ ದರ್ಶಪೂರ್ಣಮಾಸೇಷ್ಟಿಗಳಲ್ಲಿ ಕೆಲವು ವ್ಯತ್ಯಾಸಮಾಡುವುದರಿಂದ ವಿಕೃತಿರೂಪವಾದ ದಾಕ್ಷಾಯಣಯಜ್ಞವು ಉಂಟಾಗುವುದು. ಶಾಖಾಂತರದಲ್ಲಿ ಈ ವಿಷಯವಾಗಿ ದರ್ಶಪೂರ್ಣಮಾಸಕ್ಕೆ ಸಂಬಂಧಪಟ್ಟಹಾಗೆ ಈರೀತಿ ಹೇಳಿರುವುದು— **ದಾಕ್ಷಾಯಣಯಜ್ಞೇನ ಸ್ವರ್ಗಕಾಮೋ ಯಜೇತ** ಸ್ವರ್ಗಲೋಕವನ್ನು ಬಯಸುವ ಪುರುಷನು ದಾಕ್ಷಾಯಣಯಜ್ಞವನ್ನು ಮಾಡಿ ದೇವತೆಗಳನ್ನು ತೃಪ್ತಿಪಡಿಸಬೇಕು. ಎಂದಿರುವುದು. ಇಲ್ಲಿ ಅಗ್ನಿಷ್ಟೋಮದಲ್ಲಿರುವ ಪ್ರವರ್ಗ್ಯಕ್ಕೂ ದಾಕ್ಷಾಯಣಯಜ್ಞಕ್ಕೂ ಕ್ಷೀರದ್ರವ್ಯದಲ್ಲಿ ಸಾಮ್ಯವಿರುವುದರಿಂದ ಅಗ್ನಿಷ್ಟೋಮಕ್ಕೂ ದಾಕ್ಷಾಯಣಯಜ್ಞಕ್ಕೂ ಸಾಮ್ಯವಿದ್ದಂತಾಯಿತು.

**ಪಶುರುಪವಸಥೇ ಭವತಿ ತಮೇವಾನು ಯೇ ಕೇ ಚ ಪಶುಬಂಧಾಸ್ತೇ ಸರ್ವೇಽಗ್ನಿಷ್ಟೋಮಮಪಿಯಂತಿ ॥**

ಪಶುಬಂಧಾನಾಮಗ್ನಿಷ್ಟೋಮಪ್ರಾಪ್ತಿಂ ದರ್ಶಯತಿ — ಸುತ್ಯಾದಿವಸಾತ್ಪೂರ್ವೇ-ದಿವಸ ಉಪವಸಥಾಖ್ಯಸ್ತಸ್ಮಿನ್ನಗ್ನೀಷೋಮೀಯಪಶುರನುಷ್ಠೀಯತೇ ॥ ತದ್ವಿಕೃತಿರೂಪಾ ವೇದೋಕ್ತಾಃ ಸರ್ವೇ ಪಶುಬಂಧಾಃ ॥

ಪಶುಬಂಧಕ್ಕೂ ಅಗ್ನಿಷ್ಟೋಮಕ್ಕೂ ಸಾಮ್ಯವನ್ನು ತೋರಿಸುವರು. ಸುತ್ಯಾದಿವಸಕ್ಕೆ (ಸೋಮರಸವನ್ನು ಹಿಂಡಿ ಅರ್ಪಿಸುವ ದಿವಸಕ್ಕೆ ಸುತ್ಯಾದಿವಸವೆಂದು ಹೆಸರು). ಹಿಂದಿನ ದಿನಕ್ಕೆ ಉಪವಸಥವೆಂದು ಹೆಸರು. ಆ ದಿವಸದಲ್ಲಿ ಅಗ್ನಿಷ್ಟೋಮಯಾಗದಲ್ಲಿ ಯಜ್ಞಪಶುವನ್ನು ವಿಧಿವತ್ತಾಗಿ ಅರ್ಪಿಸಲಾಗುವುದು. ಪ್ರಕೃತಿರೂಪವಾದ ಪಶುಬಂಧದಲ್ಲಿಯೂ ಈ ವಿಧವಾದ ಪಶುರನುಷ್ಠಾನವು ಇರುವುದರಿಂದ ಪಶುಬಂಧಕ್ಕೂ ಅಗ್ನಿಷ್ಟೋಮಕ್ಕೂ ಸಾಮ್ಯವಿದ್ದಂತಾಯಿತು.

**ಇಳಾದಧೋ ನಾಮ ಯಜ್ಞಕ್ರತುಸ್ತಂ ದಧ್ನಾ ಚರಂತಿ ದಧ್ನಾ ದಧಿ-ಘರ್ಮೇ ದಧಿಘರ್ಮಮೇವಾನ್ವಿಳಾದಧೋಽಗ್ನಿಷ್ಟೋಮಮಪ್ಯೇತಿ ॥**

**ಯಜ್ಞಾಂತರಸ್ಯಾಗ್ನಿಷ್ಟೋಮಪ್ರಾಪ್ತಿಂ ದರ್ಶಯತಿ—ದರ್ಶಪೂರ್ಣಮಾಸ ವಿಕೃತಿ-ರೂಪ ಏವ ಕಶ್ಚಿದಿಳಾದಧನಾಮಕೋ ಯಜ್ಞೋಽಸ್ತಿ । ಅತ ಏವಾಽಽಪಸ್ತಂಬೋ ದರ್ಶಪೂರ್ಣ-ಮಾಸಸನ್ನಿಧಾವೇವಮಾಹ — ಏತೇನೇಳಾದಯಃ ಸಾರ್ವಸನ್ನಿಯಜ್ಞೋ ವಸಿಷ್ಠಯಜ್ಞಃ ಶೌನಕಯಜ್ಞಶ್ಚ ವ್ಯಾಖ್ಯಾತಾ ಇತಿ । ದಧಿಘರ್ಮನಾಮಕಸ್ತ್ವಗ್ನಿಷ್ಟೋಮಗತಸ್ತಯೋರುಭ-ಯೋರ್ದಧಿದ್ರವ್ಯೇಣ ಸಾಮ್ಯಂ ॥**

ಇತರ ಯಜ್ಞಕ್ಕೂ ಅಗ್ನಿಷ್ಟೋಮಕ್ಕೂ ಸಾಮ್ಯವನ್ನು ತೋರಿಸುವರು—ದರ್ಶಪೂರ್ಣಮಾಸದ ವಿಕೃತಿರೂಪವಾದ ಇಳಾದಧ ಎಂಬ ಯಾಗವೊಂದಿರುವುದು. ಆದ್ದರಿಂದ ಆಪಸ್ತಂಬರು ದರ್ಶಪೂರ್ಣಮಾಸದ ವಿಷಯವಾಗಿ ಹೇಳುತ್ತಾ ಈರೀತಿ ಹೇಳುವರು—**ಏತೇನೇಳಾದಯಃ ಸಾರ್ವಸನ್ನಿಯಜ್ಞೋ ವಸಿಷ್ಠಯಜ್ಞಃ ಶೌನಕಯಜ್ಞಶ್ಚ ವ್ಯಾಖ್ಯಾತಾ ಇತಿ** ಅಗ್ನಿಷ್ಟೋಮದಲ್ಲಿ ದಧಿಘರ್ಮ ಎಂಬ ವಿಷಯವೂ ಇರುವುದರಿಂದ ಅಗ್ನಿಷ್ಟೋಮಕ್ಕೂ ಇಳಾದಧ ಎಂಬ ಇಷ್ಟಿಗೂ ಸಾಮ್ಯವನ್ನು ತೋರಿಸಿದಂತಾಯಿತು.



*English Translation*

**All sacrificial rites are contained in the Agnishtoma)**

When the Dikshaniya Ishti is once performed in all its parts (lit. is spread), then all other Ishtis, whatever they may be, are comprised in the Agnishtoma.

When he calls Ila, then all Pakayajnas, whatever they may be, are comprised in the Agnishtoma.

One brings the Agnihotram in the morning and evening. They (the sacrificers when being initiated) perform in the morning and evening the religious vow of drinking milk only and do that with the formula svaha. With the same formula one offers the Agnihotram. Thus the Agnihotram is comprised in the Agnishtoma.

At the Prayaniya Ishti, the Hotar repeats fifteen verses for the wooden sticks thrown into the fire (samidhenis). The same number is required at the New and Full Moon offerings. Thus the New and Full Moon offerings are comprised in the Prayanja Ishti.

They buy the king Soma (the ceremony of Somakraya is meant). The king Soma belongs to the herbs. They cure a sick person by means of medicaments taken from the vegetable kingdom. All vegetable medicaments following the king Soma when being bought, they are thus comprised in the Agnishtoma,

At the Atithya Ishti they produce fire by friction and at the Chaturmasya Ishtis they do the same. The Chaturmasya Ishtis thus following the Atithya Ishti are comprised in the Agnishtoma.

At the Pravargya ceremony they use fresh milk, the same is the case at the Dakshayana yajna. Thus the Dakshyana sacrifice is comprised in the Agnishtoma.

The animal sacrifice takes place the day previous to the Soma feast. All animal sacrifices which follow it are thus comprised in the Agnishtoma.

Iladadha by name is a sacrificial rite. They perform it with thick milk (dadhi), and they also take thick milk at the time of making the Dadhigharma rite in the Agnishtoma. Thus the Iladadha is, on account of its following the Dadhigharma rite, comprised in the Agnishtoma.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಚತುರ್ದಶಾಧ್ಯಾಯೇ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನಾಲ್ಕನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು
ಸಮಾಪ್ತವಾದುದು.



# ಅಥ ಚತುರ್ದಶಾಧ್ಯಾಯೇ ತೃತೀಯಃ ಖಂಡಃ

## ಹದಿನಾಲ್ಕನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ ಜ್ಯೋತಿಷ್ಟೋಮದಲ್ಲಿ ಕೆಲವು ಭಾಗಗಳೂ, ಉಕ್ಥ್ಯ, ಅತಿರಾತ್ರ ಎಂಬ ವಿಕೃತಿಯಾಗಗಳೂ ಅಗ್ನಿಷ್ಟೋಮದಲ್ಲಿ ಸೇರಿರುವವು. ]



ಇತಿ ನು ಪುರಸ್ತಾದಥೋಪರಿಷ್ಟಾತ್ಪಂಚದಶೋಕ್ಥ್ಯಸ್ಯ ಸ್ತೋತ್ರಾಣಿ ಪಂಚದಶ ಶಸ್ತ್ರಾಣಿ ಸ ಮಾಸೋ ಮಾಸದಾ ಸಂವತ್ಸರೋ ವಿಹಿತಃ ಸಂವತ್ಸರೋಽಗ್ನಿರ್ವೈಶ್ವಾನರೋಽಗ್ನಿರಗ್ನಿಷ್ಟೋಮಃ ಸಂವತ್ಸರ-ಮೇವಾನೂಕ್ಥ್ಯೋಽಗ್ನಿಷ್ಟೋಮಮಪ್ಯೇತ್ಯುಕ್ಥ್ಯಮಪಿ ಯಂತಮನು ವಾಜಪೇಯೋಽಪ್ಯೇತ್ಯತ್ಯುಕ್ಥ್ಯೋ ಹಿ ಸ ಭವತಿ ‖

ಕ್ರತ್ವಂತರಾಣಾಮಗ್ನಿಷ್ಟೋಮಪ್ರಾಪ್ತಿಂ ದರ್ಶಯತಿ—ಇತಿ ನು ಪೂರ್ವಖಂಡೋಕ್ತ-ಪ್ರಕಾರೇಣೈವ ಪುರಸ್ತಾದಗ್ನಿಷ್ಟೋಮಾತ್ಪ್ರಾಜೀನಸ್ಯ ಕರ್ಮಜಾತಸ್ಯಾಗ್ನಿಷ್ಟೋಮಪ್ರವೇಶ ಉಕ್ತ ಇತಿ ಶೇಷಃ । ಅಥಾನಂತರಮುಪರಿಷ್ಟಾದಿತರೇಷಾಂ ಕ್ರತೂನಾಂ ತತ್ಪ್ರವೇಶ ಉಚ್ಯತೇ । ತತ್ರ ಯೋಽಯಮುಕ್ಥ್ಯಃ ಕ್ರತುಸ್ತಸ್ಯ ಪಂಚದಶಸಂಖ್ಯಾಕಾನಿ ಸ್ತೋತ್ರಾಣ್ಯಗ್ನಿಷ್ಟೋಮವಿಕೃ-ತಿತ್ವಾತ್ ‖ ತದೀಯಾನಿ ದ್ವಾದಶಸ್ತೋಸ್ತ್ರಾಣ್ಯತಿದಿಶ್ಯಂತೇ । ತತ ಊರ್ಧ್ವಂ ತ್ರೀಣ್ಯುಕ್ಥಸಂಜ್ಞ-ತಾನಿ ಸ್ತೋತ್ರಾಣಿ । ಏವಂ ಪಂಚದಶ ಸಂಪದ್ಯಂತೇ । ಶಸ್ತ್ರೇಷ್ವಪ್ಯಯಂ ನ್ಯಾಯೋ ಯೋಜ್ಯಃ । ತಾನಿ ಶಸ್ತ್ರಾಣಿ ಸ್ತೋತ್ರಾಣಿ ಚ ಮಿಲಿತ್ವಾ ಮಾಸಗತಾಂ ರಾತ್ರಿಸಂಖ್ಯಾಂ ಪ್ರಾಪ್ನುವಂತ್ಯತಃ ಸೋಽಯಂ ಸ್ತೋತ್ರಶಸ್ತ್ರಸಮೂಹೋ ಮಾಸಃ ಸಂಪದ್ಯತೇ ‖ ಮಾಸಧಾ ಮಾಸಪ್ರಕಾರೇಣ ಮಾಸಾವೃತ್ತ್ಯಾ ಸಂವತ್ಸರೋ ವಿಹಿತಃ ಸಂಪಾದಿತೋ ಭವತಿ ‖ ಸ ಚ ಸಂವತ್ಸರೋ ವೈಶ್ವಾನರಾ-ಗ್ನಿರೂಪಃ । ಗರ್ಭಪ್ರವಿಷ್ಟಸ್ಯ ಪುರುಷಸ್ಯ ಸಂವತ್ಸರಮಾತ್ರೇಣ ವೈಶ್ವಾನರಾಖ್ಯಸ್ಯೋದರ್ಯಾಗ್ನೇಃ ಪಾಟವಸಂಭವಾತ್ ‖ ಅಗ್ನಿಶ್ಚಾಗ್ನಿಷ್ಟೋಮಸ್ವರೂಪಃ ಪೂರ್ವೋಕ್ತಯಾ ರೀತ್ಯಾ ಶ್ರೇಣಿತ್ರ-ಯರೂಪೇಣಾನೀಕತ್ರಯರೂಪೇಣ ಚಾಗ್ನೇರೇವಾಗ್ನಿಷ್ಟೋಮರೂಪೇಣಾವಿರ್ಭೂತತ್ವಾತ್ ‖ ಏವಂ ಸತಿ ಸ ಉಕ್ಥ್ಯಾಖ್ಯಕ್ರತುಃ ಸ್ತೋತ್ರಶಸ್ತ್ರಾದಿಪರಂಪರಯಾ ಸಂವತ್ಸರಮೇವಾನುಪ್ರವಿಶ್ಯ ತದ್ದ್ವಾರಾಗ್ನಿಷ್ಟೋಮಂ ಪ್ರವಿಶತಿ ‖ ತಂ ವಿಶಂತಮುಕ್ಥ್ಯಮನು ವಾಜಪೇಯಾಖ್ಯೋಽಪಿ ಕ್ರತುರಗ್ನಿಷ್ಟೋಮಮಪ್ಯೇತಿ ಪ್ರಾಪ್ನೋತಿ । ಸ ಹಿ ವಾಜಪೇಯೋಽತ್ಯುಕ್ಥ್ಯೋ ಭವತಿ ‖ ಉಕ್ಥ್ಯಾ-ಖ್ಯಂ ಕ್ರತುಮತಿಕ್ರಮ್ಯ ವರ್ತಮಾನತ್ವಾತ್ ‖ ಉಕ್ಥ್ಯೇ ಯಾನಿ ಪಂಚದಶ ಸ್ತೋತ್ರಾಣಿ ತತ

ಊರ್ಧ್ವಂ ವಾಜಪೇಯೇ ಸ್ತೋತ್ರದ್ವಯಂ ಸೋಽಯಮುಕ್ಥ್ಯಾತಿಕ್ರಮಸ್ತಸ್ಮಾದುಕ್ಥ್ಯದ್ವಾರಾ ವಾಜಪೇಯಸ್ಯ ತತ್ಪ್ರಾಪ್ತಿಃ ||

ಈಗ ಇತರ ಯಜ್ಞಗಳಿಗೂ ಅಗ್ನಿಷ್ಟೋಮಕ್ಕೂ ಸಂಬಂಧವನ್ನು ತೋರಿಸುವರು—-ಇದುವರೆಗೂ ಎಂದರೆ ಹಿಂದಿನ ಖಂಡದಲ್ಲಿ ಅಗ್ನಿಷ್ಟೋಮಯಾಗಕ್ಕೆ ಪೂರ್ವಭಾವಿಯಾಗಿ ಮಾಡಬೇಕಾದ ಇಷ್ಟಿ ಮೊದಲಾದ ಅನೇಕ ಕರ್ಮಗಳಿಗೂ ಅಗ್ನಿಷ್ಟೋಮಕ್ಕೂ ಇರುವ ಸಾದೃಶ್ಯ ಅಥವಾ ಸಂಬಂಧವನ್ನು ವಿವರಿಸಲಾಯಿತು. ಈಗ ಇತರ ಮಹಾಯಜ್ಞಗಳಿಗೂ ಅಗ್ನಿಷ್ಟೋಮಯಾಗಕ್ಕೂ ಇರುವ ಸಂಬಂಧವನ್ನು (ಸಾದೃಶ್ಯವನ್ನು) ವಿವರಿಸಲಾಗುವುದು. ಈಗ ಉಕ್ಥ್ಯ ಎಂಬ ಒಂದು ಯಾಗವಿರುವುದು. ಇದು ಅಗ್ನಿಷ್ಟೋಮಯಾಗದ ವಿಕೃತಿರೂಪವು ಇದರಲ್ಲಿ ಹದಿನೈದು ಸ್ತೋತ್ರಗಳಿರುವವು. ಅಗ್ನಿಷ್ಟೋಮದಲ್ಲಿರುವ ಹನ್ನೆರಡು ಸ್ತೋತ್ರಗಳೂ ಅವುಗಳ ಜೊತೆಗೆ ಮೂರು ಇತರ ಸ್ತೋತ್ರಗಳೂ ಒಟ್ಟು ಹದಿನೈದು ಸ್ತೋತ್ರಗಳೂ ಇರುವವು ಇದು ಉಕ್ಥ್ಯ ಯಾಗವು. ಶಸ್ತ್ರಮಂತ್ರಗಳಲ್ಲಿಯೂ ಇದೇ ಕ್ರಮವಿರುವುದು. ಈ ವಿಧವಾಗಿ ಹದಿನೈದು ಸ್ತೋತ್ರಗಳನ್ನೂ ಒಟ್ಟಾಗಿ ಸೇರಿಸಿದರೆ ಒಂದು ಮಾಸ ಅಥವಾ ತಿಂಗಳಲ್ಲಿರುವ ಮೂವತ್ತು ರಾತ್ರಿಗಳಾಗುವವು. ಈರೀತಿಯಾದ ಹನ್ನೆರಡು ಮಾಸಗಳನ್ನು ಸೇರಿಸಿದರೆ ಒಂದು ಸಂವತ್ಸರವಾಗುವದು. ಈವಿಧವಾದ ಸಂವತ್ಸರವು ವೈಶ್ವಾನರಾಗ್ನಿರೂಪವು. ಈ ವೈಶ್ವಾನರಾಗ್ನಿಯು ಗರ್ಭಗತನಾದ ಪುರುಷನಿಗೆ ಒಂದು ಸಂವತ್ಸರ ಕಳೆದ ಮೇಲೆ ಪಾಟವವುಂಟಾಗುವದು ಎಂದರೆ ಹುಟ್ಟಿದ ಒಂದು ವರ್ಷದ ಮೇಲೆ ವೈಶ್ವಾನರ ಎಂಬ ಉದರಾಗ್ನಿಗೆ ಆಹಾರವನ್ನು ಜೀರ್ಣಿಸುವ ಸಾಮರ್ಥ್ಯವುಂಟಾಗುವುದು. ಹಿಂದೆ ಹೇಳಿದಂತೆ ಅಗ್ನಿಯ ಮೂರು ಪ್ರಾಕಾರ ಮತ್ತು ಅನೀಕದ ಮೂರು ಪಂಕ್ತಿಗಳ ರೂಪವಾಗಿ ಅಗ್ನಿಷ್ಟೋಮರೂಪವು ಆವಿರ್ಭವಿಸಿರುವುದು. ಆದ್ದರಿಂದ ವೈಶ್ವಾನರಾಗ್ನಿಯ ಸಂವತ್ಸರ ರೂಪವು (ಹನ್ನೆರಡು ಮಾಸಗಳ ರೂಪವು) ಪ್ರಾಕಾರಪಂಕ್ತಿಗಳಾದ ಮೂರು ರೂಪವೂ ಸೇರಿ ಹದಿನೈದು ರೂಪಗಳಾಗುವವು ಆದ್ದರಿಂದ ಈ ಉಕ್ಥ್ಯಕ್ರತುವೆಂಬ ಯಜ್ಞವು ಹದಿನೈದು ಎಂದರೆ ಸ್ತೋತ್ರಶಸ್ತ್ರಾದಿಸಂಖ್ಯೆಯಿಂದ ಹದಿನೈದು ರೂಪಗಳಾಗಿ ಅಗ್ನಿಷ್ಟೋಮದಲ್ಲಿ ಅಂತರ್ಗತವಾಗುವುದು. ಇದೇ ರೀತಿ ವಾಜಪೇಯವೆಂಬ ಯಜ್ಞವೂ ಕೂಡ ಅಗ್ನಿಷ್ಟೋಮದಲ್ಲಿ ಅಂತರ್ಗತವಾಗುವುದು. ಉಕ್ಥ್ಯಯಾಗದ ಹದಿನೈದು ಸ್ತೋತ್ರಗಳ ಸಂಖ್ಯೆಗೆ ಮತ್ತೆರಡು ಸ್ತೋತ್ರಗಳು (ಹದಿನೇಳು) ಸೇರಿದರೆ ಅದು ವಾಜಪೇಯವೆನಿಸುವುದು. ಈ ವಾಜಪೇಯಕ್ಕೆ ಅತ್ಯುಕ್ಥ್ಯವೆಂಬ ಹೆಸರೂ ಇರುವುದು. ಏಕೆಂದರೆ ಉಕ್ಥ್ಯಯಾಗಕ್ಕೆ ಇರಬೇಕಾದ ಹದಿನೈದು ಸ್ತೋತ್ರಸಂಖ್ಯೆಗೆ ಮತ್ತೆರಡು ಸ್ತೋತ್ರಗಳು (ಒಟ್ಟು ಹದಿನೇಳು) ಸೇರಿ ಹದಿನೇಳಿರುವುದರಿಂದ ಈ ವಾಜಪೇಯಕ್ಕೆ ಅತ್ಯುಕ್ಥ್ಯವೆಂಬ ಹೆಸರೂ ಸಲ್ಲುವುದು.

ದ್ವಾದಶರಾತ್ರೇಃ ಪರ್ಯಾಯಾಃ ಸರ್ವೇ ಪಂಚದಶಾಸ್ತೇ ದ್ವೌ ದ್ವೌ ಸಂಪದ್ಯ ತ್ರಿಂಶದೇಕವಿಂಶಂ ಷೋಳಸಿಸಾಮ ತ್ರಿವೃತ್ಸಂಧಿಃ ಸಾ ತ್ರಿಂಶತ್ಸಮಾಸಸ್ತ್ರಿಂಶನ್ಮಾಸಸ್ಯ ರಾತ್ರಯೋ ಮಾಸಥಾ ಸಂವತ್ಸರೋ ವಿಹಿತಃ ಸಂವತ್ಸರೋಽಗ್ನಿರ್ವೈಶ್ವಾನರೋಽಗ್ನಿರಗ್ನಿಷ್ಟೋಮಃ ಸಂವತ್ಸರಮೇವಾನ್ವತಿರಾತ್ರೋಽಗ್ನಿಷ್ಟೋಮಮಪ್ಯೇತ್ಯತಿರಾತ್ರಮಪಿಯಂತಮನ್ವಪ್ತೋರ್ಯಾಮೋಽಪ್ಯೇತ್ಯತ್ಯತಿರಾತ್ರೋ ಹಿ ಸ ಭವತಿ||

ಅಥಾತಿರಾತ್ರಾಪ್ತೋರ್ಯಾಮಯೋಃ ಕ್ರತ್ವೋರಗ್ನಿಷ್ಟೋಮಪ್ರವೇಶಂ ದರ್ಶಯತಿ—ಅತಿರಾತ್ರಯಾಗೇ ದ್ವಾದಶಸಂಖ್ಯಾಕಾ ರಾತ್ರೇಃ ಪರ್ಯಾಯಾಃ । ತೇ ಚಾಽಽಪಸ್ತಂಬೇನೈವ ಸ್ಪಷ್ಟೀಕೃತಾಃ || ಅತಿರಾತ್ರಮೇವ ಷೋಡಶಿನಮಮೀ ಮುನಯಸ್ತತ್ರ ತ್ರಯೋದಶಭ್ಯಶ್ಚಮಸ-

ಗಣೇಭ್ಯೋ ರಾಜಾನಮಭಿರೇಚಯತಿ ॥ ಷೋಡಶಿನಾ ಪ್ರಚರ್ಯ ರಾತ್ರಿಪರ್ಯಾಯೈಃ ಪ್ರಚರತಿ । ಹೋತೃಚಮಸಮುಖ್ಯಃ ಪ್ರಥಮೋ ಗಣೋ ಮೈತ್ರಾವರುಣಚಮಸಮುಖ್ಯೋ ದ್ವಿತೀಯೋ ಬ್ರಾಹ್ಮಣಾಚ್ಛಂಸಿಚಮಸಮುಖ್ಯಸ್ತೃತೀಯೋಽಚ್ಛಾವಾಕಚಮಸಮುಖ್ಯಶ್ಚತುರ್ಥಃ । ಪ್ರಥಮಾಭ್ಯಾಂ ಗಣಾಭ್ಯಾಮಧ್ವರ್ಯುಶ್ಚರತ್ಯುತ್ತರಾಭ್ಯಾಂ ಪ್ರತಿಪ್ರಸ್ಥಾತೈಷ ಪ್ರಥಮಃ ಪರ್ಯಾಯ ಏವಂ ವಿಹಿತೋ ದ್ವಿತೀಯಸ್ತೃತೀಯಶ್ಚೇತಿ । ಅಸ್ಯಾಯಮರ್ಥಃ । ಅತಿರಾತ್ರಾಖ್ಯಂ ಕ್ರತುಂ ಯದಾನುತಿಷ್ಠತಿ ತದಾನೀಂ ಚೋದಕಪ್ರಾಪ್ತಂ ಸರ್ವಮನುಷ್ಠಾಯಾನಂತರಂ ಸಾಯಂಕಾಲೇ ಷೋಡಶಿಗ್ರಹಸಂಬಂಧಿನಶ್ಚಮಸಾನ್ಪೂರಯಿತ್ವಾ ತತ ಊರ್ಧ್ವಂ ರಾತ್ರಿಪರ್ಯಾಯೈಃ ಪ್ರಚರೇತ್ ॥ ತೇಷು ಪರ್ಯಾಯೇಷು ಚ ಹೋತೃಚಮಸಮಾದಿಂ ಕೃತ್ವಾ ಯಶ್ಚಮಸಗಣಃ ಪ್ರವರ್ತತೇ ಸೋಽಯಂ ಪ್ರಥಮಃ। ಮೈತ್ರಾವರುಣಚಮಸಸ್ಯಾದಿತ್ವೇ ದ್ವಿತೀಯಶ್ಚಮಸಗಣೋ ಭವತಿ । ಬ್ರಾಹ್ಮಣಾಚ್ಛಂಸಿ ಚಮಸಸ್ಯಾದಿತ್ವೇ ತೃತೀಯಶ್ಚಮಸಗಣೋ ಭವತಿ। ಅಚ್ಛಾವಾಕಚಮಸಸ್ಯಾದಿತ್ವೇ ಚತುರ್ಥಶ್ಚಮಸಗಣೋ ಭವತಿ ॥ ತೇಷು ಚತುರ್ಷ ಗಣೇಷು ಪ್ರಥಮದ್ವಿತೀಯಾಭ್ಯಾಂ ಗಣಾಭ್ಯಾಮಧ್ವರ್ಯುರನುತಿಷ್ಠೇತ್ ॥ ತೃತೀಯಚತುರ್ಥಾಭ್ಯಾಂ ತು ಪ್ರತಿಪ್ರಸ್ಥಾತಾಽನುತಿಷ್ಠೇತ್ ॥ ಏವಂ ಗಣಚತುಷ್ಟಯಾನುಷ್ಠಾನಮೇಕಃ ಪರ್ಯಾಯೋ ಭವತಿ ॥ ಪುನರಪಿ ದ್ವಿತೀಯತೃತೀಯಪರ್ಯಾಯೌ ತಥೈವಾನುಷ್ಠೇಯೌ ॥ ತೇಷು ಪರ್ಯಾಯೇಷು ದ್ವಾದಶ ಗಣಾಃ ಸಂಪದ್ಯಂತೇ । ಏತತ್ಸರ್ವಮಭಿಪ್ರೇತ್ಯ ದ್ವಾದಶರಾತ್ರೇಃ ಪರ್ಯಾಯ ಇತ್ಯುಕ್ತಂ ॥ ತೇ ಸರ್ವೇಽಪಿ ಪಂಚದಶಾಸ್ತದೀಯಸ್ತೋತ್ರೇಷು ತೃಚಗತಾನಾಮೃಚಾಮಾವೃತ್ತಿವಿಶೇಷೇಣ ಪಂಚದಶಸ್ತೋಮಸ್ಯ ಸಾಮಗೈಃ ಸಂಪಾದಿತತ್ವಾತ್ಪಂಚದಶಸ್ತೋಮಯುಕ್ತಾಃ ದ್ವಾದಶಪರ್ಯಾಯಾ ಯೇ ಸಂತಿ ತೇಷು ದ್ವೌ ದ್ವೌ ಪರ್ಯಾಯೌ ಸಂಪದ್ಯ ಮಿಲಿತ್ವಾ ಪಂಚದಶಸಂಖ್ಯಾಯಾ ದ್ವಿರಾವೃತ್ತ್ಯಾ ತ್ರಿಂಶತ್ಸಂಖ್ಯಾಯಾಂ ತೇ ಸರ್ವೇ ಪರ್ಯವಸ್ಯಂತಿ ॥ ಕಿಂಚ ಷೋಡಶಸ್ತೋತ್ರೇ ಯತ್ಸಾಮಾಸ್ತಿ ತದೇಕವಿಂಶಂ ಭವತಿ । ತದೀಯತೃಚಗತಾನಾಮೃಚಾಮಾವೃತ್ತ್ಯಾ ಸಾಮಗೈರೇಕವಿಂಶತಿಸ್ತೋಮಸಂಪಾದನಾತ್ ॥ ಯೋಽಯಮತಿರಾತ್ರಸ್ತಸ್ಯಾಂತೇ ಸಂಧಿರೇತನ್ನಾಮಕಂ ಸ್ತೋತ್ರಂ ತತ್ರ ತ್ರಿವೃತ್ಸ್ತೋಮಃ ಸಾಮಗೈಃ ಪಠ್ಯತೇ ॥ ತಸ್ಯ ಚ ಸ್ತೋಮಸ್ಯ ತ್ರಿಷು ತೃಚೇಷ್ವಾವೃತ್ತಿರಹಿತೇಷು ನಿಷ್ಪನ್ನತ್ವಾದೃಚಾಂ ನವಸಂಖ್ಯಾ ಸಂಪದ್ಯತೇ ॥ ಏಕವಿಂಶತಿ ಸಂಖ್ಯಾ ನವಸಂಖ್ಯಾ ಚ ಮಿಲಿತ್ವಾ ತ್ರಿಂಶತ್ಸಂಖ್ಯಾ ಭವತಿ ॥ ಅನಯಾ ತ್ರಿಂಶಂತ್ಸಂಖ್ಯಯಾ ವಾ ಪೂರ್ವೋಕ್ತತ್ರಿಂಶತ್ಸಂಖ್ಯಯಾ ವಾ ಮಾಸರಾತ್ರಿಸಾಮ್ಯಾನ್ಮಾಸಃ ಸಂಪದ್ಯತೇ ॥ ಮಾಸಥೇತ್ಯಾದಿ ಪೂರ್ವವದ್ಯೋಜನೀಯಂ । ಏವಂ ಸತಿ ವತ್ಸರದ್ವಾರಾಽತಿರಾತ್ರೋಽಗ್ನಿಷ್ಟೋಮಂ ಪ್ರವಿಶತಿ । ಪ್ರವಿಶಂತಮತಿರಾತ್ರಮನು ತದ್ವಾರೇಣಾಪ್ತೋರ್ಯಾಮೋಽಪಿ ಪ್ರವಿಶತಿ ॥ ಸ ಹ್ಯತಿರಾತ್ರಮತಿಲಂಘ್ಯ ಸ್ತೋತ್ರಾಧಿಕ್ಯೇನ ವರ್ತಮಾನತ್ವಾದತ್ಯತಿರಾತ್ರಃ । ಏಕೋನ ತ್ರಿಂಶತ್ಸ್ತೋತ್ರಾಣಿ ಅತಿರಾತ್ರೇಽಪ್ತೋರ್ಯಾಮೇ ತು ತ್ರಯಸ್ತ್ರಿಂಶದಿತ್ಯಾಧಿಕ್ಯಮತೋಽತಿರಾತ್ರದ್ವಾರಾಽಪ್ತೋರ್ಯಾಮಸ್ಯಾಗ್ನಿಷ್ಟೋಮೇ ಪ್ರವೇಶಃ ॥

ಈಗ ಅತಿರಾತ್ರ ಮತ್ತು ಅಪ್ತೋರ್ಯಾಮ ಎಂಬ ಕ್ರತುಗಳಿಗೂ ಅಗ್ನಿಷ್ಟೋಮಕ್ಕೂ ಇರುವ ಸಂಬಂಧವನ್ನು ವಿವರಿಸುವರು—ಅತಿರಾತ್ರವೆಂಬ ಯಾಗದಲ್ಲಿ ರಾತ್ರಿಪರ್ಯಾಯದಲ್ಲಿ ಹನ್ನೆರಡು ಸ್ತೋತ್ರಗಳಿರುವವು. ಈ ವಿಷಯವು ಆಪಸ್ತಂಬರಿಂದ

ಸ್ಪಷ್ಟವಾಗಿ ವಿವರಿಸಲ್ಪಟ್ಟಿದೆ– **ಅತಿರಾತ್ರಶ್ಚೇತ್ ಶೋಡಶಿಚಮಸಾನುನ್ನಯಂಸ್ತ್ರಯೋದಶಭ್ಯಶ್ಚಮಸಗಣೇಭ್ಯೋ ರಾಜಾನಾಮತಿರೇಚಯತಿ । ಷೋಡಶಿನಾ ಪ್ರಚರ್ಯ ರಾತ್ರಿಪರ್ಯಾಯೈಃ ಪ್ರಚರತಿ । ಹೋತೃಚಮಸಮುಖ್ಯಃ ಪ್ರಥಮೋ ಗಣೋ ಮೈತ್ರಾವರುಣಚಮಸಂ ಮುಖ್ಯೋ ದ್ವಿತೀಯೋ ಬ್ರಾಹ್ಮಣಾಚ್ಛಂಸಿಚಮಸಮುಖ್ಯಸ್ತೃತೀಯೋಽಚ್ಛಾವಾಕಚಮಸಮುಖ್ಯಶ್ಚತುರ್ಥಃ । ಪ್ರಥಮಾಭ್ಯಾಂ ಗಣಾಭ್ಯಾಮಧ್ವರ್ಯುಶ್ಚರತಿ ಉತ್ತರಾಭ್ಯಾಂ ಪ್ರತಿಪ್ರಸ್ಥಾತಾ ಏಷ ಪ್ರಥಮಃ ಪರ್ಯಾಯಃ ಏವಂ ವಿಹಿತೋ ದ್ವಿತೀಯಸ್ತೃತೀಯಶ್ಚ** (ಆಪ. ಶ್ರೌ ೧೪-೩-೮ ರಿಂದ ೧೬) ಇದರ ಅರ್ಥವು—ಅತಿರಾತ್ರವೆಂಬ ಯಜ್ಞವನ್ನು (ಅತಿರಾತ್ರವೆಂದರೆ ರಾತ್ರಿಕಾಲದಲ್ಲಿ ಆಚರಿಸಲ್ಪಡುವ ಯಜ್ಞ) ಅನುಷ್ಠಾನಮಾಡುವಾಗ ಸಾಯಂಕಾಲದವರೆಗೂ ಮಾಡಬೇಕಾದ ವಿಧಿನಿಯಮಗಳಂತೆ ಎಲ್ಲವನ್ನೂ ಮಾಡಿ ಸಾಯಂಕಾಲದಲ್ಲಿ ಷೋಡಶಿ (ಯಜ್ಞವಿಶೇಷ) ಗ್ರಹ (ಬಟ್ಟಲು) ಸಂಬಂಧವಾದ ಗ್ರಹ ಅಥವಾ ಸೋಮಪಾನಮಾಡುವ ಬಟ್ಟಲುಗಳಿಗೆ ಸೋಮವನ್ನು ತುಂಬಿ ಅನಂತರ ಎಂದರೆ ಹದಿಮೂರು ಬಟ್ಟಲುಗಳವರೆಗೂ ಸೋಮವನ್ನು ತುಂಬಿ ಎಲ್ಲವನ್ನೂ ಷೋಡಶಿಯಂತೆ ಮಾಡಿ ಅನಂತರ ರಾತ್ರಿಪರ್ಯಾಯಕ್ರಮದಂತೆ ಮಾಡಬೇಕು ಇಲ್ಲಿ ಪರ್ಯಾಯವೆಂದರೆ ಆವೃತ್ತಿ ಎಂದು ಹೆಸರು. ಗಣವೆಂದರೆ ನಾಯಕತ್ವವೆಂದು. ಮೊದಲನೆಯ ಆವೃತ್ತಿಯಲ್ಲಿ (ಪರ್ಯಾಯದಲ್ಲಿ) ಹೋತೃವಿನ ಬಟ್ಟಲನ್ನು ಮೊದಲು ತುಂಬಿ ಹೋತೃವಿನ ನಾಯಕತ್ವದಲ್ಲಿ ಎಲ್ಲರೂ ಸೋಮಪಾನಮಾಡುವುದು ಮೊದಲನೆಯ ಪರ್ಯಾಯವು (ಆವೃತ್ತಿಯು); ಮೈತ್ರಾವರುಣ ಗಣದಲ್ಲಿ (ನಾಯಕತ್ವದಲ್ಲಿ ಚಮಸಾದಿಗಳನ್ನು ಸೋಮಪಾನದಿಂದ ತುಂಬಿ ಎಲ್ಲರೂ ಪಾನಮಾಡುವುದು. ಎರಡನೇ ಪರ್ಯಾಯವು; ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನ ನಾಯಕತ್ವದಲ್ಲಿ ಪಾನಮಾಡುವುದು ಮೂರನೆಯ ಪರ್ಯಾಯವು; ಅಚ್ಛಾವಾಕನೆಂಬ ಋತ್ವಿಜನ ಮುಖಂಡತ್ವದಲ್ಲಿ ಪಾನಮಾಡುವುದು ನಾಲ್ಕನೆಯ ಪರ್ಯಾಯವು. ಮೊದಲ ಎರಡು ಪರ್ಯಾಯಗಳಲ್ಲಿ ಅಧ್ವರ್ಯುವೂ ಕೊನೆಯ ಎರಡು ಪರ್ಯಾಯಗಳಲ್ಲಿ ಪ್ರತಿಪ್ರಸ್ಥಾತೃವೂ ಭಾಗವನ್ನು ವಹಿಸುವರು. ಈ ರೀತಿ ನಾಲ್ಕು ಗಣ ಅಥವಾ ನಾಯಕತ್ವದಿಂದ ಸಹಿತವಾಗಿ ಒಂದಾವರ್ತಿ ಆಚರಿಸುವುದಕ್ಕೆ ಒಂದು ಪರ್ಯಾಯವೆಂದು ಹೆಸರು. ಇದರಂತೆ ಎರಡು, ಮೂರು, ಪರ್ಯಾಯಗಳೂ ನಡೆಯುವವು. ಒಂದೊಂದು ಪರ್ಯಾಯದಲ್ಲಿ ನಾಲ್ಕು ಗಣಗಳಂತೆ ಮೂರು ಪರ್ಯಾಯಗಳಲ್ಲಿ ಹನ್ನೆರಡು ಗಣಗಳಿರುವವು. ಇವೆಲ್ಲವನ್ನೂ ಸೇರಿಸಿದರೆ **ದ್ವಾದಶರಾತ್ರೇಃ ಪರ್ಯಾಯಾಃ** ಹನ್ನೆರಡು ರಾತ್ರಿಗಳಲ್ಲಿ ಹನ್ನೆರಡು ಪರ್ಯಾಯಗಳಿರುವವು ಎಂದು ಹೇಳಲ್ಪಡುವುದು.

ಈ ಹನ್ನೆರಡು ಪರ್ಯಾಯಗಳೂ ಪಂಚದಶವೆಂದು ಹೇಳಲ್ಪಡುವವು. ಏಕೆಂದರೆ ಈ ಪಂಚದಶಸ್ತೋಮಗಳಲ್ಲಿ ಒಂದೊಂದು ಋಕ್ಕನ್ನು ಅನೇಕ ಆವೃತ್ತಿಪಠಿಸುವುದರಿಂದ ಸಾಮಗರು ಈ ಸ್ತೋತ್ರವನ್ನು ಪಂಚದಶಸ್ತೋಮವೆಂದು ಕರೆಯುವರು. ಹನ್ನೆರಡು ಪರ್ಯಾಯಗಳಿಗೂ ಪಂಚದಶ (ಹದಿನೈದು) ಸ್ತೋಮಸಹಿತವಾಗಿರುವವು. ಈ ಪಂಚದಶಸ್ತೋಮವನ್ನು ದ್ವಿರಾವೃತ್ತಿ ಪಠಿಸಿದರೆ ಮೂವತ್ತು ಸಂಖ್ಯೆಯಾಗಿ ಎರಡು ಪರ್ಯಾಯಗಳಿಗೆ ಒಂದರಂತೆ ಮೂವತ್ತು ಸಂಖ್ಯೆಯಾಗುವುದು. ಇದಲ್ಲದೆ ಷೋಡಶಿಸ್ತೋತ್ರದಲ್ಲಿರುವ ಸಾಮವನ್ನೂ ಸೇರಿಸಿದರೆ ಮೂವತ್ತೊಂದಾಗುವುದು. ಈ ಸ್ತೋತ್ರದಲ್ಲಿರುವ ಋಕ್ಕುಗಳ ಆವೃತ್ತಿ ಉಂಟಾಗುವ ಸಂಖ್ಯೆಯ ಪ್ರಕಾರ ಇದನ್ನು ಏಕವಿಂಶತಿಸ್ತೋಮವೆಂದು ಇದನ್ನು ಸಾಮಗರು ಕರೆಯುತ್ತಾರೆ (ತಾಂಡ್ಯ. ಬ್ರಾಹ್ಮಣ ೬–೧೪ ರಿಂದ ೧೭). ಅತಿರಾತ್ರಯಾಗದ ಅಂತ್ಯದಲ್ಲಿ ಎಂದರೆ ಸಂಧಿಕಾಲದಲ್ಲಿ ಒಂದು ಸ್ತೋತ್ರವನ್ನು ಪಠಿಸುವರು. ಇದಕ್ಕೆ ತ್ರಿವೃತ್‌ಸ್ತೋಮವೆಂದು ಹೆಸರು. ಈ ಸ್ತೋಮದಲ್ಲಿರುವ ಮೂರು ಋಕ್ಕುಗಳನ್ನೂ ಮೂರು ಮೂರು ಆವೃತ್ತಿ ಪಠಿಸುವುದರಿಂದ ಒಂಭತ್ತಾಗುವುದು. ಹಿಂದೆ ಹೇಳಿದ ಇಪ್ಪತ್ತೊಂದರ ಜತೆಗೆ ಈ ಒಂಭತ್ತನ್ನು ಸೇರಿಸಿದರೆ ಮೂವತ್ತು ಎಂಬ ಸಂಖ್ಯೆಯಾಗುವುದು. ಈ ಮೂವತ್ತು ಎಂಬ ಸಂಖ್ಯೆಯಿಂದ ಮೂವತ್ತು ದಿನಗಳುಳ್ಳ ಒಂದು ಮಾಸವು ಲಬ್ಧವಾಗುವುದು. ಆದ್ದರಿಂದ ಸಂವತ್ಸರಪ್ರಕಾರವಾಗಿ ಅತಿರಾತ್ರಕ್ಕೂ ಅಗ್ನಿಷ್ಟೋಮಕ್ಕೂ ಸಂಬಂಧವಿದ್ದತಾಯಿತು. ಇದರಂತೆ ಅಗ್ನಿಷ್ಟೋಮಕ್ಕೂ ಅಪ್ತೋರ್ಯಾಮವೆಂಬ ಯಜ್ಞಕ್ಕೂ ಸಂಬಂಧವಿರುವುದು. ಈ ಅತಿರಾತ್ರವೆಂಬ ಯಜ್ಞದಲ್ಲಿ ಇರುವ ಸ್ತೋತ್ರಸಂಖ್ಯೆಯು ಅಧಿಕವಾದರೆ

ಅದಕ್ಕೆ ಅತ್ಯತಿರಾತ್ರವೆಂಬ ಹೆಸರು ಸಲ್ಲುವುದು. ಎಂದರೆ ಅತ್ಯತಿರಾತ್ರದಲ್ಲಿ ಇಪ್ಪತ್ತೊಂಬತ್ತು ಸ್ತೋತ್ರಗಳೂ ಅಪ್ತೋರ್ಯಾಮದಲ್ಲಿ ಮೂವತ್ತಮೂರು ಸ್ತೋತ್ರಗಳೂ ಇರುವವು. ಆದ್ದರಿಂದ ಅತಿರಾತ್ರಿಮೂಲಕ ಅಪ್ತೋರ್ಯಾಮದ ಸಂಬಂಧವೂ ಅಗ್ನಿಷ್ಟೋಮದಲ್ಲಿದ್ದಂತಾಯಿತು.

**ಏತದ್ವೈ ಯೇ ಚ ಪುರಸ್ತಾದ್ಯೇ ಚೋಪರಿಷ್ಟಾದ್ಯಜ್ಞಕ್ರತವಸ್ತೇ ಸರ್ವೇಽಗ್ನಿಷ್ಟೋಮಮಪಿಯಂತಿ ॥**

**ಉಕ್ತಂ ಸರ್ವಯಜ್ಞಕ್ರತುತ್ವಾಂತರ್ಭಾವಮುಪಸಂಹರತಿ— ಏತದ್ವಾ ಏತೇನೈವೋಕ್ತಪ್ರಕಾರೇಣಾಗ್ನಿಷ್ಟೋಮಸ್ಯ ಪೂರ್ವಭಾವಿನ ಇಷ್ಟ್ಯಗ್ನಿಹೋತ್ರಾದಯೋ ಯೇ ಯಜ್ಞಕ್ರತವೋ ಯೇ ಚೋತ್ತರಭಾವಿನ ಉಕ್ಥ್ಯವಾಜಪೇಯಾದಯೋ ಯಜ್ಞಕ್ರತವಸ್ತೇ ಸರ್ವೇಽಗ್ನಿಷ್ಟೋಮಂ ಪ್ರಾಪ್ನುವಂತಿ ।**

ಅಗ್ನಿಷ್ಟೋಮಯಾಗದಲ್ಲಿ ಸಮಸ್ತಯಜ್ಞಗಳೂ ಅಂತರ್ಗವಾಗಿರುವವು ಎಂಬ ವಿಷಯವನ್ನು ಉಪಸಂಹಾರಮಾಡಿ ಮುಗಿಸುತ್ತಾರೆ. ಹಿಂದೆ ಹೇಳಿದ ಪ್ರಕಾರ ಅಗ್ನಿಷ್ಟೋಮಕ್ಕೆ ಪೂರ್ವಭಾವಿಯಾಗಿ ಮಾಡಬೇಕಾದ ಇಷ್ಟಿ, ಅಗ್ನಿಹೋತ್ರ ಮೊದಲಾದವುಗಳೂ ಅಗ್ನಿಷ್ಟೋಮಾನಂತರದಲ್ಲಿ ಮಾಡಲ್ಪಡುವ ಉಕ್ಥ್ಯ, ವಾಜಪೇಯ ಮೊದಲಾದ ಯಜ್ಞಗಳೂ ಎಲ್ಲವೂ ಅಗ್ನಿಷ್ಟೋಮದಲ್ಲಿಯೇ ಅಂತರ್ಗತವಾಗಿ ಅದರ ಸಂಬಂಧವನ್ನೇ ಪಡೆದಿರುವವು.

**ತಸ್ಯ ಸಂಸ್ತುತಸ್ಯ ನವತಿಶತಂ ಸ್ತೋತ್ರಿಯಾಃ ಸಾ ಯಾ ನವತಿಸ್ತೇ ದಶ ತ್ರಿವೃತೋಽಥ ಯಾ ನವತಿಸ್ತೇ ದಶಾಥ ಯಾ ದಶ ತಾಸಾಮೇಕಾ ಸ್ತೋತ್ರಿಯೋದೇತಿ ತ್ರಿವೃತ್ಪರಿಶಿಷ್ಯತೇ ಸೋಽಸಾವೇಕವಿಂಶೋಽಧ್ಯಾಹಿತಸ್ತಪತಿ ವಿಷುವಾನ್ವಾ ಏಷ ಸ್ತೋಮಾನಾಂ ದಶ ವಾ ಏತಸ್ಮಾದರ್ವಾಂಚಸ್ತ್ರಿವೃತೋ ದಶ ಪರಾಂಚೋ ಮಧ್ಯ ಏಷ ಏಕವಿಂಶ ಉಭಯತೋಽಧ್ಯಾಹಿತಸ್ತಪತಿ ತದ್ಯಾಸೌ ಸ್ತೋತ್ರಿಯೋದೇತಿ ಸೈತಸ್ಮಿನ್ನಧ್ಯೂಳ್ಹಾ ಸ ಯಜಮಾನಸ್ತದ್ವೈವಂ ಕ್ಷತ್ರಂ ಸಹೋ ಬಲಂ ॥**

**ಅಥ ಪ್ರಕಾರಾಂತರೇಣಾಗ್ನಿಷ್ಟೋಮಂ ಪ್ರಶಂಸತಿ— ತಸ್ಯಾಗ್ನಿಷ್ಟೋಮಸ್ಯೋದ್ಗಾತೃಭಿಃ ಸಂಸ್ತುತಸ್ಯ ಸ್ತೋತ್ರಿಯಾಃ ಸ್ತೋತ್ರಸಂಬಂಧಿನ್ಯ ಋಚೋ ನವತ್ಯಧಿಕಂ ಶತಂ ಸಂಪದ್ಯಂತೇ ॥ ಕಥಮಿತಿ ಚೇತ್ ತದುಚ್ಯತೇ ॥ ಪ್ರಾತಃ ಸವನೇ ಬಹಿಷ್ಪವಮಾನಾಖ್ಯಂ ಯತ್ಸ್ತೋತ್ರಂ ತಸ್ಯ ತ್ರಿವೃತ್ಸ್ತೋಮಃ ಕ್ರಿಯತೇ॥ ತ್ರಿವೃತಶ್ಚಾಽಽವೃತ್ತಿರಹಿತತ್ವಾದ್ವಿದ್ಯಮಾನೇಷು ತ್ರಿಷು ತೃಚೇಷು ವಿದ್ಯಮಾನಾ ನವರ್ಚಃ ಸ್ತೋತ್ರಿಯಾ ಭವಂತಿ ॥ ತತ ಊರ್ಧ್ವಂ ಚತ್ವಾರ್ಯಾಜ್ಯಸ್ತೋತ್ರಾಣಿ ತೇಷ್ವೇಕೈಕಸ್ಮಿನ್ನಪಿ ವಿದ್ಯಮಾನಾನಾಂ ತಿಸೃಣಾಮೃಚಾಮಾವೃತ್ತಿವಿಶೇಷೇಣ ಪಂಚದಶ ಸ್ತೋಮಃ ಸಂಪಾದನೀಯಃ । ತಥಾ ಸತ್ಯೇಕೈಕಸ್ಮಿನ್ಸ್ತೋತ್ರೇ ಪಂಚದಶರ್ಚ ಇತ್ಯೇವಂ ಚತು-**

ಷುರ್ ಸ್ತೋತ್ರೇಷು ಮಿಲಿತಾ ಷಷ್ಟಿಃ ಸಂಪದ್ಯತೇ । ತದೇವಂ ಪ್ರಾತಃಸವನ ಏಕೋನಸಪ್ತತಿಃ ।
ಮಾಧ್ಯಂದಿನೇ ಸವನೇ ಮಾಧ್ಯಂದಿನಪವಮಾನಾಖ್ಯಂ ಏಕಂ ಸ್ತೋತ್ರಂ ತಸ್ಯಾಪಿ ಪಂಚದಶ-
ಸ್ತೋಮಯುಕ್ತತ್ವಾತ್ಸ್ತೋತ್ರಿಯಾಃ ಪಂಚದಶ ಸಂಪದ್ಯಂತೇ ॥ ಚತ್ವಾರಿ ಪೃಷ್ಠಸ್ತೋತ್ರಾಣಿ
ತೇಷು ಸಪ್ತದಶಸ್ತೋಮೇ ಕೃತೇ ಸತ್ಯಷ್ಟಷಷ್ಟಿಸಂಖ್ಯಾಕಾಃ ಸ್ತೋತ್ರಿಯಾಃ ಭವಂತಿ ॥ ಉಭ-
ಯಂ ಮಿಲಿತ್ವಾ ಮಾಧ್ಯಂದಿನಸವನೇ ತ್ರ್ಯಶೀತಿಃ ಸಂಪದ್ಯತೇ ॥ ತೃತೀಯಸವನ ಆರ್ಭವಪವ-
ಮಾನಸ್ತೋತ್ರಸ್ಯ ಸಪ್ತದಶಸ್ತೋಮೋಪೇತತ್ವಾತ್ತಸ್ಮಿನ್ಸಪ್ತದಶ ಋಚಃ ॥ ಯಜ್ಞಾಯಜ್ಞೀಯ-
ಸ್ತೋತ್ರಸ್ಯೈಕವಿಂಶಸ್ತೋಮೋಪೇತತ್ವಾತ್ತತ್ರೈಕವಿಂಶತಿರ್ಮಿಲಿತ್ವಾ ತೃತೀಯಸವನೇಽಷ್ಟಾ-
ತ್ರಿಂಶತ್ ॥ ಏವಂ ಸವನತ್ರಯೇ ಮಿಲಿತ್ವಾ ನವತ್ಯಧಿಕಶತಸಂಖ್ಯಾಕಾಃ ಸ್ತೋತ್ರಿಯಾ ಭವಂತಿ॥
ತತ್ರ ಯಾ ನವತಿಸ್ತೇ ದಶಸಂಖ್ಯಾಕಾಸ್ತ್ರಿವೃತಃಸ್ತೋಮಾಃ ಸಂಪದ್ಯಂತೇ ॥ ಏಕೈಕಸ್ಮಿನ್ದಶಕೇಽಂ-
ತಿಮಾಮೇಕಾಂ ಪರಿತ್ಯಜ್ಯಾವಶಿಷ್ಟಾನಾಮೃಚಾಂ ನವಸಂಖ್ಯೋಪೇತತ್ವಾತ್ತ್ರಿವೃತ್ಸ್ತೋಮತ್ವಂ॥
ತತೋ ನವಸು ದಶಕೇಷು ನವ ತ್ರಿವೃತ್ ಸ್ತೋಮಾಃ ॥ ಯಾಸ್ತು ತೇಷು ನವಕೇಷು ಪರಿ-
ತ್ಯಕ್ತಾ ನವರ್ಚಃ ಸ ಏಕಃ ತ್ರಿವೃತ್ ಸ್ತೋಮಃ ॥ ಏವಂ ದಶಸಂಖ್ಯಾಕಾಸ್ತ್ರಿವೃತ್ ಸ್ತೋಮಾಃ॥
ಅಥಾನಂತರಂ ಯಚ್ಛತಮಸ್ತಿ ತಸ್ಮಿನ್ನಪಿ ಯಾ ನವತಿಸ್ತೇ ಪೂರ್ವೋಕ್ತನ್ಯಾಯೇನ ದಶ ತ್ರಿವೃತ್
ಸ್ತೋಮಾ ಗಣನೀಯಾಃ ॥ ಅಥ ನವತೇರೂರ್ಧ್ವಭಾವಿನ್ಯೋ ಯಾ ಋಚೋ ದಶ ತಾಸಾಂ
ದಶಾನಾಮೃಚಾಂ ಮಧ್ಯ ಏಕಾ ಸ್ತೋತ್ರಿಯೋದೇತ್ಯತಿರಿಚ್ಯತೇ॥ ಅವಶಿಷ್ಟಾಸು ಸ್ತೋತ್ರಿಯಾಸು
ತ್ರಿವೃತ್ಸ್ತೋಮಃ ಪರಿಶಿಷ್ಯತೇ ॥ ಏವಂ ಸತ್ಯೇಕವಿಂಶತಿಸಂಖ್ಯಾಕಾಸ್ತ್ರಿವೃತ್ ಸ್ತೋಮಾಸ್ತೇ-
ಭ್ಯೋಽತಿರಿಕ್ತಾ ಕಾಚಿದೃಗಿತ್ಯೇತಾವತ್ಸಂಪನ್ನಂ ॥ ತತ್ರೈಕವಿಂಶತಿತ್ರಿವೃತ್ಸ್ತೋಮಸಂಘೋ
ಯೋಽಸ್ತಿ ಸ ಸರ್ವೋಽಪ್ಯಸೌ ಮಂಡಲೇ ದೃಶ್ಯಮಾನ ಏಕವಿಂಶತಿಸಂಖ್ಯಾಪೂರಕೋಽಧ್ಯಾ-
ಹಿತೋ ಮಂಡಲೇ ಸ್ಥಾಪಿತ ಆದಿತ್ಯಸ್ತಪತಿ ಪ್ರಕಾಶತೇ ॥ ಆದಿತ್ಯಸ್ಯೈಕವಿಂಶತಿಸಂಖ್ಯಾಪೂರಕ-
ತ್ವಮನ್ಯತ್ರ ಶ್ರುತಂ ॥ “ದ್ವಾದಶಮಾಸಾಃ ಪಂಚರ್ತವಸ್ತ್ರಯ ಇಮೇ ಲೋಕಾ ಅಸಾವಾದಿತ್ಯ
ಏಕವಿಂಶಃ” ಇತಿ ॥ ಯತ್ತು ಸತ್ರಂ ಗವಾಮಯನಾಖ್ಯಂ ತತ್ರ ಯಾನ್ಯೇಕವಿಂಶತ್ಯಹಾನಿ
ತತ್ಸಾದೃಶ್ಯಾದಪಿ ಯಥೋಕ್ತಸ್ತ್ರಿವೃತ್ಸ್ತೋಮಸಂಘಃ ಪ್ರಶಸ್ತಃ । ಕಥಂ ಸಾದೃಶ್ಯಮಿತಿ-
ತದುಚ್ಯತೇ ॥ ತಸ್ಮಿನ್ಸತ್ರೇ ಯನ್ಮಧ್ಯಮಮಹಸ್ತದ್ವಿಷುವನ್ನಾಮಕಂ ದಿವಾಕೀರ್ತ್ಯಂ ತಸ್ಯ ಪುರ-
ಸ್ತಾದ್ದಶಾಹಾನ್ಯುಪರಿಷ್ಟಾದ್ದಶಾಹಾನಿ ॥ ಏವಮತ್ರಾಪಿ ಪೂರ್ವೋಕ್ತರೀತ್ಯಾ ಸಂಪಾದಿತಾನಾ-
ಮೇಕವಿಂಶತಿಸಂಖ್ಯಾಕಾನಾಂ ತ್ರಿವೃತ್ಸ್ತೋಮಾನಾಂ ಮಧ್ಯೇ ಯಸ್ತ್ರಿವೃತ್ಸ್ತೋಮಃ ಸ
ಏವ ವಿಷುವಾನ್ಭವಿಷ್ಯತಿ ॥ ಏತಸ್ಮಾದ್ವಿಷುವದ್ರೂಪಾತ್ಸ್ತೋಮಾದರ್ವಾಂಚಃ ॥ ಪೂರ್ವಭಾ-
ವಿನೋ ದಶ ತ್ರಿವೃತ್ಸ್ತೋಮಾಃ ಪರಾಂಚ ಉತ್ತರಭಾವಿನೋಽಪಿ ದಶ ತ್ರಿವೃತ್ಸ್ತೋಮಾ
ಉಭಯೋರ್ದಶಕಯೋರ್ಮಧ್ಯ ಏಷ ಏಕವಿಂಶತಿಸಂಖ್ಯಾಪೂರಕತ್ರಿವೃತ್ಸ್ತೋಮ ಉಭಯ-
ತೋಽಧ್ಯಾಹಿತಃ ಪಾರ್ಶ್ವದ್ವಯೇ ದಶಕವ್ಯಾಪ್ತಃ ಸಂಸ್ತಪತ್ಯಾದಿತ್ಯವತ್ಪ್ರಕಾಶತೇ॥ ತತ್ತ್ರೈಕವಿಂ-
ಶತಿತ್ರಿವೃತ್ಸ್ತೋಮೇಭ್ಯ ಊರ್ಧ್ವಂ ಯಾಽಸಾವೃಗೇಕಾ ಸ್ತೋತ್ರಿಯೋದೇತ್ಯತಿರಿಕ್ತಾ ಭವತಿ
ಸೇಯಮೇತಸ್ಮಿನ್ನೇಕವಿಂಶತಿಸಂಘೇಽಧ್ಯಾಹ್ಯಾಧಿಕತ್ವೇನಾವಸ್ಥಾಪಿತಾ ॥ ಸ ಯಜಮಾ-
ನೋಽತಿರಿಕ್ತಸ್ತೋತ್ರಿಯಾರೂಪೋ ಯಜಮಾನತ್ವೇನಾವಗಂತವ್ಯಃ । ಕಿಂಚ ತತ್ಸ್ತೋತ್ರಿಯಾ-

**ರೂಪಂ ದೈವಂ ಕ್ಷತ್ರಂ ದೇವಸಂಬಂಧಿನೀ ಕ್ಷತ್ರಿಯಜಾತಿರಿಂದ್ರವರುಣಾದಿರೂಪಾ ತತ್ಕ್ಷತ್ರಂ ಸಹಃ ಪದಾಭಿಭವಕ್ಷಮಂ ಬಲಂ ಸೈನ್ಯಂ ॥ ಏವಮಗ್ನಿಷ್ಟೋಮಃ ಸ್ತೋತ್ರಿಯ (ಯಾ) ದ್ವಾರಾ ಪ್ರಶಸ್ತಃ ॥**

ಈಗ ಪ್ರಕಾರಾಂತರವಾಗಿ (ಬೇರೆ ವಿಧವಾಗಿ,) ಅಗ್ನಿಷ್ಟೋಮವನ್ನು ಪ್ರಶಂಸೆಮಾಡುವರು—ಅಗ್ನಿಷ್ಟೋಮದಲ್ಲಿರುವ ಸ್ತೋತ್ರಿಯಾಋಕ್ಕುಗಳನ್ನು ಎಣಿಸಿದರೆ ಒಟ್ಟು ನೂರತೊಂಬತ್ತು (೧೯೦) ಆಗುವವು. ಈ ಸಂಖ್ಯೆಯಲ್ಲಿ ೯೦ ಸಂಖ್ಯೆಯು ೧೦ ತ್ರಿವೃತ್ ಸ್ತೋತ್ರಗಳಿಂದ ಉಂಟಾಗುವವು. ಹೇಗೆಂದರೆ ತ್ರಿವೃತ್ ಎಂದರೆ (೩ × ೩) ಮೂರಾವೃತ್ತಿ ಮೂರು ಅಥವಾ ಒಂಭತ್ತು. ಇಂತಹ ಹತ್ತು ತ್ರಿವೃತ್‌ಸ್ತೋಮಗಳಿಂದ ೯೦ ಎಂಬ ಸಂಖ್ಯೆಯು ಲಭಿಸುವುದು. ನೂರು ಎಂಬ ಸಂಖ್ಯೆಯು ಲಭಿಸುವುದು. ನೂರು ಎಂಬ ಸಂಖ್ಯೆಯು ಲಭಿಸಬೇಕಾದರೆ, ಹಿಂದಿನಂತೆ ತ್ರಿವೃತ್ (೯) ಸ್ತೋಮದ ೧೦ ಆವೃತ್ತಿಗಳಿಂದ ೯೦ ಎಂಬ ಸಂಖ್ಯೆಯು ಲಭಿಸುವುದು. ಉಳಿದ ೧೦ ಎಂಬ ಸಂಖ್ಯೆಯಲ್ಲಿರುವ ೧ ತ್ರಿವೃತ್‌ನ್ನು ಸೇರಿಸಿದರೆ ೯೯ ಆಗುವುದು. ಎಂದರೆ ೨೧ × ೯ = ೧೮೯ ಸಂಖ್ಯೆಯಾಯಿತು. ಉಳಿದ ೧ ಸಂಖ್ಯೆಯು ಸೂರ್ಯನನ್ನು ನಿರ್ದೇಶಿಸುವುದು. ಒಂದೊಂದು ತ್ರಿವೃತ್‌ಸ್ತೋಮಕ್ಕೆ ೯ ಋಕ್ಕಿನಂತೆ ೨೧ ಸ್ತೋಮಗಳಿಗೆ ೧೮೯ ಋಕ್ಕುಗಳಾಗುವವು. ಹೆಚ್ಚಾಗಿರುವ ೧ ಋಕ್ಕು ಸೂರ್ಯನನ್ನು ನಿರ್ದೇಶಿಸುವುದು ಇದು ಮಧ್ಯಭಾಗದಲ್ಲಿ ವಿಷುವದ್ರೇಖೆಯಂತೆ ಪ್ರಕಾಶಿಸುವುದು ಎಂದರೆ ಹೆಚ್ಚಾದ ಈ ೧ ತ್ರಿವೃತ್‌ಸ್ತೋಮದ ಪೂರ್ವದಲ್ಲಿ ಹತ್ತು ಸ್ತೋಮಗಳೂ ಅನಂತರ ಹತ್ತು ಸ್ತೋಮಗಳೂ ಮಧ್ಯದಲ್ಲಿ ೧ ಸ್ತೋಮವೂ ಇದ್ದು ಒಟ್ಟು ೨೧ ಸ್ತೋಮಗಳಿಂದ ೧೯೦ ಋಕ್ಕುಗಳಿರುವವು. ಎಂದಭಿಪ್ರಾಯವು.

ಈ ಸಂಖ್ಯಾಕ್ರಮವು ಹೇಗೆಂದರೆ—ಪ್ರಾತಃಸವನಕಾಲದಲ್ಲಿ ಬಹಿಷ್ಪವಮಾನವೆಂಬ ಸ್ತೋತ್ರವನ್ನು ಗಾನಮಾಡುವರು. ಇದರಲ್ಲಿ ತ್ರಿವೃತ್ ಎಂಬ ಸ್ತೋಮವು ಇದರಲ್ಲಿ ಆವೃತ್ತಿರಹಿತವಾದ ಮೂರು (ತೃಚವೆಂದರೆ ಮೂರು ಋಕ್ಕುಗಳು)ಗಳಿರುವುದರಿಂದ ಮೂರು ತೃಚಗಳಲ್ಲಿ ಒಟ್ಟು ೯ ಋಕ್ಕುಗಳಿರುವವು. ಅಲ್ಲಿಂದ ಮುಂದೆ ೪ ಆಜ್ಯಸ್ತೋತ್ರಗಳಿರುವವು. ಇವುಗಳಲ್ಲಿರುವ ಋಕ್ಕುಗಳನ್ನು ಕೆಲವು ಆವೃತ್ತಿಗಳ ಮೂಲಕ ಗಾನಮಾಡುವುದರಿಂದ ಪಂಚದಶಸ್ತೋಮವು ಲಭಿಸುವುದು. ಎಂದರೆ ಒಂದೊಂದು ಸ್ತೋತ್ರದಲ್ಲಿ ೧೫ ಋಕ್ಕುಗಳಂತೆ ೪ ಆಜ್ಯಸ್ತೋತ್ರಗಳಿಂದ ೬೦ ಋಕ್ಕುಗಳು ಲಭಿಸುವವು. ಆದ್ದರಿಂದ ಪ್ರಾತಸ್ಸವನದಲ್ಲಿ ಇರುವ ೧ ತ್ರಿವೃತ್ ಮತ್ತು ೪ ಆಜ್ಯಶಸ್ತ್ರಗಳಿಂದ ಒಟ್ಟು ೬೯ ಋಕ್ಕುಗಳಾಗುವವು; ಮಾಧ್ಯಂದಿನಸವನದಲ್ಲಿ ಮಾಧ್ಯಂದಿನಪವಮಾನವೆಂಬ ಒಂದು ಸ್ತೋತ್ರವಿರುವುದು. ಇದರಲ್ಲಿಯೂ ಪಂಚದಶಸ್ತೋಮವಿರುವುದರಿಂದ ೧೫ ಋಕ್ಕುಗಳಿರುವವು. ಇದರ ಜತೆಗೆ ೪ ಪೃಷ್ಠಸ್ತೋತ್ರಗಳಿರುವವು. ಇವುಗಳಲ್ಲಿ ಸಪ್ತದಶಸ್ತೋಮಗಳು ೪ ಇರುವವು. ಒಂದೊಂದರಲ್ಲಿ ೧೭ ಋಕ್ಕುಗಳಂತೆ ಈ ೪ ಸಪ್ತದಶಸ್ತೋಮಗಳಲ್ಲಿ ೬೮ ಋಕ್ಕುಗಳಿರುವವು. ಇವೆರಡನ್ನೂ ಸೇರಿಸಿದರೆ (೧೫ + ೬೮ = ೮೩) ೮೩ ಋಕ್ಕುಗಳಾಗುವವು. ಇದರಂತೆ ತೃತೀಯಸವನದಲ್ಲಿ ಆರ್ಭವಪವಮಾನವೆಂಬ ಸ್ತೋತ್ರವಿರುವುದು. ಇದರಲ್ಲಿಯೂ ಸಪ್ತದಶಸ್ತೋಮವಿರುವುದರಿಂದ ೧೭ ಋಕ್ಕುಗಳಿರುವವು. ಮತ್ತು ಇದರಲ್ಲಿ ಯಜ್ಞಾಯಜ್ಞೀಯವೆಂಬ ಸ್ತೋತ್ರವಿರುವುದು. ಇದರಲ್ಲಿರುವ ಏಕವಿಂಶಸ್ತೋಮದಲ್ಲಿ ೨೧ ಋಕ್ಕುಗಳಿರುವವು. ಆದ್ದರಿಂದ ತೃತೀಯಸವನದಲ್ಲಿ (೧೭ + ೨೧ = ೩೮) ಒಟ್ಟು ೩೮ ಋಕ್ಕುಗಳಿರುವವು. ಆದ್ದರಿಂದ ಈ ಮೂರು ಸವನಗಳಲ್ಲಿಯೂ ಒಟ್ಟು ೬೯ + ೮೩ + ೩೮ = ೧೯೦ ಋಕ್ಕುಗಳಾದವು.

ಈ ಸಂಖ್ಯೆಯಲ್ಲಿ ತ್ರಿವೃತ್ ಸ್ತೋಮಕ್ಕೆ ೯ ಋಕ್ಕುಗಳಂತೆ ೯೦ ಋಕ್ಕುಗಳಿಗೆ ೧೦ ತ್ರಿವೃತ್ ಸ್ತೋಮಗಳಾದವು. ಪ್ರತಿ ಹತ್ತು ಸ್ತೋಮಗಳಲ್ಲಿಯೂ ಕೊನೆಯ ಒಂದನ್ನು ಬಿಟ್ಟರೆ ಉಳಿದ ಒಂಭತ್ತು ಋಕ್ಕುಗಳಿಗೆ ಒಂದು ತ್ರಿವೃತ್ ಸ್ತೋಮವಾಗುವುದು. ಆದರಂತೆ ಹತ್ತು ತ್ರಿವೃತ್ ಸ್ತೋಮಗಳಿಗೆ ೯೦ ಋಕ್ಕುಗಳಾಗುವವು. ಈ ರೀತಿ ೯೦ ಋಕ್ಕುಗಳಿಗೆ ೧೦ ತ್ರಿವೃತ್

ಸ್ತೋಮಗಳಾಯಿತು. ೯೦ ಋಕ್ಕುಗಳ ಮುಂದೆ ಇರುವ ೧೦ ಋಕ್ಕುಗಳಲ್ಲಿ ೯ ಕ್ಕಿಂತ ೧ ಹೆಚ್ಚಾಗಿರುವುದು. ಒಟ್ಟು ೧೯೦ ಋಕ್ಕುಗಳಲ್ಲಿರುವ ತ್ರಿವೃತ್ (೯ ಋಕ್ಕುಗಳಂತೆ) ಗಣನೆ ಮಾಡಿದರೆ ೨೧ ತ್ರಿವೃತ್ ಸ್ತೋಮಗಳಾಗುವವು. ಏಕವಿಂಶತಿ ಎಂದರೆ ೨೧ ಸಂಖ್ಯೆಯು ಈ ಇಪ್ಪತ್ತೊಂದನೆಯ ಸ್ತೋತ್ರವು ಮಧ್ಯದಲ್ಲಿದ್ದು ಹಿಂದೆ ಹತ್ತು ಮುಂದೆ ಹತ್ತು ಸ್ತೋಮಗಳಿದ್ದಂತಾಯಿತು. ಮಧ್ಯದಲ್ಲಿರುವ ಈ ಸ್ತೋತ್ರವೇ ಆದಿತ್ಯಮಂಡಲವೆಂದು ಹೇಳಲ್ಪಡುವುದು. ಈ ಇಪ್ಪತ್ತೊಂದು ಎಂಬ ಸಂಖ್ಯೆಗೆ ಆದಿತ್ಯವೆಂಬ ಹೆಸರು ಶ್ರುತಿಪ್ರಸಿದ್ಧವು. ಈ ವಿಷಯವು ತೈತ್ತಿರೀಯಸಂಹಿತೆಯಲ್ಲಿ—**ದ್ವಾದಶಮಾಸಾಃ ಪಂಚರ್ತವಸ್ತ್ರಯ ಇಮೇ ಲೋಕಾ ಅಸಾವಾದಿತ್ಯ ಏಕವಿಂಶಃ** (ತೈ. ಸಂ. ೫-೧-೧೦-೪) ಎಂದು ಹೇಳಲಾಗಿದೆ. ಎಂದರೆ ಸಂವತ್ಸರದಲ್ಲಿ ಹನ್ನೆರಡು ಮಾಸಗಳು, ೫ ಋತುಗಳು, ಮೂರು ಲೋಕಗಳು, ಒಬ್ಬ ಸೂರ್ಯನು ಇವೆಲ್ಲವೂ ಸೇರಿ ಒಂದು ಸಂವತ್ಸರಕಾಲಪರಿಮಿತಿ ಎನಿಸುವುದು.

ಸತ್ರಾದಿಗಳಲ್ಲಿ ಗವಾಮಯನವೆಂಬ ಒಂದು ಸತ್ರವಿರುವುದು (ಸತ್ರವೆಂದರೆ ಅನೇಕದಿನಗಳವರೆಗೆ ಮಾಡುವ ಯಜ್ಞವು). ಈ ಸತ್ರವನ್ನು ೨೧ ದಿನಗಳವರೆಗೂ ಮಾಡಬೇಕಾಗಿರುವುದು. ಇದಕ್ಕೂ ತ್ರಿವೃತ್ ಸ್ತೋಮಸಂಬಂಧವಿರುವುದು. ಹೇಗೆಂದರೆ– ಇಪ್ಪತ್ತೊಂದು ದಿನಗಳಲ್ಲಿ ಮಧ್ಯದ ದಿನವು (೧೧ ನೇ ದಿನವು) ವಿಷುವತ್ ಅಥವಾ ದಿವಾಕೀರ್ತ್ಯ ಎಂದು ಹೇಳಲ್ಪಡುವುದು. ಏಕೆಂದರೆ ಈ ವಿಷುವತ್ ಎಂಬ ದಿನಕ್ಕೆ ಮೊದಲು ೧೦ ದಿನಗಳೂ ಮಧ್ಯಭಾಗವಾದ ತ್ರಿವೃತ್‌ಸ್ತೋಮವು ಇಪತ್ತೊಂದನೆಯದಾಗಿರುವುದು. ಇಪ್ಪತ್ತೊಂದರ ಮಧ್ಯಭಾಗದಲ್ಲಿರುವ ಈ ತ್ರಿವೃತ್‌ಸ್ತೋಮಕ್ಕೆ ವಿಷುವಾನ್ ಎಂದು ಹೆಸರು. ಏಕೆಂದರೆ ಈ ವಿಷುವದ್ದಿನಕ್ಕೆ ಪೂರ್ವಭಾವಿಯಾಗಿ ಹತ್ತು ದಿನಗಳೂ ಅನಂತರ ಹತ್ತುದಿನಗಳೂ ಇದ್ದು ಮಧ್ಯದಲ್ಲಿ ಈ ಇಪ್ಪತ್ತೊಂದನೆಯ ದಿನವಿರುವುದು. ಇದರಲ್ಲಿರುವ ತ್ರಿವೃತ್‌ಸ್ತೋಮವು ಆದಿತ್ಯನಂತೆ ಪ್ರಕಾಶಿಸುತ್ತಿರುವುದು. ಮತ್ತು ಈ ೨೧ ತ್ರಿವೃತ್‌ಸ್ತೋಮಗಳಿಗೂ ಹೆಚ್ಚಾಗಿರುವ ೧ ಋಕ್ಕು ವ್ಯೂಳ್ಹಾ ಎಂದರೆ ಅಧಿಕವಾಗಿ (ಹೆಚ್ಚಾಗಿ) ಸ್ಥಾಪಿಸಲ್ಪಟ್ಟಿರುವುದು ಹೆಚ್ಚಾಗಿರುವ ಈ ಋಕ್ಕು ಯಜ್ಞಮಾಡುವ ಯಜಮಾನನ ರೂಪವಾಗಿರುವುದೆಂದು ಹೇಳಲ್ಪಡುವುದು. ಮತ್ತು ಈ ಋಕ್ಕು **ದೈವಂ ಕ್ಷತ್ರಂ** ಎಂದರೆ ದೇವಸಂಬಂಧವೂ, ಕ್ಷತ್ರಿಯ (ರಾಜರುಗಳೆಂದು ಹೇಳಲ್ಪಡುವ) ಇಂದ್ರವರುಣಾದಿಗಳ ಸಂಬಂಧವೂ ಆಗಿರುವುದರಿಂದ ಅಗ್ನಿಷ್ಟೋಮವು ಪ್ರಶಸ್ತವಾಗಿರುವುದು.

**ಅಶ್ನುತೇ ಹ ವೈ ದೈವಂ ಕ್ಷತ್ರಂ ಸಹೋ ಬಲಮೇತಸ್ಯ ಹ ಸಾಯುಜ್ಯಂ ಸರೂಪತಾಂ ಸಲೋಕತಾಮಶ್ನುತೇ ಯ ಏವಂ ವೇದ ॥**

**ಉಕ್ತಾರ್ಥವೇದನಂ ಪ್ರಶಂಸತಿ—ಉಕ್ತಾರ್ಥವೇದಿತಾ ಪರಾಭವಸಹಿಷ್ಣುಸ್ಸೈನ್ಯೋಪೇಪೇತಾಮಿಂದ್ರಾದಿದೈವಕ್ಷತ್ರಿಯಜಾತಿಮಶ್ನುತೇ—ಪ್ರಾಪ್ನೋತಿ ॥ ತತ್ರ ತೇನ ಕ್ಷತ್ರೇಂದ್ರಾದಿನಾ ಸಾಯುಜ್ಯಂ ಸಹವಾಸಂ ಸರೂಪತಾಂ ಸಮಾನರೂಪತ್ವಂ ಸಲೋಕತಾಮೇಕ ಲೋಕಾವಸ್ಥಿತಿಂ ಚ ಪ್ರಾಪ್ನೋತಿ ॥**

ಮೇಲೆ ಹೇಳಿದ ವಿಷಯಗಳೆಲ್ಲವನ್ನೂ ಯಾವ ಪುರುಷನು ತಿಳಿದಿರುವನೋ ಅವನು ದೇವಸಂಬಂಧಿಯೂ ಕ್ಷತ್ರಸಂಬಂಧಿಯೂ (ರಾಜಸಂಬಂಧಿ) ಆದ ಬಲಪರಾಕ್ರಮಸಾಮರ್ಥ್ಯಾದಿಗಳನ್ನು ಪಡೆದು ಈ ಲೋಕದಲ್ಲಿ ಸುಖಿಸುವುದಲ್ಲದೆ ಪರಲೋಕದಲ್ಲಿ ಇಂದ್ರಾದಿ ದೇವತೆಗಳ ಸಹವಾಸ, ಸಾಯುಜ್ಯ, ಸರೂಪತ್ವ ಮೊದಲಾದವುಗಳನ್ನು ಪಡೆದು ಸುಖಿಸುತ್ತಾನೆ.



*English Translatison*

**(The other parts of Jyotishtoma, such as Ukthya, Atiratra comprised in the Agnishtoma)**

Now the first part of the Agnishtoma has been explained. After that has been performed, the fifteen Stotras and Shastras of the Ukthya ceremony follow. If they the fifteen Stotras and fifteen Shastras are taken together, they represent the year as divided into months each consisting of thirty days. Agni Vaisvanara is the year; Agnishtoma is Agni. The Ukthya by following also the order of the year is thus comprised in the Agnishtoma.

After the Ukthya has entered the Agnishtoma, the Vajapeya follows it; for it exceeds the number of the Stotras of the Ukthya by two only

The twelve turns of the Soma cups at night at the Atiratra Soma feast are on the whole joined to the fifteen verses by means of which the Stotras are performed. Two of those turns belonging always together, the number of the Stotra verses to which they the turns belong, is brought to thirty (by multiplying the number fifteen with these two). (But the number thirty is to be obtained in another way also for the Atiratra). The Sholasi Saman is twenty-one-fold, and the Sandhi, (Saman at the end of Atiratra) is trivrit, i.e. nine-fold, which amounts in all to thirty. There are thirty nights in every month all the year round. Agni Vasivana is the year, and Agni is the Agnishtoma. The Atiratra is, by thus following the order of the year, comprised in the Agnishtoma, and the Aptoryama sacrifice follows the track of the Atiratra when entering the Agnishtoma. For it becomes also an Atiratra. Thus all sacrificial rites which precede the Agnishtoma, as well as those which come after it, are comprised in it.

All the Stotra verses of the Agnishtoma amount, if counted, to one hundred and ninety. For ninety are the ten trivritas (three times-nine). The number hundred is obtained thus) ninety are ten (trivritas) but of the number ten one Stotriya verse is in excess the rest is the Trivrit (nine) which is taken twenty-one-fold (this makes 189) and represents by this number that one (the sun) which is put over the others, and burns. This is the Vishuvan (equator) which has ten Trivrit Stomas before it and ten after it, and being placed in the midst of both turns above them, and burns (like the sun). The one Stotriya verse which is in excess, is put in that (Vishuvan which is the twenty-first) and placed over it (like a cover). This is the sacrificer. This (the twenty-one-fold Trivrit Stoma) is the divine Kshatram (sovereign power), which has the power of defying any attack.

He who has such a knowledge obtains the divine Kshatram, which has the power for defying any attack, and becomes assimilated to it, assumes its shape, and takes the same place with it.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಚತುರ್ದಶಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನಾಲ್ಕನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವಾದುದು.



# ಅಥ ಚತುರ್ದಶಾಧ್ಯಾಯೇ ಚತುರ್ಥಃ ಖಂಡಃ

## ಹದಿನಾಲ್ಕನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ ಅಗ್ನಿಷ್ಟೋಮದಲ್ಲಿ ಐತಕ್ಕಾಗಿ ನಾಲ್ಕು ಸ್ತೋಮಗಳನ್ನು ಪಠಿಸುವರು ಇತ್ಯಾದಿ ]



**ದೇವಾ ವಾ ಅಸುರೈರ್ವಿಜಿಗ್ಯಾನಾ ಊರ್ಧ್ವಾಃ ಸ್ವರ್ಗಂ ಲೋಕಮಾಯನ್ಸೋಽ ಗ್ನಿರ್ದಿವಿಸ್ಪೃಗೂರ್ಧ್ವ ಉದಶ್ರಯತ ಸ ಸ್ವರ್ಗಸ್ಯ ದ್ವಾರಮವೃಣೋದಗ್ನಿರ್ವೈ ಸ್ವರ್ಗಸ್ಯ ಲೋಕಸ್ಯಾಧಿಪತಿಸ್ತಂ ವಸವಃ ಪ್ರಥಮಾ ಆಗಚ್ಛಂಸ್ತ ಏನಮಬ್ರುವನ್ನತಿ ನೋಽರ್ಜಸ್ವಾಕಾಶಂ ನಃ ಕುರ್ವಿತಿ ಸ ನಾಸ್ತುತೋಽತಿಸ್ರಕ್ಷ್ಯ ಇತ್ಯಬ್ರವೀತ್ತ್ವಸ್ತ ನು ಮೇತಿ ತಥೇತಿ ತಂ ತೇ ತ್ರಿವೃತಾ ಸ್ತೋಮೇನಾಸ್ತುವಂಸ್ತಾನ್ಸ್ತುತೋಽತ್ಯಾರ್ಜತ ತೇ ಯಥಾಲೋಕಮಗಚ್ಛನ್ ॥**

ಅಥ ತ್ರಿವೃದಾದಿಸ್ತೋಮಚತುಷ್ಟಯದ್ವಾರೇಣಾಗ್ನಿಷ್ಟೋಮಂ ಸ್ತೋತುಮಾಖ್ಯಾಯಿಕಾಮಾಹ—

ಯೇ ದೇವಾ ಅಗ್ನಿಸಹಿತಾಃ ಪೂರ್ವಮಸುರೈಃ ಸಹ ಯುದ್ಧಂ ಕೃತ್ವಾ ವಿಜಿಗ್ಯಾನಾ ವಿಜಯಂ ಪ್ರಾಪ್ತಾಸ್ತೇ ದೇವಾ ಊರ್ಧ್ವಗಾಮಿನಃ ಸಂತಃ ಸ್ವರ್ಗಂ ಲೋಕಮಾಯನ್ಪ್ರಾಪ್ನುವನ್ ॥ ತದಾನೀಂ ಸೋಽಗ್ನಿಃ ಸ್ವಸ್ಥಾನ ಏವ ಸ್ಥಿತ್ವಾ ದಿವಿಸ್ಪೃಗ್ದ್ಯುಲೋಕಂ ಸ್ಪೃಶನ್ನೂರ್ಧ್ವಮುನ್ನತಃ ಸನ್ನುದಶ್ರಯತೋಪರಿತನಂ ದೇಶಮಾಶ್ರಿತವಾನ್ದ್ಯುಲೋಕಪರ್ಯಂತಂ ಸ್ವಕೀಯಾಂ ಜ್ವಾಲಾಂ ವರ್ಧಿತವಾನಿತ್ಯರ್ಥಃ ॥ ತತಃ ಸೋಽಗ್ನಿಃ ಸ್ವರ್ಗಲೋಕದ್ವಾರಮವೃಣೋತ್ತ್ಯಾಽಽಚ್ಛಾದಿತಮಕರೋತ್ ॥ ನ ಚೇತರೇಷು ದೇವೇಷು ಸ್ಥಿತೇಷು ಕಥಮಗ್ನೇರೀದೃಕ್ಸಾಮರ್ಥ್ಯಮಿತಿ ವಾಚ್ಯಂ ॥ ಯಸ್ಮಾದಗ್ನಿರೇವ ಸ್ವರ್ಗಲೋಕಸ್ಯಾಧಿಪತಿಃ ॥ ಅಗ್ನೌ ಹ್ಯಗ್ನಿಷ್ಟೋಮಾದಿಕರ್ಮಾಣ್ಯನುಷ್ಠಾಯ ಸ್ವರ್ಗಂ ಪ್ರಾಪ್ನುವಂತಿ ॥ ತಂ ಸ್ವರ್ಗದ್ವಾರನಿರೋಧಿನಮಗ್ನಿಮಷ್ಟೌ ವಸವಃ ಪ್ರಥಮಾಃ ಪುರೋಗಾಮಿನಃ ಭೂತ್ವಾಽಽಗಚ್ಛನ್ಪ್ರಾಪ್ತವಂತಃ ॥ ಪ್ರಾಪ್ಯ ಚೈನಮಗ್ನಿಂ ತೇ ವಸವ ಏವಮಬ್ರುವನ್ ॥ ಹೇಽಗ್ನೇ ತ್ವಂ ನೋಽಸ್ಮಾನತ್ಯರ್ಜಸಿ ತ್ವದೀಯಾಂ ಜ್ವಾಲಾಮತಿಲಂಘ್ಯೋರ್ಜಯಿತುಂ ಸ್ವರ್ಗಂ ಪ್ರಾಪಯಿತುಮರ್ಹಸಿ ನೋಽಸ್ಮಾಕಂ ತತ್ಪ್ರಾಪ್ತ್ಯರ್ಥಮಾಕಾಶಂ ತ್ವದೀಯಜ್ವಾಲಾಶಮನೇನಾವಕಾಶಂ ಕುರ್ವಿತಿ ॥ ತತಃ ಸೋಽಗ್ನಿರೇವಮಬ್ರವೀತ್ ॥ ಯುಷ್ಮಾಭಿರಸ್ತುತೋಽಹಂ ನಾತಿಸ್ರಕ್ಷ್ಯೇ ದ್ವಾರಾವರೋಧಂ ನ ಪರಿತ್ಯಕ್ಷ್ಯಾಮಿ ತಸ್ಮಾದವರೋಧಪರಿಹಾರಾಯ ನು ಕ್ಷಿಪ್ರಮೇವ ಮಾಮಗ್ನಿಂ ಸ್ತುತ ಸ್ತೋತ್ರಂ ಕುರುತೇತಿ । ತೇ ವಸವಸ್ತಥೇತ್ಯಂಗೀಕೃತ್ಯ ತ್ರಿವೃನ್ನಾಮಕೇನ ಸ್ತೋಮೇನಾಗ್ನಿಮಸ್ತುವನ್ ॥ ತಸ್ಯ ಚ ಸ್ತೋಮಸ್ಯ ವಿಧಾಯಕಂ ಛಂದೋಗಬ್ರಾಹ್ಮಣಮೇವಮಾಮ್ನಾಯತೇ—'ತಿಸೃಭ್ಯೋ ಹಿಂ ಕರೋತಿ ಸ ಪ್ರಥಮಯಾ ತಿಸೃಭ್ಯೋ ಹಿಂ ಕರೋತಿ ಸ ಮಧ್ಯಮಯಾ ತಿಸೃಭ್ಯೋ ಹಿಂ ಕರೋತಿ ಸ ಉತ್ತಮಯೋದ್ಯತೀ ತ್ರಿವೃತೋ ವಿಷ್ಟುತಿಃ ಇತಿ ॥ ಅಸ್ಯಾಯಮರ್ಥಃ। ಉಪಾಸ್ಮೈ ಗಾಯತಾ ನರ ಇತಿ ಯಃ ಪ್ರಥಮಸ್ತ್ಯೃಚೋ ದವಿದ್ಯುತತ್ಯಾ ರುಚೇತಿ ಯೋ ದ್ವಿತೀಯಸ್ತ್ಯೃಚಃ ಪವಮಾನಸ್ಯ ತೇ ಕವ ಇತಿ ಯಸ್ತೃತೀಯ ಸ್ತ್ಯೃಚ ಏತೇಷು ತ್ರಿಷು ತ್ರ್ಯೃಚಾತ್ಮಕೇಷು ಸೂಕ್ತೇಷು ವಿದ್ಯಮಾನಾನಾಂ ನವಾನಾಮೃಚಾಂ ತ್ರಿಭಿಃ ಪರ್ಯಾಯೈರ್ಗಾನಂ ಕರ್ತವ್ಯಂ ॥ ತತ್ರ ಪ್ರಥಮೇ ಪರ್ಯಾಯೇ ತ್ರಿಷು ಸೂಕ್ತೇಷ್ವಾದ್ಯಾಸ್ತಿಸ್ರ ಋಚೋ ಗಾತವ್ಯಾಃ ॥ ದ್ವಿತೀಯಪರ್ಯಾಯೇ ಮಧ್ಯಮಾ ಋಚೊ ಗಾತವ್ಯಾಃ ॥ ತೃತೀಯ ಪರ್ಯಾಯ ಉತ್ತಮಾ ಋಚೋ ಗಾತವ್ಯಾಃ ॥ ತಿಸೃಭ್ಯ ಇತಿ ತೃತೀಯಾರ್ಥೇ ಪಂಚಮೀ ॥ ಹಿಂ ಕರೋತೀತ್ಯನೇನ ಗಾನಮುಪಲಕ್ಷ್ಯತೇ । ಸೇಯಂ ಯಥೋಕ್ತಪ್ರಕಾರೋಪೇತಾ ಗೀತಿಸ್ತ್ರಿವೃತ್‌ಸ್ತೋಮಸ್ಯ ವಿಷ್ಟುತಿಃ ಸ್ತುತಿಪ್ರಕಾರವಿಶೇಷಃ । ತಸ್ಯಾ ವಿಷ್ಟುತೇರುದ್ಯತೀತ್ಯೇವಂ ನಾಮಧೇಯಮಿತಿ ॥ ಈದೃಶೇನ ಸ್ತೋಮೇನ ಸ್ತುತೋಽಗ್ನಿಸ್ತಾನ್ವಸೂನತ್ಯಾರ್ಜತ ನಿರುದ್ಧಂ ದ್ವಾರಮತಿಲಂಘ್ಯ ಸ್ವರ್ಗಮಧ್ಯೇ ಪ್ರಾಪಿತವಾನ್॥ ತೇ ಚ ವಸವೋ ದೇವಾ ಯಥಾಲೋಕಂ ಸ್ವಸ್ಯ ಸ್ವಸ್ಯೋಚಿತಂ ಲೋಕಂ ಸ್ಥಾನವಿಶೇಷಮನತಿಕ್ರಮ್ಯ ತತ್ರಾಽಽಗಚ್ಛನ್ ॥

ಈಗ ಅಗ್ನಿಷ್ಟೋಮಯಾಗವನ್ನು ತ್ರಿವೃತ್, ಪಂಚದಶ, ಸಪ್ತದಶ, ಏಕವಿಂಶ ಎಂಬ ನಾಲ್ಕು ಸ್ತೋಮಗಳ (ಸ್ತೋಮವೆಂದರೆ ಸಾಮಗಾನರೂಪವಾದ ಸ್ತೋತ್ರ) ಮೂಲಕ ಪ್ರಶಂಸೆಮಾಡುವರು. ಪೂರ್ವಕಾಲದಲ್ಲಿ ಅಗ್ನಿಸಹಿತರಾದ ದೇವತೆಗಳು ಅಸುರರೊಡನೆ ಯುದ್ಧಮಾಡಿ ಜಯಶಾಲಿಗಳಾದ್ದರಿಂದು ಹಿಂದೆ ಹೇಳಿದೆಯಷ್ಟೆ. ಈಗ ಆ ದೇವತೆಗಳೆಲ್ಲಾ ಸ್ವರ್ಗಲೋಕಕ್ಕೆ

ಹೋಗಬೇಕೆಂದು ಬಯಸಿದರು. ಅಸುರರೊಡನೆ ದೇವತೆಗಳು ಯುದ್ಧಮಾಡಿದಾಗ ಅಗ್ನಿಯೂ ದೇವತೆಗಳಿಗೆ ಸಹಾಯಮಾಡಿ ದೇವತೆಗಳ ಜಯಪ್ರಾಪ್ತಿಗೆ ಸಹಾಯಮಾಡಿದನೆಂದೂ ಸಹ ಹಿಂದೆ ಹೇಳಲಾಗಿದೆ. ಈಗ ಆ ಅಗ್ನಿಯು ತನ್ನ ಅಗಾಧವಾದ ಜ್ವಾಲೆಗಳಿಂದ ಭೂಲೋಕದಿಂದ ಸ್ವರ್ಗಲೋಕದ ಪರ್ಯಂತರ ವ್ಯಾಪಿಸಿ ಯಾರೂ ಅಗ್ನಿಯ ಅನುಮತಿಯಿಲ್ಲದೆ ಸ್ವರ್ಗಲೋಕಕ್ಕೆ ಹೋಗಲು ಅವಕಾಶವಿಲ್ಲದಂತೆ ಸ್ವರ್ಗದ್ವಾರದಲ್ಲಿಯೇ ಜಾಗರೂಕನಾಗಿದ್ದನು. ಸ್ವರ್ಗದ ದ್ವಾರಗಳೆಲ್ಲಾ ಅಗ್ನಿಯ ಜ್ವಾಲೆಗಳಿಂದ ಮುಚ್ಚಿಹೋಗಿತ್ತು. ಸ್ವರ್ಗಕ್ಕೆ ಹೋಗುವವರನ್ನು ಒಳಕ್ಕೆ ಬಿಡಲು ಅಗ್ನಿಗೆ ಮಾತ್ರ ಅವಕಾಶವಿತ್ತು. ಇತರ ದೇವತೆಗಳಿಗೆ ಇದು ಸಾಧ್ಯವಿರಲಿಲ್ಲ. ಆದ್ದರಿಂದ ಅಗ್ನಿಯೇ ಸ್ವರ್ಗಲೋಕಕ್ಕೆ ಅಧಿಪತಿಯೆಂದಾಯಿತು. ಯಾರಾಗಲಿ ಸ್ವರ್ಗಲೋಕಕ್ಕೆ ಹೋಗಬೇಕಾದರೆ ಅಗ್ನಿಷ್ಟೋಮಯಾಗವನ್ನು ಮಾಡಿಯೇ ಹೋಗಬೇಕಾಯಿತು. ಅಗ್ನಿಷ್ಟೋಮವೆಂದರೆ ಅಗ್ನಿ+ಸ್ತೋಮ= ಅಗ್ನಿಯನ್ನು ಸ್ತೋಮಗಳ ಮೂಲಕ ಸ್ತುತಿಸಿಯೇ ಹೋಗಬೇಕಾಯಿತು. ವಸ್ತುಸ್ಥಿತಿಯು ಹೀಗಿರುವಾಗ ಅಷ್ಟವಸುಗಳೆಂಬ ಕೆಲವು ದೇವತೆಗಳು ಎಲ್ಲರಿಗಿಂತ ಮೊದಲು ಸ್ವರ್ಗಕ್ಕೆ ಹೋಗಬೇಕೆಂದು ಬಯಸಿ ಸ್ವರ್ಗದ ದ್ವಾರದ ವರೆಗೆ ಹೋಗಿ ಅಲ್ಲಿ ಬಾಗಿಲಿನಲ್ಲಿ ಅಗ್ನಿಯು ಅಡ್ಡವಾಗಿರುವುದನ್ನು ಕಂಡು ಇಂತೆಂದರು—ಎಲೈ ಅಗ್ನಿಯೇ, ನಾವು ಸ್ವರ್ಗಕ್ಕೆ ಹೋಗಬೇಕು ಸ್ವರ್ಗದ ದ್ವಾರದಲ್ಲೆಲ್ಲಾ ಅಗ್ನಿಯ (ನಿನ್ನ) ಜ್ವಾಲೆಗಳೇ ವ್ಯಾಪಿಸಿರುವುದರಿಂದ ಸ್ವರ್ಗ ಪ್ರದೇಶಕ್ಕೆ ಅಡ್ಡಿಯಾಗಿದೆ. ಆದ್ದರಿಂದ ನೀನು ದಯವಿಟ್ಟು ನಿನ್ನ ಜ್ವಾಲೆಗಳನ್ನು ಕಡಿಮೆಮಾಡಿಕೊಂಡು ನಾವು ಸ್ವರ್ಗಕ್ಕೆ ಹೋಗಲು ಅವಕಾಶವನ್ನು ಮಾಡಿಕೊಡು ಎಂದು ಪ್ರಾರ್ಥಿಸಿದರು. ಇದನ್ನು ಕೇಳಿ ಅಗ್ನಿಯು ಆ ವಸುಗಳನ್ನುದ್ದೇಶಿಸಿ—ಎಲೈ ವಸುಗಳೇ, ನೀವು ನನ್ನನ್ನು ಸ್ತೋತ್ರಮಾಡಿರಿ. ಅದರಿಂದ ನಾನು ಪ್ರಸನ್ನನಾಗಿ ನೀವು ಸ್ವರ್ಗಕ್ಕೆ ಹೋಗಲು ಇರುವ ಪ್ರತಿಬಂಧಕವನ್ನು ಪರಿಹರಿಸಿಕೊಡುತ್ತೇನೆ. ಆದ್ದರಿಂದ ನೀವು ಬೇಗನೆ ನನ್ನನ್ನು ಸ್ತುತಿಸಿ ಎಂದನು. ಹಾಗೆಯೇ ಆಗಲೆಂದು ಹೇಳಿ ಆ ವಸುಗಳು ತ್ರಿವೃತ್ ಎಂಬ ಸ್ತೋಮದಿಂದ ಅಗ್ನಿಯನ್ನು ಸ್ತುತಿಸಿದರು. ಈ ರೀತಿ ಸ್ತುತಿಸಲ್ಪಟ್ಟನಂತರ ಅಗ್ನಿಯು ಸುಪ್ರೀತನಾಗಿ ಆ ದೇವತೆಗಳು ಸ್ವರ್ಗಲೋಕಕ್ಕೆ ಹೋಗಿ ಅಲ್ಲಿ ನೆಲೆಸಲು ಅವಕಾಶವನ್ನು ಮಾಡಿಕೊಟ್ಟನು.

ಅಭಿಪ್ಲವಷಡಹಯಾಗದಲ್ಲಿ ವಿಷಮದಿನಗಳು ಎಂದರೆ, ಪ್ರಥಮ, ತೃತೀಯ, ಪಂಚಮದಿನಗಳಲ್ಲಿ ನಡೆಯುವ ಮಾಧ್ಯಂದಿನಸವನಗಳಲ್ಲಿ (ಮಧ್ಯಾಹ್ನಕಾಲದಲ್ಲಿ ಸೋಮರಸವನ್ನು ಹಿಂಡುವ ಕರ್ಮವಿಶೇಷಕಾಲದಲ್ಲಿ) ಉದ್ಗಾತೃ ಮೊದಲಾದ ಋತ್ವಿಜರು **ರಥಂತರವೆಂಬ** ಸಾಮಗಾನಗಳಿಂದ ಸ್ತೋತ್ರಮಾಡುವುದರಿಂದ ಈ ದಿನಗಳಿಗೆ **ರಥಂತರಪೃಷ್ಠ**ಗಳೆಂದು ಹೆಸರು. ಅದರಂತೆಯೇ ಸಮದಿನಗಳಲ್ಲಿ ಎಂದರೆ ದ್ವಿತೀಯ, ಚತುರ್ಥ, ಷಷ್ಠದಿನಗಳಲ್ಲಿ **ಬೃಹತ್ಸಾಮವೆಂಬ** ಸಾಮಗಾನಗಳಿಂದ ಸ್ತೋತ್ರಮಾಡುವುದರಿಂದ ಈ ದಿನಗಳಿಗೆ **ಬೃಹತ್ಪೃಷ್ಠ** ದಿನಗಳೆಂದು ಹೆಸರು. ಮೂರನೆಯ ದಿನದಿಂದ ಪ್ರಾರಂಭಿಸಿ ಪ್ರತಿದಿನವೂ ಪೃಷ್ಠ್ಯಸ್ತೋತ್ರಗಳನ್ನು ಪಠಿಸುವಾಗ ಅದಕ್ಕೆ ಪ್ರತಿಯಾಗಿ ವೈರೂಪ, ವೈರಾಜ, ಶಾಕ್ವರರೈವತಗಳೆಂದು ಹೇಳಲ್ಪಡುವ ವಿಶೇಷಸಾಮಮಂತ್ರಗಳು ಗಾನಮಾಡಲ್ಪಡುತ್ತವೆ. ಆ ಕಾಲದಲ್ಲಿ ಸಾಮಗಾನಕ್ಕೆ ಅನುಸಾರವಾಗಿ ಹೋತೃವರ್ಗದ ಋತ್ವಿಜರು **ಸ್ತೋಮವೆಂದು** ಹೇಳಲ್ಪಡುವ ಕೆಲವು ಋಕ್ಕುಗಳನ್ನು ಪಠಿಸುವರು.

**ಏಕಂ ಸಾಮ ತೃಚೇ ಕ್ರಿಯತೇ । ತಸ್ಯ ಚ ತೃಚಸ್ಯ ಆವೃತ್ತ್ಯಾ ಋಚಾಂ ಸಂಖ್ಯಾ ವರ್ಧನೀಯಾ ಭವತಿ ಯಾ ಸ್ತೋಮಶಬ್ದೇನೋಚ್ಯತ ಇತಿ ॥**

ತೃಚವೆಂದರೆ ಮೂರು ಋಕ್ಕುಗಳು. ಈ ಮೂರು ಋಕ್ಕುಗಳೂ ಒಂದೇ ದೇವತೆಯನ್ನು ಪ್ರತಿಪಾದಿಸುವುದಾಗಿ ಇರಬೇಕು. ಇಂತಹ ಋಕ್ಕುಗಳನ್ನು ಸ್ಥಾನಭೇದಗಳಿಂದ ವಿಧವಿಧವಾಗಿಯೂ, ಒಂದೊಂದು ಋಕ್ಕನ್ನು ಒಂದಾವರ್ತಿಗಿಂತ ಹೆಚ್ಚಾಗಿ ಪಠಿಸುವುದರಿಂದಲೂ ತೃಚವನ್ನು ಅನೇಕ ಋಕ್ಕುಗಳನ್ನಾಗಿ ವೃದ್ಧಿಪಡಿಸಬಹುದು. ಉದಾ.—ಒಂದು ತೃಚದಲ್ಲಿ ೧, ೨, ೩ ಎಂಬ ಋಕ್ಕುಗಳಿವೆ. ಅವುಗಳನ್ನು,

೧, ೨, ೩ ; ೩, ೨, ೧ ; ೧, ೩, ೨ ; ೨, ೧, ೩ ; ೨, ೩, ೧ ; ೩, ೧, ೨ ಇತ್ಯಾದಿ ಸ್ಥಾನಭೇದಗಳಿಂದಲೂ—

೧, ೧, ೧, ೨, ೩ ; ೧, ೨, ೨, ೨, ೩ ; ೧, ೨, ೩, ೩, ೩ ಇತ್ಯಾದಿ ಅಧಿಕ ಆವೃತ್ತಿಗಳಿಂದಲೂ,

ಪಠಿಸುವಾಗ ಮೂರು ಋಕ್ಕುಗಳು ಅನೇಕ ಋಕ್ಕುಗಳಾಗುವವು. ಈ ರೀತಿಯಾಗಿ ತೃಚವೆಂದು ಮೂರು ಋಕ್ಕುಗಳನ್ನು ಯಾವುದಾದರೂ ಒಂದು ಕ್ರಮದಲ್ಲಿ ಪಠಿಸುವುದಕ್ಕೆ ಎಂದರೆ ೧, ೨, ೩ ಅಥವಾ ೧, ೨, ೩, ೩, ೩, ಎಂದು ಮೊದಲಾಗಿ ಪಠಿಸುವುದಕ್ಕೆ ಪರ್ಯಾಯವೆಂದು ಹೆಸರು. ಇಂತಹ ಪರ್ಯಾಯಗಳು ಮೂರಾದರೆ ಒಂದು ವಿಷ್ಟುತಿಯಾಗುವುದು. ಪ್ರತಿಯೊಂದು ಸ್ತೋಮಕ್ಕೂ ಇಂತಹ ವಿಷ್ಟುತಿಗಳು ಬೇರೆ ಬೇರೆ ಹೆಸರಿನಿಂದ ಅನೇಕವಿಧಗಳಾಗಿರುವುವು. ಆದುದರಿಂದ ಮೂರು ಋಕ್ಕಿನ ತೃಚವನ್ನು ಮೂರು ಪರ್ಯಾಯಗಳಲ್ಲಿ ವಿಧವಿಧವಾದ ಕ್ರಮದಿಂದ ಪಠಿಸುವುದೇ ಸ್ತೋಮಗಳಲ್ಲಿ **ತ್ರಿವೃತ್, ಪಂಚದಶಃ, ಸಪ್ತದಶಃ, ಏಕವಿಂಶಃ, ತ್ರಿಣವಃ, ತ್ರಯಸ್ತ್ರಿಂಶಃ, ಚತುರ್ವಿಂಶಃ, ಚತುಶ್ಚತ್ವಾರಿಂಶಃ, ಅಷ್ಟಾಚತ್ವಾರಿಂಶಃ** ಎಂದು ಒಂಭತ್ತು ವಿಧವಾದ ಸ್ತೋಮಗಳಿರುವವು. ತ್ರಿವೃತ್‌ಸ್ತೋಮದಲ್ಲಿ ತೃಚವನ್ನು ಬೇರೆ ಬೇರೆ ಕ್ರಮಗಳಲ್ಲಿ ಮೂರಾವರ್ತಿ ಪಠಿಸುವುದರಿಂದ ಈ ಸ್ತೋಮಕ್ಕೆ ತ್ರಿವೃತ್ಸ್ತೋಮವೆಂದು ಹೆಸರು. ಆದುದರಿಂದ ತ್ರಿವೃತ್ಸ್ತೋಮದ ಮೂರು ಪರ್ಯಾಗಳ ಒಟ್ಟು ಋಕ್ಕುಗಳ ಸಂಖ್ಯೆ ೯ ಆಗುವುದು. ಪಂಚದಶ ಮೊದಲಾದ ಸ್ತೋಮಗಳಲ್ಲಿ ಮೂರು ಪರ್ಯಾಯಗಳಿಂದ ಹದಿನೈದು ಅಥವಾ ಹೆಚ್ಚಿನ ಸಂಖ್ಯೆಯ ಋಕ್ಕುಗಳು ಆಯಾ ಸ್ತೋಮದ ಹೆಸರಿಗೆ ತಕ್ಕಂತೆ ಇರುವವು. ಎಂದರೆ ಪಂಚದಶಸ್ತೋಮದಲ್ಲಿ ಮೂರು ಪರ್ಯಾಯಗಳಿಂದ ಒಟ್ಟು ೧೫ ಋಕ್ಕುಗಳೂ ಸಪ್ತದಶಸ್ತೋಮದಲ್ಲಿ ಮೂರು ಪರ್ಯಾಯಗಳಿಂದ ಒಟ್ಟು ೧೭ ಋಕ್ಕುಗಳೂ ಇರುವವು, ಇತ್ಯಾದಿ. ಆದುದರಿಂದ ಋಕ್ಸಂಖ್ಯೆಗಳಿಗೆ ಅನುಸಾರವಾಗಿ ಸ್ತೋಮಗಳಿಗೆ ಆಯಾ ಹೆಸರು ಬಂದಿರುವುದು. ಪ್ರತಿ ಪರ್ಯಾಯದಲ್ಲಿಯೂ ಒಂದೇ ಸಂಖ್ಯೆಯ ಋಕ್ಕುಗಳಿರಬೇಕೆಂಬ ನಿಯಮವಿಲ್ಲ. ಮೂರು ಪರ್ಯಾಯಗಳಿಂದ ಕ್ಲೃಪ್ತಸಂಖ್ಯೆಯ ಋಕ್ಕುಗಳು ಆಯಾ ಸ್ತೋಮಗಳ ವಿಷ್ಟುತಿಗಳಲ್ಲಿರಬೇಕು. ಅವುಗಳ ವಿವರವು ಈ ರೀತಿ ಇದೆ.

| | | | |
|---|---|---|---|
| (೧) | ತ್ರಿವೃತ್ಸ್ತೋಮ—ಮೂರು ಪರ್ಯಾಯಗಳಿಂದ ಒಟ್ಟು | ೯ | ಋಕ್ಕುಗಳು. |
| (೨) | ಪಂಚದಶಸ್ತೋಮ ,, | ೧೫ | ,, |
| (೩) | ಸಪ್ತದಶಸ್ತೋಮ ,, | ೧೭ | ,, |
| (೪) | ಏಕವಿಂಶಸ್ತೋಮ ,, | ೨೧ | ,, |
| (೫) | ತ್ರಿಣವಸ್ತೋಮ ,, | ೨೭ | ,, |
| (೬) | ತ್ರಯಸ್ತ್ರಿಂಶಸ್ತೋಮ ,, | ೩೩ | ,, |
| (೭) | ಚತುರ್ವಿಂಶಸ್ತೋಮ ,, | ೨೪ | ,, |
| (೮) | ಚತುಶ್ಚತ್ವಾರಿಂಶಸ್ತೋಮ ,, | ೪೪ | ,, |
| (೯) | ಅಷ್ಟಾಚತ್ವಾರಿಂಶಸ್ತೋಮ ,, | ೪೮ | ,, |

ಈ ರೀತಿ ೯ ಸ್ತೋಮಗಳ ಋಕ್ಸಂಖ್ಯೆಗಳು ಆಯಾ ಸ್ತೋಮದ ಹೆಸರಿಗೆ ತಕ್ಕಂತೆ ಇರುವವು. ಈ ಸಂಖ್ಯೆಯು ಸ್ತೋಮದಲ್ಲಿರುವ ಒಂದೊಂದು ವಿಷ್ಟುತಿಗೆ ಅನ್ವಯಿಸುವುದು ಎಂದು ತಿಳಿಯಬೇಕು. ಎಂದರೆ ತ್ರಿವೃತ್ಸ್ತೋಮದಲ್ಲಿ ಮೂರು ವಿಷ್ಟುತಿಗಳಿರುವುದರಿಂದ ಒಂದೊಂದು ವಿಷ್ಟುತಿಯ ಮೂರು ಪರ್ಯಾಯಗಳಿಗೂ ೯ ಋಕ್ಕುಗಳಿರುವುವೆಂದು ತಿಳಿಯಬೇಕು. ಒಟ್ಟು ಮೂರು ವಿಷ್ಟುತಿಗಳಿಂದ ಸೇರಿ ೯ ಋಕ್ಕುಗಳಲ್ಲ, ೨೭ ಋಕ್ಕುಗಳಾಗುವವು ಇತ್ಯಾದಿ.

ಪ್ರತಿಯೊಂದು ಸ್ತೋಮಕ್ಕೂ ಅನೇಕ ವಿಷ್ಟುತಿಗಳಿರುವುವೆಂದು ಹಿಂದೆಯೇ ಹೇಳಿರುವುದಷ್ಟೆ. ಅವುಗಳ ವಿವರವನ್ನು ಕೆಳಗೆ ಕೊಟ್ಟಿದೆ—

I ತ್ರಿವೃತ್ಸ್ತೋಮಕ್ಕೆ—

(೧) ಉದ್ಯತೀ (೨) ಪರಿವರ್ತಿನೀ (೩) ಕುಲಾಯಿನೀ ಎಂದು ಮೂರು ವಿಷ್ಟುತಿಗಳು.

II ಪಂಚದಶಸ್ತೋಮಕ್ಕೆ—

(೧) ಪಂಚಪಂಚಿನೀ (೨) ಉದ್ಯತೀ ಪ್ರಥಮಾ (೩) ಉದ್ಯತೀ ದ್ವಿತೀಯಾ ಎಂದು ಮೂರು ವಿಷ್ಟುತಿಗಳು.

III ಸಪ್ತದಶಸ್ತೋಮಕ್ಕೆ—

(೧) ದಶಸಪ್ತಾ ಪ್ರಥಮಾ (೨) ದಶಸಪ್ತಾ ದ್ವಿತೀಯಾ (೩) ಸಪ್ತಸ್ಥಿತಾ ಪ್ರಥಮಾ (೪) ಸಪ್ತಸ್ಥಿತಾ ದ್ವಿತೀಯಾ (೫) ಅನಾಮಿಕಾ (೬) ಉದ್ಯತೀ (೭) ಭಸ್ತ್ರಾ ಎಂದು ಏಳು ವಿಷ್ಟುತಿಗಳು.

IV ಏಕವಿಂಶಸ್ತೋಮಕ್ಕೆ—

(೧) ಸಪ್ತಸಪ್ತಿನೀ (೨) ಉದ್ಯತೀ (೩) ಪ್ರತಿಷ್ಟುತಿಃ (೪) ಸೂರ್ಮಿ ಎಂದು ನಾಲ್ಕು ವಿಷ್ಟುತಿಗಳು.

V ತ್ರಿವಣಸ್ತೋಮಕ್ಕೆ—

(೧) ಪ್ರತಿಸ್ಥಿತಾ (೨) ಉದ್ಯತೀ ಎಂದು ಎರಡು ವಿಷ್ಟುತಿಗಳು.

VI ತ್ರಯಸ್ತ್ರಿಂಶಸ್ತೋಮಕ್ಕೆ—

(೧) ಸಮುತ್ತ್ರ್ಯಂಶಾ (೨) ನೇದೀಯಸ್ಸಂಕ್ರಮಾ (೩) ಉದ್ಯತೀ (೪) ಪ್ರತ್ಯವರೋಹಿಣೀ (೫) ಅಂತಿಮಾ ಎಂದು ಐದು ವಿಷ್ಟುತಿಗಳು.

VII ಚತುರ್ವಿಂಶಸ್ತೋಮಕ್ಕೆ—

ಇದಕ್ಕೆ ಒಂದೇ ವಿಷ್ಟುತಿ ಇರುವುದು.

VIII ಚತುಶ್ಚತ್ವಾರಿಂಶಸ್ತೋಮಕ್ಕೆ—

(೧) ಪ್ರಥಮಾ (೨) ನಿರ್ಮಧ್ಯಾ (೩) ತೃತೀಯಾ ಎಂದು ಮೂರು ವಿಷ್ಟುಗಳು.

IX ಅಷ್ಟಾಚತ್ವಾರಿಂಶಸ್ತೋಮಕೆ—

(೧) ಪ್ರಥಮಾ (೨) ನೇದಿಯಾಸ್ಸಂಕ್ರಮಾ ಎಂದು ಎರಡು ವಿಷ್ಟುತಿಗಳು.

ಒಟ್ಟು ಒಂಭತ್ತು ಸ್ತೋಮಗಳಿಗೆ ಮೂವತ್ತು ವಿಷ್ಟುತಿಗಳಿರುವವು.

## ತ್ರಿವೃತ್ಸ್ತೋಮದ ವಿವರಣೆಯು

ಈಗ ತ್ರಿವೃತ್ಸ್ತೋಮದ **ಉದ್ಯತೀ ಪರಿವರ್ತಿನೀ ಕುಲಾಯಿನೀ** ಎಂಬ ಮೂರು ವಿಷ್ಟುತಿಗಳ ಮತ್ತು ಪಂಚದಶಸ್ತೋಮದ ಉದ್ಯತೀ ಎಂಬ ವಿಷ್ಟುತಿಯ ಕ್ರಮವನ್ನು ಉದಾಹರಣೆಸಹಿತವಾಗಿ ವಿವರಿಸಿ ಮುಂದೆ ತ್ರಿವೃದಾದಿ ಒಂಭತ್ತು ಸ್ತೋಮಗಳ ವಿಷ್ಟುತಿಕ್ರಮಗಳೆಲ್ಲವನ್ನೂ ಪರ್ಯಾಯತ್ರಯಗಳಲ್ಲಿಯೂ ತೃಚದ ಋಕ್ಸಂಖ್ಯೆಗಳನ್ನು (ಮಾತ್ರ) ಕೊಟ್ಟು

ವಿವರಿಸಲಾಗುವುದು. ತ್ರಿವೃತ್ಸ್ತೋಮದ ಉದ್ಯತೀ ಎಂಬ ವಿಷ್ಟುತಿಯನ್ನು ಪಠಿಸುವ ಕ್ರಮವು ಸಾಮವೇದದ ತಾಂಡ್ಯ ಬ್ರಾಹ್ಮಣದಲ್ಲಿ ಈ ರೀತಿ ಹೇಳಲ್ಪಟ್ಟಿದೆ—

**ತಿಸೃಭ್ಯೋ ಹಿಂಕರೋತಿ ಸ ಪರಾಚೀಭಿಃ ।**
**ತಿಸೃಭ್ಯೋ ಹಿಂಕರೋತಿ ಸ ಪರಾಚೀಭಿಃ ।**
**ತಿಸೃಭ್ಯೋ ಹಿಂಕರೋತಿ ಸ ಪರಾಚೀಭಿರುದ್ಯತೀ ತ್ರಿವೃತೋ ವಿಷ್ಟುತಿರಿತಿ ।**

ಇದರ ಅರ್ಥವು—**ತ್ರಿಸೃಭ್ಯೋ ಹಿಂಕರೋತಿ** ಎಂದರೆ ಉದ್ಗಾತೃವು ತೃಚದ ಮೂರು ಋಕ್ಕುಗಳನ್ನು ಗಾನಮಾಡುವನು ಎಂದು. **ಪರಾಚೀಭಿಃ** ಎಂದರೆ ವೇದದಲ್ಲಿರುವ ಕ್ರಮದಂತೆ ಎಂದು. ಆದುದರಿಂದ **ತ್ರಿಸೃಭ್ಯೋ ಹಿಂಕರೋತಿ ಪರಾಚೀಭಿಃ** ಎಂದು ಮೂರಾವರ್ತಿ ಹೇಳಿರುವುದರಿಂದ ಮೂರು ಋಕ್ಕುಗಳನ್ನೂ ವೇದದಲ್ಲಿರುವ ಕ್ರಮದಂತೆ ಮೂರು ಪರ್ಯಾಯಗಳಲ್ಲಿಯೂ ಪಠಿಸಬೇಕೆಂದರ್ಥವು—

ಪ್ರಥಮಪರ್ಯಾಯ ೧, ೨, ೩ ನೆಯ ಋಕ್ಕುಗಳು
ದ್ವಿತೀಯಪರ್ಯಾಯ ೧, ೨, ೩ „
ತೃತೀಯಪರ್ಯಾಯ ೧, ೨, ೩ „

ಈ ರೀತಿ ಮೂರು ಪರ್ಯಾಯಗಳಲ್ಲಿಯೂ ಮೂರು ಋಕ್ಕುಗಳನ್ನೂ ಪಠಿಸಿದರೆ ಇದು ತ್ರಿವೃತ್ಸ್ತೋಮದ ಉದ್ಯತೀ ಎಂಬ ವಿಷ್ಟುತಿಕ್ರಮವಾಗುವುದು.

ಪ್ರಸಕ್ತವಾದ **ಆತ್ವೇತಾ ನಿಷೀದತ** ಎಂಬ ಸೂಕ್ತದಲ್ಲಿ ಮೊದಲನೆಯ ಮೂರು ಋಕ್ಕುಗಳು ಒಂದು ತೃಚವು. ಅದನ್ನು ತ್ರಿವೃತ್ಸ್ತೋಮದ ಉದ್ಯತೀವಿಷ್ಟುತಿಯ ಕ್ರಮದಂತೆ ಪಠಿಸಿದರೆ—

(೧) **ಆತ್ವೇತಾ ನಿಷೀದತ** ........................ ॥೧॥
(೨) **ಪುರೂತಮಂ ಪುರೂಣಾಂ** ............... ॥೨॥
(೩) **ಸ ಘಾ ನೋ ಯೋಗ ಆಭುವತ್** .... ॥೩॥

ಎಂದು ಪ್ರಥಮ ಪರ್ಯಾಯವಾಗುವುದು. ದ್ವಿತೀಯ ತೃತೀಯ ಪರ್ಯಾಯಗಳೂ ಇದೇ ರೀತಿಯಲ್ಲಿರುವವು. ಈ ರೀತಿ ಮೂರು ಪರ್ಯಾಯಗಳಲ್ಲಿಯೂ ತೃಚವನ್ನು ಪಠಿಸಿದರೆ ತ್ರಿವೃತ್ಸ್ತೋಮದ ಉದ್ಯತೀ ಎಂಬ ವಿಷ್ಟುತಿಯಾಗುವುದು.

ಇದೇ ಸ್ತೋಮದ ಪರಿವರ್ತಿನೀ ಎಂಬ ವಿಷ್ಟುತಿಕ್ರಮವು—

**ದ್ವಿತೀಯಾ ಪರಿವರ್ತಿನೀ ವಿಷ್ಟುತಿಃ । ಆವರ್ತನೀಯತೃಚಸ್ಯಾನಾವೃತ್ತರೂಪೇಣ**
**ಸಕೃತ್ಪಾಠೇ ಪ್ರಥಮಃ ಪರ್ಯಾಯಃ ॥**
**ತಥೈವ ಪುನಃ ಪಾಠೇ ದ್ವಿತೀಯಃ ॥**
**ತಥೈವ ಪುನಃ ಪಾಠೇ ತೃತೀಯಃ ಪರ್ಯಾಯಃ ॥ ಇತಿ ॥**

ಎಂದರೆ ಈ ಎರಡನೆಯ ಪರಿವರ್ತಿನೀ ಎಂಬ ವಿಷ್ಟುತಿಯಲ್ಲಿ ಕೊನೆಯಿಂದ ಮೊದಲಿನ ವರೆಗೆ ಪ್ರತಿಲೋಮಕ್ರಮದಿಂದ ಎಂದರೆ ೩, ೨, ೧ ಎಂಬ ಕ್ರಮದಿಂದ ತೃಚದ ಋಕ್ಕುಗಳನ್ನು ಪಠಿಸಬೇಕು—

ಪ್ರಥಮಪರ್ಯಾಯ—೩, ೨, ೧
ದ್ವಿತೀಯಪರ್ಯಾಯ—೩, ೨, ೧
ತೃತೀಯಪರ್ಯಾಯ—೩, ೨, ೧

ಉದಾಹರಣೆ—

(೧) **ಸ ಘಾ ನೋ ಯೋಗ ಆಭುವತ್** .... ॥ ೩ ನೆಯ ಋಕ್ಕು ॥
(೨) **ಪುರೂತಮಂ ಪುರೂಣಾಂ** .... ॥ ೨ ,,
(೩) **ಆತ್ವೇತಾ ನಿಷೀದತ** .... .... ॥ ೧ ,,

ಈ ಪರಿವರ್ತಿನೀ ಉದ್ಯತಿಯಲ್ಲಿಯೂ ಮೂರು ಪರ್ಯಾಯಗಳು ಒಂದೇ ವಿಧವಾಗಿರುವುವು.

ಈಗ ಇವೇ ತ್ರಿವೃತ್‌ಸ್ತೋಮದ ಕುಲಾಯಿನೀ ಎಂಬ ಮೂರನೆಯ ವಿಷ್ಟುತಿಕ್ರಮವನ್ನು ಹೇಳುವೆವು.

**ತಿಸೃಭ್ಯೋ ಹಿಂಕರೋತಿ ಸ ಪರಾಚೀಭಿಃ ॥ ತಿಸೃಭ್ಯೋ ಹಿಂಕರೋತಿ ಯಾ ಮಧ್ಯಮಾ ಸಾ ಪ್ರಥಮಾ, ಯೋತ್ತಮಾ ಸಾ ಮಧ್ಯಮಾ ॥ ತಿಸೃಭ್ಯೋ ಹಿಂಕರೋತಿ ಯೋತ್ತಮಾ ಸಾ ಪ್ರಥಮಾ, ಯಾ ಪ್ರಥಮಾ ಸಾ ಮಧ್ಯಮಾ, ಯಾ ಮಧ್ಯಮಾ ಸೋತ್ತಮಾ ॥ಇತಿ॥**

ಇದರ ಅರ್ಥವು—

**ಪ್ರಥಮಪರ್ಯಾಯದಲ್ಲಿ—ತಿಸೃಭ್ಯೋ ಹಿಂಕರೋತಿ ಸ ಪರಾಚೀಭಿಃ ॥** ಎಂದರೆ ಮೊದಲನೆಯ ಪರ್ಯಾಯದಲ್ಲಿ ತೃಚದ ಋಕ್ಕುಗಳನ್ನು ವೇದದ ಕ್ರಮದಂತೆಯೇ ಎಂದರೆ ೧, ೨, ೩ ಎಂಬುದಾಗಿ ಹೇಳಬೇಕು.

ಉದಾಹರಣೆ—

(೧) **ಆತ್ವೇತಾ ನಿಷೀದತ** ........................ ॥ ೧ ನೆಯ ಋಕ್ಕು ॥
(೨) **ಪುರೂತಮಂ ಪುರೂಣಾಂ** ................ ॥ ೨ ,,
(೩) **ಸ ಘಾ ನೋ ಯೋಗ ಆಭುವತ್** .... ॥ ೩ ,,

**ದ್ವಿತೀಯಪರ್ಯಾಯದಲ್ಲಿ—ತಿಸೃಭ್ಯೋ ಹಿಂಕರೋತಿ ಯಾ ಮಧ್ಯಮಾ ಸಾ ಪ್ರಥಮಾ, ಯೋತ್ತಮಾ ಸಾ ಮಧ್ಯಮಾ, ಯಾ ಪ್ರಥಮಾ ಸೋತ್ತಮಾ ॥** ದ್ವಿತೀಯ ಪರ್ಯಾಯದಲ್ಲಿ ತೃಚದ ಮಧ್ಯದ (೨ ನೆಯ) ಋಕ್ಕನ್ನು ಮೊದಲಲ್ಲಿಯೂ, ಕೊನೆಯ (೩ ನೆಯ) ಋಕ್ಕನ್ನು ಮಧ್ಯದಲ್ಲಿಯೂ, ಮೊದಲನೆಯ (೧ ನೆಯ) ಋಕ್ಕನ್ನು ಕೊನೆಯಲ್ಲಿಯೂ ಪಠಿಸಬೇಕು ಎಂದರೆ ಇದರ ಕ್ರಮವು ೨, ೩, ೧.

ಉದಾಹರಣೆ—

(೧) **ಪುರೂತಮಂ ಪುರೂಣಾಂ** ................ ॥ ೨ ನೆಯ ಋಕ್ಕು ॥
(೨) **ಸ ಘಾ ನೋ ಯೋಗ ಆಭುವತ್** .... ॥ ೩ ,,
(೧) **ಆ ತ್ವೇತಾ ನಿಷೀದತ**........ ........... ॥ ೧ ,,

**ತೃತೀಯಪರ್ಯಾಯದಲ್ಲಿ—ತ್ರಿಸೃಭ್ಯೋ ಹಿಂಕರೋತಿ ಯೋತ್ತಮಾ ಸಾ ಪ್ರಥಮಾ, ಯಾ ಪ್ರಥಮಾ ಸಾ ಮಧ್ಯಮಾ, ಯಾ ಮಧ್ಯಮಾ ಸೋತ್ತಮಾ ॥** ತೃತೀಯಪರ್ಯಾಯದಲ್ಲಿ ಕೊನೆಯ

(೩ ನೆಯ) ಋಕ್ಕನ್ನು ಮೊದಲಲ್ಲಿಯೂ, ಮೊದಲ (೧ ನೆಯ) ಋಕ್ಕನ್ನು ಮಧ್ಯದಲ್ಲಿಯೂ, ಮಧ್ಯದ (೨ ನೆಯ) ಋಕ್ಕನ್ನು ಕೊನೆಯಲ್ಲಿಯೂ ಪಠಿಸಬೇಕು, ಇದರ ಕ್ರಮವು ೩, ೧, ೨.

ಉದಾ—　(೧) ಸ ಘಾ ನೋ ಯೋಗ ಆಭುವತ್ .... ॥ ೩ ನೆಯ ಋಕ್ಕು ॥
(೨) ಆ ತ್ವೇತಾ ನಿಷೀದತ........................ ॥ ೧ ,,
(೩) ಪುರೂತಮಂ ಪುರೂಣಾಂ ................ ॥ ೨ ,,

ಇದು ತೃತೀಯಪರ್ಯಾಯವು. ಈ ಮೂರು ಪರ್ಯಾಯಗಳೂ ಸೇರಿ ತ್ರಿವೃತ್ಸ್ತೋಮದ ಕುಲಾಯಿನೀ ಎಂಬ ವಿಷ್ಟುತಿಯಾಗುವುದು.

## ಪಂಚದಶಸ್ತೋಮದ ವಿವರಣೆಯು

ಈ ಸ್ತೋಮದಲ್ಲಿ ೭ ವಿಷ್ಟುತಿಗಳಿರುವುವು. ಅವುಗಳಲ್ಲಿ ೬ ನೆಯ ಉದ್ಯತೀ ಎಂಬ ವಿಷ್ಟುತಿಯನ್ನು ಮಾತ್ರ ಉದಾಹರಣೆ ಪೂರ್ವಕವಾಗಿ ವಿವರಿಸುತ್ತೇನೆ, ಈ ಸ್ತೋಮದ ಯಾವ ವಿಷ್ಟುತಿಯು ೩ ಪರ್ಯಾಯಗಳ ಋಕ್ಕುಗಳನ್ನು ಸೇರಿಸಿದರೂ ೧೫ ಋಕ್ಕುಗಳಾಗುವುದರಿಂದ ಈ ಸ್ತೋಮಕ್ಕೆ ಪಂಚದಶಸ್ತೋಮವೆಂದು ಹೆಸರು. ಇದರ ಕ್ರಮವು—

**ಪ್ರಥಮಪರ್ಯಾಯದಲ್ಲಿ—ಪಂಚಭ್ಯೋ ಹಿಂಕರೋತಿ ಸ ತಿಸೃಭಿಃ ಸ ಏಕಯಾ ಸ ಏಕಯಾ ॥**

ಎಂದರೆ ಮೊದಲನೆಯ ಪರ್ಯಾಯದಲ್ಲಿ ತೃಚದ ಮೊದಲನೆಯ ಋಕ್ಕನ್ನು ಮೂರಾವರ್ತಿಯೂ ಎರಡನೆಯ ಮತ್ತು ಮೂರನೆಯ ಋಕ್ಕುಗಳನ್ನು ಒಂದಾವರ್ತಿಯೂ ಪಠಿಸಬೇಕು. ಇದರ ಕ್ರಮವು —೧, ೧, ೧, ೨, ೩.

ಉದಾಹರಣೆ—

(೧) ಆ ತ್ವೇತಾ ನಿಷೀದತ　॥ ೧ ನೆಯ ಋಕ್ಕು ॥
(೨) ಆ ತ್ವೇತಾ ನಿಷೀದತ　॥ ೧ ,,
(೩) ಆ ತ್ವೇತಾ ನಿಷೀದತ　॥ ೧ ,,
(೪) ಪುರೂತಮಂ ಪುರೂಣಾಂ　॥ ೨ ,,
(೫) ಸ ಘಾ ನೋ ಯೋಗ ಆಭುವತ್ ॥ ೩ ,,

**ದ್ವಿತೀಯಪರ್ಯಾಯದಲ್ಲಿ—ಪಂಚಭ್ಯೋ ಹಿಂಕರೋತಿ ಸ ಏಕಯಾ ಸ ತಿಸೃಭಿಃ ಸ ಏಕಯಾ ॥**

ಎರಡನೆಯ ಪರ್ಯಾಯದಲ್ಲಿ ಮೊದಲನೆಯ ಋಕ್ಕನ್ನು ಒಂದಾವರ್ತಿಯೂ, ಎರಡನೆಯ ಋಕ್ಕನ್ನು ಮೂರಾವರ್ತಿಯೂ, ಮೂರನೆಯ ಋಕ್ಕನ್ನು ಒಂದಾವರ್ತಿಯೂ, ಪಠಿಸಬೇಕು. ಇದರ ಕ್ರಮವು. ೧, ೨, ೨, ೨, ೩, ಉದಾ—

(೧) ಆ ತ್ವೇತಾ ನಿಷೀದತ　॥ ೧ ನೆಯ ಋಕ್ಕು ॥
(೨) ಪುರೂತಮಂ ಪುರೂಣಾಂ　॥ ೨ ,,
(೩) ಪುರೂತಮಂ ಪುರೂಣಾಂ　॥ ೨ ,,
(೪) ಪುರೂತಮಂ ಪುರೂಣಾಂ　॥ ೨ ,,
(೫) ಸ ಘಾ ನೋ ಯೋಗ ಆಭುವತ್ ॥ ೩ ,,

ತೃತೀಯಪರ್ಯಾಯದಲ್ಲಿ— ಪಂಚಭ್ಯೋ ಹಿಂಕರೋತಿ ಸ ಏಕಯಾ ಸ ಏಕಯಾ ಸ ತಿಸೃಭಿಃ ||

ಮೂರನೆಯ ಪರ್ಯಾಯದಲ್ಲಿ ಮೊದಲನೆಯ ಋಕ್ಕನ್ನು ಒಂದಾವರ್ತಿಯೂ, ಎರಡನೆಯ ಋಕ್ಕನ್ನು ಒಂದಾವರ್ತಿಯೂ, ಮೂರನೆಯ ಋಕ್ಕನ್ನು ಮೂರಾವರ್ತಿಯೂ, ಪಠಿಸಬೇಕು. ಇದರ ಕ್ರಮವು ೧, ೨, ೩, ೩, ೩,

ಉದಾ—

(೧) ಆ ತ್ವೇತಾ ನಿಷೀದತ || ೧ ನೆಯ ಋಕ್ಕು
(೨) ಪುರೂತಮಂ ಪುರೂಣಾಂ || ೨ ,,
(೩) ಸ ಘಾ ನೋ ಯೋಗ ಆಭುವತ್ || ೩ ,,
(೪) ಸ ಘಾ ನೋ ಯೋಗ ಆಭುವನ್ || ೩ ,,
(೫) ಸ ಘಾ ನೋ ಯೋಗ ಆಭುವನ್ || ೩ ,,

ಎಂದರೆ ಮೂರು ಪರ್ಯಾಯಗಳೂ ಸೇರಿ ಪಂಚದಶಸ್ತೋಮದ ಉದ್ಯತೀ ಎಂಬ ವಿಷ್ಟುತಿಯಕ್ರಮವು. ಇದರಂತೆ ಇತರ ಸ್ತೋಮಗಳ ವಿಷ್ಟುತಿಕ್ರಮಗಳನ್ನೂ ತಿಳಿದುಕೊಳ್ಳಬೇಕು. ಈಗ ತ್ರಿವೃದಾದಿ ಅಷ್ಟಾಚತ್ವಾರಿಂಶಸ್ತೋಮಗಳ ಎಂದರೆ ಒಟ್ಟು ಒಂಭತ್ತು ಸ್ತೋಮಗಳ ವಿಷ್ಟುತಿಗಳ ಹೆಸರುಗಳನ್ನೂ ಅವುಗಳ ಪರ್ಯಾಯಕ್ರಮದಲ್ಲಿ ಪಠಿಸುವ ಋಕ್ಸಂಖ್ಯೆಯ ರೀತಿಯನ್ನೂ ವಿವರಿಸುತ್ತೇವೆ. ಅವುಗಳ ಕ್ರಮವು ಈರೀತಿ ಇದೆ—

## I ತ್ರಿವೃತ್ಸ್ತೋಮಕ್ಕೆ—

(೧) ಉದ್ಯತೀ (೨) ಪರಿವರ್ತಿನೀ (೩) ಕುಲಾಯಿನೀ ಎಂದು ಮೂರು ವಿಷ್ಟುತಿಗಳಿರುವುವು.

(೧) ಉದ್ಯತೀ ಎಂಬ ವಿಷ್ಟುತಿಯಲ್ಲಿ—

ಪ್ರಥಮಪರ್ಯಾಯ—೧, ೨, ೩ ನೆಯ ಋಕ್ಕುಗಳು
ದ್ವಿತೀಯಪರ್ಯಾಯ—೧, ೨, ೩ ,,
ತೃತೀಯಪರ್ಯಾಯ—೧, ೨, ೩ ,,

(೨) ಪರಿವರ್ತಿನೀ ಎಂಬ ವಿಷ್ಟುತಿಯಲ್ಲಿ ,,

ಪ್ರಥಮಪರ್ಯಾಯ—೩, ೨, ೧ ನೆಯ ಋಕ್ಕುಗಳು
ದ್ವಿತೀಯಪರ್ಯಾಯ—೩, ೨, ೧ ,,
ತೃತೀಯಪರ್ಯಾಯ—೩, ೨, ೧ ,,

ಈ ಎರಡು ವಿಷ್ಟುತಿಗಳಲ್ಲಿ ಮೂರು ಪರ್ಯಾಯಗಳೂ ಒಂದೇ ಸಮನಾಗಿರುವುವು. ವ್ಯತ್ಯಾಸವಿಲ್ಲ.

(೩) ಕುಲಾಯಿನೀ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾಯ—೧, ೨, ೩ ನೆಯ ಋಕ್ಕುಗಳು
ದ್ವಿತೀಯಪರ್ಯಾಯ—೨, ೩, ೧ ,,
ತೃತೀಯಪರ್ಯಾಯ—೩, ೧, ೨ ,,

II ಪಂಚದಶಸ್ತೋಮ

(೧) ಪಂಚಪಂಚಿನೀ (೨) ಉದ್ಯತೀ ಪ್ರಥಮಾ (೩) ಉದ್ಯತೀ ದ್ವಿತೀಯಾ ಎಂದು ಮೂರು ವಿಷ್ಟುತಿಗಳು.

(೧) ಒಂದನೆಯ ಪಂಚಪಂಚಿನೀ ಎಂಬ ವಿಷ್ಟುತಿಯಲ್ಲಿ—

ಪ್ರಥಮಪರ್ಯಾಯ—೧, ೧, ೧, ೨, ೩ ನೆಯ ಋಕ್ಕುಗಳು
ದ್ವಿತೀಯಪರ್ಯಾಯ—೧, ೨, ೨, ೨, ೩ ,,
ತೃತೀಯಪರ್ಯಾಯ—೧, ೨, ೩, ೩, ೩ ,,

ಇದು ಪಂಚಪಂಚಿನೀ ಎಂಬ ವಿಷ್ಟುತಿಯ ಪಠನಕ್ರಮವು. ,,

(೨) ಎರಡನೆಯ ಉದ್ಯತೀಪ್ರಥಮಾ ಎಂಬ ವಿಷ್ಟುತಿಯ ಕ್ರಮವು—

ಪ್ರಥಮಪರ್ಯಾಯ—೧, ೧, ೧, ೨, ೩ ,,
ದ್ವಿತೀಯಪರ್ಯಾಯ—೧, ೨, ೩ ,,
ತೃತೀಯಪರ್ಯಾಯ—೧, ೨, ೨, ೨, ೩, ೩, ೩ ,,

(೩) ಮೂರನೆಯ ಉದ್ಯತೀದ್ವಿತೀಯಾ ಎಂಬ ವಿಷ್ಟುತಿಯ ಕ್ರಮವು—

ಪ್ರಥಮಪರ್ಯಾಯ—೧, ೨, ೩ ,,
ದ್ವಿತೀಯಪರ್ಯಾಯ—೧, ೨, ೨, ೨, ೩ ,,
ತೃತೀಯಪರ್ಯಾಯ—೧, ೧, ೧, ೨, ೩, ೩, ೩ ,,

ಇವು ಪಂಚದಶಸ್ತೋಮದ ಮೂರು ವಿಷ್ಟುತಿಗಳ ಕ್ರಮವು.

III ಸಪ್ತದಶಸ್ತೋಮ—

(೧) ದಶಸಪ್ತಾನಾಮಿಕಾ ಪ್ರಥಮಾ (೨) ದಶಸಪ್ತಾನಾಮಿಕಾ ದ್ವಿತೀಯಾ
(೩) ಸಪ್ತಾಸ್ಥಿತಾ ಪ್ರಥಮಾ (೪) ಸಪ್ತಾಸ್ಥಿತಾ ದ್ವಿತೀಯಾ
(೫) ಅನಾಮಿಕಾ (೬) ಉದ್ಯತೀ (೭) ಭಸ್ತ್ರಾ ಎಂದು ಏಳು
ವಿಷ್ಟುತಿಗಳು. ಅವುಗಳ ಕ್ರಮವು—

(೧) ದಶಸಪ್ತಾನಾಮಿಕಾ ಪ್ರಥಮಾ ಎಂಬ ವಿಷ್ಟುತಿಯಲ್ಲಿ,

ಪ್ರಥಮಪರ್ಯಾಯ—೧, ೧, ೧, ೨, ೩ ನೆಯ ಋಕ್ಕುಗಳು
ದ್ವಿತೀಯಪರ್ಯಾಯ—೧, ೨, ೨, ೨, ೩, ,,
ತೃತೀಯಪರ್ಯಾಯ—೧, ೨, ೨, ೨, ೩, ೩, ೩, ,,

(೨) ದಶಸಪ್ತಾನಾಮಿಕಾ ದ್ವಿತೀಯಾ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾಯ—೧, ೧, ೧, ೨, ೩ ,,
ದ್ವಿತೀಯಪರ್ಯಾಯ—೧, ೨, ೨, ೨, ೩ ,,
ತೃತೀಯಪರ್ಯಾಯ—೧, ೧, ೧, ೨, ೩, ೩, ೩ ,,

(೩) ಸಪ್ತಾಸ್ಥಿತಾ ಪ್ರಥಮಾ ಎಂಬ ವಿಷ್ಟುತಿಯಲ್ಲಿ,
ಪ್ರಥಮಪರ್ಯಾಯ—೧, ೧, ೧, ೨, ೨, ೨, ೩ ನೆಯ ಋಕ್ಕುಗಳು
ದ್ವಿತೀಯಪರ್ಯಾಯ—೧, ೨, ೩ ,,
ತೃತೀಯಪರ್ಯಾಯ—೧, ೨, ೨, ೨, ೩, ೩, ೩ ,,

(೪) ಸಪ್ತಾಸ್ಥಿತಾ ದ್ವಿತೀಯಾ ಎಂಬ ವಿಷ್ಟುತಿಯಲ್ಲಿ,
ಪ್ರಥಮಪರ್ಯಾಯ—೧, ೧, ೧, ೨, ೩, ೩, ೩ ,,
ದ್ವಿತೀಯಪರ್ಯಾಯ—೧, ೨, ೩ ,,
ತೃತೀಯಪರ್ಯಾಯ—೧, ೧, ೧, ೨, ೩, ೩, ೩ ,,

(೫) ಅನಾಮಿಕಾ ಎಂಬ ವಿಷ್ಟುತಿಯಲ್ಲಿ,
ಪ್ರಥಮಪರ್ಯಾಯ—೧, ೧, ೧, ೨, ೩ ,,
ದ್ವಿತೀಯಪರ್ಯಾಯ—೧, ೨, ೩ ,,
ತೃತೀಯಪರ್ಯಾಯ—೧, ೧, ೧, ೨, ೨, ೨, ೩, ೩, ೩ ,,

(೬) ಉದ್ಯತೀ ಎಂಬ ವಿಷ್ಟುತಿಯಲ್ಲಿ,
ಪ್ರಥಮಪರ್ಯಾಯ—೧, ೨, ೩ ,,
ದ್ವಿತೀಯಪರ್ಯಾಯ—೧, ೨, ೨, ೨, ೩ ,,
ತೃತೀಯಪರ್ಯಾಯ—೧, ೧, ೧, ೨, ೨, ೨, ೩, ೩, ೩ ,,

(೭) ಭಸ್ತ್ರಾ ಎಂಬ ವಿಷ್ಟುತಿಯಲ್ಲಿ,
ಪ್ರಥಮಪರ್ಯಾಯ—೧, ೧, ೧, ೨, ೨, ೨, ೩ ,,
ದ್ವಿತೀಯಪರ್ಯಾಯ—೧, ೨, ೨, ೨, ೩ ,,
ತೃತೀಯಪರ್ಯಾಯ—೧, ೨, ೩, ೩, ೩ ,,

IV ಏಕವಿಂಶಸ್ತೋಮಃ—

(೧) ಸಪ್ತಸಪ್ತಿನೀ (೨) ಉದ್ಯತೀ (೩) ಪ್ರತಿಷ್ಟುತಿಃ (೪) **ಸೂರ್ಮಿ ಎಂದು ನಾಲ್ಕು ವಿಷ್ಟುತಿಗಳು.**

(೧) ಸಪ್ತಸಪ್ತಿನೀ ಎಂಬ ವಿಷ್ಟುತಿಯಲ್ಲಿ
ಪ್ರಥಮಪರ್ಯಾಯ—೧, ೧, ೧, ೨, ೨, ೨, ೩ ನೆಯ ಋಕ್ಕುಗಳು
ದ್ವಿತೀಯಪರ್ಯಾಯ—೧, ೨, ೨, ೨, ೩, ೩, ೩ ,,
ತೃತೀಯಪರ್ಯಾಯ—೧, ೧, ೧, ೨, ೩, ೩, ೩, ,,

(೨) ಉದ್ಯತೀ ಎಂಬ ವಿಷ್ಟುತಿಯಲ್ಲಿ
ಪ್ರಥಮಪರ್ಯಾಯ—೧, ೧, ೧, ೨, ೩, ,,
ದ್ವಿತೀಯಪರ್ಯಾಯ—೧, ೨, ೨, ೨, ೩, ೩, ೩, ,,
ತೃತೀಯಪರ್ಯಾಯ—೧, ೧, ೧, ೨, ೨, ೨, ೩, ೩, ೩, ,,

(೩) ಪರಿಷ್ಟುತಿ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾಯ—೧, ೧, ೧, ೨, ೨, ೨, ೩, ೩, ೩, ನೆಯ ಋಕ್ಕುಗಳು
ದ್ವಿತೀಯಪರ್ಯಾಯ—೧, ೨, ೨, ೨, ೩, ,,
ತೃತೀಯಪರ್ಯಾಯ—೧, ೧, ೧, ೨, ೩, ೩, ೩, ,,

(೪) ಸೂರ್ಮಿ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾಯ—೧, ೧, ೧, ೨, ೨, ೨, ೩, ೩, ೩, ,,
ದ್ವಿತೀಯಪರ್ಯಾಯ—೧, ೨, ೩, ,,
ತೃತೀಯಪರ್ಯಾಯ—೧, ೧, ೧, ೨, ೨, ೨, ೩, ೩, ೩, ,,

V ತ್ರಿಣವಸ್ತೋಮಃ—

(೧) ಪ್ರತಿಷ್ಠಿತಾ (೨) ಉದ್ಯತೀ ಎಂದು ಎರಡು ವಿಷ್ಟುತಿಗಳು

(೧) ಪ್ರತಿಷ್ಠಿತಾ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾಯ—೧, ೧, ೧, ೨, ೨, ೨, ೨, ೨, ೩, ,,
ದ್ವಿತೀಯಪರ್ಯಾಯ—೧, ೨, ೨, ೨, ೩, ೩, ೩, ೩, ೩, ,,
ತೃತೀಯಪರ್ಯಾಯ—೧, ೧, ೧, ೧, ೧, ೨, ೩, ೩, ೩, ,,

(೨) ಉತ್ಯತೀ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾಯ—೧, ೧, ೧, ೨, ೨, ೨, ೩, ,,
ತ್ವಿತೀಯಪರ್ಯಾಯ—೧, ೨, ೨, ೨, ೩, ೩, ೩, ೩, ೩, ,,
ತೃತೀಯಪರ್ಯಾಯ—೧, ೧, ೧, ೧, ೧, ೨, ೨, ೨, ೩, ೩, ೩, ,,

IV ತ್ರಯಸ್ತ್ರಿಂಶಸ್ತೋಮಃ —

(೧) ಸಮತ್ರ್ಯಂಶಾ (೨) ನೇದೀಯಸ್ಸಂಕ್ರಮಾ (೩) ಉದ್ಯತೀ (೪) ಪ್ರತ್ಯವರೋಹಿಣೀ (೫) ಅಂತಿಮಾ ಎಂದು ಐದು ವಿಷ್ಟುತಿಗಳು.

(೧) ಸಮತ್ರ್ಯಂಶಾ ಎಂಬ ವಿಷ್ಟುತಿಯಲ್ಲಿ,

ಪ್ರಥಮಪರ್ಯಾಯ—೧, ೧, ೧, ೨, ೨, ೨, ೨, ೨, ೨, ೨, ೩, ನೆಯ ಋಕ್ಕುಗಳು
ದ್ವಿತೀಯಪರ್ಯಾಯ—೧, ೨, ೨, ೨, ೩, ೩, ೩, ೩, ೩, ೩, ೩, ,,
ತೃತೀಯಪರ್ಯಾಯ—೧, ೧, ೧ ೧, ೧, ೧, ೧, ೨, ೩, ೩, ೩, ,,

(೨) ನೇದೀಯಸ್ಸಂಕ್ರಮಾ ಎಂಬ ವಿಷ್ಟುತಿಯಲ್ಲಿ,

ಪ್ರಥಮಪರ್ಯಾಯ—೧, ೧, ೧, ೨, ೨, ೨, ೨, ೨, ೩, ೩, ೩, ,,
ದ್ವಿತೀಯಪರ್ಯಾಯಃ—೧, ೧, ೧, ೨, ೨, ೨, ೩, ೩, ೩, ೩, ೩, ,,
ತೃತೀಯಪರ್ಯಾಯ—೧, ೧, ೧, ೧, ೧, ೨, ೨, ೨, ೩, ೩, ೩, ,,

(೩) ಉದ್ಯತೀ ಎಂಬ ವಿಷ್ಟುತಿಯಲ್ಲಿ,

ಪ್ರಥಮಪರ್ಯಾಯ—೧, ೧, ೧, ೨, ೨, ೨, ೨, ೨, ೩ ನೆಯ ಋಕ್ಕುಗಳು

ದ್ವಿತೀಯ ಪರ್ಯಾಯ—೧, ೨, ೨, ೨, ೩, ೩, ೩, ೩, ೩, ೩, ೩ ,,

ತೃತೀಯಪರ್ಯಾಯ—೧, ೧, ೧, ೧, ೧, ೧, ೧, ೨, ೨, ೨, ೩, ೩, ೩, ,,

(೪) ಪ್ರತ್ಯವರೋಹಿಣೀ ಎಂಬ ವಿಷ್ಟುತಿಯ,

ಪ್ರಥಮಪರ್ಯಾಯ—೧, ೧, ೧, ೨, ೨, ೨, ೨, ೨, ೩, ೩, ೩, ೩ ,,

ದ್ವಿತೀಯಪರ್ಯಾಯ....೧, ೧, ೧, ೧, ೧, ೨, ೨, ೨, ೩, ೩, ೩ ,,

ತೃತೀಯಪರ್ಯಾಯ—೧, ೧, ೧, ೨, ೨, ೨, ೩, ೩, ೩ ,,

(೫) ಅಂತಿಮಾ ಎಂಬ ವಿಷ್ಟುತಿಯಲ್ಲಿ,

ಪ್ರಥಮಪರ್ಯಾಯ—೧, ೧, ೧, ೨, ೨, ೨, ೨, ೨, ೨, ೨, ೩,
೩, ೩, ೩, ೩, ,,

ದ್ವಿತೀಯಪರ್ಯಾಯ—೧, ೧, ೧, ೧, ೧, ೨, ೨, ೨, ೩, ೩, ೩ ,,

ತೃತೀಯಪರ್ಯಾಯ—೧, ೧, ೧, ೨, ೩, ೩, ೩ ,,

VII : ಚತುರ್ವಿಂಶಸ್ತೋಮಃ—

ಈ ಸ್ತೋಮದಲ್ಲಿ ಒಂದೇ ವಿಷ್ಟುತಿ ಇರುವುದು

ಪ್ರಥಮಪರ್ಯಾಯ—೧, ೧, ೧, ೨, ೨, ೨, ೨, ೩, ,,

ದ್ವಿತೀಯಪರ್ಯಾಯ—೧, ೨, ೨, ೨, ೩, ೩, ೩, ೩, ,,

ತೃತೀಯಪರ್ಯಾಯ—೧, ೧, ೧, ೧, ೨, ೩, ೩, ೩, ,,

VIII ಚತುಶ್ಚತ್ವಾರಿಂಶಸ್ತೋಮಃ—

(೧) ಪ್ರಥಮಾ (೨) ನಿರ್ಮಧ್ಯಾ (೩) ತೃತೀಯಾ ಎಂದು ಮೂರು ವಿಷ್ಟುತಿಗಳು

(೧) ಪ್ರಥಮಾ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾಯ—೧, ೧, ೧, ೨, ೨, ೨, ೨, ೨, ೨, ೨, ೨,
೨, ೨, ೨, ೩, ,,

ದ್ವಿತೀಯಪರ್ಯಾಯ—೧, ೨, ೨, ೨, ೩, ೩, ೩, ೩, ೩, ೩, ೩,
೩, ೩, ೩, ,,

ತೃತೀಯಪರ್ಯಾಯ—೧, ೧, ೧, ೧, ೧, ೧, ೧, ೧, ೧, ೧, ೧,
೨, ೩, ೩, ೩, ,,

(೨) ನಿರ್ಮಧ್ಯಾ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾಯ—೧, ೧, ೧, ೨, ೨, ೨, ೨, ೨, ೨, ೨, ೨,
೨, ೨, ೩, ,,

ದ್ವಿತಿಯಪರ್ಯಾಯ—೧, ೨, ೨, ೨, ೩, ೩, ೩, ೩, ೩, ೩, ೩,
೩, ೩, ೩, ೩, ನೆಯ ಋಕ್ಕುಗಳು
ತೃತೀಯಪರ್ಯಾಯ—೧, ೧, ೧, ೧, ೧, ೧, ೧, ೧, ೧, ೧, ೧,
೨, ೩, ೩, ೩, ,,

(೩) ತೃತೀಯಾ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾಯ—೧, ೧, ೧, ೨, ೨, ೨, ೨, ೨, ೨, ೨, ೨,
೨, ೨, ೨, ೩, ,,
ದ್ವಿತೀಯಪರ್ಯಾಯ—೧, ೨, ೨, ೨, ೩, ೩, ೩, ೩, ೩, ೩, ೩,
೩, ೩, ೩, ೩, ,,
ತೃತೀಯಪರ್ಯಾಯ—೧, ೧, ೧, ೧, ೧, ೧, ೧, ೧, ೧, ೧, ೨, ,,
೩, ೩, ೩, ,,

IX ಅಷ್ಟಾಚತ್ವಾರಿಂಶಸ್ತೋಮಃ—

(೧) ಪ್ರಥಮಾ (೨) ನೇದೀಯಸ್ಸಂಕ್ರಮಾ ಎಂದು ಎರಡು ವಿಷ್ಟುತಿಗಳು

(೧) ಪ್ರಥಮಾ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾ—೧, ೧, ೧, ೩, ೩, ೩, ೨, ೨, ೨, ೨, ೨,
೨, ೨, ೨, ೨, ೨, ,,
ದ್ವಿತೀಯಪರ್ಯಾಯ—೧, ೧, ೧, ೨, ೨, ೨, ೩, ೩, ೩, ೩, ೩,
೩, ೩, ೩, ೩, ೩, ,,
ತೃತೀಯಪರ್ಯಾಯ—೧, ೧, ೧, ೧, ೧, ೧, ೧, ೧, ೧, ೧,
೨, ೨, ೨, ೩, ೩, ೩. ,,

(೨) ನೇದೀಯಸ್ಸಂಕ್ರಮಾ ಎಂಬ ವಿಷ್ಟುತಿಯಲ್ಲಿ

ಪ್ರಥಮಪರ್ಯಾಯ—೧, ೧, ೧, ೨, ೨, ೨, ೨, ೨, ೨, ೨,
೨, ೨, ೨, ೨, ೨, ೩ ,,
ದ್ವಿತೀಯಪರ್ಯಾಯ—೧, ೨, ೨, ೨, ೩, ೩, ೩, ೩, ೩, ೩, ೩,
೩, ೩, ೩, ೩, ೩, ,,
ತೃತೀಯಪರ್ಯಾಯ—೧, ೧, ೧, ೧, ೧, ೧, ೧, ೧, ೧, ೧,
೧, ೧, ೨, ೩, ೩, ೩,

ಸ್ತೋಮಗಳು, ಅವುಗಳ ವಿಷ್ಟುತಿಗಳು, ಅವುಗಳಲ್ಲಿರುವ ಋಕ್ಸಂಖ್ಯೆಯನ್ನು ಪಠಿಸುವ ಕ್ರಮ ಮೊದಲಾದ ವಿಷಯಗಳು ಸಾಮವೇದದ ತಾಂಡ್ಯಬ್ರಾಹ್ಮಣದಲ್ಲಿ ವಿಸ್ತಾರವಾಗಿ ವಿವರಿಸಲ್ಪಟ್ಟಿವೆ.

**ತಂ ರುದ್ರಾ ಆಗಚ್ಛಂಸ್ತ ಏನಮಬ್ರುವನ್ನತಿ ನೋಽರ್ಜಸ್ಯಾಕಾಶಂ ನಃ ಕುರ್ವಿತಿ ಸ ನಾಸ್ತುತೋಽತಿಸ್ರಕ್ಷ್ಯ ಇತ್ಯಬ್ರವೀತ್ಸ್ತುತ ನು ಮೇತಿ ತಥೇತಿ ತಂ ತೇ ಪಂಚದಶೇನ ಸ್ತೋಮೇನಾಸ್ತುವಂಸ್ತಾನ್ಸ್ತುತೋಽತ್ಯಾರ್ಜತ ತೇ ಯಥಾಲೋಕಮಗಚ್ಛನ್ ॥**

ಅಥ ಪಂಚದಶಸ್ತೋಮೇನ ಸ್ತುತಿಂ ದರ್ಶಯತಿ—ಪಂಚದಶ ನಾಮಕಸ್ಯ ಸ್ವರೂಪಂ ಛಂದೋಗೈರೇವಮಾಮ್ನಾಯತೇ—'ಪಂಚಭ್ಯೋ ಹಿಂ ಕರೋತಿ ಸ ತಿಸೃಭಿಃ ಸ ಏಕಯಾ ಸ ಏಕಯಾ ಪಂಚಭ್ಯೋ ಹಿಂಕರೋತಿ ಸ ಏಕಯಾ ಸ ತಿಸೃಭಿಃ ಸ ಏಕಯಾ ಪಂಚಭ್ಯೋ ಹಿಂಕರೋತಿ ಸ ಏಕಯಾ ಸ ಏಕಯಾ ಸ ತಿಸೃಭಿಃ" ಇತಿ ॥ ಅಸ್ಯಾರ್ಥಃ । ತ್ರ್ಯೃಚಾತ್ಮಕಮೇಕಂ ಸೂಕ್ತಂ ತ್ರಿರಾವರ್ತನೀಯಂ । ತತ್ರ ಪ್ರಥಮಾಯಾಮಾವೃತ್ತೌ ಪ್ರಥಮಾಯಾ ಋಚಸ್ತ್ರಿರಭ್ಯಾಸಃ । ದ್ವಿತೀಯಾವೃತ್ತೌ ಮಧ್ಯಮಾಯಾ ಉತ್ತಮಾವೃತ್ತಾವುತ್ತಮಾಯಾಃ ಸೋಽಯಂ ಪಂಚದಶಃಸ್ತೋಮ ಇತಿ ಅನ್ಯತ್ಪೂರ್ವವದ್ವ್ಯಾಖ್ಯೇಯಂ ।

ಈಗ ಪಂಚದಶಸ್ತೋಮದ ಪ್ರಶಂಸೆಯನ್ನು ಮಾಡುವರು—ಪಂಚದಶಸ್ತೋಮದ ವಿವರಗಳನ್ನು ಮೇಲೆ ನೋಡಿ ತಿಳಿಯ ಬಹುದು—ಸಾಮವೇದದಲ್ಲಿರುವ ತಾಂಡ್ಯಮಹಾಬ್ರಾಹ್ಮಣದಲ್ಲಿ ಈ ರೀತಿ ಇದೆ—**ಪಂಚಭ್ಯೋ ಹಿಂಕರೋತಿ ಸ ತಿಸೃಭಿಃ ಸ ಏಕಯಾ ಸ ಏಕಯಾ ಪಂಚಭ್ಯೋ ಹಿಂಕರೋತಿ ಸ ಏಕಯಾ ಸ ತಿಸೃಭಿಃ ಸ ಏಕಯಾ ಪಂಚಭ್ಯೋ ಹಿಂಕರೋತಿ ಸ ಏಕಯಾ ಸ ಏಕಯಾ ಸ ತಿಸೃಭಿಃ ॥** ಮೂರು ಋಕ್ಕುಗಳಿಂದ ಕೂಡಿದ ಒಂದು ಸೂಕ್ತವನ್ನು ಮೂರಾವರ್ತಿಪಠಿಸಬೇಕು. ಮೊದಲನೆಯ ಋಕ್ಕನ್ನು ಮೂರಾವೃತ್ತಿಯೂ ಎರಡು ಮತ್ತು ಮೂರನೇ ಋಕ್ಕುಗಳನ್ನು ಒಂದಾವರ್ತಿಯೂ ಪಠಿಸಬೇಕು ಇದರಂತೆ ಒಂದಾವೃತ್ತಿಗೆ ಐದು ಋಕ್ಕಿನಂತೆ ಮೂರಾವೃತ್ತಿಗೆ ಹದಿನೈದು ಋಕ್ಕುಗಳಾಗುವವು. ಆದ್ದರಿಂದ ಇದಕ್ಕೆ ಪಂಚದಶಸ್ತೋಮ (ಹದಿನೈದು ಋಕ್ಕುಗಳ ಸ್ತೋಮ) ವೆಂದು ಹೆಸರು. ಎರಡನೆಯ ಆ ವೃತ್ತಿಯಲ್ಲಿ ಮೊದಲ ಮತ್ತು ಕೊನೆಯ ಋಕ್ಕುಗಳನ್ನು ಒಂದೊಂದಾವರ್ತಿಯೂ ಮಧ್ಯದ ಋಕ್ಕನ್ನು ಮೂರಾವರ್ತಿಯೂ ಪಠಿಸಬೇಕು. ಮೂರನೆಯ ಆವೃತ್ತಿಯಲ್ಲಿ ಮೊದಲ ಎರಡು ಋಕ್ಕುಗಳನ್ನು ಒಂದೊಂದಾವರ್ತಿಯೂ ಮೂರನೆಯ ಋಕ್ಕನ್ನು ಮೂರಾವರ್ತಿಯೂ ಪಠಿಸಬೇಕು (ಗಾನಮಾಡಬೇಕು) ಈ ರೀತಿ ಮೂರು ಋಕ್ಕುಗಳ ಸೂಕ್ತವನ್ನು ಮೂರಾವೃತ್ತಿ ಪಠಿಸುವುದರಿಂದ ಇದಕ್ಕೆ ಪಂಚದಶಸ್ತೋಮವೆಂದು ಹೆಸರಾಯಿತು. ಏಕಾದಶರುದ್ರರೆಂಬ ಕೆಲವು ದೇವತೆಗಳು ಹಿಂದೆ ಹೇಳಿದಂತೆ ಸ್ವರ್ಗಲೋಕಕ್ಕೆ ಹೋಗಲು ಬಯಸಿ ಅಗ್ನಿಯನ್ನು ಮೇಲೆ ಹೇಳಿದ ಪಂಚಶಸ್ತೋಮದಿಂದ ಸ್ತುತಿಸಿ ಅಗ್ನಿಯ ಅನುಮತಿಯಿಂದ ಸ್ವರ್ಗಲೋಕಕ್ಕೆ ಹೋಗಿ ಅಲ್ಲಿ ನೆಲಸಿದರು.

**ತಮಾದಿತ್ಯಾ ಆಗಚ್ಛಂಸ್ತ ಏನಮಬ್ರುವನ್ನತಿ ನೋಽರ್ಜಸ್ಯಾಕಾಶಂ ನಃ ಕುರ್ವಿತಿ ಸ ನಾಸ್ತುತೋಽತಿಸ್ರಕ್ಷ್ಯ ಇತ್ಯಬ್ರವೀತ್ಸ್ತುತ ನು ಮೇತಿ ತಥೇತಿ ತಂ ತೇ ಸಪ್ತದಶೇನ ಸ್ತೋಮೇನಾಸ್ತುವಂಸ್ತಾನ್ಸ್ತುತೋಽತ್ಯಾರ್ಜತ ತೇ ಯಥಾಲೋಕಮಗಚ್ಛನ್ ॥**

**ಅಥ ಸಪ್ತದಶಸ್ತೋಮೇನ ಸ್ತುತಿಂ ದರ್ಶಯತಿ--ಸಪ್ತದಶಸ್ತೋಮಸ್ಯ ಸ್ವರೂಪಂ ಛಂದೋಗೈರೇವಮಾಮ್ನಾಯತೇ—' ಪಂಚಭ್ಯೋ ಹಿಂ ಕರೋತಿ ಸ ತಿಸೃಭಿಃ ಸ ಏಕಯಾ ಸ ಏಕಯಾ ಪಂಚಭ್ಯೋ ಹಿಂ ಕರೋತಿ ಸ ಏಕಯಾ ಸ ತಿಸೃಭಿಃ ಸ ಏಕಯಾ ಸಪ್ತಭ್ಯೋ ಹಿಂ ಕರೋತಿ ಸ ಏಕಯಾ ಸ ತಿಸೃಭಿಃ ಸ ತಿಸೃಭಿಃ ' ಇತಿ । ಅತ್ರಪ್ರಥಮಾವೃತ್ತೌ ಪ್ರಥಮಾಯಾ-ಮೃಚಿ ತ್ರಿರಭ್ಯಾಸಃ । ದ್ವಿತೀಯಾವೃತ್ತೌ ಮಧ್ಯಮಾಯಾಂ । ತೃತೀಯಾವೃತ್ತೌ ಮಧ್ಯಮೋತ್ತ-ಮಯೋಃ ಸೋಽಯಂ ಸಪ್ತದಶಸ್ತೋಮ ಇತಿ । ಅನ್ಯತ್ಪೂರ್ವವತ್ ॥**

ಸಪ್ತದಶಸ್ತೋಮದ ಸ್ತುತಿಪ್ರಶಂಸೆಯನ್ನು ಮಾಡುವರು. ಸಪ್ತದಶಸ್ತೋಮದ ವಿವರಣೆಯು ಈ ರೀತಿ ಇರುವುದು— **ಪಂಚಭ್ಯೋ ಹಿಂಕರೋತಿ ಸತಿಸೃಭಿಃ ಸ ಏಕಯಾ ಸ ಏಕಯಾ ಪಂಚಭ್ಯೋ ಹಿಂಕರೋತಿ ಸ ಏಕಯಾ ಸತಿಸೃಭಿಃ ಸ ಏಕಯಾ ಸಪ್ತಭ್ಯೋ ಹಿಂಕರೋತಿ ಸ ಏಕಯಾ ಸ ತಿ ಸೃಭಿಃ ಸತಿಸೃಭಿಃ ॥** ಮೇಲೆ ಹೇಳಿದಂತೆಯೇ ಇದರ ಆವೃತ್ತಿಯೂ ಅರ್ಥವೂ ಇರುವುದು ಇದರಿಂದ ಈ ಸ್ತೋಮದಲ್ಲಿ ಹದಿನೇಳು ಋಕ್ಕುಗಳಾಗುವುದರಿಂದ ಇದಕ್ಕೆ ಸಪ್ತದಶಸ್ತೋಮವೆಂದು ಹೆಸರು ಬಳಿಕ ದ್ವಾದಶಾದಿತ್ಯರೆಂಬ ಕೆಲವು ದೇವತೆಗಳು ಅಗ್ನಿಯ ಬಳಿಗೆ ಬಂದು ಸಪ್ತದಶಸ್ತೋಮದಿಂದ ಸ್ತುತಿಸಿ ಅವನಿಂದ ಅನುಜ್ಞಾಪ್ತರಾಗಿ ಸ್ವರ್ಗಲೋಕದಲ್ಲಿ ಹೋಗಿ ನೆಲಸಿದರು.

ತಂ ವಿಶ್ವೇದೇವಾ ಆಗಚ್ಛಂಸ್ತ ಏನಮಬ್ರುವನ್ನತಿ ನೋಽರ್ಜಸ್ವಾಕಾಶಂ ನಃ ಕುರ್ವಿತಿ ಸ ನಾಸ್ತುತೋಽತಿಸ್ರಕ್ಷ್ಯ ಇತ್ಯಬ್ರವೀತ್ಸ್ತುತ ನು ಮೇತಿ ತಥೇತಿ ತಂ ತಂ ಏಕವಿಂಶೇನ ಸ್ತೋಮೇನಾಸ್ತುವಂಸ್ತಾ-ನ್ಸ್ತುತೋಽತ್ಯಾರ್ಜತ ತೇ ಯಥಾ ಲೋಕಮಗಚ್ಛನ್ ॥

**ಏಕವಿಂಶಸ್ತೋಮೇನ ಸ್ತುತಿಂ ದರ್ಶಯತಿ—ಏಕವಿಂಶಸ್ತೋಮಸ್ಯ ಸ್ವರೂಪಂ ಛಂದೋ-ಗೈರೇವಮಾಮ್ನಾಯತೇ—' ಸಪ್ತಭ್ಯೋ ಹಿಂಕರೋತಿ ಸ ತಿಸೃಭಿಃ ಸ ತಿಸೃಭಿಃ ಸ ಏಕಯಾ ಸಪ್ತ-ಭ್ಯೋ ಹಿಂ ಕರೋತಿ ಸ ಏಕಯಾ ಸ ತಿಸೃಭಿಃ ಸ ತಿಸೃಭಿಃ ಸಪ್ತಭ್ಯೋ ಹಿಂಕರೋತಿ ಸ ತಿಸೃಭಿಃ ಸ ಏಕಯಾ ಸ ತಿಸೃಭಿಃ ' ಇತಿ ॥ ಪ್ರಥಮಪರ್ಯಾಯೇ ತ್ಯೃಚಸ್ತೋತ್ರಮಾಯಾ ಋಚಃ ಸಕೃತ್ಪಾಠಃ । ದ್ವಿತೀಯಪರ್ಯಾಯೇ ಪ್ರಥಮಾಯಾಃ ಸಕೃತ್ಪಾಠ ಸ್ತೃತೀಯಪರ್ಯಾಯೇ ಮಧ್ಯಮಾಯಾಃ ಸಕೃತ್ಪಾಠಃ ॥ ಅಥ ಶಿಷ್ಟಾನಾಂ ತು ಸರ್ವತ್ರ ತ್ರಿರಾವೃತ್ತಿಃ ಸೋಽಯಮೇಕ-ವಿಂಶಸ್ತೋಮ ಇತಿ ॥ ಅನ್ಯತ್ಪೂರ್ವವದ್ವ್ಯಾಖ್ಯೇಯಂ ॥**

ಏಕವಿಂಶಸ್ತೋಮದ ಪ್ರಶಂಸೆಯನ್ನು ತಿಳಿಸುವರು—" **ಸಪ್ತಭ್ಯೋ ಹಿಂಕರೋತಿ ಸ ತಿಸೃಭಿಃ ಸ ತಿಸೃಭಿಃ ಸ ಏಕಯಾ ಸಪ್ತಭ್ಯೋ ಹಿಂಕರೋತಿ ಸ ಏಕಯಾ ಸ ತಿಸೃಭಿಃ ಸ ತಿಸೃಭಿಃ ಸಪ್ತಭ್ಯೋ ಹಿಂಕರೋತಿ ಸ ತಿಸೃಭಿಃ ಸ ಏಕಯಾ ಸ ತಿಸೃಭಿಃ** " ಎಂದರೆ ಮೊದಲನೆಯ ಆವೃತ್ತಿಯಲ್ಲಿ ಮೊದಲನೆಯ ಮತ್ತು ಎರಡನೆಯ ಋಕ್ಕನ್ನು ಮೂರಾವರ್ತಿಯೂ ಮೂರನೆಯ ಋಕ್ಕನ್ನು ಒಂದಾವರ್ತಿಯೂ ಗಾನಮಾಡಬೇಕು. ಎರಡನೆ ಆವೃತ್ತಿ(ಪರ್ಯಾಯ)ದಲ್ಲಿ ಮೊದಲನೆಯ ಋಕ್ಕನ್ನು ಒಂದಾವರ್ತಿಯೂ ಎರಡು ಮೂರನೆಯ ಆವೃತ್ತಿಗಳಲ್ಲಿ ಮೂರು ಮೂರು ಸಲವೂ ಪಠಿಸಬೇಕು ಮೂರನೆಯ ಪರ್ಯಾಯದಲ್ಲಿ ಮೊದಲನೆಯ ಋಕ್ಕನ್ನೂ ಮತ್ತು ಮೂರನೆಯ ಋಕ್ಕನ್ನು ಮೂರು ಮೂರಾವೃತ್ತಿಯೂ ಮಧ್ಯದ ಋಕ್ಕನ್ನು ಒಂದಾವರ್ತಿಯೂ ಗಾನಮಾಡಬೇಕು. ಇದರಿಂದ ಇಪ್ಪತ್ತೊಂದು ಋಕ್ಕುಗಳಾಗುವವು. ಇದಕ್ಕೆ ಏಕವಿಂಶಸ್ತೋಮ

ವೆಂದು ಹೆಸರು. ವಿಶ್ವೇದೇವತೆಗಳೆಂಬ ಇನ್ನು ಕೆಲವು ದೇವತೆಗಳು ಸ್ವರ್ಗಲೋಕಕ್ಕೆ ಹೋಗಬೇಕೆಂದು ಬಯಸಿ ಹಿಂದಿನವರಂತೆ ಅಗ್ನಿಯನ್ನು ಏಕವಿಂಶಸ್ತೋಮದಿಂದ ಸ್ತುತಿಸಿ ಅವನಿಂದ ಅನುಜ್ಞೆಯನ್ನು ಪಡೆದು ಸ್ವರ್ಗದಲ್ಲಿ ಹೋಗಿ ನೆಲೆಸಿದರು.

**ಏಕೈಕೇನ ವೈ ತಂ ದೇವಾಃ ಸ್ತೋಮೇನಾಸ್ತುವಂಸ್ತಾನ್ಸ್ತುತೋಽತ್ಯಾರ್ಜತ ತೇ ಯಥಾಲೋಕಮುಗಚ್ಛನ್ ॥**

**ಸ್ತೋಮ ಚತುಷ್ಟಯಮುಪಸಂಹರತಿ—**

ಹಿಂದೆ ಹೇಳಿದ ಪ್ರಕಾರವಾಗಿ ಉಳಿದ ಇತರ ದೇವತೆಗಳೂ ಪ್ರತ್ಯೇಕಪ್ರತ್ಯೇಕವಾಗಿ ಅಗ್ನಿಯನ್ನು ಸ್ತುತಿಸಿ ಅವನ ಅನುಮತಿಯನ್ನು ಪಡೆದು ಸ್ವರ್ಗಕ್ಕೆ ಹೋಗಿ ತಮ್ಮ ಸ್ಥಳಗಳಲ್ಲಿ ನೆಲಸಿದರು.

**ಅಥ ಹೈನಮೇಷ ಏತೈಃ ಸರ್ವೈಃ ಸ್ತೋಮೈಃ ಸ್ತೌತಿ ಯೋ ಯಜತೇ ॥**

**ಅಗ್ನಿಷ್ಟೋಮಪ್ರಯೋಗೇ ಚತುರ್ಣಾಮುಕ್ತಾನಾಂ ಸ್ತೋಮಾನಾಂ ವಿಕಲ್ಪಶಂಕಾ-ವ್ಯಾವೃತ್ಯರ್ಥಂ ಸಮುಚ್ಚಯಂ ವಿಧತ್ತೇ—ಅರ್ಥವಾದವೈಲಕ್ಷಣ್ಯೇನ ವಿಧಿತ್ವಂ ದ್ಯೋತಯಿತು-ಮಥಶಬ್ದಃ ಯೋಽಗ್ನಿಷ್ಟೋಮೇನ ಯಜತ ಏಷ ಏತೈಶ್ಚತುರ್ಭಿಃ ಸ್ತೋಮೈಃ ಸ್ತುವೀತ ॥**

ಮೇಲೆ ಹೇಳಿದ ಕ್ರಮವನ್ನನುಸರಿಸಿ ಅಗ್ನಿಷ್ಟೋಮಯಾಗವನ್ನು ಮಾಡುವ ಪ್ರತಿಯೊಬ್ಬ ಪುರುಷನೂ ಮೇಲೆ ಹೇಳಿದ ತ್ರಿವೃತ್, ಪಂಚದಶ, ಸಪ್ತದಶ, ಏಕವಿಂಶ ಎಂಬ ನಾಲ್ಕು ಸ್ತೋಮಗಳಿಂದಲೂ ಸ್ತುತಿಸಿ ಯಜ್ಞವನ್ನು ಮಾಡಬೇಕೆಂದು ಒಂದು ಮಾತ್ರ ಹೇಳಿದರೆ ಸಾಲದು ನಾಲ್ಕು ಸ್ತೋಮಗಳನ್ನು ಪಠಿಸಿ ಸ್ತುತಿಸಬೇಕು.

**ಯಚ್ಛೈನಮೇವಂ ವೇದಾತೀ ತು ತಮುಜ್ಜರ್ತಾಃ (ರ್ಜತೇ) ಅತಿ ಹ ವಾ ಏನಮುರ್ಜತೇ ಸ್ವರ್ಗಂ ಲೋಕಮಭಿ ಯ ಏವಂ ವೇದ ॥**

**ಅನುಷ್ಠಾತುಃ ಸ್ವರ್ಗಪ್ರಾಪ್ತಿಫಲಸ್ಯ ಸಿದ್ಧತ್ವಾತ್ತೇನ ಸಹ ಸಮುಚ್ಚಿತ್ಯ ವೇದಿತುರಪಿ ತತ್ಫಲಂ ದರ್ಶಯತಿ ॥ ಯಜಮಾನೋ ಯೇನಪ್ರಕಾರೇಣ ಯಜತೇಽನೇನೈವ ಪ್ರಕಾರೇಣೈನ ಮಗ್ನಿಷ್ಟೋಮಂ ಯಶ್ಚ ವೇದ ತಮಪಿ ವೇದಿತಾರಂ ದ್ವಾರನಿರೋಧಮತಿಲಂಘ್ಯಾಜ್ಜಾತ್ಯೈ (ರ್ಜತಏ)ವ ಪ್ರಾಪಯತ್ಯೇವ । ಅತೀ ತ್ವಿತಿ ದೀರ್ಘಶ್ಛಾಂದಸಃ ॥ ವೇದನಮಾತ್ರೇಣಾನುಷ್ಠಾನ ಸಮಫಲತ್ವಂ ಪ್ರತಿಪಾದಯಿತುಂ ಪುನರಪ್ಯಾಹ–ವೇದನಮಾತ್ರೇಣ ಸಿದ್ಧೇಽಪಿ ಫಲೇ ಕರ್ಮ-ಭೂಯಸ್ತ್ವಾತ್ಫಲಭೂಯಸ್ತ್ವಮಿತಿ ನ್ಯಾಯೇನಾನುಷ್ಠಾನವೈಯರ್ಥ್ಯಂ ನಾಸ್ತಿ ॥**

ಅಗ್ನಿಷ್ಟೋಮಯಾಗವನ್ನು ಮಾಡುವ ಯಜಮಾನನು ಸ್ವರ್ಗಪ್ರಾಪ್ತಿಯನ್ನು ಹೊಂದುವುದಲ್ಲದೆ ಈ ವಿಷಯವನ್ನು ತಿಳಿದಿರುವ ಪುರುಷನೂ ಸಹ ಅದರ ಫಲವನ್ನು ಪಡೆಯುವನು ಎಂಬ ವಿಷಯವನ್ನು ತಿಳಿಸುತ್ತಾರೆ ಯಜ್ಞಮಾಡುವ ಯಜಮಾನನು ಯಾವ ಪ್ರಕಾರವಾಗಿ ಶ್ರದ್ಧಾಭಕ್ತಿಗಳಿಂದ ಸಹಿತನಾಗಿ ವಿಧಿವತ್ತಾಗಿ ಅಗ್ನಿಷ್ಟೋಮಯಾಗವನ್ನು ಮಾಡಿದರೆ ಅದಕ್ಕನುಸಾರವಾಗಿ ಉತ್ತಮವಾದ ಫಲವನ್ನು ಎಂದರೆ ಸ್ವರ್ಗಲೋಕಪ್ರಾಪ್ತಿಯನ್ನು ಪಡೆಯುವನು. ಇದಲ್ಲದೆ ಈ ವಿಷಯವನ್ನೆಲ್ಲಾ ಆಮೂಲಾಗ್ರವಾಗಿ ತಿಳಿದಿರುವ ಪುರುಷನೂ ಸಹ ಯಾಗಮಾಡುವ ಯಜಮಾನನಂತೆಯೇ ಸಂಪೂರ್ಣಫಲವನ್ನು ಎಂದರೆ ಸ್ವರ್ಗಪ್ರಾಪ್ತಿಯನ್ನು ಪಡೆಯುವನು.

*English Translatison*

**(Why four Stomas are required at the Agnishtoma)**

The Devas after having once upon a time, been defeated by the Asuras, started for the celestial world. Agni touching the sky (from his place on earth), entered the upper region (with his flames), and closed the gate of the celestial world; for Agni is its master. The Vasus first approached him and said; "Mayest thou allow us to pass over thy flames to enter heaven; give us an opportunity (akasa)" Agni said, "Being not praised by you, I shall not allow you to pass through the gate. Praise me now". So they did. They praised him with nine verses the Trivrit Stoma). After they had done, he allowed them to pass the gate, that they might enter the celestial world.

The Rudras approached him and said to him, "Mayest thou allow us to pass on; give us an opportunity (by moderating thy flames)." He answered, "If I be not praised, I shall not allow you to pass. Praise me now." They consented. They praised him with fifteen verses. After they had done so, he allowed them to pass, that they might enter the (celestial) world.

The Adityas approached and said to him, "Mayest thou allow us to pass on; give us an opportunity." He answered, "If I be not praised, I shall not allow you to pass. Praise me now!" They consented. They praised him with seventeen verses. After they had done so, he allowed them to pass, that they might enter the (celestial) world.

The Visve Devas approached and said to him, "Mayest thou allow us to pass on; give us an opportunity." He answered: "If I be not praised, I shall not allow you to pass. Praise me now!" They consented. They praised him with twenty-one verses. After they had done so, he hollowed them to pass, that they might enter the (celestial) world.

The gods having praised Agni each with another Stoma (combination of verses), he allowed them to pass.

The sacrificer who praises Agni with all (four) Stomas, as well as he (the priest) who knows it (the Agnishtoma) will pass on beyond him (Agni, who watches with his flames the entrance to heaven).

To him who has such a knowledge he (Agni) allows to pass and enter the celestial world.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಚತುರ್ದಶಾಧ್ಯಾಯೇ ಚತುರ್ಥಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನಾಲ್ಕನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು
ಸಮಾಪ್ತವಾದುದು.



# ಅಥ ಚತುರ್ದಶಾಧ್ಯಾಯೇ ಪಂಚಮಃ ಖಂಡಃ

## ಹದಿನಾಲ್ಕನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ ಅಗ್ನಿಷ್ಟೋಮಕ್ಕೆ ಅಗ್ನಿಸ್ತೋಮ, ಚತುಷ್ಟೋಮ, ಜ್ಯೋತಿಷ್ಟೋಮ ಮುಂತಾದ ಅನೇಕ ಹೆಸರುಗಳಿವೆ. ಜ್ಯೋತಿಷ್ಟೋಮಕ್ಕೆ ಕೊನೆಮೊದಲಿಲ್ಲ ]



**ಸ ವಾ ಏಷೋಽಗ್ನಿರೇವ ಯದಗ್ನಿಷ್ಟೋಮಸ್ತಂ ಯದಸ್ತುವಂಸ್ತಸ್ಮಾ-ದಗ್ನಿಸ್ತೋಮಮಗ್ನಿಸ್ತೋಮಂ ಸಂತಮಗ್ನಿಷ್ಟೋಮ ಇತ್ಯಾಕ್ಷತೇ ಪರೋಕ್ಷೇಣ ಪರೋಕ್ಷಪ್ರಿಯಾ ಇವ ಹಿ ದೇವಾಃ ॥**

ಅಥಾಗ್ನಿಷ್ಟೋಮಾದಿ ಶಬ್ದ ನಿರ್ವಚನೇನ ಪ್ರಶಂಸತಿ—ಯೋಽಯಮಗ್ನಿಷ್ಟೋ-ಮೋಽಸ್ತಿ ಸ ಏಷ ಸಾಕ್ಷಾದಗ್ನಿರೇವ ಸ್ವಶರೀರಮೇವ ತ್ರಿಭಿಶ್ಚಂದೋಭಿಸ್ತ್ರಿಭಿಃ ಸವನೈಶ್ಚ ವಿಭಜ್ಯ ಕ್ರತೋ ನಿಷ್ಪಾದಿತತ್ವಾತ್ ॥ ತಂ ಕ್ರತುರೂಪಮಗ್ನಿಂ ಯದ್ಯಸ್ಮಾತ್ಕಾರಣಾದ್ದೇವಾ ಅಸ್ತುವಂಸ್ತಸ್ಮಾದಗ್ನಿವಿಷಯಸ್ತುತಿಯುಕ್ತತ್ವಾದಯಂ ಕ್ರತುರಗ್ನಿಸ್ತೋಮ ಇತ್ಯೇತನ್ನಾಮಕಃ । ತನ್ನಾಮಯುಕ್ತಂ ಕ್ರತು (ತಂ) ಪರೋಕ್ಷನಾಮ್ನಾ ವ್ಯಾಹರ್ತುಂ ಸಕಾರತಕಾರಯೋಃ ಷಕಾರ-ಟಕಾರಾವಾದಿಶ್ಯಾಗ್ನಿಷ್ಟೋಮ ಇತಿ ವೈದಿಕಾ ಆಚಕ್ಷತೇ । ವರ್ಣಾಂತರೇಣಾವ್ಯವಹಿತಾರ್ಥ-ಪ್ರತೀತಿರಹಿತಂ ನಾಮ ಪರೋಕ್ಷಮಿತ್ಯುಚ್ಯತೇ ॥ ಯಸ್ಮಾಲ್ಲೋಕೇ ದೇವಾಃ ಪೂಜ್ಯಾ ಆಚಾ-ರ್ಯಾದಯಃ ಪರೋಕ್ಷನಾಮಪ್ರಿಯಾ ಏವ ತಸ್ಮಾತ್ಕ್ರತೋರಪಿ ತದ್ಯುಕ್ತಂ ॥

ಈಗ ಅಗ್ನಿಷ್ಟೋಮವೇ ಮೊದಲಾದ ಶಬ್ದಗಳ ನಿರ್ವಚನವನ್ನು ತಿಳಿಸುತ್ತಾರೆ—ಅಗ್ನಿಷ್ಟೋಮವೆಂಬ ಯಾಗವು ಸಾಕ್ಷಾತ್ ಅಗ್ನಿಯೆಂದೇ ಪರಿಗಣಿಸಲ್ಪಟ್ಟಿರುವುದು. ಈ ಅಗ್ನಿಷ್ಟೋಮಯಾಗವೇ ಅಗ್ನಿಯ ಶರೀರವು. ಏಕೆಂದರೆ, ಈ ಯಾಗದಲ್ಲಿ ಉಪಯೋಗಿಸಲ್ಪಡುವ ಗಾಯತ್ರೀ, ತ್ರಿಷ್ಟುಪ್, ಜಗತೀ ಎಂಬ ಮೂರುವಿಧ ಛಂದಸ್ಸುಗಳೂ, ಪ್ರಾತಃಸವನ, ಮಾಧ್ಯಂದಿನಸವನ, ತೃತೀಯಸವನ ಎಂಬ ಸವನತ್ರಯಗಳೂ ಅಗ್ನಿಯ ಸ್ವಂತ ಶರೀರಗಳು. ಕ್ರತು ಅಥವಾ ಯಾಗರೂಪವಾದ ಅಗ್ನಿಯನ್ನು ದೇವತೆಗಳು ಸ್ತುತಿಸಿದ್ದರಿಂದ ಇದಕ್ಕೆ ಅಗ್ನಿಸ್ತೋಮ ಅಥವಾ ಅಗ್ನಿಷ್ಟೋಮವೆಂಬ ಹೆಸರಾಯಿತು. ಅಗ್ನಿಸ್ತೋಮ ಎಂಬ ಶಬ್ದದಲ್ಲಿ ಸಕಾರಕ್ಕೆ ಬದಲಾಗಿ ಷಕಾರವೂ ತಕಾರಕ್ಕೆ ಬದಲಾಗಿ ಟಕಾರವೂ ಉಪಯೋಗಿಸಲ್ಪಡುವುದು ವೈದಿಕರ ಆಚರಣೆಯಾದ್ದರಿಂದ ಅಗ್ನಿಸ್ತೋಮವನ್ನು ಅಗ್ನಿಷ್ಟೋಮವೆಂದು ಕರೆಯುವುದು ರೂಢಿಯಾಗಿದೆ. ಈರೀತಿ ವರ್ಣಾಂತರ ಅಥವಾ ವರ್ಣವ್ಯತ್ಯಾಸದಿಂದ ಅಗ್ನಿಸ್ತೋಮವು ಅಗ್ನಿಷ್ಟೋಮವೆಂದಾಗಿ ಈ ಯಾಗದ ನಿಜವಾದ ಸ್ವರೂಪವು ಗೂಢವಾಗಿಡಲ್ಪಟ್ಟಿರುವುದನ್ನು ದೇವತೆಗಳು ಮೆಚ್ಚುತ್ತಾರೆ. ಏಕಂದರೆ ದೇವತೆಗಳಿಗೆ ಯಾವಾಗಲೂ ಪ್ರತ್ಯಕ್ಷಕ್ಕಿಂತ ಪರೋಕ್ಷವೇ ಹೆಚ್ಚು ಪ್ರಿಯವಾದುದು.

ತಂ ಯಚ್ಚತುಷ್ಟಯಾ ದೇವಾಶ್ಚತುರ್ಭಿಃ ಸ್ತೋಮೈರಸ್ತುವಂಸ್ತಸ್ಮಾ-
ಚ್ಚತುಸ್ತೋಮಸ್ತಂ ಚತುಸ್ತೋಮಂ ಸಂತಂ ಚತುಷ್ಟೋಮ
ಇತ್ಯಾಚಕ್ಷತೇ ಪರೋಕ್ಷೇಣ ಪರೋಕ್ಷಪ್ರಿಯಾ ಇವ ಹಿ ದೇವಾಃ ॥

ನಾಮಾಂತರಸ್ಯ ನಿರ್ವಚನಂ ದರ್ಶಯತಿ— ಚತುಷ್ಟಯಾಶ್ಚತುರ್ವಿಧಾ ವಸವೋ ರುದ್ರಾ ಆದಿತ್ಯಾ ವಿಶ್ವೇ ದೇವಾಶ್ಚೇತಿ— ಸ್ತೋಮಾಶ್ಚ ತ್ರಿವೃತ್ಪಂಚದಶಃ ಸಪ್ತದಶ ಏಕವಿಂಶ ಇತ್ಯೇವಂ ಚತ್ವಾರಃ । ಚತುಷ್ಟೋಮನಾಮ ನಿರ್ವಚನಂ ಪೂರ್ವವದ್ಯೋಜನೀಯಂ ॥

ಇದರಂತೆಯೇ ಚತುಷ್ಟೋಮಕ್ಕೂ ಅನ್ವಯಿಸುವುದು. ಚತುಷ್ಟೋಮವೆಂದರೂ ಅಗ್ನಿಷ್ಟೋಮವೇ ಆಗಿರುವುದು. ಹೇಗೆಂದರೆ ಚತುಷ್ಟೋಮವೆಂದರೆ ಚತುಃಸ್ತೋಮವು. ಏಕೆಂದರೆ ಈ ಅಗ್ನಿಷ್ಟೋಮಯಾಗದಲ್ಲಿ ನಾಲ್ಕು ಸ್ತೋಮಗಳಿರುವವು. ತ್ರಿವೃತ್, ಪಂಚದಶ, ಸಪ್ತದಶ, ಮತ್ತು ಏಕವಿಂಶ ಎಂಬಿವೇ ಆ ನಾಲ್ಕು ಸ್ತೋಮಗಳು ಮತ್ತು ದೇವತೆಗಳಲ್ಲಿರುವ ನಾಲ್ಕುವಿಧ ಗುಂಪುಗಳೇ ಈ ನಾಲ್ಕು ಸ್ತೋಮಗಳಿಂದ ಅಗ್ನಿಯನ್ನು ಸ್ತುತಿಸಿ ಸ್ವರ್ಗವನ್ನು ಪಡೆದರು. ಅಷ್ಟವಸುಗಳು, ಏಕಾದಶರುದ್ರರು, ದ್ವಾದಶಾದಿತ್ಯರು, ವಿಶ್ವೇದೇವತೆಗಳು ಎಂಬುವರೇ ಆ ನಾಲ್ಕುವಿಧ ದೇವತೆಗಳ ಗುಂಪುಗಳು. ಈ ನಾಲ್ಕುವಿಧ ದೇವತೆಗಳು ನಾಲ್ಕುವಿಧ ಸ್ತೋಮಗಳಿಂದ ಈ ಯಾಗವನ್ನು ಸ್ತುತಿಸಿ ಸ್ವರ್ಗಲೋಕವನ್ನು ಪಡೆದದ್ದರಿಂದ ಈ ಯಾಗಕ್ಕೆ ಚತುಷ್ಟೋಮವೆಂದು ಹೆಸರಾಯಿತು. ಇದು ಚತುಷ್ಟೋಮಶಬ್ದದ ನಿರ್ವಚನವು.

ಅಥ ಯದೇನಮೂರ್ಧ್ವಂ ಸಂತಂ ಜ್ಯೋತಿರ್ಭೂತಮಸ್ತುವಂಸ್ತಸ್ಮಾ-
ಜ್ಜ್ಯೋತಿಸ್ತೋಮಸ್ತಂ ಜ್ಯೋತಿಸ್ತೋಮಂ ಸಂತಂ ಜ್ಯೋತಿ-
ಷ್ಟೋಮ ಇತ್ಯಾಚಕ್ಷತೇ ಪರೋಕ್ಷೇಣ ಪರೋಕ್ಷಪ್ರಿಯಾ ಇವ ಹಿ
ದೇವಾಃ ॥

ಜ್ಯೋತಿಷ್ಟೋಮ ನಾಮನಿರ್ವಚನಂ ದರ್ಶಯತಿ—ಅಥ ನಾಮದ್ವಯಾನಂತರಂ ತೃತೀಯಂ ನಾಮ ಕಥ್ಯತ ಇತಿ ಶೇಷಃ ॥ ಅಗ್ನಿರ್ಭೂಮಿಮಾರಭ್ಯ ದ್ಯುಲೋಕಪರ್ಯಂತಮೂ-ರ್ಧ್ವಾವಸ್ಥಿತಃ ತಥಾ ಪ್ರಕಾಶಮಾನತ್ವಾಜ್ಜ್ಯೋತಿರ್ಭೂತಸ್ತಂ ತಾದೃಶಂ ದೇವಾ ಅಸ್ತುವಂಸ್ತ-ಸ್ಮಾಜ್ಜ್ಯೋತಿಸ್ತೋಮಃ ॥ ಜ್ಯೋತಿಷಃ ಸ್ತೋಮಃ ಸ್ತುತಿರಸ್ಮಿನ್ಕ್ರತೌ ಸ ಜ್ಯೋತಿಸ್ತೋಮಃ । ಅನ್ಯತ್ಪೂರ್ವವತ್ ॥

ಈಗ ಜ್ಯೋತಿಷ್ಟೋಮ ಶಬ್ದದ ನಿರ್ವಚನವನ್ನು ತಿಳಿಸುವರು—ಅಗ್ನಿಯ ಜ್ವಾಲೆಗಳು ಭೂಮಿಯಿಂದು ದ್ಯುಲೋಕ ಪರ್ಯಂತರ ಪ್ರಕಾಶಮಾನವಾಗಿ ವ್ಯಾಪಿಸುವುದರಿಂದ ಅಗ್ನಿಯು ಜ್ಯೋತಿಯಿಂದ ಬಹು ಪ್ರಕಾಶಮಾನವಾಗಿ ಬೆಳಗುವನು. ಇಂತಹ ಅಗ್ನಿಯನ್ನು (ಜ್ಯೋತಿಯನ್ನು) ದೇವತೆಗಳು ಸ್ತೋಮ ಅಥವಾ ಸ್ತೋತ್ರಗಳಿಂದ ಸ್ತುತಿಸುವುದರಿಂದ ಈ ಅಗ್ನಿಷ್ಟೋಮಕ್ಕೆ ಜ್ಯೋತಿಷ್ಟೋಮವೆಂದೂ ಹೆಸರು. ಇದು ಜ್ಯೋತಿಷ್ಟೋಮಶಬ್ದದ ನಿರ್ವಚನವು.

**ಸ ವಾ ಏಷೋಽಪೂರ್ವೋಽನಪರೋ ಯಜ್ಞಕತುರ್ಯಥಾ ರಥಚಕ್ರಮನಂತಮೇವಂ ಯದಗ್ನಿಷ್ಟೋಮಸ್ತಸ್ಯ ಯಥೈವ ಪ್ರಾಯಣಂ ತಥೋದಯನಂ ॥**

ನಾಮ ನಿರ್ವಚನೇನ ಪ್ರಶಸ್ತ್ಯ ಪುನರಪ್ಯಾದ್ಯಂತರಾಹಿತ್ಯೇನ ಪ್ರಶಂಸತಿ––ಸ ಏಷೋಽಗ್ನಿಷ್ಟೋಮಃ ಪೂರ್ವಾಪರರಹಿತಃ ಪೂರ್ವಅದಿರಪರೋಂತ ಆದ್ಯಂತರಹಿತೋ ಯಜ್ಞಕ್ರತುಃ । ಯಥಾ ಲೋಕೇ ರಥಚಕ್ರಮನಂತಂ ಪುನಃ ಪುನಃ ಪರಿವರ್ತಮಾನಸ್ಯ ರಥಚಕ್ರಸ್ಯ ಅಯಮಾದಿರಯಮಂತ ಇತಿ ವಿಭಾಗಃ ಕರ್ತುಂ ನ ಶಕ್ಯತೇ ತಸ್ಮಾದಿದಮಂತರರಹಿತಂ ॥ ಆದಿರಹಿತಸ್ಯಾಪ್ಯೇತದುಪಲಕ್ಷಣಂ । ಏವಂ ಕ್ರತುರಪಿ । ನನು ಪ್ರಾಯಣೇಷ್ಟಿರಾದಿರುದಯನೇಷ್ಟಿರಂತ ಇತಿ ಚೇತ್ ॥ ನೈವಂ ॥ ಯೋಽಗ್ನಿಷ್ಟೋಮೋಽಸ್ತಿ ತಸ್ಯ ಯಾದೃಶಂ ಪ್ರಾಯಣೀಯಂ ಕರ್ಮ ತಾದೃಶಮೇವೋದಯನೀಯಂ ಕರ್ಮ ತಯೋಃ ಸಮಾನಧರ್ಮಕತ್ವಾದತೋ ವಿವೇಕ್ತುಮಶಕ್ಯತ್ವಾದಾದ್ಯಂತರಹಿತಃ ಕ್ರತುಃ ॥

ಅಗ್ನಿಷ್ಟೋಮಯಾಗದ ಹೆಸರುಗಳ ನಿರ್ವಚನವನ್ನು ಹೇಳಿದನಂತರ ಈಗ ಈ ಯಾಗಕ್ಕೆ ಆದ್ಯಂತ (ಕೊನೆ, ಮೊದಲು) ಇಲ್ಲವೆಂಬ ವಿಷಯವನ್ನು ಉಪಮಾನಮೂಲಕ ಪ್ರಶಂಸೆ ಮಾಡುವರು. ಈ ಅಗ್ನಿಷ್ಟೋಮಯಾಗಕ್ಕೆ ಮೊದಲು ಎಂಬುದಿಲ್ಲ. ಅದರಂತೆ ಕೊನೆಯೂ ಇಲ್ಲ. ಹೇಗೆಂದರೆ ಯಾವಾಗಲೂ ಸುತ್ತುತ್ತಿರುವ ರಥಚಕ್ರಕ್ಕೆ ಯಾವುದು ಮೊದಲು, ಯಾವುದು ಕೊನೆ ಎಂಬ ವಿಭಾಗವಿಲ್ಲವೋ ಅದರಂತೆ ಈ ಅಗ್ನಿಷ್ಟೋಮಕ್ಕೂ ಕೊನೆಯಾವುದು ಮೊದಲು ಯಾವುದು ಎಂದು ಹೇಳುವುದು ಸಾಧ್ಯವಿಲ್ಲ. ಈ ಅಗ್ನಿಷ್ಟೋಮದ ಪ್ರಾರಂಭವಲ್ಲಿ ಪ್ರಾಯಣೀಯವೆಂಬ ಇಷ್ಟಿಯನ್ನು, ಕೊನೆಯಲ್ಲಿ ಉದಯನೀಯವೆಂಬ ಇಷ್ಟಿಯನ್ನೂ ಮಾಡಬೇಕಾಗಿರುವುದು. ಈ ಎರಡು ಇಷ್ಟಿಗಳಿಗೂ ಏನೂ ವ್ಯತ್ಯಾಸವಿಲ್ಲದೇ ಇರುವುದರಿಂದ ಅಗ್ನಿಷ್ಟೋಮವನ್ನು ಪ್ರಾರಂಭಿಸುವಾಗಲೂ ಮುಗಿಸುವಾಗಲೂ ಯಾವುದು ಪ್ರಾರಂಭ, ಯಾವುದು ಕೊನೆ ಎಂದು ಹೇಳುವುದಕ್ಕಾಗುವುದಿಲ್ಲ. ಆದ್ದರಿಂದ ಈ ಯಾಗವು ಆದ್ಯಂತರಹಿತವೆಂದು ಹೇಳಲ್ಪಡುವುದು.

**ತದೇಷಾಭಿ ಯಜ್ಞಗಾಥಾ ಗೀಯತೇ ಯದಸ್ಯ ಪೂರ್ವಮಪರಂ ತದಸ್ಯ ಯದ್ವಸ್ಯಾಪರಂ ತದ್ವಸ್ಯ ಪೂರ್ವಂ । ಅಹೇರಿವ ಸರ್ಪಣಂ ಶಾಕಲಸ್ಯ ನ ವಿಜಾನಂತಿ ಯತರತ್ಪರಸ್ತಾದಿತಿ ॥**

ಉಕ್ತಮರ್ಥಂ ಮಂತ್ರೋದಾಹರಣೇನ ದ್ರಢಯತಿ—ಸರ್ವೈರಪಿ ಸುಭಾಷಿತತ್ವೇನ ಗೀಯತೆ ಇತಿಗಾಥಾ ಯಜ್ಞವಿಷಯಾ ಗಾಥಾ ॥ ತತ್ತಸ್ಮಿನ್ನಗ್ನಿಷ್ಟೋಮಸ್ಯಾಽಽದ್ಯಂತಯೋಃ ಪ್ರಾಯಣೀಯೊದಯನೀಯಯೋರೇವ ವಿಷಯೇ ಕಾಚಿದೇಷಾ ಯಜ್ಞಗಾಥಾಽಭಿಜ್ಞೈರ್ಗೀಯತೇ ಸರ್ವತಃ ಪಠ್ಯತೇ ಯದಸ್ಯೇತ್ಯಾದಿಗಾಥಾ ॥ ಅಸ್ಯಾಗ್ನಿಷ್ಟೋಮಸ್ಯ ಯತ್ಪೂರ್ವಮುಪಕ್ರಮರೂಪಂ ಕರ್ಮಾಸ್ತಿ ತದೇವಾಸ್ಯ ಪರಂ ಸಮಾಪ್ತಿರೂಪಂ ಕರ್ಮ ॥ ಯದು ಯದಪ್ಯಸ್ಯಾಪರಂ ಸಮಾಪ್ತಿಪರಂ ತದುತದೇವಾಸ್ಯ ಪೂರ್ವಮುಪಕ್ರಮರೂಪಂ । ಆದಿತ್ಯಃ ಪ್ರಾಯಣೀಯಶ್ಚರುರಾದಿತ್ಯ ಉದಯನೀಯಶ್ಚರುರಿತಿ ದ್ರವ್ಯದೇವತಯೋರುಭಯತ್ರೈಕವಿಧತ್ವಾತ್ತಯೋರೇಕತ್ವೋಪಚಾರಃ ॥ ಆದ್ಯಂತಯೋರಪರಿಜ್ಞಾನೇ ಪೂರ್ವಂ ಬ್ರಾಹ್ಮಣೇ ರಥಚಕ್ರದೃ-

ಷ್ಟಾಂತೋ ದರ್ಶಿತಃ । ಮಂತ್ರೇ ತ್ವನ್ಯೋ ದೃಷ್ಟಾಂತ ಉಚ್ಯತೇ । ಶಾಕಲಶಬ್ದಃ ಸರ್ಪವಿಶೇಷವಾಚೀ । ಶಾಕಲನಾಮ್ನೋಽಹೇಃ ಸರ್ಪವಿಶೇಷಸ್ಯ ಯಥಾ ಸರ್ಪಣಂ ಗಮನಂ ತಥೈವಾಽಯಮಗ್ನಿಷ್ಟೋಮಃ । ಸ ಚ ಸರ್ಪಣಕಾಲೇ ಮುಖೇನ ಪುಚ್ಛಸ್ಯ ದಂಶನಂ ಕೃತ್ವಾ ವಲಯಾಕಾರೋ ಭವತಿ ತತ್ರ ಕಿಂ ಮುಖಂ ಕಿಂ ವಾ ಪುಚ್ಛಮಿತಿ ನ ಜ್ಞಾಯತೇ ಏವಮತ್ರಾಪ್ಯದಿತಿದೇವತಾಕಸ್ಯ ಚರೋಃ ಸಾಮ್ಯೇ ಸತಿ ಪ್ರಾಯಣೀಯೋದಯನೀಯಯೋರ್ಯತರತ್ಕರ್ಮ ಪರಸ್ತಾತ್ಪಶ್ಚಾದ್ಭಾವಿ ಯತರಚ್ಚ ಪೂರ್ವಭಾವಿ ಕಿಮಪಿ ನ ವಿಜಾನಂತಿ ॥

ಮೇಲೆ ಹೇಳಿದ ಅರ್ಥವನ್ನು ಮಂತ್ರೋದಾಹರಣೆಪೂರ್ವಕವಾಗಿ ದೃಢಪಡಿಸುತ್ತಾರೆ— ಇಲ್ಲಿ ಗಾಥಾ ಎಂದರೆ ಎಲ್ಲರೂ ಬಹಳ ಉತ್ತಮವಾಗಿದೆ ಎಂದು ಕೊಂಡಾಡುವ ಅಥವಾ ಗಾನಮಾಡುವ ವಿಷಯವು. ಇಲ್ಲಿ ಯಜ್ಞವಿಷಯವೇ ಗಾಥೆಯು. ಈ ಅಗ್ನಿಷ್ಟೋಮಯಾಗದ ಮೊದಲು ಕೊನೆಗಳಲ್ಲಿ ನಡೆಯುವ ಪ್ರಾಯಣೀಯ ಮತ್ತು ಉದಯನೀಯ ಎಂಬ ಇಷ್ಟಿಗಳ ವಿಷಯದಲ್ಲಿ ಯದಸ್ಯ ಎಂದು ಮೊದಲಾದ ಕೆಲವು ಗಾಥೆಗಳು ಅಭಿಜ್ಞರಿಂದ ಗಾನಮಾಡಲ್ಪಡುತ್ತವೆ. ಈ ಅಗ್ನಿಷ್ಟೋಮದಲ್ಲಿ ಪ್ರಾರಂಭದಲ್ಲಿ ಯಾವ ಕರ್ಮವನ್ನು ಮಾಡುವರೋ ಕೊನೆಯಲ್ಲಿಯೂ ಅಂತಹ ಕರ್ಮವನ್ನೇ ಮಾಡುವರು. ಯದು ಎಂದ ಪ್ರಾರಂಭವಾಗಿರುವ ಸಮಾಪ್ತಿಕರ್ಮವಿರುವುದೋ ಕೊನೆಯಲ್ಲಿರುವುದೋ ಅದೇ ವಿಧವಾದ ಕರ್ಮವು ಪ್ರಾರಂಭದಲ್ಲಿಯೂ ಇರುವುದು. ಹೇಗೆಂದರೆ— ಆದಿತ್ಯಃ ಪ್ರಾಯಣೀಯಶ್ಚರುರಾದಿತ್ಯ ಉದಯನೀಯಶ್ಚರುರಿತಿ ಪ್ರಾಯಣೀಯೇಷ್ಟಿಯಲ್ಲಿ ದೇವತೆ ಆದಿತ್ಯ, ಹೋಮದ್ರವ್ಯ ಚರು ಎಂದಾದರೆ ಉದಯನೀಯದಲ್ಲಿಯೂ ದೇವತೆಯು ಆದಿತ್ಯನೇ, ಹೋಮ ದ್ರವ್ಯವು ಚರು (ಅನ್ನ)ವೇ ಆಗಿರುವುದು. ಪ್ರಾರಂಭವಾದ ಪ್ರಾಯಣೀಯೇಷ್ಟಿ ಮತ್ತು ಸಮಾಪ್ತಿರೂಪವಾದ ಉದಯನೇಷ್ಟಿಗಳೆರಡರಲ್ಲಿಯೂ ದೇವತೆ ಮತ್ತು ಹೋಮದ್ರವ್ಯಗಳ ವಿಷಯದಲ್ಲಿ ಯಾವ ವ್ಯತ್ಯಾಸವೂ ಇರುವುದಿಲ್ಲ. ಈ ವಿಷಯದಲ್ಲಿ ರಥಚಕ್ರದ ದೃಷ್ಟಾಂತವನ್ನು ಹಿಂದೆಯೇ ಹೇಳಲಾಗಿದೆ. ಈಗ ಬೇರೊಂದು ದೃಷ್ಟಾಂತವನ್ನು ತಿಳಿಸುವರು. ಇಲ್ಲಿ ಹೇಳಿರುವ ಶಾಕಲ ಎಂಬ ಶಬ್ದಕ್ಕೆ ಸರ್ಪವೆಂದರ್ಥವು. ಈ ಅಗ್ನಿಷ್ಟೋಮವನ್ನು ಶಾಕಲವೆಂಬ ಸರ್ಪಕ್ಕೆ ಹೋಲಿಸಿರುವರು. ಈ ಸರ್ಪವು ತನ್ನ ಮುಖದಿಂದ ಬಾಲವನ್ನು ಕಚ್ಚಿಕೊಂಡು ಸುರುಳಿಯಾಗಿ ಬಿದ್ದಿರುವುದರಿಂದ ನೋಡುವವರಿಗೆ ಇದರ ಮುಖವಾವುದು ಬಾಲವಾವುದು ಎಂದು ಗೊತ್ತಾಗುವುದಿಲ್ಲ. ಅದರಂತೆ ಈ ಅಗ್ನಿಷ್ಟೋಮದಲ್ಲಿ ಪ್ರಾಯಣೀಯ (ಪ್ರಾರಂಭ) ಅಥವಾ ಉದಯನೀಯ (ಕೊನೆ)ವೆಂಬ ಕರ್ಮವು ನಡೆಯುತ್ತಿರುವಾಗ ಯಾರಾದರೂ ಆಗತಾನೇ ಬಂದು ನೋಡಿದರೆ ಈ ಅಗ್ನಿಷ್ಟೋಮಯಾಗವು ಈಗ ಪ್ರಾರಂಭವಾಗಿ ನಡೆಯುತ್ತಿದೆಯೇ ಅಥವಾ ಪರಿಸಮಾಪ್ತಿಯಾಗಿ ಕೊನೆಮುಟ್ಟುತ್ತಿದೆಯೇ, ಯಾವುದೂ ಗೊತ್ತಾಗುವುದಿಲ್ಲ.

**ಯಥಾ ಹ್ಯೇವಾಸ್ಯ ಪ್ರಾಯಣಮೇವಮುದಯನಮಸದಿತಿ ॥**

ಅಸ್ಯ ಗಾಥಾಯಾಸ್ತಾತ್ಪರ್ಯಂ ಸಂಕ್ಷಿಪ್ಯ ದರ್ಶಯತಿ— ಅಸ್ಯಾಗ್ನಿಷ್ಟೋಮಸ್ಯ ಪ್ರಾಯಣಂ ಪ್ರಾರಂಭೋ ಯಾದೃಶ ಏವಮುದಯನಂ ಸಮಾಪ್ತಿರಸದಸ್ತಿ ಭವತೀತ್ಯರ್ಥಃ ॥

ಮೇಲೆ ಹೇಳಿದ ವಿಷಯವನ್ನೇ ಸಂಕ್ಷೇಪವಾಗಿ ಹೇಳುವರು. ಅಗ್ನಿಷ್ಟೋಮಯಾಗದ ಪ್ರಾರಂಭದಲ್ಲಿ ನಡೆಯುವ ಪ್ರಾಯಣೀಯೇಷ್ಟಿಯು ಈ ಯಾಗದ ಅಂತ್ಯದಲ್ಲಿ (ಕೊನೆ) ನಡೆಯುವ ಉದಯನೇಷ್ಟಿಯಂತೆಯೇ ಇರುವುದರಿಂದ. ಈ ಅಗ್ನಿಷ್ಟೋಮಯಾಗಕ್ಕೆ ಮೊದಲು ಯಾವುದು, ಕೊನೆಯಾವುದು ಎಂದು ತಿಳಿಯುವುದಿಲ್ಲ.

**ತದಾಹುರ್ಯತ್ತ್ರಿವೃತ್ಪ್ರಾಯಣಮೇಕವಿಂಶಮುದಯನಂ ಕೇನ ತೇ ಸಮೇ ಇತಿ.**

ಅತ್ರ ಕಂಚಿದಾಕ್ಷೇಪಮುದ್ಭಾವಯತಿ—ಪೂರ್ವೋದಾಹೃತತ್ರಿವೃತ್ಸ್ತೋಮಃ ಪ್ರಾತಃಸವನಾದೌ ಪ್ರಯೋಜ್ಯತ್ವಾತ್ಪ್ರಾಯಣನುಪಕ್ರಮರೂಪಂ॥ ಏಕವಿಂಶಸ್ತೋಮಸ್ತು ತೃತೀಯಸವನಾಂತೇ ಪ್ರಯೋಜ್ಯತ್ವಾದುದಯನಂ ಸಮಾಪ್ತಿರೂಪಂ । ಕೇನ ಕಾರಣೇನ ತೇ ಪ್ರಾಯಣೋದಯನೇ ಸಮೇ ಭವೇತಾಮಿತ್ಯಾಕ್ಷೇಪಃ ॥

ಇಲ್ಲಿ ಕೆಲವರು ಒಂದು ಆಕ್ಷೇಪವನ್ನು ಎತ್ತುವರು—ಇದುವರೆಗೂ ಹೇಳಿದ ಪ್ರಾಯಣೀಯ (ಮೊದಲು) ಉದಯನೀಯ (ಕೊನೆ) ಇಷ್ಟಗಳು ಒಂದೇ ವಿಧವಾಗಿರುವುವೆಂದೂ ಇವುಗಳಲ್ಲಿ ಯಾವುದು ಮೊದಲು, ಯಾವುದು ಕೊನೆ ಎಂಬುದು ಗೊತ್ತಾಗಲು ಸುಲಭವಲ್ಲವೆಂದೂ ಇದುವರೆಗೂ ಹೇಳಿದೆಯಷ್ಟೆ. ಆದರೆ ಮೊದಲು ಮಾಡುವ ಪ್ರಾಯಣೀಯೇಷ್ಟಿಯಲ್ಲಿ ಪ್ರಾತಃಸವನವಲ್ಲಿ ಪ್ರಾರಂಭದಲ್ಲಿ ತ್ರಿವೃತ್ ಸ್ತೋಮವನ್ನು ಪಠಿಸುವರು. ಉದಯನೀಯೇಷ್ಟಿಯಲ್ಲಿ (ಕೊನೆಯಲ್ಲಿ ಮಾಡುವುದರಿಂದ) ತೃತೀಯಸವನದ ಕೊನೆಯಲ್ಲಿ ಏಕವಿಂಶತಿಸ್ತೋಮವನ್ನು ಪಠಿಸುವರು ಇದರಿಂದ ಈ ಎರಡು ಇಷ್ಟಿಗಳೂ ಒಂದೇ ವಿಧವಾಗಿರುವುವೆಂದು ಹೇಗೆ ಹೇಳಲಾಗುವುದು ?

**ಯೋ ವಾ ಏಕವಿಂಶಸ್ತ್ರಿವೃದ್ವೈ ಸೋಽಥೋ ಯದುಭೌ ತೃಚೌ ತೃಚಿನಾವಿತಿ ಬ್ರೂಯಾತ್ತೇನೇತಿ ॥**

ತತ್ರ ಪರಿಹಾರಂ ದರ್ಶಯತಿ—ಯೋಽಯಮೇಕವಿಂಶತಿಸ್ತೋಮೋಽಸ್ತಿ ಸ ಏವ ತ್ರಿವೃದವಗಂತವ್ಯಃ॥ ಸ್ತೋಮತ್ವಾಕಾರೇಣ ತಯೋರೇಕವಿಧತ್ವಾತ್ । ಅಥೋ ಅಪಿ ಚ ಯದ್ಯಸ್ಮಾತ್ಕಾರಣಾತ್ಸ್ತೋಮದ್ವಯಾಶ್ರಯಭೂತಾವುಭೌ ತೃಚೌ ತೃಚಿನೌ ತ್ಯೃಚಿ(ಚ)ತ್ವಧರ್ಮಯುಕ್ತೌ ॥ ತತ್ರ ತ್ರಿವೃತ್ಸ್ತೋಮಾಶ್ರಯಸ್ಯ ಉಪಾಸ್ಮೈ ಗಾಯತಾ ನರ ಇತಿ ಸೂಕ್ತಸ್ಯ ತ್ಯೃಚತ್ವಧರ್ಮಃ ಪ್ರಸಿದ್ಧ ಏವ ॥ ಏಕವಿಂಶಸ್ತೋಮಾಶ್ರಯಸ್ಯ ಯಜ್ಞಾ ಯಜ್ಞಾವೋ ಅಗ್ನಯ ಇತಿ ಸೂಕ್ತಸ್ಯ ಪ್ರಗಾಥೇ ದ್ವೇ ಏವ ತಸ್ಮಿನ್ನೃಚಾವಾಮ್ನಾಯೇತೇ ॥ ತಥಾಽಪಿ ಸ್ತೋತ್ರಕಾಲೇ ಪ್ರಗ್ರಥನೇನ ಪಾದಾನಾವರ್ತ್ಯ ತ್ಯೃಚತ್ವಂ ಸಂಪಾದ್ಯತೇ । ತೇನ ತ್ಯೃಚತ್ವಧರ್ಮೋಪೇತತ್ವಕಾರಣೇನ ದ್ವಯೋಃಸ್ತೋಮಯೋರೇಕವಿಧತ್ವಮಿತ್ಯುತ್ತರಂ ಭೂಯಾತ್ ॥

ಮೇಲಿನ ಆಕ್ಷೇಪಕ್ಕೆ ಸಮಾಧಾನವನ್ನು ಹೇಳುವರು—ಏಕವಿಂಶಸ್ತೋಮವನ್ನು ಬಹುಮಟ್ಟಿಗೆ ತ್ರಿವೃತ್ಸ್ತೋಮವೆಂದೇ ಹೇಳಬಹುದು. ಮಂತ್ರಗಳು ಬೇರೆ ಬೇರೆ ಇದ್ದರೂ ಗಾನಮಾಡುವ (ಪಠಿಸುವ) ವಿಧಾನವು ಒಂದೇ ಆಗಿರುವುದು. ಮತ್ತು ಈ ಎರಡು ಸ್ತೋಮಗಳಲ್ಲಿಯೂ ಗಾನಮಾಡಲ್ಪಡುವ ತ್ರ್ಯೃಚ (ಮೂರು ಋಕ್ಕುಗಳು)ಗಳು ಒಂದೇ ವಿಧವಾಗಿ ಇರುವವು. ಹೇಗೆಂದರೆ ತ್ರಿವೃತ್ಸ್ತೋಮದಲ್ಲಿ **ಉಪಾಸ್ಮೈಗಾಯತಾ ನರಃ** ಎಂದು ಮೊದಲಾದ ಮಂತ್ರಗಳನ್ನು ತ್ರ್ಯೃಚ (ಮೂರು ಋಕ್ಕುಗಳ) ವಿಧಾನದಿಂದ ಗಾನಮಾಡುವರು. ಏಕವಿಂಶಸ್ತೋಮದಲ್ಲಿ ಗಾನಮಾಡುವ **ಯಜ್ಞಾ ಯಜ್ಞಾವೋ ಅಗ್ನಯೇ** ಎಂಬ ಮಂತ್ರಗಳಲ್ಲಿ ಪ್ರಗಾಥವೆಂಬ ಎರಡು ಋಕ್ಕುಗಳು ಮಾತ್ರವಿರುವವು. ಆದರೆ ಆ ಎರಡು ಋಕ್ಕುಗಳನ್ನು ಪ್ರಗ್ರಥನದ ಮೂಲಕ ಪಾದವ್ಯತ್ಯಾಸಮಾಡಿ ಗಾನಮಾಡುವುದರಿಂದ ಮೂರು ಋಕ್ಕು (ತ್ರ್ಯೃಚ) ಗಳನ್ನಾಗಿ ಗಾನಮಾಡುವರು ಆದ್ದರಿಂದ ಸ್ತೋತ್ರಗಳನ್ನು ಪಠಿಸುವಕಾಲದಲ್ಲಿ ತ್ರಿವೃತ್ ಮತ್ತು ಏಕವಿಂಶ ಎಂಬ ಸ್ತೋಮಗಳಿಗೆ ವ್ಯತ್ಯಾಸವೇನೂ ಕಂಡುಬರುವುದಿಲ್ಲ.

*English Translation*

**(On the names "Agnishtoma, Chatushtoma, Jyotishtoma," The Agnishtoma is endless.)**

The Agnishtoma is Agni. It is called so, because they (the gods) praised him with this Stoma. They called it so to hide the proper meaning of the word; for the gods like to hide the proper meaning of words.

On account of four classes of gods having praised Agni with four Stomas, the whole was called Chatushtoma (containing four Stomas). They called it so to hide the proper meaning of the word; for the gods like to hide the proper meaning of words.

If the Agnishtoma is called Jyotishtoma, for they praised Agni when he had risen up (to the sky) in the shape of a light (Jyotis). They called it so to hide the proper meaning of the word; for the gods like to hide the proper meaning of words.

This (Agnishtoma) is a sacrificial performance which has no beginning and no end. The Agnishtoma is like the endless wheel of a carriage. The beginning (prayaniya) and the conclusion (udayaniya) of it are alike just as the two wheels of a carriage.

About this there is a sacrificial stanza sung, "what is its (of the Agnishtoma) beginning, that is its end, and what is its end, that is its beginning; just as the Sakala serpent it moves in a circle, that none can distinguish its first from its last part." For its opening (the prayaniya) was also its conclusion.

But to this some raise objections, saying, "they make the beginning (of the Stotras of the Soma day) with the Trivrit Stoma, and conclude with the twenty-one-fold Stoma at the evening libation; how are they (the beginning and conclusion) then alike? To this one should answer. "they are alike as far as the twenty-one-fold Stoma is also a Trivrit Stoma, for both contain triplets of verses, and have their nature.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಚತುರ್ದಶಾಧ್ಯಾಯೇ ಪಂಚಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನಾಲ್ಕನೆಯ ಅಧ್ಯಾಯದಲ್ಲಿ ಐದನೆಯ ಖಂಡವು ಸಮಾಪ್ತವಾದುದು.



# ಅಥ ಚತುರ್ದಶಾಧ್ಯಾಯೇ ಷಷ್ಠಃ ಖಂಡಃ

## ಹದಿನಾಲ್ಕನೆಯ ಅಧ್ಯಾಯದಲ್ಲಿ ಆರನೆಯ ಖಂಡವು



[ಪ್ರಾತಃಸವನ, ಮಾಧ್ಯಂದಿನಸವನ, ತೃತೀಯಸವನಗಳಲ್ಲಿ ಶಸ್ತ್ರಮಂತ್ರಗಳನ್ನು ಹೇಗೆ ಪಠಿಸಬೇಕು? ಸೂರ್ಯನು ಹುಟ್ಟುವುದೂ ಇಲ್ಲ, ಮುಳುಗುವುದೂ ಇಲ್ಲ. ಆದ್ದರಿಂದ ಸೂರ್ಯೋದಯ ಮತ್ತು ಸೂರ್ಯಾಸ್ತಮಗಳಿಗೆ ಅರ್ಥವೇನು?]



**ಯೋ ವಾ ಏಷ ತಪತ್ಯೇಷೋಽಗ್ನಿಷ್ಟೋಮ ಏಷ ಸಾಹ್ನಸ್ತಂ ಸಹೈ-ವಾಹ್ನಾ ಸಂಸ್ಥಾಪಯೇಯುಃ ಸಾಹ್ನೋ ವೈ ನಾಮ ।**

ಪುನರಾದಿತ್ಯಸಾಮ್ಯೇನ ಪ್ರಶಂಸತಿ— ಯ ಏವ ಪ್ರಸಿದ್ಧ ಏಷೋಽಸ್ಮತ್ಪ್ರತ್ಯಕ್ಷ ಆದಿತ್ಯ-ಸ್ತಪತಿ । ಏಷೋಽಗ್ನಿಷ್ಟೋಮಸ್ತಯೋರಾದಿತ್ಯಾಗ್ನಿಷ್ಟೋಮಯೋಃ ಸದೃಶತ್ವಾತ್ ॥ ಕಥಂ ಸಾಮ್ಯಮಿತಿ ತದುಚ್ಯತೇ ॥ ಏಷೋಽಗ್ನಿಷ್ಟೋಮ ಆದಿತ್ಯವತ್ಸಾಹ್ನ ಆದಿತ್ಯೋಽಹ್ನಾ ಸಹ ವರ್ತತೇ ತಥಾಽಯಮಪಿ । ತಮಗ್ನಿಷ್ಟೋಮಂ ಯತ ಏಕೇನಾಹ್ನಾ ಸಮಾಪಯೇಯುಸ್ತ-ಸ್ಮಾದಾದಿತ್ಯಸ್ಯೇವ ಸಾಹ್ನ ಇತಿ ಕ್ರತೋರ್ನಾಮಸಂಪನ್ನಂ ॥

ಅಗ್ನಿಷ್ಟೋಮಯಾಗವನ್ನು ಆದಿತ್ಯನ (ಸೂರ್ಯನ) ಸಾದೃಶ್ಯದಿಂದ ಪ್ರಶಂಸೆಮಾಡುವರು. ಪ್ರಸಿದ್ಧವಾದ ಮತ್ತು ಪ್ರತಿದಿನವೂ ನಮ್ಮ ಪ್ರತ್ಯಕ್ಷವಾಗಿ ಬೆಳಗುತ್ತಿರುವ ಸೂರ್ಯನಿಗೂ ಈ ಅಗ್ನಿಷ್ಟೋಮಯಾಗಕ್ಕೂ ಸಾಮ್ಯವಿರುವುದು. ಹೇಗೆಂದರೆ, ಸೂರ್ಯನು ಪ್ರಾತಃಕಾಲದಿಂದ ಸಾಯಂಕಾಲದವರೆಗೆ ಎಂದರೆ ದಿನವೆಲ್ಲಾ ಬೆಳಗುತ್ತಿರುವನು. ಅಗ್ನಿಷ್ಟೋಮಯಾಗವೂ ಹಾಗೆಯೇ ಇರುವುದು, ಎಂದರೆ ಋತ್ವಿಗ್ಯಜಮಾನರು ಈ ಯಾಗವನ್ನು ಪ್ರಾತಃಕಾಲದಲ್ಲಿ ಮಾಡಲು ಪ್ರಾರಂಭಿಸಿ ಅದೇದಿನ ಸಾಯಂಕಾಲದಲ್ಲಿ ಎಂದರೆ ದಿನಪೂರ್ತಿಯಾಗುವುದರೊಳಗಾಗಿ ಮುಗಿಸುವರು. ಸೂರ್ಯನು ಹಗಲು ಮಾತ್ರ ಬೆಳಗುವನು, ಅಗ್ನಿಷ್ಟೋಮವೂ ಹಗಲಿನಲ್ಲಿ ಮಾತ್ರ ಆಚರಿಸಲ್ಪಡುವುದು. ಸೂರ್ಯನ ಮತ್ತು ಅಗ್ನಿಷ್ಟೋಮದ ಅವಧಿಯು (ನಿರ್ದಿಷ್ಟ ಕಾಲವು) ಒಂದು ದಿನ (ಹಗಲು) ಮಾತ್ರವಾದ್ದರಿಂದ ಆದಿತ್ಯನಿಗೂ ಅಗ್ನಿಷ್ಟೋಮಕ್ಕೂ ಸಾಮ್ಯವಿದ್ದಂತಾಯಿತು.

[ಇಲ್ಲಿ ಒಂದು ವಿಷಯವನ್ನು ಸ್ಪಷ್ಟಪಡಿಸಬೇಕಾಗಿರುವುದು. ಅಗ್ನಿಷ್ಟೋಮದ ಅಂಗವಾಗಿ, ದೀಕ್ಷಣೀಯೇಷ್ಟಿ, ಪಶುಯಾಗ, ಸವನಗಳು ಮುಂತಾದವುಗಳು ಸೇರಿ ಅಗ್ನಿಷ್ಟೋಮಯಾಗವು ಒಂದು ದಿನದಲ್ಲಿ ಮುಗಿಸಲ್ಪಡುವುದಿಲ್ಲ, ಆದರೆ, ದೀಕ್ಷಣೀಯೇಷ್ಟಿಮೊದಲಾದ ಕರ್ಮಗಳು ಯಜ್ಞದ ಅಂಗಗಳುಮಾತ್ರವಾಗಿರುವುದರಿಂದ ಅವುಗಳನ್ನು ಗಣನೆಗೆ ತಾರದೆ ಮುಖ್ಯ ಕರ್ಮವಾದ ಯಜ್ಞವನ್ನು ಮಾತ್ರ ಲಕ್ಷಿಸಿ ಇದು ಒಂದೇ ದಿನದಲ್ಲಿ ಮುಗಿಸಲಾಗುವುದೆಂದು ಇಲ್ಲಿ ಹೇಳಿದೆ. ಆದರೆ ರೂಢಿಯಲ್ಲಿ ಹಾಗಿರುವುದಿಲ್ಲ.]

ತೇನಾಸಂತ್ವರಮಾಣಾಶ್ಚರೇಯುರ್ಯಥೈವ ಪ್ರಾತಃಸವನ ಏವಂ ಮಾಧ್ಯಂದಿನ ಏವಂ ತೃತೀಯಸವನ ಏವಮುಹ ಯಜಮಾನೋಽಪ್ರಮಾಯುಕೋ ಭವತಿ ॥ ಯದ್ಧ ವಾ ಇದಂ ಪೂರ್ವಯೋಃ ಸವನಯೋರಸಂತ್ವರಮಾಣಾಶ್ಚರಂತಿತಸ್ಮಾದ್ಧೇದಂ ಪ್ರಾಚ್ಯೋ ಗ್ರಾಮತಾ ಬಹುಲಾವಿಷ್ಟಾ ಅಥ ಯದ್ಧೇದಂ ತೃತೀಯಸವನೇ ಸಂತ್ವರಮಾಣಾಶ್ಚರಂತಿ ತಸ್ಮಾದ್ಧೇದಂ ಪ್ರತ್ಯಂಚಿ ದೀರ್ಘಾರಣ್ಯಾನಿ ಭವಂತಿ ತಥಾ ಹ ಯಜಮಾನಃ ಪ್ರಮಾಯುಕೋ ಭವತಿ ॥ ತೇನಾಸಂತ್ವರಮಾಣಾಶ್ಚರೇಯುರ್ಯಥೈವ ಪ್ರಾತಃಸವನ ಏವಂ ಮಾಧ್ಯಂದಿನ ಏವಂ ತೃತೀಯಸವನ ಏವಮು ಹ ಯಜಮಾನೋಽಪ್ರಮಾಯುಕೋ ಭವತಿ ॥

ಇದಾನೀಮಗ್ನಿಷ್ಟೋಮಾನುಷ್ಠಾನೇ ತ್ವರಾಂ ನಿಷೇಧತಿ । ಯಸ್ಮಾದೇಕಮಹಃ ಸಾಕಲ್ಯೇನಾನುಷ್ಠಾನಾಯ ಪರ್ಯಾಪ್ತಂ ತೇನ ಕಾರಣೇನ ಸರ್ವೇಽಪ್ಯೃತ್ವಿಜೋಽಸಂತ್ವರಮಾಣಾಸ್ತ್ವರಾಮಕುರ್ವಂತ ಉತ್ತರೋತ್ತರಾನುಷ್ಠಾನಂ ಸಮ್ಯಕ್ಪರ್ಯಾಲೋಚಯಂಶ್ಚರೇಯುರನುತಿಷ್ಠೇಯುಃ ॥ ಯಥೈವ ಪ್ರಾತಃಸವನೇ ಮಧ್ಯರಾತ್ರಾದೂರ್ಧ್ವಮಾರಭ್ಯ ಮಧ್ಯಾಹ್ನಾತ್ಪೂರ್ವಕಾಲಸ್ಯ ಅನುಷ್ಠಾನಪರ್ಯಾಪ್ತತ್ವಾನ್ನಾಸ್ತಿ ತ್ವರೈವಮುತ್ತರಯೋರಪಿ ಸವನಯೋಃ । ಏವಮು ಹಾನೇನೈವಪ್ರಕಾರೇಣ ಶನೈರನುಷ್ಠಾನೇ ಸತಿ ಬುದ್ಧಿಸಮಾಧಾನೇನಾಂಗವಿಲೋಪಾಭಾವಾದ್ಯಜಮಾನೋಽಪ್ರಮಾಯುಕೋಽಪಮೃತ್ಯುರಹಿತೋ ಭವತಿ ॥ ವಿಪಕ್ಷೇ ಬಾಧಕಂ ದರ್ಶಯತಿ—ಯದ್ಧವೈ ಯದಿಪ್ರಥಮದ್ವಿತೀಯಯೋಃ ಸವನಯೋಃ ಕಾಲಸಂಕೋಚಾಭಾವಾದಸಂತ್ವರಮಾಣಾ ಇದಂ ಕರ್ಮ ಚರಂತ್ಯನುತಿಷ್ಠೇಯುಸ್ತದಾನೀಂ ತಸ್ಮಾದ್ಧ ತಸ್ಮಾದೇವಾಂಗಲೋಪಾಭಾವಾತ್ ಕಾರಣಾದಿದಂ ದೃಶ್ಯತೇ ॥ ಕಿಮಿದಮಿತಿ ತದುಚ್ಯತೇ । ಪ್ರಾಚ್ಯೋ ಗ್ರಾಮತಾಃ ಪೂರ್ವದಿಗ್ವರ್ತಿನೋ ಗ್ರಾಮಸಮೂಹಾಃ ಬಹುಲಾವಿಷ್ಟಾಃ ಬಹುಭಿರ್ಜನೈಃ ಸಂಪೂರ್ಣಾ ಭವಂತಿ ॥ ಅಥ ತದ್ವಿಪರ್ಯಯೇಣ ಯದ್ಧ ಯದಿ ತೃತೀಯಸವನೇ ಕಾಲಸಂಕೋಚಮಾಶಂಕ್ಯ ಸಂತ್ವರಮಾಣಾ ಅತಿತ್ವರಯಾ ಯುಕ್ತಾ ಇದಂ ಕರ್ಮ ಚರಂತ್ಯನುತಿಷ್ಠಂತಿ । ತಸ್ಮಾದ್ಧ ತದಾನೀಮಂಗವೈಕಲ್ಯಸಂಭವಾದೇವೇದಂ ಲೋಕೇ ದೃಶ್ಯತೇ ಪ್ರತ್ಯಂಚಿ ಪಶ್ಚಿಮದಿಗ್ವರ್ತೀನಿ ದೀರ್ಘಾರಣ್ಯಾನಿ ಜನಶೂನ್ಯಾನಿ ಭವಂತಿ ॥ ತಥಾಹ ತಾದೃಶೇನ ಸಂಭಾವಿತಾಂಗವೈಕಲ್ಯಯುಕ್ತೇನಾನುಷ್ಠಾನೇನ ಯಜಮಾನಃ ಪ್ರಮಾಯುಕೋ ಭವತಿ ॥ ಅಪಮೃತ್ಯುನಾ ಮ್ರಿಯತ ಇತ್ಯರ್ಥಃ । ವಿಪಕ್ಷೇಬಾಧಕಮುಕ್ತ್ವಾ ಸ್ವಪಕ್ಷಂ ನಿಗಮಯತಿ ॥

ಅಗ್ನಿಷ್ಟೋಮಯಾಗವನ್ನು ಮಾಡುತ್ತಿರುವಾಗ ಅವಸರಪಡಕೂಡದೆಂಬ ವಿಚಾರವನ್ನು ತಿಳಿಸುವರು ಯಜ್ಞದಲ್ಲಿ ಅನೇಕ ಕರ್ಮಗಳನ್ನು ಮಾಡುತ್ತಿರುವಾಗ ಇಂತಹ ಕಾಲದಲ್ಲಿಯೇ ಮುಗಿಯಬೇಕು, ಇಂತಹ ದಿನದಲ್ಲಿಯೇ ಮುಗಿಯಬೇಕು, ಕಲಾತಿಕ್ರಮವಾಗಕೂಡದು ಎಂದು ವಿಧಿ ಇರುವುದು. ಎಂದರೆ ಪ್ರಾತಃಸವನ, ಮಾಧ್ಯಂದಿನಸವನ, ತೃತೀಯಸವನಗಳು ಒಂದೇ

ದಿನದ ಮೂರು ಪ್ರತ್ಯೇಕವಿಭಾಗಗಳಲ್ಲಿ ಮುಗಿಯಬೇಕು. ಪ್ರಾತಃಸವನವನ್ನೇನೋ ಮಾಡಿಮುಗಿಸಲು ಮಧ್ಯರಾತ್ರಿ ಕಳೆದನಂತರ ಮುಂದಿನ ದಿನದ ಮಧ್ಯಾಹ್ನದವರೆಗೂ ಕಾಲಾವಕಾಶವು ಯಥೇಚ್ಛವಾಗಿರುವುದು. ಈ ಕಾಲದಲ್ಲಿ ಮಂತ್ರಾದಿಗಳನ್ನು ಸ್ಪಷ್ಟವಾಗಿಯೂ ಅವಸರವಿಲ್ಲದೆ ನಿಧಾನವಾಗಿಯೂ ಪಠಿಸುವುದಕ್ಕೂ ಇತರಕಾರ್ಯಕಲಾಪಗಳನ್ನು ಮಾಡಿಮುಗಿಸುವುದಕ್ಕೂ ಬೇಕಾದಷ್ಟು ಅವಕಾಶವಿರುವುದು. ಆದರೆ ಮಾಧ್ಯಂದಿನಸವನ, ತೃತೀಯಸವನಗಳನ್ನು ಆಚರಿಸುವಾಗ ಇಷ್ಟುಕಾಲವು ಇರುವುದಿಲ್ಲ. ಕಾಲವು (ಅವಧಿಯು) ಪರಿಮಿತಿಯಾಗಿರುವುದು. ಆದ್ದರಿಂದ ಪ್ರಾತಸ್ಸವನದಂತೆ ಮುಂದಿನ ಎರಡು ಸವನಗಳಲ್ಲಿ ಮಂತ್ರಾದಿಪಠನವನ್ನೂ ಕಾರ್ಯಕಲಾಪಗಳನ್ನೂ ತ್ವರೆಯಾಗಿ ಎಂದರೆ ಬೇಗಬೇಗನೆ ಮಾಡಿಮುಗಿಸುವುದು ಕೆಲವು ಸಂದರ್ಭಗಳಲ್ಲಿ ಕಂಡು ಬರುವುದು. ಹಾಗೆ ತ್ವರೆಯಾಗಿ ಮಾಡುವುದರಿಂದ ಮಂತ್ರ ಮತ್ತು ಕ್ರಿಯಾಲೋಪಗಳು ಆಗಿ ಅದರಿಂದ ಯಜ್ಞಮಾಡುವ ಯಜಮಾನನಿಗೆ ಹಾನಿಯು ತಟ್ಟುವುದು. ಆದ್ದರಿಂದ ಈಂತಹ ಪ್ರಸಂಗಗಳಿಗೆ ಅವಕಾಶವನ್ನು ಉಂಟುಮಾಡದೆ ಸಮಾಧಾನ ಮತ್ತು ಶಾಂತಮನಸ್ಸಿನಿಂದ ತ್ವರೆಗೆ ಅವಕಾಶಕೊಡದೆ ಮಂತ್ರಪಠನವನ್ನೂ ಕಾರ್ಯಕಲಾಪಗಳನ್ನೂ ಲೋಪವಿಲ್ಲದಂತೆ ಮಾಡಬೇಕು. ಹೀಗೆ ಮಾಡಿದಲ್ಲಿ ಯಜಮಾನನಿಗೆ ಯಾವ ಕೆಡಕೂ ಉಂಟಾಗುವುದಿಲ್ಲ.

ಮೇಲೆ ಹೇಳಿದ ರೀತಿಗೆ ವಿರೋಧವಾಗಿ ಆಚರಿಸಿದರೆ ಅದರಿಂದುಂಟಾಗುವ ಬಾಧಕವನ್ನು ವಿವರಿಸುವರು. ಸಾಧಾರಣವಾಗಿ ಪ್ರಾತಸ್ಸವನಮಾಧ್ಯಂದಿನಸವನಗಳನ್ನ ಅವಸರವಿಲ್ಲದೆ ಮಾಡುವುದು ರೂಢಿಯಾಗಿದೆ. ಇದರಿಂದ ಮಂತ್ರಲೋಪವಾಗಲಿ, ಕ್ರಿಯಾಲೋಪವಾಗಲೀ ಸಂಭವಿಸುವುದಿಲ್ಲ ಮತ್ತು ಯಜ್ಞಶಾಲೆಗೆ ಪೂರ್ವದಿಕ್ಕಿನಲ್ಲಿರುವ ಗ್ರಾಮಗಳು, ನಗರಗಳು ಮತ್ತು ಪ್ರದೇಶಗಳು ಜನಭರಿತವಾಗಿಯೂ ಸಮೃದ್ಧವಾಗಿಯೂ ಇರುವುವು. ಆದರೆ ವಿರುದ್ಧವಾಗಿ ಎಂದರೆ ತೃತೀಯಸವನಕಾಲದಲ್ಲಿ ಮಾಡಬೇಕಾದ ಕಾರ್ಯಕಲಾಪಗಳು ಹೆಚ್ಚಾಗಿಯೂ ಕಾಲವಕಾಶವು ಸ್ವಲ್ಪವಾಗಿಯೂ ಇರುವುದರಿಂದ ಎಲ್ಲವನ್ನೂ ಅವಸರವಾಗಿ ಮಾಡಿಮುಗಿಸಬೇಕೆಂದು ಪ್ರಯತ್ನಪಡುವುದರಿಂದ ಆಗ ಮಂತ್ರ ಮತ್ತು ಕ್ರಿಯಾಲೋಪಗಳು ಸಾಧಾರಣವಾಗಿ ಸಂಭವಿಸುವುದು ರೂಢಿಯು. ಆದರಿಂದ ಪಶ್ಚಿಮದಿಕ್ಕಿನಲ್ಲಿರುವ ಪ್ರದೇಶಗಳು ಜನರಹಿತವಾಗಿಯೂ ಅರಣ್ಯಗಳಿಂದ ನಿಬಿಡವಾಗಿಯೂ ಆಗುವವು. ಹೀಗೆ ಆಗುವುದರಿಂದ ಯಜ್ಞಮಾಡುವ ಯಜಮಾನನಿಗೆ ಹಾನಿಯು ಎಂದರೆ ಅಪಮೃತ್ಯುವು ಸಂಭವಿಸುವುದು ಒಂದುವೇಳೆ ಈ ವಿಧವಾದ ಪ್ರಮಾದಗಳಿಗೆ ಅವಕಾಶವನ್ನು ಕೊಡದೆ ಎಂದರೆ ಮಂತ್ರಪಠನ ಮತ್ತು ಕಾರ್ಯಕಲಾಪಗಳ ಅನುಷ್ಠಾನದಲ್ಲಿ ಅವಸರಪಡದೆ ಶಾಂತಮನಸ್ಸಿನಿಂದ ನಿಧಾನವಾಗಿ ಯಾವ ಲೋಪವೂ ಇಲ್ಲದಂತೆ ಕರ್ಮಾನುಷ್ಠಾನಮಾಡಿದಲ್ಲಿ ಎಂದರೆ ಪ್ರಾತಃಸವನ, ಮಾಧ್ಯಂದಿನಸವನ ತೃತೀಯಸವನಗಳಲ್ಲಿದರಲ್ಲಿಯೂ ಒಂದೇಸಮನಾಗಿ ಅವಸರಪಡದೆ ಕಾರ್ಯಕಲಾಪಗಳನ್ನು ನೆರವೇರಿಸಿದಲ್ಲಿ ಆಗ ಯಜಮಾನನಿಗೆ ಯಾವ ಕೆಡಕೂ ಉಂಟಾಗುವುದಿಲ್ಲ.

ಸ ಏಕಮೇವ ಶಸ್ತ್ರೇಣಾನು ಪರ್ಯಾವರ್ತೇತ ಯದಾ ವಾ ಏಷ ಪ್ರಾತರುದೇತ್ಯಥ ಮಂದ್ರಂ ತಪತಿ ತಸ್ಮಾನ್ಮಂದ್ರಯಾ ವಾಚಾ ಪ್ರಾತಃಸವನೇ ಶಂಸೇದಥ ಯದಾಭ್ಯೇತ್ಯಥ ಬಲೀಯಸ್ತಪತಿ ತಸ್ಮಾದ್ಬಲೀಯಸ್ಯಾ ವಾಚಾ ಮಧ್ಯಂದಿನೇ ಶಂಸೇದಥ ಯದಾಽಭಿತರಾಮೇತ್ಯಥ ಬಲಿಷ್ಠತಮಂ ತಪತಿ ತಸ್ಮಾದ್ಬಲಿಷ್ಠತಮಯಾ ವಾಚಾ ತೃತೀಯಸವನೇ ಶಂಸೇದೇವಂ ಶಂಸೇದ್ಯದಿ ವಾಚ ಈಶೀತ ವಾಗ್ಘಿ ಶಸ್ತ್ರಂ ಯಯಾ ತು ವಾಚೋತ್ತರೋತ್ತರಿಣ್ಯೋತ್ಸಹೇತ ಸಮಾಪನಾಯ ತಯಾ ಪ್ರತಿಪದ್ಯೇತೈತತ್ಸುಶಸ್ತತಮಮಿವ ಭವತಿ ॥

ಅಥ ತ್ರಿಷು ಸವನೇಷು ಶಸ್ತ್ರಸ್ಯೋತ್ತರೋತ್ತರಂ ಧ್ವನ್ಯಾಧಿಕ್ಯಂ ವಿಧತ್ತೇ ಸ ಹೋತ್ರೈತನೇವಾಽಽದಿತ್ಯಮನುಸೃತ್ಯ ಶಸ್ತ್ರೇಣ ಪರ್ಯಾವರ್ತೇತ ಯಥಾ ಯಥಾಽಽದಿತ್ಯ ಉತ್ತರೋತ್ತರಾಧಿಕ್ಯೇನ ತಪತಿ ತಥಾ ತಥೈವೋತ್ತರೋತ್ತರಧ್ವನ್ಯಾಧಿಕೇನ ಹೋತಾ ಶಂಸೇತ್ ॥ ಯದಾ ವಾ ಇತ್ಯಾದಿನಾ ತದೇವ ಸ್ಪಷ್ಟೀ ಕ್ರಿಯತೇ । ಯಸ್ಮಿನ್ನೇವ ಕಾಲ ಏಷ ಆದಿತ್ಯಃ ಪ್ರಾತರುದೇತಿ ಪ್ರಾತಃಕಾಲಮಭಿವ್ಯಂಜಯಿತುಮುದಿತೋ ಭವತಿ । ಅಥ ತದಾನೀಂ ಮಂದ್ರಮಲ್ಪಂ ಯಥಾ ಭವತಿ ತಥಾ ತಪತಿ ತಸ್ಮಾದಾದಿತ್ಯಮನುವರ್ತಮಾನೋ ಹೋತಾ ಮಂದ್ರಯಾ ಸ್ವಲ್ಪಧ್ವನ್ಯುಪೇತಯಾ ವಾಚಾ ಶಂಸೇತ್ ॥ ಅಥ ಪ್ರಾತಃಕಾಲಾದೂರ್ಧ್ವಂ ಯದಾಽಭ್ಯೇತಿ ಮಧ್ಯಾಹ್ನಕಾಲಂ ನಿಷ್ಪಾದಯಿತುಮಾಭಿಮುಖ್ಯೇನೋರ್ಧ್ವಂ ಗಚ್ಛತಿ ಅಥ ತದಾನೀಂ ಸೂರ್ಯೋ ಬಲೀಯಃ ಪ್ರಬಲಂ ಯಥಾ ಭವತಿ ತಥಾ ತಪತಿ ತಸ್ಮಾದ್ಧೋತಾಽತಿಬಲೀಯಸ್ಯಾ ಪ್ರಬಲಧ್ವನಿಯುಕ್ತಯಾ ವಾಚಾ ಮಧ್ಯಂದಿನೇ ಶಂಸೇತ್ ॥ ಅಥ ಮಧ್ಯಾಹ್ನಾದೂರ್ಧ್ವಂ ಯದಾ ಸೂರ್ಯೋಽಭಿತರಾಮೇತಿ ಪಶ್ಚಿಮಾಭಿಮುಖಾನಾಂ ಪುರುಷಾಣಾಮತ್ಯಂತಮಾಭಿಮುಖ್ಯೇನ ಗಚ್ಛತಿ ಅಥೇದಾನೀಮಾದಿತ್ಯೋ ಬಲಿಷ್ಠತಮಂ ತಪತಿ ಮಧ್ಯಾಹ್ನತಾಪಾದಪ್ಯತ್ಯಂತಂ ಪ್ರಬಲಸ್ತಾಪೋ ಭವತಿ ಭೂಮೌ ದಿಕ್ಷು ಚೋಷ್ಣತ್ವಬಾಹುಳ್ಯಾತ್ । ತಸ್ಮಾತ್ತದಾನೀಂ ಹೋತಾ ಮಾಧ್ಯಂದಿನ ಸವನಧ್ವನೇರಪ್ಯಧಿಕಧ್ವನಿಯುಕ್ತಯಾ ವಾಚಾ ತೃತೀಯಸವನೇ ಶಂಸೇತ್ ॥ ಯದ್ಯಯಂ ಹೋತಾ ವಾಚಾ ಈಶಿತೇಶ್ವರೋ ಭವೇದ್ವಶ್ಯವಾಕ್ಸ್ಯಾಚ್ಛ್ಲೇಷ್ಮಾದಿದೋಷೇಣ ಧ್ವನೇರ್ಮಾಂದ್ಯಂ ನ ಪ್ರಾಪ್ನುಯಾತ್ತದಾನೀಂ ಯೇನ ಧ್ವನಿನಾ ತೃತೀಯಸವನೇ ಪ್ರಾರಂಭಃ ಕೃತಃ ಏವಂ ತೇನೈವ ಧ್ವನಿನಾ ಶಂಸೇತ್ ॥ ಕಿಮರ್ಥಂ ಧ್ವನ್ಯಾಧಿಕ್ಯಮಿತಿ ತದುಚ್ಯತೇ । ಯಸ್ಮಾದ್ವಾಗೇವ ಶಸ್ತ್ರಂ ವಾಙ್ನಿಷ್ಪಾದ್ಯತ್ವಾತ್ತಸ್ಮಾದ್ಯಯಾ ತು ಯಾದೃಶಧ್ವನಿಯುಕ್ತಯೇವ ವಾಚೋತ್ತರೋತ್ತರಿಣ್ಯೋತ್ತರೋತ್ತರಾಭಿವೃದ್ಧಿಭಾಜಾ ಸಮಾಪನಾಯೋತ್ಸಹೇತ ಶಸ್ತ್ರಂ ಸಮಾಪಯಿತುಮುತ್ಸಾಹವಾನ್ಭವೇತ್ ॥ ನ ತು ಮಧ್ಯೇ ನೀಚಧ್ವನಿರ್ಭವೇತ್ ॥ ತಥಾ (ಯಾ) ತಥಾವಿಧಧ್ವನ್ಯುಪೇತಯಾ ವಾಚಾ ಶಸ್ತ್ರಂ ಪ್ರತಿಪದ್ಯೇತ ಪ್ರಾರಭೇತ । ತದೇಕದುಕ್ತಲಕ್ಷಣೋಪೇತಂ ಶಸ್ತ್ರಂ ಸುಶಸ್ತತಮಮಿವ ಭವತಿ ಶ್ರುತಿವೈಕಲ್ಯರಾಹಿತ್ಯೇನಾತ್ಯಂತಂ ಶಸ್ತಮೇವ ಭವತಿ ॥

ಮೂರು ಸವನಗಳಲ್ಲಿ ಶಸ್ತ್ರಮಂತ್ರಗಳನ್ನು ಪಠಿಸುವಾಗ ಉಚ್ಚರಿಸಬೇಕಾದ ಧ್ವನಿವಿಶೇಷಗಳನ್ನು ವಿವರಿಸುವರು— ಹೋತೃವು ಶಸ್ತ್ರಮಂತ್ರಗಳನ್ನು ಪಠಿಸುವಾಗ ಮುಂದೆ ಹೇಳುವ ಕ್ರಮಗಳನ್ನು ಅನುಸರಿಸಬೇಕು. ಆದಿತ್ಯನ ಗಮನವನ್ನು ಅನುಸರಿಸುತ್ತಾ ಕಾಲಕ್ಕೆ ತಕ್ಕ ಧ್ವನಿಯಿಂದ ಕೂಡಿ ಮಂತ್ರಗಳನ್ನು ಪಠಿಸಬೇಕು. ಪ್ರಾತಃಸವನಕಾಲದಲ್ಲಿ ಹೋತೃವು ಮಂತ್ರಗಳನ್ನು ಮೆತ್ತನೆಯ ಧ್ವನಿಯಿಂದ ಪಠಿಸಬೇಕು. ಏಕೆಂದರೆ, ಸೂರ್ಯನು ಆಗತಾನೆ ಉದಯಿಸಿ ಬೆಳಗುತ್ತಿರುವನು. ಅವನ ತಾಪವು ಅಧಿಕವಾಗಿರುವುದಿಲ್ಲ. ಕ್ರಮಕ್ರಮವಾಗಿ ಸೂರ್ಯನು ಅಂತರಿಕ್ಷದಲ್ಲಿ ಮೇಲೆ ಏರಿದಂತೆ ಅವನ ಔಷ್ಣ್ಯವು ಅಧಿಕವಾಗುತ್ತಾ ಹೋಗುವುದು. ಮಧ್ಯಾಹ್ನಕಾಲದಲ್ಲಿ ತಾಪವು (ಬಿಸಿಲು) ಅಧಿಕವಾಗಿರುವುದು. ಆದ್ದರಿಂದ ಮಾಧ್ಯಂದಿನ ಸವನಕಾಲದಲ್ಲಿ ಹೋತೃವು ಶಸ್ತ್ರಮಂತ್ರಗಳನ್ನು ಘಟ್ಟಿಯಾದ ಧ್ವನಿಯಿಂದ ಪಠಿಸಬೇಕು. ಮಧ್ಯಾಹ್ನಾಂತರದಲ್ಲಿ ಸೂರ್ಯನ ತಾಪವು ಅತ್ಯಧಿಕವಾಗಿರುವುದರಿಂದ ಅದನ್ನನುಸರಿಸಿ ಹೋತೃವು ತೃತೀಯಸವನದಲ್ಲಿ ಶಸ್ತ್ರಮಂತ್ರಗಳನ್ನು ಅತ್ಯಂತ ಘಟ್ಟಿಯಾದ ಧ್ವನಿಯಿಂದ ಪಠಿಸಬೇಕು. ಇದಲ್ಲದೆ ತೃತೀಯಸವನದ ಪ್ರಾರಂಭದಲ್ಲಿ ಹೋತೃವು ಯಾವ ಮಟ್ಟದ ಧ್ವನಿಯಿಂದ ಮಂತ್ರ ಪಠನವನ್ನು ಪ್ರಾರಂಭಿಸುವನೋ ಕೊನೆಯವರಿಗೂ ಅದೇಮಟ್ಟದಲ್ಲಿ ಎಂದರೆ ಅತ್ಯಂತ ಘಟ್ಟಿಯಾದ ಧ್ವನಿಯಲ್ಲಿ ಮಂತ್ರಗಳನ್ನು

ಪಠಿಸುತ್ತಿರಬೇಕು. ಮಧ್ಯದಲ್ಲಿ ಎಲ್ಲಿಯೂ ಧ್ವನಿಯನ್ನು ಕೆಳಮಟ್ಟದಲ್ಲಿ ತಗ್ಗಿಸಕೂಡದು. ಹೋತೃವು ಈ ರೀತಿ ಪಠಿಸಿದ ಮಂತ್ರಪಠನವು ಸುಶಸ್ತ ಎಂದರೆ ಬಹಳ ಉತ್ಕೃಷ್ಟವಾಗಿ ಪಠಿಸಲಾಯಿತೆಂದು ಹೇಳಲ್ಪಡುವುದು.

## ಸ ವಾ ಏಷ ನ ಕದಾಚನಾಸ್ತಮೇತಿ ನೋದೇತಿ ॥

ನನು ತೃತೀಯಸವನೇ ತ್ವರಾಮಂತರೇಣ ಶನೈಃ ಶಂಸೇದಿತಿ ಪೂರ್ವತ್ರೋಕ್ತಂ ತಥಾ ಸತಿ ಕಾಲಸ್ಯಾಲ್ಪತ್ವೇನ ಸಮಾಪನಾತ್ಪ್ರಾಗೇವ ಸೂರ್ಯೋಽಸ್ತಮಿಯಾದಿತ್ಯಾಶಂಕ್ಯ ವಸ್ತುತೋಽಸ್ತ-ಮಯಾಭಾವಾನ್ನಾಸ್ತಿ ದೋಷ ಇತ್ಯಭಿಪ್ರೇತ್ಯ ಆಹ— ಅಸ್ತಮಯಃ ಸ್ವರೂಪನಾಶಃ । ಉದಯಃ ಸೂರ್ಯೋತ್ಪತ್ತಿಃ । ನ ಹಿ ಸೂರ್ಯಸ್ಯ ಕದಾಚಿದಪಿ ಸ್ವರೂಪನಾಶೋತ್ಪತ್ತೀ ವಿದ್ಯೇತೇ ॥

ತೃತೀಯಸವನದಲ್ಲಿ ಮಂತ್ರಪಠನಾದಿಗಳಿಗೆ ಕಾಲಾವಕಾಶವು ಕಡಿಮೆಯಾಗಿರುವುದೆಂಬ ಶಂಕೆಯನ್ನು ಪಡೆಯಬೇಕಾಗಿಲ್ಲ. ಎಂದರೆ ಸೂರ್ಯಾಸ್ತಮಯವಾಗುವುದರೊಳಗೆ ಮಂತ್ರಗಳನ್ನು ಪಠಿಸಿ ಮುಗಿಸಬೇಕೆಂಬ ಆತುರವನ್ನು ವ್ಯಕ್ತಪಡಿಸಬೇಕಾಗಿಲ್ಲ. ಏಕೆಂದರೆ ಸೂರ್ಯನಿಗೆ ವಾಸ್ತವವಾಗಿ ಉದಯಾಸ್ತಮಯಗಳಿರುವುದಿಲ್ಲ. ಆ ವಿಧವಾದ ದೋಷಗಳುಂಟಾಗುವವೆಂದು ಶಂಕಿಸಬೇಕಾಗಿಲ್ಲ. ಇಲ್ಲಿ ಅಸ್ತಮಯಃ ಎಂದರೆ ಸ್ವರೂಪನಾಶವು (ಕಣ್ಣಿಗೆ ಕಾಣದೇ ಹೋಗುವುದು) **ಉದಯಃ** ಎಂದರೆ ಸೂರ್ಯನು ಹುಟ್ಟುವುದು. ಸೂರ್ಯನಿಗೆ ಯಾವಾಗಲು ಹುಟ್ಟುಸಾವುಗಳೆಂಬುದು ಇಲ್ಲ. ಎಂದರೆ ಉದಯಾಸ್ತಮಯಗಳೆರಡೂ ಸೂರ್ಯನಿಗೆ ಯಾವಾಗಲೂ ಇಲ್ಲವೇ ಇಲ್ಲ ಆದರೆ ಸೂರ್ಯನು ಹುಟ್ಟುವನು, ಮುಳುಗುವನು ಎಂದು ಲೋಕವ್ಯವಹಾರದಲ್ಲಿ ಜನರು ಆಡಿಕೊಳ್ಳುತ್ತಾರಷ್ಟೆ. ಹಾಗೆಂದರೇನು ಎಂಬ ವಿಷಯವನ್ನು ಸ್ಪಷ್ಟಪಡಿಸುತ್ತಾರೆ.

## ತಂ ಯಸ್ತಮೇತೀತಿ ಮನ್ಯಂತೇಽಹ್ನ ಏವ ತದಂತಮಿತ್ವಾಥಾತ್ಮಾನಂ ವಿಪರ್ಯಸ್ಯತೇ ರಾತ್ರೀಮೇವಾವಸ್ತಾತ್ಕುರುತೇಽಹಃ ಪರಸ್ತಾತ್ ॥

ಕಥಂ ತರ್ಹಿ ಜನಾನಾಂ ಸೂರ್ಯಾಸ್ತಮಯವ್ಯವಹಾರ ಇತ್ಯಾಶಂಕ್ಯಾಽಽಹ— ಯದ್ಯದಾ ಪ್ರಾಣಿನಃ ಸೂರ್ಯೋದಯಾದೂರ್ಧ್ವಂ ಯಾಮಚತುಷ್ಟಯಾನಂತರಂ ಸೂರ್ಯೋಽಸ್ತಮೇ-ತೀತಿ ತಂ ಸೂರ್ಯಮಸ್ತಮಿತಂ ಮನ್ಯಂತೇ ತತ್ತದಾನೀಂ ಸೂರ್ಯಸ್ತತ್ಪ್ರಾಣಿಯುಕ್ತೇ ದೇಶೇ ಪ್ರಕಾಶರೂಪಸ್ಯಾಹ್ನ ಏವಾಂತಮಿತ್ವಾ ಸಮಾಪ್ತಿಂ ಪ್ರಾಪ್ಯಾಥಾನಂತರಂ ಸ್ವಾತ್ಮಾನಂ ವಿಪ-ರ್ಯಸ್ಯತೇ ವಿಪರ್ಯಸ್ತಂ ಕರೋತಿ । ಕಥಂ ವಿಪರ್ಯಾಸ ಇತಿ ಸ ಉಚ್ಯತೇ । ಅವಸ್ತಾದತೀತೇ ದೇಶೇ ರಾತ್ರಿಮೇವ ಕುರುತೇ ಪರಸ್ತಾದಾಗಮಿನಿ ದೇಶೇಽಹಃ ಕುರುತೇ ॥ ಅಯಮರ್ಥಃ ॥ ಮೇರೋಃ ಪ್ರದಕ್ಷಿಣಂ ಕುರ್ವನ್ನಾದಿತ್ಯೋ ಯದ್ದೇಶವಾಸಿನಾಂ ದೃಷ್ಟಿಪಥಮಾಗಚ್ಛತಿ । ತದ್ದೇಶವಾಸಿನಾಂ ಪ್ರಾಣಿನಾಂ ದೃಷ್ಟಿಪಥಮಾಗಚ್ಛತಿ । ತದ್ದೇಶವಾಸಿಭಿರಯಮುದೇತೀತಿ ವ್ಯವಹ್ರಿಯತೇ ॥ ಯದ್ದೇಶವಾಸಿನಾಂ ದೃಷ್ಟಿಪಥಮತಿಕ್ರಮ್ಯ ಸೂರ್ಯೇ ಗತೇ ಸತಿ ಸೂರ್ಯೋಽ-ಸ್ತಮೇತೀತಿ ತದ್ದೇಶವಾಸಿಭಿರ್ವ್ಯವಹ್ರಿಯತೇ ॥ ಅತಸ್ತಸ್ಮಿನ್ದೇಶೇ ರಾತ್ರಿರ್ಭವತಿ । ಆದಿತ್ಯೇನ-ಗಂತವ್ಯೇ ದೇಶಾಂತರೇ ತದ್ದೇಶವಾಸಿಭಿಃ ಪ್ರಾಣಿಭಿಃ ಸೂರ್ಯಸ್ಯ ದೃಷ್ಟತ್ವಾದಹರ್ಭವತಿ । ಏವಂ ಚ ಸತಿ ಸೂರ್ಯಸ್ಯ ವಿನಾಶರೂಪೋಽಸ್ತಮಯಃ ಕದಾಚಿದಪಿ ನಾಸ್ತೀತಿ ಸಿದ್ಧಂ ॥

ಪ್ರಪಂಚದಲ್ಲಿರುವ ಸಮಸ್ತಜನರೇ ಮೊದಲಾದ ಪ್ರಾಣಿಗಳು ಈ ರೀತಿ ಯೋಚಿಸುತ್ತವೆ. ಸೂರ್ಯನು ಈಗತಾನೇ ಉದಯಿಸಿದ್ದಾನೆ. ಇನ್ನು ನಾಲ್ಕುಯಾಮಪರ್ಯಂತರ ಎಂದರೆ ಹಗಲು ಕಳೆಯುವವರೆಗೂ ಪ್ರಕಾಶಿಸುತ್ತಿದ್ದು ಅನಂತರ ಅಸ್ತಮಯವನ್ನು ಹೊಂದುತ್ತಾನೆ (ಮುಳುಗುತ್ತಾನೆ) ಆಗ ರಾತ್ರಿಯಾಗುತ್ತದೆ. ಆ ಕಾಲದಲ್ಲಿ ಸೂರ್ಯನು ಯಾರಿಗೂ ಕಾಣಿಸಿಕೊಳ್ಳದೆ ವಿಪರ್ಯಸ್ತನಾಗಿ (ಗೂಢವಾಗಿ) ಇರುತ್ತಾನೆ ಎಂದು ಭಾವಿಸುತ್ತವೆ. ಈ ರೀತಿ ವಿಪರ್ಯಸ್ತವೇನು ? ಇದರ ಗೂಢಾರ್ಥವೇನು? ಎಂದರೆ ಸೂರ್ಯನು ಹಗಲುಕಾಲವೆಲ್ಲಾ ಒಂದು ಪ್ರದೇಶದಲ್ಲಿ ಬೆಳಗುತ್ತಿದ್ದು ಅನಂತರ ಮುಂದಕ್ಕೆ ಹೋಗುತ್ತಾನೆ. ಅವನು ಪ್ರಕಾಶಿಸುತ್ತಿರುವ ಭೂಭಾಗದಲ್ಲಿ ಹಗಲು ಎಂದೂ ಸೂರ್ಯನು ಪ್ರಕಾಶಿಸದಿರುವ ಭೂಭಾಗದಲ್ಲಿ ರಾತ್ರಿಯೆಂದೂ ಜನರು ಹೇಳುವರು. ಎಂದರೆ ಏಕಕಾಲದಲ್ಲಿ ಒಂದು ಪ್ರದೇಶದಲ್ಲಿ ರಾತ್ರಿಯೂ ಮತ್ತೊಂದು ಪ್ರದೇಶದಲ್ಲಿ ಹಗಲೂ ಉಂಟಾಗುತ್ತಿರುವುದು. ಸೂರ್ಯನು ಮೇರುಪ್ರದಕ್ಷಿಣವನ್ನು ಮಾಡುವಾಗ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಮುಂದು ಮುಂದಕ್ಕೆ ಹೋಗುತ್ತಲೇ ಇರುವನು. ಹೀಗೆ ಹೋಗುತ್ತಿರುವಾಗ ಸೂರ್ಯನ ಪ್ರಕಾಶವು ಬೀಳುವ ಸ್ಥಳಕ್ಕೆ ಹಗಲೆಂದೂ ಪ್ರಕಾಶವು ಬೀಳದೆ ಮರೆಯಾಗಿ ಕತ್ತಲು ಕವಿದಿರುವ ಪ್ರದೇಶಕ್ಕೆ ರಾತ್ರಿಯೆಂದೂ ಜನರು ವ್ಯವಹರಿಸುವರು. ಜನರು ಒಂದು ದೇಶದಲ್ಲಿ (ಹಗಲಿನಲ್ಲಿ) ಸೂರ್ಯನನ್ನು ನೋಡುವರು. ಅದೇ ಕಾಲದಲ್ಲಿ ಬೇರೆ ದೇಶದ ಜನರು ಸೂರ್ಯನನ್ನು ನೋಡಲಾರರು ಅಲ್ಲಿ ಸೂರ್ಯನಿರುವುದಿಲ್ಲ. ಕತ್ತಲೆಯು ಕವಿದಿರುವುದು. ಹೀಗಿರುವುದರಿಂದ ಸೂರ್ಯನಿಗೆ ಉದಯವಾಗಲಿ, ಅಸ್ತಮಯವಾಗಲಿ ಯಾವಾಗಲೂ ಇರುವುದಿಲ್ಲ.

**ಅಥ ಯದೇನಂ ಪ್ರಾತರುದೇತೀತಿ ಮನ್ಯಂತೇ ರಾತ್ರೇರೇವ ತದಂತಮಿತ್ವಾಽಥಾಽಽತ್ಮಾನಂ ವಿಪರ್ಯಸ್ಯತೇಽಹರೇವಾವಸ್ತಾತ್ಕುರುತೇ ರಾತ್ರಿಂ ಪರಸ್ತಾತ್ ॥**

ಅನೇನೈವ ನ್ಯಾಯೇನ ಸೂರ್ಯಸ್ಯ ಸ್ವರೂಪೋತ್ಪತ್ತಿಲಕ್ಷಣೋದಯಾಭಾವಂ ದರ್ಶಯತಿ —ಪೂರ್ವವದ್ವ್ಯಾಖ್ಯೇಯಂ ।

ಈಗ ಸೂರ್ಯನು ಉದಯಿಸುತ್ತಾನೆ ಎಂದು ಜನರು ಹೇಳುವಾಗ ಸೂರ್ಯನು ಹಿಂದೆ ಇದ್ದ ಪ್ರದೇಶದಿಂದ ಮುಂದಕ್ಕೆ ಬಂದು ಜನರಿಗೆ ಕಾಣಿಸಿಕೊಳ್ಳುವನು. ಹಗಲು ಮುಗಿಯುವವರೆಗೂ ಆ ಜನರಿಗೆ ಕಾಣಿಸುತ್ತಿದ್ದು ಅನಂತರ ಮರೆಯಾಗುವನು (ಅಥವಾ ಮುಂದಕ್ಕೆ ಸರಿದು ಹೋಗುವನು.) ಆಗ ಕತ್ತಲೆಯು ಆವರಿಸುವುದರಿಂದ ಅದನ್ನು ರಾತ್ರಿಕಾಲವೆಂದು ಜನರು ಹೇಳುವರು.

**ಸ ವಾ ಏಷ ನ ಕದಾಚನ ನಿಮ್ರೋಚತಿ ॥**

ಪರಮಾರ್ಥತೋಽಸ್ತಮಯಸ್ಯಾಭಾವಂ ನಿಗಮಯತಿ — ನಿಮ್ರೋಚನಮಸ್ತಮಯಃ । ಏತಸ್ಯೋಪಲಕ್ಷಣತ್ವಾನ್ನ ಕದಾಚಿದಪ್ಯುದೇತೀತ್ಯಪಿ ದ್ರಷ್ಟವ್ಯಂ ॥

ಮೇಲೆ ಹೇಳಿದ ಕಾರಣಗಳಿಂದ ಸೂರ್ಯನು ಯಾವಾಗಲೂ ಉದಯಿಸುವುದೂ ಇಲ್ಲ ಅಸ್ತಮಯವಾಗುವುದೂ ಇಲ್ಲ.

**ನ ಹ ವೈ ಕದಾಚನ ನಿಮ್ರೋಚತ್ಯೇತಸ್ಯ ಹ ಸಾಯುಜ್ಯಂ ಸರೂಪತಾಂ ಸಲೋಕತಾಮಶ್ನುತೇ ಯ ಏವಂ ವೇದ ಯ ಏವಂ ವೇದ ॥**

ವೇದನಂ ಪ್ರಶಂಸತಿ—ವೇದಿತುರಸ್ತಮಯಾಭಾವೋ ನಾಮಾಪಮೃತ್ಯುರಾಹಿತ್ಯಮಿಹ ಜನ್ಮನಿ ತಾದೃಶೋ ಭೂತ್ವಾ ಪಶ್ಚಾದೇತಸ್ಯಾಽಽದಿತ್ಯಸ್ಯ ಸಹವಾಸಸಮಾನರೂಪತ್ವಸಮಾನ-ಲೋಕತ್ವಾನಿ ಪ್ರಾಪ್ನೋತಿ । ನ ಚ ಸಹವಾಸೇನೈವ ಸಮಾನಲೋಕತ್ವಂ ಸಿದ್ಧ್ಯತೀತಿ ವಾಚ್ಯಂ॥ ಕದಾಚಿದಪಿ ಸ್ವೇಚ್ಛಯಾ ಪೃಥಗವಸ್ಥಾನೇಽಪಿ ತಲ್ಲೋಕಭ್ರಂಶೋ ನಾಸ್ತೀತಿ ವಿವಕ್ಷಯಾ ಸಮಾನಲೋಕತ್ವಮುಚ್ಯತೇ ॥ ಅಭ್ಯಾಸೋಽಧ್ಯಾಯಸಮಾಪ್ತ್ಯರ್ಥಃ ॥

ಯಾವ ಪುರುಷನು ಆದಿತ್ಯನ ಈ ವಿಧವಾದ ಉದಯಾಸ್ತಮಯಗಳ ಸ್ವರೂಪವನ್ನು ಚೆನ್ನಾಗಿ ತಿಳಿದುಕೊಂಡಿರುವನೋ ಅವನು ಸೂರ್ಯದೇವನಂತೆ ಪ್ರಕಾಶಮಾನವಾದ ಶರೀರವನ್ನು ಪಡೆದು ಸೂರ್ಯನ ಲೋಕದಲ್ಲಿ ವಾಸಮಾಡಲು ಅರ್ಹತೆಯನ್ನು ಪಡೆದು ಅನಂತರ ಸೂರ್ಯಸಾಯುಜ್ಯವನ್ನೇ ಪಡೆಯುತ್ತಾನೆ. ಶ್ರುತ್ಯಂತರದಲ್ಲಿ ಈ ಆದಿತ್ಯನೇ ಬ್ರಹ್ಮ (ಪರಬ್ರಹ್ಮ) ನೆಂದು ಹೇಳಿದೆ, ಬ್ರಹ್ಮಸ್ವರೂಪವನ್ನು ತಿಳಿದವನು ಬ್ರಹ್ಮಸಾಯುಜ್ಯವನ್ನು ಪಡೆದು ಬ್ರಹ್ಮನಲ್ಲಿ ಐಕ್ಯನಾಗುತ್ತಾನೆಂದು ಎಂದರೆ ಪರಮ ಪದವನ್ನು ಪಡೆಯುತ್ತಾನೆಂದು "ಅಸೌ ವಾ ಆದಿತ್ಯೋ ಬ್ರಹ್ಮ" "ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ಯ ಏವಂ ವೇದ" ಎಂದು ಮುಂತಾಗಿ ಹೇಳಿದೆ.

## *English Translatison*

**(How the Shastras should be repeated at each of the three libations. The sun never rises nor sets. How the phenomena of sunrise and sunset are to be explained)**

The Agnishtoma is that one who burns (the sun). The sun shines during the day, and the Agnishtoma should be completed along with the day. It being a sahna, i.e. going with the day, they should not perform it hurriedly in order to finish it before the day is over), neither at the morning, nor midday, nor evening libations. Should they do so the sacrificer would suddenly die.

When they do not perform hurriedly only the rites of the morning and midday libations, but hurry over the rites of the evening libation, then this, viz., the villages lying in the eastern direction become largely populated, whilst all that is in the western direction becomes a long tract of deserts, and the sacrificer dies suddenly. Thence they ought to perform without any hurry the rites of the morning and midday, as well as these of the evening libation. If they do so, the sacrificer will not suddenly die.

In repeating the Shastras, the Hotar ought to be guided by the daily course of the sun. In the morning time, at sunrise, it burns but slowly. Thence the Hotar should repeat the Shastras at the morning libation with a feeble voice.

When the sun is rising higher up (on the horizon) is burns with greater force. Thence the Hotar should repeat the Shastras at the midday libation with a strong voice.

When the sun faces men most after having passed the meridian, it burns with the greatest force. Thence the Hotar should repeat the Shastras at the third evening libation with an extremely strong voice. He should only then commence to repeat it so with the greatest force of his voice when he should be complete master of his full voice. For the Shastra is speech. Should he continue to repeat the Shastras of the third libation with the same strength of voice with which he commenced the repition, up to the end, when his recitation will be admirable well accomplished.

The sun does never set nor rise. When people think the sun is setting it is not so. For after having arrived at the end of the day it makes itself produce two opposite effects, making night to what is below and day to what is on the other side.

When they believe it rises in the morning (this supposed rising is thus to be accounted for). Having reached the end of the night, it makes itself produce two opposite effects, making day to what is below and night to what is on the other side. In fact the sun never sets. Nor does it set for him who has such a knowledge. Such a one becomes united with the sun, assumes its form, and enters its place.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಚತುರ್ದಶಾಧ್ಯಾಯೇ ಷಷ್ಠಃ ಖಂಡಃ

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ಚತುರ್ದಶಾಧ್ಯಾಯಃ ಸಮಾಪ್ತಃ

ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದಲ್ಲಿ
ಹದಿನಾಲ್ಕನೆಯ ಅಧ್ಯಾಯದಲ್ಲಿ ಆರನೆಯ ಖಂಡವು ಸಮಾಪ್ತವಾದುದು.

ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



# ಅಥೈತರೇಯಬ್ರಾಹ್ಮಣೇ ಪಂಚದಶಾಧ್ಯಾಯೇ ಪ್ರಥಮಃ ಖಂಡಃ

## ಹದಿನೈದನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು



[ದೇವತೆಗಳು ತಮ್ಮಿಂದ ಓಡಿಹೋದ ಯಜ್ಞವನ್ನು ಕ್ರಮಕ್ರಮವಾಗಿ ಹಿಂಪಕ್ಕೆ ಪಡೆದುದು. ಯಾವ ಪುರುಷರು ಯಜ್ಞದಲ್ಲಿ ಋತ್ವಿಕ್ಕುಗಳಾಗಿ ಭಾಗವಹಿಸಲು ಅನರ್ಹರು? ದೇವಿ ಮತ್ತು ದೇವಿಕಾ ಎಂಬುವರಿಗೆ ಅರ್ಪಿಸಬೇಕಾದ ಆಹುತಿಗಳು. ಉಕ್ಥ್ಯ ಎಂಬ ಯಾಗವಿಧಾನವು.]

[ದೇವತೆಗಳು ತಮ್ಮಿಂದ ಓಡಿಹೋಗಿದ್ದ ಯಜ್ಞವನ್ನು (ಯಜ್ಞಾಭಿಮಾನಿಪುರುಷನನ್ನು) ಹೇಗೆ ಹಿಂದಕ್ಕೆ ಪಡೆದರು? ನಾನಾವಿಧ ಕಾರ್ಯಕಲಾಪಗಳನ್ನು ಹೇಗೆ ಆಚರಿಸಿದರು? ಯಾವ ವಿಧವಾಗಿ ಆಚರಿಸಿದ ಯಜ್ಞವು ಪರಿಣಾಮಕಾರಿಯಾಯಿತು?]



ಯಜ್ಞೋ ವೈ ದೇವೇಭ್ಯೋಽನ್ನಾದ್ಯಮುದಕ್ರಾಮತ್ತೇ ದೇವಾ ಅಬ್ರುವನ್ಯಜ್ಞೋ ವೈ ನೋಽನ್ನಾದ್ಯಮುದಕ್ರಮೀದನ್ವಿಮಂ ಯಜ್ಞಮನ್ನಮನ್ವಿಚ್ಛಾಮೇತಿ ತೇಽಬ್ರುವನ್ಕಥಮನ್ವಿಚ್ಛಾಮೇತಿ ಬ್ರಾಹ್ಮಣೇನ ಚ ಛಂದೋಭಿಶ್ಚೇತ್ಯಬ್ರುವಂಸ್ತೇ ಬ್ರಾಹ್ಮಣಂ ಛಂದೋಭಿರದೀಕ್ಷಯಂಸ್ತಸ್ಯಾಂತಂ ಯಜ್ಞಮತನ್ವತಾಪಿ ಪತ್ನೀಃ ಸಮಯಾಜಯಂಸ್ತಸ್ಮಾದ್ಧಾಪ್ಯೇತರ್ಹಿ ದೀಕ್ಷಣೀಯಾಯಾಮಿಷ್ಟಾವಾಂತಮೇವ ಯಜ್ಞಂ ತನ್ವತೇಽಪಿ ಪತ್ನೀಃಸಂಯಾಜಯಂತಿ ತಮನುನ್ಯಾಯಮನ್ವವಾಯನ್ ॥



ಅಗ್ನಿಷ್ಟೋಮಃ ಸರ್ವಯಜ್ಞಕ್ರತೂನಾಂ ।
ಯೋನಿಸ್ತೇನಾಸ್ತೂಯತ ಪ್ರಾಕ್ಪರಸ್ತಾತ್ ॥
ದೇವ್ಯೈಃ ಸ್ತೋಮ್ಯೈಃ ಸಂಸ್ತುತೋಽಸೌ ಚತುರ್ಭಿಃ ।
ವಾಚಾ ಮಂದ್ರೈರ್ಮಧ್ಯಮೈರುತ್ತಮೈಶ್ಚ ॥

ಅಥೇಷ್ಟಿಸಂಸ್ಥಾದಿಕಂ ವಕ್ತವ್ಯಂ । ತತ್ರ ದೀಕ್ಷಣೀಯೇಷ್ಟೇಃ ಸಂಸ್ಥಾಮಾಖ್ಯಾಯಿಕಯಾ ದರ್ಶಯತಿ—ಪುರಾ ಕದಾಚಿದ್ಯಜ್ಞೋ ಜ್ಯೋತಿಷ್ಟೋಮಾಖ್ಯಃ ಕೇನಾಪಿ ನಿಮಿತ್ತೇನಾಪರಕ್ತಃ ಸನ್ದೇವೇಭ್ಯಃ ಸಕಾಶಾದುದಕ್ರಾಮನ್ನಿಷ್ಕ್ರಾಂತವಾನ್ ॥ ತಸ್ಮಿನ್ನುತ್ಕ್ರಾಂತೇ ತತ್ಫಲರೂಪ-

**ಮನ್ನಾದ್ಯಮುದಕ್ರಾಮತ್ । ತತೋ ದೇವಾಃ ಪರಸ್ಪರಮಿದಮಬ್ರುವನ್ಯದೇತದುಭಯಮಸ್ಮದೀಯಮುದಕ್ರಾಮತ್ತದೇತದುಭಯಂ ಸರ್ವಥಾನ್ವಿಚ್ಛಾಮಾನ್ವೇಷಣಂ ಕರವಾಮ । ತತ್ರ ಕಥಮನ್ವೇಷಣಮಿತ್ಯುಪಾಯಂ ವಿಚಾರ್ಯ ಬ್ರಾಹ್ಮಣಮೃತ್ವಿಗ್ಯಜಮಾನರೂಪಂ ಗಾಯತ್ರ್ಯಾದಿಛಂದಾಂಸಿ ಚ ತದನ್ವೇಷಣೋಪಾಯತ್ವೇನ ನಿಶ್ಚಿತ್ಯೈಶ್ಛಂದೋಭಿರ್ಬ್ರಾಹ್ಮಣಂ ಯಜಮಾನರೂಪಮದೀಕ್ಷಯನ್ದೀಕ್ಷಣೀಯೇಷ್ಟ್ಯಾ ಸಂಸ್ಕೃತವಂತಃ ॥ ತಸ್ಯ ಬ್ರಾಹ್ಮಣಸ್ಯ ಯಜ್ಞಂ ದೀಕ್ಷಣೀಯೇಷ್ಟಿರೂಪಮಾರಂಭಂ ಸಮಾಪ್ತಿಪರ್ಯಂತಮತನ್ವತ ವಿಸ್ತಾರಿತವಂತಃ । ತಂ ಯಜ್ಞಮನುಷ್ಠಾಯ ಪತ್ನೀನಾಮಿಕಾ ದೇವತಾ ಅಪಿ ಸಮಯಾಜಯನ್ಪತ್ನೀಸಂಯಾಜಾನುಷ್ಠಾನಮಪಿ ಕೃತವಂತ ಇತ್ಯರ್ಥಃ । ಯಸ್ಮಾದೇವಂ ದೇವೈಃ ಕೃತಂ ತಸ್ಮಾದೇವಕಾರಣಾದಿದಾನೀಮಪಿ ದೀಕ್ಷಣೀಯಾಮಿಷ್ಟ್ವಾ ಚೋದಕಪ್ರಾಪ್ತಂ ಯಜ್ಞಂ ಸಮಾಪ್ತಿಪರ್ಯಂತಮನುತಿಷ್ಠಂತಿ ॥ ಪತ್ನೀಸಂಯಾಜಾನಪ್ಯನುತಿಷ್ಠಂತಿ । ಉತ್ತರಕಾಲೀನಾಂಗವ್ಯಾವೃತ್ತಯೇ ಪತ್ನೀಸಂಯಾಜಗ್ರಹಣಂ। ಪತ್ನೀಸಂಯಾಜೈರೇವ ಸಮಾಪ್ತಿರಿತ್ಯಭಿಪ್ರೇತ್ಯಾಽಽಂತಮಿತ್ಯುಕ್ತಂ। ತಂ ದೇವೈಃ ಕೃತಮನುನ್ಯಾಯಮನುಕ್ರಮಗತಮನುಷ್ಠಾನಮನು ಪಶ್ಚಾನ್ಮನುಷ್ಯಾ ಅಪ್ಯನ್ವಾಯನ್ನವಗತವಂತೋಽನುಷ್ಠಿತವಂತ ಇತ್ಯರ್ಥಃ ॥ ತಮನುನ್ಯಾಯಮಿತಿ ವಾಕ್ಯಮುತ್ತರಶೇಷತ್ವೇನ ವಾ ಯೋಜ್ಯಂ ॥**

ಈಗ ಇಷ್ಟಿ ಮೊದಲಾದುವುಗಳನ್ನು ಹೇಳಲು ಪ್ರಾರಂಭಿಸಿ ಮೊದಲು ದೀಕ್ಷಣೀಯೇಷ್ಟಿಯನ್ನು ಹೇಳುವುದಕ್ಕಾಗಿ ಒಂದು ಪೂರ್ವೇತಿಹಾಸವನ್ನು ಹೇಳುವರು—ಪೂರ್ವದಲ್ಲಿ ಒಂದಾನೊಂದು ಸಮಯದಲ್ಲಿ ಅಗ್ನಿಷ್ಟೋಮವೆಂಬ ಯಜ್ಞವು (ಯಜ್ಞಾಭಿಮಾನಿಯು) ದೇವತೆಗಳ ವಿಷಯದಲ್ಲಿ ಬೇಸರಗೊಂಡು ಅವರನ್ನು ಬಿಟ್ಟು ದೂರ ಓಡಿಹೋಯಿತು ಮತ್ತು ಪುಷ್ಟಿಕರವಾದ ಆಹಾರದಲ್ಲಿ ಸೇರಿಕೊಂಡಿತು. ಅನಂತರ ದೇವತೆಗಳು ತಮ್ಮತಮ್ಮಲ್ಲಿ ಈ ರೀತಿ ಮಾತನಾಡಿಕೊಂಡರು. ಯಜ್ಞವೂ, ಪುಷ್ಟಿಯಾದ ಆಹಾರವೂ ನಮ್ಮನ್ನು ಬಿಟ್ಟು ಹೊರಟುಹೋದವು. ಆದ್ದರಿಂದ ನಾವು ಅವೆರಡನ್ನೂ ಹುಡುಕಿ ಹಿಂದಕ್ಕೆ ತರೋಣ. ಇದನ್ನು ಹೇಗೆ ನಿರ್ವಹಿಸಬೇಕೆಂದು ಆಲೋಚಿಸಿ. ಋತ್ವಿಗ್ಯಜಮಾನ ರೂಪನಾದ ಒಬ್ಬ ಬ್ರಾಹ್ಮಣನನ್ನು ತಂದು ಅವನಿಗೆ ದೀಕ್ಷಣೀಯೇಷ್ಟಿಯಿಂದ ದೀಕ್ಷಾದಿ ಸಂಸ್ಕಾರಗಳನ್ನು ಛಂದಸ್ಸುಗಳಿಂದ ಸಂಸ್ಕಾರ ಮಾಡಿದರು. ಆ ಬ್ರಾಹ್ಮಣನಿಗೆ ದೀಕ್ಷಣೀಯೇಷ್ಟಿಯಾಗಿ ಮುಗಿಯುವವರೆಗೂ ಯಜ್ಞದಲ್ಲಿ ಮಾಡಬೇಕಾದ ಸಮಸ್ತಸಂಸ್ಕಾರಗಳನ್ನೂ ವಿಸ್ತಾರವಾಗಿ ಮಾಡಿ ಮುಗಿಸಿದರು. ಅನಂತರ ಆ ಬ್ರಾಹ್ಮಣನಿಗೆ ಪತ್ನೀಸಂಯಾಜವೆಂಬ ಕರ್ಮವನ್ನೂ ಮಾಡಿ ಮುಗಿಸಿದರು. ದೇವತೆಗಳು ಈ ರೀತಿ ದೀಕ್ಷಣೀಯೇಷ್ಟಿಯಲ್ಲಿ ಮಾಡುವ ಕಾರ್ಯಕಲಾಪಗಳನ್ನು ಮಾಡಿ ಮುಗಿಸಿದ್ದರಿಂದ ಈಗಲೂ ಮನುಷ್ಯರು ಆ ಕ್ರಮವನ್ನೇ ಅನುಸರಿಸಿ ಯಜ್ಞದಲ್ಲಿ ದೀಕ್ಷಣೀಯೇಷ್ಟಿಯನ್ನೂ ಇತರ ಕಾರ್ಯಕಲಾಪಗಳನ್ನೂ ಪತ್ನೀಸಂಯಾಜದವರೆಗೂ ಮಾಡುವರು. ಯಜ್ಞಸಮಾಪ್ತಿಗಾಗಿ ದೇವತೆಗಳು ಯಾವ ಯಾವ ಕ್ರಮಗಳನ್ನು ಅನುಸರಿಸಿದರೋ ಅದರಂತೆ ಈಗಲೂ ಮನುಷ್ಯರು ಯಜ್ಞಮಾಡುವಾಗ ಅದೇ ಕ್ರಮಗಳನ್ನು ಅನುಸರಿಸುತ್ತಿರುವರು.

**ತೇ ಪ್ರಾಯಣೀಯಮತನ್ವತ ತಂ ಪ್ರಾಯಣೀಯೇನ ನೇದೀಯೋಽ-**
**ನ್ವಾಗಚ್ಛಂಸ್ತೇ ಕರ್ಮಭಿಃ ಸಮತ್ವರಂತ ತಚ್ಛಯ್ವಂತಮಕುರ್ವಂ-**
**ಸ್ತಸ್ಮಾದ್ಧಾಪ್ಯೇತರ್ಹಿ ಪ್ರಾಯಣೀಯಂ ಶಂಯ್ವಂತಮೇವ ಭವತಿ**
**ತಮನುನ್ಯಾಯಮನ್ವಾಯನ್ ॥**

ದೀಕ್ಷಣೀಯೇಷ್ಟೇಃ ಪತ್ನೀಸಂಯಾಜೇಷು ಸಮಾಪ್ತಿಂ ದರ್ಶಯಿತ್ವಾ ಪ್ರಾಯಣೀಯಸ್ಯ ಶಂಯುವಾಕೇ ಸಮಾಪ್ತಿಂ ದರ್ಶಯತಿ---ತಂದೇವಾಃ ಪ್ರಾಯಣೀಯಾಖ್ಯಂ ಕರ್ಮಾನುಷ್ಠಿತವಂತಃ ಪ್ರಾಯಣೀಯೇನ ಕರ್ಮಣಾ ತಂ ರೂಪಂ ಜ್ಯೋತಿಷ್ಟೋಮರೂಪಂ ವಾ ಯಜ್ಞಂ ನೇದೀಯೋಽತ್ಯಂತಸಮೀಪೇ ಯಥಾ ಭವತಿ ತಥೈವಾನ್ವಗಚ್ಛನ್ನನುತಿ ಪೂರ್ವೋಕ್ತದೀಕ್ಷಣೀಯೇಷ್ಟಿರೂಪಂ ಜ್ಯೋತಿಷ್ಟೋಮರೂಪ ವಾ ಯಜ್ಞಂ ನೇದೀಯೋಽತ್ಯಂತಸಮೀಪೇ ಯಥಾ ಭವತಿ ತಥೈವಾನ್ವವಗಚ್ಛನ್ನನುಷ್ಠಿತವಂತಃ । ದೀಕ್ಷಣೀಯೇಷ್ಟೇರವರ್ಧ್ನಂ ಚಿದಂ ವ್ಯವಧಾನಮಕೃತ್ವಾ ಪ್ರಾಯಣೀಯಮನುಷ್ಠಿತವಂತ ಇತ್ಯರ್ಥಃ । ತೇ ದೇವಾಃ ಕರ್ಮಭಿಃ ಪ್ರಾಯಣೀಯಾಂಗರೂಪೈಃ ಸಮತ್ಸರಂತ ಸಮ್ಯಕ್ತ್ವರಾಂ ಕೃತವಂತಃ ॥ ದೀಕ್ಷಣೀಯೇಷ್ಟಿವತ್ಪತ್ನೀಸಂಯಾಜಪರ್ಯಂತಂ ನಾನ್ವತಿಷ್ಠನ್ ಕಿಂತು ತ್ವದಾಂ ಕೃತ್ವಾ ಪತ್ನೀಸಂಯಾಜೇಭ್ಯಃ ಪೂರ್ವಮೇವ ಶಂಯುವಾಕಪರ್ಯಂತಂ ಕೃತ್ವೋಪರತಾಃ । ತಸ್ಮಾದ್ಧೇತ್ಯಾದಿ ಪೂರ್ವವತ್ ॥

ದೀಕ್ಷಣೀಯೇಷ್ಟಿಯಲ್ಲಿ ಪತ್ನೀಸಂಯಾಜದವರೆಗೂ ಮಾಡುವ ಕಾರ್ಯಕಲಾಪಗಳನ್ನು ವಿವರಿಸಿ ಈಗ ಪ್ರಾಯಣೀಯೇಷ್ಟಿಯಲ್ಲಿ ಶಂಯುವಾಕದವರೆಗೂ ಮಾಡಿ ಮುಗಿಸಬೇಕೆಂಬ ವಿಷಯವನ್ನು ತಿಳಿಸುವರು. ಅನಂತರ ದೇವತೆಗಳು ದೀಕ್ಷಣೀಯೇಷ್ಟಿಯನ್ನು ಬೇಗ ಬೇಗನೆ ಮುಗಿಸಿ ಪ್ರಾಯಣೀಯೇಷ್ಟಿಯನ್ನು ಶಂಯುವಾಕದವರೆಗೆ ಮಾಡಿ ಬೇಗನೆ ಮುಗಿಸಿದರು. ಇದರಿಂದ ದೇವತೆಗಳು ಯಜ್ಞದ ಅತಿ ಸಮೀಪಕ್ಕೆ ಬಂದಂತಾಯಿತು.

ತ ಆತಿಥ್ಯಮತನ್ವತ ತಮಾತಿಥ್ಯೇನ ನೇದೀಯೋಽನ್ವಾಗಚ್ಛಂಸ್ತೇ ಕರ್ಮಭಿಃ ಸಮತ್ವರಂತ ತದಿಳಾಂತಮಕುರ್ವಂಸ್ತಸ್ಮಾದ್ಧಾಪ್ಯೇತರ್ಹ್ಯಾತಿಥ್ಯಮಿಳಾಂತಮೇವ ಭವತಿ ತಮನುನ್ಯಾಯಮನ್ವವಾಯನ್ ॥

ತಥಾತಿಥ್ಯೇಷ್ಟೇರಂತಂ ದರ್ಶಯತಿ—ಅನುಯಾಜೇಭ್ಯಃ ಪೂರ್ವಂ ಯದಿಡೋಪಾಹ್ವಾನಂ ತದಂತಮೇದಾಽತಿಥ್ಯೇಷ್ಟಿಕರ್ಮ ಕೃತ್ವೋಪರತಾಃ ॥ ಅನ್ಯತ್ಪೂರ್ವವದ್ವ್ಯಾಖ್ಯೇಯಂ ॥

ಅನಂತರ ದೇವತೆಗಳು ಯಜ್ಞಕರ್ಮವನ್ನು ಮುಂದುವರೆಸಿ ಇಡೋಪಹ್ವಾನದವರೆಗೂ ಆತಿಥ್ಯೇಷ್ಟಿಯನ್ನು ಬೇಗಬೇಗನೆ ಮಾಡಿಮುಗಿಸಿದರು ಇದರಿಂದ ಅವರು ಯಜ್ಞದ ಅತಿ ಸಮೀಪಕ್ಕೆ ಬಂದಂತಾಯಿತು. ಈ ವಿಧಾನವನ್ನೇ ಮನುಷ್ಯರೂ ಅನುಸರಿಸುತ್ತಾ ಆತಿಥ್ಯೇಷ್ಟಿಯನ್ನು ಇಳಂತದವರೆಗೂ ಮಾಡಿಮುಗಿಸುವರು.

ತ ಉಪಸದೋಽತನ್ವತ ತಮುಪಸದ್ಭಿರ್ನೇದೀಯೋಽನ್ವಾಗಚ್ಛಂಸ್ತೇ ಕರ್ಮಭಿಃ ಸಮತ್ವರಂತ ತೇ ತಿಸ್ರಃ ಸಾಮಿಧೇನೀರನೂಚ್ಯ ತಿಸ್ರೋ ದೇವತಾ ಅಯಜಂಸ್ತಸ್ಮಾದ್ಧಾಪ್ಯೇತರ್ಹ್ಯುಪಸತ್ಸು ತಿಸ್ರ ಏವ ಸಾಮಿಧೇನೀರನೂಚ್ಯ ತಿಸ್ರೋ ದೇವತಾ ಯಜಂತಿ ತಮನುನ್ಯಾಯಮನ್ವವಾಯನ್ ॥

ಅಥೋಪಸತ್ಸ್ವನುಷ್ಠೇಯಂ ದರ್ಶಯತಿ—ತಿಸ್ರಃ ಸಾಮಿಧೇನ್ಯ ಆಶ್ವಲಾಯನೇನ ದರ್ಶಿತಾಃ—'ಉಪಸದ್ಯಾಯ ಮೀಳ್ಹುಷ ಇತಿ ತಿಸ್ರ ಏಕೈಕಾಂ ತ್ರಿರನವಾನಂ ತಾಃ ಸಾಮಿಧೇನ್ಯ' ಇತಿ ॥ ಅಗ್ನಿಃ ಸೋಮೋ ವಿಷ್ಣುಶ್ಚೇ ತ್ಯೈತಾಸ್ತಿಸ್ರೋ ದೇವತಾಃ । ಸ್ಪಷ್ಟಮನ್ಯತ್ ॥

ಆತಿಥ್ಯೇಷ್ಟಿಯ ಅನಂತರ ಉಪಸತ್ಕರ್ಮವನ್ನು ವಿವರಿಸುವರು. ಅನಂತರ ದೇವತೆಗಳು ಉಪಸದಃ ಎಂಬ ಕರ್ಮವನ್ನು ಮಾಡಿಮುಗಿಸಿ ಇನ್ನೂ ಯಜ್ಞಕ್ಕೆ ಅತಿ ಸಮೀಪಕ್ಕೆ ಬಂದರು ಈ ಕರ್ಮಗಳನ್ನು ಬೇಗಬೇಗನೆ ಮಾಡಿಮುಗಿಸಿದರು. ಉಪಸತ್ತುಗಳು ಮೂರು ಇರುವವು. ಇವುಗಳಿಗೆ ಅಗ್ನಿ, ಸೋಮ, ವಿಷ್ಣು ಎಂಬುವರು ದೇವತೆಗಳು. ಆದ್ದರಿಂದ ಈ ಕರ್ಮದಲ್ಲಿ ಮೂರು ಸಾಮಿಧೇನೀಮಂತ್ರಗಳನ್ನು ಪಠಿಸುವರು. ಆಶ್ವಲಾಯನರು—**ಉಪಸದ್ಯಾಯ ಮೀಳ್ಹುಷ ಇತಿ ತಿಸ್ರ ಏಕೈಕಾಂ ತ್ರಿರನವಾನಂ ತಾಃ ಸಾಮಿಧೇನ್ಯಃ** ಎಂದು ಹೇಳಿರುವರು. ದೇವತೆಗಳು ಅನುಸರಿಸಿದ ಕ್ರಮವನ್ನೇ ಮನುಷ್ಯರು ಈಗಲೂ ಅನುಸರಿಸುತ್ತಿರುವರು.

ತ ಉಪವಸಥಮುತನ್ವತ ತಮುಪವಸಥ್ಯೇಽಹನ್ಯಾಪ್ನುವಂಸ್ತಮಾಪ್ತ್ವಾಽಽನ್ತಂ ಯಜ್ಞಮತನ್ವತಾಪಿ ಪತ್ನೀಃ ಸಮಯಾಜಯಂಸ್ತಸ್ಮಾದ್ವಾಪ್ಯೇತರ್ಹ್ಯುಪವಸಥ ಆಂತಮೇವ ಯಜ್ಞಂ ತನ್ವತೇಽಪಿ ಪತ್ನೀಃ ಸಂಯಾಜಯಂತಿ ॥

ಅಥಾಗ್ನೀಷೋಮೀಯಪಶಾವನುಷ್ಠೇಯಂ ದರ್ಶಯತಿ-ಉಪವಸಥ ಶಬ್ದೇನ ಸೋಮಯಾಗಸಮೀಪವಾಸಿತತ್ವಾತ್ಪೂರ್ವಸ್ಮಿನ್ನಹನ್ಯನುಷ್ಠೇಯೋಽಗ್ನೀಷೋಮೀಯಪಶುರ್ವಿವಕ್ಷಿತಃ ॥ ತಂ ಪಶುಂ ದೇವಾಃ ಉಪವಸಥ್ಯೇಽಹನಿ ಸೋಮಯಾಗದಿನಾತ್ಪೂರ್ವೇದ್ಯುಃ ಪ್ರಾಪ್ನುವನ್ಪ್ರಾಪ್ಯ ಚ ತಂ ಯಜ್ಞಂ ಸಮಾಪ್ತಿಪರ್ಯಂತಮನುಷ್ಠಿತವಂತಃ । ಪತ್ನೀಸಂಯಾಜಾನಪ್ಯನ್ವತಿಷ್ಠನ್। ದೀಕ್ಷಣೀಯೇಷ್ಟಿವತ್ಪತ್ನೀಸಂಯಾಜಾಂತಮೇವ ದ್ರಷ್ಟವ್ಯಂ ॥ ಸ್ಪಷ್ಟಮನ್ಯತ್ ॥

ಅಗ್ನಿಷ್ಟೋಮೀಯ ಪಶುಯಾಗವನ್ನು ವಿವರಿಸುವರು—ಇಲ್ಲಿ ಉಪವಸಥ ಎಂಬ ಶಬ್ದವು ಸೋಮಾಭಿಷವಣಮಾಡುವ ಹಿಂದಿನ ದಿನವನ್ನು ಸೂಚಿಸುವುದು ಮತ್ತು ಆ ದಿನದಲ್ಲಿ ಅಗ್ನೀಷೋಮೀಯ ಪಶುಯಾಗವನ್ನೂ ಅನುಷ್ಠಾನಮಾಡುವರು. ಈ ಉಪವಸಥ ಎಂಬ ದಿನದಲ್ಲಿ ದೇವತೆಗಳು ಅಗ್ನೀಷೋಮೀಯ ಸಂಬಂಧವಾದ ಪಶುಹೋಮವನ್ನು ಕೊನೆಯವರೆಗೂ ಮಾಡಿ ಮುಗಿಸಿದರು, ಅನಂತರ ಯಜ್ಞಸಮಾಪ್ತಿಯವರೆಗೂ ಮಾಡಬೇಕಾದ ಎಂದರೆ ದೀಕ್ಷಣೀಯೇಷ್ಟಿಯಿಂದ ಪತ್ನೀಸಂಯಾಜದವರೆಗೂ, ಮಾಡಬೇಕಾದ ಕಾರ್ಯಕಲಾಪಗಳೆಲ್ಲವನ್ನೂ ಮಾಡಿ ಮುಗಿಸಿದರು.

ತಸ್ಮಾದೇತೇಷು ಪೂರ್ವೇಷು ಕರ್ಮಸು ಶನೈಸ್ತರಾಂ ಶನೈಸ್ತರಾಮಿವಾನುಬ್ರೂಯಾತ್ ॥

ಉಕ್ತಾಸ್ವಿಷ್ಟಿಷು ಹೋತುರನುವಚನಸ್ಯ ಮಂದ್ರಸ್ವರಂ ವಿಧತ್ತೇ ಯಸ್ಮಾದಗ್ನೀಷೋಮೀಯಾತ್ಪೂರ್ವಭಾವಿತ್ವೇನೋಪಕ್ರಮರೂಪಾ ದೀಕ್ಷಣೀಯಾದ್ಯುಪಸದಂತೇಷು ಕರ್ಮಸು ಶನೈಸ್ತರಾಮಿವಾತ್ಯಂತನೀಚಸ್ವರೇಣೈವ ಹೋತಾಽನುಬ್ರೂಯಾತ್ ।

ಇದುವರೆಗೂ ದೇವತೆಗಳು ಯಜ್ಞಾನ್ವೇಷಣೆಯಲ್ಲಿ ತೊಡಗಿದ್ದರಿಂದ ಘಟ್ಟಿಯಾಗಿ ಶಬ್ದಮಾಡಿವರೆ ಅನ್ವೇಷಣ (ಹುಡುಕುವುದು) ಕಾರ್ಯಕ್ಕೆ ತೊಂದರೆಯಾಗುವುದೆಂದು ಭಾವಿಸಿ ಇದುವರೆಗೂ ಮಾಡಿದ ಎಂದರೆ ಉಪಕ್ರಮವಾದ ದೀಕ್ಷಣೀಯೇಷ್ಟಿಯಿಂದ ಹಿಡಿದು ಪತ್ನೀಸಂಯಾಜದವರೆಗೂ ಆಚರಿಸಿದ ಕಾರ್ಯಕಲಾಪಗಳೆಲ್ಲವನ್ನೂ ಮಂತ್ರಗಳೆಲ್ಲವನ್ನೂ ಮೆತ್ತನೆಯ ಸ್ವರ) ದಿಂದಲೇ ಪಠಿಸಬೇಕು.

**ಅನೂತ್ಸಾರಮಿವ ಹಿ ತೇ ತನೂಾಯಂಸ್ತಸ್ಮಾದುಪವಸಥೇ ಯಾವತ್ಯಾ ವಾಚಾ ಕಾಮಯೀತ ತಾವತ್ಯಾಽನುಬ್ರೂಯಾದಾಪ್ತೋ ಹಿ ಸ ತರ್ಹಿ ಭವತೀತಿ ॥**

ಅಗ್ನೀಷೋಮೀಯಪಶೌ ಹೋತುರನುವಚನೇ ಧ್ವನೇರಿಳಾ(ಡಾ)ನುಸಾರಿತ್ವಂ ವಿಧತ್ತೇ-ಅನೂತ್ಸಾರಮುತ್ತರೋತ್ತರಭಾವೀ ಸಾರ ಉತ್ಸಾರಃ ತಮನುಸೃತ್ಯಾನುಸೃತ್ಯೇತಿ ತಸ್ಯಾರ್ಥಃ ॥ ದೀಕ್ಷಣೀಯೇಷ್ಟೇಃ ಸಾರಭೂತಾ ಪ್ರಾಯಣೀಯೇಷ್ಟಿಃ । ತದಪೇಕ್ಷಯಾ ಸೋಮಯಾಗಸ್ಯ ಸಮೀಪವರ್ತಿತ್ವಾತ್ । ಏವಮಾತಿಥ್ಯಾದಿಷು ದ್ರಷ್ಟವ್ಯಂ । ಈದೃಶಮುತ್ತರೋತ್ತರಸಾರಮನುಸೃತ್ಯ ತೇದೇವಾಸ್ತಂ ಸೋಮಯಾಗಮಾಯನ್ ಪ್ರಾಪ್ತವಂತಃ ॥ ತಸ್ಮಾದತ್ಯಂತಸಾರ ಉಪವಸಥೇಽಗ್ನೀಷೋಮೀಯಪಶೌ ಹೋತಾ ಯಾವತ್ಯಾ ವಾಚಾ ಕಾಮಯೀತ ಯಾವಂತಮುಚ್ಚಧ್ವನಿಮಿಚ್ಛೇತ್ತಾವತಾ ಧ್ವನಿನಾಽನುವಚನಂ ಕುರ್ಯಾತ್ । ತರ್ಹಿ ತಸ್ಮಿನ್ನಗ್ನೀಷೋಮೀಯಪಶುಕಾಲೇ ಸ ಸೋಮಯಾಗಃ ಪ್ರಾಪ್ತೋ ಭವತೀತಿ ಹೋತುರಭಿಪ್ರಾಯಃ ಲೋಕೇಽಪ್ಯಭೀಷ್ಟೇ ವಸ್ತುನಿ ಬಂಧೌ ವಾ ಚಿರಕಾಲೇನ ಪ್ರಾಪ್ತೇ ಜಾತೇ ಹರ್ಷದ್ಯೋತನಾಯೋಚ್ಚಧ್ವನಿನಾ ಗಾನಂ ಕುರ್ವಂತಿ ತದ್ವದತ್ರಾಪಿ ದ್ರಷ್ಟವ್ಯಂ ॥

ಮೇಲೆ ಹೇಳಿದ ದೀಕ್ಷಣೀಯಾದಿಗಳಲ್ಲಿ ಒಂದಕ್ಕಿಂತ ಅದರ ಮುಂದಿನದು ಹೆಚ್ಚು ಸಾರಭೂತವಾಗಿರುವುದು ಎಂದರೆ ಒಂದೊಂದನ್ನು ಮಾಡಿ ದೇವತೆಗಳು ಯಜ್ಞಕ್ಕೆ ಹೆಚ್ಚು ಹೆಚ್ಚು ಸಮೀಪಕ್ಕೆ ಹೋಗುವಂತಾಯಿತು. ಆದ್ದರಿಂದ ದೀಕ್ಷಣೀಯೇಷ್ಟಿಗಿಂತ ಪ್ರಾಯಣೀಯೇಷ್ಟಿಯು ಹೆಚ್ಚು ಸಾರಭೂತವಾದುದು ಇತ್ಯಾದಿ. ಏಕೆಂದರೆ ಒಂದೊಂದು ಕರ್ಮವೂ ದೇವತೆಗಳನ್ನು ಯಜ್ಞದ ಸಮೀಪಕ್ಕೆ, ಹೆಚ್ಚು ಹೆಚ್ಚು ಸಮೀಪಕ್ಕೆ ಕೊಂಡುಯ್ಯುವುದು. ಈ ಕಾರ್ಯಗಳಲ್ಲೆಲ್ಲಾ ಮಾಡುವ ಮಂತ್ರಪಠನಾದಿಗಳನ್ನೂ ಕಾರ್ಯಕಲಾಪಗಳನ್ನೂ ಮೆತ್ತನೆಯ ಧ್ವನಿಯಿಂದ ಮಾಡುವರು. ಅಗ್ನೀಷೋಮೀಯಪಶುಕಾಲದಲ್ಲಿ ಯಜ್ಞಸಮಾಪ್ತಿಯ ಕಾಲವು ಸನ್ನಿಹಿತವಾಗಿರುವುದರಿಂದ ಅಗಲೂ ಅಲ್ಲಿಂದ ಯಜ್ಞಸಮಾಪ್ತಿಯ ವರೆಗೂ ಮಂತ್ರಾದಿಗಳನ್ನು ಮೆತ್ತನೆಯ ಧ್ವನಿಯಿಂದ ಹೇಳಬೇಕಾದ ಅವಶ್ಯಕತೆ ಇಲ್ಲದಿರುವುದರಿಂದ ಶಸ್ತ್ರಮಂತ್ರಗಳನ್ನೂ ಸಾಮಗಾನವನ್ನೂ ಋತ್ವಿಜರು ಉಚ್ಚಸ್ವರದಿಂದಲೇ (ಘಟ್ಟಿಯಾದ ಧ್ವನಿಯಿಂದಲೇ) ಮಾಡುವರು. ಲೋಕವ್ಯವಹಾರದಲ್ಲಿಯೂ ಚಿರಕಾಲದಿಂದ ನೋಡಿರದಿದ್ದ ಬಂಧುಗಳು ಬಂದಾಗಲೂ ತಮಗೆ ಇಷ್ಟವಾದ ವಸ್ತುವು ಲಭಿಸಿದಾಗಲೂ ಜನರು ಹರ್ಷೋದ್ರೇಕದಿಂದ ಘಟ್ಟಿಯಾಗಿ ಮಾತನಾಡುವುದೂ ಗಾನಮಾಡುವುದೂ ರೂಢಿಯು. ಇಲ್ಲಿಯೂ ಹಾಗೆಂದು ತಿಳಿಯಬೇಕು.

**ತನೂಾಪ್ತ್ಯಾ ಬ್ರುವರಸ್ತಿಷ್ಠಸ್ವ ನೋಽನ್ನಾದ್ಯಾಯೇತಿ ಸ ನೇತ್ಯಬ್ರವೀತ್ಕಥಂ ವಸ್ತಿಷ್ಠೇಯೇತಿ ತಾನೀಕ್ಷತ್ಯೈವ ತನುಬ್ರುವನ್ಬ್ರಾಹ್ಮಣೇನ ಚ**

**ನಶ್ಛಂದೋಭಿಶ್ಚ ಸಯುಗ್ಭೂತ್ವಾಽನ್ನಾದ್ಯಾಯ ತಿಷ್ಠಸ್ವೇತಿ ತಥೇತಿ ತಸ್ಮಾದ್ಧಾಪ್ಯೇತರ್ಹಿ ಯಜ್ಞಃ ಸಯುಗ್ಭೂತ್ವಾ ದೇವೇಭ್ಯೋ ಹವ್ಯಂ ವಹತಿ ಬ್ರಾಹ್ಮಣೇನ ಚ ಛಂದೋಭಿಶ್ಚ ॥**

ದೇವಾನಾಂ ಯಜ್ಞಪ್ರಾಪ್ತ್ಯುಪಾಯಮಭಿಧಾಯಾನ್ನಾದ್ಯಪ್ರಾಪ್ತ್ಯುಪಾಯಂ ದರ್ಶಯತಿ—ತೇ ದೇವಾಸ್ತಂ ಜ್ಯೋತಿಷ್ಟೋಮ ಯಜ್ಞಂ ಪ್ರಾಪ್ಯೇದಮಬ್ರುವನ್ । ಹೇ ಯಜ್ಞ ನೋಽಸ್ಮಾಕಮನ್ನಾದ್ಯಸಿಧ್ಯರ್ಥಂ ತಿಷ್ಠಸ್ವ ಸ್ಥಿತಿಂ ಕುರ್ವಿತಿ ॥ ಸ ಯಜ್ಞಸ್ತದ್ವಾಕ್ಯಂ ನಿರಾಕರೋತ್ ॥ ಅನ್ನಾದ್ಯನಿಷ್ಪಾದಕಂ ಸಾಧನಮಂತರೇಣ ವೋ ಯುಷ್ಮದರ್ಥಂ ಕಥಂ ಸ್ಥಿತಃ ಸ್ಯಾಮಿತಿ ಸ್ವಾಭಿಪ್ರಾಯಮಬ್ರವೀತ್ । ತೇಷ್ವನುಗ್ರಹದ್ಯೋತನಾಯ ತಾನ್ದೇವಾನೀಕ್ಷತ್ಯೈವ ಪಶ್ಯನ್ನೇವಾಽಽಸ್ತ ನ ತೂಪೇಕ್ಷಾಂ ಕೃತವಾನ್ ॥ ತತೋ ದೇವಾ ಯಜ್ಞಸ್ಯಾಭಿಪ್ರಾಯಂ ಜ್ಞಾತ್ವಾ ತೇ ದೇವಾಸ್ತಂ ಯಜ್ಞಮಿದಮಬ್ರುವನ್ ॥ ಹೇ ಯಜ್ಞ ನೋಽಸ್ಮದರ್ಥಂ ತ್ವಂ ಸಾಧನೇನ ಋತ್ವಿಗ್ಯಜಮಾನರೂಪೇಣ ಬ್ರಾಹ್ಮಣೇನ ತತ್ತನ್ಮಂತ್ರಗತೈಶ್ಛಂದೋಭಿಶ್ಚ ಸಯುಗ್ಭೂತ್ವಾ ಸಹಾವಸ್ಥಿತೋ ಭೂತ್ವಾ ಪಶ್ಚಾದನ್ನಾದ್ಯಾಯ ತಿಷ್ಠಸ್ವಾಂಗೀ ಕುರ್ವಿತಿ । ತಥಾ ಯಜ್ಞೋಽಪ್ಯಂಗೀ ಚಕಾರ । ಯಸ್ಮಾದೇವಂ ತಸ್ಮಾದಿದಾನೀಮಪಿ ಯಜ್ಞೋ ಬ್ರಾಹ್ಮಣಮಂತ್ರಸಹಿತೋ ಭೂತ್ವಾ ದೇವೇಭ್ಯೋಽನ್ನಾದ್ಯರೂಪಂ ಹವಿರ್ವಹತಿ ॥

ದೇವತೆಗಳು ಈ ವಿಧವಾಗಿ ಯಜ್ಞವನ್ನು ಹಿಂದಕ್ಕೆ ಪಡೆದರು. ಈಗ ಅನ್ನಾದ್ಯವನ್ನು ಯಜ್ಞವು ಆಶ್ರಯವನ್ನು ಪಡೆದಿದ್ದ ಪುಷ್ಟಿಯುತವಾದ ಆಹಾರಾದಿಗಳನ್ನು ಪುನಃ ಹೇಗೆ ಪಡೆದರೆಂಬ ವಿಚಾರವನ್ನು ತಿಳಿಸುವರು—ದೇವತೆಗಳೆಲ್ಲರೂ ಮೇಲೆ ಹೇಳಿದಂತೆ ಜ್ಯೋತಿಷ್ಟೋಮಯಜ್ಞವನ್ನು ಹಿಂದಕ್ಕೆ ಪಡೆದ ನಂತರ ತಮ್ಮತಮ್ಮಲ್ಲಿ ಈ ರೀತಿ ಹೇಳಿಕೊಂಡರು ಮತ್ತು ಯಜ್ಞವನ್ನು (ಯಜ್ಞಾಭಿಮಾನಿಪುರುಷನನ್ನು) ಕುರಿತು—ಎಲೈ ಯಜ್ಞವೇ ನಮಗೆ ಅನ್ನಾದ್ಯಾಹಾರಗಳು ಸಿದ್ಧಿಸುವುದಕ್ಕಾಗಿ ನೀನು ನಮ್ಮಲ್ಲಿ ಸ್ಥಿರವಾಗಿ ನೆಲೆಸಿರು ಎಂದು ಹೇಳಿದರು. ಆದರೆ ಯಜ್ಞವು ಆ ದೇವತೆಗಳ ಮಾತನ್ನು ದಿರಾಕರಿಸಿತು (ಒಪ್ಪಲಿಲ್ಲ). ನಿಮಗೆ ಆಹಾರವನ್ನು ಒದಗಿಸುವುದಕ್ಕಾಗಿ ನಾನು ನಿಮ್ಮಲ್ಲಿ ಏಕೆ ನಿಲ್ಲಬೇಕು ಎಂದು ಅವರ ಮಾತನ್ನು ನಿರಾಕರಿಸಿತು. ಮತ್ತು ಆ ದೇವತೆಗಳನ್ನು ಕನಿಕರದಿಂದ ನೋಡುತ್ತಾ ಸುಮ್ಮನೆ ನಿಂತಿದ್ದಿತು. ಯಜ್ಞದ ಅಭಿಪ್ರಾಯವನ್ನು ತಿಳಿದ ದೇವತೆಗಳು ಮತ್ತೆ ಯಜ್ಞವನ್ನು ಕುರಿತು— ಎಲೈ ಯಜ್ಞವೇ, ನಮಗಾಗಿ ನೀನು ಋತ್ವಿಗ್ಯಜಮಾನರೂಪನಾದ ಬ್ರಾಹ್ಮಣನಿಂದಲೂ, ತಕ್ಕ ಯಜ್ಞಸಾಧನಗಳಿಂದಲೂ ನಾನಾ ಮಂತ್ರಗಳು ಮತ್ತು ಅವುಗಳ ಛಂದಸ್ಸುಗಳಿಂದಲೂ ಕೂಡಿ ಚೆನ್ನಾಗಿ ನೆರವೇರಿಲ್ಪಟ್ಟ ಯಜ್ಞಪುರುಷನಾದ ನೀನು ನಮಗೆ (ದೇವತೆಗಳಿಗೆ) ಅನ್ನಾದ್ಯಾಹಾರವನ್ನು ಒದಗಿಸಿಕೊಡುವುದಕ್ಕಾಗಿ ಸ್ಥಿರವಾಗಿ ನೆಲಸಿರು ಎಂದು ದೇವತೆಗಳು ಪ್ರಾರ್ಥಿಸಲು ಯಜ್ಞಪುರುಷನು ಹಾಗೆಯೇ ಆಗಲೆಂದೊಪ್ಪಿ ಅವರ ಮಾತನ್ನಂಗೀಕರಿಸಿದನು. ಆದ್ದರಿಂದ ಈಗಲೂ ಕೂಡ ಋತ್ವಿಗಾದಿ ಬ್ರಾಹ್ಮಣರಿಂದಲೂ ಮಂತ್ರಪೂರ್ವಕವಾಗಿಯೂ ನೆರವೇರಿಸಲ್ಪಟ್ಟ ಯಜ್ಞವು (ಯಜ್ಞಪುರುಷನು) ದೇವತೆಗಳಿಗೆ ಅನ್ನಾದ್ಯರೂಪವಾದ ಹವಿಸ್ಸನ್ನು ವಹಿಸುವನು. ಎಂದರೆ ವಿಧಿವತ್ತಾಗಿಯೂ ಬ್ರಾಹ್ಮಣರಿಂದ ಮಂತ್ರ ಮತ್ತು ಛಂದಸ್ಸುಗಳಿಂದಲೂ ನೆರವೇರಿಸಲ್ಪಟ್ಟ ಯಜ್ಞದಿಂದ ದೇವತೆಗಳು ಸುಪ್ರೀತರಾಗುವರು ಎಂದಭಿಪ್ರಾಯವು.



## *English Translation*

(On the gradual recovery of the sacrifice· What men are unfit to officiate as sacrificial priests· The offerins to the Devis and Devikas· The Ukthya sacrifice·)

**(How the gods recovered the sacrifice which had gone from them. How they performed different rites. Under what conditions the sacrifice is effectual.)**

The sacrifice once left the gods and went to nourishing substances. The gods said, " the sacrifice has gone from us to nourishing substances, let us seek both the sacrifice and the nourishment by means of a Brahmana and the metres." So they did. They initiated a Brahmana by means of the metres. They performed all the rites of the Dikshaniya Ishti up to the end, including even the Patni-samyajas. On account of the gods having at that occasion performed all the rites at the Dikshaniya Ishti up to the end, including even the Patni-samyajas, men followed afterwards the same practice. The gods in their search for the sacrifice came very near it by means of the Prayaniya Ishti. They performed the ceremonies with great haste aud finished the Ishti already with the Samyuvaka· This is the reason that the Prayaniya Ishti ends with Samyuvaka; for men followed afterwards this practice.

The gods performed the rites of the Atithya Ishti, aud came by means of it very near the sacrifice. They concluded hastily the ceremonies with the Ila (the eating of the sacrificial food). This is the reason that the Atithya Ishti is finished with the Ila; for men followed afterwards this practice.

The gods performed the rites of the Upasads and came by means of them very near the sacrifice. They performed hastily the ceremonies, repeating only three Samidheni verses, and the Yajyas for three deities· This is the reason that at the Upasad Ishti only three Samidhenis are repeated, and Yajya verses to three deities; for men followed afterwards this practice.

The gods performed the rites of the upavasatha (the eve of the Soma festival). On the upavasatha day they reached the sacrifice. After having reached the sacrifice (Yajna), they performed all, its rites severally, even including the Patni-samyajas. This is the reason that they perform at the day previous to the Soma festival all rites to the end, even including the Patni-Samyajas.

This is the reason that the Hotar should repeat the mantras at all ceremonies preceding the Upavasatha day at which the animal sacrifice is offered with a very slow voice. For the gods came at it (the sacrifice) by performing

the several rites in such a manner as if they were searching (after something, i.e. slowly) This is the reason that the Hotar may repeat on the Upavasatha day after having reached the sacrifice the mantras in whatever tone he might like to recite them. For at that occasion the sacrifice is already reached (and the "searching" tone of repeating not required).

The gods, after having reached the sacrifice, said to him, "stand still to be our food." He answered "No, How should I stand still for you to be your food?" He then only looked at them. They said to him, "Because of thy having become united with a Brahmana and the metres, thou shall stand still." He consented.

That is the reason that the sacrifice only when joined to a Brahmana and metres carries the oblations to the gods.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಪಂಚದಶಾಧ್ಯಾಯಸ್ಯ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನೈದನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು
ಸಮಾಪ್ತವಾದುದು.



## ಅಥ ಪಂಚದಶಾಧ್ಯಾಯೇ ದ್ವಿತೀಯಃ ಖಂಡಃ

### ಹದಿನೈದನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ಯಜ್ಞದಲ್ಲಿ ಪಾತ್ರವಹಿಸಿ ಯಜ್ಞವನ್ನು ನಿರ್ವಹಿಸಬೇಕಾದ ಋತ್ವಿಗಾದಿಗಳನ್ನು ಆರಿಸುವುದರಲ್ಲಿ ಉಂಟಾಗಬಹುದಾದ ತೊಂದರೆಗಳು ಮತ್ತು ಅವುಗಳನ್ನು ಹೇಗೆ ನಿವಾರಿಸಬಹುದೆಂಬ ವಿಷಯ ಇತ್ಯಾದಿ]

ತ್ರೀಣಿ ಹ ವೈ ಯಜ್ಞೇ ಕ್ರಿಯಂತೇ ಜಗ್ಧಂ ಜೀರ್ಣಂ ವಾಂತಂ ।

ದೀಕ್ಷಣೀಯಾದಿಷ್ವಗ್ನೀಷೋಮೀಯಾಂತೇಷು ಹೋತುರ್ಧರ್ಮವಿಶೇಷಂ ವಿಧಾಯಾಂತೇ ಬ್ರಾಹ್ಮಣೇನರ್ತ್ವಿಜಾ ಯಜ್ಞನಿಷ್ಪತ್ತಿರಿತ್ಯುಕ್ತಂ ತತ್ರ ವರ್ಜ್ಯ ಬ್ರಾಹ್ಮಣವಿಶೇಷಂ ದರ್ಶಯಿತುಂ ಸ್ತೌತಿ—

ಜಗ್ಧಂ ಭಕ್ಷಿತಾವಶಿಷ್ಟಂ ಭೋಜನಪಾತ್ರೇ ಸ್ಥಿತಂ । ಗೀರ್ಣಮುದರೇ ಪ್ರವಿಷ್ಟಂ । ವಾಂತಂ ಸಕೃದುದರೇ ಪ್ರವಿಶ್ಯ ಪುನರ್ನಿರ್ಗತಂ । ತಾನ್ಯೇತಾನಿ ತ್ರೀಣಿ ದುರ್ಬುದ್ಧಿಭಿರ್ಯಜ್ಞೇ ಕ್ರಿಯಂತೇ । ಜಗ್ಧಾದಿಸ್ಥಾನೀಯಾನಿ ತ್ರೀಣಿ ವರ್ಜ್ಯಾನೀತ್ಯರ್ಥಃ ॥

ದೀಕ್ಷಣೀಯೇಷ್ಟಿ ಮೊದಲುಗೊಂಡು ಅಗ್ನೀಷೋಮೀಯ ಪಶುವಿನವರೆಗೆ ಹೋತೃವು ಮಂತ್ರಗಳನ್ನು ಯಾವ ಧ್ವನಿಯಲ್ಲಿ ಪಠಿಸಬೇಕೆಂಬ ವಿಚಾರವನ್ನು ವಿವರಿಸಿ ಈಗ ಯಜ್ಞಗಳಲ್ಲಿ ಋತ್ವಿಕ್ಪಾತ್ರಗಳನ್ನು ನಿರ್ವಹಿಸುವ ಎಂದರೆ ಪೌರೋಹಿತ್ಯವನ್ನು ಮಾಡುವ ವಿಷಯದಲ್ಲಿ ಎಂತಹ ಬ್ರಾಹ್ಮಣರನ್ನು ಆರಿಸಬೇಕು ಎಂತಹವರನ್ನು ಬಿಡಬೇಕು ಎಂಬ ವಿಚಾರವನ್ನು ಹೇಳುವರು. ಆಹಾರವನ್ನು ಭಕ್ಷಿಸುವ ವಿಷಯದಲ್ಲಿ ಮುಂದೆ ಹೇಳುವವರನ್ನು ಬಿಡಬೇಕು **ಜಗ್ಧಂ**—ಆಹಾರ (ಅನ್ನ)ವನ್ನು ಭಕ್ಷಿಸುವಾಗ ಕೆಲವು ಭಾಗವನ್ನು ತಿಂದು ಮುಂದೆ ತಿನ್ನಲಾರದೆ ಉಳಿದದ್ದನ್ನೆಲ್ಲಾ (ಎಂಜಲನ್ನೆಲ್ಲಾ) ಚೆಲ್ಲುವ ಸ್ವಭಾವವುಳ್ಳ ಬ್ರಾಹ್ಮಣನು ಋತ್ವಿಜನಾಗಿರಲು ಅನರ್ಹನು; **ಗೀರ್ಣಂ** ಮನಸ್ಸುಬಂದಂತೆ ಅತಿ ಹೆಚ್ಚಾಗಿ ತಿನ್ನುವವನೂ ಅನರ್ಹನು; **ವಾಂತಂ**— ಒಂದಾವರ್ತಿ ತಿಂದ ಆಹಾರವನ್ನು ವಾಂತಿಮಾಡಿಕೊಳ್ಳುವವನೂ ಅನರ್ಹನು, ಈ ಮೂರುವಿಧವಾದ ಬ್ರಾಹ್ಮಣರೂ ಯಜ್ಞದಲ್ಲಿ ಪೌರೋಹಿತ್ಯವನ್ನು ಮಾಡಲು ಅನರ್ಹರು. ಇವರನ್ನು ಯಜ್ಞಥಲ್ಲಿ ಪಾತ್ರವಹಿಸುವಂತೆ ನಿಯೋಜಿಸಬಾರದು. ಇಂತಹ ಪುರುಷರನ್ನು ಬಿಟ್ಟು ಬೇರೆಯವರನ್ನು ಆರಿಸಬೇಕು.

**ತದ್ಧೈತದೇವ ಜಗ್ಧಂ ಯದಾಶಂಸಮಾನಮಾರ್ತ್ವಿಜ್ಯಂ ಕಾರಯತ ಉತ ವಾ ಮೇ ದದ್ಯಾದುತ ವಾ ಮಾ ವೃಣೀತೇತಿ ತದ್ಧ ತತ್ಪರಾಚೇವ ಯಥಾ ಜಗ್ಧಂ ನ ಹೈವ ತದ್ಯಜಮಾನಂ ಭುನಕ್ತಿ ॥**

**ತತ್ರ ಜಗ್ಧಸ್ಥಾನೀಯಂ ದರ್ಶಯಿತ್ವಾ ನಿಷೇಧತಿ—ಕಶ್ಚಿದ್ಬ್ರಾಹ್ಮಣ ಆರ್ತ್ವಿಜ್ಯಮಾಶಂಸತೇ ಕಾಮಯತೇ । ಕೇನಾಭಿಪ್ರಾಯೇಣೇತೀ ತದುಚ್ಯತೇ ॥ ಆರ್ತ್ವಿಜ್ಯಾರ್ಥಂ ಯಜ್ಞಶಾಲಾಂ ಮಯಿ ಗತೇ ಸತಿ ಯಜಮಾನೋ ಮೇ ಮಹ್ಯಮುತ ವಾ ದದ್ಯಾತ್ಕಿಂಚಿದ್ಧನಂ ವಾ ಪ್ರಯಚ್ಛೇದುತ ವಾ ಮಾಮ್ವೃಣೀತ ಪ್ರಯೋಗಾಭಿಜ್ಞಂ ಮಾ ದೃಷ್ಟ್ವಾ ತ್ವಮಾರ್ತ್ವಿಜ್ಯಂ ಕುರ್ವಿತಿ ವೃಣೀತೇ-ತ್ಯೇವಂ ಧನಾರ್ಜನಲಂಪಟಃ ಸನ್ನನುಷ್ಠಾನತಾತ್ಪರ್ಯರಹಿತೋ ನಿರಂತರಮಾರ್ತ್ವಿಜ್ಯಂ ಕಾಮಯತೇ ॥ ತಾದೃಶಂ ಕಾಮಯಮಾನಂ ಪುರುಷಂ ಯಜಮಾನ ಆರ್ತ್ವಿಜ್ಯಂ ಕಾರ-ಯತ ಇತಿ ಯದಸ್ತಿ ತದೇವ ಜಗ್ಧಂ । ಯಥಾ ಲೋಕೇ ಜಗ್ಧಂ ಪಾತ್ರಸ್ಥಿತಂ ಭಕ್ಷಿತಾವಶಿಷ್ಟ-ಮುಚ್ಛಿಷ್ಟತ್ವಾದಿತರೈರಸ್ಪೃಶ್ಯಂ ತದ್ಧ ತಸ್ಮಿನ್ನೇವ ಯಾಗೇ ತಲ್ಲಂಪಟಸ್ಯಾರ್ತ್ವಿಜ್ಯಂ ಪರಾಚೀವ ನಿಕೃಷ್ಟಮೇವ । ತತ್ತಾದೃಶಮಾರ್ತ್ವಿಜ್ಯಂ ಯಜಮಾನಂ ನ ಭುನಕ್ತಿ ನ ಪಾಲಯತಿ ಯಜ್ಞೋ ವಿಕಲೋ ಭವತೀತ್ಯರ್ಥಃ ।**

ಹಿಂದೆ ಹೇಳಿದ ಮೂರು ವಿಧವಾದ ವರ್ಜ್ಯರಾದ ಪುರುಷರಲ್ಲಿ ಜಗ್ಧ ಎಂಬುವರನ್ನು ವಿವರಿಸುತ್ತಾರೆ—ಈಗ ಒಂದು ಉದಾಹರಣೆಯನ್ನು ಹೇಳುತ್ತೇವೆ. ಒಬ್ಬ ಬ್ರಾಹ್ಮಣನು ಯಜ್ಞದಲ್ಲಿ ಆರ್ತ್ವಿಜ್ಯ (ಪೌರೋಹಿತ್ಯ)ವನ್ನು ಮಾಡಬೇಕೆಂದು ಬಯಸುತ್ತಾನೆ ಏಕೆಂದರೆ ಅವನು ಮನಸ್ಸಿನಲ್ಲಿ ಇಂತು ಯೋಚಿಸುವನು. ಆರ್ತ್ವಿಜ್ಯವನ್ನು ಮಾಡುವುದಕ್ಕಾಗಿ ನಾನು ಯಜ್ಞಶಾಲೆಗೆ ಹೋಗುವೆನು. ಆಗ ಯಜ್ಞಮಾಡುವ ಯಜಮಾನನು ನನಗೆ ಏನಾದರೂ ದ್ರವ್ಯವನ್ನು ಕೊಟ್ಟುಕಳುಹಿಸುವನ್ನು ಪ್ರಯೋಗಕುಶಲನಾದ ನನ್ನನ್ನು ನೋಡಿ ಎಲೈ ಬ್ರಾಹ್ಮಣನೇ ನೀನು ನಾನು ಮಾಡುವ ಈ ಯಜ್ಞದಲ್ಲಿ ಆರ್ತ್ವಿಜ್ಯವನು.

ಮಾಡು ಎಂದು ಹೇಳುವನು. ಅದರಿಂದ ನನಗೆ ಯಥೇಚ್ಛವಾಗಿ ಧನವು ಲಭಿಸುವುದು ಎಂದು ದ್ರವ್ಯಾಶೆಯಿಂದ ಕೂಡಿದವನಾಗಿರುವನು. ಯಜ್ಞವನ್ನು ಶ್ರದ್ಧೆಯಿಂದ ಮಾಡಿಸಬೇಕೆಂಬ ಅಪೇಕ್ಷೆಯೇನೂ ಇವನಿಗಿರುವುದಿಲ್ಲ. ಧನದಮೇಲೆ ಮಾತ್ರ ಆಶೆ ಇರುವುದು. ಇಂತಹ ದುರಾಶೆಯಿಂದ ಕೂಡಿದ ಪುರುಷನಿಗೆ **ಜಗ್ಧಂ** ಎಂದು ಹೆಸರು.

**ಅಥಹೈತದೇವ ಗೀರ್ಣಂ ಯದ್ಬಿಭ್ಯದಾರ್ತ್ವಿಜ್ಯಂ ಕಾರಯತ ಉತ ವಾ ಮಾ ನ ಬಾಧೇತೋತ ವಾ ಮೇ ನ ಯಜ್ಞವೇಶಸಂ ಕುರ್ಯಾದಿತಿ ತದ್ಧ ತತ್ಪರಾಜೀವ ಯಥಾ ಗೀರ್ಣಂ ನ ಹೈವ ತದ್ಯಜಮಾನಂ ಭುನಕ್ತಿ ॥**

ಗೀರ್ಣಮುದಾಹೃತ್ಯ ನಿಷೇಧತಿ—ಯಜಮಾನೋ ಯಸ್ಮಿನ್ಗ್ರಾಮೇ ಯಜತೇ ತತ್ರ ಕಶ್ಚಿದ್ಬ್ರಾಹ್ಮಣೋ ಗ್ರಾಮಣೀಃ ಪ್ರಭುರ್ಭೂತ್ವಾ ಪ್ರಯೋಗಕೌಶಲರಹಿತೋಽವತಿಷ್ಠತೇ । ತೇನಾರ್ತ್ವಿಜ್ಯಂ ವರ್ಜಯಿತುಮಯಂ ಯಜಮಾನೋ ಬಿಭೇತಿ । ಕೇನಾಭಿಪ್ರಾಯೇಣೇತಿ ತದುಚ್ಯತೇ ॥ ಅಯಮತ್ರ ಪ್ರಭುರ್ಮಯಿ ದ್ವೇಷಂ ಕೃತ್ವಾ ಕಾಲಾಂತರೇ ಮಾಂ ಬಾಧೇತ । ಅಥವೇದಾನೀಮೇವ ಯಜ್ಞವೇಶಸಂ ಯಜ್ಞವಿಘಾತಂ ಕುರ್ಯಾತ್ ॥ ತದುಭಯಂ ಮಾ ಭೂದಿತ್ಯನೇನಾಭಿಪ್ರಾಯೇಣ ತಸ್ಮಾದ್ಭೀತಿಂ ಪ್ರಾಪ್ನುವನ್ನಾರ್ತ್ವಿಜ್ಯಂ ತೇನ ಪ್ರಭುಣಾ ಕಾರಯತ ಇತಿ ಯದಸ್ತಿ ತದೇತದ್ಗೀರ್ಣಂ ॥ ಯಥಾ ಲೋಕೇ ಗೀರ್ಣಮುದರಸ್ಥಂ ಪುನರ್ಭೋಗಯೋಗ್ಯಂ ನ ಭವತಿ ತಥಾ ತದ್ಧ ತಸ್ಮಿನ್ಭಾಗೇ ತದ್ಭೀತಿಮಾತ್ರ ಪ್ರಯುಕ್ತಮಾರ್ತ್ವಿಜ್ಯಂ ಪರಾಜೀವ ನಿಕೃಷ್ಟಮೇವ । ತತ್ತಾದೃಶಂ ಪ್ರಯೋಗಕೌಶಲರಹಿತೇನ ಪ್ರಭುನಾ ಕೃತಮಾರ್ತ್ವಿಜ್ಯಂ ಯಜಮಾನಂ ನ ಪಾಲಯತಿ ॥

ಈಗ ಗೀರ್ಣ ಎಂಬ ಪುರುಷನ ವಿಷಯವನ್ನು ವಿವರಿಸುತ್ತಾರೆ—ಇದಕ್ಕೆ ಒಂದು ಉದಾಹರಣೆಯನ್ನು ಕೊಡುತ್ತಾರೆ. ಯಜ್ಞಮಾಡುವ ಯಜಮಾನನು ಇರುವ ಗ್ರಾಮದಲ್ಲಿ ಒಬ್ಬಾನೊಬ್ಬ ಬ್ರಾಹ್ಮಣನಿರುತ್ತಾನೆ. ಆ ಬ್ರಾಹ್ಮಣನಿಗೆ ಅಧ್ಯಯನ, ಯಜ್ಞಮಾಡಿಸುವುದರಲ್ಲಿ ಕುಶಲತೆ, ಅನುಭವ ಮುಂತಾದವುಗಳಿರುವುದಿಲ್ಲ. ಆದರೆ ಅವನು ಆ ಗ್ರಾಮದಲ್ಲಿ ತನ್ನ ಧನ ಬಲ ಮುಂತಾದವುಗಳಿಂದ ವಿಶೇಷವಾಗಿ ಗಣ್ಯತೆಯನ್ನು ಪಡೆದಿರುತ್ತಾನೆ. ಇವನು ತನ್ನ ಪ್ರಭಾವದಿಂದ ಆ ಗ್ರಾಮದಲ್ಲಿರುವ ಇತರ ಜನರ ಮೇಲೆ ತನ್ನ ಪ್ರಭಾವವನ್ನು ಬೀರಿ ತನ್ನ ಮನಸ್ಸಿಗೆ ಬಂದ ಕಾರ್ಯವನ್ನು—ಅದು ನ್ಯಾಯವಾಗಿರಲಿ, ಅನ್ಯಾಯವಾಗಿರಲಿ ಸ್ವಪ್ರಯೋಜನಕ್ಕಾಗಿ ಉಪಯೋಗಿಸಿಕೊಳ್ಳುತ್ತಾನೆ. ಅವನಿಗೆ ನೀತಿನಿಯಮಗಳು ನ್ಯಾಯಾನ್ಯಾಯಗಳು ಮುಂತಾದವುಗಳ ಕಡೆಗೆ ದೃಷ್ಟಿ ಇರುವುದಿಲ್ಲ ಕೇವಲ ಸ್ವಪ್ರಯೋಜನವನ್ನೇ ಲಕ್ಷಿಸುತ್ತಾನೆ. ಹೀಗಿರುವಾಗ ಗ್ರಾಮದ ಇತರ ಜನರಂತೆ ಯಜ್ಞ ಮಾಡುವ ಯಜಮಾನನೂ ಇವನಿಗೆ ಹೆದರುತ್ತಾನೆ. ಇವನನ್ನು ಆರ್ತ್ವಿಜ್ಯಕ್ಕಾಗಿ ಕರೆಯದಿದ್ದರೆ ಇವನು ಏನು ಮಾಡುವನೋ ಎಂಬ ಹೆದರಿಕೆ ಇರುತ್ತೆ. ಇವನಲ್ಲಿ ದ್ವೇಷವನ್ನು ಕಟ್ಟಿಕೊಳ್ಳುವುದಕ್ಕೆ ಭಯಗೊಂಡು ಎಂದರೆ ಇವನು ಮುಂದೆ ತನಗೆ ಕೇಡನ್ನು ಬಯಸಬಹುದೆಂದೂ ಅಥವಾ ಈಗ ಮಾಡುವ ಯಜ್ಞಕ್ಕೆ ಏನಾದರೂ ವಿಘ್ನವನ್ನುಂಟುಮಾಡಬಹುದೆಂದು ಹೆದರುತ್ತಾನೆ. ಹೀಗೆ ಆಗದಿರುವುದಕ್ಕಾಗಿ ಎಂದರೆ ಇವನಲ್ಲಿ ದ್ವೇಷವನ್ನು ಕಟ್ಟಿಕೊಳ್ಳದೆ ಮಿತ್ರನಂತೆ ಇರಲು ಇವನನ್ನು ಯಜ್ಞದಲ್ಲಿ ಆರ್ತ್ವಿಜ್ಯವನ್ನು ಮಾಡಿಸುವಂತೆ ಕೇಳಿಕೊಳ್ಳುತ್ತಾನೆ ಯಾಗಕರ್ಮಗಳಲ್ಲಿ ಇವನಿಗೆ ಅನುಭವವಿಲ್ಲದ್ದರಿಂದ ಇವನಿಂದ ಮಾಡಿಸಲ್ಪಡುವ ಯಜ್ಞವು ದೋಷಯುಕ್ತವಾಗಿ ಯಜಮಾನನಿಗೆ ಫಲಪ್ರದವಾಗುವುದಿಲ್ಲ. ಇಂತಹ ಪುರುಷನನ್ನು ಗೀರ್ಣನೆಂದು ಕರೆಯುತ್ತಾರೆ.

ಅಥ ಹೈತದೇವ ವಾಂತಂ ಯದಭಿಶಸ್ಯಮಾನಮಾರ್ತ್ವಿಜ್ಯಂ ಕಾರಯತೇ ಯಥಾ ಹ ವಾ ಇದಂ ವಾನ್ತಾನ್ಮನುಷ್ಯಾ ಬೀಭತ್ಸಂತ ಏವಂ ತಸ್ಮಾದ್ದೇವಾಸ್ತದ್ಧ ತತ್ಪರಾಜೇವ ಯಥಾ ವಾಂತಂ ನ ಹೈವ ತದ್ಯಜಮಾನಂ ಭುನಕ್ತಿ ||

ವಾಂತಂ ದರ್ಶಯಿತ್ವಾ ನಿಷೇಧತಿ—ಕಶ್ಚಿತ್ಪುರುಷಃ ಪ್ರಯೋಗಕುಶಲೋಽಪಿ ಕೇನಚಿತ್ಪಾರಿತ್ಯಾಪವಾದೇನ ಸರ್ವೈರ್ನಿಂದ್ಯತೇ ತಾದೃಶಮಭಿಶಸ್ಯಮಾನಂ ಯಜಮಾನಃ ಸ್ವಕೀಯಬಂಧುತ್ವಾದಿದಾಕ್ಷಿಣ್ಯೇನಾಪವಾದಪರಿಹಾರಾರ್ಥಮಾರ್ತ್ವಿಜ್ಯಂ ಕಾರಯತ ಇತಿ ಯದಸ್ತಿ ತದೇತದ್ವಾಂತಂ ತತ್ರೇದಂ ನಿದರ್ಶನಮುಚ್ಯತೇ | ಯಥಾ ಲೋಕೇ ಮನುಷ್ಯಾ ವಾಂತಾದ್ಬೀಭತ್ಸಂತೇ ವಾಂತಂ ದೃಷ್ಟ್ವಾ ಕಶ್ಮಲಮೇತದಿತಿ ನಿಷ್ಠೀವನಂ ಕುರ್ಯುರೇವಂ ದೇವಾಸ್ತಸ್ಮಾದಭಿಶಸ್ಯಮಾನಕೃತಾದಾರ್ತ್ವಿಜ್ಯಾತ್ಸರ್ವೇ ಬೀಭತ್ಸಂತೇ | ತತೋ ಯಥಾ ಲೋಕೇ ವಾಂತಮತಿನಿಕೃಷ್ಟಂ ತಥಾ ತಸ್ಮಿನ್ಯಜ್ಞೇ ತದಾರ್ತ್ವಿಜ್ಯಮತಿನಿಕೃಷ್ಟಂ ತಚ್ಚ ಯಜಮಾನಂ ಸರ್ವಥಾ ನ ಪಾಲಯತಿ ||

ವಾಂತಂ ಎಂಬ ಪುರುಷನನ್ನು ವಿವರಿಸಿ ಅವನು ಆರ್ತ್ವಿಜ್ಯಕ್ಕೆ ಅನರ್ಹನೆಂಬುದನ್ನು ತೋರಿಸುತ್ತಾರೆ—ಒಂದು ಗ್ರಾಮದಲ್ಲಿ ಒಬ್ಬ ಬ್ರಾಹ್ಮಣನಿರುವನು ಅವನು ಪ್ರಯೋಗಾದಿಕರ್ಮಗಳಲ್ಲಿ ಕುಶಲನಾದರೂ ಅವನು ಒಂದು ಸಮಯದಲ್ಲಿ ನಿಂದ್ಯವಾದ ಕೆಟ್ಟಕೆಲಸವನ್ನು ಮಾಡಿದವನೆಂದು ಜನರು ಆರೋಪವನ್ನು ಮಾಡುವುದಲ್ಲದೆ ಸತ್ಕರ್ಮಾದಿಗಳಲ್ಲಿ ಅವನನ್ನು ದೂರವಿಟ್ಟು ಅವನ ಸಹವಾಸವನ್ನು ಮಾಡಲಿಚ್ಛಿಸುವುದಿಲ್ಲ ಏಕೆಂದರೆ ದುಷ್ಕರ್ಮವನ್ನು ಮಾಡಿದ ಅವನನ್ನು ಸಹವಾಸ ಮಾಡಿದರೆ ತಮಗೂ ಅಪಖ್ಯಾತಿ ಬರುವುದೆಂದು ಜನರು ಹೆದರುವರು. ಹೀಗಿರುವಾಗ ಯಜ್ಞಮಾಡುವ ಯಜಮಾನನು ಸ್ವಾರ್ಥ ಬುದ್ಧಿಯಿಂದ ಮೇಲೆಹೇಳಿದ ಪುರುಷನು ತನಗೆ ಬಂಧುವಾಗಿರುವನೆಂಬ ಕಾರಣದಿಂದಲೋ ಇತರಕಾರಣದಿಂದಲೋ ಎಂದರೆ ಅವನಿಗೆ ಬಂದಿರುವ ಅಪವಾದವನ್ನು ತಪ್ಪಿಸಿ ಉಪಕಾರಮಾಡಬೇಕೆಂಬ ಬುದ್ಧಿಯಿಂದಲೋ ಅವನಿಗೆ ಆರ್ತ್ವಿಜ್ಯವನ್ನು ಮಾಡಲು ಹೇಳಿದಲ್ಲಿ ಆಗ ಇವನಿಂದ ಮಾಡಿಸಲ್ಪಟ್ಟ ಯಾಗಕ್ಕೆ ದೇವತೆಗಳು ಬರಲು ಹೆದರುವರು. ಹೇಗೆಂದರೆ ಯಾವನಾದರೂ ಪುರುಷನು ಅನಾರೋಗ್ಯದಿಂದ ತಾನು ತಿಂದ ಆಹಾರವನ್ನು ವಾಂತಿಮಾಡಿಕೊಂಡರೆ (Vomit) ಅದನ್ನು ನೋಡಿ ಜನರು ಅಸಹ್ಯಪಟ್ಟುಕೊಳ್ಳುವರು ಮತ್ತು ತಮ್ಮ ಕೈಕಾಲುಗಳನ್ನು ತೊಳೆದುಕೊಳ್ಳುವರು. ಅದರಂತೆ ಇಂತಹ ನಿಕೃಷ್ಟನಾದ ಪುರುಷನು ಆರ್ತ್ವಿಜ್ಯವನ್ನು ಮಾಡಿಸಿದರೆ ದೇವತೆಗಳು ಯಜ್ಞಕ್ಕೆ ಬರುವುದಿಲ್ಲ. ಮತ್ತು ಯಜಮಾನನಿಗೆ ಇದರಿಂದ ಯಾವ ಲಾಭವೂ ಉಂಟಾಗುವುತಿಲ್ಲ ಇಂತಹ ಅಪವಾದದಿಂದ ಕೂಡಿರುವ ಪುರುಷನನ್ನು ವಾಂತನೆಂದು ಹೇಳುವರು.

ಸ ಏತೇಷಾಂ ತ್ರಯಾಣಾಮಾಶಾಂ ನೇಯಾತ್ ||

ವರ್ಜ್ಯತ್ವೇನೋಕ್ತಂ ತ್ರಿವಿಧಮುಪಸಂಹರತಿ—ಸ ಯಜಮಾನ ಏತೇಷಾಂ ಪೂರ್ವೋಕ್ತಾನಾಂ ಧನಲಂಪಟಭಯಹೇತ್ವಭಿಶಸ್ತಾನಾಂ ತ್ರಯಾಣಾಮಾರ್ತ್ವಿಜ್ಯಾರ್ಥಂ ಮನಸ್ಯಪೇಕ್ಷಾಮಪಿ ನ ಕುರ್ಯಾತ್ ||

ಆದ್ದರಿಂದ ಯಜ್ಞಮಾಡಬೇಕೆಂದಿರುವ ಯಜಮಾನನು ಮೇಲೆ ಹೇಳಿದ ದೋಷಯುಕ್ತರಾದ ಜಗ್ಧ, ಗೀರ್ಣ, ವಾಂತ ಎಂಬ ಮೂರುವಿಧ ಪುರುಷರನ್ನು ಆರ್ತ್ವಿಜ್ಯಕ್ಕಾಗಿ ಆಹ್ವಾನಿಸದೆ ಅವರನ್ನು ಕರೆಯುವ ಅಪೇಕ್ಷೆಯನ್ನು ಸಹ ಮನಸ್ಸಿನಲ್ಲಿ ತರಬಾರದು.

**ತಂ ಯದ್ಯೇತೇಷಾಂ ತ್ರಯಾಣಾಮೇಕಂಚಿದಕಾಮಮಭ್ಯಭವೇತ್ತಸ್ಯಾಸ್ತಿ ವಾಮದೇವ್ಯಸ್ಯ ಸ್ತೋತ್ರೇ ಪ್ರಾಯಶ್ಚಿತ್ತಿಃ ॥**

**ಅಥ ಪ್ರಮಾದಕೃತಸ್ಯ ಪ್ರಾಯಶ್ಚಿತ್ತಂ ದರ್ಶಯಿತಿ—ಯದಿ ಕದಾಚಿದೇತೇಷಾಂ ಧನಲಂಪಟಾದೀನಾಂ ತ್ರಯಾಣಾಂ ಮಧ್ಯೇ ವರ್ತಮಾನಂ ತಂ ಪುರುಷಮೇಕಂ ಚಿದೇಕಮಪ್ಯಕಾಮಬುದ್ಧಿಪೂರ್ವಮಭ್ಯಾಭವೇದಭಿಲಕ್ಷ್ಯ ಆರ್ತ್ವಿಜ್ಯಂ ಭವೇತ್ತದಾನೀಂ ತಸ್ಯ ವೈಕಲ್ಯಸ್ಯ ಪ್ರಾಯಶ್ಚಿತ್ತಿರಸ್ತಿ ॥ ಕುತ್ರಾಸ್ತೀತಿ ತದುಚ್ಯತೇ । ವಾಮದೇವ್ಯಸ್ಯ ಸ್ತೋತ್ರೇ ವಾಮದೇವಮಹರ್ಷಿಣಾ ದೃಷ್ಟಂ ಸಾಮ ವಾಮದೇವ್ಯಂ ಕಯಾನಶ್ಚಿತ್ರ ಆಭುವತ್—[೪-೩೧-೦] ಇತ್ಯೇತಸ್ಯಾಮೃಚ್ಯುತ್ಪನ್ನಂ ತಚ್ಚ ಸಾಮ ತ್ಯೃಚೇ ಗಾಯಂತ ಉದ್ಗಾತಾರಃ ಪೃಷ್ಠಸ್ತೋತ್ರಮನುತಿಷ್ಠಂತಿ । ತತ್ರ ಕಶ್ಚಿತ್ಪ್ರಯೋಗವಿಶೇಷಃ ಪ್ರಾಯಶ್ಚಿತ್ತಿಃ ।**

ಮೇಲೆ ಹೇಳಿದ ದೋಷಯುಕ್ತರಾದ ಬ್ರಾಹ್ಮಣರಲ್ಲಿ ಒಬ್ಬನನ್ನು ಕರೆಯಬೇಕೆಂದು ಮನಸ್ಸುಮಾಡಿದರೂ ಅದರ ಪ್ರಾಯಶ್ಚಿತ್ತಕ್ಕಾಗಿ ಈ ರೀತಿಮಾಡಬೇಕು. ಒಂದು ವೇಳೆ ಮೇಲೆ ಹೇಳಿದ ಮೂರುವಿಧ ಪುರುಷರಲ್ಲಿ ಒಬ್ಬನನ್ನಾದರೂ ಪ್ರಮಾದದಿಂದ ಕರೆಯಿಸಿ ಆರ್ತ್ವಿಜ್ಯವನ್ನು ಮಾಡಿಸಿದರೆ ಅಂತಹ ದೋಷಪರಿಹಾರಕ್ಕಾಗಿ ಒಂದು ಪ್ರಾಯಶ್ಚಿತ್ತವಿರುವುದು. ಅದು ಯಾವುದೆಂದರೆ—ವಾಮದೇವಮಹರ್ಷಿಯಿಂದ ದೃಷ್ಟವಾದ **ಕಯಾನಶ್ಚಿತ್ರ ಆಭುವತ್** (ಋ. ಸಂ ೪-೩೧-೧) ಎಂಬ ಋಕ್ಕಿನಿಂದ ಕೂಡಿದ ತೃಚವಿರುವುದು ಈ ತೃಚದ ಆಧಾರವಿರುವ ಒಂದು ಸಾಮವು ಪೃಷ್ಠಸ್ತೋತ್ರವನ್ನನುಸರಿಸಿ ಪಠಿಸಲ್ಪಡುವುದು ಆಸಾಮವನ್ನು ಕೆಲವು ವಿಶೇಷಪ್ರಯೋಗಗಳಿಂದ ಗಾನಮಾಡಬೇಕು. ಅದೇ ಇಲ್ಲಿ ಪ್ರಾಯಶ್ಚಿತ್ತಿಯು.

**ಇದಂ ವಾ ವಾಮದೇವ್ಯಂ ಯಜಮಾನಲೋಕೋಽಮೃತಲೋಕಃ ಸ್ವರ್ಗೋ ಲೋಕಃ ॥**

**ಉಕ್ತಂ ಸಾಮ ಪ್ರಶಂಸತಿ—ಯಜಮಾನಸ್ಯ ಲೋಕಃ ಪೃಥಿವೀ । ಅಮೃತಲೋಕೋ ಮುಕ್ತಿಪದಂ । ಸ್ವರ್ಗೋ ದೇವಲೋಕಃ । ಇದಂ ವಾ ಉಕ್ತಲೋಕತ್ರಯಮಿದಂ ಸರ್ವಮಪೀದಂ ವಾಮದೇವ್ಯಂ । ಕಯಾನಶ್ಚಿತ್ರ ಇತ್ಯಸ್ಯಾಮೃಚ್ಯುತ್ಪನ್ನಮಿದಂ ಸಾಮಗಾನಾಂ ಪ್ರಸಿದ್ಧಂ ವಾಮದೇವ್ಯಾಖ್ಯಂ ಸಾಮ ॥**

ಈ ಸಾಮಗಾನವನ್ನು ಪ್ರಶಂಸೆಮಾಡುವರು—ಯಜಮಾನನಿಗೆ ಪೃಥಿಯೇ ಸ್ವಂತಲೋಕವು. ಅಮೃತಲೋಕವೆಂದರೆ ಮುಕ್ತಿಪದವಿಯು. ಸ್ವರ್ಗವೆಂದರೆ ದೇವಲೋಕವು. ಈ ಮೂರು ವಿಧ ಲೋಕಗಳೂ ವಾಮದೇವ್ಯವೆಂದು ಹೇಳಲ್ಪಡುವುದು. **ಕಯಾನಶ್ಚಿತ್ರ** ಎಂಬ ಋಕ್ಕುಗಳಿಂದ ಉತ್ಪನ್ನವಾದ ಈ ಸಾಮವು ವಾಮದೇವ್ಯಸಾಮವೆಂದು ಪ್ರಸಿದ್ಧವಾಗಿ ಸಾಮಕರಿಂದ ಗಾನಮಾಡಲ್ಪಡುವುದು. ಇದರಿಂದ ಮೇಲೆ ಹೇಳಿದ ಕರ್ಮಕ್ಕೆ ಪ್ರಾಯಶ್ಚಿತ್ತಿಯುಂಟಾಗುವುದು.

**ತತ್ರಿಭಿರಕ್ಷರೈರ್ನ್ಯೂನಂ ತಸ್ಯ ಸ್ತೋತ್ರ ಉಪಸೃಪ್ಯ ತ್ರೇಧಾಽಽತ್ಮಾನಂ ವಿಗೃಹ್ಣೀಯಾತ್ಪುರುಷ ಇತಿ ॥**

ತಸ್ಮಿನ್ಸಾಮ್ನಿ ಕರ್ತವ್ಯಂ ಪ್ರಾಯಶ್ಚಿತ್ತಪ್ರಕಾರಂ ದರ್ಶಯತಿ ತದ್ವಾಮದೇವ್ಯಂ ಸಾಮ ತ್ರಿಭಿರಕ್ಷರೈರ್ನ್ಯೂನಂ । ಕಯಾನಶ್ಚಿತ್ರ ಇತ್ಯಾದಿ ಕಸ್ತ್ಯೃಚೋ ಗಾಯತ್ರೀಚ್ಛಂದಸಸ್ತ್ರಿಷು ಪಾದೇಷು ॥ ಪ್ರತ್ಯೇಕಮಷ್ಟಾವಕ್ಷರಾಣ್ಯಪೇಕ್ಷಿತಾನಿ ॥ ಅಭೀಷುಣ ಇತ್ಯೇತಸ್ಯಾಮೃಚಿ ತೃತೀಯಸ್ಯಾಂ ಪ್ರತಿಪಾದಂ ಸಪ್ತೈವಾಕ್ಷರಾಣಿ । ಅತಸ್ತ್ರಿಭಿದಕ್ಷರೈರ್ನ್ಯೂನತ್ವಂ ॥ ತಸ್ಯ ವಾಮದೇವ್ಯಸ್ಯ ಸಾಮ್ನಃ ಸಂಬಂಧಿನಿ ಸ್ತೋತ್ರ ಉಪಸೃಪ್ಯ ಗಾನಂ ಪ್ರಕ್ರಮ್ಯಾತ್ಮಾನಂ ಸ್ವವಾಚಕಂ ಪುರುಷ ಇತಿ ಶಬ್ದಂ ತ್ರೇಧಾ ವಿಗೃಹ್ಣೀಯಾತ್ । ಪ್ರತ್ಯಕ್ಷರಂ ವಿಭಜ್ಯೈಕೈಕಸ್ಮಿನ್ಪಾದೇ ಪ್ರಕ್ಷಿಪೇತ್ ॥ ತದ್ಯಥಾ ॥ ಅಭೀಷುಣಃ ಸಖೀನಾಂ ಪು ಅವಿತಾ ಜರಿತೄಣಾಂ ರು ಶತಂ ಭವಾಸ್ಯೂತಿಭಿಃ ಷ ಇತಿ ಪ್ರಕ್ಷಿಪ್ಯ ಗಾಯೇತ್ ॥

ಮೇಲೆ ಹೇಳಿದ ಸಾಮದಿಂದ ಪ್ರಾಯಶ್ಚಿತ್ತಮಾಡುವ ಪ್ರಕಾರವನ್ನು ತಿಳಿಸುವರು—ವಾಮದೇವ್ಯವೆಂಬ ಸಾಮದಲ್ಲಿ ಮೂರು ಅಕ್ಷರಗಳು ಕಡಿಮೆಯಾಗಿರುವವು. ಕಯಾನಶ್ಚಿತ್ರ ಎಂಬ ತೃಚದಲ್ಲಿ ಎಂದರೆ ಮೂರು ಋಕ್ಕುಗಳೂ ಗಾಯತ್ರೀ ಛಂದಸ್ಕವು. ಗಾಯತ್ರೀಛಂದಸ್ಸಿನ ಪಾದಗಳಲ್ಲಿ ಪ್ರತಿಯೊಂದರಲ್ಲಿ ಎಂಟೆಂಟು ಅಕ್ಷರಗಳಿರಬೇಕು. ಆದರೆ **ಅಭೀಷುಣಃಸಖೀನಾಂ** ಎಂಬ ಮೂರನೆಯ ಋಕ್ಕಿನಲ್ಲಿರುವ ಮೂರು ಪಾದಗಳಲ್ಲಿಯೂ ಏಳೇಳು ಅಕ್ಷರಗಳಿರುವವು. ಆದ್ದರಿಂದ ಒಟ್ಟಿನಲ್ಲಿ ಈ ತೃಚದಲ್ಲಿ ಮೂರು ಅಕ್ಷರಗಳು ಕಡಿಮೆಯಾಗಿರುವವು. ಆದ್ದರಿಂದ ಈ ವಾಮದೇವ್ಯಸಾಮವನ್ನು ಗಾನಮಾಡುವಾಗ ಕೊನೆಯ ಋಕ್ಕಾದ **ಅಭೀಷಣಃ** ಎಂಬ ಋಕ್ಕಿನ ಪ್ರತಿಪಾದದಲ್ಲಿಯೂ ಪುರುಷ ಎಂಬ ಶಬ್ದದಲ್ಲಿರುವ ಮೂರು ಅಕ್ಷರಗಳನ್ನು ಪ್ರತಿಪಾದದಲ್ಲಿಯೂ ಸೇರಿಸ ಗಾನಮಾಡಬೇಕು. ಹೇಗೆಂದರೆ ಪ್ರಥಮಪಾದವು **ಅಭೀಷಣಃಸಖೀನಾಂ+ಪ್ರ** ದ್ವಿತೀಯ ಪಾದವು—**ಅವಿತಾ ಜರಿತೃಣಾಂ+ರು.** ತೃತೀಯ ಪಾದವು—**ಶತಂ ಭವಾಸ್ಯೂತಿಭಿಃ+ಷ.** ಈರೀತಿ **ಪುರುಷ** ಶಬ್ದದ ಮೂರು ಅಕ್ಷರಗಳಲ್ಲಿ ಒಂದೊಂದನ್ನು ಮೂರು ಪಾದಗಳಲ್ಲಿ ಸೇರಿಸಿ ಗಾನಮಾಡಬೇಕು.

**ಸ ಏತೇಷು ಲೋಕೇಷ್ವಾತ್ಮಾನಂ ದಧಾತ್ಯಸ್ಮಿನ್ಯಜಮಾನಲೋಕೇಽಸ್ಮಿನ್ನ-ಮೃತಲೋಕೇಽಸ್ಮಿನ್ಸ್ವರ್ಗೇ ಲೋಕೇ ಸ ಸರ್ವಾಂ ದುರಿಷ್ಟಮತ್ಯೇತಿ ॥**

**ಉಕ್ತಪ್ರಕಾರೇಣಾಽಽರ್ತ್ವಿಜ್ಯೇ ವೈಕಲ್ಯಪರಿಹಾರಂ ದರ್ಶಯತಿ ಸ ಕೃತಪ್ರಾಯಶ್ಚಿತ್ತೋ ಯಜಮಾನ ಏತೇಷು ಲೋಕೇಷು ಸ್ವಾತ್ಮಾನಂ ಸ್ಥಾಪಯತಿ । ತ ಏವ ತ್ರಯೋ ಲೋಕಾ ಅಸ್ಮಿನ್ನಿತ್ಯಾದಿನಾ ಸ್ಪಷ್ಟೀಕ್ರಿಯಂತೇ ॥ ಸ ಯಜಮಾನಃ ಸರ್ವಾಂ ದುರಿಷ್ಟಿಂ ದೋಷೋಪೇತಂ ಯಜ್ಞಮತ್ಯೇತ್ಯತಿಕ್ರಾಮತಿ ।**

ವಿಧಿಪ್ರಕಾರವಾಗಿ ಪ್ರಾಯಶ್ಚಿತ್ತವನ್ನು ಮಾಡುವುದರಿಂದ ಆರ್ತ್ವಿಜ್ಯದಲ್ಲಿ ಸಂಭವಿಸುವ ಲೋಪದೋಷಗಳು ಪರಿಹಾರವಾಗುವವು. ಯಜ್ಞಮಾಡುವ ಯಜಮಾನನು ವಿಧ್ಯುಕ್ತವಾಗಿ ಮೇಲೆ ಹೇಳಿದ ಪ್ರಾಯಶ್ಚಿತ್ತವನ್ನು ಮಾಡಿದರೆ ಅದರಿಂದ ಪುನೀತನಾಗಿ ಮೇಲೆ ಹೇಳಿದ ಮೂರುಲೋಕಗಳನ್ನೂ ಪಡೆದು ಅವುಗಳಲ್ಲಿ ದೃಢವಾಗಿ ನೆಲೆಸುತ್ತಾನೆ. ಆ ಲೋಕಗಳಾವು

ವೇದರೆ— ಈ ಭೂಲೋಕವು, ಮುಕ್ತಿಪ್ರದವಾದ ಮೋಕ್ಷಪದವಿಯು ಮತ್ತು ಸ್ವರ್ಗಲೋಕವು. ಈ ಲೋಕಗಳನ್ನು ಪಡೆದು ಸುಖಿಸುವುದಲ್ಲದೆ ಈ ಭೂಲೋಕದಲ್ಲಿ ವಾಸಿಸುವಾಗ ಸಮಸ್ತಪಾಪದೋಷಗಳನ್ನೂ ಕಳೆದುಕೊಳ್ಳುವನು.

**ಅಪಿ ಯದಿ ಸಮೃದ್ಧಾ ಇವ ಋತ್ವಿಜಃ ಸ್ಯುರಿತಿ ಹ ಸ್ಮಾಽಽಹಾಥ ಹೈತಜ್ಜಪೇದೇವೇತಿ ॥**

**ಏವಂ ನೈಮಿತ್ತಿಕಮಕ್ಷರತ್ರಯಪ್ರಕ್ಷೇಪಂ ವಿಧಾಯ ನಿತ್ಯಪ್ರಯೋಗೇಽಪಿ ತಂ ವಿಧತ್ತೇ— ಹೋತ್ರಾದಯ ಋತ್ವಿಜೋ ಯದ್ಯಪಿ ಸಮೃದ್ಧಾ ಇವ ಧನಲಾಂಪಟ್ಯಾದಿಪೂರ್ವೋಕ್ತವೈಕಲ್ಯರಹಿತಾ ಏವ ಸ್ಯುಃ ತಥಾಽಪ್ಯೇತತ್ಪುರುಷ ಇತ್ಯಕ್ಷರತ್ರಯಂ ಸ್ತೋತ್ರೇ ಜಪೇದೇವೇತ್ಯೈತರೇಯೋ ಮುನಿರಾಹ ಸ್ಮ ।**

ಮೇಲೆ ಹೇಳಿದ ಪ್ರಾಯಶ್ಚಿತ್ತವು ಕಾರಣಾಂತರ ಅಥವಾ ಪ್ರಮಾದದಿಂದ ಸಂಭವಿಸುವ ಲೋಪದೋಷಗಳ ಪರಿಹಾರಕ್ಕಾಗಿ ಆಚರಿಸುವ ಪ್ರಾಯಶ್ಚಿತ್ತವು. ಆದರೂ ಯಜ್ಞಮಾಡುವಾಗ ಧನಲಂಪಟರಾದ ಋತ್ವಿಜರು ಮೊದಲಾದವರಿಲ್ಲದಿದ್ದರೂ ಪ್ರಮಾದಗಳಿಂದ ಲೋಪದೋಷಗಳು ಸಂಭವಿಸದಿದ್ದರೂ ಮೇಲೆ ಹೇಳಿದ ಪ್ರಾಯಶ್ಚಿತ್ತವನ್ನು ಮಾಡುವುದು ಎಂದರೆ ಪುರುಷ ಶಬ್ದದಲ್ಲಿರುವ ಮೂರು ಅಕ್ಷರಗಳನ್ನು ಕೊನೆಯ ಋಕ್ಕಿನ ಮೂರು ಪಾದಗಳಲ್ಲಿ ಒಂದೊಂದರಂತೆ ಸೇರಿಸಿ ಗಾನಮಾಡುವುದು ಒಳ್ಳೆಯ ಮಾರ್ಗವೆಂದು ಐತರೇಯ ಮುನಿಗಳು ಹೇಳಿರುವರು.



*English Translation*

**(On three mistakes which might be made in the appointment of priests. How they are to be remedied)**

Three times occur at the sacrifice: offals, devoured food, and vomitted food. Offals (jagdha) occur when one appoints to the office of a sacrificial priest who offers his services, thinking he (the sacrificer) should give me something, or he should choose me for the performance of his sacrifice. This (to appoint such a man to the office of a priest) is as perverse as to eat the offals of a meal which are generally not touched by others). For the acts of such a one do not benefit the sacrificer.

Devoured (girnam) is that when a sacrificer appoints some one to the office of a priest out of fear, thinking, "he might kill me (at some future occasion), or disturb my sacrifice if I do not choose him for the office of a priest." This is as perverse as if food is devoured (not eaten in the proper way). For the acts of such a one do not benefit the sacrificer as little as the devouring of food with greediness benefits the body).

Vomited (vanta) is that, when a sacrificer appoints to the office of a priest a man who is ill spoken of. Just as men take disgust at anything that is vomited, so the gods take also disgust at such a man. This (to appoint such a man) is as disgusting as something vomited. For the acts of such a man do not benefit the sacrificer.

The sacrificer ought not to cherish the thought of appointing any one belonging to these three classes (described). Should he, however, involuntarily (by mistake) appoint one of these three, then the penance for this fault is, the chanting of the Vamadevya Saman. For this Vamadevyam is the whole universe, the world of the sacrificer (the earth), the world of the immortals, and the celestial world. This Saman (which is in the Gayatri metre) falls short of three Syllables. When going to perform this chant, he should divide the word purusha, denoting his own self, into three syllables, and insert one of them at the end of each pada (of the verse abbhi shu na). Thus he puts himself in these worlds, viz. the world of the sacrificer, that of the immortals, and the celestial world. (By chanting this Saman) the sacrificer overcomes all obstacles arising from mistakes in the performance of the sacrifice and obtains nevertheless what he was sacrificing for.

He (the Rishi of the Aitareyins) moreover has told, that the sacrificer should mutter (as japa) the Vamadevyam in the way described above even if the performing priests were all of unexceptionable character.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಪಂಚದಶಾಧ್ಯಾಯೇ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನೈದನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು
ಸಮಾಪ್ತವಾದುದು.



# ಪಂಚದಶಾಧ್ಯಾಯೇ ತೃತೀಯಃ ಖಂಡಃ

## ಹದಿನೈದನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ಧಾತೃದೇವತೆಗೆ ಅರ್ಪಿಸುವ ಆಹುತಿಗಳು ಮತ್ತು ದೇವಿಕಾ ಎಂಬ ಆಹುತಿಗಳು; ಅನುಮತಿ ರಾಕಾ, ಸಿನೀವಾಲಿ, ಮತ್ತು ಕುಹೂ ಎಂಬ ದೇವತಾವಿಶೇಷಗಳು]



**ಛಂದಾಂಸಿ ವೈ ದೇವೇಭ್ಯೋ ಹವ್ಯಮೂಢ್ವಾ ಶ್ರಾಂತಾನಿ ಜಘನಾರ್ಧೇ ಯಜ್ಞಸ್ಯ ತಿಷ್ಠಂತಿ ಯಥಾಽಶ್ವೋ ವಾಽಶ್ವತರೋ ವೋಹಿವಾಂಸ್ತಿಷ್ಠೇದೇವಂ ತೇಭ್ಯ ಏತಂ ಮೈತ್ರಾವರುಣಂ ಪಶುಪುರೋಳಶಮನು ದೇವಿಕಾ ಹವೀಂಷಿ ನಿರ್ವಪೇತ್ ॥**

ಪೂರ್ವತ್ರ ಯಜ್ಞೋ ಬ್ರಾಹ್ಮಣೇನ ಚ್ಛಂದೋಭಿಶ್ಚ ಸಯುಗ್ಭೂತ್ವಾ ಹವ್ಯಂ ವಹತೀತ್ಯುಕ್ತಂ। ತತ್ರ ಬ್ರಾಹ್ಮಣಯುಕ್ತೋ ವಕ್ತವ್ಯವಿಶೇಷೋಽಭಿಹಿತಃ। ಅಥ ಚ್ಛಂದಃಪ್ರಯುಕ್ತಂ ವಿಶೇಷಮಾಹ—ಗಾಯತ್ರ್ಯಾದೀನಿ ಚ್ಛಂದಾಂಸಿ ದೇವಾರ್ಥಂ ಹವ್ಯವಾಹನಂ ಕೃತ್ವಾ ಶ್ರಮಂ ಪ್ರಾಪ್ಯ ಯಜ್ಞಸ್ಯ ಜಘನಾರ್ಧೇ ಪಶ್ಚಿಮಭಾಗೇ ಕ್ವಚಿತ್ತೂಷ್ಣೀಂ ತಿಷ್ಠಂತಿ ॥ ಯಥಾ ಲೋಕೇ ಕಶ್ಚಿದಶ್ವೋ ವಾ ಗರ್ದಭಾಶ್ವಸಾಂಕರ್ಯೇಣ ಜಾತೋಽಶ್ವತರೋ ವೋಹಿವಾನ್ಭಾರವಹನಂ ಕೃತವಾನ್ ಸನ್ದೂರದೇಶೇ ವಹನೇನ ಶ್ರಾಂತಸ್ತಿಷ್ಠೇದೇವಮೇತಾನಿ ಚ್ಛಂದಾಂಸ್ಯಪಿ ॥ ತೇಭ್ಯಃ ಶ್ರಾಂತೇಭ್ಯಃ ಶ್ರಮಪರಿಹಾರಾರ್ಥಂ ಹವೀಂಷಿ ನಿರ್ವಪೇತ್ ॥ ದೇವಿಕಾ ಇತಿ ತೇಷಾಂ ಹವಿರ್ವಿಶೇಷಾಣಾಂ ನಾಮ। ಕಸ್ಮಿನ್ಕಾಲೇ ನಿರ್ವಾಪ ಇತಿ ತದುಚ್ಯತೇ। ಯಜ್ಞಸ್ಯಾವಸಾನೇ ಯೋಽಯಮನುಬಂಧ್ಯಾಖ್ಯಃ ಪಶುಬಂಧಸ್ತಸ್ಯ ಪಶೋಃ ಸಂಬಂಧೀ ಮಿತ್ರಾವರುಣದೇವತಾಕೋ ಯಃ ಪುರೋಡಾಶಸ್ತಮನು ತಸ್ಮಿನ್ನನುಷ್ಠಿತೇ ಪಶ್ಚಾನ್ನಿರ್ವಪೇತ್ ॥

ಹಿಂದೆ ಯಜ್ಞದಲ್ಲಿ ಛಂದಸ್ಸುಗಳಿಂದ ಹವ್ಯವು (ಹವಿಸ್ಸು) ದೇವತೆಗಳಿಗೆ ವಹಿಸಲ್ಪಡುತ್ತಿತ್ತು ಈ ಛಂದಸ್ಸುಗಳ ವಿಷಯದಲ್ಲಿ ಕೆಲವು ವಿಶೇಷಸಂಗತಿಗಳಿರುವವು. ಅವನ್ನು ಈಗ ತಿಳಿಸುವರು, ಪೂರ್ವದಲ್ಲಿ ಗಾಯಿತ್ರಿಯೇ ಮೊದಲಾದ ಛಂದಸ್ಸುಗಳು ದೇವತೆಗಳಿಗೆ ಹವಿಸ್ಸನ್ನು ವಹಿಸಿ ಅರ್ಪಿಸುತ್ತಿದ್ದವು, ಹಾಗೆ ಅರ್ಪಿಸುವಾಗ ಒಂದು ಸಮಯದಲ್ಲಿ ಆ ಛಂದಸ್ಸುಗಳಿಗೆ ಆಯಾಸವುಂಟಾಗಿ ತಮ್ಮ ಕೆಲಸವನ್ನು ನಿರ್ವಹಿಸಲಾರದೆ ಯಜ್ಞದ ಪಶ್ಚಿಮಭಾಗದಲ್ಲಿ ಸುಮ್ಮನೆ ನಿಂತುಕೊಂಡವು. ಲೋಕವ್ಯವಹಾರದಲ್ಲಿಯೂ ಕುದುರೆಗಳೂ, ಕತ್ತೆಗಳೂ ದೂರದಿಂದ ಭಾರವನ್ನು ಹೊತ್ತು ತಂದಾಗ ಆಯಾಸದಿಂದ ಬಳಲಿ ಸುಮ್ಮನೆ ನಿಂತುಕೊಳ್ಳುವವು. ಅದರಂತೆಯೇ ಈ ಛಂದಸ್ಸುಗಳಿಗೂ ಆಯಾಸವುಂಟಾಯಿತು. ಇವುಗಳ ಶ್ರಮಪರಿಹಾರಕ್ಕಾಗಿ

ಕೆಲವು ಹವಿಸ್ಸುಗಳನ್ನು ಅರ್ಪಿಸಿ ಹೋಮಮಾಡಬೇಕು. ಈ ವಿಧವಾದ ಹವಿಸ್ಸುಗಳಿಗೆ ದೇವಿಕಾ ಎಂದು ಹೆಸರು. ಈ ಹವಿಸ್ಸುಗಳನ್ನು ಯಾವ ಕಾಲದಲ್ಲಿ ಅರ್ಪಿಸಬೇಕೆಂಬುದನ್ನು ತಿಳಿಸಲಾಗುವುದು. ಯಜ್ಞದ ಕೊನೆಯಲ್ಲಿ ಅನೂಬಂಧ್ಯಾ ಎಂಬ ಪಶುಸಂಬಂಧವಾದ ಮಿತ್ರಾವರುಣರಿಗೆ ಅರ್ಪಿಸಬೇಕಾದ ಪುರೋಡಾಶವನ್ನು ಅರ್ಪಿಸಿದನಂತರ ಈ ದೇವಿಕಾ ಎಂಬ ಹವಿಸ್ಸನ್ನು ಅರ್ಪಿಸಬೇಕು.

**ಧಾತ್ರೇ ಪುರೋಳಾಶಂ ದ್ವಾದಶಕಪಾಲಂ ಯೋ ಧಾತಾ ಸ ವಷಟ್ಕಾರಃ**

ತತ್ರ ಪ್ರಥಮಂ ಹವಿರ್ಧತ್ತೇ—ಧಾತೃನಾಮ್ನೇ ದೇವಾಯ ದ್ವಾದಶಸು ಕಪಾಲೇಷು ಸಂಸ್ಕೃತಂ ಪುರೋಡಾಶಂ ನಿರ್ವಪೇತ್॥ಯೋಽಯಂ ಧಾತೃನಾಮಕೋ ದೇವಃ ಸ ವಷಟ್ಕಾರಸ್ವರೂಪಃ । ತೇನ ಪುರೋಡಾಶೇನ ವಷಟ್ಕಾರದೇವತಾಯಾಃ ಶ್ರಮೋಽಪಗಚ್ಛತಿ ।

ಮೊದಲನೇ ಹವಿಸ್ಸನ್ನು ವಿವರಿಸುವರು—ಹನ್ನೆರಡು ಕಪಾಲಗಳಲ್ಲಿ ಬೇಯಿಸಿ ಪಕ್ವಮಾಡಿದ ಮತ್ತು ಸಂಸ್ಕಾರಮಾಡಿದ ಪುರೋಡಾಶವನ್ನು ಧಾತೃ ಎಂಬ ದೇವತೆಯನ್ನುದ್ದೇಶಿಸಿ ಅರ್ಪಿಸಬೇಕು. ಈ ಧಾತೃದೇವತೆಯು ವಷಟ್ಕಾರ ಸ್ವರೂಪನಾಗಿರುವನು. ಈ ರೀತಿ ಧಾತೃದೇವತೆಗೆ (ದ್ವಾದಶಕಪಾಲರೂಪವಾದ) ಪುರೋಡಾಶವನ್ನು ಅರ್ಪಿಸುವುದರಿಂದ ವಷಟ್ಕಾರಾಭಿಮಾನಿಯಾದ ದೇವತೆಯ (ಯಜ್ಞದಲ್ಲಿ ಹವಿಸ್ಸನ್ನೂ ವಹಿಸಿದ) ಶ್ರಮವು ಪರಿಹಾರವಾಗುವುದು.

**ಅನುಮತ್ಯೈ ಚರುಂ ಯಾಽನುಮತಿಃ ಸಾ ಗಾಯತ್ರೀ । ರಾಕಾಯೈ ಚರುಂ ಯಾ ರಾಕಾ ಸಾ ತ್ರಿಷ್ಟುಪ್ । ಸಿನೀವಾಲ್ಯೈ ಚರುಂ ಯಾ ಸಿನೀವಾಲೀ ಸಾ ಜಗತೀ ಕುಹ್ವೈ ಚರುಂ ಯಾ ಕುಹೂಃ ಸಾಽನುಷ್ಟುಪ್ ।**

ದ್ವಿತೀಯಂ ಹವಿರ್ವಿಧತ್ತೇ—ಕಲಾಹೀನೇ ಸಾನುಮತಿಃ ಪೂರ್ಣೇ ರಾಕಾ ನಿಶಾಕರ ಇತ್ಯಭಿಧಾನಾಚ್ಚತುರ್ದಶೀಮಿಶ್ರಾ ಪೂರ್ಣಿಮಾಽನುಮತಿಶಬ್ದವಾಚ್ಯಾ । ತದಭಿಮಾನಿನ್ಯಾ ದೇವತಾಯಾ ಅಪಿ ತದೇವನಾಮ । ತಸ್ಯಾಶ್ಚಾನುಮತೇರ್ಗಾಯತ್ರೀರೂಪತ್ವಾತ್ತದೀಯಃ ಶ್ರಮೋಽಪಗಚ್ಛತಿ ॥ ತೃತೀಯಂ ಹವಿರ್ವಿಧತ್ತೇ—ಪೂರ್ವವದ್ವ್ಯಾಖ್ಯೇಯಂ । ಚತುರ್ಥಪಂಚಮೇ ಹವಿಷೀ ವಿಧತ್ತೇ—ಯಾ ದೃಷ್ಟೇಂದುಃ ಸಿನೀವಾಲೀ ಸಾ ನಷ್ಟೇಂದುಕಲಾ ಕುಹೂರಿತ್ಯಮಾವಾಸ್ಯಾದ್ವೈವಿಧ್ಯಮಭಿಹಿತಂ ॥ ತದಭಿಮಾನಿದೇವತಾಯಾಸ್ತದೇವ ನಾಮೇತಿ ಪೂರ್ವವದ್ಯೋಜನೀಯಂ ॥

ಎರಡನೇ ಆಹುತಿಯನ್ನು ವಿವರಿಸುವರು—ಚತುರ್ದಶೀಮಿಶ್ರವಾದ ಪೂರ್ಣಿಮೆಗೆ ಅನುಮತಿಯೆಂದು ಹೆಸರು. ಆ ದಿನದ ಅಭಿಮಾನಿದೇವತೆಗೂ ಅನುಮತಿಯೆಂದೇ ಹೆಸರು. ಈ ಅನುಮತಿಯು ಗಾಯತ್ರೀರೂಪವು. ಈ ದೇವತೆಗೆ (ಚರುವನ್ನು ಪಕ್ವಾನ್ನವನ್ನು) ಅರ್ಪಿಸುವುದರಿಂದ ಈ ದೇವತೆಯ ಶ್ರಮವು ಪರಿಹಾರವಾಗುವುದು. ಪೂರ್ಣಚಂದ್ರಸಹಿತವಾದ ರಾತ್ರಿಗೆ ರಾಕಾ ಎಂದು ಹೆಸರು. ಈ ದೇವತೆಗೂ ಚರುವನ್ನೇ ಅರ್ಪಿಸಬೇಕು ಈ ದೇವತೆಯು ತ್ರಿಷ್ಟುಪ್‌ರೂಪವು. ಅಮಾವಾಸ್ಯೆಯ ರಾತ್ರಿಯಲ್ಲಿ ಸ್ವಲ್ಪಮಟ್ಟಿಗೆ ಚಂದ್ರದರ್ಶನವಿದ್ದರೆ ಆ ರಾತ್ರಿಗೆ ಸಿನೀವಾಲೀ ಎಂದೂ ಚಂದ್ರಸಂಪರ್ಕವಿಲ್ಲದ

ಅಮಾವಾಸ್ಯೆಗೆ ಕುಹೂಃ ಎಂದೂ ಹೆಸರು. ಈ ಎರಡು ದೇವತೆಗಳೂ ಕ್ರಮವಾಗಿ ತ್ರಿಷ್ಟುಪ್ ಮತ್ತು ಜಗತೀರೂಪವೆಂದು ಹೇಳಲ್ಪಡುವವು ಈ ದೇವತೆಗಳಿಗೆ ಚರುವನ್ನು ಅರ್ಪಿಸುವುದರಿಂದ ತ್ರಿಷ್ಟುಪ್ ಮತ್ತು ಜಗತೀ ಛಂದಸ್ಸುಗಳ ಶ್ರಮವು ಪರಿಹಾರವಾಗುವವು.

**ಏತಾನಿ ವಾವ ಸರ್ವಾಣಿ ಛಂದಾಂಸಿ ಗಾಯತ್ರಂ ತ್ರೈಷ್ಟುಭಂ ಜಾಗತ-ಮಾನುಷ್ಟುಭಮನ್ವನ್ಯಾನ್ಯೇತಾನಿ ಹಿ ಯಜ್ಞೇ ಪ್ರತಮಾಮಿವ ಕ್ರಿಯಂತೇ । ಏತೈರ್ಹ ವಾ ಅಸ್ಯ ಛಂದೋಭಿರ್ಯಜತಃ ಸರ್ವೈ-ಶ್ಛಂದೋಭಿರಿಷ್ಟಂ ಭವತಿ ಯ ಏವಂ ವೇದ ॥**

ಇತರೇಷಾಂ ಚ್ಛಂದಸಾಂ ಕಥಂ ಶ್ರಮಪರಿಹಾರ ಇತ್ಯಾಶಂಕ್ಯ ಸರ್ವೇಷಾಮನ್ಯೇಷಾ-ಮುಕ್ತಚ್ಛಂದೋಽನುವರ್ತಿತ್ವಾತ್ತಾವತೈವ ಶ್ರಾಂತಿಪರಿಹಾರ ಇತ್ಯಭಿಪ್ರೇತ್ಯ ಆಹ—ಏತಾನ್ಯೇವ ಗಾಯತ್ರ್ಯಾದೀನಿ ಚತ್ವಾರಿ ಸರ್ವಚ್ಛಂದೋರೂಪಾಣಿ। ಅನ್ಯಾನಿ ತೂಷ್ಣಿಗಾದೀನಿ ಗಾಯತ್ರ್ಯಾ-ದಿಕಮನುಸೃತ್ಯೈವ ವರ್ತಂತೇ। ಯಸ್ಮಾದೇತಾನಿ ಚತ್ವಾರಿ ಯಜ್ಞಪ್ರಯೋಗೇ ಪ್ರತಮಾಮಿವ ಪ್ರಾಚುರ್ಯಾತಿಶಯೇನೈವ ಕ್ರಿಯಂತೆ ಪ್ರಯುಜ್ಯಂತೇ ತಸ್ಮಾದೇತದನುಸಾರಿತ್ವಮಿತರೇಷಾಂ ಯುಕ್ತಂ ॥ ಉಕ್ತಾರ್ಥವೇದನಪೂರ್ವಮನುಷ್ಠಾನಂ ಪ್ರಶಂಸತಿ । ಏತೈರ್ಗಾಯತ್ರ್ಯಾದಿಭಿಃ ಸರ್ವೈರುಷ್ಣಿಗಾದಿಭಿಃ ।

ಈ ನಾಲ್ಕು ಛಂದಸ್ಸುಗಳು, ಎಂದರೆ ಗಾಯಿತ್ರೀ, ತ್ರಿಷ್ಟುಪ್, ಜಗತೀ, ಅನುಷ್ಟುಪ್ ಎಂಬ ನಾಲ್ಕು ಛಂದಸ್ಸುಗಳು ಯಜ್ಞದಲ್ಲಿ ಬಹಳ ಪ್ರಧಾನವಾದವು ಎಂದರೆ ಮುಖ್ಯವಾದವು. ಈ ಛಂದಸ್ಸುಗಳನ್ನನುಸರಿಸಿ ಇತರ ಛಂದಸ್ಸುಗಳಿರುವವು. ಆದ್ದರಿಂದ ಈ ನಾಲ್ಕು ಛಂದಸ್ಸುಗಳನ್ನು ಹವಿಸ್ಸಿನಿಂದ ತೃಪ್ತಿಪಡಿಸಿದರೆ ಇತರ ಎಲ್ಲಾ ಛಂದಸ್ಸುಗಳನ್ನೂ ತೃಪ್ತಿಪಡಿಸಿದಂತಾಗು ವುದು. ಈ ವಿಷಯವನ್ನು ತಿಳಿದವನೂ ಹವಿಸ್ಸರ್ಪಿಸಿದಂತೆ ಆಗುವುದು.

**ತದ್ವೈ ಯದಿದಮಾಹುಃ ಸುಧಾಯಾಂ ಹ ವೈ ವಾಜೀ ಸುಹಿತೋ ದಧಾತೀತಿ ಛಂದಾಂಸಿ ವೈ ತತ್ಸುಧಾಯಾಂ ಹ ವಾ ಏನಂ ಛಂದಾಂಸಿ ದಧತಿ ॥ ಅನನುಧ್ಯಾಯಿನಂ ಲೋಕಂ ಜಯತಿ ಯ ಏವಂ ವೇದ ।**

ವಿದ್ವತ್ಪ್ರಸಿದ್ಧ್ಯಾ ಛಂದಾಂಸಿ ಪ್ರಶಂಸತಿ—ವಾಜೋಽನ್ನಂ ಹವಿರ್ಲಕ್ಷಣಂ ತದ್ಯುಕ್ತೋ ಜ್ಯೋತಿಷ್ಟೋಮೋ ವಾಜೀ । ಸ ಚ ಸುಹಿತಃ ಸಮ್ಯಗನುಷ್ಠಿತಃ ಸುಧಾಯಾಮಮೃತೇ ಸ್ವರ್ಗೇ ದಧಾತಿ ಯಜಮಾನಂ ಸ್ಥಾಪಯತೀತಿ ಶೇಷಃ । ಅನೇನ ಪ್ರಕಾರೇಣ ತದ್ವೈ ತಸ್ಮಿನ್ನೇವ ಯಜ್ಞಪ್ರತಿಪಾದಕೇ ಶಾಸ್ತ್ರೇ ಯದಿದಂ ವಚನಮಭಿಜ್ಞಾ ಆಹುಸ್ತತ್ತು ಚ್ಛಂದಾಂಸಿ ವೈ ತದ್ವಚನಂ ಯಥೋಕ್ತಗಾಯತ್ರ್ಯಾದಿಚ್ಛಂದಾಸ್ಯೇವಾಭಿಲಕ್ಷ್ಯ ಉಕ್ತಂ ॥ ಯಸ್ಮಾಚ್ಛಂದಾಂ-ಸ್ಯೇನಂ ಯಜಮಾನಂ ಸುಧಾಯಾಂ ಸ್ವರ್ಗೇ ಸ್ಥಾಪಯಂತಿ ತಸ್ಮಾಚ್ಛಂದೋಭಿಪ್ರಾಯೇಣೈ-

ತದ್ವಚನಂ ಯುಕ್ತಂ ॥ ವೇದನಂ ಪ್ರಶಂಸತಿ ಮನಸಾನುಧ್ಯಾತುಮನರ್ಹಮತ್ಯಪೂರ್ವ-ಸುಖೋಪೇತಂ ಲೋಕಂ ಪ್ರಾಪ್ನೋತಿ ॥

ವಾಜಃ ಎಂದರೆ ಹವೀರೂಪವಾದ ಅನ್ನವು. ಇಂತಹ ಅನ್ನದಿಂದ ಸಹಿತವಾದ ಅಗ್ನಿಷ್ಟೋಮಕ್ಕೆ ವಾಜೀ ಎಂದು ಹೆಸರು. ಇಂತಹ ಅಗ್ನಿಷ್ಟೋಮಯಾಗವನ್ನು ಚೆನ್ನಾಗಿ ಅನುಷ್ಠಾನಮಾಡಿದರೆ ಅದರಿಂದ ಯಜಮಾನನು ಸ್ವರ್ಗವನ್ನು ಪಡೆಯುವನು. ಎಂದರೆ ಈ ಅಗ್ನಿಷ್ಟೋಮವು ಗಾಯತ್ರ್ಯಾದಿಛಂದಸ್ಸುಗಳಿಂದ ಕೂಡಿರುವುದು. ಎಂದರೆ ಅಗ್ನಿಷ್ಟೋಮವು ಛಂದೋರೂಪವಾಗಿರುವುದು ಆದ್ದರಿಂದ ಈ ಗಾಯತ್ರ್ಯಾದಿಛಂದಸ್ಸುಗಳು ಯಜ್ಞಮಾಡುವ ಯಜಮಾನನ್ನು ಸ್ವರ್ಗದಲ್ಲಿ ಸುಖವಾಗಿರುವಂತೆ ಸ್ಥಾಪಿಸುವವು ಮತ್ತು ಈ ಯಜಮಾನನಿಗೆ ಮನಸ್ಸಿನಿಂದಲೂ ಊಹಿಸಲು ಅಸಾಧ್ಯವಾದ ಸುಖಸಂತೋಷಗಳಿಂದ ಕೂಡಿದ ಲೋಕವೂ ಲಭಿಸುವುದು

**ತದ್ವೈಕ ಆಹುರ್ಧಾತಾರಮೇವ ಸರ್ವಾಸಾಂ ಪುರಸ್ತಾತ್ಪುರಸ್ತಾದಾ ಜ್ಯೇನ ಪರಿಯಜೇತ್ತದಾಸು ಸರ್ವಾಸು ಮಿಥುನಂ ದಧಾತೀತಿ ॥**

ಅತ್ರ ಕಂಚಿತ್ಪೂರ್ವಪಕ್ಷಮುದ್ಭಾವಯತಿ—ತದ್ಧ ತಸ್ಮಿನ್ನೇವ ಛಂದಸಾಂ ಶ್ರಮಪರಿಹಾರಾರ್ಥೇ ಹವಿಷಾಂ ಪಂಚಕೇ ಕೇಚಿತ್ಪೂರ್ವಪಕ್ಷಿಣ ಏವಮಾಹುಃ । ಸರ್ವಾಸಾಮನುಮತ್ಯಾದೀನಾಂ ಸ್ತ್ರೀದೇವತಾನಾಂ ಪುರಸ್ತಾತ್ಪುರುಷದೇವತಾರೂಪಂ ಧಾತಾರಮೇವಾಽಽಜ್ಯ-ದ್ರವ್ಯೇಣ ಪರಿತೋ ಯಜೇತ್ ॥ ಸರ್ವಸಂಗ್ರಹಾರ್ಥಂ ಪುರಸ್ತಾದಿತಿ ವೀಪ್ಸಾ ॥ ತತ್ರೇನ ಸರ್ವತ್ರ ಧಾತೃವಿಷಯಪ್ರಯೋಗೇಣಾಽಽಸು ಸರ್ವಾಸು ಸ್ತ್ರೀದೇವತಾಸು ಮಿಥುನಂ ಸಂಪಾದಯತಿ ॥

ಇಲ್ಲಿ ಒಂದು ಪೂರ್ವಪಕ್ಷವಿರುವುದು—ಮೇಲೆ ಹೇಳಿದ ಛಂದಸ್ಸುಗಳ ಶ್ರಮಪರಿಹಾರಾರ್ಥವಾಗಿ ಅರ್ಪಿಸುವ ಐದು ಹವಿಸ್ಸುಗಳ ವಿಷಯದಲ್ಲಿ ಕೆಲವರು ಈ ವಿಧವಾದ ಆಕ್ಷೇಪವನ್ನು ಮಾಡುವರು. ಅನುಮತಿಯೇ ಮೊದಲಾದ ಸ್ತ್ರೀದೇವತೆಗಳಿಗೆ ಮುಂಚೆಯೇ ಪುರುಷದೇವತಾರೂಪವಾದ ಧಾತೃವಿಗೆ ಆಜ್ಯದ್ರವ್ಯದಿಂದ ಹವಿಸ್ಸನ್ನು ಅರ್ಪಿಸಬೇಕು. ಆದರಿಂದ ಎಂದರೆ ಧಾತೃವಿಗೆ ಆಜ್ಯದ್ರವ್ಯರೂಪವಾದ ಹವಿಸ್ಸನ್ನರ್ಪಿಸುವುದರಿಂದ ಪುರುಷದೇವತೆಗೂ ಸಮಸ್ತ ಸ್ತ್ರೀ ದೇವತೆಗಳಿಗೂ ಮಿಥುನ (ಸಂಯೋಗ)ವನ್ನುಂಟುಮಾಡಿದಂತಾಗುವುದು ಎಂದು.

**ತದು ವಾ ಆಹುರ್ಜಾಮಿ ವಾ ಏತದ್ಯಜ್ಞೇ ಕ್ರಿಯತೇ ಯತ್ರ ಸಮಾನೀ-ಭ್ಯಾಮೃಗ್ಭ್ಯಾಂ ಸಮಾನೇಽಹನ್ಯಜತೀತಿ ॥**

ತಮಿಮಂ ಪೂರ್ವಪಕ್ಷಂ ದೂಷಯತಿ—ತದು ವೈ ತತ್ರೈವ ಪೂರ್ವೋಕ್ತವಿಷಯೇ ಕೇಚಿದಭಿಜ್ಞಾಃ ಏವಮಾಹುಃ । ಯತ್ರ ಯಸ್ಮಿನ್ಪ್ರಯೋಗೇ ಸಮಾನೀಭ್ಯಾಮೇಕವಿಧಾಭ್ಯಾ-ಮೃಗ್ಭ್ಯಾಂ ಸಮಾನೇಽಹನ್ನೇಕಸ್ಮಿನ್ನೇವಾಹನಿ ಯಜತಿ ತದೇತದನುಷ್ಠಾನಂ ಯಜ್ಞೇ ಜಾಮಿ ವೈ, ಆಲಸ್ಯಮೇವ ಕ್ರಿಯತೇ ಸಂಪಾದ್ಯತೇ । ಪ್ರಯುಕ್ತಯೋರೇವರ್ಚೋಃ ಪುನಃ ಪ್ರಯೋಗಸ್ಯ ಚರ್ವಿತಚರ್ವಣಸದೃಶತ್ವಾತ್ ॥ ಧಾತೃದೇವತಾಕೇ ಪುರೋಡಾಶೇ ಧಾತಾ

**ದದಾತು ದಾಶುಷೇ ಇತಿ ಪುರೋನುವಾಕ್ಯಾ ॥ ಧಾತಾ ಪ್ರಜಾನಾಮಿತಿ ಯಾಜ್ಯಾ ॥ ತತ್ರ ಯದ್ಯುಪರಿತನಾನಾಮಪಿ ಚತುರ್ಣಾಂ ಹವಿಷಾಂ ಪುರಸ್ತಾದಾಜ್ಯೇನ ಧಾತಾರಂ ಯಜೇತ್ತ-ದಾನೀಮಿದಮೃಗ್ದ್ವಯಂ ಪುನರಪಿ ಚತುರ್ವಾರಮಾವರ್ತನೀಯಂ । ತಥಾಸತಿ ನೀರಸೋ ಯಜ್ಞಃ ಫಲಂ ದಾತುಂ ಸಮರ್ಥೋ ನ ಭವೇದಿತ್ಯರ್ಥಃ ॥**

ಮೇಲೆ ಹೇಳಿದ ಪೂರ್ವಪಕ್ಷವನ್ನು ದೂಷಿಸುವರು—ಈ ವಿಷಯದಲ್ಲಿ ಕೆಲವು ಅಭಿಜ್ಞರು (ತಿಳಿದವರು) ಈ ರೀತಿ ಹೇಳುವರು. ಯಾವುದಾದರೂ ಕರ್ಮವನ್ನು ಮಾಡುವಾಗ ಒಂದೇ ವಿಧವಾದ ಎರಡು ಋಕ್ಕುಗಳಿಂದ ಒಂದೇ ದಿವಸ ಯಜ್ಞವನ್ನು ಮಾಡಿದರೆ ಅದು ನಿಷ್ಪ್ರಯೋಜನವು. ಮಾಡಿದ್ದನ್ನೇ ಮಾಡುವುದು, ಹೇಳಿದ್ದನ್ನೇ ಹೇಳುವುದೂ ಸಹ ವ್ಯರ್ಥವು. ಸುಮ್ಮನೆ ಕಾಲಯಾಪನೆಮಾತ್ರ. ಇದಕ್ಕೆ ಚರ್ವಿತಚರ್ವಣವೆನ್ನುವರು. ಧಾತೃದೇವತೆಯನ್ನುದ್ದೇಶಿಸಿ ಪುರೋಡಾಶವನ್ನು ಹೋಮಮಾಡುವಾಗ **ಧಾತಾ ದದಾತು ದಾಶುಶೇ** ಎಂಬ ಮಂತ್ರವು ಪುರೋನುವಾಕ್ಯಾ. **ಧಾತಾ ಪ್ರಜಾನಾಂ** ಎಂಬುದು ಯಾಜ್ಯಾಮಂತ್ರವು. ಈ ಧಾತೃದೇವತೆಯು ಅನಂತರ ಹವಿಸ್ಸನ್ನರ್ಪಿಸುವ ರಾಕಾ ಮೊದಲಾದ ನಾಲ್ಕು ಸ್ತ್ರೀದೇವತೆಗಳಿಗೂ ಹವಿಸ್ಸನ್ನರ್ಪಿಸುವಾಗ ಮತ್ತೆ ನಾಲ್ಕಾವರ್ತಿಯೂ ಯಾಜ್ಯಾಪುರೋನುವಾಕ್ಯಮಂತ್ರಗಳನ್ನು ಪಠಿಸಬೇಕಾಗುವುದು. ಇದು ಕೇವಲ ವ್ಯರ್ಥವಾದುದು ಇದರಿಂದ ಯಜ್ಞವು ಉದ್ದಿಷ್ಟವಾದ ಫಲವನ್ನು ಕೊಡಲು ಸಮರ್ಥವಾಗುವುದಿಲ್ಲ.

**ಯದಿಹ ವಾ ಅಪಿ ಬಹ್ವ್ಯ ಇವ ಜಾಯಾಃ ಪತಿರ್ವಾವ ತಾಸಾಂ ಮಿಥು-ನಂ ತದ್ಯದಾಸಾಂ ಧಾತಾರಂ ಪುರಸ್ತಾದ್ಯಜತಿ ತದಾಸು ಸರ್ವಾಸು ಮಿಥುನಂ ದಧಾತಿ ॥**

**ಕಥಂ ತರ್ಹಿ ಮಿಥುನಸಿದ್ಧಿಃ ಸ್ಯಾದಿತ್ಯಾಶಂಕ್ಯ ಲೌಕಿಕದೃಷ್ಟಾಂತೇನ ತತ್ಸಿದ್ಧಿಮುಪ-ಪಾದಯತಿ—ಯದಿಹ ವಾ ಯದ್ಯಪಿ ಲೋಕೇ ಜಾಯಾ ಬಹ್ವ್ಯ ಇವ ಬಹುಸಂಖ್ಯಾಕಾ ಏವ ಸ್ಯುಸ್ತಥಾಪಿ ಪತಿರ್ವಾವ ಪತಿರೇಕ ಏವ ಸಂಸ್ತಾಸಾಂ ಮಿಥುನಂ ಸಂಪಾದಯತಿ । ತಥಾ ಸತಿ ಯದ್ಯಾಸಾಮನುಮತ್ಯಾದೀನಾಂ ಪುರಸ್ತಾದ್ಧಾತಾರಂ ಸಕೃದೇವ ಯಜತಿ ತದಾನೀಮಾಸು ಸರ್ವಾಸ್ವನುಮತ್ಯಾದಿಷು ಸ ಏಕ ಏವ ಧಾತಾ ಮಿಥುನಂ ಸಂಪಾದಯತಿ ॥**

ಮಿಥುನ ಸಿದ್ಧಿಯಾಗುವುದು ಹೇಗೆ ಎಂಬ ವಿಷಯವನ್ನು ಶಂಕಿಸಿ ಲೌಕಿಕದೃಷ್ಟಾಂತದಿಂದ ಆ ವಿಷಯವನ್ನು ವಿಶದ ಪಡಿಸುವರು—ಲೋಕವ್ಯವಹಾರದಲ್ಲಿ ಒಬ್ಬ ಪುರುಷನಿಗೆ ಅನೇಕಮಂದಿ ಪತ್ನಿಯರಿರುವರು. ಎಂದರೆ ಅನೇಕ ಮಂದಿ ಸ್ತ್ರೀಯರಿಗೂ ಒಬ್ಬನೇ ಪತಿಯಾಗಿದ್ದು ಆ ಪುರುಷನಿಗೂ ಆ ಅನೇಕಮಂದಿ ಸ್ತ್ರೀಯರಿಗೂ ಪತಿಪತ್ನಿ ಸಂಬಂಧವಿರುವುದು. ಇದು ಲೋಕಪ್ರಸಿದ್ಧವಾಗಿದೆ. ಹೀಗಿರುವಾಗ ಅನುಮತಿಯೇ ಮೊದಲಾದ ಸ್ತ್ರೀದೇವತೆಗಳಿಗೆಲ್ಲಾ ಮೊದಲು ಒಂದಾವರ್ತಿಮಾತ್ರ ಧಾತೃದೇವತೆಯನ್ನು ಪೂಜಿಸುವುದರಿಂದ ಒಬ್ಬನಾದ ಧಾತೃವಿಗೂ ಅನೇಕಮಂದಿ ಅನುಮತಿಮೊದಲಾದ ಸ್ತ್ರೀದೇವತೆಗಳಿಗೂ ಮಿಥುನಭಾವವು ಉಂಟಾಗುವುದು.

## ಇತಿ ನು ದೇವಿಕಾನಾಂ ।

**ವಕ್ಷ್ಯಮಾಣೈರ್ಹವಿರ್ಭಿಃ ಸಾಂಕರ್ಯಶಂಕಾಂ ವಾರಯಿತುಮುಕ್ತಾರ್ಥಂ ವಿವಿಚ್ಯ ನಿಗಮಯತಿ—ಅನೇನೋಕ್ತಪ್ರಕಾರೇಣ ದೇವಿಕಾಭಿಧಾನಾಂ ದೇವತಾನಾಂ ಹವೀಂಷ್ಯುಕ್ತಾ-ನೀತಿ ಶೇಷಃ ॥**

ಈ ಪ್ರಕಾರವಾಗಿ ದೇವಿಕಾ ಎಂಬ ಹೆಸರಿನ (ಸ್ತ್ರೀ) ದೇವತೆಗಳಿಗೆ ಅರ್ಪಿಸಲ್ಪಡಬೇಕಾದ ಹವಿಸ್ಸುಗಳ ವಿಷಯವನ್ನು ಹೇಳಿದ್ದಾಯಿತು.



### *English Translation*

**(The offerings to Dhatar and the Devikas: Anumati, Raka, Sinivali, Kuhu)**

The metres (chhandansi) having carried the offerings to the gods became (once) tired, and stood still on the latter part of the sacrifice's tail, just as a horse or a mule after having carried a load to a distant place stands still.

In order to refresh the fatigued deities of the metres the priest ought, after the Purodasa belonging to the animal slaughtered for Mitra-Varuna has been offered, portion out the rice for the deviki havimshi (offerings for the interior deities).

For Dhatar he should make a rice ball (the Purodasa) to be put on twelve potsherds. Dhatar is the Vashatkara.

To Anumati (he should offer) a portion of boiled rice (charu); for Anumati is Gayatri.

To Raka (he should offer) a portion of boiled rice; for she is Trishtubh.

The same (he should offer) to Sinivali and Kuhu; for Sinivali is Jagati and Kuhu Anushtubh. These are all the metres. For all other metres (used at the sacrifice) follow the Gayatri Trishtubh, Jagati, and Anushtubh, as their models. If, therefore, one sacrifices for these metres only, it has the same effect, as if he had sacrificed for all of them.

The common saying, "the horse if well managed (suhita) puts him (the rider) into ease," is applicable to the metres; for they put if well treated the sacrificer into ease (sudha, comfort or happiness of any kind). He who has such a knowledge obtains such a world (of bliss) as he did not expect.

Regarding these (devika) oblations some are of opinion that before each oblation to all the several goddesses, the priest ought to make an oblation of melted butter to Dhatar; for thus he would make all the goddesses to whom oblations are given along with the Dhatar cohabit with the Dhatar.

About this they say: it is laziness at a sacrifice to repeat the same two verses (the Puronuvakya and Yajya for the Dhatar) on the same day (several times). (It is sufficient to repeat these two verses once only). For even many wives cohabit with one and the same husband only, When the Hotar, therefore, repeats, before addressing the four goddesses, the Yajya verse for the Dhatar. he

thus cohabits with all goddesses. So much about the oblations to the minor goddesses (devika).

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಪಂಚದಶಾಧ್ಯಾಯೇ ತೃತೀಯಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನೈದನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವಾದುದು.**



## ಅಥ ಪಂಚದಶಾಧ್ಯಾಯೇ ಚತುರ್ಥಃ ಖಂಡಃ

### ಹದಿನೈದನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ಸೂರ್ಯನಿಗೂ, ದೇವಿಯರು, ದ್ಯೌಃ ಉಷಸ್ಸು, ಗೌಃ, ಪೃಥಿವೀ ಎಂಬ ಛಂದಸ್ಸುಗಳಿಂದ ಉಕ್ತರಾದ ಸ್ತ್ರೀದೇವತೆಗಳಿಗೆ ಅರ್ಪಿಸುವ ಆಹುತಿಗಳು. ದೇವಿಕಾಃ ಮತ್ತು ದೇವಿಯರಿಗೆ ಯಾವಾಗ ಆಹುತಿಗಳನ್ನರ್ಪಿಸಬೇಕು ? ವೃಧದ್ಯುಮ್ನ ಎಂಬುವನ ವೃತ್ತಾಂತವು]



### ಅಥ ದೇವೀನಾಂ

**ಹವಿರಂತರಾಣಿ ಪ್ರತಿಜಾನೀತೇ—ಅಥ ದೇವೀ ನಾಮಕಾನಾಂ ದೇವತಾನಾಂ ಹವೀಂಷಿ ನಿರ್ವಪೇದಿತಿ ಶೇಷಃ ||**

ಈಗ ದೇವೀ ಅಥವಾ ದೇವಿಕಾ ಎಂಬ ಹೆಸರಿನ ಹವಿಸ್ಸುಗಳನ್ನು ಯಾವಾಗ ಅರ್ಪಿಸಬೇಕು ಅವುಗಳ ವಿಷಯವನ್ನು ಇಲ್ಲಿ ವಿವರಿಸಲಾಗುವುದು.

**ಸೂರ್ಯಾಯ ಪುರೋಳಾಶಮೇಕಕಪಾಲಂ ಯಃ ಸೂರ್ಯಃ ಸ ಧಾತಾ ಸ ಉ ಏವ ವಷಟ್ಕಾರಃ ।**

**ತತ್ರ ಪ್ರಥಮಂ ಹವಿಃ ವಿಧತ್ತೇ—ಏಕ ಕಪಾಲಂ ನಿರ್ವಪೇದಿತಿ ಶೇಷಃ । ಸೂರ್ಯಸ್ಯ ಪೂರ್ವೋಕ್ತಂ ಧಾತೃಸ್ವರೂಪತ್ವಂ ತದ್ದ್ವಾರಾ ವಷಟ್ಕಾರರೂಪತ್ವಂ ಚೋಪಚರ್ಯ ತದೀಯ-ಶ್ರಮಾಪನಯೋ ದ್ರಷ್ಟವ್ಯಃ ||**

ಸೂರ್ಯನೇ ಧಾತೃವೆಂದು ಹೇಳಲ್ಪಡುವನು. ಅವನೇ ವಷಟ್ಕಾರಸ್ವರೂಪನು. ಈ ದೇವನಿಗೆ ಒಂದು ಕಪಾಲದಲ್ಲಿ ಪಕ್ವವಾದ (ಸಂಸ್ಕರಿಸಲ್ಪಟ್ಟ) ಪುರೋಡಾಶದ್ರವ್ಯವನ್ನು ಅರ್ಪಿಸಬೇಕು. ಇದರಿಂದ ವಷಟ್ಕಾರದೇವತೆಯ ಶ್ರಮವು ಪರಿಹಾರ ವಾಗುವುದು.

ದಿವೇ ಚರುಂ ಯಾ ದ್ಯೌಃ ಸಾಽನುಮತಿಃ ಸೋ ಏವ ಗಾಯತ್ರ್ಯುಷಸೇ ಚರುಂ ಯೋಷಾಃ ಸಾ ರಾಕಾ ಸೋ ಏವ ತ್ರಿಷ್ಟುಬ್ಗವೇ ಚರುಂ ಯಾ ಗೌಃ ಸಾ ಸಿನೀವಾಲೀ ಸೋ ಏವ ಜಗತೀ ಪೃಥಿವ್ಯೈ ಚರುಂ ಯಾ ಪೃಥಿವೀ ಸಾ ಕುಹೂಃ ಸೋ ಏವಾನುಷ್ಟುಪ್ ॥

ಉತ್ತರಾಣಿ ಚತ್ವಾರಿ ಹವೀಂಷಿ ವಿಧತ್ತೇ—ಪ್ರಥಮಹವಿರ್ವ್ಯಾಖ್ಯೇಯಂ ।

ಮುಂದಿನ ನಾಲ್ಕು ಹವಿಸ್ಸುಗಳನ್ನು ವಿವರಿಸುವರು---ದ್ಯುಲೋಕಾಭಿಮಾನಿಯಾದ ದೇವತೆಗೆ ಚರು (ಪಕ್ವಾನ್ನ)ವನ್ನ ರ್ಪಿಸಬೇಕು. ದ್ಯುಲೋಕದೇವತೆಯೇ ಅನುಮತಿಯೆಂದು ಹೇಳಲ್ಪಡುವುದು. ಅನುಮತಿಯೇ ಗಾಯತ್ರೀ ಛಂದಸ್ಸಿನ ರೂಪವು ; ಅನಂತರ ಉಷಸ್ಸಿಗೆ ಚರುವನ್ನರ್ಪಿಸಬೇಕು. ಉಷೋಭಿಮಾನಿದೇವತೆಯೇ ರಾಕಾ ಎಂದು ಹೇಳಲ್ಪಡುವುದು ಈ ರಾಕಾ ಎಂಬ ದೇವಡೆಯೇ ತ್ರಿಷ್ಟುಪ್ ಛಂದಸ್ಸಿನ ರೂಪವು; ಅನಂತರ ಗೋವನ್ನುದ್ದೇಶಿಸಿ ಚರುವನ್ನರ್ಪಿಸಬೇಕು. ಈ ಗೋವೇ ಸಿನೀವಾಲೀ ಎಂಬ ದೇವತೆಯು. ಈ ಸಿನೀವಾಲೀ ಎಂಬ ದೇವತೆಯೇ ಜಗತೀಛಂದಸ್ಸಿನ ಸ್ವರೂಪವು ; ಅನಂತರ ಪೃಥಿವೀದೇವತೆಯನ್ನುದ್ದೇಶಿಸಿ ಚರವನ್ನರ್ಪಿಸಬೇಕು. ಈ ಪೃಥಿವಿಯೇ ಕುಹೂಃ ಎಂಬ ದೇವತೆಯು. ಈ ಕುಹೂದೇವತೆಯು ಅನುಷ್ಟುಪ್ ಛಂದಸ್ಸಿನ ಸ್ವರೂಪವಾಗಿರುವುದು.

ಏತಾನಿ ವಾವ ಸರ್ವಾಣಿ ಛಂದಾಂಸಿ ಗಾಯತ್ರಂ ತ್ರೈಷ್ಟುಭಂ ಜಾಗತಮಾನುಷ್ಟುಭಮನ್ವನ್ಯಾನ್ಯೇತಾನಿ ಹಿ ಯಜ್ಞೇ ಪ್ರತಮಾಮಿವ ಕ್ರಿಯಂತ ಏತೈರ್ಹ ವಾ ಅಸ್ಯ ಛಂದೋಭಿರ್ಯಜತಃ ಸರ್ವೈಶ್ಛಂದೋಭಿರಿಷ್ಟಂ ಭವತಿ ಯ ಏವಂ ವೇದ ತದ್ವೈ ಯದಿದಮಾಹುಃ ಸುಧಾಯಾಂ ಹ ವೈ ವಾಜೀ ಸುಹಿತೋ ದಧಾತೀತಿ ಛಂದಾಂಸಿ ವೈ ತತ್ಸುಧಾಯಾಂ ಹ ವಾ ಏನಂ ಛಂದಾಂಸಿ ದಧತ್ಯನನುಧ್ಯಾಯಿನಂ ಲೋಕಂ ಜಯತಿ ಯ ಏವಂ ವೇದ ತದ್ಧೈಕ ಆಹುಃ ಸೂರ್ಯಮೇವ ಸರ್ವಾಸಾಂ ಪುರಸ್ತಾತ್ಪುರಸ್ತಾದಾಜ್ಯೇನ ಪರಿಯಜೇತ್ತದಾಸು ಸರ್ವಾಸು ಮಿಥುನಂ ದಧಾತೀತಿ ತದು ವಾ ಆಹುರ್ಜಾಮಿ ವಾ ಏತದ್ಯಜ್ಞೇ ಕ್ರಿಯತೇ ಯತ್ರ ಸಮಾನೀಭ್ಯಾಮೃಗ್ಭ್ಯಾಂ ಸಮಾನೇಽಹನ್ಯಜತೀತಿ ಯದಿಹ ವಾ ಅಪಿ ಬಹ್ವ್ಯ ಇವ ಜಾಯಾಃ ಪತಿರ್ವಾವ ತಸಾಂ ಮಿಥುನಂ ತದ್ಯದಾಸಾಂ ಸೂರ್ಯಂ ಪುರಸ್ತಾದ್ಯಜತಿ ತದಾಸು ಸರ್ವಾಸು ಮಿಥುನಂ ದಧಾತಿ ॥

**ಏತೇಷಾಂ ಹವಿಷಾಂ ಪ್ರಶಂಸಾರ್ಥಂ ಪೂರ್ವೋಕ್ತಮರ್ಥವಾದಂ ಪುನರಪಿ ಪಠತಿ ॥ ಧಾತಾರಮಿತ್ಯೇತಸ್ಯ ಸ್ಥಾನೇ ಸೂರ್ಯಮಿತ್ಯೇತಾವಾನೇನ ವಿಶೇಷಃ । ಅನ್ಯತ್ಸರ್ವಂ ಪೂರ್ವವತ್॥**

ಮೇಲೆ ಹೇಳಿದ ನಾಲ್ಕು ಹವಿಸ್ಸುಗಳನ್ನು ಮತ್ತೆ ಪ್ರಶಂಸೆ ಮಾಡುವರು. ಈ ನಾಲ್ಕು ಛಂದಸ್ಸುಗಳು ಎಂದರೆ, ಗಾಯತ್ರೀ, ತ್ರಿಷ್ಟುಪ್, ಜಗತೀ, ಅನುಷ್ಟುಪ್ ಎಂಬ ನಾಲ್ಕು ಛಂದಸ್ಸುಗಳೇ ಯಜ್ಞದಲ್ಲಿ ಪ್ರಧಾನಭೂತವಾಗಿ ಉಪಯೋಗಿಸಲ್ಪಡುವವು. ಇವುಗಳನ್ನನುಸರಿಸಿಯೇ ಇತರ ಛಂದಸ್ಸುಗಳ ಪ್ರಯೋಗವಿರುವುದು. ಎಂದರೆ ಈ ಮುಖ್ಯವಾದ ನಾಲ್ಕು ಛಂದಸ್ಸುಗಳ ಪ್ರಯೋಗದಿಂದ ಇತರ ಎಲ್ಲಾ ಛಂದಸ್ಸುಗಳನ್ನು ಉಪಯೋಗಿಸಿದಂತೆಯೇ ಇಗುವುದು. ಮತ್ತು ಚೆನ್ನಾಗಿ ನೆರವೇರಿಸಲ್ಪಟ್ಟ ಅಗ್ನಿಷ್ಟೋಮವೆಂಬ ಈ ಯಾಗವು ಯಜಮಾನನನ್ನು ಸ್ವರ್ಗಲೋಕದಲ್ಲಿ ಸ್ಥಾಪಿಸುವುದು. ಎಂದರೆ ಮೇಲೆ ಹೇಳಿದ ಗಾಯತ್ರ್ಯಾದಿ ಛಂದಸ್ಸುಗಳು ಯಜ್ಞಮಾಡುವ ಯಜಮಾನನಿಗೆ ಅವನು ಊಹಿಸುವುದಕ್ಕೂ ಸಾಧ್ಯವಿಲ್ಲದ ಉತ್ತಮ ಲೋಕಪ್ರಾಪ್ತಿಯನ್ನು ಉಂಟುಮಾಡುವುವು. ಈ ವಿಷಯವನ್ನೆಲ್ಲಾ ತಿಳಿದವನೂ ಸಹ ಉತ್ತಮಲೋಕವನ್ನು ಪಡೆಯುವನು. ಕೆಲವರು ಈ ರೀತಿ ಹೇಳುವರು—ಈ ದೇವಿ ಮತ್ತು ದೇವಿಕಾ ಎಂಬ ಆಹುತಿಗಳನ್ನರ್ಪಿಸುವಾಗ ಸೂರ್ಯನಿಗೇ ಮೊದಲು ಆಜ್ಯದಿಂದ ಆಹುತಿಯನ್ನರ್ಪಿಸಿ ಅನಂತರ ಪ್ರತಿಯೊಂದು ಸ್ತ್ರೀದೇವತೆಗೂ ದೇವಿಕಾ ಎಂಬ ಆಹುತಿಯನ್ನು ಅರ್ಪಿಸಬೇಕು. ಎಂದರೆ ಪ್ರತಿಯೊಂದು ಸ್ತ್ರೀದೇವತೆಗೆ ಆಹುತಿಯನ್ನು ಅರ್ಪಿಸುವುದಕ್ಕೆ ಮೊದಲು ಸೂರ್ಯನಿಗೆ ಆಹುತಿಯನ್ನು ಅರ್ಪಿಸಬೇಕು. ಹೀಗೆ ಮಾಡಿದರೆ ಸೂರ್ಯನಿಗೂ ಆ ಸ್ತ್ರೀದೇವತೆಗೂ ಮಿಥುನವು (ದಾಂಪತ್ಯವು) ಸಿದ್ಧಿಸುವುದು ಎಂದರೆ ಪ್ರತಿಯೊಂದು ಸ್ತ್ರೀದೇವತೆಗೆ ಹವಿಸ್ಸನ್ನು ಅರ್ಪಿಸುವಾಗಲೂ ಸೂರ್ಯನಿಗೂ ಹವಿಸ್ಸನ್ನರ್ಪಿಸಬೇಕು. ಎಂದರೆ ನಾಲ್ಕು ಸ್ತ್ರೀದೇವತೆಗಳ ಜತೆಯಲ್ಲಿ ಸೂರ್ಯನಿಗೂ ನಾಲ್ಕಾವರ್ತಿ ಹವಿಸ್ಸನ್ನು ಅರ್ಪಿಸಬೇಕು ಎಂದು ಕೆಲವರು ಹೇಳುವರು. ಆದರೆ ಈ ವಿಧಾನವು ಸರಿಯಲ್ಲ. ಸೂರ್ಯನಿಗೆ ನಾಲ್ಕಾವರ್ತಿ ಹವಿಸ್ಸನ್ನರ್ಪಿಸುವುದು ಕೇವಲ ವ್ಯರ್ಥವು ಒಂದು ದಿನದಲ್ಲಿ ಒಂದು ಕಾರ್ಯದಲ್ಲಿ ಒಂದಾವರ್ತಿ ಅರ್ಪಿಸುವುದೇ ಯುಕ್ತವು. ನಾಲ್ಕಾವರ್ತಿಮಾಡಬೇಕಾಗಿಲ್ಲ. ಏಕೆಂದರೆ ಲೋಕವ್ಯವಹಾರದಲ್ಲಿ ಒಬ್ಬ ಪುರುಷನಿಗೆ ನಾಲ್ಕು ಮಂದಿ ಪತ್ನಿಯರಿದ್ದರೆ ಪುರುಷನಿಗೆ ಒಂದಾವರ್ತಿ ಸತ್ಕಾರಮಾಡಿದರೆ ಎಲ್ಲರನ್ನೂ ಸತ್ಕರಿಸಿದಂತಾಗುವುದು ಪ್ರತಿಪತ್ನಿಯ ಜೊತೆಯಲ್ಲಿಯೂ ಪುರುಷನನ್ನು ನಾಲ್ಕಾವರ್ತಿ ಸತ್ಕರಿಸಬೇಕಾಗಿಲ್ಲ. ಏಕೆಂದರೆ ಪತ್ನಿಯರು ಅನೇಕ ಮಂದಿ ಇದ್ದರೂ ಪುರುಷನು ಒಬ್ಬನೇ ಇರುವನು. ಇವರೆಲ್ಲರನ್ನೂ ಒಂದಾವರ್ತಿಮಾತ್ರ ಸತ್ಕರಿಸುವುದರಿಂದ ಎಲ್ಲರನ್ನೂ ಸತ್ಕರಿಸಿದಂತಾಗುವುದಲ್ಲದೆ ಪುರುಷನಿಗೂ ಅವನ ಅನೇಕಮಂದಿ ಪತ್ನಿಯರಿಗೂ ಮಿಥುನ (ದಾಂಪತ್ಯ) ಭಾವವನ್ನು ಕಲ್ಪಿಸಿದಂತಾಗುವುದು ಎಂದು ಪ್ರಯೋಗಕರ್ಮದಲ್ಲಿ ಅಭಿಜ್ಞರಾದವರು ಹೇಳುವರು. ಇದು ಸಮಂಜಸವಾಗಿಯೇ ಇರುವುದು.

ತಾ ಯಾ ಇಮಾಸ್ತಾ ಅಮೂರ್ಯಾ ಅಮೂಸ್ತಾ ಇಮಾ ಅನ್ಯತರಾಭಿರ್ವಾವ ತಂ ಕಾಮಮಾಪ್ನೋತಿ ಯ ಏತಾಸೂಭಯೀಷು.

**ದೇವಿಕಾ ನಾಮ್ನಾಂ ದೇವೀ ನಾಮ್ನಾಂ ಚ ಹವಿಷಾಂ ತುಲ್ಯಂ ಸಾಮರ್ಥ್ಯಮಭಿಪ್ರೇತ್ಯ ವಿಕಲ್ಪಂ ದರ್ಶಯತಿ । ತಾ ದೇವೀ ನಾಮ್ನಾ ಪ್ರಸಿದ್ಧಾ ಇಮಾ ಇದಾನೀಮುಕ್ತಾಃ ಸೂರ್ಯಾಯ ಪುರೋಡಾಶಮಿತ್ಯಾದಯೋ ಯಾಃ ಸಂತಿ ತಾ ಅಮೂಃ ಪ್ರಾಕ್ತನಗ್ರಂಥೇನೋಕ್ತಾ ಧಾತ್ರೇ ಪುರೋಡಾಶಮಿತ್ಯಾದಯೋ ದೇವಿಕಾಃ ॥ ಏವಂ ದೇವೀರುದ್ದಿಶ್ಯ ದೇವಿಕಾ ತಾದಾತ್ಮ್ಯಮುಕ್ತಂ। ಅಥ ದೇವಿಕಾ ಉದ್ದಿಶ್ಯ ದೇವೀತಾದಾತ್ಮ್ಯಮುಚ್ಯತೇ ಯಾ ಅಮೂಃ ಪೂರ್ವೋಕ್ತಾ ದೇವಿಕಾಃ ಸಂತಿ ತಾ ಇಮಾ ಇದಾನೀಮುಕ್ತಾ ದೇವ್ಯಃ । ಏವಮನ್ಯೋನ್ಯತಾದಾತ್ಮ್ಯೇ ಸತಿ ಯಃ ಕಾಮ ಏತಾಸೂಭಯವಿಧಾಸು ಲಭ್ಯತೇ ತಂ ಕಾಮಮನ್ಯತರಾಭಿರ್ವಾನೈಕವಿಧಾಭಿರೇವ ಪ್ರಾಪ್ನೋತಿ। ತಸ್ಮಾದ್ವಿಕಲ್ಪೇನ ಪ್ರಯೋಗ ಇತ್ಯರ್ಥಃ ॥**

ದೇವೀ ಮತ್ತು ದೇವಿಕಾ ಎಂಬ ಹವಿಸ್ಸುಗಳ ವಿಷಯದಲ್ಲಿ ಇರುವ ಭೇದವನ್ನು ತಿಳಿಸುವರು. ಇದುವರೆಗೆ ಹೇಳಿದ ಅನುಮತಿ ಮೊದಲಾದ ಸ್ತ್ರೀದೇವತೆಗಳು ದೇವೀ ಎಂಬ ಹೆಸರಿನಿಂದ ಪ್ರಸಿದ್ಧರಾಗಿದ್ದಾರೆ. ಸೂರ್ಯನ ಜತೆಯಲ್ಲಿ ಹೇಳಿರುವ ಧಾತ್ರೇ ಪುರೋಡಾಶಂ ಎಂಬ ಮಂತ್ರದಲ್ಲಿ ಹೇಳಿರುವ ಸ್ತ್ರೀದೇವತೆಗಳಿಗೆ ದೇವಿಕಾಃ ಎಂದು ಹೆಸರು. ಈ ದೇವೀಃ ಎಂಬ ದೇವತೆಗಳಿಗೂ ದೇವಿಕಾಃ ಎಂಬ ದೇವತೆಗಳಿಗೂ ತಾದಾತ್ಮ್ಯ (ಸಮಾನತೆ) ಇರುವುದೆಂದು ಹಿಂದೆ ಹೇಳಿದ ವಿಷಯಗಳಿಂದ ಸ್ಪಷ್ಟವಾಗಿರುವುದು. ಹಿಂದೆ ಹೇಳಿದ ದೇವಿಕಾಃ ಎಂಬುವರೇ ಈಗ ಹೇಳಲಾಗಿರುವ ದೇವಿಯರು. ದೇವಿಯರಿಗೂ ದೇವಿಕಾ ಎನ್ನುವವರಿಗೂ ತಾದಾತ್ಮ್ಯ (ಸಮಾನತೆ) ಇರುವುದರಿಂದ ಈ ಉಭಯವಿಧ ದೇವತೆಗಳಿಗೆ ಯಾವ ಭೇದವೂ ಇರುವುದಿಲ್ಲ. ಆದ್ದರಿಂದ ಪ್ರಯೋಗಕಾಲದಲ್ಲಿ ಈ ದೇವತೆಗಳನ್ನು ಯಾವ ಹೆಸರಿನಿಂದಲಾದರೂ ಪಠಿಸಬಹುದು.

## ತಾ ಉಭಯೀರ್ಗತಶ್ರಿಯಃ ಪ್ರಜಾತಿಕಾಮಸ್ಯ ಸಂನಿರ್ವಪೇತ್ ।

**ಅಥ ನೈಮಿತ್ತಿಕಂ ಸಮುಚ್ಚಯಂ ವಿಧತ್ತೇ— ಅನೂಚಾನಾದೀನಾಂ ಮಧ್ಯೇ ಕಶ್ಚಿದ್ಗತಶ್ರೀಃ । ತಥಾ ಚ ಶ್ರುತ್ಯಂತರೇ ಶ್ರೂಯತೇ—'ತ್ರಯೋ ವೈ ಗತಶ್ರಿಯಃ ಶುಶ್ರುವಾನ್ಗ್ರಾಮಣೀ ರಾಜನ್ಯಃ' ಇತಿ ॥ ತಾದೃಶೋ ಗತಶ್ರೀರ್ಯದಿ ಪ್ರಜಾತಿಂ ಪ್ರಜೋತ್ಪಾದನಸಾಮರ್ಥ್ಯಂ ಕಾಮಯತೇ ತದಾನೀಂ ತಸ್ಯ ತಾ ದೇವಿಕಾ ದೇವೀಶ್ಚೋಭಯೀಃ ಸಂನಿರ್ವಪೇತ್ಸಮುಚ್ಚಿತ್ಯ ನಿರ್ವಪೇತ್॥**

ಶ್ರುತ್ಯಂತರದಲ್ಲಿ ಹೀಗೆ ಹೇಳಿದೆ—ತ್ರಯೋ ವೈ ಗತಶ್ರಿಯಃ ಶುಶ್ರುವಾನ್ಗ್ರಾಮಣೀ ರಾಜನ್ಯಃ ಎಂದು ನಿರ್ಧನನಾದ ಪುರುಷನು ಪ್ರಜಾದಿಸಂತತಿ (ಮಕ್ಕಳನ್ನು) ಅಪೇಕ್ಷಿಸುವಾಗ ಈ ಸ್ತ್ರೀದೇವತೆಗಳನ್ನುದ್ದೇಶಿಸಿ ಅರ್ಪಿಸುವ ಆಹುತಿಗಳನ್ನು ದೇವೀಃ ಮತ್ತು ದೇವಿಕಾಃ ಎಂಬ ಎರಡುವಿಧ ಹೆಸರುಗಳನ್ನೂ ಸೇರಿಸಿ ಮಾಡಬೇಕು. ಇದರಿಂದ ಪ್ರಜಾಸಂತತಿಯುಂಟಾಗುವುದು ಇದು ಪ್ರಾಚೀನಸಂಪ್ರದಾಯವು.

## ನ ತ್ವೇಷಿಷ್ಯಮಾಣಸ್ಯ ।

**ಧನಕಾಮಸ್ಯ ಸಮುಚ್ಚಯಂ ನಿಷೇಧತಿ— ಧನಮಪೇಕ್ಷಮಾಣಸ್ಯ ತು ನೈವ ಸಂನಿರ್ವಪೇತ್ ॥ ಉಭಯವಿಧಾನಾಂ ಸಮುಚ್ಚಿಶ್ಯ ನಿರ್ವಾಪೋ ನ ಕಾರ್ಯಃ ॥**

ಆದರೆ ಧನವನ್ನಪೇಕ್ಷಿಸುವ ಪುರುಷನು ಮೇಲೆ ಹೇಳಿದಂತೆ ಮಾಡಬಾರದು. ಎಂದರೆ ದೇವೀ ಮತ್ತು ದೇವಿಕಾ ಎಂಬ ಎರಡುಶಬ್ದಗಳ ಪ್ರಯೋಗವನ್ನು ಮಾಡಬಾರದು. ಯಾವುದಾದರೂ ಒಂದು ವಿಧವಾದ ಶಬ್ದವನ್ನು ಮಾತ್ರ ಉಚ್ಚರಿಸಿ ಮಾಡಬೇಕು.

## ಯದೇನಾ ಏಷಿಷ್ಯಮಾಣಸ್ಯ ಸನ್ನಿರ್ವಪೇದೀಶ್ವರೋ ಹಾಸ್ಯ ವಿತ್ತೇ ದೇವಾ ಆರಂತೋರ್ಯದ್ವಾ ಅಯಮಾತ್ಮನೇಽಲಮಮಂಸ್ತೇತಿ ॥

**ವಿಪಕ್ಷೇ ಬಾಧಕಂ ದರ್ಶಯತಿ—ವಿತ್ತಮೇಷಿಷ್ಯಮಾಣಸ್ಯ ಯದ್ಯೇನಾ ಉಭಯೀಃ ಸಮುಚ್ಚಿತ್ಯ ನಿರ್ವಪೇತ್ತದಾನಾಮಸ್ಯ ಧನಕಾಮಸ್ಯ ವಿತ್ತೆ ದೇವಾಃ ಸರ್ವೇಽಪ್ಯರಂತೋರೀತ್ಯರಃ(?) ಆರಂತುಮಕ್ರೀಡಿತುಂ ಸಮರ್ಥಾ ಭವಂತಿ ॥ ಏತದಪೇಕ್ಷಿತಂ ವಿತ್ತಂ ದ್ವಿಷಂತೀತ್ಯರ್ಥಃ ॥ ತತ್ರ ಹೇತುರುಚ್ಯತೇ ॥ ಯದ್ವೈ ಯಸ್ಮಾದೇವಕಾರಣಾದಯಂ ಧನಾರ್ಥೀ, ಆತ್ಮನೇ ಸ್ವಾರ್ಥಮೇ-**

**ವಾಲಮುಮಂಸ್ತ ಸಂಪೂರ್ಣಂ ವಿತ್ತಂ ಮನಸಾ ಧ್ಯಾತವಾನ್ ॥ ಧನಲೋಭೇನ ಯಾಗಾದಿಷು ಪ್ರವೃತ್ತತ್ವಾದೇತದಪೇಕ್ಷಿತೇ ಧನೇ ದೇವಾನಾಂ ದ್ವೇಷೋ ಯುಜ್ಯತೇ ॥**

ಮೇಲೆ ಹೇಳಿದಂತೆ ಮಾಡದಿದ್ದರೆ ಉಂಟಾಗುವ ಬಾಧಕವನ್ನು ವಿಶದಪಡಿಸುವರು. ಧನಾರ್ಥಿಯಾದವನು ಮೇಲೆ ಹೇಳಿದ ದೇವೀಃ ಮತ್ತು ದೇವೀಃ ಎಂಬ ಎರಡುವಿಧ ಪದಗಳನ್ನೂ ಉಚ್ಚರಿಸಿ ಆಹುತಿಗಳನ್ನರ್ಪಿಸಿದರೆ ದೇವತೆಗಳಿಗೆ ಯಜಮಾನನ ವಿಷಯದಲ್ಲಿ ದ್ವೇಷವುಂಟಾಗುವುದು. ಏಕೆಂದರೆ, ಈ ಯಜಮಾನನು ಧನಾಪೇಕ್ಷಿಯಾಗಿ ಧನದಲ್ಲಿಮಾತ್ರ ಆಸಕ್ತನಾಗಿರುವನು. ಇವನು ಮಾಡುವ ಯಜ್ಞದಲ್ಲಿ ಅಥವಾ ಆಹ್ವಾನಮಾಡುವ ದೇವತೆಗಳಲ್ಲಿ ಇವನಿಗೆ ಆಸಕ್ತಿಯಾಗಲೀ ಭಕ್ತಿಯಾಗಲೀ ಇರುವುದಿಲ್ಲ. ಆದ್ದರಿಂದ ಇವನು ಅಪೇಕ್ಷಿಸುವ ಧನವನ್ನು ದೇವತೆಗಳು ದ್ವೇಷಿಸುವರು.

ತಾ ಹ ಶುಚಿವೃಕ್ಷೋ ಗೌಪಾಲಾಯನೋ ವೃದ್ಧದ್ಯುಮ್ನ ಸ್ಯಾಽಭಿಪ್ರತಾರಿಣಸ್ಯೋಭಯೀರ್ಯಜ್ಞೇ ಸಂಸಿರುವಾಸ ತಸ್ಯ ಹ ರಥಗೃತ್ಸಂ ಗಾಹಮಾನಂ ದೃಷ್ಟ್ವೋವಾಚೇತ್ಥಮಹಮಸ್ಯ ರಾಜನ್ಯಸ್ಯ ದೇವಿಕಾಶ್ಚ ದೇವೀಶ್ಚೋಭಯೀರ್ಯಜ್ಞೇ ಸಮಮಾದಯಂ ಯದಸ್ಯೇತ್ಥಂ ರಥಗೃತ್ಸೋ ಗಾಹತ ಇತಿ ಚತುಃಷಷ್ಟಿಂ ಕವಚಿನಃ ಶಶ್ವದ್ವಾಸ್ಯ ತೇ ಪುತ್ರನಪ್ತಾರ ಆಸುಃ ॥

**ಧನಕಾಮಸ್ಯ ಸಮುಚ್ಚಯಂ ನಿಷಿಧ್ಯ ಪ್ರಜಾಕಾಮಸ್ಯ ಪೂರ್ವತ್ರ ವಿಹಿತಂ ಸಮುಚ್ಚಯಮರ್ಥವಾದೇನ ಪ್ರಶಂಸತಿ—ಶುಚಯಃ ಶುದ್ಧಾಃ ಸಮೀಚೀನಪುಷ್ಕಲಾ ವೃಕ್ಷಾ ಯಸ್ಯ ಮಹರ್ಷೇರಾಶ್ರಮೇ ಸೋಽಯಂ ಶುಚಿವೃಕ್ಷನಾಮಕಃ । ಸಮ್ಯಕ್ತೃಣೋದಕಪ್ರದಾನೇನ ಗೋಶುಶ್ರೂಷಾಂ ಕರೋತೀತಿ ಗೋಪಾಲನಾಮಾ ಕಶ್ಚಿದೃಷಿಸ್ತಸ್ಯಾಪತ್ಯಂ ಗೌಪಾಲಾಯನಃ ಪೂರ್ವೋಕ್ತನಾಮಕಃ ಶುಚಿವೃಕ್ಷಃ ॥ ವೃದ್ಧಂ ಪ್ರಭೂತಂ ದ್ಯುಮ್ನಂ ಧನಂ ಯಸ್ಯ ರಾಜ್ಞಃ ಸೋಽಯಂ ವೃದ್ಧದ್ಯುಮ್ನಃ ॥ ಅಭಿತಃ ಶತ್ರೂನ್ಪ್ರಕರ್ಷೇಣ ತರತಿ ನಿರಾಕರೋತೀತ್ಯಭಿಪ್ರತಾರೀ ಕಶ್ಚಿದ್ರಾಜಾ ತಸ್ಯ ಪುತ್ರ ಆಭಿಪ್ರತಾರಿಣಃ ಪೂರ್ವೋಕ್ತೋ ವೃದ್ಧದ್ಯುಮ್ನಃ ॥ ತಸ್ಯ ರಾಜ್ಞೋ ಯಜ್ಞೇ ದೇವಿಕಾ ದೇವೀಶ್ಚೋಭಯೀರಿತ್ಥಮನೇನ ಶಾಸ್ತ್ರೋಕ್ತಪ್ರಕಾರೇಣ ಸಮಮಾದಯಂ ಸಮುಚ್ಚಿತ್ಯ ಮಾದಿತವಾನಸ್ಮಿ ಸಮುಚ್ಚಯಾನುಷ್ಠಾನೇನ ತತ್ತದ್ದೇವತಾ ಹರ್ಷಿತವಾನಸ್ಮಿ । ತತ್ಪ್ರಸಾದಾದಯಂ ರಥಗೃತ್ಸೋ ರಾಜಪುತ್ರಃ ಕ್ರೀಡಾರ್ಥಂ ಜಲೇ ಗಾಹತ ಇತಿ । ನ ಕೇವಲಂ ಶುಚಿವೃಕ್ಷೇಣ ದೃಷ್ಟೋ ರಥಗೃತ್ಸ ಏವೈಕಃ ಕಿಂತು ಚತುಃಷಷ್ಟಿಸಂಖ್ಯಾಕಾಃ ಶಶ್ವತ್ಕವಚಿನಃ ಸರ್ವದಾ ಯುದ್ಧಾರ್ಥಂ ಉದ್ಯತಾಃ ಶೂರಾ ಅಸ್ಯ ವೃದ್ಧದ್ಯುಮ್ನಸ್ಯ ರಾಜ್ಞಸ್ತೇ ತಥಾವಯಸ್ಕಾ ಏವ ಪುತ್ರಾಃ ಪೌತ್ರಾಶ್ಚಾಽಽಸುಃ ॥**

ಧನಾರ್ಥಿಯಾದವನು ದೇವೀಃ ದೇವಿಕಾಃ ಎಂಬ ಪದಗಳನ್ನು ಬೆರಸಿ ಹವಿಸ್ಸನ್ನರ್ಪಿಸಕೂಡವೆಂದು ಮೇಲೆ ಹೇಳಲಾಯಿತು. ಆದರೆ ಪ್ರಜಾಕಾಮನಾದವನು (ಮಕ್ಕಳನ್ನಪೇಕ್ಷಿಸುವವನು) ದೇವೀಃ ಮತ್ತು ದೇವಿಕಾಃ ಎಂಬ ಪದಗಳ ಮಿಶ್ರಣದಿಂದ ಆಹುತಿಗಳನ್ನರ್ಪಿಸಬಹುದೆಂದೂ ಅದರಿಂದ ಅವನಿಗೆ ಪ್ರಜಾಸಂತತಿಯುಂಟಾಗುವುದೆಂದೂ ಹೇಳಲಾಗಿದೆ. ಈ ವಿಷಯದಲ್ಲಿ ಒಂದು ದೃಷ್ಟಾಂತವನ್ನು ಹೇಳುವರು—ಮೇಲಿನವಾಕ್ಯಗಳಲ್ಲಿ **ಶುಚಿವೃಕ್ಷಃ ಗೌಪಾಲಾಯನಃ ವೃದ್ಧ**-

ದ್ಯುಮ್ನಃ ಅಭಿಪ್ರತಾರಿಣಃ ಎಂಬ ಶಬ್ದಗಳಿಗೆ ಅರ್ಥವನ್ನು ವಿವರಿಸಲಾಗುವುದು. ಶುಚಿವೃಕ್ಷಃ ಎಂದರೆ ಯಾವ ಮಹರ್ಷಿಯ ಆಶ್ರಮದಲ್ಲಿ ಉತ್ತಮವಾದ ಫಲಪುಷ್ಪಗಳಿಂದ ಕೂಡಿದ ವೃಕ್ಷಗಳಿರುವವೋ ಆ ಮಹರ್ಷಿಗೆ ಶುಚಿವೃಕ್ಷಃ ಎಂದು ಹೆಸರು. ಗೌಪಾಲಾಯನಃ. ನೀರು ಹುಲ್ಲುಗಳನ್ನು ಹಾಕಿ ಗೋವುಗಳನ್ನು ಚೆನ್ನಾಗಿ ಕಾಪಾಡುವ ಋಷಿಗೆ ಗೋಪಾಲನೆಂದು ಹೆಸರು ಇವನ ಮಗನಿಗೆ ಗೌಪಾಲಾಯನ ಎಂದು ಹೆಸರು ಇವನ ಪುತ್ರನೇ ಮೇಲೆ ಹೇಳಿದಶುಚಿವೃಕ್ಷ— ಎಂಬ ಋಷಿಯು. ವೃದ್ಧದ್ಯುಮ್ನಃ—ಬಹಳವಾದ ಧನವುಳ್ಳ ಈ ರಾಜನು ವೃದ್ಧದ್ಯುಮ್ನನೆಂದು ಪ್ರಸಿದ್ಧನಾಗಿರುವನು. ಅಭಿಪ್ರತಾರಿಣಃ—ಎಲ್ಲಾ ಕಡೆಯಲ್ಲಿಯೂ ತನ್ನ ಶತ್ರುರಾಜರನ್ನು ಸೋಲಿಸುವ ಪರಾಕ್ರಮವುಳ್ಳರಾಜನಿಗೆ ಅಭಿಪ್ರತಾರಿಣ— ಎಂದು ಹೆಸರು. ಇವನ ಪುತ್ರನಿಗೆ ಅಭಿಪ್ರತಾರಣನೆಂದು ಹೆಸರು. ಒಂದಾನೊಂದು ಕಾಲದಲ್ಲಿ ಗೋಪಾಲನೆಂಬ ಋಷಿಯ ಪುತ್ರನಾದ ಶುಚಿವೃಕ್ಷಃ ಎಂಬ ಮಹರ್ಷಿಯು ಅಭಿಪ್ರತಾರಣನೆಂಬ ರಾಜನ ಪುತ್ರನಾದ ವೃದ್ಧದ್ಯುಮ್ನ ಎಂಬ ರಾಜನಿಗೆ ಯಜ್ಞವನ್ನು ಮಾಡಿಸಿದನು. ಆಗ ಈ ಯಜ್ಞದಲ್ಲಿ ದೇವೀಃ ಮತ್ತು ದೇವಿಕಾಃ ಎಂಬ ಎರಡುವಿಧಪದಗಳನ್ನು ಉಚ್ಚರಿಸಿ ಹವಿಸ್ಸನ್ನು ದೇವತೆಗಳಿಗೆ ಅರ್ಪಿಸಿದ್ದರಿಂದ ಅದರ ಫಲವಾಗಿ ಈ ವೃದ್ಧದ್ಯುಮ್ನ ರಾಜನಿಗೆ ಅನೇಕ ಪುತ್ರರಾದರು. ಅವರನ್ನು ಪ್ರತ್ಯಕ್ಷವಾಗಿ ಕಂಡ ಯಜ್ಞವನ್ನು ಮಾಡಿಸಿದ ಶುಚಿವೃಕ್ಷನೆಂಬ ಮಹರ್ಷಿಯು ಈ ರೀತಿ ಹೇಳುತ್ತಾನೆ—ನಾನು ವೃದ್ಧದ್ಯುಮ್ನರಾಜನಿಗೆ ಯಜ್ಞವನ್ನು ಮಾಡಿಸಿದಾಗ ದೇವೀಃ ಮತ್ತು ದೇವಿಕಾಃ ಎಂಬ ಶಬ್ದಗಳೆರಡನ್ನೂ ಮಿಶ್ರಮಾಡಿ ದೇವತೆಗಳಿಗೆ ಆಹುತಿಗಳನ್ನರ್ಪಿಸುವಂತೆ ಮಾಡಿದೆನು. ಆದರಿಂದ ಈ ವೃದ್ಧದ್ಯುಮ್ನರಾಜನಿಗೆ ಅನೇಕ ಪುತ್ರರು ಹುಟ್ಟಿದರು. ಆ ಪುತ್ರರಲ್ಲಿ ರಥಗೃತ್ಸ ಎಂಬ ರಾಜಕುಮಾರನು ನೀರಿನಲ್ಲಿ ಕ್ರೀಡಾರ್ಥವಾಗಿ ಈಜುತ್ತಿರುವುದನ್ನು ನಾನು ಪ್ರತ್ಯಕ್ಷವಾಗಿ ನೋಡಿದೆನು. ಮತ್ತು ಅಲ್ಲಿಯೇ ಆಟವಾಡುತ್ತಿರುವ ಈ ರಾಜನ ಸಮಾನರು ಅರವತ್ತು ಮಂದಿ ಮಕ್ಕಳು ಮೊಮ್ಮಕ್ಕಳುಗಳನ್ನು ನೋಡಿದೆನು. ಎಂದು ಮೇಲೆ ಹೇಳಿದ ಶುಚಿವೃಕ್ಷನೆಂಬ ಮಹರ್ಷಿಯೇ ತಾನು ಮಾಡಿಸಿದ ಯಜ್ಞದ ಫಲವನ್ನು ಪ್ರಶಂಸೆಮಾಡಿರುವನು,

*English Translation*

**(The offerings for Surya and the Devis, Dyaus, Ushas, Gaus, Prithvi, who are represented by the metres. When oblations should be given to both the Devikas and Devis. Story of Vriddhadyumma)**

Now about the offerings to the goddesses (devi).

The adhvaryu ought to portion out for Surya (the sun) rice for a ball to be put on one potsherd (ekakapala). Surya is Dhatar (creator) and this is the Vashatkara.

To Dyaus (Heaven) he ought to offer boiled rice. For Dyaus is Anumati, and she is Gayatri.

To Ushas (Dawn) he ought to offer boiled rice. For Ushas is Raka, and she is Trishtubh.

To Gaus (Cow) he ought to offer boiled rice. For Gaus is Sinivali, and she is Jagati.

To Prithvi (Earth) he ought to offer boiled rice. For Prithvi is Kuhu, and she is Anushtubh.

All other metres which are used at the sacrifice, follow the Gayatri, Trishtubh, Jagati and Anushtubh as their models (which are most frequently used).

The sacrifice of him who, having such a knowledge, gives oblations to these metres, includes (then) oblations to all metres.

The common saying "the horse if well managed, puts him (the rider) into ease," is applicable to the metres; for they put the sacrificer if well treated into ease (sudha). He who has such a knowledge obtains such a world (of bliss) as he did not expect.

Regarding these oblations to the Devis, some are of opinion, that before each oblation to all the several goddesses, one ought to offer melted butter to Surya; for thus one would make all goddesses cohabit with Surya.

About this they say, it is laziness at a sacrifice to repeat several times the same two verses the Puronyvakya and Yajya for Surya on the same day. It is sufficient to repeat those verses once only. For even many wives cohabit with one and the same husband only. When the Hotar, therefore, repeats before addressing the four goddesses, the Yajya verse for Surya, he thus cohabits with all goddesses.

These (Suryas with Dyaus & c.) deities are the same as those others (Dhatar with Anumati & c.) One obtains, therefore, through one of these classes of deities, the gratification of any desire which is in the gift of both.

The priest ought to portion out a rice cake ball for both these classes of deities for him who desires the faculty of producing offspring to make him obtain the blessings contained in both. But he ought not to do so for him who sacrifices for acqniring great wealth only. If he were to portion out a rice cake ball for both these classes of deities for him who sacrifices for acquiring wealth only, he has it in his power to make the gods displeased (jealous) with the wealth of the sacrificer and deprive him of it; for such one might think after having obtained the greath wealth he is sacrificing for. I have enough and do not require anything else from the gods.

Suchivriksha Gaupalayana had once portioned out the rice ball for both classes of deities at the sacrifice of Vriddhadyumna Pratarina. As he afterwards saw a prince swim in water, he said, "this is owing to the circumstance that I made the goddesses of the higher and lower ranks (devis and devikas) quite pleased at the sacrifice of that king; therefore the royal prince rwims in the water. Moreover he saw not only him but sixty-four other heroes always steel-clad, who were his sons and grandsons.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಪಂಚದಶಾಧ್ಯಾಯಸ್ಯ ಚತುರ್ಥಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನೈದನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು
ಸಮಾಪ್ತವಾದುದು.

# ಅಥ ಪಂಚದಶಾಧ್ಯಾಯೇ ಪಂಚಮಃ ಖಂಡಃ

## ಹದಿನೈದನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ಉಕ್ಥ್ಯವೆಂಬ ಯಾಗವಿಶೇಷವು; ಸಾಕಮಶ್ವ ಮತ್ತು ಪ್ರಮಂಹಿಷ್ಠೀಯ ಎಂಬ ಸಾಮಮಂತ್ರಗಳ ವಿವರಣೆ ಇತ್ಯಾದಿ]



ಜ್ಯೋತಿಷ್ಟೋಮವೆಂಬ ಯಾಗವು ಏಳು ಪ್ರಭೇದವುಳ್ಳದ್ದಾಗಿರುವುದು. ಅವು ಯಾವವೆಂದರೆ, ಅಗ್ನಿಷ್ಟೋಮ ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶೀ, ವಾಜಪೇಯ, ಅತಿರಾತ್ರ, ಅಪ್ತೋರ್ಯಾಮ ಎಂಬ ಏಳು ವಿಧಗಳೆಂದು ಆಶ್ವಲಾಯನ ಮಹರ್ಷಿಗಳು ಹೇಳಿರುವರು. ಈ ಏಳುವಿಧಗಳಲ್ಲಿ ಅಗ್ನಿಷ್ಟೋಮಸಾಮದಿಂದ ಮೊದಲಾಗಿ ಯಜ್ಞಾಯಜ್ಞೀಯವೆಂಬ ಸಾಮದಿಂದ ಪರಿಸಮಾಪ್ತಿಯಾಗುವ ಯಜ್ಞವು ಅಗ್ನಿಷ್ಟೋಮವು. ಇದೇ ಮೊದಲನೆಯದು. ಇದನ್ನೆಲ್ಲಾ ವಿಸ್ತಾರವಾಗಿ ಹಿಂದೆಯೇ (೧-೧೩ ಅಧ್ಯಾಯಗಳಲ್ಲಿ) ವಿವರಿಸಲಾಗಿದೆ. ಈಗ ಜ್ಯೋತಿಷ್ಟೋಮದಲ್ಲಿ ಎರಡನೆಯ ಪ್ರಭೇದವಾದ ಉಕ್ಥ್ಯ ಎಂಬ ಯಾಗ ವಿಶೇಷವನ್ನು ವಿವರಿಸಲಾಗುವುದು.

**ಅಗ್ನಿಷ್ಟೋಮಂ ವೈ ದೇವಾ ಅಶ್ರಯಂತೋಕ್ಥಾನ್ಯಸುರಾಸ್ತೇ ಸಮಾವದ್ವೀರ್ಯಾ ಏವಾಽಽಸನ್ನ ವ್ಯಾವರ್ತಂತ ತಾನ್ಭರದ್ವಾಜ ಋಷೀಣಾಮನುಪಶ್ಯದಿಮೇ ವಾ ಅಸುರಾ ಉಕ್ಥೇಷು ಶ್ರಿತಾಸ್ತಾನೇಷಾಂ ನ ಕಶ್ಚನ ಪಶ್ಯತೀತಿ ಸೋಽಗ್ನಿಮುದಹ್ವಯತ್ ॥**

ಜ್ಯೋತಿಷ್ಟೋಮಸ್ತಾವತ್ಸಪ್ತಸಂಸ್ಥಃ । ಸಮಾಪ್ತಿಭೇದಾತ್ಸಪ್ತವಿಧಃ ಅಗ್ನಿಷ್ಟೋಮೋಽತ್ಯಗ್ನಿಷ್ಟೋಮ ಉಕ್ಥ್ಯಃ ಶೋಡಶೀ ವಾಜಪೇಯೋಽತಿರಾತ್ರೋಽಪ್ತೋರ್ಯಾಮ ಇತಿ ಸಪ್ತ ಸಂಸ್ಥಾ ಆಶ್ವಲಾಯನೇನಾಭಿಹಿತತ್ವಾತ್ ॥ ತತ್ರಾಗ್ನಿಷ್ಟೋಮಸಾಮ್ನಾ ಯಜ್ಞಾ ಯಜ್ಞೀಯಾಖ್ಯೇನ ಯತ್ರ ಸಮಾಪ್ತಿಃ ಸೋಽಯಂ ಪ್ರಥಮರೂಪೋಽಗ್ನಿಷ್ಟೋಮಃ ಸ ಸರ್ವೋಽಪಿ ಪೂರ್ವತ್ರೋಕ್ತಃ । ಅಥೋಕ್ಥ್ಯಸಂಸ್ಥಾರೂಪೋ ಜ್ಯೋತಿಷ್ಟೋಮೋ ವಕ್ತವ್ಯಃ ॥ ತದರ್ಥಮಾಖ್ಯಾಯಿಕಾಮಾಹ— ಯದಾ ದೇವಾ ಅಗ್ನಿಷ್ಟೋಮಮಾಶ್ರಿತವಂತಸ್ತದಾನೀಮಸುರಾ ಅಪ್ಯುಕ್ಥನಾಮಕಾನಿ ಸ್ತೋತ್ರಾಣಿ ಶಸ್ತ್ರಾಣಿ ಚಾಽಽಶ್ರಿತ್ಯಾವಸ್ಥಿತಾಃ । ತತಸ್ತೇ ದೇವಾಶ್ಚಾಸುರಾಶ್ಚ ಯಜ್ಞೇ ತುಲ್ಯವೀರ್ಯಾ ಏವಾಽಽಸನ್ನ ತು ದೇವಾಃ ಶೌರ್ಯಾಧಿಕ್ಯೇನ ವ್ಯಾವೃತ್ತಿಂ ಪ್ರಾಪ್ತಾಸ್ತದಾನೀಮೃಷೀಣಾಂ ಮಧ್ಯೇ ಸೂಕ್ಷ್ಮದರ್ಶೀ ಭರದ್ವಾಜಸ್ತಾನಸುರಾನ್ರಹಸ್ಯುಕ್ಥ್ಯಪರಾನಪಶ್ಯತ್ ॥ ದೃಷ್ಟ್ವಾ ಚೈವಮುವಾಚ ॥ ಇಮೇ ರಹಸ್ಯವಸ್ಥಿತಾ ಅಸುರಾ ಉಕ್ಥೇಷು ಸ್ತೋತ್ರಶಸ್ತ್ರೇಷ್ವಾಶ್ರಿತಾಸ್ತಾನಸುರಾನೇಷಾಂ ದೇವಾನಾಮೃಷೀಣಾಂ ಚ ಮಧ್ಯೇ ನ ಕೋಽಪಿ ಪಶ್ಯತೀತಿ ।

**ತಥೋಕ್ತ್ವಾ ಸ ಭಾರದ್ವಾಜೋಽಸುರನಿರಾಕರಣಾರ್ಥಂ ಕೇನ ಚಿನ್ಮಂತ್ರೇಣಾಗ್ನಿಮುದಹ್ವಯ-ದುಚ್ಚಧ್ವನಿನಾಽಽಹ್ವಾನಂ ಕೃತವಾನ್ ॥**

ಒಂದು ಸಮಯದಲ್ಲಿ ದೇವತೆಗಳು ಅಗ್ನಿಷ್ಟೋಮಯಾಗವನ್ನು ಆಶ್ರಯಿಸಿಕೊಂಡು ಇದ್ದರು. ಆಗ ಅಸುರರು ಉಕ್ಥ ಎಂಬ ಹೆಸರಿನ ಸ್ತೋತ್ರಗಳನ್ನೂ ಶಸ್ತ್ರಗಳನ್ನೂ ಆಶ್ರಯಿಸಿಕೊಂಡಿದ್ದರು. ಹೀಗೆ ಇದ್ದದ್ದರಿಂದ ಯಜ್ಞವಿಷಯದಲ್ಲಿ ದೇವತೆಗಳೂ ಅಸುರರೂ ಬಲಪರಾಕ್ರಮಗಳಲ್ಲಿ ಸಮಾನರಾಗಿದ್ದರು. ದೇವತೆಗಳು ಯಾವ ವಿಚಾರದಲ್ಲಿಯೂ ಅಸುರರಿಗಿಂತ ಹೆಚ್ಚಾಗಿರಲಿಲ್ಲ. ಆದ್ದರಿಂದ ದೇವತೆಗಳು ಅಸುರರನ್ನು ಸೋಲಿಸಲಾಗಲಿಲ್ಲ. ಆಗ ಋಷಿಗಳ ಮಧ್ಯದಲ್ಲಿ ಕುಳಿತಿದ್ದ ಭರದ್ವಾಜನೆಂಬ ಋಷಿಯು, ಉಕ್ಥಶಸ್ತ್ರಾದಿಗಳನ್ನು ಅಲಕ್ಷಿಸುತ್ತಿರುವ ದೇವತೆಗಳನ್ನು ತನ್ನ ಬಳಿಗೆ ಕರೆದು ಅವರೊಡನೆ ರಹಸ್ಯವಾಗಿ ಇಂತೆಂದನು ದೇವತೆಗಳ ಮತ್ತು ಋಷಿಗಳ ಮಧ್ಯದಲ್ಲಿ ಕುಳಿತಿರುವ ಯಾರೂ ಇದನ್ನು ಗಮನಿಸುವುದಿಲ್ಲ. ಹೀಗೆಂದು ಹೇಳಿ ಆ ಭರದ್ವಾಜಮುನಿಯು ದೇವತೆಗಳು ಅಸುರರನ್ನು ಜಯಿಸಲೆಂಬ ಉದ್ದೇಶದಿಂದ ಒಂದಾನೊಂದು ಮಂತ್ರವನ್ನು ಘಟ್ಟಿಯಾಗಿ ಪಠಿಸಿ ಅದರಿಂದ ಅಗ್ನಿಯನ್ನು ಆಹ್ವಾನಮಾಡಿದನು.

## ಏಹ್ಯೂ ಷು ಬ್ರವಾಣಿ ತೇಽಗ್ನ ಇತ್ಥೇತರಾ ಗಿರ ಇತಿ । ಅಸುರ್ಯಾ ಹ ವಾ ಇತರಾ ಗಿರಃ

**ತಮಿಮಂ ಮಂತ್ರಂ ದರ್ಶಯತಿ—ಹೇಽಗ್ನ ಏಹ್ಯ ಆಗಚ್ಛೈವ ತೇ ತವ ಸುಬ್ರವಾಣಿ ಶೋಭನಂ ಕಾರ್ಯಂ ಕಥಯಾನಿ । ಇತರಾ ದೇವವಾಕ್ಯಾರ್ಥವ್ಯತಿರಿಕ್ತಾ ಗಿರೋಽಸುರವಾಚ ಇತ್ಥೇತ್ಥಮನೇನಪ್ರಕಾರೇಣ ಶ್ರುತ್ಯಂತರಾದಿತಿ ಶೇಷಃ ॥ ಅಸ್ಮಿನ್ಮಂತ್ರ ಇತರಶಬ್ದಾರ್ಥಂ ದರ್ಶ-ಯತಿ ಅಸುರೇಭ್ಯೋ ಹಿತಾ ಅಸುರ್ಯಾಸ್ತಾಶ್ಚ ಗಿರೋ ದೇವವಾಕ್ಯಾದಿತರಾ ದೇವವಿರೋ-ಧಿನ್ಯ ಇತ್ಯರ್ಥಃ ॥**

ಏಹ್ಯೂ ಷು ಬ್ರವಾಣಿ ತೇಽಗ್ನೆ (ಋ. ಸಂ ೬-೧೬-೧೬) ಎಂಬುದೇ ಆ ಮಂತ್ರವು. ಇದರ ಅರ್ಥವು—ಎಲೈ ಅಗ್ನಿಯೇ, ಇಲ್ಲಿಗೆ ಬಾ. ನಿನಗೆ ಒಂದು ಒಳ್ಳೆಯ ಕಾರ್ಯವನ್ನು ಹೇಳುವೆನು ಎಂದು. ಇಲ್ಲಿ ಇತರಾ ಗಿರಃ ಎಂಬ ಶಬ್ದಗಳಿರುವುವು. ಬೇರೆ ವಾಕ್ಯವು ಎಂದರೆ ದೇವತೆಗಳ ಹಿತಕ್ಕೆ ವ್ಯತಿರಿಕ್ತವಾದ ವಾಕ್ಯವು. ಎಂದರೆ ಅಸುರರಿಗೆ ಪ್ರಿಯವಾದುದೂ ದೇವತೆಗಳಿಗೆ ವಿರೋಧವಾದ ವಾಕ್ಯವೆಂದರ್ಥವು.

## ಸೋಽಗ್ನಿರುಪೋತ್ತಿಷ್ಠನ್ನಬ್ರವೀತ್ಕಿಂಸ್ವಿದೇವ ಮಹ್ಯಂ ಕೃಶೋ ದೀರ್ಘಃ ಪಲಿತೋ ವಕ್ಷ್ಯತೀತಿ ಭರದ್ವಾಜೋ ಹ ವೈ ಕೃಶೋ ದೀರ್ಘಃ ಪಲಿತ ಆಸ ।

**ತಥಾಽಗ್ನಿ ವಾಕ್ಯಂ ದರ್ಶಯತಿ—ಭರದ್ವಾಜೇನಾಽಽಹೂತೋಽಗ್ನಿಸ್ತತ್ಸಮೀಪಂ ಪ್ರತ್ಯಾ-ಗಂತುಮುತ್ತಿಷ್ಠನ್ನೇವಮಬ್ರವೀತ್ ॥ ಮಹ್ಯಮಗ್ನಯೇ ಸರ್ಷಿಃ ಕಿಂಸ್ವಿದೇವ ಕಿಂನಾಮ ವಕ್ಷ್ಯ-ತೀತಿ।ಕೃಶೋ ದೀರ್ಘಃ ಪಲಿತಃ ಇತ್ಯೃಷಿವಿಶೇಷಣಾನಿ।ತಾನಿ ಚ ಸ್ಪಷ್ಟೀಕರೋತಿ-ಸ್ಪಷ್ಟೋಽರ್ಥಃ।**

ಅಗ್ನಿಯು ಹೇಳಿದ ವಾಕ್ಯವನ್ನು ತಿಳಿಸುವರು. ಭರದ್ವಾಜ ಋಷಿಯಿಂದ ಕರೆಯಲ್ಪಟ್ಟ ಅಗ್ನಿಯು ಆ ಋಷಿಯ ಸಮೀಪಕ್ಕೆ ಹೋಗಿ ಎದ್ದುನಿಂತುಕೊಂಡು ಹೀಗೆ ಹೇಳಿದನು. ಕೃಶನಾದವನೂ (ತೆಳ್ಳಗೆ ಇರುವ) ಎತ್ತರವಾಗಿರುವವನೂ

ವೃದ್ಧನೂ ಆದ ಒಬ್ಬ ಋಷಿಯು ನನ್ನನ್ನು ಕರೆದನು. ಏತಕ್ಕಾಗಿ ಏನನ್ನು ಹೇಳುವುದಕ್ಕಾಗಿ ಆ ಋಷಿಯು ಕರೆದಿರಬಹುದು ಎಂದು ಅಗ್ನಿಯು ಕೇಳಿದನು. ಇಲ್ಲಿ ಕೃಶನಾಗಿರುವವನೂ, ಎತ್ತರವಾಗಿರುವವನೂ ವೃದ್ಧನೂ ಆಗಿರುವ ಋಷಿಯೆಂದರೆ ಭರದ್ವಾಜಋಷಿಯೆಂದರ್ಥವು.

**ಸೋಽಬ್ರವೀದಿಮೇ ವಾ ಅಸುರಾ ಉಕ್ಥೇಷು ಶ್ರಿತಾಸ್ತಾನ್ನೋ ನ ಕಶ್ಚನ ಪಶ್ಯತೀತಿ ।**

**ಕಿಂಸ್ವಿತ್ಫಲಿತೋ ವಕ್ಷ್ಯ ತೀತ್ಯಗ್ನಿನಾ ಪೃಷ್ಟಸ್ಯ ಭರದ್ವಾಜಸ್ಯೋತ್ತರಂ ದರ್ಶಯತಿ—ಸ ಭರದ್ವಾಜೋಽಗ್ನಿಂ ಪ್ರತ್ಯೇವಮಬ್ರವೀತ್ ॥ ಇಮೇ ವಾ ಇತ್ಯಾದಿ ಪೂರ್ವವದ್ವ್ಯಾಖ್ಯೇಯಂ ।**

ಕೃಶನೂ ಎತ್ತರವಾಗಿರುವ ಈ ವೃದ್ಧನು ಏನು ಹೇಳುತ್ತಾನೆಂದು ಅಗ್ನಿಯು ಅವನನ್ನು ಕೇಳಿದಕೂಡಲೇ ಭರದ್ವಾಜ ಋಷಿಯು ಈ ರೀತಿ ಹೇಳಿದನು—ಎಲೈ ಅಗ್ನಿಯೇ, ಕೇಳು ಈ ಅಸುರರು ಉಕ್ಥವೆಂಬ ಹೆಸರಿನ ಸ್ತೋತ್ರಶಸ್ತ್ರಮಂತ್ರಗಳಲ್ಲಿ ಆಶ್ರಯವನ್ನು ಪಡೆದಿರುವರು. ನಮ್ಮಲ್ಲಿ ಯಾರೂ ಆ ಅಸುರರನ್ನು ನೋಡಲು ಸಾಧ್ಯವಿಲ್ಲ ಎಂದನು.

**ತಾನಗ್ನಿರಶ್ವೋ ಭೂತ್ವಾಽಭ್ಯತ್ಯದ್ರವದ್ಯದಗ್ನಿರಶ್ವೋ ಭೂತ್ವಾಽಭ್ಯತ್ಯದ್ರವ-ತ್ತತ್ಸಾಕಮಶ್ವಂ ಸಾಮಾಭವತ್ತತ್ಸಾಕಮಶ್ವಸ್ಯ ಸಾಕಮಶ್ವತ್ವಂ ।**

**ಅಥೋಕ್ಥ್ಯಸ್ತೋತ್ರಸ್ಯ ಸಾಧನಭೂತಂ ಸಾಕಮಶ್ವನಾಮಕಂ ಸಾಮ ಯದಸ್ತಿ ತದಯಂ ನಾಮ ನಿರ್ವಕ್ತಿ—ಸೋಽಗ್ನಿರ್ಭರದ್ವಾಜಸ್ಯೋತ್ತರಂ ಶ್ರುತ್ವಾ ತತ ಊರ್ಧ್ವಂ ಸ್ವಯಮ-ಶ್ವಾಕಾರೋ ಭೂತ್ವಾ ತಾನಸುರಾನಭಿಲಕ್ಷ್ಯಾತ್ಯದ್ರವದತಿಶಯೇನಾಗಚ್ಛತ್ ॥ ಅಸುರಾಣಾಮು-ಪರಿ ವೇಗವಂತಮಾತ್ಮರೂಪಮಶ್ವಂ ಪ್ರವರ್ತ್ಯಾಸುರಾನ್ಮಾರಿತವಾನಿತ್ಯರ್ಥಃ । ಯಸ್ಮಾತ್ಸ್ವಯ-ಮಶ್ವಾಕಾರೋ ಭೂತ್ವಾ ತೈರಸುರೈಃ ಸಾಕಂ ಯುದ್ಧಂ ಕೃತ್ವಾ ಜಿತವಾಂಸ್ತಸ್ಮಾದೇತದ್ವೃತ್ತಾಂತ-ಸೂಚನಾಯ ಪ್ರವೃತ್ತಾ ಯಾ ಏಹ್ಯೂ ಷು ಬ್ರವಾಣಿ ತ ಇತ್ಯಾದಿಕಾ ಯಾ ಋಚಸ್ತ್ಯುತ್ಪನ್ನಸ್ಯ ಸಾಮ್ನಃ ಸಾಕಮಶ್ವಮಿತಿ ನಾಮ ಸಂಪನ್ನಂ ॥**

ಉಕ್ಥಸ್ತೋತ್ರಕ್ಕೆ ಸಾಧನಭೂತವಾದ ಸಾಕಮಶ್ವವೆಂಬ ಹೆಸರಿನ ಸಾಮಕ್ಕೆ ಆ ಹೆಸರು ಬರಲು ಕಾರಣವನ್ನು ತಿಳಿಸುವರು—ಅನಂತರ ಅಗ್ನಿಯು ಭರದ್ವಾಜಋಷಿಯ ಮಾತನ್ನು ಕೇಳಿ ಅನಂತರ ಅಗ್ನಿಯು ತಾನೇ ಅಶ್ವದ (ಕುದುರೆಯ) ಆಕಾರವನ್ನು ವಹಿಸಿ ಆ ಅಸುರರನ್ನು ಅಟ್ಟಿಸಿಕೊಂಡು ಅವರ ಹಿಂದೆಯೇ ಹೋದನು. ಹೀಗೆ ಹೋಗಿ ಅಶ್ವರೂಪದಿಂದ ಆ ಅಗ್ನಿಯು ಅಸುರರನ್ನಾಕ್ರಮಿಸಿ ಅವರನ್ನು ಸಂಹಾರಮಾಡಿದನು. ಅಗ್ನಿಯು ಅಶ್ವದ ಆಕಾರದಿಂದ ಅಸುರರನ್ನು ಹಿಂಬಾಲಿಸಿ ಅವರೊಡನೆ ಯುದ್ಧಮಾಡಿ ಅವರನ್ನು ಜಯಿಸಿದನು ಎಂಬ ವಿಷಯವನ್ನು ಸೂಚಿಸುವುದಕ್ಕಾಗಿ **ಏಹ್ಯೂ ಷು ಬ್ರವಾಣಿ** ಮುಂತಾದ ಋಕ್ಕುಗಳಿಂದ ಉತ್ಪನ್ನವಾದ ಸಾಮಮಂತ್ರಕ್ಕೆ **ಸಾಕಮಶ್ವಂ** ಎಂದು ಹೆಸರಾಯಿತು.

**ತದಾಹುಃ ಸಾಕಮಶ್ವೇನೋಕ್ಥಾನಿ ಪ್ರಣಯೇದಪ್ರಣೀತಾನಿ ವಾವ ತಾನ್ಯುಕ್ಥಾನಿ ಯಾನ್ಯನ್ಯತ್ರ ಸಾಕಮಶ್ವಾದಿತಿ ।**

ತಸ್ಯ ಸಾಮ್ನ ಉಕ್ಥಸ್ತೋತ್ರನಿಷ್ಪಾದಕತ್ವಂ ವಿಧತ್ತೇ—ತತ್ತತ್ರ ಸಾಕಮಶ್ವವಿಷಯೇ ಪ್ರಯೋಗಾಭಿಜ್ಞಾ ಆಹುಃ ಸಾಕಮಶ್ವನಾಮಕೇನ ಸಾಮ್ನಾ ಸ್ತೋತ್ರಾಣ್ಯುಕ್ಥನಾಮಕಾನಿ ಪ್ರಣಯೇತ್ಸಾಕಮಶ್ವಾದನ್ಯತ್ರ ಸಾಮಾಂತರೇಣ ಯೋಽನ್ಯುಕ್ಥಾನಿ ಸ್ತೋತ್ರಾಣಿ ಪ್ರಣೀಯಂತೇ ತಾನ್ಯಪ್ರಣೀತಾನ್ಯೇವ ಭವಂತಿ ತಸ್ಮಾದಿದಮೇವ ಸಾಮೋಕ್ಥಸ್ತೋತ್ರನಿಷ್ಪಾದಕಂ ||

ಸಾಕಮಶ್ವವಿಷಯದಲ್ಲಿ ಪ್ರಯೋಗಾಭಿಜ್ಞರು ಹೀಗೆ ಹೇಳುವರು. ಸಾಕಮಶ್ವ ಎಂಬ ಹೆಸರಿನ ಸಾಮದಿಂದ ಯಾವ ಸ್ತೋತ್ರಗಳುಂಟಾದವೋ ಆ ಸ್ತೋತ್ರಗಳು ಉಕ್ಥಸ್ತೋತ್ರಗಳೆಂದು ಹೆಸರಾದವು. ಸಾಕಮಶ್ವವನ್ನು ಬಿಟ್ಟು ಇತರ ಸಾಮಗಳಿಂದ ರಚಿಸಲ್ಪಟ್ಟ ಯಾವ ಉಕ್ತಸ್ತೋತ್ರಗಳುಂಟೋ ಅವು ಅಪ್ರಣೀತಾನಿ ಎಂದರೆ ಪ್ರಶಸ್ತವಾದವುಗಳಲ್ಲ ಮತ್ತು ಅವುಗಳು ಉಕ್ಥಸ್ತೋತ್ರಗಳಿಂದ ನಿಷ್ಪಾದಕ (ಉತ್ಪನ್ನ) ವಾದವುಗಳಲ್ಲ ಎಂದು ಹೇಳುವರು.

**ಪ್ರಮಂಹಿಷ್ಠೀಯೇನ ಪ್ರಣಯೇದಿತ್ಯಾಹುಃ ಪ್ರಮಂಹಿಷ್ಠೀಯೇನ ವೈ ದೇವಾ ಅಸುರಾನುಕ್ಥೇಭ್ಯಃ ಪ್ರಾಣುದಂತ ।**

ಪಕ್ಷಾಂತರಂ ವಿಧತ್ತೇ—ಪ್ರಮಂಹಿಷ್ಠಾಯ ಗಾಯತೇತ್ಯಸ್ಯಾಮೃಚ್ಯುತ್ಪನ್ನಂ ಸಾಮ ಪ್ರಮಂಹಿಷ್ಠೀಯಂ ತೇನ ಸಾಮ್ನೋಕ್ಥಸ್ತೋತ್ರಾಣಿ ನಿಷ್ಪಾದಯೇತ್ || ಉಕ್ಥೇಷ್ವಾಶ್ರಿತಾನಸುರಾನ್ದೇವಾ ಏತೇನ ಸಾಮ್ನೋಕ್ಥೇಭ್ಯೋ ನಿರಾಕೃತವಂತಃ ||

ಪ್ರ ಮಂಹಿಷ್ಠಾಯ ಗಾಯತ (ಋ. ಸಂ. ೮-೧೦೩-೮) ಎಂಬ ಋಕ್ಕಿನಿಂದ ಉತ್ಪನ್ನವಾದ ಸಾಮಕ್ಕೆ ಪ್ರಮಂಹಿಷ್ಠೀಯ ಸಾಮವೆಂದು ಹೆಸರು. ಇದೂ ಸಹ ಉಕ್ಥಸ್ತೋತ್ರಗಳಿಗೆ ಸೇರಿರುವ ಸಾಮವಾಗಿರುವುದು. ಈ ಪ್ರಮಂಹಿಷ್ಠೀಯ ಸಾಮದಿಂದ ಉಕ್ಥಸ್ತೋತ್ರಶಸ್ತ್ರಗಳಲ್ಲಿ ಆಶ್ರಯವನ್ನು ಪಡೆದಿದ್ದ ಅಸುರರನ್ನು ದೇವತೆಗಳು ಅಲ್ಲಿಂದ ಓಡಿಸಿದರು.

**ತತ್ಪ್ರಾಹೈವ ಪ್ರಮಂಹಿಷ್ಠೀಯೇನ ನಯೇತ್ಪ್ರ ಸಾಕಮಶ್ವೇನ।**

ಉಭಯೋಃ ಸಾಮ್ನೋರೈಚ್ಛಿಕಂ ವಿಕಲ್ಪಂ ದರ್ಶಯತಿ—ಅಹೇತ್ಯಯಂ ಶಬ್ದೋಽನ್ಯತ್ರ ನಿಷೇಧಾರ್ಥೋಽಪ್ಯತ್ರ ವಿಕಲ್ಪಾರ್ಥಃ । ನಿಪಾತಾನಾಮನೇಕಾರ್ಥತ್ವಾತ್ || ತಾನ್ಯುಕ್ಥಸ್ತೋತ್ರಾಣಿ ಪ್ರಮಂಹಿಷ್ಠೀಯೇನ ಸಾಮ್ನಾ ಪ್ರಣಯೇತ್ ||

ಈ ವಾಕ್ಯದಲ್ಲಿರುವ ಅಹ ಎಂಬ ಶಬ್ದವು ಇತರಸ್ಥಳಗಳಲ್ಲಿ ನಿಷೇದಾರ್ಥವನ್ನು ಸೂಚಿಸುವುದಾದರೂ ಇಲ್ಲಿ ವಿಕಲ್ಪಾರ್ಥವನ್ನು ಸೂಚಿಸುವುದು. ಏಕೆಂದರೆ ನಿಪಾತ (ಅವ್ಯಯ) ಗಳಿಗೆ ಸಂದರ್ಭಾನುಸಾರ ಅನೇಕ ಅರ್ಥಗಳಿರುವವು. ಮೇಲೆ ಹೇಳಿದ ಉಕ್ಥಸ್ತೋತ್ರಗಳನ್ನು ಪ್ರಮಂಹಿಷ್ಠೀಯ ಸಾಮದಿಂದ ಬೇಕಾದರೂ ರಚಿಸಬಹುದು. ಅಥವಾ ಸಾಕಮಶ್ವ ಎಂಬ ಸಾಮದಿಂದಲಾದರೂ ರಚಿಸಬಹುದು.



*English Translation*

### (Origin of the Ukthya. The Sakamasvam Samans. The Pramamhisthiya Saman)

The Devas took shelter in the Agnishtoma, and the Asuras in the Ukthyas. Both being thus of equal strength, the gods could not turn them out. One of the Rishis, Bharadvaja, saw them (and said), "these Asuras have entered the Ukthas (Shastras); but none else sees them". He called out Agni with the mantra: ehy u shu bravani (6, 16, 16). The itara girah, i.e. other voices mentioned in this verse are those of the Asuras. Agni rose there upon and said: "what is it then that the lean, long, pale has to tell me?" For Bharadvaja, was lean, of high stature, and pale. He answered, "These Asuras have entered the Ukthas (Shastras); but nobody is aware of them."

Agni then turned a horse, ran against them and overtook them. This act of Agni became the Sakamasvam Saman. Thence it is called so from asva, a horse.

About this they say, the priest ought to lead the Ukthas by means of the Sakamasvam. For if the Ukthas (Shastras) have another head save the Sakamasvam, they are not led at all.

They say, the priest should lead the Ukthas with the Pramamhisthia Saman, (Sam. Samh. 2, 228, 229=2, 2, 2, 17, 1, 2); for by means of this Saman the Devas had turned the Asuras from the Ukthas.

Which of both these opinions is preferable cannot be settled. He is at liberty to lead the Ukthas by means of the Pramamhisthiya or the Sakamasva.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ**
**ಐತರೇಯಬ್ರಾಹ್ಮಣಭಾಷ್ಯಸ್ಯ ಪಂಚದಶಾಧ್ಯಾಯಸ್ಯ ಪಂಚಮಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನೈದನೆಯ ಅಧ್ಯಾಯದಲ್ಲಿ ಐದನೆಯ ಖಂಡವು ಸಮಾಪ್ತವಾದುದು.**



# ಅಥ ಪಂಚದಶಾಧ್ಯಾಯೇ ಷಷ್ಠಃ ಖಂಡಃ

## ಹದಿನೈದನೆಯ ಅಧ್ಯಾಯದಲ್ಲಿ ಆರನೆಯ ಖಂಡವು



[ಹೋತೃವಿನ ಸಹಾಯಕರಾದ ಮೈತ್ರಾವರುಣ, ಬ್ರಾಹ್ಮಣಾಚ್ಛಂಸಿ, ಅಚ್ಛಾವಾಕ ಎಂಬ ಹೋತೃವರ್ಗದರುವ ಉಕ್ಥ್ಯಯಾಗದ ತೃತೀಯಸವನದಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳು ಇತ್ಯಾದಿ]



**ತೇ ದೇವಾ ಅಸುರಾ ಮೈತ್ರಾವರುಣಸ್ಯೋಕ್ಥಮಶ್ರಯಂತ ಸೋಽಬ್ರವೀದಿಂದ್ರಃ ಕಶ್ಚಾಹಂ ಚೇಮಾನಿತೋಽಸುರಾನ್ನೋತ್ಸ್ಯಾವಹಾ ಇತ್ಯಹಂ ಚೇತ್ಯಬ್ರವೀದ್ವರುಣಸ್ತಸ್ಮಾದೈಂದ್ರಾವರುಣಂ ಮೈತ್ರಾವರುಣಸ್ತೃತೀಯಸವನೇ ಶಂಸತೀಂದ್ರಶ್ಚ ಹಿ ತಾನ್ವರುಣಶ್ಚ ತತೋ ನುದೇತಾಂ ॥**

ಉಕ್ಥಸ್ತೋತ್ರೇಷು ಸಾಮವಿಶೇಷಂ ವಿಧಾಯೋಕ್ಥಶಸ್ತ್ರೇಷು ಸೂಕ್ತಂ ವಿಧಾತುಮಾದೌ ಮೈತ್ರಾವರುಣಶಸ್ತ್ರೇ ಕಿಂಚಿತ್ಸೂಕ್ತಂ ವಿಧತ್ತೇ—ಉಕ್ಥ್ಯಸ್ಯ ಕ್ರತೋರಗ್ನಿಷ್ಟೋಮವಿಕೃತಿತ್ವಾದತಿದಿಷ್ಟಮಗ್ನಿಷ್ಟೋಮಪ್ರಯೋಗಮನುಷ್ಠಾಯ ತತ ಊರ್ಧ್ವಮುಕ್ಥ್ಯಪರ್ಯಾಯಾಸ್ತ್ರಯೋಽನುಷ್ಠೇಯಾಃ । ತಥಾ ಚಾಽಽಪಸ್ತಂಬ ಆಹ—'ಉಕ್ಥ್ಯಶ್ಚೇದಗ್ನಿಷ್ಟೋಮಮುಪಸಾಯಾಥ ತ್ರಿಭ್ಯಶ್ಚಮಸಗಣೇಭ್ಯೋ ರಾಜಾನಮತಿರೇಚಯತಿ' ಇತಿ ॥ ತತ್ರ ಪ್ರಥಮೇ ಚಮಸಗಣೇ ಮೈತ್ರಾವರುಣಸ್ಯ ಯಚ್ಛಸ್ತ್ರಮಸ್ತಿ ಉಕ್ಥ್ಯ(ಕ್ಥ)ಸ್ತೋತ್ರೇಷು ಸಾಮ್ನಾ ನಿರಾಕೃತಾಸ್ತ ಏವಾಸುರಾ ಇದಂ ಮೈತ್ರಾವರುಣಶಸ್ತ್ರಮಶ್ರಯಂತ ತದಾನೀಂ ತತ್ರಾವಸ್ಥಿತಃ ಸ ಇಂದ್ರ ಇತರಾನ್ಪ್ರತ್ಯೇವ ಮಬ್ರವೀತ್ ॥ ಅಸುರಾಣಾಮಪನೋದನೇ ಮಮ ಸಹಾಯೋಽಪೇಕ್ಷಿತಸ್ತತೋ ಹೇ ದೇವಾ ಯುಷ್ಮಾಕಂ ಮಧ್ಯೇ ಕಶ್ಚಾಹಂ ಚೇಮಾನಸುರಾನಿತೋ ಮೈತ್ರಾವರುಣಶಸ್ತ್ರಾನ್ನೋತ್ಸ್ಯಾವಹಾ ಅಪನೋದಂ ಕರಿಷ್ಯಾವ ಇತಿ ॥ ದೇವೇಷ್ವವಸ್ಥಿತೋ ವರುಣೋಽಹಂ ಚೇತ್ಯಬ್ರವೀದ್ಧೇ ಇಂದ್ರ ತ್ವಂ ಚಾಹಂ ಚೇತ್ಯರ್ಥಃ ॥ ಯಸ್ಮಾದೇವಂ ತಸ್ಮಾದುಭಯೋರ್ಮೇಲನೇನ ತೇಷಾಮಸುರಾಣಾಮಪನೋದಾರ್ಥಮೈಂದ್ರಾವರುಣಂ ಸೂಕ್ತಂ ತೃತೀಯಸವನೇ ಮೈತ್ರಾವರುಣನಾಮಕ ಋತ್ವಿಕ್ಶಂಸೇತ್ ॥ ಇಂದ್ರಾವರುಣಾ ಯುವಮಧ್ವರಾಯ ನ ಇತ್ಯೇತದ್ದಶರ್ಚಂ ಸೂಕ್ತಮೈಂದ್ರಾವರುಣಂ ತೇನ ತುಷ್ಟ ಇಂದ್ರಶ್ಚ ವರುಣಶ್ಚ ತಾನಸುರಾಂಸ್ತತಃ ಶಸ್ತ್ರಾದಪನುದೇತಾಂ ನಿರಾಕುರ್ಯಾತಾಂ ॥

ಇದುವರೆಗೂ ಉಕ್ಥ್ಯಸ್ತೋತ್ರಗಳಲ್ಲಿ ಸಾಮಗಳನ್ನು ವಿವರಿಸಿದ್ದಾಯಿತು. ಈಗ ಉಕ್ಥಶಸ್ತ್ರಗಳಲ್ಲಿರುವ ಸೂಕ್ತವನ್ನು ವಿವರಿಸುವುದಕ್ಕಾಗಿ ಮೊದಲು ಮೈತ್ರಾವರುಣನು ಪಠಿಸಬೇಕಾದ ಶಸ್ತ್ರಗಳಲ್ಲಿರುವ ಒಂದು ಸೂಕ್ತವನ್ನು ವಿವರಿಸುವರು. ಉಕ್ಥ್ಯವೆಂಬ ಯಾಗವು ಅಗ್ನಿಷ್ಟೋಮದ ವಿಕೃತರೂಪಾಗಿರುವುದೆಂದು ಹೇಳಲಾಯಿತು. ಅಗ್ನಿಷ್ಟೋಮಪ್ರಯೋಗವನ್ನೂ ಹಿಂದೆ ವಿಸ್ತಾರವಾಗಿ ವಿವರಿಸಲಾಗಿರುವುದು. ಅಗ್ನಿಷ್ಟೋಮದಂತಿರುವ ಉಕ್ಥ್ಯಯಾಗದ ಪ್ರಯೋಗಗಳನ್ನು ಹೇಳಿ ಮುಂದೆ ಉಕ್ಥ್ಯಪರವಾಗಿರುವ ಕೆಲವು ಶಸ್ತ್ರಗಳನ್ನು ವಿವರಿಸುವರು. ಮತ್ತು ಆಪಸ್ತಂಬರು ಈ ವಿಷಯದಲ್ಲಿ–ಉಕ್ಥ್ಯಶ್ಚೇದಗ್ನಿಷ್ಟೋಮಮುವಸಾಯಾಶ್ಚ ತ್ರಿಭ್ಯಶ್ಚಮಸಗಣೇಭ್ಯೋ ರಾಜಾನಾಮತಿರೇಚಯತಿ–ಎಂದು ಹೇಳಿರುವರು. ಇವುಗಳಲ್ಲಿ ಪ್ರಥಮಗಣ ಚಮಸಗಣವೆಂದರೆ ಚಮಸಪಾತ್ರೆಯಿಂದ ಸೋಮಪಾನಮಾಡುವಾಗ ಒಬ್ಬ ಋತ್ವಿಜನ ನಾಯಕತ್ವದಲ್ಲಿ ಇತರರು ಪಾನಮಾಡುವರು. ಈರೀತಿ ಮೂರಾವರ್ತಿ ನಡೆಯುವುದು. ಪ್ರಥಮ ಪರ್ಯಾದಲ್ಲಿ ಮೈತ್ರಾವರುಣನು ದ್ವಿತೀಯಪರ್ಯಾಯದಲ್ಲಿ ಬ್ರಾಹ್ಮಣಾಚ್ಛಂಸಿಯೂ ತೃತೀಯಪರ್ಯಾಯದಲ್ಲಿ ಅಚ್ಛಾವಾಕನೆಂಬ ಋತ್ವಿಜನೂ ಚಮಸಿಗಣಕ್ಕೆ ನಾಯಕರಾಗಿರುವರು (ನಾಯಕತ್ವ) ವಾದ ಮೈತ್ರಾವರುಣ ಶಸ್ತ್ರವು ಉಕ್ಥ್ಯಸ್ತೋತ್ರಗಳಲ್ಲಿ ಸಾಮಮಂತ್ರದಿಂದ ತಿರಸ್ಕರಿಸಲ್ಪಟ್ಟಿರುವದು ಆದ್ದರಿಂದ ಅಸುರರು ಈ ಮೈತ್ರಾವರುಣ ಶಸ್ತ್ರದಲ್ಲಿ ಆಶ್ರಯವನ್ನು ಪಡೆದು ಅಲ್ಲಿ ನೆಲಸಿದ್ದರು. ಅಲ್ಲಿಯೇ (ಆ ಶಸ್ತ್ರಮಂತ್ರದಲ್ಲಿಯೇ) ನೆಲಸಿದ್ದ ಇಂದ್ರನು ಇತರ ದೇವತೆಗಳನ್ನು ಕುರಿತು ಇಂತೆಂದನು. ಅಸುರರನ್ನು ಇಲ್ಲಿಂದ ಓಡಿಸುವ ವಿಷಯದಲ್ಲಿ ನನಗೆ ನಿಮ್ಮಲ್ಲಿ ಒಬ್ಬರ ಸಹಾಯವು ಬೇಕಾಗಿರುವುದು. ಆದ್ದರಿಂದ ಅಸುರರನ್ನು ಓಡಿಸುವುದಕ್ಕೆ ನನಗೆ ಸಹಾಯಕರಾಗಿ ನಿಮ್ಮಲ್ಲಿ ಯಾರು ಬರುತ್ತೀರಿ ಎಂದು ಕೇಳಿದನು. ಇಂದ್ರನ ವಾಕ್ಯವನ್ನು ಕೇಳಿ ದೇವತೆಗಳಲ್ಲಿ ಒಬ್ಬನಾದ ವರುಣನು–ಎಲೈ ಇಂದ್ರನೇ ನಾನು ನಿನಗೆ ಸಹಾಯಕನಾಗಿ ಬರುತ್ತೇನೆ ಎಂದನು. ಆದ್ದರಿಂದ ತೃತೀಯಸವನದಲ್ಲಿ ಇಂದ್ರ ಮತ್ತು ವರುಣನು ಸೇರಿ ಮಾಡುವ ಅಸುರಾಪನೋದನ ಕಾರ್ಯಕ್ಕಾಗಿ ಪಠಿಸುವ ಐಂದ್ರಾವರುಣಸೂಕ್ತವನ್ನು ಮೈತ್ರಾವರುಣನೆಂಬ ಋತ್ವಿಜನು ಪಠಿಸಬೇಕು. ಇಲ್ಲಿ ಇಂದ್ರಾವರಣಾಯುವಮಧ್ವರಾಯ ನಃ (ಋ. ಸಂ. ೭-೮೨-೧) ಎಂಬ ಹತ್ತು ಋಕ್ಕಿನ ಸೂಕ್ತವೇ ಐಂದ್ರಾವರುಣಸೂಕ್ತವು. ಈ ಸೂಕ್ತಪಠನದಿಂದ ಸಂತುಷ್ಟರಾದ ಇಂದ್ರನು ಮತ್ತು ವರುಣನು ಶಸ್ತ್ರಮಂತ್ರಗಳಲ್ಲಿ ಆಶ್ರಯವನ್ನು ಪಡೆದಿದ್ದ ಅಸುರರನ್ನು ಅಲ್ಲಿಂದ ಓಡಿಸಿದರು.

**ತೇ ವೈ ತತೋಽಪಹತಾ ಅಸುರಾ ಬ್ರಾಹ್ಮಣಾಚ್ಛಂಸಿನ ಉಕ್ಥಮುಶ್ರಯಂತ ಸೋಽಬ್ರವೀದಿಂದ್ರಃ ಕಶ್ಚಾಹಂ ಚೇಮಾನಿತೋಽಸುರಾನ್ನೋತ್ಸ್ಯಾವಹಾ ಇತ್ಯಹಂ ಚೇತ್ಯಬ್ರವೀದ್ಬೃಹಸ್ಪತಿಸ್ತಸ್ಮಾದೈಂದ್ರಾಬಾರ್ಹಸ್ಪತ್ಯಂ ಬ್ರಾಹ್ಮಣಾಚ್ಛಂಸೀ ತೃತೀಯಸವನೇ ಶಂಸತೀಂದ್ರಶ್ಚ ಹಿ ತಾನ್ಬೃಹಸ್ಪತಿಶ್ಚ ತತೋ ನುದೇತಾಂ ॥**

ದ್ವಿತೀಯೇ ಚಮಸಗಣೇ ಕಿಂಚಿತ್ಸೂಕ್ತದ್ವಯಂ ವಿಧತ್ತೇ—ತತೋ ಮೈತ್ರಾವರುಣಶಸ್ತ್ರಾನ್ನಿರಾಕೃತಾ ಅಸುರಾ ಬ್ರಾಹ್ಮಣಾಚ್ಛಂಸಿನಃ ಶಸ್ತ್ರಮಾಶ್ರಿತವಂತಃ । ಉದಪ್ರುತೋ ನ ವಯೋ ರಕ್ಷಮಾಣಾ ಇತ್ಯೇದ್ಬೃಹಸ್ಪತಿದೇವತಾಕಂ ದ್ವಾದಶರ್ಚಂ ಸೂಕ್ತಂ ॥ ಅಚ್ಛಾ ಮ ಇಂದ್ರಂ ಮತಯ ಸ್ವರ್ವಿದ ಇತ್ಯೇಕಾದಶರ್ಚಮೈಂದ್ರಂ ಸೂಕ್ತಂ ॥ ತದುಭಯಂ ಮಿಲಿತಂ ಸದೈಂದ್ರಾಬ್ರಾಹ್ಮಸ್ಪತ್ಯಂ ಸಂಪದ್ಯತೇ ತದೇತದ್ಬ್ರಾಹ್ಮಣಾಚ್ಛಂಸೀ ಬ್ರೂಯಾತ್ ಅನ್ಯತ್ಪೂರ್ವವದ್ವ್ಯಾಖ್ಯೇಯಂ ॥

ಅನಂತರ ಮೈತ್ರಾವರುಣನೆಂಬ ಋತ್ವಿಜನು ಪಠಿಸಿದ ಶಸ್ತ್ರಮಂತ್ರಗಳಿಂದ ಓಡಿಸಲ್ಪಟ್ಟ ಅಸುರರು ಬ್ರಾಹ್ಮಣಾಚ್ಛಂಸಿಯು ಪಠಿಸಬೇಕಾದ ಶಸ್ತ್ರಮಂತ್ರಗಳಲ್ಲಿ ಆಶ್ರಯವನ್ನು ಪಡೆದು ಅಲ್ಲ ನೆಲೆಸಿದರು. ಆಗ ಇಂದ್ರನು ಇದನ್ನು ಕಂಡು ಹಿಂದಿನಂತೆಯೇ ಅಸುರರನ್ನು ಓಡಿಸುವುದಕ್ಕಾಗಿ ದೇವತೆಗಳಲ್ಲಿ ಒಬ್ಬರ ಸಹಾಯವನ್ನು ಕೋರಿದಾಗ ಬೃಹಸ್ಪತಿಯು ತಾನು ಇಂದ್ರನ ಸಹಾಯಕ್ಕೆ ಬರುವನೆಂದನು. **ಉದಪ್ರುತೋ ನ ವಯೋ ರಕ್ಷಮಾಣಾ** (ಋ ಸಂ. ೧೦-೬೮-೧) ಎಂಬ ಹನ್ನೆರಡು ಋಕ್ಕಿನ ಸೂಕ್ತವು ಬೃಹಸ್ಪತಿದೇವತಾಕವು ಮತ್ತು **ಅಚ್ಛಾಮ ಇಂದ್ರಂ ಮತಯಃ ಸ್ವರ್ವಿದಃ** (ಋ. ಸಂ. ೧೦-೪೩-೧) ಎಂಬ ಹನ್ನೊಂದು ಋಕ್ಕಿನ ಸೂಕ್ತವು ಇಂದ್ರದೇವತಾಕವಾದುದು. ಈ ಎರಡು ಸೂಕ್ತಗಳನ್ನು ಸೇರಿಸಿ ಬ್ರಾಹ್ಮಣಾಚ್ಛಂಸೀಯು ಶಸ್ತ್ರಮಂತ್ರವನ್ನು ಪಠಿಸುವನು. ಈ ಸೂತ್ರಪಠನದಿಂದ ಅಸುರರು ಓಡಿಸಲ್ಪಟ್ಟರು.

**ತೇ ವೈ ತತೋಽಪಹತಾ ಅಸುರಾ ಅಚ್ಛಾವಾಕಸ್ಯೋಕ್ಥಮಶ್ರಯಂತ ಸೋಽಬ್ರವೀದಿಂದ್ರಃ ಕಶ್ಚಾಹಂ ಚೇಮಾನಿತೋಽಸುರಾನ್ನೋ-ತ್ಸ್ಯಾವಹಾ ಇತ್ಯಹಂ ಚೇತ್ಯಬ್ರವೀದ್ವಿಷ್ಣುಸ್ತಸ್ಮಾದೈಂದ್ರಾವೈಷ್ಣವ-ಮಚ್ಛಾವಾಕಸ್ತೃತೀಯಸವನೇ ಶಂಸತೀಂದ್ರಶ್ಚ ಹಿ ತಾನ್ವಿಷ್ಣುಶ್ಚ ತತೋ ನುದೇತಾಂ ॥**

ತೃತೀಯೇ ಚಮಸಗಣೇ ಸೂಕ್ತಂ ವಿಧತ್ತೇ—**ಸಂ ವಾಂ ಕರ್ಮಣಾ ಸಮಿಷೇತ್ಯಷ್ಟರ್ಚ-ಮೈಂದ್ರಾವೈಷ್ಣವಂ ಸೂಕ್ತಂ । ಅನ್ಯತ್ಪೂರ್ವವದ್ವ್ಯಾಖ್ಯೇಯಂ ।**

ಅನಂತರ ಬ್ರಾಹ್ಮಣಾಚ್ಛಂಸಿಯು ಪಠಿಸಿದ ಶಸ್ತ್ರಮಂತ್ರಗಳಿಂದ ಓಡಿಸಲ್ಪಟ್ಟ ಅಸುರರು ಮತ್ತೆ ಅಚ್ಛಾವಾಕನ ಶಸ್ತ್ರಮಂತ್ರ ಗಳಲ್ಲಿ ಆಶ್ರಯವನ್ನು ಪಡೆದು ಅಲ್ಲಿ ನೆಲೆಸಿದರು. ಇದನ್ನು ಕಂಡು ಇಂದ್ರನು ಹಿಂದಿನಂತೆಯೇ ಅಸುರರನ್ನು ಓಡಿಸುವುದಕ್ಕಾಗಿ ದೇವತೆಗಳನ್ನು ಕರೆದು ಅಸುರರನ್ನು ಓಡಿಸುವ ಕಾರ್ಯದಲ್ಲಿ ನನಗೆ ಸಹಾಯಮಾಡುವುದಕ್ಕಾಗಿ ನಿಮ್ಮಲ್ಲಿ ಯಾರು ಬರುತ್ತೀರಿ ಎಂದು ಕೇಳಲು ವಿಷ್ಣುವು ನಾನು ಬರುತ್ತೇನೆಂದನು. **ಸಂ ವಾಂ ಕರ್ಮಣಾ ಸಮಿಷಾ ಹಿನೋಮಿ** (ಋ. ಸಂ. ೬-೬೯-೧) ಎಂಬ ಎಂಟುಋಕ್ಕಿನ ಸೂಕ್ತವು ಇಂದ್ರ ಮತ್ತು ವಿಷ್ಣುದೇವತಾಕವಾದುದು. ಈ ಸೂಕ್ತವನ್ನು ಅಚ್ಛಾವಾಕನೆಂಬ ಋತ್ವಿಜನು ತೃತೀಯಸವನಕಾಲದಲ್ಲಿ ಪಠಿಸುವನು. ಈ ಮಂತ್ರಪಠನದಿಂದ ಎಂದರೆ ಅಸುರರು ಅಚ್ಛಾವಾಕನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಿಂದ ಓಡಿಸಲ್ಪಟ್ಟರು.

**ದ್ವಂದ್ವಮಿಂದ್ರೇಣ ದೇವತಾಃ ಶಸ್ಯಂತೇ ದ್ವಂದ್ವಂ ವೈ ಮಿಥುನಂ ತಸ್ಮಾದ್ದ್ವಂದ್ವಾನ್ಮಿಥುನಂ ಪ್ರಜಾಯತೇ ಪ್ರಜಾತ್ಯೈ।ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥**

**ಸೂಕ್ತಾನಾಂ** ದ್ವಿದೇವತಾಕತ್ವಂ ಪ್ರಶಂಸತಿ—ಇಂದ್ರೇಣ ಸಹ ದ್ವಂದ್ವಂ ಯುಗ್ಮಂ ಭೂತ್ವಾ ವರುಣಬೃಹಸ್ಪತಿ ವಿಷ್ಣುದೇವತಾಃ ಕ್ರಮೇಣ ಶಸ್ಯಂತೇ ॥ ದ್ವಂದ್ವಂ ಚ ಲೋಕೇ ಸ್ತ್ರೀ-ಪುರುಷರೂಪಂ ಮಿಥುನಂ ತಾದೃಶಾನ್ಮಿಥುನಾದಪತ್ಯರೂಪಂ ಮಿಥುನಂ ಪ್ರಜಾಯತೇ ॥ ತತೋ ದ್ವಂದ್ವಶಂಸನಂ ಯಜಮಾನಸ್ಯ ಪ್ರಜಾತ್ಯೈ ಭವತಿ ವೇದನಂ ಪ್ರಶಂಸತಿ ॥

ತೃತೀಯಸವನದಲ್ಲಿ ಮೈತ್ರಾವರುಣ, ಬ್ರಾಹ್ಮಣಾಚ್ಛಂಸಿ, ಅಚ್ಛಾವಾಕನೆಂಬ ಋತ್ವಿಜರು ಪಠಿಸುವ ಶಸ್ತ್ರಮಂತ್ರಗಳಲ್ಲಿ ಇಂದ್ರನ ಜತೆಗೆ ವರುಣ ಬೃಹಸ್ಪತಿ ವಿಷ್ಣು ಎಂಬ ದೇವತೆಗಳಿರುವರು. ಇದರಿಂದ ಪ್ರತಿಯೊಂದು ಶಸ್ತ್ರಮಂತ್ರವನ್ನು ಪಠಿಸುವಾಗಲೂ ಇಬ್ಬಿಬ್ಬರು ದೇವತೆಗಳನ್ನು ಸ್ತುತಿಸಿದಂತಾಗುವುದು. ಇದಕ್ಕೆ ದ್ವಂದ್ವವೆಂದು ಹೆಸರು. ಪ್ರಪಂಚದಲ್ಲಿ ದ್ವಂದ್ವವೆಂದರೆ ಮಿಥುನ ಅಥವಾ ಸ್ತ್ರೀಪುರುಷರ ಸಂಯೋಗಸಂದರ್ಭವು. ಆದ್ದರಿಂದ ಈರೀತಿ ದ್ವಂದ್ವದೇವತೆಗಳನ್ನು ಸ್ತುತಿಸುವುದರಿಂದ ಯಜ್ಞ ಮಾಡುವ ಯಜಮಾನನಿಗೆ ಸ್ತ್ರೀಪುರುಷರಿಂದ ಲಭಿಸಬಹುದಾದ ಪ್ರಜಾಸಂತತಿಯು ಲಭಿಸುವುದೆಂದಭಿಪ್ರಾಯವು. ಈ ವಿಷಯವನ್ನು ತಿಳಿದಿರುವ ಪುರುಷನೂ ಸಹ ಪ್ರಜಾಸಂತತಿಯನ್ನು ಪಡೆದು ಸುಖಿಸುವನು.

**ಅಥ ಹೈತೇ ಪೋತ್ರೀಯಾಶ್ಚ ನೇಷ್ಟ್ರೀಯಾಶ್ಚ ಚತ್ವಾರ ಋತುಯಾಜಾಃ ಷಳೃಚಃ ಸಾ ವಿರಾಡ್ದಶಿನೀ ತದ್ವಿರಾಜತಿ ಯಜ್ಞಂ ದಶಿನ್ಯಾಂ ಪ್ರತಿಷ್ಠಾಪಯಂತಿ ಪ್ರತಿಷ್ಠಾಪಯಂತಿ ॥**

ಶಸ್ತ್ರಾಣಾಂ ತ್ರಯಾಣಾಂ ಹೋತ್ರಕಾಣಾಂ ಸೂಕ್ತಾನಿ ವಿಧಾಯ ಪೋತುರ್ನೇಷ್ಟುಶ್ಚ ಮಂತ್ರಾಂತರಾಣಿ ವಿಧತ್ತೇ— ಪ್ರೈಷಗ್ರಂಥೇ ಪಂಚಮೇ ಸೂಕ್ತೇ ಹೋತಾ ಯಕ್ಷದಿತ್ಯಾದಿಕೌ ದ್ವಿತೀಯಾಷ್ಟಮೌ ಮಂತ್ರೌ ಪೋತುರ್ದ್ವಾವೃತುಯಾಜೌ ತಥಾ ತತ್ರೈವ ತೃತೀಯಸವನಮೌ ಮಂತ್ರೌ ನೇಷ್ಟುರ್ದ್ವಾವೃತುಯಾಜೌ ॥ ಇತ್ಯೇವಂ ಚತ್ವಾರ ಋತುಯಾಜಾಸ್ತೇ ಮಿಲಿತ್ವಾ ನ್ನೇಷ್ಟೃಸಂಬಂಧಾಚ್ಚ ಪೋತ್ರೀಯಾ ನೇಷ್ಟ್ರೀಯಾಶ್ಚ ಭವಂತಿ ॥ ತಥಾ ಪ್ರಸ್ಥಿತಯಾಜ್ಯಾಃ ಪೋತೃಸಂಬಂಧಾ ಪೋತುಸ್ತಿಸ್ರ ಋಚೋ ನೇಷ್ಟುಶ್ಚ ತಿಸ್ರ ಋಚ ಇತ್ಯೇವಂ ಷಳೃಚೋ ಭವಂತಿ ॥ ತದೇತನ್ಮಂತ್ರದಶಕಂ ಪ್ರಶಂಸತಿ—ಸಾ ವಿರಾಡಿತ್ಯಾದಿನಾ । ಸಾ ಪೂರ್ವೋಕ್ತಾ ಮಂತ್ರಸಮಷ್ಟಿರ್ದಶಿನೀ ದಶಸಂಖ್ಯಾಯುಕ್ತಾ ಸತೀ ವಿರಾಟ್ಛಂದಃ ಸಂಪದ್ಯತೇ ॥ ದಶಾಕ್ಷರಾ-ವಿರಾಡಿತಿ ಶ್ರುತ್ಯಂತರಾತ್॥ತತ್ತೇನ ದಶಸಂಪ್ರಯೋಗೇಣ ದಶಿನ್ಯಾಂ ದಶಸಂಖ್ಯೋಪೇತಾಯಾಂ ವಿರಾಜಿ ಯಜ್ಞಮೃತ್ವಿಜಃ ಪ್ರತಿಷ್ಠಾಪಯಂತಿ ॥

ಇದುವರೆಗೂ ಹೋತೃವರ್ಗದ ಮೂರುಮಂದಿ ಋತ್ವಿಜರು ಪಠಿಸಬೇಕಾದ ಸೂಕ್ತಗಳನ್ನು ಹೇಳಿ ಇನ್ನು ಮುಂದೆ ಪೋತೃ ಮತ್ತು ನೇಷ್ಟೃ ಎಂಬ ಋತ್ವಿಜರು ಪಠಿಸಬೇಕಾದ ಇತರ ಮಂತ್ರಗಳನ್ನು ವಿವರಿಸುವರು. ಪ್ರೈಷಗ್ರಂಥದ ಎರಡನೆಯ ಸೂಕ್ತದಲ್ಲಿ ಹೇಳಿರುವಂತೆ ಹೋತಾಯಕ್ಷತ್ ಎಂದು ಪ್ರಾರಂಭಿಸಿರುವ ಮಂತ್ರಗಳಲ್ಲಿ ಮೊದಲನೆಯ ಮತ್ತು ಎಂಟನೆಯ ಮಂತ್ರಗಳು ಪೋತೃವೆಂಬ ಋತ್ವಿಜನು ಪಠಿಸಬೇಕಾದ ಎರಡು ಋತುಯಾಜಮಂತ್ರಗಳು ಹಾಗೆಯೇ ತೃತೀಯಸವನದಲ್ಲಿ ನೇಷ್ಟೃವು ಪಠಿಸಬೇಕಾದ ಎರಡು ಋತುಯಾಜಮಂತ್ರಗಳೂ ಇರುವವು ಹೀಗೆ ಈ ನಾಲ್ಕು ಋತುಯಾಯಮಂತ್ರಗಳೂ ಸೇರಿದರೆ ಪೋತ್ರೀಯಾ, ನೇಷ್ಟ್ರೀಯಾ ಎಂಬ ನಾಲ್ಕು ಋತುಯಾಜಮಂತ್ರಗಳಾಗುವವು. ಮತ್ತು ಪೋತೃವು ಪ್ರಸ್ಥಿತಯಾಜ್ಯಾ ಎಂಬ ಮೂರುಮಂತ್ರಗಳನ್ನೂ ನೇಷ್ಟ್ರವು ಪ್ರಸ್ಥಿತಯಾಜ್ಯಾ ಎಂಬ ಮೂರು ಮಂತ್ರಗಳನ್ನೂ ಪಠಿಸಬೇಕಾಗಿರುವುದು. ಈ ಆರು ಪ್ರಸ್ಥಿತಯಾಜ್ಯಾಮಂತ್ರಗಳೂ ಹಿಂದೆ ಹೇಳಿದ ನಾಲ್ಕು ಋತುಯಾಜಾ ಎಂಬ ಮಂತ್ರಗಳೂ ಸೇರಿದರೆ ಒಟ್ಟು ಹತ್ತು ಮಂತ್ರಗಳಾಗುವವು. ಇದರಿಂದ ವಿರಾಟ್ಛಂದಸ್ಸು ಲಭಿಸುವುದು. ಏಕೆಂದರೆ ವಿರಾಟ್ಛಂದಸ್ಸಿನ ಪಾದದಲ್ಲಿ ಹತ್ತು ಅಕ್ಷರಗಳಿರುವವು. ಈ ವಿಧವಾಗಿ ಹತ್ತು ಅಕ್ಷರಗಳಿಂದ ಕೂಡಿದ ವಿರಾಟ್ ಎಂಬ ಛಂದಸ್ಸಿನಲ್ಲಿ (ದಶವಿಧ ಆಹುತಿಗಳಿಂದ ಯುಕ್ತವಾದ) ಯಜ್ಞವನ್ನು ಋತ್ವಿಜರು ಸ್ಥಿರವಾಗಿರುವಂತೆ ಸ್ಥಾಪಿಸುವರು.

*English Translation*

**(The Shastras of the three minor Hotri-priests at the evening libation of the Ukthya sacrifice)**

The Asuras entered the Uktha (Shastra) of the Maitravaruna; Indra said, "who will join me, that we both might turn these Asuras out from here, (the Shastra of the Maitravaruna)?" "I," said Varuna. Thence the Maitravaruna repeats a hymn for Indra-Varuna at the evening libation. Indra and Varuna then turned them out from it (the Shastra of the Maitravaruna).

The Asuras having been turned out from this place, entered the Shastra of the Brahmanachhamsi. Indra said, "Who will join me, that we both might turn the Asuras, out from this place?" Brihaspati answered, "I will join you." Thence the Brahmanachhamsi repeats at the evening libation an Aindra-Brahaspatya hymn. Indra and Brihaspati turned the Asuras out from it.

The Asuras after having been turned out from it, entered the Shastra of the Achhavaka. Indra said, "Who will join me, that we both might turn out the Asuras from here?" Vishnu answered, "I will join you." Thence the Achhavaka repeats at the evening libation an Aindra-Vaishnava hymn. Indra and Vishnu turned the Asuras out from this place.

The deities who are successively praised along with Indra, form each a pair with him. A pair is a couple consisting of a male and female. From this pair such a couple is produced for production. He who has such a knowledge is blessed with children and cattle.

The Rituyajas of both the Potar and Neshtar amount to four. The Yajyas to be recited by them along with the other Hotars are six verses. This is a Virat which contains the number ten. Thus they complete the sacrifice with a Virat, which contains the number ten (three times ten).

(On the Sholasi and Atiratra Sacrifices)

**ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದಲ್ಲಿ ಹದಿನೈದನೆಯ ಅಧ್ಯಾಯದಲ್ಲಿ ಆರನೆಯ ಖಂಡವು ಸಮಾಪ್ತವಾದುದು.**

**ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ಪಂಚದಶಾಧ್ಯಾಯಃ ಸಮಾಪ್ತಃ**

**ಹದಿನೈದನೆಯ ಅಧ್ಯಾಯವು ಮುಗಿದುದು.**

# ಅಥೈತರೇಯಬ್ರಾಹ್ಮಣೇ ಷೋಡಶಾಧ್ಯಾಯೇ ಪ್ರಥಮಃ ಖಂಡಃ

## ಹದಿನಾರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು



[ ಷೋಳಶೀ ಮತ್ತು ಅತಿರಾತ್ರ ಎಂಬ ಯಜ್ಞಗಳು ]

[ಷೋಡಶೀ ಎಂಬ ಯಜ್ಞದ ಮೂಲರೂಪವು; ಷೋಳಶೀ ಎಂಬ ಯಜ್ಞದಲ್ಲಿ ಪಠಿಸುವ ಶಸ್ತ್ರ ಮಂತ್ರಗಳು ಅನುಷ್ಟುಪ್ ಛಂದಸ್ಸಿನವು ಎಂಬ ವಿಚಾರ]



**ದೇವಾ ವೈ ಪ್ರಥಮೇನಾಹ್ನೇಂದ್ರಾಯ ವಜ್ರಂ ಸಮಭರಂ ಸ್ತಂ ದ್ವಿತೀ-ಯೇನಾಹ್ನಾಽಸಿಂಚಂಸ್ತಂ ತೃತೀಯೇನಾಹ್ನಾ ಪ್ರಾಯಚ್ಛಂಸ್ತಂ ಚತುರ್ಥೇಽಹನ್ಪ್ರಾಹರತ್ತಸ್ಮಾಚ್ಚತುರ್ಥೇಽಹನ್ಷೋಳಶಿನಂ ಶಂಸತಿ ॥**



ಸಂಸ್ಥೇಷ್ಟೀನಾಂ ವಾಗ್ಯಮಶ್ಚರ್ತ್ವಿಜಾಂ ಚ
ಯಾಗಾದೇರ್ವಾ ದೇವಿಕಾನಾಂ ವಿಶೇಷಾಃ ।
ಸಂಸ್ಥೋಕ್ಥಸ್ಯ ಸ್ತೋತ್ರಶಸ್ತ್ರಪ್ರಕ್ಲೃಪ್ತಿಃ
ಶಸ್ತ್ರಾಣ್ಯಾಹುಃ ಶಸ್ತ್ರಿಣಾಂ ಹೋತ್ರಕಾಣಾಂ ॥೧॥



ಜ್ಯೋತಿಷ್ಟೋಮಭೇದ ಉಕ್ಥ್ಯಃ ಸಮಾಪಿತಃ । ಅಥಷೋಡಶ್ಯುಚ್ಯತೇ । ತದ್ವಿಷಯಂ ಶಂಸನಂ ವಿಧತ್ತೇ—ಅಗ್ನಿಷ್ಟೋಮಾದಿಸಂಸ್ಥಾವಿಶೇಷಃ ಸ್ವತಂತ್ರಃ ಕ್ರತುತ್ವಾದ್ಯಥಾ ಪೃಥಗನುಷ್ಠಾತುಂ ಯೋಗ್ಯಸ್ತಥಾ ಷೋಡಶೀ ಸ್ವತಂತ್ರಃ ಕ್ರತುಃ ॥ ತಥಾ ಚ ಶಾಖಾಂತರೇ ಪಠಂತಿ - ನ ವೈ ಷೋಡಶೀ ನಾಮ ಯಜ್ಞೋಽಸ್ತಿ ಯದ್ವಾವ ಷೋಡಶಗ್ಂ ಸ್ತೋತ್ರಗ್ಂ ಷೋಡಶಗ್ಂ ಶಸ್ತ್ರಂ ತೇನ ಷೋಡಶೀ' ಇತಿ ॥ ತಥಾ ಸತ್ಯಯಂ ಸಂಸ್ಥಾವಿಶೇಷಃ ಪೃಷ್ಠ್ಯಷಡಹಚತುರ್ಥೇಽಹನಿ ಪ್ರಯುಜ್ಯತೇ । ಅತಸ್ತತ್ರೈವೈತಚ್ಛಂಸನವಿಧಾನಂ ದೇವಾಃ ಪುರಾ ಪೃಷ್ಠ್ಯ ಷಡಹೇ ಪ್ರಥಮೇನಾಹ್ನಾ ಪ್ರಥಮದಿವಸನಿಷ್ಪಾದ್ಯೇನ ಸೋಮಪ್ರಯೋಗೇಣೇಂದ್ರಾರ್ಥಂ ವಜ್ರಂ ಸಮಭರನ್ಸಂಪಾದಿತವಂತಃ । ಅತ್ರ ಸರ್ವತ್ರಾಹಃ ಶಬ್ದೋಽನ್ಹಾ ನಿಷ್ಪಾದ್ಯಸೋಮಪ್ರಯೋಗಮಭಿಧತ್ತೇ—ತತ್ರ ಸಂಪಾದಿತಂ ವಜ್ರಂ ದ್ವಿತೀಯೇನಾಹ್ನಾಽಸಿಂಚನ್ ॥ ಸೇಚನಂ ನಾಮ ಲೋಹಮಯಾನಾಂ ಶಂಕುಕುಠಾರಾದೀನಾಂ ತೀಕ್ಷ್ಣತ್ವಾಯ ದಾರ್ಢ್ಯಾಯ ಚಾಗ್ನೌ ಪ್ರತಾಪ್ಯ

**ಯಥೋಚಿತಂ ನೀರೇ ಸ್ಥಾಪನಂ ತದಿದಂ ಸೇಚನಂ ವಜ್ರೇ ಕೃತವಂತಃ। ಕೃತ್ವಾ ಚ ತೃತೀಯೇಽನಾಹ್ನಾ ತಂ ವಜ್ರಮಿಂದ್ರಾಯ ಪ್ರಾಯಚ್ಛನ್ನತ್ತವಂತಃ॥ ಸ ಚೇಂದ್ರಸ್ತಂ ವಜ್ರಂ ಚತುರ್ಥೇಽಹನಿ ಶತ್ರೋರುಪರಿ ಪ್ರಾಹರತ್ ॥ ತಸ್ಮಾತ್ಪೃಷ್ಠ್ಯಷಡಹಸ್ಯ ಚತುರ್ಥಾಹಃಪ್ರಯೋಗೇ ಷೋಡಶಿನಂ ಶಸ್ತ್ರಂ ಶಂಸೇತ್ ॥ ಅಸಾವಿ ಸೋಮ ಇಂದ್ರ ತೇ [೧.೮೪-೧] ಇತ್ಯಾದಿಕಂ ಷೋಳಶ್ಯಾಖ್ಯಂ ಶಸ್ತ್ರಂ । ತಥಾ ಚಾಽಽಶ್ವಲಾಯನ ಆಹ—ಅಥ ಷೋಳಶ್ಯಸಾವಿ ಸೋಮ ಇಂದ್ರ ತ ಇತಿ ಸ್ತೋತ್ರಿಯಾನುರೂಪಾವಿತಿ॥**

ಜ್ಯೋತಿಷ್ಟೋಮಯಾಗದಲ್ಲಿ ಏಳು ಪ್ರಭೇದಗಳಿರುವವು ಎಂದು ಹೇಳಿದೆಯಷ್ಟೆ. ಅವುಗಳಲ್ಲಿ ಉಕ್ಥ್ಯವೆಂಬ ಯಾಗ ಪ್ರಭೇದದ ವಿಷಯವನ್ನು ತಿಳಿಸಲಾಯಿತು. ಈಗ ಷೋಳ(ಡ)ಶೀ ಎಂಬ ಯಜ್ಞಪ್ರಭೇದದ ವಿಷಯವನ್ನು ತಿಳಿಸಲಾಗುವುದು.

ಅಗ್ನಿಷ್ಟೋಮ, ಉಕ್ಥ್ಯ ಮೊದಲಾದ ಯಜ್ಞಗಳು ಸ್ವತಂತ್ರವಾದವುಗಳು. ಎಂದರೆ ಯಾವ ಇತರ ಯಜ್ಞಗಳ ಪ್ರಭೇದಗಳೂ ಅಲ್ಲ. ಇವುಗಳನ್ನು ಪ್ರತ್ಯೇಕವಾಗಿ ಮಾಡಬಹುದು. ಇದರಂತೆಯೇ ಷೋಡಶೀ ಎಂಬ ಯಜ್ಞವೂ ಸಹ ಸ್ವತಂತ್ರವು. ಈ ವಿಷಯದಲ್ಲಿ ಶಾಖಾಂತರದಲ್ಲಿ ಹೀಗೆ ಹೇಳಿರುವುದು. **ನ ವೈ ಷೋಡಶೀ ನಾಮ ಯಜ್ಞೋಽಸ್ತಿ ಯದ್ವಾವ ಷೋಡಶಗ್ಂ ಸ್ತೋತ್ರಗ್ಂ ಷೋಡಶಗ್ಂ ಶಸ್ತ್ರಂ ತೇನ ಷೋಡಶೀ ಇತಿ** ಎಂದರೆ ಷೋಡಶೀ ಎಂಬ ಹೆಸರಿನ ಪ್ರತ್ಯೇಕವಾದ ಯಾವ ಯಜ್ಞವೂ ಇರುವುದಿಲ್ಲ. ಯಾವ ಯಜ್ಞದಲ್ಲಿ ಹದಿನಾರು ಸ್ತೋತ್ರಗಳೂ ಹದಿನಾರು ಶಸ್ತ್ರಗಳೂ ಪಠಿಸಲ್ಪಡುವವೋ ಅದನ್ನೇ ಷೋಡಶೀ ಎಂದು ಹೇಳುವರು. ಆದ್ದರಿಂದ ಈ ಷೋಡಶೀ ಎಂಬ ಯಜ್ಞವಿಶೇಷವು ಆರುದಿನಗಳಲ್ಲಿ ಮಾಡಿ ಮುಗಿಸಲ್ಪಡುವ ಪೃಷ್ಠ್ಯಷಡಹವೆಂಬ ಯಜ್ಞದ ನಾಲ್ಕನೇ ದಿನದಲ್ಲಿ ಮಾಡಲ್ಪಡುವುದು. ಅದ್ದರಿಂದ ಈ ಯಜ್ಞವನ್ನು ಮಾಡುವ ವಿಧಾನವನ್ನು ದೇವತೆಗಳು ಪೂರ್ವದಲ್ಲಿ ಪೃಷ್ಠ್ಯಷಡಹವೆಂಬ ಯಜ್ಞದ ಮೊದಲನೇ ದಿವಸ ಸೋಮ ಪ್ರಯೋಗಕಾಲದಲ್ಲಿ ವಜ್ರಾಯುಧವನ್ನು (ನಿರ್ಮಿಸಿ) ಪಡೆದರು. ಇಲ್ಲಿ ಅಹಶ್ಶಬ್ದವು ಯಾವ ದಿನ ಸೋಮಪ್ರಯೋಗವು ನೆರವೇರಿಸಲ್ಪಡುವುದೋ ಆ ದಿನವನ್ನು ಸೂಚಿಸುವುದು. ಈರೀತಿ ದೇವತೆಗಳು ಪಡೆದ ವಜ್ರಾಯುಧವನ್ನು ಯಜ್ಞದ ಎರಡನೇ ದಿವಸ ಸೇಚನಮಾಡಿದರು. ಇಲ್ಲಿ ಸೇಚನವೆಂದರೆ ಲೋಹಮಯವಾದ ಕತ್ತಿ, ಕೊಡಲಿ ಮೊದಲಾದ ಆಯುಧಗಳನ್ನು ಹರಿತವನ್ನಾಗಿ ಮಾಡುವುದಕ್ಕಾಗಿ ಬೆಂಕಿಯಲ್ಲಿ ಕಾಯಿಸಿ, ಕುಟ್ಟಿ ಅನಂತರ ನೀರಿನಲ್ಲಿ ಅದ್ದುವುದು ಎಂದು. ಈ ರೀತಿ ಹರಿತಮಾಡುವ ಕ್ರಮವನ್ನು ವಜ್ರಾಯುಧದ ವಿಷಯದಲ್ಲಿ ಅನುಸರಿಸಿದರು. ವಜ್ರಾಯುಧವನ್ನು ಈ ಕ್ರಮದಿಂದ ಹರಿತವನ್ನಾಗಿ (ಸೇಚನ) ಮಾಡಿ ಅನಂತರ ಅದನ್ನು ಇಂದ್ರನಿಗೆ ಅರ್ಪಿಸಿದರು. ಇಂದ್ರನು ದೇವತೆಗಳು ಕೊಟ್ಟ ಹರಿತವಾದ ಈ ವಜ್ರಾಯುಧವನ್ನು ಯಜ್ಞದ ನಾಲ್ಕನೇಯ ದಿವಸ ಶತ್ರುಗಳ ಮೇಲೆ ಉಪಯೋಗಿಸಿ ಪ್ರಹರಿಸಿದನು. ಆದ್ದರಿಂದ ಈ ಪೃಷ್ಠ್ಯ ಯಾಗದ ನಾಲ್ಕನೇ ದಿವಸದ ಪ್ರಯೋಗಕಾಲದಲ್ಲಿ ಷೋಡಶಿ ಎಂಬ ಶಸ್ತ್ರಮಂತ್ರವನ್ನು ಪಠಿಸಬೇಕು. **ಅಸಾವಿ ಸೋಮ ಇಂದ್ರ ತೇ** (ಋ. ಸಂ. ೧-೮೪-೧) ಎಂಬ ಮಂತ್ರವೇ ಈ ಷೋಡಶೀ ಎಂಬ ಶಸ್ತ್ರಮಂತ್ರವು. ಈ ವಿಷಯದಲ್ಲಿ ಆಶ್ವಲಾಯನರು ಹೀಗೆ ಹೇಳಿರುವರು— **ಅಥ ಷೋಳಶ್ಯಸಾವಿ ಸೋಮ ಇಂದ್ರ ತ ಇತಿ ಸ್ತೋತ್ರಿಯಾನುರೂಪಾವಿತಿ** ಎಂದು

ವಜ್ರೋ ವಾ ಏಷ ಯತ್ಷೋಳಶೀ ತದ್ಯಚ್ಚತುರ್ಥೇಽಹನ್ಷೋಳಶಿನಂ
ಶಂಸತಿ ವಜ್ರಮೇವ ತತ್ಪ್ರಹರತಿ ದ್ವಿಷತೇ ಭ್ರಾತೃವ್ಯಾಯ ವಧಂ
ಯೋಽಸ್ಯ ಸ್ತೃತ್ಯಸ್ತಸ್ಮೈ ಸ್ತರ್ತವೈ ವಜ್ರೋ ವೈ ಷೋಡಶೀ
ಪಶವ ಉಕ್ಥಾನಿ ತಂ ಪರಸ್ತಾದುಕ್ಥಾನಾಂ ಪರ್ಯಸ್ಯ ಶಂಸತಿ॥

ಷೋಳಶಿಶಂಸನಂ ಪ್ರಶಂಸತಿ— ಷೋಳಶಿನೋ ವಜ್ರಸ್ವರೂಪತ್ವಾದ್ಯಃ ಪುಮಾನಸ್ಯ ಯಜಮಾನಸ್ಯ ಸ್ಪೃತ್ಯೋ ಹಿಂಸನೀಯಸ್ತಸ್ಮೈ ಸ್ತರ್ತ ವೈ ತಸ್ಯ ಹಿಂಸಾರ್ಥಂ ವಧಹೇತುಂ ವಜ್ರಮೇವ ಭ್ರಾತೃವ್ಯಾಯ ಪ್ರಹರತಿ। ತಸ್ಯ ಶಸ್ತ್ರಸ್ಯ ಕಾಲಂ ವಿಧತ್ತೇ— ಯಥಾ ಪೂರ್ವತ್ರಾಗ್ನಿಷ್ಟೋಮಪ್ರಯುಕ್ತಾನಾಂ ದ್ವಾದಶಶಸ್ತ್ರಾಣಾಮುಪರಿ ತ್ರೀಣ್ಯುಕ್ಥಶಸ್ತ್ರಾಣಿ ಪ್ರಯುಕ್ತಾನಿ-ತಥಾಽತ್ರಾಪಿ ತ್ರಯಾಣಾಮುಕ್ಥಶಸ್ತ್ರಾಣಾಂ ಪರಸ್ತಾದುಪರಿ ಪರ್ಯಸ್ಯ ಷೋಳಶಿನಮೇವ ಶಂಸೇತ್ ॥ ಉಕ್ಥಾನಾಂ ಪಶುರೂಪತ್ವಾತ್ಷೋಳಶಿನೋ ವಜ್ರರೂಪತ್ವಾಚ್ಚಾಯಂ ಕ್ರಮ ಉಪಪನ್ನಃ॥

ಷೋಳಶೀ ಎಂಬ ಮಂತ್ರವನ್ನು ಪ್ರಶಂಸೆಮಾಡುವದು— ಈ ಷೋಡಶೀ ಎಂಬ ಶಸ್ತ್ರ ಮಂತ್ರವು ವಜ್ರಾಯುಧಸ್ವರೂಪವಾಗಿರುವುದು. ಆದ್ದರಿಂದ ಯಜ್ಞಮಾಡುವ ಯಜಮಾನನನ್ನು ಹಿಂಸೆಮಾಡುವ ಅವನ ಶತ್ರುವಾದವನನ್ನು ನಾಶಮಾಡುವುದಕ್ಕಾಗಿ ಈ ಷೋಡಶೀ ಎಂಬ ಮಂತ್ರವನ್ನು ಪಠಿಸುವರು. ಹಿಂದೆ ಹೇಳಿದಂತೆ ಅಗ್ನಿಷ್ಟೋಮ ಯಾಗದಲ್ಲಿ ಹನ್ನೆರಡು ಶಸ್ತ್ರಮಂತ್ರಗಳನ್ನು ಪಠಿಸುವರು. ಹಿಂದೆ ಹೇಳಿದಂತೆ ಅಗ್ನಿಷ್ಟೋಮ ಯಾಗದಲ್ಲಿ ಹನ್ನೆರಡು ಶಸ್ತ್ರಮಂತ್ರಗಳನ್ನು ಪಠಿಸಿದ ನಂತರ ಮೂರು ಉಕ್ಥ್ಯಶಸ್ತ್ರಗಳನ್ನು ಪಠಿಸುವರು. ಇವುಗಳು ಹದಿನೈದು ಶಸ್ತ್ರಮಂತ್ರಗಳಾಗುವವು. ಅನಂತರ ಮುಂದೆ ಈ ಷೋಡಶೀ ಎಂಬ ಹದಿನಾರನೇ ಶಸ್ತ್ರಮಂತ್ರವನ್ನು ಪಠಿಸಬೇಕು. ಉಕ್ಥ ಎಂಬ ಶಸ್ತ್ರಮಂತ್ರಗಳು ಪಶುಸ್ವರೂಪವು. ಷೋಡಶೀ ಎಂಬ ಶಸ್ತ್ರ ಮಂತ್ರವು ವಜ್ರಾಯುಧಸ್ವರೂಪವು. ಆದ್ದರಿಂದ ಮೇಲೆ ಹೇಳಿದ ಕ್ರಮವನ್ನು ಇಲ್ಲಿ ಉಪಯೋಗಿಸಬೇಕು.

**ತಂ ಯತ್ಪರಸ್ತಾದುಕ್ಥಾನಾಂ ಪರ್ಯಸ್ಯ ಶಂಸತಿ ವಜ್ರೇಣೈವ ತತ್ಷೋಳಶಿನಾ ಪಶೂನ್ಪರಿಗಚ್ಛತಿ ತಸ್ಮಾತ್ಪಶವೋ ವಜ್ರೇಣೈವ ಷೋಳಶಿನಾ ಪರಿಗತಾ ಮನುಷ್ಯಾನಭ್ಯುಪಾವರ್ತಂತೇ ತಸ್ಮಾದಶ್ವೋ ವಾ ಪುರುಷೋ ವಾ ಗೌರ್ವಾ ಹಸ್ತೀ ವಾ ಪರಿಗತ ಏವ ಸ್ವಯಮಾತ್ಮನೇಽತ ಏವ ವಾಚಾಽಭಿಷಿದ್ಧ ಉಪಾವರ್ತತೇ ವಜ್ರಮೇವ ಷೋಳಶಿನಂ ಪಶ್ಯನ್ವಜ್ರೇಣೈವ ಷೋಳಶಿನಾ ಪರಿಗತೋ ವಾಗ್ಘಿ ವಜ್ರೋ ವಾಕ್ಷೋಳಶೀ ॥**

ತಾಮೇತಾಮುಪಪತ್ತಿಂ ಪ್ರಕಟಯತಿ— ತಂ ಷೋಳಶಿನಂ ಯದ್ಯಸ್ಮಾದುಕ್ಥಶಸ್ತ್ರಾಣಾಂ ಪರಸ್ತಾತ್ಪರ್ಯಸ್ಯ ಶಂಸತಿ— ತತ್ತೇನ ಶಂಸನೇನ ಷೋಳಶಿರೂಪೇಣ ವಜ್ರೇಣೈವೋಕ್ತರೂಪಾನ್ಪಶೂನ್ಪರಿಗಚ್ಛತಿ ಪರಿತೋ (ನಿಯಮೇನ ಯಾತಿ) ತಸ್ಮಾಲ್ಲೋಕೇಽಪ್ಯರಣ್ಯೇ ಸಂಚಾರಾರ್ಥಂ ಗತಾಃ ಪಶವಃ ಷೋಳಶಿನಾ ವಜ್ರೇಣೈವ ನಿಯಮಿತತ್ವಾತ್ಸಾಯಂಕಾಲೇ ಮನುಷ್ಯಾನಭಿಲಕ್ಷ್ಯ ತದ್ಗೃಹೇಷೂಪಾವರ್ತಂತೇ । ಅನ್ಯಥಾ ತಸ್ಮಾದರಣ್ಯಾದರಣ್ಯಾಂತರಮೇವ ಗಚ್ಛೇಯುಃ । ನ ಕೇವಲಂ ತೃಣಚರಣಾರ್ಥಮರಣ್ಯಗತಾನಾಂ ಸಾಯಂಕಾಲೇ ಪುನರಾಗಮನಾಯ ವಜ್ರರೂಪೇಣ ನಿಯಮಿತತ್ವಂ ಕಿಂ ತರ್ಹಿ ಗ್ರಾಮೇಷ್ವಪಿ ॥ ತಸ್ಮಾತ್ಷೋಳಶಿವಜ್ರನಿಯಮಿತತ್ವಾದಶ್ವಪುರುಷಗೋಹಸ್ತ್ಯಾದೀನಾಮನ್ಯತಮಃ ಸ್ವಯಮೇವ ಪರಪ್ರೇರಣಾಮಂತರೇಣೈವ ಪರಿಗತೋ

ನಿಯಮಿತ ಆತ್ಮನಾ(?) ಸ್ವಯಂ ಬಂಧನಾಯ ತತ್ಸ್ಥಾನೇ ಸಮಾಗಚ್ಛತಿ । ಕಿಂ ಚಾತ ಏವ ಷೋಳಶಿವಜ್ರನಿಯಮಿತತ್ವಾದೇವ ವಾಚಾ ಶೀಘ್ರಮಾಗಚ್ಛೇತ್ಯಾದಿವಾಕ್ಯೇನಾಭಿಷಿದ್ಧೋಽಭಿತೋ ಬದ್ಧಃ ಪುರುಷೋ ವರ್ತತೇ ॥ ಯಥಾ ರಜ್ವಾ ಬದ್ಧೋ ಬಲೀವರ್ದ ಅನೀಯಮಾನ ಆಗಚ್ಛತಿ ತದ್ವದ್ವಾಚಾ ಬದ್ಧಃ ಪುರುಷಃ ॥ ಅತ ಏವಾರಣ್ಯಕಾಂಡೇ ವಕ್ಷ್ಯತಿ—"ತಸ್ಯ ವಾಕ್ತಂತಿ ರ್ನಾಮಾನಿ ದಾಮಾನಿ ತದಸ್ಯೇದಂ ವಾಚಾ ತಂತ್ಯಾ ನಾಮಭಿರ್ದಾಮಭಿಃ ಸರ್ವಂ ಸಿತಂ ಇತಿ॥ ವಾಙ್ಮಾತ್ರೇಣಾಗಮನೇ ಕಾರಣಮುಚ್ಯತೇ ॥ ಷೋಳಶಿನಂ ವಾಗ್ವಜ್ರರೂಪಮೇವ ಪಶ್ಯನ್ಷೋಳಶಿನಾ ವಜ್ರೇಣೈವ ನಿಯಮಿತೋ ಭವತಿ ತದ್ದ್ವಾರಾ ತಸ್ಯ ವಜ್ರತ್ವಂ ॥ ಷೋಳಶೀಂ ಚ ವಾಗ್ರೂಪೈಃ ಸೂಕ್ತಾದಿಭಿಃ ನಿಷ್ಪನ್ನತ್ವಾತ್ಸ್ವಯಮಪಿ ವಾಗ್ರೂಪೋ ಭವತಿ ॥ ವಾಚಶ್ಚ ವಜ್ರತ್ವಂ ಲೋಕೇ ಪ್ರಸಿದ್ಧಂ ರಾಜಾದೀನಾಂ ಭರ್ತ್ಸನಾದೌ ವಜ್ರಪ್ರಹಾರೇಣೈವ ಚಿತ್ತೇ ವ್ಯಥೋದಯಾತ್ ॥ ತದೇವಂ ಸರ್ವನಿಯಾಮಕತ್ವಾತ್ಷೋಳಶಿನಃ ಪ್ರಶಸ್ತತ್ವಂ ಸಿದ್ಧಂ । ಯದುಕ್ತಂ ಪುರಸ್ತಾದುಕ್ಥಾನಾಂ ಪರ್ಯಸ್ಯ ಶಂಸತೀತಿ ತತ್ರೋಕ್ಥಶಸ್ತ್ರೇಭ್ಯ ಉತ್ತರಕಾಲಾವಸ್ಥಾನಮೇವ ಪರ್ಯಸ್ಯೇತಿ ಶಬ್ದೇನ ವಿವಕ್ಷಿತಮಿತಿ ವ್ಯಾಖ್ಯಾತಮಥವೋತ್ತರಕಾಲಸ್ಯ ಪರಸ್ತಾದಿತಿಶಬ್ದೇನೈವ ಸಿದ್ಧತ್ವಾತ್ಪರ್ಯಸ್ಯೇತಿ ಶಬ್ದೇನ ಶಸ್ತ್ರಗತಾನಾಮೃಚಾಮಧ್ಯಯನಪಾಠಾದ್ವಿಪರ್ಯಾಸೋಽಭಿಧೀಯತೇ। ದ್ವಿವಿಧಂ ಷೋಳಶಿಶಸ್ತ್ರಂ ವಿಹೃತಮವಿಹೃತಂ ಚ । ತತ್ರಾವಿಹೃತಂ ನಾಮಾಧ್ಯಯನಕ್ರಮೇಣೈವ ಶಂಸನಂ ॥ ವಿಹೃತಂ ತು ಋಚಾಂ ಪರಸ್ಪರವ್ಯತಿಷಂಗಃ । ಸ ತ್ವಾಶ್ವಲಾಯನೇನ ದರ್ಶಿತಃ । ಊರ್ಧ್ವಂ ಸ್ತೋತ್ರಿಯಾನುರೂಪಾಭ್ಯಾಂ ತದೇವ ಶಸ್ಯಂ ವಿಹರೇತ್ಪಾದಾನ್ವ್ಯವಧಾಯಾರ್ಧರ್ಚಶಃ ಶಂಸೇತ್ಪೂರ್ವಾಸಾಂ ಪೂರ್ವಾಣಿ ಪದಾನಿ ಗಾಯತ್ರ್ಯಃ ಪಂಕ್ತಿಭಿಃ ಪಂಕ್ತೀನಾಂ ತು ದ್ವೇ ದ್ವೇ ಪದೇ ಶಿಷ್ಯೇತೇ ತಾಭ್ಯಾಂ ಪ್ರಣುಯಾತ್' ಇತಿ ॥ ತದೇತದುದಾಹೃತ್ಯ ಪ್ರದರ್ಶ್ಯತೇ ‹ ಇಮಾ ಧಾನಾ ಘೃತಸ್ನುವೋ ಹರೀ ಇಹೋಪವಕ್ಷತಃ ॥ ಇಂದ್ರಂ ಸುಖತಮೇ ರಥೇ' [೧-೧೬-೨] ಇತ್ಯೇಷಾಗಾಯತ್ರೀ ॥ 'ಸುಸಂದೃಶಂ ತ್ವಾವಯಂ ಮಘವನ್ವಂದಿಷೀಮಹಿ। ಪ್ರ ನೂನಂ ಪೂರ್ಣಂಧುರಃ ಸ್ತುತೋ ಯಾಹಿವಶಾँ ಅನು । ಯೋಜಾನ್ವಿಂದ್ರ ತೇ ಹರೀ [೧-೮೨-೩] ಯೋಽಯಮಧ್ಯಯನಪಾಠಃಸೋಽವಿಹೃತಃ । ವಿಹೃತಪಾಠಸ್ತೂಚ್ಯತೇ । ಇಮಾ ಧಾನಾ ಘೃತಸ್ನುವಃ ಸುಸಂದೃಶಂತ್ವಾವಯಂ। ಹರೀ ಇಹೋಪವಕ್ಷತೋ ಮಘವನ್ವಂದಿಷೀಮಹೋ ಮಿಂದ್ರಂ ಸುಖತಮೇ ರಥೇ ಪ್ರ ನೂನಂ ಪೂರ್ಣ ವಂಧುರಃ। ಸ್ತುತೋ ಯಾಹಿ ವಶಾँ ಅನು ಯೋ ಜಾನ್ವಿಂದ್ರ ತೇ ಹರೋಮಿತಿ । ಅನೇನ ಪ್ರಕಾರೇಣ ವಿಪರ್ಯಸ್ಯ ಶಂಸೇತ್ ॥

ಷೋಳಶೀ ಎಂಬ ಶಸ್ತ್ರಮಂತ್ರದ ಪ್ರಯೋಗಕ್ರಮವನ್ನು ವಿವರಿಸುವರು— ಈ ಷೋಳಶೀ ಎಂಬ ಶಸ್ತ್ರಮಂತ್ರವನ್ನು ಉಕ್ಥ್ಯವೆಂಬ ಶಸ್ತ್ರಮಂತ್ರಪಠನಾನಂತರ ಪಠಿಸುವರು. ಆದ್ದರಿಂದ ವಜ್ರಾಯುಧಸ್ವರೂಪವಾದ ಈ ಷೋಡಶೀಮಂತ್ರದ ಉಕ್ಥ್ಯ ಮಂತ್ರಸ್ವರೂಪವಾದ ಪಶುಗಳನ್ನು ನಿಯಮನ (control) ಮಾಡುವುದು. ಆದ್ದರಿಂದ ಹುಲ್ಲುಮೇಯುವುದಕ್ಕೂ ಸಂಚಾರಕ್ಕೂ ಹಗಲು ಅರಣ್ಯಾದಿಗಳಲ್ಲಿ ಸಂಚರಿಸುವ ಪಶುಗಳು ಈ ಷೋಡಶೀ ಎಂಬ ವಜ್ರಾಯುಧಸ್ವರೂಪವಾದ ಮಂತ್ರಪ್ರಭಾವದಿಂದಲೇ ಸಾಯಂಕಾಲವಾಗುತ್ತಲೇ ತಮ್ಮ ತಮ್ಮ ಯಜಮಾನರ ಗೃಹಗಳಿಗೆ ಹಿಂತಿರುಗಿ ಬರುವವು. ಷೋಳಶಿಮಂತ್ರಪ್ರಭಾವವಿಲ್ಲದಿದ್ದರೆ ಪಶುಗಳು ಸಾಯಂಕಾಲವಾಗುತ್ತಲೇ ಅರಣ್ಯದಿಂದ ಮನೆಗಳಿಗೆ ಹಿಂತಿರುಗಿ ಬರುವುದಕ್ಕೆ ಬದಲಾಗಿ ದೂರದಲ್ಲಿರುವ ಇತರ ಅರಣ್ಯಾದಿಸ್ಥಳಗಳಿಗೆ ಹೋಗುವ ಸಂಭವವುಂಟು. ಈ ಪಶುಗಳು ತಮ್ಮ ಮನೆಗೇ ಬರಬೇಕೆಂಬ ನಿಯಮವಿಲ್ಲದೆ ಬೇರೆ ಗ್ರಾಮ

ಗಳಿಗೂ ಹೋಗಬಹುದು. ಗೋವು ಮೊದಲಾದ ಪಶುಗಳ ವಿಷಯದಲ್ಲಿ ಮಾತ್ರ ಈರೀತಿ ಸಂಭವಿಸುವುದೆಂದು ಹೇಳಲಾಗುವುದಿಲ್ಲ. ಇತರ ಪ್ರಾಣಿಗಳು ಎಂದರೆ ಮನೆಯಲ್ಲಿ ಸಾಕಿರುವ ಹಸು, ಎಮ್ಮೆ, ಕುದುರೆ, ಆನೆ ಮೊದಲಾದ ಇತರ ಪ್ರಾಣಿಗಳ ವಿಷಯದಲ್ಲಿಯೂ ಹೀಗೆ ಆಗಬಹುದು. ಷೋಳಶೀಮಂತ್ರದ ಪ್ರಭಾವವಿದ್ದಲ್ಲಿ ಈ ಪಶುಗಳು ತಪ್ಪಿಸಿಕೊಳ್ಳದೆ ನೆಟ್ಟಗೆ ಮನೆಗೇ ಬರುವವು. ಮನುಷ್ಯರ ವಿಷಯದಲ್ಲಿಯೂ ಇದರಂತೆಯೇ. ವಾಕ್ಸ್ವರೂಪವಾದ ಷೋಳಶಿಯ ಪ್ರಭಾವದಿಂದ ಎಂದರೆ ಒಬ್ಬ ಪುರುಷನ ವಿಷಯದಲ್ಲಿ ಇಷ್ಟು ಹೊತ್ತಿಗೆ ಇಲ್ಲಿಗೇ ಬರಬೇಕು ಎಂಬ ನಿಯಮನ ಪ್ರಕಾರ ಆ ಪುರುಷನೂ ಸಹ ತಪ್ಪದೆ ಅಲ್ಲಿಗೆ ಬರುವನು ಎಂದರೆ ನಿಯಮವನ್ನು ಪಾಲಿಸುವನು ಆದ್ದರಿಂದ ಇದು ಮನುಷ್ಯರ ವಿಷಯದಲ್ಲಿಯೂ ಅನ್ವಯಿಸುವುದು. ಹಗ್ಗದಿಂದ ಕಟ್ಟಿದ ಎತ್ತನ್ನು ಹೇಗೆ ಬೇಕಾದ ಕಡೆ ಎಳೆದುಕೊಂಡು ಹೋಗಬಹುದೋ ಅದರಂತೆ ಮಾತಿಗೆ ಕಟ್ಟುಬಿದ್ದ ಪುರುಷನೂ ಸಹ ಅದರಂತೆ ನಡೆದುಕೊಳ್ಳಬೇಕಾಗುವುದು. ಅರಣ್ಯಕಾಂಡದಲ್ಲಿ ಈ ರೀತಿ ಹೇಳಿರುವುದು—**ತಸ್ಯ ವಾಕ್ತಂತಿರ್ನಾಮಾನಿ ದಾಮಾನಿ ತದಸ್ಯೇದಂ ವಾಚಾ ತಂತ್ಯಾ ನಾಮಭಿರ್ದಾಮಭಿಃ ಸರ್ವಂ ಸಿತಂ** ಎಂದು. ಒಬ್ಬ ಪುರುಷನು ಮತ್ತೊಬ್ಬನ ಮಾತಿಗೆ ಕಟ್ಟುಬಿದ್ದು ಅದರಂತೆ ನಡೆಯುವನು. ಇಲ್ಲಿ ಷೋಡಶೀ ಎಂದರೆ ವಾಕ್ಸ್ವರೂಪವು ಅಥವಾ ಮಾತು. ಮಾತು ಸಹ ಅನೇಕಸಂದರ್ಭದಲ್ಲಿ ಕಟ್ಟುಸಿಟ್ಟಾಗಿರುವುದರಿಂದ ಅದು ವಜ್ರಾಯುಧದಂತೆ ಅತ್ಯಂತ ಕಠಿನವಾಗಿರುವುದೆಂದು ಹೇಳಲ್ಪಡುವುದು. ಷೋಡಶೀ ಸಹ ವಾಗ್ರೂಪವಾಗಿ ವಜ್ರಾಯುಧದಂತೆ ಅತಿಕಠಿನವಾಗಿರುವುದರಿಂದ ಅದಕ್ಕೆ ಈ ವಿಧವಾದ ಕಠಿನತ್ವವಿರುವುದೆಂದು ಹೇಳಲ್ಪಡುವುದು. ಷೋಡಶಿಶಸ್ತ್ರವು ವಿಹೃತ ಮತ್ತು ಅವಿಹೃತ ಎಂದು ಎರಡುವಿಧವಾಗಿರುವುದು. ಅಧ್ಯಯನಕ್ರಮದಿಂದ ಇದ್ದಂತೆ ಷೋಡಶಿಮಂತ್ರವನ್ನು ಪಠಿಸುವುದೇ ಅವಿಹೃತಕ್ರಮವು. ವಿಹೃತವೆಂದರೆ ಶೋಳಶಿಯಲ್ಲಿರುವ ಮಂತ್ರಗಳನ್ನು ವ್ಯತ್ಯಸ್ತವಾಗಿ ಅರ್ಥವಾಗುವಂತೆ ಪಠಿಸುವ ಕ್ರಮವು. ಆಶ್ವಲಾಯನರು ಈರೀತಿ ಹೇಳಿರುವರು—**ಊರ್ಧ್ವಂ ಸ್ತೋತ್ರಿಯಾನುರೂಪಾಭ್ಯಾಂ ತದೇವ ಶಸ್ಯಂ ವಿಹರೇತ್ಪಾದಾನ್ವ್ಯವಧಾಯಾರ್ಧರ್ಚಶಃ ಶಂಸೇತ್ಪೂರ್ವಾಸಾಂ ಪೂರ್ವಾಣಿ ಪದಾನಿ ಗಾಯತ್ರ್ಯಃ ಪಂಕ್ತಿಭಿಃ ಪಂಕ್ತೀನಾಂ ತು ದ್ವೇ ದ್ವೇ ಪದೇ ಶಿಷ್ಯೇತೇ ತಾಭ್ಯಾಂ ಪ್ರಣುಯಾತ್** ಎಂದು. ಇದನ್ನು ಉದಾಹರಣೆ ಪೂರ್ವಕವಾಗಿ ಹೇಳಿರುವರು—**ಇಮಾ ಧಾನಾ ಘೃತಸ್ನುವೋ ಹರೀ ಇಹೋ ಪವಕ್ಷತಃ । ಇಂದ್ರಂ ಸುಖತಮೇ ರಥೇ ॥** (ಋ. ಸಂ. ೫-೧೬-೨) ಇದು ಗಾಯತ್ರೀಛಂದಸ್ಸಿನ ಮಂತ್ರವು. **ಸುಸಂದೃಶಂ ತ್ವಾ ವಯಂ ಮಘವನ್ವಂದಿಷೀಮಹಿ । ಪ್ರನೂನಂ ಪೂರ್ಣವಂಧುರಃ ಸ್ತುತೋ ಯಾಹಿ ವಶಾँ ಅನು ಯೋಜಾ ನ್ವಿಂದ್ರ ತೇ ಹರೀ** (ಋ. ಸಂ. ೧-೮೨-೩) ಇದು ಅವಿಹೃತಕ್ರಮ ಅಥವಾ ಅಧ್ಯಯನ ಪಾಠಕ್ರಮವು. ವಿಹೃತಕರ್ಮವೆಂದರೆ—**ಇಮಾ ಧನಾ ಘೃತಸ್ನುವಃ ಸುಸಂದೃಶಂ ತ್ವಾ ವಯಂ । ಹರೀ ಇಹೋ ಪವಕ್ಷತೋ ಮಘವನ್ವಂದಿಷೀ ಮಹೀಮಿಂದ್ರಂ ಸುಖತಮೇ ರಥೇ ಪ್ರ ನೂನಂ ಪೂರ್ಣವಂಧುರಃ । ಸ್ತುತೋ ಯಾಹಿ ವಶಾँ ಅನು ಯೋಜಾ ನ್ವಿಂದ್ರ ತೇ ಹರೋಮಿತಿ ।** ವಿಹೃತಕ್ರಮದಲ್ಲಿ ಈ ರೀತಿ ವ್ಯತ್ಯಸ್ತವಾಗಿ ಪಠಿಸಬೇಕು.

**ತದಾಹುಃ ಕಿಂ ಷೋಳಶಿನಃ ಷೋಳಶಿತ್ವಮಿತಿ ಷೋಳಶಃ ಸ್ತೋತ್ರಾಣಾಂ ಷೋಳಶಃ ಶಸ್ತ್ರಾಣಾಂ ಷೋಳಶಭಿರಕ್ಷರೈರಾದತ್ತೇ ಷೋಳಶಭಿಃ ಪ್ರಣೌತಿ ಷೋಳಶಪದಾಂ ನಿವಿದಂ ದಧಾತಿ ತತ್ಷೋಳಶಿನಃ ಷೋಳಶಿತ್ವಂ ।**

**ಅಥ ಪ್ರಶ್ನೋತ್ತರಾಭ್ಯಾಂ ಷೋಳಶಿಶಬ್ದಂ ನಿರ್ವಕ್ತಿ—ಷೋಳಶಿಶಬ್ದೋ ಗ್ರಹವಿಶೇಷಂ ಸ್ತೋತ್ರವಿಶೇಷಂ ಶಸ್ತ್ರವಿಶೇಷಂ ಚಾಭಿಧತ್ತೇ । ತೇಷಾಮೇಕೈಕಸ್ಯರೂಪವತಾಂ ಷೋಳಶಿಶಬ್ದ-**

**ವಾಚ್ಯತ್ವಮಯುಕ್ತಂ ॥ ತಚ್ಛಬ್ದಪ್ರವೃತ್ತೌ ನಿಮಿತ್ತಾಂತರಂ ತು ನ ಪಶ್ಯಾಮ ಇತಿ ಬ್ರಹ್ಮವಾದಿನಾಮಭಿಪ್ರಾಯಃ । ಷೋಡಶಸಂಖ್ಯಾಯುಕ್ತತ್ವಾತ್ಷೋಳಶಿತ್ವಮಿತ್ಯುತ್ತರಂ । ತತ್ರ ಕಥಮಿತಿ ತದುಚ್ಯತೇ । ಅಗ್ನಿಷ್ಟೋಮಸಂಸ್ಥೋ ಜ್ಯೋತಿಷ್ಟೋಮೋ ದ್ವಾದಶ ಶಸ್ತ್ರೋಪೇತಃ ತಥಾ ಚ ಶಾಖಾಂತರೇ ಶ್ರೂಯತೇ—'ದ್ವಾದಶಾಗ್ನಿಷ್ಟೋಮಸ್ಯ ಸ್ತೋತ್ರಾಣಿ' ಇತಿ । ತದ್ಗರ್ಭಿತ ಉಕ್ಥಸಂಸ್ಥಸ್ತ್ರಿಭಿಃ ಸ್ತೋತ್ರೈರತಿರಿಚ್ಯತೇ । ತಸ್ಮಾತ್ಪಂಚದಶ ಸ್ತೋತ್ರಾಣಿ ಭವಂತಿ । ತದ್ಗರ್ಭಿತಃ ಷೋಳಶಿಸಂಸ್ಥ ಏಕೇನ ಸ್ತೋತ್ರೇಣಾತಿರಿಚ್ಯತೇ । ತತಃ ಸ್ತೋತ್ರಾಣಾಂ ಮಧ್ಯ ಏತತ್ ಸ್ತೋತ್ರ-ಪ್ರಯೋಗಃ ಷೋಡಶ ಸಂಖ್ಯಾಪೂರಕೋ ಭವತಿ – ತಥಾ ಶಸ್ತ್ರಾಣಾಂ ಮಧ್ಯೇಽಪ್ಯೇತಚ್ಛಸ್ತ್ರ-ಪ್ರಯೋಗಃ ಷೋಡಶ ಸಂಖ್ಯಾಪೂರಕಃ। ಕಿಂಚಾಸ್ಮಿಞ್ಛಸ್ತ್ರೇ ಹೋತ್ರಾ ಸಂಪಾದಿತಾಯಾ ಅನು-ಷ್ಟುಬ್ ಪೂರ್ವಾರ್ಧಗತಾನಿ ಷೋಳಶಾಕ್ಷರಾಣ್ಯುಚ್ಚಾರ್ಯಾವಸ್ಯತಿ । ಉತ್ತರಾರ್ಧಗತಾನಿ ಷೋಡಶಾಕ್ಷರಾಣ್ಯುಚ್ಚಾರ್ಯ ಪ್ರಣೌತಿ ಪ್ರಣವಮುಚ್ಚಾರಯತಿ । ಕಿಂಚಾಸ್ಯ ಮದೇ ಜರಿತ-ರಿತ್ಯಾದಿಕಾ ಷೋಳಶಪದೋಪೇತಾ ನಿವಿಚ್ಛಸ್ತ್ರಮಧ್ಯೇ ಪ್ರಕ್ಷಿಪ್ಯತೇ । ಅತೋ ಬಹುಧಾ ಷೋಳಶಸಂಖ್ಯಾಯೋಗಾದಯಂ ಪ್ರಯೋಗಃ ಷೋಳಶಿನಾಮೋಪೇತಃ ।**

ಷೋಳಶಿಶಬ್ದವಿವರಣೆಯನ್ನು ಪ್ರಶ್ನೋತ್ತರರೂಪದಿಂದ ವಿವರಿಸುವರು—ಷೋಳಶಿ ಶಬ್ದವು ಗ್ರಹವಿಶೇಷ, ಸ್ತೋತ್ರ ವಿಶೇಷ ಮತ್ತು ಶಸ್ತ್ರವಿಶೇಷ ಇವುಗಳನ್ನು ಸೂಚಿಸುವುದು. ಆದರೆ ಪ್ರತಿಯೊಂದು ಭಾಗವನ್ನೂ ಷೋಳಶಿ ಶಬ್ದವು ಸೂಚಿಸುವುದು ಎಂಬುದು ಅಯುಕ್ತವು. ಇದಕ್ಕೆ ಕಾರಣವೇನೂ ಇರುವುದಿಲ್ಲ ಎಂದು ಬ್ರಹ್ಮವಾದಿಗಳು ಹೇಳುವರು. ಆದರೆ ಇವುಗಳಲ್ಲಿ ಪ್ರತಿಯೊಂದೂ ಹದಿನಾರು ಇರುವುದರಿಂದ ಇದಕ್ಕೆ ಷೋಳಶೀ ಎಂದು ಹೇಳುವುದು ಯುಕ್ತವೇ ಆಗಿರುವುದು. ಅದು ಹೇಗೆಂದರೆ—ಅಗ್ನಿಷ್ಟೋಮಯಜ್ಞದಲ್ಲಿಯೂ ಜ್ಯೋತಿಷ್ಟೋಮ ಯಜ್ಞದಲ್ಲಿಯೂ ಹನ್ನೆರಡು ಶಸ್ತ್ರಗಳಿರುವವು. ಶಾಖಾಂತರದಲ್ಲಿ—**ದ್ವಾದಶಾಗ್ನಿಷ್ಟೋಮಸ್ಯ ಸ್ತೋತ್ರಾಣಿ** ಎಂದಿರುವುದು. ಆದ್ದರಿಂದ ಈ ಅಗ್ನಿಷ್ಟೋಮ ಅಥವಾ ಜ್ಯೋತಿಷ್ಟೋಮಯಜ್ಞದ ವಿಧಾನವನ್ನೊಳಗೊಂಡ ಉಕ್ಥ್ಯ ಎಂಬ ಯಜ್ಞದಲ್ಲಿ ಮೂರು ಸ್ತೋತ್ರಗಳು ಹೆಚ್ಚಾಗಿರುವವು ಎಂದರೆ ಹದಿನೈದು ಸ್ತೋತ್ರಗಳಿರುವವು. ಅದರಂತೆಯೇ ಉಕ್ಥ್ಯಯಾಗವಿಧಾನವನ್ನೊಳಗೊಂಡ ಷೋಳಶಿ ಎಂಬ ಯಜ್ಞದಲ್ಲಿ ಇನ್ನೂ ಒಂದು ಸ್ತೋತ್ರವು ಹೆಚ್ಚಾಗಿರುವುದು. ಎಂದರೆ ಷೋಳಶಿಯಲ್ಲಿ ಹದಿನಾರು ಸ್ತೋತ್ರಗಳಿರುವವು. ಸ್ತೋತ್ರಗಳಿಗೆ ಅನುರೂಪವಾಗಿ ಅದೇ ಸಂಖ್ಯೆಯ ಶಸ್ತ್ರಮಂತ್ರಗಳೂ ಇರುವವು. ಆದರೆ ಈ ಷೋಳಶಿಯಲ್ಲಿ ಉಪಯೋಗಿಸುವ ಹದಿನಾರನೇ ಶಸ್ತ್ರಮಂತ್ರವು ಅನುಷ್ಟುಪ್ ಛಂದಸ್ಸಿನ ಪೂರ್ವಾರ್ಧದಲ್ಲಿ ಹದಿನಾರು ಅಕ್ಷರಗಳಿರುವವು. ಉತ್ತರಾರ್ಧದಲ್ಲಿ ಇರುವ ಅಕ್ಷರಗಳನ್ನು ಉಚ್ಚರಿಸುವಾಗ ಹೋತೃವು ಹದಿನಾರು ಅಕ್ಷರಗಳನ್ನು ಪಠಿಸಿ ಅನಂತರ ಓಂ ಎಂದು ಪ್ರಣವಮಂತ್ರವನ್ನು ಉಚ್ಚರಿಸಿ ಅನಂತರ ವಿರಮಿಸುವನು. ಮತ್ತು ಈ ಶಸ್ತ್ರಮಂತ್ರದ ಮಧ್ಯದಲ್ಲಿ ಹದಿನಾರು ಪದಗಳುಳ್ಳ ನಿವಿನ್ಮಂತ್ರವನ್ನು ಸೇರಿಸಿ ಪಠಿಸುವನು. ಆದ್ದರಿಂದ ಹದಿನಾರು ಎಂಬ ಸಂಖ್ಯೆಯಿಂದ ಕೂಡಿದ ಈ ಪ್ರಯೋಗಕ್ಕೆ ಷೋಡಶೀ ಎಂಬ ಹೆಸರು ಉಂಟಾಗಿರುವುದು.

**ದ್ವೇ ವಾ ಅಕ್ಷರೇ ಅತಿರಿಚ್ಯೇತೇ ಷೋಳಶಿನೋಽನುಷ್ಟುಭಮಭಿಸಂಪನ್ನಸ್ಯ ವಾಚೋ ವಾವ ತೌ ಸ್ತನೌ ಸತ್ಯಾನೃತೇ ವಾವ ತೇ ।**

**ಪ್ರಕಾರಾಂತರೇಣ ಷೋಳಶಿನಂ ಪ್ರಶಂಸತಿ--ಯೋಽಯಂ ಷೋಳಶೀ ಸೋಽಯಂ ದ್ವ್ಯಕ್ಷರಾಧಿಕಾಮನುಷ್ಟುಭಂ ಯದಾ ಸಂಪ್ರಾಪ್ತೋ ಭವತಿ ತದಾನೀಂ ದ್ವೇ ಏವಾಕ್ಷರೇ ಅಧಿಕೇ**

ಭವತಃ । ತಥಾ ಹಿ ಸೂತ್ರಕಾರೋ ವಿಧೃತಸ್ಯೇತ್ಯುಪಕ್ರಮ್ಯ ಶಾಖಾಂತರೀಯಾ ಇಂದ್ರಜುಷಸ್ವೇತ್ಯಾದಿಕಾ ಋಚಃ ಪಠಿತವಾನ್ ॥ ತಸ್ಯಾಃ ಪೂರ್ವಸ್ಮಿನ್ನರ್ಧರ್ಚೇ ಷೋಡಶಾಕ್ಷರಾಣ್ಯುತ್ತರಾರ್ಧರ್ಚೇಽಷ್ಟಾದಶ ತತೋಽಕ್ಷರದ್ವಯಾಧಿಕ್ಯಂ ವಾಗ್ವಾ ಅನುಷ್ಟುಬಿತಿ ಶ್ರುತ್ಯಂತರೇ ಸಾ ವಾಚೋಽನುಷ್ಟುಬವಯವತ್ವಾತ್ತದಾತ್ಮಿಕಾಯಾ ವಾಗ್ದೇವತಾಯಾಃ ಸ್ತ್ರೀರೂಪಾಯಾಃ ಅಧಿಕಾಕ್ಷರರೂಪೌ ಸ್ತನೌ ಸಂಪದ್ಯೇತೇ ॥ ಯದೇತಲ್ಲೋಕೇ ಸತ್ಯವದನಂ ಯಚ್ಚಾನೃತವದನಂ ತದುಭಯಮಪಿ ವಾಚಃ ಸ್ತನರೂಪಮತೋಽಧಿಕಾಕ್ಷರಾಯೋಃ ಸತ್ಯಾನೃತರೂಪತ್ವಂ ।

ಈ ಷೋಳಶಿಯನ್ನು ಪ್ರಕಾರಾಂತರವಾಗಿ ಪ್ರಶಂಸೆಮಾಡುವರು—ಅನುಷ್ಟುಪ್ ಛಂದಸ್ಸಿನ ಪೂರ್ವಾರ್ಧದಲ್ಲಿ ಹದಿನಾರು ಅಕ್ಷರಗಳಿರುವವು. ಅದರಂತೆ ಉತ್ತರಾರ್ಧದಲ್ಲಿಯೂ ಹದಿನಾರು ಅಕ್ಷರಗಳಿರುವವು. ಆದರೆ ಕೆಲವು ಸಂದರ್ಭಗಳಲ್ಲಿ ಒಂದು ಅಥವಾ ಎರಡು ಅಕ್ಷರಗಳು ಹೆಚ್ಚಾಗಿರುವುದೂ ಉಂಟು ಸೂತ್ರಕಾರರು ಉದಾಹರಿಸಿರುವ **ಇಂದ್ರ ಜುಷಸ್ವ** ಎಂಬ ಋಕ್ಕಿನ ಪೂರ್ವಾರ್ಧದಲ್ಲಿ ಹದಿನಾರು ಅಕ್ಷರಗಳಿರುವವು. ಆದರೆ ಆ ಋಕ್ಕಿನ ಉತ್ತರಾರ್ಧದಲ್ಲಿ ಅದಿನೆಂಟು ಎಂದರೆ ಎರಡು ಅಕ್ಷರಗಳು ಹೆಚ್ಚಾಗಿರುವವು. ವಾಗ್ವಾ ಅನುಷ್ಟುಪ್ ಎಂದು ಶಾಖಾಂತರದಲ್ಲಿ ಹೇಳಿರುವುದು. ಎಂದರೆ ಅನುಷ್ಟುಪ್ ಛಂದಸ್ಸೆಂಬುದು ಸ್ತ್ರೀರೂಪದಿಂದಿರುವ ವಾಗ್ದೇವತೆಯು ಈ ಛಂದಸ್ಸಿನಲ್ಲಿ ಹೆಚ್ಚಾಗಿರುವ ಎರಡು ಅಕ್ಷರಗಳು ಆ ಸ್ತ್ರೀದೇವತೆಯ ಸ್ತನಗಳೆಂದು ಭಾವಿಸಲ್ಪಟ್ಟಿರುವವು. ಲೋಕವ್ಯವಹಾರದಲ್ಲಿ ಮಾತನಾಡುವಾಗ ಸತ್ಯವದನಂ (ನಿಜವನ್ನು ಹೇಳುವುದು) ಅನೃತವದನಂ (ಸುಳ್ಳು ಹೇಳುವುದು) ರೂಢಿಯಲ್ಲಿರುವುದಷ್ಟೆ. ಅದರಂತೆ ಹೆಚ್ಚಾಗಿರುವ ಎರಡು ಅಕ್ಷರಗಳು—ನಿಜ ಮತ್ತು ಸುಳ್ಳನ್ನು ಹೇಳುವ ಎರಡು ವಾಕ್ಯಗಳ ಸ್ವರೂಪವಾಗಿರುವವು ಎಂದು ತಿಳಿಯಬೇಕು.

**ಅವತ್ಯೇನಂ ಸತ್ಯಂ ನೈನಮನೃತಂ ಹಿನಸ್ತಿ ಯ ಏವಂ ವೇದ ॥**

**ಉಕ್ತಾರ್ಥವೇದನಂ ಪ್ರಶಂಸತಿ—ಏನಂ ವೇದಿತಾರಂ ಸತ್ಯವಾಕ್ಪಾಲಯತಿ ಸುಕೃತೋತ್ಪಾದಕತ್ವಾತ್ ॥ ಅನೃತವಾಗ್ನ ಹಿನಸ್ತಿ ದುರಿತಸ್ಯಾನುದಯಾತ್ ॥**

ಈ ಎರಡುವಿಧ ವಾಕ್ಯಗಳಲ್ಲಿ ಸತ್ಯವದನ ಎಂದರೆ ನಿಜವನ್ನು ಹೇಳುವುದು. ಆರೀತಿ ಹೇಳುವ ಪುರುಷನನ್ನು ಕಾಪಾಡುವುದು. ಅನೃತವಾಕ್ಯವು ಆ ಪುರುಷನಿಗೆ ಯಾವ ಬಾಧೆಯೂ ಉಂಟಾಗದಂತೆ ಅವನನ್ನು ರಕ್ಷಿಸುವುದು. ಇವೇ ಎರಡು ಸ್ತನರೂಪವಾದ ವಾಕ್ಯಗಳ ಸ್ವರೂಪವು.

*English Translation*

(On the Sholasi and Atiratra Sacrifices)

**(On the nature of the Sholasi and the origin of its name.
On the Anushtubh nature of the Sholasi Shastra)**

The gods prepared for Indra by means of the Soma ceremony of the first day the thunderbolt; by means of the Soma ceremony of the second day, they cooled it after having forged it, to increase its sharpness; by means of the Soma ceremony of the third day, they presented it to him; by means of the Soma ceremony of the fourth day, he struck with it (his enemies).

Thence the Hotar repeats on the fourth day the Sholasi Shastra. The Sholasi is the thunderbolt. By reciting the Sholasi on the fourth day he strikes a blow at the enemy and adversary of the sacrificer, in order to put down any one who is to be put down by him (the sacrificer`.

The Sholasi is the thunderbolt; the Shastras (Ukthas) are cattle· He repeats it as a cover over the Shastras of the evening libation. By doing so he surrounds cattle with a weapon in the form of the Sholasi (and tames them). Therefore cattle return to men if threatened round about with the weapon in the form of the Sholasi.

Thence a horse, or a man, or a cow, or an elephant, after having been once tamed, return by themselves to their owner, if they are only commauded by the owner with the voice to return·

He who sees the weapon in the forms of the Sholasi (Shastra) is subdued by means of this weapon only. For voice is a weapon, and the Sholasi is voice, being recited by means of the voice.

About this they ask, whence comes the name "Sholasi" (sixteen)? The answer is—There are stxteen Stotras, and sixteen Shastras. The Hotar stops after having repeated the first sixteen syllables of the Anushtubh verse required for the Sholasi Shastra, and pronounces the word om after having repeated the latter, sixteen syllables of the Anushtubh. He puts in it the hymn required at the Sholasi Shastra, a Nivid of sixteen padas (small sentences). This is the reason that it is called Sholasi. But two syllables are in excess (for in the second half there are eighteen) instead of sixteen in the Anushtubh, which forms a component part of the Sholasi Shastra. For Speech (represented by the Anushtubh) has (as a female deity) twe breats; these are truth and untruth. Truth protects him who has such a knowledge, and untruth does no harm to such one.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಷೋಡಶಾಧ್ಯಾಯಸ್ಯ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನಾರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು
ಸಮಾಪ್ತವಾದುದು.



# ಅಥ ಷೋಡಶಾಧ್ಯಾಯೇ ದ್ವಿತೀಯಃ ಖಂಡಃ

## ಹದಿನಾರನೆಯ ಅಧ್ಯಾಯದಲ್ಲಿ ಎರನೆಯ ಖಂಡವು



[ಷೋಳಶೀ ಎಂಬ ಶಸ್ತ್ರವನ್ನು ಪಠಿಸುವ ವಿಧಾನವು. ಗೌರಿವೀತಿ ಅಥವಾ ನಾನದ ಎಂಬ ಸಾಮಮಂತ್ರವನ್ನು ಉಪಯೋಗಿಸುವ ವಿಧಾನ]



ಗೌರಿವೀತಂ ಷೋಳಶಿಸಾಮ ಕುರ್ವೀತ ತೇಜಸ್ಕಾಮೋ ಬ್ರಹ್ಮವರ್ಚಸ-ಕಾಮಸ್ತೇಜೋ ವೈ ಬ್ರಹ್ಮವರ್ಚಸಂ ಗೌರಿವೀತಂ ತೇಜಸ್ವೀ ಬ್ರಹ್ಮವರ್ಚಸೀ ಭವತಿ ಯ ಏವಂ ವಿದ್ವಾಗ್ಗೌರಿವೀತಂ ಷೋಳಶಿ-ಸಾಮ ಕುರುತೇ

**ಷೋಳಶಿತಸ್ತ್ರಂ ವಿಧಾಯ ಷೋಳಶಿಸ್ತೋತ್ರನಿಷ್ಪಾದಕಂ ಸಾಮವಿಶೇಷಂ ವಿಧತ್ತೇ— ಕೇನಚಿನ್ಮಹರ್ಷಿಣಾ ಗೌರಿವೀತನಾಮ್ನಾ ದೃಷ್ಟತ್ವಾತ್ಸಾಮಾಪಿ ಗೌರಿವೀತನಾಮಕಂ ತತ್ತು ಅಭಿ ಪ್ರಗೋಪತಿಂ ಗಿರಾ [೮-೬೯-೪] ಇತ್ಯಸ್ಯಾಮೃಚ್ಯುತ್ಪನ್ನಂ ತದತ್ರ ಷೋಳಶಿಸ್ತೋತ್ರೇ ಸಾಮ ಕುರ್ವೀತ ॥ ತೇಜಃ ಶರೀರಕಾಂತಿಃ । ಬ್ರಹ್ಮವರ್ಚಸಂ ಶ್ರುತಾಧ್ಯಯನಸಂಪತ್ತಿಃ ॥**

ಇದುವರೆಗೂ ಷೋಳಶಿಶಾಸ್ತ್ರಮಂತ್ರಗಳನ್ನು ವಿವರಿಸಿ ಈಗ ಷೋಳಶಿಸಾಮವನ್ನು ವಿವರಿಸುವರು--ಗೌರಿವೀತ ಎಂಬುವನು ಒಬ್ಬ ಮಹರ್ಷಿಯು. ಇವನಿಂದ ಅಭಿಪ್ರಗೋಪತಿಂಗಿರಾ (ಋ. ಸಂ. ೮-೬೯-೪) ಎಂಬ ಮಂತ್ರವು ದೃಷ್ಟವಾಗಿದೆ. ಈ ಋಕ್ಕಿನಿಂದ ಉತ್ಪನ್ನವಾದ ಸಾಮಮಂತ್ರಕ್ಕೆ ಗೌರಿವೀತಸಾಮವೆಂದು ಹೆಸರು. ತೇಜಸ್ಸನ್ನೂ ಬ್ರಹ್ಮವರ್ಚಸನ್ನೂ ಬಯಸುವ ಯಜಮಾನನು ತಾನು ಮಾಡುವ ಷೋಳಶಿ ಎಂಬ ಯಾಗದಲ್ಲಿ ಗೌರಿವೀತ ಎಂಬ ಸಾಮಮಂತ್ರವನ್ನು ಉಪಯೋಗಿಸಿ ಯಾಗವನ್ನು ಮಾಡಿದರೆ ಅವನು ತೇಜಸ್ಸನ್ನೂ ಬ್ರಹ್ಮವರ್ಚಸ್ಸನ್ನೂ ಪಡೆಯುವನು. ಈ ವಿಷಯವನ್ನು ತಿಳಿದವನೂ ಹಾಗೆಯೇ ಮಾಡುವನು. ಇಲ್ಲಿ ತೇಜಸ್ಸೆಂದರೆ ಶರೀರಕಾಂತಿಯು; ಬ್ರಹ್ಮವರ್ಚಸ್ಸೆಂದರೆ ಶಾಸ್ತ್ರಾಧ್ಯಯನಾದಿಗಳಿಂದ ಮುಖದಲ್ಲಿ ಉಂಟಾಗುವ ಕಳೆಯು (ವರ್ಚಸ್ಸು).

ನಾನದಂ ಷೋಳಶಿಸಾಮ ಕರ್ತವ್ಯಮಿತ್ಯಾಹುರಿಂದ್ರೋ ವೈ ವೃತ್ರಾಯ ವಜ್ರಮುದಯಚ್ಛತ್ತಮಸ್ಮೈ ಪ್ರಾಹರತ್ತಮಭ್ಯಹನತ್ಸೋಽಭಿ-ಹತೋ ವ್ಯನದದ್ಯದ್ವ್ಯನದತ್ತನ್ನಾನದಂ ಸಾಮಾಭವತ್ತನ್ನಾನದಸ್ಯ

ನಾನದತ್ವಮಭ್ರಾತೃವ್ಯಂ ವಾ ಏತದ್ಭ್ರಾತೃವ್ಯಹಾ ಸಾಮ ಯನ್ನಾನದಂ ।

ಸಾಮಾಂತರಂ ವಿಧತ್ತೇ—ನಾನದಾಖ್ಯಂ ಕಿಂಚಿತ್ಸಾಮ ತತ್ತು ಪ್ರತ್ಯಸ್ಮೈ ಪೀಪೀಷತ ಇತ್ಯಸ್ಯಾಮೃಚ್ಯುತ್ಪನ್ನಂ ತದೇತತ್ಸಾಮ ಷೋಳಶಿಸ್ತೋತ್ರೇ ಕರ್ತವ್ಯಮಿತ್ಯನ್ಯೇ ಕೇಚಿದಾಹುಃ। ತಸ್ಯ ನಾನದತ್ವಂ ಕಥಮಿತಿ ತದುಚ್ಯತೇ। ವಜ್ರಪ್ರಹಾರೇಣಾಭಿಹತೋ ವೃತ್ರೋ ವ್ಯನದದ್ವಿಶಿಷ್ಟಮುಚ್ಚೈರ್ಧ್ವನಿಂ ನಾನದಂ ಕೃತವಾನ್॥ ಸ ಚ ಧ್ವನಿರ್ನಾನದಸಾಮಾಕಾರೇಣ ಸಂಪನ್ನಃ ತತೋ ನಾನದೋತ್ಪನ್ನತ್ವಾನ್ನಾನದಮಿತಿ ಸಂಜ್ಞಾ ॥ ತತ್ಸಾಮ ಭ್ರಾತೃವ್ಯರಹಿತಂ ತತ್ಪರಿಶೀಲನವಂತಃ ಸರ್ವೇಽಪಿ ಮೈತ್ರೀಮೇವ ಪ್ರತಿಪದ್ಯಂತೇ ನ ತು ಕಶ್ಚಿದಪಿ ದ್ವೇಷಂ ಕಿಂ ಚೈತತ್ಸಾಮ ಭ್ರಾತೃವ್ಯಹಾ ಪೂರ್ವಂ ವಿದ್ಯಮಾನಸ್ಯ ಶತ್ರೋರ್ಘಾತಕಂ ॥

ಮತ್ತೊಂದು ಸಾಮಮಂತ್ರವನ್ನು ವಿವರಿಸುವರು—ನಾನದ ಎಂಬ ಇನ್ನೊಂದು ಸಾಮಮಂತ್ರವಿರುವುದು. ಈ ಸಾಮವು ಪ್ರತ್ಯಸ್ಮೈ ಪಿಪೀತ ಎಂಬ ಋಕ್ಕಿನಿಂದ ಉತ್ಪನ್ನವಾಗಿರುವುದು. ಈ ಸಾಮಮಂತ್ರವನ್ನು ಷೋಳಶಿಯಾಗದಲ್ಲಿ ಉಪಯೋಗಿಸಬೇಕೆಂದು ಕೆಲವರು ಹೇಳುವರು. ಈ ಸಾಮಮಂತ್ರಕ್ಕೆ ನಾನದ ಎಂಬ ಹೆಸರು ಹೇಗೆ ಬಂದಿತೆಂಬುದನ್ನು ಹೇಳುವರು. ಪೂರ್ವದಲ್ಲಿ ಇಂದ್ರನು ವೃತ್ರಾಸುರನನ್ನು ವಜ್ರಾಯುಧದಿಂದ ಪ್ರಹರಿಸಿದಾಗ ವೃತ್ರನು ಘಟ್ಟಿಯಾಗಿ ಧ್ವನಿಯನ್ನು ಮಾಡಿದನು. ಈ ಧ್ವನಿಯೇ ಸಾಮವೆಂದು ಹೆಸರಾಯಿತು. ಈ ಘಟ್ಟಿಯಾದ ಧ್ವನಿಯಿಂದ ಉತ್ಪನ್ನವಾದ್ದರಿಂದ ಈ ಸಾಮ ಮಂತ್ರಕ್ಕೆ ನಾನದ ಎಂದು ಹೆಸರಾಯಿತು. ಈ ಸಾಮಮಂತ್ರಗಾನದಿಂದ ಯಜಮಾನನಿಗೆ ಶತ್ರುಬಾಧೆಯು ನಿವಾರಣೆಯಾಗಿ ಸರ್ವರೂ ಮೈತ್ರೀಭಾವದಿಂದ (ಸ್ನೇಹದಿಂದ) ವರ್ತಿಸುವರು. ಯಾರೂ ದ್ವೇಷದಿಂದ ಪ್ರವರ್ತಿಸುವುದಿಲ್ಲ ಮತ್ತು ಮುಂದೆ ಸಹ ಈ ಯಜಮಾನನಿಗೆ ಶತ್ರುಗಳು ಯಾರೂ ಉಂಟಾಗುವುದಿಲ್ಲ.

ಅಭ್ರಾತೃವ್ಯೋ ಭ್ರಾತೃವ್ಯಹಾ ಭವತಿ ಯ ಏವಂ ವಿದ್ವಾನ್ನಾನದಂ ಷೋಳಶಿಸಾಮ ಕುರುತೇ ।

ವೇದನಂ ಪ್ರಶಂಸತಿ—

ಯಾವ ವಿದ್ವಾಂಸನಾದ ಯಜಮಾನನು ತಾನು ಮಾಡುವ ಷೋಳಶಿಯಜ್ಞದಲ್ಲಿ ಈ ನಾನದವೆಂಬ ಸಾಮಮಂತ್ರವನ್ನು ಪ್ರಯೋಗಿಸುವನೋ ಅವನಿಗೆ ಯಾವ ವಿಧವಾದ ಶತ್ರುಗಳೂ ಉಂಟಾಗುವುದಿಲ್ಲ. ಇದುವರಿಗೆ ಇರಬಹುದಾದ ಹಿಂದಿನ ಶತ್ರುಗಳೂ ನಾಶವನ್ನೈದುವರು.

ತದ್ಯದಿ ನಾನದಂ ಕುರ್ಯುರವಿಹೃತಃ ಷೋಳಶೀ ಸಂಸ್ತವ್ಯೋಽವಿಹೃತಾಸು ಹಿ ತಾಸು ಸ್ತುವತೇ ಯದಿ ಗೌರಿವೀತಂ ವಿಹೃತಃ ಷೋಳಶೀ ಶಂಸ್ತವ್ಯೋ ವಿಹೃತಾಸು ಹಿ ತಾಸು ಸ್ತುವತೇ ॥

ಗೌರಿವೀತಂ ನಾನದಂ ವಾ ಸಾಮೇತ್ಯೇವಂ ಪಕ್ಷದ್ವಯಂ ಸಂಪನ್ನಂ ತಯೋಃ ಪಕ್ಷಯೋಃ ಶಸ್ತ್ರವಿಶೇಷವ್ಯವಸ್ಥಾಂ ವಿಧತ್ತೇ- ಅವಿಹೃತರೂಪಃ ಪರಸ್ಪರವ್ಯತಿಷಂಗರಹಿತೋ ಯಥಾ-

ಧೀತಪಾಠಃ ಸೋಽಯಂ ನಾನದಪಕ್ಷೇ ಕರ್ತವ್ಯಃ । ಯತಃ ಸಾಮಗಾ ಅಪ್ಯವಿಹೃತಾಸು ವ್ಯತಿಷಂಗರಹಿತಾಸ್ವೃಕ್ಷು ನಾನದಸಾಮ್ನಾ ಸ್ತುವತೇ ತಸ್ಮಾದವಿಹೃತತ್ವಮೇವಾತ್ರ ಯೋಗ್ಯಂ ॥ ಯಥಾ ವಾವ ಸ್ತೋತ್ರಮೇವಂ ಶಸ್ತ್ರಮಿತಿ ನ್ಯಾಯಾತ್ ॥ ಗೌರಿವೀತಪಕ್ಷೇ ಶಸ್ತ್ರಮಪಿ ಪರಸ್ಪರವ್ಯತಿಷಂಗೇಣ ವಿಹೃತಂ ಪಠನೀಯಂ ಸಾಮಗೈರ್ವಿಹೃತಾಸು ಋಕ್ಷು ಗೌರಿವೀತಸಾಮ್ನಾ ಸ್ತೂಯಮಾನತ್ವಾತ್ ॥

ಪರಸ್ಪರ ವ್ಯತ್ಯಸ್ತರಹಿತವಾದ (ಪಾಠಭೇದವಿಲ್ಲದ) ಕ್ರಮದಲ್ಲಿ ಎಂದರೆ ಅವಿಹೃತ ರೂಪದಲ್ಲಿ ಈ ನಾನದವೆಂಬ ಸಾಮವನ್ನು ಪಠಿಸಬೇಕು. ಹಿಂದೆ ಅವಿಹೃತ, ವಿಹೃತ ಎಂಬ ಕ್ರಮಗಳನ್ನು ವಿವರಿಸಿದೆಯಷ್ಟೆ. ಅವುಗಳಲ್ಲಿ ಅಧ್ಯಯನ ಕ್ರಮಕ್ಕೆ ವಿರೋಧವಿಲ್ಲದಂತೆ ಪಠಿಸುವ ಅವಿಹೃತಪಕ್ಷದಂತೆ ಸಾಮಗರು ಈ ನಾನದಸಾಮವನ್ನು ಪಠಿಸುವರು. ಇದೇ ಸರಿಯಾದ ಮಾರ್ಗವು. ಸ್ತೋತ್ರವನ್ನನುಸರಿಸಿಯೇ ಶಾಸ್ತ್ರವಿರಬೇಕೆನ್ನುವುದು ನ್ಯಾಯವು. ಗೌರಿವೀತಪಕ್ಷದಲ್ಲಿ ಸಾಮಗರು ಸಾಮಮಂತ್ರವನ್ನು (ಸ್ತೋತ್ರವನ್ನು) ವಿಹೃತಿಕ್ರಮದಿಂದ ಪಠಿಸುವರು. ಶಸ್ತ್ರಮಂತ್ರವೂ ಆ ಕ್ರಮದಂತೆಯೇ ಪಠಿಸಲ್ಪಡುವುದು. ಇಲ್ಲಿ ಸಾಮಗರು ಯಾವ ಕ್ರಮವನ್ನನುಸರಿಸಿ ಗಾನಮಾಡುವರೋ ಆ ಕ್ರಮವನ್ನೇ ಹೋತೃವರ್ಗದವರೂ ಶಸ್ತ್ರಮಂತ್ರವನ್ನು ಪಠಿಸುವಾಗ ಉಪಯೋಗಿಸುವರು.

## *English Translation*

**(On the way of repeating the Sholasi Shastra.**
**On the application of the Gauriviti or Nanada Saman)**

He who desires beauty and the acquirement of sacred knowledge ought to use the Gaurivitam as the proper Saman at the Sholasi ceremony. For the Gaurivitam is beauty and acquirement of sacred knowledge. He who having such a knowledge uses the Gaurivitam as the proper Saman at the Sholasi ceremony becomes beautiful and acquires sacred knowledge.

They say, the Nanadam ought to be used as the proper Saman at the Sholasi (ceremony). Indra lifted his thunderbolt to strike Vritra; he struck him with it, and hitting him with it, killed him. He sfter having been struck down, made a fearful noise (vyanadat). Thence the Nanada Saman took its origin, and therefore it is called so (from nad to scream). This Saman is free from enemies; for it kills enemies. He who having such a knowledge uses the Nanada Saman at the Sholasi (ceremony) gets rid of his enemies, and kills them.

If they use the Nanadam (Saman), the several padas of verses in two metres at the Sholasi Shastra are not to be taken out of their natural connection to join one pada of the one metre to one of the other (avihrita). For the Sama singers do the same, using verses which are not joined in the vihrita way for singing the Nadada Saman.

If they use the Gaurivitam, several padas of verses in two metres used at the Sholas are to be taken out of their natural connection, to join one pada of the one metre to one of the other (vihrita). For the Sama singers do the same with the verses which they use for singing.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಷೋಡಶಾಧ್ಯಾಯಸ್ಯ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಆರನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವಾದುದು.



## ಅಥ ಷೋಡಶಾಧ್ಯಾಯೇ ತೃತೀಯಃ ಖಂಡಃ

### ಹದಿನಾರನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ಶೋಳಶಿಶಾಸ್ತ್ರದಲ್ಲಿ ಬೇರೆಬೇರೆ ಎರಡು ಛಂದಸ್ಸುಗಳ ಪದಗಳನ್ನು ಹೇಗೆ ಸೇರಿಸಿ ಪಠಿಸಬೇಕೆಂಬ ಕ್ರಮದ ವಿವರಣೆಯು]



**ಅಥಾತಶ್ಛಂದಾಂಸ್ಯೇವ ವ್ಯತಿಷಜತ್ಯಾ ತ್ವಾ ವಹಂತು ಹರಯ ಉಪೋಷು ಶೃಣುಹೀ ಗಿರ ಇತಿ ಗಾಯತ್ರೀಶ್ಚ ಪಂಕ್ತೀಶ್ಚ ವ್ಯತಿಷಜತಿ ಗಾಯತ್ರೋ ವೈ ಪುರುಷಃ ಪಾಂಕ್ತಾಃ ಪಶವಃ ಪುರುಷಮೇವ ತತ್ಪಶುಭಿರ್ವ್ಯತಿಷಜತಿ ಪಶುಷು ಪ್ರತಿಷ್ಠಾಪಯತಿ ಯದು ಗಾಯತ್ರೀ ಚ ಪಂಕ್ತಿಶ್ಚ ತೇ ದ್ವೇ ಅನುಷ್ಟುಭೌ ತೇನೋ ವಾಚೋ ರೂಪಾದನುಷ್ಟುಭೋ ರೂಪಾದ್ವಜ್ರರೂಪಾನ್ನೈತಿ ।**

ಅಥ ವಿಹರಣಪ್ರಕಾರಂ ವಿಧತ್ತೇ—ಅಥ ಸಾಮುದ್ಯಯವಿಧಾನಾನಂತರಮತೋ ಗೌರವೀತಪಕ್ಷೇ ವಿಹೃತಸ್ಯಾಪೇಕ್ಷಿತತ್ವಾತ್ತದುಚ್ಯತ ಇತಿ ಶೇಷಃ । ಸ್ವಸ್ವಸ್ಥಾನಾದ್ವಿಭಜ್ಯಾನ್ಯತ್ರ ನಯನಂ ವಿಹರಣಂ । ತಚ್ಚ ಸಮಾನಛಂದಯೋರೇವ ಭವತಿ । ತದ್ವ್ಯಾವೃತ್ತ್ಯರ್ಥಮುಚ್ಯತೇ—ಛಂದಾಸ್ಯೇವ ವ್ಯತಿಷಜತೀತಿ । ಪರಸ್ಪರವಿಲಕ್ಷಣಾನ್ಯೇವ ಛಂದಾಂಸಿ ವ್ಯತಿಷಿಕ್ತಾನಿ ಕುರ್ಯುರಿತಿ । ತತ್ರ ಕಸ್ಯ ಚ್ಛಂದಸಃ ಕೇನಚಿಚ್ಛಂದಸಾ ಸಹ ವ್ಯತಿಷಂಗ ಇತಿ ತದೇತದುದಾಹರಣಪೂರ್ವಕಂ

ಪ್ರದರ್ಶ್ಯತೇ ॥ ಆತ್ವಾವಹಂತ್ವಿತ್ಯಾದಿಕಾಸ್ತಿಸ್ರ ಋತೋ ಗಾಯತ್ರೀಚ್ಛಂದಸ್ಕಾ ಉಪೋಷ್ವಿ- ತ್ಯೇಕಾ ಸುಸಂದೃಶಮಿತಿ ದ್ವೇ ಏತಾಸ್ತಿಸ್ರಃ ಪಂಕ್ತಿಚ್ಛಂದಸ್ಕಾ ಸ್ತಾ ಉಭಯೀಃ ಪರಸ್ಪರಂ ವ್ಯತಿ- ಷಜನ್ ಮಿಶ್ರಯೇತ್ ॥ ಗಾಯತ್ರ್ಯಾಃ ಪ್ರಥಮಪಾದಮುಕ್ತ್ವಾ ತೇನ ಸಹ ಪಂಕ್ತೇಃ ಪ್ರಥ- ಮಪಾದಮುಚ್ಚಾರಯೇತ್ ॥ ಸೋಽಯಂ ಪ್ರಕಾರೋಽಸ್ಮಾಭಿಃ ಪೂರ್ವಮೇವೋದಾಹೃತಃ । ಲೋಕೇ ಪುರುಷೋ ಗಾಯತ್ರ ಉಪನೀತೇನ ಗಾಯತ್ರ್ಯಾ ಅನುಷ್ಠೇಯತ್ವಾತ್ ॥ ಪಶವಶ್ಚ ಪಾಂಕ್ತಾಶ್ಚತುರ್ಭಿಃ ಪಾದೈಃ ಮುಖೇನ ಚ ಪಂಚಸಂಖ್ಯೋಪೇತತ್ವಾತ್ । ತತ್ರ ಗಾಯತ್ರೀ- ಪಂಕ್ತ್ಯೋರ್ಮೇಲನೇನ ಪುರುಷಸ್ಯ ಪಶೂನಾಂ ಚ ಮೇಲನಂ ಭವತಿ ॥ ಅತಃ ಪುರುಷಂ ಪಶುಷು ಪ್ರತಿಷ್ಠಾಪಯತಿ ॥ ಕಿಂಚ ಯದ್ರೂಪೇಣೈವ ಕಾರಣೇನ ಗಾಯತ್ರೀ ಚ ಪಂಕ್ತಿಶ್ಚ ಮಿಲಿತೇ ಸತ್ಯೇ (ತ್ಯೌ) ತೇ ದ್ವೇ ಅನುಷ್ಟುಭೌ ಸಂಪದ್ಯೇತೇ ॥ ಗಾಯತ್ರ್ಯಾಸ್ತ್ರಿಪಾದತ್ವಾ- ತ್ಪಂಕ್ತೇಶ್ಚ ಪಂಚಪಾದತ್ವಾನ್ಮಿಲಿತ್ವಾಽಷ್ಟಾನಾಂ ಪಾದಾನಾಂ ವಿದ್ಯಮಾನತ್ವಾತ್ತೇನೋ ತೇ ನೈವ ಮೇಲನೇನ ಕಾರಣೇನಾಯಂ ಪುರುಷೋ ವಾಗ್ರೂಪಾದನುಷ್ಟುಬ್ರೂಪಾದ್ವಜ್ರರೂಪಾಚ್ಚ ನೈತಿ ಕದಾಚಿದಪಿ ವಿಯುಕ್ತೋ ನ ಭವತಿ ॥ ಶಸ್ತ್ರಸ್ಯಾಕ್ಷರಾತ್ಮಕತ್ವೇನ ವಾಗ್ರೂಪನುಷ್ಟುಪಾದಸಂಪ- ತ್ತ್ಯಾವನುಷ್ಟುಬ್ದ್ವಯರೂಪತ್ವಂ ಷೋಡಶಿನಃ ಪಶ್ಚಾದಿನಿಯಾಮಕತ್ವೇನ ವಜ್ರರೂಪತ್ವಮತೋ ನಾಸ್ತಿ ತ್ರಿವಿಧಯೋಗಃ ॥

ವಿಹರಣ ಪ್ರಕಾರವನ್ನು (ಶಸ್ತ್ರಮಂತ್ರಗಳನ್ನು ವ್ಯತ್ಯಸ್ತಮಾಡಿ ಪಠಿಸುವ ಪ್ರಕಾರವನ್ನು) ವಿವರಿಸುವರು—ಹಿಂದೆ ಷೋಳಶಿಯಲ್ಲಿ ಗೌರಿವೀತ ಮತ್ತು ನಾನದ ಎಂಬ ಎರಡುವಿಧ ಸಾಮಮಂತ್ರಗಳನ್ನು ವಿವರಿಸಿದ್ದಾಯಿತು. ಗೌರಿವೀತ ಪಕ್ಷದಲ್ಲಿ ವಿಹೃತಕ್ರಮವನ್ನು (ವ್ಯತ್ಯಸ್ತಮಾಡಿ ಹೇಳುವ ಕ್ರಮವನ್ನು) ಈಗ ವಿವರಿಸಲಾಗುವದು. ಅಧ್ಯಯನಕ್ರಮದಲ್ಲಿರುವ ಋಕ್ಕು ಗಳನ್ನು ಅವುಗಳ ಸ್ಥಾನದಿಂದ ಬೇರ್ಪಡಿಸಿ ಬೇರೆವಿಧದಲ್ಲಿ ಒಂದು ಕ್ರಮವಾಗಿ ಪಠಿಸುವುದಕ್ಕೆ ವಿಹರಣವೆಂದು ಹೆಸರು. ಇದೂ ಸಹ ಒಂದೇ ವಿಧವಾದ ಛಂದಸ್ಸಿನ ಮಂತ್ರಗಳಲ್ಲಿ ನಡೆಯುವುದು. ಆ ಕ್ರಮವು ಈ ರೀತಿ ಇರುವುದು ಛಂದಸ್ಸುಗಳನ್ನು ಬೇರೆವಿಧವಾಗಿ ಎಂದರೆ ವಿಲಕ್ಷಣವಾಗಿ ವ್ಯತ್ಯಸ್ತಮಾಡಿ ಪಠಿಸುವರು. ಇಲ್ಲಿ ಯಾವ ಛಂದಸ್ಸಿನ ಮಂತ್ರದೊಡನೆ ಸೇರಿಸಿ ವ್ಯತಿಷಂಗ (ಮಿಶ್ರಣ) ಮಾಡುವರೆಂಬುದಲ್ಲಿ ಉದಾಹರಣೆಪೂರ್ವಕವಾಗಿ ತಿಳಿಸುವರು. ಹೇಗೆಂದರೆ—**ಆ ತ್ವಾ ವಹಂತು** ಎಂದು ಮೊದಲಾಗುವ ಮೂರು ಋಕ್ಕುಗಳು ಗಾಯತ್ರೀ ಛಂದಸ್ಕವು. **ಉಪೋಷು** ಎಂಬ ಒಂದು ಋಕ್ಕು ಸುಸಂದೃಶಂ ಎಂದು ಮೊದಲಾಗುವ ಎರಡು ಋಕ್ಕುಗಳು ಒಟ್ಟು ಮೂರು ಋಕ್ಕುಗಳು ಪಂಕ್ತಿಶ್ಛಂದಸ್ಕವು. ಈ ಎರಡು ವಿಧ ಛಂದಸ್ಸುಗಳನ್ನು ಪರಸ್ಪರ ವ್ಯತ್ಯಸ್ತಮಾಡಿ ಮಿಶ್ರಮಾಡಬೇಕು. ಗಾಯತ್ರಿಯ ಮೊದಲನೆಯ ಪಾದವನ್ನು ಉಚ್ಚರಿಸಿ ಅದರೊಡನೆ ಪಂಕ್ತಿಶ್ಛಂದಸ್ಸಿನ ಮೊದಲನೇ ಪಾದವನ್ನು ಉಚ್ಚರಿಸಬೇಕು. ಈ ಪ್ರಕಾರವನ್ನು ನಾವು ಹಿಂದೆಯೇ ಹೇಳಿದ್ದೇವೆ ಲೋಕವ್ಯವಹಾರದಲ್ಲಿ ಪುರುಷನಾದವನು ಉಪನಯನ ಕರ್ಮದಲ್ಲಿ ಗಾಯತ್ರೀ ಮಂತ್ರದಿಂದ ಸಂಸ್ಕರಿಸಲ್ಪಡುವನು. ಪಶುಗಳಿಗೆ ನಾಲ್ಕು ಪಾದಗಳಿರುವವು ಒಂದು ಮೂತಿಯೂ ಸೇರಿ ಐದು ಅಂಗಗಳಾಗುವವು. ಇಲ್ಲಿ ಗಾಯತ್ರಿಯು ಪುರುಷನ ಸಂಕೇತವು. ಪಂಕ್ತಿಯು ಪಶುಗಳ ಸಂಕೇತವು. ಆದ್ದರಿಂದ ಗಾಯತ್ರೀ ಛಂದಸ್ಸಿನೊಡನೆ ಪಂಕ್ತಿಶ್ಛಂದಸ್ಸಿನ ಮೇಲನವುಂಟಾಗುವುದರಿಂದ ಪುರುಷ ಮತ್ತು ಪಶುಗಳ ಮೇಲನವುಂಟಾದಂತಾ ಯಿತು ಎಂದರೆ ಪುರುಷನನ್ನು ಪಶುಗಳ ಮಧ್ಯದಲ್ಲಿ (ಪಶುಗಳಿಗೆ ಒಡೆಯನನ್ನಾಗಿ) ಸ್ಥಾಪಿಸಿದಂತಾಯಿತು. ಇದಲ್ಲದೆ ಗಾಯತ್ರೀ ಮತ್ತು ಪಂಕ್ತಿಶ್ಛಂದಸ್ಸುಗಳನ್ನು ಮೇಲನ ಮಾಡಿದರೆ ಎರಡು ಅನುಷ್ಟುಪ್‌ಛಂದಸ್ಸಿನ ಮಂತ್ರಗಳನ್ನು ಉತ್ಪನ್ನಮಾಡಿದಂತಾ ಯಿತು. ಹೇಗೆಂದರೆ ಗಾಯತ್ರೀ ಛಂದಸ್ಸಿನಲ್ಲಿ ಮೂರು ಪಾದಗಳಿರುವವು. ಪಂಕ್ತಿಶ್ಛಂದಸ್ಸಿನಲ್ಲಿ ಐದು ಪಾದಗಳಿರುವವು.

ಇವೆರಡನ್ನು ಸೇರಿಸಿದರೆ ನಾಲ್ಕುಪಾದಗಳ ಎರಡು ಅನುಷ್ಟುಪ್‌ಛಂದಸ್ಸಿನ ಮಂತ್ರಗಳಾಗುವವು. ಪುರುಷನು ವಾಗ್ರೂಪವು ಅನುಷ್ಟುಪ್‌ಛಂದಸ್ಸು ವಜ್ರಾಯುಧರೂಪವು. ಹೀಗಿರುವುದರಿಂದ ಇವುಗಳಿಗೆ ಯಾವಾಗಲೂ ವಿಯೋಗವಿರುವುದಿಲ್ಲ. ಮತ್ತು ಶಸ್ತ್ರಮಂತ್ರಗಳ ಅಕ್ಷರಾತ್ಮಕ ಮತ್ತು ಎಂಟು ಪದಗಳಿಂದ ಸಹಿತವಾದ ಎರಡು ಅನುಷ್ಟುಪ್ ಛಂದಸ್ಸುಗಳು ಮತ್ತು ಇವು ಪಶುಗಳನ್ನು ನಿಯಮನಮಾಡುವುದರಿಂದ ವಜ್ರರೂಪತ್ವವು ಆದ್ದರಿಂದ ಈ ಮೂರು ವಿಧ ವಿಯೋಗಗಳಲ್ಲಿ ಯಾವುದೂ ಸಂಭವಿಸುವುದಿಲ್ಲ.

**ಯದಿಂದ್ರ ಪೃತನಾಜ್ಯೇಯಂ ತೇ ಅಸ್ತು ಹರ್ಯತ ಇತ್ಯುಷ್ಣಿಹಶ್ಚ ಬೃಹ-**
**ತೀಶ್ಚ ವ್ಯತಿಷಜತ್ಯೌಷ್ಣಿಹೋ ವೈ ಪುರುಷೋ ಬಾರ್ಹತಾಃ ಪಶವಃ**
**ಪುರುಷಮೇವ ತತ್ಪಶುಭಿರ್ವ್ಯತಿಷಜತಿ ಪಶುಷು ಪ್ರತಿಷ್ಠಾಪಯತಿ**
**ಯದುಷ್ಣಿಕ್ಚ ಬೃಹತೀ ಚ ತೇ ದ್ವೇ ಅನುಷ್ಟುಭೌ ತೇನೋ ವಾಚೋ**
**ರೂಪಾದನುಷ್ಟುಭೋ ರೂಪಾದ್ವಜ್ರರೂಪಾನ್ನೈತಿ ॥**

ಛಂದೋಂತಯೋರ್ವಿಹರಣಂ ವಿಧತ್ತೇ— ಯದಿಂದ್ರ ಇತ್ಯಾದಿಕಾಸ್ತಿಸ್ರ ಉಷ್ಣಿಕ್ಛಂದಸ್ಕಾ ಋಚೋಽಯಂ ತೇ ಅಸ್ತ್ವಿತ್ಯಾದಿಕಾಸ್ತಿಸ್ರೋ ಬೃಹತೀಚ್ಛಂದಸ್ಕಾಃ ॥ ಉಪನೀತಃ ಪುರುಷೋ ವ್ಯಾಹೃತ್ಯಕ್ಷರಚತುಷ್ಟಯೋಪೇತಾಂ ಚತುರ್ವಿಂಶತ್ಯಕ್ಷರಾಂ ಗಾಯತ್ರೀಂ ವ್ಯತಿಷಜತ್ಯುಷ್ಣಿಕ್ಚಾಷ್ಟಾವಿಂಶತ್ಯಕ್ಷರಾ ತತಃ ಪುರುಷಸ್ಯೌಷ್ಣಿಹತ್ವಂ ॥ ಪಶೂನಾಂ ಬಾರ್ಹತತ್ವಂ ಶಾಖಾಂತರೇ ಶ್ರುತಂ । 'ಛಂದಾಂಸಿ ಪಶುಷ್ವಾಜಿಮಯುಸ್ತಾನ್ಬೃಹತ್ಯುದಜಯತ್ತಸ್ಮಾದ್ಬಾರ್ಹತಾಃ ಪಶವ ಉಚ್ಯಂತೇ' ಇತಿ ॥ ಬೃಹತೀ ಚ ಷಟ್ತ್ರಿಂಶದಕ್ಷರಾ ತಸ್ಯಾ ಉಷ್ಣಿಗ್ಯೋಗೇ ಸತಿ ಚತುಃಷಷ್ಟ್ಯಕ್ಷರಸಂಪತ್ತೇಃ ಅನುಷ್ಟುಬ್ದ್ವಯಂ ॥

ಇದುವರೆಗೆ ಗಾಯತ್ರಿ ಮತ್ತು ಪಂಕ್ತಿಛಂದಸ್ಸುಗಳ ವಿಹರಣಕ್ರಮವನ್ನು ಹೇಳಿದ್ದಾಯಿತು ಇನ್ನು ಇತರವಿದ ಛಂದಸ್ಸುಗಳ ವಿಹರಣಕ್ರಮವನ್ನು ತಿಳಿಸಲಾಗುವುದು. **ಯದಿಂದ್ರ** ಎಂದು ಮೊದಲಾದ (ಋ. ಸಂ. ೮-೧೨-೨೫) ಮೂರು ಋಕ್ಕುಗಳು ಉಷ್ಣಿಕ್ ಛಂದಸ್ಕವು; **ಅಯಂತೆಯೋ ಅಸ್ತು** ಹರ್ಯತಃ (ಋ. ಸಂ ೪-೪೪-೧) ಎಂದು ಮೊದಲಾಗುವ ಮೂರು ಋಕ್ಕುಗಳು ಬೃಹತೀಛಂದಸ್ಕವು. ಉಪನಯು ಮಾಡಲ್ಪಟ್ಟ ಪುರುಷನು ನಾಲ್ಕು ಅಕ್ಷರಗಳುಳ್ಳ ವ್ಯಾಹೃತಿಗಳಿಂದ (ಭೂಃ ಭುವಃ ಸ್ವಃ) ಸಹಿತವಾದ ಗಾಯತ್ರೀ ಮಂತ್ರದಿಂದ ಸಂಸ್ಕರಿಸಲ್ಪಡುವನು. ಆದ್ದರಿಂದ ಪುರುಷನು ಇಪ್ಪತ್ತೆಂಟು ಅಕ್ಷರಾತ್ಮಕನಾದಂತಾಯಿತು. ಉಷ್ಣಿಕ್ ಛಂದಸ್ಸು ಸಹ ಇಪ್ಪತ್ತೆಂಟು ಅಕ್ಷರಗಳುಳ್ಳದಾಗಿರುವುದರಿಂದ ಅಥವಾ ಪುರುಷಾತ್ಮಕ ವಾಯಿತು. ಬೃಹತೀ ಛಂದಸ್ಸು ಪಶುಸ್ವರೂಪವು. ಈ ವಿಷಯುವು ಶಾಖಾಂತರದಲ್ಲಿ ಹೀಗೆ— **ಛಂದಾಂಸಿ ಪಶುಷ್ವಾಜಿಮಯುಸ್ತಾನ್ಬೃಹತ್ಯುದ ಜಯತ್ತಸ್ಮಾದ್ಬಾರ್ಹತಾಃ ಪಶವ ಉಚ್ಯಂತೇ**— ಹೇಳಿರುವುದು. ಬೃಹತೀಛಂದಸ್ಸಿನಲ್ಲಿ ಮೂವತ್ತಾರು ಅಕ್ಷರಗಳಿರುವವು. ಉಷ್ಣಿಕ್ (೨೮) ಬೃಹತೀ (೩೬) ಛಂದಸ್ಸುಗಳನ್ನು ಸೇರಿಸಿದರೆ ೬೪ ಅಕ್ಷರಗಳಾಗುವವು. ಈ ೬೪ ಅಕ್ಷರಗಳಿಗೆ ಅನುಷ್ಟುಪ್ ಛಂದಸ್ಸಿನ ಎರಡು (೩೨ಕ್ಕೆ ೧ ರಂತೆ) ಮಂತ್ರಗಳಾಗುವವು. ಇತರ ವಿಷಯುಗಳನ್ನು ಹಿಂದಿನಂತೆ ಊಹಿಸಿಕೊಳ್ಳಬೇಕು.

ಆಧೂರ್ಷ್ವಸ್ಮೈ ಬ್ರಹ್ಮನ್ವೀರ ಬ್ರಹ್ಮಕೃತಿಂ ಜುಷಾಣ ಇತಿ ದ್ವಿಪದಾಂ ಚ ತ್ರಿಷ್ಟುಭಂ ಚ ವ್ಯತಿಷಜತಿ ದ್ವಿಪಾದ್ವೈ ಪುರುಷೋ ವೀರ್ಯಂ ತ್ರಿಷ್ಟುಪ್ಪುರುಷಮೇವ ತದ್ವೀರ್ಯೇಣ ವ್ಯತಿಷಜತಿ ವೀರ್ಯೇ ಪ್ರತಿಷ್ಠಾಪಯತಿ ತಸ್ಮಾತ್ಪುರುಷೋ ವೀರ್ಯೇ ಪ್ರತಿಷ್ಠಿತಃ ಸರ್ವೇಷಾಂ ಪಶೂನಾಂ ವೀರ್ಯವತ್ತಮೋಯದು ದ್ವಿಪದಾ ಚ ವಿಂಶತ್ಯಕ್ಷರಾ ತ್ರಿಷ್ಟುಪ್ ಚ ತೇ ದ್ವೇ ಅನುಷ್ಟುಭೌ ತೇನೋ ವಾಚೋ ರೂಪಾದನುಷ್ಟುಭೋ ರೂಪಾದ್ವಜ್ರರೂಪಾನ್ನೈತಿ ॥

ಛಂದೋಂತಯೋರ್ವಿಹರಣಂ ವಿಧತ್ತೇ— ಆಧೂರ್ಷ್ವಸ್ಮಾ ಇತ್ಯೇಷಾ ಪಾದದ್ವಯೋಪೇತಾ ಬ್ರಹ್ಮನ್ವೀದೇತ್ಯೇಷಾ ತ್ರಿಷ್ಟುಪ್ಛಂದಸ್ಕಾ ಪುರುಷಸ್ಯ ದ್ವಿಪಾತ್ತ್ವಂ ಪ್ರಸಿದ್ಧಂ ತ್ರಿಷ್ಟುಭೋ ವೀರ್ಯಹೇತುತ್ವಾ ದ್ವೀರ್ಯತ್ವಂ ತಸ್ಮಾದುಭಯಮೇಲನೇನ ಪುರುಷಂ ವೀರ್ಯೇ ಪ್ರತಿಷ್ಠಾಪಯತಿ । ತಸ್ಮಾಲ್ಲೋಕೇಽಪಿ ಸರ್ವೇಷಾಂ ದ್ವಿಪದಾಂ ಚತುಷ್ಪದಾನಾಂ ಪಶೂನಾಂ ಮಧ್ಯೇ ಪುರುಷಸ್ಯ ಶಕ್ತ್ಯಾಧಿಕ್ಯಾತ್ಪುರುಷೋ ವೀರ್ಯೇ ಪ್ರತಿಷ್ಠಿತಃ ॥ ದ್ವಿಪದಾ ಚೇಯಂ ವಿಂಶತ್ಯಕ್ಷರಾಽಷ್ಟಾಕ್ಷರೇ ಪ್ರಥಮೇ ಪಾದೇ ಸಂಯುಕ್ತಾಕ್ಷರಯೋಃ ವಿಭಾಗೇನ ಪಂಚಾಕ್ಷರತ್ವೇ ಸತಿ ದಶಸಂಖ್ಯಾಪೂರ್ತೇಃ ॥ ಏವಂ ಪಂಚಾಕ್ಷರೈ ಸ್ತ್ರಿಷ್ಟುಭಶ್ಚತುರ್ಣಾಂ ಪಾದೇಸ ಸಂಧಾನಂ ತ್ರಿಷ್ಟುಪ್ಚತ್ವಾರಿಂಶದಕ್ಷರಾ ಮಿಲಿತ್ವಾ ಚತುಃಷಷ್ಟಿಸಂಪತ್ತ್ಯಾಽನುಷ್ಟುಬ್ದ್ವಯಂ ಸಂಭವತಿ ॥

ಇತರ ಛಂದಸ್ಸುಗಳ ವಿಹರಣಕ್ರಮವನ್ನು ತಿಳಿಸುವರು. **ತಧೂರ್ಷ್ವಸ್ಮೈ** (ಋ. ಸಂ. ೭-೩೪-೪) ಎಂಬ ಎರಡು ಪಾದಗಳುಳ್ಳ (ದ್ವಿಪದಾ) ಎಂಬ ಛಂದಸ್ಸಿನ ಮಂತ್ರವು ಬ್ರಹ್ಮನ್ವೀರ ಎಂಬ ಮಂತ್ರವು ತ್ರಿಷ್ಟುಪ್ ಛಂದಸ್ಕವು. ಪುರುಷನಿಗೆ (ಮನುಷ್ಯನಿಗೆ ಎರಡುಕಾಲುಗಳಿರುವ ವಿಷಯವು ಎಲ್ಲರಿಗೂ ತಿಳಿದೇ ಇದೆ. ಹಾಗೆಯೇ ತ್ರಿಷ್ಟುಪ್ ಛಂದಸ್ಸು ವೀರ್ಯಸಂಕೇತವಾದುದು. ಆದ್ದರಿಂದ ಇವೆರಡರ ಸಮ್ಮೇಲನದಿಂದ ಪುರುಷನಲ್ಲಿ ವೀರ್ಯವನ್ನು ಸ್ಥಾಪಿಸಿದಂತಾಯಿತು. ಆದ್ದರಿಂದ ಲೋಕವ್ಯವಹಾರದಲ್ಲಿಯೂ ಎರಡು ಪಾದವಿರತಕ್ಕ ಮನುಷ್ಯರಲಿಯೂ, ನಾಲ್ಕುಪಾದಗಳಿರತಕ್ಕ ಪಶುಗಳಲ್ಲಿಯೂ ಮನುಷ್ಯನಿಗೆ ಶಕ್ತಿಸಾಮರ್ಥ್ಯಗಳು ಅಧಿಕವಾಗಿರುವವು. ಈ ದ್ವಿಪದಾ ಎಂಬ ಛಂದಸ್ಸಿನ ಋಕ್ಕಿನಲ್ಲಿ ಇಪ್ಪತ್ತಕ್ಷರಗಳಿರುವವು. ಮೊದಲನೇ ಪಾದದಲ್ಲಿ ಎಂಟು ಅಕ್ಷರಗಳಿರುವವು. ಅವರೂ ಸಂಯುಕ್ತಾಕ್ಷರ (ವತ್ತಕ್ಷರಗಳ) ವಿಭಾಗದಿಂದ ಹತ್ತಕ್ಷರಗಳಿದ್ದಂತಾಯಿತು ಇದರ ಜತೆಗೆ ನಲವತ್ತು ಅಕ್ಷರಗಳ ತ್ರಿಷ್ಟುಪ್ ಛಂದಸ್ಸಿನ ಅಕ್ಷರಗಳನ್ನೂ ಸಂಯುಕ್ತಾಕ್ಷರಗಳನ್ನೂ ಸೇರಿಸಿದರೆ ಒಟ್ಟು ಅರವತ್ತನಾಲ್ಕು ಅಕ್ಷರಗಳಾಗುವವು. ಈ ಅರವತ್ತುನಾಲ್ಕು ಅಕ್ಷರಗಳಿಗೆ ಅನುಷ್ಟುಪ್ ಛಂದಸ್ಸಿನ ಎರಡು ಮಂತ್ರಗಳಾಗುವವು.

ಏಷ ಬ್ರಹ್ಮಾ ಪ್ರ ತೇ ಮಹೇ ವಿದಥೇ ಶಂಸಿಷಂ ಹರೀ ಇತಿ ದ್ವಿಪದಾಶ್ಚ ಜಗತೀಶ್ಚ ವ್ಯತಿಷಜತಿ ದ್ವಿಪಾದ್ವೈ ಪುರುಷೋ ಜಾಗತಾಃ ಪಶವಃ ಪುರುಷಮೇವ ತತ್ಪಶುಭಿರ್ವ್ಯತಿಷಜತಿ ಪಶುಷು ಪ್ರತಿಷ್ಠಾಪಯತಿ ತಸ್ಮಾತ್ಪುರುಷಃ ಪಶುಷು ಪ್ರತಿಷ್ಠಿತೋಽತ್ತಿ ಚೈನಾನಧಿ ಚ ತಿಷ್ಠತಿ

ವಶೇ ಚಾಸ್ಯ ಯದು ದ್ವಿಪದಾ ಚ ಷೋಳಳಾಕ್ಷರಾ ಜಗತೀ ಚ ತೇ ದ್ವೇ ಅನುಷ್ಟುಭೌ ತೇನೋ ವಾಚೋ ರೂಪಾದನುಷ್ಟುಭೋ ರೂಪಾದ್ವಜ್ರರೂಪಾನ್ನೈತಿ ||

**ಛಂದೋಂತರಯೋರ್ವಿಹರಣಂ ವಿಧತ್ತೇ—ಏಷ ಬ್ರಹ್ಮೇತ್ಯಾದಿಕಾಸ್ತಿಸ್ರೋ ದ್ವಿಪದಾಃ ಪ್ರ ತೇ ಮಹ ಇತ್ಯಾದಿಕಾಸ್ತಿಸ್ರೋ ಜಗತ್ಯಃ। ಪಶೂನಾಂ ಜಾಗತತ್ವಂ ಶಾಖಾಂತರೇ ಸೋಮಾಹರಣಕಥಾಯಾಂ ಶ್ರೂಯತೇ—ಸಾ ಪಶುಭಿಶ್ಚ ದೀಕ್ಷಯಾ ಚಾಽಽಗಚ್ಛತ್ತಸ್ಮಾಜ್ಜಗತೀ ಛಂದಸಾಂ ಪಶವ್ಯತಮಾ।" ಇತಿ || ಯಸ್ಮಾನ್ಮೇಲನೇನ ಪುರುಷಂ ಪಶುಷು ಪ್ರತಿಷ್ಠಾಪಯತಿ ತಸ್ಮಾದಯಂ ಪುರುಷಃ ಪಶುಷು ಪ್ರತಿಷ್ಠಿತಃ || ತಸ್ಮಿನ್ ಕ್ಷೀರಾದಿಕಮತ್ತಿ ಚೈನಾನ್ಪಶೂನಧಿತಿಷ್ಠತಿ ನಿಯಮಯತಿ ಚ। ತಸ್ಮಾದಸ್ಯ ಪುರುಷಸ್ಯ ವಶೇ ಸರ್ವೇ ಪಶವೋ ವರ್ತಂತೇ || ಯದ್ಯಸ್ಮಾದೇವ ಕಾರಣಾದಿಯಂ ದ್ವಿಪದಾ ಷೋಡಶಾಕ್ಷರಾ ಜಗತೀ ಚಾಷ್ಟಾಚತ್ವಾರಿಂಶದಕ್ಷರಾ ತತೋ ಮಿಲಿತ್ವಾ ಚತುಃಷಷ್ಟಿತ್ವಾದನುಷ್ಟುಬ್ದ್ವಯತ್ವಂ ||**

ಇತರ ಛಂದಸ್ಸುಗಳ ವಿಹರಣಕ್ರಮವನ್ನು ವಿವರಿಸುವರು—ಏಷ ಬ್ರಹ್ಮಾ ಎಂದು ಮೊದಲಾದ ಮೂರು ಮಂತ್ರಗಳು ದ್ವಿಪದಾ ಛಂದಸ್ಕವು. **ಪ್ರತೇ ಮಹೇ ವಿದಥೇ ಶಂಸಿಷಂ** (ಋ. ಸಂ. ೧೦-೯೬-೧) ಎಂದು ಮೊದಲಾಗುವ ಮೂರು ಮಂತ್ರಗಳು ಜಗತೀಛಂದಸ್ಕವು. ಪಶುಗಳಿಗೆ ಜಗತೀಛಂದಸ್ಸಿನ ಸಂಬಂಧವಿರುವುದೆಂದು ಶಾಖಾಂತರದಲ್ಲಿ ಹೇಳಿದೆ—**ಸಾ ಪಶುಭಿಶ್ಚ ದೀಕ್ಷಯಾ ಚಾಗಚ್ಚತ್ತಸ್ಮಾಜ್ಜಗತೀ ಛಂದಸಾಂ ಪಶವ್ಯತಮಾ** ಎಂದು ತೈತ್ತಿರೀಯ ಸಂಹಿತೆಯಲ್ಲಿ ಸೋಮಾಹರಣ ಪ್ರಸಂಗದಲ್ಲಿ ಹೇಳಲಾಗಿದೆ. ಪುರುಷ ಮತ್ತು ಪಶುಗಳ ಮೇಳನದಿಂದ ಪಶುಗಳಲ್ಲಿ ಪುರುಷನು ಅಧಿಕವಾದ ಪ್ರಭಾವವುಳ್ಳವನು ಎಂದು ಹೇಳಿದಂತಾಯಿತು. ಪಶುಗಳ ಕ್ಷೀರಾದಿಗಳನ್ನು ಮನುಷ್ಯನು ಉಪಯೋಗಿಸಿಕೊಂಡು ಅವುಗಳನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳುತ್ತಾನೆ. ಎಂದರೆ ಪುರುಷನ ವಶದಲ್ಲಿ ಅಥವಾ ಸ್ವಾಧೀನದಲ್ಲಿ ಎಲ್ಲಾ ಪಶುಗಳೂ ಇರುತ್ತವೆ. ಮೇಲೆ ಹೇಳಿದ ದ್ವಿಪದಾ ಛಂದಸ್ಸಿನಲ್ಲಿ ಹದಿನಾರು ಅಕ್ಷರಗಳೂ ಜಗತೀಛಂದಸ್ಸಿನಲ್ಲಿ ನಲವತ್ತೆಂಟು ಅಕ್ಷರಗಳೂ ಒಟ್ಟು ಅರವತ್ತುನಾಲ್ಕು ಅಕ್ಷರಗಳೂ ಇರುವುದರಿಂದ ಈ ಅರವತ್ತುನರಲ್ಕು ಅಕ್ಷರಗಳಿಗೆ ಎರಡು ಅನುಷ್ಟುಪ್ ಛಂದಸ್ಸಿನ ಮಂತ್ರಗಳಾಯಿತು.

ತ್ರಿಕದ್ರುಕೇಷು ಮಹಿಷೋ ಯವಾಶಿರಂ। ಪ್ರೋಷ್ವಸ್ಮೈ ಪುರೋರಥಮಿತ್ಯತಿಛಂದಸಃ ಶಂಸತಿ ಛಂದಸಾಂ ವೈ ಯೋ ರಸೋಽತ್ಯಕ್ಷರತ್ಸೋಽತಿಛಂದಸಮಭ್ಯತ್ಯಕ್ಷರತ್ತದತಿಛಂದಸೋಽತಿಛಂದಸ್ತ್ವಂ ಸರ್ವೇಭ್ಯೋ ವಾ ಏಷ ಛಂದೋಭ್ಯಃ ಸಂನಿರ್ಮಿತೋ ಯತ್ಷೋಳಶೀ ತದ್ಯದತಿಛಂದಸಃ ಶಂಸತಿ ಸರ್ವೇಭ್ಯ ಏವೈನಂ ತಚ್ಛಂದೋಭ್ಯಃ ಸಂನಿರ್ಮಿಮೀತೇ || ಸರ್ವೇಭ್ಯಶ್ಛಂದೋಭ್ಯಃ ಸಂನಿರ್ಮಿತೇನ ಷೋಳಶಿನಾ ರಾಧ್ನೋತಿ ಯ ಏವಂ ವೇದ ||

**ಛಂದೋಂತರಸಂಯುಕ್ತಾಃ ಕಾಶ್ಚಿದೃಚೋ ವಿಧತ್ತೇ—ತ್ರಿಕದ್ರುಕೇಷ್ವಿತಿ ತೃಚೇ ಯಾಸ್ತಿಸ್ರ ಋಚಸ್ತಾ ಅತಿಚ್ಛಂದೋಯುಕ್ತಾಸ್ತಥಾ ಪ್ರೋಷ್ವಸ್ಮಾ ಇತಿ ತೃಚೋಽಪಿ ತಾ**

ಉಭಯೀಃ ಶಂಸೇತ್ ॥ ಛಂದಸಾಂ ಗಾಯತ್ರ್ಯಾದೀನಾಂ ಯೋ ರಸಃ ಸಾರೋಽತ್ಯಕ್ಷರದತಿಶಯೇನಾಸ್ರವತ್ತದಾನೀಂ ಸ ರಸೋಽತಿಚ್ಛಂದಸಮಭಿಲಕ್ಷ್ಯ ಅತಿಶಯೇನಾಸ್ರವತ್॥ ತಸ್ಮಾಚ್ಛಂದೋಽಸರಸ್ಯಾತಿಶಯೇನ ಸ್ರವಣಾದತಿಚ್ಛಂದಸ್ತ್ವಂನಾಮ ಸಂಪನ್ನಂ ॥ ಷೋಡಶೀ ಚೋಕ್ತಪ್ರಕಾರೇಣ ಸರ್ವೇಭ್ಯಃ ಛಂದೋಭ್ಯಃ ಸಮ್ಯಙ್ನಿರ್ಮಿತಸ್ತಸ್ಮಾದತಿಚ್ಛಂದಸಾಂ ಶಂಸನೇನಾಯಂ ಹೋತೈನಂ ಯಜಮಾನಂ ಸರ್ವಚ್ಛಂದೋಭ್ಯೋ ನಿರ್ಮಿಮೀತೇ ॥ ವೇದನಂ ಪ್ರಶಂಸತಿ—

ಬೇರೆ ಬೇರೆ ಛಂದಸ್ಸುಗಳ ಇನ್ನು ಕೆಲವು ಋಕ್ಕುಗಳನ್ನು ವಿವರಿಸುವರು – ತ್ರಿಕದ್ರುಕೇಷು (ಋ. ಸಂ. ೨-೨೨-೧) ಎಂದು ಮೊದಲಾಗುವ ಮೂರು ಋಕ್ಕುಗಳಲ್ಲಿ ಪ್ರತಿಯೊಂದು ಅತಿಛಂದೋಯುಕ್ತವಾದವು ಎಂದರೆ ಅಧಿಕಸಂಖ್ಯೆಯ ಅಕ್ಷರಗಳುಳ್ಳವುಗಳು. ಹಾಗೆಯೇ ಪ್ರೋಷ್ವಸ್ಮೈ ಪುರೋರಥಂ (ಋ. ಸಂ. ೧೦-೧೩೪-೧) ಎಂದು ಮೊದಲಾಗುವ ಮೂರು ಋಕ್ಕುಗಳಲ್ಲಿಯೂ ಅಧಿಕಸಂಖ್ಯೆಯ ಅಕ್ಷರಗಳಿರುವುವು. ಗಾಯತ್ರೀ ಮೊದಲಾದ ಛಂದಸ್ಸುಗಳಲ್ಲಿರುವ ಸಾರವು ಉಕ್ಕಿ ಚೆಲ್ಲಿ ಹರಿದು ಹೋಗುವುದರಿಂದ ಈ ಋಕ್ಕುಗಳಿಗೆ ಅತಿಚ್ಛಂದಸ ಎಂದರೆ ಅತಿಶಯವಾಗಿ ಹರಿದುಹೋಗುವ (ಅಧಿಕವಾದ, ಅಕ್ಷರ ಸಂಖ್ಯೆಯಿರುವುದರಿಂದ ಈ ಋಕ್ಕುಗಳಿಗೆ ಅತಿಚ್ಛಂದಸ್ತ್ವ ಎಂದು ಹೆಸರಾಯಿತು ಈ ಷೋಳಶಿಯಲ್ಲಿ ಸಮಸ್ತವಿಧವಾದ ಛಂದಸ್ಸುಗಳೂ ಇರುವವು. ಆದ್ದರಿಂದ ಹೋತೃವು ಸಮಸ್ತವಿಧ ಛಂದಸ್ಸುಗಳನ್ನೂ ಪಠಿಸಿ ಯಜಮಾನನನ್ನು ಸರ್ವಛಂದೋಮಯನನ್ನಾಗಿ ಮಾಡುವನು. ಈ ವಿಷಯಗಳೆಲ್ಲವನ್ನೂ ತಿಳಿದಿರುವ ಪುರುಷನು **ಷೋಳಶಿ** ಯಜ್ಞದ ಫಲವನ್ನೇ ಪಡೆದು ಸುಖಿಸುವನು.

*English Translation*

**(The way in which the padas of two different metres are mixed in the Sholasi Shastra is shown)**

Then when they use the Gauriviti Saman the Hotar changes the natural position of the several padas of two different metres, and mixes them (vyatishajati). He mixes thus Gayatris and Panktis, a tva vahantu (1, 16, 1-3) and upa shu srinuhi (1, 82, 1-3-4). Man has the nature of the Gayatri and cattle that of the Pankti. By thus mixing together Gayatri and Pankti verses the Hotar mixes man among cattle and give him a firm footing among them (in order to become possessed of them).

As regards the Gayatri and Pankti, they both form two Anushtubhs for they contain as many padas, viz., eight, as both Gayatri and Pankti taken together). By this means the sacrificer becomes neither separated from the nature of Speech which exists in the form of the Anushtubh, nor from the nature of a weapon (speech being regarded as such a one).

He mixes verses in the Ushnih and Brihati metres, yad indra pritanajye (8, 12, 25-27) and ayam te astu karyata (3, 44, 1-3). Man has the nature of Ushnih, and cattle that of Brihati. (By thus mixing together Ushnih and Brihati verses) he mixes man among cattle and gives him a firm footing among them.

As regards the Ushnih and Brihati, they both form two Anushtubhs. By this means the sacrificer becomes neither separated, & c.

He mixes a Dvipad (verse of two padas only) and a Trishtubh, a dhurshv asmai (7, 34, 4) and brahman viva (7, 29, 2). Man is dvipad, i.e. has two feet and strength is Trishtubh. (By thus mixing a Dvipad and Trishtubh), he mixes man with Strength (provides him with it) and makes him a footing in it. That is the reason that man, as having prepared for him a footing in Strength, is the strongest of all animals. The Dvipad verse consisting of twenty syllables, and the Trishtubh (of forty-four), make two Anushtubhs (sixty-four syllables). By this means the sacrificer becomes neither separated & c.

He mixes Dvipadas and Jagatis, viz., esha bruhma ya ritvyam (asv. Sr. S. 5, 2) and pra te mahe (10-96, 1-3). Man is Dvipad, and animals have the nature of the Jagati. (By thus mixing Dvipad and Jagati verses) he mixes man among cattle, and makes him a footing among them. That is the reason, that man having obtained a footing among cattle eats them and rules over them, for they are at his disposal.

As regards the Dvipad verse consisting of sixteen syllables and the Jagati consisting of forty-eight they both taken together contain two Anushtubhs. By this means the sacrificer & c.

He repeats verses in metres exceeding the number of padas of the principal metres, viz., trikadrukeshu mahisho (2, 22, 1-3) and proshvasmai puro ratham (10, 133, 1-3). The juice which was flowing from the metres, took its course to the atichhandas. Thence such metres are called atichhandas, (i.e. beyond the metre, what has gone beyond, is in excess).

This Sholasi Shastra being formed out of all metres, he repeats verses in the Atichhandas metre.

Thus the Hotar makes the spiritual body of the sacrificer consist of all metres.

He who has such a knowledge prospers by means of the Sholasi consisting of all metres.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಷೋಡಶಾಧ್ಯಾಯಸ್ಯ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನಾರನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು
ಸಮಾಪ್ತವಾದುದು.

# ಅಥ ಷೋಡಶಾಧ್ಯಾಯೇ ಚತುರ್ಥಃ ಖಂಡಃ

## ಹದಿನಾರನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ಮಹಾನಮ್ನಿ ಎಂಬ ವ್ರತದಿಂದ ತೆಗೆದುಕೊಂಡ ಉಪಸರ್ಗಗಳು. ಸರಿಯಾದ ಅನುಷ್ಟುಪ್ ಮಂತ್ರಗಳನ್ನು ವಿಹೃತ ಮತ್ತು ಅವಿಹೃತ ವಿಂಬ ಕ್ರಮಗಳಲ್ಲಿ ಪಠಿಸುವುದರ ಪರಿಣಾಮವು-ಷೋಳಶಿ ಶಸ್ತ್ರಮಂತ್ರಗಳ ಯಾಜ್ಯಾಮಂತ್ರವು.]



### ಮಹಾನಾಮ್ನೀನಾಮುಪಸರ್ಗಾನುಪಸೃಜತಿ ।

ಅಥ ಪೂರ್ವೋಕ್ತಾನಾಂ ಅತಿಚ್ಛಂದಸಾಂ ಅನುಷ್ಟುಪ್ಸಂಪಾದನಾಯ ಮೇಲನಂ-ವಿಧತ್ತೇ—ವಿದಾ ಮಘವನ್ನಿತ್ಯಸ್ಮಿನ್ನನುವಾಕೇ ಪ್ರೋಕ್ತಾ ಋಚೋ ಮಹಾನಾಮ್ನ್ಯಸ್ತಾಸಾಂ ಸಂಬಂಧಿನ ಉಪಸರ್ಗಾಃ ಪಂಚವಿಧಾಃ ತೇ ಚಾಽಽಶ್ವಲಾಯನೇನ ದರ್ಶಿತಾಃ –' ಪ್ರಚೇತನ ಪ್ರಚೇತಯಾಽಽಯಾಹಿ ಪಿಬ ಮತ್ಸ್ವ । ಕ್ರತುಶ್ಛಂದ ಋತಂ ಬೃಹತ್ಸುಮ್ನ ಆಧೇಹಿ ನೋ ವಸ-ವಿತ್ಯನುಷ್ಟುಪ್" ಇತಿ ॥ ತತ್ರ ಪ್ರಚೇತನೇತ್ಯೇಕಃ ಪ್ರಥಮ ಉಪಸರ್ಗಃ ಪ್ರಚೇತ ಯೇತಿ ದ್ವಿತೀಯಸ್ತಾವುಭಾವಪಿ ದ್ವಿತೀಯಸ್ಯಾಂ ಮಹಾನಾಮ್ನ್ಯಾಮಾಮ್ನಾತೌ ॥ ಆಯಾಹಿ ಪಿಬ ಮತ್ಸ್ವೇತಿ ತೃತೀಯಮ ಉಪಸರ್ಗಸ್ತೃತೀಯಸ್ಯಾಂ ಮಹಾನಾಮ್ನ್ಯಾಮಾಮ್ನಾತಃ ॥ ಋತು-ಶ್ಛಂದ ಋತಂ ಬೃಹದಿತ್ಯಯಂ ಚತುರ್ಥ ಉಪಸರ್ಗಃ ಸ ಚ ಷಷ್ಠ್ಯಾಂ ಮಹಾನಾಮ್ನ್ಯಾಮಾ-ಮ್ನಾತಃ ॥ ಸುಮ್ನ ಆಧೇಹಿ ನೋ ವಸವಿತಿ ಪಂಚಮ ಉಪಸರ್ಗಃ ಸ ಚಾಷ್ಟಮ್ಯಾಂ ಮಹಾ-ನಾಮ್ನ್ಯಾಮಾಮ್ನಾತಃ ॥ ಏತೇಷು ಪಂಚಸೂಪಸರ್ಗೇಷು ಮಿಲಿತ್ವಾ ದ್ವಾತ್ರಿಂಶದಕ್ಷರಸದ್ಭಾವಾ ದಿಯಮೇಕಾಽನುಷ್ಟುಬಿತಿ ಸೂತ್ರಸ್ಯಾರ್ಥಃ ॥ ಇಯಂ ಚಾನುಷ್ಟುಬವಿಹೃತಷೋಳಶಿನಿ ತಯ್ಯೈ-(ಥೈ)ವ ಪಠನೀಯಾ । ಅನ್ಯತ್ರತು ವಿಹೃತಷೋಳಶಿನಿ ಪಂಚಾಪ್ಯುಪಸರ್ಗಾನ್ವಿಭಜ್ಯ ಅತಿಚ್ಛಂದಃ-ಸು ಪಂಚಸು ಯೋಜನೀಯಾ ॥ ಅತ ಏವೋಪಸೃಜ್ಯಮಾನತ್ವಾದುಪಸರ್ಗಾ ಇತ್ಯುಚ್ಯಂತೇ ॥ ತದೇತತ್ಸಂಯೋಜನಮತ್ರೋಪಸೃಜತೀತಿ ಶಬ್ದೇನ ವಿಧೀಯತೇ ॥ ತ್ರಿಕದ್ರುಕೇಷ್ವಿತಿ ಯೇಯಂ ಪ್ರಥಮಾಽತಿಚ್ಛಂದಾಸ್ತಸ್ಯಾಶ್ಚತುಃಷಷ್ಟ್ಯಕ್ಷರತ್ವಾನ್ನ ಪರಾಣ್ಯಪೇಕ್ಷ್ಯಕೇ ಸೇಯ-ಮನುಷ್ಟುಬ್ದ್ವಯಸಂಪತ್ತಿಃ ಶಕ್ಯೇತಿ ॥ ದ್ವಿತೀಯಸ್ಯಾಮೃಚಿ ತದನುಷ್ಟುಬ್ದ್ವಯಂ ಪೂರ-ಯಿತುಂ ಪ್ರಚೇತನೇತ್ಯಕ್ಷರಚತುಷ್ಟಯಂ ಯೋಜನೀಯಂ ॥ ತೃತೀಯಸ್ಯಾಮೃಚಿ ಪ್ರಚೇತ-ಯೇತಿ ಯೋಜನೀಯಂ ॥ ಪ್ರೋಷ್ವಸ್ಮಾ ಇತ್ಯಾದಿಷು ತಿಸೃಷ್ವವಶಿಷ್ಟಾಸ್ತ್ರಯ ಉಪಸರ್ಗಾಃ ಕ್ರಮೇಣ ಯೋಜನೀಯಾಃ ॥ ಸೋಽಯಂ ಪ್ರಕಾರ ಆಶ್ವಲಾಯನೇನೋಕ್ತಃ – ' ಸಾಽನು-

**ಷ್ಟುಭಮತಿಚ್ಛಂದಃ ಸ್ವವದಧ್ಯಾದ್ದ್ವಿತೀಯತೃತೀಯಯೋಃ ಪಾದಯೋರವಸಾನಕ ಉಪದ-ಧ್ಯಾತ್ಪ್ರಚೇತನೇತಿ ಪೂರ್ವಸ್ಯಾಂ ಪ್ರಚೇತಯೇತ್ಯುತ್ತರಸ್ಯಾಂ ಉತ್ತರಾಸ್ವಿತರಾನ್ಪಾದಾನ್ಪ-ಷ್ಯಾನ್ಕೃತ್ವಾಽನುಷ್ಟುಪ್ಕಾರಂ ಶಂಸೇದಿತಿ ॥**

ಹಿಂದೆ ಹೇಳಿದ ಅತಿಛಂದಸ ಎಂಬ ಅಧಿಕಾಕ್ಷರ ಸಂಖ್ಯೆಯ ಋಕ್ಕುಗಳ ಮೇಲನಪ್ರಕಾರವನ್ನು ವಿವರಿಸುವರು. **ವಿದಾ ಮಘವನ್** ಎಂಬ ಅನುವಾಕದಲ್ಲಿ ಹೇಳಲ್ಪಟ್ಟ ಋಕ್ಕುಗಳಿಗೆ ಮಹಾನಾಮ್ನೀ ಋಕ್ಕುಗಳೆಂದು ಹೆಸರು. ಇವುಗಳಿಗೆ ಸಂಬಂಧಿಸಿದ ಎಂದರೆ ಈ ಋಕ್ಕುಗಳಿಂದ ಆರಿಸಿ ತೆಗೆದುಕೊಂಡ ಋಕ್ಕುಗಳಿಗೆ ಉಪಸರ್ಗವೆಂದು ಹೆಸರು. ಇವು ಐದು ವಿಧಗಳಾಗಿರುವವು. ಈ ವಿಷಯದಲ್ಲಿ ಆಶ್ವಲಾಯನರು ಹೀಗೆ ಹೇಳಿರುವರು— **ಪ್ರಚೇತನ ಪ್ರಚೇತಯಾಽಽಯಾಹಿ ಪಿಬ ಮತ್ಸ್ವ । ಕ್ರತು-ಶ್ಛಂದ ಋತಂ ಬೃಹತ್ಸುಮ್ನ ಆಧೇಹಿ ನೋ ವಸವಿತ್ಯನುಷ್ಟುಪ್** ಎಂದು. ಇಲ್ಲಿ **ಪ್ರಚೇತನ** ಎಂಬುವುದು ಮೊದಲನೆಯ ಉಪಸರ್ಗವು. **ಪ್ರಚೇತಯ** ಎಂಬುವುದು ಎರಡನೆಯದು. ಇವೆರಡೂ ಮಹಾನಾಮ್ನೀ ಮಂತ್ರಗಳಲ್ಲಿ ಹೇಳಲ್ಪಟ್ಟಿರುವುದು. ಆಯಾಹಿ ಪಿಬ ಮತ್ಸ್ವ ಎಂಡುದು ಮೂರನೆಯ ಮಹಾನಾಮ್ನಿಯಲ್ಲಿ ಹೇಳಲಾಗಿರುವುದು. **ಕ್ರತು-ಶ್ಛಂದ ಋತಂ** ಬೃಹತ್ ಎಂಬುದು ನಾಲ್ಕನೆಯ ಉಪಸರ್ಗವು. ಇದು ಆರನೆಯ ಮಹಾನಾಮ್ನಿಯಲ್ಲಿರುವುದು. **ಸುಮ್ನ ಆಧೇಹಿ ನೋ ವಸೋ** ಎಂಬುದುದು ಐದನೆಯ ಉಪಸರ್ಗವು. ಇದು ಎಂಟನೆಯ ಮಹಾನಾಮ್ನಿಯಲ್ಲಿ ಹೇಳಲ್ಪಟ್ಟಿರುವುದು. ಈ ಐದು ಉಪಸರ್ಗಗಳನ್ನು ಮೇಲನಮಾಡಿದರೆ ಅದರಿಂದ ಮುವತ್ತೆರಡು ಅಕ್ಷರಗಳುಂಟಾಗಿ ಅನುಷ್ಟುಪ್ ಛಂದಸ್ಸಾಗುವುದು. ಇದು (ಅನುಷ್ಟುಪ್) ಅವಿಹೃತಷೋಳಶಿನಿ ಎಂದು ಪರಿಗಣಿಸಲ್ಪಟ್ಟು ಆ ಕ್ರಮದಂತೆ ಪಠಿಸಲ್ಪಡುವುದು ಇತರ ಸ್ಥಳಗಳಲ್ಲಿ ಈ ಐದು ಉಪಸರ್ಗಗಳೂ ವಿಭಾಗಿಸಲ್ಪಟ್ಟು ವಿಹೃತ ಷೋಳಶಿಯಂತೆ ಉಪಯೋಗಿಸಲ್ಪಡುವವು. ಈ ರೀತಿ ರಚಿಸಲ್ಪಡುವುದರಿಂದ ಈ ಮಂತ್ರಗಳಿಗೆ ಉಪಸರ್ಗವೆಂಬ ಹೆಸರು ಬಂದಿರುವುದು. ತ್ರಿಕದ್ರುಕೇಷು ಎಂಬ ಮೊದಲನೆಯ ಅತಿಛಂದಸ್ಕವಾದ ಋಕ್ಕಿನಲ್ಲಿ ಅರವತ್ತನಾಲ್ಕು ಅಕ್ಷರಗಳಿರುವುದರಿಂದ ಈ ಋಕ್ಕಿಗೆ ಬೇರೆ ಋಕ್ಕಿನ ಮೇಲನ ಸಹಾಯವು ಬೇಕಾಗಿರುವುದಿಲ್ಲ. ಈ ಅರವತ್ತು ನಾಲ್ಕು ಅಕ್ಷರಗಳಿಂದ ಅನುಷ್ಟುಪ್ ಛಂದಸ್ಸಿನ ಎರಡು ಮಂತ್ರಗಳಾಗುವವು. ಎರಡನೆಯ ಋಕ್ಕಿನಲ್ಲಿ ಅರವತ್ತುನಾಲ್ಕು ಅಕ್ಷರ ಗಳನ್ನು ಪೂರ್ತಿಮಾಡುವುದಕ್ಕಾಗಿ ಪ್ರಚೇತನ ಎಂಬ ನಾಲ್ಕು ಅಕ್ಷರಗಳನ್ನು ಸೇರಿಸಬೇಕಾಗುವುದು. ಇದರಿಂದ ಎರಡು ಅನುಷ್ಟುಪ್ ಛಂದಸ್ಸುಗಳಾವವು. ಇದರಂತೆಯೇ ಮೂರನೆಯ ಋಕ್ಕಿನಲ್ಲಿಯೂ **ಪ್ರಚೇತಯಾ** ಎಂಬ ನಾಲ್ಕು ಅಕ್ಷರಗಳೆನ್ನು ಸೇರಿಸಬೇಕು. **ಪ್ರೋಸ್ವಸ್ಮೈ** ಎಂದು ಮೊದಲಾದ ಮೂರು ಋಕ್ಕುಗಳಲ್ಲಿ ಉಳಿದ ಉಪಸರ್ಗಗಳನ್ನು ಕ್ರಮವಾಗಿ ಸೇರಿಸ ಬೇಕು. ಆಶ್ವಲಾಯನರು ಹೀಗೆ ಹೇಳಿರುವರು– **ಸಾಽನುಷ್ಟುಭಮತಿಛಂದಃಸ್ವವದಧ್ಯಾದ್ದ್ವಿತೀಯತೃತೀಯಯೋಃ ಪಾದಯೋರವಸಾನತ ಉಪದಧ್ಯಾತ್ಪ್ರಚೇತನೇತಿ ಪೂರ್ವಸ್ಯಾಂ ಪ್ರಚೇತಯೇತ್ಯುತ್ತರಸ್ಯಾಮುತ್ತರಾಸ್ವಿತ-ರಾನ್ಪಾದಾನ್ಪಷ್ಯಾನ್ಕೃತ್ವಾಽನುಷುಷ್ಟುಪ್ಕಾರಂ** ಶಂಸೇತ್ ಎಂದು.

**ಅಯಂ ವೈ ಲೋಕಃ ಪ್ರಥಮಾ ಮಹಾನಾಮ್ನ್ಯಂತರಿಕ್ಷಲೋಕೋ ದ್ವಿತೀಯಾಸೌ ಲೋಕಸ್ತೃತೀಯಾ ಸರ್ವೇಭ್ಯೋ ವಾ ಏಷ ಲೋಕೇಭ್ಯಃ ಸಂನಿರ್ಮಿತೋ ಯತ್ಷೋಳಶೀ ತದ್ಯನ್ಮಹಾನಾ-ಮ್ನೀನಾಮುಪಸರ್ಗಾನುಪಸೃಜತಿ ಸರ್ವೇಭ್ಯ ಏವೈನಂ ತಲ್ಲೋ-ಕೇಭ್ಯಃ ಸಂನಿರ್ಮಿಮೀತೇ ॥**

ಅಥ ಮಹಾನಾಮ್ನೀಃ ಪ್ರಶಂಸತಿ—ಪ್ರಥಮತ್ವಾದಿಸಾಮ್ಯೇನ ಲೋಕತ್ರಯರೂಪತ್ವ-ಮೃಚಾಂ ದ್ರಷ್ಟವ್ಯಂ ಷೋಡಶಿನೋ ಲೋಕತ್ರಯನಿರ್ಮಿತತ್ವಾತ್ ॥ ಮಹಾನಾಮ್ನೀನಾ-ಮುಪಸರ್ಗೈಃ ಸಂಯೋಜನೇ ಸತಿ ತನ್ನಿರ್ಮಾಣಂ ಸಿಧ್ಯತಿ ॥

ಮಹಾನಾಮ್ನೀ ಮಂತ್ರಗಳನ್ನು ಪ್ರಶಂಸೆಮಾಡುವರು—ಮಹಾನಾಮ್ನೀ ಮಂತ್ರಗಳ ಕೆಲವು ಭಾಗಗಳಿಗೆ ಉಪಸರ್ಗಗಳನ್ನು ಸೇರಿಸುವುದರಿಂದ ಆಗುವ ರಚನೆಯು ಈ ರೀತಿ ಇರುವುದು. ಮೊದಲನೆಯದು ಈ ಲೋಕವು. ಎರಡನೆಯದು ಅಂತರಿಕ್ಷಲೋಕವು. ಮೂರನೆಯದು ಸ್ವರ್ಗಲೋಕವು. ಆದ್ದರಿಂದ ಈ ಷೋಳಶಿಯು ಮೂರು ಲೋಕಗಳ ಸ್ವರೂಪವಾಗಿರುವುದು. ಆದ್ದರಿಂದ ಮಹಾನಾಮ್ನೀಮಂತ್ರಗಳೊಡನೆ ಉಪಸರ್ಗಗಳನ್ನು ಸೇರಿಸುವುದರಿಂದ ಈ ಮೂರು ಲೋಕಗಳನ್ನು ನಿರ್ಮಿಸಿದಂತಾಗುವುದು.

ಸರ್ವೇಭ್ಯೋ ಲೋಕೇಭ್ಯಃ ಸಂನಿರ್ಮಿತೇನ ಷೋಳಶಿನಾ ರಾಧ್ನೋತಿ ಯ ಏವಂ ವೇದ ॥ ಪ್ರಪ್ರವಸ್ತ್ರಿಷ್ಟುಭಮಿಷಮರ್ಚತ ಪ್ರಾರ್ಚತ ಯೋ ವ್ಯತೀಀಁರ ಫಾಣಯದಿತಿ ಪ್ರಜ್ಞಾತಾ ಅನುಷ್ಟುಭಃ ಶಂಸತಿ ತದ್ಯಥೇಹ ಚೇಹ ಚಾಪಥೇನ ಚರಿತ್ವಾ ಪಂಥಾನಂ ಪರ್ಯವೇ-ಯಾತ್ತಾದೃಕ್ತದ್ಯತ್ಪ್ರಜ್ಞಾತಾ ಅನುಷ್ಟುಭಃ ಶಂಸತಿ ॥

ವೇದನಂ ಪ್ರಶಂಸತಿ—ಅಥ ವಿಹರಣನೈರಪೇಕ್ಷ್ಯೇಣಾಧ್ಯಾಪಕ್ಯೈಃ ಪ್ರಜ್ಞಾತಾ ನವಾನು-ಷ್ಟುಭೋ ವಿಧತ್ತೇ—ಪ್ರಪ್ರವ ಇತ್ಯೇಕಸ್ತೃಚಃ ಪ್ರಥಮೋಽರ್ಚತೇತಿ ದ್ವಿತೀಯೋ ಯೋ ವ್ಯತೀನಿತಿ ತೃತೀಯಃ । ಯಥಾ ಲೋಕೇ ಕಶ್ಚಿನ್ಮಾರ್ಗಾನಭಿಜ್ಞಸ್ತತ್ರ ಕೇನಚಿದಪಥೇನ ಚರಿತ್ವಾ ಪಶ್ಚಾದನ್ಯಮುಖೇನ ವಿಜ್ಞಾಯ ಸಮೀಚಿನಂ ಪಂಥಾನಂ ಪರಿಗಚ್ಛೇದೇವಮತ್ರಾಪಿ ಪೂರ್ವೋಕ್ತರೀತ್ಯಾ ಕೃತ್ರಿಮಾ ಅನುಷ್ಟುಭಃ ಶಸ್ತ್ವಾ ಪಶ್ಚಾದೇತಾಸಾಂ ಸ್ವತಃ ಸಿದ್ಧಾನಾ-ಮನುಷ್ಟುಭಾಂ ಶಂಸನಂ ದ್ರಷ್ಟವ್ಯಂ ॥

ಈ ವಿಷಯವನ್ನು ತಿಳಿದಿರುವ ಪುರುಷನೂ ಸಹ ಷೋಳಶಿನಿರ್ಮಿತಗಳಾದ ಸಮಸ್ತಲೋಕಗಳನ್ನೂ ಪಡೆದು ಅವುಗಳಲ್ಲಿ ಸುಖದಿಂದಿರುವನು. ವಿಹರಣಕ್ರಮವನ್ನನುಸರಿಸದೆ ಅಧ್ಯಯನಕ್ರಮವನ್ನು ಮಾತ್ರ ಅನುಸರಿಸುವವನು ಅನುಷ್ಟುಪ್ ಛಂದಸ್ಸನ್ನು ಹೇಗೆ ಪಡೆಯುವನೆಂಬ ವಿಷಯವನ್ನು ತಿಳಿಸುವರು. ಆ ಪುರುಷನು ಮೊದಲು **ಪ್ರಪ್ರವ** (ಋ.ಸಂ. ೮-೬೯-೧) ಎಂಬ ತೃಚದಿಂದ ಲಬ್ಧವಾದ ಅನುಷ್ಟುಪ್‌ಮಂತ್ರವನ್ನು ಪಠಿಸುವನು. ಅನಂತರ **ಅರ್ಚತ ಪ್ರಾರ್ಚತ** (ಋ. ಸಂ. ೮-೬೯-೮) ಎಂಬ ತೃಚದಿಂದ ಲಬ್ಧವಾದ ಅನುಷ್ಟುಪ್ ಮಂತ್ರವನ್ನೂ ಅನಂತರ **ಯೋ ವ್ಯತೀರಫಾಣಯತ್** (ಋ.ಸಂ. ೮-೭೦-೧೩, ೧೪, ೧೪, ೧೫) ಎಂಬ ತೃಚದಿಂದ ಲಬ್ಧವಾದ ಅನುಷ್ಟುಪ್ ಮಂತ್ರವನ್ನೂ ಪಠಿಸುವನು. ಇದರಿಂದ ಕೃತಕವಾದ ಅನುಷ್ಟುಪ್ ಛಂದಸ್ಸಿನ ಮಂತ್ರವಾದರೂ ಕೊನೆಗೆ ಸರಿಯಾದ ಮಂತ್ರವನ್ನೇ ಪಡೆಯುವನು. ಹೇಗೆಂದರೆ ಒಬ್ಬ ಪ್ರಯಾಣಿಕನು ಸಂಚರಿಸುತ್ತಿರುವಾಗ ಮಾರ್ಗವು ಗೊತ್ತಾಗದೆ ಎಲ್ಲೆಲ್ಲಿಯೋ ಸಂಚರಿಸುತ್ತಾ ಕೊನೆಗೆ ಇನ್ನೊಬ್ಬರಿಂದ ಸರಿಯಾದ ಮಾರ್ಗವನ್ನು ತಿಳಿದು ನಿಯಮಿತ ಸ್ಥಳಕ್ಕೆ ಹೋಗಿ ಸೇರುವಂತೆ ಸರಿಯಾದ ಅನುಷ್ಟುಪ್‌ಛಂದಸ್ಸನ್ನೂ ಪಡೆಯುವನು.

ಸ ಯೋ ವ್ಯಾಪ್ತೋ ಗತಶ್ರೀರಿವ ಮನ್ಯೇತಾವಿಹೃತಂ ಷೋಳಶಿನಂ ಶಂಸಯೇನ್ನೇಚ್ಛಂದಸಾಂ ಕೃಚ್ಛ್ರಾದವಪದ್ಯಾ ಇತ್ಯಥ ಯಃ ಪಾಪ್ಮಾನಮುಪಜಿಘಾಂಸುಃ ಸ್ಯಾದ್ವಿಹೃತಂ ಷೋಳಶಿನಂ ಶಂಸಯೇ-ದ್ವ್ಯತಿಷಕ್ತ ಇವ ವೈ ಪುರುಷಃ ಪಾಪ್ಮನಾ ವ್ಯತಿಷಕ್ತಮೇವಾಸ್ಮೈ ತತ್ಪಾಪ್ಮಾನಂ ಶಮಲಮುಪಹಂತಿ ಅಥ ಪಾಪ್ಮಾನಂ ಹತೇಯ ಏವಂ ವೇದ ।

ಪೂರ್ವತ್ರ ಸಾಮವಿಶೇಷಮುಪಜೀವ್ಯ ವಿಹೃತಾವಿಹೃತಯೋಃ ಶಸ್ತ್ರವಿಶೇಷಯೋ-ರ್ವ್ಯವಸ್ಥಾ ದರ್ಶಿತಾ ॥ ಇದಾನೀಂ ಪುರುಷವಿಶೇಷಮುಪಜೀವ್ಯತಾಂ ವ್ಯವಸ್ಥಾಂ ದರ್ಶಯತಿ ॥ ಸ ಲೋಕಪ್ರಸಿದ್ಧೋ ಯಃ ಪುರುಷಃ ಪುತ್ರಪೌತ್ರಾದಿಭಿರ್ವ್ಯಾಪ್ತಃ ಗತಶ್ರೀರಿವ ಪ್ರಾಪ್ತಶ್ರೀವ-ತ್ಸಮೃದ್ಧಧನ ಏವಾಹಮಿತಿ ಮನ್ಯೇತ ಸ ಪುಮಾನವಿಹೃತಂ ವಿಹರಣರಹಿತಂ ಷೋಳಶಿನಂ ಶಂಸಯೇತ್ ॥ ಅವಿಹೃತೇ ಶಸ್ತ್ರೇ ಹೋತಾರಂ ಪ್ರೇರಯೇತ್ ॥ ತಸ್ಯ ಕೋಽಭಿಪ್ರಾಯ ಇತಿ ಸ ಉಚ್ಯತೇ ॥ ಛಂದಸಾಂ ಕೃಚ್ಛ್ರಾತ್ಪೂರ್ವೋಕ್ತಾನಾಂ ಗಾಯತ್ರ್ಯಾದೀನಾಂ ವಿಹರಣ-ಕ್ಲೇಶಾವಪದ್ಯೈ, ಅವಪತ್ತಿಮಾಪದಂ ಪ್ರಾಪ್ನುಯಾಂ ತನ್ಮಾಭೂದಿತಿ ವಿಹರಣ ಪ್ರಯುಕ್ತಿ-ಭೀತಿದ್ಯೋತನಾರ್ಥೋ ನೇದಿತಿ ಶಬ್ದಃ । ಅಥ ಪುಮಾನ್ ಪುತ್ರಧನಸಂಪತ್ತಿರಹಿತ್ಯರೂಪಂ ಪಾಪ್ಮಾನ-ಮುಪಜಿಘಾಂಸುರಪಹಂತುಮಿಚ್ಛನ್ಸ್ಯಾತ್ಸ ಪುಮಾನ್ವಿಹೃತೇ ಶಸ್ತ್ರೇ ಹೋತಾರಂ ಪ್ರೇರಯೇತ್ ॥ ಅಯಂ ಪುರುಷೋ ದಾರಿದ್ರ್ಯಾದಿರೂಪೇಣ ಪಾಪ್ಮನಾ ವ್ಯತಿಷಿಕ್ತ ಇವ ವೈ ಮಿಶ್ರಿತ ಏವ ತಸ್ಮಾದ್ವಿಹೃತಪ್ರಯೋಗೇಣ ಪಾಪರೂಪಶಮಲಂ ಮಾಲಿನ್ಯಹೇತುವ್ಯತಿಷಿಕ್ತಂ ದಾರಿದ್ರ್ಯಾದಿ-ಸಂಬಂಧಮುಪಹಂತಿ ॥ ವೇದನಂ ಪ್ರಶಂಸತಿ—

ಇದುವರೆಗೆ ಸಾಮಮಂತ್ರಗಳಲ್ಲಿಯೂ ಶಸ್ತ್ರಮಂತ್ರಗಳಲ್ಲಿಯೂ ವಿಹೃತ ಮತ್ತು ಅವಿಹೃತಕ್ರಮಗಳನ್ನು ಮತ್ತು ಅವುಗಳನ್ನು ಪಠಿಸುವ ಕ್ರಮಗಳನ್ನೂ ವಿವರಿಸಿದ್ದಾಯಿತು. ಈಗ ಈ ಮಂತ್ರಗಳನ್ನು ಪಠಿಸುವ ಪುರುಷನು ಅನುಸರಿಸಬೇಕಾದ ವ್ಯವಸ್ಥೆಯನ್ನು ವಿವರಿಸುವರು. ಪ್ರಪಂಚದಲ್ಲಿ ಯಾವ ಪುರುಷನು ತನಗೆ ಪುತ್ರಪೌತ್ರಾದಿಸಂತತಿಯಿರುವುದೆಂದೂ ಧನ ಮೊದಲಾದ ಅಧಿಕವಾದ ಸಂಪತ್ತು ಇರುವುದೆಂದೂ ಎಲ್ಲ ವಿಷಯಗಳಲ್ಲಿಯೂ ತಾನು ಸಮೃದ್ಧನಾಗಿರುವನೆಂದೂ ತಿಳಿಯುವನೋ ಆ ಪುರುಷನು ತನಗೆ ಇನ್ನೇನೂ ಬೇಕಾಗಿಲ್ಲವೆಂದು ತಿಳಿದು ಅವಿಹೃತ ಎಂಬ ಷೋಳಶಿಶಸ್ತ್ರವನ್ನು ಪಠಿಸಬೇಕು. ಎಂದರೆ ಅವಿಹೃತಶಸ್ತ್ರಮಂತ್ರಗಳನ್ನು ಪಠಿಸುವಂತೆ ಹೋತೃವನ್ನು ಪ್ರೇರಿಸಬೇಕು. ಏಕೆಂದರೆ, ಗಾಯತ್ರ್ಯಾದಿಛಂದಸ್ಸುಗಳನ್ನು ವಿಹರಣ ಪ್ರಕಾರವಾಗಿ ಪಠಿಸುವಾಗ ಪ್ರಮಾದದಿಂದ ಕ್ಲೇಶಾದಿದುಃಖಗಳು ಉಂಟಾಗದಿರುವುದಕ್ಕಾಗಿ ಹಾಗೆ ಮಾಡಬೇಕು. ಆದರೆ ಧನಾದಿಸಂಪತ್ತಿಲ್ಲದ ಪುರುಷನು ಪಾಪ ಮೊದಲಾದ ದೋಷಗಳು ಉಂಟಾಗದಿರಬೇಕೆಂದು ಅಪೇಕ್ಷಿಸುವ ಪುರುಷನು ವಿಹೃತರೂಪವಾದ ಶಸ್ತ್ರಮಂತ್ರವನ್ನು ಪಠಿಸುವಂತೆ ಹೋತೃವನ್ನು ಪ್ರೇರಿಸಬೇಕು. ಹೀಗೆ ಮಾಡುವುದರಿಂದ ಈ ಪುರುಷನಿಗೆ ದಾರಿದ್ರ್ಯಾದಿ ದೋಷಗಳು ಮತ್ತು ಪಾಪಗಳು ನಿವಾರಣೆಯಾಗಿ ಈ ವಿಹೃತಶಸ್ತ್ರಪ್ರಯೋಗದಿಂದ ದಾರಿದ್ರ್ಯಮಾಲಿನ್ಯಾದಿದೋಷಗಳು ನಾಶವಾಗುವವು ಎಂದು ಮುಖ್ಯಾಭಿಪ್ರಾಯವು. ಈ ವಿಷಯಗಳನ್ನು ತಿಳಿದಿರುವ ಪುರುಷನು ಸಹ ದಾರಿದ್ರ್ಯಮಾಲಿನ್ಯಾದಿಗಳನ್ನು ಕಳೆದುಕೊಂಡು ಸುಖಿಸುವನು.

**ಉದ್ಯದ್ಬ್ರಧ್ನಸ್ಯ ವಿಷ್ಟಪಮಿತ್ಯುತ್ತಮಯಾ ಪರಿದಧಾತಿ ಸ್ವರ್ಗೋ ವೈ ಲೋಕೋ ಬ್ರಧ್ನಸ್ಯ ವಿಷ್ಟಪಂ ಸ್ವರ್ಗಮೇವ ತಲ್ಲೋಕಂ ಯಜಮಾನಂ ಗಮಯತಿ ॥**

ಅಥ ಶಸ್ತ್ರಸಮಾಪನೀಯಾಂ ಕಾಂಚಿದೃಚಂ ವಿಧತ್ತೇ ಅಸ್ಯಾಮೃಚಿ ಬ್ರಧ್ನಸ್ಯ ವಿಷ್ಟಪಮಿತಿ ಶ್ರೂಯತ ಆದಿತ್ಯೋ ಬ್ರಧ್ನಶಬ್ದವಾಚ್ಯೋಽಸಾವಾದಿತ್ಯೋ ಬ್ರಧ್ನ ಇತಿ ಶ್ರುತ್ಯಂತರಾತ್ ॥ ತಸ್ಯ ವಿಷ್ಟಪಂ ಸ್ಥಾನಂ ಸ್ವರ್ಗಲೋಕೋಽತಸ್ತತ್ಪಾಠೇನ ಯಜಮಾನಂ ಸ್ವರ್ಗಂ ಪ್ರಾಪಯತಿ ॥

ಈ ಶಸ್ತ್ರಮಂತ್ರದ ಕೊನೆಯ ಋಕ್ಕನ್ನು ಹೇಳುವರು—ಈ ಶಸ್ತ್ರಮಂತ್ರವನ್ನು **ಉದ್ಯದ್ಬ್ರಧ್ನಸ್ಯ ವಿಷ್ಟಪಂ** (ಋ.ಸಂ. ೮-೬೯-೭) ಎಂಬ ಋಕ್ಕನ್ನು ಪಠಿಸಿ ಮುಗಿಸಬೇಕು. ಈ ಋಕ್ಕಿನಲ್ಲಿ **ಬ್ರಧ್ನಸ್ಯ ವಿಷ್ಟಪಂ** ಎಂಬ ಶಬ್ದಗಳ ಪ್ರಯೋಗವಿದೆ. **ಬ್ರಧ್ನ** ಶಬ್ದಕ್ಕೆ ಆದಿತ್ಯನೆಂದು ಹೆಸರು. **ವಿಷ್ಟಪಂ** ಎಂದರೆ ಆ ಆದಿತ್ಯನ ಸ್ಥಾನವು ಎಂದರೆ ಸ್ವರ್ಗಲೋಕವು. ಆದ್ದರಿಂದ ಯಜಮಾನನಿಗೆ ಸ್ವರ್ಗಲೋಕವು ಪ್ರಾಪ್ತವಾಗುವುದೆಂದಭಿಪ್ರಾಯವು.

**ಅಪಾಃ ಪೂರ್ವೇಷಾಂ ಹರಿವಃ ಸುತಾನಾಮಿತಿ ಯಜತಿ । ಸರ್ವೇಭ್ಯೋ ವಾ ಏಷ ಸವನೇಭ್ಯಃ ಸಂನಿರ್ಮಿತೋ ಯತ್ಷೋಳಶೀ ತದ್ಯದಪಾಃ ಪೂರ್ವೇಷಾಂ ಹರಿವಃ ಸುತಾನಾಮಿತಿ ಯಜತಿ ಪೀತವದ್ವೈ ಪ್ರಾತಸ್ಸವನಂ ಪ್ರಾತಸ್ಸವನಾದೇವೈನಂ ತತ್ಸಂ ನಿರ್ಮಿಮೀತೇ ॥**

**ಶಸ್ತ್ರಯಾಜ್ಯಾಂ ವಿಧತ್ತೇ—ಹೇ ಹರಿವೋ ಹೇ ಇಂದ್ರ ಷೋಳಶಿನಃ ಪೂರ್ವೇಷಾಂ ಸುತಾನಾಂ ಸೋಮಾನಾಂ ರಸಮಿತಿಶೇಷಃ ॥ ಅಪಾಃ ಪೀತವಾನಸೀತಿ ಪ್ರಥಮಪಾದಸ್ಯಾರ್ಥಃ॥ ತಮಿಮಂ ಪಾದಂ ಪ್ರಶಂಸತಿ । ಯಃ ಷೋಳಶೀ ವಿದ್ಯತೇ ಏಷ ಸರ್ವೇಭ್ಯಃ ಸವನೇಭ್ಯಃ ಸಮ್ಯಙ್ನಿರ್ಮಿತ ಇತ್ಯೇವಂ ಸಂಪಾದನೀಯಂ ॥ ತಥಾ ಸತಿ ಯದ್ಯದಪಾಃ ಪೂರ್ವೇಷಾಮಿತಿ ಪಾದಂ ಪಠೇತ್ ॥ ತದಾನೀಂ ತತ್ರ ಪ್ರಾತಃ ಸವನಂ ಪೀತವದಿಂದ್ರೇಣ ಪೀತಸೋಮೇತ್ಯ-ಯಮರ್ಥಃ ಪ್ರತೀಯತೇ ತಸ್ಮಾದೇನಂ ಷೋಡಶಿನಂ ಪ್ರಾತಃಸವನಂ ನಿರ್ಮಿತತ್ವಾದ್ಭವತಿ ॥**

ಈ ಶಸ್ತ್ರಮಂತ್ರಗಳ ಯಾಜ್ಯಾಮಂತ್ರವನ್ನು ವಿವರಿಸುವರು. **ಅಪಾಃಪೂರ್ವೇಷಾಂ ಹರಿವಃಸುತಾನಾಂ** (ಋ. ಸಂ. ೧೦-೯೬-೧೩) ಎಂಬ ಋಕ್ಕು ಈ ಶಸ್ತ್ರಮಂತ್ರಗಳ ಯಾಜ್ಯಾಮಂತ್ರವು. **ಹೇ ಹರಿವಃ**—ಎಲೈ ಇಂದ್ರನೇ **ಪೂರ್ವೇಷಾಂ ಸುತಾನಾಂ** ಈ ಷೋಳಶಿ ಎಂಬ ಯಜ್ಞದಲ್ಲಿ ಹಿಂಡಿಸಿದ್ಧಪಡಿಸಲ್ಪಟ್ಟ ಸೋಮರಸವನ್ನು **ಅಪಾಃ**-ನೀನು ಪಾನಮಾಡಿರುವೆ. ಎಂದು ಪ್ರಥಮ ಪಾದದ ಅರ್ಥವು. **ಸರ್ವೇಭ್ಯೋ ವಾ ಏಷ ಸವನೇಭ್ಯಃ** ಎಲ್ಲ ಸವನಗಳಿಂದ ಎಂದರೆ ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯಸವನ ಎಂಬ ಮೂರು ಸವನಗಳಲ್ಲಿಯೂ **ಸಂನಿರ್ಮಿತಃ** ಹಿಂಡಿಸಿದ್ಧಪಡಿಸಲ್ಪಟ್ಟ **ಯತ್ಷೋಳಶೀ**— ಈ ಷೋಳಶೀಸಂಬಂಧವಾದ ಯಾವ ಸೋಮರಸವುಂಟೋ **ತದ್ಯತ್**—ಆ ಸೋಮರಸವನ್ನು

**ಅಪಾಃ ಪೂರ್ವೇಷಾಂ ಹರಿವಃ ಸುತಾನಾಂ**—ಎಲೈ ಇಂದ್ರನೇ ನೀನು ಮೊದಲೇ ಪಾನಮಾಡಿದ್ದೀಯೆ **ಇತಿ ಯಜತಿ**—ಹೀಗೆ ಹೇಳಿ ಹೋಮಮಾಡುವರು. ಇಲ್ಲಿ ಮೊದಲೇ ಎಂದು ಹೇಳಿರುವುದರಿಂದ ಈ ವಿಷಯವು ಪ್ರಾತಸ್ಸವನಕಾಲದಲ್ಲಿ ಇಂದ್ರನು ಸೋಮಪಾನಮಾಡಿದ ವಿಷಯವನ್ನು ಸೂಚಿಸುವುದು. ಇದು ಮೊದಲನೆಯ ಪಾದದ ಅರ್ಥವು.

ಅಥೋ ಇದಂ ಸವನಂ ಕೇವಲಂ ತ ಇತಿ ಮಾಧ್ಯಂದಿನಂ ವೈ ಸವನಂ ಕೇವಲಂ ಮಾಧ್ಯಂದಿನಾದೇವೈನಂ ತತ್ಸವನಾತ್ಸಂನಿರ್ಮಿಮೀತೇ ॥

ತಸ್ಯಾ ಋಚೋ ದ್ವಿತೀಯಪಾದಮನೂದ್ಯ ವ್ಯಾಚಷ್ಟೇ—ಅಥೋ ಅಪಿ ಚ ಹೇ, ಇಂದ್ರೇದಂ ಮಾಧ್ಯಂದಿನಂ ಸವನಂ ತೇ ಕೇವಲಂ ತವೈವ ಸರ್ವಂ ಅಸ್ಮಿನ್ಪಾದೇ ಕೇವಲಂ ಸವನಮಪೀಂದ್ರಸ್ಯೇತ್ಯೇತದನುಪಪನ್ನಂ । ಇಂದ್ರೇಣ ಪುರೋ ದ್ವಾರಂ ವ್ಯಣ್ವತಾ ಮಾಹೇಂದ್ರಂ ಗ್ರಹಂ ಮಾಧ್ಯಂದಿನಂ ಸವನಾನಾಂ ನಿಷ್ಕೇವಲ್ಯಾದೀನಾಂ ಸ್ವಾರ್ಥಮೇವ ಕೃತತ್ವಾತ್ ॥ ಅತ ಏತತ್ಪಾದಪಾಠೇನ ಮಾಧ್ಯಂದಿನ ಸವನಾತ್ ಷೋಡಶೀ ನಿರ್ಮಿತೋ ಭವತಿ ॥

ಈ ಋಕ್ಕಿನ ಎರಡನೇ ಪಾದವನ್ನು ವಿವರಿಸುವರು. ಎಲೈ ಇಂದ್ರನೇ, ಈ ಮಾಧ್ಯಂದಿನಸವನದಲ್ಲಿ ಸಿದ್ಧಪಡಿಸಲ್ಪಟ್ಟ ಈ ಸೋಮರಸವು ನಿನಗೆ ಮಾತ್ರನೇ ಆಗಿದೆ. ಇದು ಮಾಹೇಂದ್ರಗ್ರಹಕ್ಕೆ ಸಂಬಂಧಪಟ್ಟಿರುವುದರಿಂದ ನಿಷ್ಕೇವಲ್ಯಶಸ್ತ್ರದ ಪ್ರಕಾರ ಮಾಹೇಂದ್ರನನ್ನು ಉದ್ದೇಶಿಸಿ ಸಿದ್ಧಪಡಿಸಲಾಗಿದೆ. ಆದ್ದರಿಂದ ಈ ವಿಷಯವು ಷೋಳಶಿಯಲ್ಲಿ ಮಾಧ್ಯಂದಿನಸವನದ ವಿಷಯವನ್ನು ಸೂಚಿಸುವುದು.

ಮಮದ್ಧಿ ಸೋಮಂ ಮಧುಮಂತಮಿಂದ್ರೇತಿ ಮದ್ವದ್ವೈ ತೃತೀಯ-ಸವನಂ ತೃತೀಯಸವನಾದೇವೈನಂ ತತ್ಸಂನಿರ್ಮಿಮೀತೇ ॥

ತೃತೀಯಪಾದಮನೂದ್ಯ ವ್ಯಾಚಷ್ಟೇ - ಹೇ ಇಂದ್ರ ಮಧುಮಂತಂ ಮಾಧುರ್ಯ-ರಸೋಪೇತಂ ಸೋಮಂ ಪೀತ್ವಾ ಮಮದ್ಧಿ ಮದಂ ಹರ್ಷಂ ಪ್ರಾಪ್ನುಹಿ । ಅಸ್ಮಿನ್ಪಾದೇ ಮದಿ-ಧಾತ್ವರ್ಥಃ ಶ್ರೂಯತೇ । ತೃತೀಯಸವನಮಪಿ ಮದ್ವದ್ವೈ ಮದಿಧಾತೂಪೇತಂ ನಿವಿತ್ಪದೇಷು ಮದಿಧಾತೋರ್ವಿದ್ಯಮಾನತ್ವಾತ್ ॥ ತಸ್ಮಾದೇತತ್ಪಾದಪಾಠೇನ ಷೋಡಶೀ ತೃತೀಯಸವನಾ-ನ್ನಿರ್ಮಿತೋ ಭವತಿ ॥

ಈ ಋಕ್ಕಿನ ತೃತೀಯಪಾದವನ್ನು ವಿವರಿಸುವರು. **ಮಮದ್ಧಿ ಸೋಮಂ ಮಧುಮಂತಮಿಂದ್ರ** ಎಂಬುದು ಈ ಋಕ್ಕಿನ ಮೂರನೇ ಪಾದವು. ಎಲೈ ಇಂದ್ರನೇ ಮಾಧುರ್ಯರಸದಿಂದ ಕೂಡಿದ ಈ ಸೋಮರಸವನ್ನು ಪಾನಮಾಡಿ ಮದಂ ಎಂದರೆ ಹರ್ಷವನ್ನು ಹೊಂದು ಎಂದು ಅರ್ಥವು. ಈ ಪಾದದಲ್ಲಿ ಮದಶಬ್ದವು ಇರುವುದು. ಇದು ತೃತೀಯಸವನದಲ್ಲಿ ಸೋಮರಸಪಾನದಿಂದ ಮದವನ್ನು ಅಥವಾ ಹರ್ಷವನ್ನು ಇಂದ್ರನು ಪಡೆಯುವ ವಿಷಯವನ್ನು ಸೂಚಿಸುವುದು ಮತ್ತು ಈ ಮಂತ್ರದಲ್ಲಿ ಸೇರಿಸುವ ನಿವಿತ್ಪದವೂ ಸಹ ಮದಿ ಧಾತುವಿನಿಂದ ನಿಷ್ಪನ್ನವಾದ ಪದವನ್ನು ಒಳಗೊಂಡಿರುವುದು. ಆದ್ದರಿಂದ ಈ ಮೂರನೇ ಪಾದ ಪಠನದಿಂದ ತೃತೀಯಸವನದ ಅರ್ಥವು ಇಲ್ಲಿ ಪ್ರತಿಪಾದಿಸಲ್ಪಟ್ಟಿರುವುದು.

**ಸತ್ರಾನ್ವೃಷನ್ ಜಠರ ಆವೃಷಸ್ವೇತಿ ವೃಷಣ್ವದ್ವೈ ಷೋಳಶಿನೋ ರೂಪಂ ಸರ್ವೇಭ್ಯೋ ವಾ ಏಷ ಸವನೇಭ್ಯಃ ಸಂನಿರ್ಮಿತೋ ಯತ್ಷೋಳಶೀ ತದ್ಯದಪಾಃ ಪೂರ್ವೇಷಾಂ ಹರಿವಃ ಸುತಾನಾಮಿತಿ ಯಜತಿ ಸರ್ವೇಭ್ಯ ಏವೈನಂ ತತ್ಸವನೇಭ್ಯಃ ಸಂನಿರ್ಮಿಮೀತೇ ಸರ್ವೇಭ್ಯಃ ಸವನೇಭ್ಯಃ ಸಂನಿರ್ಮಿತೇನ ಷೋಳಶಿನಾ ರಾಧ್ನೋತಿ ಯ ಏವಂ ವೇದಂ ॥**

ಚತುರ್ಥಪಾದಮನೂದ್ಯ ವ್ಯಾಚಷ್ಟೇ—ಹೇ ವೃಷನ್ ವರ್ಷಣಸಮರ್ಥ ಸತ್ರಾ ಸೋಮಯಾಗರೂಪೇ ಸತ್ರೇ ಜಠರೇ ಸ್ವಕೀಯ ಉದರ ಆವೃಷಸ್ವ ಸಮಂತಾತ್ಸೋಮರಸವೃಷ್ಟಿಂ ಕುರು। ಅತ್ರ ಚತುರ್ಥಪಾದೇ ವೃಷಣ್ಶಬ್ದೋ ವಿದ್ಯತೇ। ಷೋಡಶಿಸ್ವರೂಪಮಪಿ ವೃಷಣ್ವದ್ವರ್ಷಣೋಪೇತಂ ತೃಪ್ತಿಹೇತುತ್ವಾತ್ ॥ ಯಃ ಷೋಡಶೀ ವಿದ್ಯತೇ ಸೋಽಯಮುಕ್ತೇನ ಪ್ರಕಾರೇಣ ಸರ್ವೇಭ್ಯಃ ಸವನೇಭ್ಯೋ ಹಿ ನಿರ್ಮಿತಃ। ತಸ್ಮಾದಪಾಃ ಪೂರ್ವೇಷಾಂ ಇತಿ ಯಾಜ್ಯಾಪಾಠೇನ ಸರ್ವಸವನೇಭ್ಯ ಏವೈನಂ ನಿರ್ಮಿತವಾನ್ಭವತಿ ॥ ವೇದನಂ ಪ್ರಶಂಸತಿ—

ನಾಲ್ಕನೇ ಪಾದವನ್ನು ವಿವರಿಸುವರು. ವರ್ಷಣಸಮರ್ಥನಾದ ಎಲೈ ಇಂದ್ರನೇ ಸೋಮಯಾಗರೂಪವಾದ ಈ ಸತ್ರಯಾಗದಲ್ಲಿ ನಿನ್ನ ಉದರದಲ್ಲಿ ಪೂರ್ತಿಯಾಗುವವರೆಗೆ ಸೋಮರಸವನ್ನು ತುಂಬಿಕೊ. ಈ ನಾಲ್ಕನೇ ಪಾದದಲ್ಲಿ ವೃಷನ್ ಎಂಬ ಶಬ್ದದ ಪ್ರಯೋಗವಿದೆ. ಈ ಶಬ್ದವು ಸೋಮಪಾನದಿಂದ ತೃಪ್ತಿಯುಂಟಾಗುವುದೆಂಬುವುದನ್ನು ಸೂಚಿಸುವುದು. ಈ ಷೋಡಶೀ ಎಂಬ ಯಜ್ಞವು ಸಮಸ್ತಸವನಗಳ ಸ್ವರೂಪವಾಗಿರುವುದು. ಆದ್ದರಿಂದಲೇ **ಅಪಾಃ ಪೂರ್ವೇಷಾಂ** ಎಂಬ ಮಂತ್ರ ಪಾಠದಿಂದ ಯಾಜ್ಯಾಮಂತ್ರವನ್ನು ಪಠಿಸಿ ಅದರಿಂದಲೇ ಅದು ಪರಿಸಮಾಪ್ತಿಯಾಗಿರುವುದು ಎಂದು ತಿಳಿಯಬೇಕು. ಈ ವಿಷಯವನ್ನು ತಿಳಿದಿರುವ ಪುರುಷನು ಷೋಳಶೀ ಎಂಬ ಯಾಗದ ಫಲವನ್ನು ಪಡೆಯುವನು.

**ಮಹಾನಾಮ್ನೀನಾಂ ಪಂಚಾಕ್ಷರಾನುಪಸರ್ಗಾನುಪಸೃಜತ್ಯೇಕಾದಶಾಕ್ಷರೇಷು ಪಾದೇಷು ಸರ್ವೇಭ್ಯೋ ವಾ ಏಷ ಛಂದೋಭ್ಯಃ ಸಂನಿರ್ಮಿತೋ ಯತ್ಷೋಳಶೀ ತದ್ಯನ್ಮಹಾನಾಮ್ನೀನಾಂ ಪಂಚಾಕ್ಷರಾನುಪಸರ್ಗಾನುಪಸೃಜತ್ಯೇಕಾದಶಾಕ್ಷರೇಷು ಪಾದೇಷು ಸರ್ವೇಭ್ಯ ಏವೈನಂ ತಚ್ಛಂದೋಭ್ಯಃಸಂನಿರ್ಮಿಮೀತೇ। ಸರ್ವೇಭ್ಯಶ್ಛಂದೋಭ್ಯಃ ಸಂನಿರ್ಮಿತೇನ ಷೋಳಶಿನಾ ರಾಧ್ನೋತಿ ಯ ಏವಂ ವೇದ ॥**

ಅಸ್ಯಾ ಯಾಜ್ಯಾಯಾಃ ಪಾದೇಷು ಪೂರ್ವವದುಪಸರ್ಗಾನ್ನಿಧತ್ತೇ—ಮಹಾನಾಮ್ನೀವೃಚಾಂ ಸಂಬಂಧಿನಸ್ತದೀಯಾನುವಾಕೇ ಸಮಾಮ್ನಾತಾ ಏವಾಹ್ಯೇವೇತ್ಯಾದಯಃ ಪಂಚಾ-

**ಕ್ಷರಾ ಉಪಸರ್ಗಾಸ್ತಾನೇಕಾದಶಾಕ್ಷರೇಷು ಚತುರ್ಷ್ವಪಿ ಪಾದೇಷು ಸಂಯೋಜಯೇತ್ ॥ ತಥಾಸತಿ ಚತುಃ ಷಷ್ಟ್ಯಕ್ಷರತ್ವಾದನುಷ್ಟುಬ್ದ್ವಯಂ ಸಂಪದ್ಯತೇ ಏವಂ ಸತಿ ಯಃ ಷೋಳಶೀ ಸರ್ವೇಭ್ಯಶ್ಛಂದೋಭ್ಯೋ ನಿರ್ಮಾತವ್ಯಃ ಸೋಽಯಮನೇತತ್ಸಂಯೋಜನೇನ ನಿರ್ಮಿತೋ ಭವತಿ ॥ ವೇದನಂ ಪ್ರಶಂಸತಿ—**

ಈ ಯಾಜ್ಯಾಮಂತ್ರದ ಪಾದಗಳಲ್ಲಿ ಹಿಂದಿನಂತೆ ಸೇರಿಸಬೇಕಾದ ಉಪಸರ್ಗಗಳನ್ನು ತಿಳಿಸುವರು. ಮಹಾನಾಮ್ನಿ ಋಕ್ಕುಗಳ ಸಂಬಂಧವಾದ ಅನುವಾಕದಲ್ಲಿರುವ ಹನ್ನೊಂದಕ್ಷರಗಳ ನಾಲ್ಕು ಪಾದಗಳಲ್ಲಿಯೂ ಐದು ಅಕ್ಷರಗಳಿಂದ ಕೂಡಿದ ಉಪಸರ್ಗಗಳನ್ನು ಸೇರಿಸಬೇಕು. ಹೀಗೆ ಮಾಡುವುದರಿಂದ ಅರವತ್ತುನಾಲ್ಕಕ್ಷರಗಳಿಂದ ಕೂಡಿದ ಎರಡು ಅನುಷ್ಟುಪ್ ಮಂತ್ರಗಳು ಲಭಿಸುವವು. ಹೀಗೆ ಅನುಷ್ಟುಪ್ ಛಂದಸ್ಸುಗಳು ಉಂಟಾಗುವುದರಿಂದ ಈ ಷೋಳಶೀ ಎಂಬ ಯಾಗದಲ್ಲಿ ಸಮಸ್ತ ಛಂದಸ್ಸುಗಳನ್ನೂ ನಿರ್ಮಿಸಿದಂತಾಯಿತು. ಈ ಸಮಸ್ತ ಛಂದಸ್ಸುಗಳಿಂದ ನಿರ್ಮಿತವಾದ ಈ ಷೋಳಶಿಯನ್ನು ಯಾವ ಪುರುಷನು ತಿಳಿದಿರುವನೋ ಅವನು ಈ ಷೋಳಶಿಯಜ್ಞದಿಂದ ಎಲ್ಲವನ್ನೂ ಪಡೆದು ಸುಖಿಸುವನು.

### *English Translation*

**(The Upasargas taken from the Mahanamnis. The proper Abushtubhs. Consequences of repeating the Sholasi Shastra in the vihrita and avihrita way. The Yajya of the Sholasi Shastra)**

He makes the additions (upasarga) taking certain parts from the Mahanamni versee.

The first Mahanamni (verse` is this world (the earth), the second the air, and the third that world (heaven). In this way the Sholasi is made to consist of all worlds.

By adding parts from the Mahanamnis to the Sholasi, the Hotar makes the sacrificer participate in all worlds. He who has such a knowledge, prospers by means of the Sholasi being made to consist of all the worlds.

He repeats (now) Anushtubhs of the proper form, viz., pra pra vas trishtubham (8, 58, 1), archata prarchata (8, 58, 8-10), and yo vyatinr aphanayat (8, 58, 13-15).

That the Hotar repeats Anushtubhs of the proper form after having obtained them only in an artificial way is just as if a man, after having gone here and there astray, is led back to the right path.

He who thinks that he is possessed of fortune and is, as it were, sitting in fortune's lap (gatasrir), should make his Hotar repeat the Sholasi in the avihrita way, lest he fall into distress for the injury done to the metres by repeating them in the vihrita way.

But if one wishes to do away with the consequences of guilt to get out of distress and poverty, one should make the Hotar repeat the Sholasi in the vihrita way,

For in such cases man is, as it were, intermixed with the consequences of guilt (with the papman). By thus repeating the Sholasi in the vihrita way, the Hotar takes from the sacrificer all sin and guilt. He who has such a knowledge becomes free from the consequences of guilt.

With the verse ud yad bradhnasya vishtapam (8, 58, 7) he concludes. For celestial world is the "bradhnasya vishtapam". Thus he makes the sacrificer go to the celestial world.

As Yajya verse he repeats apah purvesham harivah (10, 96, 13). By repeating this verse as Yajya (of the Sholasi Shastra) he makes the Sholasi to consist of all libations (savamani). The term apah, thou hast drunk used in this verse signifies the Morning Libation. Thus he makes the Sholasi to consist of the Morning Libation. The words atho idam savanam kevalam te, i.e., this libation here is entirely thy own, signifies the Midday Libation. Thus he makes the Sholasi to consist of the Midday Libation. The words mamaddhi somam, i.e., enjoy the Soma, signify the Evening Libation, which has its characteristic the term mad, to enjoy, to be drunk. Thus he makes the Sholasi to consist of the Evening Libation. The word vrishan i.e., bull (contained in the last pada) is the characteristic of the Sholasi.

By repeating as Yajya for the Sholasi the verse just mentioned, the Sholasi is made to consist of all libations. Thus he makes it to consist of all Libations. He who has such a knowledge prospers through the Sholasi, which consists of all Libations.

When repeating the Yajya, he prefixes to each of the pada consisting of eleven syllables, an upasarga of five syllables taken from the Mahanamnis. Thus he makes the Sholasi to consist of all metres. He who has such a knowledge prospers by means of the Sholasi, which is made to consist of all metres.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಷೋಡಶಾಧ್ಯಾಯಸ್ಯ ಚತುರ್ಥಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನಾರನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು
ಸಮಾಪ್ತವಾದುದು.



# ಅಥ ಷೋಡಶಾಧ್ಯಾಯೇ ಪಂಚಮಃ ಖಂಡಃ

## ಹದಿನಾರನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ಅತಿರಾತ್ರವೆಂಬ ಯಜ್ಞದ ವಿಶೇಷವು. ಇದರ ಉತ್ಪತ್ತಿಯು, ಇದರ ಮೂರು ಪರ್ಯಾಯಗಳು]



ಅಹರ್ವೈ ದೇವಾ ಆಶ್ರಯಂತ ರಾತ್ರಿಮಸುರಾಸ್ತೇ ಸಮಾವದ್ವೀರ್ಯಾ ಏವಾಽಽಸನ್ನ ವ್ಯಾವರ್ತಂತ ಸೋಽಬ್ರವೀದಿಂದ್ರಃ ಕಶ್ಚಾಹಂ ಚೇ-ಮಾನಿತೋಽಸುರಾನ್ರಾತ್ರೀಮನ್ವವೇಷ್ಯಾವ ಇತಿ ಸ ದೇವೇಷು ನ ಪ್ರತ್ಯವಿಂದದಬಿಭಯೂ ರಾತ್ರೇಸ್ತಮಸೋ ಮೃತ್ಯೋಸ್ತಸ್ಮಾದ್ಧಾ-ಪ್ಯೇತರ್ಹಿ ನವಂತಂ ಯಾವನ್ಮಾತ್ರಮಿವೈವಾಪಕ್ರಮ್ಯ ಬಿಭೇತಿ ತಮ ಇವ ಹಿ ರಾತ್ರಿರ್ಮೃತ್ಯುರಿವ ॥

ಷೋಡಶೀ ಸಮಾಪ್ತಃ ॥ ಅಥಾತಿರಾತ್ರೋ ವಕ್ತವ್ಯಃ । ತತ್ರೇಂದ್ರಸ್ಯ ಛಂದಸಾಂ ಚ ಪ್ರಾಧಾನ್ಯಂ ಕಥಯಿತುಮಿತಿಹಾಸಮಾಹ—ಪುರಾ ಕದಾಚಿದಹೋರಾತ್ರಯೋರ್ಮಧ್ಯೇ ದೇವಾ ಅಹರೇವಾಽಽಶ್ರಿತವಂತೋಽಸುರಾಶ್ಚ ರಾತ್ರಿಮಾಶ್ರಿತವಂತಃ ತೇ ದೇವಾಶ್ಚಾಸುರಾಶ್ಚ ಸಮಾನಬಲಾ ಏವಾಸನ್ । ಬಲಾಧಿಕ್ಯೇನ ವರ್ಗಾಂತರಾದ್ವ್ಯಾವೃತ್ತಮಿತರವರ್ಗಸ್ಥಾನಂ ಪ್ರಾಪ್ನುವನ್ ॥ ತದಾನೀಮಿಂದ್ರೋ ದೇವಾನ್ಪ್ರತ್ಯಬ್ರವೀತ್ ॥ ಮಮ ಸಹಾಯೋಽಪೇಕ್ಷಿತೋ ಹೇ ದೇವಾ ಭವತಾಂ ಮಧ್ಯೇ ಕಶ್ಚಾಹಂ ಚೇಮಾನಸುರಾನ್ರಾತ್ರೀಮನುಗತಾನಿತೋ ರಾತ್ರ್ಯ ಆವೇಷ್ಯಾವೋಽಪಸರಿಷ್ಯಾವ ಇತಿ ॥ ತತೋ ವಿಚಾರ್ಯ ಸ ಇಂದ್ರೋ ದೇವೇಷು ಮಧ್ಯೇ ತಾದೃಶಂ ಶೂರಂ ಕಮಪಿ ಪ್ರತೀಕ್ಷ್ಯ ನಾವಿಂದನ್ನಲಬ್ಧವಾನ್ ॥ ರಾತ್ರೇಃ ಸಂಬಂಧಿ ಯತ್ತಮೋ ಮೃತ್ಯುಸದೃಶಂ ತಸ್ಮಾತ್ತಮಸೋ ಮೃತ್ಯೋರಿವ ಸರ್ವೇ ದೇವಾ ಅಬಿಭಯುರ್ಭೀತಾ ಅಭವನ್ ॥ ಯಸ್ಮಾದ್ದೇವಾನಾಂ ಭೀತಿಸ್ತಸ್ಮಾದಿದಾನೀಂ ಅಪಿ ಯಾವನ್ಮಾತ್ರಮಿವೈವ ಯತ್ಕಿಂಚಿದಪಿವಾ ದೂರಂ ರಾತ್ರೌ ಗೃಹಾದಪಕ್ರಮ್ಯ ಸರ್ವಃ ಪುರುಷೋ ಬಿಭೇತಿ ॥ ತಮ ಇವ ಹಿ ತಮೋರೂಪೈವ ರಾತ್ರಿಸ್ತಸ್ಮಾನ್ಮೃತ್ಯುರಿವ ಭಯಹೇತುಃ ॥

ಇದುವರೆಗೆ ಷೋಳಶೀ ಎಂಬ ಯಜ್ಞದ ವಿಶೇಷ ವಿಷಯಗಳನ್ನು ಹೇಳಿ ಮುಗಿಸಿದ್ದಾಯಿತು. ಈಗ ಅತಿರಾತ್ರವೆಂಬ ಯಜ್ಞಕ್ಕೆ ಸಂಬಂಧಪಟ್ಟ ವಿಶೇಷ ಸಂಗತಿಗಳನ್ನು ಹೇಳುವೆವು. ಈ ಯಜ್ಞಕ್ಕೆ ಸಂಬಂಧಪಟ್ಟಂತೆ ಇಂದ್ರ ಮತ್ತು ಛಂದಸ್ಸುಗಳ

ಪ್ರಾಧಾನ್ಯತೆಯನ್ನು ತಿಳಿಸುವುದಕ್ಕಾಗಿ ಒಂದು ಪೂರ್ವೇತಿಹಾಸವನ್ನು ಹೇಳುವರು. ಪೂರ್ವದಲ್ಲಿ ಒಂದಾನೊಂದು ಕಾಲದಲ್ಲಿ ದೇವತೆಗಳು ಹಗಲನ್ನೇ ಆಶ್ರಯಿಸಿ ಆಕಾಲದಲ್ಲಿಯೇ ತಮ್ಮ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದರು. ಆದರೆ ಅಸುರರು ರಾತ್ರಿಕಾಲವನ್ನೇ ಆಶ್ರಯಿಸಿದ್ದರು. ಇದರಿಂದ ದೇವತೆಗಳಿಗೂ ಅಸುರರಿಗೂ ಸಮವಾದ ಶಕ್ತಿಸಾಮರ್ಥ್ಯಗಳಿದ್ದವು ಒಂದು ಪಂಗಡದವರು ಹೆಚ್ಚಾಗಿರಲಿಲ್ಲ. ಮತ್ತೊಂದು ಪಂಗಡದವರು ಕಮ್ಮಿಯಾಗಿರಲಿಲ್ಲ. ಆಗ ಇಂದ್ರನು ದೇವತೆಗಳನ್ನು ಉದ್ದೇಶಿಸಿ ಈ ರೀತಿ ಹೇಳಿದನು ಎಲೈ ದೇವತೆಗಳೇ ನಾನು ನಿಮ್ಮ ಸಹಾಯದಿಂದ ರಾತ್ರಿಕಾಲವನ್ನು ಆಶ್ರಯಿಸಿ ನಮ್ಮಷ್ಟೇ ಪ್ರಬಲರಾಗಿರುವ ಅಸುರರನ್ನು ಅವರ ಆಶ್ರಯಸ್ಥಾನದಿಂದ ಓಡಿಸಬೇಕೆಂದಿರುವೆನು. ಆದ್ದರಿಂದ ನನಗೆ ಈ ಕಾರ್ಯದಲ್ಲಿ ನಿಮ್ಮಲ್ಲಿ ಯಾರು ಸಹಾಯಕರಾಗಿ ಬರುವಿರಿ ಎಂದು ಕೇಳಿದನು. ಇದನ್ನು ಕೇಳಿದ ದೇವತೆಗಳು ಯಾರೂ ಮುಂದೆ ಬರಲಿಲ್ಲ. ದೇವತೆಗಳಲ್ಲಿ ಶೂರರಾದವರು ಯಾರು ಇಲ್ಲವೆಂದು ಇಂದ್ರನು ತಿಳಿಯಬೇಕಾಯಿತು. ಏಕೆಂದರೆ ರಾತ್ರಿಸಂಬಂಧವಾದ ಕತ್ತಲೆಯು ಮೃತ್ಯುಸಮಾನವಾಗಿರುವುದು. ಸಮಸ್ತದೇವತೆಗಳೂ ಮೃತ್ಯುಸಮಾನವಾದ ಈ ಕಗ್ಗತ್ತಲೆಯನ್ನು ನೋಡಿ ಹೆದರಿದರು. ದೇವತೆಗಳೇ ಈ ರೀತಿ ಕತ್ತಲೆಗೆ ಹೆದರಿಕೊಂಡದ್ದನ್ನು ನೋಡಿ ಮನುಷ್ಯರು ಸಹ ರಾತ್ರಿಕಾಲದಲ್ಲಿ ಕತ್ತಲೆಯು ಕವಿದಿರುವಾಗ ತಮ್ಮ ಮನೆಯಿಂದ ಸ್ವಲ್ಪದೂರ ಹೋಗುವುದಕ್ಕೂ ಭಯಪಡುವರು. ಆದ್ದರಿಂದ ಕತ್ತಲೆಯಿಂದ ಆವರಿಸಿರುವ ರಾತ್ರಿಕಾಲವು ಮೃತ್ಯುಸ್ವರೂಪವಾಗಿರುವುದೆಂದು ಜನರು ಹೆದರಿಕೊಳ್ಳುವುದು ಸಹಜವೇ ಆಗಿದೆ.

**ತಂ ವೈ ಛಂದಾಂಸ್ಯೇವಾನ್ವವಾಯಂಸ್ತಂ ಯಚ್ಛಂದಾಂಸ್ಯೇವಾನ್ವವಾ-ಯಂಸ್ತಸ್ಮಾದಿಂದ್ರಶ್ಚೈವ ಛಂದಾಂಸಿ ಚ ರಾತ್ರೀಂ ವಹಂತಿ ನ ನಿವಿಚ್ಛಸ್ಯತೇ ನ ಪುರೋರುಙ್ನ ಧಾಯ್ಯಾ ನಾನ್ಯಾ ದೇವತೇಂದ್ರಶ್ಚ ಹ್ಯೇವ ಚ್ಛಂದಾಂಸಿ ಚ ರಾತ್ರೀಂ ವಹಂತಿ ॥**

ಅಥ ಚ್ಛಂದಸಾಂ ಇಂದ್ರಸಹಕಾರಿತ್ವಂ ದರ್ಶಯತಿ—ತಂ ವಾ ಅಸುರನಿರಾಕರಣಾಯ ಪ್ರವೃತ್ತಂ ತಮೇವೇಂದ್ರಮೇಕಂ ಗಾಯತ್ರ್ಯಾದಿಚ್ಛಂದಾಂಸ್ಯೇವಾನ್ವವಾಯನ್ನನುಗಮ್ಯ ನಿರಾಕರ್ತುಂ ಗತಾಃ । ಯಸ್ಮಾದೇವಂ ತಸ್ಮಾದಿಂದ್ರಚ್ಛಂದಾಸ್ಯೇವ ಅತಿರಾತ್ರಪ್ರಯೋಗೇ ರಾತ್ರೀಂ ವಹಂತಿ ರಾತ್ರಿಪ್ರಯೋಗಸ್ಯ ನಿರ್ವಾಹಕಾಣಿ ಭವಂತಿ ॥ ಇಂದ್ರವಿಷಯಚ್ಛಂದಾಸ್ಯೇವ ತತ್ರ ಶಸ್ಯಂತೇ ನ ತು ನಿವಿದ್ವಾ ಪುರೋರುಗ್ವಾ ಧಾಯ್ಯಾ ವಾ ದೇವತಾಂತರಂ ವಾ ಕಿಂಚಿಚ್ಛ-ಸ್ಯತೇ ॥ ತಸ್ಮಾದಿಂದ್ರಶ್ಛಂದಾಂಸಿ ಚೇತ್ಯಾತಾವಂತ ಏವ ನಿರ್ವಾಹಕಾಃ ॥

ಈ ಛಂದಸ್ಸುಗಳು ಇಂದ್ರನಿಗೆ ಸಹಾಯಮಾಡಿದುದನ್ನು ವಿವರಿಸುವರು. ಮೇಲೆ ಹೇಳಿದಂತೆ ಅಸುರರನ್ನು ಓಡಿಸುವುದಕ್ಕಾಗಿ ಪ್ರವೃತ್ತನಾದ ಇಂದ್ರನ ಬಳಿಗೆ ಗಾಯತ್ರಿಯೇ ಮೊದಲಾದ ಛಂದಸ್ಸುಗಳು ಹೋಗಿ ಅವನಿಗೆ ನೆರವಾದವು. ಆದ್ದರಿಂದ ರಾತ್ರಿಕಾಲದಲ್ಲಿ ಪ್ರಯೋಗವನ್ನು ನೆರವೇರಿಸುವ ಅತಿರಾತ್ರವೆಂಬ ಯಜ್ಞದಲ್ಲಿ ಇಂದ್ರನೂ, ಛಂದಸ್ಸುಗಳೂ ಸೇರಿ ರಾತ್ರಿಕಾಲದಲ್ಲಿ ನಡೆಯುವ ಕಾರ್ಯಕಲಾಪಗಳಲ್ಲಿ ಭಾಗವನ್ನು ವಹಿಸುವವು. ಈ ಪ್ರಯೋಗಕಾಲದಲ್ಲಿ ಇಂದ್ರನ ಸಂಬಂಧವಾದ ಛಂದಸ್ಸುಗಳನ್ನು ಮಾತ್ರ ಪಠಿಸುವರು, ನಿವಿತ್, ಪುರೋರುಕ್, ಧಾಯ್ಯಾ ಮೊದಲಾದವುಗಳನ್ನೂ ಅಥವಾ ಇಂದ್ರನಲ್ಲದ ಬೇರೆ ದೇವತೆಗಳ ವಿಷಯವನ್ನು ಸ್ವಲ್ಪವೂ ಪಠಿಸುವುದಿಲ್ಲ. ಆದ್ದರಿಂದ ಇಂದ್ರ ಮತ್ತು ಛಂದಸ್ಸುಗಳು ಮಾತ್ರ ಈ ಅತಿರಾತ್ರಪ್ರಯೋಗ ಕಾಲದಲ್ಲಿ ನಿರ್ವಾಹವನ್ನು ನಡೆಸುವವು.

**ತಾನ್ವೈ ಪರ್ಯಾಯೈರೇವ ಪರ್ಯಾಯಮನುದಂತ ಯತ್ಪರ್ಯಾಯೈಃ ಪರ್ಯಾಯಮನುನುದಂತ ತತ್ಪರ್ಯಾಯಾಣಾಂ ಪರ್ಯಾಯತ್ವಂ ॥**

**ತೇಷಾಮಿಂದ್ರಚ್ಛಂದಸಾಮಸುರನಿರಾಕರಣಸಾಧನಂ ದರ್ಶಯತಿ—ತಾನ್ವೈ ರಾತ್ರಿಮಾಶ್ರಿತಾನಸುರಾನ್ಪರ್ಯಾಯೈಶ್ಚಮಸಗಣಾನಾಂ ಕ್ರಮಾನುಷ್ಠಾನೈರೇವ ಪರ್ಯಾಯೈಸ್ತತ್ರ ತತ್ರ ಯತಮಾನಾ ಯಾಗಭೂಮೌ ಪರೀತ್ಯಾನುದಂತ ನಿರಾಕೃತವಂತಃ। ಯತ್ರ ಯತ್ರಾಸುರಾಃ ಸುಪ್ತಾ ಅವಸ್ಥಿತಾಸ್ತತ್ರ ತತ್ರ ಪ್ರಯತ್ನೇನಾವೇಕ್ಷ್ಯ ನಿಃಸಾರಿತವಂತಃ । ದ್ವಾದಶಾನಾಂ ಚಮಸಗಣಾನಾಮನುಷ್ಠಾನಾಯ ತ್ರಯಃ ಪರ್ಯಾಯಾ ಏಕೈಕಸ್ಮಿನ್ಪರ್ಯಾಯೇ ಚತ್ವಾರೋ ಗಣಾ ಅನುಷ್ಠೀಯಂತೇ ॥ ಯಸ್ಮಾತ್ಪರಿತೋ ಗತ್ವಾ ಗತ್ವಾ ಚಮಸಪರ್ಯಾಯೈರ್ನಿರಾಕೃತವಂತಸ್ತಸ್ಮಾತ್ಪರಿಗಮ್ಯ ನಿರಾಕರಣಸಾಧನತ್ವಾತ್ಪರ್ಯಾಯತ್ವಂ ಸಂಪನ್ನಂ ॥**

ಇಂದ್ರ ಮತ್ತು ಛಂದಸ್ಸುಗಳು ಅಸುರರನ್ನು ಓಡಿಸಲು ಮಾಡಿದ ಸಾಧನವನ್ನು ವಿವರಿಸುವರು. ಇಲ್ಲಿ ಪರ್ಯಾಯವೆಂದರೆ ಸುತ್ತಲೂ ಹೋಗಿಬರುವುದು ಎಂದರ್ಥವು. ಗಣವೆಂದರೆ ನಾಯಕನು, ಮುಖ್ಯಸ್ಥನು. ಸೋಮಪಾನ ಮಾಡುವಾಗ ಕೆಲವು ಜನರು ಗುಂಪಾಗಿ ಸೇರಿ ಒಬ್ಬ ಮುಖ್ಯಸ್ಥನ ನಾಯಕತ್ವದಲ್ಲಿ ಸೋಮಪಾನ ಮಾಡುವರು. ಇದಕ್ಕೆ ಚಮಸಗಣವೆಂದೂ ಹೆಸರು. ಯಜ್ಞಮಾಡುವ ಯಜಮಾನರೇ ಮೊದಲಾದವರು ಯಾಗಭೂಮಿಯಲ್ಲಿ ರಾತ್ರಿಕಾಲದಲ್ಲಿ ಅಸುರಾದಿಗಳನ್ನು ಚಮಸಗಣಗಳ ಅನುಷ್ಠಾನದಿಂದ ಓಡಿಸುತ್ತಿದ್ದರು. ಹಾಗೆಯೇ ರಾತ್ರಿಕಾಲದಲ್ಲಿ ಸೋಮಪಾನದಿಂದ ಮತ್ತರಾಗಿ ನಿದ್ರಿಸುತ್ತಿದ್ದ ಇತರರನ್ನೂ ಅಲ್ಲಿಂದ ಓಡಿಸಿದರು ಹನ್ನೆರಡು ಚಮಸಗಣಗಳಿಗೆ ಮೂರು ಪರ್ಯಾಯಗಳಿರುವವು. ಎಂದರೆ ಒಂದೊಂದು ಪರ್ಯಾಯದಲ್ಲಿ ನಾಲ್ಕು ಗಣಗಳಿರುವವು. ಈ ಪರ್ಯಾಯಕ್ರಮದಿಂದ (ಸುತ್ತಲೂ ಚಮಸಪಾತ್ರೆಯನ್ನು ಪಾನಾರ್ಥವಾಗಿ ಎಲ್ಲರಿಗೂ ಸೇರುವಂತೆ ಮಾಡುವುದರಿಂದ). ಅಸುರರೇ ಮೊದಲಾದವರು ಯಾಗಪ್ರದೇಶದಿಂದ ಹೊರದೂಡಲ್ಪಟ್ಟರು. ಚಮಸಗಣದಲ್ಲಿರುವ ಪ್ರತಿಯೊಬ್ಬರಿಗೂ ಪಾನಪಾತ್ರೆಯು (ಚಮಸ) ಮುಟ್ಟುವುದರಿಂದ ಈ ಕ್ರಮಕ್ಕೆ ಪರ್ಯಾಯವೆಂಬ ಹೆಸರು ಬಂದಿರುವುದು.

**ತಾನ್ವೈ ಪ್ರಥಮೇನೈವ ಪರ್ಯಾಯೇಣ ಪೂರ್ವರಾತ್ರಾದನುದಂತ ಮಧ್ಯಮೇನ ಮಧ್ಯರಾತ್ರಾದುತ್ತಮೇನಾಪರರಾತ್ರಾತ್ ।**

**ಕ್ರಮೇಣ ನಿರಾಕರಣಪ್ರಕಾರಂ ದರ್ಶಯತಿ--ದಶದಶ ಘಟಿಕಾ ಏಕೈಕೋ ಭಾಗ ಇತ್ಯೇವಂ ರಾತ್ರೇಸ್ತ್ರಯೋ ಭಾಗಾ ಶ್ಚತ್ವಾರಶ್ಚಮಸಗಣಾ ಏಕಃ ಪರ್ಯಾಯ ಇತ್ಯೇವಂ ದ್ವಾದಶಾನಾಂ ಚಮಸಗಣಾನಾಂ ತ್ರಯಃ ಪರ್ಯಾಯಾಸ್ತೈಃ ಕ್ರಮೇಣ ರಾತ್ರಿಭಾಗತ್ರಯಾದಸುರಾನಪಾನುದಂತ ॥**

ಅಸುರರನ್ನು ಓಡಿಸುವರು. ರಾತ್ರಿಕಾಲವನ್ನು ಮೂರುಭಾಗವಾಗಿ ವಿಭಾಗಿಸಿದರೆ ಹತ್ತು ಹತ್ತು ಘಳಿಗೆಗಳಿಗೆ ಒಂದೊಂದು ಭಾಗದಂತೆ ರಾತ್ರಿಯ ಪೂರ್ವಭಾಗ, ಮಧ್ಯರಾತ್ರಿ, ಅಪರರಾತ್ರಿ ಎಂದಾಗುವುದು ಮೇಲೆ ಹೇಳಿದಂತೆ ಮೂರು ಪರ್ಯಾಯಗಳಲ್ಲಿ ಒಂದನ್ನು ಎಂದರೆ ಮೊದಲನೇ ಪರ್ಯಾಯದಿಂದ ಅಸುರರನ್ನು ಪೂರ್ವರಾತ್ರಿಯಿಂದ ಓಡಿಸಲಾಯಿತು. ಎರಡನೇ ಪರ್ಯಾಯಾನುಷ್ಠಾನದಿಂದ ಮಧ್ಯರಾತ್ರಿಯಲ್ಲಿ ಅಸುರರನ್ನೂ ಮೂರನೆಯ ಪರ್ಯಾಯದಿಂದ ಅಪರರಾತ್ರಿಕಾಲದಲ್ಲಿ ಅಸುರರನ್ನು ಓಡಿಸ

ಲಾಯಿತು. ಈ ರೀತಿ ಮೂರು ಪರ್ಯಾಯಗಳಿಂದ ರಾತ್ರಿಯ ಮೂರು ಭಾಗಗಳಿಂದಲೂ ಎಂದರೆ ಪೂರ್ವಭಾಗ, ಮಧ್ಯರಾತ್ರಿ ಅಪರಾತ್ರಿಗಳಿಂದಲೂ ಅಸುರರನ್ನು ಓಡಿಸಲಾಯಿತೆಂದು ಅಭಿಪ್ರಾಯವು.

ಅಪಿ ಶರ್ವರ್ಯಾ ಅನುಸ್ಮಸೀತ್ಯಬ್ರುವನ್ನಪಿಶರ್ವರಾಣಿ ಖಲು ವಾ ಏತಾನಿ ಛಂದಾಂಸೀತಿ ಹ ಸ್ಮಾಽಽಹೈತಾನಿ ಹೀಂದ್ರಂ ರಾತ್ರೇಸ್ತಮಸೋ ಮೃತ್ಯೋರ್ಬಿಭ್ಯತಮತ್ಯಪಾರಯಂಸ್ತದಪಿಶರ್ವರಾಣಾಮಪಿಶರ್ವ-ರತ್ವಂ ॥

ತಸ್ಮಿನ್ನಿರಾಕರಣೇ ಛಂದಸಾಂ ಸೌಕರ್ಯಾಧಿಕ್ಯೇನ ಪ್ರಶಂಸಾಂ ದರ್ಶಯತಿ—ಹೇ, ಇಂದ್ರ ವಯಮಪಿ ಶರ್ವರ್ಯಾಃ ಕೃತ್ಸ್ನಾಯಾ ರಾತ್ರೇಃ ಸಕಾಶಾದಸುರಾನಪಸಾರಯಿತುಂ ತ್ವಾಮನುಗಮ್ಯ ಸ್ಮಸಿ ತಿಷ್ಠಾಮ ಇತ್ಯೇವಂ ಛಂದಾಂಸ್ಯಬ್ರುವನ್ । ತದೇತದ್ವಾಕ್ಯಮೈತರೇಯಃ ಶ್ರುತ್ವಾ ತದಾನೀಮೇವೈತಾನಿಚ್ಛಂದಾಂಸ್ಯಪಿ ಶರ್ವರಾಣ್ಯೇವೇತಿ ನಾಮ್ನಾ ವ್ಯವಹೃತವಾನ್ ॥ ಏತಚ್ಚ ಯುಕ್ತಂ ॥ ಯಸ್ಮಾನ್ಮೃತ್ಯೋರಿವ ರಾತ್ರೇಸ್ತಮಸೋ ಬಿಭ್ಯತಮಿಂದ್ರಮೇತಾನಿ ಚ್ಛಂದಾಂಸ್ಯತ್ಯಪಾರಯನ್ನಸ್ಮಾದ್ಧೇತೋಃ ರಾತ್ರಿಮತೀತ್ಯ ನೀತವಂತಿ ತಸ್ಮಾತ್ಕಾರಣಾಚ್ಛ-ರ್ವರ್ಯಾಃ ಸರ್ವಸ್ಮಾದಪಿ ಪಾರನಯನಂ ದ್ಯೋತಯಿತುಮಪಿಶರ್ವರಾಣೀತಿ ನಾಮ ಚ್ಛಂದಸಾಂ ಯುಕ್ತಂ ॥

ಅಸುರರನ್ನು ಓಡಿಸುವ ಈ ಕಾರ್ಯದಲ್ಲಿ ಛಂದಸ್ಸುಗಳು ಮಾಡಿದ ಸಹಾಯವನ್ನು ಪ್ರಶಂಸೆಮಾಡುವರು. ಎಲೈ ಇಂದ್ರನೇ ರಾತ್ರಿಕಾಲದಲ್ಲೆಲ್ಲಾ ವ್ಯಾಪ್ತರಾಗಿದ್ದ ಅಸುರರನ್ನು ಓಡಿಸುವ ವಿಷಯದಲ್ಲಿ ನಾವೆಲ್ಲರೂ ನಿನಗೆ ಸಹಾಯಕರಾಗಿರುವೆವು ಎಂದು ಛಂದಸ್ಸುಗಳು ಹೇಳಿದವು. ಹೀಗೆ ಹೇಳಿದ್ದನ್ನು ಐತರೇಯ ಮಹರ್ಷಿಯು ಕೇಳಿ ಈ ಛಂದಸ್ಸುಗಳನ್ನು ಅಪಿಶರ್ವರಾಣಿ ಎಂಬ ಹೆಸರಿನಿಂದ ಕರೆದನು. ಇದು ಯುಕ್ತವೇ ಆಗಿರುವುದು. ಏಕೆಂದರೆ ಮೃತ್ಯುವಿನ ಸ್ವರೂಪವಾದ ರಾತ್ರಿಕಾಲದ ಕತ್ತಲೆಯಿಂದ ಹೆದರಿದ ಇಂದ್ರನನ್ನು ಈ ಛಂದಸ್ಸುಗಳು ರಾತ್ರಿಯಿಂದ ಪಾರುಮಾಡಿದವು, ಎಂದರೆ ಸುರಕ್ಷಿತವಾಗಿ ಕೊನೆಮುಟ್ಟಿಸಿದವು. ರಾತ್ರಿಕಾಲದ ಮೃತ್ಯುಸ್ವರೂಪವಾದ ಕತ್ತಲೆಯಿಂದ ಈ ಛಂದಸ್ಸುಗಳು ಇಂದ್ರನನ್ನು ಪಾರುಮಾಡಿದ್ದರಿಂದ (ದಾಟಿಸಿದ್ದರಿಂದ) ಈ ಛಂದಸ್ಸುಗಳನ್ನು ಅಪಿಶರ್ವರಾಣಿ (ರಾತ್ರಿಕಾಲದಿಂದ ಪಾರುಮಾಡಿದವು) ಎಂಬ ಹೆಸರಿನಿಂದ ಕರೆಯುವುದು ಯುಕ್ತವೇ ಆಗಿರುವುದು.

*English Translation*

**(Atiratra Its origin. The three Paryayas)**

The Devas took shelter with Day, the Asuras with Night. They were thus of equal strength and none yielded to the other. Indra said, "Who besides me will enter Night to turn the Asuras out of it?" But he did not find any one among the Devas ready to accept his offer for they were afraid of Night, on account of its darkness being like that of Death. This is the reason that even

now one is afraid of going at night even to a spot which is quite close. For Night is, as it were, Darkness, and is Death, as it were. The metres alone followed him. This is the reason that Indra and the metres are the leading deities of the Night of the nightly festival of Atiratra. No Nivid is repeated, nor a Puroruk, nor a Dhayya, nor is there any other deity save Indra and the metres who are the leading deities. They turned them out by going round (paryayam) with the Paryayas (the different turns of passing the Soma cups). This is the reason that they are called paryaya from i to go, and pari around.

By means of the first Paryaya they turned them out of the first part of the night; by means of the middle Paryaya out of midnight, and by means of the third Paryaya out of the latter part of the night. The metres said to Indra, "even we alone are following thee, to turn the Asuras out of the Dark one (sarvara, night). He (the sage Aitarya) therefore called them (the metres) apisarvarani, for they had Indra who was afraid of the darkness of night as of death, safely carried beyond it. That is the reason that they are called apisarvarani.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಕಾಶ**
**ಐತರೇಯಬ್ರಾಹ್ಮಣಭಾಷ್ಯಸ್ಯ ಷೋಡಶಾಧ್ಯಾಯಸ್ಯ ಪಂಚಮಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನಾರನೆಯ ಅಧ್ಯಾಯದಲ್ಲಿ ಐದನೆಯ ಖಂಡವು ಸಮಾಪ್ತವಾದುದು.**



## ಅಥ ಷೋಡಶಾಧ್ಯಾಯೇ ಷಷ್ಠಃ ಖಂಡಃ

### ಹದಿನಾರನೆಯ ಅಧ್ಯಾಯದಲ್ಲಿ ಆರನೆಯ ಖಂಡವು



[ಅತಿ ರಾತ್ರಯಾಗದ ಮೂರು ಪರ್ಯಾಯಗಳಲ್ಲಿ ಪಠಿಸಲ್ಪಡುವ ಶಸ್ತ್ರಮಂತ್ರಗಳು; ಸಂಧಿಸ್ತೋತ್ರ.]

**ಇಂದ್ರಸ್ಯ ಛಂದಸಾಂ ಚ ಪ್ರಾಧಾನ್ಯಮಭಿಹಿತಂ । ಅಥ ಶಸ್ತ್ರಂ ವಿಧಾತವ್ಯಂ ಷೋಡಶಿ-ಪರ್ಯಂತಂ ಪೂರ್ವವದನುಷ್ಠಾಯ ಷೋಡಶಿನ ಊರ್ಧ್ವಂ ರಾತ್ರಿಪರ್ಯಾಯಾಃ ಶಂಸನೀ-**

**ಯಾಸ್ತತ್ರ ತ್ರಯಃ ಪ್ರಯರ್ಾಯಾಸ್ತತ್ರೈಕಪರ್ಯಾಯಶ್ಚತುಃಶಸ್ತ್ರೋಪೇತಃ । ಹೋತುರೇಕಂ ಶಸ್ತ್ರಂ ಹೋತ್ರಕಾಣಾಂ ಚ ತ್ರಯಾಣಾಮೇಕೈಕಮಿತಿ ಚತುಷ್ಟಯಂ ॥**

ಇಂದ್ರನ ಮತ್ತು ಛಂದಸ್ಸುಗಳ ಪ್ರಾಧಾನ್ಯತೆಯನ್ನು ಹೇಳಿದ್ದಾಯಿತು. ಈಗ! ಷೋಡಶಿಯಾಗದ ಪ್ರಯೋಗದಂತೆ ಶಸ್ತ್ರಮಂತ್ರಗಳನ್ನು ಪಠಿಸಿ ಅನಂತರ ರಾತ್ರಿಪರ್ಯಾಯದಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳನ್ನು ಪಠಿಸಬೇಕು. ರಾತ್ರಿಪರ್ಯಾಯದಲ್ಲಿ ಮೂರು ಪರ್ಯಾಯಗಳಿರುವವು. ಅವುಗಳಲ್ಲಿ ಮೊದಲನೇ ಪರ್ಯಾಯದಲ್ಲಿ ನಾಲ್ಕು ಶಸ್ತ್ರಮಂತ್ರಗಳಿರುವವು. ಈ ನಾಲ್ಕರಲ್ಲಿ ಹೋತೃವು ಒಂದು ಶಸ್ತ್ರಮಂತ್ರವನ್ನೂ ಉಳಿದ ಮೂರು ಶಸ್ತ್ರಮಂತ್ರಗಳಲ್ಲಿ ಹೋತೃವರ್ಗದವರು ಒಂದೊಂದನ್ನೂ ಪಠಿಸಬೇಕು.

### ಪಾಂತ ಮಾ ವೋ ಅಂಧಸ ಇತ್ಯಂಧಸ್ವತ್ಯಾಽನುಷ್ಟುಭಾ ರಾತ್ರೀಂ ಪ್ರತಿಪದ್ಯತೇ ॥ ಅನುಷ್ಟುಭೀ ವೈ ರಾತ್ರಿರೇತದ್ರಾತ್ರಿರೂಪಂ ॥

**ಅತ್ರ ಪ್ರಥಮಪರ್ಯಾಯೇ ಹೋತುಃ ಶಸ್ತ್ರಂ ವಿಧತ್ತೇ—ಅಂಧಃ ಶಬ್ದೋ ಯಸ್ಯಾಮೃಚ್ಯಸ್ತಿ ಸೇಯಮಂಧಸ್ವತೀ ॥ ಸಾ ಚಾತ್ರಾನುಷ್ಟುಪ್ಛಂದಸ್ಕಾ ತಯಾ ರಾತ್ರೀಂ ರಾತ್ರಿಶಸ್ತ್ರಂ ಪ್ರತಿಪದ್ಯತೇ ಪ್ರಾರಭೇತ ॥ ತಸ್ಯಾಮೃಚಿ ಚ್ಛಂದಃ ಪ್ರಶಂಸತಿ—ಗಾಯತ್ರೀತ್ರಿಷ್ಟುಬ್ಜಗತ್ಯನುಷ್ಟುಭಾಂ ಮಧ್ಯೇ ಗಾಯತ್ರ್ಯಾದೀನಾಂ ತ್ರಯಾಣಾಂ ಸವನತ್ರಯಗತಾನಾಮಹನಿ ಪ್ರಯುಕ್ತತ್ವಾದನುಷ್ಟುಭಃ ಪ್ರಯೋಗಾಯ ರಾತ್ರಿರೇವ ಕಾಲಃ ಪರಿಶಿಷ್ಯತೇ ತಸ್ಮಾದ್ರಾತ್ರೇರನುಷ್ಟುಪ್ಸಂಬದ್ಧತ್ವಾದಿಯಮನುಷ್ಟುಬ್ರಾತ್ರೇಃ ಸ್ವರೂಪಂ ॥**

ಪ್ರಥಮ ಪರ್ಯಾದಲ್ಲಿ ಹೋತೃವು ಪಠಿಸಬೇಕಾದ ಶಸ್ತ್ರಮಂತ್ರವನ್ನು ವಿವರಿಸುವರು. ಯಾವ ಋಕ್ಕಿನಲ್ಲಿ **ಅಂಧಃ** (ಕತ್ತಲೆ) ಎಂಬ ಶಬ್ದವಿರುವುದೋ ಆ ಋಕ್ಕಿಗೆ ಅಂಧಸ್ವತೀ ಋಕ್ಕೆಂದು ಹೆಸರು. ಈ ಋಕ್ಕು ಅನುಷ್ಟುಪ್ ಛಂದಸ್ಕವಾಗಿರುವುದು. ಇಂತಹ ಅನುಷ್ಟುಪ್‌ಛಂದಸ್ಸಿನ ಋಕ್ಕಿನಿಂದ ರಾತ್ರಿಕಾಲದಲ್ಲಿ ರಾತ್ರಿಶಾಸ್ತ್ರವನ್ನು ಪಠಿಸುವುದಕ್ಕೆ ಪ್ರಾರಂಭಮಾಡಬೇಕು ಗಾಯತ್ರೀ, ತ್ರಿಷ್ಟುಪ್, ಜಗತೀ, ಅನುಷ್ಟುಪ್ ಎಂಬ ನಾಲ್ಕು ಛಂದಸ್ಸುಗಳಲ್ಲಿ ಪ್ರಾತಸ್ಸವನದಲ್ಲಿ ಗಾಯತ್ರೀ ಛಂದಸ್ಸಿನ ಮಂತ್ರಗಳನ್ನೂ ಮಾಧ್ಯಂದಿನ ಸವನದಲ್ಲಿ ತ್ರಿಷ್ಟುಪ್ ಛಂದಸ್ಸನ್ನೂ ತೃತೀಯಸವನದಲ್ಲಿ ಜಗತೀಛಂದಸ್ಸನ್ನೂ ಉಪಯೋಗಿಸಬೇಕು. ರಾತ್ರಿಕಾಲದಲ್ಲಿ ಅನುಷ್ಟುಪ್ ಛಂದಸ್ಸನ್ನು ಉಪಯೋಗಿಸಬೇಕು. ಅನುಷ್ಟುಪ್ ಛಂದಸ್ಸಿಗೆ ರಾತ್ರಿಯೇ ಸರಿಯಾದ ಕಾಲವು. ಏಕೆಂದರೆ ಅನುಷ್ಟುಪ್ ಛಂದಸ್ಸು ರಾತ್ರಿಸ್ವರೂಪವಾಗಿರುವುದು.

### ಅಂಧಸ್ವತ್ಯಃ ಪೀತವತ್ಯೋ ಮದ್ವತ್ಯಸ್ತ್ರಿಷ್ಟುಭೋ ಯಾಜ್ಯಾ ಭವಂತ್ಯಭಿರೂಪಾ ಯದ್ಯಜ್ಞೇಽಭಿರೂಪಂ ತತ್ಸಮೃದ್ಧಂ ॥

**ಅಥ ತ್ರಿಷು ಪರ್ಯಾಯೇಷು ಶಸ್ತ್ರಯಾಜ್ಯಾಂ ವಿಧತ್ತೇ- ಅಂಧಃಶಬ್ದೋ ಯಾಸ್ವೃಕ್ಷ್ವಸ್ತಿ ತಾ ಅಂಧಸ್ವತ್ಯಸ್ತಾದೃಶ್ಯಶ್ಚತಸ್ರ ಋಚಃ ಪ್ರಥಮಪರ್ಯಾಯೇ ಹೋತ್ರಾದೀನಾಂ ಚತುರ್ಣಾಂ ಶಸ್ತ್ರಯಾಜ್ಯಾಃ ಕರ್ತವ್ಯಾಸ್ತಾಶ್ಚ ತ್ರಿಷ್ಟುಪ್ಛಂದಸ್ಕಾ ಏವ ॥ ತತ್ರಾಧ್ವರ್ಯವೋ ಭರತೇಂದ್ರಾಯ ಸೋಮಮಿತ್ಯೇಷಾ ಹೋತುಃ ಶಸ್ತ್ರಯಾಜ್ಯಾ ॥ ಸಾ ಚಾಂಧಸ್ವತೀ ತ್ರಿಷ್ಟುಪ್ಛಂದಸ್ಕಾ ಚ ॥ ತಸ್ಯಾ ದ್ವಿತೀಯಪಾದೇ ಸಿಂಚ ತಾ ಮದ್ಯಮಂಧ ಇತ್ಯಂಧಃ ಶಬ್ದಃ**

ಶ್ರೂಯತೇ ॥ ಏವ ಮಿತರೇಷಾಂ ತ್ರಯಾಣಾಂ ಶಸ್ತ್ರಯಾಜ್ಯಾ ಉದಾಹರಣೀಯಾಃ ॥ ಪಿಬತಿಧಾತುರ್ಯಾಸ್ವೃಕ್ಷ್ವಸ್ತಿ ತಾಃ ಪೀತವತ್ಯಸ್ತಾದೃಶ್ಯೋ ಮಧ್ಯಪರ್ಯಾಯೇ ಯಾಜ್ಯಾಃ ಕರ್ತವ್ಯಾಃ ॥ ಅಪಾಯ್ಯಸ್ಯಾಂಧಸೋ ಮದಾಯೇತಿ ಹೋತುಃ ಶಸ್ತ್ರಯಾಜ್ಯಾ ॥ ತತ್ರಾ-ಪಾಯ್ಯೇತಿ ಪಿಬತಿಧಾತುಃ ಶ್ರೂಯತೇ ॥ ಮದಿಧಾತುರ್ಯಾಸ್ವೃಕ್ಷ್ವಸ್ತಿ ತಾ ಮದ್ವತ್ಯಃ । ತಾದೃಶ್ಯಸ್ತೃತೀಯಪರ್ಯಾಯೇ ಯಾಜ್ಯಾಃ ಕರ್ತವ್ಯಾಃ ತಿಷ್ಠಾ ಹರೀ ಇತ್ಯೇಷಾ ಹೋತುಃ ಶಸ್ತ್ರಯಾಜ್ಯಾ ॥ ತಸ್ಯಾ ಅವಸಾನೇ ರರಿಮಾತೇ ಮದಾಯೇತಿ ಮದಿಧಾತುಃ ಶ್ರೂಯತೇ ॥ ಏವಂ ಸರ್ವಮುದಾಹಾರ್ಯಂ ರಾತ್ರಾವನ್ನಭೋಜನಾದಂಧಸ್ವತೀನಾಮಾನುರೂಪ್ಯಂ ಕ್ಷೀರ-ಪಾನಾತ್ಪೀತವತೀನಾಂ ತತ ಊರ್ಧ್ವಂ ಹರ್ಷಾನ್ಮದ್ವತೀನಾಮೇವಮಾನುರೂಪ್ಯೇ ಸತಿ ತತ್ತ-ತ್ಕರ್ಮಸಮೃದ್ಧಂ ಭವತಿ ॥

ಮೂರು ಪರ್ಯಾಯಗಳಲ್ಲಿ ಪಠಿಸುವ ಶಸ್ತ್ರಮಂತ್ರಗಳಿಗೆ ಅನುರೂಪವಾದ ಯಾಜ್ಯಾಮಂತ್ರಗಳನ್ನು ವಿವರಿಸುವರು. ಅಂಧಃಶಬ್ದವು ಯಾವ ಋಕ್ಕಿನಲ್ಲಿರುವುದೋ ಆ ಋಕ್ಕಿಗೆ ಅಂಧಸ್ವತೀಋಕ್ಕೆಂದು ಹೆಸರು. ಅಂತಹ ನಾಲ್ಕು ಋಕ್ಕುಗಳನ್ನು ಹೋತೃ ಮತ್ತು ಹೋತೃವರ್ಗದವರು ಪಠಿಸುವ ನಾಲ್ಕು ಶಸ್ತ್ರಮಂತ್ರಗಳಿಗೆ ಯಾಜ್ಯಾಮಂತ್ರಗಳನ್ನು ಹೇಳಬೇಕು. ಈ ಯಾಜ್ಯಾಮಂತ್ರಗಳು ತ್ರಿಷ್ಟುಪ್ ಛಂದಸ್ಸಿನವಾಗಿರಬೇಕು. ಇವುಗಳಲ್ಲಿ ಅಧ್ವರ್ಯವೋ ಭರತೇಂದ್ರಾಯ ಸೋಮಂ ಎಂಬ ಮಂತ್ರವನ್ನು ಹೋತೃವು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕು. ಈ ಋಕ್ಕು ಅಂಧಸ್ವತೀಋಕ್ಕಾಗಿಯೂ ತ್ರಿಷ್ಟುಪ್ ಛಂದಸ್ಕವಾಗಿಯೂ ಇರುವುದು. ಈ ಋಕ್ಕಿನ ಎರಡನೆಯ ಪಾದದಲ್ಲಿ **ಸಿಂಚತಾಮದ್ಯಮಂಧಃ** ಎಂದು ಅಂಧಃಶಬ್ದಪ್ರಯೋಗವಿದೆ. ಇದರಂತೆ ಉಳಿದ ಇತರ ಮೂರು ಯಾಜ್ಯಾಮಂತ್ರಗಳೂ ಇರುವವು. **ಪಿಬತಿ** ಧಾತುವು ಯಾವ ಋಕ್ಕಿನಲ್ಲಿ ಇರುವುದೋ ಆ ಋಕ್ಕಿಗೆ ಪೀತವತೀಋಕ್ಕೆಂದು ಹೆಸರು. ಅಂತಹ ಪೀತವತೀ ಋಕ್ಕನ್ನು ಮಧ್ಯಮ ಪರ್ಯಾಯದಲ್ಲಿ ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕು. **ಅಪಾಯ್ಯಸ್ಯಾಂಧಸೋ ಮದಾಯ** ಎಂಬುವುದೇ ಹೋತೃವು ಪಠಿಸಬೇಕಾದ ಯಾಜ್ಯಾ ಮಂತ್ರವು. ಏಕೆಂದರೆ **ಅಪಾಯ್ಯೇತಿ** ಎಂಬ ಪಿಬತಿಧಾತುವಿನ ರೂಪವು ಈ ಋಕ್ಕಿನಲ್ಲಿರುವುದು. ಹಾಗೆಯೇ ಮದಿಧಾತುವ ಯಾವ ಋಕ್ಕಿನಲ್ಲಿರುವುದೋ ಅದು ಮದ್ವತೀ ಋಕ್ಕನ್ನು ತೃತೀಯ ಪರ್ಯಾಯದಲ್ಲಿ ಶಸ್ತ್ರಮಂಗಳಿಗೆ ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕು. **ತಿಷ್ಠಾ ಹರೀ** ಎಂಬುದೇ ಆ ಮಂತ್ರವು. ಈ ಋಕ್ಕಿನ ಕೊನೆಯ ಭಾಗದಲ್ಲಿ **ರರಿಮಾತೇ ಮದಾಯ** ಎಂದು ಮದಿಧಾತುವಿನ ಪ್ರಯೋಗವಿರುವುದು. ಆದ್ದರಿಂದ ಹೋತೃವು ಈ ಋಕ್ಕನ್ನು ಮೂರನೇ ಪರ್ಯಾಯದಲ್ಲಿ ಶಸ್ತ್ರ ಮಂತ್ರಗಳ ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕು. ಈ ರೀತಿ ಎಲ್ಲವನ್ನೂ ಹೇಳಬೇಕು. ರಾತ್ರಿಕಾಲದಲ್ಲಿ ಪಠಿಸುವ ಅಂಧಸ್ವತೀಋಕ್ಕುಗಳು ಭೋಜನಾದಿಗಳನ್ನೂ ಕ್ಷೀರ (ಹಾಲು) ಪಾನಮಾಡುವ ಸಮಯದಲ್ಲಿ ಪಠಿಸುವ ಅಂಧಸ್ವತೀಋಕ್ಕುಗಳು ಪೀತವತೀ ಋಕ್ಕುಗಳನ್ನೂ, ಕೊನೆಯಲ್ಲಿ ಹರ್ಷದಿಂದ ಪಠಿಸುವ ಋಕ್ಕುಗಳು ಮದ್ವತೀಋಕ್ಕುಗಳಾಗಿಯೂ ಇರುವವು. ಆದ್ದರಿಂದ ಈ ಋಕ್ಕುಗಳು ಸಂದರ್ಭೋಚಿತವಾಗಿರುವವು. ಯಜ್ಞಕಾಲದಲ್ಲಿ ನಡೆಸುವ ಕಾರ್ಯಕಲಾಪಗಳಿಗೂ ಆನುರೂಪ್ಯ (ಹೊಂದಾಣಿಕೆ) ವಿರುವುದರಿಂದ ಯಜ್ಞವು ಸಮೃದ್ಧಿಯನ್ನೈದುವುದು.

**ಪ್ರಥಮೇನ ಪರ್ಯಾಯೇಣ ಸ್ತುವತೇ ಪ್ರಥಮಾನ್ಯೇವ ಪದಾನಿ ಪುನ-ರಾದದತೇ ಯದೇವೈಷಾಮಶ್ವಾ ಗಾವ ಆಸಂಸ್ತದೇವೈಷಾಂ ತೇನಾಽಽದದತೇ ॥**

ಪ್ರಥಮಪರ್ಯಾಯೇ ಪ್ರಯೋಗವಿಶೇಷಂ ವಿಧತ್ತೆ--ಯದಾ ಸಾಮಗಾಃ ಪ್ರಥಮೇನ ಪರ್ಯಾಯೇಣ ಸ್ತುವತೇ ತದಾನೀಂ ಸ್ತೋತ್ರಿಯಾಣಾಂ ಪ್ರಥಮಪಾದಾನ್ದ್ವಿರಭ್ಯಸ್ಯಂತಿ ॥ ಏವಂ ಶಸ್ತ್ರೇಽಪಿ ಪುರುಹೂತಂ ಪುರುಷ್ಟುತಮಿತ್ಯಾದಿಕಾಃ ಪ್ರಥಮಪಾದಾ ದ್ವಿರಭ್ಯಸನೀಯಾ ಯಥಾ ವಾವ ಸ್ತೋತ್ರಮೇವಂ ಶಸ್ತ್ರಮಿತ್ಯುಕ್ತತ್ವಾತ್ ॥ ಏವಂ ಸತ್ಯೇಷಾಮಸುರಾಣಾಂ ಅಶ್ವಾ ಗಾವ ಆಸನ್ನಿತಿ ಯದಸ್ತಿ ತತ್ಸರ್ವಮಸುರಾಣಾಂ ಧನಂ ತೇನ ಪ್ರಥಮಪಾದಾಭ್ಯಾಸೇನ ಸ್ವೀಕುರ್ವಂತಿ ॥

ಪ್ರಥಮ ಪರ್ಯಾಯದಲ್ಲಿ ಆಚರಿಸಬೇಕಾದ ವಿಶೇಷ ಕ್ರಮವನ್ನು ತಿಳಿಸುವರು. ಸಾಮಗರು ಪ್ರಥಮ ಪರ್ಯಾಯದಲ್ಲಿ ಸ್ತೋತ್ರವನ್ನು ಗಾನಮಾಡುವಾಗ ಮೊದಲನೆಯ ಪಾದವನ್ನು ಎರಡಾವರ್ತಿ ಉಚ್ಚರಿಸಿಗಾನಮಾಡುವರು. **ಯಥಾ ವಾವ ಸ್ತೋತ್ರಮೇವಂ ಶಸ್ತ್ರಂ** ಎಂದು ಹೇಳಿರುವುದರಿಂದ ಸ್ತೋತ್ರ (ಸಾಮಮಂತ್ರ) ವನ್ನನುಸರಿಸಿ ಶಸ್ತ್ರಮಂತ್ರಗಳನ್ನು ಪಠಿಸಬೇಕು ಎಂದು ವಿಧಿ ಇರುವುದರಿಂದ ಹೋತೃವು ಸಹ ಶಸ್ತ್ರಮಂತ್ರಗಳ ಪ್ರಥಮಪಾದವಾದ **ಪುರುಹೂತಂ ಪುರುಷ್ಟುತಂ** ಎಂದು ಮೊದಲಾಗುವ ಮಂತ್ರಗಳನ್ನು ಎರಡಾವರ್ತಿ ಪಠಿಸಬೇಕು. ಹೀಗೆ ಮಾಡುವುದರಿಂದ ಶತ್ರುಗಳಾದ ಅಸುರರ ವಶದಲ್ಲಿರುವ ಅಶ್ವಗಳು ಗೋವುಗಳು ಧನಮೊದಲಾದ ಸಂಪತ್ತುಗಳು ದೇವತೆಗಳಿಗೆ ಸ್ವಾಧೀನವಾಗುವವು.

**ಮಧ್ಯಮೇನ ಪರ್ಯಾಯೇಣ ಸ್ತುವತೇ ಮಧ್ಯಮಾನ್ಯೇವ ಪದಾನಿ ಪುನರಾದದತೇ ಯದೇವೈಷಾಮನೋ ರಥಾ ಆಸಂಸ್ತದೇವೈಷಾಂ ತೇನಾऽऽದದತೇ ॥**

ದ್ವಿತೀಯಪರ್ಯಾಯೇ ವಿಶೇಷಂ ವಿಧತ್ತೇ--ಅಯಂ ತ ಇಂದ್ರಸೋಮ ಇತ್ಯಸ್ಯಾಮೃಚಿ ನಿಪೂತೋ ಅಧಿ ಬರ್ಹಿಷೀತ್ಯೇವಂ ಮಧ್ಯಮಃ ಪಾದೋ ದ್ವಿರಭ್ಯಸನೀಯಃ । ಏಷಾಮಸುರಾಣಾಂ ಅನಃ ಶಕಟಂ ಯದಸ್ತಿ ಯೇ ಚ ರಥಾಸ್ತರತ್ಸರ್ವಂ ತೇನಾಭ್ಯಾಸೇನ ಸ್ವೀಕೃತಂ ಭವತಿ ॥

ಎರಡನೇ ಪರ್ಯಾಯದ ವಿಶೇಷ ಸಂಗತಿಯನ್ನು ತಿಳಿಸುವರು. **ಅಯಂ** ತ ಇಂದ್ರ ಸೋಮ ಎಂಬ ಋಕ್ಕಿನಲ್ಲಿ ನಿಪೂತೋ ಅಧಿ ಬರ್ಹಿಸಿ ಎಂಬ ಮಧ್ಯಮಭಾಗದ ಪದಗಳನ್ನು ಎರಡಾವರ್ತಿ ಪಠಿಸಬೇಕು. ಹೀಗೆ ಮಾಡುವುದರಿಂದ ಅಸುರರ ವಶದಲ್ಲಿರುವ ಗಾಡಿಗಳು, ರಥಗಳು ಮೊದಲಾದ ವಾಹನಗಳು ದೇವತೆಗಳ ವಶವಾಗುವವು.

**ಉತ್ತಮೇನ ಪರ್ಯಾಯೇಣ ಸ್ತುವತ ಉತ್ತಮಾನ್ಯೇವ ಪದಾನಿ ಪುನರಾದದತೇ ಯದೇವೈಷಾಂ ವಾಸೋ ಹಿರಣ್ಯಂ ಮಣಿರಧ್ಯಾತ್ಮಮಾಸೀತ್ತದೇವೈಷಾಂ ತೇನಾऽऽದದತೇ ॥**

ತೃತೀಯ ಪರ್ಯಾಯೇ ವಿಶೇಷಂ ವಿಧತ್ತೇ--ಇದಂ ಹ್ಯನ್ವೋಜಸಾ ಸುತಮಿತ್ಯಸ್ಯಾಮೃಚಿ ಪಿಬಾತ್ವಸ್ಯ ಗಿರ್ವಣಃ । ಪಿಬಾತ್ವಸ್ಯ ಗಿರ್ವಣ ಇತ್ಯುತ್ತಮಸ್ಯ ಪಾದಸ್ಯ ದ್ವಿರಭ್ಯಾಸಃ ॥ ಆತ್ಮಾನಂ ಶರೀರಮಧಿಕೃತ್ಯ ವರ್ತತ ಇತ್ಯಧ್ಯಾತ್ಮಮಸುರಾಣಾಂ ಶರೀರೇಽವಸ್ಥಿತಂ ವಾಸೋ ಹಿರಣ್ಯಂ ಮಣಿರಿತ್ಯೇವಮಾದಿಕಂ ಸರ್ವಂ ಗೃಹೀತಂ ಭವತಿ ॥

ತೃತೀಯ ಪರ್ಯಾಯದ ವಿಶೇಷಸಂಗತಿಯನ್ನು ತಿಳಿಸುವರು. ಇದಂ ಹ್ಯನ್ವೋಜಸಾ ಸುತಂ ಎಂಬುದು ತೃತೀಯ ಪರ್ಯಾಯದಲ್ಲಿ ಪಠಿಸಬೇಕಾದ ಮಂತ್ರವು. ಈ ಋಕ್ಕಿನ ಕೊನೆಯಲ್ಲಿರುವ ಪಿಬಾತ್ವಸ್ಯ ಗಿರ್ವಣಃ ಎಂಬ ಪದಗಳನ್ನು ಎರಡಾವರ್ತಿ ಪಠಿಸಬೇಕು. ಹೀಗೆ ಮಾಡುವುದರಿಂದ ಶತ್ರುಗಳಾದ ಅಸುರರ ಮೈಮೇಲಿರುವ ವಸ್ತ್ರ, ಆಭರಣ ಮೊದಲಾದ ಅಲಂಕಾರಗಳು ದೇವತೆಗಳ ವಶವಾಗುವವು.

**ಆ ದ್ವಿಷತೋ ವಸು ದತ್ತೇ ನಿರೇನಮೇಭ್ಯಃ ಸರ್ವೇಭ್ಯೋ ಲೋಕೇಭ್ಯೋ ನುದತೇ ಯ ಏವಂ ವೇದ ॥**

**ವೇದನಂ ಪ್ರಶಂಸತಿ— ದ್ವಿಷತಃ ಶತ್ರೋಃ ಸಕಾಶಾತ್ತದೀಯಂ ಧನಮಾದತ್ತ ಏನಂ ಶತ್ರುಂ ಸರ್ವೇಭ್ಯೋ ಲೋಕೇಭ್ಯೋ ನಿರ್ಣುದತೇ ನಿರಾಕರೋತಿ ॥**

ಈ ರೀತಿ ದ್ವೇಷಿಸುವ ಶತ್ರುಗಳಾದ ಅಸುರರನ್ನು ಈ ಸಮಸ್ತಲೋಕಗಳಿಂದಲೂ ಓಡಿಸಲಾಗುವುದು. ಅದರ ಧನ ಸಂಪತ್ತನ್ನು ಕಿತ್ತುಕೊಂಡು ಅವರನ್ನು ಅಟ್ಟಲಾಗುವುದು. ಈ ವಿಷಯವನ್ನು ತಿಳಿದಿರುವ ಪುರುಷನು ಸಹ ತನ್ನ ಶತ್ರುಗಳ ಧನಾದಿಸಂಪತ್ತನ್ನು ವಶಪಡಿಸಿಕೊಂಡು ಅವರನ್ನು ಓಡಿಸಲು ಸಮರ್ಥನಾಗುವನು.

**ಪವಮಾನವದಹರಿತ್ಯಾಹುರ್ನ ರಾತ್ರಿಃ ಪವಮಾನವತೀ ಕಥಮು ಭೇ ಪವಮಾನವತೀ ಭವತಃ ಕೇನ ತೇ ಸಮಾವದ್ಭಾಜೌ ಭವತ ಇತಿ ॥**

**ಅಥ ಕಂಚಿತ್ಪ್ರಶ್ನಮುತ್ಥಾಪಯತಿ—ಬಹಿಷ್ಪವಮಾನೋ ಮಾಧ್ಯಂದಿನಃ ಪವಮಾನ ಆರ್ಭವಃ ಪವಮಾನಶ್ಚೇತ್ಯೇವಮಹನಿ ಪವಮಾನಸ್ತೋತ್ರತ್ರಯಂ ವಿದ್ಯತೇ ನ ತು ರಾತ್ರೌ ತದಸ್ತ್ಯತ ಉಭಯೋಃ ಪವಮಾನತ್ವಂ ಕಥಂ ಸಿಧ್ಯತಿ॥ತದಸಿದ್ಧೌ ಚ ಕೇನೋಪಾಯೇನಾಹಶ್ಚ ರಾತ್ರಿಶ್ಚೇತ್ಯೇತೇ ಸಮಾವದ್ಭಾಜೌ ಭವತಃ । ಸಮಾನಭಾಗಯುಕ್ತೇ ಭವತ ಇತಿ ಪ್ರಶ್ನವಾದಿನ ಆಹುಃ ॥**

ಇಲ್ಲಿ ಒಂದು ಪ್ರಶ್ನೆಯು (ಸಮಸ್ಯೆಯು) ಉದ್ಭವಿಸುವುದು. ಹಗಲಿನಲ್ಲಿ ನಡೆಸುವ ಕಾರ್ಯಕಲಾಪಗಳಲ್ಲಿ (ಮೂರು ಸವನಗಳಲ್ಲಿ) ಬಹಿಷ್ಪವಮಾನ, ಮಾಧ್ಯಂದಿನಪವಮಾನ, ಆರ್ಭವಪವಮಾವ ಎಂಬ ಮೂರು ಭಾಗಗಳಿರುವವು. ಇವು ಹಗಲಿನಲ್ಲಿ ಮಾತ್ರ ಇರುವವು. ರಾತ್ರಿಪ್ರಯೋಗದಲ್ಲಿ ಇರುವುದಿಲ್ಲ. ಆದ್ದರಿಂದ ಹಗಲಿನ ಮತ್ತು ರಾತ್ರಿಕಾಲದ ಪವಮಾನ ಸಂಬಂಧವಾದ ಕಾರ್ಯಕಲಾಪಗಳಲ್ಲಿ ಸಮಾನತ್ವವು ಹೇಗೆ ಸಿದ್ಧಿಸುವುದು? ಹೀಗಿರುವುದರಿಂದ ಈ ಪವಮಾನಮಂತ್ರಗಳ ಸಮಾನತ್ವವು (ಹಗಲು ಮತ್ತು ರಾತ್ರಿಕಾಲಗಳಲ್ಲಿರುವುದು ಎಂದುದು ಸಮಾನತ್ವವು. ರಾತ್ರಿಕಾಲದಲ್ಲಿ ಪವಮಾನವಿರುವುದಿಲ್ಲ) ಹೇಗೆ ತಾನೇ ಸಿದ್ಧಿಸುವುದು? ಎಂದು ಕೆಲವರು ಪ್ರಶ್ನೆ ಮಾಡುವರು.

**ಯದೇವೇಂದ್ರಾಯ ಮದ್ವನೇ ಸುತಮಿದಂ ವಸೋ ಸುತಮಂಧ ಇದಂ ಹ್ಯನ್ವೋಜಸಾ ಸುತಮಿತಿ ಸ್ತುವಂತಿ ಚ ತೇನ ರಾತ್ರಿಃ ಪವಮಾನವತೀ ತೇನೋಭೇ ಪವಮಾನವತೀ ಭವತಸ್ತೇನ ತೇ ಸಮಾವದ್ಭಾಜೌ ಭವತಃ ॥**

ತತ್ರೋತ್ತರಮಾಹ— ಯದೇವೇಂದ್ರಾಯ ಮದ್ವನೇ ಸುತಮಿದಂ ವಸೋ ಸುತಮಂಧ ಇದಂ ಹ್ಯನ್ವೋಜಸಾ ಸುತಮಿತಿ ತಾಭಿರೇತಾಭಿಸ್ತಿಸೃಭಿರುದ್ಗಾತಾರಃ ಸ್ತುವಂತಿ ॥ ಹೋತಾರಃ ಶಂಸಂತಿ। ಅಹನಿ ಯಥಾ ತ್ರಿಷ್ಟುಪಿ ಪವಮಾನಸ್ತೋತ್ರನಾಮಸು ಪವಮಾನಶಬ್ದೋಽನುವೃತ್ತ ಏವಮತ್ರಾಪಿ ತಿಸೃಷ್ವೃಕ್ಷು ಸುತಶಬ್ದೋಽನುವೃತ್ತೋಽತಃ ಪವಮಾನಸಾಮ್ಯಾದ್ರಾತ್ರಿಃ ಪವಮಾನವತೀ ॥ ತೇ ನ ಪ್ರಕಾರೇಣೋಭಯೋಃ ಪವಮಾನವತ್ತ್ವೇ ಸಾಮ್ಯೇ ಸತಿ ತುಲ್ಯ-ಭಾಗತ್ವಂ ಸಿಧ್ಯತಿ ॥

ಮೇಲಿನ ಪ್ರಶ್ನೆಗೆ ಉತ್ತರವನ್ನು ಹೇಳುವರು—ಉದ್ಗಾತೃಗಳೆಂಬ ಸಾಮಗಾಯಕರು **ಇಂದ್ರಾಯ ಮದ್ವನೇ ಸುತಂ** (ಋ. ಸಂ ೮-೯೨-೧೯), **ಇದಂ ವಸೋ ಸುತಮಂಧಃ** (ಋ. ಸಂ ೮-೩೨-೧), **ಇದಂ ಹ್ಯನ್ವೋಜಸಾ ಸುತಂ** (ಋ. ಸಂ ೩-೫೧-೧೦) ಎಂಬ ಮೂರು ಮಂತ್ರಗಳನ್ನು ರಾತ್ರಿಕಾಲದಲ್ಲಿ ಗಾನಮಾಡುವರು. ಇದನ್ನನುಸರಿಸಿ ಹೋತೃವರ್ಗದ ಋತ್ವಿಕ್ಕುಗಳೂ ಇವೇ ಮಂತ್ರಗಳನ್ನು ಶಸ್ತ್ರಮಂತ್ರಗಳಲ್ಲಿ ಪಠಿಸುವರು. ಹಗಲುಹೊತ್ತಿನಲ್ಲಿ ಮೂರು ಪರ್ಯಾಯಗಳಲ್ಲಿ **ಸುತಂ** (ಹಿಂಡಲ್ಪಟ್ಟ ಸೋಮರಸವನ್ನು) ಎಂಬ ಶಬ್ದಪ್ರಯೋಗವಿರುವ ಮೇಲಿನ ಮೂರು ಋಕ್ಕುಗಳನ್ನು ಪಠಿಸುವರು. ಸುತಶಬ್ದವು ಪವಮಾನಶಬ್ದವನ್ನೇ ಅನುಸರಿಸಿರುವುದು. ಆದ್ದರಿಂದ ಮೇಲೆ ಹೇಳಿದ ಸುತಂಶಬ್ದ ಪ್ರಯೋಗವಿರುವ ಋಕ್ಕುಗಳನ್ನು ಪಠಿಸುವುದರಿಂದ ರಾತ್ರಿಕಾಲದಲ್ಲಿಯೂ ಪವಮಾನವತೀ ಋಕ್ಕುಗಳನ್ನು ಪಠಿಸಿದಂತೆಯೇ ಆಗುವುದು. ಆದ್ದರಿಂದ ಹಗಲಿನಲ್ಲಿಯೂ ಪವಮಾನವತೀ ಋಕ್ಕುಗಳ ಪಠನದಿಂದ ಎರಡುವಿಧ ಕಾರ್ಯಕಲಾಪಗಳೂ ಸಮಾನವಾದ ಶಕ್ತಿ ಸಾಮರ್ಥ್ಯಗಳನ್ನು ಹೊಂದಿರುವವು ಎಂಬ ವಿಷಯವು ಸ್ಪಷ್ಟವಾಯಿತು.

**ಪಂಚದಶಸ್ತೋತ್ರಮಹರಿತ್ಯಾಹುರ್ನ ರಾತ್ರಿಃ ಪಂಚದಶಸ್ತೋತ್ರಾ ಕಥ-ಮುಭೇ ಪಂಚದಶಸ್ತೋತ್ರೇ ಭವತಃ ಕೇನ ತೇ ಸಮಾವದ್ಭಾಜೌ ಭವತ ಇತಿ ॥**

ಪುನರಪಿ ಪ್ರಶ್ನಾಂತರಮುತ್ಥಾಪಯತಿ – ಅಗ್ನಿಷ್ಟೋಮಸ್ತೋತ್ರಾಣಿ ದ್ವಾದಶ ಉಕ್ಥ್ಯ-ಸ್ತೋತ್ರಾಣಿ ತ್ರೀಣ್ಯೇತಾನ್ಯಹನಿ ಪ್ರಯುಜ್ಯಂತೇ ॥ ತಸ್ಮಾದಹಃ ಪಂಚದಶಸ್ತೋತ್ರೋಪೇತಂ ರಾತ್ರೌ ತು ನ ತಾನಿ ವಿದ್ಯಂತೇ ಕಥಂ ಪಂಚದಶಸ್ತೋತ್ರಸಾಮ್ಯೇನ ತಯೋರ್ಭಾಗಸಾಮ್ಯಂ ಸಿಧ್ಯತೀತಿ ಪ್ರಶ್ನಃ ॥

ಇಲ್ಲಿ ಮತ್ತೊಂದು ಸಮಸ್ಯೆಯು ಉದ್ಭವಿಸುವುದು. ಅಗ್ನಿಷ್ಟೋಮಯಾಗದಲ್ಲಿ ಹನ್ನೆರಡು ಸ್ತೋತ್ರಗಳನ್ನು ಉಪಯೋಗಿಸುವರು. ಉಕ್ಥ್ಯದಲ್ಲಿ ಉಪಯೋಗಿಸುವ ಮೂರು ಸ್ತೋತ್ರಗಳೂ ಸೇರಿ (ಅತಿರಾತ್ರದಲ್ಲಿ) ಒಟ್ಟು ಹದಿನೈದು ಸ್ತೋತ್ರಗಳಿರುವವು ಎಂದರೆ ಹಗಲಿನ ಪ್ರಯೋಗದಲ್ಲಿ ಹದಿನೈದು ಸ್ತೋತ್ರಗಳಿರುವವು. ಎಂದರೆ ಹಗಲಿನ ಪ್ರಯೋಗದಲ್ಲಿ ಹದಿನೈದು ಸ್ತೋತ್ರಗಳಿರುವವು ಅದರಂತೆ ರಾತ್ರಿಕಾಲದಲ್ಲಿ ಇರುವುದಿಲ್ಲ. ಆದ್ದರಿಂದ ಹದಿನೈದುಸ್ತೋತ್ರಗಳ ವಿಷಯದಲ್ಲಿ ಹಗಲಿನ ಕಾರ್ಯಕಲಾಪಗಳಿಗೂ ರಾತ್ರಿಕಾಲದ ಕಾರ್ಯಕಲಾಪಗಳಿಗೂ ಹೇಗೆ ಸಾಮ್ಯವಿದ್ದಂತಾಯಿತು ಎಂಬುದೇ ಇಲ್ಲಿ ಪ್ರಶ್ನೆಯು.

**ದ್ವಾದಶ ಸ್ತೋತ್ರಾಣ್ಯಪಿಶರ್ವರಾಣಿ ತಿಸೃಭಿರ್ದೇವತಾಭಿಃ ಸಂಧಿನಾ ರಾಥಂತರೇಣ ಸ್ತುವತೇ ತೇನ ರಾತ್ರಿಃ ಪಂಚದಶಸ್ತೋತ್ರಾ ತೇ-**

ನೋಭೇ ಪಂಚದಶಸ್ತೋತ್ರೇ ಭವತಸ್ತೇನ ತೇ ಸಮಾವದ್ಭಾಜೌ ಭವತಃ ॥

ತತ್ರೋತ್ತರಮಾಹ—ದ್ವಾದಶಸು ಚಮಸಗಣಪರ್ಯಾಯೇಷು ದ್ವಾದಶಸ್ತೋತ್ರಾಣಿ ವಿದ್ಯಂತೇ ತಾನ್ಯಪಿಶರ್ವರಾಣಿ । ರಾತ್ರಾವನುಷ್ಠೇಯಾನಾಂ ಛಂದಸಾಮಪಿ ಶರ್ವರಸಂಜ್ಞಾ ಪೂರ್ವಮುಕ್ತಾ। ತೈಶ್ಛಂದೋಭಿರ್ನಿಷ್ಪಾದ್ಯತ್ವಾತ್ ಸ್ತೋತ್ರಾಣ್ಯಪಿ ತನ್ನಾಮಕಾನಿ ॥ ರಥಂತರ-ಸಾಮ್ನಾ ನಿಷ್ಪಾದ್ಯಂ ಯತ್ಸಂಬಂಧಿ ಸ್ತೋತ್ರಂ ತತ್ರ ತಿಸ್ರೋ ದೇವತಾಃ ಶ್ರೂಯಂತೇ ॥ ತಾಭಿಃ ಸ್ತೋತವ್ಯಾಭಿಸ್ತಿಸೃಭಿರ್ದೇವತಾಭಿಃ ಸ್ತೋತ್ರಮಪಿ ತ್ರೇಧಾ ಭಿದ್ಯತೇ ॥ ತೇನ ಕಾರಣೇನ ತಾಭಿಃ ಪಂಚದಶಸ್ತೋತ್ರಾ ಸಂಪನ್ನಾ ॥ ತಥಾ ಸತ್ಯುಭಯೋರಹೋರಾತ್ರಯೋಃ ಸ್ತೋತ್ರ-ಸಂಖ್ಯಾಸಾಮ್ಯಾತ್ಸಮಾನಭಾಗೋಪೇತತ್ವಂ ಸಿಧ್ಯತಿ ॥

ಮೇಲಿನ ಸಮಸ್ಯೆಗೆ ಉತ್ತರವನ್ನು ಹೇಳುವರು—ಹನ್ನೆರಡು ಚಮಸಗಣಪರ್ಯಾಯಗಳಲ್ಲಿ ಹನ್ನೆರಡು ಸ್ತೋತ್ರ್ಯ ಗಳಿರುವವು. ಇವುಗಳಿಗೆ ಅಪಿಶರ್ವರಾಣಿ ಎಂಬ ಹೆಸರು ಇರುವುದೆಂದು ಹಿಂದೆಯೇ ಹೇಳಲಾಗಿದೆ. ಹಾಗೆಯೇ ರಾತ್ರಿ ಕಾಲದಲ್ಲಿ ಪಠಿಸಲ್ಪಡುವ ಛಂದಸ್ಸುಗಳಿಗೂ ಇದೇ ಹೆಸರು ಸಲ್ಲುವುದು ಎಂದೂ ಹೇಳಿದೆ. ಆದ್ದರಿಂದ ಆ ಛಂದಸ್ಸುಗಳಿಂದ ಕೂಡಿದ ಸ್ತೋತ್ರಗಳಿಗೂ ಅದೇ ಹೆಸರು ಇರುವುದು. ಮತ್ತು ರಥಂತರ ಎಂಬ ಸಾಮಕ್ಕೆ (ಸಾಮಮಂತ್ರದಲ್ಲಿ) ಎಂದರೆ ಸಂಧಿಸ್ತೋತ್ರದಲ್ಲಿ ಮೂರು ದೇವತೆಗಳನ್ನು ಸ್ತುತಿಸಲಾಗಿರುವುದು. ಮೂರು ಬೇರೆ ಬೇರೆ ದೇವತೆಗಳಿರುವುದರಿಂದ ಆ ಮಂತ್ರವು ಮೂರು ಪ್ರತ್ಯೇಕಸ್ತೋತ್ರಗಳೆಂದೇ ಭಾವಿಸಲ್ಪಡುವುದು. ಆದ್ದರಿಂದ ಈ ರಾತ್ರಿಕಾಲದ ಕಾರ್ಯಕಲಾಪಗಳಲ್ಲಿ ಹದಿನೈದು ಸ್ತೋತ್ರಗಳಿದ್ದಂತಾಯಿತು. ಹಗಲಿನಲ್ಲಿಯೂ ರಾತ್ರಿಕಾಲದಲ್ಲಿಯೂ ಇರುವ ಈ ಹದಿನೈದು ಸ್ತೋತ್ರಗಳ ಸಂಖ್ಯೆಯ ಸಾಮ್ಯ ದಿಂದ ಹಗಲು ಮತ್ತು ರಾತ್ರಿಗಳ ಕಾರ್ಯಕಲಾಪಗಳಿಗೆ ಸಮಾನವಾದ ಶಕ್ತಿಸಾಮರ್ಥ್ಯಗಳಿದ್ದಂತಾಯಿತು.

ಪರಿಮಿತಂ ಸ್ತುವಂತ್ಯಪರಿಮಿತಮನುಶಂಸತಿ ಪರಿಮಿತಂ ವೈ ಭೂತಮಪ-ರಿಮಿತಂ ಭವ್ಯಮಪರಿಮಿತಸ್ಯಾವರುಧ್ಯಾ ಇತಿ ॥

ಉದ್ಗಾತಾರಃ ಪರಿಮಿತಂ ಯಥಾ ಭವತಿ ತಥಾ ಸ್ತುವಂತಿ ॥ ತ್ರಿವೃತ್ಪಂಚದಶ(ಶಃ) ಸಪ್ತದಶ ಏಕವಿಂಶ ಇತ್ಯೇವಂ ಚತುರ್ಭಿರೇವ ಸ್ತೋಮೈರತ್ರ ಸರ್ವಸ್ತೋತ್ರನಿಷ್ಪತ್ತೇಃ ॥ ಹೋತಾ ತ್ವಪರಿಮಿತಂ ಯಥಾ ಭವತಿ ತಥಾಽನುಶಂಸತಿ ಶಂಸನೀಯಾ ಋಚ ಏತಾವತ್ಯ ಏವೇತಿ ಸರ್ವತ್ರಾನುಗತಸ್ಯ ಸಂಖ್ಯಾನಿಯಮಸ್ಯ ಕಸ್ಯಚಿದಭಾವಾತ್ ॥ ಪೂರ್ವಭಾವಿನಃ ಸ್ತೋತ್ರಸ್ಯ ಪರಿಮಿತತ್ವಮುತ್ತರಭಾವಿನಃ ಶಸ್ತ್ರಸ್ಯಾಪರಿಮಿತತ್ವಂ ಚ ಲೌಕಿಕನ್ಯಾಯಾನುಸಾರಿ । ಲೋಕೇ ಭೂತಂ ಪೂರ್ವಂ ಸಂಪಾದಿತಂ ಧನಂ ಪರಿಮಿತಮಿಯದೇವೇತಿ ನಿಯತಿರಸ್ತಿ ಭವ್ಯಮಿತಃ ಪರಂ ಸಂಪಾದನೀಯಂ ಧನಪರಿಮಿತಂ ತೃಷ್ಣಾಯಾ ನಿರವಧಿಕತ್ವೇನೈತಾವದೇವ ಸಂಪಾದಯಿಷ್ಯಾಮಿ ನತ್ವಧಿಕಮಿತಿ ನಿಯತೇರಭಾವಾತ್ ॥ ತಸ್ಮಾದುಪರಿತನಶಂಸನಬಾಹುಲ್ಯಮಪರಿಮಿತಧನ-ಪ್ರಾಪ್ತ್ಯೈ ಭವತೀತ್ಯಭಿಪ್ರೇತ್ಯ ಹೋತುರಪರಿಮಿತಮನುಶಂಸನಂ ॥

ಶಸ್ತ್ರಮಂತ್ರಗಳ ಅಪರಿಮಿತತ್ವ (ಬಾಹುಳ್ಯ)ವನ್ನು ವಿವರಿಸುವರು—ಉದ್ಗಾತೃಗಳು ಎಂದರೆ ಸಾಮಗಾಯಕರು ಮಾಡುವ ಸ್ತೋತ್ರಗಳಲ್ಲಿ ಇಷ್ಟೇ ಎಂದು ಕ್ಲಪ್ತ (ನಿರ್ಧಾರ) ವಾಗಿರುವ ಮಂತ್ರಗಳಿಂದ ಸ್ತೋತ್ರಮಾಡುವರು ಎಂದರೆ ತ್ರಿವೃತ್, ಪಂಚದಶ ಸಪ್ತದಶ, ಏಕವಿಂಶ ಎಂಬ ನಾಲ್ಕುವಿಧ ಸ್ತೋಮಗಳಿಂದ ನಿಷ್ಪತ್ತಿಯಾಗುವ (ಲಭಿಸುವ) ಸ್ತೋತ್ರಸಂಖ್ಯೆಗಳಿಂದ ಸ್ತುತಿಸುವರು. ಆದರೆ ಹೋತೃವರ್ಗದವರು ಪಠಿಸುವ ಶಸ್ತ್ರಮಂತ್ರಗಳಲ್ಲಿ ನಿರ್ದಿಷ್ಟವಾದ ಮಂತ್ರಸಂಖ್ಯೆ ಇರುವುದಿಲ್ಲ. ಎಂದರೆ ಇಷ್ಟೇ ಸಂಖ್ಯೆಯ ಮಂತ್ರಗಳನ್ನು ಪಠಿಸಬೇಕೆಂಬ ನಿಯಮವಿಲ್ಲ. ಸಾಮಗರು ಪಠಿಸುವ ಮಂತ್ರಗಳಿಗೆ ಅನುಸಾರವಾಗಿಯೇ ಇರಬೇಕೆಂಬ ನಿಯಮ ವಿದ್ದರೂ ಮಂತ್ರಸಂಖ್ಯೆಯು ಹೆಚ್ಚಾಗಿಯೇ ಇರುವುದು. ಈ ರೀತಿ ಇರುವುದು ನಿಯಮಕ್ಕೆ ವಿರೋಧವಲ್ಲವೇ ಎಂದರೆ ಈ ವಿಷಯವನ್ನು ಲೌಕಿಕ ನಿಯಮಾನುಸಾರವಾಗಿ ಪರಿಹರಿಸುವರು. ಹೇಗೆಂದರೆ—ಒಬ್ಬ ಪುರುಷನು ಇದುವರೆಗೆ ಸಂಪಾದಿಸಿರುವ ಧನವು ಇಷ್ಟೇ ಸರಿ ಎಂದು ನಿರ್ದಿಷ್ಟವಾಗಿ (ಖಂಡಿತವಾಗಿ) ಹೇಳಬಹುದು. ಆದರೆ ಆ ಪುರುಷನು ಮುಂದೆ ತಾನು ಜೀವಿಸುವ ಕಾಲ ಪರ್ಯಂತರ ಎಷ್ಟು ಧನವನ್ನು ಸಂಪಾದಿಸುತ್ತೇನೆಂದು ಹೇಳಲು ಸಾಧ್ಯವಿಲ್ಲ. ಅದರಂತೆಯೇ ಮೊದಲು ಸಾಮಗರು ಸ್ತುತಿಸುವ ಮಂತ್ರಸಂಖ್ಯೆಯು ಇಷ್ಟೇ ಸರಿ ಎಂದು ನಿರ್ದಿಷ್ಟವಾಗಿರುವುದು. ಇದು ಪುರುಷನ ಇದುವರೆಗಿನ ಕಾಲಕ್ಕೆ (ಭೂತ ಕಾಲಕ್ಕೆ) ಸಂಬಂಧಿಸಲ್ಪಟ್ಟ ಧನಾರ್ಜನೆಗೆ ಸಾದೃಶ್ಯವು. ಅನಂತರ ಎಂದರೆ ಹೋತೃವರ್ಗದವರು ಪಠಿಸುವ ಶಸ್ತ್ರಮಂತ್ರಗಳು ಪುರುಷನ ಮುಂದಿನ ಜೀವಮಾನದಲ್ಲಿ ಸಂಪಾದಿಸಬಹುದಾದ ಧನಕ್ಕೆ ಸಾದೃಶ್ಯವು. ಎಂದರೆ ಪುರುಷನು ಮುಂದೆ (ಭವಿಷ್ಯತ್ಕಾಲ ದಲ್ಲಿ) ಎಷ್ಟು ಸಂಪಾದಿಸುತ್ತೇನೆಂದು ಹೇಳಲು ಸಾಧ್ಯವಿಲ್ಲವೋ ಅದರಂತೆ ಹೋತೃಗಳು ಪಠಿಸುವ ಶಸ್ತ್ರಮಂತ್ರಗಳ ಸಂಖ್ಯೆಗೂ ಕ್ಲಿಪ್ತಿಯಿಲ್ಲ. ಎಂದರೆ ಇಷ್ಟೇ ಸಂಖ್ಯೆಯ ಮಂತ್ರಗಳನ್ನು ಪಠಿಸಬೇಕೆಂಬ ನಿರ್ಬಂಧವಿಲ್ಲ. ಉದ್ಗಾತೃಗಳು ಸ್ತುತಿಸುವ ಸಾಮ ಮಂತ್ರಗಳಿಗೆ ಪರಿಮಿತಿಯುಂಟು. ಆದರೆ ಹೋತೃಗಳು ಪಠಿಸುವ ಶಸ್ತ್ರಮಂತ್ರಗಳಿಗೆ ಪರಿಮಿತಿಯಿಲ್ಲ ಎಂದಭಿಪ್ರಾಯವು.

**ಅತಿ ಶಂಸತಿ ಸ್ತೋತ್ರಮತಿ ವೈ ಪ್ರಜಾऽऽತ್ಮಾನಮತಿ ಪಶವಸ್ತದ್ಯತ್ಸ್ತೋ- ತ್ರಮತಿ ಶಂಸತಿ ಯದೇವಾಸ್ಯಾತ್ಯಾತ್ಮಾನಂ ತದೇವಾಸ್ಯೈತೇನಾವ- ರುಂಧೇऽವರುಂಧೇ ॥**

**ಪ್ರಕಾರಾಂತರೇಣ ಶಸ್ತ್ರಬಾಹುಲ್ಯಂ ಪ್ರಶಂಸತಿ—ಸ್ತೋತ್ರಗತಾಮೃಕ್ಸಂಖ್ಯಾಮತಿಲಂಘ್ಯ ಹೋತಾ ಶಂಸತೀತಿ ಯದಸ್ತಿ ತದ್ಯುಕ್ತಮೇವ ॥ ಲೋಕೇಽಪ್ಯಾತ್ಮಾನಮತಿಲಂಘ್ಯ ಪ್ರಜಾನಾಂ ಚಾವಸ್ಥಿತತ್ವಾತ್ ॥ ಸ್ವಯಮೇಕ ಏವ ಪುತ್ರಾದಯಸ್ತು ಬಹವೋ ಗವಾಶ್ವಾದಿಪಶವಶ್ಚ ಬಹವಸ್ತಸ್ಮಾದಾತ್ಮಸ್ಥಾನೀಯಂ ಸ್ತೋತ್ರಂ ಪ್ರಜಾಪಶುಸ್ಥಾನೀಯಶಸ್ತ್ರಾಧಿಕ್ಯೇನ ಯದೇವ ಪ್ರಜಾಪಶ್ವಾದಿ ಧನಂ ತಸ್ಯ ಯಜಮಾನಸ್ಯ ಸ್ವಾತ್ಮಾನಮತಿಕ್ರಮ್ಯಾಧಿಕಮಭೀಷ್ಟಂ ತತ್ಸರ್ವ- ಮಸ್ಯ ಯಜಮಾನಸ್ಯ ಹೋತಾ ಸಂಪಾದಯತಿ । ಪದಾಭ್ಯಾಸೋऽಧ್ಯಾಯಸಮಾಪ್ತ್ಯರ್ಥಃ ॥**

ಮೇಲೆ ಹೇಳಿದ ವಿಷಯವನ್ನೇ ಬೇರೆವಿಧವಾಗಿ ವರ್ಣಿಸುವರು—ಉದ್ಗಾತೃವು ಸ್ತುತಿಸುವ ಮಂತ್ರಸಂಖ್ಯೆಗಿಂತ ಹೋತೃವು ಪಠಿಸುವ ಶಸ್ತ್ರಮಂತ್ರಗಳ ಸಂಖ್ಯೆಯು ಅಧಿಕವಾಗಿರುವುದು (ಹೆಚ್ಚಾಗಿರುವುದು) ಸಹಜವೇ ಆಗಿದೆ. ಹೇಗೆಂದರೆ, ಲೋಕವ್ಯವಹಾರದಲ್ಲಿ ಪುರುಷನು ಒಬ್ಬನೇ ಇದ್ದರೂ ಅವನಿಗೆ ಅನೇಕಮಂದಿ ಮಕ್ಕಳುಗಳಿರುವರು ಮತ್ತು ಅವನಿಗೆ ಹಸುಗಳು ಅಶ್ವಗಳು ಮೊದಲಾದ ಪಶುಸಂಪತ್ತು ಬಹಳವಾಗಿರುವುದು. ಆದ್ದರಿಂದ ಸಾಮಗರು ಸ್ತುತಿಸುವ ಮಂತ್ರಕ್ಕೆ ಪುರುಷನ ಸಾದೃಶ್ಯ ವಿರುವುದು. ಆದರೆ ಹೋತೃವು ಪಠಿಸುವ ಶಸ್ತ್ರಮಂತ್ರಗಳಿಗೆ ಪುರುಷನ ಪುತ್ರಾದಿಗಳು (ಅನೇಕ ಮಕ್ಕಳು) ಮತ್ತು ಗವಾಶ್ವಾದಿ ಪಶುಸಂಪತ್ತೂ ಅಧಿಕವಾಗಿರುವುದು. ಅದರಂತೆ ಉದ್ಗಾತೃವಿನ ಸ್ತೋತ್ರಸಂಖ್ಯೆಯು ನಿರ್ದಿಷ್ಟವಾಗಿದ್ದರೂ ಹೋತೃವಿನ ಶಸ್ತ್ರ

ಮಂತ್ರಗಳ ಸಂಖ್ಯೆಯು ಅಪರಿಮಿತವಾಗಿರುವವು. ಆದ್ದರಿಂದ ಹೋತೃವು ಅನೇಕ ಸಂಖ್ಯೆಯ ಮಂತ್ರಗಳನ್ನು ಪಠಿಸುವುದರಿಂದ ಯಜ್ಞಮಾಡುವ ಯಜಮಾನನಿಗೆ ಅನೇಕ ಮಂದಿ ಪುತ್ರಾದಿಗಳೂ ಪಶುಸಮೃದ್ಧಿಯೂ ಲಭಿಸುವುದೆಂದು ಮುಖ್ಯಾಭಿಪ್ರಾಯವು

*English Translation*

**(The Shastras of Atiratra at the three Paryayas. Sandhi Stotra)**

The Hotar commences the recitations at Atiratra with an Anushtubh verse containing the term andhas, i.e., darkness, viz., pantam a vo andhasah (8, 81, 1). For night belongs to Anushtubh; it has the nature of night.

As appropriate Yajya verse at the end of each turn of the three Paryayas Trishtubh containing the terms andhas darkness pa to drink, and mad to be druuk, are used. What is appropriate at the sacrifice, that is successful.

The Sama singers repeat when chanting at the first Paryaya twice the first padas only of the verse (which they chant). By doing so they take from them (the Asuras) all their horses and cows.

At the middle Paryaya they repeat twice the middle padas. By doing so they take from them the Asuras, their carts and carriages.

At the last Paryaya they repeat twice when chanting the last padas of the verse which they chant. By doing so they take from (the Asuras) all things they wear on their own body, such as dresses, gold and jewels.

He who has such a knowledge deprives his enemy of his property and turns him out of all these worlds (depriving him of every firm footing).

They ask, How are the Pavamana Stotras provided for the night, where as such Stotras refer only to the day, but not to the night? In what way are they both made to consist of the same parts to have the same number of Stotras and Shastras?

The answer is (they are provided for) by the following verses, which form parts of the Stotras as well of the Shastras (at the Atiratra): indraya madvane Sutam (8, 81, 19), Samaveda Samh (2, 72). idam vaso sutam andhah (8, 2, 1. Sam. S. 2, 84), idam hyanvajasa sutam (3, 51, 10. Sam. S. 2, 87) In this way the night becomes also provided with Pavamanas for the verses mentioned contain the term suta, i.e., squeezed, referring to the squeezing of the Soma juice, which term is proper to the Pavamana Stotra; in this way both day and night are provided with Pavamanas, and made to consist of the same (number of) parts.

They ask, as there are fifteen Stotras for the day only, but not for the night, how are there fifteen Stotras for both (for day as well as for night?) In what way are they made to consist of the same number of parts?

The answer is, the Apisarvaras, from twelve Stotras. Besides, they chant according to the Rathantara tune the Sandhi Stotra which contains three sets of verses addressed to three deities. In this way night comprises also fiifteen Stotras. Thus both day and night comprise each fifteen Stotras. Thus both are made to consist of the same number of parts.

The number of verses for making the Stotras is limited, but the number of recitations which follow the Stotras is unlimited. The past is, as it were, limited, defined; the future is, as it were, unlimited not defined. In order to secure the future wealth & c. the Hotar repeats more verses than the Sama singers chant. What goes beyond the Stotra is offspring, what goes beyond one's self represented by the Stotra is cattle. By repeating, when making his recitation, more verses than the Sama singers chant the Hotar acquires all that he the sacrificer has beyond his own self on this earth i e., all his cattle, children, fortune & c.

**ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದಲ್ಲಿ ಹದಿನಾರನೆಯ ಅಧ್ಯಾಯದಲ್ಲಿ ಆರನೆಯ ಖಂಡವು ಸಮಾಪ್ತವಾದುದು.**

**ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ಷೋಡಶಾಧ್ಯಾಯಃ ಸಮಾಪ್ತಃ**

**ಹದಿನಾರನೆಯ ಅಧ್ಯಾಯವು ಮುಗಿದುದು.**



# ಅಥೈತರೇಯಬ್ರಾಹ್ಮಣೇ ಸಪ್ತದಶಾಧ್ಯಾಯೇ ಪ್ರಥಮಃ ಖಂಡಃ

## ಹದಿನೇಳನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

[ಆಶ್ವಿನಶಸ್ತ್ರವು; ಗವಾಮಯನದ ಮೊದಲನೇ ದಿನವು; ರಥಂತರ ಮತ್ತು ಬೃಹತ್ಸಾಮಗಳು ಮತ್ತು ಅವಕ್ಕೆ ಸಂಬಂಧಪಟ್ಟ ಇತರ ಮಂತ್ರಗಳು. ಸತ್ರಯಾಗದಲ್ಲಿ ಮಹಾವ್ರತವೆಂಬ ಹೆಸರಿನ ದಿನದ ಕಾರ್ಯಕಲಾಪಗಳು]

[ ಪ್ರಜಾಪತಿಯ ಪುತ್ರಿಯಾದ ಸೂರ್ಯಾ ಎಂಬ ಕನ್ಯೆಯ ವಿವಾಹವು. ಆಶ್ವಿನಶಸ್ತ್ರವು ವಧುವಿಗೆ ಕೊಡುವ ಬಳುವಳಿಯು. ಈ ಮಂತ್ರವನ್ನು ಹೋತೃವು ಹೇಗೆ ಪಠಿಸಬೇಕು ಎಂಬ ಕ್ರಮವು ಈ ಶಸ್ತ್ರದ ಮೊದಲನೆಯಮಂತ್ರವು]

**ಪ್ರಜಾಪತಿರ್ವೈ ಸೋಮಾಯ ರಾಜ್ಞೇ ದುಹಿತರಂ ಪ್ರಾಯಚ್ಛತ್ಸೂರ್ಯಾಂ ಸಾವಿತ್ರೀಂ ತಸ್ಯೈ ಸರ್ವೇ ದೇವಾ ವರಾ ಆಗಚ್ಛಂಸ್ತಸ್ಯಾ ಏತತ್ಸಹಸ್ರಂ ವಹತುಮನ್ವಾಕರೋದ್ಯದೇತದಾಶ್ವಿನಮಿತ್ಯಾಚಕ್ಷತೇಽನಾಶ್ವಿನಂ ಹೈವ ತದ್ಯದರ್ವಾಕ್ಸಹಸ್ರಂ ತಸ್ಮಾತ್ತತ್ಸಹಸ್ರಂ ವೈವಶಂಸೇದ್ಭೂಯೋ ವಾ ॥**

ಪೃಷ್ಠೇ ಷೋಡಶ್ಯಹ್ನಿ ಸಂಸ್ಥಾಚತುರ್ಥೇ ।
ಸರ್ವಚ್ಛಂದೋವಿಕ್ರಿಯಯಾಽನುಷ್ಟುಬಾಖ್ಯೇ ॥
ಪರ್ಯಾಯಾಣಾಂ ಸ್ಯಾಚ್ಚತುಃಶಸ್ತ್ರಕಾಣಾಂ ।
ರಾತ್ರೌ ಸಂಧೇಃ ಸಂಖ್ಯಯಾ ಪಾಂಚದಶ್ಯಂ ॥೧॥

ಅಥಾತಿರಾತ್ರಕ್ರತಾವೇವ ರಾತ್ರಿಪರ್ಯಾಯೇಭ್ಯ ಊರ್ಧ್ವಮಾಶ್ವಿನಶಸ್ತ್ರಮಾಖ್ಯಾಯಿಕಾಮುಖೇನ ವಿಧತ್ತೇ—ಪುರಾ ಕದಾಚಿತ್ಪ್ರಜಾಪತಿಃ ಕಾಂಚಿದ್ದುಹಿತರಂ ಸೋಮಾಯ ರಾಜ್ಞೇ ಪ್ರಾಯಚ್ಛತ್ ॥ ವಿವಾಹಾರ್ಥಂ ದಾತುಮುದ್ಯುಕ್ತವಾನ್ ಕೀದೃಶಂ ದುಹಿತರಂ ಸೂರ್ಯಾಮಿತ್ಯೇತನ್ನಾಮಧೇಯಯುಕ್ತಾಂ ಸಾವಿತ್ರೀಂ ಸವಿತ್ರಾ ಲಬ್ಧಾಂ ಯದ್ಯಪ್ಯೇಷಾ ಸವಿತುಃ ಪುತ್ರೀ ತಥಾಪಿ ಸ್ನೇಹಾತಿಶಯೇನ ಪ್ರಜಾಪತೇರ್ದುಹಿತೇತ್ಯುಚ್ಯತೇ ॥ ತಸ್ಯೈ ದುಹಿತ್ರೇ ತಲ್ಲಾಭಾರ್ಥಂ ಸರ್ವೇ ದೇವಾ ವರಾ ಭೂತ್ವಾ ಪ್ರಜಾಪತೇಃ ಸಕಾಶಮಾಗಮನ್ ॥ ಸ ಚ ಪ್ರಜಾಪತಿಸ್ತಸ್ಯೈ ದುಹಿತೃಲಾಭಾರ್ಥಮೇತದ್ವಕ್ಷ್ಯಮಾಣಮೃಚಾಂ ಸಹಸ್ರಂ ವಹತುಮನ್ವಾ-

ಕರೋತ್ ॥ ವಹನಸ್ಯ ವಿವಾಹಸ್ಯಾಲಂಕಾರಾರ್ಥಂ ಮಾಂಗಲ್ಯಾರ್ಥಂ ಚ ವರಸ್ಯ ಪುರತೋ ವಹನೀಯೋ ಹರಿದ್ರಾಗುಡಾದಿಮಂಗಲದ್ರವ್ಯಸಂಘೋ ವಹತುರ್ಯದೇತದ್ಯತ್ಸಹಸ್ರಂ ಯಾಜ್ಞಿಕಾ ಆಶ್ವಿನಸಹಸ್ರಮಿತ್ಯಾಚಕ್ಷತೇ ತತ್ಸಹಸ್ರಮೇವ ವಹತುರೂಪೇಣ ಪ್ರತ್ಯಭಿಜ್ಞಾತವಾನ್ ॥ ಸ ದೇವಾನಾಂ ಮಧ್ಯೇ ಯೋ ವರ ಆಶ್ವಿನಸಹಸ್ರಮಂತ್ರಾನೇಕ ಏವ ಪಠತಿ ತಸ್ಮೈ ದಾಸ್ಯಾಮೀತಿ ಪ್ರತಿಜ್ಞಾತವಾನಿತ್ಯರ್ಥಃ ॥ ಸಹಸ್ರಾದರ್ವಾಚೀನಾ ಋಚೋ ಯಸ್ಮಿಞ್ಶಸ್ತ್ರೇ ತದರ್ವಾಕ್ಸಹಸ್ರಂ ತಾದೃಶಂ ಯದಸ್ತಿ ತದನಾಶ್ವಿನಮೇವ ॥ ಯಸ್ಮಾದಾಶ್ವಿನಂ ಸಹಸ್ರಂ ಪ್ರಜಾಪತಿರಂಗೀಕೃತವಾಂಸ್ತಸ್ಮಾದ್ಧೋತಾ ಸಹಸ್ರಮೇವ ಶಂಸೇತ್ ॥ ತತೋಽಪ್ಯಧಿಕಂ ವಾ ಶಂಸೇತ್ ॥ ನ ತು ನ್ಯೂನಂ ॥

ಅತಿರಾತ್ರವೆಂಬ ಯಜ್ಞದಲ್ಲಿ ರಾತ್ರಿಪರ್ಯಾಯಾನಂತರ ಆಶ್ವಿನಶಸ್ತ್ರವನ್ನು ಪಠಿಸುವುದಕ್ಕೆ ಪೂರ್ವಭಾವಿಯಾಗಿ ಇದಕ್ಕೆ ಸಂಬಂಧಪಟ್ಟ ಒಂದು ಪೂರ್ವೇತಿಹಾಸವನ್ನು ಹೇಳುವರು. ಪೂರ್ವದಲ್ಲಿ ಪ್ರಜಾಪತಿಯು ತನ್ನ ಪುತ್ರಿಯನ್ನು ಸೋಮರಾಜನಿಗೆ (ಸೋಮದೇವತೆಗೆ) ಮದುವೆಮಾಡಿಕೊಡಲು ಉದ್ಯುಕ್ತನಾದನು. ಈ ಕನ್ಯೆಯ ಹೆಸರು ಸೂರ್ಯಾ ಎಂದು. ಈ ಪುತ್ರಿಯು ಸೂರ್ಯನ ಪುತ್ರಿಯೇ ಆದ್ದರಿಂದ ಇವಳಿಗೆ ಸಾವಿತ್ರೀ (ಸವಿತುಃಪುತ್ರೀ) ಎಂದು ಹೆಸರು. ಈಕೆಯು ಸೂರ್ಯನ ಪುತ್ರಿಯೇ ಆದರೂ ಗೌರವಾರ್ಥವಾಗಿ ಸೂರ್ಯನಿಗೆ ಹಿರಿಯರ ಸ್ಥಾನದಲ್ಲಿರುವ ಪ್ರಜಾಪತಿಯ ಪುತ್ರಿಯೆಂದೇ ಹೇಳುವುದು ರೂಢಿಯಾಗಿದೆ. ಈ ಸೂರ್ಯಾದೇವಿಯನ್ನು ಮದುವೆ ಮಾಡಿಕೊಳ್ಳಲು ಬಯಸಿ ದೇವತೆಗಳೆಲ್ಲರೂ ಪ್ರಜಾಪತಿಯ ಬಳಿಗೆ ಬಂದರು. ಆಗ ಪ್ರಜಾಪತಿಯು ದೇವತೆಗಳನ್ನುದ್ದೇಶಿಸಿ ಈ ಸೂರ್ಯಾದೇವಿಯನ್ನು ಪಾಣಿಗ್ರಹಣ ಮಾಡುವವರು ಕನ್ಯೆಗೆ ಬಳುವಳಿಯಾಗಿ ಒಂದು ಸಹಸ್ರ ಋಕ್ಕುಗಳನ್ನು ಕೊಡಬೇಕೆಂದು ಒಂದು ನಿಯಮವನ್ನು ಮಾಡಿದನು. ಇಲ್ಲಿ ಬಳುವಳಿಯೆಂದರೆ ವಿವಾಹ ಸಮಾರಂಭದಲ್ಲಿ ಮಾಂಗಲ್ಯಾರ್ಥವಾಗಿ ವರನ ಮುಂದುಗಡೆ ಬೆಲ್ಲದ ಅಚ್ಚು, ಅರಿಸಿನ, ಕುಂಕುಮ ಮೊದಲಾದ ಮಂಗಳದ್ರವ್ಯಗಳ ಜತೆಯಲ್ಲಿ ಇಡುವ ಆಭರಣಾದಿಗಳು. ಪ್ರಕೃತ ಸಂದರ್ಭದಲ್ಲಿ ಈ ಆಭರಣಾದಿಗಳಿಗೆ ಬದಲಾಗಿ ಒಂದು ಸಹಸ್ರ ಋಕ್ಕುಗಳಿರುವವು ಎಂದರ್ಥವು. ಈ ಋಕ್ಕುಗಳಿಗೆ ಆಶ್ವಿನಸಹಸ್ರವೆಂದು ಯಾಜ್ಞಿಕರು (ಪ್ರಯೋಗವನ್ನು ತಿಳಿದವರು) ಹೇಳುವರು ಎಂದರೆ ವಿವಾಹ ಕಾಲದಲ್ಲಿ ವರನಾಗಬೇಕೆಂದು ಬಯಸುವ ಯಾವ ಪುರುಷನು ಒಂದು ಸಹಸ್ರ ಆಶ್ವಿನ ಮಂತ್ರಗಳನ್ನು ಪಠಿಸುವನೋ ಅವನಿಗೆ ಕನ್ಯೆಯನ್ನು ಕೊಡುವೆನೆಂದು ಪ್ರಜಾಪತಿಯು ಪ್ರತಿಜ್ಞೆಮಾಡಿದನು. ಹೊಸದಾಗಿ ರಚಿತವಾದ ಒಂದು ಸಹಸ್ರಋಕ್ಕುಗಳು ಯಾವ ಶಸ್ತ್ರಮಂತ್ರಗಳಲ್ಲಿರುವವೋ ಅದಕ್ಕೆ ಆಶ್ವಿನಶಸ್ತ್ರವೆಂದು ಹೆಸರು ಆದ್ದರಿಂದ ಈ ನಿಯಮವನ್ನನುಸರಿಸಿ ಹೋತೃವು ಆಶ್ವಿನ ಶಸ್ತ್ರಮಂತ್ರಗಳನ್ನು ಪಠಿಸುವಾಗ ಒಂದು ಸಹಸ್ರಮಂತ್ರ(ಋಕ್ಕು)ಗಳನ್ನೇ ಪಠಿಸಬೇಕು. ಅಥವಾ ಒಂದು ಸಹಸ್ರಮಂತ್ರಗಳಿಗಿಂತ ಹೆಚ್ಚಾಗಿಯಾದರೂ ಪಠಿಸಬಹುದು. ಒಂದು ಸಹಸ್ರಕ್ಕಿಂತ ಕಡಿಮೆಮಾತ್ರ ಆಗಬಾರದು. [ಸೂರ್ಯಾವಿವಾಹದ ಕ್ರಮವು. ಋ. ಸಂ. ೧೦-೮೫ನೇ ಸೂಕ್ತದಲ್ಲಿ ವಿಸ್ತಾರವಾಗಿ ವಿವರಿಸಲ್ಪಟ್ಟಿರುವುದು.]

**ಪ್ರಾಶ್ಯ ಘೃತಂ ಶಂಸೇದ್ಯಥಾ ಹ ವಾ ಇದಮನೋ ವಾ ರಥೋ ವಾಽಕ್ತೋ ವರ್ತತ ಏವಂ ಹೈವಾಕ್ತೋ ವರ್ತತೇ ॥**

ಶಂಸನಸ್ಯೇತಿಕರ್ತವ್ಯತಾಂ ವಿಧತ್ತೇ—ಪ್ರಥಮಮೇವ ಘೃತಂ ಪ್ರಾಶ್ಯ ಪಶ್ಚಾಚ್ಛಂಸೇತ್ ॥ ಯಥಾ ಲೋಕೇ ಕಿಂಚಿದಿದಂ ನಿದರ್ಶನಂ ತದ್ವತ್ ॥ ಕಿಂ ನಿದರ್ಶನಮಿತಿ ತದುಚ್ಯತೇ ॥ ಅನಃ ಸ್ವಲ್ಪಶಕಟಂ ವಾ ಪ್ರೌಢೋ ರಥೋ ವಾ ಯದಾ ಪ್ರವರ್ತ್ಯತೇ ತದಾನೀಮಸ್ಯ ಚಕ್ರಭ್ರಮಣ-

**ಸ್ಥಾನೇ ಮಷೀಮಿಶ್ರೇಣ ತೈಲೇನಾಂಜನೇ ಕೃತೇ ಪಶ್ಚಾತ್ಸ್ವಲ್ಪಂ ಶಕಟಂ ರಥೋ ವಾ ಸಹಸಾ ಪ್ರವರ್ತತೇ ॥ ಏವಮಸೌ ಹೋತಾ ಘೃತೇನಾಕ್ತಃ ಶಸ್ತ್ರೇ ಪ್ರವರ್ತತೇ ॥**

ಮೇಲೆ ಹೇಳಿದ ಆಶ್ವಿನಶಸ್ತ್ರಮಂತ್ರಗಳನ್ನು ಪಠಿಸುವ ಪ್ರಕಾರವನ್ನು ತಿಳಿಸುವರು. ಮಂತ್ರಗಳನ್ನು ಪಠಿಸಲು ಉದ್ಯುಕ್ತನಾದ ಹೋತೃವು ಮೊದಲು ಸ್ವಲ್ಪ ತುಪ್ಪವನ್ನು ತಿಂದು ಅನಂತರ ಮಂತ್ರಗಳನ್ನು ಪಠಿಸಲು ಪ್ರಾರಂಭಿಸಬೇಕು. ಏಕೆಂದರೆ ಇದಕ್ಕೆ ಪ್ರಪಂಚವ್ಯವಹಾರದಲ್ಲಿ ಒಂದು ನಿದರ್ಶನ(ಉದಾಹರಣೆಯನ್ನೂ)ವನ್ನೂ ತಿಳಿಸುವರು. ಒಂದು ಸಣ್ಣ ಗಾಡಿಯಾಗಲಿ, ದೊಡ್ಡರಥವಾಗಲಿ ಚಲಿಸುವುದಕ್ಕೆ ಮೊದಲು ಅದರ ರಂಧ್ರದಲ್ಲಿ (ಅಚ್ಚಿನ ಸುತ್ತಲೂ) ಎಣ್ಣೆಯನ್ನು ಸವರುವುದು ರೂಢಿಯು. ಅದರಿಂದ ಚಕ್ರಗಳು ಸುಲಭವಾಗಿ ಚಲಿಸುವವು. ಅದರಂತೆ ಮಂತ್ರಗಳನ್ನು ಪಠಿಸುವ ಹೋತೃವೂ ಸ್ವಲ್ಪ ತುಪ್ಪವನ್ನು ಪ್ರಾಶನಮಾಡಿ ಬಳಿಕ ಮಂತ್ರಪಠನವನ್ನಾರಂಭಿಸಬೇಕು.

## ಶಕುನಿರಿವೋತ್ಪತಿಷ್ಯನ್ನಾಹ್ವಯೀತ

**ಇತಿಕರ್ತವ್ಯತಾಂತರಂ ವಿಧತ್ತೇ— ಯಥಾ ಲೋಕೇ ಶಕುನಿಃ ಕಶ್ಚಿತ್ಪಕ್ಷೀ ಪದ್ಭ್ಯಾಂ ಭೂಮಿಂ ದೃಢವಷ್ಟಭ್ಯೋತ್ಪತಿಷ್ಯನ್ನೂರ್ಧ್ವಮುತ್ಪತನಂ ಕರ್ತುಮಿಚ್ಛನ್ಪಕ್ಷ್ಯಂತರಮಭಿಲಕ್ಷ್ಯ ಧ್ವನಿಂ ಕರೋತ್ಯೇವಮಸೌ ಹೋತಾ ತದಾಕಾರಂ ಘಟನಂ ಕುರ್ವನ್ನಾಹಾವಂ ಪಠೇತ್ ॥ ತದೇತದಾಶ್ವಲಾಯನಾಚಾರ್ಯೈಃ ಸ್ಪಷ್ಟೀಕೃತಂ । 'ಪ್ರಾಶ್ಯ ಪ್ರತಿಪ್ರಸೃಪ್ಯ ಪಶ್ಚಾತ್ಸ್ವಸ್ಯ ಧಿಷ್ಣ್ಯಸ್ಯೋಪವಿಶೇತ್ ಸಮಸ್ತಜಂಘೋರುರತ್ನಿಭ್ಯಾಂ ಜಾನುಭ್ಯಾಂ ಚೋಪಸ್ಥಂ ಕೃತ್ವಾ ಯಥಾ ಶಕುನಿರುತ್ಪತಿಷ್ಯನ್ನುಪಸ್ಥಕೃತಸ್ತ್ವೇವಾಶ್ವಿನಂ ಶಂಸೇತ್' ಇತಿ ॥**

ಮಂತ್ರವನ್ನು ಪಠಿಸುವ ಕ್ರಮವನ್ನು ತಿಳಿಸುವರು. ಲೋಕವ್ಯವಹಾರದಲ್ಲಿ ಕಂಡು ಬರುವಂತೆ ಶಕುನಿ ಎಂಬ ಪಕ್ಷಿಯು ಹಾರುವುದಕ್ಕಿಂತ ಮೊದಲು ಎಂದರೆ ಕುಳಿತಸ್ಥಳದಿಂದ ಮೇಲಕ್ಕೆ ಹಾರುವಾಗ ತನ್ನ ಪಾದಗಳಿಂದ ಭೂಮಿಯನ್ನು ಒತ್ತಿ ಹಿಡಿದು (ಅಮುಕಿ) ಮೇಲೆ ಹಾರುವಂತೆಯೂ ಇತರ ತನ್ನ ಜಾತಿಯ ಪಕ್ಷಿಗಳನ್ನುದ್ದೇಶಿಸಿ ಧ್ವನಿಮಾಡುವಂತೆಯೂ ಹೋತೃವು ಕುಕ್ಕುರುಗಾಲಿನಲ್ಲಿ ಕುಳಿತು ಮಂತ್ರಪಠನಕ್ಕೆ ಮೊದಲು ಆಹಾವವೆಂಬ ಮಂತ್ರವನ್ನು ಪಠಿಸಬೇಕು. (ಇದನ್ನು ಹಿಂದೆಯೇ ತಿಳಿಸಿದೆ) ಈ ವಿಷಯವು ಆಶ್ವಲಾಯನರಿಂದ ಈ ರೀತಿ ವಿವರಿಸಲ್ಪಟ್ಟಿದೆ—**ಪ್ರಾಶ್ಯ ಪ್ರತಿಪ್ರಸೃಪ್ಯ ಪಶ್ಚಾತ್ಸ್ವಸ್ಯ ಧಿಷ್ಣ್ಯಸ್ಯೋಪವಿಶೇತ್ಸಮಸ್ತಜಂಘೋರು ರತ್ನಿಭ್ಯಾಂ ಜಾನುಭ್ಯಾಂ ಚೋಪಸ್ಥಂ ಕೃತ್ವಾ ಯಥಾ ಶಕುನಿರುತ್ಪತಿಷ್ಯನ್ನುಪಸ್ಥಕೃತಸ್ತ್ವೇವಾಽಽಶ್ವಿನಂ ಶಂಸೇತ್** ಎಂದು. ಎಂದರೆ ಹೋತೃವು ಆಶ್ವಿನಶಸ್ತ್ರಮಂತ್ರಗಳನ್ನು ಪಠಿಸುವುದಕ್ಕೆ ಮೊದಲು ಸ್ವಲ್ಪ ತುಪ್ಪವನ್ನು ಪ್ರಾಶನಮಾಡಬೇಕು. ಅನಂತರ ತನಗೆ ನಿರ್ದಿಷ್ಟವಾದ ಧಿಷ್ಣ್ಯವೆಂಬ ಸ್ಥಾನದಲ್ಲಿ ತನ್ನ ಮಂಡಿ, ಮೊಳಕಾಲು, ತೊಡೆ ಇವುಗಳನ್ನು ಮಡಿಸಿ ಕುಕ್ಕುರುಗಾಲಿನಲ್ಲಿ ಕುಳಿತುಕೊಳ್ಳಬೇಕು. ಶ್ಯೇನಪಕ್ಷಿಯು ಹಾರುವಾಗ ತನ್ನ ಕಾಲುಗಳನ್ನು ನೆಲದಮೇಲೆ ಚೆನ್ನಾಗಿ ಊರಿ ಮೇಲಕ್ಕೆ ಹಾರುವಂತೆ ಹೋತೃವು ಕುಳಿತುಕೊಂಡು ಆಶ್ವಿನಶಸ್ತ್ರಮಂತ್ರಗಳನ್ನು ಪಠಿಸಲು ಪ್ರಾರಂಭಿಸಬೇಕು.

ಇಲ್ಲಿ ಆಶ್ವಿನಶಸ್ತ್ರದ ವಿಷಯವಾಗಿ ಒಂದು ಮಾತನ್ನು ಹೇಳುವುದು ಅವಶ್ಯಕವು. ಈ ಆಶ್ವಿನಶಸ್ತ್ರಮಂತ್ರವು ಬಹಳ ದೊಡ್ಡದಾಗಿರುವುದು. ಇದು ಸ್ವಲ್ಪ ಹೆಚ್ಚುಕಡಿಮೆ ಪ್ರಾತರನುವಾಕಮಂತ್ರಗಳನ್ನೇ ಹೋಲುವುದು. ಪ್ರಾತರನುವಾಕದಲ್ಲಿರುವಂತೆ ಇಲ್ಲಿಯೂ ಆಗ್ನೇಯ ಕ್ರತು (ಅಗ್ನಿಯನ್ನು ಪ್ರತಿಪಾದಿಸುವ ಋಕ್ಕುಗಳು) ಉಷಸ್ಯಕ್ರತು ಮತ್ತು ಆಶ್ವಿನಕ್ರತು ಎಂಬ ಮೂರು ವಿಭಾಗಗಳಿರುವವು. ಮತ್ತು ಎಲ್ಲಾ ಮಂತ್ರಗಳೂ ಗಾಯತ್ರೀ ಮೊದಲಾದ ಏಳು ಮುಖ್ಯವಾದ ಛಂದಸ್ಸುಗಳನ್ನು

ಒಳಗೊಂಡಿರುವುದು ಆಶ್ವಿನಕ್ರತುವೆಂಬಭಾಗದಲ್ಲಿ ಅಶ್ವಿನೀದೇವತೆಗಳನ್ನಲ್ಲದೆ ಇತರ ದೇವತೆಗಳ, ಮುಖ್ಯವಾಗಿ ಸೂರ್ಯನ ಸ್ತುತಿಯೂ ಇರುವುದು. ಮತ್ತು ಈ ಮಂತ್ರಗಳನ್ನು ಪಠಿಸಲು ಪ್ರಾರಂಭಿಸುವಾಗ ಹೋತೃವು ಮತ್ತು ಅಧ್ವರ್ಯುವು ಸಹ ಆಜ್ಯದಿಂದ (ಕಾಯಿಸಿದ ತುಪ್ಪದಿಂದ) ಮೂರು ಆಹುತಿಗಳನ್ನು ಅಗ್ನಿ, ಉಷಸ್ಸು, ಅಶ್ವಿನೀದೇವತೆಗಳನ್ನು ಉದ್ದೇಶಿಸಿ ಅರ್ಪಿಸಬೇಕು. ಆಜ್ಯಾಹುತಿಯ ಶೇಷವನ್ನು ಹೋತೃವು ಭಕ್ಷಿಸಬೇಕು. ಅನಂತರ ಮಂತ್ರವನ್ನು ಪಠಿಸಲು ಪ್ರಾರಂಭಿಸಬೇಕು.

ಆಶ್ವಿನಶಸ್ತ್ರದಲ್ಲಿ ಒಂದು ಸಹಸ್ರಕ್ಕಿಂತ ಹೆಚ್ಚಾಗಿಯೇ ಮಂತ್ರಗಳಿರುವವು. ಇವೆಲ್ಲವೂ ಬೃಹತೀ ಛಂದಸ್ಸಿನ ಮಂತ್ರಗಳೆಂದೇ ಭಾವಿಸಲ್ಪಡುವವು. ಇದರಲ್ಲಿ ಇತರ ಛಂದಸ್ಸಿನ ಮಂತ್ರಗಳಿದ್ದರೂ ಬೃಹತೀ ಛಂದಸ್ಸಿನಲ್ಲಿರುವಂತೆ ಮೂವತ್ತಾರು ಅಕ್ಷರಗಳಿಗೆ ಒಂದು ಮಂತ್ರದಂತೆ ಪರಿಗಣಿಸಲ್ಪಡುವುದು. ಈ ಶಸ್ತ್ರದ ಮೊದಲನೇ ಮಂತ್ರವನ್ನು ಮೂರಾವರ್ತಿ ಪಠಿಸಿ ಅನಂತರ ಮುಂದಿನ ಮಂತ್ರಗಳನ್ನು ಪಠಿಸಬೇಕು. ಸೂರ್ಯೋದಯಾನಂತರ ಸೂರ್ಯನನ್ನು ಸ್ತುತಿಸುವ ಮಂತ್ರವು ಪಠಿಸಲ್ಪಡುವುದು; ಅನಂತರ ಇಂದ್ರನನ್ನು ಸ್ತುತಿಸುವ ಮಂತ್ರಗಳು. ಕೊನೆಯಲ್ಲಿ ಎರಡು ಪುರೋನುವಾಕ್ಯಾಮಂತ್ರಗಳನ್ನೂ ಎರಡು ಯಾಜ್ಯಾ ಮಂತ್ರಗಳನ್ನೂ ಪಠಿಸಬೇಕು. ಏಕೆಂದರೆ ಅಶ್ವಿನೀದೇವತೆಗಳು ಇಬ್ಬರಿರುವರು.

**ತಸ್ಮಿನ್ದೇವಾ ನ ಸಮಜಾನಂತ ಮಮೇದಮಸ್ತು ಮಮೇದಮಸ್ತ್ವಿತಿ ತೇ ಸಂಜಾನಾನಾ ಅಬ್ರುವನ್ನಾಜಿಮಸ್ಯಾಽಯಾಮಹೈ ಸ ಯೋ ನ ಉಜ್ಜೇಷ್ಯತಿ ತಸ್ಯೇದಂ ಭವಿಷ್ಯತೀತಿ ತೇಽಗ್ನೇರೇವಾಧಿ ಗೃಹಪತೇ-ರಾದಿತ್ಯಂ ಕಾಷ್ಠಾಮಕುರ್ವತ ತಸ್ಮಾದಾಗ್ನೇಯೀ ಪ್ರತಿಪದ್ಭವತ್ಯಾ-ಶ್ವಿನಸ್ಯಾಗ್ನಿರ್ಹೋತಾ ಗೃಹಪತಿಃ ಸ ರಾಜೇತಿ ॥**

ಆಶ್ವಿನಶಸ್ತ್ರಸ್ಯ ಪ್ರತಿಪದಮಾಖ್ಯಾಯಿಕಾಮುಖೇನ ವಿಧತ್ತೇ—ತಸ್ಮಿನ್ನಾಶ್ವಿನಶಸ್ತ್ರೇ ದೇವಾಃ ಪರಸ್ಪರಂ ನ ಸಮಜಾನತ ಸಂಜ್ಞಾನಂ ಪ್ರತಿಪತ್ತಿಂ ನಾಕುರ್ವನ್ ॥ ಕೀದೃಶೀ ತದೀಯಾ ಪ್ರತಿಪತ್ತಿರಿತಿ ಸೋಚ್ಯತೇ ॥ ಮಮೈವೇದಮಾಶ್ವಿನಮಸ್ತ್ವಿತಿ ಸರ್ವೇಷಾಮಭಿಪ್ರಾಯಃ ॥ ಸರ್ವವಿಷಯತ್ವಂ ದ್ಯೋತಯಿತುಮಿಯಂ ವೀಪ್ಸಾ॥ ತೇ ವಿಪ್ರತಿಪನ್ನಾ ದೇವಾಃ ಸಂಜಾನಾನಾಃ ಸಂಪ್ರತಿಪತ್ತಿಂ ಕರ್ತುಮುದ್ಯತಾಃ ಪರಸ್ಪರಮಿದಮಬ್ರುವನ್ ॥ ಅಸ್ಯಾಶ್ವಿನಶಸ್ತ್ರಸ್ಯ ಲಾಭಾಯ ವಯಂ ಸರ್ವೇ ಕಾಂಚಿದಾಜಿಮಯಾಮಹೈ ಸಮಯಬಂಧಪುರಸ್ಸರಾ ಧಾವನರೂಪಾ ಗತಿರಾಜಿಸ್ತಾಂ ಪ್ರಾಪ್ನವಾಮ।ತಸ್ಮಿನ್ನಾಜಿಧಾವನೇ ನೋಽಸ್ಮಾಕಂ ಮಧ್ಯೇ ಚ ಯಃ ಪ್ರಬಲೋ ಯಃ ಕೋಽಪಿ ಪ್ರಥಮಮುತ್ಕರ್ಷೇಣ ಜೇಷ್ಯತಿ ತಸ್ಯೇದಮಾಶ್ವಿನಂ ಭವಿಷ್ಯತೀತಿ ಸಮಯ-ಬಂಧಸ್ತೇನ ಕೃತಸಮಯಾ ದೇವಾ ಗೃಹಪತೇರಗ್ನೇರೇವಾಧಿ ಗಾರ್ಹಪತ್ಯಸ್ಯೋಪರಿ ದ್ಯುಲೋಕವರ್ತಿನಮಾದಿತ್ಯಂ ಕಾಷ್ಠಾಂ ಧಾವನಸಮಾದಿತ್ಯಂ ಕಾಷ್ಠಾಂಧಾವನಸಮಾಪ್ತಿಮ-ಕುರ್ವತ ॥ ಗಾರ್ಹಪತ್ಯಮಾರಭ್ಯ ಆದಿತ್ಯಪರ್ಯಂತಂ ಧಾವೇದಿತಿ ತದೀಯಾ ಮರ್ಯಾದಾ ॥ ಯಸ್ಮಾದಗ್ನಿರಾಶ್ವಿನಪ್ರಾಪ್ತಿಹೇತೋರ್ಧಾವನಸ್ಯೋಪಕ್ರಮಸ್ಥಾನಂ ತಸ್ಮಾದಾಗ್ನೇಯೀ ಕಾಚಿ-ದೃಗಾಶ್ವಿನಸ್ಯ ಪ್ರತಿಪದ್ಭವತಿ ಪ್ರಾರಂಭರೂಪಾ ಕರ್ತವ್ಯಾ॥ ಅಗ್ನಿರ್ಹೋತೇತಿ ತಸ್ಯಾಃ ಪ್ರತೀಕಂ।

ಆಶ್ವಿನಶಸ್ತ್ರದ ಮೊದಲನೇ ಮಂತ್ರದ ವಿಷಯವಾಗಿ ಒಂದು ಪೂರ್ವೇತಿಹಾಸವನ್ನು ತಿಳಿಸುವರು—ಆಶ್ವಿನಶಸ್ತ್ರದಲ್ಲಿ ಸಹಸ್ರ ಋಕ್ಕುಗಳನ್ನು ಪಠಿಸಬೇಕೆಂಬ ವಿಚಾರದಲ್ಲಿ ದೇವತೆಗಳಲ್ಲಿಯೇ ಜಿಜ್ಞಾಸೆಯುಂಟಾಯಿತು. ಈ ಆಶ್ವಿನಮಂತ್ರಗಳನ್ನು

ನಾನು ಪಠಿಸುತ್ತೇನೆ, ತಾನು ಪಠಿಸುತ್ತೇನೆಂದು ವಾದವಿವಾದಗಳು ಉಂಟಾಗಿ ಕೊನೆಗೆ ಯಾರು ಪಡಿಸಬೇಕೆಂಬ ವಿಷಯದಲ್ಲಿ ಅವರೆಲ್ಲರೂ ಒಂದು ಒಪ್ಪಂದಕ್ಕೆ ಬಂದರು ಏನೆಂದರೆ ದೇವತೆಗಳೆಲ್ಲರೂ ಸೇರಿ ಒಂದು ಸ್ಪರ್ಧೆಯನ್ನು ಏರ್ಪಡಿಸಬೇಕು. ಗಾರ್ಹಪತ್ಯಾಗ್ನಿಯಿಂದ ಹಿಡಿದು ಊರ್ಧ್ವಮುಖವಾಗಿ ಸ್ವರ್ಗದಲ್ಲಿರುವ ಸೂರ್ಯನವರೆಗೆ ಪ್ರತಿಯೊಬ್ಬರೂ ಓಡಬೇಕು. ಈ ಸ್ಪರ್ಧೆಯಲ್ಲಿ ಯಾರು ಜಯಶೀಲರಾಗುವರೋ ಎಂದರೆ ಯಾರು ಮೊದಲು ಗುರಿಯನ್ನು ಮುಟ್ಟುವರೋ ಅವರೇ ಜಯಶೀಲರೆಂದು ನಿರ್ಧರಿಸಲ್ಪಟ್ಟು ಅಶ್ವಿನಮಂತ್ರಗಳನ್ನು ಪಠಿಸಬೇಕು ಎಂದು ನಿರ್ಧಾರಮಾಡಿದರು. ಈ ಸ್ಪರ್ಧೆಯಲ್ಲಿ ಅಗ್ನಿಯನ್ನೇ ಪ್ರಾರಂಭದ ಸ್ಥಾನವನ್ನಾಗಿ ನಿಯಮಿಸಿದ್ದರಿಂದ ಈ ಆಶ್ವಿನಶಸ್ತ್ರಮಂತ್ರಗಳಿಗೆ ಮೊದಲನೆಯ ಋಕ್ಕು ಅಗ್ನಿದೇವತಾಕವಾಗಿರುವುದು. **ಅಗ್ನಿರ್ಹೋತಾ** ಎಂಬುವುದೇ ಆ ಋಕ್ಕಿನ ಪ್ರಾರಂಭವು.

## ತದೇಕ ಆಹುರಗ್ನಿಂ ಮನ್ಯೇ ಪಿತರಮಗ್ನಿಮಾಪಿಮಿತ್ಯೇತಯಾ ಪ್ರತಿಪದ್ಯೇತ

**ಅತ್ರ ಕಂಚಿತ್ಪೂರ್ವಪಕ್ಷಮುದ್ಭಾವಯತಿ - ಪ್ರಾರಭೇತೇತ್ಯರ್ಥಃ ॥**

ಇಲ್ಲಿ ಕೆಲವರು ಒಂದು ಪೂರ್ವಪಕ್ಷವನ್ನು ಮುಂದಿಡುವರು. **ಅಗ್ನಿಂ ಮನ್ಯೇ ಪಿತರಂ** (ಋ. ಸಂ. ೧೦-೭-೩) ಎಂಬ ಋಕ್ಕು ಅಗ್ನಿದೇವತಾಕವಾದ ಮಂತ್ರವಾದ್ದರಿಂದ ಈ ಮಂತ್ರದಿಂದಲೇ ಆಶ್ವಿನಶಸ್ತ್ರವನ್ನು ಪ್ರಾರಂಭಿಸಬೇಕು ಎನ್ನುವರು.

## ದಿವಿ ಶುಕ್ಲಂ ಯಜತಂ ಸೂರ್ಯಸ್ಯೇತಿ ಪ್ರಥಮಯೈವ ಋಚಾ ಕಾಷ್ಠಾಮಾಪ್ನೋತೀತಿ ।

**ತತ್ರೋಪಪತ್ತಿಂ ಪೂರ್ವಪಕ್ಷ್ಯಭಿಪ್ರೇತಾಂ ದರ್ಶಯತಿ - ತಸ್ಯಾಶ್ಚತುರ್ಥಪಾದೇ ಸೂರ್ಯಸ್ಯ ಯಜತಂ ಯಸ್ಮಾದಗ್ನಿವಿಶೇಷಣಂ ಪಠ್ಯತೇ ತಥಾ ಸತಿ ಪ್ರಥಮಯೈವರ್ಚಾ ಸೂರ್ಯರೂಪಾ ಕಾಷ್ಠಾ ಧಾವನಾಭಿರೂಪಾಽಽಪ್ತಾ ಭವತೀತಿ ತೇಷಾಮಭಿಪ್ರಾಯಃ ॥**

ಆದರೆ ಈ ಋಕ್ಕಿನ ನಾಲ್ಕನೆಯ ಪಾದದಲ್ಲಿ ದಿವಿ ಶುಕ್ಲಂ ಯಜತಂ ಸೂರ್ಯಸ್ಯ ಎಂದಿರುವುದು. ಸ್ಪರ್ಧೆಯು ಅಗ್ನಿಯಿಂದ ಪ್ರಾರಂಭವಾಗಿ ಅದು ಮುಗಿಯುವುದಕ್ಕೆ ಮುಂಚೆಯೇ ಸೂರ್ಯನನ್ನು ಸ್ತುತಿಸಿರುವುದರಿಂದ ಸ್ಪರ್ಧೆಯು ಮುಗಿಯಿತೆಂದು ಹೇಳಬೇಕಾಗುವುದು. ಅದು ಸರಿಯಲ್ಲ.

## ತತ್ತನ್ನಾದೃತ್ಯಂ ಯ ಏನಂ ತತ್ರ ಬ್ರೂಯಾದಗ್ನಿಮಿತಿ ವೈ ಪ್ರತ್ಯಪಾದ್ಯಗ್ನಿಮಾಪತ್ಸ್ಯತೀತಿ ಶಶ್ವತ್ತಥಾ ಸ್ಯಾತ್ ॥

**ತಮಿಮಂ ಪಕ್ಷಂ ದೂಷಯತಿ—ತಸ್ಮಿನ್ನ್ಯಸ್ತೋಪಕ್ರಮೇ ತನ್ಮತಮಗ್ನಿಂ ಮನ್ಯೇ ಪಿತರಮಿತ್ಯಾದಿಕಂ ನಾಽದರಣೀಯಂ । ಅನಾದರಣೇ ಹೇತುರುಚ್ಯತೇ । ತತ್ರಾಗ್ನಿಂ ಮನ್ಯ ಇತ್ಯೇತಯೋಪಕ್ರಮಪಕ್ಷೇ ಯಃ ಕೋಽಪಿ ವಿರೋಧೀ ಸಮಾಗತ್ಯೈವಂ ಹೋತಾರಂ ಬ್ರೂಯಚ್ಛಪೇತ್ ॥ ಕಥಂ ಶಾಪ ಇತಿ ತದುಚ್ಯತೇ ॥ ಅನೇನ ಹೋತ್ರಾಽಗ್ನಿಮಗ್ನಿಮಿತ್ಯೇವ ಪ್ರತ್ಯಪಾದಿ ಪ್ರಾರಬ್ಧಂ ತಸ್ಯಾಮೃಚ್ಯಗ್ನಿಂ ಪಿತರಮಗ್ನಿಂ ಭ್ರಾತರಮಿತ್ಯೇವಮಸಕೃದಗ್ನಿಸ್ವರೂಪಂ ಪ್ರಿತ್ರಾದ್ಯ-**

ಭಿಧಾನಾದಗ್ನಿಮಸೌ ಹೋತಾ ಪ್ರಾಪ್ನೋತೀತಿ ದಗ್ಧೋ ಭವಿಷ್ಯತೀತಿ ಯದಿ ಶಪೇತ್ ತದಾನೀಂ ಶಶ್ವದವಶ್ಯಂ ತಥಾಸ್ಯಾತ್ ॥

ಮೇಲೆ ಹೇಳಿದ ಪಕ್ಷವನ್ನು ತಿರಸ್ಕರಿಸುವರು. ಮೇಲೆ ಹೇಳಿದ ಮತವು ಸರಿಯಾದದ್ದಲ್ಲ. ಏಕೆಂದರೆ **ಅಗ್ನಿಂ ಮನ್ಯೇ** ಪಿತರಂ ಎಂಬ ಋಕ್ಕಿನಲ್ಲಿ ಪ್ರಾರಂಭದಲ್ಲಿಯೇ ಪಿತೃ ಭ್ರಾತೃ ಮೊದಲಾದ ಶಬ್ಧಗಳಿವೆ. ಕೆಲವರು ಈ ಹೋತೃವು ಅಗ್ನಿ, ಪಿತೃ ಮೊದಲಾದ ಶಬ್ಧಗಳನ್ನು ಪ್ರಾರಂಭದಲ್ಲಿಯೇ ಉಚ್ಚರಿಸುವುದರಿಂದ ಅಗ್ನಿಯಿಂದ ದಗ್ಧನಾಗಿ ಹೋಗುವನು ಎಂದು ಶಪಿಸುವರು. ಅದು ಸಂಭವಿಸಲೂ ಬಹುದು. ಆದ್ದರಿಂದ ಆಶ್ವಿನಶಸ್ತ್ರದ ಮೊದಲಮಂತ್ರವನ್ನು **ಅಗ್ನೀಂ ಮನ್ಯೇ** ಎಂದು ಪ್ರಾರಂಭಮಾಡುವುದು ಸರಿಯಲ್ಲ.

ತಸ್ಮಾದಗ್ನಿರ್ಹೋತಾ ಗೃಹಪತಿಃ ಸ ರಾಜೇತ್ಯೇತಯೈವ ಪ್ರತಿಪದ್ಯೇತ ಗೃಹಪತಿವತೀ ಪ್ರಜಾತಿಮತೀ ಶಾಂತಾ ಸರ್ವಾಯುಃ ಸರ್ವಾಯುತ್ವಾಯ ಸರ್ವಮಾಯುರೇತಿ ಯ ಏವಂ ವೇದ ॥

ಪರಮತಂ ದೂಷಯಿತ್ವಾ ಸ್ವಮತಂ ನಿಗಮಯತಿ—ಅಸ್ಯಾಮೃಚಿ ಗೃಹಪತಿಶಬ್ದಃ ಸ್ಪಷ್ಟಂ ದೃಶ್ಯತೇ ॥ ತಸ್ಮಾದಿಯಂ ಗೃಹಪತಿವತೀ ॥ ತಥಾ ದ್ವಿತೀಯಪಾದೇ ವಿಶ್ವಾ ವೇದ ಜನಿಮೇತಿ ಸರ್ವಪ್ರಾಣಿಜನನಾಭಿಜ್ಞಾನಕಥನಾದಿಯಂ ಪ್ರಜಾತಿಮತೀ । ಬಹುಕೃತ್ವೋಽಗ್ನಿಶಬ್ದಸ್ಯಾಭಾವಾದಿಯಂ ಶಾಂತಾ ॥ ತಸ್ಮಾದೇತಯಾ ಪ್ರತಿಪದ್ಯಮಾನೋ ಹೋತಾ ಸರ್ವಾಯುರ್ಭವತಿ॥ ತಚ್ಚ ಯಜಮಾನಸ್ಯ ಸರ್ವಾಯುತ್ವಾಯ ಸಂಪದ್ಯತೇ ॥ ವೇದನಂ ಪ್ರಶಂಸತಿ ॥

ಪೂರ್ವಪಕ್ಷವನ್ನು ನಿರಾಕರಿಸಿ ಸ್ವಮತವನ್ನು ಪ್ರಶಂಸಿಸುವರು. ಈ ಋಕ್ಕಿನಲ್ಲಿ **ಗೃಹಪತಿ** ಎಂಬ ಶಬ್ದವು ಸ್ಪಷ್ಟವಾಗಿ ಕಂಡುಬರುವುದು. ಆದ್ದರಿಂದ ಈ ಋಕ್ಕಿಗೆ ಗೃಹಪತಿವತೀ ಎಂದು ಹೆಸರು. ಮತ್ತು ಈ ಋಕ್ಕಿನ ಎರಡನೆಯ ಪಾದದಲ್ಲಿ **ವಿಶ್ವಾ ವೇದ ಜನಿಮಾ** ಎಂಬ ಶಬ್ದಗಳಿರುವವು. ಈ ಶಬ್ದಗಳು ಸರ್ವಪ್ರಾಣಿಗಳ ಜನಕನಾದ ಪ್ರಜಾಪತಿಯನ್ನು ಸೂಚಿಸುವವು. ಆದ್ದರಿಂದ ಈ ಋಕ್ಕಿಗೆ **ಪ್ರಜಾತಿಮತೀ** ಎಂದೂ ಹೆಸರು. ಈ ಋಕ್ಕಿನಲ್ಲಿ ಅಗ್ನಿಶಬ್ದವು ವಿಶೇಷವಾಗಿ ಪಠಿಸಲ್ಪಡದೇ ಇರುವುದರಿಂದ ಈ ಋಕ್ಕಿಗೆ ಶಾಂತಾ (ಶಾಂತಸ್ವಭಾವವುಳ್ಳದ್ದು) ಎಂದೂ ಹೆಸರು. ಆದ್ದರಿಂದ ಈ ಗುಣಗಳುಳ್ಳ ಋಕ್ಕನ್ನು ಪಠಿಸುವುದರಿಂದ ಹೋತೃವು ದೀರ್ಘಾಯುಸ್ಸನ್ನು ಪಡೆಯುವನು ಮತ್ತು ಯಜ್ಞಮಾಡುವ ಯಜಮಾನನಿಗೂ ದೀರ್ಘಾಯುಸ್ಸುಂಟಾಗುವುದಲ್ಲದೆ ಈ ವಿಷಯವನ್ನು ತಿಳಿದಿರುವ ಪುರುಷನೂ ಸಹ ದೀರ್ಘಾಯುಸ್ಸನ್ನು ಪಡೆದು ಸುಖಿಸುವನು.

## *English Translation*

(The Asvina Shastra. The beginning day of the Gavam ayanam. The use of the Rathantara and Brihat Samans and their kindres. The Mahavrata day of the Sattra).

### The marriage of Prajapati's daughter Surya. The Asvina Shastra was the bridal gift. In what way the Hotar has to repeat it. Its beginning verse

Prajapati gave his daughter Surya Savitri in marriage to the king Soma. All the gods came as parayanymphs. Prajapati formed according to the model

of a vahatu, i.e. things such as turmeric, powder & c. to be carried before the paranymphs, this thousand of verses which is called the Asvina Shastra. What falls short of a arvak one thousand verses, is no more the Asvins. This is the reason that the Hotar ought to repeat only a thousand verses, or he might repeat more. He ought to eat ghee before he commences repeating. Just as in this world a cart or a carriage goes well if smeared (with oil), thus his repeating proceeds well if he be smeared with ghee, by eating it. Having taken the posture of an eagle when starting up the Hotar should recite when commencing the call somasavom i.e., he should commence repeating the Asvina Shastra.

The gods could not agree as to whom this thousand verses should belong, each saying, "Let it be mine." Not being able to agree to whom it should belong, they said, "Let us run a race for it. He of us who will be the winner shall have it." They made the sun which is above Agni, the house-father (above the Garhapatya fire) the goal. That is the reason that the Asvina Shastra commences with a verse addressed to Agni, viz., agnir hotagrihapatih (6, 15, 13).

According to the opinion of some theologians the Hotar should instead of this verse commence the recitation of the Asvina Shastra with agnim manye pitaram (10, 73); for they say, he reaches the goal by means of the first verse through the words (contained in its fourth pada); divi sukram yajatam suryasya i.e. the splendour of the sun in heaven which deserves worship. But this opinion is not to be attended to. If one should observe a Hotar commencing the Asvina Shastra with the verse agnim manye one should say to him, "if a Shastra has been commenced with repeatedly mentioning agni fire, the Hotar will ultimately fall into the fire be burnt by it." Thus it always happens. Thence the Hotar ought to commence with the verse; agnir hota grahapatih. This verse contains in the terms grihapati house-father, janima generations, the propitiation, of the word agni fire, with which it commences, and is therefore not dangerous for attaining to the full age. He who has such a knowledge attains to his full age of one hundred years.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಸಪ್ತದಶಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನೇಳನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು
ಸಮಾಪ್ತವಾದುದು.



# ಅಥ ಸಪ್ತದಶಾಧ್ಯಾಯೇ ದ್ವಿತೀಯಃ ಖಂಡಃ

## ಹದಿನೇಳನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ಆಶ್ವಿನಶಸ್ತ್ರವನ್ನು ಪಡೆಯುವುದಕ್ಕಾಗಿ ದೇವತೆಗಳು ಓಡುವ ಸ್ಪರ್ಧೆಯನ್ನು ನಡೆಸುವುದು]



ತಾಸಾಂ ವೈ ದೇವತಾನಾಮಾಜಿಂ ಧಾವಂತೀನಾಮಭಿಸೃಷ್ಟಾನಾಮಗ್ನಿರ್ಮುಖಂ ಪ್ರಥಮಃ ಪ್ರತ್ಯಪ್ರದ್ಯತ ತಮಶ್ವಿನಾವನ್ವಾಗಚ್ಛತಾಂ ತಮಬ್ರೂತಾಮಪೋದಿಹ್ಯಾವಾಂ ವಾ ಇದಂ ಜೇಷ್ಯಾವ ಇತಿ ಸ ತಥೇತ್ಯಬ್ರವೀತ್ತಸ್ಯ ವೈ ಮಮೇಹಾಪ್ಯಸ್ತ್ವಿತಿ ತಥೇತಿ ತಸ್ಮಾ ಅಪ್ಯತ್ರಾಕುರುತಾಂ ತಸ್ಮಾದಾಗ್ನೇಯಮಾಶ್ವಿನೇ ಶಸ್ಯತೇ ॥

ಅಥಾಗ್ನೇಯಕಾಂಡಂ ವಿಧತ್ತೇ—ದೇವತಾಃ ಸರ್ವಾ ಗಾರ್ಹಪತ್ಯಾಗ್ನಿಸಮೀಪಾನ್ನಿರ್ಗತ್ಯ ಸೂರ್ಯಪರ್ಯಂತಾಮಾಜಿಮುದ್ದಿಶ್ಯ ಧಾವಂತ್ಯೋಽಭಿಸೃಷ್ಟಾ ಅಭಿತಃ ಪ್ರವೃತ್ತಾ ಏಕಾ ದೇವತೈಕಸ್ಯಾಂ ದಿಶಿ ಧಾವತ್ಯನ್ಯಾ ಪರಸ್ಯಾಂ ದಿಶೀತ್ಯೇವಂ ಸರ್ವತೋ ಧಾವಂತಿ ॥ ತಾಸಾಂ ದೇವತಾನಾಂ ಮಧ್ಯೇ ಅಗ್ನಿರ್ಮುಖಂ ಯಥಾ ಭವತಿ ತಥಾ ಮುಖ್ಯೋ ಭವಿಷ್ಯಾಮೀತ್ಯಭಿಪ್ರಾಯೇಣ ಪ್ರಥಮಃ ಪ್ರತ್ಯಪದ್ಯತ ಪುರೋಗಾಮೀ ಧಾವನಂ ಕೃತವಾನ್ ॥ ತಮಗ್ನಿಮನು ಪಶ್ಚಾದಶ್ವಿನಾವಾಗಚ್ಛತಾಂ ಸಮೀಪಂ ಗತ್ವಾ ತಮಗ್ನಿಮಬ್ರೂತಾಂ ಹೇಽಗ್ನೇ ತ್ವಂ ಶಾಂತೋ ಭವಿಷ್ಯಸಿ ತಸ್ಮಾದಪೋದಿಹ್ಯುತ್ಕರ್ಷೇಣಾಪೇಹಿ ದೂರೇಽಪಸರಾಽಽವಾಮಾಭ್ಯಾಮೇವೇದಮಾಶ್ವಿನಮುದ್ದಿಶ್ಯ ಜೇಷ್ಯಾವ ಇತಿ ಸೋಽಗ್ನಿರಂಗೀಕೃತ್ಯ ತಸ್ಯಾಪಗಚ್ಛತೋ ಮಮಾಪೀಹ ಶಸ್ತ್ರೇ ಭಾಗೋಽಸ್ತ್ವಿತ್ಯಂಗೀಕೃತವಾನ್ ॥ ಅಶ್ವಿನಾವಂಗೀಕೃತ್ಯ ತಸ್ಮಾದ(ಅ)ಗ್ನಯೇ ವಿಭಾಗಂ ದತ್ತವಂತೌ ॥ ಯಸ್ಮಾದೇವಂ ತಸ್ಮಾದಾಗ್ನೇಯಂ ಬಹೂನಾಮೃಚಾಂ ಸಮೂಹರೂಪಂ ಕಾಂಡಮಾಶ್ವಿನೇ ಶಸ್ತ್ರೇ ಹೋತ್ರಾ ಶಸ್ಯತೇ ॥ ಶಂಸನೀಯಂ ತಚ್ಚ ಕಾಂಡಂ ಸರ್ವಂ ಸೂತ್ರೇ ದ್ರಷ್ಟವ್ಯಂ ॥

ಅಶ್ವಿನವೆಂಬ ಈ ಶಸ್ತ್ರದಲ್ಲಿ ಅಗ್ನಿಸಂಬಂಧವಾದ ಮಂತ್ರಗಳು ಏಕೆ ಪಠಿಸಲ್ಪಡುವವು ಎಂಬುದನ್ನು ವಿವರಿಸುತ್ತಾರೆ. ಹಿಂದೆ ಹೇಳಿದ ಪ್ರಕಾರ ದೇವತೆಗಳೆಲ್ಲರೂ ಸ್ಪರ್ಧೆಯಲ್ಲಿ ಓಡುವಾಗ ಗಾರ್ಹಪತ್ಯಾಗ್ನಿಯಿಂದ ಸೂರ್ಯನವರೆಗೆ ಓಡುವುದಕ್ಕೆ ಪ್ರಾರಂಭಿಸಿದರು. ತಾವೇ ಗೆಲ್ಲಬೇಕೆಂದು ಒಬ್ಬೊಬ್ಬರು ಒಂದೊಂದು ದಿಕ್ಕಿನಲ್ಲಿ ಓಡುತ್ತಿದ್ದರು. ಆ ದೇವತೆಗಳ ಮಧ್ಯದಲ್ಲಿ ಅಗ್ನಿಯೇ ಎಲ್ಲರಿಗಿಂತಲೂ ಮುಂದೆ ಮುಂದೆ ಓಡುತ್ತಿರುವುದು ಕಂಡು ಬಂದಿತು. ಅಗ್ನಿಯ ಹಿಂದೆ ಅವನ ಸಮೀಪದಲ್ಲಿಯೇ

ಅಶ್ವಿನೀದೇವತೆಗಳು ಓಡಿಬರುತ್ತಿದ್ದರು. ಆಗ ಆಶ್ವಿನೀದೇವತೆಗಳು ಅಗ್ನಿಯನ್ನು ಕುರಿತು ಇಂತೆಂದರು. ಎಲೈ ಅಗ್ನಿಯೇ, ನೀನು ಶಾಂತಸ್ವಭಾವದವನು. ನಾವು ಈ ಸ್ಪರ್ಧೆಯಲ್ಲಿ ನೆಲ್ಲಬೇಕಾಗಿದೆ. ಆದ್ದರಿಂದ ನಮ್ಮ ಮುಂದಿರುವ ನೀನು ದಯವಿಟ್ಟು ಪಕ್ಕಕ್ಕೆ ಸರಿದು ನಮಗೆ ಮುಂದೆ ಓಡಲು ದಾರಿಯನ್ನು ಮಾಡಿಕೊಡು ಎಂದು ಕೇಳಿಕೊಂಡರು. ಅಗ್ನಿಯು ಅವರ ಮಾತನ್ನು ಕೇಳಿ ಹಾಗೆಯೇ ಆಗಲೆಂದೊಪ್ಪಿದನು ಆದರೆ ಈ ಆಶ್ವಿನಶಸ್ತ್ರದಲ್ಲಿ ನನಗೂ ಒಂದು ಭಾಗವಿರಬೇಕೆಂದೂ ಅದಕ್ಕೆ ನೀವು ಒಪ್ಪುವುದಾದರೆ ನಿಮ್ಮ ಮಾತಿಗೆ ಸಮ್ಮತಿಸುವೆನೆಂದೂ ಹೇಳಿದನು. ಅಶ್ವಿನೀದೇವತೆಗಳು ಅಗ್ನಿಯ ಮಾತಿಗೆ ಸಮ್ಮತಿಸಿ ಅಗ್ನಿಗೂ ಒಂದು ಭಾಗವನ್ನು ಕೊಟ್ಟರು. ಆದ್ದರಿಂದಲೇ ಅನೇಕ ಋಕ್ಕುಗಳಿಂದ ಕೂಡಿದ ಈ ಆಶ್ವಿನಶಸ್ತ್ರಮಂತ್ರಗಳಲ್ಲಿ ಅಗ್ನಿಸಂಬಂಧವಾದ ಅನೇಕ ಋಕ್ಕುಗಳನ್ನು ಹೋತೃವು ಪಠಿಸುತ್ತಾನೆ. ಆ ಮಂತ್ರಗಳೆಲ್ಲವೂ (ಆಶ್ವಲಾಯನ) ಸೂತ್ರದಲ್ಲಿ ವಿಸ್ತಾರವಾಗಿ ವಿವರಿಸಲ್ಪಟ್ಟಿದೆ. ಇದಕ್ಕೆ ಆಗ್ನೇಯಕಾಂಡವೆಂದು ಹೆಸರು.

**ತಾ ಉಷಸಮನ್ವಾಗಚ್ಛತಾಂ ತಾಮಬ್ರೂತಾಮುಪೋದಿಹ್ಯಾವಾಂ ವಾ ಇದಂ ಜೇಷ್ಯಾವ ಇತಿ ಸಾ ತಥೇತ್ಯಬ್ರವೀತ್ತಸ್ಯೈ ವೈ ಮಮೇಹಾಪ್ಯಸ್ತ್ವಿತಿ ತಥೇತಿ ತಸ್ಯಾ ಅಪ್ಯತ್ರಾಕುರುತಾಂ ತಸ್ಮಾದುಷಸ್ಯಮಾಶ್ವಿನೇ ಶಸ್ಯತೇ ॥**

**ಅಥೋಷಸ್ಯಂ ಕಾಂಡಂ ವಿಧತ್ತೆ—ತಾವಶ್ವಿನಾವುಷಸಮೇತನ್ನಾಮಯುಕ್ತಾಂ ದೇವತಾಮನ್ಯತ್ಪೂರ್ವವದ್ವ್ಯಾಖ್ಯೇಯಂ ॥**

ಈ ಉಷೋದೇವತೆಯ ಸಂಬಂಧವಾದ ಮಂತ್ರಗಳನ್ನೊಳಗೊಂಡಿರುವ ಉಷಸ್ಯಕಾಂಡದ ವಿಷಯವನ್ನು ವಿವರಿಸುವರು ಹಿಂದೆ ಹೇಳಿದ ಕ್ರಮದಂತೆಯೇ ಸ್ಪರ್ಧೆಯಲ್ಲಿ ಆಶ್ವಿನೀ ದೇವತೆಗಳು ಓಡುತ್ತಿರುವಾಗ ಉಷೋದೇವತೆಯು ಅಡ್ಡಲಾಗಿ ಬಂದದ್ದನ್ನು ಕಂಡು ಅಗ್ನಿಗೆ ಹೇಳಿದಂತೆಯೇ ಅಶ್ವಿನೀದೇವತೆಗಳು ಅವಳಿಗೂ ಹೇಳಿ ಅವಳಿಗೂ ಒಂದು ಭಾಗವನ್ನು ಕೊಟ್ಟು ಮುಂದುವರೆದರು. ಆಶ್ವಿನಶಸ್ತ್ರದಲ್ಲಿರುವ ಉಷೋದೇವತಾಕವಾದ ಮಂತ್ರಗಳಿಗೆ ಉಷಸ್ಯಕಾಂಡವೆಂದು ಹೆಸರು. ಈಗಲೂ ಹೋತೃವು ಆಶ್ವಿನ ಶಸ್ತ್ರಮಂತ್ರಗಳನ್ನು ಪಠಿಸುವಾಗ ಉಷೋದೇವತಾಕವಾದ ಮಂತ್ರಗಳನ್ನೂ ಪಠಿಸುವನು.

**ತಾವಿಂದ್ರಮನ್ವಾಗಚ್ಛತಾಂ ತಮಬ್ರೂತಾಮಾವಾಂ ವಾ ಇದಂ ಮಘೇವನ್ ಜೇಷ್ಯಾವ ಇತಿ ನ ಹ ತಂ ದಧೃಷತುರಪೋದಿಹೀತಿ ವಕ್ತುಂ ಸ ತಥೇತ್ಯಬ್ರವೀತ್ತಸ್ಯ ವೈ ಮಮೇಹಾಪ್ಯಸ್ತ್ವಿತಿ ತಥೇತಿ ತಸ್ಮಾ ಅಪ್ಯತ್ರಾಕುರುತಾಂ ತಸ್ಮಾದೈಂದ್ರಮಾಶ್ವಿನೇ ಶಸ್ಯತೇ ॥**

**ಐಂದ್ರಂ ಕಾಂಡಂ ವಿಧತ್ತೇ—ಹೇ ಮಘವನ್ನಾವಾಂ ಜೇಷ್ಯಾವ ಇತ್ಯೇವಮಬ್ರೂತಾಮಿಂದ್ರಸ್ಯ ಸ್ವಾಮಿತ್ವಾತ್ತಮಿಂದ್ರಮುದ್ದಿಶ್ಯಾಪೋದಿಹೀತಿ ವಕ್ತುಂ ನ ದಧೃಷತುರ್ಧಾರ್ಷ್ಟ್ಯಂ ನಾಕುರುತಾಂ । ಅನ್ಯತ್ಪೂರ್ವವತ್ ॥**

ಇಂದ್ರನ ಸಂಬಂಧವಾದ ಮಂತ್ರಗಳನ್ನು ವಿವರಿಸುವರು—ಅನಂತರ ಅಶ್ವಿನೀದೇವತೆಗಳ ಮುಂದುಗಡೆ ಇಂದ್ರನಿರುವುದನ್ನು ಕಂಡು ಅಶ್ವಿನೀದೇವತೆಗಳು ಸ್ವಾಮಿಯಾದ ಇಂದ್ರನಿಗೆ ಇತರರಿಗೆ ಹೇಳಿದಂತೆ ಹೇಳಲಾರದೆ ನಮ್ರಭಾವದಿಂದ—ಎಲೈ ಇಂದ್ರನೇ ನಾವು ಈ ಸ್ಪರ್ಧೆಯಲ್ಲಿ ಗೆಲ್ಲಬೇಕಾಗಿದೆ. ದಯವಿಟ್ಟು ನಮಗೆ ಅವಕಾಶಮಾಡಿಕೊಡು ಎಂದು ಪ್ರಾರ್ಥಿಸಿಕೊಳ್ಳಲು, ಇಂದ್ರನು ಅದಕ್ಕೆ ಒಪ್ಪಿ ಅವರಿಗೆ ದಾರಿಯನ್ನು ಬಿಟ್ಟುಕೊಟ್ಟನು. ಆದರೆ ಇತರರಂತೆ ಇಂದ್ರನು ಅಶ್ವಿನಶಸ್ತ್ರದಲ್ಲಿ ತನಗೂ ಒಂದು ಭಾಗವಿರುವಂತೆ ಕೇಳಲು ಅಶ್ವಿನಶಸ್ತ್ರವನ್ನು ಪಠಿಸುವಾಗ ಇಂದ್ರದೇವತಾಕವಾದ ಮಂತ್ರಗಳನ್ನೂ ಪಠಿಸುವನು.

**ತದಶ್ವಿನಾ ಉದಜಯತಾಮಶ್ವಿನಾವಾಶ್ನುವಾತಾಂ ಯದಶ್ವಿನಾ ಉದಜಯತಾಮಶ್ವಿನಾವಾಶ್ನುವಾತಾಂ ತಸ್ಮಾದೇತದಾಶ್ವಿನಮಿತ್ಯಾಚಕ್ಷತೇ ॥**

ಅಥಾಶ್ವಿನಂ ಕಾಂಡಂ ವಿಧತ್ತೇ—ತತ್ರಸ್ಯಾಮಾಜೌ ಸಹಸಾ ಸೂರ್ಯಪರ್ಯಂತಂ ಗತ್ವಾ ತಾವಶ್ವಿನಾವುತ್ಕರ್ಷೇಣಾಜಯತಾಂ ತತಸ್ತಾವೇವ ಶಸ್ತ್ರಮ(ಮಾ)ಶ್ನುವಾತಾಂ ವ್ಯಾಪ್ತವಂತೌ ॥ ಯದ್ಯಸ್ಮಾದಶ್ವಿನೌ ಜಯಪೂರ್ವಕಂ ಶಸ್ತ್ರಂ ವ್ಯಾಪ್ತವಂತೌ ತಸ್ಮಾದೇತಚ್ಛಸ್ತ್ರಮಾಶ್ವಿನಮಿತಿ ಯಾಜ್ಞಿಕಾ ಆಚಕ್ಷತೇ—ಆಶ್ವಿನಂ ಕಾಂಡಂ ಶಂಸೇದಿತ್ಯಭಿಪ್ರಾಯಃ । ವೇದನಂ ಪ್ರಶಂಸತಿ—

ಈಗ ಮುಖ್ಯವಾದ ಆಶ್ವಿನಕಾಂಡವನ್ನು ವಿವರಿಸುವರು. ಅನಂತರ ಅಶ್ವಿನೀದೇವತೆಗಳು ಯಾವ ಆತಂಕವೂ ಇಲ್ಲದೆ ಸ್ಪರ್ಧೆಯಲ್ಲಿ ಸೂರ್ಯನ ಪರ್ಯಂತರ ಓಡಿ ಜಯಶಾಲಿಗಳಾದರು ಎಂದರೆ ಸ್ಪರ್ಧೆಯಲ್ಲಿ ಗೆದ್ದರು. ಈ ರೀತಿಯಲ್ಲಿ ಅಶ್ವಿನೀದೇವತೆಗಳು ಸ್ಪರ್ಧೆಯಲ್ಲಿ ಗೆದ್ದು ಜಯಶಾಲಿಗಳಾದ್ದರಿಂದ ಈ ಶಸ್ತ್ರಕ್ಕೆ ಆಶ್ವಿನಶಸ್ತ್ರವೆಂದು ಹೆಸರಾಯಿತು. ಇದನ್ನು ಯಾಜ್ಞಿಕರು ಹೀಗೆಯೇ ಹೇಳುವರು. ಆದ್ದರಿಂದ ಹೋತೃವು ಆಶ್ವಿನಕಾಂಡವೆಂಬ ಅಶ್ವಿನೀದೇವತಾಕವಾದ ಮಂತ್ರ ಸಮೂಹವನ್ನು ಪಠಿಸಬೇಕು. ಈ ವಿಷಯವನ್ನು ತಿಳಿದಿರುವ ಪುರುಷನು ಸಕಲ ಇಷ್ಟಾರ್ಥಗಳನ್ನೂ ಪಡೆಯುವನು.

**ತದಾಹುರ್ಯಚ್ಛಸ್ಯತ ಆಗ್ನೇಯಂ ಶಸ್ಯತ ಉಷಸ್ಯಂ ಶಸ್ಯತ ಐಂದ್ರಮಥ ಕಸ್ಮಾದೇತದಾಶ್ವಿನಮಿತ್ಯಾಚಕ್ಷತ ಇತ್ಯಶ್ವಿನೌ ಹಿ ತದುದಜಯತಾಮಶ್ವಿನಾವಾಶ್ನುವಾತಾಂ ಯದಶ್ವಿನಾ ಉದಜಯತಾಮಶ್ವಿನಾವಾಶ್ನುವಾತಾಂ ತಸ್ಮಾದೇತದಾಶ್ವಿನಮಿತ್ಯಾಚಕ್ಷತೇ ಆಶ್ನುತೇ ಯದ್ಯತ್ಕಾಮಯತೇ ಯ ಏವಂ ವೇದ ॥**

ಪ್ರಶ್ನೋತ್ತರಾಭ್ಯಾಂ ಶಸ್ತ್ರಸ್ಯಾಽಽಶ್ವಿನತ್ವಮುಪಪಾದಯತಿ—ಆಶ್ವಿನಕಾಂಡವದಾಗ್ನೇಯೋಷಸ್ಯೈಂದ್ರಕಾಂಡಾನಾಮಪಿ ಶಸ್ಯಮಾನತ್ವಾಚ್ಛಸ್ತ್ರಸ್ಯಾಽಽಗ್ನೇಯಾದಿನಾಮಪರಿತ್ಯಾಗೇನಾಽಽಶ್ವಿನನಾಮ್ನಿ ಕಃ ಪಕ್ಷಪಾತ ಇತಿ ಪ್ರಶ್ನಃ । ಅಗ್ನಿರುಷಾ ಇಂದ್ರಶ್ಚೈತೇ ಪರತೋಽಪಸೃತ್ಯ ನ ತು ಸೂರ್ಯಪರ್ಯಂತಮಧಾವನ್ ॥ ಅಶ್ವಿನೌ ತು ಧಾವಂತೌ ಜಯಪೂರ್ವಕಂ ಶಸ್ತ್ರಂ ಪ್ರಾಪ್ತವಂತಾವಿತಿ ತದೀಯತ್ವಪ್ರಸಿದ್ಧಿಃ ಶಸ್ತ್ರಸ್ಯ ಯುಕ್ತಾ ॥ ವೇದನಂ ಪ್ರಶಂಸತಿ—ಪೂರ್ವಮಾಶ್ವಿನಸಂಬಂಧಮಾತ್ರವೇದನಮಿಹ ತ್ವಗ್ನ್ಯಾದಿಸಂಬಂಧರಾಹಿತ್ಯವೇದನಂ ಚೇತಿ ವಿಶೇಷಃ ॥

ಆಶ್ವಿನಶಸ್ತ್ರಕ್ಕೆ ಆ ಹೆಸರು ಹೇಗೆ ಬಂತೆಂಬ ವಿಷಯುವನ್ನು ಪ್ರಶ್ನೋತ್ತರರೂಪವಾಗಿ ವಿವರಿಸುವರು. ಈ ಶಸ್ತ್ರಮಂತ್ರಗಳಲ್ಲಿ ಅಶ್ವಿನೀದೇವತೆಗಳಂತೆ ಅಗ್ನಿ, ಉಷಸ್ಸು ಮತ್ತು ಇಂದ್ರ ಎಂಬ ದೇವತೆಗಳನ್ನೂ ಸ್ತುತಿಸಲಾಗಿದೆ. ಈ ಎಲ್ಲಾ ದೇವತಾಕವಾದ ಮಂತ್ರಗಳೂ ಈ ಶಸ್ತ್ರದಲ್ಲಿವೆ, ಹಾಗಿದ್ದರೂ ಇತರ ದೇವತೆಗಳ ಹೆಸರುಗಳನ್ನೆಲ್ಲಾ ಬಿಟ್ಟು ಅಶ್ವಿನೀದೇವತೆಗಳ ಹೆಸರು ಮಾತ್ರ ಈ ಶಸ್ತ್ರಮಂತ್ರಕ್ಕೆ ಹೇಗೆ ಬಂದಿತು ಎಂದರೆ, ಅಗ್ನ್ಯಾದಿದೇವತೆಗಳು ಈ ಸ್ಪರ್ಧೆಯಲ್ಲಿ ಭಾಗವನ್ನು ವಹಿಸಿದ್ದರೂ ಅವರೆಲ್ಲಾ ಅಂತಿಮಗುರಿಯಾದ ಸೂರ್ಯಮಂಡಲವನ್ನು ತಲಪಲಿಲ್ಲ. ಅಶ್ವಿನೀದೇವತೆಗಳ ಮಾತಿನಂತೆ ಅರ್ಧದಲ್ಲಿಯೇ ತಮ್ಮ ಸ್ಪರ್ಧೆಯನ್ನು ತ್ಯಜಿಸಿ ಅಶ್ವಿನೀದೇವತೆಗಳಿಗೆ ಗೆಲ್ಲಲು ಅವಕಾಶಮಾಡಿಕೊಟ್ಟರು. ಕಡೆಯವರೆಗೂ ಓಡಿ ಅಶ್ವಿನೀದೇವತೆಗಳು ಮಾತ್ರ ಅಂತಿಮ ಸ್ಥಾನವನ್ನು ತಲಪಿದ್ದರಿಂದ ಈ ಶಸ್ತ್ರಮಂತ್ರವನ್ನು ಆಶ್ವಿನಶಸ್ತ್ರವೆಂದು ಅಶ್ವಿನೀದೇವ ಗಳ ಹೆಸರಿನಿಂದ ಕರೆಯುವುದು ಯುಕ್ತವಾಗಿದೆ. ಈ ವಿಷಯುಗಳನ್ನೆಲ್ಲಾ ಯಾವ ಪುರುಷನು ತಿಳಿದಿರುವನೋ ಅವನು ಸಕಲ ಇಷ್ಟಾರ್ಥಗಳನ್ನೂ ಪಡೆಯುವನು.

*English Translation*

**The race run by the gods for obtaining the Asvina Shastra as a prize**

Among all these deities who were running the race, Agni was with his mouth the flames in advance of all others, after they had started. The Asvins closely followed him, and said to him, "Let us both be winners of this race." Agni consented, under the condition that he should also have a share in it (the Asvina Shastra). They consented, and made room also for him in this Asvina Shastra. This is the reason that there is in the Asvina Shastra a series of verses addressed to Agni.

The Asvins closely followed Ushas. They said to her, "Go aside, that we both may be winners of the race." She consented, under the condition that they should give her also a share in it (the Asvina Shastra). They consented, and made room also for her in it. This is the reason that in the Asvina Shastra a series of verses is addressed to Ushas.

The Asvins closely followed Indra. They said to him, "Maghavan, we both wish to be winners of this race." They did not dare to say to him, "go aside." He consented, under the condition that he should also obtain a share in it (the Asvina Shastra). They consented, and made room also for him. This is the reason that in the Asvina Shastra there is a series of verses addressed to Indra.

Thus the Asvins were winners of the race, and obtained the prize. This is the reason that it (the prize) is called Asvinam i.e. the Asvina Shastra. He who has such a knowledge obtains what he may wish for.

They ask, why is this Shastra called Asvinam, notwithstanding there being in it verses addressed to Agni, Ushas and Indra? The answer is the

Asvins were the winners of this race, they obtained it (the prize). This is the reason that it is called the Asvina Shastra. He who has such a knowledge obtains what he may wish for.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಸಪ್ತದಶಾಧ್ಯಾಯಸ್ಯ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನೇಳನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವಾದುದು.



# ಅಥ ಸಪ್ತದಶಾಧ್ಯಾಯೇ ತೃತೀಯಃ ಖಂಡಃ

## ಹದಿನೇಳನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ಆಶ್ವಿನಶಸ್ತ್ರಮಂತ್ರಗಳಿಗಾಗಿ ದೇವತೆಗಳು ಏರ್ಪಡಿಸಿದ್ದ ಸ್ಪರ್ಧೆಯಲ್ಲಿ ಯಾವ ಯಾವ ದೇವತೆಗಳ ರಥಗಳಿಗೆ ಯಾವ ಯಾವ ವಾಹನಗಳನ್ನು ಹೂಡಿದ್ದರು ಎಂಬ ವಿಚಾರ. ಈ ಆಶ್ವಿನಶಸ್ತ್ರದಲ್ಲಿರುವ ಸೂರ್ಯದೇವತಾಕವಾದ ಮಂತ್ರಗಳು]



ಅಶ್ವತರೀರಥೇನಾಗ್ನಿರಾಜಿಮಧಾವತ್ತಾಸಾಂ ಪ್ರಾಜಮಾನೋ ಯೋ-
ನಿಮಕೂಲಯತ್ತಸ್ಮಾತ್ತಾ ನ ವಿಜಾಯಂತೇ ॥

ಅಥಾಽಽಶ್ವಿನಶಸ್ತ್ರಪ್ರಶಂಸಾರ್ಥಂ ದೇವಾನಾಮಾಜಿಧಾವನಕಥಾ ಪೂರ್ವಮುಪನ್ಯಸ್ತಾ ತಮೇವ ಕಥಾಶೇಷಮಾಶ್ವಿನಶಸ್ತ್ರಪ್ರಶಂಸಾರ್ಥಮೇವ ಪುನರಪ್ಯನುವರ್ತಯತಿ—ಅಶ್ವಗರ್ದಭಸಾಂಕರ್ಯೇಣ ಜಾತಾಃ ಸ್ತ್ರೀವ್ಯಕ್ತಯೋಽಶ್ವತರ್ಯಃ ॥ ತದ್ಯುಕ್ತೇನ ರಥೇನಾಯಮಗ್ನಿರಾಜಿಮುದ್ದಿಶ್ಯ ಧಾವನಂ ಕೃತವಾನ್ । ತದಾನೀಂ ಪ್ರಾಜಮಾನಃ ಪ್ರಕರ್ಷೇಣಾಶ್ವತರೀಃ ಪ್ರೇರಯನ್ ॥ ಅಜ ಪಶುಪ್ರೇದಣ ಇತಿ ಧಾತುಜನ್ಯೋಽಯಂ ಶಬ್ದಃ । ತತ್ಪ್ರೇರಣಕಾಲೇ ತಾಸಾಂ ಪೂರ್ವ ಪೂರ್ವ ಪುಚ್ಛಭಾಗಮುಪಸ್ಪೃಶ್ಯ ಯೋನಿಮಕೂಲಯತ್, ದಗ್ಧವಾನ್ ॥ ತಸ್ಮಾದ್ದಗ್ಧಯೋನಿತ್ವಾತ್ತಾ ಅಶ್ವತರ್ಯೋ ನ ವಿಜಾಯಂತೇ ವಿಜನನಮಪತ್ಯೋತ್ಪಾದನಂ ನ ಕುರ್ವಂತಿ ॥

ಆಶ್ವಿನಶಸ್ತ್ರಮಂತ್ರಗಳನ್ನು ಪ್ರಶಂಸೆಮಾಡಲು ದೇವತೆಗಳ ಸ್ಪರ್ಧೆಯನ್ನು ಹಿಂದೆ ವಿವರಿಸಲಾಯಿತು. ಈ ವಿಚಾರವಾಗಿಯೇ ಮುಂದಿನ ಕಥಾಶೇಷವನ್ನು ವಿವರಿಸುವರು. ಅಶ್ವ ಮತ್ತು ಗರ್ದಭಗಳ (ಕತ್ತೆಗಳ) ಸಂಯೋಗದಿಂದ ಹುಟ್ಟುವ

ಹೆಣ್ಣು ಮರಿಗಳಿಗೆ ಅಶ್ವತರೀ ಎಂದು ಹೆಸರು ಇವುಗಳನ್ನು ಹೂಡಿದ ರಥದಲ್ಲಿ ಕುಳಿತು ಅಗ್ನಿಯು ಸ್ಪರ್ಧೆಯಲ್ಲಿ ಭಾಗವಹಿಸಿದನು (ಓಡಿದನು). ಈ ಅಶ್ವತರೀ ಎಂಬ ಅಶ್ವಗರ್ದಭಗಳ ಸಂಯೋಗದಿಂದ ಹುಟ್ಟಿದ ಪಶುಗಳನ್ನು ರಥಕ್ಕೆ ಹೂಡಿ ಅವುಗಳು ವೇಗವಾಗಿ ಚಲಿಸುವಂತೆ ಅಗ್ನಿಯು ಮಾಡಿದ್ದರಿಂದ ರಥದ ಮೇಲೆ ಕುಳಿತಿದ್ದ ಅಗ್ನಿಯಿಂದ ಈ ಅಶ್ವತರಿಗಳ ಪುಚ್ಛಪ್ರದೇಶಗಳು (ಯೋನಿಪ್ರದೇಶಗಳು) ಸುಟ್ಟುಹೋದವು. ಆದ್ದರಿಂದ ಈ ಅಶ್ವತರಿಗಳಿಗೆ ಸಂತಾನೋತ್ಪತ್ತಿ (ಮರಿಗಳನ್ನು ಹಾಕುವ) ಸಾಮರ್ಥ್ಯವು ಇಲ್ಲವಾಯಿತು. ಈಗಲೂ ಹಾಗೆಯೇ ನಡೆದುಬರುತ್ತಿರುವುದು.

**ಗೋಭಿರುರುಣ್ಯೈರುಷಾ ಆಜಿಮಧಾವತ್ತಸ್ಮಾದುಷಸ್ಯಾಗತಾಯಾಮರುಣ-ಮಿವೈವ ಪ್ರಭಾತ್ಯುಷಸೋ ರೂಪಂ ॥**

ಅಗ್ನೇರಾಜಿಧಾವನಮುಕ್ತ್ವೋಷಸೋ ಧಾವನಂ ದರ್ಶಯತಿ—ಅರುಣ್ಯೈರ್ಗೋಭಿರೀಷದ್ರಕ್ತವರ್ಣೈರ್ಬಲೀವರ್ದೈರ್ಯುಕ್ತೇನ ರಥೇನ ಯಸ್ಮಾದುಷಸೋ ಧಾವನಂ ತಸ್ಮಾ-ಲ್ಲೋಕೇಽಪಿ ರಾತ್ರೇರವಸಾನೇ ಸಮಾಗತಾಯಾಮುಷಸಿ ತಸ್ಯಾ ಉಷಸೋ ರೂಪಂ ಪ್ರಾಚ್ಯಾಂ ದಿಶ್ಯರುಣಮಿವೈವ ರಕ್ತವರ್ಣಮೇವ ಭೂತ್ವಾ ಪ್ರಭಾತಿ ಪ್ರಭಾಯುಕ್ತಂ ಭವತಿ ॥

ಉಷೋದೇವತೆಯು ಸ್ಪರ್ಧೆಯಲ್ಲಿ ಓಡುವಾಗ ತನ್ನ ರಥಕ್ಕೆ ಸ್ವಲ್ಪಕೆಂಪಾದ ಎತ್ತುಗಳನ್ನು ಹೂಡಿದ್ದಳು. ಆದ್ದರಿಂದ ರಾತ್ರಿಯ ಕೊನೆಯಲ್ಲಿ ಎಂದರೆ ಉಷಃಕಾಲದಲ್ಲಿ ಉಷೋದೇವತೆಯು ಉದಯಿಸುವಾಗ ಅಂತರಿಕ್ಷದಲ್ಲಿ ಸೂರ್ಯನ ಸುತ್ತಲೂ ಕೆಂಪು ಛಾಯೆಯು ಕಾಣಿಸುವುದು.

**ಅಶ್ವರಥೇನೇಂದ್ರ ಆಜಿಮಧಾವತ್ತಸ್ಮಾತ್ಸ ಉಚ್ಚೈರ್ಘೋಷ ಉಪಬ್ದಿ-ಮಾನ್ ಕ್ಷತ್ರಸ್ಯ ರೂಪಮೈಂದ್ರೋ ಹಿ ಸಃ ॥**

ಇಂದ್ರಸ್ಯಾಽಽಜಿಧಾವನಂ ದರ್ಶಯತಿ—ಯಸ್ಮಾದಶ್ವಯುಕ್ತೇನ ರಥೇನೇಂದ್ರೋಽಧಾವತ್ತಸ್ಮಾಲ್ಲೋಕೇಽಪಿ ಸೋಽಶ್ವಯುಕ್ತೋ ರಥ ಉಚ್ಚೈರ್ಘೋಷೋ ಬಹುಲಧ್ವನಿರ್ದೃಶ್ಯತೇ ॥ ತಥಾ ಕ್ಷತ್ರಸ್ಯ ರೂಪಮುಪಬ್ದಿಮಾಞ್ಛಬ್ದೋಪೇತಂ ದೃಶ್ಯತೇ ॥ ಯದಾ ಕ್ಷತ್ರಿಯೋ ನಿರ್ಗಚ್ಛತಿ ತದೀಯಾಯಾ ಷ್ಟಿಕಾ ಅನ್ಯೇ ಸೇವಕಾ ಅಶ್ವಪುರತಃ ಶಬ್ದಂ ಕರ್ವಂತ ಏವ ಗಚ್ಛಂತಿ । ಸ ಚ ಶಬ್ದ ಐಂದ್ರೋ ಹ್ಯಸುರಯುದ್ಧೇಷು ತದ್ಧೀತ್ಯರ್ಥಮಿಂದ್ರೇಣ ಕೃತತ್ವಾದೈಂದ್ರತ್ವಂ ॥

ಇಂದ್ರನು ಸ್ಪರ್ಧೆಯಲ್ಲಿ ಭಾಗವಹಿಸಿದ ವಿಷಯವನ್ನು ತಿಳಿಸುವರು. ಕುದುರೆಗಳನ್ನು ಹೂಡಿದ್ದ ರಥದಲ್ಲಿ ಇಂದ್ರನು ಕುಳಿತು ಸ್ಪರ್ಧೆಯಲ್ಲಿ ಓಡಿದಾಗ ಬಹಳ ಧ್ವನಿಯುಂಟಾಯಿತು. ಈಗಲೂ ಲೋಕದಲ್ಲಿ ರಾಜನಾದವನು ರಥದಲ್ಲಿ ಕುಳಿತು ಸಂಚಾರಮಾಡುವಾಗ ರಥಚಕ್ರಗಳ ಶಬ್ದವೂ, ಕುದುರೆಗಳ ಹೇಷಾರವವೂ ಸೇವಕರ ಜಯಘೋಷವೂ ಎಲ್ಲವೂ ಸೇರಿ ರಾಜನ ಸುತ್ತಲೂ ಬಹಳ ಧ್ವನಿಯುಂಟಾಗುವುದು. ಇದಲ್ಲದೆ ಇಂದ್ರನು ಅಸುರರೊಡನೆ ನಡೆಸುವ ಯುದ್ಧಘೋಷವೂ ಕಲಕಲರವವೂ ಬಹಳವಾಗಿರುವುದು.

**ಗರ್ದಭರಥೇನಾಶ್ವಿನಾ ಉದಭಯತಾಮಶ್ವಿನಾವಶ್ನುವಾತಾಂ ಯದಶ್ವಿನಾ ಉದಜಯತಾಮಶ್ವಿನಾವಾಶ್ನುವಾತಾಂ ತಸ್ಮಾತ್ಸ ಸೃತಜವೋ**

ದುಗ್ಧದೋಹಃ ಸರ್ವೇಷಾಮೇತರ್ಹಿ ವಾಹನಾನಾಮನಾಶಿಷ್ಠೋ
ರೇತಸಸ್ತ್ವಸ್ಯ ವೀರ್ಯಂ ನಾಹರತಾಂ ತಸ್ಮಾತ್ಸ ದ್ವಿರೇತಾ ವಾಜೀ ॥

ಅಶ್ವಿನೋರ್ಧಾವನಂ ದರ್ಶಯತಿ—ಅಶ್ವಿನೌ ಗರ್ದಭಯುಕ್ತೇನ ರಥೇನ ಶೀಘ್ರಂ ಗತ್ವಾ ಜಯಪೂರ್ವಕಮಶ್ವಿನೌ ವ್ಯಾಪ್ತವಂತೌ ॥ ಯದ್ಯಸ್ಮಾದುಭೌ ರಥನಾದುಹ್ಯಾತಿವೇಗೇನ ಗತ್ವಾ ವ್ಯಾಪ್ತವಂತೌ ತಸ್ಮಾತ್ಸಗರ್ದಭೋ ಭಾರಾತಿಶಯೇನ ತಿವ್ರಧಾವನೇನ ಚ ಲೋಕೇ ಸೃತಜಘೋ ಗತವೇಗೋ ದುಗ್ಧದೋಹೋ ಗತಕ್ಷೀರರಸಶ್ಚಾಭವತ್ ॥ ತಸ್ಮಾದಿದಾನೀಮಪಿ ಗಜಾಶ್ವಾದಿ-ವಾಹನಾನಾಂ ಸರ್ವೇಷಾಂ ಮಧ್ಯೇ ಗರ್ದಭೋಽನಾಶಿಷ್ಠೋಽತ್ಯಂತವೇಗರಹಿತೋ ದೃಶ್ಯತೇ । ತದೀಯಸ್ಯ ರೇತಸ್ತು ವೀರ್ಯಂ ಸಾಮರ್ಥ್ಯಮಶ್ವಿನೌ ನಾಹರತಾಂ ನ ವಿನಾಶಿತವಂತೌ ತಸ್ಮಾ-ದ್ವೇಗೇನ ಯಾ (ಪಾ) ನಯೋಗ್ಯಂ (ಗ್ಯ) ಕ್ಷೀರೇಣ ಚ ರಾಹಿತ್ಯೇಽಪಿ ಸ ಗರ್ದಭೋ ದ್ವಿರೇತಾ ಗರ್ದಭಾಶ್ವತರ ಜಾತಿದ್ವಯೋತ್ಪಾದಕೋ ವಾಜೀ ಗಮನವಾನ್ದೃಶ್ಯತೇ ॥

ಅಶ್ವಿನೀದೇವತೆಗಳು ಸ್ಪರ್ಧಿಸುವ ಕ್ರಮವನ್ನು ತಿಳಿಸುವರು. ಅಶ್ವಿನೀದೇವತೆಗಳು ಗರ್ದಭ (ಕತ್ತೆ) ಗಳನ್ನು ಹೂಡಿದ ರಥದಲ್ಲಿ ಕುಳಿತು ಸ್ಪರ್ಧೆಯಲ್ಲಿ ಭಾಗವಹಿಸಿದರು. ಗರ್ದಭಗಳನ್ನು ಸ್ಪರ್ಧೆಯಲ್ಲಿ ಅತಿವೇಗವಾಗಿ ಓಡಿಸಿದ್ದರಿಂದ ಮುಂದೆಯೂ ಅವುಗಳ ವೇಗವು ಕಡಿಮೆಯಾಯಿತು ಹಾಲನ್ನು ಕೊಡುವುದು ನಿಂತುಹೋಯಿತು. ಆದ್ದರಿಂದ ಈಗಲೂ ಗಜ ಅಶ್ವ ಮೊದಲಾದವುಗಳನ್ನು ಹೂಡಿದ ರಥಕ್ಕೆ ವೇಗದಲ್ಲಿ ಸಮವಾಗಿ ಈ ಗರ್ದಭಗಳು ಓಡಲಾರವು. ಆದರೆ ಅಶ್ವಿನೀದೇವತೆಗಳ ಅನುಗ್ರಹದಿಂದ ಗರ್ದಭಗಳ ರೇತಸ್ಸು (ವೀರ್ಯವು) ಎಂದರೆ ಸಂತಾನೋತ್ಪತ್ತಿಸಾಮರ್ಥ್ಯವು ಕಡಮೆಯಾಗಲಿಲ್ಲ ವೇಗದಲ್ಲಿಯೂ, ಹಾಲು ಕೊಡುವುದರಲ್ಲಿಯೂ ಗರ್ದಭಗಳ ಶಕ್ತಿಸಾಮರ್ಥ್ಯವು ಕಡಮೆಯಾದರೂ ಸಂತಾನೋತ್ಪತ್ತಿಯಲ್ಲಿ ಮಾತ್ರ ಅವುಗಳು ತಮ್ಮ ಶಕ್ತಿಸಾಮರ್ಥ್ಯಗಳನ್ನು ಕಳೆದುಕೊಳ್ಳಲಿಲ್ಲ.

ತದಾಹುಃ ಸಪ್ತ ಸೌರ್ಯಾಣಿ ಛಂದಾಂಸಿ ಶಂಸೇದ್ಯಥೈವಾಽಽಗ್ನೇಯಂ
ಯಥೋಷಸ್ಯಂ ಯಥಾಽಽಶ್ವಿನಂ ಸಪ್ತ ವೈ ದೇವಲೋಕಾಃ
ಸರ್ವೇಷು ದೇವಲೋಕೇಷು ರಾಧ್ನೋತೀತಿ ॥

ಏವಂ ಶಸ್ತ್ರಪ್ರಶಂಸಾರ್ಥಂ ಅವಶಿಷ್ಟಮುಪಾಖ್ಯಾನಶೇಷಮಭಿಧಾಯ ಸೌರ್ಯಾಣಾಂ ಮಂತ್ರಸಮೂಹಾನಾಂ ಸಂಖ್ಯಾಂ ವಿಧಾತುಂ ಪೂರ್ವಪಕ್ಷಮುದ್ಭಾವಯತಿ—ಆಗ್ನೇಯೋಷಸ್ಯಾ-ಶ್ವಿನಕಾಂಡಾನಿ ಯಥಾ ಪ್ರತ್ಯೇಕಂ ಗಾಯತ್ರ್ಯಾದಿಭಿಃ ಸಪ್ತಚ್ಛಂದೋಭಿರ್ಯುಕ್ತಾನ್ಯೇವಮತ್ರ ಸೌರ್ಯೇಽಪಿ ಕಾಂಡೇ ಸಪ್ತ ಚ್ಛಂದಾಸಿ ಶಂಸನೀಯಾನಿ ॥ ತಥಾ ಸತಿ ಭೋಗಸ್ಥಾನರೂಪಾಣಾಂ ದೇವಲೋಕಾನಾಮವಾಂತರಭೇದೇನ ಸಪ್ತವಿಧತ್ವಾತ್ತತ್ಸಮೃದ್ಧಿಃ ಸಿಧ್ಯತೀತಿ ಪೂರ್ವಪಕ್ಷಿಣ ಆಹುಃ ॥

ಇದುವರೆಗೂ ಶಸ್ತ್ರಮಂತ್ರಗಳನ್ನು ಪ್ರಶಂಸೆಮಾಡಿ ಉಳಿದ ಸೂರ್ಯದೇವತಾಕವಾದ ಮಂತ್ರಗಳ ಸಂಖ್ಯೆಯನ್ನು ನಿರ್ದೇಶಿಸುವಾಗ ಉದ್ಭವಿಸುವ ಪೂರ್ವಪಕ್ಷವನ್ನು ವಿವರಿಸುವರು. ಇದುವರೆಗೂ ವಿವರಿಸಿದ ಆಗ್ನೇಯ, ಉಷಸ್ಯ, ಆಶ್ವಿನ ಎಂಬ ದೇವತೆಗಳನ್ನು ಪ್ರಶಂಸಿಸಿ ಪಠಿಸುವ ಮಂತ್ರಗಳಲ್ಲಿ (ಕಾಂಡಗಳಲ್ಲಿ) ಗಾಯತ್ರಿಯೇ ಮೊದಲಾದ ಏಳುವಿಧ ಛಂದಸ್ಸುಗಳ ಮಂತ್ರ

ಗಳನ್ನು ಬಳಸಲಾಯಿತು. ಆದ್ದರಿಂದ ಸೌರ್ಯಕಾಂಡದಲ್ಲಿಯೂ (ಸೂರ್ಯಪ್ರತಿಪಾದ್ಯವಾದ) ಮಂತ್ರಗಳಲ್ಲಿಯೂ ಇದೇ ಕ್ರಮವನ್ನು ಅನುಸರಿಸಬೇಕಲ್ಲವೇ? ಭೋಗಸ್ಥಾನವಾದ ದೇವಲೋಕಗಳು ಏಳುವಿಧವಾಗಿರುವವು. ಅದನ್ನನುಸರಿಸಿ ಗಾಯತ್ರ್ಯಾದಿ ಸಪ್ತಛಂದಸ್ಸುಗಳ ಮಂತ್ರಗಳನ್ನು ಈ ಸೌರ್ಯಕಾಂಡದಲ್ಲಿಯೂ ಪಠಿಸಬೇಕಲ್ಲವೇ? ಎಂದು ಪೂರ್ವಪಕ್ಷಿಗಳು ಪ್ರಶ್ನೆಮಾಡುವರು.

**ತತ್ತನ್ನಾದೃತ್ಯಂ ತ್ರೀಣ್ಯೇವ ಶಂಸೇತ್ತ್ರಯೋ ವಾ ಇಮೇ ತ್ರಿವೃತೋ ಲೋಕಾ ಏಷಾಮೇವ ಲೋಕಾನಾಮಭಿಜಿತ್ಯೈ ॥ ತದಾಹುರುದುತ್ಯಂ ಜಾತವೇದಸಮಿತಿ ಸೌರ್ಯಾಣಿ ಪ್ರತಿಪದ್ಯೇತೇತಿ ॥**

ತಂ ಪಕ್ಷಂ ನಿರಾಕೃತ್ಯ ಛಂದಸ್ತ್ರಯಪಕ್ಷಂ ವಿಧತ್ತೇ—ಪೃಥಿವ್ಯಂತರಿಕ್ಷದ್ಯುಲೋಕಾಸ್ತ್ರಯ ಏವ ತ್ರಿವೃತಃ ಸತ್ವರಜಸ್ತಮೋಗುಣೈಸ್ತ್ರಿವಿಧಾ ಅತಸ್ತ್ರಯಾಣಾಮಭಿಜಯಾಯ ತ್ರೀಣ್ಯೇವ ಛಂದಾಂಸಿ ಶಂಸೇತ್ ॥ ತ್ರಯಾಣಾಂ ಛಂದಸಾಂ ಪ್ರಾರಂಭಂ ನಿಶ್ಚೇತುಂ ಪೂರ್ವಪಕ್ಷಮಾಹ—ಯಾನಿ ಸೌರ್ಯಾಣಿ ತ್ರೀಣಿ ಛಂದಾಸಿ ತೇಷಾಂ ಪ್ರಾರಂಭ ಉದುತ್ಯಮಿತಿ ಶಂಸೇದಿತಿ ಪೂರ್ವಃ ಪಕ್ಷಃ ॥

ಮೇಲೆ ಹೇಳಿದ ಪೂರ್ವಪಕ್ಷವನ್ನು ನಿರಾಕರಿಸಿ ಮೂರು ಛಂದಸ್ಸಿನ ಮಂತ್ರಗಳನ್ನು ಮಾತ್ರ ಪಠಿಸಬೇಕೆಂಬ ಕ್ರಮವನ್ನು ಸಮರ್ಥಿಸುವರು. ಪೃಥಿವೀ, ಅಂತರಿಕ್ಷ, ಸ್ವರ್ಗಗಳೆಂದು ಮೂರು ಲೋಕಗಳಿರುವವು ಎಂದೇ ವರ್ಣಿತವಾಗಿದೆ. ಇವು ಮೂರೂ ಸತ್ವರಜಸ್ತಮೋರೂಪವಾದವು. ಆದ್ದರಿಂದ ಈ ಮೂರು ಲೋಕಗಳ ಪ್ರಾಪ್ತಿಗಾಗಿ ಮೂರು ಛಂದಸ್ಸುಗಳನ್ನು ಮಾತ್ರವೇ ಪಠಿಸಬೇಕು. ಈ ಸೂರ್ಯದೇವತಾತ್ಮಕವಾದ ಮೂರು ಛಂದಸ್ಸುಗಳ ಮಂತ್ರವನ್ನು ಪಠಿಸುವುದಕ್ಕೆ ಪ್ರಾರಂಭಿಸಿ ಮೊದಲಿನ ಮಂತ್ರಗಳನ್ನು ಎಂದರೆ **ಉದುತ್ಯಂ ಜಾತವೇದಸಂ** ಎಂಬ ಮಂತ್ರದಿಂದ ಪ್ರಾರಂಭಿಸಬೇಕೆಂದು ಪೂರ್ವಪಕ್ಷವಾದಿಗಳು ಹೇಳುವರು.

**ತತ್ತನ್ನಾದೃತ್ಯಂ ಯಥೈವ ಗತ್ವಾ ಕಾಷ್ಠಾಮಪರಾಧ್ನುಯಾತ್ತಾದೃಕ್ತತ್ ॥**

ತದೇತಂ ದೂಷಯತಿ—ಲೋಕೇ ಕಶ್ಚಿದ್ಭಾಷಾಪೂರ್ವಕಮಪ್ರಮಾದೇನ ಧಾವನಂ ಕೃತ್ವಾ ಕಾಷ್ಠಾಮವಧಿಸ್ಥಾನಂ ಪ್ರಾಪ್ಯಾಪರಾಧ್ನುಯಾತ್ತತ್ರಾವಸಾನೇ ಸ್ಖಲನಪತನಾದಿರೂಪಮಪರಾಧಂ ಕುರ್ಯಾತ್ತಾದೃಗೇನ ತದ್ಭವತಿ ॥ ಆಗ್ನೇಯಕಾಂಡಮಾರಭ್ಯ ಸೂರ್ಯಕಾಂಡಪರ್ಯಂತಮಸ್ಖಲನ್ಹೋತಾ ಸಮಾಪ್ತೌ ಸೂರ್ಯಕಾಂಡೇ ಸ್ಖಲತಿ ತಸ್ಮಾದುದುತ್ಯಂ ನ ಶಂಸೇತ್ ॥

ಮೇಲಿನ ಪೂರ್ವಪಕ್ಷವು ಸರಿಯಲ್ಲವೆಂದು ತಿಳಿಸುವರು. ಪ್ರಪಂಚದಲ್ಲಿ ಸ್ಪರ್ಧೆಯನ್ನು ಏರ್ಪಡಿಸಿ ಓಡುವಾಗ ಸರಿಯಾದ ದಿಕ್ಕಿಗೆ ಓಡದೆ ಸ್ವಲ್ಪ ವ್ಯತ್ಯಾಸವಾಗಿ ಬೇರೆ ದಿಕ್ಕನ್ನನುಸರಿಸಿ ಓಡಿದರೆ ಪುರುಷನು ನಿಯಮಿತ ಸ್ಥಾನವನ್ನು ಹೋಗಿ ಸೇರುವುದಿಲ್ಲ. ಅದರಂತೆಯೇ ಗಾಯತ್ರೀ ಛಂದಸ್ಸಿನ **ಉದುತ್ಯಂ** (ಋ. ಸಂ ೧-೫-೧) ಎಂಬ ಋಕ್ಕನ್ನು ಹೇಳುವುದಕ್ಕೆ ಬದಲಾಗಿ **ಸೂರ್ಯೋ ನೋ ದಿವಸ್ಪಾತು** (ಋ. ಸಂ. ೧೦-೧೫೮) ಎಂಬ ಸೂಕ್ತವನ್ನು ಮೊದಲು ಪಠಿಸಿ ಅನಂತರ **ಉದುತ್ಯಂ** ಎಂಬ ಸೂಕ್ತವನ್ನು ಎರಡನೆಯ ಸೂಕ್ತವನ್ನಾಗಿ ಪಠಿಸಬೇಕು.

**ಸೂರ್ಯೋ ನೋ ದಿವಸ್ಪಾತ್ವಿತ್ಯೇನ್ಯೈವ ಪ್ರತಿಪದ್ಯೇತ ಯಥೈವ ಗತ್ವಾ ಕಾಷ್ಠಾಮಭಿಪದ್ಯೇತ ತಾದೃಕ್ತತ್ ॥**

ಇದಾನೀಂ ಸಿದ್ಧಾಂತಮಾಹ—ಯಥಾ ಲೋಕೇ ಕಶ್ಚಿದವಧಿಂ ಪ್ರಾಪ್ಯ ಸ್ಖಲನರಹಿತಃ ಸ್ವಾಭೀಷ್ಟಂ ಪ್ರಾಪ್ನುಯಾತ್ ತಾದೃಗೇವ ತದ್ದ್ರಷ್ಟವ್ಯಂ ॥ ಸೂರ್ಯೋ ನ ಇತ್ಯಸ್ಮಿನ್ಮಂತ್ರೇ ಸೂರ್ಯವಾಯ್ವಗ್ನೀನಾಂ ಲೋಕತ್ರಯಾದ್ರಕ್ಷಣಂ ಪ್ರಾರ್ಥಯತೋ ರಕ್ಷಿತ(ತೃ)ತ್ವಾದೇವಾಪ-ರಾಧೇ ನ ಪ್ರಾಪ್ನೋತಿ ಪೂರ್ವತ್ರೈವಂ ನಾಸ್ತೀತಿ ವಿಶೇಷಃ ॥

**ಸೂರ್ಯೋನ** ಎಂಬ ಮಂತ್ರದಲ್ಲಿ ಸೂರ್ಯವಾಯು ಅಗ್ನಿಗಳೆಂಬ ಮೂವರು ದೇವತೆಗಳೂ ಪೃಥಿವ್ಯಂತರಿಕ್ಷಸ್ವರ್ಗಗಳೆಂಬ ಮೂರು ಲೋಕಗಳನ್ನು ರಕ್ಷಿಸುತ್ತಾರೆಂಬ ವಿಷಯವು ಪ್ರತಿಪಾದಿತವಾಗಿದೆ. ಆದರೆ **ಉದುತ್ಯಂ** ಎಂಬ ಮಂತ್ರದಲ್ಲಿ ಈರೀತಿ ಇರುವುದಿಲ್ಲ.

**ಉದುತ್ಯಂ ಜಾತವೇದಸಮಿತಿ ದ್ವಿತೀಯಂ ಶಂಸತಿ ॥**

ಪ್ರಥಮಸೂಕ್ತಂ ವಿಧಾಯ ನವರ್ಚಂ ಸೂಕ್ತಾಂತರಂ ವಿಧತ್ತೇ—ತದೇತದುಭಯಂ ಗಾಯತ್ರೀಚ್ಛಂದಸ್ಕಂ ॥

ಮೊದಲನೇ ಸೂಕ್ತವನ್ನು ವಿವರಿಸಿ ಈಗ ಒಂಭತ್ತು ಋಕ್ಕುಗಳಿರುವ ಎರಡನೇ ಸೂಕ್ತವನ್ನು ವಿವರಿಸುವರು. ಮೊದಲನೇ ಸೂಕ್ತದಂತೆ ಇದೂ ಗಾಯತ್ರೀ ಛಂದಸ್ಕವು.

**ಚಿತ್ರಂ ದೇವಾನಾಮುದಗಾದನೀಕಮಿತಿ ತ್ರೈಷ್ಟುಭಮಸೌ ವಾವ ಚಿತ್ರಂ ದೇವಾನಾಮುದೇತಿ ತಸ್ಮಾದೇತಚ್ಛಂಸತಿ ॥**

ಅಥ ತ್ರೈಷ್ಟುಭಂ ಸೂಕ್ತಂ ವಿಧತ್ತೇ--ಅಸ್ಮಿನ್ಮಂತ್ರೇ ದೇವಾನಾಂ ಸಂಬಂಧಿ ಕಿಂಚಿಚ್ಚಿತ್ರಂ ರೂಪಮುದಗಾದುದಯಂ ಪ್ರಾಪ್ನೋತೀತಿ ಶ್ರೂಯತೇ ॥ ಅಸೌ ವಾವಾಽಽದಿತ್ಯ ಏವ ದೇವಾನಾಂ ಸಂಬಂಧಿ ಚಿತ್ರಂ ರೂಪಮುದೇತಿ । ಕಾಲಭೇದೇನ ವರ್ಣಭೇದದರ್ಶನಾತ್ ॥ ತಸ್ಮಾದೇತ-ತ್ಸೂಕ್ತಂ ಪ್ರಶಸ್ತತ್ವಾದತ್ರಶಂಸನೀಯಂ ॥

ಈ ತ್ರಿಷ್ಟುಪ್‌ಛಂದಸ್ಕವಾದ ಮತ್ತು ಸೂರ್ಯದೇವತಾಪರವಾದ ಸೂಕ್ತವನ್ನು ತಿಳಿಸುವರು. **ಚಿತ್ರಂ ದೇವಾ-ನಾಮುದಗಾದನೀಕಂ** (ಋ. ಸಂ. ೧-೧೧೫-೧) ಎಂಬುದೇ ಆ ಸೂಕ್ತವು. ಈ ಮಂತ್ರದಲ್ಲಿ ದೇವತಾಸಂಬಂಧಿಯಾದ ಒಂದು ವಿಚಿತ್ರರೂಪವು ಉದಯಿಸುತ್ತಿದೆ ಎಂದು ಹೇಳಲಾಗುವುದು. ನಮ್ಮೆದುರಿಗೆ ಕಾಣಿಸುತ್ತಿರುವ ಈ ಸೂರ್ಯದೇವನೇ ದೇವತಾಸ್ವರೂಪವೂ ವಿಚಿತ್ರವೂ ಆದ ರೂಪವು, ಈ ರೂಪವು ಕಾಲಭೇದದಿಂದ ವರ್ಣಭೇದವುಂಟಾಗಿ ಕಂಗೊಳಿಸುವುದು. ಎಂದರೆ ಪ್ರಾತಃಕಾಲದಲ್ಲಿಯೂ ಸಾಯಂಕಾಲದಲ್ಲಿಯೂ ಸ್ವಲ್ಪ ಕೆಂಪುಚ್ಛಾಯೆಯಿಂದಲೂ ಮಧ್ಯಾಹ್ನಕಾಲದಲ್ಲಿ ಅತಿಪ್ರಕಾಶಮಾನವಾದ ಶುಭ್ರವಾದ ಕಾಂತಿಯಿಂದಲೂ ಬೆಳಗುತ್ತಿರುವುದು ಎಂದರ್ಥವು ಆದ್ದರಿಂದ ಇಲ್ಲಿ ಈ ಸೂಕ್ತವನ್ನು ಪಠಿಸುವುದು ಪ್ರಶಸ್ತವು.

**ನಮೋ ಮಿತ್ರಸ್ಯ ವರುಣಸ್ಯ ಚಕ್ಷಸ ಇತಿ ಜಾಗತಂ ತದ್ವಾಶೀಃಪದಮಾ-ಶಿಷಮೇವೈತೇನಾऽऽಶಾಸ್ತ ಆತ್ಮನೇ ಚ ಯಜಮಾನಾಯ ಚ ॥**

**ತೃತೀಯಂ ಚ್ಛಂದೋ ವಿಧತ್ತೇ—ತದು ತದಸ್ಯ ನಮೋ ಮಿತ್ರಸ್ಯೇತ್ಯಾದಿಕಮಾಶೀಃಪದಮಾಶೀಃ ಪ್ರತಿಪಾದಕಂ ದ್ವಿತೀಯಚತುರ್ಥಪಾದಯೋಃ ಸಪರ್ಯತ ಶಂಸತೇತ್ಯಾಶೀ-ರರ್ಥಸ್ಯ ಲೋಡಂತಸ್ಯ ಪದದ್ವಯಸ್ಯ ಪ್ರಯುಕ್ತತ್ವಾತ್ತಚ್ಛಂಸನೇನ ಹೋತಾ ಸ್ವಸ್ಯ ಯಜಮಾ-ಸ್ಯ ಚಾऽऽಶಿಷಂ ಪ್ರಾರ್ಥಯತೇ ॥**

ಈಗ ಮೂರನೇ ಛಂದಸ್ಸಿನ ಮಂತ್ರವಾದ ನಮೋ ಮಿತ್ರಸ್ಯ ವರುಣಸ್ಯ ಚಕ್ಷಸೇ (ಋ. ಸಂ. ೧೦-೩೭) ಎಂಬುದೇ ಆಮಂತ್ರವು. ಈ ಮಂತ್ರವು ಆಶೀರ್ವಚನವನ್ನು ಪ್ರತಿಪಾದಿಸುವುದರಿಂದ ಇದನ್ನು ಇಲ್ಲಿ ಹೇಳುವುದು ಯುಕ್ತವು. ಏಕೆಂದರೆ ಈ ಮಂತ್ರಪಠನದಿಂದ ಹೋತೃವಿಗೂ ಯಜಮಾನನಿಗೆ ಆಶೀರ್ವಾದವನ್ನು ಮಾಡಿದಂತಾಗುವುದು.



*English Translation*

**What animals were yoked to the carriages of the gods when they were running the race for the Asvina Shastra. The verses addressed to Surya in this Shastra**

Agni ran the race with carriage drawn by mules. When driving them he, burnt their wombs, thence they do not conceive.

Ushas ran the race with cows of a reddish colour. thence it comes that after the arrival of Ushas (Dawn) there is a reddish colour shining as it were spread over the eastern direction which is the characteristic of Ushas.

Indra ran the race with a carriage drawn by horses. Thence a very noisy spectacle represented by the noise made by horses which draw a carriage is the characteristic of the royal caste, which is Indra's.

The Asvins were the winners of the race with a carriage drawn by donkeys; they obtained the prize. Thence on account of the excessive efforts to arrive at the goal the donkey lost its original velocity, became devoid of milk, and the slowest among all animals used for drawing carriages. The Asvins however, did not deprive the sperm of the ass of its primitive vigour. This is the reason that the male ass (vaji) has two kinds of sperm to produce mules from a mare, and asses from a female ass.

Regarding this (the different parts which make up the Asvina Shastra,) they say, "The Hotar ought to repeat, just as he does for Agni, Ushas, and the Asvins also, verses in all seven metres for Surya. There are seven worlds of the gods. By doing so he prospers in all seven worlds."

This opinion ought not to be attended to. He ought to repeat for Surya verses in three metres only. For there are three worlds which are three-fold. If the Hotar repeats for Surya verses in three metres only, this is done for obtaining possession of these worlds.

Regarding this (the order in which the verses addressed to Surya are to be repeated they say, The Hotar ought to commence his recitation of the Surya verses with ud u tyam jatavedesam (1, 50, in the Gayatri metre). But this opinion is not to be attended to. (To commence with this verse) is just as to miss the goal when running. He ought to commence with suryo no divas patu. (10, 158, 1, in the Gayatri metre). If he do so, he is just as one who reaches the goal when running. He repeats: udu tyam as the second hymn.

The Trishtubh hymn is, chitram devanam ud agad (1, 115). For that one (the sun) rises as the chitram devanam, i.e. as the manifestation of the gods. Thence he repeats it.

The hymn is, namo mitrasya varunashya (10, 37). In this hymn there is a pada (the fourth of the first verse, suryaya samsata, which contains a blessing (asih). By means of it the Hotar imparts a blessing to himself, as well as to the sacrificer.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಸಪ್ತದಶಾಧ್ಯಾಯಸ್ಯ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನೇಳನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು
ಸಮಾಪ್ತವಾದುದು.



# ಅಥ ಸಪ್ತದಶಾಧ್ಯಾಯೇ ಚತುರ್ಥಃ ಖಂಡಃ

## ಹದಿನೇಳನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ಅಶ್ವಿನಶಸ್ತ್ರಮಂತ್ರಗಳಲ್ಲಿ ಸೂರ್ಯದೇವತಾಕವಾದ ಮಂತ್ರಗಳನ್ನು ಪಠಿಸಿದಮೇಲೆ ಮುಂದಿನ ಮಂತ್ರಗಳು ಸೂರ್ಯನಿಗೂ ಬೃಹತೀಛಂದಸ್ಸುಗಳಿಗೂ ಸಂಬಂಧವನ್ನು ಕಲ್ಪಿಸಿರಬೇಕು. ಇಂದ್ರನ ಪರವಾದ ಪ್ರಗಾಥಮಂತ್ರಗಳು. ರಥಂತರವೆಂಬ ಸಾಮಮಂತ್ರವು. ಮಿತ್ರಾವರುಣರ ಪರವಾದ ಪ್ರಗಾಥಮಂತ್ರವು. ದ್ಯಾವಾಪೃಥಿವೀ ಎಂಬ ದೇವತೆಗಳನ್ನು ಪ್ರತಿಪಾದಿಸುವ ಎರಡು ಮಂತ್ರಗಳು. ನಿರ್ಯತಿದೇವತಾಕವಾದ ದ್ವಿಪದಾ ಎಂಬ ಛಂದಸ್ಸಿನ ಮಂತ್ರವು.]



**ತದಾಹುಃ ಸೂರ್ಯೋ ನಾತಿಶಸ್ಯೋ ಬೃಹತೀ ನಾತಿಶಸ್ಯಾ ಯತ್ಸೂರ್ಯ-ಮತಿಶಂಸೇದ್ಬ್ರಹ್ಮವರ್ಚಸಮತಿಪದ್ಯೇತ ಯದ್ಬೃಹತೀಮತಿಶಂ-ಸೇತ್ಪ್ರಾಣಾನತಿಪದ್ಯೇತೇತಿ ॥**

**ಐಂದ್ರಾದಿಪ್ರಗಾಥಾನ್ವಿಧಾತುಂ ಪ್ರಸ್ತೌತಿ—ತತ್ತಸ್ಮಿನ್ನಾಶ್ವಿನಶಸ್ತ್ರೇ ಕೇಚಿದಭಿಜ್ಞಾ ಏವ-ಮಾಹುಃ ॥ ದೇವಾನಾಂ ಮಧ್ಯೇ ಯಃ ಸೂರ್ಯೋಽಸ್ತಿ ಸ ನಾತಿಶಸ್ಯಃ ಸೂರ್ಯಮತಿಲಂಘ್ಯ ಶಂಸನಂ ನ ಕರ್ತವ್ಯಂ ॥ ಸೂರ್ಯಸ್ಯೋಪಾಸಕೇಷು ಬ್ರಹ್ಮವರ್ಚಸಪ್ರದತ್ವಾತ್ತದಭಿಲಂಘನೇ ಬ್ರಹ್ಮವರ್ಚಸಂ ನಶ್ಯೇತ್ ॥ ಬೃಹತ್ಯಾಃ ಪ್ರಾಣರೂಪತ್ವಾತ್ತದತಿಲಂಘನೇ ಪ್ರಾಣಾನ್ವಿನಾ-ಶಯೇದಿತಿ ತೇಷಾಮಭಿಪ್ರಾಯಃ ॥**

ಇಂದ್ರನನ್ನು ಪ್ರತಿಪಾದಿಸುವ ಪ್ರಗಾಥಮಂತ್ರಗಳನ್ನು ಪ್ರಶಂಸೆಮಾಡುವರು—ಈ ಅಶ್ವಿನಶಸ್ತ್ರಮಂತ್ರಗಳ ವಿಷಯದಲ್ಲಿ ಕೆಲವು ಅಭಿಜ್ಞರು ಈ ರೀತಿ ಹೇಳುವರು. ದೇವತೆಗಳ ಮಧ್ಯದಲ್ಲಿ ಸೂರ್ಯನು ಅತಿ ಶ್ರೇಷ್ಠನಾಗಿರುವನು ಇಂತಹ ಸೂರ್ಯ ದೇವನನ್ನು ಸ್ತುತಿಸಿದನಂತರ ಬೇರೆ ದೇವತೆಯನ್ನು ಸ್ತುತಿಸಬಾರದು. ಹಾಗೆಯೇ ಬೃಹತೀಛಂದಸ್ಸಿನ ಮಂತ್ರಗಳನ್ನು ಪಠಿಸಿದ ನಂತರ ಇತರ ಛಂದಸ್ಸಿನ ಮಂತ್ರಗಳನ್ನೂ ಪಠಿಸಬಾರದು. ಏಕೆಂದರೆ ಸೂರ್ಯನು ತನ್ನನ್ನುಪಾಸನೆ ಮಾಡುವವರಗೆ ಬ್ರಹ್ಮ ವರ್ಚಸ್ಸನ್ನು ಅನುಗ್ರಹಿಸುವನು. ಸೂರ್ಯನನ್ನು ಸ್ತುತಿಸಿದ ನಂತರ ಇತರ ದೇವತೆಯನ್ನು ಸ್ತುತಿಸಿದರೆ ಬ್ರಹ್ಮವರ್ಚಸ್ಸು ನಾಶವಾಗುವುದು. ಹಾಗೆಯೇ ಬೃಹತೀಛಂದಸ್ಸು ಪ್ರಾಣರೂಪವಾದುದು. ಬೃಹತೀಛಂದಸ್ಸಿನ ಅನಂತರ ಇತರ ಛಂದಸ್ಸಿನ ಮಂತ್ರಗಳನ್ನು ಪಠಿಸಿದರೆ ಪ್ರಾಣಹಾನಿಯುಂಟಾಗುವುದು ಎಂದು ಮೇಲೆ ಹೇಳಿದ ಅಭಿಜ್ಞರ ಅಭಿಪ್ರಾಯವು.

**ಇಂದ್ರ ಕ್ರತುಂ ನ ಆಭರೇತ್ಯೈಂದ್ರಂ ಪ್ರಗಾಥಂ ಶಂಸತಿ ॥ ಶಿಕ್ಷಾಣೋ ಅಸ್ಮಿನ್ಪುರುಹೂತ ಯಾಮತಿ ಜೀವಾ ಜ್ಯೋತಿರಶೀಮಹೀತಿ ಅಸೌವಾವ ಜ್ಯೋತಿಸ್ತೇನ ಸೂರ್ಯಂ ನಾತಿಶಂಸತಿ ॥**

**ಇದಾನೀಮೇಕಂ ಪ್ರಗಾಥಂ ವಿಧತ್ತೇ—ಹೇ, ಇಂದ್ರ ನೋಽಸ್ಮಾಕಂ ಕ್ರತುಮತಿರಾತ್ರಾಖ್ಯಮಾಭರಾಽಽನಯೇತ್ಯಸ್ಯ ಪಾದಸ್ಯಾರ್ಥಃ ॥ ದ್ವಿತೀಯಮರ್ಧರ್ಚಃ ಪಠತಿ—ಪುರುಷು ಬಹುಷು ಯಾಗೇಷು ಆಹೂಯಮಾನ ಹೇ ಇಂದ್ರ ನೋಽಸ್ಮಾನಸ್ಮಿನ್ನತಿರಾತ್ರಯಾಗರೂಪೇ ಯಾಮನಿ ನಿಯಮವಿಶೇಷೇ ಶಿಕ್ಷ । ಉಪದೇಶೇನ ಪ್ರವರ್ತಯ ॥ ಜೀವಾಸ್ತ್ವತ್ಪ್ರಸಾದೇನ ಜೀವಂತೋ ವಯಂ ಜ್ಯೋತಿರಾದಿತ್ಯಮಂಡಲರೂಪಮಶೀಮಹಿ ಪ್ರಾಪ್ನುಯಾಮ ॥ ಅತ್ರ ಜ್ಯೋತಿಃ ಶಬ್ದಸ್ಯ ಆದಿತ್ಯಪರತ್ವಾತ್ಪ್ರಗಾಥಸ್ಯೈಂದ್ರತ್ವೇಽಪಿ ಸೂರ್ಯಮತಿಕ್ರಮ್ಯ ಶಂಸನಂ ನ ಭವಿಷ್ಯತೀತ್ಯೇತದ್ದರ್ಶಯತಿ—ಅತ್ರೋತ್ತರಸ್ಯಾ ಋಚೋ ವಿಷ್ಟಾರಪಂಕ್ತಿತ್ವೇಽಪಿ ಪ್ರಗ್ರಥನೇನ ಬೃಹತೀತ್ವಸಂಪಾದನಾದ್ಬೃಹತೀಮತಿಲಂಘ್ಯ ಶಂಸನಂ ನ ಭವಿಷ್ಯತೀತ್ಯೇತದ್ದರ್ಶಯತಿ ॥**

ಈಗ ಇಂದ್ರನ ಪರವಾದ ಪ್ರಗಾಥಮಂತ್ರವನ್ನು ಹೇಳುವರು. **ಇಂದ್ರ ಕ್ರತುಂ ನ ಆಭರ** (ಋ. ಸಂ. ೭-೩೨-೨೬) ಎಂಬುದೇ ಆ ಮಂತ್ರವು. ಎಲೈ ಇಂದ್ರನೇ ನಮಗೆ ಅತಿರಾತ್ರವೆಂಬ ಯಜ್ಞವನ್ನು ಮಾಡಲು ಅನುಗ್ರಹಿಸು ಎಂದು ಇದರ ಅರ್ಥವು. **ಶಿಕ್ಷಾಣೋ ಅಸ್ಮಿನ್ಪುರುಹೂತ ಯಾಮನಿ ಜೀವಾ ಜ್ಯೋತಿರಶೀಮಹಿ** ಎಂಬುದು ಎರಡನೇ ಪಾದವು. ಅನೇಕ ಯಜ್ಞಗಳಲ್ಲಿ ಪ್ರಾರ್ಥಿತನಾಗಿ ಆಹ್ವಾನಿಸಲ್ಪಡುವ ಎಲೈ ಇಂದ್ರನೇ ಈ ಅತಿರಾತ್ರವೆಂಬ ನಾವು ಮಾಡುವ ಯಾಗದಲ್ಲಿ ನಮಗೆ ಮಾರ್ಗದರ್ಶನವನ್ನು ಮಾಡು. ನಿನ್ನ ಅನುಗ್ರಹದಿಂದ ಜೀವಂತರಾದ ನಾವು, ಆದಿತ್ಯಮಂಡಲವೆಂಬ ಸ್ಥಾನವನ್ನು ಹೊಂದುವಂತಾಗಲಿ. ಇದರ ಮುಂದಿನ ಋಕ್ಕಾದ **ಅಸೌ ನಾವ ಜ್ಯೋತಿಸ್ತೇನ ಸೂರ್ಯಂ ನಾತಿಶಂಸತಿ** ಎಂಬ ಮುಂದಿನ ಋಕ್ಕು ವಿಷ್ಟಾರಪಂಕ್ತಿ ಎಂಬ ಛಂದಸ್ಸಿನದಾದರೂ ಪ್ರಗ್ರಥನದಿಂದ ಬೃಹತೀರೂಪವನ್ನು ಪಡೆಯುವುದು. ಇದರಲ್ಲಿ **ಅಸೌ ಜ್ಯೋತಿಃ** ಎಂಬ ಶಬ್ದಗಳು ಸೂರ್ಯದೇವತೆಯನ್ನು ನಿರ್ದೇಶಿಸುವವು. ಆದ್ದರಿಂದ ಈ ಪ್ರಗಾಥಮಂತ್ರಪಠನದಿಂದ ಸೂರ್ಯದೇವತೆಯನ್ನು ಬಿಡದೆ ಸ್ತುತಿಸಿದಂತಾಗುವುದು ಮತ್ತು ಬೃಹತೀ ಛಂದಸ್ಸಿನ ಮಂತ್ರವನ್ನು ಪಠಿಸಿದಂತಾಗುವುದು. ಆದ್ದರಿಂದ ಇದು ಅಭಿಜ್ಞರು ಪಡುವ ಅಭಿಪ್ರಾಯಕ್ಕೆ ವಿರೋಧವಾಗುವುದಿಲ್ಲ ಎಂದಭಿಪ್ರಾಯವು.

## ಯದು ಬಾರ್ಹತಃ ಪ್ರಗಾಥಸ್ತೇನ ಬೃಹತೀಂ ನಾತಿಶಂಸತಿ ।

**ಅತ್ರೋತ್ತರಸ್ಯಾ ಋಚೋ ವಿಷ್ಟಾರಪಂಕ್ತಿತ್ವೇಽಪಿ ಪ್ರಗ್ರಥನೇನ ಬೃಹತೀತ್ವಸಂಪಾದನಾದ್ಬೃಹತೀಮತಿಲಂಘ್ಯ ಶಂಸನಂ ನ ಭವಿಷ್ಯತೀತ್ಯೇತದ್ದರ್ಶಯತಿ—ಅಸ್ಮಿನ್ಪ್ರಗಾಥೇ ಪೂರ್ವಸ್ಯಾ ಋಚಃ ಷಟ್ತ್ರಿಂಶದಕ್ಷರತ್ವಾತ್ಪಾದಚತುಷ್ಟಯೋಪೇತತ್ವಾಚ್ಚ ಸಾ ಸ್ವಭಾವತ ಏವ ಬೃಹತೀ । ಪುನರಪಿ ತಸ್ಯಾಃ ಚತುರ್ಥಪಾದಮಷ್ಟಾಕ್ಷರಂ ದ್ವಿರಾವರ್ತ್ಯೋತ್ತರಸ್ಯಾ ಋಚಃ ಪ್ರಥಮಾರ್ಧೇನ ವಿಂಶತ್ಯಕ್ಷರೇಣ ಸಹ ಪ್ರಗ್ರಥ್ಯ ಷಟ್ತ್ರಿಂಶದಕ್ಷರಾ ದ್ವಿತೀಯಾ ಬೃಹತೀ ಸಂಪಾದನೀಯಾ ॥ ತತ್ರಾಪ್ಯಂತಿಮಂ ಪಾದಮಷ್ಟಾಕ್ಷರಂ ದ್ವಿರಾವರ್ತ್ಯೋತ್ತರಾರ್ಧೇನ ವಿಂಶತ್ಯಕ್ಷರೇಣ ಸಹ ಪ್ರಗ್ರಥ್ಯ ತೃತೀಯಾ ಬೃಹತೀ ಸಂಪಾದನೀಯಾ॥ಏವಂ ಸತಿ ಬೃಹತ್ಯಾ ಅತಿಕ್ರಮೋ ನ ಭವತಿ॥**

ಈ ಪ್ರಗಾಥದಲ್ಲಿ ಮೊದಲನೇ ಋಕ್ಕು ಮೂವತ್ತಾರು ಅಕ್ಷರಗಳುಳ್ಳ ಬೃಹತೀಛಂದಸ್ಸೇ ಆಗಿರುವುದು. ಮತ್ತು ಈ ಋಕ್ಕಿನ ನಾಲ್ಕನೇ ಪಾದದ ಎಂಟು ಅಕ್ಷರಗಳನ್ನು ಎರಡಾವರ್ತಿಪಠಿಸುವುದರಿಂದ ಹದಿನಾರು ಅಕ್ಷರಗಳಾಗುವವು. ಋಕ್ಕಿನ ಪ್ರಥಮಾರ್ಧದಲ್ಲಿರುವ ಇಪ್ಪತ್ತು ಅಕ್ಷರಗಳನ್ನೂ ಸೇರಿಸಿದರೆ ಮೂವತ್ತಾರು ಅಕ್ಷರಗಳ ಬೃಹತೀಛಂದಸ್ಸಾಗುವುದು. ಇದು ಎರಡನೆಯ ಬೃಹತಿಯು ಇದರಂತೆಯೇ ಋಕ್ಕಿನ ಕೊನೆಯಪಾದದ ಎಂಟಕ್ಷರಗಳನ್ನು ಎರಡಾವರ್ತಿ ಪಠಿಸುವುದರಿಂದ ಲಭಿಸುವ

ಹದಿನಾರು ಅಕ್ಷರಗಳೂ ಉತ್ತರಾರ್ಧದ ಇಪ್ಪತ್ತಕ್ಷರಗಳೂ ಸೇರಿ ಒಟ್ಟು ಮೂವತ್ತಾರು ಅಕ್ಷರಗಳಾಗುವವು ಇದು ಮೂರನೆಯ **ಬೃಹತಿಯು.** ಇದರಿಂದ ಬೃಹತೀಛಂದಸ್ಸನ್ನೇ ಪಠಿಸಿದಂತಾಯಿತು. ಬೇರೆ ಛಂದಸ್ಸುಗಳಿಂದ ಬೃಹತೀಛಂದಸ್ಸಿನ ಅತಿಕ್ರಮ ವಾಗಲಿಲ್ಲ.

**ಅಭಿ ತ್ವಾ ಶೂರ ನೋನುಮ ಇತಿ ರಾಥಂತರೀಂ ಯೋನಿಂ ಶಂಸತಿ ರಾಥಂತರೇಣ ವೈ ಸಂಧಿನಾಽऽಶ್ವಿನಾಯ ಸ್ತುವತೇ ತದ್ಯದ್ರಾಥಂ-ತರೀಂ ಯೋನಿಂ ಶಂಸತಿ ರಥಂತರಸ್ಯೈವ ಸಯೋನಿತ್ವಾಯ ।**

**ಪ್ರಗಾಥಾಂತರಂ ವಿಧತ್ತೇ—ರಥಂತರಾಖ್ಯಂ ಸಾಮಾಭಿ ತ್ವಾ ಶೂರೇತ್ಯತ್ರೋತ್ಪನ್ನಂ ತಸ್ಮಾ-ದ್ರಥಂತರಯೋನಿತ್ವಮುದ್ಗಾತಾರೋ ಹ್ಯತಿರಾತ್ರೇ ರಥಂತರಸಾಮಸಾಪುಸಾಧ್ಯೇನ ಅಂತಿ-ಮೇನ ಸಂಧಿನಾ ಸ್ತೋತ್ರೇಣಾऽऽಶ್ವಿನ ಶಸ್ತ್ರಪ್ರದರ್ಶನಾರ್ಥಮೇವ ಸ್ತುವತೇ ॥ ಅತೋ ರಥಂತರ-ಯೋನಿಶಂಸನೇ ಸತಿ ಸ್ತೋತ್ರಗತಸ್ಯ ರಥಂತರಸ್ಯೈವ ಸಾಮ್ನಃ ಸಯೋನಿತ್ವಂ ಸಮಾನಸ್ಥಾನತ್ವಂ ಸಂಪದ್ಯತೇ ॥**

ಈಗ ಇನ್ನೊಂದು (ಬೇರೆ) ಪ್ರಗಾಥವನ್ನು ವಿವರಿಸುವರು. **ಅಭಿತ್ವಾ ಶೂರ ನೋನುಮ** (ಋ. ಸ. ೭-೩೨-೨೨) ಎಂಬುದೇ ಆ ಬೇರೆ ಪ್ರಗಾಥವು. ಈ ಪ್ರಗಾಥದಿಂದ ನಿಷ್ಪನ್ನವಾದ ರಥಂತರವೆಂಬ ಸಾಮಮಂತ್ರವನ್ನು ಉದ್ಗಾತೃಗಳು ಗಾನ ಮಾಡುವರು. ಈ ರಥಂತರಸಾಮವನ್ನು ಗಾನಮಾಡುವುದರಿಂದ ಆಶ್ವಿನಶಸ್ತ್ರಮಂತ್ರದಲ್ಲಿ **ಅಭಿತ್ವಾ** ಎಂಬ ಶಸ್ತ್ರಮಂತ್ರವನ್ನು ಹೋತೃವು ಪಠಿಸಿದಂತಾಗುವುದು.

**ಈಶಾನಮಸ್ಯ ಜಗತಃ ಸ್ವರ್ದೃಶಮಿತ್ಯಸೌ ವಾವ ಸ್ವರ್ದೃಕ್ತೇನ ಸೂರ್ಯಂ ನಾತಿಶಂಸತಿ ॥ ಯದು ಬಾರ್ಹತಃ ಪ್ರಗಾಥಸ್ತೇನ ಬೃಹತೀಂ ನಾ ತಿಶಂಸತಿ ॥**

**ಅತ್ರ ಸೂರ್ಯಾತಿಕ್ರಮಾಭಾವಂ ದರ್ಶಯತಿ—ಈಶಾನಮಿತ್ಯಾದಿಕಃ ಪ್ರಥಮಾಯಾ ಋಚಸ್ತೃತೀಯಪಾದೋಽಸ್ಯ ಸರ್ವಸ್ಯ ಜಗತ ಈಶಾನಂ ಸ್ವಾಮಿನಂ ಸ್ವರ್ದೃಶಂ ಸ್ವರ್ಲೋಕೇ ದೃಶ್ಯಮಾನಮಭಿನೋನುಮ ಇತಿ ಪ್ರಥಮಪಾದೇನಾನ್ವಯಃ ॥ ಅತ್ರ ಸ್ವರ್ದೃಕ್ಶಬ್ದೇನಾಸಾ ವಾದಿತ್ಯಏವೋಚ್ಯತೇ॥ ತೇನ ಸೂರ್ಯಾತಿಕ್ರಮೋ ನಾಸ್ತಿ॥ ಪೂರ್ವವದ್ಬೃಹತ್ಯತಿಕ್ರಮಾಭಾವಂ ದರ್ಶಯತಿ ॥**

ಈಗ ಸೂರ್ಯಸ್ತುತಿಯನ್ನು ತ್ಯಜಿಸಿಲ್ಲವೆಂಬ ವಿಷಯವನ್ನು ತಿಳಿಸುವರು. ಮೊದಲನೆಯ ಋಕ್ಕಿನಲ್ಲಿರುವ **ಈಶಾನ** ಮೊದಲಾದ ಪದಗಳೂ ಮೂರನೆಯ ಪಾದದಲ್ಲಿರುವ **ಅಸ್ಯ ಸರ್ವಸ್ಯ ಜಗತ ಈಶಾನಂ** ಮೊದಲಾದ ಪದಗಳೂ **ಸ್ವರ್ದೃಶಂ** ಸ್ವರ್ಗಲೋಕದಲ್ಲಿ ಕಾಣಲ್ಪಡುವ ಎಂಬ ಶಬ್ದಗಳೂ ಸ್ವರ್ಗದಲ್ಲಿ ಬೆಳಗುತ್ತಿರುವ ಸೂರ್ಯನನ್ನು ಸೂಚಿಸುತ್ತವೆ. ಆದ್ದರಿಂದ ಸೂರ್ಯನನ್ನು ಬಿಟ್ಟು ಬೇರೆ ದೇವತೆಯನ್ನು ಸ್ತುತಿಸಿದಂತಾಗಲಿಲ್ಲ. ಪ್ರಗಾಥವೂ ಒಂದು ವಿಧದಲ್ಲಿ ಬೃಹತೀಛಂದಸ್ಸೇ ಆಗಿರುವುದರಿಂದ ಬೃಹತೀಛಂದಸ್ಸನ್ನೂ ಅತಿಕ್ರಮಿಸಿ ಬೇರೆ ಛಂದಸ್ಸನ್ನು ಪಠಿಸಿದಂತಾಗಲಿಲ್ಲ.

ಬಹವಃ ಸೂರಚಕ್ಷಸ ಇತಿ ಮೈತ್ರಾವರುಣಂ ಪ್ರಗಾಥಂ ಶಂಸತ್ಯಹರ್ವೈ ಮಿತ್ರೋ ರಾತ್ರಿರ್ವರುಣ ಉಭೇ ವಾ ಏಷೋಽಹೋರಾತ್ರೇ ಆರಭತೇ ಯೋಽತಿರಾತ್ರಮುಪೈತಿ ತದ್ಯನ್ಮೈತ್ರಾವರುಣಂ ಪ್ರಗಾಥಂ ಶಂಸತ್ಯಹೋರಾತ್ರಯೋರೇವೈನಂ ತತ್ಪ್ರತಿಷ್ಠಾಪಯತಿ ॥

ಪ್ರಗಾಥಾಂತರಂ ವಿಧತ್ತೇ— ಅಹ್ನೋ ಮಿತ್ರಃ ಸ್ವಾಮೀ ರಾತ್ರೇಶ್ಚ ವರುಣಸ್ತಸ್ಮಾತ್ತಯೋಸ್ತದ್ರೂಪತ್ವಂ ॥ ಯೋ ಯಜಮಾನೋಽತಿರಾತ್ರಕ್ರತುಮನುತಿಷ್ಠತ್ಯೇಷ ಪುಮಾನಹೋರಾತ್ರೇ ಉಭೇ ಅಪ್ಯುದ್ದಿಶ್ಯ ಕ್ರತುಂ ಪ್ರಾರಭತ ಉಭಯೋಃ ಕಾಲಯೋರನುಷ್ಠೇಯವಿಶೇಷಸದ್ಭಾವಾತ್ ॥ ಅತೋ ಮೈತ್ರಾವರುಣಪ್ರಗಾಥಶಂಸನೇನಾಹೋರಾತ್ರಯೋರೇವ ಕಾಲಯೋರೇನಂ ಯಜಮಾನಂ ಪ್ರತಿಷ್ಠಿತಂ ಕರೋತಿ ॥

ಇನ್ನೊಂದು ಪ್ರಗಾಥವನ್ನು ವಿವರಿಸುವರು. **ಮೈತ್ರಂ ವಾ ಅಃ । ವಾರುಣೀ ರಾತ್ರಿಃ** ಎಂಬ ಶ್ರುತಿವಚನ ಪ್ರಕಾರ ಮಿತ್ರನು ಹಗಲಿಗೆ ಸ್ವಾಮಿಯು. ವರುಣನು ರಾತ್ರಿಗೆ ಅಧಿಪತಿಯು. ಯಾವ ಯಜಮಾನನು ಅತಿರಾತ್ರವೆಂಬ ಯಾಗವನ್ನು ಮಾಡುವನೋ ಅವನು ಅಹೋರಾತ್ರಿಗಳನ್ನು ಉದ್ದೇಶಿಸಿಯೇ ಯಜ್ಞಾನುಷ್ಠಾನವನ್ನು ಮಾಡಿದಂತಾಗುವುದು. ಆದ್ದರಿಂದ .ಮೈತ್ರಾವರುಣಪ್ರಗಾಥವನ್ನು ಪಠಿಸುವುದರಿಂದ ಅಹೋರಾತ್ರಿಗಳಲ್ಲಿ ಯಜಮಾನನನ್ನು ಸ್ಥಿರವಾಗಿ ನಿಲ್ಲಿಸಿದಂತಾಗುವುದು.

ಸೂರಚಕ್ಷಸ ಇತಿ ತೇನ ಸೂರ್ಯಂ ನಾತಿಶಂಸತಿ ಯದು ಬಾರ್ಹತಃ ಪ್ರಗಾಥಸ್ತೇನ ಬೃಹತೀಂ ನಾತಿಶಂಸತಿ ॥

ಪೂರ್ವವದನತಿಕ್ರಮಂ ದರ್ಶಯತಿ—ಸೂರಚಕ್ಷಸ ಇತಿ ಶ್ರೂಯಮಾಣಂ ಸೂರಪದಂ ಸೂರ್ಯವಾಚ್ಯತಸ್ತಸ್ಯ ನಾತಿಕ್ರಮಃ ॥

ಇಲ್ಲಿಯೂ ಸಹ ಸೂರ್ಯನನ್ನೂ ಬೃಹತೀಛಂದಸ್ಸನ್ನೂ ಅತಿಕ್ರಮಿಸಿಲ್ಲವೆಂದು ತಿಳಿಸುವರು. ಇಲ್ಲಿ **ಸೂರಚಕ್ಷಸಃ** (ಋ. ಸಂ. ೭-೯೯-೧೦) ಎಂಬ ಪದಪ್ರಯೋಗವಿರುವುದರಿಂದ ಸೂರ್ಯದೇವತೆಯ ಹೆಸರಿರುವುದು. ಆದ್ದರಿಂದ ಸೂರ್ಯದೇವತೆಯನ್ನು ಅತಿಕ್ರಮಿಸಿದಂತಾಗಲಿಲ್ಲ. ಪ್ರಗಾಥವೇ ಬೃಹತೀಸ್ವರೂಪವಾದ್ದರಿಂದ ಬೃಹತೀಛಂದಸ್ಸನ್ನೂ ಅತಿಕ್ರಮಿಸಿದಂತಾಗಲಿಲ್ಲ.

ಮಹೀ ದ್ಯೌಃ ಪೃಥಿವೀ ಚನಸ್ತೇ ಹಿ ದ್ಯಾವಾಪೃಥಿವೀ ವಿಶ್ವಶಂಭುವೇತಿ ದ್ಯಾವಾಪೃಥಿವೀಯೇ ಶಂಸತಿ ದ್ಯಾವಾಪೃಥಿವೀ ಪ್ರತಿಷ್ಠೇ ಇಯಮೇವೇಹ ಪ್ರತಿಷ್ಠಾಽಸಾವಮುತ್ರ ತದ್ಯದ್ದ್ಯಾವಾಪೃಥಿವೀಯೇ ಶಂಸತಿ ಪ್ರತಿಷ್ಠಯೋರೇವೈನಂ ತತ್ಪ್ರತಿಷ್ಠಾಪಯತಿ ॥

**ಪುನರಪ್ಯನ್ಯೇ ದ್ವೇ ಋಚೌ ವಿಧತ್ತೇ—ಮಹೀ ದ್ಯೌರಿತ್ಯೇಕಾ ತೇ ಹೀತಿ ದ್ವಿತೀಯಾ ॥ ಉಭೇ ಅಪ್ಯೃಚೌ ದ್ಯಾವಾಪೃಥಿವೀ ದೇವತಾಕೇ ॥ ಕೇ ಚ ದ್ಯಾವಾಪೃಥಿವ್ಯೌ ಸರ್ವೇಷಾಂ ಪ್ರಾಣಿನಾಮಾಧಾರಭೂತೇ। ಇಹಮನುಷ್ಯಜನ್ಮನೀಯಮೇವ ಪೃಥಿವೀ ಪ್ರಾಣಿನಾಮಾಶ್ರಯಃ॥ ಅಮುತ್ರ ಜನ್ಮಾಂತರೇಽಸೌ ದ್ಯುಲೋಕ ಆಶ್ರಯಃ ತಥಾ ಸತಿ ದ್ಯಾವಾಪೃಥೀಯಯೋಃ ಋಚೋಃ ಶಂಸನೇನೋಭಯೋರಪಿ ಪ್ರತಿಷ್ಠಾರೂಪಯೋರ್ಲೋಕಯೋರೇನಂ ಯಜಮಾನಂ ಪ್ರತಿಷ್ಠಾಪಯತಿ ॥**

ಪುನಃ ಮತ್ತೆರಡು ಋಕ್ಕುಗಳನ್ನು ವಿವರಿಸುವರು—**ಮಹೀ ದ್ಯೌಃ ಪೃಥಿವೀ ಚ ನಃ** (ಋ. ಸಂ ೧-೨೨-೧೩) ಎಂಬುದು ಮೊದಲನೆಯ ಋಕ್ಕು. **ತೇ ಹಿ ದ್ಯಾವಾ ಪೃಥಿವೀ** (ಋ. ಸಂ ೧-೧೬೦-೧) ಎಂಬುವುದು ಎರಡನೆಯ ಋಕ್ಕು. ಇವೆರಡೂ ದ್ಯಾವಾಪೃಥಿವೀ ಎಂಬ ದೇವತೆಗಳನ್ನು ಸ್ತುತಿಸುವವು. ಈ ದ್ಯಾವಾಪೃಥಿವಿಗಳು (ಸ್ವರ್ಗ ಮತ್ತು ಭೂಮಿ) ಸಮಸ್ತ ಪ್ರಾಣಿಗಳಿಗೂ ಆಧಾರಭೂತಗಳಾಗಿರುವವು. ಭೂಮಿಯು ಈ ಮನುಷ್ಯಮೊದಲಾದ ಪ್ರಾಣಿಗಳಿಗೆ ಆಶ್ರಯವು. ಜನ್ಮಾಂತರದಲ್ಲಿ ದ್ಯುಲೋಕವು (ಸ್ವರ್ಗವು) ಆಶ್ರಯವು. ಹೀಗಿರುವುದರಿಂದ ಈ ದ್ಯಾವಾಪೃಥಿವೀದೇವತಾಕವಾದ ಎರಡು ಋಕ್ಕುಗಳನ್ನು ಪಠಿಸುವುದರಿಂದ ಯಜ್ಞಮಾಡುವ ಯಜಮಾನನನ್ನು ಈ ಲೋಕಗಳಲ್ಲಿ ಸ್ಥಾಪಿಸಿದಂತೆ (ನೆಲೆಸುವಂತೆ) ಆಗುವುದು.

## ದೇವೋ ದೇವೀ ಧರ್ಮಣಾ ಸೂರ್ಯಃ ಶುಚಿರಿತಿ ತೇನ ಸೂರ್ಯಂ ನಾತಿಶಂಸತಿ ॥

**ಅತ್ರ ಸೂರ್ಯಸ್ಯಾನತಿಕ್ರಮಂ ದರ್ಶಯತಿ—ಉತ್ತರಸ್ಯಾಮೃಚಿ ದೇವೋ ದೇವೀತ್ಯಸ್ಮಿನ್ಪಾದೇ ಸೂರ್ಯಸ್ಯ ಶ್ರೂಯಮಾಣತ್ವಾತ್ತದತಿಕ್ರಮೋ ನಾಸ್ತಿ ॥**

ಮೇಲೆ ಹೇಳಿದ ಎರಡನೇ ಋಕ್ಕಿನಲ್ಲಿ ಸೂರ್ಯನನ್ನು ಪ್ರತಿಪಾದಿಸುವ ಶಬ್ದಪ್ರಯೋಗವಿರುವುದರಿಂದ ಸೂರ್ಯನು ಸ್ತುತಿಯನ್ನು ಅತಿಕ್ರಮಿಸಿದಂತಾಗುವುದಿಲ್ಲ.

## ಯದು ಗಾಯತ್ರೀ ಚ ಜಗತೀ ಚ ತೇ ದ್ವೇ ಬೃಹತ್ಯೌ ತೇನ ಬೃಹತೀಂ ನಾತಿಶಂಸತಿ ॥

**ಬೃಹತ್ಯಾ ಅನತಿಕ್ರಮಂ ದರ್ಶಯತಿ—ಪ್ರಥಮಾಯಾ ಗಾಯತ್ರೀಚ್ಛಂದಸ್ಕಾಯಾಶ್ಚತುರ್ವಿಂಶತ್ಯಕ್ಷರತ್ವಂ ॥ ದ್ವಿತೀಯಾ ಜಗತೀಚ್ಛಂದಸ್ಕಾಽಷ್ಟಾಚತ್ವಾರಿಂಶದಕ್ಷರಾ ಮಿಲಿತ್ವಾ ದ್ವಾಸಪ್ತತಿರಕ್ಷರಾಣಿ ಸಂಪದ್ಯಂತೇ ॥ ತೇಷಾಂ ದ್ವೇಧಾ ವಿಭಾಗೇ ಸತಿ ಷಟ್ತ್ರಿಂಶದಕ್ಷರೇ ದ್ವೇ ಬೃಹತ್ಯೌ ಭವತಃ ॥ ತೇನ ಬೃಹತ್ಯಾ ಅನತಿಕ್ರಮಃ ॥**

ಮೇಲೆ ಹೇಳಿರುವ ಎರಡು ಋಕ್ಕುಗಳಲ್ಲಿ ಮೊದಲನೆಯದು ಗಾಯತ್ರೀ ಛಂದಸ್ಕವು. ಇದರಲ್ಲಿ ಇಪ್ಪತ್ತನಾಲ್ಕು ಅಕ್ಷರಗಳಿರುವವು. ಎರಡನೇ ಋಕ್ಕು ಜಗತೀ ಛಂದಸ್ಕವು. ಇದರಲ್ಲಿ ನಲವತ್ತೆಂಟು ಅಕ್ಷರಗಳಿರುವವು. ಇವೆರಡನ್ನೂ ಸೇರಿಸಿದರೆ ಎಪ್ಪತ್ತೆರಡು ಅಕ್ಷರಗಳಾಗುವವು. ಎಂದರೆ, ಮೂವತ್ತಾರು ಅಕ್ಷರಗಳ ಬೃಹತೀಛಂದಸ್ಸಿನ ಎರಡು ಮಂತ್ರಗಳಾಗುವವು. ಆದ್ದರಿಂದ ಇಲ್ಲಿ ಬೃಹತೀಛಂದಸ್ಸನ್ನೂ ಅತಿಕ್ರಮಿಸಿದಂತಾಗಲಿಲ್ಲ.

**ವಿಶ್ವಸ್ಯ ದೇವೀ ಮೃಚಯಸ್ಯ ಜನ್ಮನೋ ನ ಯಾ ರೋಷಾತಿ ನ ಗ್ರಭದಿತಿ ದ್ವಿಪದಾಂ ಶಂಸತಿ ॥**

ಅಥಾನ್ಯಾಮೇಕಾಮೃಚಂ ವಿಧತ್ತೇ— ಇಯಮೃಕ್ಪಾದದ್ವಯೋಪೇತಾಽಸ್ಮಿನ್ಬ್ರಾಹ್ಮಣ ಏವೋಕ್ತಾ ॥ ಮೃಚಿ ಧಾತುರ್ಗತ್ಯರ್ಥಃ ॥ ಮರ್ಚಯತಿ ಗಚ್ಛತೀತಿ ಗತಿಮಾನ್ ಪ್ರಾಣೀ ॥ ವಿಶ್ವಸ್ಯ ಸರ್ವಸ್ಯ ಮೃಚಯಸ್ಯ ಗತಿಮತಃ ಪ್ರಾಣಿನೋ ಯಜ್ಜನ್ಮ ತಸ್ಯ ಜನ್ಮನೋ ದೇವೀ ಸ್ವಾಮಿನೀ ಕಾಚಿನ್ನಿರ್ಋತಿರೂಪಾ ಮೃತ್ಯುದೇವತಾ ನ ರೋಷಾತಿ ನ ಕುಪ್ಯತಿ ನ ಗ್ರಭನ್ನೈವ ಗೃಹ್ಣಾತೀತಿ ದ್ವಿಪದಾಯಾ ಋಚೋಽರ್ಥಃ ॥ ತಾಮೇತಾಂ ದ್ವಿಪದಾಂ ಶಂಸೇತ್ ॥

ಈಗ ಮತ್ತೊಂದು ಋಕ್ಕನ್ನು ವಿವರಿಸುವರು. ವಿಶ್ವಸ್ಯ ದೇವೀ ಮೃಚಯಸ್ಯ ಜನ್ಮನಃ ಎಂಬುದೇ ಆ ಮಂತ್ರವು ಇದು ದ್ವಿಪದಾಛಂದಸ್ಸಿನದು. ಮೃಚಿಧಾತುವಿಗೆ ಗತ್ಯರ್ಥವಿರುವುದು. ಮರ್ಚಯತಿ ಗಚ್ಛತೀತಿ ಗತಿಮಾನ್ಪ್ರಾಣೀ । ಗಮನಶಕ್ತಿಯುಳ್ಳ ಸರ್ವಪ್ರಾಣಿಗಳಿಗೂ ಸ್ವಾಮಿನಿಯಾದ ಓರ್ವ ದೇವತೆಯಿರುವಳು. ಈ ಸ್ತ್ರೀದೇವತೆಗೆ ನಿರ್ಋತಿ ಅಥವಾ ಮೃತ್ಯುದೇವತೆಯೆಂದು ಹೆಸರು. ಇಂತಹ ಮೃತ್ಯುದೇವತೆಯು ನಮ್ಮ ವಿಷಯದಲ್ಲಿ ಕೋಪಗೊಳ್ಳದಿರಲೆಂದು ಈ ಮಂತ್ರದ ಅರ್ಥವು. ಆದ್ದರಿಂದ ಇದನ್ನು ಪಠಿಸಬೇಕು.

**ಚಿತ್ರೈಧಮುಕ್ಥಮಿತಿ ಹ ಸ್ಮ ವಾ ಏತದಾಚಕ್ಷತೇ ಯದೇತದಾಶ್ವಿನಂ ನಿರ್ಋತಿರ್ಹ ಸ್ಮ ಪಾಶಿನ್ಯುಪಾಸ್ತೇ ಯದೈವ ಹೋತಾ ಪರಿಧಾಸ್ಯತ್ಯಥ ಪಾಶಾನ್ಪ್ರತಿಮೋಕ್ಷ್ಯಾಮೀತಿ ತತೋ ವಾ ಏತಾಂ ಬೃಹಸ್ಪತಿರ್ದ್ವಿಪದಾಮಪಶ್ಯನ್ನ ಯಾ ರೋಷಾತಿ ನ ಗ್ರಭದಿತಿ ತಯಾ ನಿರ್ಋತ್ಯಾಃ ಪಾಶಿನ್ಯಾ ಅಧರಾಚಃ ಪಾಶಾನಪಾಸ್ಯತ್ತದ್ಯದೇತಾಂ ದ್ವಿಪದಾಂ ಹೋತಾ ಶಂಸತಿ ನಿರ್ಋತ್ಯಾ ಏವ ತತ್ಪಾಶಿನ್ಯಾ ಅಧರಾಚಃ ಪಾಶಾನಪಾಸ್ಯತಿ ಸ್ವಸ್ತ್ಯೇವ ಹೋತೋನ್ಮುಚ್ಯತೇ ಸರ್ವಾಯುಃ ಸರ್ವಾಯುತ್ವಾಯ ಸರ್ವಮಾಯುರೇತಿ ಯ ಏವಂ ವೇದ ।**

ಏತಾಮೃಚಂ ಪ್ರಶಂಸತಿ—ಯದೇತದಾಶ್ವಿನಂ ಶಸ್ತ್ರಮಸ್ತಿ ತದೇತಚ್ಚಿತ್ರೈಧಮುಕ್ಥಮಿತಿ ರಹಸ್ಯಾಭಿಜ್ಞಾ ಆಚಕ್ಷತೇ—ಚಿತಾ ಏಧಾಃ ಕಾಷ್ಠಸಮೂಹಾ ಮನುಷ್ಯಂ ದಗ್ಧುಂ ಯಸ್ಮಿಞ್ಶ್ಮಶಾನೇ ಸ್ಥಾನೇ ತತ್ಸ್ಥಾನಂ ಚಿತ್ರೈಧಂ ॥ ತತ್ಸದೃಶಮಿದಮುಕ್ಥಂ ಶಸ್ತ್ರಂ ಯಥಾ ಸ್ಮಶಾನಂ ದೃಷ್ಟ್ವಾ ಜೀವನಾರ್ಥಿನೋ ಬಿಭ್ಯತಿ ತದ್ವದಾಶ್ವಿನಂ ಶಸ್ತ್ರಂ ಭಯಹೇತುರಿತ್ಯರ್ಥಃ॥ ತತ್ಕಥಮಿತಿ ತದೇವೋಚ್ಯತೇ ॥ ನಿರ್ಋತಿರ್ಮೃತ್ಯುದೇವತಾ ಸಾ ಚ ಪಾಶಿನೀ ಪಾಶಹಸ್ತಾ ಸತ್ಯುಪಾಸ್ತೇ ಹೋತುಃ ಸಮೀಪೇ ನಿವಸತಿ ॥ ಕೇನಾಭಿಪ್ರಾಯೇಣೇತಿ ಸೋಽಭಿಧೀಯತೇ ॥ ಯದೈವಾಯಂ ಹೋತಾ ಪರಿಧಾಸ್ಯತಿ ಶಸ್ತ್ರಸಮಾಪ್ತಿಂ ಕರಿಷ್ಯತಿ ತದೈವ ಬಂಧನಾರ್ಥಂ ಪಾಶಾನಸ್ಮಿನ್ಹೋತರಿ

**ಪ್ರತಿನೋಕ್ಷ್ಯಾಮಿ ಪ್ರಜೇಷ್ಯಾಮೀತಿ ತಸ್ಯಾ ಅಭಿಪ್ರಾಯಃ ತತೋ ನೈ ತಸ್ಮಾದೇವ ನಿರ್ಋತ್ಯಾಃ ಪರಿಹರಣೀಯತ್ವಕಾರಣಾತ್ತದಪಾಕರಣಾರ್ಥಂ ಬೃಹಸ್ಪತಿರೇತಾಂ ದ್ವಿಪದಾಂ ತತ್ಪರಿಹಾರ-ಹೇತುತ್ವೇನಾಪಶ್ಯತ್ ॥ ಕಾಸೌ ದ್ವಿಪದೇತಿ ವೀಕ್ಷಾಯಾಂ ತದೀಯೋ ದ್ವಿತೀಯಃ ಪಾದೋ ನ ಯೋತ್ಯಾದಿಕಃ ಪ್ರದರ್ಶನಾರ್ಥಮುಪಾದೀಯತೇ ॥ ತಯಾ ದ್ವಿಪದಯಾ ಪಾಶಹಸ್ತಾಯಾ ನಿರ್ಋತ್ಯಾಃ ಸಕಾಶಾದಧರಾಚೋಽಧೋಽಲಂಬಮಾನಾನ್ಪಾಶಾನ್ಬೃಹಸ್ಪತಿರಪಾಸ್ಯತ್ ॥ ದ್ವಿಪದಾಯಾಂ ಪಠ್ಯಮಾನಾಯಾಂ ತದ್ಧಸ್ತಾತ್ಪಾಶಾಃ ಪತಿತಾ ಇತ್ಯರ್ಥಃ ॥ ತದ್ವದ್ಧೋತಾಽಪಿ ದ್ವಿಪದಾಯಾಃ ಶಂಸನೇನ ಪಾಶಾನಪಾಸ್ಯತಿ ನಿರಾಕರೋತಿ ॥ ಸ್ವಸ್ತ್ಯೇವ ಕ್ಷೇಮೇಣೈವಾಯಂ ಹೋತಾ ನಿರ್ನಿರ್ಋತಿಪಾಶಾನ್ಮುಚ್ಯತೇ ॥ ತತಃ ಸರ್ವಾಯುರ್ಭವತಿ ಯಜಮಾನಸ್ಯಾಪಿ ಸರ್ವಾಯುತ್ವಾಯ ಶಂಸನಂ ಸಂಪದ್ಯತೇ ॥ ವೇದನಂ ಪ್ರಶಂಸತಿ ॥**

ಮೇಲೆ ಹೇಳಿದ ಋಕ್ಕನ್ನು ಪ್ರಶಂಸೆಮಾಡುವರು. ಆಶ್ವಿನಶಸ್ತ್ರಕ್ಕೆ ಚಿತ್ಯೈಧಮುಕ್ಥವೆಂದು ಕೆಲವರು ಹೇಳುವರು. ಚಿತಿಯೆಂದರೆ ಮನುಷ್ಯರನ್ನು ಸುಡುವ ಸ್ಮಶಾನಪ್ರದೇಶದಲ್ಲಿರುವ ಏಧವೆಂಬ ಕಟ್ಟಿಗೆಯಿಂದ ನಿರ್ಮಿತವಾದ ಚಿತ ಅಥವಾ ಶವವನ್ನು ಸುಡುವುದಕ್ಕಾಗಿ ನಿರ್ಮಿಸಿರುವ ಕಾಷ್ಠಸಮೂಹವು ಉಕ್ಥವೆಂದರೆ ಶಸ್ತ್ರಮಂತ್ರವು. **ಚಿತ್ಯೈಧಮುಕ್ಥ** ಎಂದರೆ, ಭಯಂಕರವಾದ ಸ್ಮಶಾನಭೂಮಿಯಲ್ಲಿ ಶವವನ್ನು ಸುಡುವುದಕ್ಕಾಗಿ ನಿರ್ಮಿಸಲ್ಪಟ್ಟಿರುವ ಚಿತಿಯು ಹೇಗೆ ಭಯವನ್ನುಂಟು ಮಾಡುವುದೋ ಅದರಂತೆ ಭಯಂಕರವಾದ ಈ ಆಶ್ವಿನವೆಂಬ ಶಸ್ತ್ರಮಂತ್ರವೆಂದರ್ಥವು. ಎಂದರೆ ಸ್ಮಶಾನದಲ್ಲಿರುವ ಚಿತಿಯು ಹೇಗೆ ಭಯಂಕರವಾಗಿರುವುದೋ ಅದರಂತೆ ಈ ಆಶ್ವಿನಶಸ್ತ್ರಮಂತ್ರಗಳೂ ಭಯಂಕರಗಳಾಗಿರುವವು ಎಂದಭಿಪ್ರಾಯವು. ಅದು ಹೇಗೆಂದರೆ—ಈ ಶಸ್ತ್ರಮಂತ್ರಗಳಲ್ಲಿ ನಿರ್ಋತಿ (ಮೃತ್ಯುದೇವತೆ) ದೇವತಾಕವಾದ ಮಂತ್ರವಿರುವುದು. ಈ ಮೃತ್ಯುದೇವತೆಯು ತನ್ನ ಹಸ್ತದಲ್ಲಿ ಮೃತ್ಯುಪಾಶವನ್ನು ಹಿಡಿದಿರುವಳು. ಈ ದೇವತೆಯು ಯಾವಾಗಲೂ ಹೋತೃವಿನ ಸಮೀಪದಲ್ಲಿಯೇ ನೆಲಸಿರುವಳು. ಏಕೆಂದರೆ ಈ ಹೋತೃವು ಆಶ್ವಿನಶಸ್ತ್ರಮಂತ್ರವನ್ನು ಪಠಿಸುತ್ತಿರುವಾಗ ಅದನ್ನು ಅವನು ಯಾವಾಗ ಹೇಳಿಮುಗಿಸುವನೋ ಆ ಕೂಡಲೇ ಅವನನ್ನು ತನ್ನ ಕೈಯಲ್ಲಿರುವ ಮೃತ್ಯುಪಾಶದಿಂದ ಬಂಧಿಸುವೆನು ಎಂಬ ಅಭಿಪ್ರಾಯವು ಆ ದೇವತೆಗಿರುವುದು. ಈ ಅಭಿಪ್ರಾಯವನ್ನು ತಿಳಿದೇ ಬೃಹಸ್ಪತಿದೇವತೆಯು ಇದರ ಪರಿಹಾರಾರ್ಥವಾಗಿ ಮೇಲೆ ಹೇಳಿದ ದ್ವಿಪದಾ ಮಂತ್ರದ ಎರಡನೇ ಪಾದವು **ನ ಯಾ ರೋಷಾತಿ ನ ಗ್ರಭತ್** ಎಂದು ಪ್ರಾರಂಭವಾಗುವುದು. ಬೃಹಸ್ಪತಿಯು ಈ ದ್ವಿಪದಾ ಮಂತ್ರವನ್ನು ಪಠಿಸಿದ ಕೂಡಲೇ ಆ ಮೃತ್ಯುದೇವತೆಯ ಹಸ್ತದಲ್ಲಿದ್ದ ಮೃತ್ಯುಪಾಶವು ಜಾರಿ ಕೆಳಗೆ ಬಿದ್ದುಹೋಯಿತು. ಅದರಂತೆ ಹೋತೃವು ಈ ದ್ವಿಪದಾ ಛಂದಸ್ಸಿನ ಮಂತ್ರವನ್ನು ಪಠಿಸುವುದರಿಂದ ಮೃತ್ಯುದೇವತೆಯ ಮೃತ್ಯುಪಾಶದಿಂದ ಪಾರಾಗುವನು. ಅನಂತರ ಹೋತೃವಿಗೆ ಮರಣಭಯವು ತಪ್ಪಿಹೋಗಿ ಕ್ಷೇಮವುಂಟಾಗುವುದು ಮತ್ತು ಹೋತೃವು ತನಗೂ ಯಜಮಾನನಿಗೂ ಸಂಪೂರ್ಣಾಯುಸ್ಸನ್ನು ಪಡೆದು ಜೀವಿಸುವಂತೆ ಮಂತ್ರ ಪಠನದಿಂದ ಅನುಗ್ರಹವನ್ನು ಪಡೆಯುವನು. ಈ ವಿಷಯವನ್ನು ತಿಳಿದ ಪುರುಷನೂ ಸಹ ಮರಣಭಯದಿಂದ ಮುಕ್ತನಾಗಿ ದೀರ್ಘಾಯುಸ್ಸನ್ನು ಪಡೆದು ಸುಖಿಸುವನು.

**ನೃಚಯಸ್ಯ ಜನ್ಮನ ಇತ್ಯಸೌ ವಾವ ಮರ್ಚಯತೀವ ತೇನ ಸೂರ್ಯಂ ನಾತಿಶಂಸತಿ ॥**

**ತತ್ರ ಸೂರ್ಯಸ್ಯಾನತಿಕ್ರಮಂ ದರ್ಶಯತಿ—ದ್ವಿಪದಾಯಾಂ ಗತಿವಾಚೀ ನೃಚಯ-ಶಬ್ದೋಽಸ್ತ್ಯಸೌ ವಾವಾಽಽದಿತ್ಯೋಽಪಿ ಮರ್ಚಯತೀವ ಸರ್ವದಾ ಗಚ್ಛತ್ಯೇವ ॥ ತೇನ ಸೂರ್ಯಾಭಿಧಾನಾನ್ನಾಸ್ತ್ಯತಿಕ್ರಮಃ ॥**

ವ್ಯುಚಯಸ್ಯ ಎಂಬ ಪದಕ್ಕೆ ಗತ್ಯರ್ಥವಿರುವುದರಿಂದ ಸರ್ವದಾ ಚಲಿಸುತ್ತಿರುವ ಪ್ರಾಣಿಗಳು ಎಂಬರ್ಥವಿರುವುದು. ಅದರಂತೆ ಸೂರ್ಯನೂ ಸರ್ವದಾ ಚಲಿಸುತ್ತಿರುವುದರಿಂದ ಈ ಶಬ್ದಕ್ಕೆ ಸೂರ್ಯನೆಂಬ ಅರ್ಥವೂ ಭಾಸವಾಗುವುದು. ಇದರಿಂದ ಇಲ್ಲಿ ಸೂರ್ಯದೇವನ ಸ್ತುತಿಯನ್ನು ಅತಿಕ್ರಮಿಸಲಾಗಿಲ್ಲವೆಂದು ತಿಳಿಯಬೇಕು.

**ಯದು ದ್ವಿಪದಾ ಪುರುಷಛಂದಸಂ ಸಾ ಸರ್ವಣಿ ಛಂದಾಂಸ್ಯಭ್ಯಾಪ್ತಾ**
**ತೇನ ಬೃಹತೀಂ ನಾತಿ ಶಂಸತಿ ॥**

**ಬೃಹತ್ಯಾ ಅನತಿಕ್ರಮಂ ದರ್ಶಯತಿ—ಯದು ಯಸ್ಮಾದೇವ ಕಾರಣಾದಿಯಂ ದ್ವಿಪದಾ ತಸ್ಮಾದೇವ ಪುರುಷಸಾದೃಶ್ಯಾತ್ಪುರುಷ ಸಂಬಂಧಚ್ಛಂದೋ ಭವತಿ ಪುರುಷಶ್ಚ ಸರ್ವಚ್ಛಂದಸಾಂ ಪ್ರಯೋಕ್ತೇತಿ ಪುರುಷದ್ವಾರಾ ಸಾ ದ್ವಿಪದಾ ಸರ್ವಾಣಿ ಚ್ಛಂದಾಸ್ಯಭಿತೋ ವ್ಯಾಪ್ನೋತಿ । ತೇನ ಬೃಹತ್ಯಾ ಅಪಿ ವ್ಯಾಪ್ತತ್ವಾನ್ನಾಸ್ತ್ಯತಿಕ್ರಮಃ ॥**

ಪುರುಷನಿಗೆ ಎರಡು ಪಾದ (ಕಾಲು)ಗಳಿರುವವು. ದ್ವಿಪದಾ ಛಂದಸ್ಸಿನಲ್ಲಿಯೂ ಎರಡು ಪಾದಗಳಿರುವವು. ಆದ್ದರಿಂದ ಪುರುಷನಿಗೂ ದ್ವಿಪದಾ ಛಂದಸ್ಸಿಗೂ ಸಾಮ್ಯವಿದ್ದಂತಾಯಿತು ಪುರುಷನು ಸಮಸ್ತಛಂದಸ್ಸಿನ ಮಂತ್ರಗಳನ್ನೂ ಪಠಿಸಬಲ್ಲನು. ಎಂದರೆ ಬೃಹತೀ ಛಂದಸ್ಸನ್ನೂ ಪಠಿಸಬಲ್ಲನು. ಇವನು ಪಠಿಸುವ ಛಂದಸ್ಸಿನ ಮಂತ್ರಗಳಲ್ಲಿ ಬೃಹತೀಛಂದಸ್ಸು ಸೇರಿರುವುದರಿಂದ ಬೃಹತೀಛಂದಸ್ಸನ್ನು ಪಠಿಸಿದಂತಾಯಿತು. ಆದ್ದರಿಂದ ಇಲ್ಲಿ ಬೃಹತೀಛಂದಸ್ಸನ್ನು ಪಠಿಸುವಾಗ ಅತಿಕ್ರಮಮಾಡಿಲ್ಲವೆಂದಭಿಪ್ರಾಯವು.

## *English Translation*

### The verses which follow those addressed to Surya in the Asvina Shastra must bear some relation to Surya and the Brihati metre. The Pragathas to Indra. The text of the Rathantara Saman. The Pragatha to Mitravaruna. The two verses to Heaven and Earth. The Dvipada for Nirriti

Regarding this (the recitations for Surya) they say, Surya is not to be passed over in the recitation; nor is the Brihati metre of the Asvina Shastra to be passed over. Should the Hotar pass over Surya, he would fall beyond the sphere of Brahma splendour and consequently lose it· Should he pass over the Brihati, he would fall beyond the sphere of the vital airs and consequently die.

He repeats the Pragatha, addressed to Indra, viz. indra kratum na (7, 32, 26) i.e. "Carry, O Indra! our sacrificial performance through, just as a father does to his sons by assisting them. Teach us, O thou who art invoked by many, that we may, in this turn of the night reach alive the sphere of light." The word "light" (jyotis) in this verse, is that one the sun. In this way he does not pass over the sun.

By repeating a Barhata Pragatha he does not pass over the Brihati. By repeating the principal text of the Rathantara Saman (which is in the Brihati metre, viz. abhi tva sura (7, 32, 22-23), according to whose tune the Sama singers chant the Sandhi Stotra for the Asvina Shastra, he does not overpraise the Brihati. This is done in order to have provided for the Sandhi Stotra its principal text (lit. its womb). In the words of the Rathantara Saman, isanam asya jagatah svardrisam i.e. the ruler of this world who sees the sky, there is an allusion made to Surya by "svardrisam", i.e. who sees the sky. By repeating it he does not pass the sun. Nor does he by its the Rathantaram being a Barhata Pragatha pass over the Brihati.

He repeats a Maitravaruna Pragatha, viz., bahavah surachakshase (7, 66, 10). For Mitra is the day, and Varuna the night. He who performs the Atiratra commences his sacrifice with both day and night. By repeating a Maitravaruna Pragatha the Hotar places the sacrificer in day and night. By the words surachakshase he does not overpraise Surya. The verse being a Brihati Pragatha, he does not pass over the Brihati.

He repeats two verses addressed to Heaven and Earth, viz., mahi dyauh prithivi (1, 22, 13) and te hi dyava prithivi visvasambhuva (1, 160, 1). Heaven and Earth are two places for a firm footing; Earth being the firm footing here, and Heaven there in the other world. By thus repeating two verses addressed to Heaven and Earth, he puts the sacrificer in two places on a firm footing. By the words: devo devi dharmana suryah suchih (in the last pada of 1, 160, 1) i.e. "the divine brilliant Surya passes regularly between the two goddesses (i.e. Heaven and Earth)," he does not pass over Surya. One of these verses being in the Gayatri, the other in the Jagati metre, which make two Brihatis, he does not pass over the Brihati.

He repeats the Dvipada verse: visvasya devi mrichayasya (not to be found in the Samhita, but in the Brahmanam) i.e. may she who is the ruler of all that is born and moves (mrichaya) not be angry with us, nor visit us with destruction. They (the theologians) have called the Asvina Shastra a funeral pile of wood chitaidha). For when the Hotar is about to conclude this Shastra, Nirriti the) goddess of destruction is lurking with her cords, thinking to cast them round the Hotar. To prevent this, Brihaspati saw this Dvipada verse. By its words, "may she not be angry with us, nor visit us with destruction" he wrested from Nirriti's hands her cords and put them down. Thus the Hotar wrests also from the hands of Nirriti her cords, and Puts them down when repeating this Dvipada verse, by which means he comes off in safety. He does so for attaining to his full age.

By the words mrichayasya janmanah, i.e. "what is born and moves," he does not pass over the sun in his recitation, for that one (the sun) moves (marchayati) as it were.

As regards the Dvipada verse, it is the metre corresponding to man (on account of his two padas, i.e. feet). Thus it comprises all metres for the two-legged man is using them all. In this way the Hotar does not by repeating the Dvipada pass over the Brihati.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಸಪ್ತದಶಾಧ್ಯಾಯಸ್ಯ ಚತುರ್ಥಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನೇಳನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವಾದುದು.**



## ಅಥ ಸಪ್ತದಶಾಧ್ಯಾಯೇ ಪಂಚಮಃ ಖಂಡಃ

### ಹದಿನೇಳನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ಆಶ್ವಿನಶಸ್ತ್ರಮಂತ್ರಗಳ ಕೊನೆಯ ಋಕ್ಕುಗಳು. ಇದರ ಎರಡು ಯಾಜ್ಯಾಮಂತ್ರಗಳು. ಇವು ಯಾವ ಛಂದಸ್ಸಿನವಾಗಿರಬೇಕೆಂಬ ವಿಷಯವು]



**ಬ್ರಾಹ್ಮಣಸ್ಪತ್ಯಯಾ ಪರಿದಧಾತಿ ಬ್ರಹ್ಮ ವೈ ಬೃಹಸ್ಪತಿರ್ಬ್ರಹ್ಮಣ್ಯೇವೈನಂ ತದಂತತಃ ಪ್ರತಿಷ್ಠಾಪಯತಿ ॥**

**ಅಥಾಽಽಶ್ವಿನಸ್ಯ ಸಮಾಪ್ತ್ಯರ್ಥಂ ಏಕಾಮೃಚಂ ವಿಧತ್ತೇ ಬೃಹಸ್ಪತೇ ಅತಿ ಯದರ್ಯ ಇದ್ಯೇಷಾ ಬ್ರಾಹ್ಮಣಸ್ಪತ್ಯಾ ಬೃಹಸ್ಪತೇರ್ದೇವೇಷು ಬ್ರಾಹ್ಮಣಜಾತಿಸ್ವರೂಪತ್ವಾತ್ ॥ ತೇನ ಪರಿಧಾನೇನೈತಚ್ಛಸ್ತ್ರಂ ಬ್ರಹ್ಮಣ್ಯೇವ ಬ್ರಾಹ್ಮಣರೂಪೇ ಬೃಹಸ್ಪತಾವೇವ ಪ್ರತಿಷ್ಠಿತಂ ಭವತಿ ॥**

ಆಶ್ವಿನಶಸ್ತ್ರಮಂತ್ರಸಮಾಪ್ತಿಗಾಗಿ ಕೊನೆಯ ಋಕ್ಕನ್ನು ಹೇಳುವರು—ಬೃಹಸ್ಪತೇ ಅತಿಯದರ್ಯ (ಋ. ಸಂ. ೨-೨೩-೧೫) ಎಂಬ ಮಂತ್ರವು ಬ್ರಹ್ಮಣಸ್ಪತಿದೇವತಾಕವು. ಬೃಹಸ್ಪತಿದೇವತೆಯು ದೇವತೆಗಳಲ್ಲಿ ಬ್ರಾಹ್ಮಣ ಜಾತಿಸ್ವರೂಪನಾದವನು

ಬೃಹಸ್ಪತಿದೇವತಾಕವಾದ ಈ ಋಕ್ಕನ್ನು ಹೇಳಿ ಶಸ್ತ್ರಮಂತ್ರವನ್ನು ಸಮಾಪ್ತಗೊಳಿಸುವುದರಿಂದ ಈ ಶಸ್ತ್ರಮಂತ್ರವನ್ನು ಬ್ರಾಹ್ಮಣರೂಪನೂ, ಬ್ರಹಸ್ಪತಿರೂಪನೂ ಆದ ಬ್ರಹ್ಮನಲ್ಲಿಯೇ ಸ್ಥಾಪಿಸಿದಂತಾಗುವುದು.

**ಏವಾ ಪಿತ್ರೇ ವಿಶ್ವದೇವಾಯ ವೃಷ್ಣ ಇತ್ಯೇತಯಾ ಪರಿದಧ್ಯಾತ್ಪ್ರಜಾಕಾಮಃ ಪಶುಕಾಮಃ ॥**

**ನಿತ್ಯಪ್ರಯೋಗಾರ್ಥಂ ಪರಿಧಾನೀಯಾಂ ವಿಧಾಯ ಕಾಮ್ಯಪ್ರಯೋಗಾರ್ಥಂ ವಿಧತ್ತೇ ॥**

ಮೇಲೆ ಹೇಳಿದ ಬೃಹಸ್ಪತೇ ಯದರ್ಯ ಎಂಬ ಮಂತ್ರವನ್ನು ನಿತ್ಯಪ್ರಯೋಗಾರ್ಥವಾಗಿ ಉಪಯೋಗಿಸಬೇಕು. ಆದರೆ ಕಾಮ್ಯಪ್ರಯೋಗಾರ್ಥವಾಗಿ ಏವಾ ಪಿತ್ರೇ ವಿಶ್ವದೇವಾಯ ವೃಷ್ಣೇ (ಋ. ಸಂ ೪-೫೦-೯) ಎಂಬ ಋಕ್ಕನ್ನು ಪರಿಧಾನೀಯಮಂತ್ರವನ್ನಾಗಿ ಉಪಯೋಗಿಸಬೇಕು.

**ಬೃಹಸ್ಪತೇ ಸುಪ್ರಜಾ ವೀರವಂತ ಇತಿ ಪ್ರಜಯಾ ವೈ ಸುಪ್ರಜಾ ವೀರವಾನ್**

**ತಸ್ಯಾ ಋಚಸ್ತೃತೀಯಪಾದಮನೂದ್ಯ ವ್ಯಾಚಷ್ಟೇ—ಪುತ್ರಾದಿರೂಪಯಾ ಪ್ರಜಯಾ ಪಿತಾ ಸುಪ್ರಜಾಃ ಶೋಭನಾಪತ್ಯೋ ವೀರವಾನ್ಶೂರಭೃತ್ಯಯುಕ್ತಶ್ಚ ॥ ತೇನ ತೃತೀಯಪಾದೋಕ್ತಸುಪ್ರಜಾ ವೀರವಂತ ಇತ್ಯೇತದುಪಪನ್ನಂ ॥**

ಈ ಋಕ್ಕಿನ ಮೂರನೇ ಪಾದವನ್ನು ವಿವರಿಸುವರು. ಬೃಹಸ್ಪತೇ ಸುಪ್ರಜಾ ವೀರವಂತಃ ಎಂಬುವುದು ಈ ಋಕ್ಕಿನ ಮೂರನೆಯ ಪಾದವು. ಎಲೈ ಬೃಹಸ್ಪತಿಯೇ ನಿನ್ನ ಅನುಗ್ರಹದಿಂದ ನಾವು ಉತ್ತಮಗುಣಗಳುಳ್ಳ ಪುತ್ರರನ್ನು ಪಡೆಯುವಂತಾಗಲಿ ಮತ್ತು ನಮ್ಮ ಪುತ್ರಭೃತ್ಯ ಮೊದಲಾದವರು ವೀರರಾಗಿಯೂ ಎಂದರೆ ಪರಾಕ್ರಮಾದಿಗಳಿಂದ ಯುಕ್ತರಾಗಿರುವಂತಾಗಿಯೂ ಆಗಲಿ ಎಂಬ ಪ್ರಾರ್ಥನೆಯು ಇಲ್ಲಿ ಉಕ್ತವಾಗಿದೆ.

**ವಯಂ ಸ್ಯಾಮ ಪತಯೋ ರಯೀಣಾಮಿತಿ । ಪ್ರಜಾವಾನ್ಪಶುಮಾನ್ರಯಿಮಾನ್ವೀರವಾನ್ಭವತಿ ಯತ್ರೈವಂ ವಿದ್ವಾನೇತಯಾ ಪರಿದಧಾತಿ॥**

**ಚತುರ್ಥಪಾದಮನುವದತಿ—ಹೇ ಬೃಹಸ್ಪತೇ ತ್ವತ್ಪ್ರಸಾದಾದ್ವಯಂ ರಯೀಣಾಂ ಧನಾನಾಂ ಪತಯಃ ಸ್ಯಾಮ ॥ ಅಸ್ಯಾರ್ಥಸ್ಯ ಸ್ಪಷ್ಟತ್ವಾದ್ವ್ಯಾಖ್ಯಾನಮುಪೇಕ್ಷ್ಯ ಜ್ಞಾನಪೂರ್ವಕಾನುಷ್ಠಾನಂ ಪ್ರಶಂಸತಿ—**

ನಾಲ್ಕನೇಪಾದದ ಅರ್ಥವನ್ನು ವಿವರಿಸುವರು—ಎಲೈ ಬೃಹಸ್ಪತಿಯೇ ನಿನ್ನ ಅನುಗ್ರಹದಿಂದ ನಾವು ಬಹಳವಾದ ಧನಾದಿ ಸಂಪತ್ತಿಗೆ ಒಡೆಯರಾಗುವಂತಾಗಲಿ. ಎಂದು ಈ ನಾಲ್ಕನೇ ಪಾದದ ಅರ್ಥವು. ಈ ವಿಷಯಗಳನ್ನೆಲ್ಲಾ ತಿಳಿದು ಅದರಂತೆ ಆಚರಿಸುವ (ಎಂದರೆ ಈ ಮಂತ್ರವನ್ನು ಕೊನೆಯದನ್ನಾಗಿ ಪಠಿಸುವ) ವಿದ್ವಾಂಸನಾದ ಪುರುಷನು ಉತ್ತಮವಾದ ಪುತ್ರಪೌತ್ರಾದಿ ಸಂತತಿಯನ್ನೂ, ಧನವನ್ನೂ ವೀರರಾದ ಭೃತ್ಯಾದಿ ಪರಿವಾರದವರನ್ನು ಪಡೆದು ಸುಖಿಸುತ್ತಾನೆ.

ಬೃಹಸ್ಪತೇ ಅತಿ ಯದರ್ಯೋ ಅರ್ಹಾದಿತ್ಯೇತಯಾ ಪರಿದಧ್ಯಾತ್ತೇಜ-
ಸ್ಕಾಮೋ ಬ್ರಹ್ಮವರ್ಚಸಕಾಮೋಽತೀವ ವಾಽನ್ಯಾನ್ಬ್ರಹ್ಮವರ್ಚ-
ಸಮರ್ಹತಿ ||

ಫಲಾಂತರಾರ್ಥಮನ್ಯಾಮೃಚಂ ವಿಧತ್ತೇ— ಅತ್ರಪಾದೇ ಯೋಽಯಮತಿಶಬ್ದಸ್ತತ್ಪ್ರಸಾ-
ದಾದನುಷ್ಠಾತಾಽನ್ಯಪುರುಷಾನತೀವ ಅತಿಕ್ರಮ್ಯೈವಾಧಿಕಂ ಬ್ರಹ್ಮವರ್ಚಸಮರ್ಹತಿ ಪ್ರಾಪ್ನೋ-
ತೀತ್ಯರ್ಥಃ ||

ಫಲಪ್ರಾಪ್ತಿಗಾಗಿ ಉಪಯೋಗಿಸುವ ಬೇರೆ ಋಕ್ಕನ್ನು ವಿವರಿಸುವರು— ಬೃಹಸ್ಪತೇ ಅತಿ ಯದರ್ಯೋ ಅರ್ಹಾತ್ ಎಂಬುದೇ ಆ ಮಂತ್ರವು. ಈ ಮಂತ್ರದಿಂದಲೂ ಆಶ್ವಿನಶಸ್ತ್ರವನ್ನು ಪರಿಸಮಾಪ್ತಿಗೊಳಿಸಬಹುದು. ಈ ಮಂತ್ರ ಪಠನದಿಂದ ಕಾಮ್ಯಫಲಗಳನ್ನು ಪಡೆಯುವುದಲ್ಲದೆ ತೇಜಸ್ಸನ್ನೂ ಬ್ರಹ್ಮವರ್ಚಸ್ಸನ್ನೂ ಪಡೆಯುವನು.

ದ್ಯುಮದಿತಿ ದ್ಯುಮದಿವ ವೈ ಬ್ರಹ್ಮವರ್ಚಸಂ ವಿಭಾತೀತಿ ವೀವ ವೈ
ಬ್ರಹ್ಮವರ್ಚಸಂ ಭಾತಿ ||

ದ್ವಿತೀಯಪಾದೇ ಪ್ರಥಮಪಾದಮನೂದ್ಯ ವ್ಯಾಚಷ್ಟೇ— ದ್ಯುಮದ್ವಿಭಾತಿ ಕ್ರತುಮಜ್ಜ-
ನೇಷ್ವಿತಿ ದ್ವಿತೀಯಃ ಪಾದಃ|| ಬ್ರಹ್ಮವರ್ಚಸವಿಶೇಷಣತ್ವೇನ ದ್ಯುತಿಮತ್ಪರ್ಯಾಯೋ ದ್ಯುಮ-
ದಿತಿ ಶಬ್ದಃ ಪ್ರಯುಜ್ಯತೇ— ಶ್ರುತಾಧ್ಯಯನಸಂಪತ್ತಿರೂಪಂ ಬ್ರಹ್ಮವರ್ಚಸಂ ವಿದ್ವತ್ಸಭಾಯಾಂ
ದ್ಯುಮದಿವ ವೈ ಪ್ರಕಾಶಯುಕ್ತಮೇವ ಭೂತ್ವಾ ವಿಭಾತಿ ಸರ್ವೇಷಾಮೇವ ಭಾಸತೇ ಇತಿ ತಸ್ಯ
ಪದಸ್ಯ ತಾತ್ಪರ್ಯಂ || ಏತತ್ಪಾದಶಂಸನೇ ಬ್ರಹ್ಮವರ್ಚಸಂ ವೀವ ವೈ ವಿಶೇಷೇಣೈವ ಭಾತಿ ||

ಈ ಋಕ್ಕಿನ ಎರಡನೆಯ ಪಾದವನ್ನು ಪ್ರಶಂಸೆ ಮಾಡುವರು. ದ್ಯುಮದ್ವಿಭಾತಿ ಕ್ರತುಮಜ್ಜನೇಷು ಎಂಬುವುದೇ ಎರಡನೆಯ ಪಾದವು. ದ್ಯುಮತ್ ಎಂಬ ಶಬ್ದವು ಬ್ರಹ್ಮವರ್ಚಸಶಬ್ದಕ್ಕೆ ವಿಶೇಷಣಪದವು. ಬ್ರಹ್ಮವರ್ಚಸ್ಸೆಂದರೆ ಶ್ರುತಾಧ್ಯಯನ ಸಂಪತ್ತಿಯು. ಇಂತಹ ಬ್ರಹ್ಮವರ್ಚಸ್ಸಿನಿಂದ ಕೂಡಿದ ಪುರುಷನು ವಿದ್ವತ್ಸಭೆಯಲ್ಲಿ ತನ್ನ ವಿದ್ವತ್ತಿನಿಂದ ಬಹಳವಾಗಿ ಪ್ರಕಾಶಿಸುವನು ಎಂದರೆ ಪ್ರಶಂಸಿಸಲ್ಪಡುವನು.

ಯದ್ದೀದಯಚ್ಛವಸ ಋತಪ್ರಜಾತೇತಿ ದೀದಾಯೇವ ವೈ ಬ್ರಹ್ಮ-
ವರ್ಚಸಂ |

ತೃತೀಯಪಾದಮನೂದ್ಯ ವ್ಯಾಚಷ್ಟೇ— ಅಸ್ಮಿನ್ನಪಿ ಪಾದೇ ಬ್ರಹ್ಮವರ್ಚಸವಿಶೇಷಣತ್ವೇನ
ದೀಪ್ಯಮಾನತ್ವವಾಚಕಂ ದೀದಯದಿತಿ ಪದಮಸ್ತಿ ಬ್ರಹ್ಮವರ್ಚಸಂ ದೀದಾಯೇವ ವೈ ಬ್ರಾಹ್ಮ-
ಣೇಷು ದೀಪ್ಯತ ಏವೇತಿ ತಸ್ಯ ಪಾದಸ್ಯಾರ್ಥಃ ||

ಮೂರನೇ ಪಾದವನ್ನು ವಿವರಿಸುವರು. ಯದ್ದೀದಯಚ್ಛವಸ ಋತಪ್ರಜಾತ ಎಂಬುದೇ ತೃತೀಯಪಾದವು. ಈ ಪಾದವಲ್ಲಿ ದೀದಾಯ ಮೊದಲಾದ ಪದಗಳಿಂದ ಬ್ರಹ್ಮವರ್ಚಸೆಂಬ ಕಾಂತಿಯು ಶ್ರುತಾಧ್ಯಯನಸಂಪನ್ನನಾದ ಬ್ರಾಹ್ಮಣನಲ್ಲಿ ಬೆಳಗುತ್ತಿರುವುದೆಂಬ ವಿಷಯವು ಉಕ್ತವಾಗಿದೆ.

**ತದಾಸ್ಮಾಸು ದ್ರವಿಣಂ ಧೇಹಿ ಚಿತ್ರಮಿತಿ ಚಿತ್ರಮಿವ ವೈ ಬ್ರಹ್ಮ-ವರ್ಚಸಂ ॥**

ಚತುರ್ಥಪಾದಮನೂದ್ಯ ವ್ಯಾಚಷ್ಟೇ—ಅಸ್ಮಿನ್ಪಾದೇ ಯಚ್ಚಿತ್ರವಿಶೇಷಣಂ ತದ್ಯುಕ್ತಮೇವ ಬ್ರಹ್ಮವರ್ಚಸಸ್ಯ ವೇದೇನ ಶಾಸ್ತ್ರೇಣಾಽಽಚಾರೇಣ ಚ ವಿಚಿತ್ರತ್ವಾತ್ ॥

ನಾಲ್ಕನೆಯ ಪಾದವನ್ನು ವಿವರಿಸುವರು—ತದಸ್ಮಾಸು ದ್ರವಿಣಂ ಧೇಹಿ ಚಿತ್ರಂ ಎಂಬುವುದು ನಾಲ್ಕನೆಯ ಪಾದವು. ಈ ಪಾದದಲ್ಲಿ ಬ್ರಹ್ಮವರ್ಚಸ್ಸು ಚಿತ್ರವಿಚಿತ್ರವಾಗಿದೆಯೆಂದು ವರ್ಣಿಸಲ್ಪಟ್ಟಿದೆ. ಏಕೆಂದರೆ ಶಾಸ್ತ್ರಾದಿಗಳಿಂದ ಲಭಿಸುವ ವರ್ಚಸ್ಸೂ ಅಧ್ಯಯನಾದಿಗಳಿಂದ ಲಭಿಸುವ ವರ್ಚಸ್ಸೂ ಚಿತ್ರವಿಚಿತ್ರವಾಗಿರುವವು (ಬೇರೆ ಬೇರೆಯಾಗಿರುವವು) ಎಂಬರ್ಥವು ಇಲ್ಲಿ ಉಕ್ತವಾಗಿದೆ. ಇದಲ್ಲದೆ ದ್ರವಿಣಶಬ್ದಕ್ಕೆ ಧನವೆಂದೂ ಅರ್ಥವು. ಚಿತ್ರವಿಚಿತ್ರವಾದ ಧನವೆಂದರೆ, ಪಶುಸಂಪತ್ತು, ಸುವರ್ಣಾದಿಗಳು ಧಾನ್ಯಾದಿರೂಪದಿಂದಿರುವ ಧನವು ಇತ್ಯಾದಿ.

**ಬ್ರಹ್ಮವರ್ಚಸೀ ಬ್ರಹ್ಮಯಶಸೀ ಭವತಿ ಯತ್ರೈವಂ ವಿದ್ವಾನೇತಯಾ ಪರಿದಧಾತಿ ॥ ತಸ್ಮಾದೇವಂ ವಿದ್ವಾನೇತಯಾ ಪರಿದಧ್ಯಾತ್ ॥**

ವೇದನಪೂರ್ವಕಮನುಷ್ಠಾನಂ ಪ್ರಶಂಸತಿ—ಬ್ರಹ್ಮವರ್ಚಸೀ ವೃತ್ತಸಂಪನ್ನಃ ॥ ಬ್ರಹ್ಮ-ವರ್ಚಸೀ ವೃತ್ತಸಂಪನ್ನಃ ॥ ಬ್ರಹ್ಮಯಶಸೀ ತನ್ನಿಮಿತ್ತಕೀರ್ತಿಯುಕ್ತಃ ॥ ಉಕ್ತಮರ್ಥಂ ನಿಗಮಯತಿ ॥

ಈ ಋಕ್ಕನ್ನು ಪಠಿಸಿ ಯಾವ ಪುರುಷನು ಆಶ್ವಿನಶಸ್ತ್ರಮಂತ್ರವನ್ನು ಸಮಾಪ್ತಿಗೊಳಿಸುವನೋ ವಿದ್ವಾಂಸನಾದ ಆ ಪುರುಷನು ಬ್ರಹ್ಮವರ್ಚಸ್ಸನ್ನೂ ಯಶಸ್ಸನ್ನೂ (ಕೀರ್ತಿಯನ್ನು) ಪಡೆದು ಸುಖಿಸುವನು. ಆದ್ದರಿಂದ ವಿದ್ವಾಂಸನಾದ ಪುರುಷನು ಈ ಋಕ್ಕಿನಿಂದಲೇ ಶಸ್ತ್ರಮಂತ್ರವನ್ನು ಸಮಾಪ್ತಿಗೊಳಿಸಬೇಕು (ಕೊನೆಯ ಮಂತ್ರವನ್ನಾಗಿ ಪಠಿಸಬೇಕು).

**ಬ್ರಾಹ್ಮಣಸ್ಪತ್ಯಾ ತೇನ ಸೂರ್ಯಂ ನಾತಿ ಶಂಸತಿ ॥**

ಸೂರ್ಯಸ್ಯಾನತಿಕ್ರಮಂ ದರ್ಶಯತಿ—ಯಸ್ಮಾದಿಯಮೃಗ್ಬ್ರಹ್ಮಣಸ್ಪತಿದೇವತಾಕಾ ಸೂರ್ಯಶ್ಚ ಸಂಧ್ಯೋಪಾಸನಾದೌ ಬ್ರಾಹ್ಮಣಾನಾಂ ಸ್ವಾಮೀ ತಸ್ಮಾನ್ನಾತಿಕ್ರಮಃ ॥

ಬ್ರಹ್ಮಣಸ್ಪತಿದೇವತಾಕವಾದ ಈ ಋಕ್ಕನ್ನು ಬ್ರಾಹ್ಮಣನಾದವನು ಸಂಧ್ಯೋಪಾಸನಾದಿಗಳಲ್ಲಿ ಎಂದರೆ ಸೂರ್ಯೋದಯ ಮತ್ತು ಸೂರ್ಯಾಸ್ತಮಯಕಾಲಗಳಲ್ಲಿ ಪಠಿಸುವುದರಿಂದ ಇಲ್ಲಿಯೂ ಸೂರ್ಯನ ಸ್ತುತಿಯನ್ನು ಅತಿಕ್ರಮಿಸಿದಂತಾಗಲಿಲ್ಲ.

**ಯದು ತ್ರಿಷ್ಟುಭಂ ತ್ರಿಃ ಶಂಸತಿ ಸಾ ಸರ್ವಾಣಿ ಛಂದಾಂಸ್ಯಭಾಪ್ತಾ ತೇನ ಬೃಹತೀಂ ನಾತಿ ಶಂಸತಿ ॥**

ಬೃಹತ್ಯಾ ಅನತಿಕ್ರಮಂ ದರ್ಶಯತಿ—ತ್ರಿಃ ಪ್ರಥಮಾಂ ತ್ರಿರುತ್ತಮಾಮಿತಿ ನ್ಯಾಯೇನ ಪರಿಧಾನೀಯಾಯಾಸ್ತ್ರಿರಾವೃತ್ತಿರಸ್ತೀಯಂ ತ್ರಿಷ್ಟುಪ್ ತ್ರಿರಾವರ್ತ್ಯಮಾನಾ ದ್ವಾತ್ರಿಂಶದಧಿಕ-

**ಶತಾಕ್ಷರಾ ಸಂಪದ್ಯತೇ ॥ ತೇಷ್ವಕ್ಷರೇಷು ಸರ್ವಚ್ಛಂದಸಾಮಂತರ್ಭಾವಯಿತುಂ ಶಕ್ಯತ್ವಾದಿಯಂ ಸರ್ವಾಣಿಚ್ಛಂದಾಸ್ಯಭಿತೋ ವ್ಯಾಪ್ನೋತ್ಯತೋ ಬೃಹತ್ಯಾ ಅಪಿ ತದ್ವ್ಯಾಪ್ತತ್ವಾನ್ನಾತಿಕ್ರಮಃ। ಯದುಕ್ತಂ ಸೂತ್ರಕಾರೇಣ— ಅಶ್ವಿನೇನ ಗ್ರಹೇಣ ಸಪುರೋಳಾಶೇನ ಚರಂತೀತಿ ॥**

**ತ್ರಿಃ ಪ್ರಥಮಾಂ ತ್ರಿರುತ್ತಮಾಮನ್ವಾಹ** ಎಂಬ ನ್ಯಾಯದಂತೆ ಶಸ್ತ್ರಮಂತ್ರಗಳ ಮೊದಲನೆಯ ಮತ್ತು ಕೊನೆಯ ಋಕ್ಕುಗಳನ್ನು ಮೂರು ಮೂರಾವರ್ತಿ ಪಠಿಸಬೇಕೆಂದು ವಿಧಿ ಇರುವುದು. ಆದರಂತೆ ಈ ಕೊನೆಯ ಋಕ್ಕನ್ನು ಮೂರಾವರ್ತಿ ಪಠಿಸುವುದರಿಂದ ನೂರುಮೂವತ್ತೆರಡು (೧೩೨) ಅಕ್ಷರಗಳು ಲಭಿಸುವವು. ಈ ಅಕ್ಷರಗಳಲ್ಲಿ ಯಾವ ಛಂದಸ್ಸು ಸಹ ಸೇರಲು ಸಾಧ್ಯವು. ಆದ್ದರಿಂದ ಸಮಸ್ತಛಂದಸ್ಸುಗಳನ್ನು ಒಳಗೊಂಡ ಈ ಅಕ್ಷರಸಮೂಹದಲ್ಲಿ ಬೃಹತೀ ಛಂದಸ್ಸೂ ಸೇರಿರುವುದರಿಂದ ಇಲ್ಲಿಯೂ ಬೃಹತೀಛಂದಸ್ಸನ್ನು ಅತಿಕ್ರಮಮಾಡಿಲ್ಲವೆಂದಭಿಪ್ರಾಯವು. ಮತ್ತು ಸೂತ್ರಕಾರರು — **ಅಶ್ವಿನೇನ ಗ್ರಹೇಣ ಸಪುರೋಳಾಶೇನ ಚರಂತೀತಿ** ಎಂದು ಹೇಳಿರುವರು.

## ಗಾಯತ್ರ್ಯಾ ಚ ತ್ರಿಷ್ಟುಭಾ ಚ ವಷಟ್ಕುರ್ಯಾತ್ ॥

**ತತ್ರೋಭಯಾರ್ಥಂ ದ್ವೇ ಯಾಜ್ಯೇ ವಿಧತ್ತೇ—ಉಭಾ ಪಿಬತಮಶ್ವಿನೇತಿ ಗಾಯತ್ರೀ ॥ ಅಶ್ವಿನಾ ವಾಯುನೇತಿ ತ್ರಿಷ್ಟುಪ್ ॥ ತಾಭ್ಯಾಂ ವಷಟ್ಕುರ್ಯಾತ್ ॥ ಯಾಜ್ಯಾತ್ವೇನ ತದು-ಭಯಂ ಪಠೇದಿತ್ಯರ್ಥಃ ॥**

ಈ ಆಶ್ವಿನಶಸ್ತ್ರಮಂತ್ರಗಳ ಅಂತ್ಯದಲ್ಲಿ ಪಠಿಸುವ ಎರಡು ಯಾಜ್ಯಾಮಂತ್ರಗಳನ್ನು ವಿವರಿಸುವರು. **ಉಭಾ ಪಿಬತ-ಮಶ್ವಿನಾ** (ಋ. ಸಂ. ೧-೪೭-೧೫) ಎನ್ನುವ ಮಂತ್ರವು ಗಾಯತ್ರೀಛಂದಸ್ಸಿನ ಯಾಜ್ಯಾಮಂತ್ರವು. **ಅಶ್ವಿನಾ ವಾಯುನಾ ಯುವಂ** ಎಂಬ ಮಂತ್ರವು (ಋ. ಸಂ ೩-೫೮-೭) ತ್ರಿಷ್ಟುಪ್ ಛಂದಸ್ಕವು. ಈ ಎರಡು ಯಾಜ್ಯಾಮಂತ್ರಗಳನ್ನು ವಷಟ್ಕಾರ ಪೂರ್ವಕವಾಗಿ ಪಠಿಸಬೇಕು.

## ಬ್ರಹ್ಮ ವೈ ಗಾಯತ್ರೀ ವೀರ್ಯಂ ತ್ರಿಷ್ಟುಬ್ಬ್ರಹ್ಮಣ್ಯೈವ ತದ್ವೀರ್ಯಂ ಸಂದಧಾತಿ ॥

**ತದೇತದುಭಯಂ ಪ್ರಶಂಸತಿ— ಗಾಯತ್ರ್ಯಾ ಬ್ರಾಹ್ಮಣಸ್ಯ ಚ ಪ್ರಜಾಪತಿಮುಖಜತ್ವ-ಸಾಮ್ಯಾದೇಕತ್ವಂ ತ್ರಿಷ್ಟುಭೋ ವೀರ್ಯಹೇತುತ್ವಾತ್ತದ್ರೂಪತ್ವಂ । ತದುಭಯಪಾಠೇ ಸತಿ ಬ್ರಾಹ್ಮಣ್ಯೇನ ಸಹ ವೀರ್ಯಂ ಸಂಪಾದಯತಿ ॥**

ಮೇಲೆ ಹೇಳಿದ ಎರಡು ಯಾಜ್ಯಾಮಂತ್ರಗಳನ್ನೂ ಪ್ರಶಂಸೆಮಾಡುವರು. ಗಾಯತ್ರಿಯೂ ಬ್ರಾಹ್ಮಣನೂ ಪ್ರಜಾಪತಿಯ ಮುಖದಿಂದ ಉತ್ಪನ್ನರಾದುದರಿಂದ ಇವರಿಗೆ ಸಂಬಂಧವಿರುವುದು ತ್ರಿಷ್ಟುಪ್‌ಛಂದಸ್ಸಿಗೆ ವೀರ್ಯವನ್ನುಂಟುಮಾಡುವ ಸಾಮರ್ಥ್ಯವಿರುವುದು ಆದ್ದರಿಂದ ಈ ಎರಡು ಋಕ್ಕುಗಳನ್ನು ಪಠಿಸುವುದರಿಂದ ಯಜಮಾನನು ಬ್ರಾಹ್ಮಣ್ಯವನ್ನೂ ವೀರ್ಯವನ್ನೂ ಪಡೆಯುವನು.

## ಬ್ರಹ್ಮವರ್ಚಸೀ ಬ್ರಹ್ಮಯಶಸೀ ವೀರ್ಯವಾನ್ಭವತಿ ಯತ್ರೈವಂ ವಿದ್ವಾ-ನ್ಗಾಯತ್ರ್ಯಾಚ ತ್ರಿಷ್ಟುಭಾ ಚ ವಷಟ್ಕರೋತಿ ॥

**ವೇದನಪೂರ್ವಕಮನುಷ್ಠಾನಂ ಪ್ರಶಂಸತಿ—**

ಯಾಜ್ಯಾಮಂತ್ರದ ಅನುಷ್ಠಾನವನ್ನು ಪ್ರಶಂಸೆಮಾಡುವರು—ವಿದ್ವಾಂಸನಾದ ಎಂದರೆ ಯಜ್ಞಪ್ರಯೋಗವನ್ನು ತಿಳಿದಿರುವ ಯಾವ ಪುರುಷನು ಮೇಲೆ ಹೇಳಿದಂತೆ ಗಾಯತ್ರೀಛಂದಸ್ಸಿನಿಂದಲೂ ತ್ರಿಷ್ಟುಪ್ ಛಂದಸ್ಸಿನಿಂದಲೂ ವಷಟ್ಕಾರ ಮಂತ್ರವನ್ನು ಪಠಿಸಿ ಯಾಜ್ಯಾಹೋಮವನ್ನು ಮಾಡುವನೋ ಆ ಪುರುಷನು ಬ್ರಹ್ಮವರ್ಚಸ್ಸನ್ನೂ ಕೀರ್ತಿಯನ್ನು ಪಡೆದು ಸುಖಿಸುವನು.

## ಅಶ್ವಿನಾ ವಾಯುನಾ ಯುವಂ ಸುದಕ್ಷೋಭಾ ಪಿಬತಮಶ್ವಿನೇತಿ ।

**ತದುಕ್ತಯೋರ್ಗಾಯತ್ರೀತ್ರಿಷ್ಟುಭೋಃ ಪ್ರತೀಕದ್ವಯಂ ದರ್ಶಯತಿ—ಅಶ್ವಿನೇತ್ಯಾದಿಕಂ ತ್ರಿಷ್ಟುಭಃ ಪ್ರತೀಕಮುಭಾ ಪಿಬತಮಿತ್ಯಾದಿಕಂ ಗಾಯತ್ರ್ಯಾಃ ಪ್ರತೀಕಂ ಏತೇ ತ್ರಿಷ್ಟುಬ್ಗಾಯತ್ರ್ಯೌ ಯಾಜ್ಯೇ ಇತ್ಯೇಕಃ ಪಕ್ಷಃ ॥**

ಇಲ್ಲಿ **ಅಶ್ವಿನೇತ್ಯಾದಿಕ** ಮಂತ್ರವು ತ್ರಿಷ್ಟುಪ್‌ಛಂದಸ್ಸಿನ ಪ್ರತೀಕವು (ಸಂಕೇತವು) **ಉಭಾಪಿಬತಂ** ಎಂಬ ಮಂತ್ರವು ಗಾಯತ್ರೀಛಂದಸ್ಸಿನ ಪ್ರತೀಕವು. ಆದ್ದರಿಂದ ಇಲ್ಲಿ ತ್ರಿಷ್ಟುಪ್ ಮತ್ತು ಗಾಯತ್ರೀಛಂದಸ್ಸಿನ ಯಾಜ್ಯಾಮಂತ್ರಗಳಿರುವವು ಎಂದಭಿಪ್ರಾಯವು. ಇದು ಒಂದು ಪಕ್ಷವು (ಎಂದರೆ ಕೆಲವರ ಅಭಿಪ್ರಾಯವು)

## ಗಾಯತ್ರ್ಯಾ ಚ ವಿರಾಜಾ ಚ ವಷಟ್ಕುರ್ಯಾದ್ಬ್ರಹ್ಮ ವೈ ಗಾಯತ್ರ್ಯನ್ನಂ ವಿರಾಡ್ಬ್ರಹ್ಮಣೈವ ತದನ್ನಾದ್ಯಂ ಸಂದಧಾತಿ ॥

**ಪಕ್ಷಾಂತರಂ ವಿಧತ್ತೇ—ಗಾಯತ್ರ್ಯಾ ಬ್ರಹ್ಮತ್ವಂ ಪೂರ್ವಮುಕ್ತಂ ವಿರಾಜೋಽನ್ನಸಾಧನತ್ವಾದನ್ನಸಾಧನತ್ವಂ । ಅತಸ್ತದುಭಯಪಾಠೇ ಸತ್ಯನಾದ್ಯಮಾದ್ಯಮನ್ನಂ ಬ್ರಾಹ್ಮಣಜಾತ್ಯಾ ಸಂಯೋಜಯತಿ ॥**

ಬೇರೆ ಕೆಲವರ ಅಭಿಪ್ರಾಯವನ್ನು ತಿಳಿಸುವರು—ಗಾಯತ್ರೀಛಂದಸ್ಸಿನಿಂದಲೂ ವಿರಾಟ್ ಛಂದಸ್ಸಿನಿಂದಲೂ ವಷಟ್ಕಾರ ಪೂರ್ವಕವಾಗಿ ಯಾಜ್ಯಾಮಂತ್ರಗಳನ್ನು ಪಠಿಸಬೇಕೆಂದು ಕೆಲವರ ಮತವು. ಗಾಯತ್ರಿಯು ಬ್ರಹತ್ವದ ಸಂಕೇತವು. ವಿರಾಟ ಛಂದಸ್ಸು ಅನ್ನಸಂಕೇತವು. ಆದ್ದರಿಂದ ಈ ಎರಡು ಛಂದಸ್ಸಿನ ಮಂತ್ರಗಳನ್ನು ವಷಟ್ಕಾರಸಹಿತವಾಗಿ ಹೋಮಮಾಡಿದಲ್ಲಿ ಯಜಮಾನನನ್ನು ಬ್ರಾಹ್ಮಣಜಾತಿ ಮತ್ತು ಅನ್ನಾದ್ಯತ್ವಗಳಿಂದ ಸೇರಿಸಿದಂತಾಗುವುದು.

## ಬ್ರಹ್ಮವರ್ಚಸೀ ಬ್ರಹ್ಮಯಶಸೀ ಭವತಿ ಬ್ರಹ್ಮಾದ್ಯಮನ್ನಮತ್ತಿ ಯತ್ರೈವಂ ವಿದ್ವಾನ್ಗಾಯತ್ರ್ಯಾ ಚ ವಿರಾಜಾ ಚ ವಷಟ್ಕರೋತಿ ॥

**ವೇದನಪೂರ್ವಕಮನುಷ್ಠಾನಂ ಪ್ರಶಂಸತಿ—ಬ್ರಾಹ್ಮಣೇನಾತ್ತುಂ ಯೋಗ್ಯಂ ಪವಿತ್ರೀಭೂತಂ ಬ್ರಹ್ಮಾದ್ಯಂ ॥**

ಮೇಲೆ ಹೇಳಿದಂತೆ ಅನುಷ್ಠಾನಮಾಡುವ ಪುರುಷನನ್ನು ಪ್ರಶಂಸೆಮಾಡುವರು. ಬ್ರಾಹ್ಮಣನು ಭಕ್ಷಿಸಲು ಯೋಗ್ಯವಾದ ಆಹಾರಕ್ಕೆ ಬ್ರಹ್ಮಾದ್ಯಂ ಎಂದು ಹೆಸರು ಯಾವ ಪುರುಷನು ಗಾಯತ್ರೀಛಂದಸ್ಸಿನಿಂದಲೂ, ವಿರಾಟ್‌ಛಂದಸ್ಸಿನಿಂದಲೂ ವಷಟ್ಕಾರ

ಸಹಿತವಾಗಿ ಯಾಜ್ಯಾಹುತಿಗಳನ್ನು ಅರ್ಪಿಸುವನೋ ಆ ಪುರುಷನು ಬ್ರಾಹ್ಮಣನಾದವನು ಭಕ್ಷಿಸಲು ಯೋಗ್ಯವಾದ ಮತ್ತು ಪವಿತ್ರವಾದ ಆಹಾರವನ್ನು ಭಕ್ಷಿಸುತ್ತಾ ಬ್ರಹ್ಮವರ್ಚಸ್ಸನ್ನೂ ಕೀರ್ತಿಯನ್ನೂ ಪಡೆದು ಸುಖಿಸುವನು.

**ತಸ್ಮಾದೇವಂ ನಿದ್ವಾನ್ಗಾಯತ್ರ್ಯಾ ವಿರಾಜಾ ಚ ವಷಟ್ಕುರ್ಯಾತ್ಪ್ರ ವಾನುಂಧಾಂಸಿ ಮದ್ಯಾನ್ಯಸ್ಥುರುಭಾ ಪಿಬತಮಶ್ವಿನೇತ್ಯೇತಾಭ್ಯಾಂ ॥**

**ತಯೋರ್ಗಾಯತ್ರೀವಿರಾಜೋಃ ಪ್ರತೀಕಪ್ರದರ್ಶನಪುರಃಸರಮೇತಂ ಪಕ್ಷಂ ನಿಗಮಯತಿ—ಪ್ರವಾಮಂಧಾಂಸೀತಿ ವಿರಾಟ್ ॥ ಉಭಾಪಿಬತಮಿತಿ ಗಾಯತ್ರೀ ॥ ಗಾಯತ್ರ್ಯಾ ಚೈವ ವಿರಾಜಾ ಚೈವೇತ್ಯೇವಕಾರೇಣ ಪೂರ್ವೋಕ್ತಸ್ಯ ತ್ರಿಷ್ಟುಪ್ಪಕ್ಷಸ್ಯ ವ್ಯಾವೃತ್ತಿಃ ॥ ತಸ್ಮಾದಪಿ ವಿರಾಟ್ಪಕ್ಷಃ ಪ್ರಶಸ್ತ ಇತ್ಯರ್ಥಃ ॥**

ಇಲ್ಲಿ **ಪ್ರವಾಮಂಧಾಂಸಿ ಮದ್ಯಾನಿ** (ಋ. ಸಂ ೭-೬೮-೨) ಎಂಬ ಋಕ್ಕು ವಿರಾಟ್ ಛಂದಸ್ಕವು **ಉಭಾ ಪಿಬತಂ** (ಋ. ಸಂ. ೧-೪೬-೧೫) ಎಂಬುದು ಗಾಯತ್ರೀಛಂದಸ್ಕವು. ಈ ಗಾಯತ್ರೀ ಮತ್ತು ವಿರಾಟಛಂದಸ್ಸಿನ ಮಂತ್ರಗಳ ಮೇಲನದಿಂದ ಹಿಂದೆ ಹೇಳಿದಂತೆ ಅನುಷ್ಟುಪ್ ಛಂದಸ್ಸಿನ ಮಂತ್ರಗಳನ್ನು ಪಡೆದಂತಾಗುವುದು. ಆದ್ದರಿಂದ ಗಾಯತ್ರೀ ಮತ್ತು ವಿರಾಟ್‌ಛಂದಸ್ಸಿನ ಮಂತ್ರಗಳನ್ನು ಉಪಯೋಗಿಸಬೇಕೆಂಬುವ ಪಕ್ಷವೇ (ಅಭಿಮತವೇ) ಪ್ರಶಸ್ತವು ಎಂದರ್ಥವು.

*English Translation*

**The concluding verses of the Asvin Shastra. The two Yajyas of it. In what metre they ought to be.**

The Hotar concludes with a verse addressed to Brahmanaspati. For Brahma is Brihaspati. By repeating such a verse he puts the sacrificer in the Brahma. He who wishes for children and cattle should conclude with evapitre Viswadevaya (4, 50, 6). For on account of its containing the words "O Brihaspati, might we be blessed with children and strong men, might we become owners of riches." That man becomes blessed with children, cattle and riches, and strong men, at whose sacrifice there is a Hotar, knowing that he must conclude with this verse (in order to obtain this object wished for).

He who wishes for beauty and acquirement of sacred knowledge ought to conclude with, Brihaspate atiyad (2, 23, 15). Here the word ati, i.e. beyond, means that he acquires more of sacred knowledge than other men do. The term dyumat in the second pada means—"acquirement of sacred knowledge" and Vibati means, that the sacred knowledge shines everywhere, as it were. The term didayat in the third pada means, that the sacred knowledge has been

shining forth in the Brahmanas. The term chitra (in the fourth pada), means that the sacred knowledge is, as it were, apparent (chitram).

He at whose sacrifice there is a Hotar knowing that he must conclude with this verse, becomes endowed with sacred knowledge and famous for sanctity. Thence a Hotar who has such a knowledge ought to conclude with this Brahmanaspati verse. By repeating it he does not pass over the sun. The Trishtubh when repeated thrice, comprises all metres. In this way he does not pass over the Brihati by repeating this Trishtubh.

He ought to pronounce the formula Vaushat along with a verse in the Gayatri, and one in the Trishtubh metre. Gayatri is the Brahma, and Trishtubh is strength. By doing so he joins strength to the Brahma.

He at whose sacrifice there is a Hotar knowing that he in order to obtain the objects mentioned must pronounce the formula Vaushat with a verse in the Gayatri, and one in the Trishtubh metre, becomes endowed with sacred knowledge and strength, and famous for sanctity. The Trishtubh verse is asvina vayuna yuvam (3. 58, 7); The Gayatri is ubha pibatam (1, 46, 15).

There is another way of pronouncing the formula Vaushat.

He ought to pronounce the formula Vaushat along with a verse in the Gayatri, and one in the Virat metre. For Gayatri is Brahma, and Virat is food. By doing so he joins food to the Brahma.

He at whose sacrifice there is a Hotar knowing that he must pronounce the formula Vaushat along with a verse in the Gayatri, and one in the Virat metre, becomes endowed with sacred knowledge, and famous for sanctity and eats Brahma food (i.e. pure food). Therefore one who has such a knowledge ought to pronounce the formula Vaushat along with a verse in the Gayatri, and one in the Trishtubh metre. They are, pra vam andhamsi (7, 68, 2, Virat), and ubha pibtam (1, 46, 15, Gayatri).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಸಪ್ತದಶಾಧ್ಯಾಯಸ್ಯ ಪಂಚಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನೇಳನೆಯ ಅಧ್ಯಾಯದಲ್ಲಿ ಐದನೆಯ ಖಂಡವು
ಸಮಾಪ್ತವಾದುದು.



# ಅಥ ಸಪ್ತದಶಾಧ್ಯಾಯೇ ಷಷ್ಠಃ ಖಂಡಃ

## ಹದಿನೇಳನೆಯ ಅಧ್ಯಾಯದಲ್ಲಿ ಆರನೆಯ ಖಂಡವು



[ಸತ್ರವೆಂಬ ದೀರ್ಘಕಾಲ ಮಾಡುವ ಯಾಗದಲ್ಲಿ (ಗವಾಮಯನ) ಚತುರ್ವಿಂಶವೆಂಬ ಹೆಸರಿನ ದಿನದಲ್ಲಿ ಅನುಸರಿಸಬೇಕಾದ ಕಾರ್ಯಕಲಾಪಗಳು.]



**ಅಗ್ನಿಷ್ಟೋಮ ಉಕ್ಥ್ಯಃ ಷೋಡಶ್ಯತಿರಾತ್ರಶ್ಚೇತ್ಯೇವಂ ಚತುಃಸಂಸ್ಥೋ ಜ್ಯೋತಿಷ್ಟೋಮಃ ಸಾರ್ಧೇನಾಧ್ಯಾಯಷೋಡಶಕೇನಾಭಿಹಿತಃ ॥ ಅಥೈತಚ್ಚತುಷ್ಟಯಮುಪಜೀವ್ಯ ಪ್ರವರ್ತಮಾನಂ ಗವಾಮಯನನಾಮಕಂ ಸಂವತ್ಸರಸತ್ರಮಭಿಧಾತವ್ಯಂ ॥ ಸಂವತ್ಸರಗತೇಷು ಷಷ್ಟ್ಯಧಿಕಶತತ್ರಯದಿವಸೇಷ್ವೇಕೈಕಸ್ಮಿನ್ದಿವಸೇ ಪೂರ್ವೋಕ್ತಾನಾಂ ಚತಸೃಣಾಂ ಸಂಸ್ಥಾನಾಂ ಮಧ್ಯೇ ಕಯಾಚಿತ್ಸಂಸ್ಥಯಾ ಯುಕ್ತಃ ಸೋಮಪ್ರಯೋಗಃ ಸರ್ವೋಽಪ್ಯನುಷ್ಠೇಯಃ । ಸೋಽಯಮೇಕೈಕದಿನಸಾಧ್ಯಃ ಸೋಮಪ್ರಯೋಗೋ ವೇದೇಷ್ವಹಃಶಬ್ದೇನ ವ್ಯವಹ್ರಿಯತೇ ಸಂವತ್ಸರಸತ್ರಸ್ಯಾದ್ಯೇ ದಿವಸೇ ಕಶ್ಚಿದತಿರಾತ್ರಸಂಸ್ಥಃ ಸೋಮಪ್ರಯೋಗೋಽನುಷ್ಠೇಯಃ ॥ ತದನಂತರಭಾವಿನಿ ದ್ವಿತೀಯದಿವಸೇಽನುಷ್ಠೇಯಂ ಸೋಮಪ್ರಯೋಗಂ ವಿಧತ್ತೇ ॥**

ಇದುವರೆಗೂ ಈ ಗ್ರಂಥದ ಹದಿನಾರೂವರೆ ಅಧ್ಯಾಯಗಳಲ್ಲಿ ಅಗ್ನಿಷ್ಟೋಮ, ಉಕ್ಥ್ಯ, ಷೋಡಶೀ, ಅತಿರಾತ್ರ ಎಂಬ ನಾಲ್ಕು ಪ್ರಭೇದಗಳಿಂದ ಸಹಿತವಾದ ಜ್ಯೋತಿಷ್ಟೋಮಯಾಗದ ಸ್ವರೂಪವನ್ನು ಹೇಳಿದ್ದಾಯಿತು. ಈಗ ಈ ನಾಲ್ಕು ವಿಧ ಸಂಸ್ಥೆಗಳನ್ನು ಅಳವಡಿಸಿಕೊಂಡಿರುವ ಗವಾಮಯನವೆಂಬ ಹೆಸರಿನ ಒಂದು ಸಂವತ್ಸರದವರೆಗೂ ಮಾಡಲ್ಪಡುವ ಸತ್ರವೆಂಬ ದೀರ್ಘಕಾಲದ ಯಾಗವನ್ನು ವಿವರಿಸಲಾಗುವುದು. ಒಂದು ಸಂವತ್ಸರಕಾಲದಲ್ಲಿ ಇರುವ ಮುನ್ನೂರ ಅರವತ್ತು (೩೬೦) ದಿನಗಳಲ್ಲಿ ಪ್ರತಿಯೊಂದು ದಿವಸದಲ್ಲಿಯೂ ಮೇಲೆ ಹೇಳಿದ ನಾಲ್ಕು ಸಂಸ್ಥೆ (ಯಜ್ಞ)ಗಳಲ್ಲಿ ಯಾವುದಾದರೂ ಒಂದರಿಂದ ಸಹಿತವಾದ ಸೋಮಪ್ರಯೋಗವನ್ನು ಅನುಷ್ಠಾನ ಮಾಡಬೇಕು. ಈ ಸೋಮಪ್ರಯೋಗವನ್ನು ಒಂದು ದಿನದಲ್ಲಿ ಮಾಡಿ ಮುಗಿಸುವಂತಿರಬೇಕು. ಪ್ರಯೋಗದಲ್ಲಿ ಈ ಅನುಷ್ಠಾನಕ್ಕೆ ಅಹಃ ಒಂದು ಹಗಲಿನಲ್ಲಿ ಮಾಡಲ್ಪಡುವ ಸೋಮಪ್ರಯೋಗ ಎಂಬ ಹೆಸರು ರೂಢಿಯಲ್ಲಿರುವುದು. ಒಂದು ಸಂವತ್ಸರದವರೆಗೂ ನಡೆಯುವ ಈ ಸತ್ರಯಾಗದ ಮೊದಲನೇ ದಿನದಲ್ಲಿ ಅತಿರಾತ್ರ ಎಂಬ ಸೋಮಪ್ರಯೋಗವನ್ನು (ಯಜ್ಞ) ಮಾಡಬೇಕು. ಅನಂತರ ಎರಡನೇ ದಿವಸದಲ್ಲಿ ಮಾಡಬೇಕಾದ ಸೋಮಪ್ರಯೋಗವನ್ನು (ಯಜ್ಞದ ಕಾರ್ಯಕಲಾಪಗಳನ್ನು) ಇಲ್ಲಿಂದ ಮುಂದೆ ಹೇಳಲಾಗುವುದು.

### ಚತುರ್ವಿಂಶಮೇತದಹರುಪಯಂತ್ಯಾರಂಭಣೀಯಂ ॥

ಚತುರ್ವಿಂಶತಿನಾಮಕಃ ಕಶ್ಚಿತ್ಸೋಮವಿಶೇಷಃ ॥ ಸ ಚ ಛಂದೋಗೈರೇವಮಾಮ್ನಾಯತೇ—

“ಅಷ್ಟಾಭ್ಯೋ ಹಿಂಕರೋತಿ ಸ ತಿಸೃಭಿಃ ಸ ಚತಸೃಭಿಃ ಸ ಏಕಯಾ॥ ಅಷ್ಟಾಭ್ಯೋ ಹಿಂಕರೋತಿ

**ಸ ಏಕಯಾ ಸ ತಿಸೃಭಿಃ ಸ ಚತಸೃಭಿಃ ॥ ಅಷ್ಟಾಭ್ಯೋ ಹಿಂ ಕರೋತಿ ಸ ಚತಸೃಭಿಃ ಸ ಏಕಯಾ ಸ ತಿಸೃಭಿಃ " ಇತಿ ॥ ಅಸ್ಯಾಯಮರ್ಥಃ ॥ ಸ್ತೋತ್ರಸ್ಯಾಧಾರಭೂತೇ ತ್ಯೃಚೇ ವಿದ್ಯಮಾನಾಸ್ತಿಸ್ರ ಋಚ ಆವೃತ್ತಿವಿಶೇಷೇಣ ಚತುರ್ವಿಂಶತಿಸಂಖ್ಯಾಕಾ ಋಚಃ ಕರ್ತವ್ಯಾಃ ॥ ಸಾ ಚಾಽಽವೃತ್ತಿಸ್ತ್ರಿಭಿಃ ಪರ್ಯಾಯೈಃ ಸಂಪದ್ಯತೇ ॥ ತತ್ರ ಪ್ರಥಮೇ ಪರ್ಯಾಯೇ ಪ್ರಥಮಾಮೃಚಂ ತ್ರಿರಭ್ಯಸ್ಯ ಸ ಉದ್ಗಾತಾ ತಾಭಿಸ್ತಿಸೃಭಿರ್ಗಾಯೇತ್ ॥ ದ್ವಿತೀಯಾಮೃಚಂ ಚತುರ್ವಾರಮಭ್ಯಸ್ಯ ತಾಭಿಶ್ಚತಸೃಭಿರ್ಗಾಯೇತ್ ॥ ತೃತೀಯಾಯಾ ಋಚಃ ಸಕೃದೇವ ಪಾಠೋ ನ ಚಾಽಽವೃತ್ತಿಃ ॥ ಏವಂ ಪ್ರಥಮಪರ್ಯಾಯೇಽಷ್ಟೌ ಋಚಃ ಸಂಪದ್ಯಂತೇ॥ತಾಭಿರ್ಹಿಂ ಕರೋತ್ಯುದ್ಗಾಯೇತ್ ॥ ದ್ವಿತೀಯಪರ್ಯಾಯೇ ಪ್ರಥಮಾಯಾಃ ಸಕೃತ್ಪಾಠಃ ದ್ವಿತೀಯಾಯಾಸ್ತ್ರಿರಾವೃತ್ತಿಃ ॥ ತೃತೀಯಾಯಾಶ್ಚತುರಾವೃತ್ತಿರೇವಮತ್ರಾಪ್ಯಷ್ಟೌ ಸಂಪದ್ಯಂತೇ ॥ ತೃತೀಯಪರ್ಯಾಯೇ ಪ್ರಥಮಾಯಾಶ್ಚತುರಾವೃತ್ತಿರ್ದ್ವಿತೀಯಾಯಾಃ ಸಕೃತ್ಪಾಠಸ್ತೃತೀಯಾಯಾಸ್ತ್ರಿರಾವೃತ್ತಿರಿತ್ಯೇವಮತ್ರಾಪ್ಯಷ್ಟೌ ಸಂಪದ್ಯಂತೇ ॥ ತತ್ಸರ್ವಂ ಮಿಲಿತ್ವಾ ಚತುರ್ವಿಂಶತಿಸಂಖ್ಯಾ ಋಚೋ ಭವಂತಿ॥ ಸೋಽಯಂ ಚತುರ್ವಿಂಶತಿಸ್ತೋಮೋಽನೇನ ಸ್ತೋತ್ರಾಣಿ ಯಸ್ಮಿನ್ನಹನಿ ನಿಷ್ಪಾದ್ಯಂತೇ ತದಹಶ್ಚತುರ್ವಿಂಶತಾ ದಶಮೇ ತದಹರುಪಯಂತ್ಯನುತಿಷ್ಠೇಯುಃ ॥ ಅತ್ರ ಸತ್ರೇಷು ಸರ್ವತ್ರೋಪಯಂತ್ಯಾಸತ ಇತಿ ಶಬ್ದಾವನುಷ್ಠಾನಪದಾವೇತಾಭ್ಯಾಂ ವಿಧಾನಮೇವ ಸತ್ರತ್ವಲಿಂಗಂ ॥ ತತ್ರ ಯೇ ಯಜಮಾನಾಸ್ತ ಋತ್ವಿಜ ಇತಿ ಶ್ರುತ್ಯಂತರಾದೃತ್ವಿಜಾಂ ಸರ್ವೇಷಾಂ ಯಜಮಾನತ್ವೇನೋಪಯಂತೀತಿ ಬಹುವಚನಂ ॥ ತಸ್ಯೈತಸ್ಯಾಹ್ನಃ ಆರಂಭಣೀಯಮಿತಿನಾಮಧೇಯಂ ॥**

ಇಲ್ಲಿ ಚತುರ್ವಿಂಶ ಅಥವಾ ಚತುರ್ವಿಂಶತಿ ಎಂಬುದು ಒಂದಾನೊಂದು ದಿವಸದ ಕಾರ್ಯಕ್ರಮಕ್ಕೆ ಹೆಸರು. ಇದನ್ನು ಛಂದೋಗ ಅಥವಾ ಸಾಮಗರು ಹೀಗೆ ಹೇಳುತ್ತಾರೆ—**ಅಷ್ಟಾಭ್ಯೋ ಹಿಂ ಕರೋತಿ ಸ ತಿಸೃಭಿಃ ಸ ಜತಸೃಭಿಃ ಸ ಏಕಯಾ। ಅಷ್ಟಾಭ್ಯೋ ಹಿಂ ಕರೋತಿ ಸ ಏಕಯಾ ಸ ತಿಸೃಭಿಃ ಸ ಚತಸೃಭಿಃ। ಅಷ್ಟಾಭ್ಯೋ ಹಿಂ ಕರೋತಿ ಸ ಚತಸೃಭಿಃ ಸ ಏಕಯಾ ಸ ತಿಸೃಭಿಃ**—ಎಂದು. ಇದರ ಅರ್ಥವು. ಸಾಮಗಾನರೂಪವಾದ ಸ್ತೋತ್ರಕ್ಕೆ ಆಧಾರಭೂತವಾದ ಮೂರು ಋಕ್ಕುಗಳನ್ನು ಬೇರೆ ಬೇರೆ ಆವೃತ್ತಿಗಳಿಂದ ಇಪ್ಪತ್ತುನಾಲ್ಕು (೨೪) ಋಕ್ಕುಗಳು ಲಭಿಸುವವು. ಎಂದರೆ ಮೂರು ಪರ್ಯಾಯಗಳಿಂದ ಈ ಸಂಖ್ಯೆಯು ಲಭಿಸುವುದು. ಪ್ರತಿಯೊಂದು ಪರ್ಯಾಯದಲ್ಲಿಯೂ ಎಂಟೆಂಟು ಋಕ್ಕುಗಳಾಗುವವು. ಅದನ್ನೇ ಇಲ್ಲಿ ಪ್ರಥಮ ಪರ್ಯಾಯದಲ್ಲಿ ಮೊದಲನೇ ಋಕ್ಕನ್ನು ಉದ್ಗಾತೃವು ಮೂರಾವೃತ್ತಿ ಗಾನ ಮಾಡಬೇಕು ಎರಡನೇ ಋಕ್ಕನ್ನು ನಾಲ್ಕಾವರ್ತಿ ಪಠಿಸಿ ನಾಲ್ಕಾವರ್ತಿ ಗಾನಮಾಡಬೇಕು ಮೂರನೆಯ ಋಕ್ಕನ್ನು ಒಂದೇ ಆವರ್ತಿ ಗಾನ ಮಾಡಬೇಕು. ಇದನ್ನೇ ಮೇಲೆ **ಅಷ್ಟಾಭ್ಯೋ ಹಿಂಕರೋತಿ ಸ ತಿಸೃಭಿಃ ಸ ಚತಸೃಭಿಃ ಸ ಏಕಯಾ** ಎಂದು ಹೇಳಿರುವುದು. ಆದ್ದರಿಂದ ಪ್ರಥಮ ಪರ್ಯಾಯದಲ್ಲಿ (೩+೪+೧=೮) ಎಂಟು ಋಕ್ಕುಗಳು ಲಭಿಸುವವು ಇಲ್ಲಿ **ಹಿಂಕರೋತಿ** ಎಂದರೆ ಗಾನಮಾಡಬೇಕು ಎಂದರ್ಥವು. ಎರಡನೆಯ ಪರ್ಯಾಯದಲ್ಲಿ ಪ್ರಥಮಋಕ್ಕನ್ನು ಒಂದಾವರ್ತಿಯೂ ಎರಡನೇ ಋಕ್ಕನ್ನು ಮೂರಾವರ್ತಿಯೂ ಮೂರನೇ ಋಕ್ಕನ್ನು ನಾಲ್ಕಾವರ್ತಿಯೂ ಗಾನಮಾಡಿದರೆ (೧+೩+೪=೮) ಎಂಟು ಋಕ್ಕುಗಳು ಲಭಿಸುವವು. ಮೂರನೇ ಪರ್ಯಾಯದಲ್ಲಿ ಮೊದಲನೇ ಋಕ್ಕನ್ನು ನಾಲ್ಕಾವರ್ತಿಯೂ, ಎರಡನೇ ಋಕ್ಕನ್ನು ಒಂದಾವರ್ತಿಯೂ ಮೂರನೇ ಋಕ್ಕನ್ನು ಮೂರಾವರ್ತಿಯೂ ಗಾನಮಾಡಿದರೆ ಎಂಟು ಋಕ್ಕುಗಳು ಲಭಿಸುವವು. ಇವೆಲ್ಲವನ್ನೂ ಎಂದರೆ ಮೂರು

ಪರ್ಯಾಯಗಳನ್ನೂ ಸೇರಿಸಿದರೆ (ಒಂದೊಂದು ಪರ್ಯಾಯಕ್ಕೆ ಎಂಟೆಂಟು ಋಕ್ಕುಗಳಂತೆ ಇಪ್ಪತ್ತುನಾಲ್ಕು (೨೪) ಸಂಖ್ಯೆಯ ಋಕ್ಕುಗಳು ಲಭಿಸುವವು. ಆದ್ದರಿಂದ ಇಪ್ಪತ್ತುನಾಲ್ಕು ಸ್ತೋಮಗಳು ಅಥವಾ ಸ್ತೋತ್ರಗಳು ಯಾವ ದಿನದಲ್ಲಿ ಗಾನಮಾಡಲ್ಪಡುವವೋ ಆ ದಿನಕ್ಕೆ ಚತುರ್ವಿಂಶತಿ ಎಂದು ಹೆಸರು. ಅದರಂತೆ ಆಚರಿಸಲ್ಪಡಬೇಕು ಇಲ್ಲಿ ಎಂದರೆ ಸತ್ರಯಾಗವನ್ನು ವಿವರಿಸುವಾಗ ಉಪಯಂತಿ ಆಸತೇ ಎಂಬ ಎರಡು ಶಬ್ದಗಳು ಅನುಷ್ಠಾನ (ಮಾಡುವದು) ವಿಧಾನ ಎಂಬರ್ಥವನ್ನು ಸೂಚಿಸುವವು. ಈ ಸತ್ರಯಾಗದಲ್ಲಿ ಯಜ್ಞಮಾಡುವ ಯಜಮಾನರೂ ಋತ್ವಿಜರೂ ಅವರವರೇ ಆದುದರಿಂದ ಇಲ್ಲಿ ಋತ್ವಿಜರಂತೇ ಯಜ್ಞಮಾಡುವ ಯಜಮಾನರು ಅನೇಕರಿರುವರು. ಆದ್ದರಿಂದ ಇಲ್ಲಿ ಬಹುವಚನ ಪ್ರಯೋಗವಿರುವುದು. ಇದು (ಎಂದರೆ ಚತುರ್ವಿಂಶತಿ ಎಂಬ ಹೆಸರಿನ ದಿನ) ಸತ್ರಯಾಗದ ಮೊದಲನೆಯ ದಿವಸವು.

ಏತೇನ ವೈ ಸಂವತ್ಸರಮಾರಭಂತ ಏತೇನ ಸ್ತೋಮಾಂಶ್ಚ ಛಂದಾಂಸಿ ಚೈತೇನ ಸರ್ವಾ ದೇವತಾ ಅನಾರಬ್ಧಂ ವೈ ತಚ್ಛಂದೋಽನಾರಬ್ಧಾ ಸಾ ದೇವತಾ ಯದೇತಸ್ಮಿನ್ನಹನಿ ನಾಽಽರಭಂತೇ ತದಾರಂಭಣೀ-ಯಸ್ಯಾಽಽರಂಭಣೀಯತ್ವಂ

ತಸ್ಯೈತಸ್ಯ ನಾಮ್ನೋ ನಿರ್ವಚನಂ ದರ್ಶಯತಿ—ಏತೇನೈವ ಚತುರ್ವಿಂಶೇನಾಹ್ನಾ ಸತ್ರಿಣಃ ಸಂವತ್ಸರಸತ್ರಮಾರಭಂತೇ ॥ ತತ್ರ ಸಾಮಗೈಃ ಪ್ರಯೋಕ್ತವ್ಯಾ ಯೇ ಸ್ತೋಮಾ ಬಹ್ವೃಚೈಃ ಪ್ರಯೋಕ್ತವ್ಯಾನಿ ಯಾನಿ ಚ್ಛಂದಾಂಸಿ ಯಾಶ್ಚ ತತ್ತನ್ಮಂತ್ರಪ್ರತಿಪಾದ್ಯಾಃ ಸರ್ವಾ ದೇವತಾಸ್ತತ್ಸರ್ವಮನೇನೈವಾಹ್ನಾಽಽರಭಂತೇ ॥ ಯದಿ ಕಥಂಚಿದೇತಸ್ಮಿನ್ನಹನಿ ಚ್ಛಂದೋ ವಾ ದೇವತಾಂತರಂ ವಾ ನಾಽಽರಭೇರಂಸ್ತದಾನೀಮನ್ಯಸ್ಮಿನ್ನಹನ್ಯಾರಬ್ಧಮಪಿ ಚ್ಛಂದೋದೇವತಾದಿಕಮನಾರಬ್ಧಸದೃಶಮೇವ ಭವತಿ ॥ ತಸ್ಮಾದಸ್ಮಿನ್ನೇವಾಹನಿ ಸರ್ವಸ್ಯ ಮುಖ್ಯಃ ಪ್ರಾರಂಭಃ ॥ ತಥಾಸತ್ಯಾರಭ್ಯತೇ ಸರ್ವಸ್ಮಿನ್ನಹನೀತಿ ವ್ಯುತ್ಪತ್ತ್ಯಾಽಽರಂಭಣೀಯಂ ನಾಮ ಸಂಪನ್ನಂ ॥ ಯದ್ಯಪ್ಯೇತಸ್ಮಾದಹ್ನಃ ಪೂರ್ವಭಾವಿನಿ ಪ್ರಾಯಣೀಯಾಖ್ಯೇಽಹನಿ ಸತ್ರಂ ಪ್ರಾರಬ್ಧಂ ತಥಾಪಿ ತಸ್ಯ ಪ್ರಾಯಣೀಯಸ್ಯಾತಿರಾತ್ರಸಂಯುಕ್ತಸ್ಯ ಸಂವತ್ಸರೋಪಕ್ರಮಸಾಧಾರಣತ್ವಾದಸ್ಯ ಸತ್ರಸ್ಯ ವಿಶೇಷೇಣ ಪ್ರಾರಂಭೋಽಸ್ಮಿನ್ನೇವ ಭವತೀತ್ಯಭಿಪ್ರೇತ್ಯೈತಸ್ಯಾಽಽರಂಭಣೀಯತ್ವಮೇವ ಯುಕ್ತಂ ॥ (?) ॥

ಈ ಹೆಸರು ಇದಕ್ಕೆ ಏತಕ್ಕೆ ಬಂತೆಂಬ ನಿರ್ವಚನವನ್ನು ವಿವರಿಸುವರು—ಮೇಲೆ ಹೇಳಿದ ಚತುರ್ವಿಂಶತಿ ಎಂಬ ಹೆಸರಿನ ದಿನದ ಸೋಮಪ್ರಯೋಗದಿಂದ ಸತ್ರಯಾಗಮಾಡುವವರು ಒಂದು ಸಂವತ್ಸರದವರೆಗೂ ಮಾಡಬೇಕಾದ ಕಾರ್ಯಕಲಾಪಗಳನ್ನು ಈ ದಿವಸ (ಚತುರ್ವಿಂಶತಿದಿನ) ಪ್ರಾರಂಭಮಾಡುವರು. ಈ ಮೊದಲನೇ ದಿವಸವೇ ಸಾಮಗರಿಂದ ಗಾನಮಾಡಲ್ಪಡುವ ಸ್ತೋಮಗಳೂ, ಋಗ್ವೇದಗಳಿಂದ ಪಠಿಸಲ್ಪಡುವ ಶಸ್ತ್ರಮಂತ್ರಾದಿಗಳೂ, ಪಠಿಸಲ್ಪಡಬೇಕಾದ ಎಲ್ಲಾ ಛಂದಸ್ಸುಗಳೂ, ಮಂತ್ರಪ್ರತಿಪಾದ್ಯರಾದ ಎಲ್ಲಾ ದೇವತೆಗಳೂ ಆ ಮೊದಲನೇ ದಿವಸವೇ ಪಠಿಸಲ್ಪಡುತ್ತಾರೆ. ಒಂದು ವೇಳೆ ಮೊದಲನೆಯ ದಿವಸ ಯಾವುದಾದರೂ ಛಂದಸ್ಸನ್ನು ಅಥವಾ ದೇವತೆಯನ್ನು ಪಠಿಸದೆ ಬಿಟ್ಟುಹೋದರೆ ಮುಂದಿನ ಇತರ ದಿನಗಳಲ್ಲಿ ಆ ಛಂದಸ್ಸು ಮತ್ತು ದೇವತೆಗಳ ಸ್ತುತಿಮೊದಲಾದವುಗಳನ್ನು ಪ್ರಾರಂಭಮಾಡಿಲ್ಲವೆಂದೇ ಭಾವಿಸಬೇಕು ಆದ್ದರಿಂದ ಪ್ರಥಮದಿವಸದಲ್ಲಿಯೇ ಮುಖ್ಯವಾದ ಸಮಸ್ತವಿಷಯಗಳೂ ಪ್ರಾರಂಭಿಸಲ್ಪಡಬೇಕು. ಆದ್ದರಿಂದ **ಆರಭ್ಯತೇ ಸರ್ವಸ್ಮಿನ್ನಹನೀತಿ**—

ಎಂದರೆ ಸಮಸ್ತವೂ ಆ ದಿವಸವೇ ಪ್ರಾರಂಭಿಸಲ್ಪಡುವುದು ಎಂಬ ಉಕ್ತಿಗೆ ಅನುಸಾರವಾಗಿ ಆ ದಿವಸಕ್ಕೆ ಅಥವಾ ಆ ದಿವಸದ ಕಾರ್ಯಕ್ಕೆ **ಆರಂಭಣೀಯ**ವೆಂಬ ಹೆಸರು ಉಂಟಾಗಿರುವುದು. ಯಜ್ಞದ ಪ್ರಾರಂಭದಲ್ಲಿ ಮಾಡಬೇಕಾದ ಪ್ರಾಯಣೀಯೇಷ್ಟಿಯನ್ನು, ಸತ್ರಯಾಗಮಾಡುವಾಗ ಸಂವತ್ಸರಾತ್ಮಕವಾದ ಸತ್ರಯಾಗವನ್ನು ಆರಂಭಮಾಡುವ ಕಾಲದಲ್ಲಿ ಅತಿರಾತ್ರ (ಯಜ್ಞ ವಿಶೇಷ) ಸಹಿತವಾಗಿ ಪ್ರಾರಂಭಿಸಿದರೂ, ಈ ಸತ್ರಯಾಗವನ್ನು ಪ್ರಾಯಣೀಯೇಷ್ಟಿಯಿಂದಲೇ ಪ್ರಾರಂಭಿಸಲಾಯಿತೆಂದು ಹೇಳುವುದೇ ಯುಕ್ತವು. ಈ ಕಾರಣಗಳಿಂದ ಈ ಸತ್ರಯಾಗದ ಪ್ರಥಮದಿವಸಕ್ಕೆ ಆರಂಭಣೀಯವೆಂಬ ಹೆಸರು ಸಲ್ಲುವುದು ಯುಕ್ತವಾಗಿಯೇ ಇದೆ.

## ಚತುರ್ವಿಂಶಸ್ತೋಮೋ ಭವತಿ ತಚ್ಚತುರ್ವಿಂಶಸ್ಯ ಚತುರ್ವಿಂಶತ್ವಂ ।

ಅಸ್ಮಿನ್ನಹನಿ ಸ್ತೋಮವಿಶೇಷಂ ವಿಧತ್ತೇ— ಯಾನ್ಯತ್ರ ಸ್ತೋತ್ರಾಣಿ ಸಂತಿ ತೇಷು ಸರ್ವೇಷು ಯಃ ಪೂರ್ವಮುದಾಹೃತಶ್ಚತುರ್ವಿಂಶತ್ವ(?) ಸಂಖ್ಯಾಸಂಪಾದನರೂಪಃ ಸ್ತೋಮಃ ಸ ಏವ ಕರ್ತವ್ಯಃ ॥ ಈದೃಶಸ್ತೋಮಯೋಗಾದೇವಾಹ್ನೋಽಪಿ ಚತುರ್ವಿಂಶನಾಮ ಸಂಪನ್ನಂ ॥

ಈ ಪ್ರಥಮದಿವಸದಲ್ಲಿ ಚತುರ್ವಿಂಶಸ್ತೋಮವನ್ನು (ಇದನ್ನು ಮೇಲೆ ವಿವರಿಸಲಾಗಿದೆ) ಗಾನಮಾಡುವುದರಿಂದ ಈ ಪ್ರಥಮದಿವಸವನ್ನು ಚತುರ್ವಿಂಶ ಎಂದು ಕರೆಯುವುದು ರೂಢಿಗೆ ಬಂದಿರುವುದು.

## ಚತುರ್ವಿಂಶತಿರ್ವಾ ಅರ್ಧಮಾಸಾ ಅರ್ಧಮಾಸಶ ಏವ ತತ್ಸಂವತ್ಸರ-ಮಾರಭಂತೇ ।

ತಂ ಸ್ತೋಮಂ ಪ್ರಶಂಸತಿ ॥ ದ್ವಾದಶಸು ಮಾಸೇಷು ವಿದ್ಯಮಾನಾ ಅರ್ಧಮಾಸಾಶ್ಚತುರ್ವಿಂಶತಿಸಂಖ್ಯಾಕಾಃ ॥ ತಥಾ ಸತ್ಯರ್ಧಮಾಸಮಾಸಶಬ್ದ ಏಕಮರ್ಧಮಾಸಂ ಸಮಾಪ್ಯ ಪುನರಪ್ಯರ್ಧಮಾಸ ಇತ್ಯೇವಂ ಕ್ರಮೇಣ ಚತುರ್ವಿಂಶತಿಸಂಪತ್ತೌ ಸಂವತ್ಸರಸತ್ರಪ್ರಾರಂಭೋ ಭವತಿ ॥ ತಸ್ಮಾಚ್ಚತುರ್ವಿಂಶಸ್ತೋಮಃ ಪ್ರಶಸ್ತ ಏತಸ್ಮಿನ್ನಹನಿ ॥

ಒಂದು ಸಂವತ್ಸರದಲ್ಲಿ ಇಪ್ಪತ್ತುನಾಲ್ಕು (೨೪) ಅರ್ಧಮಾಸಗಳಿರುವವು. ಒಂದು ಅರ್ಧ ಮಾಸವು (೧೫ ದಿನಗಳು) ಮುಗಿದ ಕೂಡಲೇ ಮತ್ತೊಂದು ಅರ್ಧಮಾಸವು ಪ್ರಾರಂಭವಾಗುವುದು. ಈ ರೀತಿ ಕ್ರಮವಾಗಿ ನಡೆದು ಬರುತ್ತಿರುವುದು ಆದ್ದರಿಂದ ಇಪ್ಪತ್ತುನಾಲ್ಕು ಅರ್ಧಮಾಸಗಳವರೆಗೆ (ಸಂವತ್ಸರದವರೆಗೆ) ನಡೆಯುವ ಈ ಸತ್ರಯಾಗದ ಪ್ರಾರಂಭದಲ್ಲಿ ಎಂದರೆ ಮೊದಲನೇ ದಿವಸ ಈ ಚತುರ್ವಿಂಶಸ್ತೋಮವನ್ನು ಪಠಿಸುವುದು ಪ್ರಶಸ್ತವು.

## ಉಕ್ಥ್ಯೋ ಭವತಿ ಪಶವೋ ವಾ ಉಕ್ಥಾನಿ ಪಶೂನಾಮವರುದ್ಧ್ಯೈ ।

ಸೋಮಯಾಗಸ್ಯ ಸಂಸ್ಥಾವಿಶೇಷಂ ವಿಧತ್ತೇ ಅಗ್ನಿಷ್ಟೋಮಾದೂರ್ಧ್ವಭಾವೀ ಯೋಽಯಮುಕ್ಥ್ಯೋಽಸ್ತಿ ಸೋಽಸ್ಮಿನ್ನಹನಿ ಪ್ರಯೋಕ್ತವ್ಯಃ ॥ ತತ್ರ ದ್ವಾದಶಸ್ತೋತ್ರೇಭ್ಯ ಉತ್ತರಾಣಿ ತ್ರೀಣ್ಯುಕ್ಥನಾಮಾನಿ ಸ್ತೋತ್ರಾಣಿ ತೇಷಾಂ ಪಶುಪ್ರಾಪ್ತಿಹೇತುತ್ವಾತ್ಪಶುತ್ವಂ ॥ ಅತ ಉಕ್ಥ್ಯಾನುಷ್ಠಾನಂ ಪಶುಪ್ರಾಪ್ತಯೇ ಭವತಿ ॥

ಅಗ್ನಿಷ್ಟೋಮಯಾಗಾನಂತರ **ಉಕ್ಥ್ಯ** ಎಂಬ ಯಾಗವನ್ನು ಮಾಡಬೇಕು ಇದನ್ನು ಮೇಲೆ ಹೇಳಿದ ಪ್ರಥಮದಿವಸದಲ್ಲಿಯೇ ಮಾಡಬೇಕು. ಇದರಲ್ಲಿ ಅಗ್ನಿಷ್ಟೋಮ ಯಾಗದ ಹನ್ನೆರಡು ಸ್ತೋತ್ರಗಳ (ಮತ್ತು ಶಸ್ತ್ರಗಳ) ಜತೆಗೆ ಮತ್ತೆ **ಉಕ್ಥ** ಎಂಬ ಹೆಸರಿನ ಮೂರು ಸ್ತೋತ್ರಗಳನ್ನು ಪಠಿಸಬೇಕು. ಈ ಉಕ್ಥಸ್ತೋತ್ರಗಳು ಪಶುಸಂಪತ್ತನ್ನು ಒದಗಿಸುವವು. ಆದ್ದರಿಂದ ಪಶುಪ್ರಾಪ್ತಿಗಾಗಿ ಉಕ್ಥ್ಯಾನುಷ್ಠಾನವನ್ನು ಮಾಡಬೇಕು.

**ತಸ್ಯ ಪಂಚದಶ ಸ್ತೋತ್ರಾಣಿ ಭವಂತಿ ಪಂಚದಶ ಶಸ್ತ್ರಾಣಿ ಸ ಮಾಸೋ ಮಾಸಶ ಏವ ತತ್ಸಂವತ್ಸರಮಾರಭಂತೇ ॥**

ತಸ್ಮಿನ್ನಹನಿ ಚೋದಕಪ್ರಾಪ್ತಸ್ತೋತ್ರಶಸ್ತ್ರಸಂಖ್ಯಾಂ ಪ್ರಶಂಸತಿ—ಮಾಸಗತಾನಾಂ ದಿವಸಾನಾಂ ತ್ರಿಂಶತ್ತ್ವಾತ್ ಸ್ತೋತ್ರಶಸ್ತ್ರಸಂಖ್ಯಾಯಾಶ್ಚ ತಥಾತ್ವಾನ್ಮಾಸತ್ವಸಂಪತ್ತಿಃ ॥ ಮಾಸಶ ಏಕೈಕಮಾಸಕ್ರಮೇಣೇತ್ಯರ್ಥಃ ॥

ಈ ಉಕ್ಥ್ಯ ಎಂಬ ಯಾಗದಲ್ಲಿ ಹದಿನೈದು ಸ್ತೋತ್ರಗಳಿರುವವು (ಅಗ್ನಿಷ್ಟೋಮ ೧೨+ಉಕ್ಥ್ಯ ೩=೧೫) ಶಸ್ತ್ರಮಂತ್ರಗಳೂ ಹದಿನೈದು ಇರುವವು ಆದ್ದರಿಂದ ಸ್ತೋತ್ರ ಮತ್ತು ಶಸ್ತ್ರಗಳ ಸಂಖ್ಯೆ (೧೫+೧೫=೩೦) ಮೂವತ್ತಾಗುವುದು. ಒಂದು ಮಾಸದಲ್ಲಿ (ತಿಂಗಳಲ್ಲಿ) ಮೂವತ್ತು ದಿನಗಳಿರುವವು. ಆದ್ದರಿಂದ ಪ್ರತಿಯೊಂದು ಮಾಸದಲ್ಲಿಯೂ ದಿನಸಂಖ್ಯೆಗೆ ಅನುಸಾರವಾಗಿ (೩೦) ಸ್ತೋತ್ರ ಮತ್ತು ಶಾಸ್ತ್ರಗಳ ಸಂಖ್ಯೆ ಇದ್ದಂತಾಯಿತು. ಮತ್ತು ಇಲ್ಲಿಂದಲೇ ಸಂವತ್ಸರವನ್ನು ಪ್ರಾರಂಭಿಸುವರು.

**ತಸ್ಯ ಷಷ್ಟಿಶ್ಚ ತ್ರೀಣಿ ಚ ಶತಾನಿ ಸ್ತೋತ್ರಿಯಾಸ್ತಾವಂತಿ ಸಂವತ್ಸರಸ್ಯಾಹಾನ್ಯಹಃಶ ಏವ ತತ್ಸಂವತ್ಸರಮಾರಭಂತೇ ॥**

ಸ್ತೋತ್ರಗತಾನಾಮೃಚಾಂ ಸಂಖ್ಯಾಂ ಪ್ರಶಂಸತಿ—ಏಕೈಕಸ್ಯ ಸ್ತೋತ್ರಸ್ಯ ಚತುರ್ವಿಂಶತಿಸಂಖ್ಯಾಯಾ ವೃತ್ತತ್ವಾತ್ತತ್ರತ್ಯಾಃ ಸ್ತೋತ್ರ ಯೋಗ್ಯಾ ಋಚಸ್ತಶ್ಚತುರ್ವಿಂಶತಿಃ ಸಂಪದ್ಯಂತೇ ॥ ತಥಾ ಸತಿ ದಶಸು ಸ್ತೋತ್ರೇಷು ಚತ್ವಾರಿಂಶದಧಿಕಂ ಶತದ್ವಯಂ ಪಂಚಸು ಸ್ತೋತ್ರೇಷು ವಿಂಶತ್ಯಧಿಕಮೇಕಂ ಶತಮೇತದುಭಯಂ ಮಿಲಿತ್ವಾ ಷಷ್ಟ್ಯಧಿಕಶತತ್ರಯಸಂಖ್ಯಾಕಾಃ ಸ್ತೋತ್ರಿಯಾಃ ಸಂಪದ್ಯಂತೇ ॥ ಸಂವತ್ಸರಸಂಬಂಧೀನ್ಯಹಾನ್ಯಪಿ ತತ್ಸಂಖ್ಯಾಕಾನಿ ತಥಾ ಸತ್ಯಹಃಶೋಽಹಃ ಕ್ರಮೇಣೈವ ಸಂವತ್ಸರಸತ್ರಮಾರಂಭತೇ ॥ ತದೇವಮುಕ್ತಪಕ್ಷ ಉಪಪಾದಿತಃ ॥

ಸ್ತೋತ್ರಗಳಲ್ಲಿರುವ ಒಟ್ಟು ಸಂಖ್ಯೆಯನ್ನು ಪ್ರಶಂಸೆಮಾಡುವರು. ಒಂದೊಂದು ಸ್ತೋತ್ರದಲ್ಲಿ ಆವೃತ್ತಿಸಹಿತವಾಗಿ ಇಪ್ಪತ್ತನಾಲ್ಕು ಋಕ್ಕುಗಳು ಲಭಿಸುವವು. ಆದ್ದರಿಂದ ಹತ್ತು ಸ್ತೋತ್ರಗಳಲ್ಲಿ ಇನ್ನೂರನಲವತ್ತು (೨೪೦) ಋಕ್ಕುಗಳು ಲಭಿಸುವವು. ಇವುಗಳ ಜತೆಗೆ ಐದು ಸ್ತೋತ್ರಗಳಿಂದ (೨೪+೫=೧೨೦) ನೂರಿಪ್ಪತ್ತು ಋಕ್ಕುಗಳನ್ನು ಸೇರಿಸುವುದರಿಂದ (೨೪೦+೧೨೦=೩೬೦) ಮುನ್ನೂರ ಅರವತ್ತು ಸ್ತೋತ್ರಗಳು (ಅಥವಾ ಋಕ್ಕುಗಳು) ಲಭಿಸುವವು. ಒಂದು ಸಂವತ್ಸರದಲ್ಲಿಯೂ ಇಷ್ಟೇ (೩೬೦) ದಿನಗಳಿರುವವು. ಆದ್ದರಿಂದ ದಿನಕ್ರಮದಂತೆಯೂ ಎಂದರೆ ದಿನಕ್ಕೆ ಒಂದೊಂದರಂತೆಯೂ ಸತ್ರಯಾಗವು ೩೬೦ ದಿವಸಗಳವರೆಗೆ ನಡೆಯುವುದರಿಂದ ಆ ದಿನದಲ್ಲಿಯೇ (ಪ್ರಥಮದಿನದಲ್ಲಿಯೇ) ಸತ್ರಯಾಗವನ್ನು ಪ್ರಾರಂಭಿಸಬೇಕು.

ಅಗ್ನಿಷ್ಟೋಮ ಏತದಹಃಸ್ಯಾದಿತ್ಯಾಹುರಗ್ನಿಷ್ಟೋಮೋ ವೈ ಸಂವತ್ಸರೋ ನ ವಾ ಏತದನ್ಯೋಽಗ್ನಿಷ್ಟೋಮಾದಹರ್ದಾಧಾರ ನ ವಿವ್ಯಾಚೇತಿ ॥

ಅಥ ಪಕ್ಷಾಂತರಂ ವಿಧತ್ತೇ—ಯದಿದಂ ದ್ವಿತೀಯಮಹಃ ಸೋಽಗ್ನಿಷ್ಟೋಮಃ ಕರ್ತವ್ಯಃ ॥ ಅಗ್ನಿಷ್ಟೋಮಸ್ಯ ಸಂವತ್ಸರಸತ್ರರೂಪತ್ವಾತ್ ॥ ಕಥಮಿತಿ ಚೇತ್ತದುಚ್ಯತೇ ॥ ಅಗ್ನಿಷ್ಟೋಮಾದನ್ಯ ಉಕ್ಥ್ಯಾದಿರೂಪಃ ಕಶ್ಚಿದಪಿ ಕ್ರತುಃ ಸಂವತ್ಸರಸತ್ರಾವಯವಭೂತ ಏತದಹರ್ನೈವ ದಾಧಾರ ನೈವ ಧಾರಯಿತುಂ ಶಕ್ತಃ ॥ ಅನುಪದಿಷ್ಟಾನ್ಯಂಗಾನಿ ಸರ್ವಾಣ್ಯಗ್ನಿಷ್ಟೋಮಾದತಿದಿಶ್ಯಂತೇ ತದೇತದಗ್ನಿಷ್ಟೋಮಸ್ಯ ಧಾರಯಿತೃತ್ವಂ ತಸ್ಮಾದಗ್ನಿಷ್ಟೋಮವ್ಯತಿರಿಕ್ತಃ ಕ್ರತುರೇತದಹರ್ನ ವಿವ್ಯಾಚ ವಿವೇಕ್ತು ಮನುಷ್ಠಾಪಯಿತುಂ ನ ಶಕ್ತ ಇತ್ಯೇವಂ ಪಕ್ಷಾಂತರವಾದಿನಾಮಭಿಪ್ರಾಯಃ ॥

ಮೇಲೆ ಹೇಳಿದ ವಿಷಯವನ್ನು ಪ್ರಕಾರಾಂತರವಾಗಿ ವಿವರಿಸುವರು. ಈ ಮತಪ್ರಕಾರ ಅಗ್ನಿಷ್ಟೋಮವನ್ನು ಎರಡನೇ ದಿವಸ ಮಾಡಬೇಕು. ಒಂದು ಸಂವತ್ಸರದವರೆಗೆ ಮಾಡುವ ಸತ್ರಯಾಗದಲ್ಲಿ ಅಗ್ನಿಷ್ಟೋಮವೂ ಸೇರಿರುವುದು. ಅಗ್ನಿಷ್ಟೋಮದಿಂದ ಪ್ರತ್ಯೇಕವಾದ (ವ್ಯತ್ಯಸ್ತವಾದ) ಉಕ್ಥ್ಯವೆಂಬ ಯಜ್ಞವು ಸಂವತ್ಸರರೂಪವಾದ ಸತ್ರಯಾಗದಲ್ಲಿ ಯಾವ ದಿನದಲ್ಲಿಯೂ ಸೇರಿಸಲ್ಪಟ್ಟಿಲ್ಲ. ಇತರ ಅಂಗಭೂತವಾದ ಸಕಲಕರ್ಮಗಳೂ ಅಗ್ನಿಷ್ಟೋಮ ಯಾಗದಲ್ಲಿಯೇ ಉಕ್ತವಾಗಿವೆ. ಆದ್ದರಿಂದ ಅಗ್ನಿಷ್ಟೋಮಕ್ಕೆ ಮಾತ್ರವೇ ಎಲ್ಲವನ್ನೂ ಧರಿಸುವ ಶಕ್ತಿಯಿರುವುದು. ಅಗ್ನಿಷ್ಟೋಮಕ್ಕೆ ವ್ಯತಿರಿಕ್ತವಾದ ಬೇರೆ ಯಾವ ಯಾಗಕ್ಕೂ ಈ ಶಕ್ತಿಯಿರುವುದಿಲ್ಲ. ಇದು ಪಕ್ಷಾಂತರವಾದಿಗಳ ಅಭಿಪ್ರಾಯವು.

ಸ ಯದ್ಯಗ್ನಿಷ್ಟೋಮಃ ಸ್ಯಾದಷ್ಟಾಚತ್ವಾರಿಂಶಾಸ್ತ್ರಯಃ ಪವಮಾನಾಃ ಸ್ಯುಶ್ಚತುರ್ವಿಂಶಾನೀತರಾಣಿ ಸ್ತೋತ್ರಾಣಿ ತದು ಷಷ್ಟಿಶ್ಚೈವ ತ್ರೀಣಿ ಚ ಶತಾನಿ ಸ್ತೋತ್ರಿಯಾಸ್ತಾವಂತಿ ಸಂವತ್ಸರಸ್ಯಾಹಾನ್ಯಹಃಶ ಏವ ತತ್ಸಂವತ್ಸರಮಾರಭಂತೇ ॥

ಅಸ್ಮಿನ್ಪಕ್ಷೇ ಸ್ತೋಮವಿಶೇಷಂ ವಿಧತ್ತೇ—ಅಗ್ನಿಷ್ಟೋಮಪಕ್ಷೇ ಬಹಿಷ್ಪವಮಾನಮಾಧ್ಯಂದಿನಪವಮಾನಾರ್ಭವಪವಮಾನೇಷು ತ್ರಿಷು ಸ್ತೋತ್ರೇಷ್ವಷ್ಟಾಚತ್ವಾರಿಂಶನಾಮಕಃ ಸ್ತೋಮಃ ಕರ್ತವ್ಯಃ ॥ ಸ ಚ ಛಂದೋಗೈರೇವಮಾಮ್ನಾತಃ–' ಷೋಡಶಭ್ಯೋ ಹಿಂ ಕರೋತಿ ಸ ತಿಸೃಭಿಃ ಸ ದ್ವಾದಶಭಿಃ ಸ ಏಕಯಾ ಷೋಡಶಭ್ಯೋ ಹಿಂಕರೋತಿ ಸ ಏಕಯಾ ಸ ತಿಸೃಭಿಃ ಸ ದ್ವಾದಶಭಿಃ ಷೋಡಶಭ್ಯೋ ಹಿಂ ಕರೋತಿ ಸ ದ್ವಾದಶಭಿಃ ಸ ಏಕಯಾ ಸ ತಿಸೃಭಿಃ ' ಇತಿ॥ ಪ್ರಥಮೇ ಪರ್ಯಾಯೇ ಪ್ರಥಮಾಯಾ ಋಚ ಸ್ತ್ರಿರಾವೃತ್ತಿಃ ॥ ದ್ವಿತೀಯಾಯಾ ದ್ವಾದಶಕೃತ್ವ ಆವೃತ್ತಿಃ ತೃತೀಯಾಯಾಃ ಸಕೃತ್ಪಾಠಃ ॥ ದ್ವಿತೀಯಪರ್ಯಾಯೇ ಪ್ರಥಮಾಯಾಃ ಸಕೃತ್ಪಾಠೋ ದ್ವಿತೀಯಾಯಾ ಸ್ತ್ರಿರಾವೃತ್ತಿ ಸ್ತೃತೀಯಾಯಾಃ ದ್ವಾದಶಕೃತ್ವ ಆವೃತ್ತಿಃ ॥ ತೃತೀಯಪರ್ಯಾಯೇ ಪ್ರಥಮಾಯಾ ದ್ವಾದಶಕೃತ್ವ ಆವೃತ್ತಿಃ ದ್ವಿತೀಯಾಯಾಃ ಸಕೃತ್ಪಾಠಸ್ತೃತೀಯಾಯಾ ಸ್ತ್ರಿರಾವೃತ್ತಿ ರ್ಮಿಲಿತ್ವಾ ಅಷ್ಟಾಚತ್ವಾರಿಂಶತ್ ಸ್ತೋತ್ರಿಯಾಃ ಸಂಪದ್ಯಂತೇ॥

ಸ್ತೋಽಯಮಷ್ಟಾಚತ್ವಾರಿಂಶತ್ಸ್ತೋಮಃ ॥ ತಮೇತಂ ಪವಮಾನೇಷು ತ್ರಿಷು ಕೃತ್ವಾ ಶಿಷ್ಟೇಷು ನವಸು ಸ್ತೋತ್ರೇಷು ಚತುರ್ವಿಂಶಸ್ತೋಮಂ ಕುರ್ಯಾತ್ ॥ ತಥಾ ಸತಿ ಪವಮಾನಸ್ತೋತ್ರೇಷು ಚತುಶ್ಚತ್ವಾರಿಂಶದಧಿಕಸಂಖ್ಯಾಕಾಸ್ತೋತ್ರಿಯಾಃ ಸಂಪದ್ಯಂತೇ ॥ ಇತರಸ್ತೋತ್ರೇಷು ಷೋಡಶಾಧಿಕಶತದ್ವಯಸಂಖ್ಯಾಕಾಸ್ತತೋ ಮಿಲಿತ್ವಾ ಷಷ್ಟ್ಯಧಿಕಶತತ್ರಯಸಂಖ್ಯಾಕಾ ಭವಂತಿ ॥ ಸಂವತ್ಸರಗತಾನಾಮಹ್ನಾಮಪಿ ತಾವತ್ತ್ವಾದಹಃ ಕ್ರಮೇಣೈವ ಸಂವತ್ಸರಮಾರಭಂತೇ॥

ಈ ಪಕ್ಷದಲ್ಲಿ ಸ್ತೋಮವಿಶೇಷವನ್ನು ವಿವರಿಸುವರು. ಅಗ್ನಿಷ್ಟೋಮ ಪಕ್ಷದಲ್ಲಿ ಬಹಿಷ್ಪವಮಾನಮಾಧ್ಯಂದಿನ ಪವಮಾನ ಆರ್ಭವಪವಮಾನ ಎಂಬ ಮೂರು ಸ್ತೋತ್ರಗಳಲ್ಲಿ ಅಷ್ಟಾಚತ್ವಾರಿಂಶತ್ (೪೮) ಎಂಬ ಹೆಸರಿನ ಸ್ತೋಮಗಳಿರುವವು ಅದನ್ನು ಸಾಮಗರು ಈ ರೀತಿ ಹೇಳುವರು—**ಷೋಡಶಭ್ಯೋ ಹಿಂಕರೋತಿ ಸ ತಿಸೃಭಿಃ ಸ ದ್ವಾದಸಭಿಃ ಸ ಏಕಯಾ ಷೋಡಶಭ್ಯೋ ಹಿಂಕರೋತಿ ಸ ಏಕಯಾ ಸ ತಿಸೃಭಿಃ ಸ ದ್ವಾದಶಭಿಃ ಷೋಡಶಭ್ಯೋ ಹಿಂಕರೋತಿ ಸ ದ್ವಾದಶಭಿಃ ಸ ಏಕಯಾ ಸ ತಿಸೃಭಿಃ** ಎಂದು. ಇದರ ಅರ್ಥವು—ಪ್ರಥಮ ಪರ್ಯಾದಲ್ಲಿ ಮೊದಲನೇ ಋಕ್ಕನ್ನು ಮೂರಾವರ್ತಿ ಪಠಿಸಬೇಕು ಎರಡನೇ ಪರ್ಯಾಯದಲ್ಲಿ ಹನ್ನೆರಡಾವರ್ತಿಯೂ ಮೂರನೇ ಪರ್ಯಾಯದಲ್ಲಿ ಒಂದಾವರ್ತಿಯೂ ಪಠಿಸಬೇಕು. ದ್ವಿತೀಯ ಪರ್ಯಾದಲ್ಲಿ ಮೊದಲನೆಯ ಋಕ್ಕನ್ನು ಒಂದಾವರ್ತಿಯೂ, ಎರಡನೆಯ ಋಕ್ಕನ್ನು ಮೂರಾವೃತ್ತಿಯೂ ಮೂರನೆಯ ಋಕ್ಕನ್ನು ಹನ್ನೆರಡಾವೃತ್ತಿಯೂ ಪಠಿಸಬೇಕು. ಮೂರನೆಯ ಪರ್ಯಾಯದಲ್ಲಿ ಮೊದಲನೆಯ ಋಕ್ಕನ್ನು ಹನ್ನೆರಡಾವೃತ್ತಿಯೂ ಎರಡನೆಯ ಋಕ್ಕನ್ನು ಒಂದಾವೃತ್ತಿಯೂ ಮೂರನೇ ಋಕ್ಕನ್ನು ಮೂರಾವೃತ್ತಿಯೂ ಪಠಿಸಬೇಕು. ಹೀಗೆ ಮಾಡಿದರೆ ಪ್ರಥಮ ಪರ್ಯಾಯದಲ್ಲಿ ೩+೧೨+೧=೧೬; ದ್ವಿತೀಯ ಪರ್ಯಾಯದಲ್ಲಿ ೧+೩–೧೨=೧೬; ತೃತೀಯಪರ್ಯಾಯದಲ್ಲಿ ೧೨+೧+೩=೧೬ ಒಂದೊಂದು ಪರ್ಯಾಯದಲ್ಲಿಯೂ ೧೬ ಋಕ್ಕುಗಳಿರುವವು. ಇವೆಲ್ಲವನ್ನೂ ಒಟ್ಟಾಗಿ ಸೇರಿಸಿದರೆ ನಲವತ್ತೆಂಟು (೪೮) ಋಕ್ಕುಗಳು ಲಭಿಸುವವು. ಆದ್ದರಿಂದಲೇ ಇದಕ್ಕೆ ಅಷ್ಟಾಚತ್ವಾರಿಂಶತ್ಸ್ತೋಮವೆಂಬ ಹೆಸರು ಬಂದಿದೆ. ಈ ಋಕ್ಕುಗಳಲ್ಲಿ ಪವಮಾನಸೂಕ್ತಗಳಲ್ಲಿ ಮೂರನ್ನೂ ಉಳಿದ ಒಂಭತ್ತು ಋಕ್ಕುಗಳಲ್ಲಿ ಚತುರ್ವಿಂಶಸ್ತೋಮವನ್ನೂ ಕಲ್ಪಿಸಬೇಕು. ಹೀಗೆ ಮಾಡಿದರೆ ಪವಮಾನಸ್ತೋತ್ರಗಳಲ್ಲಿ ನೂರನಲವತನಾಲ್ಕು (೧೪೪) ಋಕ್ಕುಗಳು ಲಭಿಸುವವು. ಇತರ ಸ್ತೋತ್ರಗಳಲ್ಲಿರುವ ಇನ್ನೂರಹದಿನಾರು (೨೧೬) ಋಕ್ಕುಗಳನ್ನೂ ಒಟ್ಟಾಗಿ ಸೇರಿಸಿದರೆ ಮುನ್ನೂರ ಅರವತ್ತು (೩೬೦) ಸಂಖ್ಯೆಯ ಋಕ್ಕುಗಳು ಲಭಿಸುವವು. ಒಂದು ಸಂವತ್ಸರದಲ್ಲಿಯೂ ಸಹ ಮುನ್ನೂರ ಅರವತ್ತು (೩೬೦) ದಿನಗಳಿರುವವು ಆದ್ದರಿಂದ ಸಂವತ್ಸರಕಾಲದವರೆಗೆ ನಡೆಯುವ ಸತ್ರಯಾಗವನ್ನು ಈ ಸಂಖ್ಯೆ ಕ್ರಮಕ್ಕನುಸಾರವಾಗಿ ಪ್ರಾರಂಭಿಸಬೇಕು.

**ಉಕ್ಥ್ಯ ಏವ ಸ್ಯಾತ್ಪಶುಸಮೃದ್ಧೋ ಯಜ್ಞಃ ಪಶುಸಮೃದ್ಧಂ ಸತ್ರಂ ಸರ್ವಾಣಿ ಚತುರ್ವಿಂಶಾನಿ ಸ್ತೋತ್ರಾಣಿ ಪ್ರತ್ಯಕ್ಷಾದ್ಧ್ಯೇತದಹಶ್ಚತುರ್ವಿಂಶಂ ತಸ್ಮಾದುಕ್ಥ್ಯ ಏವ ಸ್ಯಾತ್ ॥**

ಏವಂ ಪಕ್ಷದ್ವಯಮುಪನ್ಯಸ್ಯ ತಯೋಃ ಸಮವಿಕಲ್ಪತ್ವಮಭಿಪ್ರೇತ್ಯ ಪುನರಪಿ ಪೂರ್ವೋಕ್ತಮುಕ್ಥ್ಯಮುಪನ್ಯಸ್ಯತಿ—ಉಕ್ಥ್ಯಸ್ತೋತ್ರಾಣಾಂ ಪಶುಸಾಧನತ್ವಾದುಕ್ಥ್ಯೋ ಯಜ್ಞಃ ಪಶುಸಮೃದ್ಧಃ ಸತ್ರಂ ಚ ಪಶುಸಮೃದ್ಧಂ ಕರ್ತವ್ಯಂ । ಕಿಂಚೋಕ್ಥ್ಯಪಕ್ಷೇ ಸರ್ವಾಣಿ ಚತುರ್ವಿಂಶಸ್ತೋಮಕಾನಿ । ಅಗ್ನಿಷ್ಟೋಮಪಕ್ಷೇ ಪವಮಾನವ್ಯತಿರಿಕ್ತಾನ್ಯೇವ ॥ ತಥಾ ಸತಿ ಪ್ರತ್ಯಕ್ಷಾನ್ಮುಖ್ಯವೃತ್ತ್ಯೈವೈತದಹಶ್ಚತುರ್ವಿಂಶಂ ಭವತಿ ॥ ಸಂಖ್ಯಾಂತರಸ್ಯ ಕುತ್ರಾಪ್ಯಪ್ರವಿಷ್ಟ-

**ತ್ವಾತ್ ॥ ತಸ್ಮಾದುಕ್ಥ್ಯ ಏವ ಕಾರ್ಯಃ ॥ ಏವಶಬ್ದೋ ವಿಕಲ್ಪಾರ್ಥಃ ॥ ಅಗ್ನಿಷ್ಟೋಮ ಇದಮುಹರುಕ್ಥ್ಯೋ ವೇತಿ ಸೂತ್ರಕಾರವಚನಾತ್ ॥**

ಈ ರೀತಿಯಾಗಿ ಎರಡು ಮತಭೇದಗಳನ್ನೂ ವಿವರಿಸಿ ಪುನಃ ಮೊದಲನೇ ಮತದಂತೆ ಉಕ್ಥ್ಯಯಾಗವನ್ನು ವಿವರಿಸುವರು. ಉಕ್ಥ್ಯಯಾಗದ ಸ್ತೋತ್ರಪಠನದಿಂದ ಪಶುಸಮೃದ್ಧಿಯುಂಟಾಗುವುದರಿಂದ ಉಕ್ಥ್ಯವೆಂಬ ಯಜ್ಞವು ಪಶುಸಮೃದ್ಧಿಯನ್ನುಂಟುಮಾಡುವುದು. ಸತ್ರಯಾಗವು ಸಹ ಪಶುಸಮೃದ್ಧಿಯನ್ನುಂಟುಮಾಡುವುದು. ಆದ್ದರಿಂದ ಸತ್ರವನ್ನು ಉಕ್ಥ್ಯಯಾಗದಿಂದಲೇ ಪ್ರಾರಂಭಿಸಬೇಕು. ಅಗ್ನಿಷ್ಟೋಮಯಾಗದಿಂದಲ್ಲ. ಇದಲ್ಲದೆ ಉಕ್ಥ್ಯವೆಂಬ ಯಜ್ಞಪಕ್ಷದಲ್ಲಿ ಎಲ್ಲಾ ಸ್ತೋತ್ರಗಳೂ (ಸಾಮಮಂತ್ರಗಳೂ) ಚತುರ್ವಿಂಶಸ್ತೋಮಸಹಿತವಾದವು. ಅಗ್ನಿಷ್ಟೋಮಪಕ್ಷದಲ್ಲಿ ಈ ಸ್ತೋತ್ರಗಳು ಪವಮಾನಸ್ತೋತ್ರಗಳಿಂದ ವ್ಯತಿರಿಕ್ತವಾದವು. ಆದ್ದರಿಂದ ಸತ್ರಯಾಗದ ಪ್ರಾರಂಭದಲ್ಲಿ ಉಕ್ಥ್ಯಯಾಗವನ್ನೇ ಮಾಡಿ ಪ್ರಾರಂಭಿಸಬೇಕು. ಸೂತ್ರಕಾರರ ವಚನದಂತೆ ಈ ಸತ್ರಯಾಗವನ್ನು ಅಗ್ನಿಷ್ಟೋಮದಿಂದಲೂ ಪ್ರಾರಂಭಮಾಡಬಹುದೆಂಬ ವಿಕಲ್ಪಾರ್ಥವು ಉಕ್ತವಾಗಿದೆ.

*English Translation*

**The Chaturvimsa day of the sacrificial session, called Gavam Ayanam**

On this day (which follows the Atiratra ceremony) they celebrate the Chaturvimsa (Stoma). It is the beginning day of the year during which the sacrificial session is to last). For by this day they begin the year, and also the Stomas and metres, and the worship of the deities. If they do not commence the Sattra on this day, the metres have no proper beginning and the worship of the deities is not commenced. Thence this day is called arambhaniya, i.e. the beginning day. On account of the Chaturvimsa (twenty-four-fold) Stoma being used on it, it is also called Chaturvimsa. There are twenry-four half months. By beginning the Sattra with the Chaturvimsa Stoma i.e. the chant, consisting of twenty-four verses) they commence the year as divided into half month.

The Ukthya (performance of the Jyotishtoma) takes place on that day. For the ukthas recitations are cattle. This is done for obtaining cattle.

This Ukthya sacrifice has fifteen Stotras and fifteen Shastras. These make, if taken together, one month of thirty days. By performing this sacrifice they commence the year as divided into months. This Ukthya sacrifice has 360 Stotriya verses as many as the year has days. By performing this sacrifice they commence the year as divided into days.

They say, "the performance of this first day ought to be an Agnishtoma; Agnishtoma is the year. For no other sacrifice save the Agnishtoma has kept

(has been able to keep) this day the performance of this day, nor developed its several parts (i.e. has given the power of performing all its several rites.)

Should they perform on the beginning day the Agnishtoma, then the three Pavamana Stotras of the morning, midday and evening libations are to be put in the Ashtachatvarimsa Stoma (i.e. each of the Stotriya triplets is made to consist of fory-eight verses by means of repetition), and the other nine Stotras in the Chaturvimsa Stoma. This makes on the whole 360 Stotriyas, as many as there are days (in the year). By performing the Agnishtoma in this way, they commence the year as divided into days.

The Ukthya sacrifice should, however, be performed on the beginning day of the Sattra, not the Agnishtoma. For the sacrifice is wealth in cattle, the Sattra is also wealth in cattle and cattle is represented by the Ukthya. If all Stotras are put in the Chaturvimsa Stoma (as is the case when the Ukthya is performed), then this day becomes actually throughout a Chaturvimsa (twenty-four-fold). Thence the Ukthyas sacrifice ought to be performed on the beginning day of the Sattra.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಸಪ್ತದಶಾಧ್ಯಾಯಸ್ಯ ಷಷ್ಠಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನೇಳನೆಯ ಅಧ್ಯಾಯದಲ್ಲಿ ಆರನೆಯ ಖಂಡವು
ಸಮಾಪ್ತವಾದುದು.



# ಅಥ ಸಪ್ತದಶಾಧ್ಯಾಯೇ ಸಪ್ತಮಃ ಖಂಡಃ

## ಹದಿನೇಳನೆಯ ಅಧ್ಯಾಯದಲ್ಲಿ ಏಳನೆಯ ಖಂಡವು



[ ರಥಂತರ ಮತ್ತು ಬೃಹತ್ ಎಂಬ ಎರಡು ಸಾಮಮಂತ್ರಗಳ ಪ್ರಾಧಾನ್ಯತೆಯು; ಇವೆರಡನ್ನೂ ಏಕಕಾಲದಲ್ಲಿ ಉಪಯೋಗಿಸ ಕೂಡದು. ಸಂವತ್ಸರದ ಉತ್ತರಾರ್ಧ ದಿನಗಳಲ್ಲಿ (ಮೊದಲನೆಯ ಅರ್ಧ ೧೮೦; ಉತ್ತರಾರ್ಧ ೧೮೧–೩೬೦ ದಿನಗಳು) ಅನುಸರಿಸಬೇಕಾದ ಯಜ್ಞಕ್ರಮವು ಹಿಂದುಮುಂದಾಗಿರುವುದು. ]



**ಬೃಹದ್ರಥಂತರೇ ಸಾಮನೀ ಭವತ ಏತೇ ವೈ ಯಜ್ಞಸ್ಯ ನಾವೌ ಸಂಪಾರಿಣ್ಯೌ ಯದ್ಬೃಹದ್ರಥಂತರೇ ತಾಭ್ಯಾಮೇವ ತತ್ಸಂವತ್ಸರಂ ತರಂತಿ ॥**

ಪೃಷ್ಠಸ್ತೋತ್ರೇ ಚೋದಕಪ್ರಾಪ್ತಂ ವಿಕಲ್ಪಿತಂ ಸಾಮದ್ವಯಮನೂದ್ಯ ಪ್ರಶಂಸತಿ— ತ್ವಾಮಿದ್ಧಿ ಹವಾಮಹೇ [೬–೪೬–೧] ಇತ್ಯಸ್ಯಾಮೃಚ್ಯುತ್ಪನ್ನಂ ಸಾಮ ಬೃಹತ್ ॥ ಅಭಿ ತ್ವಾ ಶೂರ ನೋನುಮಃ [೭–೩೨–೨೨] ಇತ್ಯಸ್ಯಾಮೃಚ್ಯುತ್ಪನ್ನಂ ರಥಂತರಂ । ಏತೇ ಉಭೇ ಅಪಿ ಯಜ್ಞಾಖ್ಯಸ್ಯ ಸಮುದ್ರಸ್ಯ ಸಮ್ಯಕ್ಪರತೀರಪ್ರಾಪ್ತಿಸಾಧನಭೂತೇ ನಾವೌ ॥ ಸಂವತ್ಸರಸತ್ರಸ್ಯ ಸಮುದ್ರರೂಪತ್ವಂ ಶಾಖಾಂತರೇ ದರ್ಶಿತಂ—"ಸಮುದ್ರಂ ವಾ ಏತೇ ಪ್ಲವಂತೇ ಯೇ ಸಂವತ್ಸರಮುಪಯಂತಿ" ಇತಿ ॥ ತಥಾ ಸತಿ ತತ್ಪಾರನಯನಹೇತ್ವೋಃ ಸಾಮ್ನೋರ್ನೌರೂಪತ್ವಂ ಯುಕ್ತಂ ॥ ಅತೋ ಬೃಹದ್ರಥಂತರರೂಪಾಭ್ಯಾಂ ನೌಭ್ಯಾಮೇವ ಸಂವತ್ಸರಂ (ರ) ಸತ್ರರೂಪಂ ಸಮುದ್ರಂ ತರಂತಿ ಗವಾಮಯನಸ್ಯ ಪಾರಂ ಗಚ್ಛಂತೀತ್ಯರ್ಥಃ ॥

ಎರಡು ಸಾಮಮಂತ್ರಗಳನ್ನು ಪ್ರಶಂಸೆಮಾಡುವರು. **ತ್ವಾಮಿದ್ಧಿ ಹವಾಮಹೇ** (ಋ. ಸಂ. ೬–೪೬–೧) ಎಂಬ ಋಕ್ಕಿನಿಂದ ಉತ್ಪನ್ನವಾದ ಸಾಮವು **ಬೃಹತ್ಸಾಮ** ವೆಂಬ ಮಂತ್ರವು; **ಅಭಿತ್ವಾ ಶೂರ ನೋನುಮಃ** (ಋ.ಸ. ೭-೩೨-೨೨) ಎಂಬ ಋಕ್ಕಿನಿಂದ ಉತ್ಪನ್ನವಾದ ಮಂತ್ರವು **ರಥಂತರ**ವೆಂಬ ಸಾಮ ಮಂತ್ರವು. ಈ ಎರಡು ಸಾಮಮಂತ್ರಗಳೂ ಯಜ್ಞವೆಂಬ ಸಮುದ್ರವನ್ನು ದಾಟಿಸಲು ಸಾಧನಭೂತವಾದ ಎರಡು ದೋಣಿ (ನಾವೆ ಅಥವಾ ಹಡಗು) ಗಳಂತಿರುವವು ಒಂದು ಸಂವತ್ಸರಕಾಲದವರೆಗೂ ಮಾಡುವ ಸತ್ರಯಾಗವು ಸಮುದ್ರದಂತಿರುವವೆಂಬುದನ್ನು—**ಸಮುದ್ರಂ ವಾ ಏತೇ ಪ್ಲವಂತೇ ಯೇ ಸಂವತ್ಸರಮುಪಯಂತಿ**—ಶಾಖಾಂತರದಲ್ಲಿ ಹೇಳಿರುವುದು. ಆದ್ದರಿಂದ ಈ ಅಗಾಧ ಸಮುದ್ರವನ್ನು ದಾಟಿಸುವ ಸಾಧನಗಳಾದ ಈ ಸಾಮಮಂತ್ರಗಳನ್ನು ನೌಕೆಗಳಿಗೆ ಹೋಲಿಸಲಾಗಿದೆ. ಆದ್ದರಿಂದ ಬೃಹದ್ರಥಂತರರೂಪಗಳಾದ ಎರಡು ನೌಕೆಗಳಿಂದ ಸತ್ರರೂಪವಾದ ಸಮುದ್ರವನ್ನು ಎಂದರೆ ಗವಾಮಯನವೆಂಬ ಯಜ್ಞದ ದಡವನ್ನು ಸೇರಲು ಸಾಧ್ಯವಾಗುವುದು.

ಪಾದೌ ವೈ ಬೃಹದ್ರಥಂತರೇ ಶಿರ ಏತದಹಃ ಪಾದಾಭ್ಯಾಮೇವ ತಚ್ಛ್ರಿಯಂ ಶಿರೋಽಭ್ಯಾಯಂತಿ ॥

ಪ್ರಕಾರಾಂತರೇಣ ಪ್ರಶಂಸತಿ—ಯಥಾ ಮನುಷ್ಯಸ್ಯ ಪಾದೌ ತಥಾ ಸತ್ರಸ್ಯ ಬೃಹದ್ರಥಂತರೇ ಸಾಮನೀ ॥ ಏತಚ್ಚಾರಂಭಣೀಯಮಹಃ ಶಿರಃ ಸ್ಥಾನೀಯಂ ॥ ತತೋ ಯಥಾ-ಲೋಕೇ ಪುರುಷಾಃ ಪಾದಾಭ್ಯಾಮೇವ ದೇಶಾಂತರಾತ್ಸ್ವಗೃಹೇ ಗತ್ವಾ ತತ್ರ ಶಿರೋಽಭಿಲಕ್ಷ್ಯ ಅಭ್ಯಂಗಕರ್ಣಾಭರಣಾದಿರೂಪಾಂ ಶ್ರಿಯಮಾಯಂತಿ ಪ್ರಾಪ್ನುವಂತಿ, ಏವಮೇತೇ ಸತ್ರಿಣಃ ಸಾಮಭ್ಯಾಮೇತದಹಃ ಪ್ರಾಪ್ನುವಂತಿ ॥

ಪ್ರಕಾರಾಂತರವಾಗಿ ಪ್ರಶಂಸೆಮಾಡುವರು. ಪುರುಷನಿಗೆ ಪಾದಗಳು (ಕಾಲುಗಳು) ಹೇಗೋ ಹಾಗೆ ಸತ್ರಯಾಗಕ್ಕೆ ಬೃಹದ್ರಥಂತರವೆಂಬ ಎರಡು ಸಾಮಮಂತ್ರಗಳು. ಸತ್ರಯಾಗದ ಪ್ರಾರಂಭದ ದಿನವು ಈ ಸತ್ರಕ್ಕೆ ಶಿರಸ್ಸಿನಂತಿರುವುದು. ಲೋಕ ವ್ಯವಹಾರದಲ್ಲಿ ಪುರುಷರು ತಮ್ಮ ಕಾಲುಗಳಿಂದ ದೇಶಾಂತರಗಳನ್ನು ಸಂಚರಿಸಿ ಅಲ್ಲಿಂದ ಸಂಪಾದಿಸಿ ತಂದ ಆಭರಣಾದಿಗಳನ್ನು ತಮ್ಮ ಮನೆಗೆ ಬಂದ ಮೇಲೆ ಶಿರಸ್ಸು ಮೊದಲಾದ ಅಂಗಗಳಲ್ಲಿ ಧರಿಸಿ ಸುಖವನ್ನನುಭವಿಸುವರೋ ಆದರಂತೆ ಸತ್ರಯಾಗದಲ್ಲಿ ಪಾದಸ್ವರೂಪಗಳಾದ ಬೃಹದ್ರಥಂತರ ಸಾಮಗಳಿಂದ ಸಂಪತ್ತನ್ನು ಗಳಿಸಿ ಸುಖಪಡುವರು ಎಂದು ಅಭಿಪ್ರಾಯವು.

ಪಕ್ಷೌ ವೈ ಬೃಹದ್ರಥಂತರೇ ಶಿರ ಏತದಹಃ ಪಕ್ಷಾಭ್ಯಾಮೇವ ತಚ್ಛ್ರಿಯಂ ಶಿರೋಽಭ್ಯಾಯುವತೇ ॥

ಪುನರಪಿ ಪ್ರಕಾಂತರೇಣ ಪ್ರಶಂಸತಿ—ಯಥಾ ಲೋಕೇ ಪಕ್ಷೀ ಪಕ್ಷಾಭ್ಯಾಮೇವಾ-ಕಾಶೇ ಸಂಚರಞ್ಶಿರೋಽಭಿಲಕ್ಷ್ಯ ನಾನಾವಿಧದಿಗ್ದರ್ಶನರೂಪಾಂ ಶ್ರಿಯಂ ಮಿಶ್ರಯತ್ಯೇವಮ-ತ್ರಾಪಿ ಸಾಮಭ್ಯಾಮೇತಸ್ಮಿನ್ನಹನಿ ಶ್ರಿಯಮನುಷ್ಠಾನರೂಪಾಂ ಸತ್ರಿಣೋ ಯುಕ್ತೇ ಮಿಶ್ರ-ಯಂತಿ ॥

ಮೇಲೆ ಹೇಳಿದ ವಿಷಯವನ್ನು ಪ್ರಕಾರಾಂತರವಾಗಿ ವರ್ಣಿಸುವರು—ಲೋಕದಲ್ಲಿ ಅಂತರಿಕ್ಷದಲ್ಲಿ ಹಾರುವ ಪಕ್ಷಿಗಳು ತಮ್ಮ ಎರಡು ರೆಕ್ಕೆಗಳಿಂದ ಅಂತರಿಕ್ಷದಲ್ಲಿ ಹಾರಾಡುತ್ತಾ ನಾನಾದಿಕ್ಕುಗಳಲ್ಲಿ ಸಂಚರಿಸಿ ಅಲ್ಲಿನ ವೈವಿಧ್ಯವನ್ನು ಗ್ರಹಿಸಿ ಆಹಾರಾದಿ ಸಂಪತ್ತನ್ನು ಪಡೆಯುವವೋ ಅದರಂತೆ ಪುರುಷರೂ ಸಹ ಬೃಹದ್ರಥಂತರ ಸಾಮಗಳೆಂಬ ರೆಕ್ಕೆಗಳೇ ಸಾಧನವನ್ನಾಗಿ ಮಾಡಿಕೊಂಡು ಅವುಗಳ ಸಹಾಯದಿಂದ ಸತ್ರಯಾಗವನ್ನು ಮಾಡಿ ನಾನಾವಿಧ ಸುಖಸಂಪತ್ತುಗಳನ್ನು ಪಡೆದು ಅನುಭವಿಸುತ್ತಾರೆ.

ತೇ ಉಭೇ ನ ಸಮವಸೃಜ್ಯೇ ಯ ಉಭೇ ಸಮವಸೃಜೇಯುರ್ಯಥೈವ ಛಿನ್ನಾ ನೌರ್ಬಂಧನಾತ್ತೀರಂ ತೀರಮೃಚ್ಛಂತೀ ಪ್ಲವೇತೈವ-ಮೇವ ತೇ ಸತ್ರಿಣಸ್ತೀರಂ ತೀರಮೃಚ್ಛಂತಃ ಪ್ಲವೇರನ್ಯ ಉಭೇ ಸಮವಸೃಜೇಯುಃ ॥

**ಸಾಮದ್ವಯಸ್ಯ ಪರಿತ್ಯಾಗಂ ನಿಷೇಧತಿ— ಉಭೇ ಸಾಮನೀ ನ ಸಮವಸೃಜ್ಯೇ ನಪರಿತ್ಯಾಜ್ಯೇ ಏಕಸ್ಯಾಪ್ಯನನುಷ್ಠಾನಮುಭಯಪರಿತ್ಯಾಗಃ ॥ ಯೇ ಸತ್ರಿಣೋಽನಭಿಜ್ಞಾಃ ಸಂತ ಉಭಯಂ ಪರಿತ್ಯಜಂತಿ ತೇಷಾಂ ಛಿನ್ನನೌಸಾದೃಶ್ಯಂ ಪ್ರಸಜ್ಯೇತ ॥ ಲೋಕೇ ಹಿ ನಾವಿಕಃ ಸಾಯಂಕಾಲೇ ನಾವಂ ಕಯಾಚಿದ್ರಜ್ವಾ ತೀರಸ್ಥೇ ಸ್ಥಾಣೌ ಬಧ್ನಾತಿ । ಯದಾ ಪ್ರವಾಹವೇಗಾದ್ರಾತ್ರೌ ಸಾ ರಜ್ಜುಸ್ತ್ರುಟ್ಯತಿ ತದಾನೀಂ ಬಂಧನಸ್ಥಾಣೋಃ ಛಿನ್ನಾ ನೌಃ ಪ್ರವಾಹವೇಗೇನೇತಸ್ತತೋ ನೀಯಮಾನಾ ಪರತೀರಮರ್ವಾಕ್ತೀರಂ ಚ ಪುನಃ ಪುನಃ ಪ್ರಾಪ್ನುವತೀ ರಕ್ಷಕಾಭಾವಾತ್ಪ್ಲವೇತ ಯತ್ರ ಕ್ವಾಪಿ ಗಚ್ಛೇತ್ ॥ ಏವಮೇವ ತೇ ಸತ್ರಿಣಃ ಸಾಮದ್ವಯಾಭಾವೇ ತತ್ತೀರಸದೃಶಾನಹರ್ವಿಶೇಷಾನ್ಸೃಚ್ಛಂತೋಽನುತಿಷ್ಠಂತೋಽಪಿ ಪ್ಲವೇರನ್ವಿನಶ್ಯೇಯುರಿತ್ಯರ್ಥಃ॥ ಯೇ ಸಾಮದ್ವಯಮಪಿಪರಿತ್ಯಜಂತಿ ತೇಷಾಮೇವಾಯಂ ದೋಷ ಇತಿ ದರ್ಶಯಿತುಮುಭೇ ಸಮವಸೃಜೇಯುರಿತಿ ಪುನರಭಿಧಾನಂ ।**

ಈ ಸಾಮಮಂತ್ರಗಳನ್ನು ತ್ಯಜಿಸುವುದರಿಂದ ಉಂಟಾಗುವ ಹಾನಿಯು— ಮೇಲೆ ಹೇಳಿದ ಎರಡು ಸಾಮಮಂತ್ರಗಳನು ಪಠಿಸದೆ ಬಿಡಬಾರದು. ಇವುಗಳಲ್ಲಿ ಒಂದನ್ನು ಪಠಿಸದೆ ಬಿಟ್ಟರೂ ಎರಡನ್ನೂ ಬಿಟ್ಟಂತೆಯೇ ಆಗುವುದು. ಸತ್ರಯಾಗವನ್ನು ಮಾಡುವ ಪುರುಷರಲ್ಲಿ ಅನಭಿಜ್ಞ (ತಿಳಿಯದವರು) ರಾದವರು ಇದ್ದಲ್ಲಿ ಅವರು ಈ ಎರಡು ಸಾಮಮಂತ್ರಗಳನ್ನು ಬಿಟ್ಟಲ್ಲಿ ಅವರು ಒಡೆದುಹೋದ (ರಂಧ್ರವಿರುವ) ನಾವೆಯಲ್ಲಿದ್ದಂತಾಗುವುದು. ಲೋಕದಲ್ಲಿ ನಾವಿಕನಾದವನು ಸಾಯಂಕಾಲದಲ್ಲಿ ತನ್ನ ನಾವೆಯನ್ನು ತೀರಕ್ಕೆ ತಂದು ಒಂದು ಹಗ್ಗದಿಂದ ದಡದಲ್ಲಿರುವ ಮರಕ್ಕೆ ಅಥವಾ ಕಲ್ಲುಬಂಡೆಗೆ ಕಟ್ಟುತ್ತಾನೆ. ರಾತ್ರಿಕಾಲದಲ್ಲಿ ನಾವೆಗೆ ಕಟ್ಟಿದ್ದ ಹಗ್ಗವು ಕಿತ್ತುಹೋದಲ್ಲಿ ಆ ನಾವೆಯು ಕಟ್ಟಿದ್ದ ಸ್ಥಳದಿಂದ ಕಡಲಿ ಪ್ರವಾಹವೇಗದಿಂದ ಇಲ್ಲಿಂದಲ್ಲಿಗೆ ಒಯ್ಯಲ್ಪಡುತ್ತಾ ರಕ್ಷಕರಿಲ್ಲದೆ ಮುಂದಿನ ತೀರವನ್ನು ಸಮೀಪಿಸುತ್ತಾ ಮತ್ತೆ ಹಿಂದಕ್ಕೆ ಬರುತ್ತಾ ಎಲ್ಲಿಗಾದರು ಹೋಗಿಬಿಡುವುದು. ಇದೇ ರೀತಿಯಲ್ಲಿ ಸತ್ರಯಾಗವನ್ನು ಅನುಷ್ಠಾನಮಾಡುವವರು ಹಿಂದೆ ಹೇಳಿದ ಎರಡು ಸಾಮಮಂತ್ರಗಳನ್ನು ಪಠಿಸದೆ ತ್ಯಜಿಸಿದ್ದೇ ಆದರೆ ಅವರು ಹಗ್ಗ ಕಿತ್ತುಹೋದ ನೌಕೆಯಂತೆ ತೀರವನ್ನು ಮುಟ್ಟಿದರೂ ಎಂದರೆ ಕೊನೆಯವರೆಗೆ ಸತ್ರಯಾಗವನ್ನು ಮಾಡಿ ಮುಗಿಸಿದರೂ ಗಮ್ಯಸ್ಥಾನವನ್ನು ಸೇರದೆ ತೊಳಲಾಡುತ್ತಿರುವರು. ಎರಡು ಸಾಮಮಂತ್ರಗಳನ್ನು ಯಾರು ತ್ಯಜಿಸುವರೋ ಅವರು ದೋಷಕ್ಕೀಡಾಗಿ ಪರಿತಪಿಸುವರು. ಎಂಬರ್ಥವನ್ನು ಹೇಳುವುದಕ್ಕಾಗಿ ಮೇಲೆ ಹೇಳಿದ ಎರಡು ದೃಷ್ಟಾಂತಗಳನ್ನು ಉದಾಹರಿಸಲಾಗಿದೆ.

ತದ್ಯದಿ ರಥಂತರಮವಸೃಜೇಯುರ್ಬೃಹತೈವೋಭೇ ಅನವಸೃಷ್ಟೇ ಅಥ ಯದಿ ಬೃಹದವಸೃಜೇಯೂ ರಥಂತರೇಣೈವೋಭೇ ಅನವಸೃಷ್ಟೇ ॥

**ಉಭಯೋಃ ಸಾಮ್ನೋರ್ವಿಕಲ್ಪಿತತ್ವಾದೇಕಪರಿತ್ಯಾಗೇ ದೋಷೋ ನಾಸ್ತೀತ್ಯೇತದ್ದರ್ಶಯತಿ—ತತ್ತಯೋಃ ಸಾಮ್ನೋಃ ಮಧ್ಯೇ ಯದಾ ರಥಂತರಂ ಪರಿತ್ಯಜೇಯುಃ ಬೃಹದೇವಾನುತಿಷ್ಠೇಯುಸ್ತದಾ ಬೃಹತೈವ ಪ್ರಯೋಗಸಂಪೂರ್ತೇಃ ಫಲತಃ ಉಭಯಮಪ್ಯಪರಿತ್ಯಕ್ತಮೇವ ಭವತಿ ॥ ಏವಂ ಬೃಹತ್ಪರಿತ್ಯಾಗಪಕ್ಷೇಽಪಿ ರಥಂತರೇಣೈವ ಸಂಪೂರ್ತಿಃ ॥**

ಎರಡು ಸಾಮಗಳಲ್ಲಿ ಒಂದನ್ನು ಮಾತ್ರ ಬಿಟ್ಟರೆ ದೋಷವಿಲ್ಲವೆಂಬುದನ್ನು ತಿಳಿಸುವರು. ಮೇಲೆ ಹೇಳಿದ ಬೃಹತ್, ರಥಂತರ ಎಂಬ ಎರಡು ಸಾಮಗಳಲ್ಲಿ ರಥಂತರವನ್ನು ಬಿಟ್ಟರೆ ಮತ್ತು ಬೃಹತ್‌ಸಾಮದಿಂದಲೇ ಅನುಷ್ಠಾನಮಾಡಿದರೆ ಆಗ

ಸಂಪೂರ್ಣ ಫಲಪ್ರಾಪ್ತಿಯಾಗಿ ರಥಂತರವನ್ನು ಬಿಟ್ಟ ದೋಷವು ಸಂಭವಿಸುವುದಿಲ್ಲ. ಹಾಗೆಯೇ ಬೃಹತ್ಸಾಮವನ್ನು ಬಿಟ್ಟು ರಥಂತರ ಒಂದರಿಂದಲೇ ಅನುಷ್ಠಾನಮಾಡಿದರೂ ರಥಂತರಸಾಮದ ಮೂಲಕವೇ ಯಜ್ಞದ ಸಂಪೂರ್ಣಫಲಪ್ರಾಪ್ತಿಯಾಗುವುದು.

**ಯದ್ವೈರಥಂತರಂ ತದ್ವೈರೂಪಂ ಯದ್ಬೃಹತ್ತದ್ವೈರಾಜಂ ಯದ್ರಥಂತರಂ ತಚ್ಛಾಕ್ವರಂ ಯದ್ಬೃಹತ್ತದ್ರೈವತಮೇವಮೇತೇ ಉಭೇ ಅನವಸೃಷ್ಟೇ ಭವತಃ ॥**

**ಪ್ರಕಾರಾಂತರೇಣ ಸಾಮದ್ವಯಂ ಪ್ರಶಂಸತಿ—ಪೃಷ್ಠ್ಯಷಡಹೇ ಷಟ್ಸ್ವಪಿ ದಿವಸೇಷು ಕ್ರಮೇಣ ಪೃಷ್ಠಸ್ತೋತ್ರನಿಷ್ಪಾದಕಾನಿ ಷಟ್ಸಾಮಾನಿ ರಥಂತರಂ ವೈರೂಪಂ ಬೃಹದ್ವೈರಾಜಂ ಶಾಕ್ವರಂ ರೈವತಮಿತಿ । ತತ್ರ ರಥಂತರಸ್ಯ ಬೃಹತಶ್ಚೋತ್ಪತ್ತಿಸ್ಥಾನಂ ಪೂರ್ವಮುಕ್ತಂ । ಯದ್ಯಾವ ಇಂ ದ್ರತೇ ಶತಂ [೮-೭೦-೫] ಇತ್ಯಸ್ಯಾಮೃಚ್ಯುತ್ಪನ್ನಂ ವೈರೂಪಂ ಸಾಮ ಪಿಬಾ ಸೋಮಮಿಂದ್ರ ಮದಂತುತ್ವಾ [೭-೨೨-೧] ಇತ್ಯಸ್ಯಾಮೃಚ್ಯುತ್ಪನ್ನಂ ವೈರಾಜಂ ಸಾಮ । ಪ್ರೋಷ್ವಸ್ಮೈಪುರೋರಥಂ [೧೦-೧೩೩-೧] ಇತ್ಯಸ್ಯಾಂ ಗೀಯಮಾನಂ ಶಾಕ್ವರಂ ಸಾಮ ॥ ರೇವತೀರ್ನಃ ಸಧಮಾದೇ [೧-೩೦-೧೩] ಇತ್ಯಸ್ಯಾಂ ಗೀಯಮಾನಂ ರೈವತಂ ಸಾಮ ತತ್ರ ಬೃಹದ್ರಥಂತರಯೋರೇವಾತ್ರೋತ್ತರ ಸ್ಥಾನೀಯತ್ವಾದಶೇಷಸಾಮಫಲಸಿಧ್ಯರ್ಥಮೇತೇ ಉಭೇ ಅಪರಿತ್ಯಕ್ತೇ ಏವ ಭವತಃ॥ ಉಭಯ ಪರಿತ್ಯಾಗಃ ಸರ್ವಥಾ ನ ಯೋಗ್ಯ ಇತ್ಯರ್ಥಃ ॥**

ಪ್ರಕಾರಾಂತರವಾಗಿ ಸಾಮಮಂತ್ರಗಳನ್ನು ಪ್ರಶಂಸೆಮಾಡುವರು—ಪೃಷ್ಠ್ಯಷಡಹವೆಂಬ ಯಾಗದ ಆರು ದಿವಸಗಳಲ್ಲಿ ಕ್ರಮವಾಗಿ ಪೃಷ್ಠಸ್ತೋತ್ರನಿಷ್ಪಾದಕಗಳಾದ ಆರು ಸಾಮಮಂತ್ರಗಳಿರುವವು. ಅವು ಯಾವವೆಂದರೆ—**ರಥಂತರಂ ವೈರೂಪಂ ಬೃಹತ್ ವೈರಾಜಂ ಶಾಕ್ವರಂ ರೈವತಂ** ಎಂದು. ಈ ಆರು ಸಾಮಮಂತ್ರಗಳಲ್ಲಿ **ರಥಂತರ** ಮತ್ತು **ಬೃಹತ್** ಎಂಬ ಸಾಮಗಳ ಉತ್ಪತ್ತಿಸ್ಥಾನವಾದ ಋಕ್ಕುಗಳನ್ನು ತಿಳಿಸಲಾಗಿದೆ. ಈಗ **ಯದ್ದ್ಯಾವ ಇಂದ್ರ ತೇ ಶತಂ** (ಋ.ಸಂ. ೮-೭೦-೫) ಎಂಬ ಋಕ್ಕಿನಿಂದ **ವೈರೂಪ**ವೆಂಬ ಸಾಮವು ನಿಷ್ಪನ್ನವಾಗಿದೆ. **ಪಿಬಾ ಸೋಮಮಿಂದ್ರ ಮಂದತು ತ್ವಾ** (ಋ. ಸಂ. ೭-೨೨-೧) ಎಂಬ ಋಕ್ಕಿನಿಂದ **ವೈರಾಜ**ವೆಂಬ ಸಾಮವು ನಿಷ್ಪನ್ನವಾಗಿದೆ. **ಪ್ರೋಷ್ವಸ್ಮೈ ಪುರೋರಥಂ** (ಋ.ಸಂ. ೧೦-೧೩೩-೧) ಎಂಬ ಋಕ್ಕಿನಿಂದ **ಶಕ್ವರ** ಎಂಬ ಸಾಮವು ನಿಷ್ಪನ್ನವಾಗಿದೆ. **ರೇವತೀರ್ನಃ ಸಧಮಾದೇ** (ಋ.ಸಂ. ೧-೩೦-೧೩) ಎಂಬ ಋಕ್ಕಿನಿಂದ **ರೈವತ** ಎಂಬ ಸಾಮವು ನಿಷ್ಪನ್ನವಾಗಿದೆ. ಇಲ್ಲಿ ಬೃಹದ್ರಥಂತರ ಸಾಮಗಳಂತೆ ಇತರ ಸಾಮಗಳೂ ಇರುವುದರಿಂದ ಯಾವುದನ್ನಾದರೂ ಪಠಿಸಿದರೆ ಆಯಿತೆಂದು ನಿಶ್ಚಯಿಸಿ ಬೃಹತ್ ರಥಂತರ ಸಾಮಗಳನ್ನು ಬಿಟ್ಟುಬಿಡುವ ಸಂಭವವುಂಟು. ಈ ಎರಡು ಸಾಮಗಳನ್ನು ಎಂದಿಗೂ ಬಿಡಬಾರದು. ಅದು ಯುಕ್ತವಲ್ಲ.

**ಯೇ ವಾ ಏವಂ ವಿದ್ವಾಂಸ ಏತದಹರುಪಯಂತ್ಯಾಪ್ತ್ವಾ ವೈ ತೇಽಹಃಶಃ ಸಂವತ್ಸರಮಾಪ್ತ್ವಾಽರ್ಧಮಾಸಶ ಆಪ್ತ್ವಾ ಮಾಸಶ ಆಪ್ತ್ವಾ ಸ್ತೋಮಾಂಶ್ಚ ಛಂದಾಂಸಿ ಚಾಽಽಪ್ತ್ವಾ ಸರ್ವಾ ದೇವತಾಸ್ತಪ ಏವ ತಪ್ಯಮಾನಾಃ ಸೋಮಪೀಥಂ ಭಕ್ಷಯಂತಃ ಸಂವತ್ಸರಮಭಿಷುಣ್ವಂತ ಆಸತೇ ॥**

**ಉಕ್ತಸ್ಯಾಹ್ನೋಽನುಷ್ಠಾನಂ ಪ್ರಶಂಸತಿ—ಯೇ ಸತ್ರಿಣಃ ಪೂರ್ವೋಕ್ತಪ್ರಕಾರೇಣೈತಸ್ಯ ಅಹ್ನೋ ಮಹಿಮಾನಂ ವಿದ್ವಾಂಸ ಏತದಹರನುತಿಷ್ಠಂತಿ ತೇ ಸತ್ರಿಣಃ ಸಂವತ್ಸರಸತ್ರಮುಹರ್ದ್ವಾರೇಣಾರ್ಧಮಾಸದ್ವಾರೇಣ ಮಾಸದ್ವಾರೇಣ ಸ್ತೋಮಚ್ಛಂದೋದ್ವಾರೇಣ ಸರ್ವದೇವತಾದ್ವಾರೇಣ ಪ್ರಾಪ್ಯ ತಪಶ್ಚರಂತೋ ನಿರ್ವಿಘ್ನಂ ಸೋಮಪಾನಂ ಕುರ್ವಂತಃ ಸಂವತ್ಸರಮಪಿ ನೈರಂತರ್ಯೇಣ ಸೋಮಮಭಿಷುಣ್ವಂತ ಆಸತೇ ವಿಘ್ನಃ ಕೋಽಪಿ ನಭವತೀತ್ಯರ್ಥಃ ॥**

ವಿದ್ವಾಂಸನಾದ ಯಾವ ಪುರುಷರು ಇದುವರೆಗೂ ಹೇಳಿದ ಸತ್ರಯಾಗದ ಅನುಷ್ಠಾನವಿವರಗಳನ್ನು ತಿಳಿದು ಅದರಂತೆ ಆಚರಿಸುವರೊ ಸತ್ರಯಾಗವನ್ನು ಅನುಷ್ಠಾನಮಾಡುವ ಆ ಪುರುಷರು ಸಂವತ್ಸರಸತ್ರವನ್ನು ಮೊದಲ ದಿನದಲ್ಲಿ ಪ್ರಾರಂಭಿಸಿ ಅರ್ಧಮಾಸಗಳ ಮೂಲಕವಾಗಿಯೂ, ಮಾಸಗಳ ಮೂಲಕವಾಗಿಯೂ ಸ್ತೋಮ ಮತ್ತು ಛಂದಸ್ಸುಗಳಿಗನುಸಾರವಾಗಿಯೂ, ಸಮಸ್ತದೇವತೆಗಳನ್ನು ಆರಾಧಿಸುವ ಮೂಲಕವಾಗಿಯೂ ಮಾಡುತ್ತ ತಪಸ್ಸಿನಲ್ಲಿ ನಿರತನಾಗಿ ಸೋಮಪಾನವನ್ನು ಮಾಡುತ್ತಾ ಸಂವತ್ಸರಪರ್ಯಂತರವೂ ನಿರಂತರವಾಗಿ ದೇವತೆಗಳಿಗಾಗಿ ಸೋಮರಸವನ್ನು ಹಿಂಡಿ ಸಿದ್ಧಪಡಿಸುತ್ತಲೂ (ಸೋಮಾಭಿಷಣವನ್ನು ಮಾಡುತ್ತಲೂ) ಇರುವರೋ ಅವರಿಗೆ ಈ ಯಜ್ಞಾನುಷ್ಠಾನಕಾರ್ಯಗಳಲ್ಲಿ ಯಾವ ವಿಘ್ನಗಳೂ ಸಂಭವಿಸುವುದಿಲ್ಲ.

ಯೇ ವಾ ಅತ ಊರ್ಧ್ವಂ ಸಂವತ್ಸರಮುಪಯಂತಿ ಗುರುಂ ವೈ ತೇ ಭಾರಮಭಿನಿದಧತೇ ಸ ವೈ ಗುರುರ್ಭಾರಃ ಶೃಣಾತ್ಯಥ ಯ ಏನಂ ಪರಸ್ತಾತ್ಕರ್ಮಭಿರಾಪ್ತ್ವಾಽವಸ್ತಾದುಪೈತಿ ಸ ವೈ ಸ್ವಸ್ತಿ ಸಂವತ್ಸರಸ್ಯ ಪಾರಮಶ್ನುತೇ ॥

**ಅಥ ಸತ್ರಗತಸ್ಯೋತ್ತರಪಕ್ಷಸ್ಯ ಪ್ರತ್ಯವರೋಹಂ ವಿಧತ್ತೇ—ಯೇ ವೈಕೇಚನ ಮಂದಬುದ್ಧಯಃ ಸತ್ರಿಣೋಽತ ಆರಂಭಣೀಯಂ ಚತುರ್ವಿಂಶಮಹಃ ಪ್ರಾರಭ್ಯೋರ್ಧ್ವಮಾನುಲೋಮ್ಯೇನೈತತ್ಸಂವತ್ಸರ ಸತ್ರಮುಪಯಂತಿ, ಅನುತಿಷ್ಠಂತಿ ತೇ ಸತ್ರಿಣೋ ಗುರುಂ ವೈ ಪ್ರೌಢಮೇವ ಭಾರಮಭಿನಿದಧತೇ ಸ್ವಸ್ಯೋಪರಿ ಸ್ಥಾಪಯಂತಿ॥ ಸ ವೈ ಗುರುರ್ಭಾರಃ ಸ ಏವ ಶೃಣಾತಿ ಭಾರವಾಹಕಾನ್ಸತ್ರಿಣೋ ವಿನಾಶಯತಿ ॥ ಅಥ ಪೂರ್ವೋಕ್ತವೈಲಕ್ಷಣ್ಯೇನ ಸತ್ರಿಣ ಏನಂ ಸಂವತ್ಸರಂ ಪರಸ್ತಾದಾದಿತ ಆರಭ್ಯ ವಿಹಿತೈಃ ಕರ್ಮಭಿಃ ಪೂರ್ವಪಕ್ಷಗತೈರಾಪ್ತ್ವಾಽನುಷ್ಠಾಯೋತ್ತರಪಕ್ಷೇಽವಸ್ತಾತ್ಪ್ರತ್ಯವರೋಹಕ್ರಮೇಣೋಪೈತಿ । ಉಪಯಂತ್ಯನುತಿಷ್ಠಂತಿ । ಸ ವೈ ತ ಏವ ಸತ್ರಿಣಃ ಸ್ವಸ್ತಿ ಕ್ಷೇಮೇಣ ಸಂವತ್ಸರಸತ್ರಸ್ಯ ಪಾರಂ ಸಮಾಪ್ತಿಮಶ್ನುತೇ ಪ್ರಾಪ್ನುವಂತಿ॥ ಅಯಮರ್ಥಃ ॥ ಅಸ್ತಿ ಕಿಂಚಿದ್ವಿಷುವನಾಮಕಂ ಸಂವತ್ಸರಸತ್ರಸ್ಯ ಮಧ್ಯೇ ಪ್ರಧಾನಮಹಸ್ತಸ್ಯಾಧಸ್ತಾತ್ ಷಣ್ಮಾಸಾಃ ಸೋಽಯಂ ಪ್ರಥಮಃ ಪಕ್ಷ ಉಪರಿಷ್ಟಾದಪಿ ಷಣ್ಮಾಸಾಃ ಸೋಽಯಮುತ್ತರಃ ಪಕ್ಷಃ॥ ಯಥಾ ಲೋಕೇ ಕಸ್ಯಾಶ್ಚಿಚ್ಛಾಲಾಯಾಃ ಸ್ತಂಭಯೋಃ ಪೂರ್ವಂ ದೀರ್ಘಂ ವಂಶಂ ಪ್ರೌಢಂ ಪ್ರಸಾರ್ಯೋಭಯೋಃ ಪಾರ್ಶ್ವಯೋಃ ಪಕ್ಷದ್ವಯಂ ಕುರ್ವಂತಿ, ಏವಂ ಸಂವತ್ಸರ ಸತ್ರಸ್ಯಾಪಿ ॥ ತಥಾಚ ಶಾಖಾಂತರೇ ಶ್ರೂಯತೇ ‘ಯಥಾ ಶಾಲಾಯೈ ಪಕ್ಷಸೀ ಮಧ್ಯಮಂ ವಂಶಮಭಿಸಮಾಯಚ್ಛತಿ । ಏವಂ ಸಂವತ್ಸರಸ್ಯ ಪಕ್ಷಸೀ ದಿವಾಕೀರ್ತ್ಯಮಭಿಸಂತನ್ವಂತಿ’ ಇತಿ ॥ ದಿವೈವ ಮಂತ್ರಾಣಾಂ ಕೀರ್ತನೀಯತ್ವಾದ್ವಿಷುವನಾಮಕಮೇಕಂ ದಿವಾಕೀರ್ತ್ಯಂ ॥ ತತ್ರ ಪೂರ್ವಪಕ್ಷರೂಪೇ ಮಾಸಷಟ್ಕೇ ಯಃ ಪ್ರಯೋಗಕ್ರಮ ಏವಮುತ್ತರಪಕ್ಷೇಽಪಿ ಮಾಸಷಟ್ಕೇಽಪಿ**

**ತೇನೈವ ಕ್ರಮೇಣ ಸ ಪ್ರಯೋಗೋ ಯದ್ಯನುಷ್ಠೀಯೇತ ತದಾನೀಮತಿಭಾರಃ ಸ್ಯಾತ್॥ನೂತನಾನುಷ್ಠಾನವಿಶೇಷಾಭಾವೇನಾಽಽಲಸ್ಯೇ ಸತಿ ವೈಕಲ್ಯಂ ಭವತಿ ಸ ಏವ ಭಾರ ಇತ್ಯುಚ್ಯತೇ॥ ಅತಸ್ತತ್ಪರಿಹಾರಾರ್ಥಂ ಪೂರ್ವೇಷು ಷಟ್ಸು ಮಾಸೇಷು ಯಾನಿ ಕರ್ಮಾಣಿ ಯೇನಾಽಽನುಪೂರ್ವ್ಯೇಣಾನುತಿಷ್ಠಿತಾನಿ ತಾನಿ ಕರ್ಮಾಣ್ಯುತ್ತರೇಷು ಮಾಸೇಷು ತದ್ವಿಪರೀತಕ್ರಮೇಣಾನುಷ್ಠೇಯಾನಿ । ತಥಾ ಸತ್ಯಾಲಸ್ಯಾಭಾವಾದವಿಘ್ನೇನೈವ ಸಂವತ್ಸರಸತ್ರಂ ಸಮಾಪ್ಯತ ಇತಿ ॥**

ವಿವೇಕಹೀನರಾದ ಕೆಲವುಮಂದಿ ಸತ್ರಯಾಗಕರ್ತರು ಆರಂಭಣೀಯ ದಿನವಾದ ಚತುರ್ವಿಂಶವೆಂಬ ದಿನದಲ್ಲಿ ಸತ್ರಯಾಗವನ್ನು ಮಾಡುವುದಕ್ಕೆ ಪ್ರಾರಂಭಿಸಿ ಯಜ್ಞಾನುಷ್ಠಾನಗಳನ್ನು ಅನುಲೋಮಕ್ರಮವಾಗಿ ಎಂದರೆ ಹಿಂದುಮುಂದಾಗಿ ಮಾಡುತ್ತಾ ಸಂವತ್ಸರದವರೆಗೂ ಹಾಗೆಯೇ ಮಾಡಿ ಕೊನೆಮುಟ್ಟಿಸುವರು. ಇಂತಹ ಅವಿವೇಕಿಗಳು ಯಜ್ಞಾನುಷ್ಠಾನವನ್ನು ಕ್ರಮವಾಗಿ (ವಿಧ್ಯುಕ್ತವಾಗಿ) ಮಾಡದಿರುವುದರಿಂದ ತಮ್ಮ ಅತಿಯಾದ ಭಾರವನ್ನು ಹೊತ್ತಂತಿರುವರು. ಇಂತಹ ಭಾರವು (Responsibility) ಸತ್ರಮಾಡುವ ಈ ಅವಿವೇಕಿಗಳನ್ನು ನಾಶಮಾಡುವುದು. ಆದರೆ ವಿವೇಕಿಗಳಾದವರು ಮೊದಲು ಹೇಳಿದಂತೆ ಪೂರ್ವಪಕ್ಷದಲ್ಲಿ ಎಂದರೆ ಸಂವತ್ಸರದ ಮೊದಲ ಆರುತಿಂಗಳಲ್ಲಿ ಕ್ರಮಪ್ರಕಾರ ಸತ್ರಯಾಗಕರ್ಮಗಳನ್ನು ಮಾಡಿ ಮುಂದೆ ಎಂದರೆ ಉತ್ತರ ಪಕ್ಷದಲ್ಲಿ ಎಂದರೆ ಸಂವತ್ಸರದ ಮುಂದಿನ ಭಾಗವಾದ ಕೊನೆಯ ಆರುತಿಂಗಳಲ್ಲಿ ಮೊದಲು ಮಾಡಿದ ಕರ್ಮಗಳನ್ನೇ ಅನುಲೋಮಕ್ರಮದಿಂದ ಎಂದರೆ ಹಿಂದುಮುಂದಾಗಿ ಸಂವತ್ಸರದವರೆಗೆ ಮಾಡಿ ಮುಗಿಸುವರು. ಇಂತಹ ವಿವೇಕಿಗಳಾದ ಸತ್ರಕರ್ಮಕರ್ತರು ಸ್ವಸ್ತಿದಾಯಕವಾದ ಕ್ಷೇಮವನ್ನೂ ಹೊಂದಿ ಸಂವತ್ಸರದವರೆಗೆ ಸತ್ರಯಾಗವನ್ನು ನಿರ್ವಿಘ್ನವಾಗಿ ಮಾಡಿ ಮುಗಿಸಿ ಅದರ ಫಲವನ್ನನುಭವಿಸುವರು. ಮುಖ್ಯಾಭಿಪ್ರಾಯವೇನೆಂದರೆ--ಒಂದು ಸಂವತ್ಸರದಲ್ಲಿ ಇರುವ ೩೬೦ ದಿನಗಳನ್ನು ಎರಡುಭಾಗಮಾಡಿದರೆ ಮೊದಲನೇ ೧೮೦ ದಿನಗಳಿಗೆ ಪೂರ್ವಪಕ್ಷವೆಂದು ಹೆಸರು. ೧೮೧ ರಿಂದ ೩೬೦ ದಿನಗಳವರೆಗಿನ ದಿನಗಳಿಗೆ (೧೮೦) ಉತ್ತರಪಕ್ಷವೆಂದು ಹೆಸರು. ಇವೆರಡಕ್ಕೂ ಮಧ್ಯದಲ್ಲಿರುವ (೧೮೧) ದಿನಕ್ಕೆ **ವಿಷುವತ್** ಎಂದು ಹೆಸರು. ಹೇಗೆಂದರೆ ಯಾವುದಾದರೂ ಒಂದು ವಿಸ್ತಾರವಾದ ಶಾಲೆ ಅಥವಾ ಕಟ್ಟಡದ ಮಧ್ಯದಲ್ಲಿ ಎತ್ತರವಾದ ಒಂದು ಕಂಭವನ್ನು ನೆಟ್ಟರೆ ಆ ಕಂಭದ ಮುಂದಿನ ಭಾಗವು ಪೂರ್ವಪಕ್ಷವೆಂದೂ ಕಂಭದ ಹಿಂದಿನ ಭಾಗವು ಉತ್ತರಪಕ್ಷವೆಂದೂ ಕಂಭವು ಅಥವಾ ಕಂಭವನ್ನು ನೆಟ್ಟಿರುವ ಪ್ರದೇಶವು ವಿಷುವತ್ (ಮಧ್ಯಪ್ರದೇಶ) ಎಂದೂ ಹೇಳಲ್ಪಡುವುದು. ಈ ವಿಷಯವನ್ನು ಶಾಖಾಂತರದಲ್ಲಿ ಈರೀತಿ ಹೇಳಲಾಗಿದೆ— **ಯಥಾ ಶಾಲಾಯೈ ಪಕ್ಷಸೀ ಮಧ್ಯಮಂ ವಗ್ಂಶಮಭಿಸಮಾಯಚ್ಛತಿ ಏವಗ್ಂ ಸಂವತ್ಸರಸ್ಯ ಪಕ್ಷಸೀ ದಿವಾಕೀರ್ತ್ಯಮಭಿಸಂತನ್ವಂತಿ** ಎಂದು. ಮಧ್ಯದ ದಿನವಾದ ವಿಷುವತ್ ಎಂಬ ದಿನದಲ್ಲಿ ಮಂತ್ರಗಳೆಲ್ಲವನ್ನೂ ಹಗಲಿನಲ್ಲಿಯೇ ಹೇಳಿ ಮುಗಿಸುವುದರಿಂದ ಈ ವಿಷುವನ್ನಾಮದಿನಕ್ಕೆ ದಿವಾಕೀರ್ತ್ಯಂ ಎಂದೂ ಹೆಸರು. ಪೂರ್ವಪಕ್ಷರೂಪವಾದ ಮೊದಲನೇ ಆರುತಿಂಗಳಲ್ಲಿ ಯಾವ ಪುರುಷನು ಪ್ರಯೋಗಕ್ರಮವನ್ನು ಅನುಸರಿಸುವನೋ ಅದೇ ಪ್ರಯೋಗಕ್ರಮವನ್ನು ಉತ್ತರ ಪಕ್ಷದಲ್ಲಿಯೂ (ಸಂವತ್ಸರದ ಎರಡನೇಭಾಗ ಎಂದರೆ ೭ ನೇ ತಿಂಗಳಿಂದ ೧೨ ನೇ ತಿಂಗಳ ಕೊನೆಯವರೆಗೆ) ಅನುಷ್ಠಾನ ಮಾಡುವನೋ ಆ ಪುರುಷನು ಅತಿಭಾರವನ್ನು ಅಥವಾ ವೈಕಲ್ಯವನ್ನು (ವೈಕಲ್ಯವೆಂದರೆ ತಪ್ಪುತಪ್ಪಾಗಿ ಮಾಡುವುದು) ಹೊತ್ತಂತಾಗುವುದು. ಆದ್ದರಿಂದ ಮೊದಲ ಆರುತಿಂಗಳವರೆಗೂ ಕಾರ್ಯಕಲಾಪಗಳನ್ನು ವಿಧ್ಯುಕ್ತವಾಗಿ ಮಾಡಿ ಮುಗಿಸಿ ಅದೇ ಕಾರ್ಯಕಲಾಪಗಳನ್ನು ಕೊನೆಯ ಆರುತಿಂಗಳುಗಳಲ್ಲಿ ಅವರೋಹ ಅಥವಾ ಹಿಂದುಮುಂದಾಗಿ ಮಾಡಿ ಮುಗಿಸಬೇಕು. ಹೇಗೆಂದರೆ ಮೊದಲ ಆರುತಿಂಗಳಲ್ಲಿ ಕರ್ಮಗಳನ್ನು ೧, ೨, ೩, ೪, ೫, ೬ ಎಂಬ ಕ್ರಮದಂತೆ ಮಾಡಿದರೆ ಕೊನೆಯ ಆರು ತಿಂಗಳಲ್ಲಿ ಅದೇ ಕರ್ಮಗಳನ್ನು ೬, ೫, ೪, ೩, ೨, ೧ ಎಂಬ ಕ್ರಮದಿಂದ ಮಾಡಬೇಕು (ಇದೆಲ್ಲವನ್ನೂ ನಾವು ಮೊದಲ ಪೀಠಿಕೆಯಲ್ಲಿಯೇ ಹೇಳಿದ್ದೇವೆ) ಹೀಗೆ ಮಾಡಿದರೆ ಈ ಸತ್ರಯಾಗದ ಕಾರ್ಯಕಲಾಪಗಳೆಲ್ಲಾ ಸಂವತ್ಸರದವರೆಗೂ ನೆರವೇರಿ ಸಮಾಪ್ತವಾಗುವುದು ಎಂದಭಿಪ್ರಾಯವು.

*English Translation*

**On the importance of the two Samans, Rathantaram and Brihat. They are not to be used at the same time. The succession of the Sacrificial days in the second half of the year is inverted.**

The two principal Samans at the Sattra are the Brihat and Rathantaram· These are the two boats of the sacrifice, landing it on the other shore in the celestial world. By means of them the sacrificers cross the year just as one crosses a river· Brihat and Rathantara are the two feet of the sacrifice; the performance of the day is the head. By means of the two feet, men gain their fortune consisting in gold, jewels, & c· which is to be put as ornament on their heads.

Brihat and Rathantaram are two wings; the performance of the day is the head. By means of these two wings they direct their heads to fortune, and dive into it.

Both these Samans are not be let off together. Those performers of the sacrificial session who would do so, would be floating from one shore to the other without being able to land anywhere, just as a boat whose cords are cut off, is floating from shore to shore. Should they let off the Rathantaram, then by means of the Brihat both are kept. Should be let off the Brihat, then by means of the Rathantaram both are kept. The same is the case with the other Sama Prishthas. Vairupam is the same as Brihat, Vairaja is the same as Brihat, Sakvaram is the same as Rathantaram, and Raivatam is the same as Brihat.

Those who having such a knowledge begin the Sattra (sacrificial session) on this day, hold their sacrificial year in performing austerities, enjoying the Soma draught, and preparing the Soma juice, after having reached the year as divided into half months, months, and days.

When they (those who hold the Sattra) begin the performance of the other part of the sacrifice, they lay down their heavy burden for the heavy burden if they are not released, breaks them down. Therefore, he who after having reached this the central day of the yearly sacrificial session by means of performing the ceremonies one after the other, begins the second part of the sacrificial session by inverting the order of the ceremonies, arrives safely at the end of the year.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಸಪ್ತದಶಾಧ್ಯಾಯಸ್ಯ ಸಪ್ತಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನೇಳನೆಯ ಅಧ್ಯಾಯದಲ್ಲಿ ಏಳನೆಯ ಖಂಡವು ಸಮಾಪ್ತವಾದುದು.

# ಅಥ ಸಪ್ತದಶಾಧ್ಯಾಯೇ ಅಷ್ಟಮಃ ಖಂಡಃ

## ಹದಿನೇಳನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು



[ಸತ್ರಯಾಗದ ಚತುರ್ವಿಂಶ ಮತ್ತು ಮಹಾವ್ರತ ಎಂಬ ದಿನಗಳಲ್ಲಿ ಪಠಿಸಬೇಕಾದ ನಿಷ್ಕೇವಲ್ಯಶಸ್ತ್ರಗಳಲ್ಲಿ ಅನುಸರಿಸಬೇಕಾದ ಕೆಲವು ವ್ಯತ್ಯಾಸಗಳು]



ಯದ್ವೈ ಚತುರ್ವಿಂಶಂ ತನ್ಮಹಾವ್ರತಂ ಬೃಹದ್ದಿವೇನಾತ್ರ ಹೋತಾ ರೇತಃ ಸಿಂಚತಿ ತದದೋ ಮಹಾವ್ರತೀಯೇನಾಹ್ನಾ ಪ್ರಜನಯತಿ ಸಂವತ್ಸರೇ ಸಂವತ್ಸರೇ ವೈ ರೇತಃ ಸಿಕ್ತಂ ಜಾಯತೇ ತಸ್ಮಾತ್ಸ-ಮಾನಂ ಬೃಹದ್ದಿವೋ ನಿಷ್ಕೇವಲ್ಯಂ ಭವತ್ಯೇಷ ಹ ವಾ ಏನಂ ಪರಸ್ತಾತ್ಕರ್ಮಭಿರಾಪ್ತ್ವಾಽವಸ್ತಾದುಪೈತಿ ಯ ಏವಂ ವಿದ್ವಾನೇ-ತದಹರುಪೈತಿ ಸ್ವಸ್ತಿ ಸಂವತ್ಸರಸ್ಯ ಪಾರಮಶ್ನುತೇ ಯ ಏವಂ ವೇದ ॥

ಅಥಾಸ್ಮಿನ್ನಾರಂಭಣೀಯೇ ಚತುರ್ವಿಂಶೇಽಹನಿ ನಿಷ್ಕೇವಲ್ಯಶಸ್ತ್ರೇ ಕಂಚಿದ್ವಿಶೇಷಂ ವಿಧತ್ತೇ—ಯದೇತದ್ದ್ವಿತೀಯಂ ಚತುರ್ವಿಂಶಮಹಸ್ತದೇವ ಸಂವತ್ಸರಸತ್ರಸ್ಯೋಪಾಂತ್ಯಂ ಮಹಾವ್ರತಾಖ್ಯಮಹರ್ಭವತಿ॥ ಆರೋಹಕ್ರಮೇಣ ಚತುರ್ವಿಂಶಾಖ್ಯಂ ಪೂರ್ವಪಕ್ಷಗತಂ ದ್ವಿತೀ-ಯಮಹರವರೋಹಕ್ರಮೇಣ ಮಹಾವ್ರತಾಖ್ಯಮುಪಾಂತ್ಯತ್ವಾದ್ದ್ವಿತೀಯಮಹರ್ಭವತಿ ॥ ಅನೇನ ದ್ವಿತೀಯತ್ವಸಾಮ್ಯೇನ ತಯೋಃ ಪರಸ್ಪರಮೈಕ್ಯಮುಪಚರ್ಯತೇ ॥ ಕಿಂಚೋಭ-ಯತ್ರ ಬೃಹದ್ದಿವಸಾಮ್ಯಮಸ್ತಿ ತದಿದಾಸ ಭುವನೇಷು ಜ್ಯೇಷ್ಠಂ [೧೦-೧೨೦-೧] ಇತ್ಯೇತತ್ಸೂಕ್ತಂ ಬೃಹದ್ದಿವಶಬ್ದೇನ ವಿವಕ್ಷಿತಂ ಪ್ರೌಢಸ್ಯ ದ್ಯುಲೋಕಸ್ಯ ಪ್ರಾಪ್ತಿಹೇತುತ್ವಾತ್ ॥ ಏತದೇವೋಭ-ಯತ್ರ ನಿಷ್ಕೇವಲ್ಯಶಸ್ತ್ರೇ ಕ್ರಿಯತೇ ॥ ತಥಾ ಸತ್ಯಸ್ಮಿನ್ದ್ವಿತೀಯೇಽಹ್ನಿ ಚತುರ್ವಿಂಶನಾಮಕೇ ಬೃಹದ್ದಿವನಾಮ್ನಾ ತದಿದಾಸೇತ್ಯಾದಿನಾ ನಿಷ್ಕೇವಲ್ಯಶಸ್ತ್ರಗತಸೂಕ್ತೇನ ಹೋತಾ ರೇತಃ ಸಿಂಚತಿ ತದಹಃ ॥ ತದೇತತ್ಸಿಕ್ತಂ ರೇತೋ ಮಹಾವ್ರತೀಯೇನೋಪಾಂತ್ಯೇನಾಹ್ನಾ ಬೃಹದ್ದಿವಾಖ್ಯ ನಿಷ್ಕೇವಲ್ಯಸೂಕ್ತಯುಕ್ತೇನ ಪ್ರಜನಯತಿ ॥ ಅತ್ರ ಸತ್ರಸಂವತ್ಸರಮಧ್ಯ ಏವ ರೇತಃ ಸೇಕಃ ಪ್ರಜನನಂಚ ದ್ವಿತೀಯೋಪಾಂತ್ಯದಿವಸಯೋಃ ಸಂಪನ್ನಂ॥ ತತೋ ಲೋಕೇಽಪ್ಯೇಕೈಕಸ್ಮಿನ್ಸಂವ-ತ್ಸರೇ ರೇತಃಸೇಕಃ ಉತ್ಪತ್ತಿಶ್ಚೇತ್ಯುಭಯಂ ಸಂಪದ್ಯತೇ ॥ ಯಸ್ಮಾದ್ದ್ವಿತೀಯೋಪಾಂತ್ಯ

**ಯೋರಹ್ನೋರುಭಯೋರಪಿ ಮಿಲಿತ್ವಾ ಪ್ರಾಣಿನೋ ಜನ್ಮರೂಪಮೇಕಂ ಕಾರ್ಯಮಪೇಕ್ಷಿತಂ॥ ತಸ್ಮಾದ್ಬೃಹದ್ದಿವನಾಮಕೇನ ಸೂಕ್ತೇನೋಭಯತ್ರ ನಿಷ್ಕೇವಲ್ಯಶಸ್ತ್ರಂ ಸಮಾನಮೇಕರೂಪಂ ಕರ್ತವ್ಯಂ ॥ ಯಃ ಪುಮಾನೇವಂ ಮಹಾವ್ರತಾಹಸಾಮ್ಯೇನ ಅತ್ರ ಸತ್ರಾರ್ಥಂ ನಿಷ್ಕೇವಲ್ಯ-ಕರ್ತವ್ಯತಾಂ ವಿದ್ವಾನೇತದ್ದ್ವಿತೀಯಮಹರನುತಿಷ್ಠತಿ ಸ ಪುಮಾನ್ಸರಸ್ತಾತ್ಸತ್ರಸ್ಯ ಪ್ರಥಮ-ಭಾಗ ಆನುಲೋಮ್ಯೇನ ಕ್ರಿಯಮಾಣೈಃ ಕರ್ಮಭಿರಾಪ್ತ್ವಾ ಪ್ರಾಪ್ಯಾಸ್ಮಾದಪರಭಾಗೇ ಪ್ರಾತಿ-ಲೋಮ್ಯೇನೈವ ಸಂವತ್ಸರಮನುತಿಷ್ಠತಿ ॥ ವೇದನಂ ಪ್ರಶಂಸತಿ ॥**

ಈಗ ಆರಂಭಣೀಯವೆಂಬ ಚತುರ್ವಿಂಶ ದಿನದಲ್ಲಿ ಪಠಿಸಬೇಕಾದ ನಿಷ್ಕೇವಲ್ಯಶಸ್ತ್ರದಲ್ಲಿ ಕೆಲವು ವಿಶೇಷ ಸಂಗತಿಯನ್ನು ತಿಳಿಸುವರು. ಸಂವತ್ಸರದವರೆಗೂ ನಡೆಯುವ ಸತ್ರಯಾಗದ ಕೊನೆಯಲ್ಲಿ (ಉತ್ತರಪಕ್ಷದಲ್ಲಿ) ಕೊನೆಯ ಹಿಂದಿನ ದಿನದಲ್ಲಿ ಆಚರಿಸಲ್ಪಡುವ ಚತುರ್ವಿಂಶವೆಂಬ ದಿನವು ಇಲ್ಲಿ ಮಹಾವ್ರತವೆನಿಸುವುದು. ಎಂದರೆ ಆರೋಹಕ್ರಮದಿಂದ ಪೂರ್ವಪಕ್ಷದಲ್ಲಿರುವ ಚತುರ್ವಿಂಶದಿನವು ಅವರೋಹಕ್ರಮದಲ್ಲಿ ಉತ್ತರಪಕ್ಷದಲ್ಲಿ ಮಹಾವ್ರತವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಇದನ್ನು ಎರಡನೇ ದಿನ ಮಾಡಬೇಕು. ಚತುರ್ವಿಂಶ ದಿನದ ಕಾರ್ಯಕ್ರಮದ ಪೂರ್ವಪಕ್ಷದಲ್ಲಿ ಎರಡನೇ ದಿನ ನಡೆಯುವಂತೆ ಮಹಾವ್ರತದಿನವು ಉತ್ತರಪಕ್ಷದ ಎರಡನೇ ದಿನ ನಡೆಯುವುದರಿಂದ ಇವೆರಡಕ್ಕೂ ಸಾಮ್ಯವಿದೆ ಎಂದರೆ ಚತುರ್ವಿಂಶ ಮತ್ತು ಮಹಾವ್ರತ ಎಂಬೆರಡೂ ಒಂದೇ ಎಂದು ಹೇಳಬಹುದು ಮತ್ತು ಇವೆರಡರಲ್ಲಿಯೂ ಬಹಿಷ್ಪವಮಾನಸಾಮವೂ ಇರುವುದು. **ತದಿದಾಸ ಭುವನೇಷು ಜ್ಯೇಷ್ಠಂ** (ಋ. ಸಂ. ೧೦-೧೨೦-೧) ಎಂಬ ಸೂಕ್ತವು ಬೃಹದ್ದಿವಶಬ್ದವನ್ನೊಳಗೊಂಡಿರುವುದರಿಂದ ದೊಡ್ಡದಾದ ದ್ಯುಲೋಕದ ಪ್ರಾಪ್ತಿಗೆ ಸಾಧನಭೂತವಾಗಿರುವುದು. ಈ ಸೂಕ್ತವನ್ನು ಎರಡು ಪಕ್ಷಗಳಲ್ಲಿಯೂ ನಿಷ್ಕೇವಲ್ಯಶಸ್ತ್ರದಲ್ಲಿ ಪಠಿಸುವರು. ಹೀಗಿರುವಾಗ ಎರಡನೇ ದಿನವಾದ ಚತುರ್ವಿಂಶವೆಂಬ ಹೆಸರಿನ ದಿನದಲ್ಲಿ ಪಠಿಸಲ್ಪಡುವ ನಿಷ್ಕೇವಲ್ಯಶಸ್ತ್ರಮಂತ್ರಗಳಲ್ಲಿರುವ ಬೃಹದ್ದಿವಾ ಎಂಬ ಹೆಸರಿನ ತದಿದಾಸ ಎಂಬ ಸೂಕ್ತ ಪಠನದಿಂದ ಹೋತೃವು ಆದಿನದಲ್ಲಿ ರೇತಸ್ಸನ್ನು ಸೇಚನಮಾಡುವನು. ಈರೀತಿಯಾಗಿ ಸೇಚನಮಾಡಲ್ಪಟ್ಟ ರೇತಸ್ಸು ಮಹಾವ್ರತವೆಂಬ ದಿನದಲ್ಲಿ ಬೃಹದ್ದಿವಾ ಶಬ್ದಗಳನ್ನೊಳಗೊಂಡ ನಿಷ್ಕೇವಲ್ಯ ಸೂಕ್ತಪಠನದಿಂದ ಪ್ರಜೆಯನ್ನುತ್ಪಾದನೆಮಾಡುವುದು. ಇಲ್ಲಿ ಸತ್ರಯಾಗದ ಮಧ್ಯಭಾಗದಲ್ಲಿ ರೇತಸ್ಸೇಚನವು ನಡೆಯುವುದು. ಆದರೆ ಸತ್ರಯಾಗದ ಉತ್ತರಪಕ್ಷದಲ್ಲಿ (ಅಂತ್ಯದಲ್ಲಿ) ಪ್ರಜೋತ್ಪಾದನೆಯು ನಡೆಯುವುದು. ಲೋಕವ್ಯವಹಾರದಲ್ಲಿಯೂ ಒಂದು ಸಂವತ್ಸರಕಾಲದಲ್ಲಿಯೇ ರೇತಸ್ಸೇಚನವೂ ಪ್ರಜೋತ್ಪಾದನವೂ (ಎರಡೂ) ನಡೆಯುವುದು. ಎಂದರೆ ಎರಡು ಪಕ್ಷಗಳಲ್ಲಿಯೂ ಸೇರಿ ರೇತಸ್ಸೇಚನ ಪ್ರಜೋತ್ಪಾದನಗಳೆಂಬ ಎರಡು ಕರ್ಮಗಳೂ ನಡೆಯುವವು. ಆದ್ದರಿಂದ ಪೂರ್ವ ಮತ್ತು ಉತ್ತರಪಕ್ಷಗಳೆರಡರಲ್ಲಿಯೂ ನಿಷ್ಕೇವಲ್ಯಸೂಕ್ತವನ್ನು ಒಂದೇವಿಧವಾಗಿ (ಸಮಾನವಾಗಿ) ಎಂದರೆ ಎರಡರಲ್ಲಿಯೂ ಬೃಹದ್ದಿವ ಶಬ್ದಸಹಿತವಾಗಿಯೇ ಪಠಿಸಬೇಕು. ಯಾವ ಪುರುಷನು ಮಹಾವ್ರತದಂತೆ ಸತ್ರಯಾಗದಲ್ಲಿ ಪಠಿಸಲ್ಪಡುವ ನಿಷ್ಕೇವಲ್ಯ ಶಸ್ತ್ರವನ್ನು ಎರಡನೇ ದಿನ ಅನುಷ್ಠಾನ ಮಾಡುವನೋ ಆ ಪುರುಷನು ಆ ಸತ್ರದ ಪೂರ್ವಪಕ್ಷದಲ್ಲಿ ಅನುಲೋಮ (ಕ್ರಮವಾಗಿ) ವಾಗಿ ಮಾಡಬೇಕಾದ ಕಾರ್ಯಗಳನು ಮಾಡಿ ಮುಗಿಸಿ ಅನಂತರ ಉತ್ತರಪಕ್ಷದಲ್ಲಿ ಅದೇ ಕರ್ಮಗಳನ್ನು ಪ್ರತಿಲೋಮವಾಗಿ (ಹಿಂದುಮುಂದಾಗಿ, ವ್ಯತ್ಯಸ್ತವಾಗಿ) ಮಾಡಿ ಕೊನೆಗೆ ಸಂವತ್ಸರದ ಕೊನೆಯನ್ನು ಮುಟ್ಟುವನು. ಇದೆಲ್ಲವನ್ನೂ ತಿಳಿದು ಈರೀತಿ ಮಾಡುವ ಪುರುಷನು ಸಂವತ್ಸರದ ಅಂತ್ಯದಲ್ಲಿ ನಿರ್ವಿಘ್ನವಾಗಿ ಸಮಾಪ್ತಿಯನ್ನು ಪಡೆಯುವುದಲ್ಲದೆ ಸ್ವಸ್ತಿದಾಯಕವಾದ ಕ್ಷೇಮಾಭಿವೃದ್ಧಿಯನ್ನೂ ಪಡೆಯುವನು.

**ಯೋ ವೈ ಸಂವತ್ಸರಸ್ಯಾವಾರಂ ಚ ಪಾರಂ ಚ ವೇದ ಸ ವೈ ಸ್ವಸ್ತಿ ಸಂವ-ತ್ಸರಸ್ಯ ಪಾರಮಶ್ನುತೇऽತಿರಾತ್ರೋ ವಾ ಅಸ್ಯ ಪ್ರಾಯಣೀಯೋऽ**

ವಾರಮುದಯನೀಯಃ ಪಾರಂ ಸ್ವಸ್ತಿ ಸಂವತ್ಸರಸ್ಯ ಪಾರಮಶ್ನುತೇ ಯ ಏವಂ ವೇದ ॥

ಅಥ ಸಂವತ್ಸರಸತ್ರಸ್ಯಾಽಽದ್ಯಂತೇ ದ್ವೇ ಅಹನೀ ವಿಧತ್ತೇ-ಯಃ ಪುಮಾನ್ಸಂವತ್ಸರಸತ್ರಸ್ಯ ಸಮುದ್ರಸ್ಥಾನೀಯಸ್ಯಾವಾರಮರ್ವಾಕ್ತೀರಸ್ಥಾನೀಯಂ ಪ್ರಥಮಹಃ ಪಾರಂ ಪರತೀರಸ್ಥಾನೀಯಮಂತಿಮಮಹರ್ಯೋರ್ನೀವೇ (ಹರ್ವೇ) ದ ತಯೋರಹ್ನೋರನುಷ್ಠೇಯಂ ಕರ್ತವ್ಯಂ ನಿಶ್ಚಿನೋತಿ ॥ ಸ ಪುಮಾನವಿಘ್ನೇನೈವ ಸಂವತ್ಸರ ಸತ್ರಸ್ಯ ಪಾರಂ ಸಮಾಪ್ತಿಂ ಪ್ರಾಪ್ನೋತಿ ಯೋಽಯಮತಿರಾತ್ರ ಸಂಸ್ಥಃ ಸ ಏವಾಸ್ಯ ಪ್ರಾಯಣೀಯ ಆರಂಭೇಽನುಷ್ಠೇಯತ್ವಾದರ್ವಾಕ್ತೀರಸ್ಥಾನೀಯಃ ॥ ಸ ಏವಾತಿರಾತ್ರಃ ಪುನರುದಯನೀಯಃ ಸಮಾಪ್ತಾವನುಷ್ಠೇಯತ್ವಾತ್ಪರತೀರಸ್ಥಾನೀಯಃ ॥ ವೇದನಂ ಪ್ರಶಂಸತಿ ॥

ಸಂವತ್ಸರಕಾಲಪರ್ಯಂತರ ನಡೆಯುವ ಸತ್ರಯಾಗದ ಮೊದಲ ಮತ್ತು ಕೊನೆಯ ದಿನಗಳನ್ನು ಪ್ರಶಂಸಿಸುವರು. ಈ ಸಂವತ್ಸರ ಸತ್ರವು ಸಮುದ್ರದಂತೆ ಅಪಾದವಾಗಿರುವುದು. ನದಿಗಳಿಗಿರುವಂತೆ ಇದಕ್ಕೆ ಎರಡು ದಡ (ತೀರ) ಗಳಿರುವವು. ನಮ್ಮ ಸಮೀಪದಲ್ಲಿರುವ ತೀರ ಮತ್ತು ದೂರದಲ್ಲಿರುವ ತೀರ. ಈ ಸತ್ರಯಾಗದ ಮೊದಲ ದಿನವೇ ಸಮೀಪದಲ್ಲಿರುವ ತೀರ. ಕೊನೆಯ ದಿನವೇ ಸತ್ರಯಾಗದ ಕೊನೆಯ ದಿನ. ಸತ್ರಯಾಗವನ್ನು ಮಾಡುವ ಪುರುಷನು ಪ್ರಥಮ ದಿನದಿಂದ ಪ್ರಾರಂಭಿಸಿ ಕೊನೆಯ ದಿನದವರೆಗೂ ಮಾಡಬೇಕು. ಇದನ್ನೇ ಅಂತಿಮತೀರದಿಂದ ಪಾರವನ್ನು ಎಂದರೆ ದೂರದಲ್ಲಿರುವ ತೀರವನ್ನು ಮಾಡಬೇಕೆಂದಿರುವ ಪುರುಷನು ಮೊದಲದಿನದಿಂದ ಕೊನೆಯದಿನದವರೆಗೆ ಮಧ್ಯದಲ್ಲಿ ನೆರವೇರಿಸಬೇಕಾದ ಕಾರ್ಯಕಲಾಪಗಳನ್ನು ಹೀಗೆಯೇ ಮಾಡಬೇಕೆಂದು ಮೊದಲೇ ನಿಶ್ಚಯಮಾಡಿಕೊಂಡು ಅದರಂತೆ ಅನುಷ್ಠಾನ ಮಾಡಿದಲ್ಲಿ ಅವನ ಯಾಗವು ಸಂವತ್ಸರದ ಕೊನೆಯವರೆಗೂ ಯಾವ ವಿಘ್ನವೂ ಇಲ್ಲದೆ ನೆರವೇರುವುದು. ಆ ಪುರುಷನು ದೂರದಲ್ಲಿರುವ ತೀರವನ್ನು ಮುಟ್ಟುವನು. ಇಲ್ಲಿ ಸಮೀಪದ ತೀರವೆಂದರೆ ಯಾಗದ ಪ್ರಾರಂಭದಲ್ಲಿ ಮಾಡುವ ಅತಿರಾತ್ರವೆಂಬ ಯಜ್ಞವು. ಇದು ಯಜ್ಞಾರಂಭದಲ್ಲಿ ಮಾಡಲ್ಪಡುವ ಪ್ರಾಯಣೀಯೇಷ್ಟಿಯೆನಿಸುವುದು. ಇದೇ ಪ್ರಥಮದಿನದ ಕಾರ್ಯಕಲಾಪವು. ಹಾಗೆಯೇ ಸತ್ರದ ಕೊನೆಯದಿನವೇ ದೂರದಲ್ಲಿರುವ (ಪಾರ) ತೀರವು. ಈ ಕೊನೆಯ ದಿನದಲ್ಲಿ ಅತಿರಾತ್ರವನ್ನೇ ಮಾಡಿಮುಗಿಸುವರು. ಇದು ಯಜ್ಞದ ಕೊನೆಯಲ್ಲ ಮಾಡಬೇಕಾದ ಉದಯನೀಯೇಷ್ಟಿಯಂತಿರುವುದು. ಈ ವಿಷಯಗಳನ್ನೆಲ್ಲಾ ತಿಳಿದು ಯಾವ ಪುರುಷನು ಅದರಂತೆ ಅನುಷ್ಠಾನ ಮಾಡುವನೋ ಆ ಪುರುಷನು ಸಮಸ್ತ ಕ್ಷೇಮಾಭ್ಯುದಯವನ್ನೂ ಪಡೆದು ಸುಖಿಸುವನು.

ಯೋ ವೈ ಸಂವತ್ಸರಸ್ಯಾವರೋಧನಂ ಚೋದ್ರೋಧನಂ ಚ ವೇದ ಸ ವೈ ಸ್ವಸ್ತಿ ಸಂವತ್ಸರಸ್ಯ ಪಾರಮಶ್ನುತೇಽತಿರಾತ್ರೋ ವಾ ಅಸ್ಯ ಪ್ರಾಯಣೀಯೋಽವರೋಧನಮುದಯನೀಯ ಉದ್ರೋಧನಂ ॥ ಸ್ವಸ್ತಿ ಸಂವತ್ಸರಸ್ಯ ಪಾರಮಶ್ನುತೆ ಯ ಏವಂ ವೇದ ॥

ಉಕ್ತಾವಾದ್ಯಂತಾತಿರಾತ್ರೌ ಪ್ರಶಂಸತಿ—ಅವರುಧ್ಯತೇ ಸ್ವಾಧೀನಂ ಕ್ರಿಯತೇ ಯೇನ ಪ್ರಾರಂಭರೂಪೇಣ ಕರ್ಮಣಾ ತತ್ಕರ್ಮಾವರೋಧನಂ ॥ ಉದ್ರುಧ್ಯತೇ ಸಮಾಪ್ಯತೇ ಯೇನ ಕರ್ಮಣಾ ತದುದ್ರೋಧನಮನ್ಯತ್ಪೂರ್ವವತ್ ॥ ವೇದನಂ ಪ್ರಶಂಸತಿ—

ಮೇಲೆ ಹೇಳಿದ ಸತ್ರಯಾಗದ ಆದ್ಯಂತಕಾಲಗಳಲ್ಲಿ ಮಾಡಲ್ಪಡುವ ಅತಿರಾತ್ರವೆಂಬ ಯಜ್ಞಗಳನ್ನು ಪ್ರಶಂಸೆಮಾಡುವರು. ಇಲ್ಲಿ **ಅವರುಧ್ಯತೇ** ಎಂದರೆ ಪಡೆಯುವುದು, ಸ್ವಾಧೀನಮಾಡಿಕೊಳ್ಳುವುದು. **ಉದ್ರುಧ್ಯತೆ** ಎಂದರೆ ಸಮಾಪ್ತಿಗೊಳಿಸುವುದು, ಮುಗಿಸುವದು ಎಂದರ್ಥವು. ಯಾವ ಪುರುಷನು ಈ ಸಂವತ್ಸರ ಯಾಗದಲ್ಲಿ ಕರ್ಮಾನುಷ್ಠಾನವನ್ನು ಮಾಡಿ ಎಲ್ಲವನ್ನೂ ಮುಗಿಸುವನೋ ಅವನು ದೂರದ ಪಾರವನ್ನು ಮುಟ್ಟುವನು. ಅವನು ಪ್ರಾರಂಭದಲ್ಲಿ ಮಾಡುವ ಅತಿರಾತ್ರವೇ ಪ್ರಾಯಣೀಯೇಷ್ಟಿರೂಪವಾಗಿರುವುದು. ಸತ್ರದ ಕೊನೆಯಲ್ಲಿ ಮಾಡುವ ಅತಿರಾತ್ರವು ಉದಯನೀಷ್ಟಿರೂಪವಾಗಿರುವುದು. ಈ ವಿಷಯಗಳೆಲ್ಲವನ್ನೂ ತಿಳಿದು ಅದರಂತೆ ಆಚರಿಸುವ ಪುರುಷನು ದೂರದ ಪಾರವಾದ ಯಜ್ಞಸಮಾಪ್ತಿಯಿಂದ ಸಕಲ ಕ್ಷೇಮಾಭ್ಯುದಯಗಳನ್ನೂ ಪಡೆದು ಸುಖಿಸುವನು.

**ಯೋ ವೈ ಸಂವತ್ಸರಸ್ಯ ಪ್ರಾಣೋದಾನೌ ವೇದ ಸ ವೈ ಸ್ವಸ್ತಿ ಸಂವತ್ಸರಸ್ಯ ಪಾರಮಶ್ನುತೇಽತಿರಾತ್ರೋ ವಾ ಅಸ್ಯ ಪ್ರಾಯಣೀಯಃ ಪ್ರಾಣ ಉದಾನ ಉದಯನೀಯಃ ಸ್ವಸ್ತಿ ಸಂವತ್ಸರಸ್ಯ ಪಾರಮಶ್ನುತೇ ಯ ಏವಂ ವೇದ ಯ ಏವಂ ವೇದ ॥**

**ಪುನರಪಿ ಪ್ರಕಾರಾಂತರೇಣ ಪ್ರಶಂಸತಿ—ಪ್ರಾಯಣೀಯೋಽತಿರಾತ್ರಃ ಪ್ರಶಬ್ದಸಾಮಾನ್ಯಾತ್ಪ್ರಾಣ ಇತ್ಯುಚ್ಯತೇ ॥ ಉಚ್ಛಬ್ದಸಾಮಾನ್ಯಾದುದಯನೀಯೋಽತಿರಾತ್ರ ಉದಾನಃ॥ ವೇದನಂ ಪ್ರಶಂಸತಿ ॥ ಅಭ್ಯಾಸೋಽಧ್ಯಾಯ ಸಮಾಪ್ತ್ಯರ್ಥಃ ॥**

ಮೇಲೆ ಹೇಳಿದ ವಿಷಯವನ್ನೇ ಪ್ರಕಾರಾಂತರವಾಗಿ ವರ್ಣಿಸುವರು. ಈ ಸತ್ರಯಾಗಕ್ಕೆ ಆದ್ಯಂತಗಳೇ ಪ್ರಾಣ ಉದಾನಗಳೆನಿಸುವವು. ಇಲ್ಲಿ ಪ್ರಾರಂಭದ ಅತಿರಾತ್ರವು ಪ್ರಾಯಣೀಯರೂಪವಾಗಿದ್ದು ಸತ್ರದ ಪ್ರಾಣಸ್ವರೂಪವಾಗಿರುವುದು. ಕೊನೆಯ ಅತಿರಾತ್ರವು ಉದಯನೀಯರೂಪವಾಗಿದ್ದು ಸತ್ರದ ಉದಾನಸ್ವರೂಪವಾಗಿರುವುದು. ಇಲ್ಲಿ ಪ್ರಾಯಣೀಯ ಶಬ್ದಕ್ಕೂ ಪ್ರಾಣ ಶಬ್ದಕ್ಕೂ ಪ್ರ ಎಂಬ ಅಕ್ಷರವು ಸಾಮ್ಯವು. ಹಾಗೆಯೇ ಉದಯನೀಯಶಬ್ದಕ್ಕೂ ಉದಾನಕ್ಕೂ ಉತ್ ಎಂಬ ಅಕ್ಷರವು ಸಾಮ್ಯವು. ಒಂದು ಪ್ರಾರಂಭವನ್ನೂ ಮತ್ತೊಂದು ಕೊನೆಯನ್ನೂ ಸೂಚಿಸುವುದು. ಈ ವಿಷಯಗಳನ್ನೆಲ್ಲಾ ತಿಳಿದು ಅದರಂತೆ ಅನುಷ್ಠಾನ ಮಾಡುವ ಪುರುಷನು ಸತ್ರಯಾಗವನ್ನು ಅಂತ್ಯದವರೆಗೆ ನಿರ್ವಿಘ್ನವಾಗಿ ನೆರವೇರಿಸಿ ಸಕಲ ಕ್ಷೇಮಾಭ್ಯುದಯವನ್ನೂ ಪಡೆದು ಸುಖಿಸುವನು.

*English Translation*

### On a modification of the Nishkevalya Shastra on the Chaturvimsa and Mahavrata days of the Sattra

This Chaturvimsa day is the same as the Mahavrata (the Nishkevalya Shastra being the same as in the Mahavrata sacrifice). By means of the Brihad-deva hymn the Hotar pours forth the seed. Thus he makes the seed (which is poured forth) by means of the Mahavrata day produce offspring. For seed if effused every year is productive every year. This is the reason, that in both

parts of the Sattra the Brihad-deva hymn forms equally part of the Nishkevalya Sahstra.

He who having such a knowledge performs, after having reached the the central day by performing the ceremonies one after the other, ceremonies of the second part in an inverted order, using the Brihaddeva hymn also, reaches safely the end of the year.

He who knows this shore and that shoıe of the stream of the year, arrives safely on the other shore. The Atiratra at the beginning of the Sattra is this shore of the year and the Atiratra at the end of the Sattra is the other shore.

He who has such a knowledge, arrives safely at the end of the year. He who knows how to appropriate the year according to half months, months and days, and how to disentangle himself from it after having passed through it arrives safely at the end of the year. The Atiratra at the beginning is the appropriation, and that at the end is the disentanglement.

He who has such a knowledge safely reaches the end of the year. He who knows the prana (air inhaled) of the year and its apana (air exhaled) safely reaches the end of the year. Tne Atiratra at the beginning is its prana, and the Atiratra at the end its udana (apana). He who has such a knowledge safely reaches the end of the year.

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ಸಪ್ತದಶಾಧ್ಯಾಯಃ ಸಮಾಪ್ತಃ

ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದಲ್ಲಿ ಹದಿನೇಳನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು ಸಮಾಪ್ತವಾದುದು.

ಹದಿನೇಳನೆಯ ಅಧ್ಯಾಯವು ಮುಗಿದುದು.



# ಅಥೈತರೇಯಬ್ರಾಹ್ಮಣೇ ಅಷ್ಟಾದಶಾಧ್ಯಾಯೇ ಪ್ರಥಮಃ ಖಂಡಃ

## ಹದಿನೆಂಟನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

[ ಸತ್ರಯಾಗದ ಷಳಹ ಮತ್ತು ವಿಷುವತ್ ಎಂಬ ದಿನಗಳು ವಿಷುವದ್ದಿನದ ಪೂರ್ವಭಾವಿಯಾಗಿಯೂ ಅನಂತರವೂ ಆದ ಕೆಲವು ದಿನಗಳಲ್ಲಿ ಆಚರಿಸಲ್ಪಡಬೇಕಾದ ಕಾರ್ಯಕಲಾಪಗಳು ]

[ ಸತ್ರಯಾಗದಲ್ಲಿರುವ ತ್ರ್ಯಹ ಮತ್ತು ಷಳಹ ಎಂಬ ಮೂರು ಮತ್ತು ಆರುದಿನಗಳ ಕಾಲವಿಶೇಷವು ಅಭಿಪ್ಲವಷಡಹವು. ]

ಅಶ್ವಿನಸ್ಯ ವಿಧಿಃ ಪ್ರಾತರನುವಾಕ ಉದೀರಿತಃ ॥
ಸಂಖ್ಯಾಪ್ರತಿಪದಾವನ್ಯೇ ಸೌರ್ಯಾದೀನ್ಯಧಿಕಾನಿ ತು ॥೧॥

**ಜ್ಯೋತಿರ್ಗೌರಾಯುರಿತಿ ಸ್ತೋಮೈರ್ಯಂತ್ಯಯಂ ವೈ ಲೋಕೋ ಜ್ಯೋತಿರಂತರಿಕ್ಷಂ ಗೌರಸೌ ಲೋಕ ಆಯುಃ ॥**

ತತ್ರ ಗವಾಮಯನಸ್ಯ ಪ್ರಾಯಣೀಯೋದಯನೀಯಾವಾದ್ಯಂತಾವತಿರಾತ್ರಾವುಕ್ತಾ- ವಥ ಮಾಸಕ್ಲೃಪ್ತಿವಿಧಾನಾಯಾಭಿಪ್ಲವಷಡಹೇ ಪೂರ್ವಭಾಗರೂಪಾಣಿ ತ್ರೀಣ್ಯಹಾನಿ ವಿಧತ್ತೇ— ಸ್ತೋಮಶಬ್ದೋ ಜ್ಯೋತಿರಾದಿಭಿಃ ಪ್ರತ್ಯೇಕಮಭಿಸಂಬಧ್ಯತೇ। ತಥಾ ಸತಿ ಜ್ಯೋತಿಷ್ಟೋಮೋ ಗೋಷ್ಟೋಮ ಆಯುಷ್ಟೋಮ ಇತ್ಯೇತೈರಹೋಭಿರಭಿಯಂತಿ ॥ ಅನುತಿಷ್ಠೇಯುರಿತ್ಯರ್ಥಃ ॥ ತದೇತದಹಸ್ತ್ರಯಂ ತ್ರಿತ್ವಸಾಮ್ಯಾತ್ಕ್ರಮೇಣ ಲೋಕತ್ರಯರೂಪಂ ॥ ಶಾಖಾಂತರೇಪ್ಯೇ ತದ್ದರ್ಶಿತಂ ॥ 'ಜ್ಯೋತಿಷ್ಟೋಮಂ ಪ್ರಥಮಮುಪಯಂತ್ಯಸ್ಮಿನ್ನೇವ ತೇನ ಲೋಕೇ ಪ್ರತಿ- ತಿಷ್ಠಂತಿ। ಗೋಷ್ಟೋಮಂ ದ್ವಿತೀಯಮುಪಯಂತ್ಯಂತರಿಕ್ಷ ಏವ ತೇನ ಪ್ರತಿಷ್ಠಂತಿ ಆಯು- ಷ್ಟೋಮಂ ತೃತೀಯಮುಪಯಂತ್ಯಮುಷ್ಮಿನ್ನೇವಲೋಕೇ ಪ್ರತಿಷ್ಠಂತಿ' ಇತಿ ॥

ಈಗ ಸತ್ರಯಾಗದ ಗವಾಮಯನವೆಂಬ ವಿಭಾಗದಲ್ಲಿ ಪ್ರಾಯಣೀಯ (ಮೊದಲು ಮಾಡಬೇಕಾದ) ಉದಯನೀಯ (ಕೊನೆಯಲ್ಲಿ ಮಾಡಬೇಕಾದ) ಎರಡು ಇಷ್ಟಿಗಳಿಗೆ ಪ್ರತೀಕವಾಗಿ ಎರಡಾವರ್ತಿ ಅತಿರಾತ್ರವೆಂಬ ಯಜ್ಞವನ್ನು ಮಾಡಬೇಕೆಂದೂ ಅದರ ವಿಧಾನವನ್ನೂ ಹೇಳಿದ್ದಾಯಿತು. ಈಗ ಮಾಸ(ತಿಂಗಳಲ್ಲಿ ಮಾಡುವ) ವಿಧಾನ ಪ್ರಕಾರ ಅಭಿಪ್ಲವಷಡಹವೆಂಬ ಯಾಗವನ್ನು ಮಾಡುವಾಗ ಮೊದಲ ಮೂರು ದಿನಗಳಲ್ಲಿ ಅನುಸರಿಸಬೇಕಾದ ಕಾರ್ಯಕಲಾಪಗಳನ್ನು ಇಲ್ಲಿ ವಿವರಿಸಲಾಗಿದೆ. ಅಭಿಪ್ಲವಷಡಹ ವೆಂದರೆ ಆರು ದಿವಸಗಳಲ್ಲಿ ಮಾಡಿಮುಗಿಸಬೇಕಾದ ಯಜ್ಞವಿಶೇಷವು ಮೊದಲು ಮೂರುದಿನಗಳ ಕಾರ್ಯಕ್ರಮವನ್ನು ಮಾತ್ರ

ಹೇಳುವರು. ಇಲ್ಲಿ ಸ್ತೋಮಶಬ್ದವನ್ನು ಜ್ಯೋತಿರ್ಗೌರಾಯುಃ ಎಂಬ ಶಬ್ದಗಳಿಗೆ ಪ್ರತ್ಯೇಕವಾಗಿ ಸೇರಿಸಿ ಹೇಳಬೇಕು. ಎಂದರೆ ಜ್ಯೋತಿಸ್ತೋಮ, ಗೌಸ್ತೋಮ ಆಯುಸ್ತೋಮ ಎಂದಾಗುವುದು. ಅಥವಾ ಅಭಿಪ್ಲವಯಾಗದ ಮೊದಲ ಮೂರು ದಿನಗಳಿಗೆ ಕ್ರಮವಾಗಿ ಜ್ಯೋತಿಷ್ಟೋಮ, ಗೋಷ್ಟೋಮ, ಆಯುಷ್ಟೋಮ ಎಂಬ ಹೆಸರುಗಳಿರುವವು. ಈ ಮೂರೂ ಮೂರು ದಿನನಳ ಹೆಸರಾಗಿದ್ದು ಭೂಮ್ಯಂತರಿಕ್ಷಸ್ವರ್ಗಗಳೆಂಬ ಮೂರು ಲೋಕಗಳನ್ನು ಸೂಚಿಸುವವು ಈ ವಿಷಯವನ್ನು ಶಾಖಾಂತರದಲ್ಲಿ ಈರೀತಿ ಹೇಳಿರುವುದು— ಜ್ಯೋತಿಷ್ಟೋಮಂ ಪ್ರಥಮಮುಪಯಂತ್ಯಸ್ಮಿನ್ನೇವ ತೇನ ಲೋಕೇ ಪ್ರತಿತಿಷ್ಠಂತಿ ಗೋಷ್ಟೋಮಂ ದ್ವಿತೀಯಮುಪಯಂತ್ಯಂತರಿಕ್ಷ ಏವ ತೇನ ಪ್ರತಿತಿಷ್ಠಂತಿ ಆಯುಷ್ಟೋಮಂ ತೃತೀಯಮುಪಯಂತ್ಯಮುಷ್ಮಿನ್ನೇವ ಲೋಕೇ ಪ್ರತಿತಿಷ್ಠಂತಿ ಎಂದು.

**ಸ ಏವೈಷ ಉತ್ತರಸ್ತ್ರ್ಯಹಃ ಜ್ಯೋತಿರ್ಗೌರಾಯುರಿತಿ ತ್ರೀಣ್ಯಹಾನಿ ಗೌರಾಯುರ್ಜ್ಯೋತಿರಿತಿ ತ್ರೀಣಿ**

ಷಡಹೇ ಪೂರ್ವಭಾಗಂ ತ್ರ್ಯಹಮುಕ್ತ್ವಾ ತದುತ್ತರಭಾಗಂ ವಿಧತ್ತೇ—ತ್ರಯಾಣಾಂ ಪೂರ್ವೋಕ್ತಾನಾಮೇವಾಹ್ನಾಂ ಸಮೂಹಃ ಪುನರನುಷ್ಠೇಯಮಾನ ಉತ್ತರಸ್ತ್ರ್ಯಹೋ ಭವತಿ ॥ ತತ್ರ ಷಡಹೇ ಷಣ್ಣಾಮಪ್ಯಹ್ನಾಂ ಕ್ರಮಂ ದರ್ಶಯತಿ- ಜೋತಿಷ್ಟೋಮಾದೀನಾಮೇವ ಜೋತಿರಿತ್ಯಾದೀನಿ ನಾಮಾನಿ ತೈರ್ನಾಮಭಿರ್ಧರ್ಮಾ ಅತಿದಿಶ್ಯಂತೇ ॥ ಜ್ಯೋತಿರಾದಿನಾಮಕಾ ಯೇ ಸ್ವತಂತ್ರಾ ಏಕಾಹಾಃ ಸಂತಿ ತದೀಯಧರ್ಮಾ ಅತ್ರಾನುಷ್ಠೇಯಾ ಇತ್ಯರ್ಥಃ ॥

ಅಭಿಪ್ಲವಷಡಹದಲ್ಲಿ ಮೊದಲ ಮೂರುದಿನಗಳ ಕ್ರಮವನ್ನು ಹೇಳಿ ಈಗ ಕೊನೆಯ ಮೂರುದಿನಗಳ ಕ್ರಮವನ್ನು ವಿವರಿಸುವರು. ಹಿಂದೆ ಹೇಳಿದ ಜ್ಯೋತಿರ್ಗೌರಾಯು ಎಂಬ ಮೊದಲ ಮೂರು ದಿನಗಳ ಕಾರ್ಯಕಲಾಪಗಳನ್ನೇ ಕೊನೆಯ ಮೂರು ದಿನಗಳಲ್ಲಿಯೂ ಮಾಡಬೇಕು. ಆದರೆ ಮೊದಲ ಕ್ರಮವನ್ನು ಬಿಟ್ಟು ಹಿಂದುಮುಂದಾಗಿ ಎಂದರೆ ಗೌರಾಯುರ್ಜ್ಯೋತಿ ಎಂದು ಗೋಷ್ಟೋಮ, ಆಯುಷ್ಟೋಮ, ಜ್ಯೋತಿಷ್ಟೋಮ ಎಂಬ ಕ್ರಮದಲ್ಲಿ ಮಾಡಬೇಕು. ಜ್ಯೋತಿಷ್ಟೋಮ ಮೊದಲಾದವು ಸ್ವತಂತ್ರವಾಗಿ (ಇತರ ಮಂತ್ರಾದಿಗಳ ಸಹಾಯವಿಲ್ಲದೆ) ಒಂದೊಂದು ದಿನದ ಕಾರ್ಯಕ್ರಮದಲ್ಲಿ ಮಾಡಿ ಮುಗಿಸಲ್ಪಡಬೇಕು.

**ಅಯಂ ವೈ ಲೋಕೋ ಜ್ಯೋತಿರಸೌ ಲೋಕೋ ಜ್ಯೋತಿಸ್ತೇ ಏತೇ ಜ್ಯೋತಿಷೀ ಉಭಯತಃ ಸಂಲೋಕೇತಿ ತೇನೈತೇನೋಭಯತೋ-ಜ್ಯೋತಿಷಾ ಷಳಹೇನ ಯಂತಿ ತದ್ಯದೇತೇನೋಭಯತೋ ಜ್ಯೋತಿಷಾ ಷಳಹೇನ ಯಂತ್ಯನಯೋರೇವ ತಲ್ಲೋಕಯೋರುಭಯತಃ ಪ್ರತಿತಿಷ್ಠಂತೋ ಯಂತ್ಯಸ್ಮಿಂಶ್ಚ ಲೋಕೇಽಮುಷ್ಮಿಂಶ್ಚೋಭಯೋಃ ॥**

ಯೋಽಯಮುಭಯೋಸ್ತ್ರ್ಯಹಯೋಃ ಕ್ರಮವ್ಯತ್ಯಾಸ (ಸ್ತ) ಮಿಮಂ ಪ್ರಶಂಸತಿ— ಪ್ರಥಮಸ್ಯ ತ್ರ್ಯಹಸ್ಯ ಆದೌ ಜ್ಯೋತಿರ್ನಾಮಕಮಹರ್ಯದಸ್ತಿ ತತ್ಪ್ರಥಮ್ಯಸಾಮ್ಯಾದ್ಭೂ-

ಲೋಕ ಸ್ವರೂಪಂ ॥ ಯಚ್ಚೋತ್ತರಸ್ಯ ತ್ರ್ಯವಸ್ಯಾವಸಾನೇ ಜ್ಯೋತಿರ್ನಾಮಕಮಹಸ್ತದುತ್ತ-ಮತ್ವಸಾಮರ್ಥ್ಯಾದ್ದ್ಯುಲೋಕಸ್ವರೂಪಂ ॥ ತೇ ಏತೇ ಷಡಹಸ್ಯಾದ್ಯಂತಯೋರ್ವರ್ತಮಾನೇ ಜ್ಯೋತಿಷೀ ಉಭಯತೋಽವಸ್ಥಾಯ ಪರಸ್ಪರಂ ಸಂಲೋಕೇತೇ ಸಂಮುಖತ್ವೇನೇಕ್ಷೇತೇ ॥ ಅಹರ್ವಿಶೇಷಾಂಸ್ತತ್ಕ್ರಮಂ ಚೋಕ್ತ್ವಾ ಸಮುಷ್ಟಿರೂಪಂ ಷಡಹಂ ವಿಧತ್ತೇ–ಉಭಯತ ಆದ್ಯಂ-ತಯೋಃ ಜ್ಯೋತಿರ್ನಾಮಕಮಹರ್ಯಸ್ಮಿನ್ಷಡಹೇ ತದೇತದುಭಯತೋ ಜ್ಯೋತಿಸ್ತೇನೈವ ಷಡಹೇನಾನುತಿಷ್ಠೇಯುಃ ॥ ತದನುಷ್ಠಾನೇನೋಭಯತೋ ವರ್ತಮಾನಯೋಃ ಪ್ರತಿಷ್ಠಾಂ ಪ್ರಾಪಯಂತಿ ವರ್ತಂತೇ ॥ ಲೋಕಯೋರುಭಯತ ಇತ್ಯಸ್ಯೈವ ವಿವರಣಮಸ್ಮಿಂಶ್ಚ ಲೋಕೇಽ-ಮುಷ್ಮಿಂಶ್ಚೋಭಯೋರಿತಿ ॥ ಅಥವೋತ್ತರಶೇಷತ್ವೇನಾಸ್ಮಿಂಶ್ಚೇತ್ಯಾದಿಕಮನ್ವೇತವ್ಯಂ ॥

ಈ ಅಭಿಪ್ಲವಷಡಹವೆಂಬ ಆರು ದಿನಗಳ ಯಜ್ಞವನ್ನು ಮೂರುದಿನಗಳಿಗೆ ಬಂದಂತೆ ಎರಡು ಭಾಗಗಳನ್ನಾಗಿ ಮಾಡಿದೆಯಷ್ಟೆ. ಈ ಎರಡು ಭಾಗಗಳಲ್ಲಿರುವ ಕ್ರಮದಲ್ಲಿ ವ್ಯತ್ಯಾಸವನ್ನು ಪ್ರಶಂಶಿಮಾಡುವರು. ಮೊದಲ ಮೂರು ದಿನಗಳಲ್ಲಿ (ಮೊದಲ ದಿನದಲ್ಲಿ) ಆಚರಿಸಲ್ಪಡಬೇಕಾದ ಜ್ಯೋತಿಷ್ಟೋಮವೆಂಬ ದಿನವು ಭೂಲೋಕಸ್ವರೂಪವಾಗಿರುವುದು. ಆದರೆ ಇದೇ ಜ್ಯೋತಿಷ್ಟೋಮವೆಂಬ ದಿನವು ಉತ್ತರಾರ್ಧದ (ಕೊನೆಯ) ಮೂರುದಿನಗಳ ಅಂತ್ಯದಲ್ಲಿ ನೆರವೇರಿಸಲ್ಪಡುವಾಗ ಅದು ದ್ಯುಲೋಕ ಸ್ವರೂಪವೆನಿಸುವುದು. ಇವೆರಡೂ ಷಡಹವೆಂಬ ಯಾಗದ ಆದ್ಯಂತದಿನಗಳಲ್ಲಿ ಇರುವುದರಿಂದ ಜ್ಯೋತಿಸ್ವರೂಪ (ಬೆಳಕಿನ ಸ್ವರೂಪ) ದಿಂದಿದ್ದು ಪರಸ್ಪರವಾಗಿ ಒಂದನ್ನೊಂದು ನೋಡುತ್ತಿರುವವು.

ಅಭಿಪ್ಲವಷಡಹದಲ್ಲಿ ಕೆಲವು ದಿನಗಳನ್ನು ಮಾತ್ರ ವಿವರಿಸಿ ಅದನ್ನು ಈಗ ಸಮುಷ್ಟಿಯಾಗಿ (ಒಟ್ಟಾಗಿ) ವಿವರಿಸುವರು. ಈ ಅಭಿಪ್ಲವಷಡಹದಲ್ಲಿ ಜ್ಯೋತಿಷ್ಟೋಮವೆಂಬ ದಿನವು ಮೊದಲು ಮತ್ತು ಕೊನೆಯ (ಆರನೆಯ ದಿನ) ದಿನಗಳಲ್ಲಿ ಇರುವುದರಿಂದ ಇದಕ್ಕೆ ಎಂದರೆ ಅಭಿಪ್ಲವಷಳಹಕ್ಕೆ ಉಭಯತೋಜ್ಯೋತಿಃಷಳಹ ಎಂಬ ಹೆಸರಿನಿಂದ ಆಚರಿಸಬೇಕು. ಹೀಗೆ ಮಾಡುವುದರಿಂದ ಎರಡು ಲೋಕಗಳಲ್ಲಿಯೂ (ಭೂಲೋಕ, ದ್ಯುಲೋಕ) ಪ್ರತಿಷ್ಠೆಯನ್ನು (ನೆಲಸಿ ವೃದ್ಧಿಯನ್ನು) ಪಡೆಯುವರು. ಇಲ್ಲಿ ಎರಡು ಲೋಕಗಳು ಎಂದು ಹೇಳಿರುವುದರಿಂದ ಈ ಭೂಲೋಕವು ಮತ್ತು ಸ್ವರ್ಗಲೋಕವು ಎಂದು ತಿಳಿಯಬೇಕು.

ಪರಿಯದ್ವಾ ಏತದ್ದೇವಚಕ್ರಂ ಯದಭಿಪ್ಲವಃ ಷಳಹಸ್ತಸ್ಯ ಯಾವಭಿ-ತೋಽಗ್ನಿಷ್ಟೋಮೌ ತೌ ಪ್ರಧೀ ಯೇ ಚತ್ವಾರೋ ಮಧ್ಯಉಕ್ಥ್ಯಾ-ಸ್ತನ್ನಭ್ಯಂ ಗಚ್ಛತಿ ವೈ ವರ್ತಮಾನೇನ ಯತ್ರ ಕಾಮಯತೇ ತತ್ಸ್ವಸ್ತಿ ಸಂವತ್ಸರಸ್ಯ ಪಾರಮಶ್ನುತೇ ಯ ಏವಂ ವೇದ ॥

ಅಸ್ಮಿನ್ನಭಿಪ್ಲವಷಡಹೇ ಸಂಸ್ಥಾವಿಶೇಷಾನ್ವಿಧತ್ತೇ—ಯೋಽಯಮಭಿಪ್ಲವಃ ಷಡಹಸ್ತದೇ-ತದಸ್ಮಿಂಶ್ಚಾಮುಷ್ಮಿಂಶ್ಚೋಭಯೋರ್ಲೋಕಯೋಃ ಪರಿಯದ್ವೈ ಪರಿವರ್ತಮಾನಮೇವ ದೇವಚಕ್ರಂ ॥ ಯಥಾ ಲೋಕೇ ರಥಸ್ಯ ಚಕ್ರಂ ಪುನಃ ಪುನಃ ಪರಿವರ್ತತೇ ತದ್ವದಿದಂ ದೇವ-ಚಕ್ರಂ ಅಸಕೃತ್ಷಡಹಂ ಪರಿವರ್ತನಸ್ಯ ವಕ್ಷ್ಯಮಾಣತ್ವಾತ್ ॥ ರಥಚಕ್ರಸ್ಯ ಹಿ ನಿಷ್ಪಾದಕಾನಿ ತ್ರೀಣಿ ಫಲಕಾನಿ । ತತ್ರ ಮಧ್ಯಮಫಲಕೇಽರುಂ ಪ್ರವೇಶಯಿತುಂ ಪ್ರೌಢಂ ನಾಭಿಚ್ಛಿದ್ರಂ ಕ್ರಿ-ಯತೇ ॥ ತಸ್ಯ ಫಲಕಸ್ಯೋಭಯೋಃ ಪಾರ್ಶ್ವಯೋರ್ವರ್ತುಲತ್ವಾಯ ಫಲಕದ್ವಯಂ ಕೀಲಿತಂ

ಭವತಿ ॥ ಏವಮಸ್ಮಿನ್ನಪಿ ಷಡಹೇ ಜ್ಯೋತಿರ್ಯೋರ್ನಾನಾದ್ಯಂತರ್ವರ್ತಿನಾವಗ್ನಿಷ್ಟೋಮಸಂಸ್ಥಾ ಪ್ರಧೀ ಭವತಃ ಪ್ರಕರ್ಷೇಣೋಭಯತೋ ಧೀಯೇತೇ ಸ್ಥಾಪ್ಯೇತೇ ಇತಿ ಪ್ರಧೀ ಫಲಕದ್ವಯಸ್ಥಾನೀಯಾವಿತ್ಯರ್ಥಃ ॥ ಏತಸ್ಮಿನ್ಯೇ ತು ಮಧ್ಯೇ ಚತ್ವಾರೋಽಹರ್ವಿಶೇಷಾಃ ಉಕ್ಥ್ಯಸಂಸ್ಥಾಸ್ತದೇತನ್ನಭ್ಯಂ ನಾಭಿ ಯೋಗ್ಯಸ್ಥಾನಮುಕ್ಥ್ಯಸಂಸ್ಥಾಃ ಕರ್ತವ್ಯಾ ಇತ್ಯರ್ಥಃ ॥ ವೇದನಂ ಪ್ರಶಂಸತಿ— ವೇದಿತಾ ಯಕ್ರ ಯಸ್ಮಿನ್ಲೋಕೇ ಗಂತುಂ ಕಾಮಯತೇ ತತ್ರಾನೇನೈವ ಪರಿವರ್ತಮಾನೇನ ದೇವಚಕ್ರೇಣ ಗಚ್ಛತಿ ॥ ತತ್ತೇನ ದೇವಚಕ್ರೇಣ ನಿರ್ವಿಘ್ನಮೇವ ಸಂವತ್ಸರಸತ್ರಸಮಾಪ್ತಿಂ ಗಚ್ಛತಿ ॥

ಈ ಅಭಿಪ್ಲವಷಡಹವೆಂಬ ಯಾಗವು ದೇವಮನುಷ್ಯವೆಂಬ ಎರಡು ಲೋಕಗಳಲ್ಲಿಯೂ ಸದಾ ಉರುಳುತ್ತಿರುವ ದೇವ ಚಕ್ರದಂತಿರುವುದು. ಲೋಕದಲ್ಲಿ ರಥಚಕ್ರವು ಯಾವಾಗಲೂ ಚಲಿಸುತ್ತಾ ಉರುಳುತ್ತಿರುವುದೋ ಅದರಂತೆ ಈ ಅಭಿಪ್ಲವಷಡಹವು (ಸತ್ರಯಾಗದಲ್ಲಿ) ಪುನಃಪುನಃ ಪರಿವರ್ತನರೂಪವಾಗಿ ನಡೆಯುತ್ತಲೇ ಇರುವುದು. ರಥಚಕ್ರಕ್ಕೆ ಸುತ್ತಲೂ ಆವರಿಸಿರುವ ಮೂರು ಹಲಗೆಗಳಿರುವವು. ಅವುಗಳಲ್ಲಿ ಮಧ್ಯದ ಹಲಗೆಯ ಮಧ್ಯಭಾಗದಲ್ಲಿ ಒಂದು ರಂಧ್ರವನ್ನು ಮಾಡಿರುವರು. ಇದರಲ್ಲಿ ಅಚ್ಚನ್ನು ತೂರಿಸುವರು. ಈ ಅಚ್ಚಿನ ಸುತ್ತಲೂ ಚಕ್ರವು ಸುತ್ತುತ್ತಲಿರುವುದು. ಇದರಂತೆ ಈ ಅಭಿಪ್ಲವಷಡಹದಲ್ಲಿಯೂ ಜ್ಯೋತಿರ್ಗೌಃ ಎಂಬ ಸಂಸ್ಥೆಗಳು ಪುನಃಪುನಃ ಪರಿವರ್ತನರೂಪವಾಗಿ ಬರುತ್ತಲೇ ಇರುವವು. ಈ ಎರಡು ಸಂಸ್ಥೆಗಳ ಮಧ್ಯದಲ್ಲಿ ನಾಲ್ಕು ಉಕ್ಥ್ಯ ವಿಶೇಷಗಳನ್ನು ಸೇರಿಸಿ ಪ್ರಯೋಗಮಾಡುವರು. ಲೋಕದಲ್ಲಿ ಯಾವ ಪುರುಷನು ಎಲ್ಲಿಗಾದರೂ ಹೋಗಬೇಕಾದರೆ ಚಕ್ರವಿರುವ ರಥದಲ್ಲಿ ಕುಳಿತು ಹೋಗುವನೋ ಅದರಂತೆ ದೇವಚಕ್ರವೆಂದು ಹೇಳಲ್ಪಡುವ ಈ ಅಭಿಪ್ಲವಷಡಹವೆಂಬ ಸಂಸ್ಥೆಯ ಮೂಲಕ ನಿರ್ವಿಘ್ನವಾಗಿ ಸಂವತ್ಸರದ ಕೊನೆಯಲ್ಲಿ ಸತ್ರಯಾಗವನ್ನು ಆ ಪುರುಷನು ಮಾಡಿ ಮುಗಿಸುವನು.

**ಯೋ ವೈ ತದ್ವೇದ ಯತ್ಪ್ರಥಮಃ ಷಳಹಃ ಸ ವೈ ಸ್ವಸ್ತಿ ಸಂವತ್ಸರಸ್ಯ ಪಾರಮಶ್ನುತೇ ಯಸ್ತದ್ವೇದ ಯದ್ದ್ವಿತೀಯೋ ಯಸ್ತದ್ವೇದ ಯತ್ತೃತೀಯೋ ಯಸ್ತದ್ವೇದ ಯಚ್ಚತುರ್ಥೋ ಯಸ್ತದ್ವೇದ ಯತ್ಪಂಚಮಃ ॥**

ಉಕ್ತಸ್ಯಾಭಿಪ್ಲವಷಡಹಸ್ಯೈಕೈಕಸ್ಮಿನ್ಮಾಸಿ ಪಂಚಕೃತ್ವ ಆವೃತ್ತಿಂ ವಿಧತ್ತೇ— ಪ್ರಥಮಃ ಷಡಹ ಇತಿಯದಸ್ತಿ ತದ್ಯೋ ವೇದ ಸ ವೈ ಸ್ವಸ್ತೀತ್ಯಾದಿಕಮನುವರ್ತನೀಯಂ। ಏವಮುತ್ತರೇಷ್ವಪಿ ತ್ರಿಷು ಪರ್ಯಾಯೇಷು ದ್ರಷ್ಟವ್ಯಂ ॥ ಷಡಹೇ ಪಂಚಕೃತ್ವ ಆವರ್ತ(ತ್ಯ)ಮಾನೇ ಸತಿ. ತ್ರಿಂಶದಹಾನಿ ಭೂತ್ವಾ ಮಾಸಃ ಸಂಪದ್ಯತೇ ॥

ಮೇಲೆ ಹೇಳಿದ ಅಭಿಪ್ಲವಷಡಹವನ್ನು ಸಂವತ್ಸರದವರೆಗೂ ಮಾಡುವ ಸತ್ರಯಾಗದಲ್ಲಿ ಪ್ರತಿಮಾಸದಲ್ಲಿಯೂ ಐದಾವರ್ತಿ ಮಾಡಬೇಕೆಂಬ ವಿಷಯವನ್ನು ಹೇಳುವರು. ಷಡಹವೆಂದರೆ ಆರು ದಿನಗಳಲ್ಲಿ ಮಾಡಬೇಕಾದ ಯಾಗವು. ಯಾವ ಪುರುಷನು ಪ್ರಥಮ ಮಾಸದಲ್ಲಿ ಮಾಡಬೇಕಾದ ಮೊದಲನೇ ಷಡಹ ವಿಧಾನವನ್ನು ತಿಳಿದು ಅದರಂತೆ ಆಚರಿಸುವನೋ ಅವನು ನಿರ್ವಿಘ್ನವಾಗಿ ವರ್ಷಾಂತ್ಯದಲ್ಲಿ ಸತ್ರಯಾಗದ ಕೊನೆಯನ್ನು ಮುಟ್ಟುವನು. ಹೀಗೆಯೇ ಎರಡನೆಯ ಷಳಹವನ್ನು ಮಾಡಿ ಮುಗಿಸುವವನು ಸ್ವಸ್ತಿದಾಯಕವಾದ ಸಕಲ ಕ್ಷೇಮಾಭ್ಯುದಯಗಳನ್ನೂ ಪಡೆಯುವನು. ಇದರಂತೆಯೇ ಮುಂದಿನ ಮೂರು

ಷಡಹಗಳಲ್ಲಿಯೂ ಅನುಷ್ಠಾನವನ್ನು ಮಾಡಬೇಕು. ಹೀಗೆ ಆರುದಿನಗಳವರೆಗೆ ಮಾಡುವ ಐದು ಷಡಹಗಳಿಂದ (೬×೫=೩೦) ಒಂದುಮಾಸವು (೩೦ ದಿನಗಳು) ಕಳೆದುಹೋಗುವುದು. (ಇದರ ಕ್ರಮವನ್ನು ನಾವು ಪೂರ್ವಪೀಠಿಕೆಯ ಎಂದರೆ ೩೧ನೇ ಭಾಗದ 18–19ನೇ ಪುಟಗಳಲ್ಲಿ ತಿಳಿಸಿದ್ದೇವೆ).

*English Translation*

**(The Shalaha and Vishuvan day of the Sattras with the performance of the days preceding and following the Vishuvan.)**

**(The Tryaha and Shalaha, i.e., periods of three and six days at the Sattra. The Abhiplava).**

They (those who hold the sacrificial session) perform now the Jyotish-Go and Ayush-Stomas. This world is the Jyotis Light the airy region the Go (Stoma), that world ayus (life). The same Stomas as in the first three days out of the six are observed in the latter three days. In the first three days the order of the Stomas is, Jyotish-Go and Ayush Stomas. In the latter three days the order is Go-Ayush–Jyotish–Stomas. According to the position of the Jyotish Stoma in both parts the Jyotish is this world and that world ; they are the two Jyotish (lights) on both sides facing one another in the world.

They perform the Shalaha (six day's Soma sacrifice), so that in both its parts each consisting of three days there is thə Jyotish Stoma in the first at the beginning, in the latter at the end. By doing so they gain a firm footing in both worlds, in this one and that one, and walk in both.

Abhiplava Shalaha is the revolving wheel of the gods. Two Agnishtomas form the circumference of this wheel ; the four Ukthyas in the midst are then the nave. By means of this revolving wheel of the gods one can go to any place one may choose. Thus he who has such a knowledge safely reaches the end of the year. He who has a proper knowledge of the first Shalaha safely reaches the end of the year, and so does he who has a proper knowledge of the second, third, fourth and fifth Shalahas, i.e., all the five Shalahas of the month.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯೇ ಅಷ್ಟಾದಶಾಧ್ಯಾಯಸ್ಯ ಪ್ರಥಮಃಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನೆಂಟನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವಾದುದು.**



# ಅಥ ಅಷ್ಟಾದಶಾಧ್ಯಾಯೇ ದ್ವಿತೀಯಃ ಖಂಡಃ

## ಹದಿನೆಂಟನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ ಪ್ರತಿಮಾಸದಲ್ಲಿಯೂ ಅನುಷ್ಠಾನಮಾಡುವ ಐದು ಷಳಹಗಳ ಅರ್ಥವು (ಎಂದರೆ ಸಂಕೇತವು) ಮೊದಲನೆಯ ಷಡಹದ ಸಂಕೇತವು ]



**ಪ್ರಥಮಂ ಷಳಹಮುಪಯಂತಿ ಷಳಹಾನಿ ಭವಂತಿ ಷಡ್ವಾ ಋತವ ಋತುಶ ಏವ ತತ್ಸಂವತ್ಸರಮಾಪ್ನುವಂತ್ಯೃತುಶಃ ಸಂವತ್ಸರೇ ಪ್ರತಿತಿಷ್ಠಂತೋಽಯಂತಿ ॥**

ಉಕ್ತೇಷು ಪಂಚಸು ಷಡಹೇಷು ಪ್ರಥಮಮನೂದ್ಯ ಪ್ರಶಂಸತಿ—ಅನುಷ್ಠಿತೇ ಷಡಹೇ ಷಟ್ಸಂಖ್ಯಾಕಾನ್ಯಹಾನಿ ಭವಂತಿ । ತತಃ ಸಂಖ್ಯಾಸಾಮ್ಯಾದೃತುದ್ವಾರಾ ಸಂವತ್ಸರಂ ಪ್ರಾಪ್ಯ ತತ್ರ ಪ್ರತಿಷ್ಠಿತಾಃ ಸಂತೋ ವರ್ತಂತೇ ॥

ಪ್ರತಿಮಾಸದಲ್ಲಿಯೂ ಮಾಡಬೇಕಾದ ಐದು ಷಡಹಗಳಲ್ಲಿ ಮೊದಲನೇ ಷಡಹವನ್ನು ಪ್ರಶಂಸೆಮಾಡುವರು. ಸಂವತ್ಸರದ ವರೆಗೂ ಮಾಡುವ ಸತ್ರಯಾಗದ ಮೊದಲನೆಯ ತಿಂಗಳಲ್ಲಿ ಷಳಹವೆಂಬ ಯಾಗವನ್ನು ಮೊದಲು ಮಾಡುವರು ಎಂದನೆ ಪ್ರತಿ ಮಾಸದಲ್ಲಿಯೂ ಐದು ಷಳಹವನ್ನು ಆಚರಿಸುವರು. ಒಂದೊಂದು ಷಳಹವನ್ನೂ ಆರುದಿನಗಳವರೆಗೆ ಮಾಡುವುದರಿಂದ ಐದು ಷಳಹಗಳಿಂದ ಮೂವತ್ತು (೬×೫=೩೦) ಈ ಐದು ಷಳಹಗಳೂ ಮೂವತ್ತು ದಿನಗಳವರೆಗೂ ನಡೆಯುವುವು. ಪ್ರತಿ ತಿಂಗಳ ಲ್ಲಿಯೂ ಮಾಡುವ ಈ ಐದು ಷಳಹಗಳ ಸಂಕೇತವನ್ನು ತಿಳಿಸುವರು. ಈಗ ಮೊದಲನೇ ಷಳಹದ ಸಂಕೇತ ವೇನೆಂದರೆ—ಮೊದಲನೇ ಷಳಹವನ್ನು ಆರು ದಿನಗಳವರೆಗೆ ಮಾಡುವರು. ಒಂದು ಸಂವತ್ಸರದಲ್ಲಿ ಆರು ಋತುಗಳಿರುವವು. (ವಸಂತಾದಿ ಆರು ಋತುಗಳು) ಈ ಆರು ಋತುಗಳು ಸೇರಿದರೆ ಒಂದು ಸಂವತ್ಸರವಾಗುವುದು. ಆದ್ದರಿಂದ ಷಳಹದಲ್ಲಿರುವ ಆರುದಿನಗಳಿಗೂ ಸಂವತ್ಸರದಲ್ಲಿರುವ ಆರು ಋತುಗಳಿಗೂ ಸಾಮ್ಯವಿದ್ದಂತಾಯಿತು. ಈ ವಿಧವಾದ ಸಂಖ್ಯಾಸಾಮ್ಯದಿಂದ ಯಜ್ಞ ಮಾಡುವ ಯಜಮಾನರು ಸಂವತ್ಸರದವರೆಗೂ ಯಜ್ಞಮಾಡಿ ಅದರ ಫಲವನ್ನನುಭವಿಸುವರು.

**ದ್ವಿತೀಯಂ ಷಳಹಮುಪಯಂತಿ ದ್ವಾದಶಾಹ್ಲಾನಿ ಭವಂತಿ ದ್ವಾದಶಾ ವೈ ಮಾಸಾ ಮಾಶಸ ಏವ ತತ್ಸಂವತ್ಸರಮಾಪ್ನುವಂತಿ ಮಾಸಶಃ ಸಂವತ್ಸರೇ ಪ್ರತಿತಿಷ್ಠಂತೋ ಯಂತಿ ॥**

ಪೂರ್ವೇಣ ಷಡಹೇನ ಸಹಿತಂ ದ್ವಿತೀಯಂ ಷಡಹಂ ಪ್ರಶಂಸತಿ ಪೂರ್ವವದ್ವ್ಯಾಖ್ಯೇಯಂ ॥

ಈ ಪ್ರತಿಮಾಸದಲ್ಲಿಯೂ ಮಾಡುವ ಎರಡನೆಯ ಷಳಹವನ್ನು ತಿಳಿಸುವರು. ಮೊದಲನೇ ಮಾಸದಲ್ಲಿ ಮಾಡುವ ಎರಡನೇ ಷಳಹದಿಂದ ಮೊದಲನೆಯ ಷಳಹದ ಆರುದಿನಗಳೂ ಎರಡನೇ ಷಳಹದ ಆರುದಿನಗಳೂ ಸೇರಿ ಹನ್ನೆರಡು ದಿನಗಳಾಗುವವು, ಒಂದು ಸಂವತ್ಸರದಲ್ಲಿ ಹನ್ನೆರಡು ಮಾಸಗಳಿರುವವು. ಆದ್ದರಿಂದ ಮೊದಲ ಎರಡು ಷಳಹಗಳಿಗೂ ಸಂವತ್ಸರದಲ್ಲಿರುವ ಹನ್ನೆರಡು ಮಾಸಗಳಿಗೂ ಸಾಮ್ಯವಿದ್ದಂತಾಯಿತು. ಈರೀತಿ ಮಾಡುವ ಯಜಮಾನರು ಸಂವತ್ಸರದವರೆಗೂ ಸತ್ರ (ಯಜ್ಞ) ಯಾಗದಲ್ಲಿ ಸ್ಥಿರವಾಗಿ ನೆಲಸಿ ಕಾರ್ಯವನ್ನು ಮುಗಿಸುವರು.

**ತೃತೀಯಂ ಷಳಹಮುಪಯಂತ್ಯಷ್ಟಾದಶಾಹಾನಿ ಭವಂತಿ ತಾನಿ ದ್ವೇಧಾ ನವಾನ್ಯಾನಿ ನವಾನ್ಯಾನಿ ನವ ವೈ ಪ್ರಾಣಾ ನವ ಸ್ವರ್ಗಾ ಲೋಕಾಃ ಪ್ರಾಣಾಂಶ್ಚೈವ ತತ್ಸ್ವರ್ಗಾಂಶ್ಚ ಲೋಕಾನಾಪ್ನುವಂತಿ ಪ್ರಾಣೇಷು ಚೈವ ತತ್ಸ್ವರ್ಗೇಷು ಚ ಲೋಕೇಷು ಪ್ರತಿತಿಷ್ಠಂತೋ ಯಂತಿ**

**ಉಕ್ತಾಭ್ಯಾಂ ಷಡಹಾಭ್ಯಾಂ ಸಹಿತಂ ತೃತೀಯಂ ಷಡಹಂ ಪ್ರಶಂಸತಿ ॥ ತ್ರಿಷು ಷಡಹೇಷು ಯಾನ್ಯಷ್ಟಾದಶಾಹಾನಿ ತೇಷಾಂ ದ್ವೈಧಾ ವಿಭಾಗೇ ಸತಿ ಪ್ರತ್ಯೇಕಂ ನವಸಂಖ್ಯಾ ಸಂಪದ್ಯತೇ ॥ ಪ್ರಾಣಾಃ ಸಪ್ತಸೂರ್ಧ್ವಚ್ಛಿದ್ರೇಷು ದ್ವಯೋರಧಶ್ಛಿದ್ರಯೋರ್ನವಸಂಖ್ಯಾಕಾಃ ಸ್ವರ್ಗಲೋಕಾಶ್ಚ ನವಭೋಗಸ್ಥಾನಭೇದೇನ ನವವಿಧಾ ಅತಃ ಸಂಖ್ಯಾಸಾಮ್ಯಾತ್ಪ್ರಾಣಾನ್ಸ್ವರ್ಗಲೋಕಾಂಶ್ಚ ಪ್ರಾಪ್ಯ ತತ್ರ ಪ್ರತಿಷ್ಠಿತಾ ವರ್ತಂತೇ ॥**

ಈಗ ಮಾಸದಲ್ಲಿ ಮೂರನೆಯ ಷಳಹವನ್ನು ಮಾಡುವುದರಿಂದ ಹಿಂದಿನ ಎರಡು ಷಳಹಗಳ ಹನ್ನೆರಡು ದಿನಗಳ ಜತೆಗೆ ಈಗಿನ ಆರುದಿನಗಳೂ ಸೇರಿದರೆ ಹದಿನೆಂಟು ದಿನಗಳಾದಂತಾಯಿತು. ಈ ಹದಿನೆಂಟು ದಿನಗಳನ್ನು ಎರಡಾಗಿ ವಿಭಾಗಿಸಿದರೆ ಒಂಭತ್ತರಂತೆ ಎರಡು ವಿಭಾಗಗಳಾಗುವವು. ಮೊದಲನೇ ವಿಭಾಗವಾದ ಒಂಭತ್ತಕ್ಕೆ ಒಂಭತ್ತು ಸಂಖ್ಯೆಯ ಪ್ರಾಣಗಳೆಂದೂ ಎರಡನೆ ಒಂಭತ್ತಕ್ಕೆ ಒಂಭತ್ತುವಿಧ ಸ್ವರ್ಗಲೋಕಗಳೆಂದು ಹೆಸರಿರುವುದು. ಆದ್ದರಿಂದ ಈ ಒಂಭತ್ತು ಪ್ರಾಣಗಳಿಗೂ ಒಂಭತ್ತು ಸ್ವರ್ಗಲೋಕಗಳಿಗೂ ಸಂವತ್ಸರಕ್ಕೂ ಸಾಮ್ಯವಿರುವುದು. ಆದ್ದರಿಂದ ಸಂವತ್ಸರ ಸತ್ರಯಾಗವನ್ನು ಮಾಡುವವರು ಒಂಭತ್ತು ಪ್ರಾಣಗಳನ್ನೂ ಹೊಂದಿ (ಜೀವಿಸಿರುತ್ತಾ) ಒಂಭತ್ತುವಿಧ ಸ್ವರ್ಗಲೋಕಗಳಲ್ಲಿಯೂ ಸಂಚರಿಸುತ್ತಾ ವಾಸಿಸುವರು.

**ಚತುರ್ಥಂ ಷಳಹಮುಪಯಂತಿ ಚತುರ್ವಿಂಶತಿರಹಾನಿ ಭವಂತಿ ಚತುರ್ವಿಂಶತಿರ್ವಾ ಅರ್ಧಮಾಸಾ ಅರ್ಧಮಾಸಶ ಏವ ಸಂವತ್ಸರಮಾಪ್ನುವಂತ್ಯರ್ಧಮಾಸಶಃ ಸಂವತ್ಸರೇ ಪ್ರತಿತಿಷ್ಠಂತೋ ಯಂತಿ ॥**

**ಪೂರ್ವೈಸ್ತ್ರಿಭಿಃ ಷಡಹೈಶ್ಚತುರ್ಥಂ ಷಡಹಂ ಪ್ರಶಂಸತಿ—ಅತಃ ಸಂಖ್ಯಾಸಾಮ್ಯಾದರ್ಧಮಾಸದ್ವಾರಾ ಸಂವತ್ಸರೇ ಪ್ರತಿಷ್ಠಿತಾಃ ॥**

ನಾಲ್ಕನೆಯ ಷಳಹವನ್ನು ಮಾಡಿದರೆ, ಹಿಂದಿನ ಮೂರು ಷಳಹಗಳೂ ಸೇರಿ ದಿನಗಳನ್ನು ಆಚರಿಸಿದಂತಾಯಿತು. ಒಂದು ಸಂವತ್ಸರದಲ್ಲಿ ಇಪ್ಪತ್ತನಾಲ್ಕು ಅರ್ಧಮಾಸ (ಪಕ್ಷ) ಗಳಿರುವುದರಿಂದ ಸಂವತ್ಸರಕ್ಕೂ ಇಪ್ಪತ್ತುನಾಲ್ಕು ದಿನಗಳ

ಕಾರ್ಯಕಲಾಪಗಳಿಗೂ ಸಾಮ್ಯವಿದ್ದಂತಾಯಿತು. ಈರೀತಿ ನಾಲ್ಕು ಷಡಹಗಳನ್ನು (೨೪ ದಿನಗಳನ್ನು) ಆಚರಿಸುವ ಯಜಮಾನರು ಸಂವತ್ಸರ ಯಾಗದಲ್ಲಿ ದೃಢವಾಗಿ ನೆಲಸಿರುವರು.

ಪಂಚಮಂ ಷಳಹಮುಪಯಂತಿ ತ್ರಿಂಶದಹಾನಿ ಭವಂತಿ ತ್ರಿಂಶದಕ್ಷರಾ ವೈ ವಿರಾಡ್ವಿರಾಳನ್ನಾದ್ಯಂ ವಿರಾಜಮೇವ ತನ್ಮಾಸಿ ಮಾಸ್ಯಭಿಸಂಪಾದಯಂತೋ ಯಂತಿ ॥

ಪೂರ್ವೈಶ್ಚತುರ್ಭಿಃ ಷಡಹೈಃ ಸಹಿತಂ ಪಂಚಮಂ ಷಡಹಂ ಪ್ರಶಂಸತಿ - ಅಹಃ ಸಂಖ್ಯಾಯಾ ವಿರಾಟ್ಸಾಮ್ಯಾದ್ವಿರಾಜಶ್ಚಾನ್ನಾದ್ಯಹೇತುತ್ವಾತ್ಪ್ರತಿಮಾಸಂ ವಿರಾಡ್ದ್ವಾರಾನ್ನಾದ್ಯಂ ಪ್ರಾಪ್ನುವಂತಿ ॥

ಐದನೇ ಷಳಹವನ್ನು ಮಾಡುವುದರಿಂದ ಹಿಂದಿನದೂ ಸೇರಿ ಮೂವತ್ತು ದಿನಗಳವರೆಗೂ ಮಾಡಿದಂತಾಗುವುದು. ವಿರಾಟ್ ಎಂಬ ಛಂದಸ್ಸಿನಲ್ಲಿ ಮೂವತ್ತು ಅಕ್ಷರಗಳಿರುವವು. ಮತ್ತು ಈ ಛಂದಸ್ಸಿನಿಂದ ಅನ್ನಾದ್ಯಾಹಾರವನ್ನು ಪಡೆದು ಸುಖಿಸುವರು. ಮೇಲೆ ಹೇಳಿದಂತೆ ಮೂವತ್ತು ದಿನಗಳ ಕಾರ್ಯಕಲಾಪಗಳಿಗೂ ವಿರಾಟ್‌ಛಂದಸ್ಸಿನಲ್ಲಿರುವ ಮೂವತ್ತು ಅಕ್ಷರಗಳಿಗೂ ಸಾಮ್ಯವಿರುವುದರಿಂದ ಸತ್ರಯಾಗವನ್ನು ಮಾಡುವವರು ಸಂವತ್ಸರದವರೆಗೆ ಪ್ರತಿಮಾಸದಲ್ಲಿಯೂ ಅನ್ನಾದ್ಯಾಹಾರಗಳನ್ನು ಪಡೆದು ಸುಖಿಸುವರು.

ಅನ್ನಾದ್ಯಕಾಮಾಃ ಖಲು ವೈ ಸತ್ರಮಾಸತ ತದ್ಯದ್ವಿರಾಜಂ ಮಾಸಿ ಮಾಸ್ಯಭಿಸಂಪಾದಯಂತೋ ಯಂತ್ಯನ್ನಾದ್ಯಮೇವ ತನ್ಮಾಸಿ ಮಾಸ್ಯವರುಂಧಾನಾ ಯಂತ್ಯಸ್ಮೈ ಚ ಲೋಕಾಯಾಮುಷ್ಮೈ ಚೋಭಾಭ್ಯಾಂ ॥

ಪುನರಪಿ ಷಡಹಪಂಚಕಂ ಪ್ರಶಂಸತಿ—ಯೇ ಸತ್ರಸ್ಯಾನುಷ್ಠಾತಾರಸ್ತೇ ಹ್ಯನ್ನಾದ್ಯಕಾಮಾ ಅನುತಿಷ್ಠಂತಿ । ತಥಾ ಸತಿ ಪೂರ್ವೋಕ್ತರೀತ್ಯಾ ಸಂಖ್ಯಾಸಾಮ್ಯಾತ್ಪಂಚಸು ಷಡಹೇಷು ತ್ರಿಂಶದಕ್ಷರರೂಪಾಂ ವಿರಾಜಂ ಪ್ರತಿಮಾಸಂ ಸಂಪಾದಯಂತೋ ವರ್ತಂತೇ ॥ ಪ್ರತಿಮಾಸಮನ್ನಾದ್ಯಂ ಪ್ರಾಪ್ನುವಂತೋ ಲೋಕದ್ವಯಾರ್ಥಂ ಗಚ್ಛಂತಿ ॥ ಪ್ರತಿಮಾಸಂ ಷಡಹಪಂಚಕಮನುತಿಷ್ಠೇಯುರಿತಿ ತಾತ್ಪರ್ಯಾರ್ಥಃ ॥ ತತ್ರ ಚತ್ವಾರೋಽಭಿಪ್ಲವಾಃ ಷಡಹಾಃ ಪಂಚಮಸ್ತು ಪೃಷ್ಠ್ಯಃ ಷಡಹ ಇತಿ ಸೂತ್ರಕಾರೈರಭಿಧಾನಾದಯಂ ವಿಶೇಷಃ ಶಾಖಾಂತರೇ ದ್ರಷ್ಟವ್ಯಃ ॥

ಮೇಲೆ ಹೇಳಿದ ಆರು ಷಳಹಗಳನ್ನು ಪುನಃ ಪ್ರಶಂಸೆಮಾಡುವರು. ಸತ್ರಯಾಗಾನುಷ್ಠಾನ ಮಾಡುವ ಯಜಮಾನರು ಅನ್ನಾದ್ಯಾಹಾರವು ತಮಗೆ ಲಭಿಸಬೇಕೆಂದು ಪ್ರತಿಮಾಸದಲ್ಲಿಯೂ ಐದು ಷಡಹಗಳನ್ನು ಮಾಡಿ ವಿರಾಟ್‌ಛಂದಸ್ಸಿನ ಮೂಲಕ ಅನ್ನಾದ್ಯಾಹಾರವನ್ನು ಪಡೆಯುತ್ತಾರೆ. ಮತ್ತು ಈಲೋಕ ಪರಲೋಕಗಳನ್ನು ಹೊಂದಲು ಪ್ರಯತ್ನಿಸುತ್ತಾರೆ. ಎಂದರೆ ಪ್ರತಿಮಾಸದಲ್ಲಿಯೂ ಐದು ಷಡಹಗಳನ್ನು ಮಾಡುವರೆಂದಭಿಪ್ರಾಯವು. ಈ ಐದು ಷಡಹಗಳಲ್ಲಿ ನಾಲ್ಕು ಅಭಿಪ್ಲವ ಷಡಹಗಳು ಒಂದು ಪೃಷ್ಠ್ಯಷಡಹವು ಒಟ್ಟು ಐದು ಷಡಹಗಳೆಂದು ಶಾಖಾಂತರದಲ್ಲಿ ಹೇಳಲ್ಪಟ್ಟಿರುವುದು. ಸೂತ್ರಕಾರರೂ ಹಾಗೆಯೇ ಹೇಳಿರುವರು.

*English Translation*

**On the meaning of the celebration of five Shalahas during the course of a month).**

They celebraIe the first Shalaha. There are six seasons· This makes six days. Thus they secure the year for themselves as divided into seasons, and gain a firm footing in the several seasons of the year.

They celebrate the second Shalaha. This makes (in addition to the previous six days) twelve days. There are twelve months. Thus they secure the year as divided into months and gain a firm footing in the several months of the year.

They celebrate the third Shalaha. This makes (in addition to the previous twelve days) eighteen days. This makes twice nine. There are nine vital airs, and nine celstial worlds. Thus they obtain the nine vital airs, and reach the nine celestial worlds, and gaining a firm footing in the vital airs, and the celestial worlds, they walk there.

They celebrate the fourth Shalaha. This makes twenty-four days. There are twenty-four half months. Thus they secure the year as divided into half months, and gaining a firm footing in its several half months, they walk in them.

They celebrate the fifth Shalaha· This makes thirty days. The Virat metre has thirty syllables. The Virat is food. Thus they procure virat (food) in every month.

Those who wished for food, were ones holding a sacrificial session. By obtaining in every mouth the Virat the number ihirty, they become possessed of food for both worlds, this one and that one.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೆ ಐತರೇಯಬ್ರಾಹ್ಮಣಭಾಷ್ಯಸ್ಯ ಸಪ್ತದಶಾಧ್ಯಾಯಸ್ಯ ದ್ವಿತೀಯಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನೇಳನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವಾದುದು.**



# ಅಥ ಅಷ್ಟಾದಶಾಧ್ಯಾಯೇ ತೃತೀಯಃ ಖಂಡಃ

## ಹದಿನೆಂಟನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ ಗೋವುಗಳು ಸತ್ರಯಾಗವನ್ನು ಮಾಡಿದ ಪೂರ್ವೇತಿಹಾಸವೃತ್ತಾಂತವು ನಾನಾವಿಧವಾದ ಸತ್ರಯಾಗಗಳು, ಗವಾಮಯನಂ, ಆದಿತ್ಯಾನಾಮಯನಂ, ಅಂಗಿರಸಾಮಯನಂ ಇತ್ಯಾದಿ ]



**ಗವಾಮಯನೇನ ಯಂತಿ ಗಾವೋ ವಾ ಆದಿತ್ಯಾ ಆದಿತ್ಯಾನಾಮೇವ ತದಯನೇನಯಂತಿ ॥**

**ಸಂವತ್ಸರಸತ್ರಸ್ಯಾವಯವಾನ್ಮಾಸಾನಭಿಧಾಯ ಸತ್ರಂ ವಿಧತ್ತೇ—ಸಂವತ್ಸರಸತ್ರಾಣಾಂ ಪ್ರಕೃತಿಭೂತಸ್ಯೈತಸ್ಯ ಸತ್ರಸ್ಯ ಗವಾಮಯನಮಿತಿ ನಾಮಧೇಯಂ ॥ ತೇನ ಯಂತ್ಯನುತಿಷ್ಠೇಯುಃ ॥ ಗಮನಸಾಮ್ಯಾದ್ಗವಾಮಾದಿತ್ಯತ್ವಂ ॥ ತಥಾ ಸತ್ಯಾದಿತ್ಯಾನಾಮೇವಾಯನೇನಾನುಷ್ಠಾನಂ ಕೃತಂ ಭವತಿ ॥**

ಸತ್ರಯಾಗದ ಸಂವತ್ಸರಾತ್ಮಕವಾದ ಕಾಲಪರಿಣಾಮದ ಅಂಗಭೂತಗಳಾದ (೧೨) ಮಾಸಗಳನ್ನು ಹೇಳಿದ್ದಾಯಿತು ಈ ಸತ್ರದ ವಿವರವನ್ನು ತಿಳಿಸುವರು. ಒಂದು ಸಂವತ್ಸರ ಪರ್ಯಂತರವೂ ಮಾಡುವ ಸತ್ರಯಾಗಗಳಿಗೆ ಗವಾಮಯನವೆಂಬ ಸತ್ರವು ಪ್ರಕೃತಿ ಭೂತವಾಗಿರುವುದು. ಅಯನವೆಂದರೆ ಸಂಚಾರವು. ಗೋವುಗಳು ಆಹಾರಕ್ಕಾಗಿ ಸಂಚರಿಸುತ್ತಿರುವಂತೆ ಆದಿತ್ಯನೂ (ಸೂರ್ಯನು) ಯಾವಾಗಲೂ ಸಂಚರಿಸುತ್ತಿರುವುದರಿಂದ ಗವಾಮಯನಕ್ಕೂ ಆದಿತ್ಯಾನಾಮಯನಕ್ಕೂ ಸಾದೃಶ್ಯವನ್ನು ಹೇಳುವರು.

**ಗಾವೋ ವೈ ಸತ್ರಮಾಸತ ಶಫಾನ್ ಶೃಂಗಾಣಿ ಸಿಷಾಸತ್ಯಸ್ತಾಸಾಂ ದಶಮೇ ಮಾಸಿ ಶಫಾಃ ಶೃಂಗಾಣ್ಯಜಾಯಂತ ತಾ ಅಬ್ರುವನ್ನಸ್ಮೈ ಕಾಮಾಯಾದೀಕ್ಷಾಮಹ್ಯಾಪಾಮ ತಮುತ್ತಿಷ್ಠಾಮೇತಿ ತಾ ಯಾ ಉದತಿಷ್ಠಂಸ್ತಾ ಏತಾಃ ಶೃಂಗಿಣ್ಯಃ ॥**

**ತದೇತದ್ಗವಾಮಯನಂ ಪ್ರಶಂಸತಿ ॥ ಪುರಾ ಕದಾಚಿದ್ಗವಾಭಿಮಾನಿನ್ಯೋ ದೇವತಾಸ್ವಕೀಯಾನಾಂ ಗೋದೇಹಾನಾಂ ಪಾದಗತಾಞ್ಛಫಾಞ್ಛಿರೋ ಗತಾನಿ ಶೃಂಗಾಣಿ ಚ ಸಿಷಾಸತ್ಯಃ ಪ್ರಾಪ್ತುಮಿಚ್ಛಂತ್ಯಃ ಸತ್ರಮನ್ವತಿಷ್ಠನ್ ॥ ತಾಸಾಂ ದಶಮೇ ಮಾಸಿ ತದುಭಯಂ ಸಂಪನ್ನಂ ॥**

ತತಸ್ತಾ ಗಾವಃ ಪರಸ್ಪರಮಿದಮಬ್ರುರ್ವ ॥ ಯಸ್ಮೈ ಕಾಮಾಯ ವಯಮದೀಕ್ಷಾಮಹಿ ಸತ್ರ-ದೀಕ್ಷಾಮಪ್ರಾಪ್ತವತ್ಯಸ್ತಂ ಕಾಮಮವಾಪಾಮ ವಯಂ ಪ್ರಾಪ್ತವತ್ಯಃ ॥ ತತೋಽಸ್ಮಾತ್ಸತ್ರಾದುತ್ತಿ-ಷ್ಠಾಮೇತಿ ವಿಚಾರ್ಯೋತ್ಥಾಯ ಗತಾಃ ॥ ತಾಃ ಪ್ರಸಿದ್ಧಾ ಗಾವ ಉದತಿಷ್ಠ೯ ತಾ ಇಮಾಃ ಶೃಂಗಿಣ್ಯೋ ದೃಶ್ಯಂತೇ ॥ ಅನೇನ ದಶಸು ಮಾಸೇಷ್ವನುಷ್ಠೇಯಂ ಗವಾಮಯನಂ ಪ್ರಶಸ್ತಂ ॥

ಗವಾಮಯನವೆಂಬ ಸತ್ರಯಾಗದ ವಿಷಯವನ್ನು ಹೇಳುವರು. ಪೂರ್ವದಲ್ಲಿ ಗೋವುಗಳು ಅಥವಾ ಗೋವುಗಳ ಅಭಿಮಾನಿದೇವತೆಗಳು ತಮ್ಮ ಗೋದೇಹಗಳ ಪಾದಗಳಿಗೆ ಗೊರಸುಗಳು ಮತ್ತು ತಲೆಯಮೇಲೆ ಕೊಂಬುಗಳು ಇರಲಿಲ್ಲ ಅವುಗಳನ್ನು ಪಡೆಯಬೇಕೆಂಬ ಇಚ್ಛೆಯಿಂದ ಸತ್ರಯಾಗವನ್ನು ಮಾಡಲುಪಕ್ರಮಿಸಿದವು. ಈರೀತಿ ಹತ್ತು ತಿಂಗಳವರೆಗೂ ಸತ್ರ ಯಾಗವನ್ನು ಮಾಡುತ್ತಿರುವಾಗ ಹತ್ತನೇ ತಿಂಗಳಲ್ಲಿ, ಗೊರಸುಗಳು ಮತ್ತು ಕೊಂಬುಗಳು ಅವುಗಳಿಗೆ ಉತ್ಪನ್ನವಾದವು. ಆಗ ಆ ಗೋವುಗಳು ತಮ್ಮತಮ್ಮಲ್ಲಿ ಈರೀತಿ ಹೇಳಿಕೊಂಡವು. ನಾವು ಯಾವ ನಮ್ಮ ಅಪೇಕ್ಷೆಯು ಸಿದ್ಧಿಸಬೇಕೆಂದು ದೀಕ್ಷಬದ್ಧರಾಗಿ ಈ ಸತ್ರಯಾಗವನ್ನು ಮಾಡಲು ಉದ್ಯುಕ್ತರಾದೆವೋ ಆ ಅಪೇಕ್ಷೆಯು (ಗೊರಸು ಮತ್ತು ಕೊಂಬುಗಳು ಬೇಕೆಂಬ ಅಪೇಕ್ಷೆಯು) ಈಗ ಸಿದ್ಧಿಸಿರುವುದು ಎಂದರೆ ನಮಗೆ ಬೇಕಾದ ಗೊರಸುಗಳು ಮತ್ತು ಕೊಂಬುಗಳು ನಮಗೆ ಪ್ರಾಪ್ತವಾಗಿರುವವು. ಆದ್ದರಿಂದ ಈ ಸತ್ರಕಾರ್ಯವನ್ನು ಇಲ್ಲಿಗೇಬಿಟ್ಟು ಎದ್ದುಹೋಗೋಣ ಎಂದು ಹೇತಿ ಸತ್ರವನ್ನು ಅಲ್ಲಿಗೆ ನಿಲ್ಲಿಸಿ ಎದ್ದು ಹೊರಟುಹೋದವು. ಆಕಾಲದಿಂದ ಗೋವುಗಳಿಗೆ ಗೊರಸು ಮತ್ತು ಕೊಂಬುಗಳಿರುವುದು ಪ್ರಸಿದ್ಧವಾಗಿದೆ. ಈ ಕಾರಣದಿಂದ ಒಂದು ಸಂವತ್ಸರದವರೆಗೆ ಮಾಡಬೇಕಾದ ಗವಾಮಯನವನ್ನು ಹತ್ತುತಿಂಗಳಲ್ಲಿಯೇ ಮಾಡಿ ಮುಗಿಸುವುದು ಪ್ರಶಸ್ತವು.

ಅಥ ಯಾಃ ಸಮಾಪಯಿಷ್ಯಾಮಃ ಸಂವತ್ಸರಮಿತ್ಯಾಸತ ತಾಸಾಮಶ್ರ-ದ್ಧಯಾ ಶೃಂಗಾಣಿ ಪ್ರಾವರ್ತಂತ ತಾ ಏತಾಸ್ತೂಪರಾ ಊರ್ಜಂ ತ್ವಸುನ್ವಂಸ್ತಸ್ಮಾದು ತಾಃ ಸರ್ವಾನೃತೂನ್ಪ್ರಾಪ್ತ್ವೋತ್ತರಮುತ್ತಿ-ಷ್ಠಂತ್ಯೂರ್ಜಂ ಹ್ಯಸುನ್ವನ್ಸರ್ವಸ್ಯ ವೈ ಗಾವಃ ಪ್ರೇಮಾಣಂ ಸರ್ವಸ್ಯ ಚಾರುತಂ ಗತಾಃ ॥ ಸರ್ವಸ್ಯ ಪ್ರೇಮಾಣಂ ಸರ್ವಸ್ಯ ಚಾರುತಾಂ ಗಚ್ಛತಿ ಯ ಏವಂ ವೇದ ॥

ದ್ವಾದಶಸು ಮಾಸೇಷ್ವನುಷ್ಠೇಯಂ ಯದ್ಗವಾಮಯನಮಸ್ತಿ ತದಿದಾನೀಂ ಪ್ರಶಂಸತಿ— ಸತ್ರಮನುತಿಷ್ಠಂತೀನಾಂ ಗವಾಂ ಮಧ್ಯೇ ಶಫಶೃಂಗಾರ್ಥಿನೀನಾಂ ದಶಭಿರ್ಮಾಸೈಃ ಸಿದ್ಧಿ-ರ್ಜಾತಾ ॥ ಯಾಸಾಂ ತು ಗವಾಂ ಶೃಂಗಾಪೇಕ್ಷಾ ನಾಸ್ತಿ ಕಿಂತೂರ್ಗಪೇಕ್ಷೈವ ತಾದೃಶ್ಯೋ ಯಾ। ಗಾವ ಊರ್ಜಸಿದ್ಧ್ಯರ್ಥಂ ದ್ವಾದಶಮಾಸಾತ್ಮಕಂ ಸಂವತ್ಸರಂ ಸಮಾಪಯಿಷ್ಯಾಮ ಇತ್ಯಭಿ-ಪ್ರೇತ್ಯ ತಥೈವಾನ್ವತಿಷ್ಠ೯ ॥ ತಾಸಾಂ ಗವಾಂ ಶೃಂಗೇಷ್ವಶ್ರದ್ಧಯಾ ಶೃಂಗಾಣಿ ನ ಪ್ರಾವರ್ತಂತ ॥ ನೋತ್ಪನ್ನಾನೀತ್ಯರ್ಥಃ ॥ ತಾ ಏತಾ ಗಾವೋ ಲೋಕೇ ತೂಪರಾಃ ಶೃಂಗರಹಿತಾ ದೃಶ್ಯಂತೇ ॥ ತಾಸು (ಸ್ತು) ಶೃಂಗರಹಿತಾ ಅಪಿ ಸತ್ರಾನುಷ್ಠಾನೇನೋರ್ಜಂ ಬಲಾಧಿಕ್ಯಮಸುನ್ವನ್ಸಂಪಾದಿತ-ವತ್ಯಃ ॥ ತಸ್ಮಾದ್ಬಲಾಧಿಕ(ಕ್ಯ) ಲಕ್ಷಣಸ್ಯ ಫಲಸ್ಯ ಸದ್ಭಾವಾದೇವ ತಾ ಗಾವಃ ಸರ್ವಾನೃತೂನ್ಷ-ಟ್ಸಂಖ್ಯಾಕಾನಪಿ ತಸ್ಮಿನ್ಸತ್ರಾನುಷ್ಠಾನೇ ಪ್ರಾಪ್ಯ ಉತ್ತರಮೂರ್ಧ್ವಕಾಲೇ ಸತ್ರಾದುತ್ತಿಷ್ಠಂತಿ ॥

ಯಸ್ಮಾದೂರ್ಜ (ರ್ಜಂ) ಬಲಾತಿಶಯಮುಸುನ್ವನ್ಪ್ರಾಪ್ತವತ್ಯಸ್ತಸ್ಮಾದ್ದ್ವಾದಶಮಾಸಾನುಷ್ಠಾನಂ ಯುಕ್ತಂ । ತಾಃ ಶೃಂಗರಹಿತಾ ಗಾವಃ ಪ್ರಹಾರಭಯಾಭಾವಾತ್ ಸರ್ವಸ್ಯ ಜಗತಃ ಪ್ರೇಮಾಣಂ ಪ್ರಿಯುತ್ವಂ ಗತಾಃ ॥ ತಥಾ ಬಲಾಧಿಕ್ಯೇನ ಶರೀರಪುಷ್ಟ್ಯಾ ಚ ಸರ್ವಸ್ಯ ಭಾರವಹನಾದಿಕಾರ್ಯಸ್ಯ ನೇತ್ರದರ್ಶನಸ್ಯ ಚಾತ್ಯಂತಚಾರುತಾಂ ರಮಣೀಯತಾಂ ಗತಾಃ ॥ ವೇದನಂ ಪ್ರಶಂಸತಿ ॥

ಒಂದು ಸಂವತ್ಸರದವರೆಗೂ ಎಂದರೆ ಹನ್ನೆರಡು ತಿಂಗಳವರೆಗೂ ಮಾಡಬೇಕಾದ ಗವಾಮಯನವನ್ನು ಪ್ರಶಂಸೆ ಮಾಡುವರು. ಗೋವುಗಳು ಅಥವಾ ಗೋವುಗಳ ಅಭಿಮಾನಿದೇವತೆಗಳು ಸತ್ರಯಾಗವನ್ನು ಮಾಡಿದವೆಂದು ಹಿಂದೆ ಹೇಳಿದೆಯಷ್ಟೆ. ಆ ಗೋವುಗಳಲ್ಲಿ ಹತ್ತುತಿಂಗಳವರೆಗೆ ಮಾಡಿದ ನೋವುಗಳಿಗೆ ಗೊರಸುಗಳೂ ಕೊಂಬುಗಳೂ ಲಭಿಸಿದವು. ಉಳಿದ ಇನ್ನು ಕೆಲವು ಗೋವುಗಳು ಸತ್ರಯಾಗವನ್ನು ಅಪ್ಪಕ್ಕೆ ನಿಲ್ಲಿಸದೆ ಸಂವತ್ಸರವು ಪೂರ್ತಿಯಾಗುವವರೆಗೂ ಯಾಗವನ್ನು ಅನುಷ್ಠಾನ ಮಾಡಿದವು. ಆದ್ದರಿಂದ ಇವುಗಳಿಗೆ ಗೊರಸು ಮತ್ತು ಕೊಂಬುಗಳಿಗೆ ಬದಲಾಗಿ ಶರೀರಪುಷ್ಟಿಯೂ ಬಲವೂ ಆಕರ್ಷಣೀಯವಾದ ರೂಪವೂ ಪ್ರಾಪ್ತವಾದವು. ಈ ಗೋವುಗಳು ಕೊಂಬುಗಳನ್ನು ಪಡೆಯದಿದ್ದರೂ ಅತಿಶಯವಾದ ಶರೀರದಾರ್ಢ್ಯವನ್ನೂ ಬಲವನ್ನೂ ಸುಂದರ ರೂಪವನ್ನೂ ಪಡೆದು ಲೋಕದಲ್ಲಿ ಅತ್ಯಂತ ಪ್ರಿಯವಾದವು. ಈ ಗೋವುಗಳು ಎಲ್ಲಾ ಋತುಗಳಲ್ಲಿಯೂ (ಸಂವತ್ಸರ ಕಾಲಪರ್ಯಂತರ) ಸತ್ರಯಾಗವನ್ನು ಅನುಷ್ಠಾನಮಾಡಿದ್ದರಿಂದ ಇವುಗಳಿಗೆ ಕೊಂಬುಗಳಿಲ್ಲದೆ ಇತರರಿಗೆ ಹಾಯುವುದು ಸಾಧ್ಯವಿಲ್ಲದ್ದರಿಂದಲೂ ಅತ್ಯಂತ ಬಲಾಢ್ಯವಾದವುಗಳಾದ್ದರಿಂದಲೂ ಜನರಿಗೆ ಅತ್ಯಂತ ಪ್ರೀತಿಪಾತ್ರಗಳಾದವು. ಆದ್ದರಿಂದ ಸತ್ರಯಾಗದಲ್ಲಿ ಉದ್ಯುಕ್ತರಾದವರು ಅರ್ಧದಲ್ಲಿ (ಹತ್ತುತಿಂಗಳು) ನಿಲ್ಲಿಸದೆ ಸಂವತ್ಸರ ಪೂರ್ತಿಯಾಗುವವರೆಗೂ ಸತ್ರವನ್ನು ಮಾಡಿ ಮುಗಿಸಿ ಏಳಬೇಕು. ಹೀಗೆ ಮಾಡುವವರು ಅಥವಾ ಈ ವಿಷಯವನ್ನು ತಿಳಿದ ಪುರುಷನು ಅತಿಶಯವಾದ ಬಲವನ್ನೂ ಆಕರ್ಷಕವಾದ ರೂಪವನ್ನೂ ಪಡೆಯುವನು. ಈ ವಿಷಯದಲ್ಲಿ ತೈತ್ತಿರೀಯ ಸಂಹಿತೆಯಲ್ಲಿ ಹೀಗೆ ಹೇಳಿರುವುದು-- **ಗಾವೋ ವಾ ಏತತ್ಸತ್ರಮಾಸತಾಶೃಂಗಾಃ ಸತೀಃ ಶೃಂಗಾಣಿ ನೋ ಜಾಯಂತಾ ಇತಿ ಕಾಮೇನ ತಾಸಾಂ ದಶ ಮಾಸಾ ನಿಷಣ್ಣಾ ಆಸನ್ನಥ ಶೃಂಗಾಣ್ಯಜಾಯಂತ ತಾ ಉದತಿಷ್ಠನ್ನರಾತ್ಸ್ಮೇತ್ಯಥ ಯಾಸಾಂ ನಾಜಾಯಂತ ತಾಃ ಸಂವತ್ಸರಮಾಪ್ತ್ವೋ ದತಿಷ್ಠನ್ನರಾತ್ಸ್ಮೇತಿ** ಇತಾದ್ಯಿ (ತೈ. ಸಂ. ೭-೫-೧ ಮತ್ತು ೨ ನೇ ಅನುವಾಕಗಳು).

**ಆದಿತ್ಯಾಶ್ಚ ಹ ವಾ ಅಂಗಿರಸಶ್ಚ ಸ್ವರ್ಗೇ ಲೋಕೇಽಸ್ಪರ್ಧಂತ ವಯಂ ಪೂರ್ವ ಏಷ್ಯಾಮೋ ವಯಮಿತಿ ತೇ ಹಾಽಽದಿತ್ಯಾಃ ಪೂರ್ವೇ ಸ್ವರ್ಗಂ ಲೋಕಂ ಜಗ್ಮುಃ ಪಶ್ಚೇವಾಂಗಿರಸಃ ಷಷ್ಟ್ಯಾಂ ವಾ ವರ್ಷೇಷು ॥**

ಅಥಾಽಽದಿತ್ಯಾನಾಮಯನಮಂಗಿರಸಾಮಯನಂ ಚ ಗವಾಮಯನವಿಕೃತಿರೂಪಮುಭಯಂ ವಕ್ತುಂ ಪ್ರಸ್ತೌತಿ—ಆದಿತ್ಯಾಖ್ಯಾಶ್ಚ ಯೇ ದೇವಾಃ ಯೇಚಾಂಗಿರಸ (ರೊ) ನಾಮಕಾ ಋಷಯಸ್ತದು(ಉ) ಭಯೇ ಸ್ವರ್ಗೇ ಲೋಕೇ ಪರಸ್ಪರಂ ಸ್ವರ್ಗಪ್ರಾಪ್ತಾವಸ್ಪರ್ಧಂತಾಸ್ಮಾಕಮೇವ ಪ್ರಥಮಂ ಗಮನಮಿತಿ ಆದಿತ್ಯಾ ಅಂಗಿರಸೋಽಪಿ । ತಥೈವ ತತ್ರಾದಿತ್ಯಾಃ ಸಹಸಾ ಪ್ರಥಮಂ ಸ್ವರ್ಗಂ ಪ್ರಾಪುಃ ॥ ಅಂಗಿರಸಸ್ತು ಪಶ್ಚೇವ ವಿಲಂಬೇನೈವ ಷಷ್ಟಿಸಂಖ್ಯಾಕೇಷು ವರ್ಷೇಷ್ವತೀತೇಷು ಸ್ವರ್ಗಂ ಪ್ರಾಪ್ತಾಃ ॥ ವಾಶಬ್ದೇನ ಪಕ್ಷಾಂತರಂ ದ್ಯೋತ್ಯತೇ ॥ ಅಂಗಿರಸಾಂ ಮಧ್ಯೇ ತತ್ತಚ್ಛಕ್ತ್ಯನುಸಾರೇಣ ಕೇಚಿತ್ಷಷ್ಟೇಃ ಪೂರ್ವಂ ವಾ ಗತಾ ಇತ್ಯರ್ಥಃ ॥

ಸತ್ರಯಾಗಗಳಿಗೆ ಗವಾಮಯನವು ಪ್ರಕೃತಿ ರೂಪವೆಂದು ಹೇಳಿದೆಯಷ್ಟೆ. ಈ ಸತ್ರಯಾಗದ ವಿಕೃತರೂಪಗಳಾಗಿ ಆದಿತ್ಯಾನಾಮಯನಂ, ಅಂಗಿರಸಾಮಯನಂ ಎಂಬ ಎರಡು ವಿಕೃತಿಯಾಗಗಳಿರುವವು. ಇವುಗಳ ವಿಷಯವನ್ನು ಇಲ್ಲಿ ತಿಳಿಸುವರು. ಪೂರ್ವದಲ್ಲಿ ಆದಿತ್ಯರೆಂಬ ದೇವತೆಗಳಿಗೂ ಅಂಗಿರಸರೆಂಬ ಋಷಿಗಳಿಗೂ ಸ್ವರ್ಗಪ್ರಾಪ್ತಿವಿಷಯದಲ್ಲಿ ಪರಸ್ಪರ ಸ್ಪರ್ಧೆಯುಂಟಾಯಿತು. ಎಂದರೆ ನಾವು ಮೊದಲು ಸ್ವರ್ಗಕ್ಕೆ ಹೋಗೋಣವೆಂದು ಆದಿತ್ಯರೂ, ನಾವು ಮೊದಲು ಹೋಗಬೇಕೆಂದು ಅಂಗಿರಸರೂ ಪ್ರಯತ್ನಿಸಿದರು. ಆದರೆ ಆದಿತ್ಯರೇ ಮೊದಲು ಸ್ವರ್ಗಕ್ಕೆ ಹೋಗಿ ಸೇರಿದರು. ಅನಂತರ ಎಂದರೆ ಅರವತ್ತು ವರ್ಷಗಳು ಕಳೆದ ಮೇಲೆ ಅಂಗಿರಸರೂ ಸ್ವರ್ಗಕ್ಕೆ ಹೋಗಿ ಸೇರಿದರು. ಆದರೆ ಅಂಗಿರಸರಲ್ಲಿ ತಮ್ಮತಮ್ಮ ಶಕ್ತ್ಯನುಸಾರವಾಗಿ ಕೆಲವರು ಅರವತ್ತು ವರ್ಷಗಳಿಗಿಂತ ಮುಂಚೆಯೇ ಸ್ವರ್ಗಕ್ಕೆ ಹೋದರು.

**ಯಥಾ ವಾ ಪ್ರಾಯಣೀಯೋಽತಿರಾತ್ರಶ್ಚತುರ್ವಿಂಶ ಉಕ್ಥ್ಯಃ ಸರ್ವೇಽಭಿಪ್ಲವಾಃ ಷಳಹಾ ಆಕ್ಷ್ಯಂತ್ಯನ್ಯಾನ್ಯಹಾನಿ ತದಾದಿತ್ಯಾನಾಮಯನಂ ॥**

**ಅಥಾದಿತ್ಯಾಯನೇಹಃಕ್ಲ್ಯಪ್ತಿಂ ವಿಧತ್ತೇ—ಅತ್ರ ವಾಶಬ್ದೋ ನ ವಿಕಲ್ಪಾರ್ಥಂ ಕಿಂತು ಗವಾಮಯನಪ್ರಕಾರವ್ಯಾವೃತ್ತ್ಯರ್ಥಃ । ಗವಾಮಯನೇ ಪ್ರಾಯಣೀಯಾಖ್ಯಂ ಪ್ರಥಮಮಹೋಽ (ಹದ) ತಿರಾತ್ರಸಂಸ್ಥಂ ಚತುರ್ವಿಂಶಮುಕ್ಥ್ಯಮಹರ್ದ್ವಿತೀಯಂ ತತ್ರ ಯಥಾ ತಥೈವಾಽಽದಿತ್ಯಾನಾಮಯನೇಽಪಿ ತತ ಊರ್ಧ್ವಂ ವಿಶೇಷೋಽಸ್ತಿ ಸರ್ವೇಽಭಿಪ್ಲವಾಃ ಷಡಹಾಃ ಪೂರ್ವೋಕ್ತಾಭ್ಯಾಂ ಪ್ರಥಮದ್ವಿತೀಯಾಭ್ಯಾಮಹೋಭ್ಯಾಮನ್ಯಾನಿ ಸರ್ವಾಣ್ಯಹಾನ್ಯಾಕ್ಷ್ಯಂತಿ ವ್ಯಾಪ್ತಿಂ ಕರಿಷ್ಯಂತಿ ॥ ಗವಾಮಯನೇ ತ್ವೇಕೈಕಸ್ಮಿನ್ಮಾಸಿ ಚತ್ವಾರ ಏವಾಭಿಪ್ಲವಷಡಹಾಃ ॥ ಅತ ಇದಂ ವೈಷಮ್ಯಂ ಶದಿದಮಾದಿತ್ಯಾನಾಮಯನಂ ॥**

ಆದಿತ್ಯಾನಾಮಯನವೆಂಬ ಸತ್ರದಲ್ಲಿ ಆಚರಿಸಲ್ಪಡುವ ವಿಶೇಷವಿಷಯಗಳನ್ನು ವಿವರಿಸುವರು. ಗವಾಮಯನದಲ್ಲಿ ಮೊದಲನೇ ದಿವಸ ಅತಿರಾತ್ರಸಂಸ್ಥೆಯನ್ನು ಆಚರಿಸುವರು. ಎರಡನೇದಿನ ಚತುರ್ವಿಂಶ ಉಕ್ಥ್ಯವೆಂಬ ಸಂಸ್ಥೆಯನ್ನು ಆಚರಿಸುವರು. ಆದಿತ್ಯಾನಾಮಯನದಲ್ಲಿಯೂ ಇದೇಕ್ರಮವಿರುವುದು. ಆದರೆ ಮುಂದೆ ವಿಶೇಷವಿರುವುದು. ಪ್ರಾರಂಭದಲ್ಲಿ ಗವಾಮಯನದಲ್ಲಿರುವಂತೆಯೇ ಆದಿತ್ಯಾನಾಮಯನದಲ್ಲಿಯೂ ಅತಿರಾತ್ರಸಂಸ್ಥೆಯೂ ಚತುರ್ವಿಂಶ ದಿನದಲ್ಲಿ ಉಕ್ಥ್ಯವೂ ಆಚರಿಸಲ್ಪಡುವವು. ಮುಂದಿನ ದಿನಗಳಲ್ಲೆಲ್ಲಾ (ಐದುದಿನಗಳಲ್ಲಿ) ಅಭಿಪ್ಲವಷಡಹವಿರುವುದು. ಆದರೆ ಯಾವ ದಿನದಲ್ಲಿ ಯಾವುದನ್ನು ಮಾಡಬೇಕೆಂಬ ವಿಷಯದಲ್ಲಿ ವ್ಯತ್ಯಾಸವು ಕಂಡುಬರುವುದು. ಗವಾಮಯನದಲ್ಲಿ ನಾಲ್ಕು ಅಭಿಪ್ಲವಷಡಹಗಳಿರುವವು. ಆದಿತ್ಯಾನಾಮಯನದಲ್ಲಿ ಐದು ದಿನಗಳಲ್ಲಿಯೂ ಅಭಿಪ್ಲವಷಡಹವಿರುವುದು. ಯಾವ ದಿನದಲ್ಲಿ ಯಾವುದನ್ನು ಮಾಡಬೇಕೆಂಬ ವಿಷಯದಲ್ಲಿಯೂ ಗವಾಮಯನಕ್ಕೂ ಆದಿತ್ಯಾನಾಮಯನಕ್ಕೂ ವ್ಯತ್ಯಾಸವಿರುವುದು ಇದೇ ಆದಿತ್ಯಾನಾಮಯನವು.

**ಪ್ರಾಯಣೀಯೋಽತಿರಾತ್ರಶ್ಚತುರ್ವಿಂಶ ಉಕ್ಥ್ಯಃ ಸರ್ವೇ ಪೃಷ್ಠ್ಯಾಃ ಷಳಹಾ ಆಕ್ಷ್ಯಂತ್ಯನ್ಯಾನ್ಯಹಾನಿ ತದಂಗಿರಸಾಮಯನಂ ॥**

**ಅಥಾಂಗಿರಸಾಮಯನಸ್ಯ ಕ್ಲೃಪ್ತಿಂ ದರ್ಶಯತಿ—ಪ್ರಥಮದ್ವಿತೀಯವ್ಯತಿರಿಕ್ತಾನಿ ಸರ್ವಾಣ್ಯಹಾನಿ ಪೃಷ್ಠ್ಯಷಡಹೈರ್ವ್ಯಾಪ್ತಾನೀತ್ಯೇತಾವಾನತ್ರ ವಿಶೇಷಃ ॥ ಅಥವಾಽಽಕ್ಷ್ಯಂತಿ-**

ಶಬ್ದೋಽಹರ್ವಿಶೇಷನಾಮಧೇಯಂ ॥ ತಥಾ ಚ ಬೌಧಾಯನ ಆಹ— ಅಭಿಜಿದ್ವಿಷುವಾನ್ವಿಶ್ವ-ಜಿದ್ದಶಮಮಹರ್ಮಹಾವ್ರತಮುದಯನೀಯೋಽತಿರಾತ್ರ ಇತ್ಯೇತಾನ್ಯಾಕ್ಷ್ಯಂತಿ ಭವಂತಿ ' ಇತಿ ॥ ತದೇತದ್ಬೌಧಾಯನಸ್ಯ ಮತಂ ॥ ಅನ್ಯದಪಿ ಯಾನ್ಯನ್ಯಾನಿ ಪೃಷ್ಠ್ಯಾಭಿಪ್ಲವೇಭ್ಯ ಇತಿ ಶಾಲಿ. ಕಿರಾಚಾರ್ಯೋ ಮೇನೇ ॥ ಯಾನಿ ಚಾನ್ಯಾನಿ ಪೃಷ್ಠ್ಯಾಭಿಪ್ಲವೇಭ್ಯೋ ದಶಮಾಚ್ಚೇತ್ಯಾಪ-ಮನ್ಯವ ಇತಿ ॥ ತಥಾ ಸತಿ ಪ್ರಾಯಣೀಯಾರಂಭಣೀಯಾಭ್ಯಾಂ ಅಭಿಪ್ಲವಷಡಹೇಭ್ಯಶ್ಚಾ-ನ್ಯಾನಿ ಯಾನ್ಯಹಾನಿ ಸಂತಿ ತಾನ್ಯಾಕ್ಷ್ಯಂತಿ ॥ ಏತನ್ನಾಮಕಾನೀತ್ಯುಭಯತ್ರ ವ್ಯಾಖ್ಯೇಯಂ ॥ ಸರ್ವಥಾಽಽಪ್ಯಸ್ತ್ಯೇನಯೋರುಭಯೋರಪಿ ಗವಾಮಯನಾದ್ವಿಶೇಷಃ । ಗವಾಮಯನೇ ತ್ವೇ-ಕಸ್ಮಿನ್ಮಾಸಿ ಚತ್ವಾರೋಽಭಿಪ್ಲವಾಃ ಷಡಹಾಃ ಪಂಚಮಃ ಪೃಷ್ಠ್ಯಃ ಷಡಹಾಃ ಪಂಚಮಃ ಪೃಷ್ಠ್ಯಃ ಷಡಹಃ । ತಥಾ ಚಾಽಽಶ್ವಲಾಯನ ಆಹ—' ಅಥ ಗವಾಮಯನಂ ಸರ್ವಕಾಮಾಃ ಪ್ರಾಯಣೀಯಚತುರ್ವಿಂಶೇ ಉಪೇತ್ಯ ಚತುರಭಿಪ್ಲವಾನ್ಪೃಷ್ಠ್ಯಪಂಚಮಾನ್ಪಂಚ ಮಾಸಾ-ನುಪಯಂತಿ ' ಇತಿ ॥ ಆದಿತ್ಯಾನಾಮಯನೇ ಪೃಷ್ಠ್ಯಃ ಷಡಹೋ ನಾಸ್ತಿ ಅಂಗಿರಸಾಮಯ-ನೇಽಭಿಪ್ಲವಃ ಷಡಹೋ ನಾಸ್ತೀತಿ ವೈಷಮ್ಯಂ ॥

ಈ ಅಂಗಿರಸಾಮಯನದಲ್ಲಿ ಮೊದಲು ಮತ್ತು ಎರಡನೇ ದಿನಗಳನ್ನು ಬಿಟ್ಟರೆ (ಪ್ರಾಯಣೀಯ ಮತ್ತು ಚತುರ್ವಿಂಶ ಉಕ್ಥ್ಯ) ಉಳಿದ ದಿನಗಳಲ್ಲೆಲ್ಲಾ ಅಭಿಪ್ಲವಕ್ಕೆ ಬದಲಾಗಿ ಪೃಷ್ಠ್ಯಷಡಹವೇ ಇರುವುದು. ಗವಾಮಯನದಲ್ಲಿ ಒಂದು ಮಾಸದಲ್ಲಿ (ತಿಂಗಳಲ್ಲಿ) ಒಟ್ಟು ನಾಲ್ಕು ಅಭಿಪ್ಲವಷಡಹಗಳೂ ಒಂದು (ಐದನೇದು) ಪೃಷ್ಠ್ಯಷಡಹವೂ ಇರುವವು. ಆದಿತ್ಯಾನಾಮಯನದಲ್ಲಿ ಪೃಷ್ಠ್ಯಷಡಹವಿರುವುದಿಲ್ಲ. ಅಂಗಿರಸಾಮಯನದಲ್ಲಿ ಅಭಿಪ್ಲವಷಡಹವಿರುವುದಿಲ್ಲ. ಇದೇ ಒಂದಕ್ಕೊಂದಿರುವ ವ್ಯತ್ಯಾಸವು.

**ಸಾ ಯಥಾ ಸ್ರುತಿರಂಜಸಾಯನ್ಯೇವಮಭಿಪ್ಲವಃ ಷಳಹಃ ಸ್ವರ್ಗಸ್ಯ ಲೋಕಸ್ಯಾಥ ಯಥಾ ಮಹಾಪಥಃ ಪರ್ಯಾಣ ಏವಂ ಪೃಷ್ಠ್ಯಃ ಷಳಹಃ ಸ್ವರ್ಗಸ್ಯ ಲೋಕಸ್ಯ ತದ್ಯದುಭಾಭ್ಯಾಂ ಯಂತ್ಯುಭಾಭ್ಯಾಂ ವೈ ಯನ್ನ ರಿಷ್ಯತ್ಯುಭಯೋಃ ಕಾಮಯೋರುಪಾಪ್ತ್ಯೈ ಯಶ್ಚಾಭಿ-ಪ್ಲವೇ ಷಳಹೇ ಯಶ್ಚ ಪೃಷ್ಠ್ಯೇ ॥**

ಅಯನದ್ವಯಗತಮಭಿಪ್ಲವಷಡಹಂ ಪೃಷ್ಠ್ಯಷಡಹಂ ಚ ದರ್ಶಯತಿ—ಯಥಾ ಲೋಕಸ್ಯ ಪ್ರಸಿದ್ಧಾ ಸ್ರುತೀ ರಾಜಮಾರ್ಗರೂಪಾಂಜಸಾಯನೀ ದುಃಖಹೇತೂನಾಂ ಕಂಟಕ. ಪಾಷಾಣಾದೀನಾಮಭಾವಾದಂಜಸಾ ಸಮ್ಯಗಯನಸ್ಯ ಗಮನಸ್ಯ ಸಾಧನಭೂತೈವಮಭಿಪ್ಲವಃ ಷಡಹಃ ಸ್ವರ್ಗಸ್ಯ ಲೋಕಸ್ಯಾಂಜಸಾ ಪ್ರಾಪ್ತಿಹೇತುಃ । ಅಥ ಪೃಷ್ಠ್ಯಷಡಹಸ್ಯ ದೃಷ್ಟಾಂತ ಉಚ್ಯತೇ ॥ ಯಥಾ ಲೋಕೇ ಮಹಾಪಥಃ ಪ್ರೌಢಮಾರ್ಗೋ ನಗರದ್ವಯಮಧ್ಯವರ್ತೀ ಪರ್ಯಾಣಃ ಪರಿತೋಽಯನಸ್ಯ ಗಮನಸ್ಯ ಸಾಧನಭೂತೋ ನಗರಸಮೀಪೇಽರಣ್ಯಪರ್ವತಾ-ದ್ಯಭಾವಾದ್ಯಸ್ಯಾಂ ದಿಶಿ ಗಂತುಮಪೇಕ್ಷಾ ತತ್ರ ಗಂತುಂ ಶಕ್ಯತಾ ಏವಮಯಂ ಪೃಷ್ಠ್ಯಃ ಷಡಹಃ ಸ್ವರ್ಗಸ್ಯ ಲೋಕಸ್ಯ ಪ್ರಾಪ್ತಿಹೇತುಃ ॥ ತಥಾ ಸತ್ಯನಯೋರುಭಯೋರುಭಾಭ್ಯಾಂ

**ಷಡಹಾಭ್ಯಾಂ ಯಂತೀತಿ ಯದಸ್ತಿ ತೇನೋಭಾಭ್ಯಾಂ ಪಾದದ್ವಯಸ್ಥಾನೀಯಾಭ್ಯಾಂ ಯತ್ರ ಗಚ್ಛನ್ಪುರುಷೋ ನ ರಿಷ್ಯತಿ ನ ವಿನಶ್ಯತಿ ॥ ಯೋಽಭಿಪ್ಲವೇ ಕಾಮೋಽಸ್ತಿ ಯಶ್ಚ ಪೃಷ್ಠ್ಯಷಡಹೇ ತಯೋರುಭಯೋಃ ಕಾಮಯೋಃ ಪ್ರಾಪ್ತ್ಯೈ ಷಡಹದ್ವಯಂ ಸಂಪದ್ಯತೇ ॥**

ಆದಿತ್ಯಾನಾಮಯನ ಮತ್ತು ಅಂಗಿರಸಾಮಯನ ಎಂಬ ಎರಡು ಅಯನಗಳಲ್ಲಿಯೂ ಇರುವ ಅಭಿಪ್ಲವಷಳಹ ಮತ್ತು ಪೃಷ್ಠ್ಯಷಳಹಗಳನ್ನು ವಿವರಿಸುವರು ಅಭಿಪ್ಲವಷಡಹವು ಸ್ವರ್ಗಕ್ಕೆ ಹೋಗುವ ರಾಜಮಾರ್ಗದಂತಿರುವುದು. ರಾಜಮಾರ್ಗದಲ್ಲಿ ಕಲ್ಲು ಮುಳ್ಳು ಮೊದಲಾದ ತೊಂದರೆಗಳಿರುವುದಿಲ್ಲ. ಅದರಂತೆ ಅಭಿಪ್ಲವಷಡಹವು ಸ್ವರ್ಗಕ್ಕೆ ಹೋಗುವ ಸುಗಮವಾದ ರಾಜ ಮಾರ್ಗದಂತಿರುವುದು. ಪೃಷ್ಠಷಡಹವು ಭೂಮಿಗೂ ಸ್ವರ್ಗಕ್ಕೂ ನೇರವಾದ ದೊಡ್ಡರಸ್ತೆಯಂತಿರುವುದು. ಸಣ್ಣದಾರಿಯಲ್ಲಿರುವ ಮುಳ್ಳು ಕೆಸರು ಮೊದಲಾದ ತೊಂದರೆಗಳು ಇಲ್ಲಿರುವುದಿಲ್ಲ ಪ್ರಯಾಣಿಕನು ಸುಖವಾಗಿ ಗಮ್ಯಸ್ಥಾನವನ್ನು ಸೇರುವನು. ಮಾರ್ಗದಲ್ಲಿ ಯಾವವಿಧವಾದ ತೊಂದರೆಗೂ ಒಳಗಾಗುವುದಿಲ್ಲ. ಇಂತಹ ಮಾರ್ಗದಂತೆ ಪೃಷ್ಠ್ಯಷಡಹವಿರುವುದು. ಆದ್ದರಿಂದ ಸ್ವರ್ಗಕ್ಕೆ ಹೋಗಿ ಸೇರುವ ಪುರುಷನಿಗೆ ಅಭಿಪ್ಲವಷಡಹ ಮತ್ತು ಪೃಷ್ಠ್ಯಷಡಹಗಳೆರಡೂ ರಾಜಮಾರ್ಗಗಳಂತೆ ಅನುಕೂಲ ವಾಗಿರುವವು.

*English Translation*

**(Story of the sacrificial sessions, held by the Cows. Different kinds of the great Sattras, such as the Gavan ayanam, Adityanam ayanam, and Angirasam ayanam)**

They hold the Gavam ayanam i.e., the sacrificial session, called "Cow's walk." The cows are the Adityas (gods of the months). By holding the session called the "cow's walk," they also hold the walk of the Adityas.

The cows being desirous of obtaining hoofs and horns, held once a sacrificial session. In the tenth month (of their sacrifice) they obtained hoofs and horns. They said, "we have obtained fulfilment of that wish for which we underwent the initiation into the sacrificial rites. Let us rise the sacrifice being finished." When they arose they had horns. They, however, thought, "let us finish the year," and recommenced the session. On account of their distrust, their horns went off and they consequently became hornless (tupara). They continuing their sacrificial session produced vigour (urj). Thence after having been sacrificing for twelve months and having secured all the seasons, they rose again at the end. For they had produced the vigour to reproduce horns, hoofs &c. when decaying. Thus the cows made themselves beloved by all the whole world, and are beautified (decorated) by all.

He who has such a knowledge makes himself beloved by every one, and is decorated by every one.

The Adityas Angiras were jealous of one another as to who should first enter the celestial world, each party saying, "we shall first enter." The Adityas entered first the celestial world, then the Angiras, after they had been waiting for sixty years.

The performance of the sacrificial session called Adityanam ayanam agrees in several respects with the Gavam ayanam. There is an Atiratra at the beginning, and on the Chaturvimsa day the Ukthya is performed; all the five Abhiplava Shalahas are comprised in it; the order of the days is different, that is to say, the performance of the first, second days &c. of the Abhiplava are different from those of the Gayam ayanam). This is the Adithyanam ayanam.

The Abhiplava Shalaha is like the royal road, the smooth way to heaven. The Prishthya Shalaha is the great pathway which is to be trodden everywhere to heaven. When they avail themselves of both roads, they will not suffer any injury, and obtain the fulfilment of all desires which are attainable by both, the Abhiplava Shalaha and the Prishthya Shalaha.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಅಷ್ಟದಶಾಧ್ಯಾಯೇ ತೃತೀಯಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿನೆಂಟನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವಾದುದು.**



## ಅಥ ಅಷ್ಟಾದಶಾಧ್ಯಾಯೇ ಚತುರ್ಥಃ ಖಂಡಃ

**ಹದಿನೆಂಟನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು**



[ಏಕವಿಂಶ ಅಥವಾ ವಿಷುವನ್ ಎಂಬ ದಿನದ ಕಾರ್ಯಕಲಾಪಗಳು]



ಏಕವಿಂಶಮೇತದಹರುಪಯಂತಿ ವಿಷುವಂತಂ ಮಧ್ಯೇ ಸಂವತ್ಸರಸ್ಯ ।

**ಇತ್ಥಂ ಗವಾಮಯನಮಾದಿತ್ಯಾನಾಮಯನಮಂಗಿರಸಾಮಯನಂ ಚೈತೇ ಸಂವತ್ಸರ-ಸತ್ರವಿಶೇಷಾ ಉಕ್ತಾಃ ॥ ತತ್ರ ಸರ್ವತ್ರ ಪೂರ್ವೋತ್ತರಯೋರ್ಮಾಸಷಟ್ಕಯೋರ್ಮಧ್ಯವರ್ತಿ**

**ಯತ್ಪೃಥಾನಮುಹರಸ್ತಿ ತದೇತದ್ವಿಧತ್ತೇ—ಛಂದೋಗಬ್ರಾಹ್ಮಣೇ ಸಪ್ತಭ್ಯೋ ಹಿಂ ಕರೋತೀ-ತ್ಯಾದಿನಾ ವಿಹಿತೋ ಯೋಽಯಮೇಕವಿಂಶಸ್ತೋಮಸ್ತೇನೈವ ಸ್ತೋಮೇನಾಸ್ಯ ಸರ್ವಸ್ತೋ-ತ್ರಪ್ರವೃತ್ತೇರಿದಮುಹರೇಕವಿಂಶಮಿತ್ಯುಚ್ಯತೇ ॥ ತತ್ರ ವಿಷುವನ್ನಾಮುಕಂ ಸಂವತ್ಸರಸತ್ರಸ್ಯ ಯೇ ಪೂರ್ವೇ ಷಣ್ಮಾಸಾ ಯೇ ಚೋತ್ತರೇ ತಯೋರ್ಮಾಸಷಟ್ಕಯೋರುಭಯತೋ ವರ್ತ-ಮಾನಯೋರ್ಮಧ್ಯೇ ತದೇತದಹರನುಷ್ಠೇಯಂ ಏತಚ್ಚ ನೋಭಯೋರ್ಮಾಸಷಟ್ಕಯೋರಂತ-ರ್ಭವತಿ ॥ ಕಿಂತ್ವತಿರಿಕ್ತಮೇಕಂ ॥ ತಥಾ ಚಾಶ್ವಲಾಯನ ಆಹ—ಅಥ ವಿಷುವಾನೇಕವಿಂಶೋ ನ ಪೂರ್ವಸ್ಯ ಪಕ್ಷಸೋ ನೋತ್ತರಸ್ಯೇತಿ ॥**

ಸಂವತ್ಸರದ ಕೊನೆಯವರೆಗೂ ಮಾಡಬೇಕಾದ ಗವಾಮಯನ, ಆದಿತ್ಯಾನಾಮಯನ ಅಂಗಿರಸಾಮಯನ ಎಂಬ ಸತ್ರಯಾಗಗಳ ವಿಶೇಷವಿಷಯಗಳನ್ನು ಹೇಳಿದ್ದಾಯಿತು. ಸಂವತ್ಸರದಲ್ಲಿರುವ ಹನ್ನೆರಡು ಮಾಸಗಳಲ್ಲಿ ಮೊದಲ ಆರುತಿಂಗಳಿಗೂ ಕೊನೆಯ ಆರುತಿಂಗಳಿಗೂ ಮಧ್ಯದಲ್ಲಿರುವ ದಿನವು ಸತ್ರಯಾಗಕ್ಕೆ ಮಧ್ಯಭಾಗದಂತಿರುವುದು. ಇದು ಸಮಭಾಜಕವೃತ್ತದಂತಿರುವುದು (Equator) ಈ ದಿನಕ್ಕೆ ಏಕವಿಂಶ ಅಥವಾ ವಿಷುವನ್ ಎಂದು ಹೆಸರು ಇದನ್ನು ಇಲ್ಲಿ ವಿವರಿಸುವರು. ಸಾಮವೇದಕ್ಕೆ ಸಂಬಂಧಪಟ್ಟ ಬ್ರಾಹ್ಮಣದಲ್ಲಿ ಹೇಳಿರುವ **ಸಪ್ತಭ್ಯೋ ಹಿಂಕರೋತಿ** ಇತ್ಯಾದಿ ವಾಕ್ಯಗಳಿಂದ ಏಕವಿಂಶ ಎಂಬ ಸ್ತೋಮವು ವಿಶದಪಡಿಸಲ್ಪಟ್ಟಿರುವುದು. ಈ ಏಕವಿಂಶ ಸ್ತೋಮದಲ್ಲಿ ಸಮಸ್ತ ಸ್ತೋಮಗಳೂ ಸೇರಿರುವುದರಿಂದ ಇದಕ್ಕೆ ಏಕವಿಂಶವೆಂಬ ಹೆಸರುಬಂದಿದೆ. ಏಕೆಂದರೆ ವಿಷುವನ್ನಾಮಕವಾದ ಈ ದಿನವು ಸತ್ರಮಾಡುವ ಸಂವತ್ಸರದ ಮಧ್ಯದಲ್ಲಿರುವುದು. ಎಂದರೆ ಈ ದಿನದ ಪೂರ್ವಭಾಗದಲ್ಲಿ ಆರುತಿಂಗಳೂ ಈ ದಿನದ ಅನಂತರ ಆರುತಿಂಗಳೂ ಮಧ್ಯದ ಒಂದು ದಿನದಲ್ಲಿ ಮಾತ್ರ ಈ ವಿಷುವನ್ನಾಮಕದಿನವಿರುವುದು. ಈ ದಿನವು ಮೊದಲಿನ ಆರುತಿಂಗಳಲ್ಲಿಯೂ ಸೇರಿರುವುದಿಲ್ಲ. ಕೊನೆಯ ಆರುತಿಂಗಳುಗಳಲ್ಲಿಯೂ ಸೇರುವುದಿಲ್ಲ. ಸತ್ರದ ಮಧ್ಯಭಾಗವಾದ ಈ ದಿನವು ಪೂರ್ವಾರ್ಧ ಮತ್ತು ಉತ್ತರಾರ್ಧಗಳಿಗೆ ಸೇರದೆ ಪ್ರತ್ಯೇಕವಾಗಿರುವುದು. ಆಶ್ವಲಾಯನರು ಈ ವಿಷಯದಲ್ಲಿ—**ಅಥ ವಿಷುವಾನೇಕವಿಂಶೋ ನ ಪೂರ್ವಸ್ಯ ಪಕ್ಷಸೋ ನೋತ್ತರಸ್ಯೇತಿ** ಎಂದು ಹೇಳಿರುವರು. ಎಂದರೆ ವಿಷುವಾನ್ ಎಂಬ ದಿನವು ಸತ್ರದಲ್ಲಿ ಏಕವಿಂಶ ಎಂಬ ಹೆಸರಿನಿಂದ ಮಧ್ಯದ ದಿನವಾಗಿರುವುದು ಇದು ಮೊದಲಿನ ಆರುತಿಂಗಳಿಗೂ ಸೇರಿರುವುದಿಲ್ಲ. ಕೊನೆಯ ಆರುತಿಂಗಳಿಗೂ ಸೇರುವುದಿಲ್ಲ. ಇದೇ ಪ್ರತ್ಯೇಕವಾಗಿ ಸತ್ರದ ಮಧ್ಯಭಾಗವಾಗವಾಗಿರುವುದು.

**ಏತೇನ ವೈ ದೇವಾ ಏಕವಿಂಶೇನಾದಿತ್ಯಂ ಸ್ವರ್ಗಾಯ ಲೋಕಾಯೋ-ದಯಚ್ಛನ್ ॥ ಸ ಏಷ ಇತ ಏಕವಿಂಶಃ ॥**

**ತದೇತದಹಃ ಪ್ರಶಂಸತಿ—ಪುರಾ ದೇವಾ ಏತೇನಾಹ್ನಾ ಸ್ವರ್ಗಲೋಕಾಖ್ಯಮಾದಿತ್ಯಮುದಯಚ್ಛನ್ನಿತ ಊರ್ಧ್ವಂ ಪ್ರಾಪಿತವಂತಃ ॥ ತಥಾ ಚ ಶಾಖಾಂತರೇ ಪಠ್ಯತೇ ॥—' ಏಕ-ವಿಂಶ ಏಷ ಭವತಿ । ಏತೇನ ವೈ ದೇವಾ ಏಕವಿಂಶೇನಾಽಽದಿತ್ಯಮಿತ ಉತ್ತಮಂಸುವರ್ಗಂ ಲೋಕ-ಮಾರೋಹಯನ್ ' ಇತಿ ॥ ಅದಿತ್ಯಸ್ಯ ತೇನಾಹ್ನಾ ಸಾಮ್ಯಂ ದರ್ಶಯತಿ—ಯೋಽಯಮಾದಿ-ತ್ಯೋಽಸ್ತಿಸ ಏಷ ಇತೋ ಭೂಲೋಕಾದಾರಭ್ಯಗಣ್ಯಮಾನ ಏಕವಿಂಶತಿಸಂಖ್ಯಾಪೂರಕೋ ಭವತಿ ॥ ತಥಾ ಚಾನ್ಯತ್ರಾಽಽಮ್ನಾಯತೇ ' ದ್ವಾದಶಮಾಸಾಪಂಚರ್ತವಸ್ತ್ರಯ ಇಮೇ ಲೋಕಾ ಅಸಾ-ವಾದಿತ್ಯ ಏಕವಿಂಶಃ ' ಇತಿ ॥ ಅಥವಾಽತ್ರೈನ ವಿಷುವತಃ ಪುರಸ್ತಾತ್ಪಶ್ಚಾಚ್ಚ ವಕ್ಷ್ಯಮಾಣಮುಹ-**

ದರ್ಶಕದ್ವಯಮಪೇಕ್ಷ್ಯ ವಿಷುವ ಏಕವಿಂಶ ಇತ್ಯುಚ್ಯತೇ ॥ ಅಸ್ಮಿನ್ಪಕ್ಷೇ ಇದಂ ವಾಕ್ಯಮುತ್ತರ-ಶೇಷತ್ವೇನ ಯೋಜನೀಯಂ ॥

ಪೂರ್ವದಲ್ಲಿ ದೇವತೆಗಳು ಏಕವಿಂಶವೆಂಬ ಈ ದಿನದಲ್ಲಿ ಈ ಆದಿತ್ಯನನ್ನು (ಸೂರ್ಯನನ್ನು) ಮೇಲಕ್ಕೆ ಏರಿಸಿ ಅಲ್ಲಿಯೇ ನೆಲಸುವಂತೆ ಮಾಡಿದರು. ಶಾಖಾಂತರದಲ್ಲಿ (ತೈತ್ತಿರೀಯ ಸಂಹಿತೆಯಲ್ಲಿ) ಈರೀತಿ ಹೇಳಲಾಗಿದೆ—**ಏಕವಿಗ್ಂಶ ಏಷ ಭವತಿ। ಏತೇನ ವೈ ದೇವಾ ಏಕವಿಗ್ಂಶೇನಾದಿತ್ಯಮಿತ ಉತ್ತಮಗ್ಂ ಸುವರ್ಗಂ ಲೋಕಮಾರೋಹಯನ್ ।** ಎಂದು. ಅಥವಾ ಲೋಕಾದಿಗಳನ್ನು ಗಣನೆಮಾಡುವಾಗ ಈ ಆದಿತ್ಯನು ಏಕವಿಂಶ ಎಂದರೆ ಇಪ್ಪತ್ತೊಂದನೆಯವನು ಎಂದು ಪರಿಗಣಿಸಲಾಗುವುದು. ಇದನ್ನೂ ಶ್ರುತಿಯಲ್ಲಿಯೇ ಹೇಳಲಾಗಿದೆ - **ದ್ವಾದಶ ಮಾಸಾಃ ಪಂಚರ್ತವಸ್ತ್ರಯ ಇಮೇ ಲೋಕಾ ಅಸಾವಾದಿತ್ಯ ಏಕವಿಂಶಃ** ಎಂದರೆ ಹನ್ನೆರಡು ಮಾಸಗಳು (ಒಂದು ಸಂವತ್ಸರದಲ್ಲಿರುವ) ಐದು ಋತುಗಳು, ಮೂರು ಲೋಕಗಳು ಸೇರಿದರೆ ಇಪ್ಪತ್ತಾಗುವುದು. ಈ ಸೂರ್ಯನೇ ಇಪ್ಪಂತ್ತೊಂದನೆಯವನು ಎಂದು ಅರ್ಥವು. ಅಥವಾ ಈ ವಿಷುವದ್ದಿವಸದ ಮೊದಲು ಹತ್ತುದಿನಗಳೂ ಅನಂತರ ಹತ್ತುದಿನಗಳೂ ಇದು ಮಧ್ಯದ (೧೧ ನೇ ದಿನ) ದಿನವು ವಿಷುವದ್ದಿನವಾಗಿರುವುದರಿಂದ ಈ ದಿನವು ಇಪ್ಪತ್ತೊಂದನೆಯ (ಏಕವಿಂಶ) ವೆಂದು ಪರಿಗಣಿಸಲ್ಪಡುವುದು. ಈ ವಿಷಯವನ್ನು ಮುಂದಿನ ವಾಕ್ಯದೊಡನೆ ಸೇರಿಸಿ ಅರ್ಥಮಾಡಬೇಕು.

ತಸ್ಯ ದಶಾವಸ್ತಾದಹಾನಿ ದಿವಾಕೀರ್ತ್ಯಸ್ಯ ಭವಂತಿ ದಶ ಪರಸ್ತಾನ್ಮಧ್ಯ ಏಷ ಏಕವಿಂಶ ಉಭಯತೋ ವಿರಾಜಿ ಪ್ರತಿಷ್ಠಿತ ಉಭಯತೋ ಹಿ ವಾ ಏಷ ವಿರಾಜಿ ಪ್ರತಿಷ್ಠಿತಸ್ತಸ್ಮಾದೇಷೋಽನ್ತರೇಮಾಂಲ್ಲೋ-ಕಾನ್ಯತ್ರ ವ್ಯಥತೇ ॥

ಇದಾನೀಮುಭಯತೋ ದಶಕದ್ವಯಂ ವಿಧತ್ತೇ—ದಿವೈವ ಕೀರ್ತನೀಯಂ ಮಂತ್ರ-ಜಾತಂ ಯಸ್ಮಿನ್ವಿಷುವತ್ಯಹನಿ ತದಹರ್ದಿವಾಕೀರ್ತ್ಯಂ ॥ ತಸ್ಯಾಹ್ನೋಽವಸ್ತಾದಧೋಭಾಗೇ ದಶಾಹಾನಿ ಭವಂತಿ ॥ ಪರಸ್ತಾದೂರ್ಧ್ವಭಾಗೇಪಿ ದಶಾಹಾನಿ ಭವಂತಿ ॥ ತಯೋರ್ದಶಕಯೋ-ರ್ಮಧ್ಯ ಏಷ ಏಕವಿಂಶೋ ವಿಷುವಾನ್ವರ್ತತೇ ॥ ತಸ್ಯ ವಿಷುವತೋಽಧಸ್ತಾತ್ಪೂರ್ವಪಕ್ಷೇ ಷಷ್ಠೇಮಾಸೇ ಸ್ವರಸಾಮಾನೋಽಹರ್ವಿಶೇಷಾಸ್ತ್ರಯಸ್ತೇಭ್ಯಃ ಪೂರ್ವಮಭಿಜಿದಾಖ್ಯಮೇಕಾ-ಸ್ತತಃ ಪೂರ್ವಂ ಪೃಷ್ಠ್ಯಃ ಷಡಹ ಇತಿ ದಶಾಹಾನಿ ವಿಷುವದೂರ್ಧ್ವಂ ತು ಪ್ರತ್ಯವರೋಹ-ಕ್ರಮೇಣ ತ್ರಯಃ ಸ್ವರಸಾಮಾನಸ್ತತೋ ವಿಶ್ವಜಿದಾಖ್ಯಮೇಕಾಹಸ್ತತ ಊರ್ಧ್ವಂ ಪೃಷ್ಠ್ಯಃ ಷಡಹ ಇತಿ ದಶಾಹಾನಿ ॥ ಏವಮುಭಯೋಃ ಪಾರ್ಶ್ವಯೋರಹ್ನಾಂ ದಶಸಂಖ್ಯೋಪೇತತ್ವಾ-ದ್ವಿರಾಡೇತಸ್ಯಾಮುಭಯತೋಽವಸ್ಥಿತಾಯಾಂ ವಿರಾಜ್ಯಯಮೇಕವಿಂಶಃ ಪ್ರತಿಷ್ಠಿತಃ । ಯಥೋಕ್ತಗಣನಯಾ ವಿರಾಜಿ ಪ್ರತಿಷ್ಠಾಮೇವ ಹಿಶಬ್ದೋಽಪ್ಯೇ (ಪೆ) ತೇನ ವಾಕ್ಯೇನ ಸ್ಪಷ್ಟೀಕರೋತಿ ॥ ತಸ್ಮಾದುಭಯತೋ ವಿರಾಡ್ದ್ವಯೇನ ರಕ್ಷಿತತ್ವಾದೇಷ ಆದಿತ್ಯೋ ವಿಷು-ವದಹಃ ಸ್ಥಾನೀಯಃ ॥ ಇಮಾಲ್ಲೋಕಾನಂತರಾ ಏಷಾಂ ಲೋಕಾನಾಂ ಸರ್ವೇಷಾಂ ಮಧ್ಯೇ ಯನ್ಗಚ್ಛನ್ನಪಿ ನ ವ್ಯಥತೇ ವ್ಯಥಾಂ ನ ಪ್ರಾಪ್ನೋತಿ॥ವಿಷುವಾನಪ್ಯೇಕವಿಂಶ ಆದಿತ್ಯೋಽಪ್ಯೇಕ-ವಿಂಶಸ್ತಸ್ಮಾದುಭಯೋರೇಕತ್ವೇ ಸತಿ ವಿಷುವತೋ ಯದ್ವಿರಾಡ್ದ್ವಯೋಪೇತತ್ವಂ ತದೇವಾಽಽ-

**ದಿತ್ಯಸ್ಯೋಭಯತೋವಿರಾಟ್ತ್ವಂ ಭವತಿ ॥ ಆದಿತ್ಯಸ್ಯ ವ್ಯಥಾರಾಹಿತ್ಯೇ ಯೇನ ವಿಷುವತೋ ವೈಕಲ್ಯರಾಹಿತ್ಯಂ ಸಿಧ್ಯತಿ ॥ ಅಥವಾ ವಿಷುವತೋ ಯಥಾವಿರಾಡ್ದ್ವಯಂ ಉಭಯತೋ ರಕ್ಷಕಮೇವಮಾದಿತ್ಯಸ್ಯಾಪ್ಯಧಸ್ತಾದುಪರಿಷ್ಟಾಚ್ಚ ವರ್ತಮಾನಂ ಲೋಕ-ದ್ವಯಂ ॥ ಏತದೇವಾಭಿಪ್ರೇತ್ಯ ಶಾಖಾಂತರೇ ಶ್ರೂಯತೇ—' ತಸ್ಮಾದಂತರೇಮೌ ಲೋಕೌ ಯನ್ಸರ್ವೇಷು ಸುವರ್ಗೇಷು ಲೋಕೇಷು ಅಭಿತಪನ್ನೇತಿ ಇತಿ ॥**

**ದಿನ್ಯೆವ ಕೀರ್ತನೀಯಂ ಮಂತ್ರಜಾತಂ ಯಸ್ಮಿನ್ವಿಷುವತ್ಯಹನಿ ತದಹರ್ದಿವಾಕೀರ್ತ್ಯಂ ವಿಷುವತ್** ಎಂಬ ದಿನದ ಹಗಲಿನಲ್ಲಿ ಕೆಲವು ಮಂತ್ರಗಳನ್ನು ಪಠಿಸುವುದರಿಂದ ಆ ದಿನಕ್ಕೆ (ಅಥವಾ ಮಂತ್ರಕ್ಕೆ) ದಿವಾಕೀರ್ತ್ಯವೆಂದು ಹಸರು. ಈ ದಿನದ ಕೆಳಭಾಗದಲ್ಲಿ ಎಂದರೆ ಪೂರ್ವದಲ್ಲಿ (ಮೊದಲು) ಹತ್ತುದಿನಗಳೂ ಈ ವಿಷುವದ್ದಿನದ ಅನಂತರ ಹತ್ತುದಿನಗಳೂ ಇದ್ದು ಈ ವಿಷುವದ್ದಿನವು ಮಧ್ಯದಲ್ಲಿರುವುದು. ಅದು ಹೇಗೆಂದರೆ ಪೂರ್ವಭಾಗದ ಹತ್ತುದಿನಗಳು—ಸ್ವರಸಾಮಾನಃ ಎಂಬ ಮೂರು ದಿನಗಳು ಅದಕ್ಕಿಂತ ಮೊದಲು ಅಭಿಜಿತ್ ಎಂಬ ಹೆಸರಿನ ಒಂದುದಿನ ಮತ್ತು ಪೃಷ್ಠ್ಯಷಳಹಃ ಎಂಬ ಆರುದಿನಗಳು ಇವೆಲ್ಲವೂ ಸೇರಿ ಹತ್ತುದಿನಗಳು ಇವು ವಿಷುವದ್ದಿನಕ್ಕೆ ಮೊದಲ ಆರುಮಾಸಗಳಲ್ಲಿರುವ ಹತ್ತುದಿನಗಳು. ಉತ್ತರಭಾಗದ ಆರುಮಾಸಗಳಲ್ಲಿರುವ ಹತ್ತುದಿನಗಳು ಈ ದಿನಗಳೇ ಆಗಿದ್ದು ಹಿಂದೆ ಹೇಳಿದ್ದಕ್ಕೆ ವ್ಯತ್ಯಸ್ತವಾಗಿ ಎಂದರೆ ಹಿಂದುಮುಂದಾಗಿರುವವು. ಎಂದರೆ ಪೃಷ್ಠಷಳಹ ಎಂಬ ಆರುದಿನಗಳು, ವಿಶ್ವಜಿತ್ ಮತ್ತು ಮೂರು ಸ್ವರಸಾಮನ್ ಎಂಬ ದಿನಗಳು ಸೇರಿ (ಇದು ಪ್ರತ್ಯವರೋಹಕ್ರಮವು) ಉತ್ತರ ಭಾಗದ ಹತ್ತುದಿನಗಳಾಗುವವು. ಎಂದರೆ ವಿಷುವದ್ದಿನಕ್ಕೆ ಮೊದಲು ಹತ್ತುದಿನಗಳೂ ಅನಂತರ ಮುಂದೆ (ಆಮೇಲೆ) ಹತ್ತು ದಿನಗಳೂ ಇರುವವು. ಈರೀತಿ ಈ ವಿಷುವದ್ದಿನದ ಹಿಂದೆ ಮತ್ತು ಮುಂದೆ ಹತ್ತು ಹತ್ತು ದಿನಗಳಿರುವುದರಿಂದ ಈ ದಿನದ ಎರಡುಪಕ್ಕಗಳಲ್ಲಿಯೂ ವಿರಾಟ್ (ಛಂದಃ) ಇದ್ದಂತಾಯಿತು (ವಿರಾಟ್‌ಛಂದಸ್ಸಿನ ಪಾದದಲ್ಲಿ ಹತ್ತು ಅಕ್ಷರಗಳಿರುವವು). ಆದ್ದರಿಂದ ಎರಡು ವಿರಾಟ್‌ಗಳ ಮಧ್ಯದಲ್ಲಿರುವ ಆದಿತ್ಯನು ಸುರಕ್ಷಿತನಾಗಿರುವನು. ಎಂದರೆ ಲೋಕಗಳ ಮಧ್ಯದಲ್ಲಿರುವ ಆದಿತ್ಯನು ಯಾವ ತೊಂದರೆಗೂ ಒಳಗಾಗದೆ ಸುರಕ್ಷಿತನಾಗಿರುವನು. ವಿಷುವಾನ್ ಎಂಬ ದಿನವೂ ಆದಿತ್ಯನೂ ಸಹ ಎರಡು ವಿರಾಟ್‌ಗಳ ಮಧ್ಯ ದಲ್ಲಿರುವುದರಿಂದ ಇವುಗಳಿಗೆ ವ್ಯಥೆಯಾಗಲಿ ವಿಕಲ್ಪವಾಗಲಿ ಸಂಭವಿಸುವುದಿಲ್ಲ. ಅಥವಾ ವಿಷುವದ್ದಿನಕ್ಕೆ ಹಿಂದೆ ಮತ್ತು ಮುಂದೆ ಎರಡುಪಕ್ಕಗಳಲ್ಲಿಯೂ ರಕ್ಷಕವಾಗಿ ವಿರಾಟ್‌ಛಂದಸ್ಸುಗಳಿರುವಂತೆ ಆದಿತ್ಯನ ಕೆಳಗೆ ಮತ್ತು ಮೇಲುಭಾಗದಲ್ಲಿ ರಕ್ಷಕಗಳಾಗಿ ಲೋಕಗಳಿರುವವು. ಶಾಖಾಂತರದಲ್ಲಿ ಈರೀತಿ ಹೇಳಿದೆ---**ತಸ್ಮಾದಂತರೇಮೌ ಲೋಕೌ ಯನ್ಸುನರ್ವೇಷು ಲೋಕೇಷು ಅಭಿತಪನ್ನೇತಿ** ಎಂದರೆ ಸೂರ್ಯನು ಕೆಳಗೆ ಬೀಳದಂತೆ ಲೋಕಗಳ ಮಧ್ಯದಲ್ಲಿ ಬೆಳಗುತ್ತಿರುವನು.

**ತಸ್ಯ ವೈ ದೇವಾ ಆದಿತ್ಯಸ್ಯ ಸ್ವರ್ಗಾಲ್ಲೋಕಾದವಪಾತಾದಬಿಭಯುಸ್ತಂ ತ್ರಿಭಿಃ ಸ್ವರ್ಗೈರ್ಲೋಕೈರವಸ್ತಾತ್ಪ್ರತ್ಯುತ್ತಭ್ನುವನ್ಸ್ತೋಮಾ ವೈ ತ್ರಯಃ ಸ್ವರ್ಗಾ ಲೋಕಾಸ್ತಸ್ಯ ಪರಾಚೋಽತಿಪಾತಾದಬಿಭ-ಯುಸ್ತಂ ತ್ರಿಭಿಃ ಸ್ವರ್ಗೈರ್ಲೋಕೈಃ ಪರಸ್ತಾತ್ಪ್ರತ್ಯಸ್ತಭ್ನುವ-ನ್ಸ್ತೋಮಾ ವೈ ತ್ರಯಃ ಸ್ವರ್ಗಾ ಲೋಕಾಸ್ತತ್ರಯೋಽವಸ್ತಾತ್ಸ-ಪ್ತದಶಾ ಭವಂತಿ ತ್ರಯಃ ಪರಸ್ತಾನ್ಮಧ್ಯ ಏಷ ಏಕವಿಂಶ ಉಭ-ಯತಃ ಸ್ವರಸಾಮಭಿರ್ಧೃತ ಉಭಯತೋ ಹಿ ವಾ ಏಷ**

**ಸ್ವರಸಾಮಭಿರ್ಧೃತಸ್ತಸ್ಮಾದೇಷೋಽನ್ತರೇಮಾಂಲ್ಲೋಕಾನ್ನ ವ್ಯ-
ಥತೇ ॥**

ಅಥ ವಿಷುವತ ಉಭಯತಃ ಸಮೀಪವರ್ತಿನಃ ಸ್ವರಸಾಮಾಖ್ಯಾನಹರ್ವಿಶೇಷಾ-
ನ್ಪ್ರಶಂಸತಿ– ಯೋಽಯಮಾದಿತ್ಯೋಽಸ್ತಿ ತಸ್ಯಾಽಽದಿತ್ಯಸ್ಯ ಸ್ವರ್ಗಲೋಕಾದವಪಾತ ಆಧಾರಾ-
ಭಾವಾದಧಃ ಪತನಂ ತಸ್ಮಾದ್ದೇವಾ ಅಬಿಭಯುರಾದಿತ್ಯೋಽಧಃ ಪತಿಷ್ಯತೀತಿ ಭೀತಾಃ ಸಂತಸ್ತ-
ಮಾದಿತ್ಯಮವಸ್ತಾನ್ಮಂಡಲಸ್ಯ ಅಧೋಭಾಗೇ ತ್ರಿಭಿಃ ಸ್ವರ್ಗೈರ್ಲೋಕೈಃ ಸ್ವರ್ಗಶಬ್ದೋಪಲಕ್ಷಿ-
ತೈರ್ಭೂರಾದಿಭಿಃ ಪ್ರತ್ಯುತ್ತಭ್ನುವನ್ನಧಃಪಾತಪ್ರತಿಬಂಧಾರ್ಥಮುತ್ತಂಭನಮಾಧಾರರೂಪಮ-
ಕುರ್ವನ್ ॥ ಯಥಾ ಗೃಹಗತವಂಶಾದೀನಾಮಧಃ ಪಾತನಿವಾರಣಾಯ ಸ್ತಂಭೇನೋತ್ತಂಭನಂ
ಕುರ್ವಂತಿ ತದ್ವತ್ ॥ ವರ್ತಮಾನಸ್ಯಾಽಽದಿತ್ಯಸ್ಯ ಯಥಾ ತ್ರಯೋ ಲೋಕಾಃ ಉತ್ತಂಭಕಾಸ್ತ-
ಥೈವ ಆದಿತ್ಯಸ್ಥಾನೀಯಸ್ಯ ವಿಷುವತೋಽಹ್ನಃ ಸ್ವರ್ಗಲೋಕಸದೃಶಾಸ್ತ್ರಯಃ ಸ್ತೋಮಾ ಏವೋ-
ತ್ತಂಭಕಾಃ ॥ ಸಪ್ತದಶಸ್ತೋಮಯುಕ್ತಾಃ ಸ್ವರಸಾಮಾನೋಽಹರ್ವಿಶೇಷಾಃ ಸ್ತೋಮಶಬ್ದೇ-
ನಾತ್ರ ವಿವಕ್ಷಿತಾಃ ॥ ಪುನರಪಿ ದೇವಾಸ್ತಸ್ಯಾದಿತ್ಯಸ್ಯ ಪರಾಚೋಽತಿಪಾತಾನ್ಮಂಡಲಾತ್ಪರಾಗ್ಭೂ-
ತೇಷೂರ್ಧ್ವವರ್ತಿಷು ಲೋಕೇಷು ಯೋಽಯಮತಿಪಾತೋ ದೃಷ್ಟಿಗೋಚರಂ ದೇಶಮುಲ್ಲಂಘ್ಯ
ಯತ್ರ ಕ್ವಾಪಿ ದೂರದೇಶಗಮನಂ ತಸ್ಮಾದತಿಪಾತಾದ್ಭೀತಾಃ ಸಂತಃ ಪರಸ್ತಾದಾದಿತ್ಯಮಂಡಲ-
ಸ್ಯೋಪರಿ ತ್ರಿಭಿರ್ಜನತಪಃ ಸತ್ಯಶಬ್ದಾಭಿಧೇಯೈಸ್ತ್ರಿಭಿಃ ಸ್ವರ್ಗೈರ್ಲೋಕೈಸ್ತಮಾದಿತ್ಯಂ ಪ್ರತ್ಯ-
ಭ್ನುವನ್ ॥ ಯಥಾ ಪೂರ್ವತ್ರಾಧಃ ಪತನನಿವೃತ್ತ್ಯರ್ಥಮುತ್ತಂಭನಂ ಕೃತಮೇವಮುಪರಿಷ್ಟಾ-
ದತಿಪಾತನಿವೃತ್ತ್ಯರ್ಥಂ ಪ್ರತಿಸ್ತಂಭನಂ ಪ್ರತಿಬಂಧಕಸ್ತಂಭಮಕುರ್ವನ್ । ಆದಿತ್ಯಸ್ಥಾನೀಯಸ್ಯ
ತು ವಿಷುವತೋಽಹ್ನ ಉತ್ತರಪಕ್ಷಗತಾಃ ಸ್ತೋಮಶಬ್ದೋಪಲಕ್ಷಿತಾಃ ಸ್ವರಸಾಮಾಖ್ಯಾಸ್ತ್ರ-
ಯೋಹರ್ವಿಶೇಷಾ ಏವ ಪ್ರತಿಸ್ತಂಭಕಾಃ ॥ ತತ್ತಥಾ ಸತಿ ಯೇ ವಿಷುವತೋಽಹ್ನೋಽವಸ್ತಾ-
ದಧೋವರ್ತಿನಸ್ತ್ರಯೋಹರ್ವಿಶೇಷಾಸ್ತೇ ಸಪ್ತದಶಸ್ತೋಮಯುಕ್ತಾಃ ಕಾರ್ಯಾಃ ॥ ಏವಂ ಚ
ಸತಿ ಮಧ್ಯೇಽವಸ್ಥಿತ ಏಕವಿಂಶಾಖ್ಯೋಽಹರ್ವಿಶೇಷ ಉಭಯತೋಽಧಸ್ತಾದುಪರಿಷ್ಟಾಚ್ಚ ಸ್ವರಸಾ-
ಮನಾಮಕೈಃ ತ್ರಿಭಿಸ್ತ್ರಿಭಿರಹೋಭಿರ್ಧೃತಃ ॥ ಅಯಮೇವಾರ್ಥಃ ಶಾಖಾಂತರಪ್ರಸಿದ್ಧದ್ಯೋ-
ತಕೇನ ಹಿಶಬ್ದಯುಕ್ತೇನ ವಾಕ್ಯೇನ ಪುನರ್ದೃಢೀಕೃತಃ । ಯಸ್ಮಾದ್ವಿಷುವದಹಸ್ಥಾನೀಯ
ಆದಿತ್ಯಃ ಸ್ವರಸಾಮಸ್ಥಾನೀಯೈರುಭಯತೋಽವಸ್ಥಿತೈಸ್ತ್ರಿಭಿಸ್ತ್ರಿಭಿರ್ಲೋಕೈಃ ಧೃತಸ್ತಸ್ಮಾತ್ಕಾರ-
ರಣಾದಸ್ಯಾದಿತ್ಯೋಽನ್ತರಾ ಮಧ್ಯೇಽವಸ್ಥಿತ ಇಮಾನ್ಲೋಕಾನ್ಸರ್ವಾನ್ಸರ್ವದಾ ಯನ್ಗಚ್ಛನ್ನಪಿ
ನ ವ್ಯಥತೇ ವ್ಯಥಾಂ ನ ಪ್ರಾಪ್ನೋತಿ ॥ ಅತ್ರಾರ್ಥವಾದೇನ ಪೂರ್ವೋತ್ತರೇಷು ಚ ತ್ರಿಷ್ವಹಸ್ಸು
ಸಪ್ತದಶಸ್ತೋಮವಿಧಿರುನ್ನೇಯಃ ॥ ತಥಾ ಚ ಶಾಖಾಂತರೇ ಶ್ರೂಯತೇ—“ ಉಕ್ಥ್ಯಾ ಏವ
ಸಪ್ತದಶಾಃ ಪರಃಸಾಮಾನಃ ಕಾರ್ಯಾಃ ” । ಇತಿ ॥ ಸ್ವರಸಾಮಾಖ್ಯಾನಾಮಹ್ನಾಮೇವ ಪರಃ
ಸಾಮೇತಿ ನಾಮಾಂತರಂ ॥

ವಿಷುವದ್ದಿನದ ಉಭಯಪಾರ್ಶ್ವಗಳಲ್ಲಿಯೂ ಇರುವ ಸ್ವರಸಾಮಗಳನ್ನು ಪ್ರಶಂಸೆಮಾಡುವರು. ಈಗ ನಮಗೆ ಕಾಣು
ತ್ತಿರುವ ಆದಿತ್ಯನು ಅಂತರಿಕ್ಷದಲ್ಲಿರುವನು. ಅವನಿಗೆ ಅಂತರಿಕ್ಷದಲ್ಲಿ ಯಾವ ಆಧಾರವೂ ಇಲ್ಲದೆ (ಆಸರೆ ಇಲ್ಲದೆ) ಇರುವುದರಿಂದ

ಕೆಳಕ್ಕೆ ಬೀಳಬಹುದು ಎಂದು ದೇವತೆಗಳು ಯೋಚಿಸಿ ಭಯಪಟ್ಟರು. ಆದ್ದರಿಂದ ಆದಿತ್ಯನು ಕೆಳಗೆ ಬೀಳಬಾರದೆಂದು ಯೋಚಿಸಿ ಅವನು ಬೀಳದಿರುವಂತೆ ಮಾಡಲು ಅವನಿಗೆ ಆಸರೆಯಾಗಿ ಊರುಗೋಲಾಗಿರುವಂತೆ ಪೃಥಿವ್ಯಾದಿ ಮೂರು ಸ್ವರ್ಗಲೋಕಗಳನ್ನು ಆಸರೆಯಾಗಿ ಊರುಗೋಲಾಗುವಂತೆ ಮಾಡಿದರು. ಜನರು ಮನೆಕಟ್ಟುವಾಗ ಕಂಭಗಳಮೇಲೆ ಇಡುವ ತೊಲೆಗಳು ಕೆಳಗೆ ಬೀಳದಂತೆ ಭದ್ರವಾಗಿ ನಿಲ್ಲುವುದಕ್ಕಾಗಿ ಮರದ ಅಥವಾ ಬೊಂಬಿನ ಊರುಗೋಲುಗಳನ್ನು ಕೊಡುವಂತೆ ಆದಿತ್ಯನ ಅಧೋಭಾಗ ದಲ್ಲಿ ಮೂರು ಲೋಕಗಳನ್ನೂ ಆಧಾರವಾಗಿ ಮಾಡಿದರು. ಆದಿತ್ಯನಿಗೆ ಮೂರು ಲೋಕಗಳು ಆಧಾರವಾದಂತೆ ವಿಷುವದ್ದಿನಕ್ಕೆ ಸ್ವರ್ಗಲೋಕ ಸದೃಶವಾದ ಮೂರು ಸ್ತೋಮಗಳೇ ಆಧಾರವಾದವು. ಇಲ್ಲಿ ಸ್ತೋಮಗಳೆಂದರೆ ಸಪ್ತದಶ ಸ್ತೋಮಸಹಿತವಾದ ಸ್ವರಸಾಮಗಳೆಂಬ ದಿವಸ (ಅಹಸ್ಸು) ಗಳೇ ಇಲ್ಲಿ ಸ್ತೋಮಗಳೆಂದು ಹೇಳಲ್ಪಡುವವು. ಆದಿತ್ಯನ ಅಧೋಭಾಗದಲ್ಲಿ ಆಸರೆಗಾಗಿ ನಿಲ್ಲಿಸಿರುವ ಸ್ವರ್ಗಾದಿ ಮೂರುಲೋಕಗಳಿಗೂ ಬದಲಾಗಿ ಸತ್ರವು ನಡೆಯುವ ಸಂವತ್ಸರದ ಪೂರ್ವಭಾಗದ ಆರುಮಾಸಗಳಲ್ಲಿರುವ ಮೂರು ಸ್ವರಸಾಮಗಳೇ ವಿಷುವದ್ದಿನಕ್ಕೆ ಆಸರೆಯಾಗಿರುವವು. ಅನಂತರ ದೇವತೆಗಳು ಮತ್ತೆ ಇಂತು ಯೋಚಿಸಿದರು. ನಾವು ಈ ಆದಿತ್ಯನಿಗೆ ಆಧಾರಭೂತವಾಗಿ ಸ್ವರ್ಗಾದಿ ಮೂರುಲೋಕಗಳನ್ನು ನಿಲ್ಲಿಸಿದ್ದರಿಂದ ಆದಿತ್ಯನು ಕೆಳಕ್ಕೆ ಬೀಳುವನೆಂಬ ಭಯ ವಿರುವುದಿಲ್ಲ. ಆದರೆ ಆದಿತ್ಯನು ಸಂಚರಿಸುವಾಗ ಪಾರ್ಶ್ವಗಳಿಗೆ ಅಲುಗಾಡಿ ಪಕ್ಕಗಳಿಗೆ ಬಿದ್ದರೂ ಬೀಳಬಹುದು ಆದ್ದರಿಂದ ಆದಿತ್ಯನು ಮೇಲುಭಾಗ ಮತ್ತು ಪಕ್ಕಗಳಿಗೂ ಅಲುಗಾಡಿ ಬೀಳದಂತೆ ಮಾಡುವುದಕ್ಕಾಗಿ ಕೆಳಗೆ ಮಾಡಿದಂತೆ ಆದಿತ್ಯನ ಮೇಲುಭಾಗದಲ್ಲಿಯೂ ಜನೋಲೋಕ, ತಪೋಲೋಕ, ಸತ್ಯಲೋಕಗಳೆಂಬ ಮೂರು ಊರ್ಧ್ವಲೋಕಗಳನ್ನು ಆಸರೆಯಾಗಿ ಕೊಟ್ಟು ನಿಲ್ಲಿಸಿದರು. ವಿಷು ವದ್ದಿವಸಕ್ಕೆ ಸಂವತ್ಸರದ ಮುಂದಿನ ಆರುತಿಂಗಳಲ್ಲಿ ಯಾವ ವೈಕಲ್ಯವೂ ಉಂಟಾಗದಂತೆ ಉತ್ತರಪಕ್ಷದ ಸಪ್ತದಶಸ್ತೋಮಯುಕ್ತ ವಾದ ಮೂರು ಸ್ವರಸಾಮಗಳು (ಸ್ತೋಮಗಳು) ಆ ಕಾರ್ಯವನ್ನು ನಿರ್ವಹಿಸಿದವು ಎಂದು ಈರೀತಿ ಆದಿತ್ಯನು ಮೇಲೆ ಮತ್ತು ಕೆಳಗೆ ಮೂರು ಮೂರು ಲೋಕಗಳಿಂದಲೂ ವಿಷುವದ್ದಿವಸವು ಸಪ್ತದಶಸ್ತೋಮಯುಕ್ತವಾದ ಮೂರು ಮೂರು ಸ್ವರಸಾಮ ಗಳಿಂದಲೂ ಯಾವ ವೈಕಲ್ಯವೂ ಉಂಟಾಗದಂತೆ ದೃಢಪಡಿಸಲ್ಪಟ್ಟವು. ಈ ವಿಷಯವು ಶಾಖಾಂತರದಲ್ಲಿ ಈರೀತಿ ಹೇಳಲ್ಪಟ್ಟಿರು ವುದು— **ಉಕ್ಥ್ಯಾ ಏವ ಸಪ್ತದಶಾಃ ಪರಃ ಸಾಮಾನಃ ಕಾರ್ಯಾಃ** ಎಂದು. ಇಲ್ಲಿ ಪರಸ್ಸಾಮಾನವೆಂದರೆ ಸ್ವರಸಾಮಾನ ಎಂದು ಹೆಸರು.

**ತಸ್ಯ ವೈ ದೇವಾ ಆದಿತ್ಯಸ್ಯ ಸ್ವರ್ಗಾಲ್ಲೋಕಾದವಪಾತಾದಬಿಭಯುಸ್ತಂ ಪರಸ್ಯೈಃ ಸ್ವರ್ಗೈರ್ಲೋಕೈರವಸ್ತಾತ್ಪ್ರತ್ಯುತ್ತಭ್ನುವನ್ಸ್ತೋಮಾ ವೈ ಪರಮಾಃ ಸ್ವರ್ಗಾ ಲೋಕಾಸ್ತಸ್ಯ ಪರಾಚೋಽತಿಪಾತಾದಬಿಭ- ಯುಸ್ತಂ ಪರಸ್ಯೈಃ ಸ್ವರ್ಗೈರ್ಲೋಕೈಃ ಪರಸ್ತಾತ್ಪ್ರತ್ಯಸ್ತಭ್ನುವ- ನ್ಸ್ತೋಮಾ ವೈ ಪರಮಾಃ ಸ್ವರ್ಗಾ ಲೋಕಾಸ್ತತ್ರಯೋಽವಸ್ತಾ- ತ್ಸಪ್ತದಶಾ ಭವಂತಿ ತ್ರಯಃ ಪರಸ್ತಾತ್ತೇ ದ್ವೌ ದ್ವೌ ಸಂಪದ್ಯ ತ್ರಯಶ್ಚತುಸ್ತ್ರಿಂಶಾ ಭವಂತಿ ಚತುಸ್ತ್ರಿಂಶೋ ವೈ ಸ್ತೋಮಾನಾ- ಮುತ್ತಮಸ್ತೇಷು ವಾ ಏಷ ಏತದಧ್ಯಾಹಿತಸ್ತಪತಿ ತೇಷು ಹಿ ವಾ ಏಷ ಏತದಧ್ಯಾಹಿತಸ್ತಪತಿ ॥**

**ಅಥ** ವಿಹಿತಾನೇತಾನ್ಪೂರ್ವೋತ್ತರಾನ್ಸಪ್ತದಶ ಸಪ್ತದಶಸ್ತೋಮಾನ್ಪ್ರಕಾರಾಂತರೇಣ **ಪುನಃ ಪ್ರಶಂಸತಿ**—ತೇಷುಹಿಲೋಕೇಷು ವರ್ತಮಾನೋ ಯ ಆದಿತ್ಯಸ್ತಸ್ಯ ಸ್ವರ್ಗಲೋಕಾದವ-

ಪಾತಃ ಸ್ಯಾದಿತಿ ದೇವಾ ಭೀತಾಃ ಸಂತಃ ಸ್ತೋಮಾನಾಮಾದಿತ್ಯಸ್ತಂಭನತ್ವರೂಪಂ ಪರಮತ್ವಂ ತೇನೋಭಯತೋ ವರ್ತಮಾನಾಃ ಪದಸಂಖ್ಯಾಕಾಃ ಸಪ್ತದಶಸ್ತೋಮಕಾ ದ್ವೌ ದ್ವಾವೇಕೀಭೂಯತ್ರಿಸಂಖ್ಯಾಕಾಶ್ಚತುಸ್ತ್ರಿಂಶಸ್ತೋಮಾ ಭವಂತಿ । ತ್ರಿವೃತ್ಪಂಚದಶಸಪ್ತದಶೈಕವಿಂಶತ್ರಿಣ(ನ) ವತ್ರಯಸ್ತ್ರಿಂಶಾಖ್ಯಾಶ್ಛಂದೋಗೈರಾಮ್ನಾತಾ ಯೇ ಸ್ತೋಮಾಃ ಸಂತಿ ತೇಷಾಮಯಂಚತುಸ್ತ್ರಿಂಶಸ್ತೋಮ ಉತ್ತಮಃ ಪೂರ್ವಾಪೇಕ್ಷಯಾ ಸಂಖ್ಯಾಧಿಕ್ಯಾತ್ । ತೇಷು ಸ್ತೋಮಸ್ಥಾನೀಯೇಷೂಭಯತಃ ಸ್ಥಿತೇಷು ಸ್ವರ್ಗೇಷ್ವೇಷೋಽಧ್ಯಾಹಿತ ಆದಿತ್ಯೋ ಜಗತ್ಸ್ರಷ್ಟಾ ಸ್ಥಾಪಿತಃ ಸನ್ನೇತಸ್ಮಾತ್ಪ್ರತ್ಯಕ್ಷಂ ಯಥಾ ಭವತಿ ತಥಾ ತಪತಿ ಸಂತಾಪಂ ಕರೋತಿ । ತೇಷು ಹೀತಿ ವಾಕ್ಯೇನ ತದೇವ ದೃಢೀ ಕ್ರಿಯತೇ ।

ಹಿಂದೆ ಹೇಳಿದ ಪೂರ್ವೋತ್ತರ ಸಪ್ತದಶಸ್ತೋಮಗಳನ್ನು ಪ್ರಕಾರಾಂತರವಾಗಿ ಮತ್ತೆ ಪ್ರಶಂಸೆಮಾಡುವರು. ಆದಿತ್ಯನನ್ನು ಅತ್ಯಂತ ಎತ್ತರವಾದ ಸ್ವರ್ಗಲೋಕದಮೇಲೆ ಸ್ಥಾಪಿಸಿದನಂತರ ಆದಿತ್ಯನು ಅಷ್ಟು ಎತ್ತರವಿರುವ ಸ್ವರ್ಗಲೋಕದಿಂದ ಎಲ್ಲಿ ಬೀಳುವನೋ ಎಂದು ಹೆದರಿದರು. ಆದ್ದರಿಂದ ಆದಿತ್ಯನು ಬೀಳದಂತೆ ಸ್ತಂಭನರೂಪವಾದ ಆರು ಆರು ಸ್ತೋಮಗಳನ್ನು ಆದಿತ್ಯನ ಮೇಲೂ ಮತ್ತು ಕೆಳಗೂ ಸ್ಥಾಪಿಸಿ ದೃಢಪಡಿಸಿದರು. ಮೊದಲು ಮೂರು ಸಪ್ತದಶಸ್ತೋಮಗಳನ್ನು ಅನಂತರ ಮೂರು ಸಪ್ತದಶ ಸ್ತೋಮಗಳನ್ನೂ ಸ್ಥಾಪಿಸಿದರೆಂದು ಹಿಂದೆಯೇ ಹೇಳಲಾಗಿದೆ. ಈಗ ಎರಡು ಸಪ್ತದಶಸ್ತೋಮಗಳನ್ನು ಸೇರಿಸಿದರೆ ಚತುಸ್ತ್ರಿಂಶ ಅಥವಾ ಮೂವತ್ತನಾಲ್ಕು ಸ್ತೋಮಗಳಾಗುವವು ಈ ಚತುಸ್ತ್ರಿಂಶಸ್ತೋಮಗಳು ತ್ರಿವೃತ್ ಪಂಚದಶ, ಸಪ್ತದಶ, ಏಕವಿಂಶ ತ್ರಿಣವ, ತ್ರಯಸ್ತ್ರಿಂಶ ಎಂಬ ಸ್ತೋಮಗಳಿಗಿಂತಲೂ ಹೆಚ್ಚಾದ (ಇಳ ಸ್ತೋಮ) ಸಂಖ್ಯೆಯ ಸ್ತೋಮಗಳನ್ನೊಳಗೊಂಡಿರುವುದರಿಂದ ಇದು ಎಲ್ಲಾ ವಿಧವಾದ ಸ್ತೋಮಗಳಿಗಿಂತಲೂ ಶ್ರೇಷ್ಠವಾಗಿರುವುದು. ಇಂತಹ ಚತುಸ್ತ್ರಿಂಶಸ್ತೋಮವನ್ನು ದೇವತೆಗಳು ಆದಿತ್ಯನ ಉಭಯಪಾರ್ಶ್ವ (ಮೇಲೆ ಮತ್ತು ಕೆಳಗೆ) ಸ್ಥಾಪಿಸಿ ದೃಢಪಡಿಸಿದ್ದರಿಂದ ಆದಿತ್ಯನು ಯಾವ ಬಾಧೆಯೂ ಇಲ್ಲದೆ ಪ್ರಕಾಶಿಸ ತೊಡಗಿದನು. ಈ ಆದಿತ್ಯನು ಎಲ್ಲಾ ಪ್ರಾಣಿಗಳಿಗೂ ಚೈತನ್ಯವನ್ನೂ ಬೆಳಕನ್ನೂ ಉಂಟುಮಾಡುತ್ತಾ ಪ್ರಕಾಶಿಸುವನಾದ್ದರಿಂದ ಸರ್ವರಲ್ಲಿಯೂ ಶ್ರೇಷ್ಠನೆನಿಸಿರುವನು.

**ಸ ವಾ ಏಷ ಉತ್ತರೋಽಸ್ಮಾತ್ಸರ್ವಸ್ಮಾದ್ಭೂತಾದ್ಭವಿಷ್ಯತಃ ಸರ್ವಮೇವೇದಮತಿರೋಚತೇ ಯದಿದಂ ಕಿಂಚೋತ್ತರೋ ಭವತಿ ॥ ಯಸ್ಮಾದುತ್ತರೋ ಬುಭೂಷತಿ ತಸ್ಮಾದುತ್ತರೋ ಭವತಿ ಯ ಏವಂ ವೇದ ॥**

ವಿಷುವತ ಏವಂ ಪ್ರಶಂಸಾಮಭಿಪ್ರೇತ್ಯ ತದ್ರೂಪತ್ವೇನೋಪಚರಿತಮಾದಿತ್ಯಂ ಪುನಃ ಪ್ರಶಂಸತಿ—ಯೋಽಯಮಾದಿತ್ಯೋಽಭಿಹಿತಃ ಸ ಏವೈಷ ಭೂತಾದ್ಭವಿಷ್ಯತಶ್ಚ ಸರ್ವಸ್ಮಾದಸ್ಮಾಜ್ಜಗತ ಉತ್ತರ ಉತ್ಕೃಷ್ಟೋ ಯದಿದಂ ಕಿಂಚ ಜಗದಸ್ತೀದಂ ಸರ್ವಮೇವಾತಿಕ್ರಮ್ಯ ರೋಚತೇ ದೀಪ್ಯತೇ ತದ್ವದಯಂ ವಿಷುವಾನಪ್ಯನ್ಯೇಭ್ಯಃ ಸರ್ವೇಭ್ಯೋಽಹೋಭ್ಯ ಉತ್ತರ ಉತ್ಕೃಷ್ಟೋ ಭವತಿ । ವೇದನಂ ಪ್ರಶಂಸತಿ । ಏತದ್ವೇದನಾದುತ್ಕೃಷ್ಟೋ ಭೂತ್ವಾ ಪ್ರತಿಷ್ಠಯಾಧಿಕಂ ಶೋಭತೇ ತಸ್ಮಾದುತ್ಕೃಷ್ಟತರೋ ಭವತಿ ॥

ಅಥ ವಿಷುವನ್ನಾಮಕಮಹರ್ವಿಶೇಷಂ ಮನುಷ್ಯಸಾಮ್ಯೇನ ಪ್ರಶಂಸತಿ ಯಥಾ ಲೋಕೇಷು ಪುರುಷೋ ದಕ್ಷಿಣವಾಮಭಾಗಾಭ್ಯಾಂ ಭಾಗದ್ವಯಮಧ್ಯೇ ಶಿರಸಾ ಚ ಯುಕ್ತಸ್ತಸ್ಯ ವಿಷುವತಃ ಷಣ್ಮಾಸಾತ್ಮಕಃ ಪೂರ್ವಭಾಗಃ ಪುರುಷಸಂಬಂಧಿದಕ್ಷಿಣಭಾಗಸ್ಥಾನೀಯಸ್ತತ್ರಾವ-ರೋಹರೂಪಮಾಸಷಟ್ಕಾತ್ಮಕ ಉತ್ತರಾರ್ಧೋ ವಾಮಭಾಗಸ್ಥಾನೀಯಸ್ತಸ್ಮಾದ್ವಾಮಭಾಗ-ಸಾದೃಶ್ಯಾದುತ್ತರ ಇತ್ಯಾಚಕ್ಷತೇ ಸ ತ್ವನುಷ್ಠಾನಾಧಿಕ್ಯವಿವಕ್ಷಯಾ । ಪ್ರಬಾಹುಕ್ಸತೋ ವಾಮದಕ್ಷಿಣಭಾಗೌ ಸಮೌ ಕೃತ್ವಾಽವಸ್ಥಿತಸ್ಯ ಪುರುಷಸ್ಯ ಶಿರೋ ಯಥೋನ್ನತಂ ಸನ್ಮಧ್ಯೇಽವ-ತಿಷ್ಠತ ಏವಂ ಮಾಸಷಟ್ಕಯೋರ್ಮಧ್ಯೇ ವಿಷುವಾನುತ್ಕೃಷ್ಟೋಽವತಿಷ್ಠತೇ । ಬಿ(ವಿ)ದಲಂ ಭಾಗಸ್ತಾಭ್ಯಾಂ ಬಿ(ವಿ)ದಲಾಭ್ಯಾಂ ದಕ್ಷಿಣವಾಮಭಾಗಾಭ್ಯಾಂ ಸಂಹಿತಃ ಸಂಯೋಜಿತಃ ಏವ ಲೋಕೇಷು ಪುರುಷೋ ಭವತಿ । ತದ್ಧಾಪಿ ತಸ್ಮಾದೇವ ಭಾಗದ್ವಯಸಂಧಾನರೂಪಾತ್ಕಾರಣಾ-ಚ್ಛೀರ್ಷ್ಣೋ ಮಧ್ಯೇ ಸ್ಯೂಮೇವ ವಿಜ್ಞಾಯತೇ । ಸ್ಯೂಮ ಸ್ಯೂತಂ । ಯಥಾ ವಸ್ತ್ರಯೋಃ ಸಂಧಿಃ ಸೂಚ್ಯಾ ಸ್ಯೂತಃ ಸಂಯೋಜಿತೋ ಭವತಿ । ಏವಂ ಶಿರಸಿ ದಕ್ಷಿಣೋತ್ತರಕಪಾಲಯೋಃ ಸಂಧೌ ಸ್ಯೂತೇವ ಕಾಚಿದ್ರೇಖಾ ದೃಶ್ಯತೇ । ಏತಚ್ಚ ಭೂಮೌ ಪತಿತೇ ಶುಷ್ಕೇ ಮಾಂಸರಹಿತೇ ಶಿರಃಕಪಾಲದ್ವಯಸಮೂಹರೂಪೇಽಸ್ಥಿನಿ ವಿಸ್ಪಷ್ಟಮುಪಲಭ್ಯತೇ । ಅತಃ ಸರ್ವಾತ್ಮನಾ ಪುರು-ಷಸಾದೃಶ್ಯಾತ್ಪ್ರಶಸ್ತೋಽಯಂ ವಿಷುವಾನ್ ॥

ವಿಷುವತ್ ಎಂಬ ದಿನವನ್ನು ಮನುಷ್ಯಸಾಮ್ಯದಿಂದ ಪ್ರಶಂಸೆಮಾಡುವರು. ಲೋಕದಲ್ಲಿ ಪುರುಷನಿಗೆ ಬಲಪಾರ್ಶ್ವ ಎಡಪಾರ್ಶ್ವ ಎಂದು ಎರಡು ಪಾರ್ಶ್ವಗಳಿರುವವು. ಈ ಎರಡು ಪಾರ್ಶ್ವಗಳೂ ಸಮನಾಗಿರುವವು. ಇವುಗಳ ಮಧ್ಯದಲ್ಲಿ ಶಿರಸ್ಸು ಎತ್ತರವಾಗಿರುವುದು. ಅದರಂತೆ ಸತ್ರಯಾಗದಲ್ಲಿ ಇರುವ ಮೊದಲು ಆರುತಿಂಗಳು ಪುರುಷನ ಬಲಭಾಗದಂತೆಯೂ, ಕೊನೆಯ ಆರುತಿಂಗಳು ಎಡಭಾಗದಂತೆಯೂ ಇರುವವು. ವಿಷುವಾನ್ ಎಂಬ ದಿನವು ಸಂವತ್ಸರದ ಮಧ್ಯದಲ್ಲಿರುವುದರಿಂದ ಇದು ಪುರುಷನ ಶರೀರದ ಮಧ್ಯಭಾಗದಲ್ಲಿ (ಎರಡು ಪಾರ್ಶ್ವಗಳ ಮಧ್ಯದಲ್ಲಿ) ಎತ್ತರವಾಗಿರುವ ಶಿರಸ್ಸಿನಂತೆ ಇರುವುದು. ಈ ಶಿರಸ್ಸು ಪುರುಷನ ಬಲ ಮತ್ತು ಎಡಪಾರ್ಶ್ವಗಳನ್ನು ಸೇರಿಸಿರುವಂತೆ ಮಧ್ಯದಲ್ಲಿರುವುದು. ಅದರಂತೆ ಈ ವಿಷುವದ್ದಿವಸವು ಸಂವತ್ಸರದ ಆದಿಯ ಆರುಮಾಸಗಳನ್ನೂ ಅಂತ್ಯದ ಆರುಮಾಸಗಳನ್ನೂ ಸೇರಿಸಿದಂತಿರುವುದು. ಪುರುಷನ ಶಿರಸ್ಸು ಎಡ ಬಲ ಪಾರ್ಶ್ವಗಳನ್ನು ಕೂಡಿಸಿ ಹೊಲಿದಂತಿರುವುದು. ಬಟ್ಟೆಯು ಹರಿದುಹೋದಲ್ಲಿ ಅದನ್ನು ಸೂಜಿಯಿಂದ ಹೊಲಿದು ಸೇರಿಸುವಂತೆ ಈ ಶಿರೋಭಾಗವು ಪುರುಷನ ಎರಡುಭಾಗಗಳನ್ನು ಸೇರಿಸಿ ಹೊಲಿದಂತಿರುವುದು. ವಿಷುವದ್ದಿವಸವೂ ಅದೇರೀತಿ ಸಂವತ್ಸರದ ಪೂರ್ವಾರ್ಧ ಮತ್ತು ಉತ್ತರಾರ್ಧಗಳೆಂಬ ಭಾಗಗಳನ್ನು ದೃಢವಾಗಿ ಸೇರಿಸಿದಂತಿರುವುದು. ಪುರುಷನು ಮೃತನಾದಾಗ ಮಾಂಸರಹಿತವಾದ ಶಿರ, ಕಪಾಲಾದಿಗಳು ತಮ್ಮ ಸಂಬಂಧವನ್ನು ತ್ಯಜಿಸಿ ಪ್ರತ್ಯೇಕವಾಗಿರುವುದರಿಂದ ದೇಹದ ನಾನಾ ಭಾಗಗಳು ಒಂದರೊಡನೆ ಮತ್ತೊಂದು ಸೇರದೆ ಬೇರೆ ಬೇರೆಯಾಗಿ ಬಿದ್ದಿರುವವು. ಹಾಗೆಯೇ ವಿಷುವದ್ದಿವಸದ ಸಂಬಂಧವಿಲ್ಲದಿದ್ದರೆ ಸಂವತ್ಸರಾತ್ಮಕವಾದ ಸತ್ರಯಾಗವು ಹೊಂದಿಕೊಂಡಿರುವುದಿಲ್ಲ. ಆದ್ದರಿಂದ ಈ ಸತ್ರಯಾಗಕ್ಕೂ ಪುರುಷನ ಶರೀರಕ್ಕೂ ಇಲ್ಲಿ ಸಾದೃಶ್ಯವನ್ನು ಹೇಳಲಾಗಿದೆ.

ತದಾಹುರ್ವಿಷುವತ್ಯೇವೈತದಹಃ ಶಂಸೇದ್ವಿಷುವಾನ್ವಾ ಏತದುಕ್ಥಾನಾ-ಮುಕ್ಥಂ ವಿಷುವಾನ್ವಿಷುವಾನಿತಿ ಹ ವಿಷುವಂತೋ ಭವಂತಿ ಶ್ರೈಷ್ಠತಾಮಶ್ನುವತ ಇತಿ ॥

**ಅತ್ರ ಕಂಚಿತ್ಪೂರ್ವಪಕ್ಷಮುತ್ಥಾಪಯತಿ— ವಿಷುವನ್ನಾಮಕೇ ಮುಖ್ಯೇಽಹನಿ ಯಚ್ಛಸ್ತ್ರಂ ವಿಹಿತಂ ತತ್ತಸ್ಮಿನ್ ಶಸ್ತ್ರೇ ಪೂರ್ವಪಕ್ಷಿಣ ಏವಮಾಹುಃ । ದಕ್ಷಿಣಾಯನಸ್ಯೋತ್ತರಾಯಣಸ್ಯ ಚ ಮಧ್ಯೇ ವಿಷುವನ್ನಾಮಕತುಲಾಮೇಷಸಂಕ್ರಾಂತಿದ್ವಯರೂಪೋ ಯಃ ಕಾಲವಿಶೇಷಃ ಸೋಽಯಂ ವಿಷುವಚ್ಛಬ್ದಾಭಿಧೇಯಃ । ಸ ಚ ವ್ಯವಹಾರಃ ಸ್ಮೃತಿಷು ಪ್ರಚುರಃ । ಅಸ್ಮಿನ್ನೇವ ವಿಷುವತಿ ಕಾಲ ಏತದಹಃ ಶಂಸೇತ್ । ಏತಸ್ಮಿನ್ನಹನಿ ವಿಹಿತಂ ಶಸ್ತ್ರಮಹಃಶಬ್ದೇನೋಪಲಕ್ಷ್ಯತೇ । ಏತತ್ಸಂಕ್ರಾಂತಿದ್ವಯಮು(ಯು) ಕ್ತಮಹರುಕ್ತಾನಾಮಹ್ನಾಂ ಮಧ್ಯ ಉಕ್ಥಶಸ್ತ್ರೋಪೇತಶಸ್ತ್ರಯೋಗ್ಯಮಿತ್ಯರ್ಥಃ । ಅತ ಏವ ವಿಷುವಾನ್ವೈಷುವನ್ನಾಮಕಶಸ್ತ್ರವಾನೇವ ಸಂಕ್ರಾಂತಿ ಕಾಲವಿಶೇಷಃ । ತತ್ಕಥಮಿತ್ಯುಚ್ಯತೇ । ತಂ ಸಂಕ್ರಾಂತಿಕಾಲಂ ವಿಷುವಾನ್ವಿಷುವಾನಿತ್ಯೇವ ಸರ್ವೇ ವ್ಯವಹರಂತಿ । ಅತಸ್ತಸ್ಮಿನ್ಕಾಲೇ ಶಸ್ತ್ರಪಾಠೇ ಸತಿ ಯಜಮಾನಾ ವಿಷುವಂತೋ ಯೋಗ್ಯಶಸ್ತ್ರಯುಕ್ತಾ ಭವಂತಿ । ಸರ್ವೇಷ್ವನುಷ್ಠಾತೃಷು ಶ್ರೇಷ್ಠತಾಂ ಪ್ರಾಪ್ನುವಂತೀತಿ ಪೂರ್ವಪಕ್ಷಿಣಾಮಾಶಯಃ ॥**

ವಿಷುವತ್ ಎಂಬ ದಿನವು ಸತ್ರಯಾಗದಲ್ಲಿ ಮುಖ್ಯವಾದ ದಿನವು. ಇದರ ವಿಷಯದಲ್ಲಿ ಪೂರ್ವಪಕ್ಷವಾದಿಗಳು ಈರೀತಿ ಹೇಳುವರು. ದಕ್ಷಿಣಾಯನ, ಉತ್ತರಾಯಣ ಎಂಬ ಕಾಲಗಳ ಮಧ್ಯದಲ್ಲಿ ತುಲಾ ಮತ್ತು ಮೇಷ ಎಂಬ ಎರಡು ಸಂಕ್ರಾಂತಿ ಎಂಬ ಕಾಲವಿಶೇಷಗಳಿರುವವು. ಇವುಗಳಿಗೆ ವಿಷುವತ್ ಎಂದು ಹೆಸರು. ಸ್ಮೃತ್ಯಾದಿಗ್ರಂಥಗಳಲ್ಲಿಯೂ ಹೀಗೆಯೇ ಹೇಳಿದೆ. ಆದ್ದರಿಂದ ಈ ಕಾಲದಲ್ಲಿ ಆ ದಿವಸದಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳನ್ನು ಪಠಿಸಬೇಕು. ಆದ್ದರಿಂದ ಆ ಕಾಲದಲ್ಲಿ ಶಸ್ತ್ರಮಂತ್ರಗಳನ್ನು ಪಠಿಸುವುದರಿಂದ ಯಜ್ಞಮಾಡುವ ಯಜಮಾನರು ಯೋಗ್ಯವಾದ ಮಂತ್ರಗಳನ್ನೇ ಪಠಿಸಿದಂತೆ ಆಗುವುದು. ಮತ್ತು ಹೀಗೆ ಮಾಡುವ ಯಜಮಾನರು ಜನರಲ್ಲಿ ಗಣ್ಯತೆಯನ್ನೂ ಪಡೆಯುವರು ಎಂದು ಪೂರ್ವಪಕ್ಷವಾದಿಗಳು ಹೇಳುವರು.

## ತತ್ತನ್ನಾದೃತ್ಯಂ ಸಂವತ್ಸರ ಏವ ಶಂಸೇದ್ರೇತೋ ವಾ ಏತತ್ಸಂವತ್ಸರಂ ದಧತೋ ಯಂತಿ ॥

**ತಂ ಪಕ್ಷಂ ನಿರಾಕರೋತಿ—ಕರ್ಮಾಂತರೇಷ್ವಪಿ ವಿಷುವಾಖ್ಯಸಂಕ್ರಾಂತಿಯುಕ್ತೇ ಕಾಲೇ ಸಮಾಗತೇ ಸತಿ ಶಸ್ತ್ರಮೇತಚ್ಛಂಸನೀಯಮಿತಿ ಯತ್ಪೂರ್ವಪಕ್ಷಿಣಾಂ ಮತಂ ತಸ್ಮಿನ್‌ಶಾಸ್ತ್ರೇ ತನ್ಮತಂ ನಾದರಣೀಯಂ । ಕಿಂತು ಸಂವತ್ಸರಸತ್ರ ಏವ ಗವಾಮಯನೇ ತತ್ಪೂರ್ವೋಕ್ತಂ ಶಸ್ತ್ರಂ ಶಂಸೇತ್ । ಏವಂ ಸತಿ ಯಜಮಾನಾ ಅತ್ಯಂತಸಂಯೋಗೇನ ಸಂವತ್ಸರಕಾಲಮೇತದ್ರೇತೋ ಧಾರಯಂತೋ ಯನ್ತ್ಯನುತಿಷ್ಠಂತಿ ॥**

ಮೇಲೆ ಹೇಳಿದ ಪೂರ್ವಪಕ್ಷವು ಸರಿಯಲ್ಲವೆಂದು ಅದನ್ನು ನಿರಾಕರಿಸುವರು. ಕರ್ಮಾಂತರಗಳಲ್ಲಿಯೂ ಸಂಕ್ರಾಂತಿಯೆಂದು ಹೇಳಲ್ಪಡುವ ವಿಷುವದ್ದಿನಗಳಲ್ಲಿ ಶಸ್ತ್ರಮಂತ್ರಗಳನ್ನು ಪಠಿಸಬೇಕೆಂದು ಪೂರ್ವಪಕ್ಷವಾದಿಗಳು ಹೇಳುವ ಮತವು ಸರಿಯಲ್ಲ. ಅದರಲ್ಲಿ ನಂಬಿಕೆಯನ್ನಿಡಬಾರದು. ಸಂವತ್ಸರಾತ್ಮಕವಾದ ಸತ್ರಯಾಗದಲ್ಲಿ ಗವಾಮಯನದಲ್ಲಿ ಯಾವ ಶಸ್ತ್ರಮಂತ್ರಗಳನ್ನು ಪಠಿಸಬೇಕೆಂಬ ನಿಯಮವಿದೆಯೋ ಅದನ್ನೇ ಆ ಕಾಲದಲ್ಲಿ ಪಠಿಸಬೇಕು. ಹೀಗೆ ಮಾಡುವುದರಿಂದ ಯಜ್ಞಮಾಡುವ ಯಜಮಾನರು ಸಂವತ್ಸರಕಾಲದವರೆಗೂ ತಮ್ಮ ಶಕ್ತಿಸಾಮರ್ಥ್ಯಗಳನ್ನು ಪಡೆದು ಕೊನೆಯವರೆಗೂ ಸತ್ರಾನುಷ್ಠಾನವನ್ನು ಮಾಡಿ ಮುಗಿಸುತ್ತಾರೆ.

**ಯಾನಿ ವೈ ಪುರಾ ಸಂವತ್ಸರಾದ್ರೇತಾಂಸಿ ಜಾಯಂತೇ ಯಾನಿ ಪಂಚ-ಮಾಸ್ಯಾನಿ ಯಾನಿ ಷಣ್ಮಾಸ್ಯಾನಿ ಸ್ರೀವ್ಯಂತಿ ವೈ ತಾನಿ ನ ವೈ ತೈರ್ಭುಂಜತೇ ॥**

ವಿಪಕ್ಷೇ ಬಾಧಕಂ ದರ್ಶಯತಿ—ಸಂವತ್ಸರಧಾರಣಾತ್ಪುರೈವ ಕತಿಪಯಮಾಸಧಾರ-ಣೇನ ಯಾನಿ ರೇತಾಂಸಿ ಜಾಯಂತೇ ಪಂಚಮಾಸಸಂಬಂಧೀನಿ ವಾ ಷಣ್ಮಾಸಸಂಬಂಧೀನಿ ವಾ ತಾನಿ ಸ್ರೀವ್ಯಂತಿ ವೈ ಸ್ರವಂತೇವ ಗರ್ಭಸ್ರಾವೋ ಭವತಿ । ನ ತು ತೈರಲ್ಪಮಾಸಧೃತೈ ರೇತೋಭಿಃ ಪುತ್ರಾದಿಶರೀರಂ ಭುಜ್ಞತೇಽನುಭವಂತಿ ॥

ಪ್ರತಿಪಕ್ಷದಲ್ಲಿರುವ ಬಾಧಕವನ್ನು ತಿಳಿಸುತ್ತಾರೆ. ಸಂವತ್ಸರಕಾಲಕ್ಕಿಂತ ಮುಂಚೆಯೇ ಎಂದರೆ ಐದು ಅಥವಾ ಆರು ತಿಂಗಳುಗಳಲ್ಲಿ ಸತ್ರಾನುಷ್ಠಾನವನ್ನು ಮಾಡಿದರೆ ಅದು ವ್ಯರ್ಥವಾಗುವುದು. ಹೇಗೆಂದರೆ ಸ್ತ್ರೀಯ ಗರ್ಭದಲ್ಲಿ ಬೆಳೆದ ರೇತಸ್ಸು ಗರ್ಭದಲ್ಲಿ ಐದು ಅಥವಾ ಆರು ತಿಂಗಳು ಮಾತ್ರ ಇದ್ದರೆ ಆ ರೇತಸ್ಸು ಗರ್ಭಸ್ರಾವದ ಮೂಲಕ ಹೊರಗೆ ಬರುವುದು. ಕಾಲಾವಕಾಶ ವಿಲ್ಲದ್ದರಿಂದ ಅದು ಸಂತಾನವಾಗಿ ಮಾರ್ಪಡುವುದಿಲ್ಲ. ಅದರಂತೆ ಸಂವತ್ಸರದವರೆಗೂ ನಡೆಯುವ ಸತ್ರಯಾಗದಲ್ಲಿ ವಿಹಿತವಾದ ಕಾಲದಲ್ಲಿ ಶಸ್ತ್ರಮಂತ್ರಗಳನ್ನು ಪಠಿಸುವುದರಿಂದ ಯಾವ ತೊಂದರೆಯೂ ಉಂಟಾಗುವುದಿಲ್ಲ.

**ಅಥ ಯಾನ್ಯೇವ ದಶಮಾಸ್ಯಾನಿ ಜಾಯಂತೇ ಯಾನಿ ಸಾಂವತ್ಸರಿಕಾಣಿ ತೈರ್ಭುಂಜತೇ ತಸ್ಮಾತ್ಸಂವತ್ಸರ ಏವೈತದಹಃ ಶಂಸೇತ್ ॥**

ಗುಣಕಥನಪೂರ್ವಕಂ ಸ್ವಪಕ್ಷಮುಪಸಂಹರತಿ—ಅಥ ಪೂರ್ವೋಕ್ತವೈಪರೀತ್ಯೇನ ಯಾನ್ಯೇವ ರೇತಾಂಸಿ ದಶಮಾಸ್ಯಾನಿ ದಶಸು ಮಾಸೇಷು ಧೃತಾನಿ ಚ ಭೂತ್ವಾ ಪಶ್ಚಾಜ್ಜಾ-ಯಂತೇ ಯಾನಿ ಚ ಸಂವತ್ಸರೇ ಧೃತಾನಿ ತೈಃ ಸರ್ವೈಃ ಪುತ್ರಾದಿಶರೀರಮನುಭವಂತಿ । ತಸ್ಮಾ-ದ್ಗುಣಸದ್ಭಾವಾತ್ಸಂವತ್ಸರಸತ್ರ ಏವ ತಸ್ಮಿನ್ವಿಷುವತ್ಯಹ್ನಿ ಯಥೋಕ್ತಂ ಶಸ್ತ್ರಂ ಶಂಸೇತ್ ॥

ಹಿಂದೆ ಹೇಳಿದಂತೆ ಸಂಕ್ರಾಂತಿ ದಿನಗಳಲ್ಲಿ ಶಸ್ತ್ರಮಂತ್ರಾದಿಗಳನ್ನು ಪಠಿಸದೆ ವಿಷುವದ್ದಿನದಲ್ಲಿ ಮಾತ್ರ ಶಸ್ತ್ರಮಂತ್ರಗಳನ್ನು ಪಠಿಸಿದರೆ ಹತ್ತು ತಿಂಗಳುಗಳ ಕಾಲ ಸ್ತ್ರೀಯೋನಿಯಲ್ಲಿ ಧರಿಸಿದ ರೇತಸ್ಸು ಪುತ್ರಾದಿರೂಪದಿಂದ ಹೊರಬರುವಂತೆ ಸಂವತ್ಸರಸತ್ರದ ವಿಷುವದ್ದಿನದಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳನ್ನು ಆ ದಿನವೇ ಪಠಿಸಬೇಕು.

**ಸಂವತ್ಸರೋ ಹ್ಯೇತದಹರಾಪ್ನೋತಿ ಸಂವತ್ಸರಂ ಹ್ಯೇತದಹರಾಪ್ನುವಂ-ತ್ಯೇಷ ಹ ವೈ ಸಂವತ್ಸರೇಣ ಪಾಪ್ಮಾನಮುಪಹತ ಏಷ ವಿಷುವತಾಽ ಜ್ಗೇಭ್ಯೋ ಹೈವ ಮಾಸ್ಯೈಃ ಪಾಪ್ಮಾನಮುಪಹತೇ ಶೀರ್ಷ್ಣೋ ವಿಷು-ವತಾ ॥ ಅಥ ಸಂವತ್ಸರೇಣ ಪಾಪ್ಮಾನಂ ಹತೇಽಪ ವಿಷುವತಾ ಯ ಏವಂ ವೇದ ॥**

ಪುನರಪಿ ಪ್ರಕಾರಾಂತರೇಣ ಪ್ರಶಂಸತಿ—ಯೋಽಯಂ ಸಂವತ್ಸರಃ ಸತ್ರರೂಪಃ ಕರ್ಮ-ವಿಶೇಷೋ ಯಚ್ಚೈತದ್ವಿಷುವದಾಖ್ಯಮಹರುಭಯೋಃ ಪರಸ್ಪರಂ ಸಂಪ್ರಾಪ್ತಿರಸ್ತಿ । ತತ್ರ ಸಂವತ್ಸರಃ ಕರ್ತಾ ಸನ್ನಹರಾಪ್ನೋತಿ । ಅಹಶ್ಚ ಕರ್ತೃ ಭೂತ್ವಾ ಸಂವತ್ಸರಮಾಪ್ನೋತಿ । ವ್ಯತ್ಯ-ಯೇನಾತ್ರ ಬಹುವಚನಂ । ತಯೋಃ ಪರಸ್ಪರಮವಿನಾಭಾವೇ ಸತ್ಯೇಷ ಯಜಮಾನಃ ಸಂವತ್ಸ-ರೇಣ ಪಾಪ್ಮಾನಮಪಹತೇ ವಿನಾಶಯತಿ । ತಥೈವೈಷ ಯಜಮಾನೋ ವಿಷುವತಾ ಸಂವತ್ಸರ ಮಧ್ಯಗತೇನಾಹ್ನಾ ಪಾಪ್ಮಾನಂ ವಿನಾಶಯತಿ । ತದ್ವಿವಿಚ್ಯತೇ । ಸಂವತ್ಸರಾವಯವೈರ್ಮಾಸೈ-ರ್ಹಸ್ತಪಾದಾದ್ಯಂಗೇಭ್ಯಃ ಸಕಾಶಾತ್ಪಾಪ್ಮಾನಂ ನಾಶಯತಿ । ವಿಷುವತಾ ಮುಖ್ಯೇನಾಹ್ನಾ-ಶೀರ್ಷ್ಣಃ ಶಿರಸಃ ಸಕಾಶಾತ್ಪಾಪ್ಮಾನಂ ನಾಶಯತಿ ॥ ವೇದನಂ ಪ್ರಶಂಸತಿ ॥

ಸತ್ರರೂಪವಾದ ಸಂವತ್ಸರಕ್ಕೂ ವಿಷುವದ್ದಿನಕ್ಕೂ ಪರಸ್ಪರ ಸಂಬಂಧವಿರುವುದು. ಸಂವತ್ಸರಕಾಲವೂ ಸತ್ರಯಾಗ ಮಾಡುವ ಯಜಮಾನನು ವಿಷುವದ್ದಿನವೆಂಬ ಅಹಸ್ಸನ್ನು ಹೊಂದುವನು. ಆ ವಿಷುವದ್ದಿನವು ಸಂವತ್ಸರದ ಕೊನೆಯವರೆಗೂ ವ್ಯಾಪಿಸಿರುವುದು. ಆದ್ದರಿಂದ ಎಂದರೆ ಸಂವತ್ಸರಕ್ಕೂ ವಿಷುವದ್ದಿನಕ್ಕೂ ಪರಸ್ಪರ ವ್ಯತ್ಯಾಸವಿಲ್ಲದ್ದರಿಂದ ಸಂವತ್ಸರಕಾಲದವರೆಗೂ ಸತ್ರಯಾಗವನ್ನು ಮಾಡಿ ಪೂರೈಸುವ ಯಜಮಾನನು ತನ್ನ ಪಾಪವನ್ನೆಲ್ಲಾ ಕಳೆದುಕೊಳ್ಳುವನು. ಹಾಗೆಯೇ ಸಂವತ್ಸರ ಮಧ್ಯದಲ್ಲಿರುವ ವಿಷುವದ್ದಿನದಿಂದಲೂ ತನ್ನ ಪಾಪವನ್ನು ಕಳೆದುಕೊಳ್ಳುವನು. ಅದರಂತೆ ಸತ್ರದ ಶಿರಸ್ಸೆಂದು ಹೇಳಲ್ಪಡುವ ವಿಷುವದ್ದಿನದ ಆಚರಣೆಯಿಂದ ಯಜಮಾನನು ತನ್ನ ಸಮಸ್ತ ಪಾಪಗಳನ್ನೂ ಕಳೆದುಕೊಂಡು ಶುದ್ಧನಾಗುವನು. ಯಾವ ಪುರುಷನು ಈ ವಿಷಯವನ್ನು ಚೆನ್ನಾಗಿ ತಿಳಿದಿರುವನೋ ಅವನು ತನ್ನ ಸಮಸ್ತ ಪಾಪಗಳನ್ನೂ ಕಳೆದುಕೊಂಡು ಶುದ್ಧನಾಗುವನು.

**ವೈಶ್ವಕರ್ಮಣಮೃಷಭಂ ಸವನೀಯಸ್ಯೋಪಾಲಂಭ್ಯಮಾಲಭೇರನ್ದ್ವಿ-ರೂಪಮುಭಯತ ಏತಂ ಮಹಾವ್ರತೀಯೇಽಹನಿ ॥**

ಅಥ ಪ್ರಶಸ್ತಸ್ಯ ವಿಷುವತಃ ಪ್ರಸಂಗಾದ್ಬುದ್ಧಿಸ್ಥೇ ಪ್ರಶಸ್ತೇ ಮಹಾವ್ರತಾಖ್ಯೇಽಹನಿ ಕಂಚಿತ್ಪಶುಂ ವಿಧತ್ತೇ—ವೈಶ್ವಕರ್ಮಣಂ ವಿಶ್ವಕರ್ಮದೇವತಾಕಮೃಷಭಂ ಪುಂಗವಂ ಸವನೀ-ಯಸ್ಯ ಚೋದಕಪ್ರಾಪ್ತಸ್ಯ ಪಶೋಃ ಸ್ಥಾನ ಉಪಾಲಂಭನೀಯಂ ದ್ವಿರೂಪಂ ವರ್ಣದ್ವಯೋ-ಪೇತಮುಭಯತ ಏತಂ ದಕ್ಷಿಣೋತ್ತರಪಾರ್ಶ್ವಯೋರ್ವಿಲಕ್ಷಣವರ್ಣೇನ ಲಾಂಛಿತಂ ಪಶುಂ ಮಹಾವ್ರತಪ್ರಯೋಗಯುಕ್ತೇ ಸತ್ರಸ್ಯೋಪಾಂತ್ಯೇಽಹನ್ಯಾಲಭೇರನ್ ॥

ಸತ್ರಯಾಗದ ಕೊನೆಯ ಹಿಂದಿನ ದಿನವಾದ ಮಹಾವ್ರತವೆಂಬ ದಿನದಲ್ಲಿ ವಿಶ್ವಕರ್ಮದೇವತಾಕವಾದ (ವಿಶ್ವಕರ್ಮ ದೇವತೆಗೆ ಸಮರ್ಪಿಸಬೇಕಾದ) ಒಂದು ವೃಷಭ (ಹೋರಿ) ಯನ್ನು ಸವನಕಾಲದಲ್ಲಿ ಅರ್ಪಿಸಬೇಕು (ಹೋಮಮಾಡಬೇಕು) ಆ ಪಶುವು (ಹೋರಿಯು) ಎರಡು ಪಾರ್ಶ್ವಗಳಲ್ಲಿಯೂ ಎರಡು ಬೇರೆಬೇರೆ ವರ್ಣವುಳ್ಳದ್ದಾಗಿರಬೇಕು.

**ಇಂದ್ರೋ ವೈ ವೃತ್ರಂ ಹತ್ವಾ ವಿಶ್ವಕರ್ಮಾಽಭವತ್ಪ್ರಜಾಪತಿಃ ಪ್ರಜಾಃ ಸೃಷ್ಟ್ವಾ ವಿಶ್ವಕರ್ಮಾಽಭವತ್ಸಂವತ್ಸರೋ ವಿಶ್ವಕರ್ಮೇಂದ್ರಮೇವ ತದಾತ್ಮಾನಂ ಪ್ರಜಾಪತಿಂ ಸಂವತ್ಸರಂ ವಿಶ್ವಕರ್ಮಾಣಮಾಪ್ನು-**

ವಂತೀಂದ್ರ ಏವ ತದಾತ್ಮನಿ ಪ್ರಜಾಪತೌ ಸಂವತ್ಸರೇ ವಿಶ್ವಕರ್ಮ-ಣ್ಯಂತತಃ ಪ್ರತಿತಿಷ್ಠಂತಿ ಪ್ರತಿತಿಷ್ಠತಿ ಯ ಏವಂ ವೇದ ಯ ಏವಂ ವೇದ ॥

ತತ್ರ ದೇವತಾಂ ಪ್ರಶಂಸತಿ--ಇಂದ್ರೋ ವೃತ್ರವಧಾದೂರ್ಧ್ವಂ ವಿಘ್ನಕರ್ತುರಭಾವಾ-ದ್ವಿಶ್ವಕರ್ಮಾ ಜಗತ್ಪಾಲನರೂಪಕರ್ಮಯುಕ್ತೋಽಭವತ್ । ಪ್ರಜಾಪತಿಶ್ಚ ಪ್ರಜಾಃ ಸೃಷ್ಟ್ವೋ-ತ್ಪಾದ್ಯ ಕೃತ್ಸ್ನಂ ಜಗತ್ಸೃಷ್ಟಿರೂಪಕರ್ಮಯುಕ್ತೋಽಭವತ್ । ಸ ಉಭಯವಿಧೋ ವಿಶ್ವಕರ್ಮಾ ದೇವಃ ಸಂವತ್ಸರಾತ್ಮಕಃ । ಅತಃ ಸಂವತ್ಸರಸತ್ರೇ ದ್ವಿರೂಪಪಶ್ವಾಲಂಭನೇನ ತದಾತ್ಮಾನಂ ಸಂವತ್ಸರಾತ್ಮಾನಮಿಂದ್ರಮೇವ ತಥಾ ಸಂವತ್ಸರರೂಪಂ ಪ್ರಜಾಪತಿಮಿತ್ಯುಭಯವಿಧಂ ವಿಶ್ವಕ-ರ್ಮಾಣಂ ಯಜಮಾನಾಃ ಪ್ರಾಪ್ನುವಂತಿ । ಪ್ರಾಪ್ಯ ಚ ತದಾತ್ಮನಿ ಸಂವತ್ಸರಾತ್ಮನೀಂದ್ರೇ ಸಂವ-ತ್ಸರರೂಪೇ ಪ್ರಜಾಪತೌ ದ್ವಿವಿಧೋಽಪಿ ವಿಶ್ವಕರ್ಮಣ್ಯಂತತಃ ಸಂವತ್ಸರಸತ್ರಸ್ಯಾಂತೇ ಪ್ರತಿತಿ-ಷ್ಠಂತ್ಯೇವ । ಯಃ ಪುನರೇವಂ ವೇದ ಸೋಽಪಿ ಪ್ರತಿತಿಷ್ಠತಿ । ಅಭ್ಯಾಸೋಽಧ್ಯಾಯಪರಿಸಮಾ-ಪ್ತ್ಯರ್ಥಃ ॥

ಇಂದ್ರನು ವೃತ್ರಾಸುರನನ್ನು ಸಂಹಾರಮಾಡಿದನಂತರ ವಿಶ್ವಕರ್ಮನೆಂದು ಪ್ರಸಿದ್ಧನಾದನು. ವೃತ್ರವಧಾನಂತರ ಇಂದ್ರನಿಗೆ ಪ್ರಬಲವಾದ ಶತ್ರುಗಳು ಯಾರೂ ಇಲ್ಲದಂತಾಯಿತು. ಮತ್ತು ಇಂದ್ರನು ಜಗದ್ರಕ್ಷಕನಾದನು. (ಇಲ್ಲಿ ವಿಶ್ವಕರ್ಮ ಶಬ್ದಕ್ಕೆ ಸಮಸ್ತಕಾರ್ಯಗಳನ್ನೂ ಮಾಡುವವನು ಎಂದರ್ಥವು) ಪ್ರಜಾಪತಿಯು ಸಮಸ್ತ ಪ್ರಜೆಗಳನ್ನು ಸೃಷ್ಟಿಮಾಡಿ ವಿಶ್ವಕರ್ಮನೆಂಬ ಹೆಸರಿನಿಂದಲೇ ಪ್ರಸಿದ್ಧನಾದನು. ಈ ಇಬ್ಬರು ದೇವತೆಗಳಿಗೂ ವಿಶ್ವಕರ್ಮ ಎಂಬ ಹೆಸರು ಸಲ್ಲುವುದು. ಈರೀತಿ ಎರಡು ವಿಧದಿಂದಲೂ ವಿಶ್ವಕರ್ಮನೆಂಬ ದೇವನು ಪ್ರಸಿದ್ಧನಾದನು. ಈ ವಿಶ್ವಕರ್ಮನೆಂಬ ದೇವನು ಸಂವತ್ಸರಾತ್ಮಕನು (ಕಾಲ ಸ್ವರೂಪನು). ಈ ವಿಶ್ವಕರ್ಮನು ಸಂವತ್ಸರಯಾಗಕ್ಕೆ ಅಧಿದೇವತೆಯಾದ ಇಂದ್ರನ ಸ್ವರೂಪನೂ, ಸಂವತ್ಸರಾತ್ಮಕವಾದ ಕಾಲಕ್ಕೆ ಅಧಿದೇವತೆಯಾದ ಪ್ರಜಾಪ್ರತಿಸ್ವರೂಪನೂ ಆಗಿರುವುದರಿಂದ ಈ ವಿಶ್ವಕರ್ಮನು ಉಭಯದೇವತಾಸ್ವರೂಪನು. ಆದ್ದರಿಂದಲೇ ಈ ವಿಶ್ವಕರ್ಮನಿಗೆ ಎರಡುವಿಧ ವರ್ಣಯುಕ್ತವಾದ (ವೃಷಭ) ಪಶುವನ್ನು ಅರ್ಪಿಸುವುದು ಯುಕ್ತವಾಗಿಯೇ ಇದೆ. ಆದ್ದರಿಂದ ವಿಶ್ವಕರ್ಮದೇವತೆಗೆ ಉಭಯವಿಧವರ್ಣವುಳ್ಳ ಪಶುವನ್ನು ಅರ್ಪಿಸುವ ಯಜಮಾನನು ತನ್ನನ್ನೂ ಸಂವತ್ಸರ ಸತ್ರಪ್ರತಿಪಾದ್ಯನಾದ ಇಂದ್ರನನ್ನೂ ಸಂವತ್ಸರ (ಕಾಲ) ರೂಪನಾದ ಪ್ರಜಾಪತಿಯನ್ನೂ ಇವರನ್ನೆಲ್ಲಾ ಪ್ರತಿನಿಧಿಸುವ ವಿಶ್ವಕರ್ಮದೇವತೆಯನ್ನೂ ಸತ್ರದ ಕೊನೆಯಲ್ಲಿ ಪಡೆದು ಸುಖಿಸುವನು (ಎಂದರೆ ಈ ದೇವತೆಗಳ ಅನುಗ್ರಹವನ್ನು ಪಡೆಯುವನು). ಯಾವ ಪುರುಷನು ಈ ವಿಷಯ ವನ್ನೆಲ್ಲಾ ತಿಳಿದಿರುವನೋ ಆ ಪುರುಷನೂ ಸಹ ವಿಶ್ವಕರ್ಮದೇವತೆಯ ಅನುಗ್ರಹವನ್ನು ಪಡೆಯುವನು.



*English Translation*

**(To what the Vishuvan day is like. Whether or not the Shastras of the Vishuvan day are to be repeated on other days during the Sattra also. On the merit of performing the Vishuvan day. On this day on ox is to be immolated for Visvakarma.)**

The Vishuvan day is like a man. Its first half is like the right half of a man and its latter half like the left half. This is the reason that it (the performance of the six months' ceremonies following the Vishuvan day) is called the "latter" half.

The Vishuvan day is just as the head of a man whose both sides are equal. Man is, as it were, composed of fragments (bidala). That is the reason that even here a suture is found in the midst of the head.

They say, He ought to repeat the recitation for this day only on the Vishuvan day. Among the Shastras this one is Vishuvan. This Shastra (called), Vishuven is the equator (vishuvan). By doing so the sacrificers become vishuvat (i.e. standing like the head above both sides of the body and attain to leadership.

But this opinion is not to be attended to. He ought to repeat it also during the year (the Sattra is lasting). For this Shastra is seed. By doing so, the sacrificers keep their seed (are not deprived of it) during the year.

For the seeds produced before the lapse of a year which have required for their growth five or six months, go off have no productive power. The sacrificers will not enjoy them (the fruits which were expected to come from them). But they enjoy the fruits of those seeds which are produced after ten months or a year.

Therefore the Hotar ought to repeat the Shastra for the Vishuvan day during the year also. For this day's Shastra is the year. Those who observe this day's performance during the year obtain the enjoyment of the year.

The sacrificer destroys, by means of tne Vishuvan day's performance during the year all consequences of guilt (papman).

By means of the performance of the Sattra ceremonies in the months during which the Sattra is lasting he removes the consequences of guilt from his limbs (the months being the limbs of the year). By means of the Vishuvan days' performance during the year he removes the consequences of guilt from the head, (the Vishuvan being the head). He who has such a knowledge removes by means of the Vishuvan day's performance the consequences of guilt.

They ought on the Mahavrata day to kill for the libations an ox for Visvakarman (Tvashtar) in addition to the regular animal, a goat, required for that occasion; it should be of two colours on both sides.

Indra after having slain Vritra, became Visvakarman. Prajapati after having produced the creatures, became also Visvakarman. The year is Visvakarman. Thus by sacrificing such a bullock, they reach Indra, their own Self, Prajapati, the year, Visvakarman (i.e. they remain united with them, they will not die) and thus they obtain a footing in Indra, in their own Self (their prototype), in Prajapati, in the year, in Visvakarman. He who has such a knowledge obtains a firm footing.

**ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ಅಷ್ಟಾದಶಾಧ್ಯಾಯಃ ಸಮಾಪ್ತಃ**

**ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದಲ್ಲಿ ಹದಿನೆಂಟನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು ಸಮಾಪ್ತವಾದುದು.**

**ಹದಿನೆಂಟನೆಯ ಅಧ್ಯಾಯವು ಮುಗಿದುದು.**



# ಅಥೈತರೇಯಬ್ರಾಹ್ಮಣೇ ಏಕೋನವಿಂಶಾಧ್ಯಾಯೇ ಪ್ರಥಮಃ ಖಂಡಃ

## ಹತ್ತೊಂಬತ್ತನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

[ ದ್ವಾದಶಾಹವೆಂಬ ಯಾಗವು. ಈ ಯಾಗದ ಪೂರ್ವೇತಿಹಾಸ ಮತ್ತು ಅದನ್ನು ಆಚರಿಸುವ ವಿಧಿನಿಯಮಗಳು. ಪ್ರಾರಂಭದಲ್ಲಿ ಮಾಡಬೇಕಾದ ಕರ್ಮಾದಿಗಳು.]

[ ದ್ವಾದಶಾಹವೆಂಬ ಯಾಗದ ಪೂರ್ವೇತಿಹಾಸ ಅದರ ಗಾಯತ್ರಿಸ್ವರೂಪವು.]

ಅಭಿಪ್ಲವಃ ಸ್ಯಾತ್ಷಡಹೋಽಥಮಾಸ-
ಸ್ತ್ರ್ಯಹೋಽಥ ಪೂರ್ವಃ ಸ್ವರಸಾಮನಾಮಾ ॥
ಗವಾಂ ಚ ಶಸ್ತ್ರಸ್ಯ ತತಃ ಪ್ರಶಂಸಾ
ಮಧ್ಯೇ ದಿವಾಕೀರ್ತ್ಯಮಹಶ್ಚ ತಸ್ಯ ॥ ೧ ॥

ಪ್ರಜಾಪತಿರಕಾಮಯತ ಪ್ರಜಾಯೇಯ ಭೂಯಾನ್ಸ್ಯಾಮಿತಿ ಸ ತಪೋಽತಪ್ಯತ ಸ ತಪಸ್ತಪ್ತ್ವೇಮಂ ದ್ವಾದಶಾಹಮಪಶ್ಯದಾತ್ಮನ ಏವಾಂಗೇಷು ಚ ಪ್ರಾಣೇಷು ಚ ತಮಾತ್ಮಾನ ಏವಾಂಗೇಭ್ಯಶ್ಚ ಪ್ರಾಣೇಭ್ಯಶ್ಚ ದ್ವಾದಶಧಾ ನಿರಮಿಮೀತ ತಮಾಹರತ್ತೇನಾಯಜತ ತತೋ ವೈ ಸೋಽಭವದಾತ್ಮನಾ ಪ್ರ ಪ್ರಜಯಾ ಪಶುಭಿರಜಾಯತ ಭವತ್ಯಾತ್ಮನಾ ಪ್ರ ಪ್ರಜಯಾ ಪಶುಭಿರ್ಜಾಯತೇ ಯ ಏವಂ ವೇದ ॥

ಅಥ ದ್ವಾದಶಾಹೋ ವಕ್ತವ್ಯಃ । ತದರ್ಥಮಾಖ್ಯಾಯಿಕಾಮಾಹ— ಪ್ರಜಾಪತಿಃ ಪ್ರಜೋತ್ಪಾದನೇನಾತಿಪ್ರಭೂತಃ ಸ್ಯಾಮಿತಿ ಕಾಮಯಿತ್ವಾ ತತ್ಸಾಧನಂ ನಿರ್ಣೇತುಂ ಚಿತ್ತೈಕಾಗ್ರ್ಯಲಕ್ಷಣಂ ತಪಃ ಕೃತ್ವಾ ಸ್ವಾಭೀಷ್ಟಸಾಧನತ್ವೇನ ಸ್ವಕೀಯೇಷು ಹಸ್ತಪಾದಾದ್ಯಂಗೇಷು ಪ್ರಾಣಾದಿವಾಯುಷು ಚಾವಸ್ಥಿತಂ ದ್ವಾದಶಾಹಂ ದೃಷ್ಟ್ವಾ ತಂ ಸ್ವಾಂಗೇಭ್ಯಃ ಪ್ರಾಣೇಭ್ಯಶ್ಚ ನಿಃಸಾರ್ಯ ದ್ವಾದಶಧಾ ಕೃತ್ವಾ ನಿರ್ಮಿತವಾನ್ । ತತೋ ನಿರ್ಮಿತಮಾಹೃತ್ಯ ತೇನೇಷ್ಟ್ವಾ ಸ ಪ್ರಜಾಪತಿರಭವತ್ । ಭೂತಿಂ ಪ್ರಾಪ್ತವಾನ್ ಆತ್ಮನಾ ಸ್ವೇನೈವ ರೂಪೇಣ ಸರ್ವಾಧಿಕೋ ಭೂತ್ವಾ ಪ್ರಜಾಪಶುರೂಪೇಣ ಬಹುಲಂ ಪ್ರಜಾಯತ । ವೇದನಂ ಪ್ರಶಂಸತಿ—ಅನೇನಾರ್ಥ-

ನಾದೇನ ದ್ವಾದಶಾಹಯಾಗವಿಧಿರುನ್ನೇಯಃ । ತಥಾ ಚ ಶಾಖಾಂತರೇ ವಿಧಿಃ ಶ್ರೂಯತೇ— 'ಯಃ ಕಾಮಯೇತ ಪ್ರಜಾಯೇಯೇತಿ ಸ ದ್ವಾದಶರಾತ್ರೇಣ ಯಜೇತ ಪ್ರೈವ ಜಾಯತೇ' ಇತಿ ॥

ಈಗ ದ್ವಾದಶಾಹವೆಂಬ ಯಾಗವಿಧಾನವನ್ನು ತಿಳಿಸುವರು. ಅದಕ್ಕೆ ಪೀಠಿಕಾರೂಪವಾಗಿ ಒಂದು ಪೂರ್ವೇತಿಹಾಸವನ್ನು ಹೇಳುವರು. ಪೂರ್ವದಲ್ಲಿ ಪ್ರಜಾಪತಿಯು (ಪರಮೇಶ್ವರನು) ಪ್ರಜೆಗಳನ್ನು ಸೃಷ್ಟಿಮಾಡಿ ಬಹಳ ಪ್ರಭೂತನಾಗಬೇಕೆಂದು ಬಯಸಿ ಅದಕ್ಕೆ ಸಾಧನಭೂತವಾದ ಚಿತ್ತೈಕಾಗ್ರತೆಯಿಂದ ಕೂಡಿ ತಪಸ್ಸನ್ನು ಮಾಡಿದನು. ವೇದಾದಿಗಳಲ್ಲಿಯೂ ಉಪನಿಷತ್ತುಗಳಲ್ಲಿಯೂ ಪರಬ್ರಹ್ಮನು ತಪಸ್ಸನ್ನು ಮಾಡಿದನೆಂದರೆ ಚಿತ್ತೈಕಾಗ್ರತೆಯಿಂದ ಧ್ಯಾನಮಾಡಿದನು ಎಂದರ್ಥವು ಈರೀತಿ ತಪಸ್ಸನ್ನು ಮಾಡಿ ತನ್ನ ಹಸ್ತಪಾದಾದಿ ಅವಯವಗಳಲ್ಲಿಯೂ ಪ್ರಾಣಾದಿವಾಯುಗಳಲ್ಲಿಯೂ ನೆಲಸಿರುವ ದ್ವಾದಶಾಹವೆಂಬ ಯಜ್ಞಸ್ವರೂಪವನ್ನು ಕಂಡು ಅದನ್ನು ತನ್ನ ಅಂಗಗಳಿಂದ ಬೇರ್ಪಡಿಸಿ ತೆಗೆದು ಹನ್ನೆರಡು ಭಾಗಗಳನ್ನಾಗಿ ಮಾಡಿದನು. ಈರೀತಿ ಹನ್ನೆರಡು ಭಾಗಗಳನ್ನಾಗಿ ನಿರ್ಮಿಸಿದ ಯಜ್ಞವನ್ನು ಪ್ರಜಾಪತಿಯು ತಾನೇ ಅನುಷ್ಠಾನಮಾಡಿ ಸಕಲವಿಧವಾದ ಐಶ್ವರ್ಯಗಳನ್ನು ಪಡೆದನು. ಎಂದರೆ ಸರ್ವರಿಗೂ ಅಧಿಕನಾಗಿ ತನ್ನ ಸ್ವರೂಪವನ್ನೇ ಪ್ರಜೆಗಳಾಗಿಯೂ ಪಶುಗಳಾಗಿಯೂ ನಾನಾವಿಧರೂಪಗಳಿಂದ ಕೂಡಿರುವಂತೆ ನಿರ್ಮಿಸಿದನು (ಸೃಷ್ಟಿಮಾಡಿದನು). ಇದರಿಂದ ದ್ವಾದಶಾಹಯಾಗವಿಧಿಯನ್ನು (ಹನ್ನೆರಡು ದಿನಗಳವರೆಗೆ ಮಾಡುವ ಯಾಗವಿಧಿಯನ್ನು) ಹೇಳಿದಂತಾಯಿತು. ಈ ವಿಷಯವನ್ನು ಯಾವ ಪುರುಷನು ತಿಳಿದಿರುವನೋ ಆ ಪುರುಷನು ಪುತ್ರಪೌತ್ರಾದಿ ಪ್ರಜೆ (ಸಂತಾನ) ಗಳಿಂದಲೂ ಪಶುಸಂಪತ್ತಿನಿಂದಲೂ ಅಭಿವೃದ್ಧಿಯನ್ನು ಪಡೆಯುವನು. ಈ ವಿಷಯದಲ್ಲಿ—**ಯಃ ಕಾಮಯೇತ ಪ್ರಜಾಯೇಯೇತಿ ಸ ದ್ವಾದಶರಾತ್ರೇಣ ಯಜೇತ ಪ್ರೈವ ಜಾಯತೇ** ಎಂದು ಶಾಖಾಂತರದಲ್ಲಿ ಹೇಳಿರುವುದು.

**ಸೋಽಕಾಮಯತ ಕಥಂ ನು ಗಾಯತ್ರ್ಯಾ ಸರ್ವತೋ ದ್ವಾದಶಾಹಂ ಪರಿಭೂಯ ಸರ್ವಾನ್ಮೃದ್ಧೀನ್ಮೃಧ್ನುಯಾಮಿತಿ ತಂ ವೈ ತೇಜಸೈವ ಪುರಸ್ತಾತ್ಪರ್ಯಭವಚ್ಛಂದೋಭಿರ್ಮಧ್ಯತೋಽಕ್ಷರೈರುಪರಿಷ್ಟಾ-ದ್ಗಾಯತ್ರ್ಯಾ ಸರ್ವತೋ ದ್ವಾದಶಾಹಂ ಪರಿಭೂಯ ಸರ್ವಾನ್ಮೃ-ದ್ಧೀನಾರ್ಧ್ನೋತ್ ಸರ್ವಾನ್ಮೃದ್ಧೀನ್ಮೃಧ್ನೋತಿ ಯ ಏವಂ ವೇದ ॥**

ಸ ಪ್ರಜಾಪತಿಃ ಪುನರೇವಮಕಾಮಯತ । ಕಥಂ ನು ಕೇನ ಖಲು ಪ್ರಕಾರೇಣ ಗಾಯತ್ರ್ಯಾ ಸರ್ವತೋ ದ್ವಾದಶಾಹಂ ವ್ಯಾಪ್ಯ ಸರ್ವಾಂ ಭೋಗ್ಯವಸ್ತುಸಮೃದ್ಧಿಮಾಪ್ನುಯಾ-ಮಿತಿ ವಿಚಾರ್ಯ ಗಾಯತ್ರೀಂ ತ್ರೇಧಾ ವ್ಯಭಜತ । ಧ್ವನಿರೂಪಂ ತೇಜ ಏಕೋ ಭಾಗೋಽಕ್ಷರ-ಸಂಖ್ಯಯಾಽಭಿವ್ಯಜ್ಯಮಾನಂ ಛಂದೋ ದ್ವಿತೀಯೋ ಭಾಗೋಽಕ್ಷರಾಣಿ ತೃತೀಯೋ ಭಾಗಃ । ತೈಸ್ತ್ರಿಭಿರ್ಭಾಗೈರಾದಿಮಧ್ಯಾವಸಾನೇಷು ಸರ್ವತೋ ದ್ವಾದಶಾಹಂ ಗಾಯತ್ರ್ಯಾ ವ್ಯಾಪ್ಯ ಸಮೃದ್ಧಿಂ ಪ್ರಾಪ್ತವಾನ್ । ಛಂದೋಭಿರಿತಿ ಬಹುವಚನಂ ಪೂಜಾರ್ಥಂ ॥ ವೇದನಂ ಶಂಸತಿ—

ಪ್ರಜಾಪತಿಯು ಪುನಃ ಈರೀತಿ ಅಪೇಕ್ಷಿಸಿದನು— ಗಾಯತ್ರೀಮಂತ್ರದಿಂದ ಈ ದ್ವಾದಶಾಹವೆಂಬ ಯಾಗವನ್ನು ವ್ಯಾಪಿಸಿ ಯಾವ ಪ್ರಕಾರದಿಂದ ನಾನು ಸಮಸ್ತಭೋಗ್ಯವಸ್ತುಗಳನ್ನು ಪಡೆಯುವೆನು ಎಂದು ಆಲೋಚನೆಮಾಡಿ ಗಾಯತ್ರಿಯನ್ನು ಮೂರು ವಿಭಾಗಗಳನ್ನಾಗಿ ಮಾಡಿದನು. ಈ ಗಾಯತ್ರಿಯನ್ನು ಪಠಿಸುವಾಗ ಉಂಟಾಗುವ ಧ್ವನಿರೂಪವಾದ ಭಾಗವು

ತೇಜೋರೂಪವಾದುದು ಇದು ಮೊದಲನೆಯ ಭಾಗವು; ಒಂದೊಂದು ಪಾದದಲ್ಲಿ ಇಷ್ಟೇ ಅಕ್ಷರಗಳಿರಬೇಕೆಂದು ನಿಂಗಡಿಸಿರುವುದು ಎರಡನೆಯ ಭಾಗವು; ಅಕ್ಷರರೂಪಗಳಾಗಿರುವುದೇ ಮೂರನೆಯ ಭಾಗವು. ಈ ಮೂರು ವಿಧಗಳಾದ ವಿಭಾಗಗಳಿಂದ ದ್ವಾದಶಾಹ ವೆಂಬ ಯಾಗವನ್ನು ಗಾಯತ್ರಿಯಿಂದ ಸರ್ವರೀತಿಯಿಂದಲೂ ವ್ಯಾಪಿಸಿ ಸಮೃದ್ಧಿಯನ್ನು ಪಡೆದನು. ಹೇಗೆಂದರೆ ಪ್ರಜಾಪತಿಯು ಗಾಯತ್ರಿಯ ತೇಜಸ್ಸುಳ್ಳ ಮೊದಲನೇ ವಿಭಾಗದಿಂದ ದ್ವಾದಶಾಹವನ್ನು ವ್ಯಾಪಿಸಿದನು. ಎರಡನೇ ಅಥವಾ ಮಧ್ಯದ ವಿಭಾಗದಿಂದ ಗಾಯತ್ರಿಯ ಅಕ್ಷರ ಸಂಖ್ಯೆಯಿರುವ ಎರಡನೇ ವಿಭಾಗದಿಂದ ದ್ವಾದಶಾಹದ ಮಧ್ಯಭಾಗವನ್ನೂ, ಗಾಯತ್ರಿಯ ಮೂರನೇ ವಿಭಾಗದಿಂದ ದ್ವಾದಶಾಹದ ಕೊನೆಯ ಭಾಗವನ್ನು ಎಲ್ಲಾ ಕಡೆಯೂ ವ್ಯಾಪಿಸಿ ಸಮಸ್ತವಿಧವಾದ ಸಮೃದ್ಧಿಯನ್ನೂ ಪಡೆದನು. ಈ ವಿಷಯವನ್ನು ತಿಳಿದ ಪುರುಷನು ಸಮಸ್ತವಿಧವಾದ ಸಮೃದ್ಧಿಯನ್ನೂ ಪಡೆಯುವನು.

**ಯೋ ವೈ ಗಾಯತ್ರೀಂ ಪಕ್ಷಿಣೀಂ ಚಕ್ಷುಷ್ಮತೀಂ ಜ್ಯೋತಿಷ್ಮತೀಂ ಭಾಸ್ವತೀಂ ವೇದ ಗಾಯತ್ರ್ಯಾ ಪಕ್ಷಿಣ್ಯಾ ಚಕ್ಷುಷ್ಮತ್ಯಾ ಜ್ಯೋತಿಷ್ಮತ್ಯಾ ಭಾಸ್ವತ್ಯಾ ಸ್ವರ್ಗಂ ಲೋಕಮೇತ್ಯೇಷಾ ವೈ ಗಾಯತ್ರೀ ಪಕ್ಷಿಣೀ ಚಕ್ಷುಷ್ಮತೀ ಜ್ಯೋತಿಷ್ಮತೀ ಭಾಸ್ವತೀ ಯದ್ದ್ವಾದಶಾಹಸ್ತಸ್ಯ ಯಾವಭಿತೋಽತಿರಾತ್ರೌ ತೌ ಪಕ್ಷೌ ಯಾವಂತರಾಽಗ್ನಿಷ್ಟೋಮೌ ತೇ ಚಕ್ಷುಷೀ ಯೇಽಷ್ಟೌ ಮಧ್ಯ ಉಕ್ಥ್ಯಾಃ ಸ ಆತ್ಮಾ ॥**

ಅಥ ದ್ವಾದಶಾಹಸ್ಯಾಹಃಕ್ಲಪ್ತಿಮುಪಕಲ್ಪನಾಮುಖೇನ ದರ್ಶಯತಿ—ಆದಿಮಧ್ಯಾವಸಾನೇಷು ದ್ವಾದಶಾಹಸ್ಯ ಗಾಯತ್ರ್ಯಾ ವ್ಯಾಪ್ತತ್ವಾದಭೇದಮಭಿಪ್ರೇತ್ಯ ದ್ವಾದಶಾಹಮೇವ ಗಾಯತ್ರೀಶಬ್ದೇನ ವ್ಯವಹರತಿ । ಸಾ ಚ ಗಾಯತ್ರೀ ಪಕ್ಷದ್ವಯೋಪೇತಾ ಚಕ್ಷುರ್ದ್ವಯೋಪೇತಾ ಜ್ಯೋತಿಃ ಶಬ್ದೋಪಲಕ್ಷಿತಮಧ್ಯಶರೀರೋಪೇತಾ ತತ ಏವ ಸಾ ಭಾಸ್ವತೀ ಪ್ರಕಾಶವತೀ । ಅಹೀನಸತ್ರಾಣಾಂ ಸರ್ವೇಷಾಂ ಪ್ರಕೃತಿತ್ವೇನ ಭಾಸಕತ್ವಾದ್ಭಾಸ್ವತ್ವಂ । ಈದೃಶೀಂ ಗಾಯತ್ರೀಂ ಯೋ ವೇದ ಸ ತಾಮನುಷ್ಠಾಯ ಯಥೋಕ್ತಗುಣವತ್ತ್ವವಿಶಿಷ್ಟಯಾ ಗಾಯತ್ರ್ಯಾ ಸ್ವರ್ಗಂ ಲೋಕಂ ಪ್ರಾಪ್ನೋತಿ । ಗೂಢಾಭಿಪ್ರಾಯೇಣ ರೂಪಕಂ ಪರಿಕಲ್ಪ್ಯೈಷಾ ವಾ ಇತ್ಯಾದಿನಾ ಸ್ವಾಭಿಪ್ರಾಯಃ ಪ್ರಕಟೀಕ್ರಿಯತೇ । ದ್ವಾದಶಾಹ ಏವ ಯಥೋಕ್ತಗುಣವಿಶಿಷ್ಟಾ ಗಾಯತ್ರೀ ತಸ್ಯೇತ್ಯಾದಿನಾ ದ್ವಾದಶಾಹೇ ತೇ ಗುಣಾಃ ಪ್ರದರ್ಶ್ಯಂತೇ । ತಸ್ಯ ದ್ವಾದಶಾಹಸ್ಯಾದ್ಯಂತಾವಹರ್ವಿಶೇಷಾವತಿರಾತ್ರಸಂಸ್ಥೌ । ತಾವೇವ ಪಕ್ಷಸ್ಥಾನೀಯೌ ತಯೋರಂತರ್ಭಾವಿನೌ ದ್ವಿತೀಯೈಕಾದಶಾಹವಿಶೇಷಾವಗ್ನಿಷ್ಟೋಮಸಂಸ್ಥೌ । ತೌ ಚಕ್ಷುಃ ಸ್ವರೂಪೌ । ಯೇ ಚ ತೃತೀಯಮಾರಭ್ಯ ದಶಮಪರ್ಯಂತಾ ಅಷ್ಟಾವಹರ್ವಿಶೇಷಾ ಮಧ್ಯೇ ವರ್ತಂತೇ ತೇ ಸರ್ವೇಽಪ್ಯುಕ್ಥ್ಯಸಂಸ್ಥಾಃ । ಸೋಽಷ್ಟಾಹಸಮೂಹ ಆತ್ಮಾ ಮಧ್ಯಶರೀರಂ ॥

ದ್ವಾದಶಾಹದ ಸ್ವರೂಪವನ್ನು ತಿಳಿಸುವರು. ಈ ದ್ವಾದಶಾಹವು ಆದಿಮಧ್ಯಾವಸಾನಗಳಲ್ಲಿ ಎಂದರೆ ಮೊದಲು, ಮಧ್ಯ, ಕೊನೆಗಳಲ್ಲಿ ಗಾಯತ್ರಿಯಿಂದ ವ್ಯಾಪಿಸಲ್ಪಟ್ಟಿರುವುದು. ಎಂದರೆ ಈ ದ್ವಾದಶಾಹಕ್ಕೆ ಗಾಯತ್ರಿಯೆಂದೇ ವ್ಯವಹಾರವಿರುವುದು. ಈ ಗಾಯತ್ರಿಗೆ ಎರಡು ಪಕ್ಷಗಳೂ (ರೆಕ್ಕೆಗಳೂ) ಎರಡು ಕಣ್ಣುಗಳೂ, ಪ್ರಕಾಶಮಾನನಾದ ಮಧ್ಯಭಾಗದ ಶರೀರವೂ ಇರುವುದ.

(ಹಿಂದೆ ಗಾಯತ್ರೀಛಂದಸ್ಸು ಶ್ಯೇನಪಕ್ಷಿಯ ರೂಪದಿಂದ ಸ್ವರ್ಗಕ್ಕೆ ಹೋಗಿ ಸೋಮಲತೆಗಳನ್ನು ಭೂಮಿಗೆ ತಂದ ವಿಚಾರವು ಉಕ್ತವಾಗಿದೆ. ಅದನ್ನನುಸರಿಸಿ ಗಾಯತ್ರೀಛಂದಸ್ಸನ್ನು ಪಕ್ಷಿ ಎಂಬ ಸಾದೃಶ್ಯದಿಂದ ಇಲ್ಲಿ ವರ್ಣಿಸಿದೆ). ಆದ್ದರಿಂದ ಈ ಗಾಯತ್ರಿಯು ಪ್ರಕಾಶಮಾನವಾಗಿರುವುದು. ಅಹೀನಸತ್ರಗಳಲ್ಲಿ (ಇದಕ್ಕೆ ದ್ವಾದಶಾಹವೇ ಪ್ರಕೃತಿಯು) ಬೆಳಗುತ್ತಿರುವುದರಿಂದ ಭಾಸ್ವತೀ ಎನಿಸಿರುವುದು. ಇಂತಹ ಗಾಯತ್ರಿಯ ಸ್ವರೂಪವನ್ನು ಯಾವ ಪುರುಷನು ತಿಳಿದಿರುವನೋ ಎಂದರೆ ದ್ವಾದಶಾಹವನ್ನು ಅನುಷ್ಠಾನಮಾಡುವನೋ ಆ ಪುರುಷನು ಸ್ವರ್ಗಲೋಕವನ್ನು ಪಡೆದು ಸುಖಿಸುವನು.' ಇದರ ಗೂಢಾಭಿಪ್ರಾಯವೇನೆಂದರೆ—ಮೇಲೆ ಹೇಳಿದ ಗುಣಗಳಿಂದ ಕೂಡಿದ ಗಾಯತ್ರಿಯೇ ದ್ವಾದಶಾಹವು. ಹೇಗೆಂದರೆ—ಈ ದ್ವಾದಶಾಹವೆಂಬ ಯಾಗದಲ್ಲಿ ಮೊದಲು ಮತ್ತು ಕೊನೆಯ ದಿನಗಳು ಅತಿರಾತ್ರಸಂಸ್ಥೆಗಳು (ಯಾಗಗಳು) ಈ ಎರಡು ಯಾಗಗಳೂ ಈ ಗಾಯತ್ರಿಯ (ಶ್ಯೇನ ಪಕ್ಷಿಯ) ಎರಡು ರೆಕ್ಕೆಗಳು; ಈ ದ್ವಾದಶಾಹದ ಎರಡನೆಯ ಮತ್ತು ಹನ್ನೊಂದನೆಯ ದಿನಗಳು ಅಗ್ನಿಷ್ಟೋಮಸಂಸ್ಥೆಗಳು. ಇವು ಗಾಯತ್ರಿಯ ಎರಡು ಚಕ್ಷುಸ್ಸುಗಳು (ಕಣ್ಣುಗಳು); ಈ ದ್ವಾದಶಾಹದ ಮೂರನೆಯ ದಿನದಿಂದ ಹತ್ತನೆಯ ದಿನಗಳವರೆಗೆ ಆಗುವ ಎಂಟು ದಿನಗಳೂ ಉಕ್ಥ್ಯಸಂಸ್ಥೆಗಳು. ಈ ಮಧ್ಯಭಾಗದ ಉಕ್ಥ್ಯಸಂಸ್ಥೆಗಳು ಗಾಯತ್ರಿಯ ಮಧ್ಯಶರೀರವಾಗಿರುವುದು ಎಂದರೆ ಇದೇ ಗಾಯತ್ರಿಯ ಆತ್ಮವು ಎಂದಭಿಪ್ರಾಯವು.

**ಗಾಯತ್ರ್ಯಾ ಪಕ್ಷಿಣ್ಯಾ ಚಕ್ಷುಷ್ಮತ್ಯಾ ಜ್ಯೋತಿಷ್ಮತ್ಯಾ ಭಾಸ್ವತ್ಯಾ ಸ್ವರ್ಗಂ ಲೋಕಮೇತಿ ಯ ಏವಂ ವೇದ ॥**

**ವೇದನಂ ಶಂಸತಿ—ಯಥೋಕ್ತಾಹಃ ಕ್ಲೃಪ್ತಿರಾಶ್ವಲಾಯನಾಚಾರ್ಯೈರ್ದರ್ಶಿತಾ—'ಅಥ ಭರತದ್ವಾದಶಾಹ ಇಮುಮೇವೈಕಾಹಂ ಪೃಥಕ್ಸಂಸ್ಥಾಭಿರುಪೇಯುರತಿರಾತ್ರಮಗ್ರೇಽಥಾಗ್ನಿಷ್ಟೋಮಮಥಾಷ್ಟಾ ಉಕ್ಥ್ಯಾನಥಾಗ್ನಿಷ್ಟೋಮಮಥಾತಿರಾತ್ರಂ' ಇತಿ ॥**

ಗಾಯತ್ರೀಸ್ವರೂಪವಾದ ಈ ದ್ವಾದಶಾಹದ ಪಕ್ಷಗಳನ್ನೂ (ರೆಕ್ಕೆ) ಚಕ್ಷುಸ್ಸುಗಳನ್ನೂ (ಕಣ್ಣುಗಳು) ಪ್ರಕಾಶಮಾನವಾದ ಮಧ್ಯಭಾಗವನ್ನೂ (ಶರೀರ ಅಥವಾ ಆತ್ಮ) ಯಾವ ಪುರುಷನು ಚೆನ್ನಾಗಿ ತಿಳಿದುಕೊಂಡು ಈ ದ್ವಾದಶಾಹವನ್ನು ಅನುಷ್ಠಾನ ಮಾಡುವನೋ ಆ ಪುರುಷನು ಸ್ವಗಲೋಕವನ್ನು ಪಡೆಯುವರು. ಆಶ್ವಲಾಯನರು ಈ ವಿಷಯದಲ್ಲಿ ಹೀಗೆ ಹೇಳಿರುವರು—**ಅಥ ಭರತದ್ವಾದಶಾಹ ಇಮುಮೇವೈಕಾಹಂ ಪೃಥಕ್ಸಂಸ್ಥಾಭಿರುಪೇಯುರತಿರಾತ್ರಮಗ್ರೇಽಥಾಗ್ನಿಷ್ಟೋಮ-ಮಥಾಷ್ಟಾ ಉಕ್ಥ್ಯಾನಥಾಗ್ನಿಷ್ಟೋಮಥಾತಿರಾತ್ರಂ ॥**



**(The Dvadasaha sacrifice. Its origin, and general rules for its performance. The initiatory rites.)**

**(Origin of the Dvadasaha. Its Gayatri form.)**

Prajapati felt a desire to create and to multiply himself. He underwent in order to accomplish this end austerities. After having done so he perceived the Dvadasaha sacrifice (ceremonies to be) in his limbs and vital airs. He took it out of his limbs and vital airs and made it twelve-fold. He seized it and

sacrified with it. Thence he (Prajapati) was produced (i. e. that form of his which enters creatures, his material body.) Thus he was reproduced through himself in offspring and cattle. He who has such a knowledge is reproduced through himself in offspring and cattle.

Having the desire to obtain through the Gayatri throughout the Dvadasha everywhere the enjoyment of all things, he mediated how this might be achieved.

It was done in the following way. The Gayatri was at the beginning of the Dvadasha in the form of splendour, in the midst of it, in that of the metre, at its end in that of syllables. Having penetrated with the Gayatri the Dvadasaha everywhere, he obtained the enjoyment of everything.

He who knows the Gayatri as having wings, eyes, light and lustre goes by means of her being possessed of these things, to the celstial world.

The Dvadasaha (sacrifice) is the Gayatri with wings, eyes light and lustre. The two wings of the Dvadasaha are the two Atiratras which are at the beginning and end of it (lit. round abont). The two Agnishtomas (within the two Atiratras) are the two eyes. The eight Ukthya days between the Atiratra and Agnishtoma at the beginning, and the Agnishtoma and Atiratra at the end are the soul.

He who has such a knowledge goes to heaven by means of the wings, the eyes, the light, and lustre of the Gayatri.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ**
**ಐತರೇಯಬ್ರಾಹ್ಮಣಭಾಷ್ಯಸ್ಯ ಏಕೋನವಿಂಶಾಧ್ಯಾಯಸ್ಯ ಪ್ರಥಮಃ ಖಂಡಃ**

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹತ್ತೊಂಬತ್ತನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವಾದುದು.



# ಅಥ ಏಕೋನವಿಂಶಾಧ್ಯಾಯೇ ದ್ವಿತೀಯಃ ಖಂಡಃ

## ಹತ್ತೊಂಬತ್ತನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ ದ್ವಾದಶಾಹದ ನಾನಾ ವಿಭಾಗಗಳು ಮತ್ತು ಅವುಗಳ ಕಾಲಪರಿಮಾಣ; ಈ ಯಾಗದಲ್ಲಿ ಬೃಹತೀಛಂದಸ್ಸಿನ ಸ್ವರೂಪವು; ಬೃಹತೀಛಂದಸ್ಸಿನ ಸ್ವರೂಪವು.]



**ತ್ರಯಶ್ಚ ವಾ ಏತೇ ತ್ರ್ಯಹಾ ಆದಶಮಮಹರಾ ದ್ವಾವತಿರಾತ್ರೌ ಯದ್ದ್ವಾದಶಾಹಃ ॥**

**ಭರತದ್ವಾದಶಾಹಂ ವಿಧಾಯ ವ್ಯೂಢದ್ವಾದಶಾಹಂ ವಿಧತ್ತೇ ಯೋಽಯಂ ವ್ಯೂಢದ್ವಾದಶೋಽಸ್ತಿ ಸೋಽಯಮೇತಾದೃಶಃ । ತತ್ರಾದ್ಯಂತೌ ಯೌ ದ್ವಾವತಿರಾತ್ರೌ ಪ್ರಥಮದ್ವಾದಶೌ ಯಚ್ಚ ದಶಮಮಹಸ್ತತ್ಪರಿತ್ಯಜ್ಯಾವಶಿಷ್ಟೇಷ್ವಹಃಸು ನವಸಂಖ್ಯಾಕೇಷು ತ್ರಯಸ್ತ್ರ್ಯಹಾಃ ಕರ್ತವ್ಯಾಃ । ತ್ರಿರಾತ್ರಃ ಕಶ್ಚಿತ್ಕರ್ಮವಿಶೇಷಃ । ಸೋಽಯಂ ತ್ರಿವಾರಮಾವರ್ತನೀಯಃ । ಆದಶಮಮಿತ್ಯತ್ರ ಯೋಽಯಮಾಕಾರಃ ಸವರ್ಜನಾರ್ಥಃ । ನಿಪಾತಾನಾಮನೇಕಾರ್ಥತ್ವಾತ್ । ಯದ್ವಾ ಮರ್ಯಾದಾಯಾಮಯಮಾಙ್ ಭವಿಷ್ಯತಿ । ಆದ್ಯಂತಾವತಿರಾತ್ರೌ ದಶಮಮಹಶ್ಚ ಮರ್ಯಾದಾಂ ಕೃತ್ವಾಽವಶಿಷ್ಟೋ ನವರಾತ್ರಸ್ತ್ರಿರಾವೃತ್ತಸ್ತ್ರ್ಯಹಾತ್ಮಕಃ ಇತ್ಯರ್ಥಃ । ತತ್ರ ಚೋದಕೇನ ದೀಕ್ಷಾದಿಸಂಖ್ಯಾವಿಕಲ್ಪಃ ಪ್ರಾಪ್ತ ಏಕಾ ದೀಕ್ಷಾ ತಿಸ್ರೋ ದೀಕ್ಷಾ ಇತ್ಯಾದಿವಿಕಲ್ಪಸ್ಯ ಪ್ರಕೃತೌ ಶ್ರುತತ್ವಾತ್ ॥**

ಈ ದ್ವಾದಶಾಹವು (ಹನ್ನೆರಡು ದಿನಗಳವರೆಗೆ ಮಾಡುವ ಯಾಗವು) ಈರೀತಿ ಇರುವುದು. ಈ ಯಾಗದಲ್ಲಿ ಮೊದಲನೆಯ ದಿನ, ಹನ್ನೆರಡನೆಯ (ಕೊನೆಯ) ದಿನ ಮತ್ತು ಹತ್ತನೆಯ ದಿನ ಎಂಬ ಮೂರು ದಿನಗಳನ್ನು ಪ್ರತ್ಯೇಕಿಸಿದರೆ, ಒಂಭತ್ತು ದಿನಗಳು ಉಳಿಯುವವು. ಈ ಒಂಭತ್ತು ದಿನಗಳನ್ನು ಮೂರು ಮೂರು ದಿನಗಳಿಗೆ ಒಂದರಂತೆ ಮೂರು ವಿಭಾಗಗಳನ್ನಾಗಿ ಮಾಡಬೇಕು ಈ ವಿಭಾಗಕ್ಕೆ ತ್ರಿರಾತ್ರವೆಂದು ಹೆಸರು. ಈ ತ್ರಿರಾತ್ರದಲ್ಲಿ ಒಂದು ಕರ್ಮವಿಶೇಷವಿರುವುದು. ಇದನ್ನು ಮೂರಾವರ್ತಿ (ಮೂರು ತ್ರಿರಾತ್ರಗಳಲ್ಲಿ) ಮಾಡಬೇಕು. ಅಂತೂ ಮೂರು ದಿನಗಳಿಗೆ ಒಂದರಂತೆ ಈ ದ್ವಾದಶಾಹದಲ್ಲಿ ನಾಲ್ಕು ವಿಭಾಗಗಳಿದ್ದಂತಾಯಿತು. ಈ ಹನ್ನೆರಡು ದಿನಗಳಲ್ಲಿಯೂ ದೀಕ್ಷಾವಿಧಿಸಂಸ್ಕಾರವು (ಪ್ರತಿದಿನದಲ್ಲಿಯೂ) ನಡೆಯಬೇಕು. ಕೆಲವರು ಒಂದೊಂದು ವಿಭಾಗಕ್ಕೆ ಎಂದರೆ ಮೂರು ದಿನಗಳಿಗೆ ಒಂದಾವರ್ತಿಯಂತೆ ದೀಕ್ಷಾವಿಧಿಯನ್ನು ಅನುಸರಿಸಬೇಕೆಂದು ಹೇಳುವರು. ಮತ್ತೆ ಕೆಲವರು ಪ್ರತಿದಿನವೂ ಎಂದರೆ ಹನ್ನೆರಡು ದಿನಗಳೂ ದೀಕ್ಷಾವಿಧಿಯನ್ನನುಸರಿಸಬೇಕೆಂದು ಹೇಳುವರು.

**ದ್ವಾದಶಾಹಾನಿ ದೀಕ್ಷಿತೋ ಭವತಿ ಯಜ್ಞಿಯ ಏವ ತೈರ್ಭವತಿ ॥**

**ತಂ ವಿಕಲ್ಪಮುಪವದಿತುಂ ನಿಯಮವಿಶೇಷಂ ವಿಧತ್ತೇ—ದ್ವಾದಶಸು ದಿನೇಷು ದೀಕ್ಷಾ-ಖ್ಯನಿಯಮೇಽನುಷ್ಠಿತೇ ಸತಿ ತೈರ್ದ್ವಾದಶಭಿರ್ದೀಕ್ಷಾವಿಶೇಷೈರಯಂ ಪುರುಷೋ ಯಜ್ಞ-ಯೋಗ್ಯ ಏವ ಭವತಿ ॥**

ಈ ಹನ್ನೆರಡು ದಿನಗಳಲ್ಲಿ ಸಂಸ್ಕಾರದಿಂದ ದೀಕ್ಷೆಯನ್ನು ಪಡೆದವನು ತನ್ನ ಸಮಸ್ತ ಕಿಲ್ಬಿಷಗಳನ್ನೂ (ಪಾಪಗಳನ್ನೂ) ಕಳೆದುಕೊಂಡು ಯಜ್ಞಮಾಡಲು ಯೋಗ್ಯತೆಯನ್ನು ಪಡೆಯುವನು.

**ದ್ವಾದಶರಾತ್ರೀರುಪಸದ ಉಪೈತಿ ಶರೀರಮೇವ ತಾಭಿರ್ಧೂನುತೇ ॥**

**ಉಪಸತ್ಸು ವಿಶೇಷಂ ವಿಧತ್ತೇ—ಪ್ರಕೃತೌ ತಿಸ್ರ ಏವೋಪಸದಸ್ತಾಶ್ಚೈಕೈಕಾಂ ಚತುರ್ಷು ದಿನೇಷ್ವಾವರ್ತ್ಯ ದ್ವಾದಶಸು ದಿನೇಷೂಪಸದೋಽನುತಿಷ್ಠೇತ್ । ಸ ತಾಭಿರ್ದ್ವಾದಶಭಿರುಪಸದ್ಭಿಃ ಶರೀರಮೇವ ಧೂನುತೇ ಕಂಪಯತಿ ಶರೀರಗತಮಾಂಸಾದಿಧಾತುಶೋಷಣೇನ ಪಾಪಕ್ಷಯೋ ಭವತಿ । ತಥಾ ಚ ಸೂತ್ರಕಾರೇಣೋಪಸಂಹೃತಂ ಯದಾ ವೈ ದೀಕ್ಷಿತಃ ಕೃಶೋ ಭವತಿ, ಅಥ ಮೇಧ್ಯೋ ಭವತಿ ಇತಿ । ಉಪಸದ್ದಿನೇಷ್ವಸ್ಯ ಕ್ಷೀರಮಾತ್ರಾಹಾರತ್ವಾದ್ಭವತ್ಯೇವ ಕಾರ್ಶ್ಯಂ ತದಿದಂ ಸರ್ವಂ ಧೂನುತ ಇತ್ಯನೇನ ವಿವಕ್ಷಿತಂ ।**

ಈ ದೀಕ್ಷಾವಿಧಿಯಲ್ಲಿ ಆಚರಿಸಬೇಕಾದ ಉಪಸತ್ ಎಂಬ ಕರ್ಮದ ವಿಷಯವಾಗಿ ಒಂದು ವಿಶೇಷಸಂಗತಿಯನ್ನು ತಿಳಿಸುವರು. ಪ್ರಕೃತಿಯಾಗದಲ್ಲಿ ಮೂರು ಉಪಸತ್ತುಗಳನ್ನು ಮಾತ್ರ ಮಾಡಬೇಕಾಗಿರುವುದು. ಆದರೆ ಈ ದ್ವಾದಶಾಹದಲ್ಲಿ ಇಂತಹ ಮೂರು ದಿನಗಳಂತೆ ನಾಲ್ಕಾವರ್ತಿ ಎಂದರೆ ಹನ್ನೆರಡು ದಿನಗಳಲ್ಲಿ ಹನ್ನೆರಡಾವರ್ತಿ ಉಪಸತ್ಕರ್ಮವನ್ನು ಮಾಡಬೇಕು. ಈ ಉಪಸತ್ಕರ್ಮದಲ್ಲಿ (ಆ ದಿವಸಗಳಲ್ಲಿ) ಆಹಾರಕ್ಕಾಗಿ ಕೇವಲ ಹಾಲನ್ನು ಮಾತ್ರ ತೆಗೆದುಕೊಳ್ಳಬೇಕಾಗಿರುವುದರಿಂದ ಯಜಮಾನನ ಶರೀರವು ಬಹಳ ಕೃಶವಾಗುವುದು. ಶರೀರದ ಮಾಂಸ, ಧಾತು ಮೊದಲಾದವು ಶೋಷಿಸುವುದರಿಂದ ಶರೀರವು ದುರ್ಬಲವಾಗಿ ರಕ್ತ ಕಮ್ಮಿಯಾಗಿರುವುದರಿಂದ ಕಂಪಿಸುವುದು (ನಡುಗುವುದು) ಶರೀರಕಂಪನದಿಂದ ಶರೀರವು ಶುದ್ಧವಾಗುವುದು. ಈ ವಿಷಯದಲ್ಲಿ ಸೂತ್ರಕಾರರು ಹೀಗೆ ಹೇಳಿರುವರು—**ಯದಾ ವೈ ದೀಕ್ಷಿತಃ ಕೃಶೋ ಭವತಿ, ಅಥ ಮೇಧ್ಯೋ ಭವತಿ** । ಎಂದರೆ ಉಪಸತ್ಕರ್ಮಮಾಡುವಾಗ ಹನ್ನೆರಡು ದಿನಗಳವರೆಗೂ ಹಾಲನ್ನು ಮಾತ್ರ ಆಹಾರಾರ್ಥವಾಗಿ ತೆಗೆದುಕೊಳ್ಳುತ್ತಾ ಮತ್ತೇನನ್ನೂ ತೆಗೆದುಕೊಳ್ಳದೆ ಇರುವುದರಿಂದ ಯಜಮಾನನ ಶರೀರವು ಬಹಳ ಕೃಶವಾಗುವುದು. ಶರೀರವು ದುರ್ಬಲತೆಯಿಂದ ಕಂಪಿಸುವುದು. ಇದರಿಂದ ಯಜಮಾನನು ಯಜ್ಞಮಾಡಲು ಅರ್ಹತೆಯನ್ನು ಪಡೆಯುವನು ಎಂದರೆ ಶುದ್ಧನಾಗುವನು.

**ದ್ವಾದಶಾಹಂ ಪ್ರಸುತಃ ಭೂತ್ವಾ ಶರೀರಂ ಭೂತ್ವಾ ಶುದ್ಧಃ ಪೂತೋ ದೇವತಾ ಅಪ್ಯೇತಿ ಯ ಏವಂ ವೇದ ॥**

**ಅಥ ದ್ವಾದಶಸು ದಿನೇಷು ಸೋಮಾಭಿಷವಂ ವಿಧತ್ತೇ—ಭವೇದಿತಿ ಶೇಷಃ । ದೀಕ್ಷೋ-ಪಸದಾವಂಗಕರ್ಮಣೀ ಅಭಿಷವಸ್ತು ಪ್ರಧಾನಕರ್ಮ ॥ ವೇದನಂ ಪ್ರಶಂಸತಿ—ದ್ವಾದಶಾಹಂ ಪ್ರಸುತ ಇತಿ ಪದದ್ವಯಮನುವರ್ತನೀಯಂ । ವೇದಿತಾ ದ್ವಾದಶಸು ದಿನೇಷು ಸೋಮಾಭಿಷ-**

ವಯುಕ್ತೋ ಭೂತ್ವಾ ಪೂರ್ವೋಕ್ತಾಭಿರುಪಸದ್ಭಿಃ ಶರೀರಂ ಧೂತ್ವಾ ಶರೀರಗತಂ ಪಾಪಂ ಪರಿತ್ಯಜ್ಯಾತ ಏವ ಶುದ್ಧ ಇಹ ಲೋಕೇ ಭೂತ್ವಾ ಪರಲೋಕೇಽಪಿ ಪೂತಃ ಸರ್ವಾ ದೇವತಾಃ ಪ್ರಾಪ್ನೋತಿ । ಅಥವಾ ಶುದ್ಧ ಇತ್ಯಂತೋ ವಿಧಿವಾಕ್ಯಶೇಷಃ । ಪೂತ ಇತ್ಯಾದಿಕಾ ವೇದನಪ್ರಶಂಸಾ ದ್ರಷ್ಟವ್ಯಾ ॥

ದೀಕ್ಷಾ ವಿಧಿಯನ್ನು ಅನುಸರಿಸುತ್ತಿರುವಾಗಲೂ ಉಪಸತ್ಕರ್ಮವನ್ನು ಆಚರಿಸುತ್ತಿರುವಾಗಲೂ ಮುಖ್ಯವಾಗಿ ಸೋಮಾಭಿಷವನ್ನು ಪ್ರಧಾನಕರ್ಮವನ್ನಾಗಿ ಮಾಡಬೇಕು. ಈರೀತಿ ಹನ್ನೆರಡುದಿನಗಳವರೆಗೂ ಉಪಸತ್ಕರ್ಮವನ್ನು ಮಾಡುತ್ತಿದ್ದು ಶರೀರದ ಸಮಸ್ತ ಪಾಪಗಳನ್ನೂ ಕಳೆದುಕೊಂಡು ಶುದ್ಧನಾಗಿ ಪರಲೋಕದಲ್ಲಿಯೂ ಪವಿತ್ರನಾಗಿ ಸಮಸ್ತ ದೇವತೆಗಳ ಅನುಗ್ರಹವನ್ನು ಪಡೆಯುವನು.

ಷಟ್‌ತ್ರಿಂಶದಹೋ ವಾ ಏಷ ಯದ್ದ್ವಾದಶಾಹಃ ಷಟ್ತ್ರಿಂಶದಕ್ಷರಾ ವೈ ಬೃಹತೀ ಬೃಹತ್ಯಾ ವಾ ಏತದಯನಂ ಯದ್ದ್ವಾದಶಾಹೋ ಬೃಹತ್ಯಾ ವೈ ದೇವಾ ಇಮಾಂಲ್ಲೋಕಾನಾಶ್ನುವತ ತೇ ವೈ ದಶಭಿರೇವಾಕ್ಷರೈರಿಮಂ ಲೋಕಮಾಶ್ನುವತ ದಶಭಿರಂತರಿಕ್ಷಂ ದಶಭಿರ್ದಿವಂ ಚತುರ್ಭಿಶ್ಚತಸ್ರೋ ದಿಶೋ ದ್ವಾಭ್ಯಾಮೇವಾಸ್ಮಿಂಲ್ಲೋಕೇ ಪ್ರತ್ಯತಿಷ್ಠನ್ ಪ್ರತಿತಿಷ್ಠತಿ ಯ ಏವಂ ವೇದ ॥

ಯಥೋಕ್ತದೀಕ್ಷೋಪಸತ್ಸುತ್ಯಾದಿನಸಂಖ್ಯಾಃ ಪ್ರಶಂಸತಿ—ಯೋ ದ್ವಾದಶಾಹೋಽಸ್ತ್ಯೇಷ ಪೂರ್ವೋಕ್ತರೀತ್ಯಾ ಷಟ್‌ತ್ರಿಂಶದ್ದಿನಾತ್ಮಕಃ । ಬೃಹತೀಛಂದಶ್ಚ ಷಟ್‌ತ್ರಿಂಶದಕ್ಷರಂ ತಸ್ಮಾದ್ಯೋ ದ್ವಾದಶಾಹೋಽಸ್ತ್ಯೇತದ್‌ಬೃಹತ್ಯಾ ಅಯನಂ ಸ್ಥಾನಮಿತ್ಯರ್ಥಃ । ದೇವಾಶ್ಚ ಬೃಹತ್ಯಾ ಸರ್ವಾ ಲೋಕಾನಾಶ್ನುವನ್ (ತ) ಪ್ರಾಪ್ನುವನ್ । ದಶಭಿರ್ದಶಭಿರಕ್ಷರೈಃ ಪ್ರತ್ಯೇಕಂ ಲೋಕತ್ರಯಪ್ರಾಪ್ತಿಃ । ಚತುರ್ಭಿರಕ್ಷರೈರ್ದಿಕ್ ಚತುಷ್ಟಯಪ್ರಾಪ್ತಿಃ । ದ್ವಾಭ್ಯಾಮಕ್ಷರಾಭ್ಯಾಮಸ್ಮಿನ್ ಲೋಕೇ ಪ್ರತಿಷ್ಠಾಂ ಪ್ರಾಪ್ತಾಃ । ತಥಾವಿಧಬೃಹತೀ ಸಾಮ್ಯಾದ್ದಿನಗತಾ ಷಟ್‌ತ್ರಿಂಶತ್ಸಂಖ್ಯಾ ಪ್ರಶಸ್ತಾ ॥ ವೇದನಂ ಪ್ರಶಂಸತಿ ॥

ಈ ದ್ವಾದಶಾಹವೆಂಬ ಯಾಗವು ಹಿಂದೆ ಹೇಳಿದಂತೆ (ದೀಕ್ಷಾವಿಧಿ, ಉಪಸತ್ ಸೇರಿ) ಮೂವತ್ತಾರು ದಿನಗಳಿಂದ ಕೂಡಿರುವುದು. ಬೃಹತೀಛಂದಸ್ಸಿನಲ್ಲಿಯೂ ಮೂವತ್ತಾರು ಅಕ್ಷರಗಳಿರುವವು ಆದ್ದರಿಂದ ದ್ವಾದಶಾಹಕ್ಕೂ ಬೃಹತೀಛಂದಸ್ಸಿಗೂ ಸಾಮ್ಯವಿರುವುದು. ಎಂದರೆ ದ್ವಾದಶಾಹವು ಬೃಹತೀಛಂದಸ್ಸಿನ ಸ್ಥಾನವೆಂದು ಹೇಳಲ್ಪಡುವುದು. ಈ ಬೃಹತೀಛಂದಸ್ಸಿನಿಂದಲೇ ದೇವತೆಗಳು ಈ ಲೋಕಗಳೆಲ್ಲವನ್ನೂ ಪಡೆದರು. ಹೇಗೆಂದರೆ—ಅವರು ಬೃಹತೀಛಂದಸ್ಸಿನ ಹತ್ತು ಅಕ್ಷರಗಳಿಂದ ಈ (ಭೂ) ಲೋಕವನ್ನೂ, ಹತ್ತು ಅಕ್ಷರಗಳಿಂದ ಅಂತರಿಕ್ಷ ಲೋಕವನ್ನೂ, ಹತ್ತು ಅಕ್ಷರಗಳಿಂದ ಸ್ವರ್ಗಲೋಕವನ್ನೂ, ನಾಲ್ಕು ಅಕ್ಷರಗಳಿಂದ ನಾಲ್ಕು ದಿಕ್ಕುಗಳನ್ನೂ, ಎರಡು ಅಕ್ಷರಗಳಿಂದ (೧೦+೧೦+೧೦+೪+೨=೩೬ ಅಕ್ಷರಗಳು) ಸರ್ವರಲ್ಲಿಯೂ ಗಣ್ಯತೆಯನ್ನೂ ಪಡೆದರು. ಆದ್ದರಿಂದ ಬೃಹತೀಛಂದಸ್ಸಿನ ಮೂವತ್ತಾರು ಅಕ್ಷರಗಳನ್ನೂ ಇಲ್ಲಿ ಪ್ರಶಂಸೆಮಾಡಲಾಗಿದೆ. ಈ ವಿಷಯವನ್ನು ತಿಳಿದಿರುವ ಪುರುಷನು ಸಮಸ್ತ ಜನರಲ್ಲಿಯೂ ಗಣ್ಯತೆ (ಪ್ರಾಧಾನ್ಯ) ಯನ್ನು ಪಡೆಯುತ್ತಾನೆ.

**ತದಾಹುರ್ಯದನ್ಯಾನಿ ಛಂದಾಂಸಿ ವರ್ಷೀಯಾಂಸಿ ಭೂಯೋಕ್ಷರತ-ರಾಣ್ಯಥ ಕಸ್ಮಾದೇತಾಂ ಬೃಹತೀತ್ಯಾಚಕ್ಷತ ಇತಿ ॥**

ಅತ್ರ ಕಿಂಚಿಚ್ಚೋದ್ಯಮುದ್ಭಾವಯತಿ— ಯಸ್ಮಾತ್ಕಾರಣಾದ್ ಬೃಹತ್ಯಾ ಅನ್ಯಾನ್ಯುತ್ತ-ರಾಣಿ ಪಂಕ್ತಿತ್ರಿಷ್ಟುಬ್‌ಜಗತೀಛಂದಾಂಸ್ಯುತ್ತರೋತ್ತರಂ ಚತುರಕ್ಷರಾಧಿಕಾನ್ಯತೋ ವರ್ಷೀ-ಯಾಂಸಿ । ತಸ್ಯೈವ ವ್ಯಾಖ್ಯಾನಂ ಭೂಯೋಕ್ಷರತರಾಣೀತಿ । ಅಥೈವಂ ಸತಿ ಪಂಕ್ತ್ಯಾದೀನಿ ಚ್ಛಂದಾಂಸ್ಯುಪೇಕ್ಷ್ಯ ಕಸ್ಮಾತ್ಕಾರಣಾದೇತಾಂ ಷಟ್‌ತ್ರಿಂಶದಕ್ಷರಮಾತ್ರಯುಕ್ತಾಂ ವೈದಿಕಾ ಬೃಹತೀತ್ಯಾಚಕ್ಷತ ಇತಿ ಚೋದ್ಯಂ ॥

ಇಲ್ಲಿ ಒಂದು ವಿಶೇಷ ಸಂಗತಿಯನ್ನು ತಿಳಿಸುವರು. ಬೃಹತೀಛಂದಸ್ಸಿನಲ್ಲಿ ಮೂವತ್ತಾರು ಅಕ್ಷರಗಳಿರುವವು. ಪಂಕ್ತಿ, ತ್ರಿಷ್ಟುಪ್, ಜಗತೀ ಛಂದಸ್ಸುಗಳಲ್ಲಿ ಬೃಹತೀಛಂದಸ್ಸಿಗಿಂತ ನಾಲ್ಕು ನಾಲ್ಕು ಅಕ್ಷರಗಳು ಹೆಚ್ಚಾಗಿರುವವು. ಈ ಅಧಿಕಸಂಖ್ಯೆಯ ಅಕ್ಷರಗಳುಳ್ಳ ಛಂದಸ್ಸುಗಳನ್ನು ಬಿಟ್ಟು ಈ ಬೃಹತೀಛಂದಸ್ಸಿಗೆ (ದೊಡ್ಡದು) ಮಾತ್ರ ಹೇಗೆ ಪ್ರಾಧಾನ್ಯತೆಯುಂಟಾಯಿತು? ಬೃಹತೀ ಎಂದರೆ ದೊಡ್ಡದು, ಶ್ರೇಷ್ಠವಾದದ್ದು ಎಂದು ಅರ್ಥವು. ಈ ಛಂದಸ್ಸಿನಲ್ಲಿ ಮೂವತ್ತಾರು ಅಕ್ಷರಗಳಿರುವವು. ಇದಕ್ಕಿಂತ ಹೆಚ್ಚು ಅಕ್ಷರಗಳಿರುವ ಅನೇಕ ಛಂದಸ್ಸುಗಳಿದ್ದರೂ ಅವೆಲ್ಲವನ್ನೂ ಬಿಟ್ಟು ಮೂವತ್ತಾರು ಅಕ್ಷರ ಮಾತ್ರವಿರುವ ಈ ಬೃಹತೀ ಛಂದಸ್ಸಿಗೆ ಏಕೆ ಪ್ರಾಶಸ್ತ್ಯವುಂಟಾಯಿತು? ಎಂಬುದೇ ಪ್ರಶ್ನೆಯು.

**ಏತಯಾ ಹಿ ದೇವಾ ಇಮಾಂಲ್ಲೋಕಾನಾಶ್ನುವತ ತೇ ವೈ ದಶಭಿರೇ-ವಾಕ್ಷರೈರಿಮಂ ಲೋಕಮಾಶ್ನುವತ ದಶಭಿರಂತರಿಕ್ಷಂ ದಶಭಿರ್ದಿವಂ ಚತುರ್ಭಿಶ್ಚತಸ್ರೋ ದಿಶೋ ದ್ವಾಭ್ಯಾಮೇವಾಸ್ಮಿಂಲೋಕೇ ಪ್ರತ್ಯ-ತಿಷ್ಠಂಸ್ತಸ್ಮಾದೇತಾಂ ಬೃಹತೀತ್ಯಾಚಕ್ಷತೇ ಅಶ್ನುತೇ ಯದ್ಯತ್ಕಾ-ಮಯತೇ ಯ ಏವಂ ವೇದ ॥**

ಪೂರ್ವೋಕ್ತಮೇವಾರ್ಥವಾದಮುಪಜೀವ್ಯ ಪರಿಹಾರಮಾಹ— ಅಕ್ಷರಸಂಖ್ಯಾನ್ಯೂ-ನತ್ವೇಪಿ ಲೋಕತ್ರಯಪ್ರಾಪ್ತಿಹೇತುತ್ವಾತ್ ಪ್ರೌಢಿತ್ವಮಭಿಪ್ರೇತ್ಯ ಬೃಹತೀತ್ಯಭಿಧಾನಂ ॥ ಉಕ್ತಾರ್ಥವೇದನಂ ಪ್ರಶಂಸತಿ—

ಮೇಲಿನ ಪ್ರಶ್ನೆಗೆ ಉತ್ತರವನ್ನು ಹೇಳುವರು. ದೇವತೆಗಳು ಈ ಬೃಹತೀಛಂದಸ್ಸಿನಲ್ಲಿರುವ ಮೂವತ್ತಾರು ಅಕ್ಷರಗಳಲ್ಲಿ ಹತ್ತು ಅಕ್ಷರಗಳಿಂದ ಈ ಪೃಥಿವೀಲೋಕವನ್ನೂ ಮತ್ತೆ ಹತ್ತು ಅಕ್ಷರಗಳಿಂದ ಅಂತರಿಕ್ಷಲೋಕವನ್ನೂ ಪುನಃ ಹತ್ತು ಅಕ್ಷರಗಳಿಂದ ಸ್ವರ್ಗಲೋಕವನ್ನೂ ಇನ್ನೂ ನಾಲ್ಕಕ್ಷರಗಳಿಂದ ನಾಲ್ಕು ದಿಕ್ಕುಗಳನ್ನೂ ಉಳಿದ ಎರಡಕ್ಷರಗಳಿಂದ ಈ ಲೋಕದಲ್ಲಿ ಪ್ರಾಧಾನ್ಯತೆಯನ್ನೂ ಪಡೆದರು. ಈ ಕಾರಣದಿಂದ ಬೃಹತೀಛಂದಸ್ಸಿಗೆ ಪ್ರಾಧಾನ್ಯತೆಯುಂಟಾಯಿತು. ಈ ವಿಷಯಗಳೆಲ್ಲವನ್ನೂ ಯಾವ ಪುರುಷನು ತಿಳಿದಿರುವನೋ ಅವನು ತಾನು ಅಪೇಕ್ಷಿಸುವ ಇಷ್ಟಾರ್ಥಗಳೆಲ್ಲವನ್ನೂ ಪಡೆಯುವನು.



*English Translation*

**(On the different parts, and the duration of the Dvadasaha sacrifice. On the Brihati nature of this sacrifice. The nature of the Brihati).**

The Dvadasaha consists of three Tryahas (a sacrificial performance lasting for three days) together with the "tenth day" and the two Atiratras. After having undergone the Diksha ceremony (the imitation) during twelve days, one becomes fit for performing this sacrifice. During twelve nights he 'undergoes the Upasads (fasting). By means of them he shakes off all guilt from his body.

He who has such a knowledge becomes purified and clean, and enters the deities after having during (these) twelve days been born anew and shaken off (all guilt) from his body.

The Dvadasaha consists on the whole of thirty-six days. The Brihati has thirty-six syllables. The Dvadasaha is the sphere for the Brihati (in which she is moving). By means of the Brihati the gods obtained all these worlds; for by ten syllables they reached this world; for by ten syllables they reached this world (the earth), by (other) ten they reached the air, by other ten the sky, by four they reached the four directions, and by two they gained a firm footing in this world.

He who has such a knowledge secures a firm footing for himself.

About this they (the theologians) ask, How is it, that this particular metre of thirty-six syllables) is called Brihati, i.e. the great one, there being other metres which are stronger, and exceed the Brihati in number of syllables? The answer is - It is called so on account of the gods having reached by means of it all these worlds, by ten syllables, this world (the earth) &c. He who has such a knowledged obtains anything he might desire.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಏಕೋನವಿಂಶಾಧ್ಯಾಯಸ್ಯ ದ್ವಿತೀಯಃಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹತ್ತೊಂಬತ್ತನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವಾದುದು.



# ಅಥ ಏಕೋನವಿಂಶಾಧ್ಯಾಯೇ ತೃತೀಯಃ ಖಂಡಃ

## ಹತ್ತೊಂಬತ್ತನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು

[ ಪ್ರಜಾಪತಿಯು ಈ ದ್ವಾದಶಾಹವನ್ನು ನಿಯಮಿಸಿ ರೂಢಿಗೆ ತಂದನು. ಈ ದ್ವಾದಶಾಹದ ಸ್ವರೂಪವು. ಯಾರು ಈ ದ್ವಾದಶಾಹವನ್ನು ಮಾಡಲು ಅರ್ಹರು ಎಂಬ ವಿಷಯ ಇತ್ಯಾದಿ ]



**ಪ್ರಜಾಪತಿಯಜ್ಞೋ ವಾ ಏಷ ಯದ್ದ್ವಾದಶಾಹಃ ಪ್ರಜಾಪತಿರ್ವಾ ಏತೇನಾಗ್ರೇಽಯಜತ ದ್ವಾದಶಾಹೇನ ಸೋಽಬ್ರವೀದೃತೂಂಶ್ಚ ಮಾಸಾಂಶ್ಚ ಯಾಜಯತ ಮಾ ದ್ವಾದಶಾಹೇನೇತಿ ತಂ ದೀಕ್ಷಯಿತ್ವಾಽನಪಕ್ರಮಂ ಗಮಯಿತ್ವಾಽಬ್ರುವನ್ದೇಹಿ ನು ನೋಽಥ ತ್ವಾ ಯಾಜಯಿಷ್ಯಾಮ ಇತಿ ತೇಭ್ಯ ಇಷಮೂರ್ಜಂ ಪ್ರಾಯಚ್ಛತ್ಸೈಷೋರ್ಗೃತುಷು ಚ ಮಾಸೇಷು ಚ ನಿಹಿತಾ ದದತಂ ವೈ ತೇ ತಮಯಾಜಯಂಸ್ತಸ್ಮಾದ್ದದದ್ಯಾಜ್ಯಃ ಪ್ರತಿಗೃಹ್ಣಂತೋ ವೈ ತೇ ತಮಯಾಜಯಂಸ್ತಸ್ಮಾತ್ಪ್ರತಿಗೃಹ್ಣತಾ ಯಾಜ್ಯಂ ಉಭಯೇ ರಾಧ್ನುವಂತಿ ಯ ಏವಂ ವಿದ್ವಾಂಸೋ ಯಜಂತೇ ಚ ಯಾಜಯಂತಿ ಚ ॥**

ಅಸ್ಮಿನ್ಖಂಡೇ ಕರ್ಮಣಿ ಯಜನಯಾಜನಯೋರಧಿಕಾರಿವಿಶೇಷೌ ದರ್ಶಯತಿ— ಯೋ ದ್ವಾದಶಾಹಃ ಸ ಪ್ರಜಾಪತೇರ್ಯಜ್ಞಃ । ಕಥಮಿತಿ ತದುಚ್ಯತೇ । ಪ್ರಜಾಪತಿರೇವಾಗ್ರೇ ಸರ್ವೇಭ್ಯಃ ಪೂರ್ವಮೇತೇನ ದ್ವಾದಶಾಹೇನಾಯಜತ ತಸ್ಮಾದಯಂ ಪ್ರಜಾಪತಿಯಜ್ಞ ಇತಿ । ತದ್ಯಜನಪ್ರಕಾರ ಉಚ್ಯತೇ । ಸ ಪ್ರಜಾಪತಿರ್ವಸಂತಾದ್ಯೃತುದೇವಾಂಶ್ಚೈತ್ರಾದಿಮಾಸದೇವಾಂಶ್ಚಾಬ್ರವೀತ್ । ಹೇ ದೇವಾ ಯೂಯಮೃತ್ವಿಜೋ ಭೂತ್ವಾ ಮಾಂ ದ್ವಾದಶಾಹಕ್ರತುನಾ ಯಾಜಯತೇತಿ । ತೇ ಚ ಮಾಸರ್ತುದೇವಾ ಋತ್ವಿಜೋ ಭೂತ್ವಾ ತಂ ಪ್ರಜಾಪತಿಂ ದೀಕ್ಷಯಿತ್ವಾ ತತ್ರಾಧ್ವಾನಮನಪಕ್ರಮಂ ನಿರ್ಗಮನರಹಿತಂ ಗಮಯಿತ್ವಾಽಬ್ರುವನ್ । ನ ಹಿ ಯಜ್ಞಂ ಸಂಕಲ್ಪ್ಯ ದೀಕ್ಷಾಂ ಕೃತ್ವಾ ತದನುಷ್ಠಾನಮಂತರೇಣ ದೇವಯಜನದೇಶಾನ್ನಿರ್ಗಂತುಂ ಶಕ್ಯತೇ । ಹೇ ಪ್ರಜಾಪತೇ ನು ಕ್ಷಿಪ್ರಮೇವ ನೋಽಸ್ಮಾಕಂ ದೇಹಿ ಅಪೇಕ್ಷಿತಂ ಪ್ರಯಚ್ಛ । ಅಥಾನಂತರಂ ತ್ವಾಂ ಯಾಜಯಿಷ್ಯಾಮ ಇತ್ಯೃತುಭಿರ್ಮಾಸೈಶ್ಚೋಕ್ತಃ ಪ್ರಜಾಪತಿಸ್ತೇಭ್ಯ ಋತುಭ್ಯೋ

**ಮಾಸೇಭ್ಯ ಇಷಮನ್ನಮೂರ್ಜಂ ಕ್ಷೀರಾದಿರಸಂ ಪ್ರಾಯಚ್ಛತ್ । ಸೈಷೋರ್ಗೃತುರೂಪಾ ಮಾಸರೂಪಾ, ಋತುಷು ಚ ಮಾಸೇಷು ಚೇದಾನೀಮಪಿ ನಿಹಿತಾ । ಅತಶ್ಚ ಸ್ವಕಾಲೋಚಿತಪ್ರಕಾರೇಣ ಋತುಷು ಮಾಸೇಷು ಚ ಪ್ರವರ್ತಮಾನೇಷು ಗೋಕ್ಷೀರಾದಿಬಾಹುಲ್ಯಂ ಭವತಿ । ತತೋಽನ್ನಪಾನೇ ದದತಂ ತಂ ಪ್ರಜಾಪತಿಂ ತ ಋತವಶ್ಚ ಮಾಸಾಶ್ಚಾಯಾಜಯನ್ । ತಸ್ಮಾದ್ದದತ್ಪುರುಷೋ ಯಾಜ್ಯೋ ಯಷ್ಟುಂ ಯೋಗ್ಯಃ । ನ ಹಿ ದಾನಹೀನಸ್ಯಾಧಿಕಾರೋಽಸ್ತಿ । ತಥಾ ತೇ ಮಾಸಾಶ್ಚರ್ತವಶ್ಚ ಪ್ರತಿಗೃಹ್ಣಂತೋ ವೈ ಪ್ರಜಾಪತಿದತ್ತೇ ಅನ್ನಪಾನೇ ಸ್ವೀಕುರ್ವಂತಃ ಸಂತಃ ಪ್ರಜಾಪತಿಮಯಾಜಯನ್ । ತಸ್ಮಾದಿದಾನೀಮಪ್ಯೃತ್ವಿಜಾ ದಕ್ಷಿಣಾಂ ಪ್ರತಿಗೃಹ್ಣತಾ ಯಾಜ್ಯಂ ಯಜನಂ ಕರ್ತವ್ಯಂ । ಯಜಮಾನಾನಾಮೃತ್ವಿಜಾಂ ಚ ವೇದನಂ ಪ್ರಶಂಸತಿ—**

ಈ ಭಾಗದಲ್ಲಿ ಯಜ್ಞಮಾಡುವವನ ಮತ್ತು ಯಜ್ಞ ಮಾಡಿಸುವವನ ಇವರಿಬ್ಬರಿಗೂ ಇರುವ ಅಧಿಕಾರಗಳನ್ನು (ಅರ್ಹತೆಯನ್ನು) ಇಲ್ಲಿ ತಿಳಿಸುವರು—ದ್ವಾದಶಾಹವೆಂಬುದು ಪ್ರಜಾಪತಿಯ ಯಜ್ಞವು. ಏಕೆಂದರೆ ಪ್ರಜಾಪತಿಯು ಎಲ್ಲರಿಗಿಂತ ಮೊದಲು ಈ ಯಜ್ಞವನ್ನು ಹನ್ನೆರಡು ದಿನಗಳವರೆಗೆ ಮಾಡಿದ್ದರಿಂದ ಈ ದ್ವಾದಶಾಹಕ್ಕೆ ಪ್ರಜಾಪತಿಯ ಯಜ್ಞವೆಂದೇ ಹೆಸರು ಪ್ರಸಿದ್ಧಿಯಾಯಿತು. ಇದನ್ನು ಮಾಡುವ ಪ್ರಕಾರವು ಈರೀತಿ ಇರುವುದು—ಪ್ರಜಾಪತಿಯು ಒಂದು ಸಮಯದಲ್ಲಿ (ಸಂವತ್ಸರದಲ್ಲಿರುವ) ವಸಂತಾದಿ ಋತುಗಳ ಅಭಿಮಾನಿದೇವತೆಗಳನ್ನೂ ಚೈತ್ರಾದಿದ್ವಾದಶಮಾಸಾಭಿಮಾನಿ ದೇವತೆಗಳನ್ನೂ ಉದ್ದೇಶಿಸಿ—ಎಲೈ ದೇವತೆಗಳಿರಾ ನೀವೆಲ್ಲರೂ ಋತ್ವಿಕ್ಕುಗಳಾಗಿ ನಾನು ಮಾಡಬೇಕೆಂದಿರುವ ಈ ದ್ವಾದಶಾಹವೆಂಬ ಯಜ್ಞದಲ್ಲಿ ಋತ್ವಿಜರಾಗಿ ನನಗೆ ಯಜ್ಞವನ್ನು ಮಾಡಿಸಬೇಕು ಎಂದು ಹೇಳಿದನು. ಆಗ ಮಾಸ ಮತ್ತು ಋತುಗಳ ಅಭಿಮಾನಿದೇವತೆಗಳು ಪ್ರಜಾಪತಿಯ ಮಾತನ್ನು ಕೇಳಿ ಹಾಗೆಯೇ ಆಗಲೆಂದೊಪ್ಪಿ ಪ್ರಜಾಪತಿಗೆ ಇಂತು ಹೇಳಿದರು. ಎಲೈ ಪ್ರಜಾಪತಿಯೇ ಕೇಳು. ನಿನ್ನ ಮಾತಿನಂತೆ ನಾವು ನಿನಗೆ ದ್ವಾದಶಾಹವೆಂಬ ಯಜ್ಞವನ್ನು ಮಾಡಿಸುವೆವು. ಆದರೆ, ಲೋಕದಲ್ಲಿ ಯಜ್ಞಮಾಡುತ್ತೇನೆಂದು ಸಂಕಲ್ಪವನ್ನು ಮಾಡಿದನಂತರ ಕ್ರಮಪ್ರಕಾರವಾಗಿ ದೀಕ್ಷೆಯನ್ನು ಕೈಗೊಳ್ಳಬೇಕು. ದೀಕ್ಷೆಯನ್ನು ಕೈಗೊಂಡಮೇಲೆ ಯಜಮಾನನೂ ಋತ್ವಿಕ್ಕುಗಳೂ ಯಜ್ಞಮುಗಿಸುವವರೆಗೂ ದೇವಯಜನ ಪ್ರದೇಶದಿಂದ (ಯಜ್ಞಭೂಮಿಯಿಂದ) ಹೊರಕ್ಕೆ ಹೋಗಕೂಡದು ಎಂಬ ನಿಯಮವಿರುವುದು. ಆದ್ದರಿಂದ ಆ ದೇವಯಜನಕಾಲದಲ್ಲಿ ನಮ್ಮ ಕರ್ತವ್ಯನಿರ್ವಹಣೆಗಾಗಿ ನಮಗೆ ಬೇಕಾದ ವರಗಳನ್ನು ನೀನು ಕೊಡಬೇಕು. ಎಂದರೆ ಋತುಗಳಲ್ಲಿಯೂ ಆಯಾಮಾಸಗಳಲ್ಲಿಯೂ ಅನ್ನ (ಆಹಾರ) ವನ್ನೂ ಕ್ಷೀರಾದಿ ರಸವನ್ನೂ ಸಕಾಲದಲ್ಲಿ ಒದಗುವಂತೆ ವರವನ್ನು ಕೊಡಬೇಕು ಹಾಗೆ ಮಾಡಿದರೆ ನಾವು ನಿನಗೆ ಯಜ್ಞವನ್ನು ಮಾಡಿಸುವೆವು ಎಂದರು. ಪ್ರಜಾಪತಿಯು ಹಾಗೆಯೇ ಆಗಲೆಂದನು. ಅದರಂತೆ ಋತುಗಳಲ್ಲಿಯೂ, ಮಾಸಗಳಲ್ಲಿಯೂ ಆಯಾ ಕಾಲೋಚಿತವಾದ ಆಹಾರ ಧಾನ್ಯಾದಿಗಳು, ಗೋವುಗಳಲ್ಲಿ ಕ್ಷೀರಬಾಹುಳ್ಯವೂ ಒದಗುವಂತೆ ನಿಯಮಿಸಿದನು. ಈಗಲೂ ಹಾಗೆಯೇ ನಡೆದುಬರುತ್ತಿರುವುದು. ಈರೀತಿ ಅನ್ನಪಾನಗಳನ್ನು ಒದಗುವಂತೆ ಮಾಡಿದ ಪ್ರಜಾಪತಿಗೆ ಋತುಮಾಸಾಭಿಮಾನಿದೇವತೆಗಳು ಯಜ್ಞವನ್ನು ಮಾಡಿಸಿದರು. ಆದ್ದರಿಂದ ಯಜ್ಞಕಾಲದಲ್ಲಿ ದಾನಾದಿಗಳನ್ನು ಮಾಡುವ ಪುರುಷನು ಯಜ್ಞಮಾಡಲು ಅರ್ಹನಾಗುವನು. ದಾನಹೀನನಾದವನಿಗೆ ಯಜ್ಞಮಾಡುವ ಅಧಿಕಾರವಿರುವುದಿಲ್ಲ. ಈರೀತಿಯಂತೆ ಪ್ರಜಾಪತಿಯು ಕೊಟ್ಟ ಅನ್ನಪಾನಗಳನ್ನು ದೇವತೆಗಳು ಸ್ವೀಕರಿಸಿ ಪ್ರಜಾಪತಿಗೆ ಯಜ್ಞವನ್ನು ಮಾಡಿಸಿದರು. ಅದರಂತೆ ಈಗಲೂ ಋತ್ವಿಜರು ಎಂದರೆ ಯಜ್ಞವನ್ನು ಮಾಡಿಸುವ ಪುರೋಹಿತರು ಯಜಮಾನನಿಂದ ದಕ್ಷಿಣೆಯನ್ನು ಸ್ವೀಕರಿಸಿ ಯಜ್ಞವನ್ನು ಮಾಡಿಸುವುದು ಕರ್ತವ್ಯವೆಂದು ಪ್ರಸಿದ್ಧಿಯಾಯಿತು. ಆದ್ದರಿಂದ ವಿದ್ವಾಂಸರಾದ ಯಜ್ಞಮಾಡುವ ಯಾವ ಯಜಮಾನರೂ ಯಜ್ಞಮಾಡಿಸುವ ಋತ್ವಿಜರೂ ಈ ವಿಷಯವನ್ನು ತಿಳಿದು ಅದರಂತೆ ಆಚರಿಸುವರೋ ಅವರು ತಮ್ಮ ಅಭೀಷ್ಟಗಳನ್ನು (ಅನ್ನಪಾನಗಳನ್ನು) ಪಡೆಯುವರು.

ತೇ ವಾ ಇಮ ಋತುವಶ್ಚ ಮಾಸಾಶ್ಚ ಗುರವ ಇವಾಮನ್ಯಂತ ದ್ವಾದ-
ಶಾಹೇ ಪ್ರತಿಗೃಹ್ಯ ತೇಽಬ್ರುವನ್ಪ್ರಜಾಪತಿಂ ಯಾಜಯ ನೋ
ದ್ವಾದಶಾಹೇನೇತಿ ಸ ತಥೇತ್ಯಬ್ರವೀತ್ತೇ ವೈ ದೀಕ್ಷಧ್ವಮಿತಿ ತೇ
ಪೂರ್ವಪಕ್ಷಾಃ ಪೂರ್ವೇಽದೀಕ್ಷಂತ ತೇ ಪಾಪ್ಮಾನಮಪಾಹತ
ತಸ್ಮಾತ್ತೇ ದಿವೇವ ದಿವೇವ ಹ್ಯಪಹತಪಾಪ್ಮಾನೋಽಪರಪಕ್ಷಾ
ಅಪರೇಽದೀಕ್ಷಂತ ತೇ ನತರಾಂ ಪಾಪ್ಮಾನಮಪಾಹತ ತಸ್ಮಾತ್ತೇ
ತಮ ಇವ ತಮ ಇವ ಹ್ಯನಪಹತಪಾಪ್ಮಾನಸ್ತಸ್ಮಾದೇವಂ ವಿದ್ವಾ-
ನ್ದೀಕ್ಷಮಾಣೇಷು ಪೂರ್ವಃ ಪೂರ್ವ ಏವ ದಿದೀಕ್ಷಿಷೇತ ॥ ಅಪ
ಪಾಪ್ಮಾನಂ ಹತೇ ಯ ಏವಂ ವೇದ ॥

ದ್ವಾದಶಾಹೇ ದೀಕ್ಷಾಂ ಪ್ರಾಪ್ನುವತ್ಸು ಯಜಮಾನೇಷು ದೀಕ್ಷಾಪ್ರಾಪ್ತಿಂ ಪ್ರಶಂಸತಿ– ಯೇ ಪೂರ್ವಮೃತ್ವಿಕ್ತ್ವೇನ ವ್ಯವಸ್ಥಿತಾ ಋತವಶ್ಚ ಮಾಸಾಶ್ಚ ತೇ ವಾ ಇಮೇ ದ್ವಿವಿಧಾ ಅಪಿ ದ್ವಾದಶಾಹೇ ದಕ್ಷಿಣಾಂ ಪ್ರತಿಗೃಹ್ಯ ಗುರವ ಇವ ಪಾಪಭಾರಗೌರವೇಣಾಕ್ರಾಂತಾ ಏವ ವಯ-ಮಿತ್ಯಮನ್ಯಂತ । ತತಸ್ತೇ ಪಾಪಪರಿಹಾರಾಯ ದ್ವಾದಶಾಹೇನ ಋತುನಾ ನೋಽಸ್ಮಾನ್ಯಾಜ-ಯೇತಿ ಪ್ರಜಾಪತಿಮಬ್ರುವನ್ । ಪ್ರಜಾಪತಿರಂಗೀಕೃತ್ಯ ತೇ ಯೂಯಂ ದೀಕ್ಷಾಂ ಕುರುಧ್ವ-ಮಿತ್ಯಬ್ರವೀತ್ । ತೇಷು ಮಾಸೇಷು ಪೂರ್ವಪಕ್ಷಾಃ ಶುಕ್ಲಪಕ್ಷಾಭಿಮಾನಿನೋ ದೇವಾ ಯೇ ಸಂತಿ ತೇ ಪೂರ್ವೇ ಪ್ರಥಮಭಾವಿನಃ ಸಂತೋ ದೀಕ್ಷಾಮಕುರ್ವತ । ತಾದೃಶಾಸ್ತೇ ಪೂರ್ವ-ಪಕ್ಷಾಃ ಸ್ವಕೀಯಂ ಪಾಪ್ಮಾನಮಪಾಹತ ನಾಶಿತವಂತಃ । ತಸ್ಮಾತ್ಪಾಪರಾಹಿತ್ಯಾತ್ತೇ ಶುಕ್ಲ-ಪಕ್ಷಾ ದಿವೇವ ದಿವಸಾ ಇವ ಪುಣ್ಯರೂಪೇಣ ತೇಜಸಾ ಯುಕ್ತಾ ಭವನ್ತಿ । ಅಥಾಪರಪಕ್ಷಾಃ ಕೃಷ್ಣಪಕ್ಷಾಭಿಮಾನಿನೋ ದೇವಾ ಯೇ ಸಂತಿ ತೇ ತ್ವಪರೇ ಪಶ್ಚಾತ್ಪ್ರವರ್ತಮಾನಾ ದೀಕ್ಷಾಂ ಕೃತವಂತಸ್ತೇ ಮಾಲಿನ್ಯದೋಷೇಣ ಪಾಪ್ಮಾನಂ ನತರಾಮಪಾಹತಾತಿಶಯೇನ ವಿನಾಶಂ ನ ಕೃತವಂತಃ । ತಸ್ಮಾತ್ ಕೃತ್ಸ್ನಪಾಪವಿನಾಶಾಭಾವಾತ್ತೇ ಕೃಷ್ಣಪಕ್ಷಾಸ್ತಮ ಇವ ಕೃಷ್ಣವರ್ಣಾ-ದೃಶ್ಯಂತೇ ತದೀಯರಾತ್ರಿಷು ಚಂದ್ರಪ್ರಕಾಶಸ್ಯಾಭಾವಾತ್ । ಲೋಕೇಽಪ್ಯನಪಹತಪಾಪ್ಮಾನಃ ಪಾಪವಿನಾಶರಹಿತಾಃ ಪುರುಷಾಸ್ತಮ ಇವ ಹ್ಯಂಧಕಾರತಮೋಲಿಪ್ತತ್ವೇನ ನಿಂದ್ಯಾ ಭವನ್ತಿ । ತಸ್ಮಾತ್ಕಾರಣಾದೇವ ಪೂರ್ವಾಪರಕಾಲವೈಷಮ್ಯಂ ವಿದ್ವಾನ್ಪುರುಷೋ ದೀಕ್ಷಮಾಣೇಷು ಯಜ-ಮಾನೇಷ್ವೇಕೈಕಸ್ಮಾತ್ಪೂರ್ವಃ ಪೂರ್ವ ಏವ ಪೂರ್ವಪಕ್ಷೇ ದಿದೀಕ್ಷಿಷೇತ ದೀಕ್ಷಿತುಮಿಚ್ಛೇತ್ ॥ ವೇದನಂ ಪ್ರಶಂಸತಿ—

ದ್ವಾದಶಾಹವನ್ನು ಮಾಡುವುದಕ್ಕಾಗಿ ಕೈಗೊಳ್ಳುವ ದೀಕ್ಷಾವಿಧಿಯನ್ನು ಪ್ರಶಂಸೆಮಾಡುವರು—ಹಿಂದೆ ಹೇಳಿರುವಂತೆ ಪ್ರಜಾಪತಿಗೆ ಯಜ್ಞವನ್ನು ಮಾಡಿಸುವುದಕ್ಕಾಗಿ ಋತುಗಳ ಅಭಿಮಾನಿದೇವತೆಗಳೂ ಮಾಸಾಭಿಮಾನಿದೇವತೆಗಳೂ ಒಪ್ಪಿ ಪ್ರಜಾ ಪತಿಯಿಂದ ದಕ್ಷಿಣೆಯನ್ನು ಸ್ವೀಕರಿಸಿದರಷ್ಟೆ. ದಕ್ಷಿಣೆಯನ್ನು ಸ್ವೀಕರಿಸಿದಮೇಲೆ ಯಜ್ಞಮಾಡಿಸುವ ಭಾರವು (ಹೊಣೆ ಅಥವಾ

ಜವಾಬುದಾರಿಯು) ಋತ್ವಿಜರಾದ ತಮ್ಮಮೇಲೆ ಬಿದ್ದಿತು ಎಂದು ದೇವತೆಗಳಿಗೆ ಅರಿವುಂಟಾಯಿತು. ಆದ್ದರಿಂದ ಆ ದೇವತೆಗಳು ತಮ್ಮ ಪಾಪಪರಿಹಾರಾರ್ಥವಾಗಿ ತಮಗೂ ದ್ವಾದಶಾಹದಿಂದ ಯಜ್ಞಮಾಡಿಸಬೇಕೆಂದು ಪ್ರಜಾಪತಿಯನ್ನು ಕೇಳಿಕೊಂಡರು. ಪ್ರಜಾಪತಿಯು ಅವರ ಮಾತನ್ನಂಗೀಕರಿಸಿ, ಎಲೈ ದೇವತೆಗಳೇ ನೀವು ಯಜ್ಞಮಾಡುವುದಕ್ಕಾಗಿ ಮೊದಲು ದೀಕ್ಷಾವಿಧಿಯನ್ನು ಕೈಗೊಳ್ಳಿರಿ ಎಂದನು. ದೇವತೆಗಳು ಅದಕ್ಕೊಪ್ಪಿದರು. ದೇವತೆಗಳಲ್ಲಿ ಎರಡುವಿಧವಿರುವುದು ಮಾಸಗಳಲ್ಲಿಯೂ ಎರಡು ಭಾಗಗಳಿರುವವು. ಪೂರ್ವಪಕ್ಷ ಮತ್ತು ಅಪರಪಕ್ಷನೆಂದು. ಇವರಲ್ಲಿ ಪೂರ್ವಪಕ್ಷಾಭಿಮಾನಿದೇವತೆಗಳು (ಶುಕ್ಲಪಕ್ಷ) ದೀಕ್ಷಾ ವಿಧಿಯನ್ನು ಕೈಗೊಂಡು ತಮ್ಮ ಪಾಪಗಳನ್ನೆಲ್ಲಾ ಕಳೆದುಕೊಂಡು ಶುದ್ಧರಾದರು. ಆದ್ದರಿಂದ ಈ ಶುಕ್ಲಪಕ್ಷಾಭಿಮಾನಿದೇವತೆಗಳು ತಮ್ಮ ಪಾಪಗಳನ್ನೆಲ್ಲಾ ಕಳೆದುಕೊಂಡು ಶುದ್ಧರಾಗಿ ಶುಕ್ಲಪಕ್ಷದ ದಿನಗಳಂತೆ ಪ್ರಕಾಶಯುಕ್ತರಾದರು. ಲೋಕದಲ್ಲಿಯೂ ಸಹ ಪಾಪಗಳನ್ನು ಕಳೆದುಕೊಂಡ ಪುರುಷರು ಶುಕ್ಲಪಕ್ಷದ ದಿವಸಗಳಂತೆ ಕಾಂತಿಯುಕ್ತರಾಗಿ ತೇಜಸ್ಸಿನಿಂದ ಬೆಳಗುವರು. ಅನಂತರ ಅಪರಪಕ್ಷಾಭಿಮಾನಿಗಳಾದ (ಕೃಷ್ಣಪಕ್ಷ) ದೇವತೆಗಳು ದೀಕ್ಷಿತರಾಗಬೇಕೆಂದು ಪ್ರಯತ್ನಿಸಿ ತಮ್ಮ ಪಾಪಗಳನ್ನು ಕಳೆದುಕೊಳ್ಳ ಲಾರದೆ ವಿಫಲರಾದರು. ತಮ್ಮ ಪಾಪಗಳನ್ನು ಪೂರ್ತಿಯಾಗಿ ಕಳೆದುಕೊಳ್ಳಲಾರದೆಹೋದ್ದರಿಂದ ಈ ಕೃಷ್ಣಪಕ್ಷಾಭಿಮಾನಿ ದೇವತೆಗಳು ಎಂದರೆ ಕೃಷ್ಣಪಕ್ಷದ ದಿನಗಳು ರಾತ್ರಿಕಾಲದಲ್ಲಿ ಕೃಷ್ಣವರ್ಣದಂತೆ ಅಂಧಕಾರಯುಕ್ತರಾಗಿ ಕಪ್ಪಗೆ ಕಾಣಿಸುವರು. ಏಕೆಂದರೆ ಕೃಷ್ಣಪಕ್ಷದ ದಿನಗಳಲ್ಲಿ ರಾತ್ರಿಕಾಲದಲ್ಲಿ ಚಂದ್ರನು ಬೆಳಗುವುದಿಲ್ಲ. ಲೋಕದಲ್ಲಿಯೂ ಕೂಡ ಪಾಪಗಳಿಂದ ವಿಮುಕ್ತ ರಾಗದ ಜನರು ತಮಸ್ಸಿನಂತೆ (ಕತ್ತಲೆಯಂತೆ) ದೋಷಯುಕ್ತರಾಗಿ ನಿಂದ್ಯರಾಗಿರುವರು. ಆದ್ದರಿಂದ ವಿದ್ವಾಂಸನಾದ ಋತ್ವಿಜನು ಯಜಮಾನನಿಗೆ ದೀಕ್ಷೆಯನ್ನು ವಿಧಿಸುವಾಗ ಪೂರ್ವಪಕ್ಷ(ಶುಕ್ಲಪಕ್ಷ) ದಲ್ಲಿ ಮಾತ್ರ ದೀಕ್ಷೆಯನ್ನು ಕೈಗೊಳ್ಳುವಂತೆ ವಿಧಿಸಬೇಕು. ಈ ವಿಷಯಗಳೆಲ್ಲವನ್ನೂ ತಿಳಿದಿರುವ ಪುರುಷನು ತನ್ನ ಪಾಪಗಳೆಲ್ಲವನ್ನೂ ಕಳೆದುಕೊಂಡು ಶುದ್ಧನಾಗುವನು.

**ಸ ವಾ ಅಯಂ ಪ್ರಜಾಪತಿಃ ಸಂವತ್ಸರ ಋತುಷು ಚ ಮಾಸೇಷು ಪ್ರತ್ಯತಿಷ್ಠತ್ತೇ ವಾ ಇಮ ಋತವಶ್ಚ ಮಾಸಾಶ್ಚ ಪ್ರಜಾಪತಾವೇವ ಸಂವತ್ಸರೇ ಪ್ರತ್ಯತಿಷ್ಠಂಸ್ತ ಏತೇಽನ್ಯೋಽನ್ಯಸ್ಮಿನ್ಪ್ರತಿಷ್ಠಿತಾ ಏವಂ ಹ ವಾವ ಸ ಋತ್ವಿಜಿ ಪ್ರತಿತಿಷ್ಠತಿ ಯೋ ದ್ವಾದಶಾಹೇನ ಯಜತೇ ತಸ್ಮಾದಾಹುರ್ನ ಪಾಪಃ ಪುರುಷೋ ಯಾಜ್ಯೋ ದ್ವಾದಶಾಹೇನ ನೇದಯಂ ಮಯಿ ಪ್ರತಿತಿಷ್ಠಾದಿತಿ ॥**

ಯಜಮಾನಪಾಪವಿನಾಶಹೇತುತ್ವಾದೃತ್ವಿಜಂ ಪ್ರಶಂಸತಿ— ಯಃ ಪ್ರಜಾಪತಿರ್ದ್ವಾದಶಾಹೇನಾಯಜತ ಸ ಪ್ರಜಾಪತಿಃ ಸಂವತ್ಸರಕಾಲಾತ್ಮಕೋ ಭೂತ್ವರ್ತುಷು ಚ ಮಾಸೇಷು ಚ ಪ್ರತ್ಯತಿಷ್ಠತ್ಪ್ರತಿಷ್ಠಿತೋಽಭವತ್ । ತದಾರ್ತ್ವಿಜ್ಯಬಲಾತ್ಪ್ರಜಾಪತೇರುತ್ಕರ್ಷಾತ್ । ತೇ ವಾ ಇಮ ಋತವಶ್ಚ ಮಾಸಾಶ್ಚ ಪ್ರಜಾಪತಿರೂಪೇ ಸಂವತ್ಸರೇ ಪ್ರತಿಷ್ಠಿತಾ ಅಭವನ್ । ಪ್ರಜಾಪತಿಪ್ರಸಾದೇನ ತತ್ಪಾಪವಿನಾಶಾತ್ । ತ ಏತೇ ಪ್ರಜಾಪತಿರ್ಋತವೋ ಮಾಸಾಶ್ಚಾನ್ಯೋಽನ್ಯಪಾಪವಿನಾಶಾದನ್ಯೋಽನ್ಯಸ್ಮಿನ್ ಪ್ರತಿಷ್ಠಿತಾಃ । ಏವಮೇವೇದಾನೀಮಪಿ ಯೋ ದ್ವಾದಶಾಹೇನ ಯಜತೇ ಸೋಽಯಮೃತ್ವಿಜಿ ಪ್ರತಿತಿಷ್ಠತಿ । ಋತ್ವಿಕ್ಪ್ರಸಾದೇನ ಯಜಮಾನಸ್ಯ ಪಾಪವಿನಾಶಾತ್ । ಯಸ್ಮಾದೇವಂ ತಸ್ಮಾದಭಿಜ್ಞಾ ಏವಮಾಹುಃ । ಪಾಪಪುರುಷೋ ದ್ವಾದಶಾಹೇನ

**ಋತ್ವಿಗ್ಭಿರ್ನ ಯಾಜ್ಯಸ್ತಸ್ಯ ಕರ್ಮಣ್ಯಾರ್ತ್ವಿಜ್ಯಂ ನ ಕಾರ್ಯಮಿತಿ । ಅಯಂ ಪಾಪ್ಮೋ ಮಯ್ಯೃತ್ವಿಜಿ ನ ಪ್ರತಿತಿಷ್ಠಾತ್ಸರ್ವಥಾ ಮಾ ಪ್ರವಿಶತ್ಯೇ (ತ್ವೇ) ವಮಭಿಜಾನಾಮೀತ್ಯಭಿಪ್ರಾಯಃ ॥**

ಯಜಮಾನನ ಪಾಪಗಳನ್ನು ನಾಶಮಾಡುವುದರಿಂದ ಅದಕ್ಕೆ ಕಾರಣಭೂತನಾದ ಋತ್ವಿಜನನ್ನು ಪ್ರಶಂಸೆಮಾಡುವರು. ಹಿಂದೆ ಹೇಳಿದಂತೆ ಪ್ರಜಾಪತಿಯು ದ್ವಾದಶಾಹದಿಂದ ಯಜ್ಞಮಾಡಿದನಷ್ಟೆ. ಆದರಿಂದ ಪ್ರಜಾಪತಿಯು ಸಂವತ್ಸರಕಾಲಾತ್ಮಕನಾಗಿ (ಕಾಲಸ್ವರೂಪನಾಗಿ) ಋತುಗಳಲ್ಲಿಯೂ ಮಾಸಗಳಲ್ಲಿಯೂ ದೃಢವಾಗಿ ನೆಲಸಿ ಅತ್ಯಂತ ಗಣ್ಯನಾದನು. ಪ್ರಜಾಪತಿಯ ಗಣ್ಯತೆಯು (ಪ್ರಾಧಾನ್ಯತೆಯು) ಯಜ್ಞಮಾಡಿಸಿದ ಋತ್ವಿಜರ ಉತ್ಕರ್ಷದಿಂದ ಉಂಟಾಯಿತು ಮತ್ತು ಈ ಋತುಗಳೂ ಮಾಸಗಳೂ (ಅಥವಾ ಅಭಿಮಾನಿದೇವತೆಗಳು) ಪ್ರಜಾಪತಿರೂಪವಾದ ಸಂವತ್ಸರದಲ್ಲಿ ನೆಲಸಿ ಅಲ್ಲಿಯೇ ವ್ಯಾಪಿಸಿದರು. ಪ್ರಜಾಪತಿಯ ಅನುಗ್ರಹದಿಂದ ಈ ದೇವತೆಗಳ ಪಾಪಪರಿಹಾರವಾಗಿ ಇವರೆಲ್ಲರೂ ಪ್ರಜಾಪತಿಯಲ್ಲಿಯೇ ಐಕ್ಯಭಾವವನ್ನು ಹೊಂದಿದರು. ಆದ್ದರಿಂದ ತಮ್ಮ ಪಾಪಗಳನ್ನು ಕಳೆದುಕೊಂಡ ಋತು ಮತ್ತು ಮಾಸಾಭಿಮಾನಿದೇವತೆಗಳೂ ಪ್ರಜಾಪತಿಯೂ ಒಬ್ಬರಲ್ಲೊಬ್ಬರು ನೆಲಸಿ (ಪ್ರತಿಷ್ಠಿತರಾಗಿ ಅಥವಾ ಸೇರಿಹೋಗಿ) ಪರಸ್ಪರ ಐಕ್ಯರಾದರು. ಈಗಲೂ ಕೂಡ ಯಾವ ಪುರುಷನು ಈರೀತಿ ದ್ವಾದಶಾಹವನ್ನು ಅನುಷ್ಠಾನ ಮಾಡುವನೋ ಅವನು ತನ್ನ ಋತ್ವಿಜನ ಅನುಗ್ರಹದಿಂದ ತನ್ನ ಪಾಪಗಳನ್ನು ಕಳೆದುಕೊಂಡು ತನ್ನ ಋತ್ವಿಜರಲ್ಲಿ ನೆಲಸುವನು. ಆದಕಾರಣ ಅಭಿಜ್ಞರಾದವರು (ಎಲ್ಲವನ್ನೂ ತಿಳಿದವರು) ಹೀಗೆ ಹೇಳುವರು. ಋತ್ವಿಜರಾದವರು ಪಾಪದಿಂದ ಕೂಡಿರುವ ಪುರುಷನಿಗೆ ಎಂದರೆ ಪಾಪಿಷ್ಠನಿಗೆ ಯಜ್ಞಮಾಡಿಸಬಾರದು. ಪಾಪಿಷ್ಠನೂ ಯಜ್ಞವನ್ನು ಮಾಡಬಾರದು ಏಕೆಂದರೆ ಪಾಪಿಷ್ಠನ ಪಾಪವೆಲ್ಲವೂ ಯಜ್ಞಮಾಡಿಸುವ ಋತ್ವಿಜನಲ್ಲಿ ಸೇರಿಹೋಗುವುದು ಎಂದು ಅಭಿಜ್ಞರ ಅಭಿಪ್ರಾಯವು.

ಜ್ಯೇಷ್ಠಯಜ್ಞೋ ವಾ ಏಷ ಯದ್ದ್ವಾದಶಾಹಃ ಸ ವೈ ದೇವಾನಾಂ ಜ್ಯೇಷ್ಠೋ ಯ ಏತೇನಾಗ್ರೇಽಯಜತ ಶ್ರೇಷ್ಠಯಜ್ಞೋ ವಾ ಏಷ ಯದ್ದ್ವಾದಶಾಹಃ ಸ ವೈ ದೇವಾನಾಂ ಶ್ರೇಷ್ಠೋ ಯ ಏತೇನಾಗ್ರೇಽಯಜತ ॥

**ದ್ವಾದಶಾಹಂ ಪ್ರಕಾರಾಂತರೇಣ ಪ್ರಶಂಸತಿ-ಯೋ ದ್ವಾದಶಾಹೋಽಸ್ತ್ಯಸೌ ಜ್ಯೇಷ್ಠಸ್ಯ ಯಜ್ಞಃ ಕಥಮಿತಿ ತದುಚ್ಯತೇ । ಯಃ ಪುಮಾನೇತೇನ ದ್ವಾದಶಾಹೇನಾಗ್ರೇ ಪ್ರಥಮಮಯಜತ ಸ ಏವ ದೇವಾನಾಂ ಮಧ್ಯೇ ಜ್ಯೇಷ್ಠೋ ವಯಸಾ ಪ್ರವೃದ್ಧೋ ಭವತಿ । ಕಿಂ ಚಾಯಂ ದ್ವಾದಶಾಹಃ ಶ್ರೇಷ್ಠಸ್ಯ ಯಜ್ಞೋ ಯಃ ಪ್ರಥಮಮಯಜತ ಸ ದೇವೇಷು ಮಧ್ಯೇ ಗುಣತಃ ಶ್ರೇಷ್ಠಃ ॥**

ಈ ದ್ವಾದಶಾಹವನ್ನು ಪ್ರಕಾರಾಂತರದಿಂದ ಪ್ರಶಂಸೆಮಾಡುವರು—ಈ ದ್ವಾದಶಾಹವು ಜ್ಯೇಷ್ಠನು (ಹಿರಿಯನು) ಮಾಡುವ ಯಜ್ಞವು ಏಕೆಂದರೆ ಈ ಯಜ್ಞವನ್ನು ಮೊದಲು ಮಾಡಿದವನು ಪ್ರಜಾಪತಿಯು. ಪ್ರಜಾಪತಿಯು ದೇವತೆಗಳಲ್ಲೆಲ್ಲಾ ಜ್ಯೇಷ್ಠನು ಎಂದರೆ ವಯಸ್ಸಿನಲ್ಲಿ ಎಲ್ಲರಿಗಿಂತಲೂ ದೊಡ್ಡವನು (ಹಿರಿಯನು) ಮತ್ತು ಈ ದ್ವಾದಶಾಹವೆಂಬ ಯಜ್ಞವು ಶ್ರೇಷ್ಠವಾದ ಯಜ್ಞವು. ಏಕೆಂದರೆ ಈ ಯಜ್ಞವನ್ನು ಮೊದಲು ಮಾಡಿದ ಪ್ರಜಾಪತಿಯು ಗುಣದಲ್ಲಿ ಎಲ್ಲರಿಗಿಂತಲೂ ಶ್ರೇಷ್ಠನು. ಆದ್ದರಿಂದ ಪ್ರಜಾಪತಿಯಿಂದ ಮಾಡಲ್ಪಟ್ಟ ಈ ಯಜ್ಞವು ಶ್ರೇಷ್ಠವಾದುದು.

ಜ್ಯೇಷ್ಠಃ ಶ್ರೇಷ್ಠೋ ಯಜೇತ ಕಲ್ಯಾಣೀಹ ಸಮಾ ಭವತಿ ನ ಪಾಪಃ ಪುರುಷೋ ಯಾಜ್ಯೋ ದ್ವಾದಶಾಹೇನ ನೇದಯಂ ಮಯಿ ಪ್ರತಿ-ತಿಷ್ಠಾದಿತಿ ॥

ಏತಾಂ ದ್ವಾದಶಾಹ ಪ್ರಶಂಸಾ ಮುಪಜೀವ್ಯಾಧಿಕಾರಿ ವಿಶೇಷಂ ದರ್ಶಯತಿ- ಪುಮಾನ್ ಭ್ರಾತೄಣಾಂ ಮಧ್ಯೇ ವಯಸಾ ಜ್ಯೇಷ್ಠೋ ಗುಣೈಃ ಶ್ರೇಷ್ಠಶ್ಚ ತಾದೃಶೋಽನೇನ ಯಜೇತ । ತ (ಯ) ಸ್ಮಿನ್ದೇಶೇ ತಥಾವಿಧಕರ್ತೃಕೋ ಯಾಗ ಇಹಾಸ್ಮಿನ್ದೇಶೇ ಸಮಾ ಕಲ್ಯಾಣೀ ಭವತಿ ಸಂವತ್ಸರಃ ಸರ್ವೋಪದ್ರವರಹಿತಃ ಸುಖಕರೋ ಭವತಿ । ಯಸ್ಮಾಜ್ಜ್ಯೇಷ್ಠಸ್ಯ ಶ್ರೇಷ್ಠಸ್ಯ ಚಾಧಿ-ಕಾರಸ್ತಸ್ಮಾತ್ಪಾಪಃ ಕನಿಷ್ಠೋ ಗುಣಹೀನಶ್ಚ ಪುರುಷೋ ನ ತೇನ ಯಾಜನೀಯಃ । ಋತ್ವಿಜಿ ಮಯಿ ಪಾಪೀ ಪುರುಷೋಽಯಂ ನೈವ ಪ್ರತಿತಿಷ್ಠತ್ವಿತಿ ತಸ್ಯರ್ತ್ವಿಜೋಽಭಿಪ್ರಾಯಃ ॥

ದ್ವಾದಶಾಹವೆಂಬ ಈ ಯಜ್ಞವನ್ನು ಪ್ರಕಾರಾಂತರವಾಗಿ (ಬೇರೆವಿಧವಾಗಿ) ಪ್ರಶಂಶೆಮಾಡುವರು— ಒಬ್ಬ ಪುರುಷನಿಗೆ ಅನೇಕ ಪುತ್ರರಿದ್ದರೆ ಅವರಲ್ಲಿ ಜ್ಯೇಷ್ಠನಾದವನು ಎಂದರೆ ಹಿರಿಯನಾದವನು ಗುಣದಲ್ಲಿ ಎಲ್ಲರಿಗಿಂತಲೂ ಶ್ರೇಷ್ಠನಾದ ಪುತ್ರನೇ ಈ ದ್ವಾದಶಾಹವೆಂಬ ಯಜ್ಞವನ್ನು ಮಾಡಲು ಅರ್ಹನು. ಅಂತಹ ಗುಣವಿಶಿಷ್ಟನಾದವನು ಮಾಡುವ ಯಜ್ಞವು ದೇಶಕ್ಕೆ ಸರ್ವೋಪದ್ರವರಹಿತವಾಗಿಯೂ ಸುಖಕರವಾಗಿಯೂ ಇರುವುದು. ಈ ಯಾಗವನ್ನು ಮಾಡಲು ಜ್ಯೇಷ್ಠನೂ ಶ್ರೇಷ್ಠನೂ ಆದವನಿಗೆ ಮಾತ್ರವೇ ಅಧಿಕಾರವಿರುವುದರಿಂದ ಕನಿಷ್ಠನೂ (ಕಿರಿಯನೂ) ಗುಣಹೀನನೂ ಆದವನು ಈ ಯಾಗವನ್ನು ಮಾಡಬಾರದು. ಯಜ್ಞವನ್ನು ಮಾಡಿಸುವ ಋತ್ವಿಜನೂ ಸಹ ಅಂತಹ ಯೋಗ್ಯನಲ್ಲದವನಿಗೆ ಯಜ್ಞವನ್ನು ಮಾಡಿಸಬಾರದು. ಏಕೆಂದರೆ ಈ ಪುರುಷನು ಜ್ಯೇಷ್ಠನಲ್ಲ, ಶ್ರೇಷ್ಠನೂ ಅಲ್ಲ ಇಂತಹ ಪಾಪಿಷ್ಠನಿಗೆ ನಾನು ಯಜ್ಞವನ್ನು ಮಾಡಿಸಿದರೆ ಅವನ ಪಾಪವೆಲ್ಲವೂ ನನಗೆ ಬರುವುದು ಎಂದು ಋತ್ವಿಜನು ಆಲೋಚಿಸಬೇಕು.

ಇಂದ್ರಾಯ ವೈ ದೇವಾ ಜ್ಯೈಷ್ಠ್ಯಾಯ ಶ್ರೈಷ್ಠ್ಯಾಯ ನಾತಿಷ್ಠಂತ ಸೋಽಬ್ರವೀದ್ಬೃಹಸ್ಪತಿಂ ಯಾಜಯ ಮಾ ದ್ವಾದಶಾಹೇನೇತಿ ತಮಯಾಜಯತ್ತತೋ ವೈ ತಸ್ಮೈ ದೇವಾ ಜ್ಯೈಷ್ಠ್ಯಾಯ ಶ್ರೈಷ್ಠ್ಯಾಯಾತಿಷ್ಠಂತ ತಿಷ್ಠಂತೇಽಸ್ಮೈ ಸ್ವಾ ಜ್ಯೈಷ್ಠ್ಯಾಯ ಶ್ರೈಷ್ಠ್ಯಾಯ ಸಮಸ್ಮಿನ್ಸ್ವಾಃ ಶ್ರೇಷ್ಠತಾಯಾಂ ಜಾನತೇ ಯ ಏವಂ ವೇದ ॥

ಪ್ರಕಾರಾಂತರೇಣ ದ್ವಾದಶಾಹಂ ಜ್ಯೈಷ್ಠ್ಯಶ್ರೈಷ್ಠ್ಯ ಹೇತುತಯಾ ಪ್ರಶಂಸತಿ- ಇಂದ್ರಸ್ಯ ವಯಸಾ ಜ್ಯೇಷ್ಠತ್ವಂ ಗುಣೈಃ ಶ್ರೇಷ್ಠತ್ವಂ ಚ ದೇವಾ ನಾಂಗೀ ಕೃತವಂತಃ । ತತಃ ಸೋಽಂಗೀ-ಕಾರೋ ದ್ವಾದಶಾಹೇನ ಲಬ್ಧಃ ॥ ವೇದನಂ ಪ್ರಶಂಸತಿ— ಅಸ್ಮಾ ಅಸ್ಯ ವೇದಿತುಃ ಸ್ವಾ ಜ್ಞಾತ-ಯೋ ಜ್ಯೈಷ್ಠ್ಯಾಯ ತಿಷ್ಠಂತೇ ಜ್ಯೈಷ್ಠ್ಯಂ ಶ್ರೈಷ್ಠ್ಯಂ ಚಾಂಗೀ ಕುರ್ವನ್ತಿ । ಕಿಂಚಾಸ್ಮಿನ್ವೇದಿ-ತಂ ಯೇಯಂ ಶ್ರೇಷ್ಠತಾ ತಸ್ಯಾಂ ಜ್ಞಾತಯಃ ಸಂಜಾನತ ಐಕಮತ್ಯಂ ಪ್ರಾಪ್ನುವನ್ತಿ ॥

ಇಂದ್ರನು ಜ್ಯೇಷ್ಠನೆಂದೂ ಶ್ರೇಷ್ಠನೆಂದೂ ದೇವತೆಗಳು ಒಪ್ಪಿ ಅಂಗೀಕರಿಸಲಿಲ್ಲ. ಆಗ ಇಂದ್ರನು ಇದನ್ನು ತಿಳಿದು ದೇವಗುರುವಾದ ಬೃಹಸ್ಪತಿಯ ಬಳಿಗೆ ಹೋಗಿ ಎಲೈ ಬೃಹಸ್ಪತಿಯೇ, ನನಗೆ ದ್ವಾದಶಾಹವೆಂಬ ಯಜ್ಞವನ್ನು ಮಾಡಿಸು ಎಂದು ಕೇಳಿಕೊಂಡನು. ಬೃಹಸ್ಪತಿಯು ಹಾಗೆಯೇ ಆಗಲೆಂದೊಪ್ಪಿ ಇಂದ್ರನಿಗೆ ದ್ವಾದಶಾಹವನ್ನು ಮಾಡಿಸಿದನು. ಅನಂತರ ದೇವತೆಗಳು ಇಂದ್ರನು ದ್ವಾದಶಾಹವನ್ನು ಮಾಡಿದ್ದರಿಂದ ಅವನು ದೇವತೆಗಳಲ್ಲಿ ಜ್ಯೇಷ್ಠನೆಂದೂ ಗುಣಗಳಲ್ಲಿ ಶ್ರೇಷ್ಠನೆಂದೂ ಅಂಗೀಕರಿಸಿದರು. ಆದ್ದರಿಂದ ಯಾವ ಪುರುಷನು ಈ ವಿಷಯವನ್ನು ತಿಳಿದು ಅದರಂತೆ ದ್ವಾದಶಾಹವೆಂಬ ಯಜ್ಞವನ್ನು ಮಾಡುವನೋ ಅವನನ್ನು ಎಲ್ಲರಿಗೂ ಜ್ಯೇಷ್ಠ (ಹಿರಿಯ) ನಾವವನೆಂದೂ ಗುಣದಲ್ಲಿ ಶ್ರೇಷ್ಠನೆಂದೂ ಅವನ ಬಂಧುಗಳೂ ಜ್ಞಾತಿಗಳೂ ಎಲ್ಲರೂ ಅಂಗೀಕರಿಸುವರು. ಆ ಪುರುಷನು ತನ್ನ ಸ್ವಜನರಲ್ಲಿ ಗಣ್ಯತೆಯನ್ನು ಪಡೆಯುವನು.

ಊರ್ಧ್ವೋ ವೈ ಪ್ರಥಮಸ್ತ್ರ್ಯಹಸ್ತಿರ್ಯಙ್ಮಧ್ಯಮೋಽರ್ವಾಙುತ್ತಮಃ ಸ ಯದೂರ್ಧ್ವಃ ಪ್ರಥಮಸ್ತ್ರ್ಯಹಸ್ತಸ್ಮಾದಯಮಗ್ನಿರೂರ್ಧ್ವ ಉದ್ದೀಪ್ಯತ ಊರ್ಧ್ವಾ ಹ್ಯೇತಸ್ಯ ದಿಗ್ಯತ್ತಿರ್ಯಙ್ಮಧ್ಯಮಸ್ತಸ್ಮಾ-ದಯಂ ವಾಯುಸ್ತಿರ್ಯಙ್ಪವತೇ ತಿರಶ್ಚೀರಾಪೋ ವಹಂತಿ ತಿರಶ್ಚೀ ಹ್ಯೇತಸ್ಯ ದಿಗ್ಯದರ್ವಾಙುತ್ತಮಸ್ತಸ್ಮಾದಸಾವರ್ವಾಙ್ ತಪತ್ಯ-ರ್ವಾಙ್ ವರ್ಷತ್ಯರ್ವಾಞ್ಚಿ ನಕ್ಷತ್ರಾಣ್ಯರ್ವಾಚೀ ಹ್ಯೇತಸ್ಯ ದಿಕ್ಸ-ಮ್ಯಂಚೋ ವಾ ಇಮೇ ಲೋಕಾಃ ಸಮ್ಯಂಚ ಏತೇ ತ್ರ್ಯಹಾಃ ॥ ಸಮ್ಯಂಚೋಽಸ್ಮಾ ಇಮೇ ಲೋಕಾಃ ಶ್ರಿಯೈ ದೀದ್ಯತಿ ಯ ಏವಂ ವೇದ ॥

ಯಥಾ (ಅಥ) ವ್ಯೂಢೇ ದ್ವಾದಶಾಹೇ ಪ್ರಥಮುದಶಮದ್ವಾದಶವ್ಯತಿರಿಕ್ತೋ ಯೋ ನವರಾತ್ರಸ್ತತ್ರ ಯೇ ತ್ರಯಸ್ತ್ರ್ಯಹಾಃ ಪೂರ್ವಮುಕ್ತಾಸ್ತಾನ್ಪ್ರಶಂಸತಿ—ಯೋಽಯಂ ನವರಾತ್ರೇ ಪ್ರಥಮಸ್ತ್ರ್ಯಹಃ ಸೋಽಯಮೂರ್ಧ್ವೋ ವಾ ಆರೋಹಪ್ರಕಾರ ಏವ । ತದ್ಯಥಾ—ಗಾಯತ್ರಂ ಪ್ರಾತಃ ಸವನಂ ತ್ರೈಷ್ಟುಭಂ ಮಾಧ್ಯಂದಿನಂ ಸವನಂ ಜಾಗತಂ ತೃತೀಯಸವನಮಿತ್ಯಯಂ ಸ್ವಭಾವಸಿದ್ಧಃ ಕ್ರಮಸ್ತಸ್ಯ ವ್ಯತ್ಯಾಸಭಾವಾದೂರ್ಧ್ವಂ ಇತ್ಯುಚ್ಯತೇ । ಯಸ್ತು ಮಧ್ಯಮಸ್ತ್ರ್ಯಹಃ ಸೋಽಯಂ ತಿರ್ಯಙ್‌ವರ್ತತೇ । ತದ್ಯಥಾ—ಜಾಗತಂ ಪ್ರಾತಃ ಸವನಂ ಗಾಯತ್ರಂ ಮಾಧ್ಯಂ-ದಿನಂ ತ್ರೈಷ್ಟುಭಂ ತೃತೀಯಮಿತ್ಯತ್ರ ನಾತ್ಯಂತಮನುಕ್ರಮೋ ನಾಪ್ಯತ್ಯಂತಂ ವ್ಯುತ್ಕ್ರಮಃ । ತಸ್ಮಾದಯಂ ತಿರ್ಯಙ್ಯ ಉತ್ತಮಸ್ತ್ರ್ಯಹಃ ಸೋಽರ್ವಾಙ್‌ಧೋಮುಖಃ । ತದ್ಯಥಾ—ತ್ರೈ-ಷ್ಟುಭಂ ಪ್ರಾತಃಸವನಂ ಜಾಗತಂ ಮಾಧ್ಯಂದಿನಂ ಗಾಯತ್ರಂ ತೃತೀಯಸವನ ಮಿತ್ಯೇತದಹರ-ರ್ವಾಕ್ತ್ವಂ ಪ್ರಥಮೋ ಜಾಗತಾಂತೋ ದ್ವಿತೀಯಸ್ತ್ರೈಷ್ಟುಭಾಂತಸ್ತೃತೀಯೋ ಗಾಯತ್ರಾಂತ ಇತ್ಯೇವಮೂರ್ಧ್ವತಿರ್ಯಕ್ತ್ವಾರ್ವಾಕ್ತ್ವಾನಿ ತ್ರಿಷ್ವಪಿ ತ್ರ್ಯಹೇಷು ದ್ರಷ್ಟವ್ಯಾನಿ । ಯಸ್ಮಾತ್ಸ ಪ್ರಥಮಸ್ತ್ರ್ಯಹ ಊರ್ಧ್ವಸ್ತಸ್ಮಾತ್ತದಾತ್ಮಕೋಽಯಮಗ್ನಿರೂರ್ಧ್ವಾಭಿಮುಖೋ ದೀಪ್ಯತೇ ತಸ್ಯ ಚಾಗ್ನೇರೂರ್ಧ್ವಾ ದಿಕ್‌ಪ್ರಿಯಾ । ಮಧ್ಯಮಸ್ಯ ತ್ರ್ಯಹಸ್ಯ ತಿರ್ಯಕ್ತ್ವಾತ್ತದ್ರೂಪೋ ವಾಯು-

ಸ್ತಿರ್ಯಙ್ ವರ್ತತೇ । ವಾಯುನಾ ಪ್ರೇರಿತಾ ಆಪಸ್ತಿರಶ್ಚೀಸ್ತಿರ್ಯಗ್ಭೂತಾಃ ಪ್ರವಹನ್ತಿ । ಏತಸ್ಯ ವಾಯೋಸ್ತಿರ್ಯಕ್ತ್ವಾತ್ತಿರಶ್ಚೀ ದಿಕ್ ಪ್ರಿಯಾ । ಉತ್ತಮಸ್ಯ ತ್ರ್ಯಹಸ್ಯಾರ್ವಾಕ್ತ್ವಾತ್ತತ್ರ-ದ್ಯುಪ್ರೋಽಸಾವಾದಿತ್ಯೋಽಧೋಮುಖಸ್ತಪತ್ಯಾದಿತ್ಯಪ್ರೇರಿತಃ ಪರ್ಜನ್ಯೋಽಧೋಮುಖೋ ವರ್ಷತಿ । ಆದಿತ್ಯವನ್ನಕ್ಷತ್ರಾಣ್ಯರ್ವಾಂಚ್ಯಧೋಮುಖಾನಿ ಪ್ರಕಾಶಂತೇ । ಏತಸ್ಮಾ ದಿತ್ಯಸ್ಯಾ-ರ್ವಾಚೀ ದಿಕ್ ಪ್ರಿಯಾ । ಕಿಂ ಚೇಮೇ ತ್ರಯೋ ಲೋಕಾಸ್ತತ್ತದ್ವಾಸಿನಾಂ ಸುಖಹೇತುತ್ವಾತ್ಸ-ಮ್ಯಂಚಃ । ಏತೇ ಚ ತ್ರ್ಯಹಾ ಲೋಕತ್ರಯ ಸಾಮ್ಯೇನಾನುಷ್ಠಾತೄಣಾಂ ಸುಖಹೇತುತ್ವಾತ್ಸ-ಮ್ಯಂಚಃ ॥ ವೇದನಂ ಪ್ರಶಂಸತಿ—

ಹನ್ನೆರಡು ದಿನಗಳಿಂದ ಕೂಡಿದ ದ್ವಾದಶಾಹವೆಂಬ ಈ ಯಾಗದಲ್ಲಿ ಪ್ರಥಮ, ದಶಮ, ದ್ವಾದಶ (ಮೊದಲು, ಹತ್ತು, ಹನ್ನೆರಡು) ಎಂಬ ಮೂರು ದಿನಗಳನ್ನು ಬಿಟ್ಟರೆ, ಒಂಭತ್ತು ದಿನಗಳು ಉಳಿಯುವವು. ಈ ಒಂಭತ್ತು ದಿನಗಳನ್ನು ಮೂರು ವಿಭಾಗ ಮಾಡಿದರೆ ಒಂದೊಂದು ವಿಭಾಗವು ಮೂರು ಮೂರು ದಿನಗಳಾಗುವವು. ಈ ಮೂರು ದಿನಗಳಿಗೆ ತ್ರ್ಯಹವೆಂದು ಹೆಸರು. ಎಂದರೆ ಪ್ರಥಮಸ್ತ್ರ್ಯಹ, ದ್ವಿತೀಯಸ್ತ್ರ್ಯಹ, ತೃತೀಯಸ್ತ್ರ್ಯಹವೆಂದು ಒಂಭತ್ತು ದಿನಗಳಲ್ಲಿ ಮೂರು ವಿಭಾಗಗಳಿರುವವು. ಈ ಮೂರು ವಿಭಾಗಗಳಲ್ಲಿ ಪ್ರಥಮಸ್ತ್ರ್ಯಹವೆಂಬ ಮೊದಲನೇ ವಿಭಾಗವು ಆರೋಹಪ್ರಕಾರವಾಗಿರುವುದು. ಹೇಗೆಂದರೆ ಈ ದಿನಗಳಲ್ಲಿ ಮಾಡುವ ಸವನತ್ರಯಗಳಲ್ಲಿ ಪ್ರಾತಸ್ಸವನದಲ್ಲಿ ಗಾಯತ್ರೀಛಂದಸ್ಸನ್ನೂ ಮಾಧ್ಯಂದಿನಸವನದಲ್ಲಿ ತ್ರಿಷ್ಟುಪ್ ಛಂದಸ್ಸನ್ನೂ, ತೃತೀಯಸವನದಲ್ಲಿ ಜಗತೀಛಂದಸ್ಸನ್ನೂ ಪಠಿಸುವರು. ಈ ಮೂರು ಛಂದಸ್ಸುಗಳಲ್ಲಿ ಗಾಯತ್ರೀಗಿಂತ ತ್ರಿಷ್ಟುಪ್‌ನಲ್ಲಿ ಹೆಚ್ಚು ಅಕ್ಷರಗಳಿರುವವು. ತ್ರಿಷ್ಟುಪ್‌ಛಂದಸ್ಸಿಗಿಂತ ಜಗತೀಛಂದಸ್ಸಿನಲ್ಲಿ ಹೆಚ್ಚು ಅಕ್ಷರಗಳಿರುವವು. ಒಂದು ಛಂದಸ್ಸಿಗಿಂತ ಮುಂದಿನ ಛಂದಸ್ಸಿನಲ್ಲಿ ಹೆಚ್ಚು ಅಕ್ಷರಗಳಿರುವುದರಿಂದ ಈ ಕ್ರಮವು ಆರೋಹಪ್ರಕಾರವಾಗಿರುವುದು. ಇದು ಸ್ವಭಾವಸಿದ್ಧವು. ಇದಕ್ಕೆ ಊರ್ಧ್ವಕ್ರಮ (ಮೇಲುಮುಖ) ವೆಂದು ಹೆಸರು. ಮಧ್ಯದ ಅಥವಾ ಎರಡನೆಯ ತ್ರ್ಯಹವು **ತಿರ್ಯಙ್**-ಅಡ್ಡಲಾದ (across) ಎಂದು ಹೇಳಲ್ಪಡುವುದು. ಹೇಗೆಂದರೆ ಈ ಕ್ರಮಪ್ರಕಾರ ಪ್ರಾತಸ್ಸವನದಲ್ಲಿ ಜಗತೀ ಛಂದಸ್ಸನ್ನೂ, ಮಾಧ್ಯಂದಿನಸವನದಲ್ಲಿ ಗಾಯತ್ರೀಛಂದಸ್ಸನ್ನೂ, ತೃತೀಯಸವನದಲ್ಲಿ ತ್ರಿಷ್ಟುಪ್‌ಛಂದಸ್ಸನ್ನೂ ಪಠಿಸುವರು. ಈ ಕ್ರಮದಲ್ಲಿ ಆರೋಹ ಅಥವಾ ಅವರೋಹವೆಂಬ ಅನುಕ್ರಮವಾಗಲಿ, ವ್ಯುತ್ಕ್ರಮವಾಗಲಿ ಇರುವುದಿಲ್ಲ. ಆದ್ದರಿಂದ ಇದಕ್ಕೆ ತಿರ್ಯಙ್ ಎಂದು ಹೆಸರು. ಇನ್ನು ಮೂರನೇ ತ್ರ್ಯಹವು **ಅರ್ವಾಙ್**-ಅಧೋಮುಖವೆಂದು ಹೇಳಲ್ಪಡುವುದು. ಹೇಗೆಂದರೆ ಈ ತ್ರ್ಯಹದಲ್ಲಿ ಪ್ರಾತಸ್ಸವನದಲ್ಲಿ ತ್ರಿಷ್ಟುಪ್‌ಛಂದಸ್ಸನ್ನೂ ಮಾಧ್ಯಂದಿನಸವನದಲ್ಲಿ ಜಗತೀಛಂದಸ್ಸನ್ನೂ ತೃತೀಯಸವನದಲ್ಲಿ ಗಾಯತ್ರೀಛಂದಸ್ಸನ್ನೂ ಉಪಯೋಗಿಸುವರು. (ಇಲ್ಲಿ ಪ್ರತಿಸವನದಲ್ಲಿಯೂ ಒಂದೇವಿಧವಾದ ಋಕ್ಕುಗಳನ್ನು ಪಠಿಸುವುದಿಲ್ಲ.) ಎಂದರೆ ಪ್ರಾತಸ್ಸವನದಲ್ಲಿ ತ್ರಿಷ್ಟುಪ್‌ಛಂದಸ್ಸನ್ನು ಎಂದರೆ ಪ್ರಾತಸ್ಸವನದ ಅಂತ್ಯದಲ್ಲಿ ತ್ರಿಷ್ಟುಪ್‌ಛಂದಸ್ಸಿನ ಋಕ್ಕನ್ನೂ, ಮಾಧ್ಯಂದಿನಸವನದ ಅಂತ್ಯದಲ್ಲಿ ಜಗತೀಛಂದಸ್ಸಿನ ಋಕ್ಕನ್ನೂ ತೃತೀಯಸವನದ ಅಂತ್ಯದಲ್ಲಿ ಗಾಯತ್ರೀಛಂದಸ್ಸಿನ ಋಕ್ಕುಗಳನ್ನು ಪಠಿಸುವರೆಂದೂ ಅರ್ಥವು. ಇತರ ತ್ರ್ಯಹಗಳಲ್ಲಿಯೂ ಇದರಂತೆಯೇ ಎಂದು ತಿಳಿಯಬೇಕು. ಪ್ರಥಮಸ್ತ್ರ್ಯಹವು ಊರ್ಧ್ವಾಭಿಮುಖ (ಆರೋಹಕ್ರಮ) ವಾಗಿರುವುದರಿಂದ ಈ ಕ್ರಮವು ಅಗ್ನಿಗೆ ಪ್ರಿಯವಾದುದು. ಏಕೆಂದರೆ ಅಗ್ನಿಯು ಊರ್ಧ್ವಾಭಿಮುಖವಾಗಿ ಜಾಜ್ವಲ್ಯಮಾನವಾಗಿ (ಅಥವಾ ದಹಿಸುವವನಾಗಿ) ಬೆಳಗುವನು. ಮಧ್ಯಮ (ಎರಡನೆಯ) ತ್ರ್ಯಹಕ್ಕೆ ವಾಯುವು ಮುಖ್ಯನು. ಎಂದರೆ ವಾಯುವಿಗೆ ಈ ದಿಕ್ಪ್ರಿಯವಾಗಿರುವುದು. ಏಕೆಂದರೆ ವಾಯುವಿನಿಂದ ಪ್ರೇರಿತವಾದ ಮೋಡಗಳು ಅಡ್ಡಲಾಗಿ ಒಂದು ಸ್ಥಳದಿಂದ ಮುಂದಿನ ಪ್ರದೇಶಕ್ಕೆ ವಯ್ಯಲ್ಪಡುವವು. ಆದ್ದರಿಂದ ವಾಯುವಿಗೆ ತಿರಶ್ಚೀದಿಕ್ ಪ್ರಿಯವು. ಉತ್ತಮ (ಕೊನೆಯ) ಅಥವಾ ಮೂರನೆಯ ತ್ರ್ಯಹದಲ್ಲಿ ಆದಿತ್ಯನು ಅಧೋಮುಖನಾಗಿ (ಎಂದರೆ ಸ್ವರ್ಗದಿಂದ

ಕೆಳಗಿರುವ ಭೂಮಿಗೆ) ತನ್ನ ಪ್ರಕಾಶವನ್ನು ಬೀರುವನು. ಆದಿತ್ಯನಿಂದ ಪ್ರೇರಿತವಾದ ಮೇಘಗಳು ಅಂತರಿಕ್ಷದಿಂದ ಅಧೋಮುಖವಾಗಿ ಮಳೆಯನ್ನು ಸುರಿಸುವವು. ಆದಿತ್ಯನಂತೆ ನಕ್ಷತ್ರಗಳೂ ಸಹ ಅಧೋಮುಖವಾಗಿ ತಮ್ಮ ಪ್ರಕಾಶವನ್ನು (ಬೆಳಕನ್ನು) ಬೀರುವವು. ಆದ್ದರಿಂದ ಸೂರ್ಯನಿಗೆ ಅರ್ವಾಚೀದಿಕ್ (ಕೆಳಗಿನ ಪ್ರದೇಶವು) ಪ್ರಿಯವು. ಇದಲ್ಲದೆ ಪೃಥಿವಿ, ಅಂತರಿಕ್ಷ, ಸ್ವರ್ಗ ಎಂಬ ಮೂರು ಲೋಕಗಳೂ ಆಯಾಯ ಲೋಕಗಳಲ್ಲಿ ವಾಸಿಸುವ ಜನರಿಗೆ ಸುಖವನ್ನುಂಟುಮಾಡುವುದರಿಂದ ಇವುಗಳಿಗೆ **ಸಮ್ಯಂಚಃ** ಎಂದು ಹೆಸರು. ಈ ಮೂರು ಲೋಕಗಳಿಗೂ ಮೂರುವಿಧವಾದ ತ್ರ್ಯಹಗಳಿಗೂ (ಇವೂ ಸುಖಹೇತುಗಳಾದ್ದರಿಂದ) ಸಾಮ್ಯವಿರುವುದರಿಂದ ಈ ತ್ರ್ಯಹಗಳಿಗೂ ಸಮ್ಯಂಚಃ ಎಂದೇ ಹೆಸರೇ ಅನ್ವಯಿಸುವುದು. ಈ ವಿಷಯಗಳನ್ನು ಪುರುಷನಿಗೆ ಈ ಲೋಕಗಳೆಲ್ಲವೂ ಸಂಪತ್ತನ್ನು ಒದಗಿಸಿ ತೃಪ್ತಿಯನ್ನುಂಟುಮಾಡುವವು.

---

*English Translation*

**Prajapathi instituted the Dvadasaha. The nature of this sacrifice. By whom it should be performed.**)

The Dvadasaha is Prajapati's sacrifice. At the beginning Prajapati sacrificed with it. He said to the Seasons and Months," "make me sacrifice with the Dvadasaha (i.e. initiate me for this sacrifice)."

After having performed on him the Diksha ceremony, and prevented him from leaving when walking in the sacrificial compound they said to him, "Now give us (first something)then we shall make the sacrifice." He granted them food, aud juice (milk &c.). Just this juice is put in the Seasons and Months.

When he granted them that, then they made him sacrifice. This is the reason that only a man who can afford to give something is fit for performing this sacrifice.

When receiving his gifts, they (the Seasons and Months) made him "Prajapati" sacrifice. Thence must be who receives gifts, sacrifice for another. Thus both parties succeed those who, having such a knowledge, bring sacrifices for others, as well as thosə who have them performed for themselves.

The Seasons and Months felt themselves burdened, as it were (with guilt), for having accepted at the Dvadasaha (which they performed for Prajapati) a reward. They said to Prajapati, "Make us also sacrifice with the Dvadasaha." He consented and said to them, "Become ye initiated (take the Diksha!" The deities residing in the first (the so-called bright half of the months) first nnderwent the Diksha ceremony, and thus removed the consequences of guilt. Thence they are in the daylight as it were: for those who have their guilt (really) removed, are in the daylight, as it were (may appear everywhere.)

ಮಂತ್ರಾಂತರೇ ಲಕ್ಷಣಾಂತರಂ ದರ್ಶಯತಿ---ಯದ್ಯಪಿ ವಾಯವಾಯಾಹೀತ್ಯಾದಿಕಸ್ಯ ಪ್ರೋಪಸರ್ಗಸ್ಯ ಪ್ರಾಕೃತತ್ವಾಚ್ಚೋದಕೇನೈವ ತತ್ಪ್ರಾಪ್ತಿಸ್ತಥಾಪಿ ಲಕ್ಷಣಂ ದರ್ಶಯಿತು ಮಯಮುಪನ್ಯಾಸಃ । ಏತ್ಯಾಕಾರರೂಪಂ ಪದಮತ್ರಾಸ್ತ್ಯಯಾಹೀತಿ ಶ್ರುತತ್ವಾತ್ । ಅತಃ ಪ್ರಥಮೇಽಹನಿ ವಿನಿಯೋಕ್ತುಂ ಯೋಗ್ಯತ್ವಾತ್ಪ್ರಥಮಸ್ಯಾಹ್ನೋ ರೂಪಮ್ ॥

**ವಾಯವಾ ಯಾಹಿ ದರ್ಶತ** (ಋ. ಸಂ. ೧-೨-೧) ಎಂಬ ಋಕ್ಕಿನಲ್ಲಿ ಆ ಎಂಬ ಉಪಸರ್ಗವಿರುವುದರಿಂದ ಈ ಋಕ್ಕಿನಲ್ಲಿ ಮೊದಲನೇ ದಿನ ಉಪಯೋಗಿಸಲ್ಪಡುವುದಕ್ಕೆ ಬೇಕಾದ ಲಕ್ಷಣಗಳಿವೆ.

## ಆ ತ್ವಾ ರಥಂ ಯಥೋತಯ ಇದಂ ವಸೋ ಸುತಮಂಧ ಇತಿ ಮರುತ್ವತೀಯಸ್ಯಪ್ರತಿಪದನುಚರೌ ರಥವಚ್ಚ ಪಿಬವಚ್ಚ ಪ್ರಥಮೇಽಹನಿ ಪ್ರಥಮಸ್ಯಾಹ್ನೋ ರೂಪಂ ॥

ಅಥ ತ್ಯೃಚದ್ವಯೋ ಲಕ್ಷಣದ್ವಯಂ ದರ್ಶಯತಿ--ಆ ತ್ವಾ ರಥಮಿತಿ ತ್ಯೃಚೋ ಮರುತ್ವತೀಯ ಶಸ್ತ್ರಸ್ಯ ಪ್ರತಿಪತ್ತಚ್ಚ ರಥಶಬ್ದೋಪೇತಮಿದಂ ವಸೋ ಸುತಮಿತಿ ತಸ್ಯ ಶಸ್ತ್ರಸ್ಯಾನುಚರಸ್ತಚ್ಚ ಪಿಬವತ್ಪಿಬಾಸುಪೂರ್ಣಮಿತಿ ದ್ವಿತೀಯಪಾದೇ ಶ್ರುತತ್ವಾತ್ಪ್ರಥಮೇಽಹನೀತ್ಯಾದಿಕಂ ಪೂರ್ವವತ್ ॥

**ಆ ತ್ವಾ ರಥಂ** (ಋ. ಸಂ. ೮-೬೮-೧) ಎಂಬ ಋಕ್ಕು (ಅಥವಾ ತೃಚವು) ಮರುತ್ವತೀಯಶಸ್ತ್ರದಲ್ಲಿ ಪ್ರತಿಪತ್ (ಮೊದಲನೇ) ಋಕ್ಕಾಗಿ ಉಪಯೋಗಿಸಲ್ಪಡುವುದು. ಈ ಋಕ್ಕಿನಲ್ಲಿ ಆ ಎಂಬ ಉಪಸರ್ಗವೂ **ರಥಂ** ಎಂಬ ರಥಶಬ್ದ ಪ್ರಯೋಗವೂ ಇರುವವು. ಹಾಗೆಯೇ **ಇದಂ ವಸೋ ಸುತಮಂಧಃ** (ಋ. ಸಂ. ೮-೨-೧-) ಎಂಬ ಋಕ್ಕು ಅದೇ ಮರುತ್ವತೀಯ ಶಸ್ತ್ರದ ಅನುಚರ ಅಥವಾ ಎರಡನೇ ಋಕ್ಕಾಗಿ ಪಠಿಸಲ್ಪಡುವುದು. ಈ ಋಕ್ಕಿನಲ್ಲಿ ಪಾ ಧಾತುವಿನಿಂದ ನಿಷ್ಪನ್ನವಾದ **ಪಿಬವತ್** ಶಬ್ದವಿರುವುದು. ಆದ್ದರಿಂದ ಈ ಎರಡು ಋಕ್ಕುಗಳಲ್ಲಿಯೂ ಮೊದಲನೇ ದಿನದಲ್ಲಿ ಉಪಯೋಗಿಸಲ್ಪಡಬೇಕಾದ ಲಕ್ಷಣಗಳಿವೆ ಎಂದಭಿಪ್ರಾಯವು.

## ಇಂದ್ರ ನೇದೀಯ ಏದಿಹೀತೀಂದ್ರನಿಹವಃ ಪ್ರಗಾಥಃ ಪ್ರಥಮೇ ಪದೇ ದೇವತಾ ನಿರುಚ್ಯತೇ ಪ್ರಥಮೇಽಹನಿ ಪ್ರಥಮಸ್ಯಾಹ್ನೋ ರೂಪಂ ॥

ಮಂತ್ರಾಂತರಂ ಲಕ್ಷಣಾಂತರಂ ಚ ದರ್ಶಯತಿ---ಇಂದ್ರ ನೇದೀಯ ಇತ್ಯಯಮೃಗ್ದ್ವಯರೂಪತ್ವಾತ್ಪ್ರಗಾಥಃ । ಇಂದ್ರೋ ನಿತರಾಮಾಹೂಯತೇ ಯಸ್ಮಿನ್ಪ್ರಗಾಥೇ ಸೋಽಯಮಿಂದ್ರನಿಹವಃ । ಏದಿಹೀತ್ಯೇವಮಾಹ್ವಾನಮತ್ರ ಶ್ರೂಯತೇ । ಅಸ್ಯ ಪ್ರಗಾಥಸ್ಯ ಪ್ರಥಮೇ ಪಾದ ಇಂದ್ರೇತಿ ಚ ದೇವತಾ ನಿರ್ದಿಶ್ಯತೇ । ತದೇತತ್ಪ್ರಥಮಸ್ಯಾಹ್ನೋ ರೂಪಂ ಲಕ್ಷಣಮ್ ॥

**ಇಂದ್ರ ನೇದೀಯ ಏದಿಹಿ** (ಋ. ಸಂ. ೮-೫೩-೫) ಎಂಬ ಋಕ್ಕು ಇದರ ಮುಂದಿನ ಋಕ್ಕು ಸೇರಿ ಪ್ರಗಾಥವು. ಇದರಲ್ಲಿ ಇಂದ್ರನನ್ನು ಆಹ್ವಾನಮಾಡುವುದರಿಂದ ಇದಕ್ಕೆ ಇಂದ್ರನಿಹವವೆಂದು ಹೆಸರು. ಹಿಂದಿನ ವಿಧಿಯಂತೆ ಈ ಋಕ್ಕಿನ ಪ್ರಥಮ

ಪಾದದಲ್ಲಿಯೇ ಉದ್ದಿಷ್ಟದೇವತೆಯು ಎಂದರೆ ಇಂದ್ರನ ಹೆಸರಿರುವುದರಿಂದ ಈ ಋಕ್ಕಿನಲ್ಲಿ ಪ್ರಥಮ ದಿವಸ ಪಠಿಸಬೇಕಾದ ಲಕ್ಷಣವಿದೆ.

**ಪ್ರೈತು ಬ್ರಹ್ಮಣಸ್ಪತಿರಿತಿ ಬ್ರಾಹ್ಮಣಸ್ಪತ್ಯಃ ಪ್ರೇತಿ ಪ್ರಥಮೇಽಹನಿ ಪ್ರಥಮಸ್ಯಾಹ್ನೋ ರೂಪಂ ॥**

ಮಂತ್ರಾಂತರೇ ಲಕ್ಷಣಾಂತರಂ ದರ್ಶಯತಿ—ಬ್ರಾಹ್ಮಣಸ್ಪತ್ಯಃ ಪ್ರಗಾಥ ಇತ್ಯನುವರ್ತತೇ । ಅತ್ರ ಪ್ರಶಬ್ದೋ ಲಕ್ಷಣಮ್ ॥

ಪ್ರೈತು ಬ್ರಹ್ಮಣಸ್ಪತಿಃ ಪ್ರ (ಋ. ಸಂ. ೧-೪೦-೩) ಎಂಬುದು ಬ್ರಹ್ಮಣಸ್ಪತಿದೇವತಾಕವಾದ ಪ್ರಗಾಥವು. ಈ ಋಕ್ಕಿನಲ್ಲಿ ಪ್ರ ಎಂಬ ಉಪಸರ್ಗವಿರುವುದರಿಂದ ಇದು ಪ್ರಥಮದಿನದಲ್ಲಿ ಉಪಯೋಗಿಸಬೇಕಾದ ಮಂತ್ರದ ಲಕ್ಷಣವಿದೆ.

**ಅಗ್ನಿರ್ನೇತಾ ತ್ವಂ ಸೋಮ ಕ್ರತುಭಿಃ ಪಿನ್ವಂತ್ಯಪ ಇತಿ ಧಾಯ್ಯಾಃ ಪ್ರಥಮೇಷು ಪದೇಷು ದೇವತಾ ನಿರುಚ್ಯಂತೇ ಪ್ರಥಮೇಽಹನಿ ಪ್ರಥಮಸ್ಯಾಹ್ನೋ ರೂಪಂ ॥**

ಅಥ ಮಂತ್ರತ್ರಯೇ ಲಕ್ಷಣಂ ದರ್ಶಯತಿ -- ಶಸ್ತ್ರಮಧ್ಯೇ ಪ್ರಕ್ಷೇಪಣೀಯಾ ಋಚೋ ಧಾಯ್ಯಾಃ । ಅಗ್ನಿರ್ನೇತೇತಿ ಪ್ರಥಮಾ ಧಾಯ್ಯಾ ತ್ವಂ ಸೋಮ ಇತಿ ದ್ವಿತೀಯಾ ಪಿನ್ವಂತ್ಯಪ ಇತಿ ತೃತೀಯಾ । ಏತಾಸಾಂ ತಿಸೃಣಾಮೃಚಾಂ ಪ್ರಥಮೇಷು ಪಾದೇಷ್ವಗ್ನಿಸೋಮಮರುದ್ದೇವತಾ ನಿರ್ದಿಶ್ಯಂತೇ । ಪಿನ್ವಂತ್ಯಪೋ ಮರುತಃ ಸುದಾನವ ಇತಿ ಶ್ರವಣಾತ್ ॥ ಸೋಽಯಂ ದೇವತಾನಿರ್ದೇಶೋ ಲಕ್ಷಣಮ್ ॥

ಶಸ್ತ್ರಮಂತ್ರಗಳ ಮಧ್ಯದಲ್ಲಿ ಸೇರಿಸಬೇಕಾದ ಕೆಲವು ಮಂತ್ರಗಳಿಗೆ ಧಾಯ್ಯಾಮಂತ್ರಗಳೆಂದು ಹೆಸರು **ಅಗ್ನಿರ್ನೇತಾ ಭಗ ಇವ** (ಋ. ಸಂ. ೩-೨೧-೪) ಎಂಬ ಋಕ್ಕು ಮೊದಲನೆಯ ಧಾಯ್ಯಾಮಂತ್ರವು; **ತ್ವಂ ಸೋಮ ಕ್ರತುಭಿಸ್ಸುಕ್ರತುರ್ಭೂಃ** (ಋ. ಸಂ. ೧-೯೧-೨) ಎಂಬ ಋಕ್ಕು ಎರಡನೆಯ ಧಾಯ್ಯಾಮಂತ್ರವು; **ಪಿನ್ವಂತ್ಯಪೋ ಮರುತಃ** (ಋ. ಸಂ. ೧-೬೪-೬) ಎಂಬುದು ಮೂರನೇ ಧಾಯ್ಯಾಮಂತ್ರ. ಈ ಮೂರು ಮಂತ್ರಗಳ ಪ್ರಥಮಪಾದದಲ್ಲಿಯೇ ಉದ್ದಿಷ್ಟದೇವತೆಗಳ ಹೆಸರುಗಳು ಎಂದರೆ ಅಗ್ನಿಸೋಮಮರುದ್ದೇವತೆಗಳ ಹೆಸರುಗಳು ಕ್ರಮವಾಗಿ ಪಠಿತವಾಗಿವೆ. ಆದ್ದರಿಂದ ಈ ಮಂತ್ರಗಳನ್ನು ಪ್ರಥಮದಿನದಲ್ಲಿ ಪಠಿಸುವುದಕ್ಕೆ ಬೇಕಾದ ಲಕ್ಷಣಗಳನ್ನು ಹೊಂದಿವೆ.

**ಪ್ರ ವ ಇಂದ್ರಾಯ ಬೃಹತ ಇತಿ ಮರುತ್ವತೀಯಃ ಪ್ರಗಾಥಃ ಪ್ರೇತಿ ಪ್ರಥಮೇಽಹನಿ ಪ್ರಥಮಸ್ಯಾಹ್ನೋ ರೂಪಂ ॥**

ಮತ್ರಾಂತರೇ ಪ್ರಶಬ್ದರೂಪಂ ಲಕ್ಷಣಂ ದರ್ಶಯತಿ—

ಪ್ರ ವ ಇಂದ್ರಾಯ ಬೃಹತೇ (ಋ. ಸಂ. ೮-೮೯-೩) ಎಂಬ ಋಕ್ಕು ಮರುತ್ವತೀಯವಾದ ಪ್ರಗಾಥವು. ಈ ಋಕ್ಕಿನಲ್ಲಿ ಪ್ರ ಎಂಬ ಉಪಸರ್ಗಪ್ರಯೋಗವಿರುವುದರಿಂದ ಇದರಲ್ಲಿ ಪ್ರಥಮ ದಿವಸ ಪಠಿಸಲು ಆವಶ್ಯಕವಾದ ಲಕ್ಷಣವಿದೆ.

**ಆ ಯಾತ್ವಿಂದ್ರೋ ವಸ ಉಪ ನ ಇತಿ ಸೂಕ್ತಮೋತಿ ಪ್ರಥಮೇಽಹನಿ ಪ್ರಥಮಸ್ಯಾಹ್ನೋ ರೂಪಂ ॥**

**ಮಂತ್ರಾಂತರ ಆಕಾರರೂಪಂ ಲಕ್ಷಣಂ ದರ್ಶಯತಿ—**

**ಆ ಯಾತ್ವಿಂದ್ರೋ ವಸ** (ಋ. ಸಂ. ೪-೨೧-೧) ಎಂಬುದು ಒಂದು ಸೂಕ್ತದ ಪ್ರಾರಂಭ ಮಂತ್ರವು. ಈ ಋಕ್ಕಿನಲ್ಲಿ **ಆ** ಎಂಬ ಉಪಸರ್ಗವಿರುವುದರಿಂದ ಇದರಲ್ಲಿ ಪ್ರಥಮ ದಿವಸ ಪಠಿಸುವುದಕ್ಕೆ ಬೇಕಾದ ಲಕ್ಷಣವಿರುವುದು.

**ಅಭಿ ತ್ವಾ ಶೂರ ನೋನುಮೋಽಭಿ ತ್ವಾ ಪೂರ್ವಪೀತಯ ಇತಿ ರಥಂತರಂ ಪೃಷ್ಠಂ ಭವತಿ ರಥಂತರೇಽಹನಿ ಪ್ರಥಮೇಽಹನಿ ಪ್ರಥಮಸ್ಯಾಹ್ನೋ ರೂಪಂ ॥**

**ಅಥ ನಿಷ್ಕೇವಲ್ಯಶಸ್ತ್ರಗತಸ್ಯ ಮಂತ್ರಸ್ಯ ರಥಂತರಸಂಬಂಧರೂಪಂ ಲಕ್ಷಣಂ ದರ್ಶಯತಿ— ಅಭಿ ತ್ವಾ ಶೂರೇತಿ ರಥಂತರಸಾಮ್ನೋ ಯೋನಿಭೂತಃ। ಅಭಿ ತ್ವಾ ಪೂರ್ವಪೀತಯ ಇತಿ ತಸ್ಯಾನುಚರಃ। ಅತೋಽಭಿ ತ್ವಾ ಶೂರೇತ್ಯತ್ರ ರಥಂತರಸಾಮಸಾಧ್ಯಂ ಪೃಷ್ಠಂ ಭವತಿ । ಇದಂ ಪ್ರಗಾಥದ್ವಯಂ ರಥಂತರಸಾಮಸಂಬಂಧಿನ್ಯಹನಿ ಯೋಗ್ಯಮತೋ ರಥಂತರಸಂಬಂಧಸ್ಯ ರೂಪಸ್ಯ ಲಕ್ಷಣಸ್ಯ ಸದ್ಭಾವಾತ್ಪ್ರಥಮೇಽಹನಿ ಪ್ರಯುಜ್ಯತೇ ।**

ಈಗ ನಿಷ್ಕೇವಲ್ಯಶಸ್ತ್ರಮಂತ್ರದಲ್ಲಿರುವ ರಥಂತರ ಸಂಬಂಧವಾದ ಲಕ್ಷಣವನ್ನು ತಿಳಿಸುವರು. **ಅಭಿ ತ್ವಾ ಶೂರ ನೋನುಮಃ** (ಋ. ಸಂ. ೭-೩೨-೨೨) ಎಂಬ ಋಕ್ಕು ರಥಂತರಸಾಮಕ್ಕೆ ಮೂಲಭೂತವಾದುದು (ಪ್ರತಿಪದ್); **ಅಭಿ ತ್ವಾ ಪೂರ್ವಪೀತಯೇ** (ಋ. ಸಂ. ೮-೩-೭) ಎಂಬ ಋಕ್ಕು ಅನುಚರಮಂತ್ರವು. ಈ ಋಕ್ಕು ರಥಂತರಸಾಮಕ್ಕೆ ಉಪಯೋಗಿಸಲ್ಪಡುವುದು. ಈ ಎರಡು ಪ್ರಗಾಥಗಳಲ್ಲಿಯೂ ರಥಂತರವೆಂಬ ಶಬ್ದದ ಪಠನವಿರುವುದರಿಂದ ಪ್ರಥಮ ದಿನದಲ್ಲಿ ಪಠಿಸಲು ಅವಶ್ಯಕವಾದ ಲಕ್ಷಣಗಳಿವೆ.

**ಯದ್ವಾವಾನ ಪುರುತಮಂ ಪುರಾಷಾಳಿತಿ ಧಾಯ್ಯಾಽಽವೃತ್ರಹೇಂದ್ರೋ ನಾಮಾನ್ಯಪ್ರಾ ಇತ್ಯೇತಿ ಪ್ರಥಮೇಽಹನಿ ಪ್ರಥಮಸ್ಯಾಹ್ನೋ ರೂಪಂ ॥**

**ಮಂತ್ರಾಂತರೇ ತ್ವಾಕಾರರೂಪಂ ಲಕ್ಷಣಂ ದರ್ಶಯತಿ— ಯದ್ವಾವಾನೇತಿ ಶಸ್ತ್ರಮಧ್ಯೇ ಪ್ರಕ್ಷೇಪಣೀಯಾ। ತಸ್ಯಾ ದ್ವಿತೀಯಪಾದಾದಾವಾ ವೃತ್ರ ಹೇತ್ಯಾಕಾರಃ ಶ್ರುತಃ ॥**

ಈ ಮಂತ್ರದಲ್ಲಿ ಆಕಾರರೂಪವಾದ ಲಕ್ಷಣವನ್ನು ತೋರಿಸುವರು. **ಯದ್ವಾವಾನ ಪುರುತಮಂ** (ಋ. ಸಂ. ೧೦-೭೪-೬) ಎಂಬ ಮಂತ್ರವನ್ನು (ಧಾಯ್ಯಾಮಂತ್ರವನ್ನು) ಶಸ್ತ್ರಮಂತ್ರಗಳ ಮಧ್ಯದಲ್ಲಿ ಸೇರಿಸಬೇಕು. ಈ ಮಂತ್ರದ ಎರಡನೇ ಪಾದದ ಪ್ರಾರಂಭದಲ್ಲಿ **ವೃತ್ರಹಾ** ಎಂಬ ಶಬ್ದವಿರುವುದು. ಇದರಲ್ಲಿ ಆ ಎಂಬ ಆಕಾರವಿರುವುದರಿಂದ ಈ ಮಂತ್ರದಲ್ಲಿ ಮೊದಲನೇ ದಿವಸ ಪಠಿಸಲು ಬೇಕಾದ ಲಕ್ಷಣವಿರುವುದು.

ಪಿಬಾ ಸುತಸ್ಯ ರಸಿನ ಇತಿ ಸಾಮಪ್ರಗಾಥಃ ಪಿಬವಾನ್ಪ್ರಥಮೇಽಹನಿ ಪ್ರಥಮಸ್ಯಾಹ್ನೋ ರೂಪಂ ॥

ಮಂತ್ರಾಂತರೇ ಪಿಬತಿಧಾತುರೂಪಂ ಲಕ್ಷಣಂ ದರ್ಶಯತಿ ಪಿಬಾ ಸುತಸ್ಯೇತ್ಯಯಂ ಕಸ್ಯಚಿತ್ಸಾಮವಿಶೇಷಸ್ಯಾಧಾರಭೂತಃ ಪ್ರಗಾಥಃ ॥

ಪಿಬಾ ಸುತಸ್ಯ ರಸಿನಃ (ಋ. ಸಂ. ೮-೩-೧) ಎಂಬ ಋಕ್ಕು ಒಂದು ಸಾಮಮಂತ್ರಕ್ಕೆ ಆಧಾರಭೂತವಾದ ಪ್ರಗಾಥವು. ಇದರಲ್ಲಿ ಪಿಬ ಎಂಬ ಶಬ್ದಪ್ರಯೋಗವಿರುವುದರಿಂದ ಈ ಋಕ್ಕಿನಲ್ಲಿ ಪ್ರಥಮ ದಿವಸದಲ್ಲಿ ಪಠಿಸಲು ಯೋಗ್ಯವಾದ ಲಕ್ಷಣ ವಿರುವುದು.

ತ್ಯಮೂಷು ವಾಜಿನಂ ದೇವಜೂತಮಿತಿ ತಾರ್ಕ್ಷ್ಯಂ ಪುರಸ್ತಾತ್ಸೂಕ್ತಸ್ಯ ಶಂಸತಿ ಸ್ವಸ್ತ್ಯಯನಂ ವೈ ತಾರ್ಕ್ಷ್ಯಃ ಸ್ವಸ್ತಿತಾಯೈ ॥ ಸ್ವಸ್ತ್ಯಯನಮೇವ ತತ್ಕುರುತೇ ಸ್ವಸ್ತಿ ಸಂವತ್ಸರಸ್ಯ ಪಾರಮಶ್ನುತೇ ಯ ಏವಂ ವೇದ ॥

ಅಥ ನಿವಿದ್ಧಾನೀಯಸ್ಯ ಸೂಕ್ತಸ್ಯಾದೌ ಕಿಂಚಿತ್ಸೂಕ್ತಾಂತರಂ ವಿಧತ್ತೇ—ತಾರ್ಕ್ಷ್ಯೋ ದೇವತಾಽಸ್ಯ ತಾರ್ಕ್ಷ್ಯಂ ಸ್ವಸ್ತ್ಯಯನಂ ಕ್ಷೇಮಪ್ರಾಪ್ತಿರೂಪಮತೋ ನಿವಿದ್ಧಾನೀಯಸೂಕ್ತಸ್ಯ ಪುರಸ್ತಾತ್ತಾರ್ಕ್ಷ್ಯಸೂಕ್ತಶಂಸನಂ ಸ್ವಸ್ತಿತಾಯೈ ಯಜಮಾನಸ್ಯ ಕ್ಷೇಮಾಯ ಭವತಿ ॥ ವೇದನಂ ಪ್ರಶಂಸತಿ—ವೇದಿತಾಽನೇನ ವೇದನೇನ ಸ್ವಸ್ತ್ಯಯನಮೇವ ಕ್ಷೇಮಪ್ರಾಪ್ತಿಮೇವ ಸಂಪಾದಯತಿ । ತಥಾ ದ್ವಾದಶಾಹದ್ವಾರಾ ಸಂವತ್ಸರಸತ್ರಸ್ಯ ಪಾರಮಶ್ನುತೇ ಸಮಾಪ್ತಿಂ ಪ್ರಾಪ್ನೋತಿ ॥

ನಿವಿದ್ಧಾನಸೂಕ್ತಕ್ಕೆ ಮೊದಲು ಬೇರೊಂದು ಸೂಕ್ತವನ್ನು ತಿಳಿಸುವರು. **ತ್ಯಮೂ ಷು ವಾಜಿನಂ** (ಋ. ಸಂ ೧೦-೧೭೮-೧) ಎಂಬುದು ಕ್ಷೇಮವನ್ನುಂಟುಮಾಡುವ ಸ್ವಸ್ತಿಮಂತ್ರವು. ಇದನ್ನು ನಿವಿದ್ಧಾನೀಯ ಸೂಕ್ತಕ್ಕೆ ಮೊದಲ ಯಜಮಾನನ ಕ್ಷೇಮಪ್ರಾಪ್ತಿಗಾಗಿ ನಿವಿದ್ಧಾನೀಯ ಸೂಕ್ತಕ್ಕೆ ಪ್ರಾರಂಭದಲ್ಲಿಯೇ ಪಠಿಸುತ್ತಾರೆ. ಈ ವಿಷಯವೆಲ್ಲವನ್ನೂ ತಿಳಿದಿರುವ ಪುರುಷನು ಕ್ಷೇಮಾಭಿವೃದ್ಧಿಯನ್ನು ಹೊಂದುವನು ಮತ್ತು ಈ ದ್ವಾದಶಾಹಯಜ್ಞದ ಪರಿಸಮಾಪ್ತಿಯನ್ನೂ (ಅಂತ್ಯವನ್ನೂ) ಸೇರುವನು ಎಂದರೆ ಯಜ್ಞವನ್ನು ನಿರ್ವಿಘ್ನವಾಗಿ ಸಮಾಪ್ತಿಗೊಳಿಸುವನು.

*English Translation*

**(The two first days of the Dvadasaha sacrifice)**

**(The Shastras of the morning and midday libations on the first day)**

Agni is the leading deity of the first day. The Stoma required is Trivrit (the nine-fold), the Saman Rathantaram, the metre Gayatri. He who knows what deity, what Stoma, what Saman, what metre are required on the first day,

becomes successful by it. The words a and pra are the characteristics of the first day. Further characteristics of this day are: yukta joined, ratha carriage, asu swift, pa to drink, the mentioning of the deities in the first padas of the verses repeated by their very names, the allusion to this world (earth) Samans akin to Rathantaram, metres akin to Gayatri, the future of kri to make.

The Ajya hymn of the first day is, upa prayanto adhvaram (1,74); for it contains the term pra, which is a characteristic of the first day.

The Pra-uga Shastram, is vayarayahi darsateme (1, 2—3); for it contains the term a, a characteristic of the first day.

The Pratipad (beginning) of the Marutvaitya Shastra is, a tva ratham yathotaye (8, 57, 1-3); its Anuchara (sequel), idam vaso sutam andhah (8, 2, 1-3); they contain the terms, ratha and piba (drin) which are characteristics of the first day.

The Indra-Nihava Pragatha is, indra nediya edihi (Valakh. 5, 5-56); here the deity is mentioned in the first pada, which is characteristic of the first day.

The Brahmanspatya Pragatha is, praitu Brahmanaspatih (1, 40, 3-4); It contains the term pra which is a characteristic of the first day.

The Dhayyas are, agnir neta, tvam Soma kratubhih, pinvanty apah (Ait. Br. 3, 18); here are the deities mentioned in the first padas which is a characteristic of the first day.

The Marutvatiya Pragatha is, pra va indraya bhihate (8.78, 3-4); it contains the term pra, which is a characteristic of the first day.

The Nivid hymn is, a yatv indro vase (4, 21); it contains the term a, which is a characteristic of the first day.

**(Nishkevalya Shastra)**

The Rathantara Prishtham is, abhi tva sura nonumo (7, 32, 22-23) and abhi tva puvvapitaye (8, 3, 7-8); (this is done) at a Rathantara day, of which characteristic the first day is.

The Dahayya is, yad vavana (Ait. Br. 3, 22); it contains the term a, which is a characteristic of the first day.

The Sama Pragatha is, piba sutasya (8, 3, 1-2); it contains the term piba "drink" which is a characteristic of the first day.

The Tarkshyam is, tvam u shu rajinam (Ait. Br. 4, 20). The Hotar repeats it before the (Nivid) hymn of the Nishkevalya Shastra. The Tarkshyam is safe

journey. It is repeated for securing safety. He who has such a knowledge makes his journey in safety and reaches the end of the year in safety.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯೇ ವಿಂಶೋಽಧ್ಯಾಯಸ್ಯ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವಾದುದು.



## ಅಥ ವಿಂಶೋಽಧ್ಯಾಯೇ ದ್ವಿತೀಯಃ ಖಂಡಃ

### ಇಪ್ಪತ್ತನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ ನಿಷ್ಕೇವಲ್ಯಶಸ್ತ್ರದ ಉಳಿದ ಭಾಗಗಳು ಮತ್ತು ತೃತೀಯಸವನದಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳು ]



**ಆ ನ ಇಂದ್ರೋ ದೂರಾದಾ ನ ಆಸಾದಿತಿ ಸೂಕ್ತಮೇತಿ ಪ್ರಥಮೇಽಹನಿ ಪ್ರಥಮಸ್ಯಾಹ್ನೋ ರೂಪಂ ॥**

ಯಸ್ಯ ಸೂಕ್ತಸ್ಯ ಪುರಸ್ತಾತ್ತಾರ್ಕ್ಷ್ಯಶಂಸನಂ ವಿಹಿತಂ ತಸ್ಮಿನ್ನಿವಿದ್ಧಾನಸೂಕ್ತ ಆಕಾರರೂಪಂ ಲಕ್ಷಣಂ ದರ್ಶಯತಿ—

ಹಿಂದಿನ ಖಂಡದಲ್ಲಿ ನಿವಿದ್ಧಾನಸೂಕ್ತಕ್ಕೆ ಮೊದಲು ತಾರ್ಕ್ಷ್ಯಸೂಕ್ತವನ್ನು ಪಠಿಸಬೇಕೆಂದು ಹೇಳಿದ್ದಾಯಿತು. ಈಗ ನಿವಿದ್ಧಾನಸೂಕ್ತದ ಲಕ್ಷಣವನ್ನು ತಿಳಿಸುವರು. **ಆ ನ ಇಂದ್ರೋ ದೂರಾದಾನ** (ಋ. ಸಂ. ೪-೨೦-೧) ಎಂಬ ಋಕ್ಕು ಧಾಯ್ಯಾಸೂಕ್ತದ ಮೊದಲನೇ ಮಂತ್ರವು. ಈ ಋಕ್ಕಿನ ಪ್ರಾರಂಭದಲ್ಲಿಯೇ ಆ ಎಂಬ ಉಪಸರ್ಗಪ್ರಯೋಗವಿರುವುದು. ಆದ್ದರಿಂದ ಈ ಋಕ್ಕಿನಲ್ಲಿ ಪ್ರಥಮ ದಿವಸ ಪಠಿಸಲು ಯೋಗ್ಯವಾದ ಲಕ್ಷಣವಿರುವುದು.

**ಸಂಪಾತೌ ಭವತೋ ನಿಷ್ಕೇವಲ್ಯಮರುತ್ವತೀಯಯೋರ್ನಿವಿದ್ಧಾನೇ ವಾಮದೇವೋ ವಾ ಇಮಾಂಲ್ಲೋಕಾನಪಶ್ಯತ್ತಾನ್ಸಂಪಾತೈಃ ಸಮಪತದ್ಯತ್ಸಂಪಾತೈಃ ಸಮಪತತ್ತತ್ಸಂಪಾತಾನಾಂ ಸಂಪಾತತ್ವಂ**

**ತದ್ಯತ್ಸಂಪಾತೌ ಪ್ರಥಮೇಽಹನಿ ಶಂಸತಿ ಸ್ವರ್ಗಸ್ಯ ಲೋಕಸ್ಯ ಸಮಷ್ಟ್ಯೈ ಸಂಪತ್ತ್ಯೈ ಸಂಗತ್ಯೈ ॥**

ಇದಾನೀಂ ನಿಷ್ಕೇವಲ್ಯಮರುತ್ವತೀಯಯೋಃ ಶಸ್ತ್ರಯೋರ್ನಿವಿದ್ಧಾನೇ ಸೂಕ್ತೇ ಸ್ತೌ-ಮಾಹ—ಸಂಪತ್ತಿಂ ಪ್ರಾಪ್ನುವಂತ್ಯಾಭ್ಯಾಂ ಯಜಮಾನಾಃ ಸರ್ವಾನ್ ಲೋಕಾನಿತಿ ಸಂಪಾತೌ ನಿಷ್ಕೇವಲ್ಯಮರುತ್ವತೀಯನಿವಿದ್ಧಾನಯೋಃ ಸೂಕ್ತಯೋರ್ವೈಕೃತಯೋಃ ಸಂಪಾತ ಇತಿ ಸಂಜ್ಞಾ । ಆ ಯಾತ್ವಿಂದ್ರೋ ವಸ ಇತಿ ಮರುತ್ವತೀಯಶಸ್ತ್ರಸ್ಯ ನಿವಿದ್ಧಾನಂ ಸೂಕ್ತಮ್ । ಆ ನ ಇಂದ್ರ ಇತಿ ನಿಷ್ಕೇವಲ್ಯಸ್ಯ ನಿವಿದ್ಧಾನಂ ಸೂಕ್ತಮ್ । ಏಕಯೋಃ ಸಂಪಾತ ಇತಿ ಸಂಜ್ಞಾ ಪ್ರತಿ-ಪಾದ್ಯತೇ । ಪುರಾ ಕದಾಚಿದ್ವಾಮದೇವ ಇಮಾನ್ಭೂರಾದೀನ್ ಲೋಕಾನ್ ದೃಷ್ಟ್ವಾ ತತ್ಪ್ರಾ-ಪ್ತ್ಯುಪಾಯಾಂ ವಿಚಾರ್ಯ ಸಂಪಾತಸೂಕ್ತೈಸ್ತಾನ್ಪ್ರಾಪ್ತವಾನ್ ॥ ಅತಃ ಸಂಪತತಿ ಸಮ್ಯಕ್-ಪ್ರಾಪ್ನೋತಿ ಲೋಕಾನೇತೈರಿತಿ ಸಂಪಾತತ್ವಂ ನಾಮ ಸಂಪನ್ನಮ್ । ತಥಾಸತ್ಯತ್ರ ಪ್ರಥಮೇಽ-ಹನಿ ನಿಷ್ಕೇವಲ್ಯಮರುತ್ವತೀಯಯೋಃ ಸಂಪಾತನಾಮಕಸೂಕ್ತೇ ಯದಿ ಶಂಸೇತ್ತದಾನೀಂ ತಚ್ಛಂಸನಂ ಸ್ವರ್ಗಲೋಕಪ್ರಾಪ್ತಿಭೋಗ್ಯವಸ್ತ್ರಸಂಪತ್ತಿತದ್ಭೋಗಸಂಬಂಧಾರ್ಥಂ ಸಂಪದ್ಯತೇ ॥

ಈ ನಿಷ್ಕೇವಲ್ಯಮರುತ್ವತೀಯ ಶಸ್ತ್ರಗಳಲ್ಲಿ ಸೇರಿಸಿ ಪಠಿಸಬೇಕಾದ ಎರಡು ನಿವಿದ್ಧಾನ ಸೂಕ್ತಗಳನ್ನು ಪ್ರಶಂಸೆ ಮಾಡುವರು. ನಿಷ್ಕೇವಲ್ಯ ಮತ್ತು ಮರುತ್ವತೀಯ ಶಸ್ತ್ರಮಂತ್ರಗಳಲ್ಲಿ ಸೇರಿಸಬೇಕಾದ ಎರಡು ನಿವಿದ್ಧಾನೀಯಸೂಕ್ತಗಳು ಸಮಸ್ತಲೋಕಗಳಲ್ಲಿಯೂ ಯಜಮಾನರಿಗೆ ಸಂಪತ್ತನ್ನು ಒದಗಿಸಿಕೊಡುವುದರಿಂದ ಈ ನಿವಿದ್ಧಾನಸೂಕ್ತಗಳಿಗೆ ಸಂಪಾತವೆಂಬ ಹೆಸರು ಬಂದಿರುವುದು. ಆ ಯಾತ್ವಿಂದ್ರೋವಸ ಎಂಬುವುದು ಮರುತ್ವತೀಯಶಸ್ತ್ರಮಂತ್ರಗಳಲ್ಲಿ ಸೇರಿಸಬೇಕಾದ ನಿವಿದ್ಧಾನೀಯಸೂಕ್ತವು. ಆ ನ ಇಂದ್ರ ಎಂಬುದು ನಿಷ್ಕೇವಲ್ಯಶಸ್ತ್ರಮಂತ್ರಗಳಲ್ಲಿ ಸೇರಿಸಬೇಕಾದ ನಿವಿದ್ಧಾನೀಯಸೂಕ್ತವು. ಈ ಎರಡು ನಿವಿದ್ಧಾನೀಯಸೂಕ್ತಗಳಿಗೂ ಸಂಪಾತವೆಂಬ ಹೆಸರಿರುವುದು. ಪೂರ್ವದಲ್ಲಿ ವಾಮದೇವಮಹರ್ಷಿಯು ಭೂಲೋಕವೇ ಮೊದಲಾದ ಲೋಕಗಳನ್ನು ನೋಡಿ ಅವುಗಳನ್ನು ಪಡೆಯಬೇಕೆಂದು ಆಲೋಚಿಸಿ ಸಂಪಾತಸೂಕ್ತಗಳನ್ನು ಪಠಿಸಿ ಅದರಿಂದ ಆ ಲೋಕಗಳನ್ನು ಪಡೆದನು. ಈ ಸೂಕ್ತಗಳ ಪಠನದಿಂದ ಆ ಲೋಕಗಳನ್ನು ಚೆನ್ನಾಗಿ (ಸುಲಭವಾಗಿ) ಪಡೆಯಲು ಸಾಧ್ಯವಾದ್ದರಿಂದ ಈ ಸೂಕ್ತಗಳಿಗೆ ಸಂಪಾತವೆಂಬ ಹೆಸರು ಬಂದಿತು. ಆದ್ದರಿಂದ ಯಾಗದ ಮೊದಲನೇ ದಿವಸ ಈ ಸೂಕ್ತಗಳನ್ನು ಪಠಿಸಿದರೆ ಅದರ ಪ್ರಭಾವದಿಂದ ಯಜಮಾನರಿಗೆ ಸ್ವರ್ಗಲೋಕಾದಿಗಳು ಪ್ರಾಪ್ತವಾಗಿ ಅಲ್ಲಿ ವಸ್ತ್ರ ಮೊದಲಾದ ಭೋಗ್ಯವಸ್ತುಗಳ ಪ್ರಾಪ್ತಿಯುಂಟಾಗುವುದು.

**ತತ್ಸವಿತುರ್ವೃಣೀಮಹೇಽದ್ಯಾ ನೋ ದೇವ ಸವಿತರಿತಿ ವೈಶ್ವದೇವಸ್ಯ ಪ್ರತಿಪದನುಚರೌ ರಾಥಂತರೇಽಹನಿ ಪ್ರಥಮೇಽಹನಿ ಪ್ರಥಮ-ಸ್ಯಾಹ್ನೋ ರೂಪಂ ॥**

ಅಥ ದ್ವಯೋಸ್ತ್ರ್ಯೃಚಯೋಃ ರಥಂತರಸಂಬಂಧರೂಪಂ ಲಕ್ಷಣಂ ದರ್ಶಯತಿ—ಅದ್ಯಾ ನ ಇತಿ ತ್ರ್ಯೃಚಸ್ತಸ್ಯಾನುಚರೋಽತ ಉಭಯೋರಪಿ ರಥಂತರಸಂಬಂಧೋಽಸ್ತೀತಿ ರಥಂತರಸಂ-ಬಂಧೇಽಹನಿ ಯೋಗ್ಯತಾಽಸ್ತಿ ॥

**ತತ್ಸವಿತುರ್ವೃಣೀಮಹೇ** (ಋ. ಸಂ. ೫-೮೨-೧) ಎಂಬ ಋಕ್ಕೂ ಮತ್ತು **ಅದ್ಯಾ ನೋ ದೇವಸವಿತಃ** (ಋ. ಸಂ. ೫-೮೨-೪) ಎಂಬ ಋಕ್ಕೂ ಎರಡು ತ್ರ್ಯೃಚಗಳ ಮೊದಲನೇ ಋಕ್ಕುಗಳು ಈ ತೃಚಗಳಲ್ಲಿ ರಥಂತರ ಎಂಬ ಶಬ್ದದ ಪ್ರಯೋಗವಿರುವುದು. ಮತ್ತು ಈ ಎರಡು ಋಕ್ಕುಗಳೂ ಈ ತೃಚಗಳಲ್ಲಿ ಅನುಚರ ಎಂಬ (ಎರಡನೇ) ಋಕ್ಕುಗಳಾಗಿರುವವು. ಆದ್ದರಿಂದ ಇವುಗಳನ್ನು ಮೊದಲನೇ ದಿವಸ ಪಠಿಸಲು ಯೋಗ್ಯವಾಗಿವೆ. ಎಂದರೆ ಆ ಲಕ್ಷಣಗಳು ಇವುಗಳಲ್ಲಿವೆ ಎಂದಭಿಪ್ರಾಯವು.

## ಯುಂಜತೇ ಮನ ಉತ ಯುಂಜತೇ ಧಿಯ ಇತಿ ಸಾವಿತ್ರಂ ಯುಕ್ತ-ವತ್ಪ್ರಥಮೇಽಹನಿ ಪ್ರಥಮಸ್ಯಾಹ್ನೋ ರೂಪಂ ॥

**ಸೂಕ್ತಾಂತರೇ ಯುಜಿಧಾತುರೂಪಂ ಲಕ್ಷಣಂ ದರ್ಶಯತಿ—ಪ್ರಥಮಾಯಾ ಋಚೋಽವಸಾನೇ ದೇವಸ್ಯ ಸವಿತುಃ ಪರಿಷ್ಟುತಿರಿತಿ ಶ್ರುತತ್ವಾದಿದಂ ಸವಿತೃದೇವತಾಕಮ್ । ಯುಜಿಧಾತುಸ್ತು ವಿಸ್ಪಷ್ಟಃ ॥**

**ಯುಂಜತೇ ಮನ ಉತ ಯುಂಜತೇ ಧಿಯಃ** (ಋ. ಸಂ. ೫-೮-೧) ಎಂಬ ಋಕ್ಕಿನ ಕೊನೆಯ ಪಾದದಲ್ಲಿ **ದೇವಸ್ಯ ಸವಿತುಃ ಪರಿಷ್ಟುತಿಃ** ಎಂದಿರುವುದರಿಂದ ಈ ಋಕ್ಕು ಸವಿತೃದೇವತಾಕವು. ಈ ಋಕ್ಕಿನಲ್ಲಿ **ಯುಜಿಧಾತು** (ಯುಂಜತೇ) ಪ್ರಯೋಗವಿರುವುದರಿಂದ ಈ ಋಕ್ಕಿನಲ್ಲಿ ಮೊದಲು ದಿವಸ ಪಠಿಸಲು ಯೋಗ್ಯವಾದ ಲಕ್ಷಣವಿರುವುದು.

## ಪ್ರ ದ್ಯಾವಾ ಯಜ್ಞೈಃ ಪೃಥಿವೀ ಋತಾವೃಧೇತಿ ದ್ಯಾವಾಪೃಥಿವೀಯಂ ಪ್ರೇತಿ ಪ್ರಥಮೇಽಹನಿ ಪ್ರಥಮಸ್ಯಾಹ್ನೋ ರೂಪಂ ॥

**ಸೂಕ್ತಾಂತರೇ ಪ್ರಶಬ್ದರೂಪಂ ಲಕ್ಷಣಂ ದರ್ಶಯತಿ—**

**ಪ್ರ ದ್ಯಾವಾ ಯಜ್ಞೈ ಪೃಥಿವೀ** (ಋ. ಸಂ ೧-೧೫೯-೧, ಎಂಬ ಋಕ್ಕು ದ್ಯಾವಾಪೃಥಿವೀ ದೇವತಾಕವಾಗಿರುವುದು. ಈ ಋಕ್ಕಿನ ಪ್ರಥಮ ಪಾದದಲ್ಲಿ ಪ್ರ ಎಂಬ ಉಪಸರ್ಗದ ಪ್ರಯೋಗವಿರುವುದರಿಂದ ಈ ಋಕ್ಕಿನಲ್ಲಿ ಪ್ರಥಮ ದಿವಸದಲ್ಲಿ ಪಠಿಸಲು ಅವಶ್ಯಕವಾದ ಲಕ್ಷಣವಿರುವುದು.

## ಇಹೇಹ ವೋ ಮನಸಾ ಬಂಧುತಾ ನರ ಇತ್ಯಾರ್ಭವಂ ಯದ್ವಾ ಏತಿ ಚ ಪ್ರೇತಿ ಚ ತತ್ಪ್ರಥಮಸ್ಯಾಹ್ನೋ ರೂಪಂ ತದ್ಯತ್ಪ್ರೇತಿ ಸರ್ವಮ-ಭವಿಷ್ಯತ್ಪ್ರೈಷ್ಯನ್ನೇವಾಸ್ಮಾಲ್ಲೋಕಾದ್ಯಜಮಾನಾ ಇತಿ ತದ್ಯದಿಹೇಹ ವೋ ಮನಸಾ ಬಂಧುತಾ ನರ ಇತ್ಯಾರ್ಭವಂ ಪ್ರಥಮೇಽಹನಿ ಶಂಸತ್ಯಯಂ ವೈ ಲೋಕ ಇಹೇಹಾಸ್ಮಿನ್ನೇವೈನಾಂಸ್ತಲ್ಲೋಕೇ ರಮಯತಿ ॥

ಅಸ್ಮಿನ್ವೈಶ್ವದೇವಶಸ್ತ್ರೇ ಸೂಕ್ತಾಂತರಂ ವಿಧತ್ತೇ—ಇಹೇಹ ವ ಇತ್ಯೇತತ್ಸೂಕ್ತ ಮೃಭು ದೇವತಾಕಂ ದ್ವಿತೀಯಸ್ಯಾಯಾ ಋಚೋಂತೇ ತೇನ ದೇವತ್ವಮೃಭವಃ **ಸಮಾನಶೇತಿ ಶ್ರವಣಾತ್।**

**ಆಕಾರಪ್ರಶಬ್ದಾದಿಕಂ ಲಕ್ಷಣಂ ಮಂತ್ರೇ ನಾಸ್ತೀತ್ಯಾಶಂಕ್ಯ ಯದ್ವೇತ್ಯಾದಿನಾ ತತ್ಸದ್ಭಾವೇ ಬಾಧ ಉಪನ್ಯಸ್ಯತೇ । ಯದೇತದೇತಿ ಚ ಪ್ರೇತಿ ಚೇತಿ ತದೇತತ್ಪ್ರಥಮಸ್ಯಾಹ್ನೋ ರೂಪಂ ಲಕ್ಷಣಮಿತಿ ಪೂರ್ವಮುಕ್ತಂ ತತ್ತಥಾ ಸತಿ ಯದಿ ಪ್ರೇತ್ಯನೇನ ಲಕ್ಷಣೇನ ಯುಕ್ತಂ ಸರ್ವಂ ಸೂಕ್ತಜಾತಮಭವಿಷ್ಯತ್ತದಾನೀಂ ಯಜಮಾನಾ ಅಸ್ಮಾಲ್ಲೋಕಾತ್ ಪ್ರೈಷ್ಯನ್ ಪ್ರೈಷ್ಯಂತಿ ಮರಿಷ್ಯಂತ್ಯೇವೇತಿ ಬಾಧೋಪನ್ಯಾಸಃ । ತದ್ಯದಿತ್ಯಾದಿನಾ ಸಮಾಧಾನಮುಪನ್ಯಸ್ಯತೇ । ಯಸ್ಮಾತ್ ಪ್ರಶಬ್ದಯೋಗೇ ಬಾಧೋಽಸ್ತಿ ತಸ್ಮಾತ್ಕಾರಣಾದಿಹೇಹೇತಿ ಸೂಕ್ತಂ ಯದಿ ಪ್ರಥಮೇಽಹನಿ ಶಂಸೇತ್ತದಾನೀಮಿಹೇಹಶಬ್ದೇನಾಸ್ಯ ಭೂಲೋಕಸ್ಯ ವಿವಕ್ಷಿತತ್ವಾದಸ್ಮಿನ್ನೇವ ಭೂಲೋಕೇ ತತ್ಸೂಕ್ತಪಾಠೇನೈನಾನ್ಯಜಮಾನಾನ್ರಮಯತಿ ಚಿರಂ ಕ್ರೀಡಯತಿ । ತತಃ ಪ್ರಶಬ್ದಪ್ರಯುಕ್ತೋ ಮರಣಬಾಧೋಽಪಿ ಪರಿಹೃತೋ ಭವತಿ ॥**

ಈಗ ವೈಶ್ವದೇವಶಸ್ತ್ರಮಂತ್ರಗಳಲ್ಲಿರುವ ಬೇರೆ ಸೂಕ್ತವನ್ನು ವಿವರಿಸುವರು—**ಇಹೇಹ ವೋ ಮನಸಾ** (ಋ. ಸಂ. ೩-೬೦-೧) ಎಂಬ ಋಕ್ಕು ಋಭುದೇವತಾಕವಾದುದು. ಏಕೆಂದರೆ ಈ ಸೂಕ್ತದ ಎರಡನೇ ಋಕ್ಕುಗಳು (ಅನುಚರ ಋಕ್ಕುಗಳು) ಈ ಋಕ್ಕಿನ ಕೊನೆಯ ಪಾದದಲ್ಲಿ **ಋಭವಃ ಸಮಾನಶ** ಎಂದಿರುವುದರಿಂದ ಇವು ಋಭುದೇವತಾಕವು. ಈ ಋಕ್ಕುಗಳಲ್ಲಿ ಪ್ರಥಮ ದಿವಸ ಉಪಯೋಗಿಸಲ್ಪಡುವ ಋಕ್ಕುಗಳಲ್ಲಿರಬೇಕಾದ ಆಕಾರ ಪ್ರ ಎಂಬ ಉಪಸರ್ಗ ಮೊದಲಾದವುಗಳಿರುವುದಿಲ್ಲ. **ಏತಿ ಪ್ರೇತಿ** ಎಂಬ ಶಬ್ದಗಳು ಪ್ರಥಮದಿನದ ಲಕ್ಷಣಗಳೆಂದು ಹಿಂದೆ ಹೇಳಲಾಗಿದೆಯಷ್ಟೆ. ಈ ಶಬ್ದಗಳು ಸಾಧಾರಣವಾಗಿ ಯಜಮಾನರು **ಮರಿಷ್ಯಂತಿ**—ಮೃತರಾಗುವರು ಎಂಬ ಭವಿಷ್ಯದರ್ಥವನ್ನು ಸೂಚಿಸುವುದರಿಂದ ಇವು ಅಪಶಬ್ದಗಳಾಗಿರುವವೆಂದು ಭಾವಿಸಬೇಕು. ಆದುದರಿಂದ ಈ ಶಬ್ದಗಳಿಗೆ ಬದಲಾಗಿ **ಇಹೇಹ ವ** ಮೊದಲಾದ ಶಬ್ದಗಳಿರುವ ಮಂತ್ರಗಳನ್ನು ಪಠಿಸಿದಲ್ಲಿ ಯಜಮಾನರಿಗೆ ಯಾವ ಬಾಧೆಯೂ ಉಂಟಾಗುವುದಿಲ್ಲ. **ಇಹೇಹ** ಮೊದಲಾದ ಶಬ್ದಗಳಿಗೆ ಈ (ಭೂ) ಲೋಕದಲ್ಲಿ ಎಂದರ್ಥವಾಗುವುದರಿಂದ ಭೂಲೋಕದಲ್ಲಿ ಜೀವಿಸಿರುವ ಕಾಲದಲ್ಲಿ ಮೃತ್ಯುಭಯವಿಲ್ಲವೆಂಬ ಅಂಶವನ್ನು **ಇಹೇಹ** ಎಂಬ ಶಬ್ದಗಳಿಂದ ಅರ್ಥವು ಭಾಸವಾಗುವುದು. ಆದ್ದರಿಂದ ಪ್ರಥಮ ದಿನದಲ್ಲಿ ಇಹೇಹ ಮೊದಲಾದ ಶಬ್ದಗಳಿರುವ ಸೂಕ್ತವನ್ನು ಪಠಿಸಿದಲ್ಲಿ ಇದರಿಂದ ಯಜಮಾನರಿಗೆ ಈ ಲೋಕದ ಸುಖಸಂತೋಷಗಳಿರುವವು. ಮತ್ತು ಪ್ರಶಬ್ದ ಪ್ರಯೋಗಾದಿಗಳಿಂದ ಮರಣಬಾಧೆಯ ಪರಿಹಾರವಾಗುವುದು ಎಂದಭಿಪ್ರಾಯವು.

**ದೇವಾನ್ಹುವೇ ಬೃಹಚ್ಛ್ರವಸಃ ಸ್ವಸ್ತಯ ಇತಿ ವೈಶ್ವದೇವಂ ಪ್ರಥಮೇ ಪದೇ ದೇವತಾ ನಿರುಚ್ಯಂತೇ ಪ್ರಥಮೇಽಹನಿ ಪ್ರಥಮಸ್ಯಾಹ್ನೋ ರೂಪಂ ॥**

**ಸೂಕ್ತಾಂತರಸ್ಯ ಪ್ರಥಮಪಾದೇ ದೇವತಾಭಿಧಾನಂ ಲಕ್ಷಣಂ ದರ್ಶಯತಿ—ದೇವಾನಿತ್ಯಾದಿಕೇ ಸೂಕ್ತೇ ಬಹುವಚನಾಂತಸ್ಯ ದೇವಶಬ್ದಸ್ಯ ಶ್ರವಣಾದ್ದೇವತಾಬಾಹುಲ್ಯೇನೇದಂ ಸೂಕ್ತಂ ವೈಶ್ವದೇವಂ । ಪ್ರಥಮಪಾದೇ ದೇವಶಬ್ದಸ್ತು ವಿಸ್ಪಷ್ಟಃ ॥**

ವೈಶ್ವದೇವಸೂಕ್ತದ ಪ್ರಥಮ ಪಾದದಲ್ಲಿ ದೇವತಾಭಿಧಾನವನ್ನು ಹೇಳಿರುವುದರಿಂದ ಪ್ರಥಮದಿನದ ಲಕ್ಷಣವನ್ನು ತಿಳಿಸುವರು. **ದೇವಾನ್ಹುವೇ ಬೃಹಚ್ಛ್ರವಸಃ** (ಋ. ಸಂ. ೧೦-೬೬-೧) ಎಂಬ ಸೂಕ್ತದ ಮೊದಲನೇ ಋಕ್ಕಿನಲ್ಲಿ

ದೇವಾನ್ ಎಂಬ ಬಹುವಚನಾಂತ ಶಬ್ದವಿರುವುದರಿಂದ ಈ ಸೂಕ್ತವು ವೈಶ್ವದೇವತಾಕವು. ಮತ್ತು ಋಕ್ಕಿನ ಪ್ರಥಮ ಪಾದದಲ್ಲಿಯೇ ಉದ್ದಿಷ್ಟದೇವತೆಯ ಹೆಸರಿರುವುದರಿಂದ ಪ್ರಥಮ ದಿನದಲ್ಲಿ ಪಠಿಸಲು ಅವಶ್ಯಕವಾದ ಲಕ್ಷಣಗಳಿಂದ ಕೂಡಿರುವುದು.

**ಮಹಾಂತಂ ವಾ ಏತೇಽಧ್ವಾನಮೇಷ್ಯಂತೋ ಭವಂತಿ ಯೇ ಸಂವತ್ಸರಂ ವಾ ದ್ವಾದಶಾಹಂ ವಾಽಽಸತೇ ತದ್ಯದ್ದೇವಾನ್ಹುವೇ ಬೃಹಚ್ಛ್ರವಸಃ ಸ್ವಸ್ತಯ ಇತಿ ವೈಶ್ವದೇವಂ ಪ್ರಥಮೇಽಹನಿ ಶಂಸತಿ ಸ್ವಸ್ತಿತಾಯೈ ॥**

ತತ್ರ ಸ್ವಸ್ತಿಶಬ್ದಸ್ಯ ತಾತ್ಪರ್ಯಂ ದರ್ಶಯತಿ – ಯೇ ಯಜಮಾನಾಃ ಸಂವತ್ಸರಸತ್ರಂ ದ್ವಾದಶಾಹಂ ವಾಽನುತಿಷ್ಠಂತಿ, ಏತೇ ದೀರ್ಘಮಧ್ವಾನಂ ಗಂತುಮುದ್ಯುಕ್ತಾ ಭವನ್ತಿ । ಪ್ರಯೋಗಬಾಹುಲ್ಯೇನೈಕಾಹವತ್ಸಹಸಾ ಸಮಾಪ್ತ್ಯಭಾವಾತ್ । ಅತೋ ದೇವಾನಿತ್ಯಾದಿ ಸೂಕ್ತೇ ಸ್ವಸ್ತಯ ಇತ್ಯೇತಸ್ಯ ಪದಸ್ಯ ಶಂಸನಂ ಸ್ವಸ್ತಿತಾಯೈ ಕ್ಷೇಮಾರ್ಥಂ ಭವತಿ ॥

ಸ್ವಸ್ತಿಶಬ್ದದ ತಾತ್ಪರ್ಯವನ್ನು ತಿಳಿಸುವರು ಯಜ್ಞಮಾಡುವ ಯಾವ ಯಜಮಾನರು ಸಂವತ್ಸರದವರೆಗೂ ನಡೆಸಬೇಕಾದ ಸತ್ರಯಾಗವನ್ನು ಅಥವಾ ಹನ್ನೆರಡು ದಿನಗಳವರೆಗೆ ನಡೆಸಬೇಕಾದ ದ್ವಾದಶಾಹವನ್ನು ಅನುಷ್ಠಾನ ಮಾಡಲು ಉದ್ಯುಕ್ತರಾಗುವರೋ ಅವರು ಬಹಳದೂರದ ಪ್ರಯಾಣವನ್ನು ಎಂದರೆ ಬಹುಕಾಲದವರೆಗೆ (ಅನೇಕ ದಿನಗಳವರೆಗೆ) ಮಾಡಬೇಕಾದ ಯಜ್ಞವನ್ನು ಮಾಡಲು ಉದ್ಯುಕ್ತರಾಗುತ್ತಾರೆ. ಇತರ ಯಜ್ಞಗಳಂತೆ ಸಂವತ್ಸರಸತ್ರವನ್ನಾಗಲಿ ಅಥವಾ ದ್ವಾದಶಾಹವನ್ನಾಗಲಿ ಶೀಘ್ರವಾಗಿ ಮಾಡಿ ಮುಗಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಈ ಯಾಗಗಳಲ್ಲಿ **ದೇವಾನ್ಹುವೇ ಬಹಚ್ಛ್ರವಸಃ ಸ್ವಸ್ತಯೇ** (ಋ. ಸಂ. ೧೦-೬೬-೧) ಎಂಬ ಸೂಕ್ತವನ್ನು ಪಠಿಸುತ್ತಾರೆ. ಈ ಸೂಕ್ತದಲ್ಲಿ ಯಜ್ಞಕರ್ತರನ್ನು ಬಹುಕಾಲದವರೆಗೆ (ಯಜ್ಞಸಮಾಪ್ತಿಯಾಗುವವರೆಗೆ) ಕ್ಷೇಮವಾಗಿ ಕಾಪಾಡಬೇಕೆಂದು ದೇವತೆಗಳನ್ನು ಪ್ರಾರ್ಥಿಸಲಾಗಿದೆ. ಆದ್ದರಿಂದ ಯಜಮಾನರ ಕ್ಷೇಮಾರ್ಥವಾಗಿ ಈ ಸೂಕ್ತವನ್ನು ಇಲ್ಲಿ ಪಠಿಸುವುದು ಯುಕ್ತವಾಗಿದೆ.

**ಸ್ವಸ್ತ್ಯಯನಮೇವ ತತ್ಕುರುತೇ ಸ್ವಸ್ತಿ ಸಂವತ್ಸರಸ್ಯ ಪಾರಮಶ್ನುತೇ ಯ ಏವಂ ವೇದ ಯೇಷಾಂ ಚೈವಂ ವಿದ್ವಾನೇತದ್ಧೋತಾ ದೇವಾನ್ಹುವೇ ಬೃಹಚ್ಛ್ರವಸಃ ಸ್ವಸ್ತಯ ಇತಿ ವೈಶ್ವದೇವಂ ಪ್ರಥಮೇಽಹನಿ ಶಂಸತಿ ॥**

ವೇದನಂ ಶಂಸತಿ — ಉಕ್ತಾರ್ಥಸ್ಯ ವೇದಿತಾ ತೇನ ಸ್ವಸ್ತ್ಯಯನಮೇವ ದ್ವಾದಶಾಹಸ್ಯ ಕ್ಷೇಮಪ್ರಾಪ್ತಿಮೇವ ಕುರುತೇ । ಕ್ಷೇಮೇಣೈವ ಸಂವತ್ಸರಸತ್ರಸ್ಯ ಸಮಾಪ್ತಿಂ ಪ್ರಾಪ್ನೋತಿ । ಕಿಂಚ ಯೇಷಾಂ ಯಜಮಾನಾನಾಮುಕ್ತಾರ್ಥವೇದೀ ಹೋತಾ ಶಂಸತಿ ತೇಽಪಿ ಯಜಮಾನಾ ದ್ವಾದಶಾಹಂ ಕ್ಷೇಮೇಣೈವ ಪ್ರಾಪ್ನುವಂತಿ ಸಂವತ್ಸರಸತ್ರಂ ಚ ಸಮಾಪಯಂತಿ ॥

ಮೇಲೆ ಹೇಳಿದ ವಿಷಯಗಳನ್ನು ಚೆನ್ನಾಗಿ ತಿಳಿದು ಅದರಂತೆ **ದೇವಾನ್ಹುವೇ ಬೃಹಚ್ಛ್ರವಸಃ ಸ್ವಸ್ತಯೇ** (ಋ. ಸಂ. ೧೦-೬೬-೧) ಎಂಬ ವೈಶ್ವದೇವಸೂಕ್ತವನ್ನು ಪ್ರಥಮದಿವಸ ಪಠಿಸುವ ಪುರುಷನು ದ್ವಾದಶಾಹವನ್ನಾಗಲಿ, ಸಂವತ್ಸರ

ಸತ್ರವನ್ನಾಗಲಿ ನಿರ್ವಿಘ್ನವಾಗಿ ಪರಿಸಮಾಪ್ತಿ ಕೊನೆಯವರೆಗೂ ಮಾಡಿ ಮುಗಿಸಲು ಶಕ್ತನಾಗುವನು. ಆದ್ದರಿಂದ ಈ ವೈಶ್ವದೇವ ಸೂಕ್ತವನ್ನು ಮೊದಲನೇ ದಿವಸ ವಿದ್ವಾಂಸನಾದ ಹೋತೃವು ಪಠಿಸುವನು.

**ವೈಶ್ವಾನರಾಯ ಪೃಥುಪಾಜಸೇ ವಿಪ ಇತ್ಯಾಗ್ನಿಮಾರುತಸ್ಯ ಪ್ರತಿಪತ್ಪ್ರಥಮೇ ಪದೇ ದೇವತಾ ನಿರುಚ್ಯತೇ ಪ್ರಥಮೇಽಹನಿ ಪ್ರಥಮಸ್ಯಾಹ್ನೋ ರೂಪಂ ॥**

ಸೂಕ್ತಾಂತರಸ್ಯ ಪ್ರಥಮೇ ಪಾದೇ ದೇವತಾಭಿಧಾನಲಕ್ಷಣಂ ದರ್ಶಯತಿ—ಆಗ್ನಿಮಾರುತಶಸ್ತ್ರಸ್ಯ ವೈಶ್ವಾನರಾಯೇತಿ ಸೂಕ್ತಂ ಪ್ರತಿಪತ್ಕರ್ತವ್ಯಂ । ಸ ಏವ ಶಬ್ದೋ ವಿಸ್ಪಷ್ಟಂ ದೇವತಾಮಭಿಧತ್ತೇ ॥

ವೈಶ್ವಾನರಸ್ಯ ಪೃಥುಪಾಜಸೇ (ಋ. ಸಂ. ೩-೩-೧) ಎಂಬ ಸೂಕ್ತವು ಆಗ್ನಿಮಾರುತಶಸ್ತ್ರದ ಮೊದಲನೇ ಋಕ್ಕು. ಈ ಋಕ್ಕಿನ ಪ್ರಥಮಪಾದದಲ್ಲಿಯೇ ಉದ್ದಿಷ್ಟದೇವತೆಯ (ವೈಶ್ವಾನರ) ಹೆಸರಿರುವುದು. ಆದ್ದರಿಂದ ಈ ಋಕ್ಕನ್ನು ಪ್ರಥಮ ದಿವಸದಲ್ಲಿ ಪಠಿಸಲು ಬೇಕಾದ ಲಕ್ಷಣವು ಇದರಲ್ಲಿದ್ದಂತಾಯಿತು.

**ಪ್ರತ್ವಕ್ಷಸಃ ಪ್ರತವಸೋ ವಿರಪ್ಶಿನ ಇತಿ ಮಾರುತಂ ಪ್ರೇತಿ ಪ್ರಥಮೇಽಹನಿ ಪ್ರಥಮಸ್ಯಾಹ್ನೋ ರೂಪಂ ॥**

ಸೂಕ್ತಾಂತರೇ ಪ್ರಶಬ್ದರೂಪಂ ಲಿಂಗಂ ದರ್ಶಯತಿ—ಪ್ರತ್ವಕ್ಷಸ ಇತಿ ಸೂಕ್ತೇ ದ್ವಿತೀಯಸ್ಯಾ ಋಚೋ ದ್ವಿತೀಯಪಾದೇ ವಯ ಇವ ಮರುತ ಇತಿ ಶ್ರವಣಾದಿದಂ ಸೂಕ್ತಂ ಮರುದ್ದೇವತಾಕಂ ಶಂಸೇತ್ । ಅತ್ರ ಪ್ರಶಬ್ದೋ ವಿಸ್ಪಷ್ಟಃ ॥

ಪ್ರತ್ವಕ್ಷಸಃ ಪ್ರತವಸಃ ಎಂಬ (೧ ೮೭-೧) ಋಕ್ಕು ಮರುದ್ದೇವತಾಕವಾದ ಸೂಕ್ತದಲ್ಲಿ ಎರಡನೆಯ ಋಕ್ಕು. ಈ ಋಕ್ಕಿನ ಎರಡನೇ ಪಾದದಲ್ಲಿ ವಯ ಇವ ಮರುತಃ ಎಂದು ಮರುತ್ ಶಬ್ದವು ಪಠಿತವಾಗಿರುವುದರಿಂದ ಈ ಋಕ್ಕು ಮರುದ್ದೇವತಾಕವು. ಮತ್ತು ಈ ಋಕ್ಕಿನ ಆದಿಯಲ್ಲಿ ಪ್ರ ಎಂಬ ಉಪಸರ್ಗವಿರುವುದರಿಂದ ಈ ಋಕ್ಕನ್ನು ಮೊದಲನೇ ದಿನದಲ್ಲಿ ಪಠಿಸಲು ಆವಶ್ಯಕವಾದ ಲಕ್ಷಣವು ಇದರಲ್ಲಿರುವುದು.

**ಜಾತವೇದಸೇ ಸುನವಾಮ ಸೋಮಮಿತಿ ಜಾತವೇದಸ್ಯಾಂ ಪುರಸ್ತಾತ್ಸೂಕ್ತಸ್ಯ ಶಂಸತಿ ಸ್ವಸ್ತ್ಯಯನಂ ವೈ ಜಾತವೇದಸ್ಯಾಃ ಸ್ವಸ್ತಿತಾಯೈ ॥ ಸ್ವಸ್ತ್ಯಯನಮೇವ ತತ್ಕುರುತೇ ಸ್ವಸ್ತಿ ಸಂವತ್ಸರಸ್ಯ ಪಾರಮಶ್ನುತೇ ಯ ಏವಂ ವೇದ ॥**

ವಕ್ಷ್ಯಮಾಣಸ್ಯ ಜಾತವೇದಸ್ಯ ಸೂಕ್ತಸ್ಯ ಪುರಸ್ತಾದೇತಾಮೃಚಂ ವಿಧತ್ತೇ—ಜಾತವೇದಾ ದೇವತಾ ಯಸ್ಯಾ ಋಚಃ ಸೇಯಂ ಜಾತವೇದಸ್ಯಾ । ತದ್ದೇವತಾಕತ್ವಂ ಪ್ರಥಮಪಾದೇ ದೇವತಾಭಿಧಾನಂ ಲಿಂಗಂ ಚ ವಿಸ್ಪಷ್ಟಂ । ಅಸ್ಯಾಮೃಚ್ಯರಾತೀಯತೋ ನಿದಹಾತೀತಿ ಶತ್ರು-

ದಾಹಶ್ರವಣಾನ್ನಾವೇವ ಸಿಂಧುಮಿತಿ ನೌದೃಷ್ಟಾಂತೇನ ದುರಿತಾತ್ಯಯಶ್ರವಣಾಚ್ಚ ಸ್ವಸ್ತ್ಯಯನಂ ಕ್ಷೇಮಗಮನಮತ್ರ ವಿದ್ಯತೇ । ತಸ್ಮಾದಿಯಂ ಕ್ಷೇಮಪ್ರಾಪ್ತಯೇ ಭವತಿ ॥ ವೇದನಂ ಪ್ರಶಂಸತಿ—

**ಜಾತವೇದಸೇ ಸುನವಾಮ ಸೋಮಂ** (ಋ. ಸಂ. ೧-೯೯-೧) ಎಂಬ ಋಕ್ಕು ಜಾತವೇದೋದೇವತಾಕವು. ಈ ಋಕ್ಕಿನ ಪ್ರಥಮಪಾದದಲ್ಲಿಯೇ ಜಾತವೇದ ಎಂದು ಉದ್ದಿಷ್ಟದೇವತೆಯ ಹೆಸರು ಇರುವುದರಿಂದ ಈ ಋಕ್ಕನ್ನು ಪ್ರಥಮ ದಿವಸ ಪಠಿಸಲು ಬೇಕಾದ ಲಕ್ಷಣವು ಇದರಲ್ಲಿದ್ದಂತಾಯಿತು. ಈ ಋಕ್ಕಿನಲ್ಲಿ **ಅರಾತೀಯತೋ ನಿದಹಾತಿ** ಎಂದಿರುವುದರಿಂದ ಶತ್ರುಗಳನ್ನು ನಾಶಮಾಡುವ ವಿಷಯದ ಪ್ರಸ್ತಾಪವಿದೆ. ಶತ್ರುನಾಶವೆಂದರೆ ಯಜಮಾನನಿಗೆ ಸ್ವಸ್ತಿ ಅಥವಾ ಕ್ಷೇಮವನ್ನು ಉಂಟುಮಾಡುವ ವಿಷಯವನ್ನು ಹೇಳಿದಂತಾಯಿತು. ಆದ್ದರಿಂದ ಎಂದರೆ ಈ ಋಕ್ಕನ್ನು ಪಠಿಸುವುದರಿಂದ ಕ್ಷೇಮಪ್ರಾಪ್ತಿಯುಂಟಾಗುವುದು ಎಂದಭಿಪ್ರಾಯವು. ಈ ಋಕ್ಕನ್ನು ಪಠಿಸುವುದರಿಂದ ಯಜಮಾನನಿಗೆ ಕ್ಷೇಮವುಂಟಾಗುವುದು. ಎಂದರೆ ಸಂವತ್ಸರದ ಕೊನೆಯವರೆಗೂ (ಅಥವಾ ದ್ವಾದಶಾಹದ ಕೊನೆಯವರೆಗೂ) ಯಾಗವು ನಿರ್ವಿಘ್ನವಾಗಿ ನಡೆದು ಪರಿಸಮಾಪ್ತಿಯನ್ನೈದುವದು.

**ಪ್ರತವ್ಯಸೀಂ ನವ್ಯಸೀಂ ಧೀತಿಮಗ್ನಯ ಇತಿ ಜಾತವೇದಸ್ಯಂ ಪ್ರೇತಿ ಪ್ರಥಮೇಽಹನಿ ಪ್ರಥಮಸ್ಯಾಹ್ನೋ ರೂಪಂ ॥**

ಸೂಕ್ತಾಂತರೇ ಪ್ರಶಬ್ದಲಿಂಗಂ ದರ್ಶಯತಿ—ಯದ್ಯಪ್ಯಸ್ಮಿನ್ಸೂಕ್ತೇ ಜಾತವೇದಃಶಬ್ದೋ ನ ಶ್ರುತಸ್ತಥಾಪಿ ತದರ್ಥವಾಚೀ ಶಬ್ದಃ ಶ್ರೂಯತೇ । ಜಾತಮುತ್ಪನ್ನಂ ವಿಶ್ವಂ ತದ್ವೇತ್ತೀತಿ ಜಾತವೇದಾಸ್ತತ್ಪರ್ಯಾಯೋ ವಿಶ್ವವೇದಃ ಶಬ್ದಃ । ಸ ಚ ಯಮೋರಿರೆ ಭೃಗವೋ ವಿಶ್ವವೇದಸಮಿತಿ ಚತುರ್ಥ್ಯಾಮೃಚಿ ಶ್ರೂಯತೇ । ತಸ್ಮಾದಿದಂ ಸೂಕ್ತಂ ಜಾತವೇದಸ್ಯಂ ನಿವಿದ್ಧಾನೀಯಂ ಶಂಸೇತ್ ॥ ಅತ್ರ ಪ್ರತವ್ಯಸೀಮಿತಿ ಪ್ರಶಬ್ದೋ ವಿಸ್ಪಷ್ಟಃ ॥

**ಪ್ರತವ್ಯಸೀಂ ನವ್ಯಸೀಂ ಧೀತಿಂ** (ಋ. ಸಂ. ೧-೧೪೩-೧) ಎಂಬ ಸೂಕ್ತವು ಜಾತವೇದಸ್ಯಸೂಕ್ತವು. ಇದರಲ್ಲಿ ಜಾತವೇದಃಶಬ್ದವಿಲ್ಲದಿದ್ದರೂ ಅದೇ ತಾತ್ಪರ್ಯವಿರುವ **ವಿಶ್ವವೇದಶ್ಶಬ್ದವು ಸ ಚ ಯಮೋರಿತೀ ಭೃಗವೋ ವಿಶ್ವವೇದಸಂ** ಎಂಬ (ಈ ಸೂಕ್ತದ) ನಾಲ್ಕನೇ ಋಕ್ಕಿನಲ್ಲಿ ಪಠಿತವಾಗಿರುವುದು. ಆದ್ದರಿಂದ ಈ ಸೂಕ್ತವನ್ನು ಜಾತವೇದಸ್ಯ ಸೂಕ್ತದಲ್ಲಿ ನಿವಿದ್ಧಾನೀಯಸೂಕ್ತವನ್ನಾಗಿ ಸೇರಿಸಬೇಕು. ಮತ್ತು ಈ ಸೂಕ್ತದ ಪ್ರಾರಂಭದ ಋಕ್ಕಿನ ಪ್ರಥಮಪಾದದಲ್ಲಿ **ಪ್ರ** ಎಂಬ ಉಪಸರ್ಗವಿರುವುದರಿಂದ ಅದನ್ನು ಪ್ರಥಮ ದಿವಸದಲ್ಲಿ ಪಠಿಸಲು ಅವಶ್ಯಕವಾದ ಲಕ್ಷಣವು ಇದರಲ್ಲಿರುವುದೆಂದು ತಿಳಿಯಬೇಕು

**ಸಮಾನಮಾಗ್ನಿಮಾರುತಂ ಭವತಿ ಯಚ್ಚಾಗ್ನಿಷ್ಟೋಮೇ ಯದ್ವೈ ಯಜ್ಞೇ ಸಮಾನಂ ಕ್ರಿಯತೇ ತತ್ಪ್ರಜಾ ಅನು ಸಮನಂತಿ ತಸ್ಮಾತ್ಸಮಾನಮಾಗ್ನಿಮಾರುತಂ ಭವತಿ ॥**

ವೈಶ್ವಾನರಾಯೇತ್ಯಾದಿಕಂ ಯದಾಗ್ನಿಮಾರುತಂ ಶಸ್ತ್ರಮುಕ್ತಂ ತದೇತ್ಪ್ರಶಂಸತಿ—ಅಸ್ಮಿನ್ಪ್ರಥಮೇಽಹನಿ ಯದಾಗ್ನಿಮಾರುತಂ ಶಸ್ತ್ರಮುಕ್ತಂ ಯಚ್ಚಾಗ್ನಿಷ್ಟೋಮೇ ಪೂರ್ವನಿ-

**ರೂಪಿತಮಾಗ್ನಿಮಾರುತಶಸ್ತ್ರಂ ತದುಭಯಂ ಸಮಾನಮೇಕವಿಧಂ ನ್ಯೂನಾಧಿಕಮಂತ್ರಾಣಾಮ-ಭಾವಾತ್ । ಯಜ್ಞೇ ಯದೇವಾಂಗಂ ಸಮಾನಂ ಕ್ರಿಯತೇ ತದಂಗಮನು ಪಶ್ಚಾತ್ಪ್ರಜಾ ಋತ್ವಿಗ್ರೂಪಾಃ ಪುತ್ರಾದಿರೂಪಾಶ್ಚ ಸಮನಂತಿ ಸಮ್ಯಕ್‌ಚೇಷ್ಟಂತೇ ಸುಖೇನ ಜೀವಂತೀ ತ್ಯರ್ಥಃ । ತಸ್ಮಾತ್ಸಮಾನಂ ತುಲ್ಯಮಾಗ್ನಿಮಾರುತಶಸ್ತ್ರಂ ಕರ್ತವ್ಯಂ । ಅಥ ಪ್ರಥಮಸ್ಯಾಹ್ನೋ ಲಿಂಗೇಷ್ವಾಶುಮದ್ಗಾಯತ್ರಂ ಕರಿಷ್ಯದಯಂ ಲೋಕೋಽಭ್ಯುದಿತ ಇತಿ ಲಿಂಗಚತುಷ್ಟಯ-ಮತ್ರ ನೋದಾಹೃತಂ ತದ್ಯಥಾಸಂಭವಮನ್ವೇಷ್ಟವ್ಯಂ ॥**

ಈ ದ್ವಾದಶಾಹದಲ್ಲಿ ಉಪಯೋಗಿಸಲ್ಪಡುವ (ಪಠಿಸಲ್ಪಡುವ) ಅಗ್ನಿಮಾರುತಶಸ್ತ್ರವೂ ಅಗ್ನಿಷ್ಟೋಮದಲ್ಲಿ ಉಪಯೋಗಿಸಲ್ಪಡುವ ಆಗ್ನಿಮಾರುತಶಸ್ತ್ರವೂ ಒಂದೇವಿಧವಾಗಿರುವುದು ಎಂದರೆ ಸಮನಾಗಿರುವುದು. ಇವೆರಡು ಶಸ್ತ್ರಮಂತ್ರಗಳಲ್ಲಿಯೂ ಏನೂ ಹೆಚ್ಚುಕಡಮೆ ಇರುವುದಿಲ್ಲ. ಯಜ್ಞದಲ್ಲಿ ಅಂಗಭೂತವಾದ ಕರ್ಮಗಳನ್ನು ನೆರವೇರಿಸುವಾಗ ಒಂದರಂತೆ ಮತ್ತೊಂದಿದ್ದರೆ ಎರಡನ್ನೂ ಒಂದೇವಿಧವಾಗಿ ಮಾಡಬೇಕು. ಹೀಗೆ ಮಾಡುವುದರಿಂದ ಋತ್ವಿಗ್ರೂಪರಾದ ಪ್ರಜೆಗಳೂ ಅವರ ಪುತ್ರಾದಿಗಳೂ ಸುಖವಾಗಿ ಜೀವಿಸುವರು. ಆದ್ದರಿಂದ ಹಿಂದೆ ಅಗ್ನಿಷ್ಟೋಮದಲ್ಲಿ ಮಾಡಿದಂತೆಯೇ ಈ ದ್ವಾದಶಾಹದಲ್ಲಿಯೂ ಸ್ವಲ್ಪವೂ ವ್ಯತ್ಯಾಸವಿಲ್ಲದಂತೆ ಮಾಡಬೇಕು.

*English Translation*

**(The rest of the Nishkevalya Shastra, and the Shastras of the evening libation).**

The (Nivid) hymn of the Nishkevalya Shastra is, a na indro durad (4, 20); it contains the term a. which is a characteristic of the first day.

Both Nivid hymns, that of the Marutvatiya as well as that of the Nishkevalya Shastras are so called Sampatas. Vamadeva after having seen once these three worlds, got possession of them sampatat by means of the Sampatas. On account of his getting possession of Sampati by means of the Sampatas, they are called by his name sampatas.

The reason that the Hotar, on the first day, repeats two Sampata hymns, is, to reach the celestial world, to get, possession of it, and join its inhabitants.

The Pratipad (beginning verse) of the Vaisvadeva Shastra on the first day, which is a Rathantara day is, tat savitar vrinmahe, (5,82, 1-3); its Anuchara (sequel) is adya no deva savitar (5,82,4-6). It is used at a Rahantara day, which is a characteristic of the first day.

The Nivid hymn for Savitar is yunjate mana uta (5, 81); it contains the term yuj to join, which is a characteristic of the first day.

The Nivid hymn for Heaven and Earth is, pra dyava yajnaih (1, 159); it contains the pra, which is a characteristic of the first day.

The Nivid hymn for the Ribhus is, iheha vo manasa (3, 60). If it would contain pra and a, the proper characteristics of the first day, then all would be

pra i.e. going forth and consequently the sacrificers would depart praishyam from this world. This is the reason that the Hotar repeats on the first day (as Nivid hymn for heaven and Earth) iheha mano (though it does not contain the terms characteristic of the first day). Iha, i·e. here, is this world. Bo doing so, the Hotar makes the sacrificers enjoy this world.

The Nivid hymn for the Visvedavah is, devan huve brihach chhavasah svastaye (10, 66). The deities are mentioned in the first pada, which is a characteristic of the first day.

The reason that the Hotar repeats this hymn as Nivid Sukta for the Visvedavah, on the first day is to make the journey of the sacrificers safe, because those who hold a session lasting for a year or who perform the Dvadasaha, are going to set out on a long journey. Thus the Hotar makes for them the journey safe.

He who has such a knowledge reaches in safety the end of the year, as well as those who have a Hotar knowing this and acting accordingly.

The Pratipad of the Agnimaruta Shastra is, vais'vanaraya prithupajase (3, 3). The deity (Vaisvanara) is mentioned in the first pada, which is a characteristic of the first day.

The Nivid hymn for the Marutas is, pra tvahshasah pra tavasah (1.87). It contains the term pra, which is a characteristic of the first day.

He repeats the Jatavedas verse, jatavedase sundavama (1,99,1) before the Jayavedas hymn. The Jayavedas verse is safe journey. It is repeated for securing a safe journey. Thus he secures a safe journey for the sacrificer. He who has such a knowledge reaches in safety the end of the year.

The Nivid hymn for Jayavedas is, pra tavyasim navyasim (1,43). It contains the term pra, which is a characteristic of the first day.

The Agnimaruta Shastra of the first day of the Dvadasaha is the same as in the Agnishtoma. The creatures live on what is per.ormed equally in the sacrifiee (i.e. in several different kinds of sacrifices.) Thence the Agnimaruta Shastra of the first day of the Dvadasaha is identical with that of the Agnishtoma.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ವಿಂಶೋಽಧ್ಯಾಯಸ್ಯ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು
ಸಮಾಪ್ತವಾದುದು.

# ಅಥ ವಿಂಶೋऽಧ್ಯಾಯೇ ತೃತೀಯಃ ಖಂಡಃ

## ಇಪ್ಪತ್ತನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ ದ್ವಾದಶಾಹದ ಮಂತ್ರಗಳಲ್ಲಿ ಕಂಡುಬರುವ ಎರಡನೇ ದಿವಸದ ರೂಪ ಲಕ್ಷಣಗಳು. ಪ್ರಾತಸ್ಸವನ ಮತ್ತು ಮಾಧ್ಯಂದಿನಸವನಗಳಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳು. ಮನುವಿನ ಪುತ್ರನಾದ ಶಾರ್ಯಾತನ ವೃತ್ತಾಂತವು.]



ಇಂದ್ರೋ ವೈ ದೇವತಾ ದ್ವಿತೀಯಮಹರ್ವಹತಿ ಪಂಚದಶಸ್ತೋಮೋ ಬೃಹತ್ಸಾಮ ತ್ರಿಷ್ಟುಪ್ ಛಂದಃ ॥ ಯಥಾದೇವತಮೇನೇನ ಯಥಾ-ಸ್ತೋಮಂ ಯಥಾಸಾಮ ಯಥಾ ಛಂದಸಂ ರಾಧ್ನೋತಿ ಯ ಏವಂ ವೇದ ॥

ದ್ವಾದಶಾಹಗತನವರಾತ್ರೇ ಪ್ರಥಮಮಹರ್ನಿರೂಪ್ಯ ದ್ವಿತೀಯಮಹರ್ನಿರೂಪಯತಿ— ದೇವತಾನಾಂ ಮಧ್ಯ ಇಂದ್ರೋ ದೇವತಾ ಸೋಮಾನಾಂ ಮಧ್ಯೇ ಪಂಚದಶಸ್ತೋಮಃ ಸಾಮ್ನಾಂ ಮಧ್ಯೇ ಬೃಹತ್ಸಾಮ ಛಂದಸಾಂ ಮಧ್ಯೇ ತ್ರಿಷ್ಟುಬ್ ಛಂದ ಇತ್ಯೇತಚ್ಚತುಷ್ಟಯಂ ದ್ವಿತೀಯ-ಸ್ಯಾಹ್ನೋ ನಿರ್ವಾಹಕಂ । ವೇದನಂ ಶಂಸತಿ—ವೇದಿತಾ ಸ್ವಕೀಯವೇದನೇನ ಯಥೋಕ್ತ-ದೇವತಾಸ್ತೋಮಸಾಮಚ್ಛಂದಾಂಸ್ಯನತಿಕ್ರಮ್ಯ ತತ್ಪ್ರಸಾದೇನ ಸಮೃದ್ಧೋ ಭವತಿ ॥

ದ್ವಾದಶಾಹವೆಂಬ ಯಾಗದಲ್ಲಿ (ಪ್ರಥಮ, ದ್ವಾದಶ, ದಶಮ ಎಂಬ ದಿನಗಳನ್ನು ಬಿಟ್ಟು ಉಳಿದ ಒಂಭತ್ತು ದಿನಗಳಲ್ಲಿ ಪ್ರಥಮ ದಿವಸದ ಶಸ್ತ್ರಮಂತ್ರಗಳ ಲಕ್ಷಣಗಳನ್ನು ಹೇಳಿ ಈಗ) ದ್ವಿತೀಯ ದಿವಸದ ಲಕ್ಷಣಾದಿಗಳನ್ನು ತಿಳಿಸುವರು - ಎರಡನೇ ದಿವಸದಲ್ಲಿ ದೇವತೆಗಳಲ್ಲಿ ಇಂದ್ರನು, ಸ್ತೋಮಗಳಲ್ಲಿ ಪಂಚದಶಸ್ತೋಮ, ಸಾಮಗಳಲ್ಲಿ ಬೃಹತ್ಸಾಮ, ಛಂದಸ್ಸುಗಳಲ್ಲಿ ತ್ರಿಷ್ಟುಪ್ ಛಂದಸ್ಸು ಎಂಬ ಈ ನಾಲ್ಕು ವಿಷಯಗಳೂ ಮುಖ್ಯವಾದವು. ಎರಡನೇ ದಿವಸದ ದೇವತೆ ಮುಂತಾದ ನಾಲ್ಕು ವಿಷಯಗಳನ್ನು ಯಾವ ಪುರುಷನು ಚೆನ್ನಾಗಿ ತಿಳಿದು ಅದರಂತೆ ಅನುಷ್ಠಾನಮಾಡುವನೋ ಆ ಪುರುಷನು ಆ ದೇವತಾದಿಗಳ ಅನುಗ್ರಹದಿಂದ ಸಕಲವಿಷಯಗಳಲ್ಲಿಯೂ ಸಮೃದ್ಧಿಯನ್ನು ಪಡೆಯುವನು.

ಯದ್ವೈ ನೇತಿ ನ ಪ್ರೇತಿ ಯತ್ಸ್ಥಿತಂ ತದ್ದ್ವಿತೀಯಸ್ಯಾಹ್ನೋ ರೂಪಂ ಯದೂರ್ಧ್ವವದ್ಯತ್ಪ್ರತಿವದ್ಯದಂತರ್ವದ್ಯದ್ವೃಷಣ್ವದ್ಯದ್ವೃಧನ್ವದ್ಯ-ನ್ಮಧ್ಯಮೇ ಪದೇ ದೇವತಾ ನಿರುಚ್ಯತೇ ಯದಂತರಿಕ್ಷಮಭ್ಯುದಿತಂ

## ಯದ್ವಾವರ್ತಂ ಯತ್ರ್ತೈಷ್ಟುಭಂ ಯತ್ಕುರ್ವದೇತಾನಿ ವೈ ದ್ವಿತೀಯಸ್ಯಾಹ್ನೋ ರೂಪಾಣಿ ॥

ಅಥ ದ್ವಿತೀಯಸ್ಯಾಹ್ನೋ ಗಮಕಾನಿ ಮಂತ್ರಗತಾನಿ ಲಿಂಗಾನಿ ನಿರ್ದಿಶತಿ—ಪ್ರಥಮಸ್ಯಾಹ್ನ ಏತಿ ಪ್ರೇತಿ ಲಿಂಗದ್ವಯಂ ಯದ್ವೈ ಯದೇವೋಕ್ತಂ ತದತ್ರ ದ್ವಿತೀಯಸ್ಯಾಹ್ನೋ ಲಿಂಗಂ ನ ಭವತೀತಿ ನಕಾರದ್ವಯೇನೋಭಯಂ ನಿಷಿಧ್ಯತೇ । ಯತ್ಸ್ಥಿತಂ ತಿಷ್ಠತಿಧಾತುರೂಪವದ್ಬಹುಷು ಸ್ಥಾನೇಷ್ವಪ್ರಚ್ಯುತತ್ವೇನಾವಸ್ಥಿತಂ ವಾ ಮಂತ್ರೇ ದೃಶ್ಯತೇ ತದ್ದ್ವಿತೀಯಸ್ಯಾಹ್ನೋ ರೂಪಂ ಲಿಂಗಂ । ತಥೈವೋರ್ಧ್ವಶಬ್ದೋಪೇತಂ ಪ್ರತಿಶಬ್ದೋಪೇತಮಂತಃಶಬ್ದೋಪೇತಂ ವೃಷಶ(ಣ್ವ)ಬ್ದೋಪೇತಂ ವೃಧಣ್ಶಬ್ದೋಪೇತಂ ಚ ಯದಾಮ್ನಾತಂ ತತ್ಸರ್ವಂ ದ್ವಿತೀಯಸ್ಯಾಹ್ನೋ ರೂಪಂ । ಯತ್ರ ಸಾಕ್ಷಾಚ್ಛಬ್ದೋ ನ ಶ್ರೂಯತೇ ತತ್ರ ತದರ್ಥೋ ದ್ರಷ್ಟವ್ಯಃ । ಮಧ್ಯಮೇ ಪದೇ ದೇವತಾಭಿಧಾನಮಂತರಿಕ್ಷಲೋಕಾಭಿಧಾನಂ ಬೃಹತ್ಸಾಮಸಂಬಂಧಂ ತ್ರಿಷ್ಟುಪ್‌ಛಂದಃಸಂಬದ್ಧಂ ವರ್ತಮಾನಾರ್ಥಪ್ರತ್ಯಯಯುಕ್ತಂ ಕರೋತಿಧಾತುರೂಪಮಿತ್ಯೇತಾನಿ ಸರ್ವಾಣಿ ದ್ವಿತೀಯಸ್ಯಾಹ್ನೋ ರೂಪಾಣಿ ನಿರೂಪಕಾಣಿ ಲಿಂಗಾನಿ ದ್ರಷ್ಟವ್ಯಾನಿ ॥

ಈಗ ದ್ವಾದಶಾಹದ ಎರಡನೇ ದಿವಸದ ಶಸ್ತ್ರಮಂತ್ರಗಳಲ್ಲಿರಬೇಕಾದ ಸ್ವರೂಪಲಕ್ಷಣಗಳನ್ನು ತಿಳಿಸುವರು—ಹಿಂದೆ ಪ್ರಥಮ ದಿವಸದಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳಲ್ಲಿರುವಂತೆ ಮಂತ್ರಲಕ್ಷಣಗಳಾದ **ಏತಿ ಪ್ರ** ಎಂಬ ಎರಡು ವಿಧಗಳಾದ ಲಕ್ಷಣಗಳು ಎರಡನೇ ದಿನದ ಶಸ್ತ್ರಮಂತ್ರಗಳಲ್ಲಿ ಇರುವುದಿಲ್ಲ. ಆದರೆ **ಸ್ಥಿತಂ** ಎಂದರೆ ತಿಷ್ಠತಿಧಾತುವಿನ ರೂಪವು ಅಥವಾ ರೂಪಾಂತರವು ಮಂತ್ರದಲ್ಲಿ ಕಂಡುಬಂದಲ್ಲಿ ಅದು ಎರಡನೇ ದಿನದಲ್ಲಿ ಪಠಿಸಬೇಕಾದ ಲಕ್ಷಣವು ಎಂದು ತಿಳಿಯಬೇಕು. ಹಾಗೆಯೇ ಊರ್ಧ್ವ, ಪ್ರತಿ, ಅಂತಃ ವೃಷಣ್ವತ್, ವೃಧನ್, ಎಂಬ ಶಬ್ದಗಳು ಅಥವಾ ಈ ಶಬ್ದಗಳ ವಿಕಾರರೂಪಗಳಿಂದ ಸಹಿತವಾದ ಪದಗಳು ಮಂತ್ರಗಳಲ್ಲಿ ಇದ್ದರೆ ಇವುಗಳೇ (ಈ ಶಬ್ದಗಳೇ) ಮಂತ್ರಗಳಲ್ಲಿರಬೇಕಾದ ಎರಡನೇ ದಿವಸದ ಲಕ್ಷಣಗಳು ಎಂದು ತಿಳಿಯಬೇಕು. ಮೇಲೆ ಹೇಳಿದ ಶಬ್ದಗಳಲ್ಲಿ ಯಾವುದಾದರೂ ಶಬ್ದವು ಇಲ್ಲದೇ ಇದ್ದು ಆ ಶಬ್ದದ ಅರ್ಥವು ಭಾಸವಾಗುವಂತೆ ಇದ್ದರೂ ಆ ಶಬ್ದವೇ ಇದ್ದಂತೆ ಭಾವಿಸಬೇಕು. ಇದಲ್ಲದೆ ಮಧ್ಯದಲ್ಲಿರುವ (ಋಕ್ಕಿನ ಪ್ರಥಮಪಾದವಲ್ಲದೆ) ಎಂದರೆ ಮಧ್ಯದ ಯಾವುದಾದರೂ ಒಂದು ಪಾದದಲ್ಲಿ ಉದ್ದಿಷ್ಟದೇವತೆಯ ಹೆಸರು, ಅಂತರಿಕ್ಷದ ಹೆಸರು ಬೃಹತ್ಸಾಮಸಂಬಂಧವು ತ್ರಿಷ್ಟುಪ್‌ಛಂದಸ್ಸಿನ ಸಂಬಂಧವು ವರ್ತಮಾನ ಕಾಲಕ್ಕೆ ಸಂಬಂಧಿಸಿದ ಶಬ್ದವಿರುವುದು. ಕರೋತಿಧಾತುವಿನ ರೂಪ ಅಥವಾ ರೂಪಾಂತರವು, ಇವುಗಳಲ್ಲಿ ಯಾವುದಾದರೂ ಮಂತ್ರದಲ್ಲಿ ಇದ್ದಲ್ಲಿ ಅದು ಎರಡನೇದಿನ ಪಠಿಸಬೇಕಾದ ಮಂತ್ರದ ಲಕ್ಷಣವು ಎಂದು ತಿಳಿಯಬೇಕು.

## ಅಗ್ನಿಂ ದೂತಂ ವೃಣೀಮಹ ಇತಿ ದ್ವಿತೀಯಸ್ಯಾಹ್ನ ಆಜ್ಯಂ ಭವತಿ ಕುರ್ವದ್ದ್ವಿತೀಯೇಽಹನಿ ದ್ವಿತೀಯಸ್ಯಾಹ್ನೋ ರೂಪಂ

ಅಸ್ಮಿನ್ದ್ವಿತೀಯೇಽಹನ್ಯಾಜ್ಯಶಸ್ತ್ರಂ ವಿಧತ್ತೇ—ಅತ್ರ ಕುರ್ವದಿತಿ ಲಿಂಗೋಪನ್ಯಾಸಃ । ಯದ್ಯಪ್ಯಗ್ನಿಂ ದೂತಮಿತ್ಯಾದೌ ಸಾಕ್ಷಾತ್ಕುರ್ವಚ್ಛಬ್ದೋ ನ ಶ್ರೂಯತೇ ತಥಾಪಿ ಕರೋತ್ಯರ್ಥಸ್ಯ ಸರ್ವಧಾತುಗತಸಾಮಾನ್ಯತ್ವಾದ್ವರ್ತಮಾನಾರ್ಥವಾಚಿಪ್ರತ್ಯಯಾಂತಂ ಧಾತುಮಾತ್ರಂ

**ಕುರ್ವಚ್ಛಬ್ದೇನ ವಿವಕ್ಷಿತಂ । ಅತ್ರಾಪಿ ವೃಣೀಮಹ ಇತಿ ವರ್ತಮಾನಾರ್ಥವಾಚಿಪ್ರತ್ಯಯಾಂತೋ ಧಾತುಃ ಶ್ರೂಯತೇ । ತಸ್ಮಾತ್ ದ್ವಿತೀಯೇಽಹನ್ಯೇತತ್ಸೂಕ್ತಂ ವಿನಿಯೋಕ್ತುಂ ಯೋಗ್ಯಂ । ತತೋ ದ್ವಿತೀಯಸ್ಯಾಹ್ನೋ ಲಿಂಗಂ ॥**

**ಅಗ್ನಿಂ ದೂತಂ ವೃಣೀಮಹೇ** (ಋ. ಸಂ. ೧-೧೨-೧) ಎಂಬುದು ಅಗ್ನಿದೇವತಾಕವಾದ ಮಂತ್ರವು. ಇದನ್ನು ದ್ವಾದಶಾಹದ ಎರಡನೇ ದಿನದಲ್ಲಿ ಆಜ್ಯಶಸ್ತ್ರದಲ್ಲಿ ಪಠಿಸುವರು. ಈ ಋಕ್ಕಿನಲ್ಲಿ (ದೂತಂ ವೃಣೀಮಹೇ ಎಂಬಲ್ಲಿ) ದೂತಕಾರ್ಯವನ್ನು ಮಾಡುವ ಅಗ್ನಿಯನ್ನು ಎಂಬರ್ಥವಿರುವ ಶಬ್ದಗಳಿದ್ದರೂ **ಕುರ್ವತ್** ಎಂಬ ಕರೋತಿಧಾತುಸಂಬಂಧವಾದ ಸಾಕ್ಷಾಚ್ಛಬ್ದವು ಇರುವುದಿಲ್ಲ. ಆದರೆ ಆ ಕುರ್ವತ್‌ಶಬ್ದದ ಅರ್ಥವನ್ನು ವ್ಯಕ್ತಪಡಿಸುವ ಶಬ್ದವಿರುವುದು. ಮತ್ತು **ವೃಣೀಮಹೇ** ಎಂದು ವರ್ತಮಾನಾರ್ಥವಾದ (ವರ್ತಮಾನಕಾಲ) ಕಾಲವನ್ನು ವ್ಯಕ್ತಪಡಿಸುವ ವೃಣೀಮಹೇ ಎಂಬ ಧಾತುವೂ ಇಲ್ಲಿರುವುದು. ಈ ಕಾರಣಗಳಿಂದ ಈ ಋಕ್ಕಿನಲ್ಲಿ ಎರಡನೇ ದಿವಸ ಉಪಯೋಗಿಸಲ್ಪಡಬೇಕಾದ ಲಕ್ಷಣಗಳು ಇರುವವು.

## ವಾಯೋ ಯೇ ತೇ ಸಹಸ್ರಿಣ ಇತಿ ಪ್ರಉಗಂ ಸುತಃ ಸೋಮ ಋತಾವೃಧೇತಿ ವೃಧನ್ವದ್ದ್ವಿತೀಯೇಽಹನಿ ದ್ವಿತೀಯಸ್ಯಾಹ್ನೋ ರೂಪಂ ॥

**ಆಜ್ಯಶಸ್ತ್ರಂ ವಿಧಾಯ ಪ್ರಉಗಶಸ್ತ್ರಂ ವಿಧತ್ತೇ ವಾಯೋ ಯೇ ತ ಇತ್ಯಾದಿಕಂ ಶಸ್ತ್ರಂ ಕುರ್ಯಾತ್ । ಏತಸ್ಮಿನ್ಸೂಕ್ತೇ ಚತುರ್ಥ್ಯಾ ಋಚೋ ದ್ವಿತೀಯಃ ಪಾದಃ ಸುತಃ ಸೋಮ ಋತಾವೃಧೇತಿ । ಅಸ್ಯ ಪಾದಸ್ಯಾಂತೇ ವೃಧೇತಿ ಶ್ರವಣಾದಿದಂ ಪ್ರಉಗಂ ವೃಧನ್ವದ್ವೃಧಿಧಾತುಯುಕ್ತಂ । ದ್ವಿತೀಯಶಸ್ತ್ರಸ್ಯ ತ್ರ್ಯೃಚ ಇತ್ಯಾದಿಕಂ ಪೂರ್ವವತ್ ॥**

ಹಿಂದೆ ಆಜ್ಯಶಸ್ತ್ರವನ್ನು ಹೇಳಿ ಈಗ ಪ್ರಉಗಶಸ್ತ್ರವನ್ನು ಹೇಳುವರು. **ವಾಯೋ ಯೇ ತೇ ಸಹಸ್ರಿಣಃ** (ಋ. ಸಂ. ೨-೪೧-೧) ಎಂಬ ಋಕ್ಕು ಪ್ರಉಗಶಸ್ತ್ರದ ಮಂತ್ರವು. ಈ ಸೂಕ್ತದ ನಾಲ್ಕನೆಯ ಋಕ್ಕಿನ ಎರಡನೆಯ ಪಾದದಲ್ಲಿ **ಸುತಃ ಸೋಮ ಋತಾ ವೃಧಾ** ಎಂದಿರುವುದು. ಇಲ್ಲಿ ಪಾದಾಂತ್ಯದಲ್ಲಿ **ವೃಧಾ** ಎಂದು ವೃಧನ್ವದ್ಧಾತುವಿನ ಪ್ರಯೋಗವಿರುವುದರಿಂದ ಈ ಋಕ್ಕಿನಲ್ಲಿ ಎರಡನೇ ದಿವಸ ಪಠಿಸಲು ಯೋಗ್ಯವಾದ ಲಕ್ಷಣವಿದ್ದಂತಾಯಿತು.

## ವಿಶ್ವಾನರಸ್ಯ ವಸ್ಪತಿಮಿಂದ್ರ ಇತ್ಸೋಮಪಾ ಏಕ ಇತಿ ಮರುತ್ವತೀಯಸ್ಯ ಪ್ರತಿಪದನುಚರೌ ವೃಧನ್ವಚ್ಚಾಂತರ್ವಚ್ಚ ದ್ವಿತೀಯೇಽಹನಿ ದ್ವಿತೀಯಸ್ಯಾಹ್ನೋ ರೂಪಂ ॥

**ಅಥ ಮರುತ್ವತೀಯಂ ಶಸ್ತ್ರಂ ವಿಧತ್ತೇ—ವಿಶ್ವಾನರಸ್ಯೇತ್ಯಯಂ ತ್ರ್ಯೃಚಃ ಶಸ್ತ್ರಸ್ಯ ಪ್ರತಿಪತ್ತಸ್ಮಿಂತ್ರ್ಯೃಚೇ ದ್ವಿತೀಯಸ್ಯಾ ಋಚಃ ಪ್ರಥಮಪಾದೇ ವೃಧನ್ವದ್ವೃಧಿಧಾತುಯುಕ್ತಂ ಲಿಂಗಮಸ್ತಿ । ಅಭಿಷ್ಟಯೇ ಸದಾವೃಧಮಿತಿ ಶ್ರವಣಾತ್ । ಇಂದ್ರ ಇದಿತ್ಯಯಂ ತ್ರ್ಯೃಚೋಽನುರೂಪಸ್ತತ್ರಾಂತಃ ಶಬ್ದಯುಕ್ತಂ ಲಿಂಗಮಸ್ತಿ । ಪ್ರಥಮಾಯಾ ಋಚಸ್ತೃತೀಯಪಾದೇಽನ್ತರ್ದೇವಾನಿತಿ ಶ್ರವಣಾತ್ ॥**

ಈಗ ಮರುತ್ವತೀಯ ಶಸ್ತ್ರದ ಮಂತ್ರವನ್ನು ತಿಳಿಸುವರು. **ವಿಶ್ವಾನರಸ್ಯ ವಸ್ಪತಿಂ** (ಋ. ಸಂ. ೮-೬೮-೪) ಎಂಬ ಋಕ್ಕು ಮರುತ್ವತೀಯಸೂಕ್ತ ಮೊದಲನೇ(ಪ್ರತಿಪತ್) ಋಕ್ಕು ಈ ತೃಚದ ಎರಡನೇ ಋಕ್ಕಿನ ಪ್ರಥಮಪಾದದಲ್ಲಿ **ಅಭಿಪ್ಸ್ವಯೀ** ಸದಾವೃಧಂ ಎಂದಿರುವುದರಿಂದ ಇಲ್ಲಿ ವೃಧೀ (ವೃದನ್ವತ್) ಧಾತುಯುಕ್ತವಾದ ಶಬ್ದವಿರುವುದು. **ಇಂದ್ರ ಇತ್ಸೋಮಪಾ** ಏಕಃ (ಋ. ಸಂ. ೮-೨-೪) ಎಂಬ ಋಕ್ಕು ಈ ತೃಚದಲ್ಲಿ ಅನುರೂಪ (ಎರಡನೇ) ಋಕ್ಕಾಗಿರುವುದು. ಈ ತೃಚದ ಮೊದಲನೇ ಋಕ್ಕಿನ ಮೂರನೇ ಪಾದದಲ್ಲಿ **ಅಂತರ್ದೇವಾನ್** ಎಂದು ಅಂತಶ್ಶಬ್ದಪ್ರಯೋಗವಿರುವುದರಿಂದ ಈ ಋಕ್ಕಿನಲ್ಲಿ ಎರಡನೇ ದಿವಸ ಪಠಿಸಬೇಕಾದ ಲಕ್ಷಣವಿರುವುದು.

## ಇಂದ್ರ ನೇದೀಯ ಏದಿಹೀತ್ಯಚ್ಯುತಃ ಪ್ರಗಾಥ ಉತ್ತಿಷ್ಟ ಬ್ರಹ್ಮಣಸ್ಪತ ಇತಿ ಬ್ರಾಹ್ಮಣಸ್ಪತ್ಯ ಊರ್ಧ್ವವಾನ್ದ್ವಿತೀಯೇಽಹನಿ ದ್ವಿತೀಯಸ್ಯಾಹ್ನೋ ರೂಪಂ ||

**ಅಥ ಪ್ರಗಾಥದ್ವಯೇ ಲಿಂಗದ್ವಯಂ ದರ್ಶಯತಿ—ಇಂದ್ರ ನೇದೀಯ ಇತ್ಯಾದಿಕಃ ಪ್ರಗಾಥಃ ಪ್ರಥಮೇಽಹನ್ಯಪಿ ವಿಹಿತ ಉತ್ತರತ್ರಾಪಿ ವಿಧಾಸ್ಯತೇ । ತಸ್ಮಾದತ್ರ ವಿಧೀಯಮಾನೋಽಚ್ಯುತೋ ಭವತಿ ಪ್ರಚ್ಯುತೇರಭಾವಾತ್ । ತದಿದಮಚ್ಯುತತ್ವಂ ಸ್ಥಿತಶಬ್ದಾರ್ಥತ್ವಾತ್-ಸ್ಥಿತವಲ್ಲಿಂಗಂ । ಉತ್ತಿಷ್ಠೇತ್ಯಯಂ ಪ್ರಗಾಥ ಊರ್ಧ್ವಲಿಂಗವಾನ್ । ಊರ್ಧ್ವವಾಚಿನ ಉಚ್ಛಬ್ದಸ್ಯ ಶ್ರವಣಾತ್ ||**

ಎರಡು ಪ್ರಗಾಥಗಳಲ್ಲಿರುವ ಲಕ್ಷಣವನ್ನು ತಿಳಿಸುವರು. **ಇಂದ್ರ ನೇದಿಯ ಏದೀಹಿ** (ಋ.ಸಂ. ೮-೫೩-೫) ಎಂಬುದು ಮೊದಲನೇ ಪ್ರಗಾಥವು. ಇದನ್ನು ಪ್ರಥಮ ದಿನದಲ್ಲಿ ಪಠಿಸಲಾಗಿದ್ದರೂ ದ್ವಿತೀಯ ದಿನದಲ್ಲಿ ಪಠಿಸಲಾಗುವುದು. ಇಲ್ಲಿ **ಅಚ್ಯುತೋ ಭವತಿ** ಎಂದಿರುವುದರಿಂದ ಈ ಅಚ್ಯುತಶಬ್ದಕ್ಕೆ ಸ್ಥಿತಶಬ್ದಾರ್ಥವಿರುವುದು. **ಉತಿಷ್ಠ ಬ್ರಹ್ಮಣಸ್ಪತೇ** (ಋ. ಸಂ. ೧-೪೦-೧) ಎಂಬುದು ಎರಡನೇ ಪ್ರಗಾಥವು. ಈ ಋಕ್ಕಿನಲ್ಲಿ **ಉತ್** ಎಂಬ ಶಬ್ದವಿರುವುದು. ಈ **ಉತ್** ಎಂಬ ಶಬ್ದವು ಊರ್ಧ್ವವಾಚಕವು ಎಂದರೆ ಊರ್ಧ್ವಶಬ್ದಾರ್ಥವನ್ನು ಸೂಚಿಸುವುದು. ಆದ್ದರಿಂದ ಈ ಎರಡು ಪ್ರಗಾಥಗಳಲ್ಲಿಯೂ ಎರಡನೇ ದಿವಸ ಪಠಿಸಲು ಅವಶ್ಯಕವಾದ ಲಕ್ಷಣಗಳಿದ್ದಂತಾಯಿತು.

## ಅಗ್ನಿರ್ನೇತಾ ತ್ವಂ ಸೋಮ ಕ್ರತುಭಿಃ ಪಿನ್ವಂತ್ಯಪ ಇತಿ ಧಾಯ್ಯಾ ಅಚ್ಯುತಾಃ ||

**ಅಥ ತಿಸೃಷು ಧಾಯ್ಯಾಸ್ವಚ್ಯುತತ್ವಲಿಂಗಂ ದರ್ಶಯತಿ—ಅಗ್ನಿರ್ನೇತೇತಿ ಪ್ರಥಮಾ ಧಾಯ್ಯಾ ತ್ವಂ ಸೋಮೇತಿ ದ್ವಿತೀಯಾ ಪಿಬಂತೀತಿ ತೃತೀಯಾ । ಪ್ರಥಮೇಽಹನ್ಯಪ್ಯೇತಾಸಾಂ ವಿಹಿತತ್ವಾದಚ್ಯುತತ್ವಂ ||**

ಅಗ್ನಿರ್ನೇತಾ ಭಗ (ಋ. ಸಂ. ೩-೨೧-೪) ಎಂಬ ಋಕ್ಕು ಮೊದಲನೇ ಧಾಯ್ಯಾಮಂತ್ರವು; **ತ್ವಂ ಸೋಮ** ಕ್ರತುಭಿಃ (ಋ. ಸಂ. ೧-೯೧-೨) ಎಂಬ ಋಕ್ಕು ಎರಡನೇ ಧಾಯ್ಯಾಮಂತ್ರವು; **ಪಿನ್ವಂತ್ಯಪೋ ಮರುತಃ** (ಋ. ಸಂ. ೧-೬೪-೬) ಎಂಬ ಋಕ್ಕು ಮೂರನೇ ಧಾಯ್ಯಾಮಂತ್ರವು.

**ಬೃಹದಿಂದ್ರಾಯ ಗಾಯತೇತಿ ಮರುತ್ವತೀಯಃ ಪ್ರಗಾಥೋ ಯೇನ ಜ್ಯೋತಿರಜನಯನ್ನೃತಾವೃಧ ಇತಿ ವೃಧನ್ವಾನ್ದ್ವಿತೀಯೇಽಹನಿ ದ್ವಿತೀಯಸ್ಯಾಹ್ನೋ ರೂಪಂ ॥**

**ಪ್ರಗಾಥಾಂತರೇ ಲಿಂಗಂ ದರ್ಶಯತಿ –ಬೃಹದಿಂದ್ರಾಯೇತ್ಯೇಷ ಮರುದ್ದೇವತಾಕೋ ಮರುತೋ ವೃತ್ರಹಂತಮಮಿತಿ ದ್ವಿತೀಯಪಾದೇ ಮರುತಾಂ ಶ್ರವಣಾತ್ । ತಸ್ಯ ಯೇನ ಜ್ಯೋತಿರಿತಿ ತೃತೀಯಃ ಪಾದಸ್ತತ್ರ ಋತಾವೃಧ ಇತಿ ಶ್ರವಣಾದಯಂ ಪ್ರಗಾಥೋ ವೃಧಿಧಾತು-ರೂಪಲಿಂಗವಾನ್ ॥**

**ಬೃಹದಿಂದ್ರಾಯ ಗಾಯತ** (ಋ. ಸಂ. ೮-೮೯-೧) ಎಂಬುದು ಮರುತ್ವತೀಯ ಪ್ರಗಾಥವು. ಈ ಋಕ್ಕಿನ ಎರಡನೇ ಪಾದವು **ಮರುತೋ ವೃತ್ರಹಂತಮಂ** ಎಂದಿರುವುದರಿಂದ ಈ ಪ್ರಗಾಥವು ಮರುದ್ದೇವತಾಕವು. ಈ ಋಕ್ಕಿನ ಮೂರನೇ ಪಾದದಲ್ಲಿ **ಯೇನ ಜ್ಯೋತಿಃ** ಎಂದಿರುವುದು. ಅಲ್ಲಿ **ಋತಾವೃಧಃ** ಎಂದು ವೃಧಿಧಾತುವಿನ ರೂಪವಿರುವುದರಿಂದ ಈ ಋಕ್ಕನ್ನು ಎರಡನೇ ದಿನ ಪಠಿಸಲು ಬೇಕಾದ ಯೋಗ್ಯತೆಯು (ಲಕ್ಷಣವು) ಈ ಋಕ್ಕಿನಲ್ಲಿರುವುದು.

**ಇಂದ್ರ ಸೋಮಂ ಸೋಮಪತೇ ಪಿಬೇಮಮಿತಿ ಸೂಕ್ತಂ ಸಜೋಷಾ ರುದ್ರೈಸ್ತೃಪದಾ ವೃಷಸ್ವೇತಿ ವೃಷಣ್ವದ್ದ್ವಿತೀಯೇಽಹನಿ ದ್ವಿತೀ-ಯಸ್ಯಾಹ್ನೋ ರೂಪಂ ॥**

**ಲಿಂಗದರ್ಶನದ್ವಾರಾ ಸೂಕ್ತಂ ವಿಧತ್ತೇ—ಇಂದ್ರ ಸೋಮಮಿತ್ಯಸ್ಮಿನ್ಸೂಕ್ತೇ ಸಜೋಷಾ ಇತ್ಯಾದಿಕೋ ದ್ವಿತೀಯಸ್ಯಾ ಋಚಶ್ಚತುರ್ಥಃ ಪಾದಸ್ತತ್ರ ವೃಷಸ್ವೇತಿ ಶ್ರವಣಾದ್ವೃಷಣ್ವಲ್ಲಿಂಗ-ಮಸ್ತಿ ॥**

**ಇಂದ್ರ ಸೋಮಂ ಸೋಮಪತೇ** (ಋ. ಸಂ. ೩-೩೨-೧) ಎಂಬ ಸೂಕ್ತದಲ್ಲಿ **ಸಜೋಷಾ** ಎಂಬ ಮಂತ್ರವು ಎರಡನೇ ಋಕ್ಕಿನ ನಾಲ್ಕನೇ ಪಾದದಲ್ಲಿರುವುದು. ಇಲ್ಲಿ **ವೃಷಸ್ವ** ಎಂಬ ಶಬ್ದಪ್ರಯೋಗವಿರುವುದರಿಂದ ಎರಡನೇ ದಿವಸದಲ್ಲಿ ಪಠಿಸಬೇಕಾದ ಋಕ್ಕಿನ ಲಕ್ಷಣವು ಇದ್ದಂತಾಯಿತು.

**ತ್ವಾಮಿದ್ಧಿ ಹವಾಮಹೇ ತ್ವಂ ಹ್ಯೇಹಿ ಚೇರವ ಇತಿ ಬೃಹತ್ಪೃಷ್ಠಂ ಭವತಿ ಬಾರ್ಹತೇಽಹನಿ ದ್ವಿತೀಯೇಽಹನಿ ದ್ವಿತೀಯಸ್ಯಾಹ್ನೋ ರೂಪಂ ॥**

**ಅಥ ನಿಷ್ಕೇವಲ್ಯಶಸ್ತ್ರಸ್ಯ ಸ್ತೋತ್ರಿಯಾನುರೂಪಯೋಃ ಪ್ರಗಾಥಯೋರ್ಬೃಹತ್ಸಾಮ-ಸಂಬಂಧರೂಪಂ ಲಿಂಗಂ ದರ್ಶಯತಿ—ತ್ವಾಮಿದ್ಧೀತಿ ಬೃಹತ್ಸಾಮ್ನ ಆಧಾರಭೂತಃ ಸ್ತೋತ್ರಿ-ಯಃ ಪ್ರಗಾಥಸ್ತ್ವಂ ಹ್ಯೇಹೀತ್ಯನುಚರಃ ಪ್ರಗಾಥಃ । ಪ್ರಥಮೇ ಪ್ರಗಾಥೇ ಬೃಹತ್ಸಾಮಯುಕ್ತಂ ಪೃಷ್ಠಸ್ತೋತ್ರಂ ಭವತಿ । ಅತ್ರ ಪ್ರಗಾಥದ್ವಯಸ್ಯ ಬೃಹತ್ಸಾಮಸಂಬಂಧಾದ್ಬಾರ್ಹತೇ ಬೃಹತ್ಸಾ-ಮಸಂಬಂಧಿನ್ಯಹನಿ ತದುಭಯಂ ಯೋಗ್ಯಂ । ದ್ವಿತೀಯಸ್ಯ ಚಾಹ್ನೋ ಬೃಹತ್ಸಾಮಸಂಬಂಧಿ-**

ತ್ವಾತ್ತಸ್ಮಿನ್ನಹನಿ ವಿನಿಯೋಕ್ತವ್ಯಂ ॥ ಅಯಂ ಚ ಬೃಹತ್ಸಾಮಸಂಬಂಧೋ ದ್ವಿತೀಯಸ್ಯಾಹ್ನೋ ಲಿಂಗಂ ॥

ಈಗ ನಿಷ್ಕೇವಲ್ಯಶಸ್ತ್ರದ ಸ್ತೋತ್ರಿಯಾನುರೂಪಪ್ರಗಾಥಋಕ್ಕುಗಳಲ್ಲಿ ಬೃಹತ್ಸಾಮಸಂಬಂಧವಾದ ಲಕ್ಷಣವನ್ನು ತೋರಿಸುವರು. ತ್ವಾಮಿದ್ಧಿ ಹವಾಮಹೇ (ಋ. ಸಂ. ೬-೪೬-೧) ಎಂಬ ಋಕ್ಕು ಬೃಹತ್ಸಾಮಕ್ಕೆ ಆಧಾರಭೂತವಾದ ಸ್ತೋತ್ರಿಯಪ್ರಗಾಥವು; ತ್ವಂ ಹ್ಯೇಹಿ ಚೇರವೇ (ಋ. ಸಂ. ೮-೬೧-೭) ಎಂಬ ಋಕ್ಕು ಅನುಚರಪ್ರಗಾಥವು. ಮೊದಲನೇ ಪ್ರಗಾಥದಲ್ಲಿ ನಿಷ್ಪನ್ನವಾದ ಬೃಹತ್ಸಾಮವು ಪೃಷ್ಠಸ್ತೋತ್ರವೆಂದಾಗುವುದು. ಈ ಎರಡು ಪ್ರಗಾಥಗಳಿಗೂ ಬೃಹತ್ಸಾಮಸಂಬಂಧವಿರುವುದರಿಂದ ಬೃಹತ್ಸಾಮಸಂಬಂಧವಿರುವ ದಿವಸದಲ್ಲಿ ಇವುಗಳನ್ನು ಪಠಿಸಲು ಯೋಗ್ಯವಾಗಿರುವುದು. ಬೃಹತ್‌ಸಾಮಸಂಬಂಧವಿರುವುದರಿಂದ ಇದನ್ನು ಎರಡನೇ ದಿವಸದಲ್ಲಿ ಪಠಿಸಬೇಕು. ಎಂದರೆ ಬೃಹತ್ಸಾಮಸಂಬಂಧವಿರುವುದರಿಂದ ಇದನ್ನು ಎರಡನೇ ದಿನದಲ್ಲಿ ಪಠಿಸಲು ಅವಶ್ಯಕವಾದ ಲಕ್ಷಣಗಳು ಇರುವವು ಎಂದು ತಿಳಿಯಬೇಕು.

## ಯದ್ವಾವಾನೇತಿ ಧಾಯ್ಯಾಽಚ್ಯುತಾ ॥

**ಅಥೈಕಸ್ಯಾಮೃಚ್ಯಚ್ಯುತತ್ವಲಿಂಗಂ ದರ್ಶಯತಿ—ಪ್ರಥಮೇಽಹನ್ಯಸ್ಯಾ ಋಚೋ ವಿಹಿತತ್ವಾದಚ್ಯುತತ್ವಂ ॥**

ಪ್ರಥಮ ದಿವಸದಲ್ಲಿ ಈ ಋಕ್ಕನ್ನು ಪಠಿಸುವುದರಿಂದ ಇದಕ್ಕೆ ಸ್ಥಿತತ್ವವೆಂಬ ಲಕ್ಷಣವಿದ್ದಂತಾಯಿತು.

## ಉಭಯಂ ಶೃಣವಚ್ಚ ನ ಇತಿ ಸಾಮಪ್ರಗಾಥೋ ಯಚ್ಚೇದಮದ್ಯ ಯದು ಚ ಹ್ಯ ಆಸೀದಿತಿ ಬಾರ್ಹತೇಽಹನಿ ದ್ವಿತೀಯೇಽಹನಿ ದ್ವಿತೀಯಸ್ಯಾಹ್ನೋ ರೂಪಂ ॥

**ಅಥ ಪ್ರಗಾಥಾಂತರೇ ಬೃಹತ್ಸಾಮಸಂಬಂಧಿರೂಪಂ ಲಿಂಗಂ ದರ್ಶಯತಿ-ಉಭಯಮಿತ್ಯಾದಿಕೋ ಬೃಹತ್ಸಾಮ್ನಾ ಸಹ ಪ್ರಯುಜ್ಯಮಾನಃ ಪ್ರಗಾಥಃ । ಉಭಯಶಬ್ದಸ್ಯ ಕೋಽರ್ಥಃ ಸೋಽಭಿಧೀಯತೇ । ಅದ್ಯಾಸ್ಮಿನ್ದಿನೇ ಯತ್ಕಾರ್ಯಮಾಸೀದಿದಂ ಚ ಕಾರ್ಯಮೇಕಂ ಯದು ಚ ಯದಪಿ ಹ್ಯಃ ಪೂರ್ವೇದ್ಯುಃ ಕಾರ್ಯಮಾಸೀತ್ತದಪೀತ್ಯೇವಂ ಕಾರ್ಯದ್ವಯಂ ಶೃಣವಚ್ಛ್ರುತಮಾಸೀದಿತಿ ಮಂತ್ರಗತಸ್ಯೋಭಯಂ ಶೃಣವದಿತ್ಯಸ್ಯಾರ್ಥಃ । ಬಾರ್ಹತ ಇತ್ಯಾದಿ ಪೂರ್ವವತ್ ॥**

ಇಲ್ಲಿ **ಉಭಯಂ** ಎಂದರೆ ಬೃಹತ್ಸಾಮ ಮತ್ತು ಪ್ರಗಾಥವು; ಈ ದಿನದಲ್ಲಿ ಮಾಡಬೇಕಾದ ಕಾರ್ಯವು ಒಂದು, ನಿನ್ನೆಯದಿನ ಮಾಡಲಾಗಿರುವ ಕಾರ್ಯವು ಎರಡನೆಯದು ಎಂದು ಎರಡು ವಿಧವಾಗಿರುವುದು. ಇದಕ್ಕೆ **ಉಭಯಂ ಶೃಣವಚ್ಚ** ನಃ (ಋ. ಸಂ. ೮-೬೧-೧) ಎಂಬ ಋಕ್ಕೇ ಆಧಾರವಾಗಿರುವುದು. ಈ ಋಕ್ಕಿನಲ್ಲಿ **ಶೃಣವಚ್ಚ** ಎಂದು ಎರಡು ಮಂತ್ರಗಳಲ್ಲಿಯೂ ಶ್ರುತಶಬ್ದಪ್ರಯೋಗವಿರುವುದರಿಂದ ಬಾರ್ಹತ ಎಂದು ಹೇಳಲ್ಪಡುವ ಎರಡನೇ ದಿವಸದಲ್ಲಿ ಪಠಿಸಲ್ಪಡಲು ಬೇಕಾದ ಲಕ್ಷಣವು ಇರುವುದೆಂದಭಿಪ್ರಾಯವು.

## ತ್ಯಮೂ ಷು ವಾಜಿನಂ ದೇವಜೂತಮಿತಿ ತಾರ್ಕ್ಷ್ಯೋಽಚ್ಯುತಃ ॥

ಸೂಕ್ತಾಂತರೇ ಪೂರ್ವವದಚ್ಯುತತ್ವಲಿಂಗಂ ದರ್ಶಯತಿ—ತಾರ್ಕ್ಷ್ಯದೇವತಾಕಸ್ಯ ಸೂಕ್ತವಿಶೇಷಸ್ಯ ಪ್ರಥಮೇಽಹನಿ ವಿಹಿತತ್ವಾದುತ್ತರೋತ್ತರೋಪಯೋಕ್ಷ್ಯಮಾಣತ್ವಾದಚ್ಯುತತ್ವಂ ||

ತ್ಯಮೂ ಷು ವಾಜಿನಂ ದೇವಜೂತಂ (ಋ. ಸಂ. ೧೦-೧೭೮-೧) ಎಂಬ ಸೂಕ್ತವನ್ನು ಪ್ರಥಮ ದಿನದಲ್ಲಿಯೇ ಪಠಿಸಲಾಗಿರುವುದರಿಂದ ಈ ಸೂಕ್ತವನ್ನು ಎರಡನೇ ದಿನದಲ್ಲಿ ಪಠಿಸಬೇಕಾದ ಅಚ್ಯುತತ್ವಲಕ್ಷಣವು ಈ ಋಕ್ಕಿನಲ್ಲಿರುವುದೆಂದಭಿಪ್ರಾಯವು. •

## *English Translation*

**(The characteristics of the second day of the Dvadasaha. The Shastras of the morning and midday libations. Story of Saryata, the son of Manu).**

Indra is the leading deity of the second day; the Stoma required is the fifteen-fold (panchadasa), the Saman is Brihat, the metre is Trishtubh. He who knows what deity, what Stoma, what Saman, what metre are required for the second day succeeds by it. On the second day neither a nor pra (the characteristics of the first day) are used, but stha (derivations from this root) "to stand", is the characteristic. Other characteristics of the second day are, urdhva upwards, prati towards, antar in, between, vrishan male, vridhan growing, the deities mentioned by their names in the second pada, the allusion to the airy region, what has the nature of the Brihat Saman, what has the nature of the Trishtubh, the present tense.

The Ajya hymn of the second day is, agnim dutam vrinimahe (1, 12); This contains the present tense (in vrinimahe) which is characteristic of the second day.

The Pra-uga Shastra is, vayo ye te sahasrino (2, 41); it contains the term vridhan growing, increasing, in the words sutah, soma ritavridha(2, 41, 41), which is a characteristic of the second day.

The Pratipad (beginning) of the Marutvatiya Shastra is visvanarasya vaspatim (8, 57, 4-6), and its Anuchara (sequel) indra it Samapa (8, 2, 4-6). They contain the terms vridhan (8, 57, 5) and antar (8, 2, 5) which are characteristics of the second day.

The constant (Indra-Nihava) Pragatha is, indra nediya edihi.

The Brahmanaspati Pragatha is, uttishtha brahmanaspate; it contains the term urdhra up, upwards (in the word Uttishtha i.e. rise) which is a characteristic of the second day.

The constant Dhayyas ure, agnir, neta, tvam soma kratubhih, pinvanty apah.

The Marutvatiya Pragatha is brihad indraya gayata, (8,87, 1–2); it contains the term vridhan increasing, in the word ritarridha.

The Nivid hymn of the Marutvatiya Shastra is, ihdra somam samapate (3.32); it contains the term vrishan in the word a vrishasva "gather strength", (show yourself as a male, 3. 32, 2) which ;s a characteristic of the second day.

The Brihat Prishtham (i. e. Storiyam and Anurupam) is, tvam iddhi havamahe (6.46, 1-2) and tvam hyehi cherave (8, 50, 7-8); This is done on the Barhata day of which kind the second day is the use of the Brihat prishtha being a characteristic of the second day.

The constant Dhayya of the Nishkevalya Shastra is, yad vavana.

The Sama Pragatha is, ubhayam srinavacheha (8, 50, 1-2); the term ubhayam i.e., both means, what is today and what was yesterday. It belongs to the Brihat Saman, which is a characteristic of the second day.

The constant Tarkshya is, tyam u shu vajinam.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ವಿಂಶೋಧ್ಯಾಯಸ್ಯ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು
ಸಮಾಪ್ತವಾದುದು.



# ಅಥ ವಿಂಶೋಧ್ಯಾಯೇ ಚತುರ್ಥಃ ಖಂಡಃ

## ಇಪ್ಪತ್ತನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ನಿಷ್ಕೇವಲ್ಯಶಸ್ತ್ರದ ಉಳಿದ ಭಾಗಗಳು ಮತ್ತು ಎರಡನೇ ದಿವಸದಲ್ಲಿ ಪಠಿಸಬೇಕಾದ ತೃತೀಯಸವನದ ಶಸ್ತ್ರಮಂತ್ರಗಳು.]



**ಯಾ ತ ಊತಿರವಮಾ ಯಾ ಪರಮೇತಿ ಸೂಕ್ತಂ ಜಹಿ ವೃಷ್ಣ್ಯಾನಿ ಕೃಣುಹೀ ಪರಾಚ ಇತಿ ವೃಷಣ್ವತ್ ದ್ವಿತೀಯೇಽಹನಿ ದ್ವಿತೀಯಸ್ಯಾಹ್ನೋ ರೂಪಂ ||**

ಸೂಕ್ತಾಂತರೇ ವೃಷಣ್ಶಬ್ದೋಪೇತಂ ಲಿಂಗಂ ದರ್ಶಯತಿ— ಯಾ ತ ಊತಿರಿತ್ಯಸ್ಮಿನ್ಸೂಕ್ತೇ ಜಹಿ ವೃಷ್ಣ್ಯಾನೀತಿ ತೃತೀಯಸ್ಯಾ ಋಚಶ್ಚತುರ್ಥಃ ಪಾದಸ್ತತ್ರ ವೃಷಶಬ್ದಾದುಕ್ತಂ ಲಿಂಗಂ ದೃಶ್ಯತೇ ||

ಯಾ ತ ಊತಿರವಮಾ ಯಾ ಪರಮಾ (ಋ. ಸಂ. ೬-೨೧-೧) ಎಂಬ ಸೂಕ್ತದ ಮೂರನೇ ಋಕ್ಕಿನ ನಾಲ್ಕನೇ ಪಾದದಲ್ಲಿ **ವೃಷ** ಶಬ್ದಪ್ರಯೋಗವಿರುವುದರಿಂದ ಇದರಲ್ಲಿ ಎರಡನೇ ದಿನದಲ್ಲಿ ಉಪಯೋಗಿಸಬೇಕಾದ ಲಕ್ಷಣವಿರುವುದೆಂದು ತಿಳಿಯಬೇಕು.

**ವಿಶ್ವೋ ದೇವಸ್ಯ ನೇತುಸ್ತತ್ಸವಿತುರ್ವರೇಣ್ಯಮಾ ವಿಶ್ವದೇವಂ ಸತ್ಪತಿಮಿತಿ ವೈಶ್ವದೇವಸ್ಯ ಪ್ರತಿಪದನುಚರೌ ಬಾರ್ಹತೇಽಹನಿ ದ್ವಿತೀಯೇಽಹನಿ ದ್ವಿತೀಯಸ್ಯಾಹ್ನೋ ರೂಪಂ ||**

ಅಥ ವೈಶ್ವದೇವಶಸ್ತ್ರಗತಯೋಸ್ತ್ರ್ಯಚಯೋರ್ಬೃಹತ್ಸಾಮಸಂಬಂಧಂ ರೂಪಂ ದರ್ಶಯತಿ— ವಿಶ್ವೋ ದೇವಸ್ಯೇತ್ಯೇಕಾ ಋಕ್ತತ್ಸವಿತುರಿತಿ ದ್ವೇ ಋಚೌ | ಸೋಽಯಮೇಕಸ್ತ್ರ್ಯಚೋ ಬೃಹತ್ಸಾಮಸಂಬಂಧಭೂತೋ ವೈಶ್ವದೇವಶಸ್ತ್ರಸ್ಯ ಪ್ರತಿಪದ್ಭವತಿ | ಆ ವಿಶ್ವದೇವಮಿತ್ಯೇಷ ತ್ರ್ಯಚಸ್ತಸ್ಯಾನುಚರಃ | ಅತಉಭಯೋರ್ಬೃಹತ್ಸಾಮಸಂಬಂಧಃ ||

**ವಿಶ್ವೋ ದೇವಸ್ಯ ನೇತುಃ** (ಋ. ಸಂ. ೫-೫೦-೧) ಎಂಬ ಋಕ್ಕು ವೈಶ್ವದೇವಶಸ್ತ್ರದಲ್ಲಿರುವ ಒಂದು ಋಕ್ಕು; **ತತ್ಸವಿತುರ್ವರೇಣ್ಯಂ** (ಋ. ಸಂ. ೩-೬೨-೧೦) ಎಂಬುದು ಎರಡನೆಯ ಋಕ್ಕು. ಈ ಋಕ್ಕು ಬೃಹತ್ಸಾಮ ಸಂಬಂಧವಾದ

ವೈಶ್ವದೇವಶಸ್ತ್ರದ ಮೊದಲನೆಯ ಋಕ್ಕು (ಪ್ರತಿಪತ್); ಆ ವಿಶ್ವದೇವಂ ಸತ್ಪತಿಂ (ಋ. ಸಂ. ೫-೮೨-೭) ಎಂಬ ಋಕು ಅನುಚರಋಕ್ಕು (ಎರಡನೇ ಋಕ್ಕು). ಈ ಎರಡು ಋಕ್ಕುಗಳಿಗೂ ಬೃಹತ್ಸಾಮಸಂಬಂಧವಿರುವುದು. ಆದ್ದರಿಂದ ಎರಡನೇ ದಿವಸದಲ್ಲಿ ಪಠಿಸಲು ಬೇಕಾದ ಲಕ್ಷಣವು ಈ ಋಕ್ಕುಗಳಲ್ಲಿರುವವು.

**ಉದು ಷ್ಯ ದೇವಃ ಸವಿತಾ ಹಿರಣ್ಯಯೇತಿ ಸಾವಿತ್ರಮೂರ್ಧ್ವವದ್ದ್ವಿತೀಯೇಽಹನಿ ದ್ವಿತೀಯಸ್ಯಾಹ್ನೋ ರೂಪಂ ॥**

**ಸೂಕ್ತಾಂತರೇ ಲಿಂಗಂ ದರ್ಶಯತಿ— ಅಸ್ಮಿಂಸ್ತ್ರ್ಯೃಚಾತ್ಮಕೇ ಸಾವಿತ್ರಸೂಕ್ತ ಊರ್ಧ್ವವಾಚಿನ ಉಚ್ಛಬ್ದಸ್ಯ ಶ್ರವಣಾದೂರ್ಧ್ವವಲ್ಲಿಂಗಮಸ್ತಿ ॥**

ಸವಿತೃದೇವತಾಕವಾದ **ಉದುಷ್ಯ ದೇವಃ ಸವಿತಾ** (ಋ. ಸಂ. ೬-೭೧-೧) ಈ ತೃಚದಲ್ಲಿ ಊರ್ಧ್ವಶಬ್ದವಾಚಕವಾದ **ಉತ್** ಎಂಬ ಶಬ್ದವಿರುವುದರಿಂದ ಎರಡನೇ ದಿನದಲ್ಲಿ ಪಠಿಸಲು ಅರ್ಹವಾದ ಲಕ್ಷಣವು ಈ ತೃಚದಲ್ಲಿರುವುದು.

**ತೇ ಹಿ ದ್ಯಾವಾಪೃಥಿವೀ ವಿಶ್ವಶಂಭುವೇತಿ ದ್ಯಾವಾಪೃಥಿವೀಯಂ ಸುಜನ್ಮನೀ ಧಿಷಣೇ ಅಂತರೀಯತ ಇತ್ಯಂತರ್ವದ್ದ್ವಿತೀಯೇಽಹನಿ ದ್ವಿತೀಯಸ್ಯಾಹ್ನೋ ರೂಪಂ ॥**

**ಸೂಕ್ತಾಂತರೇ ಲಿಂಗಂ ದರ್ಶಯತಿ—ಅಸ್ಮಿನ್ದ್ಯಾವಾಪೃಥಿವೀಯೇ ಸೂಕ್ತೇ ಸುಜನ್ಮನೀ ಇತ್ಯೇಷ ಪ್ರಥಮಾಯಾ ಋಚಸ್ತುರೀಯಃ ಪಾದಃ । ತತ್ರಾಂತಃ ಪದಸ್ಯ ಶ್ರೂಯಮಾಣತ್ವಾದಂತರ್ವಲ್ಲಿಂಗಂ ॥**

**ತೇ ಹಿ ದ್ಯಾವಾಪೃಥಿವೀ ವಿಶ್ವಶಂಭುವಾ** (ಋ. ಸಂ. ೧-೧೬೦-೧) ಎಂಬುವದು ದ್ಯಾವಾಪೃಥಿವೀದೇವತಾಕವಾದ ಈ ಸೂಕ್ತದ ಮೊದಲನೇ ಋಕ್ಕಿನ ನಾಲ್ಕನೇಪಾದವು. ಇಲ್ಲಿ ಅಂತಃಶಬ್ದವು ಪಠಿತವಾಗಿರುವುದರಿಂದ ಎರಡನೇ ದಿವಸದಲ್ಲಿ ಪಠಿಸಲು ಬೇಕಾದ ಲಕ್ಷಣವು ಇಲ್ಲಿರುವುದು.

**ತಕ್ಷನ್ರಥಂ ಸುವೃತಂ ವಿದ್ಮನಾಪಸ ಇತ್ಯಾರ್ಭವಂ ತಕ್ಷನ್ಹರೀ ಇಂದ್ರವಾಹಾ ವೃಷಣ್ವಸೂ ಇತಿ ವೃಷಣ್ವದ್ದ್ವಿತೀಯೇಽಹನಿ ದ್ವಿತೀಯಸ್ಯಾಹ್ನೋ ರೂಪಂ ॥**

**ಸೂಕ್ತಾಂತರೇ ಲಿಂಗಂ ದರ್ಶಯತಿ-- ತಕ್ಷನ್ರಥಮಿತಿ ಸೂಕ್ತಮೃಭುದೇವತಾಕಂ । ಪ್ರಥಮಾಯಾ ಋಚಸ್ತೃತೀಯಪಾದೇ ತಕ್ಷನ್ಪಿತೃಭ್ಯಾಮೃಭವ ಇತಿ ಶ್ರವಣಾತ್ । ತತ್ರೈವ ತಕ್ಷನ್ಹರೀ ಇತ್ಯಾದಿಕೋ ದ್ವಿತೀಯಃ ಪಾದಃ ತಸ್ಮಿನ್ವೃಷಣ್ವಸೂ ಇತಿ ವೃಷಣ್ವಲ್ಲಿಂಗಂ ದೃಶ್ಯತೇ ॥**

ತಕ್ಷನ್ರಥಂ ಸುವೃತಂ ವಿದ್ಮನಾಪಸಃ (ಋ. ಸಂ. ೧-೧೧೧-೧೧) ಎಂಬ ಸೂಕ್ತವು ಋಭುದೇವತಾಕವು. ಏಕೆಂದರೆ, ಈ ಸೂಕ್ತದ ಮೊದಲನೇ ಋಕ್ಕಿನ ಮೊದಲನೇ ಪಾದದಲ್ಲಿ **ತಕ್ಷನ್ಪಿತೃಭ್ಯಾಮೃಭವಃ** ಎಂದು ಋಭುದೇವತೆಗಳ

ಹೆಸರಿರುವುದು. ಹಾಗೆಯೇ ಇದೇ ಋಕ್ಕಿನ ತಕ್ಷನ್ನರೀ ಎಂಬ ಎರಡನೇ ಪಾದದಲ್ಲಿ **ವೃಷಣ್ವಸೂ** ಎಂದು ವೃಷಣ್ವತ್ ಶಬ್ದ ಪ್ರಯೋಗವಿರುವುದರಿಂದ ಎರಡನೇ ದಿವಸ ಪಠಿಸಲು ಬೇಕಾದ ಲಕ್ಷಣವು ಈ ಸೂಕ್ತದಲ್ಲಿರುವುದು.

**ಯಜ್ಞಸ್ಯ ವೋ ರಥ್ಯಂ ವಿಶ್ಪತಿಂ ವಿಶಾಮಿತಿ ವೈಶ್ವದೇವಂ ವೃಷಾಕೇತುರ್ಯಜತೋ ದ್ಯಾಮಶಾಯತೇತಿ ವೃಷಣ್ವದ್ದ್ವಿತೀಯೇಽಹನಿ ದ್ವಿತೀಯಸ್ಯಾಹ್ನೋ ರೂಪಂ ॥**

**ಸೂಕ್ತಾಂತರೇ ಲಿಂಗಂ ದರ್ಶಯತಿ—ಯಜ್ಞಸ್ಯೇತ್ಯಾದಿಸೂಕ್ತ ಇಂದ್ರೋ ಮಿತ್ರೋ ವರುಣ ಇತ್ಯೇವಂ ಬಹುದೇವತಾಶ್ರವಣಾದಿದಂ ವೈಶ್ವದೇವಮ್ । ವೃಷಾಕೇತುರಿತ್ಯೇಷ ಪ್ರಥಮಾಯಾಶ್ಚತುರ್ಥಃ ಪಾದಸ್ತತ್ರ ವೃಷಣ್ವಲ್ಲಿಂಗಮಸ್ತಿ ॥**

**ಯಜ್ಞಸ್ಯ ವೋ ರಥ್ಯಂ ವಿಶ್ಪತಿಂ** (ಋ. ಸಂ. ೧೦-೯೨-೧) ಎಂಬ ಋಕ್ಕಿನಲ್ಲಿ ಇಂದ್ರ, ಮಿತ್ರ, ವರುಣ ಮೊದಲಾದ ದೇವತೆಗಳ ಹೆಸರುಗಳಿರುವುದರಿಂದ ಈ ಋಕ್ಕು ವಿಶ್ವೇದೇವತಾಕವು(ಬಹುದೇವತಾಕವು). ಈ ಸೂಕ್ತದ ಮೊದಲನೇ ಋಕ್ಕಿನ ನಾಲ್ಕನೇ ಪಾದದಲ್ಲಿ **ವೃಷಾಕೇತುಃ** ಎಂದು ವೃಷಣ್ವತ್ ಶಬ್ದವಿರುವುದರಿಂದ ಈ ಋಕ್ಕಿನಲ್ಲಿ ಎರಡನೆಯ ದಿವಸ ಪಠಿಸಲು ಅವಶ್ಯಕವಾದ ಲಕ್ಷಣವಿದ್ದಂತಾಯಿತು.

**ತದು ಶಾರ್ಯಾತಮಂಗಿರಸೋ ವೈ ಸ್ವರ್ಗಾಯ ಲೋಕಾಯ ಸತ್ರಮಾಸತ ತೇ ಹ ಸ್ಮ ದ್ವಿತೀಯಂ ದ್ವಿತೀಯಮೇವಾಹರಾಗತ್ಯ ಮುಹ್ಯಂತಿ ತಾನ್ಹಾ ಏತಚ್ಛಾರ್ಯಾತೋ ಮಾನವೋ ದ್ವಿತೀಯೇಽಹನಿ ಸೂಕ್ತಮಶಂಸಯತ್ತತೋ ವೈ ತೇ ಪ್ರ ಯಜ್ಞಮಜಾನನ್ಪ್ರ ಸ್ವರ್ಗಂ ಲೋಕಂ ತದ್ಯದೇತತ್ಸೂಕ್ತಂ ದ್ವಿತೀಯೇಽಹನಿ ಶಂಸತಿ ಯಜ್ಞಸ್ಯ ಪ್ರಜ್ಞಾತ್ಯೈ ಸ್ವರ್ಗಸ್ಯ ಲೋಕಸ್ಯಾನುಖ್ಯಾತ್ಯೈ ॥ ಪೃಕ್ಷಸ್ಯ ವೃಷ್ಣೋ ಅರುಷಸ್ಯ ನೂ ಸಹ ಇತ್ಯಾಗ್ನಿಮಾರುತಸ್ಯ ಪ್ರತಿಪದ್ವೃಷಣ್ವದ್ದ್ವಿತೀಯೇಽಹನಿ ದ್ವಿತೀಯಸ್ಯಾಹ್ನೋ ರೂಪಂ ॥**

**ತದೇತತ್ಸೂಕ್ತಂ ಪ್ರಶಂಸತಿ–ತದು ಯಜ್ಞಸ್ಯ ವೋ ರಥ್ಯಮಿತ್ಯಾದಿಕಂ ಸೂಕ್ತಂ ಶಾರ್ಯಾತಸ್ಯ ಕಸ್ಯಚಿನ್ಮಹರ್ಷೇಃ ಸಂಬಂಧಾದಿತ್ಯವಗಂತವ್ಯಮ್ । ಕಥಂ ಸಂಬಂಧ ಇತಿ ತದುಚ್ಯತೇ । ಪುರಾ ಕದಾಚಿದಂಗಿರಸೋ ವೈ ಮಹರ್ಷಯಃ ಸ್ವರ್ಗಾರ್ಥಂ ಸತ್ರಮನುಷ್ಠಾತುಮುದ್ಯುಕ್ತಾಸ್ತೇ ಮಹರ್ಷಯೋ ಯಸ್ಮಿನ್ಯಸ್ಮಿನ್ಸತ್ರೇ ಪೃಷ್ಠ್ಯಷಳ(ಡ)ಹಸ್ಯ ದ್ವಿತೀಯಮಹರನುತಿಷ್ಠಂತಿ ತತ್ರ ಸರ್ವತ್ರ ದ್ವಿತೀಯೇಽಹನಿ ಶಸ್ತ್ರಬಾಹುಲ್ಯಾತ್ಕುತ್ರ ಕಿಂ ಶಸ್ತ್ರಂ ಪಠಿತವ್ಯಮಿತ್ಯಜ್ಞಾತ್ವಾ ಮುಹ್ಯಂತಿ । ತದಾನೀಂ ಶಾರ್ಯಾತನಾಮಕಃ ಕಶ್ಚಿನ್ಮಾನವ ಋಷಿರ್ಗತ್ವಾ ತಾನಂಗಿರಸೋ ಮಹರ್ಷೀನ್ಯಜ್ಞಸ್ಯ ವ ಇತ್ಯಾದಿಕಂ ಸೂಕ್ತಂ ದ್ವಿತೀಯೇಽಹನ್ಯಶಂಸಯತ್ । ತತಃ ಸೂಕ್ತ-**

ಪ್ರಭಾವಾದೇವತೇ ಮಹರ್ಷಯೋ ಯಜ್ಞಂ ಪ್ರಜಾನನ್ಯಜ್ಞಂ ಪ್ರಕರ್ಷೇಣ ಜ್ಞಾತವಂತಃ। ತದ್ಯಜ್ಞಸಾಧ್ಯಂ ಸ್ವರ್ಗಂ ಲೋಕಂ ಚ ಪ್ರ(ಪ್ರಾ)ಜಾನನ್ । ತಸ್ಮಾತ್ ದ್ವಿತೀಯೇಽಹನ್ಯೇತಸ್ಯ ಸೂಕ್ತಸ್ಯ ಶಂಸನೇನ ವ್ಯಾಮೋಹಮಂತರೇಣ ಯಜ್ಞಃ ಪ್ರಜ್ಞಾತೋ ಭವತಿ ಸ್ವರ್ಗಶ್ಚಾವಗಮ್ಯತೇ ।

**ಯಜ್ಞಸ್ಯ ವೋ ರಥ್ಯಂ ವಿಶ್ಪತಿಂ** (ಋ. ಸಂ. ೧೦-೯೨-೧) ಎಂಬ ಸೂಕ್ತವು ಶಾರ್ಯಾತ ಎಂಬ ಋಷಿಸಂಬಂಧವಾದದ್ದು ಈ ವಿಷಯದಲ್ಲಿ ಒಂದು ಉಪಾಖ್ಯಾನವಿರುವುದು. ಪೂರ್ವದಲ್ಲಿ ಅಂಗಿರಸಃ ಎಂಬ ಋಷಿಗಳು ಸ್ವರ್ಗಲೋಕಪ್ರಾಪ್ತಿಗಾಗಿ ಸತ್ರಯಾಗವನ್ನು ಮಾಡಲು ಪ್ರಾರಂಭಿಸಿದರು. ಆಗ ಅವರು ಆ ಸತ್ರದಲ್ಲಿ ಆಚರಿಸಬೇಕಾದ ಪೃಷ್ಠ್ಯಷಳಹವೆಂಬ ಯಾಗವನ್ನು (ಸತ್ರಯಾಗದಲ್ಲಿ ಈ ಪೃಷ್ಠ್ಯಷಳಹವನ್ನು ಐದಾವರ್ತಿ ಮಾಡಬೇಕು) ಮಾಡುವ ಕಾಲದಲ್ಲಿ ಎರಡನೇ ದಿವಸ ಪಠಿಸಬೇಕಾದ ಶಸ್ತ್ರಮಂತ್ರಗಳು ಬಹಳವಾಗಿದ್ದದರಿಂದ ಯಾವಾಗ ಎಲ್ಲಿ ಯಾವ ಶಸ್ತ್ರವನ್ನು ಪಠಿಸಬೇಕೆಂದು ಭ್ರಾಂತರಾಗಿರುವಾಗ ಶಾರ್ಯಾತ ಎಂಬ ಪುರುಷನು (ಆ ಯಜ್ಞದಲ್ಲಿ ಋತ್ವಿಜನಾಗಿ) ಆ ಅಂಗಿರಸ ಋಷಿಗಳಿಗೆ **ಯಜ್ಞಸ್ಯ ವೋ ರಥ್ಯಂ** ಎಂಬ ಸೂಕ್ತವನ್ನು ಎರಡನೇ ದಿವಸ ಪಠಿಸಬೇಕೆಂದು ತಿಳಿಸಿ ಅದರಂತೆ (ತಾನು ಋತ್ವಿಜನಾದ್ದರಿಂದ) ತಾನೂ ಆ ಸೂಕ್ತವನ್ನು ಎರಡನೇದಿನ ಪಠಿಸದನು. ಆ ಸೂಕ್ತಪ್ರಭಾವದಿಂದ ಆ ಅಂಗಿರಸಮಹರ್ಷಿಗಳು ಆ ಯಜ್ಞಮಾಡುವ ವಿಧಾನವನ್ನು ತಿಳಿದುಕೊಂಡರು. ಅದರಂತೆ ಯಜ್ಞವನ್ನು ಮಾಡಿದ್ದರಿಂದ ಆ ಮಹರ್ಷಿಗಳು ಸ್ವರ್ಗಲೋಕವನ್ನು ಪಡೆದರು. ಈ ಕಾರಣದಿಂದ ದ್ವಾದಶಾಹದ ಎರಡನೇ ದಿವಸ ಮೇಲೆ ತಿಳಿಸಿದ **ಯಜ್ಞಸ್ಯ ವೋ ರಥ್ಯಂ** ಎಂಬ ಸೂಕ್ತವನ್ನು ಪಠಿಸುವುದರಿಂದ ಯಜ್ಞಮಾಡುವ ಕ್ರಮವು ತಿಳಿಯುವುದಲ್ಲದೆ ಯಜ್ಞಾನುಷ್ಠಾನದಿಂದ ಸ್ವರ್ಗಪ್ರಾಪ್ತಿಯೂ ಲಭಿಸುವುದು. **ಪೃಕ್ಷಸ್ಯ ವೃಷ್ಣೋ ಅರುಷಸ್ಯ** (ಋ. ಸಂ. ೯-೮-೧) ಎಂಬ ಋಕ್ಕು ಆಗ್ನಿಮಾರುತಶಸ್ತ್ರದ ಪ್ರತಿಪತ್ (ಮೊದಲನೇ) ಋಕ್ಕು. ಈ ಋಕ್ಕಿನಲ್ಲಿ ವೃಷ್ಣ ಎಂಬ ಶಬ್ದವಿರುವುದರಿಂದ ಎರಡನೇ ದಿವಸ ಪಠಿಸಲು ಬೇಕಾದ ಲಕ್ಷಣವು ಈ ಋಕ್ಕಿನಲ್ಲಿ ಇದ್ದಂತಾಯಿತು.

**ವೃಷ್ಣೇ ಶರ್ಧಾಯ ಸುಮಖಾಯ ವೇಧಸ ಇತಿ ಮಾರುತಂ ವೃಷಣ್ವದ್ದ್ವಿತೀಯೇಽಹನಿ ದ್ವಿತೀಯಸ್ಯಾಹ್ನೋ ರೂಪಂ ॥ ಜಾತವೇದಸೇ ಸುನವಾಮ ಸೋಮಮಿತಿ ಜಾತವೇದಸ್ಯಾಽಚ್ಯುತಾ ॥**

ಶಸ್ತ್ರಾಂತರಸ್ಯ ಪ್ರತಿಪದಿ ಲಿಂಗಂ ದರ್ಶಯತಿ—ತತ್ರ ವೃಷ್ಣ ಇತಿ ಶ್ರವಣಾದ್ವೃಷಣ್ವಲ್ಲಿಂಗಮ್ ॥

ಮಾರುತಸೂಕ್ತೇ ಲಿಂಗಂ ದರ್ಶಯತಿ—ಅತ್ರ ಪ್ರಥಮಾಯಾ ಋಚೋ ದ್ವಿತೀಯಪಾದೇ ಪ್ರಭರಾ ಮರುದ್ಭ್ಯ ಇತಿ ಶ್ರವಣಾದಿದಂ ಸೂಕ್ತಂ ಮಾರುತಮ್ । ವೃಷಣ್ವಲ್ಲಿಂಗಂ ಸ್ಪಷ್ಟಮ್ ॥

ಜಾತವೇದಸ್ಯಾಯಾ ನ್ಯೂಚ್ಯಚ್ಯುತತ್ವಲಿಂಗ ದರ್ಶಯತಿ—ಪ್ರಥಮೇಽಹನ್ಯಸ್ಯಾ ಋಚೋ ವಿಹಿತತ್ವಾದಚ್ಯುತತ್ವಮ್ ॥

ವೃಷ್ಣೇ ಶರ್ಧಾಯ ಸುಮಖಾಯ (ಋ. ಸಂ. ೧-೬೪-೧) ಎಂಬ ಸೂಕ್ತವು ಮರುದ್ದೇವತಾಕವು. ಏಕೆಂದರೆ, ಈ ಸೂಕ್ತದ ಮೊದಲನೇ ಋಕ್ಕಿನ ಎರಡನೇ ಪಾದದಲ್ಲಿ **ಪ್ರಭರಾ ಮರುದ್ಭ್ಯಃ** ಎಂದು ಮರುದ್ದೇವತೆಗಳ ಹೆಸರಿರುವುದು.

ಈ ಋಕ್ಕಿನಲ್ಲಿ ವೃಷ್ಣೇ ಎಂದು ವೃಷಣ್ವತ್ ಶಬ್ದಪ್ರಯೋಗವಿರುವುದರಿಂದ ಎರಡನೇ ದಿವಸದಲ್ಲಿ ಪಠಿಸಲು ಅವಶ್ಯಕವಾದ ಲಕ್ಷಣವು ಇದರಲ್ಲಿದ್ದಂತಾಯಿತು. **ಜಾತವೇದಸೇ ಸುನವಾಮ ಸೋಮಂ** (ಋ. ಸಂ. ೧-೯೯-೧) ಎಂಬ ಋಕ್ಕು ಜಾತವೇದಸ್ಯವು. ಈ ಋಕ್ಕನ್ನು ಹಿಂದೆಯೇ ಒಂದಾವರ್ತಿ ಪಠಿಸಿರುವುದರಿಂದ ಇದರಲ್ಲಿ ಅಚ್ಯುತತ್ವವೆಂಬ ಎರಡನೇ ದಿವಸ ಪಠಿಸಬೇಕಾದ ಲಕ್ಷಣವು ಇದ್ದಂತಾಯಿತು.

**ಯಜ್ಞೇನ ವರ್ಧತ ಜಾತವೇದಸಮಿತಿ ಜಾತವೇದಸ್ಯಂ ವೃಧನ್ವದ್ದ್ವಿತೀ-ಯೇऽಹನಿ ದ್ವಿತೀಯಸ್ಯಾಹ್ನೋ ರೂಪಮಹ್ನೋ ರೂಪಂ ॥**

**ಸೂಕ್ತಾಂತರೇ ಲಿಂಗಂ ದರ್ಶಯತಿ—ಜಾತವೇದೋದೇವತಾಕತ್ವಂ ವೃಧನ್ವಲ್ಲಿಂಗಂ ಚಾತ್ರ ವಿಸ್ಪಷ್ಟಮ್ । ಅಭ್ಯಾಸೋऽಧ್ಯಾಯಪರಿಸಮಾಪ್ತ್ಯರ್ಥಃ ॥**

**ಯಜ್ಞೇನ ವರ್ಧತ ಜಾತವೇದಸಂ** (ಋ. ಸಂ. ೨-೨-೧) ಎಂಬ ಋಕ್ಕು ಜಾತವೇದೋದೇವತಾಕವು. ಈ ಋಕ್ಕಿನಲ್ಲಿ ವೃಧನ್ವತ್ (ವರ್ಧತ ಎಂಬ ಶಬ್ದ) ಶಬ್ದರೂಪವು ಇರುವುದರಿಂದ ಈ ಋಕ್ಕಿನಲ್ಲಿ ಎರಡನೇ ದಿವಸದಲ್ಲಿ ಪಠಿಸಲು ಅವಶ್ಯಕವಾದ ಲಕ್ಷಣವು ಇದ್ದಂತಾಯಿತು.

*English Translation*

**(The remainder of the Nishkevalya Shastra, and the Shastras of the evening libation on the second day).**

The Nivid hymn of the Nishkevalya Shastra is, ya ta utir avama (6, 25); it contains the term vrishan in the word vrishnyani (6, 25, 3) which term is a characteristic of the second day.

The Pratipad of the Vaisvadeva Shastra is, visvo devasya netus (5, 50, 1) and tat savitar varenyam (3, 62, 10-11), the Anuchara (sequel) is, a visvadevam satpatim (5,82,7-9). It belongs to the Brihat day, and is thus a characteristic of the second day, (which is a Brihat day)

The Nivid hymn for Savitar is, ud u shya devah savita (6, 71); it contains the term "up, upwards," (in ut) which is a characteristic of the second day.

The Nivid hymn for Dyavaprithvi is, te hi dyavaprithivi (1, 160); it contains the term antar, which is a characteristic of the second day.

The Nivid hymn for the Ribhus is, takshan ratham (1,111); it contains the term vrishan in the word vrishnvasu, which is a characteristic of the second day.

The Nivid hymn for the Visvedevah is yajnasya yo rathyam (10, 92); it contains the term rrisha in the words rrisha ketur, which is a characteristic of the second day. This hymn is by Saryata. As the Angiras were engaged in a

sacrificial session for going to heaven, they became always confounded in their recitations as often as they were going to perform the ceremonies of the second day of the Shalaha. Saryata, the son of Manu, made them repeat the hymn, yajnasya rathyam on the second day, whereupon they got aware of the sacrifice (the sacrificial personage) and by means of it of the celestial world. The reason that the Hotar repeats his hymn on the second day is to help the sacrificer, to get aware of the sacrifice, and consequently to see the celestial world of which he wishes to become an inhabitant.

The Pratipad (beginning) of the Agnimaruta Shastra is, prikshasya vrishno (6, 8); it contains the term vrishan, which is a characteristic of the second day.

The Nivid hymn for the Marutas in the Agnimaruta Shastra is, vrishne sardhaya (1, 64); it contains the term vrishan, which is a characteristic of the second day.

The constant Jatavedas verse is Jatavedase sunavama.

The Nivid hymn for Jayavedas is vajnena vardhata (2, 2); it contains the term vridh, which is a characteristic of the second day.

ಇತಿ ವಿಂಶಾಧ್ಯಾಯೇ ಚತುರ್ಥಃ ಖಂಡಃ

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ವಿಂಶೋಧ್ಯಾಯಃ ಸಮಾಪ್ತಃ

ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವಾದುದು.

ಇಪ್ಪತ್ತನೆಯ ಅಧ್ಯಾಯವು ಮುಗಿದುದು.



# ಅಥೈತರೇಯಬ್ರಾಹ್ಮಣೇ ಏಕವಿಂಶಾಧ್ಯಾಯೇ ಪ್ರಥಮಃ ಖಂಡಃ

## ಇಪ್ಪತ್ತೊಂದನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು



[ ದ್ವಾದಶಾಹವೆಂಬ ಯಾಗದ ಮೂರು ಮತ್ತು ನಾಲ್ಕನೆಯ ದಿನಗಳ ಕಾರ್ಯಕಲಾಪಗಳು ಮತ್ತು ಲಕ್ಷಣಗಳು ]



[ ಮೂರನೆಯ ದಿವಸದಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳ ಲಕ್ಷಣಗಳು. ಪ್ರಾತಃಸವನದ ಮತ್ತು ಮಾಧ್ಯಂದಿನಸವನಗಳಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳು.]



ಭಿನ್ನಾನ್ಯಾಹುರ್ದೇವತಾಸ್ತೋಮಸಾಮಚ್ಛಂದಾಂಸ್ಯಹ್ನಸ್ತಸ್ಯ ತಸ್ಯಾಪಿ ಷಣ್ಣಾಂ ।
ವಿದ್ವದ್ವಾಕ್ಯಾದುತ್ತರಂ ಸ್ಯಾತ್ಸಮಾನಂ ಸ್ಯಾನ್‌ಸ್ಯಾನ್‌ಲೋಕಾಂಸ್ತ್ರಿತ್ರಿಕೋಣೇಷ್ವಹಃಸು ॥೧॥

ಸಿದ್ಧಾನಿ ಶಸ್ತ್ರಾಣಿ ಷಡೇವ ಹೌತ್ರಾಣ್ಯಾಜ್ಯೇನ ಸೂಕ್ತಂ ಪ್ರಉಗೇ ತೃಚಾಶ್ಚ ।
ಮರುತ್ವತೀಯೇ ಪ್ರತಿಪತ್ತೃಚೌ ಚ ಧಾಯ್ಯಾಃ ಪ್ರಗಾಥಾಶ್ಚ ತಥೈವ ಸೂಕ್ತಂ ॥೨॥

ನಿಷ್ಕೇವಲ್ಯೇ ಸ್ತೋತ್ರಿಯಃ ಪೃಷ್ಠಯೋನಿರ್ಯೋನಿಸ್ಥಾನೇ ಸ್ವಸ್ವಸಾಮ ಪ್ರಗಾಥಃ ।
ತಾರ್ಕ್ಷ್ಯಾರ್ತ್ಸೂಕ್ತಾತ್ಪೂರ್ವಮನ್ಯೇ ತು ನಿತ್ಯೇ ಸ್ಯಾತಾಂ ತತ್ಸೂಕ್ತಾಜ್ಜಾತವೇದಸ್ಯಮನ್ಯತ್ ।
ಛಂದೋಗಾನಾಂ ವೈಶ್ವದೇವಾತ್ಪುರಸ್ತಾದಾಯಾಹೀಮಾವೃಭುಸೂಕ್ತಾನಿ ಚೈವ ॥೩॥

ರಾಥಂತರಮಯುಗ್ಮಂ ಸ್ಯಾದ್‌ಬೃಹತ್ಸಾಮೇತರದ್ಭವೇತ್ ।
ವೈರೂಪ್ಯಾ(ಪಾ)ದಿ ದ್ವಿತೀಯಂ ಸ್ಯಾತ್ತೃತೀಯಾದಿಷ್ವನುಕ್ರಮಾತ್ ॥೪॥

ಅಥೇಂದ್ರಪೂರ್ವೋ ನಿಹವಃ ಪ್ರಗಾಥೋ ಧಾಯ್ಯಾಶ್ಚ ತಾರ್ಕ್ಷ್ಯಂ ಚ ಸಮಾನಮಹ್ನಾಮ್ ।
ಸ್ಯಾತ್‌ಸ್ಯಾತ್ತಥಾ ಜಾತವೇದಸ್ಯಮಗ್ರ್ಯಂ ಛಂದೋಮ ಆದ್ಯಸ್ತ್ರ್ಯಹಸ್ತೃತೀಯಃ ॥೫॥



ವಿಶ್ವೇ ವೈ ದೇವಾ ದೇವತಾಸ್ತೃತೀಯಮಹರ್ವಹಂತಿ ಸಪ್ತದಶಃ ಸ್ತೋಮೋ ವೈರೂಪಂ ಸಾಮ ಜಗತೀ ಛಂದಃ । ಯಥಾದೇವತಮೇನೇನ ಯಥಾಸ್ತೋಮಂ ಯಥಾಸಾಮ ಯಥಾಛಂದಸಂ ರಾಧ್ನೋತಿ ಯ ಏವಂ ವೇದ ॥

ಅಥ ದ್ವಾದಶಾಹಾಂತರ್ಗತಸ್ಯ ನವರಾತ್ರಸ್ಯ ತೃತೀಯಮಹರ್ನಿರೂಪಯತಿ—ದೇವತಾಸು ಮಧ್ಯೇ ವಿಶ್ವೇ ದೇವಾಃ ಸ್ತೋಮಾನಾಂ ಮಧ್ಯೇ ಸಪ್ತದಶಃ ಸಾಮ್ನಾಂ ಮಧ್ಯೇ ವೈರೂಪಂ ಛಂದಸಾಂ ಮಧ್ಯೇ ಜಗತೀ ತಾನ್ಯೇತಾನಿ ತೃತೀಯಸ್ಯಾಹ್ನೋ ನಿರ್ವಾಹಕಾಣಿ। ಯದ್ಯಪಿ ಪೃಷ್ಠ್ಯೇ ಷಡಹೇ ಪ್ರಥಮತೃತೀಯಪಂಚಮಾನ್ಯಹಾನಿ ರಾಥಂತರಾಣಿ ದ್ವಿತೀಯಚತುರ್ಥಷಷ್ಠಾನ್ಯಹಾನಿ ಬಾರ್ಹತಾನಿ ತಥಾಪಿ ರಥಂತರಬೃಹತ್ಸಾಮಸಂಬಂಧಃ ಸಾಧಾರಣೋ (ಣೋ) ವೈರೂಪಾದಿಸಾಮಸಂಬಂಧೋ (ಧೋ) ವಿಶೇಷಸ್ತೃತೀಯೇಽಹನಿ। ಸತ್ಯಪಿ ರಥಂತರಪೃಷ್ಠೇ ವೈರೂಪಂ ಸಾಮ ದ್ವಿತೀಯತ್ವೇನ ಪ್ರಯುಜ್ಯತೇ। ಅತೋ ವೈರೂಪಸ್ಯೈತಸ್ಮಿನ್ನಹನ್ಯಸಾಧಾರಣತ್ವಾನ್ನಿರ್ವಾಹಕತ್ವಮುಚ್ಯತೇ। ವೇದನಂ ಪ್ರಶಂಸತಿ।ಉಕ್ತದೇವತಾದೀನಾಂ ವೇದಿತೈತಾನ್ಯ(ನ)ತಿಕ್ರಮ್ಯ ತತ್ಪ್ರಸಾದೇನ ಸಮೃದ್ಧೋ ಭವತಿ ॥

ದ್ವಾದಶಾಹವೆಂಬ ಯಾಗದ ಮಧ್ಯದ ಒಂಭತ್ತು ದಿನಗಳಲ್ಲಿ (ಹನ್ನೆರಡು ದಿನಗಳಲ್ಲಿ ಮೊದಲನೆಯದು, ಕೊನೆಯದು ಮತ್ತು ಹತ್ತನೆಯ ದಿವಸಗಳನ್ನು ಬಿಟ್ಟು ಉಳಿದ ಒಂಭತ್ತು ದಿನಗಳಲ್ಲಿ) ಮೂರನೆಯ ದಿವಸದ ಕಾರ್ಯಕ್ರಮವನ್ನು ತಿಳಿಸುವರು. ಈ ಮೂರನೆಯ ದಿವಸದ ಕಾರ್ಯಕ್ರಮಗಳಲ್ಲಿ ಮುಖ್ಯವಾದವು. ಯಾವುದೆಂದರೆ—ದೇವತೆಗಳ ಮಧ್ಯದಲ್ಲಿ ವಿಶ್ವದೇವತೆಗಳು, ಸ್ತೋಮಗಳಲ್ಲಿ ಸಪ್ತದಶಸ್ತೋಮ, ಸಾಮಮಂತ್ರಗಳಲ್ಲಿ ವೈರೂಪಂ ಎಂಬ ಸಾಮ, ಛಂದಸ್ಸುಗಳಲ್ಲಿ ಜಗತೀಛಂದಸ್ಸು. ಇವುಗಳೆಲ್ಲವೂ ಮೂರನೇ ದಿನದಲ್ಲಿ ಆಚರಿಸಬೇಕಾದ ಕಾರ್ಯಕಲಾಪಗಳು. ಆದ್ದರಿಂದ ಈ ಮೂರನೆಯ ದಿನದಲ್ಲಿ ಯಾವ ದೇವತೆಗಳನ್ನು ಸ್ತುತಿಸಬೇಕು, ಯಾವ ಸ್ತೋಮವನ್ನು ಪಠಿಸಬೇಕು, ಯಾವ ಸಾಮಮಂತ್ರವನ್ನು ಗಾನಮಾಡಬೇಕು, ಯಾವ ಛಂದಸ್ಸಿನ ಮಂತ್ರಗಳನ್ನು ಪಠಿಸಬೇಕು ಎಂದು ಮೊದಲಾದ ವಿಷಯಗಳನ್ನು ತಿಳಿದು ಅದರಂತೆ ಆಚರಿಸುವ ಪುರುಷನು ತನ್ನ ಸಮಸ್ತ ಇಷ್ಟಾರ್ಥಗಳನ್ನೂ ಪಡೆಯುವನು.

ಯದ್ವೈ ಸಮಾನೋದರ್ಕಂ ತತ್ತೃತೀಯಸ್ಯಾಹ್ನೋ ರೂಪಂ ಯದಶ್ವವದ್ಯದಂತವದ್ಯತ್ಪುನರಾವೃತ್ತಂ ಯತ್ಪುನರ್ನಿನೃತ್ತಂ ಯದ್ರತವದ್ಯತ್ಪರ್ಯಸ್ತವದ್ಯತ್ತ್ರಿವೃದ್ಯದಂತರೂಪಂ ಯದುತ್ತಮೇ ಪದೇ ದೇವತಾ ನಿರುಚ್ಯತೇ ಯದಸೌ ಲೋಕೋಽಭ್ಯುದಿತೋ ಯದ್ವೈರೂಪಂ ಯಜ್ಜಾಗತಂ ಯತ್ಕೃತಮೇತಾನಿ ವೈ ತೃತೀಸ್ಯಾಹ್ನೋ ರೂಪಾಣಿ ॥

ಏತಸ್ಯಾಹ್ನಃ ಸಂಬಂಧಿಷು ಮಂತ್ರೇಷು ಪೂರ್ವವಲ್ಲಿಂಗಾನಿ ನಿರೂಪಯತಿ—ಉದರ್ಕಃ ಸಮಾಪ್ತಿಃ। ಸಮಾನ ಉದರ್ಕಸ್ತುಲ್ಯಾ ಸಮಾಪ್ತಿರ್ಯಸ್ಯ ಮಂತ್ರಭಾಗಸ್ಯ ತತ್ಸಮಾನೋದರ್ಕಮ್ । ತಾದೃಶಂ ಯದೇವಾಸ್ತಿ ತತ್ತೃತೀಯಸ್ಯಾಹ್ನೋ ರೂಪಂ ನಿರೂಪಕಂ ಲಿಂಗಮಿತ್ಯರ್ಥಃ ಅಶ್ವಶಬ್ದೋಪೇತಮಶ್ವವತ್ । ಅಂತಶಬ್ದೋಪೇತಮಂತವತ್ । ಪಠಿತಸ್ಯೈವ ಪುನಃ ಪಾಠಃ ಪುನರಾವೃತ್ತಮ್ । ಪುನರಪಿ ನಿತರಾ (ನೃ) ವೃತ್ತಂ ವ(ನ)ರ್ತನಂ ಪುನರ್ನಿನೃತ್ತಮ್ । ಸ್ವರವಿಶೇಷೇಣಾಕ್ಷರಾಣಾಂ ಪುನಃ ಪುನರಾವರ್ತನೇನ ವಾ ನರ್ತನಸಾದೃಶ್ಯಮ್ । ಪುನರಾವೃತ್ತಂ

ಪಠಿತಸ್ಯೈವ ಪಾದಸ್ಯಾಽವೃತ್ತಿಃ । ಅತ್ರ ತು ಸ್ವರಾಕ್ಷರಮಾತ್ರಸ್ಯೈವಾಯಮನುವಾದಃ । ಅಥವಾ ಪುನರ್ವಚನಂ ಪ್ರಾಧಾನ್ಯಪ್ರತಿಪಾದನಾರ್ಥಂ ತದೀಯಾರ್ಥಪರಿಗ್ರಹಾರ್ಥಂ ವಾ । ಉತ್ತಮೇ ಪಾದೇ ದೇವತಾಯಾ ಅಭಿಧಾನಂ ಸ್ವರ್ಗಲೋಕಸ್ಯ ಕಥನಂ ವೈರೂಪಸಾಮಸಂಬಂಧಿತ್ವಂ ಜಗತೀಛಂದಃ ಸಂಬಂಧಿತ್ವಂ ಭೂತಾರ್ಥಪ್ರತ್ಯಯೋಪೇತಃ ಕರೋತಿಧಾತುರ್ಧಾತುಮಾತ್ರಂ ವಾ । ಏತಾನಿ ಸರ್ವಾಣಿ ತೃತೀಯಸ್ಯಾಹ್ನೋ ರೂಪಾಣಿ.

ಈ ಮೂರನೇ ದಿನದಲ್ಲಿ ಪಠಿಸಬೇಕಾದ ಮಂತ್ರಗಳ ಲಕ್ಷಣಗಳನ್ನು (ಚಿಹ್ನೆಗಳನ್ನು) ವಿವರಿಸುತ್ತಾರೆ. ಮೇಲಿನವಾಕ್ಯದಲ್ಲಿರುವ **ಉದರ್ಕ** ಎಂಬ ಶಬ್ದಕ್ಕೆ ಸಮಾಪ್ತಿ ಎಂದರ್ಥವು. ಆದ್ದರಿಂದ **ಸಮಾನೋದರ್ಕಃ** ಎಂದರೆ ಈ ದಿನದಲ್ಲಿ ಪಠಿಸುವ ಮಂತ್ರಗಳ ಸಮಾಪ್ತಿಯು ಒಂದೇವಿಧವಾಗಿರುವವು ಎಂದರ್ಥವು. ಯಾವರೀತಿ ಸಮಾಪ್ತಿಗೊಳ್ಳುವುದೆಂದು ತಿಳಿಸುವರು. **ಅಶ್ವವತ್**–ಕೊನೆಯಲ್ಲಿ ಅಶ್ವಶಬ್ದವಿರಬೇಕು. **ಅಂತವತ್**–ಅಂತಶಬ್ದವಿರಬೇಕು. **ಪುನರಾವೃತ್ತಂ**–ಹೇಳಿದ್ದನ್ನೇ ಮತ್ತೆ ಮತ್ತೆ ಹೇಳುತ್ತಿರಬೇಕು. **ಪುನರ್ನಿನೃತ್ತಂ**–ಒಂದಾವರ್ತಿ ಹೇಳಿದ್ದನ್ನೇ ಮತ್ತೊಂದಾವರ್ತಿ ಹೇಳುವಂತಿರಬೇಕು. **ರತವತ್**–ಧಾತುವಿನ ಅರ್ಥವು ಒಂದೇವಿಧವಾಗಿರಬೇಕು. **ಪರ್ಯಸ್ತವತ್**–ಪರ್ಯಾಸಶಬ್ದವಿರಬೇಕು. **ತ್ರಿವತ್**–ತ್ರಿ ಎಂಬ ಶಬ್ದವಿರಬೇಕು. **ಅಂತರೂಪಂ**–ಅಂತ ಎಂಬ ಶಬ್ದವಿರಬೇಕು. ಮಂತ್ರದ ಕೊನೆಯ ಪಾದದಲ್ಲಿ ನಿರ್ದಿಷ್ಟದೇವತೆಯ ಹೆಸರಿರಬೇಕು. ಸ್ವರ್ಗಲೋಕ, ವೈರೂಪವೆಂಬ ಸಾಮ, ಜಗತೀಛಂದಸ್ಸು ಭೂತಾರ್ಥವನ್ನು ಸೂಚಿಸುವ ಧಾತುವಿನ ಕಾಲವು (ಲಿಟ್) ಕರೋತಿ (ಡುಕೃಜ್) ಧಾತುವಿನ ಯಾವುದಾದರೂ ರೂಪವು, ಇವುಗಳು ಅಥವಾ ಇವುಗಳ ಸಂಬಂಧವು ಮಂತ್ರಗಳಲ್ಲಿರಬೇಕು. ಇವುಗಳೆಲ್ಲಾ ಮೂರನೇ ದಿನದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳು.

## ಯುಕ್ಷ್ವಾ ಹಿ ದೇವಹೂತಮಾँ ಅಶ್ವಾँ ಅಗ್ನೇ ರಥೀರಿವೇತಿ ತೃತೀಯಸ್ಯಾಹ್ನ ಆಜ್ಯಂ ಭವತಿ ॥

ಇದಾನೀಮಾಜ್ಯಶಸ್ತ್ರಂ ವಿಧತ್ತೇ—

ಈ ಮೂರನೇ ದಿನದಲ್ಲಿ ಆಜ್ಯಶಸ್ತ್ರಮಂತ್ರಕ್ಕಾಗಿ **ಯುಕ್ಷ್ವಾ ಹಿ ದೇವಹೂತಮಾँ ಅಶ್ವಾँ ಅಗ್ನೇ ರಥೀರಿವ** (ಋ. ಸಂ. ೮-೭೫-೧) ಎಂಬ ಮಂತ್ರವನ್ನು ಪಠಿಸಬೇಕು.

## ದೇವಾ ವೈ ತೃತೀಯೇನಾಹ್ನಾ ಸ್ವರ್ಗಂ ಲೋಕಮಾಯಂಸ್ತಾನಸುರಾ ರಕ್ಷಾಂಸ್ಯನ್ವವಾರಯಂತ ತೇ ವಿರೂಪಾ ಭವತ ವಿರೂಪಾ ಭವತೇತಿ ಭವಂತ ಆಯಂಸ್ತೇ ಯದ್ವಿರೂಪಾ ಭವತ ವಿರೂಪಾ ಭವತೇತಿ ಭವಂತ ಆಯಂಸ್ತದ್ವೈರೂಪಂ ಸಾಮಾಭವತ್ತದ್ವೈರೂಪಸ್ಯ ವೈರೂಪತ್ವಂ ॥ ವಿರೂಪಃ ಪಾಪ್ಮನಾ ಭೂತ್ವಾ ಪಾಪ್ಮಾನಮಪಹತೇ ಯ ಏವಂ ವೇದ ॥

ತದೇತಚ್ಛಸ್ತ್ರಂ ಪ್ರಶಂಸಿತುಮಾಖ್ಯಾಯಿಕಾಮಾಹ— ಯದಾ ದೇವಾಸ್ತ್ರ್ಯಹೀಯಮಹರನುಷ್ಠಾಯ ತೇನ ಸ್ವರ್ಗಂ ಲೋಕಂ ಗತಾಸ್ತದಾನೀಮಸುರಾ ರಕ್ಷಾಂಸಿ ಚ ತಾನ್ದೇವಾನನುಗಮ್ಯ ಸ್ವರ್ಗಪ್ರವೇಶೋ ಯಥಾ ನ ಭವತಿ ತಥಾಽವಾರಯಂತ ನಿವಾರಿತವಂತಃ । ತತಸ್ತೇ ದೇವಾಸ್ತಾನಸುರಾನ್ ಪ್ರತಿ ವಿರೂಪಾ ವಿರುದ್ಧರೂಪೋಪೇತಾ ಭವತೇತಿ ಶಪಿತ್ವಾ ಭವಂತಃ ಸ್ವೇನ ರೂಪೇಣೈವಾಽವಿರ್ಭವಂತ ಆಯನ್ಸ್ವರ್ಗಂ ಪ್ರತ್ಯಾಗಚ್ಛನ್ । ವಿರೂಪಾ ಭವತೇತಿ ವೀಪ್ಸಾ ಸರ್ವದೇವೋಕ್ತಿದ್ಯೋತನಾರ್ಥಾಽಸುರಶಾಪೇಽತ್ಯಂತಮಾದರಾರ್ಥಾ ವಾ । ತೇ ದೇವಾ ಯಸ್ಮಾತ್ಕಾರಣಾದಸುರಾನ್ಪ್ರತಿ ವಿರೂಪತ್ವಶಾಪಂ ದತ್ತವಂತಸ್ತಸ್ಮಾದಸುರಾಣಾಂ ತದ್ವಿರುದ್ಧಂ ರೂಪಂ ವೈರೂಪಾಖ್ಯಂ ಸಾಮಾಭವತ್ । ವಿರೂಪೋಕ್ತಿಸಂಬಂಧಾದೇವ ತಸ್ಯ ವೈರೂಪಂ ನಾಮ ಸಂಪನ್ನಂ ॥ ಉಕ್ತಾರ್ಥವೇದನಂ ಪ್ರಶಂಸತಿ— ವೇದಿತಾ ಪೂರ್ವಂ ಕೇನಚಿತ್ಪಾಪ್ಮನಾ ವಿರುದ್ಧರೂಪಯುಕ್ತೋ ಭೂತ್ವಾಪಿ ಪಶ್ಚಾದ್ವೇದನಸಾಮರ್ಥ್ಯಾತ್ತಂ ಪಾಪ್ಮಾನಮಪಹತೇ ವಿನಾಶಯತಿ ॥

ಮೇಲೆ ಹೇಳಿದ ಶಸ್ತ್ರಮಂತ್ರದ ವಿಷಯದಲ್ಲಿ ಒಂದು ಪೂರ್ವೇತಿಹಾಸವನ್ನು ವಿವರಿಸುವರು. ಪೂರ್ವದಲ್ಲಿ ದೇವತೆಗಳು ಈ ದ್ವಾದಶಾಹದ ಮೂರನೇ ದಿನದ ಕಾರ್ಯಕಲಾಪಗಳನ್ನು ಮಾಡಿ ಮುಗಿಸಿ ಅದರ ಪ್ರಭಾವದಿಂದ ಸ್ವರ್ಗಲೋಕಕ್ಕೆ ಹೊರಟು ಹೋದರು. ಆಗ ಅಸುರರು ದೇವತೆಗಳನ್ನೇ ಅನುಸರಿಸಿ ಅವರ ಹಿಂದೆ ಸ್ವರ್ಗದವರೆಗೆ ಹೋಗಿ ದೇವತೆಗಳು ಸ್ವರ್ಗವನ್ನು ಪ್ರವೇಶಿಸದಂತೆ ಅಡ್ಡಿಪಡಿಸಿದರು. ಆಗ ದೇವತೆಗಳು ಅಸುರರನ್ನು ಕುರಿತು ಎಲೈ ಅಸುರರೇ, ನೀವು ಸ್ವರ್ಗಲೋಕಕ್ಕೆ ಹೋಗದಂತೆ ನಮ್ಮನ್ನು ಅಡ್ಡಿಪಡಿಸುತ್ತಿರುವುದರಿಂದ ನೀವು ವಿಕಾರವಾದ ರೂಪವನ್ನು ಹೊಂದಿರಿ ಎಂದು ಅವರಿಗೆ ಶಾಪವಿತ್ತು ತಾವು ಸ್ವರ್ಗಲೋಕಕ್ಕೆ ಹೋದರು. ದೇವತೆಗಳು ಅಸುರರಿಗೆ ವಿಕಾರವಾದ ರೂಪವನ್ನು (ವಿರೂಪ) ಹೊಂದಿರಿ ಎಂದು ಶಾಪಕೊಟ್ಟದ್ದರಿಂದ, ದೇವತೆಗಳು ಉಚ್ಚರಿಸಿದ ಸಾಮಮಂತ್ರವು ವೈರೂಪವೆಂಬ ಸಾಮಮಂತ್ರವಾಯಿತು. ಯಾವನೊಬ್ಬ ಪುರುಷನು ಕಾರಣಾಂತರದಿಂದ ಪಾಪಮಾಡಿ ಅದರ ಫಲವಾಗಿ ವಿಕಾರವಾದ ರೂಪವುಳ್ಳವನಾಗಿರುವನೋ ಆ ಪುರುಷನು ಈ ಮಂತ್ರಪಠನದಿಂದ ತನ್ನ ಪಾಪಗಳನ್ನು ಕಳೆದುಕೊಂಡು ಸುಖಿಸುವನು.

ತಾನ್ಹ ಸ್ಮಾನ್ದೇವಾಽಽಗಚ್ಛಂತಿ ಸಮೇವ ಸೃಜ್ಯಂತೇ ತಾನಶ್ವಾ ಭೂತ್ವಾ ಪದ್ಭಿರಪಾಘ್ನತ ಯದಶ್ವಾ ಭೂತ್ವಾ ಪದ್ಭಿರಪಾಘ್ನತ ತದಶ್ವಾನಾಮಶ್ವತ್ವಂ ಅಶ್ನುತೇ ಯದ್ಯತ್ಕಾಮಯತೇ ಯ ಏವಂ ವೇದ ॥

ಪ್ರಾಸಂಗಿಕಂ ವೈರೂಪಶಬ್ದನಿರ್ವಚನಂ ಕೃತ್ವಾ ಪ್ರಾಕೃತಮೇವೋಪಾಖ್ಯಾನಶೇಷಮಾಹ—ದೇವಶಾಪಾತ್ಕುರೂಪತ್ವಂ ಪ್ರಾಪ್ತಾ ಅಸುರಾಃ ಪುನರಪಿ ತಾನ್ದೇವಾನನು ಪಶ್ಚಾದಾಗಚ್ಛಂತ್ಯೇವ ನ ತು ಪರಿತ್ಯಜಂತಿ । ಆಗತ್ಯ ಚ ದೇವೈಃ ಸಂಸೃಜ್ಯಂತ ಏವ ನ ತು ದೂರೇ ತಿಷ್ಠಂತಿ । ತದಾನೀಂ ದೇವಾಃ ಸರ್ವೇಽಪ್ಯಶ್ವರೂಪಧಾರಿಣೋ ಭೂತ್ವಾ ಪೃಷ್ಠತ ಆಗತಾನಸುರಾನ್ಪದ್ಭಿರಪಾಘ್ನತ ಸ್ವಕೀಯಪಾದತಾಡನೈರ್ಹತವಂತಃ । ಯಸ್ಮಾದೇವಮಶ್ವಾಭೂತ್ವಾ ಪದ್ಭಿರ್ಹತವಂತಸ್ತಸ್ಮಾಲ್ಲೋಕೇಽಪಿ ಪಾದತಾಡನಕುಶಲಾನಾಂ ಚತುಷ್ಪದಾಮಶ್ವನಾಮ ಸಂಪನ್ನಂ ॥ ಉಕ್ತಾರ್ಥವೇದನಂ ಪ್ರಶಂಸತಿ—

ವೈರೂಪಶಬ್ದನಿರ್ವಚನವನ್ನು ಹೇಳಿ ಈಗ ಪೂರ್ವೇತಿಹಾಸದ ಮುಂದಿನ ವಿಷಯವನ್ನು ತಿಳಿಸುವರು. ಮೇಲೆ ಹೇಳಿದಂತೆ ಅಸುರರು ದೇವತೆಗಳ ಶಾಪದಿಂದ ವಿಕೃತ (ವಿಕಾರವಾದ) ರೂಪವನ್ನು ಹೊಂದಿದ್ದರೂ ಅವರು ದೇವತೆಗಳ ಹಿಂದೆಯೇ ಹೋಗಿ ದೇವತೆಗಳು ಸ್ವರ್ಗವನ್ನು ಪ್ರವೇಶಿಸುವುದಕ್ಕೆ ಅಡ್ಡಿಮಾಡುತ್ತಲೇಬಂದರು. ದೇವತೆಗಳನ್ನುಬಿಟ್ಟು ದೂರ ಹೋಗಲಿಲ್ಲ. ಆದ್ದರಿಂದ ದೇವತೆಗಳು ಕುದುರೆಗಳ ರೂಪವನ್ನು ಧರಿಸಿ ತಮ್ಮಹಿಂದೆ ಬರುತ್ತಿದ್ದ ಅಸುರರನ್ನು ತಮ್ಮಕಾಲಿನ ಒದೆಗಳಿಂದ (ಪಾದ ತಾಡನ) ಚೆನ್ನಾಗಿ ತಾಡನೆಮಾಡಿ ಅಸುರರನ್ನು ಸಂಹಾರಮಾಡಿದರು. ದೇವತೆಗಳು ಅಶ್ವರೂಪದಿಂದ ಅಸುರರನ್ನು ತಾಡನೆಮಾಡಿ ಸಂಹರಿಸಿದ್ದರಿಂದ ಕುದುರೆಯ ಆಕಾರವುಳ್ಳ ಚತುಷ್ಪಾದ (ನಾಲ್ಕು ಕಾಲುಗಳುಳ್ಳ) ಪ್ರಾಣಿಗೆ ಅಶ್ವ (ಕುದುರೆ) ವೆಂದು ಲೋಕದಲ್ಲಿ ಹೆಸರಾಯಿತು. ಈ ವಿಷಯವನ್ನು ತಿಳಿದಿರುವ ಪುರುಷನು ತನ್ನ ಇಷ್ಟಾರ್ಥಗಳನ್ನು ಪಡೆದು ಸುಖಿಸುವನು.

**ತಸ್ಮಾದಶ್ವಃ ಪಶೂನಾಂ ಜವಿಷ್ಠಸ್ತಸ್ಮಾದಶ್ವಃ ಪ್ರತ್ಯಙ್-ಪದಾ ಹಿನಸ್ತಿ ಅಪ ಪಾಪ್ಮಾನಂ ಹತೇ ಯ ಏವಂ ವೇದ ॥**

**ದೇವೈರಶ್ವವೇಷಕೃತಂ ವ್ಯಾಪಾರಮಿದಾನೀಂತನೇಷ್ವಶ್ವೇಷು ದರ್ಶಯತಿ-ಯಸ್ಮಾದಶ್ವ-ರೂಪೈರ್ದೇವೈರ್ವೇಗೇನ ಗಮನಂ ಪದ್ಭಿಸ್ತಾಡನಂ ಚಾಽವಿರತಂ ತಸ್ಮಾಲ್ಲೋಕೇಽಪಿ ಪಶೂ-ನಾಂ ಮಧ್ಯೇಽಶ್ವೋಽತ್ಯಂತಂ ವೇಗವಾನ್ । ತಸ್ಮಾದು ತಸ್ಮಾದೇವ ಕಾರಣಾಲ್ಲೌಕಿಕೋಽಶ್ವಃ ಪ್ರತ್ಯಙ್ಪೃಷ್ಠತಃ ಪಾದೇನ ಪುರುಷಂ ಹಿನಸ್ತಿ ತಾಡಯತಿ॥ ಉಕ್ತಾರ್ಥವೇದನಂ ಪ್ರಶಂಸತಿ॥**

ಅಸುರರನ್ನು ಓಡಿಸುವುದಕ್ಕಾಗಿ ದೇವತೆಗಳು ಅಶ್ವರೂಪವನ್ನು ಧರಿಸಿ ವೇಗವಾಗಿ ಓಡುತ್ತಾ ಹಿಂದೆ ಬರುತ್ತಿರುವ ಅಸುರರನ್ನು ತಮ್ಮ ಕಾಲುಗಳಿಂದ ತಾಡನಮಾಡಿ ಸಂಹರಿಸಿದ್ದರಿಂದ ಈಗಲೂ ಕುದುರೆಗಳಿಗೆ ವೇಗವಾಗಿ ಓಡುವ ಸಾಮರ್ಥ್ಯವೂ ತಮ್ಮ ಹಿಂಗಾಲುಗಳಿಂದ ಒದೆಯುವ ಶಕ್ತಿಯೂ ಬಂದಿರುವುದು. ಈ ವಿಷಯವನ್ನು ತಿಳಿದಿರುವ ಪುರುಷನು ತನ್ನ ಪಾಪಗಳನ್ನು ಕಳೆದುಕೊಂಡು ಸುಖಿಸುವನು.

**ತಸ್ಮಾದೇತದಶ್ವವದಾಜ್ಯಂ ಭವತಿ ತೃತೀಯೇಽಹನಿ ತೃತೀಯಸ್ಯಾಹ್ನೋ ರೂಪಂ ॥**

**ಯುಕ್ಷ್ವಾ ಹೀತಿ ಸೂಕ್ತಂ ಪ್ರಶಸ್ಯಾಜ್ಯವಿಧಿಂ ನಿಗಮಯತಿ— ಯಸ್ಮಾದಶ್ವಸ್ಯೇದೃಶೋ ಮಹಿಮಾ ತಸ್ಮಾದಶ್ವವದಶ್ವಶಬ್ದೋಪೇತಂ ಯುಕ್ಷ್ವಾ ಹೀತಿ ಸೂಕ್ತಂ ತೃತೀಯೇಽಹನ್ಯಾಜ್ಯ-ಶಸ್ತ್ರಂ ಭವತಿ। ಯದಶ್ವವದಿತಿ ಪೂರ್ವಂ ಲಕ್ಷಣಸ್ಯೋಕ್ತತ್ವಾದಿದಮಶ್ವಶಬ್ದೋಪೇತಂ ಸೂಕ್ತಂ ತೃತೀಯಸ್ಯಾಹ್ನೋ ರೂಪಕಂ ॥**

ಅಶ್ವಕ್ಕೆ ಮೇಲೆ ಹೇಳಿದ ಸಾಮರ್ಥ್ಯಗಳಿರುವವು. ಆದ್ದರಿಂದ ಅಶ್ವಶಬ್ದದಿಂದ ಕೂಡಿದ **ಯುಕ್ಷ್ವಾ ಹಿ** ಎಂಬ **ಸೂಕ್ತವು** ಆಜ್ಯಶಸ್ತ್ರದಲ್ಲಿ ಪಠಿಸಲ್ಪಡುವುದು. ಮತ್ತು ಅಶ್ವಶಬ್ದಸಹಿತವಾದ ಈ ಸೂಕ್ತವು ಈ ದ್ವಾದಶಾಹವೆಂಬ ಯಜ್ಞದ ಮೂರನೇ ದಿನದಲ್ಲಿ ಪಠಿಸಲು ಯೋಗ್ಯವಾದ ಲಕ್ಷಣವುಳ್ಳದ್ದಾಗಿಯೂ ಇರುವುದು.

**ವಾಯವಾಯಾಹಿ ವೀತಯೇ ವಾಯೋ ಯಾಹಿ ಶಿವಾ ದಿವ ಇಂದ್ರಶ್ಚ ವಾಯವೇಷಾಂ ಸುತಾನಾಮಾ ಮಿತ್ರೇ ವರುಣೇ ವಯಮಶ್ವಿನಾ-**

ವೇಹ ಗಚ್ಛತಮಾ ಯಾಹ್ಯದ್ರಿಭಿಃ ಸುತಂ ಸಜೂರ್ವಿಶ್ವೇಭಿರ್ದೇ-ವೇಭಿರುತ ನಃ ಪ್ರಿಯಾ ಪ್ರಿಯಾಸ್ವಿತ್ಯೌಷ್ಣಿಹಂ ಪ್ರಉಗಂ ಸಮಾ-ನೋದರ್ಕಂ ತೃತೀಯಸ್ಯಾಹ್ನೋ ರೂಪಂ ||

ಅಥ ಪ್ರಉಗಶಸ್ತ್ರಂ ವಿಧತ್ತೇ—ವಾಯವಾಯಾಹಿ ವೀತಯ ಇತ್ಯೇಕಾ । ವಾಯೋ ಯಾಹಿ ಶಿವಾ ದಿವ ಇತ್ಯಾದಿಕೇ ದ್ವೇ ಋಚೌ ಮಿಲಿತ್ವಾ ಸೋಽಯಮೇಕಸ್ತೃಚಃ । ಇಂದ್ರಶ್ಚ ವಾಯವೇಷಾಂ ಸುತಾನಾಮಿತ್ಯಾದಿಕೇ ದ್ವೇ ಋಚೌ । ತ್ರ್ಯೃಚತ್ವಸಂಪಾದನಾಯ ತಯೋರನ್ಯ-ತರಾ ದ್ವಿರಾವರ್ತನೀಯಾ । ಆ ಮಿತ್ರೇ ವರುಣೇ ವಯಮಿತ್ಯಾದಿಕಸ್ತ್ರ್ಯೃಚೋಽಶ್ವಿನಾವೇಹ ಗಚ್ಛತಮಿತ್ಯಾದಿಕಸ್ತ್ರ್ಯೃಚ ಆ ಯಾಹ್ಯದ್ರಿಭಿಃ ಸುತಮಿತ್ಯಾದಿಕಸ್ತ್ರ್ಯೃಚಃ ಸಜೂರ್ವಿಶ್ವೇಭಿರ್ದೇ-ವೇಭಿರಿತ್ಯಾದಿಕಸ್ತ್ರ್ಯೃಚ ಉತ ನಃ ಪ್ರಿಯಾ ಪ್ರಿಯಾಸ್ವಿತ್ಯಾದಿಕಸ್ತ್ರ್ಯೃಚಸ್ತ ಏತೇ ಸಪ್ತ ತ್ರ್ಯೃಚಾ ಉಷ್ಣಿಕ್ಛಂದಸ್ಕಾಸ್ತತ್ಸರ್ವಮೌಷ್ಣಿಹಂ ಪ್ರಉಗಶಸ್ತ್ರಂ ಕುರ್ಯಾತ್ । ತತ್ರ ಸಮಾನೋದರ್ಕತ್ವಂ ತೃತೀಯಸ್ಯಾಹ್ನೋ ಲಿಂಗಂ । ಆ ಮಿತ್ರೇ ವರುಣ ಇತಿ ಸೂಕ್ತೇ ತಿಸೃಷ್ವಪ್ಯೃಕ್ಷು ನಿಬರ್ಹಿಷೀ-ತ್ಯಾದಿಕೋಽಂತಿಮಃ ಪಾದ ಏಕ ಏವ । ಅಶ್ವಿನಾವೇಹೇತಿ ಸೂಕ್ತೇಽಪಿ ಹಂಸಾವಿವೇತ್ಯಾದಿಕೋಽಂ-ತಿಮಃ ಪಾದ ಏಕ ಏವ । ಆಯಾಹೀತಿ ಸೂಕ್ತೇಽಪಿ ವೃಷನ್ನಿಂದ್ರೇತ್ಯಂತಿಮಃ ಪಾದ ಏಕ ಏವ । ಸಜೂರ್ವಿಶ್ವೇಭಿರಿತಿ ತ್ರ್ಯೃಚೇಽಪ್ಯಾಯಾಹ್ಯಗ್ನ ಇತ್ಯಂತಿಮಃ ಪಾದ ಏಕ ಏವ । ಏವಂ ಕತಿಪ-ಯೇಷು ಸಮಾನೋದರ್ಕತ್ವಂ ಲಿಂಗಂ ||

ಈಗ ಪ್ರಉಗಶಸ್ತ್ರವನ್ನು ವಿವರಿಸುವರು— ಈ ಕೆಳಗೆ ಹೇಳಿರುವ ಮಂತ್ರಗಳನ್ನು ಸೇರಿಸಿ ಪಠಿಸಿದರೆ ಪ್ರಉಗಶಸ್ತ್ರವಾಗುವುದು. **ವಾಯವಾ ಯಾಹಿ ವೀತಯೇ** (ಋ. ಸಂ. ೫-೫೧-೫) ಎಂಬುದು ಒಂದು ಮಂತ್ರವು; **ವಾಯೋ ಯಾಹಿ ಶಿವಾ ದಿವಃ** (ಋ. ಸಂ. ೮-೨೬-೨೩) ಎಂಬ ಎರಡು ಋಕ್ಕುಗಳನ್ನು ಸೇರಿಸಿ ಒಂದು ತೃಚವನ್ನು ಕಲ್ಪಿಸಲಾಗುವುದು; **ಇಂದ್ರಶ್ಚ ವಾಯವೇಷಾಂ** (ಋ. ಸಂ. ೪-೪೭-೨) ಎಂದು ಮೊದಲಾಗುವ ಎರಡು ಋಕ್ಕುಗಳು; ಇವುಗಳಿಂದ ತೃಚವನ್ನು ಬೇರೆ ಒಂದು ಋಕ್ಕನ್ನು ಎರಡಾವರ್ತಿ ಪಠಿಸಬೇಕು; **ಆ ಮಿತ್ರೇ ವರುಣೇ ವಯಂ** (ಋ. ಸಂ. ೫-೭೨-೧) ಎಂದು ಮೊದಲಾಗುವ ತೃಚವು; **ಅಶ್ವಿನಾವೇಹ ಗಚ್ಛತಂ** (ಋ. ಸಂ. ೫-೭೮-೧) ಎಂಬ ತೃಚವು; **ಆ ಯಾಹ್ಯದ್ರಿಭಿಃ ಸುತಂ** (ಋ. ಸಂ. ೫-೪೦-೧) ಎಂಬ ತೃಚವು; ಸಜೂರ್ವಿಶ್ವೇಭಿರ್ದೇವೇಭಿಃ (ಋ. ಸಂ. ೫-೫೧-೮) ಎಂಬ ತೃಚವು; **ಉತ ನಃ ಪ್ರಿಯಾ ಪ್ರಿಯಾಸು** (ಋ. ಸಂ.೬-೬೧-೧೦) ಎಂಬ ಉಷ್ಣಿಕ್ಛಂದಸ್ಕದ ತೃಚವು; ಈ ಏಳು ತೃಚಗಳನ್ನೂ ಸೇರಿಸಿ ಪ್ರಉಗ ಶಸ್ತ್ರವನ್ನಾಗಿ ಕಲ್ಪಿಸಿ ಪಠಿಸಬೇಕು. ಈ ಮಂತ್ರಗಳಲ್ಲಿ ಸಮಾಪ್ತಿಭಾಗವು ಒಂದೇರೀತಿಯಲ್ಲಿರುವುದರಿಂದ ಈ ಮಂತ್ರಗಳೆಲ್ಲವೂ ಮೂರನೇ ದಿನದಲ್ಲಿರಬೇಕಾದ ಲಕ್ಷಣಗಳಿಂದ ಕೂಡಿರುವವು. ಆ ಮಿತ್ರೇವರುಣ ಎಂಬ ಸೂಕ್ತದಲ್ಲಿ ಮೂರು ಋಕ್ಕುಗಳಲ್ಲಿ ನಿಬರ್ಹಿಷಿ ಎಂಬುದು ಕೊನೆಯ ಪಾದವು; ಅಶ್ವಿನಾವೇಹ ಎಂಬ ಸೂಕ್ತದಲ್ಲಿ ಹಂಸಾವಿವ ಎಂಬುದು ಕೊನೆಯ ಪಾದವು; ಆಯಾಹಿ ಎಂಬ ಸೂಕ್ತದಲ್ಲಿ ವೃಷನ್ನಿಂದ್ರ ಎಂಬುದು ಕೊನೆಯ ಪಾದವು; ಸಜೂರ್ವಿಶ್ವೇಭಿಃ ಎಂಬ ತೃಚದಲ್ಲಿ ಆಯಾಹ್ಯಗ್ನ ಎಂಬುದು ಕೊನೆಯ ಪಾದವು. ಈರೀತಿ ಸಮಾನವಾದ (ಒಂದೇವಿಧವಾದ) ಅಂತಿಮಭಾಗವು ಕಂಡುಬರುವುದು. ಇವೆಲ್ಲಾ ಮೂರನೇ ದಿನದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳು.

**ತಂ ತಮಿದ್ರಾಧಸೇ ಮಹೇ ತ್ರಯ ಇಂದ್ರಸ್ಯ ಸೋಮಾ ಇತಿ ಮರುತ್ವತೀಯಸ್ಯ ಪ್ರತಿಪದನುಚರೌ ನಿನೃತವತ್ತ್ರಿವತ್ತೃತೀಯೇಽಹನಿ ತೃತೀಯಸ್ಯಾಹ್ನೋ ರೂಪಂ ॥**

**ಅಥ ಮರುತ್ವತೀಯಶಸ್ತ್ರಸ್ಯ ತೃಚದ್ವಯಂ ವಿಧತ್ತೇ—ತಂತಮಿತ್ಯಾದಿಕಸ್ತೃಚೋ ಮರುತ್ವತೀಯಶಸ್ತ್ರಸ್ಯ ಪ್ರತಿಪತ್ । ತಸ್ಯೋಪಕ್ರಮೇ ತಂ ತಮಿದ್ದ್ವಿರಾವೃತ್ತಃ ಶಬ್ದೋ ನೃತ್ತಗತತಾಲಾನುಕರಣಸದೃಶೋಽಂತೇ ಚ ಕೃಷ್ವೀನಾಂ ನೃತುರಿತಿ ನರ್ತನವಾಚೀ ಶಬ್ದಃ ಶ್ರೂಯತೇ । ತದಿದಂ ನಿನೃತ್ತವಲ್ಲಿಂಗಂ । ತ್ರಯ ಇಂದ್ರಸ್ಯೇತ್ಯಯಮನುಚರಸ್ತೃಚಃ । ತಸ್ಯಾದೌ ತ್ರಿಶಬ್ದಶ್ರವಣಾದಿದಂ ತ್ರಿವಲ್ಲಿಂಗಂ ॥**

ಈಗ ಮರುತ್ವತೀಯಶಸ್ತ್ರದ ಎರಡು ತೃಚಗಳನ್ನು ವಿವರಿಸುವರು. **ತಂ ತಮಿದ್ರಾಧಸೇ** (ಋ. ಸಂ. ೮-೬೮-೭) ಎಂದು ಪ್ರಾರಂಭವಾಗುವ ತೃಚವು ಮರುತ್ವತೀಯಶಸ್ತ್ರದ ಪ್ರತಿಪತ್ (ಮೊದಲನೇ) ಎಂಬ ಋಕ್ಕು. ಈ ಶಸ್ತ್ರದ ಪ್ರಾರಂಭ ಮಂತ್ರದಲ್ಲಿ ತಂ ತಮಿದ್ರಾಧಸೇ ಎಂಬಲ್ಲಿ ತಂ ತಂ ಎಂದು ದ್ವಿರಾವೃತ್ತಿಶಬ್ದವಿರುವುದು. ಕೊನೆಯ ಋಕ್ಕಾದ **ತ್ರಯ ಇಂದ್ರಸ್ಯ ಸೋಮಾಃ** (ಋ. ಸಂ. ೮-೨-೭) ಎಂಬ ಋಕ್ಕಿನಲ್ಲಿ ಕೃಷ್ಟೀನಾಂ ನೃತುರಿತಿ ಎಂದು ನರ್ತನವಾಚಿ ಶಬ್ದವಿರುವುದು. ಆದ್ದರಿಂದ ಈ ಋಕ್ಕುಗಳಲ್ಲಿ ಮೂರನೆಯ ದಿವಸ ಪಠಿಸಬೇಕಾದ ಮಂತ್ರಲಕ್ಷಣಗಳು ಇದ್ದಂತಾಯಿತು. ಮತ್ತು **ತ್ರಯ ಇಂದ್ರಸ್ಯ** ಎಂಬುದು ಅನುಚರ ಋಕ್ಕಾಗಿರುವುದು ಇದರಲ್ಲಿ ತ್ರಿಶಬ್ದವಿರುವುದು.

**ಇಂದ್ರ ನೇದೀಯ ಏದಿಹೀತ್ಯಚ್ಯುತಃ ಪ್ರಗಾಥಃ ಪ್ರ ನೂನಂ ಬ್ರಹ್ಮಣಸ್ಪತಿರಿತಿ ಬ್ರಾಹ್ಮಣಸ್ಪತ್ಯೋ ನಿನೃತ್ತವಾಂಸ್ತೃತೀಯೇಽಹನಿ ತೃತೀಯಸ್ಯಾಹ್ನೋ ರೂಪಂ ॥**

**ಅಥ ಪ್ರಗಾಥದ್ವಯಂ ವಿಧತ್ತೇ—ಇಂದ್ರ ನೇದೀಯ ಇತಿ ಪ್ರಗಾಥಸ್ಯ ಪೂರ್ವಯೋರಹ್ನೋರ್ವಿಹಿತತ್ವಾದಚ್ಯುತತ್ವಂ । ಅಥ ಪ್ರಗ್ರಥನೇನ ತೃಚತ್ವಂ ಸಂಪಾದಯಿತುಂ ಚತುರ್ಥಃ ಪಾದಃ ಷಷ್ಠಃ ಪಾದಶ್ಚ ತ್ರಿಸ್ತ್ರಿರಭ್ಯಸ್ಯತೇ । ತಸ್ಯ ನೃತ್ತಸಮಾನತ್ವಾದಯಂ ಪ್ರಗಾಥೋ ನಿನೃತ್ತಲಿಂಗವಾನ್ । ಏವಂ ಬ್ರಾಹ್ಮಣಸ್ಪತ್ಯಪ್ರಗಾಥೇಽಪಿ ದ್ರಷ್ಟವ್ಯಂ । ಯದ್ವಾ ಯಸ್ಮಿನ್ನಿಂದ್ರೋ ವರುಣೋ ಮಿತ್ರೋ ಅರ್ಯಮೇತ್ಯೋಕಾರಸ್ಯ ತ್ರಿರಭ್ಯಾಸೋ ನೃತ್ತಸಮಾನಃ ॥**

ಈಗ ಎರಡು ಪ್ರಗಾಥಗಳನ್ನು ತಿಳಿಸುವರು— **ಇಂದ್ರ ನೇದೀಯ ಏದಿಹಿ** (ಋ. ಸಂ. ೮-೫೩-೫) ಎಂಬ ಋಕ್ಕನ್ನು ಮೊದಲೇ ಒಂದಾವರ್ತಿ ಉಪಯೋಗಿಸಿರುವುದರಿಂದ ಇದು ಅಚ್ಯುತವೆಂದು ಹೇಳಲ್ಪಡುವುದು. ಇಲ್ಲಿ ಪ್ರಗ್ರಥನ (ಕಲ್ಪಿಸುವುದು) ದಿಂದ ತೃಚವನ್ನು ಹೊಂದಿಸುವುದಕ್ಕಾಗಿ ಈ ಋಕ್ಕಿನ ನಾಲ್ಕನೇ ಪಾದವನ್ನೂ ಆರನೇ ಪಾದವನ್ನೂ ಮೂರು ಮೂರಾವರ್ತಿ ಪಠಿಸಲಾಗುವುದು. ಆದ್ದರಿಂದ ನೃತ್ತ (ಪುನರಾವೃತ್ತಿ) ಸಮಾನವಿರುವುದರಿಂದ ಮೂರನೆಯ ದಿನದಲ್ಲಿ ಪಠಿಸುವ ಮಂತ್ರಗಳ ಲಕ್ಷಣವಿದ್ದಂತಾಯಿತು. ಇದೇರೀತಿ ಬ್ರಾಹ್ಮಣಸ್ಪತ್ಯಪ್ರಗಾಥದಲ್ಲಿಯೂ ಇರುವುದು ಮತ್ತು ಈ ಋಕ್ಕುಗಳಲ್ಲಿ **ಇಂದ್ರೋ**

ವರುಣೋ ಮಿತ್ರೋ ಅರ್ಯಮಾ ಎಂಬಲ್ಲಿ ಮೂರಾವರ್ತಿ ಓಕಾರವು ಕಂಡುಬರುವುದರಿಂದ ಇದೂ ನ್ಯತ್ತ (ಆವೃತ್ತಿ) ಸಮಾನವೆಂದು ಪರಿಗಣಿಸಲಾಗುವುದು. ಇದೂ ಸಹ ಮೂರನೆಯ ದಿನದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರಬೇಕಾದ ಲಕ್ಷಣವು.

**ಅಗ್ನಿರ್ನೇತಾ ತ್ವಂ ಸೋಮ ಕ್ರತುಭಿಃ ಪಿನ್ವಂತ್ಯಪ ಇತಿ ಧಾಯ್ಯಾ ಅಚ್ಯುತಾಃ ॥**

ಅನ್ಯಾಸ್ತಿಸ್ರ ಋಚೋ ವಿಧತ್ತೇ—ಯದ್ಯಪ್ಯಚ್ಯುತತ್ವಂ ದ್ವಿತೀಯಸ್ಯಾಹ್ನೋ ಲಿಂಗಂ ತಥಾಪ್ಯತ್ರ ವಾಚನಿಕಃ ಪ್ರಯೋಗೋ ದ್ರಷ್ಟವ್ಯಃ ।

ಬೇರೆ ಮೂರು ಋಕ್ಕುಗಳನ್ನು ವಿವರಿಸುವರು. ಅಗ್ನಿರ್ನೇತಾ, ತ್ವಂ ಸೋಮ ಕ್ರತುಭಿಃ, ಪಿನ್ವಂತ್ಯಪ ಎಂಬ ಧಾಯ್ಯಾಮಂತ್ರಗಳನ್ನು ಹಿಂದೆ (ಎರಡನೇ ದಿನದಲ್ಲಿ) ಉಪಯೋಗಿಸಿರುವುದರಿಂದ ಈ ಮಂತ್ರಗಳಿಗೆ ಅಚ್ಯುತತ್ವವು ಇಲ್ಲಿ ಪ್ರಾಪ್ತವಾಗಿರುವುದು.

**ನಕಿಃ ಸುದಾಸೋ ರಥಂ ಪರ್ಯಾಸ ನ ರೀರಮದಿತಿ ಮರುತ್ವತೀಯಃ ಪ್ರಗಾಥಃ ಪರ್ಯಸ್ತವಾಂಸ್ತೃತೀಯೇಽಹನಿ ತೃತೀಯಸ್ಯಾಹ್ನೋ ರೂಪಂ ॥**

ಅಥಾನ್ಯಂ ಪ್ರಗಾಥಂ ವಿಧತ್ತೇ—ತ(ಅ)ಸ್ಮಿನ್ ಪ್ರಗಾಥೇ ಯಸ್ಯ ಮರುತ ಇತಿ ತೃತೀಯ ಪಾದೇ ಶ್ರವಣಾದಯಂ ಮರುತ್ವತೀಯಃ । ಅತ್ರ ಪರ್ಯಾಸೇತಿ ಶ್ರುತತ್ವಾದಯಂ ಪರ್ಯಸ್ತಲಿಂಗವಾನ್ ॥

ಈಗ ಬೇರೆ ಒಂದು ಪ್ರಗಾಥವನ್ನು ವಿವರಿಸುವರು. ನಕಿಃ ಸುದಾಸೋ ರಥಂ ಪರ್ಯಾಸ ನ ರೀರಮತ್ (ಋ. ಸಂ. ೭-೩೨-೧೦) ಎಂಬುದೇ ಆ ಪ್ರಗಾಥವು. ಈ ಪ್ರಗಾಥದ ಮೂರನೇ ಪಾದದಲ್ಲಿ ಯಸ್ಯ ಮರುತಃ ಎಂಬ ಶಬ್ದಗಳಿರುವುದರಿಂದ ಇದು ಮರುತ್ವತೀಯಶಸ್ತ್ರವು. ಮತ್ತು ಇದರಲ್ಲಿ ಪರ್ಯಾಸ ಶಬ್ದವಿರುವುದರಿಂದ ಈ ಮಂತ್ರದಲ್ಲಿ ಮೂರನೆಯ ದಿನ ಪಠಿಸಬೇಕಾದ ಲಕ್ಷಣವಿದ್ದಂತಾಯಿತು.

**ತ್ರ್ಯರ್ಯಮಾ ಮನುಷೋ ದೇವತಾತೇತಿ ಸೂಕ್ತಂ ತ್ರಿವೃತ್ತೃತೀಯೇಽಹನಿ ತೃತೀಯಸ್ಯಾಹ್ನೋ ರೂಪಂ ॥**

ಸೂಕ್ತಾಂತರಂ ವಿಧತ್ತೇ—ಆದೌ ತ್ರಿಶಬ್ದಸ್ಯ ಶ್ರುತತ್ವಾತ್ತ್ರಿವಲ್ಲಿಂಗಯುಕ್ತಮಿದಂ ಸೂಕ್ತಮ್ ॥

ತ್ರ್ಯರ್ಯಮಾ ಮನುಷೋ (ಋ ಸಂ. ೫-೨೯-೧) ಎಂಬ ಸೂಕ್ತದಲ್ಲಿ ತ್ರಿಶಬ್ದವೇ ಮೊದಲು ಇರುವುದರಿಂದ ತ್ರಿವೃತ್ ಎಂಬ ಲಕ್ಷಣವಿದ್ದಂತಾಯಿತು. ಆದ್ದರಿಂದ ಮೂರನೇ ದಿವಸ ಪಠಿಸಬೇಕಾದ ಮಂತ್ರಗಳಲ್ಲಿರಬೇಕಾದ ಲಕ್ಷಣವೂ ಇಲ್ಲಿರುವುದು.

**ಯದ್ದ್ಯಾವ ಇಂದ್ರ ತೇ ಶತಂ ಯದಿಂದ್ರ ಯಾವತಸ್ತ್ವಮಿತಿ ವೈರೂಪಂ ಪೃಷ್ಠಂ ಭವತಿ ರಾಥಂತರೇಽಹನಿ ತೃತೀಯೇಽಹನಿ ತೃತೀಯಸ್ಯಾಹ್ನೋ ರೂಪಂ ॥**

**ಅಥ ನಿಷ್ಕೇವಲ್ಯಶಸ್ತ್ರೇ ಸ್ತೋತ್ರಿಯಾನುರೂಪೌ ಪ್ರಗಾಥೌ ವಿಧತ್ತೇ—ವೈರೂಪಸಾಮ್ನಾ ನಿಷ್ಪಾದ್ಯಂ ತೃತೀಯೇಽಹನಿ ಪೃಷ್ಠಸ್ತೋತ್ರಂ ತಸ್ಯ ಚ ಸಾಮ್ನ ಆಧಾರಭೂತೋ ಯದ್ದ್ಯಾವ ಇತಿ ಪ್ರಗಾಥಃ ಸ್ತೋತ್ರಿಯೋ ಯದಿಂದ್ರೇತಿ ಪ್ರಗಾಥೋಽನುರೂಪಸ್ತದುಭಯಂ ರಥಂತರಸಾಮಸಂಬಂಧಿನಿ ತೃತೀಯೇಽಹನಿ ಯುಕ್ತ (ಕ್ತಂ) ಪ್ರಥಮ ತೃತೀಯ ಪಂಚಮಾನ್ಯಹಾನಿ ರಾಥಂತರಾಣಿ ರಥಂತರಸಾಮ್ನಾ ಪೃಷ್ಠಸ್ತೋತ್ರಸ್ಯ ಗಾತವ್ಯತ್ವಾತ್ । ವೈರೂಪಸಾಮ್ನಾ ಪ್ಯತ್ರ ಪೃಷ್ಠಸ್ತೋತ್ರಂ ಗಾತವ್ಯಮ್ । ವೈರೂಪಶಾಕ್ವರಯೋ ರಥಂತರಪುತ್ರತ್ವೇನ ತದೀಯೇಽಹನಿ ಯುಕ್ತತ್ವಾತ್ । ತಸ್ಮಾತ್ತೃತೀಯೇಽಹನ್ಯೇತತ್ಪ್ರಗಾಥದ್ವಯಂ ಶಂಸನೀಯಮ್ । ವೈರೂಪಸಾಮಸಂಬಂಧಸ್ಯ ತೃತೀಯದಿವಸಲಿಂಗಸ್ಯ ವಿದ್ಯಮಾನತ್ವಾತ್ ॥**

ಈಗ ನಿಷ್ಕೇವಲ್ಯಶಸ್ತ್ರದಲ್ಲಿ ಸ್ತೋತ್ರಿಯಾನುರೂಪವಾದ ಎರಡು ಪ್ರಗಾಥಗಳನ್ನು ತಿಳಿಸುವರು. ಯಜ್ಞದ ಮೂರನೆಯ ದಿನದಲ್ಲಿ ವೈರೂಪವೆಂಬ ಸಾಮಮಂತ್ರದಿಂದ ನಿಷ್ಪನ್ನವಾದ ಪೃಷ್ಠಸ್ತೋತ್ರವನ್ನು ಗಾನಮಾಡಬೇಕು. ಈ ಸಾಮಮಂತ್ರಕ್ಕೆ **ಯದ್ದ್ಯಾವ ಇಂದ್ರ ತೇ** (ಋ. ಸಂ. ೮-೭೦-೫) ಎಂಬ ಋಕ್ಕು ಆಧಾರಭೂತವಾಗಿರುವುದು. ಇದು ಪ್ರತಿಪತ್ ಎಂಬ ಮೊದಲ ಮಂತ್ರವು. **ಯದಿಂದ್ರ ಯಾವತಸ್ತ್ವಂ** (ಋ.ಸಂ. ೭-೩೨-೧೮) ಎಂಬ ಪ್ರಗಾಥವು ಅನುಚರ (ಕೊನೆಯ) ಋಕ್ಕಿಗೆ ಆಧಾರಭೂತವಾಗಿರುವುದು. ಈ ಎರಡು ಪ್ರಗಾಥಗಳನ್ನೂ ರಥಂತರಸಾಮಸಂಬಂಧವಾದ, ಸಾಮಮಂತ್ರಗಳನ್ನು ಯಜ್ಞದ ಪ್ರಥಮ, ಮೂರು, ಐದನೆಯ ದಿನಗಳಲ್ಲಿ ಗಾನಮಾಡಬೇಕು. ಪೃಷ್ಠಸ್ತೋತ್ರದಲ್ಲಿ ರಥಂತರಸಾಮಮಂತ್ರದಿಂದ ಗಾನಮಾಡುವುದರಿಂದ ಈ ಸಾಮಮಂತ್ರಗಳಿಗೆ ರಾಥಂತರಗಳೆಂದು ಹೆಸರು. ಏಕೆಂದರೆ ವೈರೂಪ ಮತ್ತು ಶಾಕ್ವರ ಎಂಬ ಎರಡು ಸಾಮ ಮಂತ್ರಗಳು ರಥಂತರಸಾಮದ ಪುತ್ರರೆಂದು ಹೇಳಲ್ಪಡುವವು. ಇವುಗಳನ್ನು ಮೂರನೆಯ ದಿವಸ ಗಾನಮಾಡಬೇಕು. ಎಂದರೆ ಈ ಎರಡು ಪ್ರಗಾಥಗಳೂ ಮೂರನೇ ದಿವಸ ಪಠಿಸಲ್ಪಡಬೇಕು. ಈ ಪ್ರಗಾಥ ಮಂತ್ರಗಳಿಗೆ ವೈರೂಪಸಾಮಮಂತ್ರದ ಸಂಬಂಧ ವಿರುವುದರಿಂದ ಮೂರನೆಯ ದಿವಸ ಪಠಿಸಬೇಕಾದ ಮಂತ್ರಗಳಲ್ಲಿರುವ ಲಕ್ಷಣಗಳು ಇಲ್ಲಿ ಇದ್ದಂತಾಯಿತು.

**ಯದ್ದ್ಯಾವಾನೇತಿ ಧಾಯ್ಯಾಽಚ್ಯುತಾ ।**

**ಋಗಂತರೇ ವಿಧತ್ತೇ—ಸರ್ವೇಷ್ವಹಃಸು (ಸ್ವ)ಚ್ಯುತತ್ವಂ ಸರ್ವಸ್ಯಾಪ್ಯಹ್ನೋ ಲಿಂಗಂ ಭವತೀತಿ ತೃತೀಯೇಽಹನ್ಯಪಿ ತದ್ಯುಕ್ತಮ್ ॥**

ಬೇರೊಂದು ಋಕ್ಕನ್ನು ವಿವರಿಸುವರು. **ಯದ್ದ್ಯಾವಾನ ಪುರುತಮಂ** (ಋ.ಸಂ. ೧೦-೭೪-೬) ಎಂಬ ಧಾಯ್ಯಾ ಮಂತ್ರವು ಎಲ್ಲಾ ದಿನಗಳಲ್ಲಿಯೂ ಉಪಯೋಗಿಸಲ್ಪಡುವುದರಿಂದ ಮೂರನೇ ದಿನದಲ್ಲಿಯೂ ಉಪಯೋಗಿಸಲ್ಪಡುವುದು. ಈ ಋಕ್ಕನ್ನು ಪುನಃಪುನಃ (ಅಚ್ಯುತತ್ವ) ಪಠಿಸುವುದರಿಂದ ಮೂರನೆಯ ದಿನದಲ್ಲಿ ಪಠಿಸಬೇಕಾದ ಅಚ್ಯುತತ್ವವೆಂಬ ಲಕ್ಷಣವು ಇಲ್ಲಿದ್ದಂತಾಯಿತು.

**ಅಭಿ ತ್ವಾ ಶೂರ ನೋನುಮ ಇತಿ ರಥಂತರಸ್ಯ ಯೋನಿಮನು ನಿವರ್ತ-
ಯತಿ ರಾಥಂತರಂ ಹ್ಯೇತದಹರಾಯತನೇನ ॥**

ಅಪರಂ ಪ್ರಗಾಥದ್ವಯಂ ವಿಧತ್ತೇ—ಅಭಿತ್ವಾ ಶೂರೇತ್ಯೇಷಾ ರಥಂತರಸಾಮ್ನೋ ಯೋನಿಸ್ತಾಂ ಪೂರ್ವೋಕ್ತಾಯಾ ಧಾಯ್ಯಾಯಾ ಅನು ಪಶ್ಚಾನ್ನಿವರ್ತಯತಿ ಶಂಸೇದಿತ್ಯರ್ಥಃ। ಏತಚ್ಚ ತೃತೀಯಮಹರಾಯತನೇನ ಸ್ಥಾನೇನ ರಾಥಂತರಮಯುಗ್ಮಾನಾಮಹ್ನಾಂ ರಥಂತರ-ಸಂಬಂಧಿತ್ವಾತ್ ॥

ಬೇರೆ ಎರಡು ಪ್ರಗಾಥಗಳನ್ನು ವಿವರಿಸುತ್ತಾರೆ. **ಅಭಿ ತ್ವಾ ಶೂರ ನೋನುಮ** (ಋ. ಸಂ. ೭-೩೨-೨೨-) ಎಂಬ ಋಕ್ಕು ರಥಂತರಸಾಮದಿಂದ ಉತ್ಪನ್ನವಾಗಿರುವುದು. ಎಂದರೆ ರಥಂತರಸಾಮವು ಈ ಋಕ್ಕಿಗೆ ಯೋನಿಭೂತವಾಗಿರುವುದು. ಆದ್ದರಿಂದ ಈ ಋಕ್ಕನ್ನು ಹಿಂದೆ ಹೇಳಿದ ಧಾಯ್ಯಾಮಂತ್ರವನ್ನು ಪಠಿಸಿದಮೇಲೆ ಪಠಿಸಬೇಕು. ಇದಕ್ಕೆ ಅಯುಗ್ಮದಿನಗಳಲ್ಲಿ ಪಠಿಸಲ್ಪಡುವ ರಥಂತರಸಾಮದ ಸಂಬಂಧವಿರುವುದರಿಂದ ಇದಕ್ಕೆ ಮೂರನೇ ದಿವಸದ ಸಂಬಂಧವಿದ್ದಂತಾಯಿತು.

**ಇಂದ್ರ ತ್ರಿಧಾತು ಶರಣಮಿತಿ ಸಾಮಪ್ರಗಾಥಸ್ತ್ರಿವಾಂಸ್ತೃತೀಯೇಽಹನಿ
ತೃತೀಯಸ್ಯಾಹ್ನೋ ರೂಪಂ ॥**

ಅಥಾನ್ಯಂ ಪ್ರಗಾಥಂ ವಿಧತ್ತೇ—ಅತ್ರತ್ಯಸ್ಯ ವೈರೂಪಸಾಮ್ನಃ ಸಂಬಂಧೀಂದ್ರ ತ್ರಿಧಾ-ತ್ವಿತಿ ಪ್ರಗಾಥಃ। ಸ ಚ ತ್ರಿಶಬ್ದಯುಕ್ತತ್ವಾತ್ತ್ರಿವಾನ್। ಅತೋ ಲಿಂಗಸದ್ಭಾವಾತ್ತೃತೀಯೇಽಹನಿ ಯೋಗ್ಯಃ।

ಎರಡನೇ ಪ್ರಗಾಥವನ್ನು ತಿಳಿಸುವರು. **ಇಂದ್ರ ತ್ರಿಧಾತು ಶರಣಂ** (ಋ. ಸಂ. ೬-೪೬-೯) ಎಂಬ ಈ ಪ್ರಗಾಥವು ವೈರೂಪವೆಂಬ ಸಾಮಕ್ಕೆ ಸಂಬಂಧಪಟ್ಟಿರುವುದು. ಇದರಲ್ಲಿ ತ್ರಿಶಬ್ದಪ್ರಯೋಗವಿರುವುದರಿಂದ ಈ ಮಂತ್ರದಲ್ಲಿ ಮೂರನೇ ದಿನದಲ್ಲಿ ಪಠಿಸಬೇಕಾದ ಲಕ್ಷಣವಿದ್ದಂತಾಯಿತು.

**ತ್ಯಮೂಷು ವಾಜಿನಂ ದೇವಜೂತಮಿತಿ ತಾರ್ಕ್ಷ್ಯೋಽಚ್ಯುತಃ ॥**

ಸೂಕ್ತಾಂತರಂ ವಿಧತ್ತೇ—ತಾರ್ಕ್ಷ್ಯನಾಮ್ನಃ ಸೂಕ್ತವಿಶೇಷಸ್ಯಾಚ್ಯುತತ್ವಂ ಸರ್ವದಿನ-ಸಂಬಂಧಿ ಲಿಂಗಂ ॥

ಬೇರೆ ಸೂಕ್ತವನ್ನು ವಿವರಿಸುವರು. **ತ್ಯಮೂಷು ವಾಜಿನಂ ದೇವಜೂತಂ** (ಋ. ಸಂ. ೧೦-೧೭೮-೧) ಎಂಬುದು ತಾರ್ಕ್ಷ್ಯಸೂಕ್ತವು. ಈ ಸೂಕ್ತದಲ್ಲಿ ಅಚ್ಯುತತ್ವಲಕ್ಷಣವಿರುವುದರಿಂದ ಇದು ಮೂರನೆಯ ದಿವಸದಲ್ಲಿ ಪಠಿಸುವ ಲಕ್ಷಣವುಳ್ಳದ್ದಾಗಿರುವುದು.



*English Translation*

**(The characteristic and Shastras of the third and fourth days of the Dvadasaha.)**

**(The characteristics of the third day. The Shastras of the morning and midday libations).**

The leading deities of the third day are the Visvedevah ; its leading Stoma is the so-called Saptadasa (seventeen-fold), its Saman the Vairupam, its metre the Jagati. He who knows what deity, what Stoma, what Saman, what metre are required on the third day becomes successful by it.

What hymn has a refrain, that is a characteristic of the third day. Other characteristics are: asva horse, anta end, repetition, (punaravritti) consonance (in the ending vowels, (Cohabitation, the term "covered, closed," (paryasta), the term three, what has the form of anta (end), the mentioning of the deity in the last pada, an allusion to that world, the Vairupam Saman, the Jagati metre, the past tense.

The Ajya Shastra is, yukshva hi devahutaman (8, 64). The gods went to heaven by means of the third day. The Asuras and Rakshas prevented them from entering it. They said to the Asuras, "Become deformed, become deformed" (Virupa); when the Asuras were becoming deformed, the Devas entered heaven. This produced the Saman called Vairupam; thence it is called so (from virupa deformed. He who has become deformed in consequence of his own guilt, destroys it (his deformity) by means of this knowledge.

The Asuras persecuted the Devas again, and came into contact with them. The Devas turned horses (asva) and kicked them with their feet. He who knows this obtaing (asnute) all he desires. Thence the horse is the swiftest of animals, because of its kicking with the hind legs. He who has such a knowledge destroys the consequences of guilt. This is the reason that the Ajya hymn on the third day contains the term asva horse, which is a characteristic of the third day.

The Pra-uga Shastra consists of the following triplets, vayavayah vitaye (5, 51, 5-7), vayo yahi sivad (8, 26, 23-25), indrascha vayav esham sutanam (5, 51, 6-8), a mitre varune vayam (5, 72, 1-3), asvinaveha gachhatam (5, 75, 7-9) ayahy adribhih (5, 40-1-3), sajur devebhir visvebhir (7, 34, 15-17) uta nah priya (6, 61, 10-12). They are in the Ushnih metre, have a refrain (samandarkam), which is a characteristic of the third day.

Tam tam id radhase (8, 57, 7-9) are the beginning and the sequel of the Marutvatiya Shastra, which contain the terms nrta, i.e. consonance (8, 57, 7) and traya, i. e. three, which are characteristics of the third day. Indra nediya (Val. 5, 56) is the constant (Indra-Nihava) Pragathah Pranunam Brahmanaspatir (1, 40, 5-6) is the Brahamanaspatya Pragaths, which has a consonance of vowels, is a characteristic of the third day. Agnir neta (3, 20, 4) tvam Soma kratubhih (1, 91, 2), and pinvanty apo (1, 64, 6) are the immovable Dhayyas. Nakih Sudaso ratham (7, 32, 10) is the Marutvatiya Pragatha, which contains the term paryasta i e. covered, closed. Tryaryama manusho devatata (5, 29) is the Nivid hymn for the Marutvatiya Shastra) it contains the term "three" yad dyava indra (8, 59, 5-6), yad indra yavatas (7, 32, 18-19) form the Vairupam Prishtham on the third day, which is a Rathantara day, which is a characteristic of the third day.

Yad ravana (10, 74, 6) is the constant Dhayya. By repeating after this Dhayya: abhi tva sura nonumah (7, 32, 22-23) the Hotar turns back the womb of this day because this third day is, as to its position, a Rathantara day, which Saman is therefore the womb of it. Indra tvidhatu saranam (6, 46, 9-10) is the Sama Pragatha; it contains the term "three" (in tridhata). Tyam a shu vajinam (10, 178) is the constant Tarkshya.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಏಕವಿಂಶಾಧ್ಯಾಯಸ್ಯ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೊಂದನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು
ಸಮಾಪ್ತವಾದುದು.



# ಅಥ ಏಕವಿಂಶಾಧ್ಯಾಯೇ ದ್ವಿತೀಯಃ ಖಂಡಃ

## ಇಪ್ಪತ್ತೊಂದನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ ನಿಷ್ಕೇವಲ್ಯಶಸ್ತ್ರದ ನಿವಿನ್ಮಂತ್ರಗಳು; ಮೂರನೆಯ ದಿವಸದ ತೃತೀಯಸವನದಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳು. ]

**ಯೋ ಜಾತ ಏವ ಪ್ರಥಮೋ ಮನಸ್ವಾನಿತಿ ಸೂಕ್ತಂ ಸಮಾನೋದರ್ಕಂ ತೃತೀಯೇಽಹನಿ ತೃತೀಯಸ್ಯಾಹ್ನೋ ರೂಪಂ ॥**

**ಅಥ ನಿವಿದ್ಧಾನೀಯಂ ಸೂಕ್ತಂ ವಿಧತ್ತೇ— ಅಸ್ಮಿನ್ಸೂಕ್ತೇ ಸ್ಯನ್ನುಸ್ಯ ಮಹ್ನಾ ಸ ಜನಾಸ ಇಂದ್ರ ಇತ್ಯಂತಿಮಃ ಪಾದಃ ಸರ್ವಾಸ್ವೃಕ್ಷು ಸಮಾನಸ್ತಸ್ಮಾದಿದಂ ಸೂಕ್ತಂ ಸಮಾನೋದರ್ಕಲಿಂಗೋಪೇತಮ್ ॥**

ಈಗ ನಿವಿದ್ಧಾನೀಯಸೂಕ್ತವನ್ನು ವಿವರಿಸುವರು. **ಯೋ ಜಾತ ಏವ ಪ್ರಥಮೋ ಮನಸ್ವಾನ್** (ಋ. ಸಂ. ೨-೧೨-೧) ಎನ್ನುವುದೇ ಆ ಸೂಕ್ತವು. ಈ ಸೂಕ್ತದ ಪ್ರತಿಯೊಂದು ಋಕ್ಕಿನ ಕೊನೆಯ ಪಾದದಲ್ಲಿಯೂ **ಸ ಜನಾಸ ಇಂದ್ರಃ** ಎಂದಿರುವುದು. ಆದ್ದರಿಂದ ಈ ಸೂಕ್ತದ ಮಂತ್ರಗಳೆಲ್ಲಾ **ಸಮಾನೋದರ್ಕ** ಎಂದರೆ ಒಂದೇವಿಧವಾದ ಪರಿಸಮಾಪ್ತಿಯುಳ್ಳದ್ದಾಗಿರುವುದರಿಂದ ಯಜ್ಞದ ಮೂರನೇ ದಿನದಲ್ಲಿ ಪಠಿಸಬೇಕಾದ ಲಕ್ಷಣವನ್ನು ಹೊಂದಿರುವುದು.

**ತದು ಸಜನೀಯಮೇತದ್ವಾ ಇಂದ್ರಸ್ಯೇಂದ್ರಿಯಂ ಯತ್ಸಜನೀಯಮೇ-ತಸ್ಮಿನ್ವೈ ಶಸ್ಯಮಾನ ಇಂದ್ರಮಿಂದ್ರಿಯಮಾವಿಶತಿ ॥**

**ಏತತ್ಸೂಕ್ತಂ ಪ್ರಶಂಸತಿ—ತದು ತಚ್ಚ ಸೂಕ್ತಂ ಸಜನೀಯಂ ಸಜನಶಬ್ದೋಪೇತಂ ಸ ಜನಾಸ ಇಂದ್ರ ಇತಿ ಶ್ರುತತ್ವಾತ್ । ಬಹುಜನಯುಕ್ತತ್ವಮೇವೈಕಮುತ್ಕರ್ಷಕಾರಣಮ್ ।ಕಿಂಚ। ಯತ್ಸಜನೀಯಂ ಸೂಕ್ತಮಸ್ತಿ, ಏತದೇವೇಂದ್ರಸ್ಯೇಂದ್ರಿಯಮುಚ್ಯತೇ । ಕಥಂ ತದುಚ್ಯತೇ । ಪುರಾ ಕದಾಚಿದೇತಸ್ಮಿನ್ನೇವ ಸೂಕ್ತೇ ಶಸ್ಯಮಾನೇ ಸತೀಂದ್ರಿಯಂ ಚಕ್ಷುರಾದಿಪಾಟವಮಿಂದ್ರಂ ದೇವಮಾವಿಶತಿ । ತಸ್ಮಾದಿಂದ್ರಿಯಪ್ರವೇಶೇ ಹೇತುತ್ವಾದಿದಂ ಪ್ರಶಸ್ತಮ್ ॥**

ಈ ಸೂಕ್ತವನ್ನು ಪ್ರಶಂಸೆಮಾಡುವರು. ಈ ಸೂಕ್ತದ ಎಲ್ಲಾ ಋಕ್ಕುಗಳ ಕೊನೆಯಲ್ಲಿಯೂ **ಸ ಜನಾಸ ಇಂದ್ರಃ** ಎಂದಿರುವುದರಿಂದ ಇದಕ್ಕೆ ಸಜನೀಯಸೂಕ್ತವೆಂಬ ಹೆಸರು ಪ್ರಸಿದ್ಧವಾಗಿರುವುದು. ಇದು ಬಹುಜನರಿಂದ ಪಠಿಸಲ್ಪಡುವುದು. ಮತ್ತು ಈ ಸಜನೀಯಸೂಕ್ತವು ಇಂದ್ರನ ಇಂದ್ರಿಯವೆಂದು ಹೇಳಲ್ಪಡುವುದು. ಏಕೆಂದರೆ ಪೂರ್ವದಲ್ಲಿ ಈ ಸೂಕ್ತವನ್ನು ಪಠಿಸುತ್ತಿರುವಾಗ ಚಕ್ಷುರಾದಿ ಇಂದ್ರಿಯಗಳು ಅಥವಾ ಇಂದ್ರಿಯಾಭಿಮಾನಿದೇವತೆಗಳು ಇಂದ್ರನ ಇಂದ್ರಿಯಗಳನ್ನು ಪ್ರವೇಶಿಸಿದರು. ಆದ್ದರಿಂದ ಈ ಸೂಕ್ತವು ಪ್ರಶಸ್ಯವಾಗಿರುವುದು.

**ತದ್ಧಾಪ್ಯಾಹುಶ್ಛಂದೋಗಾಸ್ತೃತೀಯೇಽಹನಿ ಬಹ್ವೃಚಾ ಇಂದ್ರಸ್ಯೇಂ-ದ್ರಿಯಂ ಶಂಸಂತೀತಿ ॥**

ಶಾಖಾಂತರಾಧ್ಯೇತೃಪ್ರಸಿದ್ಧ್ಯಾ ಪ್ರಶಂಸತಿ—ತದ್ಧ ತಸ್ಮಿನ್ನೇವ ಸಜನೀಯಸೂಕ್ತೇ ಛಂದೋಗಾಶ್ಛಂದಾಂಸಿ ಗಾಯಂತೀತಿ ಸಾಮವೇದಿನಃ ಪರಸ್ಪರಮೇವಮಾಹುಃ ಪೃಷ್ಠ್ಯಸ್ಯ ಷಡಹಸ್ಯ ತೃತೀಯೇಽಹನಿ ಬಹ್ವೃಚಾ ಋಗ್ವೇದಾಧ್ಯಾಯಿನೋ ಹೋತಾರ ಇಂದ್ರಸ್ಯ ಸಂಬಂ-ಧೀಂದ್ರಿಯರೂಪಂ ಸಜನೀಯಸೂಕ್ತಂ ಶಂಸಂತೀತಿ । ಅತೋಽಸ್ಯ ಸೂಕ್ತಸ್ಯೇಂದ್ರಿಯಪದತ್ವ-ಪ್ರಸಿದ್ಧಿರ್ವರ್ಣಹತಿ ॥

ಶಾಖಾಂತರ (ಸಾಮವೇದ) ವನ್ನು ಅಧ್ಯಯನಮಾಡಿದವರು ಹೀಗೆ ಹೇಳುತ್ತಾರೆ. ಮೇಲಿನ ವಾಕ್ಯದಲ್ಲಿ ಛಂದೋಗಾಃ ಎಂದರೆ ಸಾಮಗಾನಮಾಡುವವರು ಈ ಸಜನೀಯಸೂಕ್ತದ ವಿಷಯದಲ್ಲಿ ಸಾಮವೇದಿಗಳ ಪರಸ್ಪರ ಈರೀತಿ ಹೇಳುವರು—ಪೃಷ್ಠ್ಯಷಡಹವೆಂಬ ಯಜ್ಞದ ಮೂರನೇ ದಿನದಲ್ಲಿ ಋಗ್ವೇದಾಧ್ಯಾಯಿಗಳಾದ ಹೋತೃಗಳೆಂಬ ಋತ್ವಿಜರು ಇಂದ್ರಿಯ (ಅಥವಾ ಇಂದ್ರನ) ಸಂಬಂಧವಾದ ಈ ಸಜನೀಯ ಸೂಕ್ತವನ್ನು ಪಠಿಸುವರು. ಆದ್ದರಿಂದ ಈ ಸೂಕ್ತಕ್ಕೆ ಇಂದ್ರಿಯಪಟುತ್ವವನ್ನುಂಟು ಮಾಡುವ ಸಾಮರ್ಥ್ಯವಿರುವುದು ಎಂದು ಹೇಳುವರು.

**ತದು ಗಾರ್ತ್ಸಮದಮೇತೇನ ವೈ ಗೃತ್ಸಮದ ಇಂದ್ರಸ್ಯ ಪ್ರಿಯಂ ಧಾಮೋ-ಪಾಗಚ್ಛತ್ಸ ಪರಮಂ ಲೋಕಮಜಯತ್ । ಉಪೇಂದ್ರಸ್ಯ ಪ್ರಿಯಂ ಧಾಮ ಗಚ್ಛತಿ ಜಯತಿ ಪರಮಂ ಲೋಕಂ ಯ ಏವಂ ವೇದ ॥**

ಋಷಿಸಂಬಂಧಮುಪಜೀವ್ಯ ಪ್ರಶಂಸತಿ—ಗೃತ್ಸಮದೋ ನಾಮ ಕಶ್ಚಿದೃಷಿಸ್ತೇನ ದೃಷ್ಟತ್ವಾದಿದಂ ಸೂಕ್ತಂ ಗಾರ್ತ್ಸಮದಮ್ । ಕಥಮಿತಿ ತದುಚ್ಯತೇ । ಏತೇನೈವ ಸಜನೀಯ-ಸೂಕ್ತೇನ ಗೃತ್ಸಮದಾಖ್ಯೋ ಮಹರ್ಷಿರಿಂದ್ರಂ ತೋಷಯಿತ್ವಾ ತಸ್ಯೇಂದ್ರಸ್ಯ ಪ್ರಿಯಂ ಸ್ಥಾನಂ ಪ್ರಾಪ್ಯ ತತಃ ಸ ತೇನೇಂದ್ರೇಣಾನುಗೃಹೀತ ಉತ್ತಮಂ ಲೋಕಂ ಜಿತವಾನ್ ॥ ವೇದನಂ ಪ್ರಶಂಸತಿ—

ಈ ಸೂಕ್ತದ ಋಷಿಸಂಬಂಧವನ್ನು ಹೇಳಿ ಪ್ರಶಂಸೆಮಾಡುವರು. ಈ ಸೂಕ್ತವು ಗೃತ್ಸಮದ ಎಂಬ ಋಷಿಯಿಂದ ದೃಷ್ಟವಾದುದರಿಂದ ಇದು ಗಾರ್ತ್ಸಮದಸೂಕ್ತವೆಂದು ಹೆಸರನ್ನು ಪಡೆಯಿತು. ಈ ಸೂಕ್ತದ್ರಷ್ಟೃವಾದ ಗೃತ್ಸಮದನೆಂಬ ಋಷಿಯು ಈ ಸಜನೀಯಸೂಕ್ತದಿಂದ ಇಂದ್ರನನ್ನು ಸ್ತುತ್ಯಾದಿಗಳಿಂದ ಸಂತೋಷಪಡಿಸಿ ಆ ಇಂದ್ರನ ಅನುಗ್ರಹದಿಂದ ಇಂದ್ರನಿಗೆ ಪ್ರಿಯವಾದ ಸ್ಥಾನ (ಪದವಿ) ಯನ್ನು ಪಡೆದು ಉತ್ತಮ ಲೋಕವನ್ನೂ ಪಡೆದನು. ಈ ಸೂಕ್ತವನ್ನು ಪಠಿಸುವ ಪುರುಷನು ಇಂದ್ರನ ಅನುಗ್ರಹದಿಂದ ಉತ್ತಮವಾದ ಲೋಕವನ್ನು ಪಡೆಯುವನು.

**ತತ್ಸವಿತುರ್ವರೇಣ್ಯಮಹೇಽದ್ಯಾನೋ ದೇವ ಸವಿತರಿತಿ ವೈಶ್ವದೇವಸ್ಯ ಪ್ರತಿ-ಪದನುಚರೌ ರಾಥಂತರೇಽಹನಿ ತೃತೀಯೇಽಹನಿ ತೃತೀಯ-ಸ್ಯಾಹ್ನೋ ರೂಪಂ ॥**

ವೈಶ್ವದೇವಶಸ್ತ್ರಸ್ಯ ತ್ರ್ಯೃಚದ್ವಯಂ ವಿಧತ್ತೇ—ತತ್ಸವಿತುರಿತಿ ತ್ರ್ಯೃಚಃ ಪ್ರತಿಪತ್ಸ ಚ ರಥಂತರಸಾಮಸಂಬಂಧೀ । ಅದ್ಯಾ ನೋ ದೇವ ಸವಿತರಿತ್ಯನುಚರಸ್ತದೇತದುಭಯಂ ರಥಂತರ-ಸಂಬಂಧಿನ್ಯಸ್ಮಿನ್ನಹ್ನ್ಯೋಗ್ಯಂ ॥

ಈಗ ವೈಶ್ವದೇವಸೂಕ್ತದ ಎರಡು ತೃಚಗಳನ್ನು ವಿವರಿಸುವರು. **ತತ್ಸವಿತುರ್ವೃಣೀಮಹೇ** (ಋ. ಸಂ. ೫-೮೨-೧) ಎಂಬ ತೃಚವು ವೈಶ್ವದೇವಸೂಕ್ತದ ಪ್ರತಿಪತ್ ಎಂದರೆ ಮೊದಲನೆಯ ಋಕ್ಕು **ಅದ್ಯಾನೋ ದೇವ ಸವಿತಃ** (ಋ. ಸಂ. ೫-೮೨-೪) ಎಂಬ ಋಕ್ಕು ಅನುಚರವೆಂಬ ಋಕ್ಕು. ಎಂದರೆ ಮೊದಲನೇ ಋಕ್ಕನ್ನು ಪಠಿಸಿದನಂತರ ಪಠಿಸಿದನಂತರ ಪಠಿಸಬೇಕಾದ ಋಕ್ಕು. ಇವೆರಡು ಋಕ್ಕುಗಳಿಗೂ ರಥಂತರಸಂಬಂಧವಿರುವುದು. ಆದ್ದರಿಂದ ಈ ಎರಡು ಋಕ್ಕುಗಳಲ್ಲಿಯೂ ಮೂರನೆಯ ದಿವಸ ಪಠಿಸಲು ಅವಶ್ಯಕವಾದ ಲಕ್ಷಣಗಳಿದ್ದಂತಾಯಿತು.

## ತದ್ದೇವಸ್ಯ ಸವಿತುರ್ವಾರ್ಯಂ ಮಹದಿತಿ ಸಾವಿತ್ರಂ ॥

ಸವಿತೃದೇವತಾಕಂ ಸೂಕ್ತಾಂತರಂ ದರ್ಶಯತಿ—ತದೇಕಂ ಸಾವಿತ್ರಂ ಸವಿತೃದೇವತಾ-ಕಂ । ತತ್ರ ಹಿ ಸವಿತುರ್ದೇವಸ್ಯ ಸಂಬಂಧಿ ವಾರ್ಯಂ ವರಣೀಯಂ ಮಹದಧಿಕಂ ತೇಜ ಇತ್ಯಯ-ಮರ್ಥಃ ಶ್ರೂಯತೇ । ಅತಃ ಸವಿತೃಸಂಬಂಧಶ್ರವಣಾತ್ಸಾವಿತ್ರಂ ।

ಸವಿತೃದೇವತಾಕವಾದ ಬೇರೊಂದು ಸೂಕ್ತವನ್ನು ವಿವರಿಸುವರು. **ತದ್ದೇವಸ್ಯ ಸವಿತುರ್ವಾರ್ಯಂ** (ಋ. ಸಂ. ೪-೫೩-೧) ಎಂಬುದೇ ಆ ಸೂಕ್ತವು. ಈ ಸೂಕ್ತಕ್ಕೆ ಸವಿತೃವು ದೇವತೆಯಾಗಿರುವುದರಿಂದ ಈ ಸೂಕ್ತವು ಸಾವಿತ್ರವೆನಿಸುವುದು. **ವಾರ್ಯಂ** ಎಂದರೆ ವರಣೀಯಂ ಎಲ್ಲರೂ ಅಪೇಕ್ಷಿಸುವರು. **ಮಹತ್** ಎಂದರೆ ಅಧಿಕ ಅಥವಾ ಶ್ರೇಷ್ಠತೆಯಿಂದ ಕೂಡಿರುವುದು.

## ಅಂತೋ ವೈ ಮಹದಂತಸ್ತೃತೀಯಮಹಸ್ತೃತೀಯೇಽಹನಿ ತೃತೀಯ-ಸ್ಯಾಹ್ನೋ ರೂಪಂ ॥

ಪೂರ್ವತ್ರ ತ್ರ್ಯೃಚೇ ರಥಂತರಸಂಬಂಧರೂಪಂ ಲಿಂಗಮುಕ್ತಂ । ಅತ್ರ ತು ಲಿಂಗಾಂತರಂ ದರ್ಶಯತಿ—ಅತ್ರ ಪ್ರಥಮಪಾದೇ ಮಹಚ್ಛಬ್ದೋಽಸ್ತಿ । ಮಹಚ್ಚ ವಸ್ತು ಕಾಮ್ಯಮಾನಾನಾಂ ವಸ್ತೂನಾಮಂತೋ ಭವತಿ ನ ಖಲು ಮಹತೋಽಪ್ಯಧಿಕಂ ಕೇನಚಿತ್ಕ್ವಚಿತ್ಕಿಂಚಿದಧಿಕಂ ಕಾಮ್ಯತೇ ತಾದೃಶಸ್ಯಾಭಾವಾತ್ । ತಸ್ಮಾನ್ಮಹದ್ವಸ್ತ್ವೇವಾಂತೋ ಭವತಿ । ಇದಂ ಚ ತೃತೀಯ-ಮಹಃ ಪ್ರಥಮಸ್ಯ ತ್ರ್ಯಹಸ್ಯಾಂತಃ । ಅತೋಽಂತತ್ವಸಾಮ್ಯಾತ್ತೃತೀಯೇಽಹನಿ ತದ್ದೇವಸ್ಯೇತ್ಯಾ-ದಿಕಂ ಯೋಗ್ಯಂ । ಯದ್ಯಪ್ಯಂತಶಬ್ದೋಽತ್ರ ನಾಸ್ತಿ ತಥಾಪ್ಯುಕ್ತರೀತ್ಯಾಂತಶಬ್ದಾರ್ಥಸ್ಯ ಸದ್ಭಾವಾದಂತವಲ್ಲಿಂಗಮಸ್ತಿ ॥

ಹಿಂದಿನ ಎರಡು ತೃಚಗಳಲ್ಲಿ ರಥಂತರಸಾಮದ ಸಂಬಂಧವಿರುವುದನ್ನು ತಿಳಿಸಿದ್ದಾಯಿತು. ಈಗ ಬೇರೆ ಲಕ್ಷಣವನ್ನು ತಿಳಿಸುವರು. ಈ ಋಕ್ಕಿನ ಪ್ರಥಮಪಾದದಲ್ಲಿ ಮಹಚ್ಛಬ್ದವಿರುವುದು. ಎಲ್ಲರೂ ಅಪೇಕ್ಷಿಸುವ ವಸ್ತುಗಳಲ್ಲಿ **ಮಹತ್** ಎಂದರೆ ಅತ್ಯಧಿಕವಾದುದನ್ನೇ ಅಪೇಕ್ಷಿಸುವರು. ಈ ಅಧಿಕವಸ್ತುವೇ ಅವರ ಕೊನೆಯ ಅಪೇಕ್ಷೆಯಾಗಿರುವುದು. ಇದಕ್ಕಿಂತಲೂ ದೊಡ್ಡ

ವಸ್ತುವನ್ನು ಯಾರೂ ಯಾವಾಗಲೂ ಅಪೇಕ್ಷಿಸುವುದಿಲ್ಲ. ಏಕೆಂದರೆ ಅತ್ಯಂತ ದೊಡ್ಡವಸ್ತುವಿಗಿಂತಲೂ ದೊಡ್ಡವಸ್ತುವೇ ಇರುವುದಿಲ್ಲ. ಆದ್ದರಿಂದ ದೊಡ್ಡವಸ್ತುವಿನ ಅಪೇಕ್ಷೆಯೇ ಕೊನೆಯದಾಗಿರುವುದು. ಈ ಮೂರನೆಯ ದಿವಸವು ತ್ರ್ಯಹ (ಮೂರುದಿವಸಗಳ ಗುಂಪು) ದಲ್ಲಿ ಕೊನೆಯ ದಿನವಾಗಿರುವುದು. ಆದ್ದರಿಂದ ಅಂತತ್ವಸಾಮ್ಯದಿಂದ ಈ ಋಕ್ಕಿನಲ್ಲಿ ಅವಶ್ಯಕವಾದ ಲಕ್ಷಣವಿರುವುದು. ಇಲ್ಲಿ ಅಂತಃ ಎಂಬ ಶಬ್ದವು ಪ್ರತ್ಯೇಕವಾಗಿ ಇಲ್ಲದಿದ್ದರೂ ಈ ಅಂತಃ ಶಬ್ದದ ಭಾವವು ಇರುವುದರಿಂದ ಇಲ್ಲಿ ಅವಶ್ಯಕವಾದ ಲಕ್ಷಣವಿದ್ದಂತಾಯಿತು.

**ಘೃತೇನ ದ್ಯಾವಾಪೃಥಿವೀ ಅಭೀವೃತೇ ಇತಿ ದ್ಯಾವಾಪೃಥಿವೀಯಂ ಘೃತ-ಶ್ರಿಯಾ ಘೃತಪೃಚಾ ಘೃತಾವೃಧೇತಿ ಪುನರಾವೃತ್ತಂ ಪುನರ್ನಿನೃತಂ ತೃತೀಯೇಽಹನಿ ತೃತೀಯಸ್ಯಾಹ್ನೋ ರೂಪಂ ॥**

**ತೃಚಾಂತರಂ ವಿಧತ್ತೇ—ದ್ಯಾವಾಪೃಥಿವೀದೇವತಾಕಂ ವಿಸ್ಪಷ್ಟಂ । ಘೃತಶ್ರಿಯೇತ್ಯಾ-ದಿರ್ದ್ವಿತೀಯಃ ಪಾದಸ್ತತ್ರ ಘೃತಶಬ್ದಸ್ಯ ಪುನಃ ಪುನರಾವೃತ್ತಿರೇಕಂ ಲಿಂಗಂ। ತಯಾ ಚಾವೃತ್ಯಾ ನೃತ್ತಗತತಾಲಾನುಕರಣಪ್ರತೀತೇಃ ಪುನರ್ನಿನೃತ್ತಂ ಲಿಂಗಾಂತರಂ ॥**

ಈಗ ಮುಂದಿನ ತೃಚವನ್ನು ವಿವರಿಸುವರು. ಘೃತೇನ ದ್ಯಾವಾಪೃಥಿವೀ (ಋ. ಸಂ. ೬-೭೦-೪) ಎಂಬ ಋಕ್ಕು ದ್ಯಾವಾಪೃಥಿವೀದೇವತಾಕವಾದುದು. ಈ ಋಕ್ಕಿನಲ್ಲಿ ಘೃತಶಬ್ದವು ಪುನಃಪುನಃ ಪಠಿತವಾಗಿರುವುದರಿಂದ ಈ ತೃಚದಲ್ಲಿ ಮೂರನೇ ದಿವಸ ಪಠಿಸಲು ಅವಶ್ಯಕವಾದ ಪುನರಾವೃತ್ತಿ ಎಂಬ ಲಕ್ಷಣವು ಇದ್ದಂತಾಯಿತು.

**ಅನಶ್ವೋ ಜಾತೋ ಅನಭೀಶುರುಕ್ಥ್ಯ ಇತ್ಯಾರ್ಭವಂ ರಥಸ್ತ್ರಿಚಕ್ರ ಇತಿ ತ್ರಿವತ್ತೃತೀಯೇಽಹನಿ ತೃತೀಯಸ್ಯಾಹ್ನೋ ರೂಪಂ ॥**

**ಋಭುದೇವತಾಕಂ ಸೂಕ್ತಾಂತರಂ ವಿಧತ್ತೇ—ದ್ವಿತೀಯಸ್ಯಾ ಋಚಶ್ಚತುರ್ಥಪಾದ ಋಭವೋ ವೇದಯಾಮಸೀತಿ ಶ್ರವಣಾದೃಭುದೇವತಾಕತ್ವಂ । ಪ್ರಥಮಾಯಾ ಋಚೋ ದ್ವಿತೀಯಪಾದೇ ರಥಸ್ತ್ರಿಚಕ್ರ ಇತಿ ತ್ರಿಶಬ್ದೋಪೇತಂ ಲಿಂಗಂ ।**

ಋಭುದೇವತಾಕವಾದ ಸೂಕ್ತವನ್ನು ವಿವರಿಸುವರು. ಅನಶ್ವೋ ಜಾತೋ ಅನಭೀಶುಃ (ಋ. ಸಂ. ೪-೩೬-೧) ಎಂಬುದೇ ಆ ಮಂತ್ರವು. ಈ ಸೂಕ್ತದ ಎರಡನೇ ಋಕ್ಕಿನ ನಾಲ್ಕನೇ ಪಾದದಲ್ಲಿ ಋಭವೋ ವೇದಯಾಮಸಿ ಎಂದು ಋಭುಶಬ್ದವಿರುವುದರಿಂದ ಈ ಸೂಕ್ತವು ಋಭುದೇವತಾಕವಾದುದು. ಮತ್ತು ಈ ಸೂಕ್ತದ ಮೊದಲನೇ ಋಕ್ಕಿನ ಎರಡನೇ ಪಾದದಲ್ಲಿ ರಥಸ್ತ್ರಿಚಕ್ರವೆಂದಿರುವುದರಿಂದ ಮೂರನೆಯ ದಿನ ಪಠಿಸಲು ಯೋಗವಾದ ಮಂತ್ರದಲ್ಲಿ ತ್ರಿ ಎಂಬ ಶಬ್ದವು ಇದ್ದು ಇದು ಅವಶ್ಯವಾದ ಲಕ್ಷಣಗಳಿಂದ ಕೂಡಿರುವುದು.

**ಪರಾವತೋ ಯೇ ದಿಧಿಷಂತ ಆಪ್ಯಮಿತಿ ವೈಶ್ವದೇವಮಂತೋ ವೈ ಪರಾವತೋಽನ್ತಸ್ತೃತೀಯಮಹಸ್ತೃತೀಯೇಽಹನಿ ತೃತೀಯ-ಸ್ಯಾಹ್ನೋ ರೂಪಂ ॥**

**ಬಹುದೇವತಾಕಂ ಸೂಕ್ತಾಂತರಂ ವಿಧತ್ತೇ—ದ್ವಿತೀಯಸ್ಯಾ ಋಚಃ ಪೂರ್ವಾರ್ಧ ಏವಂ ಪಠ್ಯತೇ—ವಿಶ್ವಾ ಹಿ ವೋ ನಮಸ್ಯಾನಿ ವನ್ದ್ಯಾ ನಾಮಾನಿ ದೇವಾ ಉತ ಯಜ್ಞಿಯಾನಿ ವ ಇತಿ । ತತ್ರ ದೇವಾ ಇತಿ ಬಹುವಚನಂ । ಅತ್ರಪ್ರಥಮಾಯಾ ಋಚಶ್ಚತುರ್ಥಪಾದೇ ದೇವಾ ಆಸತ ಇತಿ ಬಹುವಚನಂ । ತೇನ ವೈಶ್ವದೇವಂ ಬಹುದೇವತಾಕಮಿದಂ । ಪರಾವತ ಇತ್ಯನೇನ ಶಬ್ದೇನ ದೂರದೇಶೋಽಭಿಧೀಯತೇ । ಸ ಚ ನಿವಾಸದೇಶಾಪೇಕ್ಷಯಾಂತೋ ಭವತಿ । ತೃತೀಯಮಹಶ್ಚ ತ್ರ್ಯಹಸ್ಯಾಂತೋಽತಃ ಪೂರ್ವವದರ್ಥತೋಽಂತವಲ್ಲಿಂಗಮಸ್ತಿ ॥**

ಬಹುದೇವತಾಕವಾದ ಒಂದು ಸೂಕ್ತವನ್ನು ವಿವರಿಸುವರು. **ಪರಾವತೋ ಯೇ ದಿಧಿಷಂತ** (ಋ. ಸಂ. ೧೦-೬೩-೧) ಎಂಬುದೇ ಆ ಸೂಕ್ತವು. ಈ ಸೂಕ್ತದ ಎರಡನೇ ಋಕ್ಕಿನ ಪೂರ್ವಾರ್ಧದಲ್ಲಿ ಈರೀತಿ ಪಠಿತವಾಗಿದೆ—**ವಿಶ್ವಾ ಹಿ ವೋ ನಮಸ್ಯಾನಿ ವಂದ್ಯಾ ನಾಮಾನಿ ದೇವಾ ಉತ ಯಜ್ಞಿಯಾನಿ ವಃ** (ಋ. ಸಂ. ೧೦-೬೩-೨) ಇಲ್ಲಿ **ದೇವಾ** ಎಂದು ಬಹುವಚನಪದವಿರುವುದು. ಮತ್ತು ಮೊದಲನೇ ಋಕ್ಕಿನ ನಾಲ್ಕನೇ ಪಾದದಲ್ಲಿಯೂ **ದೇವಾ ಆಸತ** ಎಂದು ಬಹುವಚನ ಪ್ರಯೋಗವಿರುವುದು. ಆದ್ದರಿಂದ ಇದು ಬಹುದೇವತಾಕವಾದ ವೈಶ್ವದೇವಸೂಕ್ತವು. **ಪರಾವತ** ಎಂಬ ಶಬ್ದವು ದೂರದೇಶವನ್ನು ಸೂಚಿಸುವುದು. ಇದು ನಿವಾಸಸ್ಥಾನದಿಂದ ಬಹುದೂರದಲ್ಲಿರುವುದೆಂದು ಭಾಸವಾಗುವುದು. ಆದ್ದರಿಂದ ಇಲ್ಲಿ **ಅಂತಃ** ಎಂಬ ಶಬ್ದದ ಅರ್ಥವು ಭಾಸವಾಗುವುದು. ಆದ್ದರಿಂದ ಇಲ್ಲಿ ಮೂರನೆಯ ದಿವಸ ಪಠಿಸಲು ಯೋಗ್ಯವಾದ ಲಕ್ಷಣಗಳಿದ್ದಂತಾಯಿತು.

**ತದು ಗಾಯಮೇತೇನ ವೈ ಗಯಃ ಪ್ಲಾತೋ ವಿಶ್ವೇಷಾಂ ದೇವಾನಾಂ ಪ್ರಿಯಂ ಧಾಮೋಪಾಗಚ್ಛತ್ಸ ಪರಮಂ ಲೋಕಮಜಯತ್ । ಉಪ ವಿಶ್ವೇಷಾಂ ದೇವಾನಾಂ ಪ್ರಿಯಂ ಧಾಮ ಗಚ್ಛತಿ ಜಯತಿ ಪರಮಂ ಲೋಕಂ ಯ ಏವಂ ವೇದ ॥**

**ತದೇತದ್ವೈಶ್ವದೇವಸೂಕ್ತಂ ಪ್ರಶಂಸತಿ—ತದು ತದೇತತ್ಸೂಕ್ತಂ ಗಾಯಂ ಗಯೇನ ದೃಷ್ಟಂ । ಪ್ಲುತನಾಮಕಸ್ಯ ಪುತ್ರೋ ಗಯನಾಮಕೋ ಮಹರ್ಷಿರೇತೇನ ಪರಾವತ ಇತ್ಯಾದಿಸೂಕ್ತೇನ ವಿಶ್ವೇಷಾಂ ದೇವಾನಾಂ ಪ್ರಿಯಂ ಸ್ಥಾನಂ ಪ್ರಾಪ್ಯ ತೈರನುಗೃಹೀತ ಉತ್ತಮಂ ಲೋಕಂ ಜಿತವಾ‌ನ್ ॥ ವೇದನಂ ಪ್ರಶಂಸತಿ—**

ಈ ವೈಶ್ವದೇವಸೂಕ್ತವನ್ನು ಪ್ರಶಂಸೆಮಾಡುವರು. ಈ ಸೂಕ್ತವು ಗಯ ಎಂಬ ಋಷಿಯಿಂದ ದೃಷ್ಟವಾದುದು ಪ್ಲತ ಎಂಬ ಋಷಿಯ ಪುತ್ರನಾದ ಗಯಋಷಿಯು ಪರಾವತ ಎಂಬ ಈ ಸೂಕ್ತವನ್ನು ಪಠಿಸಿ ಅದರ ಪ್ರಭಾವದಿಂದ ವಿಶ್ವೇದೇವತೆಗಳ ಅನುಗ್ರಹವನ್ನು ಪಡೆದು ಅವರಿಗೆ ಪ್ರಿಯವಾದ ಉತ್ತಮ ಪದವಿಯನ್ನು ಪಡೆದು ಅನಂತರ ಉತ್ತಮ ಲೋಕವನ್ನೂ ಪಡೆದನು. ಈ ಸೂಕ್ತವನ್ನು ಪಠಿಸುವ ಪುರುಷನು ವಿಶ್ವೇದೇವತೆಗಳ ಅನುಗ್ರಹದಿಂದ ಈ ಲೋಕದಲ್ಲಿ ಉತ್ತಮ ಪದವಿಯನ್ನು ಪಡೆದು ಅನಂತರ ಉತ್ತಮ ಲೋಕವನ್ನೂ ಪಡೆಯುವನು.

**ವೈಶ್ವಾನರಾಯ ಧಿಷಣಾಮೃತಾವೃಧ ಇತ್ಯಾಗ್ನಿಮಾರುತಸ್ಯ ಪ್ರತಿಪದಂತೋ ವೈ ಧಿಷಣಾಂತಸ್ತೃತೀಯಮಹಸ್ತೃತೀಯೇಽಹನಿ ತೃತೀಯಸ್ಯಾಹ್ನೋ ರೂಪಂ ॥**

**ಶಸ್ತ್ರಾಂತರಸ್ಯ ಪ್ರತಿಪತ್ಸೂಕ್ತಂ ವಿಧತ್ತೇ—ಅಥ ಧಿಷಣೇತ್ಯಂತಃಕರಣವಾಚಕಃ ಶ್ರೂಯತೇ। ಅಂತಃ ಕರಣಂ ಚ ಭೂಮ್ಯಾದೇರಂತಂ ಪ್ರಾಪ್ತುಂ ಶಕ್ನೋತಿ । ತಥಾ ಚಾನ್ಯತ್ರ ಶ್ರೂಯತೇ—' ನ ವಾ ಇಮಾಮಶ್ವರಥೋ ನ ವಾಽಶ್ವತರೀರಥಃ ಸದ್ಯಃ ಪರ್ಯಾಪ್ತುಮರ್ಹತಿ ' ಇತಿ। ಅತಃ ಸಹಸಾ ಭೂಮ್ಯಾದ್ಯಂತಪ್ರಾಪ್ತಿಹೇತುತ್ವಾದ್ಧಿಷಣಾಶಬ್ದೋಽಂತಸ್ಯೋಪಲಕ್ಷಕಃ। ಅಂತಸ್ತೃತೀಯಮಿತ್ಯಾದಿ ಪೂರ್ವವತ್ ॥**

ಶಸ್ತ್ರದ ಕೊನೆಯ ಸೂಕ್ತವನ್ನು ವಿವರಿಸುವರು. **ವೈಶ್ವಾನರಾಯ ಧಿಷಣಾ** (ಋ. ಸಂ. ೩-೨-೧) ಎಂಬ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ಧಿಷಣಾ ಎಂಬ ಅಂತಃಕರಣವಾಚಕಶಬ್ದವಿರುವುದು. ಅಂತಃಕರಣವು ಭೂಮ್ಯಾದಿಗಳ ಕೊನೆಯನ್ನು ಮುಟ್ಟಲು ಸಾಧನವಾಗಿರುವುದು. ಈ ವಿಷಯದಲ್ಲಿ—**ನ ವಾ ಇಮಾಮಶ್ವರಥೋ ನ ವಾಶ್ವತರೀರಥಃ ಸದ್ಯಃ ಪರ್ಯಾಪ್ತುಮರ್ಹತಿ** । ಎಂದು ಹೇಳಿರುವುದು. ಆದ್ದರಿಂದ ಭೂಮಿಯ ಅಂತ ಎಂದರೆ ಕೊನೆಯನ್ನು ಮುಟ್ಟಲು ಧಿಷಣಾ ಶಬ್ದವು ಸಾಧಕವಾಗಿರುವುದು. ಆದ್ದರಿಂದ ಆಗ್ನಿಮಾರುತಶಸ್ತ್ರದ ಸೂಕ್ತದ ಮೊದಲ ಋಕ್ಕಿನಲ್ಲಿ ಅಂತಃಶಬ್ದವಿರುವುದರಿಂದ ಮೂರನೆಯ ದಿವಸ ಪಠಿಸಲು ಯೋಗ್ಯವಾದ ಮಂತ್ರದಲ್ಲಿ ಅವಶ್ಯಕವಾದ ಲಕ್ಷಣವಿದ್ದಂತಾಯಿತು.

**ಧಾರಾವರಾ ಮರುತೋ ಧೃಷ್ಣ್ವೋಜಸ ಇತಿ ಮಾರುತಂ ಬಹ್ವಭಿವ್ಯಾಹೃತ್ಯಮಂತೋ ವೈ ಬಹ್ವಂತಸ್ತೃತೀಯಮಹಸ್ತೃತೀಯೇಽಹನಿ ತೃತೀಯಸ್ಯಾಹ್ನೋ ರೂಪಂ ॥**

**ಮರುದ್ದೇವತಾಕಂ ಸೂಕ್ತಂ ವಿಧತ್ತೇ—ಮಾರುತತ್ವಮತ್ರ ವಿಸ್ಪಷ್ಟಂ। ಬಹುವಿಧಮಭಿವ್ಯಾಹೃತ್ಯಮಭಿವ್ಯಾಹರಣೀಯಂ ಶಂಸನೀಯಮೃಗ್ಜಾತಂ ಯಸ್ಮಿನ್ಸೂಕ್ತೇ ತದ್ಬಹ್ವಭಿವ್ಯಾಹೃತ್ಯಮ್। ಅತ್ರ ಹಿ ಪಂಚದಶರ್ಚಃ ಶಂಸನೀಯಾ ಇತಿ ಬಹುತ್ವಂ। ಬಹೂನಾಂ ದೇವನಾಮಭಿವ್ಯಾಹರಣೀಯಾನಾಂ ವಿದ್ಯಮಾನತ್ವಾದ್ಬಹುತ್ವಂ । ತಸ್ಯ ಬಹುತ್ವಸ್ಯಾನೇಕತ್ವದ್ವಿತ್ವಾಪೇಕ್ಷಯಾಽಂತತ್ವಂ। ಅತೋಽಂತವಲ್ಲಿಂಗಮಸ್ತಿ ॥**

ಮರುದ್ದೇವತಾಕವಾದ ಸೂಕ್ತವನ್ನು ವಿವರಿಸುವರು. **ಧಾರಾವರಾ ಮರುತೋ** (ಋ. ಸಂ. ೨-೩೪-೧) ಎಂಬ ಸೂಕ್ತದಲ್ಲಿ ಮರುತಃ ಎಂಬ ಶಬ್ದವಿರುವುದರಿಂದ ಈ ಸೂಕ್ತವು ಮರುದ್ದೇವತಾಕವು. ಬಹುವಿಧವಾಗಿ ಪಠಿಸಲು ಅನುಕೂಲವಾದ ಅನೇಕ ಋಕ್ಕುಗಳು ಈ ಸೂಕ್ತದಲ್ಲಿರುವುದರಿಂದ ಇದಕ್ಕೆ ಬಹ್ವಭಿವ್ಯಾಹೃತ್ಯವೆಂದು ಹೆಸರು. ಇಲ್ಲಿ ಎಂದರೆ ಈ ಸೂಕ್ತದಲ್ಲಿ ಹದಿನೈದು ಋಕ್ಕುಗಳನ್ನು ಪಠಿಸಬೇಕಾಗಿರುವುದರಿಂದ ಅನೇಕ ಋಕ್ಕುಗಳನ್ನು ಪಠಿಸಬೇಕಾದ (ಬಹುತ್ವಂ) ಸೂಕ್ತವೆಂದು ಇಲ್ಲಿ ಹೇಳಲಾಗಿದೆ. ಮತ್ತು ಈ ಸೂಕ್ತದಲ್ಲಿ ಅನೇಕ ದೇವತೆಗಳನ್ನು ಸ್ತುತಿಸಲಾಗಿರುವುದರಿಂದಲೂ ಬಹುತ್ವಶಬ್ದಪ್ರಯೋಗವಿರುವುದು. ಇಲ್ಲಿ ಅಂತತ್ವವೆಂಬ ಲಕ್ಷಣವಿರುವುದರಿಂದ ಮೂರನೆಯ ದಿನದಲ್ಲಿ ಪಠಿಸಬೇಕಾದ ಮಂತ್ರಗಳ ಲಕ್ಷಣವಿದ್ದಂತಾಯಿತು.

**ಜಾತವೇದಸೇ ಸುನವಾಮ ಸೋಮಮಿತಿ ಜಾತವೇದ ಸ್ಯಾಽಚ್ಯುತಾ ॥**

ಋಗಂತರಂ ವಿಧತ್ತೇ— ಅಚ್ಯುತತ್ವಂ ಸರ್ವೇಷಾಮಹ್ನಾಂ ಸಾಧಾರಣಂ ಲಿಂಗಂ ।

ಬೇರೊಂದು ಋಕ್ಕನ್ನು ವಿವರಿಸುವರು. ಜಾತವೇದಸೇ ಸುನವಾಮ (ಋ. ಸಂ. ೧-೯೯-೧) ಎಂಬ ಋಕ್ಕಿನಲ್ಲಿ ಅಚ್ಯುತತ್ವವೆಂಬ ಲಕ್ಷಣವಿರುವುದರಿಂದ ಇದು ಮೂರನೆಯ ದಿವಸ ಪಠಿಸಲು ಅವಶ್ಯಕವಾದ ಲಕ್ಷಣವು ಇಲ್ಲಿದ್ದಂತಾಯಿತು.

**ತ್ವಮಗ್ನೇ ಪ್ರಥಮೋ ಅಂಗಿರಾ ಋಷಿರಿತಿ ಜಾತವೇದಸ್ಯಂ ಪುರಸ್ತಾದು- ದರ್ಕಂ ತೃತೀಯೇಽಹನಿ ತೃತೀಯಸ್ಯಾಹ್ನೋ ರೂಪಂ ತ್ವಂ ತ್ವಮಿತ್ಯುತ್ತರಂ ತ್ರ್ಯಹಮಭಿವದತಿ ಸಂತತ್ಯೈ । ಸಂತತೈಸ್ತ್ರ್ಯಹೈರ- ವ್ಯವಚ್ಛಿನ್ನೈರ್ಯಂತಿ ಯ ಏವಂ ವಿದ್ವಾಂಸೋ ಯಂತಿ ॥**

ಜಾತವೇದೋದೇವತಾಕಂ ಸೂಕ್ತಂ ವಿಧತ್ತೇ— ಯದ್ಯಪಿ ತ್ವಮಗ್ನ ಇತ್ಯಗ್ನಿರೇವ ದೇವತಾ ಪ್ರತೀಯತೇ ತಥಾಪ್ಯಸೌ ಜಾತವೇದಃಶಬ್ದವಾಚ್ಯೋ ಭವತಿ । ಜಾತಸ್ಯ ಸರ್ವಸ್ಯ ಜಗತೋ ವೇದಿತತ್ವಾತ್ । ತಸ್ಮಾದೇತತ್ಸೂಕ್ತಂ ಜಾತವೇದಸ್ಯಂ । ತಚ್ಚ ಪುರಸ್ತಾದುದರ್ಕಂ । ಉದರ್ಕಶಬ್ದೋಽವಸಾನವಚನಃ । ಅವಸಾನಂ ಚ ವಿಚ್ಛೇದಃ । ಸೋಽಪಿ ದ್ವಿವಿಧಃ ಪುರಸ್ತಾ- ದುಪರಿಷ್ಟಾಚ್ಚ । ಉಪಕ್ರಮಾತ್ಪೂರ್ವಂ ಶಂಸನೀಯಸ್ಯಾಭಾವಾದಯಂ ಪೂರ್ವಕಾಲೀನೋ ವಿಚ್ಛೇದಃ ಪುರಸ್ತಾದುದರ್ಕ ಇತ್ಯುಚ್ಯತೇ । ಶಂಸನಾದೂರ್ಧ್ವಕಾಲೀನೋ ವಿಚ್ಛೇದ ಉಪರಿ- ಷ್ಟಾದುದರ್ಕಃ । ಸಮಾನೋದರ್ಕತ್ವಂ ಚ ತೃತೀಯಸ್ಯಾಹ್ನೋ ಲಿಂಗಂ ಯುಕ್ತಂ ತತ್ರೋ- ಪರಿಷ್ಟಾದುದರ್ಕಸಾಮ್ಯಂ ಸಜಾತೀಯಾದಿಷೂದಾಹೃತಮ್ । ಅತ್ರ ಪುರಸ್ತಾದುದರ್ಕಸಾಮ್ಯಂ ಲಿಂಗತ್ವೇನೋದಾಹ್ರಿಯತೇ । ತಥಾ ಹ್ಯಸ್ಮಿನ್ಸೂಕ್ತೇ ಸರ್ವಾಸ್ವಪ್ಯೃಕ್ಷು ತ್ವಮಗ್ನ ಇತಿ ಪದ- ದ್ವಯಂ ಸಮಾಮ್ನಾತಮ್ । ತದಿದಂ ಸಮಾನೋದರ್ಕತ್ವಮೇಕಂ ಲಿಂಗಮ್ । ಅಸಕೃದಭಿಧಾ- ನಾದೇವ ಪುನರಾವೃತ್ತಲಿಂಗಂ ಚ ವಕ್ತುಂ ಶಕ್ಯಮ್ । ಕಿಂಚ । ಲೋಕೇ ಕಂಚಿತ್ಪುರುಷಂ ಸಂಬೋಧ್ಯಾಭಿಮುಖೀಕೃತ್ಯ ತ್ವಮಿತಿ ವದಂತಿ । ಏವಮತ್ರಾಪ್ಯುತ್ತರತ್ರ್ಯಹಮಭಿಮುಖೀಕೃ- ತ್ಯೈವ ಪ್ರತ್ಯೃಚಂ ತ್ವಂ ತ್ವಮಿತಿ ಶಬ್ದಃ ಪ್ರಯುಜ್ಯತೇ । ತಚ್ಚ ಪ್ರಥಮದ್ವಿತೀಯಯೋಸ್ತ್ರ್ಯಹ- ಯೋಶ್ಚ ಸಂತತ್ಯೈ ವಿಚ್ಛೇದರಾಹಿತ್ಯಾಯ ಭವತಿ ॥

ವೇದನಪೂರ್ವಕಮನುಷ್ಠಾನಂ ಪ್ರಶಂಸತಿ— ಯೇ ಪುರುಷಾಃ ಪ್ರತ್ಯೃಚಂ ತ್ವಂ ಶಬ್ದೈಃ ಸೂಚಿತತ್ರ್ಯಹಯೋಃ ಸಾಂತತ್ಯಂ ವಿದ್ವಾಂಸೋಽನುತಿಷ್ಠಂತಿ ತೇ ಪುರುಷಾಃ ಸಂತತೈಃ ಪರಸ್ಪರಂ ಸಂಬಂಧೈರತ ಏವ ವಿಚ್ಛೇದರಹಿತೈಸ್ತ್ರ್ಯಹೈರನುತಿಷ್ಠಂತಿ ತೇಷಾಂ ವಿಘ್ನೋ ನ ಭವತೀತ್ಯರ್ಥಃ ॥

ಜಾತವೇದೋದೇವತಾಕವಾದ ಒಂದು ಸೂಕ್ತವನ್ನು ವಿವರಿಸುವರು. ತ್ವಮಗ್ನೇ ಪ್ರಥಮೋ ಅಂಗಿರಾಋಷಿ (ಋ. ಸಂ. ೧-೩೧-೧) ಎಂಬುವುದೇ ಆ ಸೂಕ್ತವು. ಈ ಸೂಕ್ತಕ್ಕೆ ಕೇವಲ ಅಗ್ನಿಯು ದೇವತೆಯಾಗಿದ್ದರೂ ಜಾತವೇದಃಶಬ್ದ ವಾಚ್ಯನಾದ ಅಗ್ನಿಯೇ ದೇವತೆಯೆಂದು ತಿಳಿಯಬೇಕು. ಏಕೆಂದರೆ ಈ ಅಗ್ನಿಯು ಉತ್ಪನ್ನವಾದ (ಸೃಷ್ಟಿಯಾದ) ಸಮಸ್ತ ಪ್ರಾಣಿಗಳನ್ನೂ ವಸ್ತುಗಳನ್ನೂ ತಿಳಿದಿರುವನು. ಆದ್ದರಿಂದ ಈ ಸೂಕ್ತವು ಜಾತವೇದಸ್ಯವಾಗಿರುವುದೆಂದು ಹೇಳುವುದು ಯುಕ್ತವು.

ಈ ಸೂಕ್ತವು ಪುರಸ್ತಾದುದರ್ಕಂ—ಎಂದರೆ ಪ್ರಥಮದಲ್ಲಿಯೇ ಕೊನೆಯಭಾಗವಿರುವುದು ಕಂಡುಬರುವ ಸ್ವಭಾವವುಳ್ಳದ್ದು. ಇಲ್ಲಿ ಉದರ್ಕವೆಂದರೆ ಅವಸಾನ ಅಥವಾ ಸಮಾಪ್ತಿಯು. ಅವಸಾನವೆಂದರೆ ವಿಚ್ಛೇದವು. ಇದು ಎರಡು ವಿಧವಾಗಿರುವುದು. ಪುರಸ್ತಾತ್-ಋಕ್ಕಿನ ಮೊದಲಿನಲ್ಲಿ ಕಂಡುಬರುವ ಅವಸಾನವು ಮತ್ತು ಉಪರಿಷ್ಟಾತ್-ಋಕ್ಕಿನ ಕೊನೆಯಲ್ಲಿ ಕಂಡುಬರುವ ಅವಸಾನವು ಎಂದು ಎರಡುವಿಧವಾಗಿರುವುದು. ಹೇಗೆಂದರೆ ಈ ಸೂಕ್ತದ ಋಕ್ಕುಗಳಲ್ಲಿ **ತ್ವಮಗ್ನೇ** ಎಂಬ ಶಬ್ದಗಳೇ ಇರುವವು. ಆದ್ದರಿಂದ ಋಕ್ಕಗಳ ಪ್ರಾರಂಭದ ತ್ವಮಗ್ನೇ ಎಂಬ ಶಬ್ದಗಳು ಎಲ್ಲಾ ಋಕ್ಕುಗಳಲ್ಲಿಯೂ ಇರುವುದರಿಂದ ಈ ಸೂಕ್ತವು ಪುರಸ್ತಾದುದರ್ಕಃ ಎಂದು ಹೇಳಲ್ಪಡುವುದು. ಋಕ್ಕುಗಳ ಅಂತ್ಯದಲ್ಲಿ ಉದರ್ಕ (ಸಮಾಪ್ತಿಲಕ್ಷಣ) ವಿದ್ದರೆ ಆ ಋಕ್ಕುಗಳಿಗೆ ಉಪರಿಷ್ಟಾದುದರ್ಕವೆಂದು ಹೆಸರು. ಯಜ್ಞದ ಮೂರನೇ ದಿನದಲ್ಲಿ ಪಠಿಸಬೇಕಾದ ಋಕ್ಕುಗಳಲ್ಲಿ ಸಮಾನೋದರ್ಕ (ಒಂದೇ ವಿಧವಾದ ಶಬ್ದಗಳಿಂದ ಕೂಡಿದ ಸಮಾಪ್ತಿಯು) ವೆಂಬ ಲಕ್ಷಣಗಳಿರಬೇಕೆಂಬ ವಿಧಿ ಇರುವುದು. ಆದ್ದರಿಂದ ಇಲ್ಲಿ ಪುರಸ್ತಾದುದರ್ಕಕ್ಕೆ ಇರುವ ಲಕ್ಷಣವನ್ನು ಈ ಸೂಕ್ತದಲ್ಲಿ ಕಾಣಬಹುದಾಗಿದೆ. ಹೇಗೆಂದರೆ ಈ ಸೂಕ್ತದ ಎಲ್ಲಾ ಋಕ್ಕುಗಳ ಪ್ರಾರಂಭದಲ್ಲಿಯೂ ತ್ವಮಗ್ನೇ ಎಂಬ ಶಬ್ದಗಳೇ ಇರುವವು. ಎಲ್ಲಾ ಋಕ್ಕುಗಳಲ್ಲಿಯೂ ಈ ಲಕ್ಷಣವಿರುವುದರಿಂದ ಈ ಸೂಕ್ತದಲ್ಲಿ ಸಮಾನೋದರ್ಕಂ ಲಿಂಗಂ ಸಮಾನವಾದ ಪರಿಸಮಾಪ್ತಿಯುಳ್ಳ ಲಕ್ಷಣವಿರುವುದೆಂದು ತಿಳಿಯಬೇಕು. ಇಲ್ಲಿ ತ್ವಮಗ್ನೇ ಎಂಬ ಶಬ್ದವನ್ನು ಒಂದಾವರ್ತಿ ಮಾತ್ರ ಪಠಿಸಿಲ್ಲ. ಪ್ರತಿ ಋಕ್ಕಿನಲ್ಲಿಯೂ ಪುನಃಪುನಃ ಪಠಿಸಲಾಗಿದೆ. ಲೋಕ ವ್ಯವಹಾರದಲ್ಲಿ ಒಬ್ಬ ಪುರುಷನನ್ನು ಸಂಬೋಧಿಸಿ ಹೇಳಬೇಕಾದರೆ ಅವನನ್ನು ತನ್ನೆದುರಿಗಿರುವಂತೆ ಭಾವಿಸಿ ತ್ವಂ-ನೀನು ಎಂಬ ಶಬ್ದದಿಂದ ಸಂಬೋಧಿಸಿ ಹೇಳುವುದು ರೂಢಿಯಾಗಿರುವುದು. ಅದರಂತೆ ಇಲ್ಲಿಯೂ ಎಂದರೆ ಈ ಸೂಕ್ತದಲ್ಲಿ ಪ್ರತಿ ಋಕ್ಕಿನಲ್ಲಿಯೂ ಅಗ್ನಿಯನ್ನು ಉದ್ದೇಶಿಸಿ ಆ ಅಗ್ನಿಯು ತನ್ನ ಎದುರಿಗೆ ಇರುವನೆಂದು ಭಾವಿಸಿ ಸ್ತೋತ್ರವನ್ನು ಮಾಡಲಾಗಿದೆ. ಈರೀತಿ ಮೊದಲು ಎರಡು ಮತ್ತು ಮೂರನೆಯ ದಿವಸಗಳಲ್ಲಿ ಮಾಡಲಾಗಿರುವುದರಿಂದ ಇದನ್ನು ಸಂತತವಾಗಿ (ವಿಚ್ಛೇದರಹಿತವಾಗಿ) ಇಲ್ಲಿ ಮಾಡಲಾಗಿದೆಯೆಂದು ಹೇಳಿರುವುದು. ಯಾವ ವಿದ್ವಾಂಸರಾದ ಪುರುಷರು ಮೊದಲ ಮೂರು ದಿನಗಳಲ್ಲಿ ಈ ಸೂಕ್ತದ ಪ್ರತಿ ಋಕ್ಕನ್ನೂ ತ್ವಮಗ್ನೇ ಎಂಬ ಶಬ್ದಗಳಿಂದ ಆರಂಭಿಸಿ ಸಂತತವಾಗಿ ಪಠಿಸಿ ಅನುಷ್ಠಾನಮಾಡುವರೋ ಅವರಿಗೆ ಯಜ್ಞದಲ್ಲಿ ಯಾವ ವಿಧವಾದ ವಿಘ್ನವೂ ಉಂಟಾಗುವುದಿಲ್ಲ ಎಂದಭಿಪ್ರಾಯವು.

*English Translation*

**(The Nivid hymn of Nishkevalya Shastra and the Shastras of the evening libation of the third day)**

Yo jato eva prathamo manasvan (2, 12) is the (Nivid) hymn, every verse of which ends in the same words (sajanasa indrah) which is a characteristic of the third day. It contains the words sa jana and Indra. If this be recited, then Indra becomes possessed of his Indra (peculiar) power. The Sama singers, therefore say the Rigvedis (the Hotars) praise Indra's peculiar nature (power, indrasya indriyam). This hymn is by the Rishi Gritsamada. By means of it this Rishi obtained Indra's favour and conquered the highest world. He who has this knowledge obtains Indra's favour and conquers the highest world.

Tat Savitur vrinimahe vayam. (5, 82, 1-3) and adya no deva savitah (5, 82, 3-5) are the beginning and the sequel of the Vaisvadeva Shastra on the third day, which is a Rathantara day.

Tad devasya Savitur varyam mahad vrinimahe (4, 53, 1) is the Nivid hymn for Savitar. Because the end which is aimed at is a great one (mahat); and the third day is also an end. Ghritena dyava prithivi (6, 70) is the Nivid hymn for Dyavaprithivi. It contains the words ghritasriya, ghrita pricha, ghritarridha, in which there is a repetition (because the word ghrita is three times repeated) and the consonance of the teminating vowels (becanse there is three times a at the end), which are characteristics of the third day.

Anasvo jato anabhisur (4, 36) is the Nivid hymn for the Ribhus. It contains in the words rathas trichakrah, the term "three" (tri) which is a characteristic of the third day.

Parvato ye didhishanta (10, 63) is the Nivid hymn for the Visvedevah, Because the word anta (the end) is to be found in the word paravato (ato in the strong form anto), and the third day is an end (an object). This is the Gayasukta. by which Gaya, the son of Plata, obtained the favour of the Visvedevah and conqeured the highest world. He who has this knowledge obtains the favour of the Visvedevah and conquers the highest world.

Vaisvanaraya dhishanam (3, 2) is the beginning of the Agnimaruta Shastra. The anta (end) is in dishana (but the t is wanting). The third day is also an "end" (of a Tryaha or period of three days).

Dharavara maruto (2, 34) is the (Nivid) hymn for the Marutas. Here is by anta the plural (most of the nominatives of this verse are in the plural) to be understood, because the plural is the end (the last among the terminations, following the singular and dual). The third day is also the end (of the Tryaha).

Jatavedase sunavama (1, 99, 1) is the constant verse for Jayavedas. Tvam agne prathamo angira (1, 31) is the Nivid hymn for Jatavedas, where each verse begins by the same words (tvam agne), which is a characteristic of the third day. By repeating tvam tvam in every verse the Hotar alludes to the following three days from the fourth to the sixth for connecting both series of three days. Those who with such a knowledge repeat at the end of the last Shastra of the third day a hymn every verse of which contains the term tvam have both series of three days performed without interruption and breach.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಏಕವಿಂಶೋಧ್ಯಾಯಸ್ಯ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೊಂದನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವಾದುದು.

# ಅಥ ಏಕವಿಂಶಾಧ್ಯಾಯೇ ತೃತೀಯಃ ಖಂಡಃ

## ಇಪ್ಪತ್ತೊಂದನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು

[ ನ್ಯೂಂಖದ ವಿಷಯವು ]

**ಆಪ್ಯಂತೇ ವೈ ಸ್ತೋಮಾ ಆಪ್ಯಂತೇ ಛಂದಾಂಸಿ ತೃತೀಯೇಽಹನ್ಯೇತದೇವ ತತ ಉಚ್ಛಿಷ್ಯತೇ ವಾಗಿತ್ಯೇವ ತದೇತದಕ್ಷರಂ ತ್ರ್ಯಕ್ಷರಂ ವಾಗಿತ್ಯೇಕಮಕ್ಷರಮಕ್ಷರಮಿತಿ ತ್ರ್ಯಕ್ಷರಂ ॥**

ದ್ವಾದಶಾಹಮಧ್ಯವರ್ತಿನೋ ನವರಾತ್ರಸ್ಯ ತ್ರಯಶ್ಚ ವಾ ಏತೇ ತ್ರ್ಯಹಾ ಇತಿ ಯತ್ಪೂರ್ವಮುಕ್ತಂ ತತ್ರ ಪ್ರಥಮಸ್ತ್ರ್ಯಹೋಽಭಿಹಿತಃ । ಸ ಚ ಪೃಷ್ಠ್ಯಷಡಹಸ್ಯ ಪೂರ್ವೋ ಭಾಗಃ । ಅಥ ತಸ್ಯೋತ್ತರೋ ಭಾಗೋ ನವರಾತ್ರೇ ಮಧ್ಯಮಸ್ತ್ರ್ಯಹೋ ವಕ್ತವ್ಯಃ । ತಸ್ಮಿಂಶ್ಚ ಯತ್ಪ್ರಥಮಮಹಸ್ತನ್ನವರಾತ್ರೇ ಚತುರ್ಥಮಹರ್ಭವತಿ । ತತ್ರ ಶಸ್ತ್ರಕ್ಲೃಪ್ತಿಮುಪರಿಷ್ಟಾದ್ವಿಧಾಸ್ಯತೇ । ಆದೌ ತಾವನ್ನ್ಯೂಂಖೋ ವಕ್ತವ್ಯಸ್ತದರ್ಥಂ ಪ್ರಸ್ತೌತಿ- ಪೂರ್ವೋಕ್ತೇಷು ತ್ರ್ಯಹಃಸು ತ್ರಿವೃತ್ಪಂಚದಶಸಪ್ತದಶಾಖ್ಯಾಃ ಸ್ತೋಮಾ ಆಪ್ಯಂತೇ ಸಮಾಪ್ತಾ ಇತ್ಯರ್ಥಃ । ತಥಾ ಗಾಯತ್ರೀತ್ರಿಷ್ಟುಬ್ಜಗತೀತ್ಯೇತಾನಿ ಚ್ಛಂದಾಂಸ್ಯಾಪ್ಯಂತೇ ಸಮಾಪ್ತಾನಿ । ತತ ಊರ್ಧ್ವಮೇತದೇವ ವಕ್ಷ್ಯಮಾಣಮುಚ್ಛಿಷ್ಯತೇ ಪೂರ್ವಮನುಕ್ತತ್ವಾದುತ್ಕರ್ಷೇಣಾವಶಿಷ್ಯತೇ । ತಸ್ಯೈವಾವಶಿಷ್ಟಸ್ಯ ವಾಗಿತಿ ನಿರ್ದೇಶಃ । ಏವಕಾರಸ್ತು ಪೂರ್ವೋಕ್ತದೇವತಾವ್ಯಾವೃತ್ತ್ಯರ್ಥಃ । ಅಗ್ನಿರ್ವೈ ದೇವತಾ, ಇಂದ್ರೋ ವೈ ದೇವತಾ, ವಿಶ್ವೇ ವೈ ದೇವಾ ದೇವತೇತ್ಯೇವಂ ತಸ್ಯ ತಸ್ಯಾಹ್ನೋ ನಿರ್ವಾಹಕಂ ದೇವತಾತ್ರಯಂ ಪೂರ್ವಮುಕ್ತತ್ವಾನ್ನಾವಶಿಷ್ಟಂ । ವಾಗ್ದೇವತಾ ಪೂರ್ವಮನುಕ್ತಾಽವಶಿಷ್ಟಾ । ತಸ್ಯಾ ವಾಚಕಂ ವಾಗಿತ್ಯೇತಚ್ಛಬ್ದರೂಪಂ ತದೇತದಕ್ಷರಂ ವಕಾರಾದಿವರ್ಣಾತ್ಮಕಂ ಪುನರಪಿ ತ್ರ್ಯಕ್ಷರಂ ತ್ರಿಭಿರಕ್ಷರೈರುಪೇತಂ । ಕಥಮೇತದಿತಿ ತದೇತತ್ಸ್ಪಷ್ಟೀ ಕ್ರಿಯತೇ । ವಾಗಿತ್ಯುಕ್ತೇ ಸತ್ಯೇಕಾಕ್ಷರಂ ಭವತಿ । ವಕಾರಗಕಾರಾಕ್ಷರಾಭ್ಯಾಂ ಯುಕ್ತಸ್ಯಾಕಾರಾಕ್ಷರಸ್ಯೈಕತ್ವಾತ್ । ತದೇವಾಕ್ಷರಮಿತಿ ವಾಗ್ದೇವತಾನಾಮ್ನೋಚ್ಚಾರ್ಯಮಾಣಂ ತ್ರ್ಯಕ್ಷರಂ ಭವತಿ । ಅತೋ ವಾಗ್ದೇವತಾಯಾ ನಾಮನ್ಯೇಕರೂಪತ್ವಂ ತ್ರಿರೂಪತ್ವಂ ಚ ಸಂಪನ್ನಂ ॥

ದ್ವಾದಶಾಹವೆಂಬ ಯಜ್ಞದಲ್ಲಿ ಪ್ರಥಮ, ದಶಮ, ಅಂತಿಮ ದಿನಗಳನ್ನು ಬಿಟ್ಟರೆ ಉಳಿದ ಒಂಭತ್ತು ದಿನಗಳನ್ನು ಮೂರು ಮೂರು ದಿನಗಳಿಗೆ ಒಂದೊಂದು ಗುಂಪನ್ನಾಗಿ (ತ್ರ್ಯಹ) ವಿಂಗಡಿಸಿ ಆದರಂತೆ ಮೊದಲನೇ ಮೂರು ದಿನಗಳ ಗುಂಪನ್ನು ಇದುವರೆಗೂ ವಿವರಿಸಿದ್ದಾಯಿತು. ಇದು ಪೃಷ್ಠ್ಯಷಡಹದ ಪೂರ್ವಭಾಗವು. ಈಗ ಉತ್ತರಭಾಗವನ್ನು ವಿವರಿಸುವರು. ಹಿಂದೆ

ಹೇಳಿದಂತೆ ಒಂಭತ್ತು ದಿನಗಳಲ್ಲಿ ಮೊದಲನೇ ಗುಂಪಾದ ಮೂರು ದಿನಗಳನ್ನು ವಿವರಿಸಿದಬಳಿಕ ಈಗ ಎರಡನೇ ಗುಂಪನ್ನು ನಾಲ್ಕನೆಯ ದಿವಸದ ಕಾರ್ಯಕಲಾಪಗಳನ್ನು ವಿವರಿಸುವರು. ಇಲ್ಲಿ ಶಸ್ತ್ರಮಂತ್ರಗಳ ವಿಧಾನವನ್ನು ಮುಂದೆ ಹೇಳಲಾಗುವುದು. ಮೊದಲು ನ್ಯೂಂಖವೆಂಬ ವಿಷಯವನ್ನು ಪ್ರಸ್ತಾಪಮಾಡುವರು. ಮೊದಲನೇ ಮೂರು ದಿನಗಳಲ್ಲಿ ತ್ರಿವೃತ್ ಪಂಚದಶ, ಸಪ್ತದಶ ಎಂಬ ಸ್ತೋಮಗಳನ್ನು ಹೇಳಿ ಮುಗಿಸಿದ್ದಾಯಿತು. ಹಾಗೆಯೇ ಗಾಯತ್ರೀ, ತ್ರಿಷ್ಟುಪ್, ಜಗತೀ ಎಂಬ ಮೂರು ವಿಧವಾದ ಛಂದಸ್ಸಿನ ವಿಷಯವನ್ನೂ ತಿಳಿಸಿದ್ದಾಯಿತು. ಇನ್ನು ಮೇಲೆ ವಿವರಿಸದೆ ಉಳಿದಿರುವ ವಿಷಯಗಳನ್ನು ವಿಶೇಷ ಕ್ರಮ ದಿಂದ ವಿವರಿಸಲಾಗುವುದು. ಈ ವಿಧವಾಗಿ ವಿವರಿಸುವ ಕ್ರಮಕ್ಕೆ ವಾಕ್ ಎಂದು ಹೆಸರು. **ಅಗ್ನಿರ್ವೈ ದೇವತಾ, ಇಂದ್ರೋ ವೈ ದೇವತಾ, ವಿಶ್ವೇ ವೈ ದೇವಾ ದೇವತಾ** ಎಂದು ಪ್ರಥಮ, ದ್ವಿತೀಯ, ತೃತೀಯ ದಿವಸಗಳಲ್ಲಿ ಕ್ರಮವಾಗಿ ಅಗ್ನಿ, ಇಂದ್ರ, ವಿಶ್ವೇದೇವತೆಗಳು ಒಂದೊಂದು ದಿವಸಕ್ಕೆ ಪ್ರಧಾನ ದೇವತೆಗಳೆಂದು ಇದುವರೆಗೆ ವಿವರಿಸಿದ್ದಾಯಿತು. ಇಲ್ಲಿ ಪ್ರಧಾನದೇವತೆಯೆಂದರೆ ಆಯಾ ದಿನದ ಕಾರ್ಯನಿರ್ವಾಹಕರೆಂದರ್ಥವು. ವಾಗ್ದೇವತೆಯನ್ನು ಹಿಂದೆ ಹೇಳಲಿಲ್ಲವಾದ್ದರಿಂದ ಇನ್ನು ಮುಂದೆ ಹೇಳಬೇಕಾಗಿರುವುದು. ಈ ವಾಗ್ದೇವತೆಯ ಹೆಸರು ವಾಕ್ (ವಾಗ್) ಎಂದು ವ ಎಂಬ ವರ್ಣ (ಅಕ್ಷರ) ದಿಂದ ಕೂಡಿ ಒಂದೇ ಅಕ್ಷರವುಳ್ಳದ್ದಾಗಿರುವುದು. ಆದರೂ ಇದು ಮೂರು ಅಕ್ಷರಗಳಿಂದ ಕೂಡಿರುವುದೆಂದು ಹೇಳಬೇಕಾಗುವುದು. ಹೇಗೆಂದರೆ ವ ಎಂಬುದು ಒಂದು ಅಕ್ಷರ ಆ ಎಂಬುದು ಎರಡನೆಯ ಅಕ್ಷರ ಕ್ (ಗ್) ಎಂಬುದು ಮೂರನೆಯ ಅಕ್ಷರ (ವ+ಆ+ಕ್=ವಾಕ್) ಇವೆಲ್ಲವೂ ಸೇರಿದರೆ ವಾಕ್ ಎಂದು ಮೂರು ಅಕ್ಷರಗಳಿಂದ ಕೂಡಿದ ವಾಗ್ದೇವತೆಯ ಹೆಸರಾಗುವುದು. ಆದ್ದರಿಂದ ಈ ವಾಗ್ದೇವತೆಯ ಹೆಸರು ಒಂದು ಅಕ್ಷರವುಳ್ಳದು ಅಥವಾ ಮೂರು ಅಕ್ಷರಗಳುಳ್ಳದು ಎಂದು ಎರಡು ವಿಧವಾಗಿಯೂ ಹೇಳಬಹುದು.

### ಸ ಏವೈಷ ಉತ್ತರಸ್ತ್ರ್ಯಹೋ ವಾಗೇಕಂ ಗೌರೇಕಂ ದ್ಯೌರೇಕಂ ॥

**ತತ್ರ ರೂಪತ್ರಯಸಂಪತ್ತೌ ಪ್ರಯೋಜನಮಾಹ—ವಾಗ್ದೇವತಾಯಾ ಅಕ್ಷರಶಬ್ದೇನ ವ್ಯವಹಾರೇ ಸತಿ ಯೋಽಯಮಕಾರಾದೀನಾಂ ತ್ರಯಾಣಾಂ ಸಮೂಹಃ ಸ ಏಷ ಏವೋತ್ತರಸ್ತ್ರ್ಯಹಶ್ಚತುರ್ಥಪಂಚಮಷಷ್ಠಾಹರೂಪೋಽಭವತ್ । ಉತ್ತರಸ್ಯಾಹಸ್ತ್ರಯಸ್ಯ ನಿರ್ವಾಹಕಂ ದೇವತಾತ್ರಯಸ್ವರೂಪಂ ಸಂಪನ್ನಮಿತ್ಯರ್ಥಃ । ತತ್ರ ಲೋಕತ್ರಯಪ್ರಸಿದ್ಧಾ ಯಾ ವಾಗ್ದೇವತಾ ತದೇಕಂ ಸ್ವರೂಪಂ ಯಾಚ ಗೌರ್ದೇವತಾ ತದ್ದ್ವಿತೀಯಂ ಸ್ವರೂಪಂ ಯಾಪಿ ದ್ಯೌರ್ದೇವತಾ ತತ್ತೃತೀಯಂ ಸ್ವರೂಪಂ ॥**

ಈ ವಾಗ್ದೇವತೆಯ ಮೂರು ವಿಧವಾದ ರೂಪಗಳ ಪ್ರಯೋಜನವನ್ನು ತಿಳಿಸುವರು. ವಾಗ್ದೇವತೆಯ ಹೆಸರಿನಲ್ಲಿ ಮೂರು ಅಕ್ಷರಗಳಿವೆಯೆಂದು ಹೇಳಲಾಗಿದೆಯಷ್ಟೆ. ಈ ಮೂರು ಅಕ್ಷರಗಳೂ ಮೂರು ಪ್ರತ್ಯೇಕದೇವತೆಗಳಂತೆ ಭಾವಿಸಬೇಕು ಮುಂದಿನ ಮೂರು ದಿನಗಳಲ್ಲಿ ಎಂದರೆ ಯಜ್ಞದ ನಾಲ್ಕು, ಐದು, ಆರನೇ ದಿವಸಗಳಲ್ಲಿ ಈ ಮೂರು ದೇವತೆಗಳು ಕಾರ್ಯ ನಿರ್ವಾಹಕರು. ಇವರು ಯಾರೆಂದರೆ ವಾಗ್ದೇವತಾ ಎಂದು ಪ್ರಸಿದ್ಧವಾಗಿರುವ ದೇವತೆಯೇ ಎಂದರೆ ಆ ಸ್ವರೂಪವೇ ನಾಲ್ಕನೇ ದಿವಸದ ಕಾರ್ಯನಿರ್ವಾಹಕವು; ಗೌಃ ಎಂಬುದು ವಾಗ್ದೇವತೆಯ ದ್ವಿತೀಯ ಸ್ವರೂಪವು. ಇದು ಐದನೆಯ ದಿವಸದ ಕಾರ್ಯ ಕಲಾಪಗಳಿಗೆ ನಿರ್ವಾಹಕವು. ದ್ಯೌಃ ಎಂಬ ದೇವತೆಯು ವಾಗ್ದೇವತೆಯ ಮೂರನೆಯ ಸ್ವರೂಪವು. ಇದು ಆರನೆಯ ದಿವಸದ ಕಾರ್ಯಕಲಾಪಗಳಿಗೆ ನಿರ್ವಾಹಕವು.

### ತತೋ ವೈ ವಾಗೇವ ಚತುರ್ಥಮಹರ್ವಹತಿ

ಏವಂ ಸತಿ ಕಿಂ ಫಲಿತಮಿತ್ಯಾಶಂಕ್ಯ ಫಲಿತಂ ದರ್ಶಯತಿ—ಯಸ್ಮಾದ್ದೇವತಾತ್ರಯಂ ನಿಷ್ಪನ್ನಂ ತತೋ ವೈ ತಸ್ಮಾದೇವ ಕಾರಣಾದ್ವಾಗೇವ ಪ್ರಥಮದೇವತಾ ಮಧ್ಯಮತ್ರ್ಯಹಸ್ಯ ಪ್ರಥಮಂ ನವರಾತ್ರಾಪೇಕ್ಷಯಾ ಚತುರ್ಥಮಹರ್ವಹತಿ ॥

ವಾಗ್ದೇವತೆಯು ದೇವತಾತ್ರಯಸಂಪನ್ನಳಾಗಿರುವಳೆಂದು ಹೇಳಿದೆಯಷ್ಟೆ. ಈ ದೇವತಾತ್ರಯಗಳು ಯಜ್ಞದ ಮಧ್ಯಮತ್ರ್ಯಹದ ಎಂದರೆ ನಾಲ್ಕು, ಐದ, ಆರನೆಯ ದಿವಸಗಳ ಕಾರ್ಯಗಳನ್ನು ನಿರ್ವಹಿಸುವರು. ಇವರುಗಳಲ್ಲಿ ಪ್ರಥಮದೇವತೆಯಾದ ವಾಗ್ದೇವತೆಯು (ಮಧ್ಯಮತ್ರ್ಯಹದ ಪ್ರಥಮ ದಿನವಾದ) ನಾಲ್ಕನೆಯ ದಿವಸದ ಕಾರ್ಯಕಲಾಪಗಳನ್ನು ನಿರ್ವಹಿಸುವಳು.

ತದ್ಯಚ್ಚತುರ್ಥಮಹನ್ನ್ಯೂಂಖಯಂತ್ಯೇತದೇವ ತದಕ್ಷರಮಭ್ಯಾಯಚ್ಛಂತ್ಯೇತದ್ವರ್ಧಯಂತ್ಯೇತತ್ಪ್ರವಿಭಾವಯಿಷಂತಿ ಚತುರ್ಥಾಹ್ನ ಉದ್ಯತ್ಯೈ ॥

ಏತಸ್ಮಿನ್ನಹನಿ ನ್ಯೂಙ್ಖಂ ವಿಧತ್ತೇ—ಯಸ್ಮಾತ್ಕಾರಣಾದ್ವಾಗೇವ ಚತುರ್ಥಸ್ಯಾಹ್ನೋ ನಿರ್ವಾಹಿಕಾ ತಸ್ಮಾತ್ಕಾರಣಾದ್ಯದಿ ಚತುರ್ಥಮಹರೂ (ರು) ಪೇತಾ ನ್ಯೂಙ್ಖಯನ್ತಿ, ಓಂ (ಓ) ಕಾರಸ್ಯ ಸೂತ್ರೋಕ್ತಪ್ರಕಾರೇಣೋಚ್ಚಾರಣವಿಶೇಷಂ ಕುರ್ಯುಸ್ತದಾನೀಮೇತದೇವ ವಾಗಿತ್ಯೇತದಕ್ಷರಂ ದೇವತಾಯಾ ವಾಚಕಮಭಿಲಕ್ಷ್ಯಾಽಽಯಚ್ಛಂತಿ, ಉದ್ಯಮಂ ಕುರ್ವನ್ತಿ ॥ ನ ಕೇವಲಮುದ್ಯಮಃ ಕಿಂ ತ್ವೇತದಕ್ಷರಂ ವರ್ಧಯನ್ತಿ । ವೃದ್ಧಿಪ್ರಕಾರ ಏವ ಪ್ರವಿಭಾವಯಿಷನ್ತೀತ್ಯನೇನ ಸ್ಪಷ್ಟೀಕ್ರಿಯತೇ । ಪ್ರಭುತ್ವಂ ವಿಭುತ್ವಂ ವಾಽಕ್ಷರಸ್ಯ ಕರ್ತುಮಿಚ್ಛನ್ತಿ । ಪ್ರಭುತ್ವಂ ಸಾಮರ್ಥ್ಯಂ ವಿಭುತ್ವಂ ವಿಶಾಲತ್ವಂ । ನ್ಯೂಙ್ಖಸ್ವರೂಪಮಾಶ್ವಲಾಯನೇನ ವರ್ಣಿತಂ—'ಚತುರ್ಥೇಽಹನಿ ಪ್ರಾತರನುವಾಕಪ್ರತಿಪದ್ಯರ್ಧರ್ಚಾದ್ಯೋರ್ನ್ಯೂಙ್ಖೋ ದ್ವಿತೀಯಂ ಸ್ವರಮೋಕಾರಂ ತ್ರಿಮಾತ್ರಮುದಾತ್ತಂ ತ್ರಿಸ್ತಸ್ಯ ತಸ್ಯ ಚೋಪರಿಷ್ಟಾದಪರಿಮಿತಾನ್ಪಂಚ ವಾರ್ಧೌಕಾರಾನನುದಾತ್ತಾನುತ್ತಮಸ್ಯ ತು ತ್ರೀನ್ ಪೂರ್ವಮಕ್ಷರಂ ನಿಹನ್ಯತೇ ನ್ಯೂಙ್ಖ್ಯಮಾನೇ' ಇತಿ । ಅಸ್ಯಾಯಮರ್ಥಃ । ಚತುರ್ಥೇಽಹನಿ ಪ್ರಾಪ್ತೇ ಸತಿ ಪ್ರಾತರನುವಾಕಸ್ಯ ಯೇಯಮೃಕ್ಪ್ರಥಮಾಽಸ್ತಿ ತಸ್ಯಾ ಋಚೋ ಯೌ ದ್ವಾವರ್ಧರ್ಚೌ ತಯೋರರ್ಧರ್ಚಯೋರ್ಯಾವಾದೀ ತಯೋರಾದ್ಯೋರ್ನ್ಯೂಙ್ಖಃ ಕರ್ತವ್ಯಃ । ನಿತರಾಮತ್ಯಂತವಿಷಮಪ್ರಕಾರೇಣೋಙ್ಖನಮುಚ್ಚಾರಣಂ ನ್ಯೂಙ್ಖಃ । ಕಥಮಿತಿ ತದೇವ ಸ್ಪಷ್ಟೀಕ್ರಿಯತೇ । ಆಪೋ ರೇವತೀಃ ಕ್ಷಯಥೇತಿ ಪ್ರಾತರನುವಾಕಸ್ಯ ಪ್ರತಿಪತ್ । ತಸ್ಯಾಃ ಪೂರ್ವಾರ್ಧಸ್ಯಾದೌ ಯೋಽಯಂ ದ್ವಿತೀಯಃ ಸ್ವರ ಓಕಾರಃ ಪಕಾರಾದೂರ್ಧ್ವಭಾವೀ ತಂ ತ್ರಿಮಾತ್ರೋಪೇತಮುದಾತ್ತಸ್ವರಯುಕ್ತಂ ತ್ರಿವಾರಮುಚ್ಚಾರಯೇತ್ ॥ ತ ಏತೇ ತ್ರಯ ಓಕಾರಾಃ ಸಂಪದ್ಯಂತೇ । ತತ್ರೈಕೈಕಸ್ಯೌಕಾರಸ್ಯೋಪರಿ ಪುನರಪ್ಯೋಕಾರಾ ಅರ್ಧಸ್ವರೂಪಾ ಹ್ರಸ್ವಮಾತ್ರಾ ಅಪರಿಮಿತಾಃ ಪಂಚ ವೋಚ್ಚಾರಣೀಯಾಃ । ತೇ ಚಾರ್ಧೌಕಾರಾಃ ಸರ್ವೇಽಪ್ಯನುದಾತ್ತಾಃ ಉತ್ತಮಸ್ಯ ತು ತ್ರಿಮಾತ್ರಸ್ಯೌಕಾರಸ್ಯೋಪರಿ ತ್ರೀನರ್ಧೌಕಾರಾನು-

**ಚ್ಚಾರಯೇತ್ । ತೇಷ್ವರ್ಧೌಕಾರೇಷು ಪ್ರಥಮಮಕ್ಷರಂ ನಿಹನ್ಯಾದತ್ಯಂತಂ ನೀಚಸ್ವರೇಣಾನುದಾತ್ತಂ ಕುರ್ಯಾದಿತಿ । ಏವಂ ಸತ್ಯುದಾತ್ತಾಸ್ತ್ರಿಮಾತ್ರಾಸ್ತ್ರಯ ಓಕಾರಾ ಅರ್ಧೌಕಾರಾಸ್ತ್ರಯೋದಶೇತ್ಯೇವಮೋಕಾರಾಃ ಷೋಡಶ ಸಂಪದ್ಯಂತೇ । ಪ್ರಥಮದ್ವಿತೀಯಯೋಸ್ತ್ರಿಮಾತ್ರಯೋರ್ಮರ್ಧ್ಯೇ ಪಂಚಾನುದಾತ್ತಾ ಅರ್ಧೌಕಾರಾಃ । ದ್ವಿತೀಯತೃತೀಯಯೋಸ್ತ್ರಿಮಾತ್ರಯೋರ್ಮರ್ಧ್ಯೇ ಪಂಚಾನುದಾತ್ತಾ ಅರ್ಧೌಕಾರಾಃ ತೃತೀಯಸ್ಯ ತ್ರಿಮಾತ್ರಸ್ಯೋಪರಿಷ್ಟಾದನುದಾತ್ತಾ ಅರ್ಧೌಕಾರಾಸ್ತ್ರಯಃ । ಸೋಽಯಮುಚ್ಚಾರಣವಿಶೇಷೋ ನ್ಯೂಙ್ಖ ಇತ್ಯುಚ್ಯತೇ । ಸೋಽಯಂ ನ್ಯೂಙ್ಖಶ್ಚತುರ್ಥಸ್ಯಾಹ್ನ ಉದ್ಯತ್ಯೈ, ಉದ್ಯಮನಾಯ ಸರ್ವಸ್ಮಾದುತ್ಕರ್ಷಾಯ ಭವತಿ ॥**

ಈ ದಿವಸದಲ್ಲಿ ನ್ಯೂಂಖದ ವಿಷಯವನ್ನು ತಿಳಿಸುವರು. ಯಜ್ಞದ ನಾಲ್ಕನೇ ದಿನದಲ್ಲಿ ವಾಗ್ದೇವತೆಯೇ ಕಾರ್ಯನಿರ್ವಾಹಕಳಾದ್ದರಿಂದ ಆ ದಿನದ ಸ್ವರೂಪವೆನಿಸಿದ ನ್ಯೂಂಖವೆಂಬ ಮಂತ್ರೋಚ್ಚಾರಣಕ್ರಮವನ್ನು ವಿವರಿಸುವರು. ಸೂತ್ರೋಕ್ತ ಪ್ರಕಾರವಾಗಿ ಓಕಾರದ ಉಚ್ಚಾರಣೆಯನ್ನು ಮಾಡುವಾಗ ವಾಕ್ ಎಂಬ ಅಕ್ಷರವು ವಾಗ್ದೇವತೆಯ ವಾಚಕಪದವೆಂದು ಲಕ್ಷ್ಯದಲ್ಲಿಟ್ಟು ಆದರ ಉಚ್ಚಾರಣೆಗೆ ವಿಶೇಷಗಮನಕೊಡುವರು. ಗಮನಮಾತ್ರವೇ ಅಲ್ಲ. ಈ ಅಕ್ಷರವನ್ನು ವೃದ್ಧಿ (ಹೆಚ್ಚು) ಮಾಡುವರು. ಇದನ್ನು ಸ್ಪಷ್ಟಪಡಿಸುವರು. ಎಂದರೆ ಆ ಅಕ್ಷರದ ಪ್ರಭುತ್ವಂ ಎಂದರೆ ಸಾಮರ್ಥ್ಯವನ್ನೂ, ವಿಭುತ್ವಂ ಎಂದರೆ ವಿಶಾಲತ್ವವನ್ನೂ ವೃದ್ಧಿಪಡಿಸುವರು. ಈ ವಿಷಯದಲ್ಲಿ ಆಶ್ವಲಾಯನ ಮಹರ್ಷಿಯು ಈರೀತಿ ವರ್ಣಿಸಿರುವರು— **ಚತುರ್ಥೇಽಹನಿ ಪ್ರಾತರನುವಾಕಪ್ರತಿಪದ್ಯರ್ಧರ್ಚಾದ್ಯೋರ್ನ್ಯೂಂಖೋ ದ್ವಿತೀಯಂ ಸ್ವರಮೋಕಾರಂ ತ್ರಿಮಾತ್ರಮುದಾತ್ತಂ ತ್ರಿಸ್ತಸ್ಯ ತಸ್ಯ ಚೋಪರಿಷ್ಟಾದಪರಿಮಿತಾನ್ಪಂಚ ವಾಽರ್ಧೌಕಾರಾನನುದಾತ್ತಾನುತ್ತಮಸ್ಯ ತು ತ್ರೀನ್ಪೂರ್ವಮಕ್ಷರಂ ನಿಹನ್ಯತೇ ನ್ಯೂಂಖಮಾನೇ ।** ಎಂದು. ಇದರ ಅರ್ಥವು— ಯಜ್ಞದ ನಾಲ್ಕನೇ ದಿವಸ ಪ್ರಾತರನುವಾಕಮಂತ್ರಗಳನ್ನು ಪಠಿಸುವಾಗ ಮೊದಲನೇ ಋಕ್ಕಿನ ಎರಡು ಅರ್ಧಗಳಿರುವವು. ಆ ಅರ್ಧಋಕ್ಕುಗಳ ಮೊದಲ ಎರಡು ಅಕ್ಷರಗಳನ್ನು ನ್ಯೂಂಖಪ್ರಕಾರವಾಗಿ ಉಚ್ಚರಿಸಬೇಕು. ನ್ಯೂಂಖವೆಂದರೆ— **ನಿತರಾಮತ್ಯಂತವಿಷಮ ಪ್ರಕಾರೇಣೋಂಖನಮುಚ್ಚಾರಣಂ ನ್ಯೂಂಖಃ** ಅತ್ಯಂತ ವಿಷಮಪ್ರಕಾರವಾಗಿ ಉಚ್ಚರಿಸುವುದಕ್ಕೆ ನ್ಯೂಂಖವೆಂದು ಹೆಸರು. ಹೇಗೆಂದರೆ— **ಆಪೋ ರೇವತೀಃ ಕ್ಷಯಥ** ಎಂಬುವುದು ಪ್ರಾತರನುವಾಕಮಂತ್ರಗಳಲ್ಲಿ ಮೊದಲನೇ ಮಂತ್ರದ ಪ್ರಾರಂಭದ ಋಕ್ಕು. ಇದರ ಪೂರ್ವಾರ್ಧದ ಪ್ರಾರಂಭದಲ್ಲಿ **ಆಪೋ** ಎಂಬ ಶಬ್ದವಿರುವುದು. ಈ ಶಬ್ದದಲ್ಲಿ ಎರಡನೆಯ ಅಕ್ಷರವಾದ ಪಕಾರದನಂತರ ಓಕಾರವಿರುವುದು. ಈ ಓಕಾರವನ್ನು ಉದಾತ್ತಸ್ವರಯುಕ್ತವಾಗಿ ತ್ರಿಮಾತ್ರ (ಮೂರು ಮಾತ್ರೆಗಳ ಕಾಲ) ಕಾಲದವರೆಗೆ ಮೂರಾವರ್ತಿ ಉಚ್ಚರಿಸಬೇಕು. ಹೀಗೆ ಉಚ್ಚರಿಸುವುದರಿಂದ ಮೂರು ಓಕಾರಗಳನ್ನು ಉಚ್ಚರಿಸಿದಂತಾಗುವುದು. ಇಲ್ಲಿ ಪ್ರತಿಯೊಂದು ಓಕಾರದ ಮುಂದೆ ಮತ್ತೊಂದು ಓಕಾರ (ಹ್ರಸ್ವಮಾತ) ವನ್ನು ಐದಾವರ್ತಿ ಉಚ್ಚರಿಸಬೇಕು. ಈ (ಹ್ರಸ್ವ) ಅರ್ಧೌಕಾರಗಳು ಅನುದಾತ್ತಸ್ವರಯುಕ್ತವಾಗಿರುವವು. ತ್ರಿಮಾತ್ರಯುಕ್ತವಾದ ಕೊನೆಯ ಓಕಾರದ ಮುಂದೆ ಮೂರು ಅರ್ಧ ಅಥವಾ ಹ್ರಸ್ವ ಓಕಾರಗಳನ್ನು ಉಚ್ಚರಿಸಬೇಕು. ಈ ಮೂರು ಅರ್ಧ (ಹ್ರಸ್ವ) ಓಕಾರಗಳನ್ನು ಉಚ್ಚರಿಸುವಾಗ ಮೊದಲ ಓಕಾರವನ್ನು ಬಹಳ ಮೆಲ್ಲಗೆ ಎಂದರೆ ಮೆತ್ತನೆಯ ಧ್ವನಿಯಲ್ಲಿ ಉಚ್ಚರಿಸಬೇಕು. ಹೀಗೆ ಉಚ್ಚರಿಸಿದಲ್ಲಿ ಉದಾತ್ತಗಳು (ತ್ರಿಮಾತ್ರಸಹಿತವಾಗಿ) ಮೂರು ಓಕಾರಗಳು ಮೂರು, ಹದಿಮೂರು ಅರ್ಧೌಕಾರಗಳು (ಹ್ರಸ್ವ) ಇವೆಲ್ಲವೂ ಸೇರಿ ಹದಿನಾರು ಓಕಾರಗಳಾಗುವವು. ತ್ರಿಮಾತ್ರೆಗಳನ್ನುಚ್ಚರಿಸುವಾಗ ಪ್ರಥಮ ದ್ವಿತೀಯಗಳ ಮಧ್ಯದಲ್ಲಿ ಅರ್ಧೌಕಾರ (ಎಂದರೆ ಹ್ರಸ್ವಯುಕ್ತವಾದ ಓಕಾರ) ಐದು ಅನುದಾತ್ತಯುಕ್ತವಾದ ಓಕಾರಗಳನ್ನು ಪಠಿಸಬೇಕು. ಅದರಂತೆಯೇ ದ್ವಿತೀಯ ತೃತೀಯಗಳ ಮಧ್ಯದಲ್ಲಿ ಅನುದಾತ್ತಸಹಿತ

ವಾದ ಐದು ಅರ್ಧೌಕಾರಗಳನ್ನುಚ್ಚರಿಸಬೇಕು. ಮೂರನೆಯ ತ್ರಿಮಾತ್ರೋಚ್ಚಾರಣಾನಂತರ ಅನುದಾತ್ತಸಹಿತವಾದ ಮೂರು ಅರ್ಧೌಕಾರಗಳನ್ನುಚ್ಚರಿಸಬೇಕು. ಈರೀತಿ ಉಚ್ಚಾರಣೆಮಾಡುವುದಕ್ಕೆ ನ್ಯೂಂಖವೆಂದು ಹೆಸರು. ನಾಲ್ಕನೆಯ ದಿವಸ ಹೀಗೆ ನ್ಯೂಂಖವನ್ನು ಉಚ್ಚರಿಸಬೇಕು. ಹೀಗೆ ಮಾಡುವುದರಿಂದ ಸಮಸ್ತವಿಷಯದಲ್ಲಿಯೂ ಉತ್ಕರ್ಷವುಂಟಾಗುವುದು.

ಅನ್ನಂ ವೈ ನ್ಯೂಂಖ್ಯೋ ಯದೇಲ(ಳ)ವಾ ಅಭಿಗೇಷ್ಣಾಶ್ಚರಂತ್ಯಥಾ-
ನ್ನಾದ್ಯಂ ಪ್ರಜಾಯತೇ ತದ್ಯಚ್ಚತುರ್ಥಮಹನ್ನ್ಯೂಂಖಯಂತ್ಯನ್ನ-
ಮೇವ ತತ್ಪ್ರಜನಯಂತ್ಯನ್ನಾದ್ಯಸ್ಯ ಪ್ರಜಾತ್ಯೈ ತಸ್ಮಾಚ್ಚತುರ್ಥಮ-
ಹರ್ಜಾತವದ್ಭವತಿ ॥

ತಮಿದಂ ನ್ಯೂಙ್ಖಂ ಪ್ರಶಂಸತಿ ಯೋಽಯಮುಕ್ತೋ ನ್ಯೂಙ್ಖೋಽಸ್ತಿ ತದೇತದನ್ನಂ ವಾ ಅನ್ನಸಾಧನತ್ವಾದನ್ನಸ್ವರೂಪಮೇವ । ಕಥಮೇತದಿತಿ ತದುಚ್ಯತೇ । ಇಳಾಶಬ್ದೋಽನ್ನ-ವಾಚೀ । ತದ್ಯೇಷಾಂ ಕರ್ಷಕಾಣಾಮಸ್ತಿ ತೇ ಕರ್ಷಕಾ ಈಳವಾಃ । ತೇ ಚ ವರ್ಷಂತಂ ಪರ್ಜ-ನ್ಯಮಭಿಲಕ್ಷ್ಯ ಗೇಷ್ಣಾ ಹರ್ಷೇಣ ಗಾಯಂತೋ ಯದಾ ಚರಂತಿ, ಅಥ ತದಾನೀಮನ್ನಾದ್ಯಂ ಪ್ರಜಾಯತೇ । ಸ್ವಕಾಲವೃಷ್ಟಿಸಮೃದ್ಧಿಂ ಚ ದೃಷ್ಟ್ವಾ ಕರ್ಷಕಾ ಹೃಷ್ಯಂತಿ । ಹೃಷ್ಟಾಶ್ಚ ಗಾಯಂತೀತಿ ಯದಸ್ತಿ ತತ್ಸದೃಶಮಿದಂ ಚತುರ್ಥೇಽಹನಿ ನ್ಯೂಙ್ಖರೂಪಮುಚ್ಚಾರಣಂ । ಅತೋಽನೇನೋಚ್ಚಾರಣೇನಾನ್ನಮುತ್ಪಾದಯನ್ತಿ । ತದೇವಮನ್ನಾದ್ಯಸ್ಯ ಪ್ರಜಾತ್ಯಾ ಉತ್ಪಾ-ದನಾರ್ಥಂ ಸಂಪದ್ಯತೇ । ತಸ್ಮಾದನ್ನಪ್ರಜಾತಿಯುಕ್ತತ್ವಾದೇವ ಚತುರ್ಥಮಹರ್ಜಾತವದ್ಭವತಿ । ಜಾತವತ್ತ್ವಮೇತಸ್ಮಿನ್ನಹನಿ ಮಂತ್ರವತ್ಸೇನೋಪರಿಷ್ಟಾದ್ವಕ್ಷ್ಯತೇ ॥

ಈ ನ್ಯೂಂಖವನ್ನು ಪ್ರಶಂಸೆಮಾಡುವರು. ಇದುವರೆಗೂ ಹೇಳಿದ ಈ ನ್ಯೂಂಖವು ಅನ್ನಾದ್ಯಾಹಾರಗಳಿಗೆ ಸಾಧನವಾದ್ದರಿಂದ ಇದು ಅನ್ನಸ್ವರೂಪವೇ ಆಗಿರುವುದು. ಹೇಗೆಂದರೆ, ಇಳಾಶಬ್ದವು ಅನ್ನವಾಚಿ ಎಂದರೆ ಅನ್ನವೆಂಬ ಅರ್ಥವಿರುವುದು. ಈ ವಿಧವಾದ ಅನ್ನಾದ್ಯಾಹಾರವು ಯಾವ ಜನರಲ್ಲಿರುವುದೋ ಅವರಿಗೆ ಈಳವಾಃ ಅಥವಾ ಕರ್ಷಕಾಃ ಕೃಷಿಕರು ವ್ಯವಸಾಯ ಮಾಡುವವರು ಎಂದು ಹೆಸರು. ಈ ಕೃಷಿಕರು ಅಥವಾ ವ್ಯವಸಾಯಮಾಡುವವರು ಮಳೆ ಹುಯ್ಯುವುದನ್ನೇ ಕಾದುಕೊಂಡಿದ್ದು ಮಳೆ ಬಂದಮೇಲೆ ಸಂತೋಷದಿಂದ ಗಾನಮಾಡುತ್ತಾ ಕೃಷಿಕರ್ಮವನ್ನು ಮಾಡುವುದರಿಂದ ಧಾನ್ಯಾದಿಗಳು ಉತ್ಪನ್ನವಾಗಿ ಸರ್ವರಿಗೂ ಅನ್ನಾದ್ಯಾಹಾರಗಳು ಲಭಿಸುವವು. ಸಕಾಲಕ್ಕೆ ಮಳೆಬರುವುದನ್ನು ನೋಡಿ ಕೃಷಿಕರು ಸಂತೋಷಪಡುವರು. ಈ ಕೃಷಿಕರು ಸಂತೋಷದಿಂದ ಯಾವರೀತಿ ಹಾಡುತ್ತಾ ಹರ್ಷವನ್ನು ವ್ಯಕ್ತಪಡಿಸುವರೋ ಅದರಂತೆ ಯಜ್ಞದ ನಾಲ್ಕನೇ ದಿವಸದಲ್ಲಿ ಉಚ್ಚರಿಸುವ ನ್ಯೂಂಖವೂ ಇರುವುದು. ಆದ್ದರಿಂದ ಈರೀತಿ ನ್ಯೂಂಖವನ್ನು ಉಚ್ಚರಿಸುವುದರಿಂದ ಅನ್ನಾದ್ಯಾಹಾರಗಳು ಉತ್ಪನ್ನವಾಗುವವು ಎಂದರೆ ಲಭಿಸುವವು. ಈ ಅನ್ನಾದ್ಯಾಹಾರಗಳು ಪ್ರಜಾಭಿವೃದ್ಧಿಗೆ ಕಾರಣವಾಗಿರುವವು. ಈ ಕಾರಣದಿಂದ ಅನ್ನಾದ್ಯಾಹಾರಗಳು ಮತ್ತು ಪ್ರಜಾಸಂತತಿಯೂ ಲಭಿಸುವುದರಿಂದ ಯಜ್ಞದ ಈ ನಾಲ್ಕನೇ ದಿನವು ಹೊಸದಾಗಿ ಹುಟ್ಟಿದಂತೆ ಆಗುವುದು. ಹೀಗೆ ನೂತನವಾಗಿ ಉತ್ಪನ್ನವಾಗುವ ನಾಲ್ಕನೇ ದಿನದಲ್ಲಿ ಪಠಿಸಬೇಕಾದ ಮಂತ್ರಗಳನ್ನು ಮುಂದೆ ಹೇಳಲಾಗುವುದು.

**ಚತುರಕ್ಷರೇಣ ನ್ಯೂಂಖಯೇದಿತ್ಯಾಹುಶ್ಚತುಷ್ಪಾದಾ ವೈ ಪಶವಃ ಪಶೂ-ನಾಮವರುದ್ಧ್ಯೈ ॥**

**ನ್ಯೂಙ್ಖಸ್ಯ ಮಂತ್ರಮಧ್ಯೇ ಸ್ಥಾನವಿಶೇಷಂ ವಿಧತ್ತೇ—ಮಂತ್ರೇ ಯೋಽಯಮಾದೌ ಚತುರಕ್ಷರೋ ಭಾಗಸ್ತೇನ ನ್ಯೂಙ್ಖಯೇಚ್ಚತ್ವಾರ್ಯಕ್ಷರಾಣ್ಯುಚ್ಚಾರ್ಯ ತದಂತೇ ಯಥೋ-ಕ್ತಂ ನ್ಯೂಙ್ಖಂ ಪ್ರಯುಂಜ್ಯಾದಿತಿ ಕೇಚಿದ್ಯಾಜ್ಞಿಕಾ ಆಹುಃ । ಚತುಃಸಂಖ್ಯಯಾ ಪಾದಚ-ತುಷ್ಟಯೋಪೇತಾನಾಂ ಪಶೂನಾಂ ಪ್ರಾಪ್ತಿರ್ಭವತೀತಿ ತದಭಿಪ್ರಾಯಃ ॥**

ಮಂತ್ರಗಳಲ್ಲಿ ನ್ಯೂಂಖಕ್ಕಿರುವ ಸ್ಥಾನವನ್ನು ತಿಳಿಸುವರು. ಮೊದಲನೇ ಮಂತ್ರವನ್ನು ಪಠಿಸುವಾಗ ಪ್ರಾರಂಭದಲ್ಲಿರುವ ನಾಲ್ಕು ಅಕ್ಷರಗಳನ್ನು ನ್ಯೂಂಖಕ್ರಮದಲ್ಲಿ ಉಚ್ಚರಿಸಿ ಅನಂತರ ಯಥೋಕ್ತವಾದ ನ್ಯೂಂಖವನ್ನು ಉಚ್ಚರಿಸಬೇಕೆಂದು ಕೆಲವು ಯಾಜ್ಞಿಕರು ಹೇಳುವರು. ಇಲ್ಲಿ ನಾಲ್ಕು ಹೇಳಿರುವುದರಿಂದ ಪಠಿಸಿದ ಯಜಮಾನನಿಗೆ ನಾಲ್ಕು ಪಾದಗಳುಳ್ಳ ಪಶುಸಂಪತ್ತು ಲಭಿಸುವುದೆಂದಭಿಪ್ರಾಯವು.

**ತ್ರ್ಯಕ್ಷರೇಣ ನ್ಯೂಂಖಯೇದಿತ್ಯಾಹುಸ್ತ್ರಯೋ ವಾ ಇಮೇ ತ್ರಿವೃತೋ ಲೋಕಾ ಏಷಾಮೇವ ಲೋಕಾನಾಮಭಿಜಿತ್ಯೈ ॥**

**ಪಕ್ಷಾಂತರಂ ವಿಧತ್ತೇ—ಪೂರ್ವವದ್ವ್ಯಾಖ್ಯೇಯಂ ॥**

ಕೆಲವರು ಮೂರು ಅಕ್ಷರಗಳಿಗೆ ನ್ಯೂಂಖವನ್ನುಚ್ಚರಿಸಿ ಮಂತ್ರಗಳನ್ನು ಪಠಿಸಬೇಕೆಂದು ಹೇಳುವರು. ಈ ಮೂರು ಅಕ್ಷರಗಳು ಪೃಥಿವ್ಯಂತರಿಕ್ಷಸ್ವರ್ಗಗಳೆಂಬ ಮೂರು ಲೋಕಗಳ ಸಂಕೇತವು. ಆದ್ದರಿಂದ ಮೂರು ಅಕ್ಷರಗಳನ್ನು ಪಯೋಗಿಸಿ ನ್ಯೂಂಖವನ್ನುಚ್ಚರಿಸುವ ಪುರುಷನು ಪೃಥಿವ್ಯಾದಿ ಲೋಕತ್ರಯಗಳನ್ನು ಪಡೆದು ಸುಖಿಸುವನು.

**ಏಕಾಕ್ಷರೇಣ ನ್ಯೂಂಖಯೇದಿತಿ ಹ ಸ್ಮಾಽಽಹ ಲಾಂಗಲಾಯನೋ ಬ್ರಹ್ಮಾ ಮೌದ್ಗಲ್ಯ ಏಕಾಕ್ಷರಾ ವೈ ವಾಗೇಷ ವಾವ ಸಂಪ್ರತಿ ನ್ಯೂಂಖಂ ನ್ಯೂಂಖಯತಿ ಯ ಏಕಾಕ್ಷರೇಣ ನ್ಯೂಂಖಯತೀತಿ**

**ಪಕ್ಷದ್ವಯಮುಕ್ತ್ವಾ ತೃತೀಯಪಕ್ಷಂ, ವಿಧತ್ತೇ—ಲಾಂಗಲಾಖ್ಯಸ್ಯ ಮಹರ್ಷೇಃ ಪೌತ್ರೋ ಲಾಂಗಲಾಯನಃ । ಮುದ್ಗಲಾಖ್ಯಸ್ಯ ಪುತ್ರೋ ಮೌದ್ಗಲ್ಯಃ ॥ ಸ ಚ ಬ್ರಹ್ಮೇತ್ಯೇತ-ನ್ನಾಮಕೋ ಬ್ರಾಹ್ಮಣಃ । ಸ ಹ್ಯೇಕಮಕ್ಷರಮುಚ್ಚಾರಯೇನ್ನ್ಯೂಙ್ಖಯೇದಿತಿ ವಕ್ತಿ । ತತ್ರೇಯ-ಮುಪಪತ್ತಿಃ । ಯೇಯಂ ವಾಗಹರ್ದೇವತೇತಿ ಪೂರ್ವಮುಕ್ತಾ ಸೇಯಮೇಕಾಕ್ಷರಾ । ತಥಾ ಸತಿ ಯಃ ಪುಮಾನೇಕಾಕ್ಷರೇಣ ನ್ಯೂಙ್ಖಯತ್ಯೇಷ ಏವ ಸಂಪ್ರತಿ ಸಮ್ಯಙ್ನ್ಯೂಙ್ಖಮನುತಿ-ಷ್ಠತ್ಯಕ್ಷರಸಂಖ್ಯಾಯಾ ದೇವತಾನುಸಾರಿತ್ವಾದಿತಿ ತಸ್ಯ ಮಹರ್ಷೇರಭಿಪ್ರಾಯಃ ॥**

ನ್ಯೂಂಖವನ್ನು ಉಚ್ಚರಿಸುವ ವಿಧಾನದಲ್ಲಿ ಎರಡು ಕ್ರಮಗಳನ್ನು ಹಿಂದೆ ತಿಳಿಸಿದ್ದಾಯಿತು. ಈಗ ಮೂರನೆಯ ಕ್ರಮವನ್ನು ತಿಳಿಸುವರು. ಲಾಂಗಲ ಎಂಬ ಮಹರ್ಷಿಗೆ ಒಬ್ಬ ಪೌತ್ರನಿದ್ದನು. ಅವನಿಗೆ ಲಾಂಗನಾಯನ ಎಂದು

ಹೆಸರು. ಮುದ್ಗಲ ಎಂಬ ಋಷಿಯ ಪುತ್ರನಿಗೆ ಮೌದ್ಗಲನೆಂಬ ಹೆಸರು. ಬ್ರಹ್ಮನೆಂಬುವನು ಒಬ್ಬ ಬ್ರಾಹ್ಮಣನು ಈ ಋಷಿಯು ಒಂದೇ ಅಕ್ಷರವನ್ನು ಮಾತ್ರ ಉಚ್ಚರಿಸಿ ಅದನ್ನು ನ್ಯೂಂಖಕ್ರಮದಿಂದ ಉಚ್ಚರಿಸಬೇಕೆಂದು ಹೇಳಿರುವನು. ಅದಕ್ಕೆ ಕಾರಣವು ಈರೀತಿ ಇರುವುದು. ಹಿಂದೆ ವಾಗ್ದೇವತೆಯೆಂದು ಹೇಳಿದೆಯಷ್ಟೆ. ಈ ವಾಗ್ದೇವತೆಗೆ ಒಂದೇ ಅಕ್ಷರವಿರುವುದು (ವಾಕ್). ಆದ್ದರಿಂದ ಈ ದೇವತೆಯ ಹೆಸರಿನ ಅಕ್ಷರಸಂಖ್ಯಾನುಸಾರವಾಗಿ (ಒಂದೇ ಅಕ್ಷರ) ಒಂದೇ ಅಕ್ಷರಕ್ಕೆ ಮಾತ್ರ ನ್ಯೂಂಖ ಕ್ರಮವನ್ನು ಉಚ್ಚರಿಸಿ ಮುಂದಿನ ಮಂತ್ರಗಳನ್ನು ಹೇಳಬೇಕೆಂದು ಈ ಋಷಿಯ ಅಭಿಮತವು.

**ದ್ವ್ಯಕ್ಷರೇಣೈವ ನ್ಯೂಂಖಯೇತ್ಪ್ರತಿಷ್ಠಾಯಾ ಏವ ದ್ವಿಪ್ರತಿಷ್ಠೋ ವೈ ಪುರುಷಶ್ಚತುಷ್ಪಾದಾಃ ಪಶವೋ ಯಜಮಾನಮೇವ ತದ್ದ್ವಿಪ್ರತಿಷ್ಠಂ ಚತುಷ್ಪಾತ್ಸು ಪಶುಷು ಪ್ರತಿಷ್ಠಾಪಯತಿ ತಸ್ಮಾದ್ದ್ವ್ಯಕ್ಷರೇಣೈವ ನ್ಯೂಂಖಯೇತ್ ॥**

ತದೇತತ್ಪಕ್ಷತ್ರಯಮಂಗೀಕೃತ್ಯ ಸ್ವಾಭಿಪ್ರೇತಪಕ್ಷಂ ವಿಧತ್ತೇ—ಏವಕಾರಃ ಪೂರ್ವೋಕ್ತಪಕ್ಷತ್ರಯ ವ್ಯಾವೃತ್ತ್ಯರ್ಥಃ । ಪ್ರತಿಷ್ಠಾಯಾ ಏವ ಯಜಮಾನಸ್ಯ ಪ್ರತಿಷ್ಠಾಯಾ ಏವ ಹಿ ದ್ವಿಸಂಖ್ಯಾ । ದ್ವಾಭ್ಯಾಂ ಪದಾಭ್ಯಾಮವಸ್ಥಿತತ್ವಾತ್ಪುರುಷೋ ದ್ವಿಪ್ರತಿಷ್ಠಃ ॥ ಸ್ಪಷ್ಟಮನ್ಯತ್ ॥

ಮೇಲೆ ಹೇಳಿದ ಮೂರು ಪಕ್ಷಗಳನ್ನೂ ಅಂಗೀಕರಿಸಿ ಈಗ ತಮ್ಮ ಸ್ವಂತ ಅಭಿಪ್ರಾಯದಿಂದ ಕೂಡಿದ ಪಕ್ಷವನ್ನೂ ತಿಳಿಸುವರು. ಪುರುಷನಿಗೆ ಎರಡು ಪಾದ (ಕಾಲು) ಗಳಿರುವವು. ಪಶುಗಳಿಗೆ ನಾಲ್ಕು ಕಾಲುಗಳಿರುವವು. ಯಾವ ಪುರುಷನು ಎರಡು ಅಕ್ಷರಗಳಿಗೆ ನ್ಯೂಂಖವನ್ನುಚ್ಚರಿಸಿ ಮಂತ್ರಪಠನ ಮಾಡುವನೋ ಆ ಪುರುಷನು ಅಥವಾ ಯಜಮಾನನು ಪಶುಗಳಲ್ಲಿ ಸ್ಥಿರವಾಗಿ ನೆಲೆಸಿರುವನು ಎಂದರೆ ಆ ಯಜಮಾನನಿಗೆ ಪಶುಸಮೃದ್ಧಿಯುಂಟಾಗುವುದು. ಆದ್ದರಿಂದ ಎರಡು ಅಕ್ಷರಗಳಿಂದ ನ್ಯೂಂಖವನ್ನು ಉಚ್ಚರಿಸಬೇಕು.

**ಮುಖತಃ ಪ್ರಾತರನುವಾಕೇ ನ್ಯೂಂಖಯತಿ ಮುಖತೋ ವೈ ಪ್ರಜಾ ಅನ್ನಮದಂತಿ ಮುಖತ ಏವ ತದನ್ನಾದ್ಯಸ್ಯ ಯಜಮಾನಂ ದಧಾತಿ ॥**

ಪ್ರಾತರನುವಾಕೇ ವಿಶೇಷೇಣ ಸ್ಥಾನಂ ವಿಧತ್ತೇ—ಪ್ರಾತರನುವಾಕೇ ಮುಖತೋಽರ್ಧರ್ಚಸ್ಯಾಽದಾ ದ್ವಿತೀಯಸ್ಮಿನ್ನಕ್ಷರೇ ನ್ಯೂಙ್ಖಯೇತ್ । ಪ್ರಜಾನಾಂ ಸರ್ವಾಸಾಂ ಮುಖೇನೈವಾನ್ನಾದನಾತ್ । ತಥಾ ಸತಿ ಯಜಮಾನಮನ್ನಾದ್ಯಸ್ಯ ಮುಖತ ಏವ ಸಮೀಪ ಏವ ಸ್ಥಾಪಯತಿ ॥

ಪ್ರಾತರನುವಾಕಮಂತ್ರಗಳಲ್ಲಿ ಈ ನ್ಯೂಂಖದ ಸ್ಥಾನವನ್ನು ವಿವರಿಸುವರು. ಪ್ರಾತರನುವಾಕದಲ್ಲಿ ಪ್ರಾರಂಭದ ಮಂತ್ರದಲ್ಲಿಯೇ (ಆಪೋ ರೇವತೀಃ) ಮೊದಲನೇ ಋಕ್ಕಿನ ಪೂರ್ವಾರ್ಧದಲ್ಲಿ ಎರಡನೇ ಅಕ್ಷರಕ್ಕೆ (ಪೋ) ನ್ಯೂಂಖವನ್ನು ಸೇರಿಸಿ ಉಚ್ಚರಿಸಬೇಕು. ಪ್ರಾರಂಭವೆಂದರೆ ಮುಖಭಾಗವು. ಸಮಸ್ತರೂ ಮುಖದಿಂದಲೆ (ಬಾಯಿಂದಲೇ) ಅನ್ನವನ್ನು ತಿನ್ನುವರು. ಆದ್ದರಿಂದ ಈ ನ್ಯೂಂಖದ ಉಚ್ಚಾರವು ಯಜಮಾನನಿಗೆ ಅನ್ನವನ್ನು ಅವನ ಮುಖದ ಸಮೀಪದಲ್ಲಿಯೇ ಒದಗಿಸುವುದು.

**ಮಧ್ಯತ ಆಜ್ಯೇ ನ್ಯೂಂಖಯತಿ ಮಧ್ಯತೋ ವೈ ಪ್ರಜಾ ಅನ್ನಂ ಧಿನೋತಿ ಮಧ್ಯತ ಏವ ತದನ್ನಾದ್ಯಸ್ಯ ಯಜಮಾನಂ ದಧಾತಿ ॥**

ಆಜ್ಯಶಸ್ತ್ರೇ ಸ್ಥಾನವಿಶೇಷಂ ವಿಧತ್ತೇ—ಮಧ್ಯತಸ್ತೃತೀಯಪಾದ ಇತ್ಯರ್ಥಃ । ತಥಾ ಚಾಽಶ್ವಲಾಯನ ಆಹ—ಅಗ್ನಿಂ ನ ಸ್ವವೃಕ್ತಿಭಿರಿತ್ಯಾಜ್ಯಂ ತಸ್ಯೋತ್ತಮಾವರ್ಜಂ ತೃತೀಯೇಷು ಪಾದೇಷು ನ್ಯೂಙ್ಖಃ' ಇತಿ । ಅನ್ನಂ ಹಿ ಮಧ್ಯಭಾಗೇ ಧೃತಂ । ತತ್ರ(ಚ್ಚ) ಪ್ರಜಾಂ ಧಿನೋತಿ ಪ್ರೀಣಯತಿ ತತಸ್ತತ್ಪಾಠೇನಾನ್ನಾದ್ಯಸ್ಯ ಮಧ್ಯತೋ ಧಾರಣೇ ಯಜಮಾನಮವಸ್ಥಾಪಯತಿ ॥

ಆಜ್ಯಶಸ್ತ್ರವನ್ನು ವಿವರಿಸುವರು. ಆಜ್ಯಶಸ್ತ್ರವನ್ನು ಪಠಿಸುವಾಗ ಈ ನ್ಯೂಂಖವನ್ನು ಮಧ್ಯದಲ್ಲಿ ಎಂದರೆ ಮೂರನೇ ಪಾದದಲ್ಲಿ ಸೇರಿಸಿ ಉಚ್ಚರಿಸುವರು. ಈ ವಿಷಯದಲ್ಲಿ ಆಶ್ವಲಾಯನರು— **ಅಽಗ್ನಿಂ ನ ಸ್ವವೃಕ್ತಿಭಿರಿತ್ಯಾಜ್ಯಂ ತಸ್ಯೋತ್ತ-ಮಾವರ್ಜಂ ತೃತೀಯೇಷು ಪಾದೇಷು ನ್ಯೂಂಖಃ ।** ಎಂದು ಹೇಳಿರುವರು. ತಿಂದ ಅನ್ನವು ಪುರುಷನ ಮಧ್ಯ ಭಾಗದಲ್ಲಿ (ಉದರ) ಸೇರುವುದು ಮತ್ತು ಅನ್ನವು ಸಮಸ್ತರನ್ನೂ ತೃಪ್ತಿಪಡಿಸುವುದು. ಆದ್ದರಿಂದ ಎಂದರೆ ಮಧ್ಯಭಾಗವಾದ ತೃತೀಯಪಾದದಲ್ಲಿ ನ್ಯೂಂಖವನ್ನು ಉಚ್ಚರಿಸುವುದರಿಂದ ಯಜಮಾನನಿಗೆ ಅನ್ನಾದ್ಯಾಹಾರವು ಲಭಿಸುವುದು.

**ಮುಖತೋ ಮಧ್ಯಂದಿನೇ ನ್ಯೂಂಖಯತಿ ಮುಖತೋ ವೈ ಪ್ರಜಾ ಅನ್ನ-ಮದಂತಿ ಮುಖತ ಏವ ತದನ್ನಾದ್ಯಸ್ಯ ಯಜಮಾನಂ ದಧಾತಿ ॥**

ಮಾಧ್ಯಂದಿನೇ ಸವನೇ ಸ್ಥಾನವಿಶೇಷಂ ವಿಧತ್ತೇ—ಮುಖತೋಽರ್ಧರ್ಚಾದೌ । ತಥಾ ಚಾಽಶ್ವಲಾಯನೋ ಮರುತ್ವತೀಯಂ ನಿಷ್ಕೇವಲ್ಯಂ ಚ ನಿರೂಪ್ಯ ಪಶ್ಚಾದಿದಮಾಹ—ಶ್ರುಧೀ-ಹವೀಯಸ್ಯ ತು ತೃಚ ಆದ್ಯೇಽರ್ಧರ್ಚಾದಿಷು ನ್ಯೂಙ್ಖ ಇತಿ ॥

ಮಾಧ್ಯಂದಿನಸವನದಲ್ಲಿ ಈ ನ್ಯೂಂಖದ ಸ್ಥಾನವನ್ನು ತಿಳಿಸುವರು. ಇಲ್ಲಿ ಮುಖತಃ ಎಂದರೆ ಪ್ರಾರಂಭದ ಋಕ್ಕಿನ ಪೂರ್ವಾರ್ಧದ ಮೊದಲಿನಲ್ಲಿ ಎಂದರ್ಥವು. ಆಶ್ವಲಾಯನರು ಮರುತ್ವತೀಯ ಮತ್ತು ನಿಷ್ಕೇವಲ್ಯಶಸ್ತ್ರಗಳನ್ನು ವಿವರಿಸಿ ಅನಂತರ—**ಶ್ರುಧೀಹವೀಯಸ್ಯ ತು ತೃಚ ಆದ್ಯೇಽರ್ಧರ್ಚಾದಿಷು ನ್ಯೂಂಖಃ** ಎಂದು ಹೇಳಿರುವರು. ಎಂದರೆ ಶ್ರುಧೀಹವ ಎಂಬ ತೃಚದ ಪ್ರಾರಂಬ ಋಕ್ಕಿನ ಪೂರ್ವಾರ್ಧದಲ್ಲಿ ಮೊದಲು ಈ ನ್ಯೂಂಖವನ್ನು ಸೇರಿಸಿ ಉಚ್ಚರಿಸಬೇಕು ಎಂದು. ಆದ್ದರಿಂದ ಮಾಧ್ಯಂದಿನಸವನದಲ್ಲಿ ಶಸ್ತ್ರಮಂತ್ರದ ಪ್ರಾರಂಭದಲ್ಲಿಯೇ ಮೊದಲ ಋಕ್ಕಿನ ಪೂರ್ವಾರ್ಧದ ಮೊದಲಿನಲ್ಲಿ ಈ ನ್ಯೂಂಖವನ್ನು ಸೇರಿಸಿ ಉಚ್ಚರಿಸಬೇಕು. ಏಕೆಂದರೆ ಜನರು ತಮ್ಮ ಮುಖದಿಂದಲೇ (ಬಾಯಿಂದಲೇ) ಅನ್ನಾದ್ಯಾಹಾರವನು ತಿನ್ನುವರು. ಆದ್ದರಿಂದ ಮಂತ್ರದ ಮೊದಲಿನಲ್ಲಿಯೇ ನ್ಯೂಂಖವನ್ನು ಸೇರಿಸಿ ಉಚ್ಚರಿಸುವ ಯಜಮಾನನು ಅನ್ನಾದ್ಯಾಹಾರ ಗಳನ್ನು ಪಡೆಯುವನು.

**ತದುಭಯತೋ ನ್ಯೂಂಖಂ ಪರಿಗೃಹ್ಣಾತಿ ಸವನಾಭ್ಯಾಮನ್ನಾದ್ಯಸ್ಯ ಪರಿ-ಗೃಹೀತ್ಯೈ ॥**

ಸವನದ್ವಯಗತಂ ನ್ಯೂಙ್ಖಂ ಪ್ರಶಂಸತಿ—ಉಭಯತಃ ಪ್ರಾತಃಸವನೇ ಮಾಧ್ಯಂದಿನ-ಸವನೇ ಚ ॥

ಎರಡು ಸವನಗಳಲ್ಲಿರುವ ನ್ಯೂಂಖವನ್ನು ಪ್ರಶಂಸೆಮಾಡುವರು. ಮೇಲೆ ಹೇಳಿದಂತೆ ಪ್ರಾತಸ್ಸವನ, ಮಾಧ್ಯಂದಿನ ಸವನ ಎಂಬ ಎರಡು ಸವನಗಳಲ್ಲಿ ನ್ಯೂಂಖವನ್ನುಚ್ಚರಿಸುವ ಯಜಮಾನನು ಅನ್ನಾದ್ಯಾಹಾರವನ್ನು ಪಡೆದು ಸುಖಿಸುವನು.

*English Translation*

**(On the Nyunkha)**

(Say. These periods of three days from part of the Navaratra night nights-included in the Dvadasaha. The first tryahah or period of three days is now explained, and the very same is the first part of the Pristhyam comprising six days. Now the middle part of the Navaratra (the second thre days) are to be explained.

The Stomas and Chandas are at an end (i. e. all the Stoma combinations, and the metres are exhausted) on the third day; that one only remains. This "that one" is the syllable vach which consists of three sounds; vach is one syllable, and this syllable consists of three sounds, which represent the latter three days out of the six, of which Vach (speech) is one, and Gaus (Cow) is one, and Dyaus (Heaven) is one. Therefore Vach alone is the leading deity of the fourth day.

On just the fourth day they make a Nyunkha, of this syllable by pronouncing it with a tremulous voice, increasing and decreasing (dividing) the tone. It serves for raising the fourth day (to make it particularly important). Because the Nyunkha is (produces) food, for the singers seeking a livehood, wander about in order to make food grow by their singing for rain.

By making Nyunkha on the fourth day they produce food; (because it is done) for producing food. Thence the fourth day is jatavat i.e. productive. Some say, one must make Nyunka with a word comprising four sounds; for the animals are four-footed, in order to obtain cattle. Others say, one must make Nyunkhya with three sounds. These three sounds are the three worlds. In order to conquer these worlds, they say, one must make Nyunkha with one sound only. Sangalayana, the son of Mudgala, a Brahman said "The word' 'Vach' comprises one syllable only therefore he who makes Nyunkha by one sound only, does it in the right way." They say, one mist make Nyunkha with two sounds for obtaining a stand-point, for man has two legs, and the animals have four, thus he places the two-footed man among the four-footed animals. Therefore the Hotar ought to make Nyunkha with two sounds. At the beginning he makes Nyunkha in the morning prayer (Prataranuvaka); because creatures

first eat food with the mouth. In this way the Hotar places the sacrificer with his mouth (ready for eating) towards food.

In the Ajya Shastra the Nyunkha is made in the middle; for in the middle he makes the creatures fond of food, and he places thus the sacrificer in the midst of food. In the midday libation the Hotar makes Nyunkha at the beginning, because animals eat food with their mouth. Thus he places the sacrificer with his mouth towards food. Thus he makes Nyunkha at both the libations (morning and midday) for obtaining food.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಏಕವಿಂಶಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೊಂದನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವಾದುದು.



## ಅಥೈಕವಿಂಶಾಧ್ಯಾಯೇ ಚತುರ್ಥಃ ಖಂಡಃ

### ಇಪ್ಪತ್ತೊಂದನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ನಾಲ್ಕನೇದಿವಸದ ಕಾರ್ಯಕಲಾಪಗಳು; ಪ್ರಾತಸ್ಸವನ ಮತ್ತು ಮಾಧ್ಯಂದಿನಸವನಗಳಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳು]



ವಾಗ್ವೈ ದೇವತಾ ಚತುರ್ಥಮಹರ್ವಹತ್ಯೇಕವಿಂಶಃ ಸ್ತೋಮೋ ವೈರಾಜಂ ಸಾಮಾನುಷ್ಟುಪ್ಛಂದೋ ಯಥಾದೇವತಮೇನೇನ ಯಥಾಸ್ತೋಮಂ ಯಥಾಸಾಮ ಯಥಾಛಂದಸಂ ರಾಧ್ನೋತಿ ಯ ಏವಂ ವೇದ ॥

ಚತುರ್ಥಮಹರ್ವಿಧತ್ತೇ— ಪೂರ್ವವದ್ವ್ಯಾಖ್ಯೇಯಂ ॥

ನಾಲ್ಕನೇ ದಿನದ ಕಾರ್ಯಕಲಾಪಗಳನ್ನು ವಿವರಿಸುವರು– ಹಿಂದೆ ವಾಗ್ದೇವತೆಗೆ ವಾಕ್, ಗೌಃ, ದ್ಯೌಃ ಎಂದು ಮೂರುವಿಧ ಸ್ವರೂಪಗಳಿರುವವು ಎಂದು ಹೇಳಿದೆಯಷ್ಟೆ. ಈ ಮೂರು ಸ್ವರೂಪಗಳೂ ಅಥವಾ ದೇವತೆಗಳೂ ಯಜ್ಞದ ನಾಲ್ಕು, ಐದು, ಆರು ಎಂಬ ದಿನಗಳ ನಿರ್ವಾಹಕರು. ಎಂದರೆ ವಾಗ್ದೇವತೆಯು ನಾಲ್ಕನೇ ದಿನಕ್ಕೂ ಗೌಃ ಎಂಬ ದೇವತೆಯು ಐದನೆಯ ದಿನಕ್ಕೂ ದ್ಯೌಃ ಎಂಬ ದೇವತೆಯು ಆರನೆಯ ದಿನಕ್ಕೂ ನಿರ್ವಾಹಕರಾಗಿರುವರು. ಆದ್ದರಿಂದ ಈಗ ನಾಲ್ಕನೆಯ ದಿವಸದ ಕಾರ್ಯ ಕಲಾಪಗಳನ್ನು ಮೊದಲು ವಿವರಿಸುವರು. ಈ ನಾಲ್ಕನೆಯ ದಿವಸಕ್ಕೆ ವಾಕ್ ಎಂಬ ದೇವತೆಯೇ ನಿರ್ವಾಹಕಳು ; ಏಕವಿಂಶ ವೆಂಬ ಸ್ತೋಮವೇ ಈ ದಿನದಲ್ಲಿ ಪಠಿಸಬೇಕಾದ ಸ್ತೋಮವು; ವೈರಾಜಂ ಎಂಬುದು ಸಾಮವು ; ಅನುಷ್ಟುಪ್‌ಛಂದಸ್ಸು. ಆದ್ದರಿಂದ ಯಾವ ಪುರುಷನು ಈ ನಾಲ್ಕನೇ ದಿನದ ಕ್ರಮಗಳನ್ನು ಎಂದರೆ ಆ ದಿನದಲ್ಲಿ ಯಾವದೇವತೆ, ಯಾವಸ್ತೋಮ, ಯಾವಸಾಮ, ಯಾವಛಂದಸ್ಸು ಪಠಿಸಬೇಕು ಎಂದು ತಿಳಿದು ಅದರಂತೆ ಆಚರಿಸುವನೋ ಆ ಪುರುಷನು ತನ್ನ ಸಮಸ್ತ ಕಾರ್ಯ ಗಳಲ್ಲಿಯೂ ಅಭಿವೃದ್ಧಿಯನ್ನು ಪಡೆಯುವನು.

**ಯದ್ವಾ ಏತಿ ಚ ಪ್ರೇತಿ ಚ ತಚ್ಚತುರ್ಥಸ್ಯಾಹ್ನೋ ರೂಪಂ ಯದ್ಧ್ಯೇವ ಪ್ರಥಮಮಹಸ್ತದೇತತ್ಪುನರ್ಯಚ್ಚತುರ್ಥಂ ಯದ್ಯುಕ್ತವದ್ಯದ್ರಥವದ್ಯದಾಶುಮದ್ಯತ್ಪಿಬವದ್ಯತ್ಪ್ರಥಮೇ ಪದೇ ದೇವತಾ ನಿರುಚ್ಯತೇ ಯದಯಂ ಲೋಕೋಽಭ್ಯುದಿತೋ ಯಜ್ಜಾತವದ್ಯದ್ಧವವದ್ಯಚ್ಛುಕ್ರವದ್ಯದ್ವಾಚೋ ರೂಪಂ ಯದ್ವೈಮದಂ ಯದ್ವಿರಿಫಿತಂ ಯದ್ವಿಚ್ಛಂದಾ ಯದೂನಾತಿರಿಕ್ತಂ ಯದ್ವೈರಾಜಂ ಯದಾನುಷ್ಟುಭಂ ಯತ್ಕರಿಷ್ಯದ್ಯತ್ಪ್ರಥಮಸ್ಯಾಹ್ನೋರೂಪಮೇತಾನಿ ವೈ ಚತುರ್ಥಸ್ಯಾಹ್ನೋ ರೂಪಾಣಿ ॥**

ಚತುರ್ಥಸ್ಯಾಹ್ನೋ ಗಮಕಾನಿ ಮಂತ್ರಗತಾನಿ ಲಿಂಗಾನಿ ದರ್ಶಯತಿ—ಆಕಾರಃ ಪ್ರಶಬ್ದಶ್ಚೇತಿ ಯದೇವಂ ಪೂರ್ವತ್ರ ಪ್ರಥಮಸ್ಯಾಹ್ನೋ ನಿರೂಪಕಮುಕ್ತಂ ತದತ್ರ ಚತುರ್ಥಸ್ಯಾಹ್ನೋ ನಿರೂಪಕಂ ಪ್ರಥಮತ್ರ್ಯಹಾಪೇಕ್ಷಯಾ ಪ್ರಥಮಮಹಃ ಪೂರ್ವಂ ಯದುಕ್ತಂ ತದೇತತ್ಪುನರಪಿ ಮಧ್ಯಮತ್ರ್ಯಹಾಪೇಕ್ಷಯಾ ಪ್ರಥಮಮಹರುಚ್ಯತೇ । ಅತೋ ನವರಾತ್ರಾಪೇಕ್ಷಯಾ ಚತುರ್ಥಂ । ತ್ರ್ಯಹಾಪೇಕ್ಷಯಾ ಪ್ರಥಮತ್ವಾತ್ಪ್ರಥಮಸ್ಯಾಹ್ನೋ ಲಿಂಗಾನ್ಯತ್ರ ಯೋಗ್ಯಾನಿ । ತತ ಏವ ತದ್ಯುಕ್ತವದಿತ್ಯಾರಭ್ಯಾಯಂ ಲೋಕೋಽಭ್ಯುದಿತ ಇತ್ಯಂತಾನಿ ಪೂರ್ವೋಕ್ತಾನ್ಯೇವಾಭಿಹಿತಾನಿ । ಜಾತವಜ್ಜನಿಧಾತುಯುಕ್ತಂ । ಹವವದಿತಿ ಹ್ವಯತಿಧಾತುಯುಕ್ತಂ । ಶುಕ್ರವಚ್ಛುಕ್ರಶಬ್ದಯುಕ್ತಂ । ವಾಚೋ ರೂಪಂ ವಾಕ್ಪ್ರತಿಪಾದಕಶಬ್ದಯುಕ್ತಂ । ವೈಮದಂ ವಿಮದಾಖ್ಯೇನ ಮಹರ್ಷಿಣಾ ಯುಕ್ತಂ । ರಿಫಿ (ಫ) ತಿಧಾತುಃ ಕ್ಲೇಶಾರ್ಥೇವರ್ತತೇ । ವಿಶೇಷಕ್ಲೇಶೇನ ನ್ಯೂಜಸ್ವೇನೋಚ್ಚಾರಿತಂ ವಿರಿಫಿತಂ । ವಿಚ್ಛಬ್ದಾ ಇತಿ ವಿವಿಧಚ್ಛಂದಸಾ ಯುಕ್ತಂ । ತದೂನಂ ಚಾತಿರಿಕ್ತಂ ಚೋನಾತಿರಿಕ್ತಂ । ಅಕ್ಷರಹ್ರಾಸವೃದ್ಧೀ ಇತ್ಯರ್ಥಃ । ವೈರಾಜಾಖ್ಯಸಾಮಸಂಬದ್ಧಂ ವೈರಾಜಂ । ಅನುಷ್ಟುಪ್‌ಛಂದಃ ಸಂಬದ್ಧಮಾನುಷ್ಟುಭಂ ಜಾತವದಿತ್ಯಾದೀನ್ಯತ್ರ ವಿಶೇಷಲಿಂಗಾನಿ । ಭವಿಷ್ಯದರ್ಥವಾಚಿಪ್ರತ್ಯಯೋಪೇತಂ ಧಾತುರೂಪಂ ಕರಿಷ್ಯದಿತ್ಯುಚ್ಯತೇ ।

**ಅತ್ರ ಯನ್ನೂತನಂ ಯಚ್ಚ ಪೂರ್ವೋಕ್ತಂ ಪ್ರಥಮಸ್ಯಾಹ್ನೋ ರೂಪಮಸ್ತಿ ತಾನಿ ಸರ್ವಾಣ್ಯಪಿ ಚತುರ್ಥಸ್ಯಾಹ್ನೋ ನಿರೂಪಕಾಣಿ ॥**

ನಾಲ್ಕನೇ ದಿವಸದಲ್ಲಿ ಹೇಳಬೇಕಾದ ಮಂತ್ರಗಳಲ್ಲಿರುವ ಲಕ್ಷಣಗಳನ್ನು ವಿವರಿಸುವರು. ಆಕಾರವು ಪ್ರ ಎಂಬ ಶಬ್ದವು ಮೊದಲನೇ ದಿವಸದ ಮಂತ್ರದಲ್ಲಿರಬೇಕಾದ ಲಕ್ಷಣವು ಎಂದು ಹಿಂದೆಯೇ ಎಂದರೆ ಮೊದಲನೇ ತ್ರ್ಯಹದ ಪ್ರಥಮದಿನದ ಲಕ್ಷಣದಲ್ಲಿ ಹೇಳಿರುವುದಷ್ಟೆ. ಅದನ್ನು ಎರಡನೇ ತ್ರ್ಯಹದ (ಮಧ್ಯಮತ್ರ್ಯಹದ) ಮೊದಲದಿವಸಕ್ಕೂ ಎಂದರೆ ನಾಲ್ಕನೇ ದಿವಸಕ್ಕೂ ಅನ್ವಯಿಸುವುದು. ಯಜ್ಞದ ಮಧ್ಯದಲ್ಲಿರುವ (ಎಂದರೆ ಪ್ರಥಮ, ದಶಮ, ದ್ವಾದಶ ಎಂಬ ದಿನಗಳನ್ನು ಬಿಟ್ಟು ಉಳಿದ) ಒಂಭತ್ತು ದಿವಸಗಳನ್ನು ಪರಿಗಣಿಸಿದರೆ ಇದು ನಾಲ್ಕನೆಯ ದಿನವು. ತ್ರ್ಯಹಾಪೇಕ್ಷೆಯಿಂದ ಪರಿಗಣಿಸಿದರೆ ಈ ನಾಲ್ಕನೆಯ ದಿನವು ಮಧ್ಯಮತ್ರ್ಯಹದ ಪ್ರಥಮದಿನವಾಗುವುದು. ಆದ್ದರಿಂದ ಮೇಲಿನ ವಾಕ್ಯದಲ್ಲಿ **ತದ್ಯುಕ್ತವತ್** ಎಂದು ಪ್ರಾರಂಭಿಸಿ **ಲೋಕೋಽಭ್ಯುದಿತ** ಎನ್ನುವವರೆಗೆ ಇರುವ ಲಕ್ಷಣಗಳು ಹಿಂದೆ ಹೇಳಿದವುಗಳೇ ಆಗಿವೆ. ಆದರ ಮುಂದಿನ ಪದವು **ಜಾತವತ್** ಎಂದಿರುವುದು. ಜಾತವತ್ ಎಂಬುದು ಜನಿಧಾತುವಿನಿಂದ ನಿಷ್ಪನ್ನವಾಗಿರುವುದು. **ಹವವತ್** ಎಂಬ ಪದವು ಹ್ವಯತಿಧಾತುವಿನಿಂದ ನಿಷ್ಪನ್ನವಾಗಿದೆ. **ಶುಕ್ರವತ್** ಎಂಬ ಶಬ್ದವು ಶುಕ್ರ ಎಂಬ ಶಬ್ದದಿಂದ ಕೂಡಿದೆ. **ವಾಚೋ ರೂಪಂ** ಎಂದರೆ ವಾಕ್ಪ್ರತಿಪಾದಕ ಶಬ್ದದಿಂದ ಕೂಡಿದೆ. **ವೈಮದಂ** ಎಂದರೆ ವಿಮದ ಎಂಬ ಋಷಿಯಿಂದ ಕೂಡಿದೆ. **ರಿಫಿತಂ** ಎಂಬ ಶಬ್ದವು ರಿಫತಿಧಾತುವಿನಿಂದ ನಿಷ್ಪನ್ನವಾಗಿ ಕ್ಲೇಶ (ದುಃಖ) ಎಂಬರ್ಥವನ್ನು ಸೂಚಿಸುವುದು. ವಿಶೇಷಕ್ಲೇಶ (ದುಃಖ, ಕಷ್ಟ) ದಿಂದ ಉಚ್ಚರಿಸಬೇಕಾದ ನ್ಯೂಂಖವನ್ನು **ವಿರಿಫಿತಂ** ಎಂಬ ಶಬ್ದವು ಸೂಚಿಸುವುದಾಗಿದೆ. **ವಿಚ್ಛಂದಾ** ಎಂದರೆ ವಿವಿಧ ರೀತಿಯ (ಬೇರೆಬೇರೆ) ಛಂದಸ್ಸುಗಳಿಂದ ಯುಕ್ತವಾದುದು ಎಂದರ್ಥವು. **ತದೂನಾತಿರಿಕ್ತಂ** ಎಂದರೆ ಹೆಚ್ಚುಕಡಮೆ ಇಲ್ಲದಿರುವುದು. ಎಂದರೆ ಅಕ್ಷರಗಳನ್ನು ಉಚ್ಚರಿಸುವಾಗ ಅನಾವಶ್ಯಕವಾಗಿ ದೀರ್ಘ, ಹ್ರಸ್ವ ಇತ್ಯಾದಿಗಳಿಗೆ ಅವಕಾಶಕೊಡದಿರುವುದು ಎಂದರ್ಥವು. **ವೈರಾಜಂ** ಎಂದರೆ ವೈರಾಜವೆಂಬ ಸಾಮದ ಸಂಬಂಧವಿರುವುದು. **ಆನುಷ್ಟುಭಂ** ಎಂದರೆ ಅನುಷ್ಟುಪ್ ಛಂದಸ್ಸಿನ ಸಂಬಂಧವಿರುವುದು. ಮೇಲೆ ಹೇಳಿದಂತೆ **ಜಾತವತ್** ಎಂಬ ಶಬ್ದದಿಂದ ಮೊದಲುಮಾಡಿ **ಆನುಷ್ಟುಭಂ** ಎನ್ನುವವರೆಗೆ ಹೇಳಿರುವ ಶಬ್ದಗಳೆಲ್ಲವೂ ಈ ನಾಲ್ಕನೇ ದಿವಸದಲ್ಲಿ ಪಠಿಸುವ ಮಂತ್ರಗಳಲ್ಲಿರಬೇಕಾದ ವಿಶೇಷ ಲಕ್ಷಣಗಳು. ಭವಿಷ್ಯತ್ಕಾಲಾರ್ಥವನ್ನು ಸೂಚಿಸುವ ಧಾತುರೂಪವನ್ನು ತಿಳಿಸುವುದಕ್ಕಾಗಿ ಇಲ್ಲಿ ಕರಿಷ್ಯತ್ ಎಂಬ ಶಬ್ದವನ್ನು ಉಪಯೋಗಿಸಲಾಗಿದೆ. ಆದ್ದರಿಂದ ಹಿಂದೆ ಪ್ರಥಮದಿವಸದಲ್ಲಿರಬೇಕಾದ ಲಕ್ಷಣಗಳೂ, ಈಗ ಇದುವರೆಗೆ ಹೇಳಿದ ಲಕ್ಷಣಗಳೂ ಎಲ್ಲವೂ ಸೇರಿ ಈ ನಾಲ್ಕನೇ ದಿನದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳಾಗಿರುವವು.

**ಆಽಗ್ನಿಂ ನ ಸ್ವವೃಕ್ತಿಭಿರಿತಿ ಚತುರ್ಥಸ್ಯಾಹ್ನ ಆಜ್ಯಂ ಭವತಿ ವೈಮದಂ ವಿರಿಫಿತಂ ವಿರಿಫಿತಸ್ಯ ಋಷೇಶ್ಚತುರ್ಥೇಽಹನಿ ಚತುರ್ಥಸ್ಯಾಹ್ನೋ ರೂಪಂ ॥**

**ಇದಾನೀಮಾಜ್ಯಶಸ್ತ್ರಂ ವಿಧತ್ತೇ—ಆಽಗ್ನಿಮಿತ್ಯಾದಿಕಂ ಸೂಕ್ತಂ ವೈಮದಂ ವಿಮದಾಖ್ಯೇನ ಮಹರ್ಷಿಣಾ ದೃಷ್ಟಂ । ವಿರಿಫಿತಂ ನ್ಯೂಙ್ಖರೂಪೇಣ ವಿಶೇಷಕ್ಲೇಶೇನೋಚ್ಚಾರಿತಂ । ಅತ ಏವ ವಿರಿಫಿತಸ್ಯ ವಿಶೇಷಕ್ಲೇಶರೂಪತಯಾ ಯುಕ್ತಸ್ಯ ವಿಮದಾಖ್ಯಸ್ಯ ಮಹರ್ಷೇಃ ಸಂಬಂಧಿ । ಅತೋ ವಿಮದೇನ ದೃಷ್ಟತ್ವಂ ವಿರಿಫಿತತ್ವಂ ಚೇತಿಲಿಂಗದ್ವಯಸದ್ಭಾವಾಚ್ಚತುರ್ಥೇಽಹನ್ಯೇತತ್ಸೂಕ್ತಂ ಯೋಗ್ಯಂ । ತಸ್ಮಾಚ್ಚತುರ್ಥಸ್ಯಾಹ್ನೋ ನಿರೂಪಕಂ ॥**

ಈಗ ಆಜ್ಯಶಸ್ತ್ರವನ್ನು ತಿಳಿಸುವರು. ಆऽಗ್ನಿಂ ಎಂಬ ಸೂಕ್ತವು ವಿಮದ ಎಂಬ ಹೆಸರಿನ ಮಹರ್ಷಿಯಿಂದ ದೃಷ್ಟವಾದದು. ಮತ್ತು ಇದು **ವಿರಿಫಿತಂ** ಎಂದರೆ ವಿಶೇಷ ಕ್ಲೇಶದಿಂದ ಉಚ್ಚರಿಸಲ್ಪಡಬೇಕಾದ ನ್ಯೂಂಖಶಬ್ದದಿಂದ ಕೂಡಿರುವುದು. ಆದ್ದರಿಂದ ಈ ಸೂಕ್ತವು ವಿಮದ ಎಂಬ ಋಷಿಯಿಂದ ದೃಷ್ಟವಾದುದೂ ವಿಶೇಷ ಕ್ಲೇಶದಿಂದ ಉಚ್ಚರಿಸಲ್ಪಡಬೇಕಾದ **ನ್ಯೂಂಖ** ಶಬ್ದದಿಂದ ಕೂಡಿರುವುದೂ ಆದ ಸೂಕ್ತವಾಗಿರುವುದು. ಆದ್ದರಿಂದ ಈ ಎರಡು ಲಕ್ಷಣಗಳೂ ನಾಲ್ಕನೆಯ ದಿನದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರುವ ಲಕ್ಷಣಗಳು ಎಂದು ತಿಳಿಯಬೇಕು.

## ಅಷ್ಟರ್ಚಂ ಪಾಂಕ್ತಂ ಪಾಂಕ್ತೋ ಯಜ್ಞಃ ಪಾಂಕ್ತಾಃ ಪಶವಃ ಪಶೂನಾಮುವರುಧ್ಯೈ ॥

**ಋಕ್ಸಂಖ್ಯಾಂ ಛಂದಶ್ಚೋಪಜೀವ್ಯಂ (ವ್ಯ) ಸೂಕ್ತಂ ಪ್ರಶಂಸತಿ—ಋಕ್ಸಂಖ್ಯೋತ್ತರತ್ರೋಪಯುಜ್ಯತೇ । ಪಂಕ್ತಿಚ್ಛಂದೋಯೋಗಾತ್ಪಾಂಕ್ತಂ ಪೂರ್ವೋಕ್ತಹವಿಷ್ಪಂಕ್ತ್ಯಾದಿಭಿರ್ಯಜ್ಞಸ್ಯ ಪಾಂಕ್ತತ್ವಂ । ಚತುರ್ಭಿಃ ಪಾದೈರ್ಮುಖೇನಚ ಪಂಚಾವಯವೈಃ ಪಶವಃ ಪಾಂಕ್ತಾಃ । ತಸ್ಮಾದೇತಚ್ಛಂಸನಂ ಪಶುಪ್ರಾಪ್ತ್ಯೈ ಭವತಿ ॥**

ಈ ಆಜ್ಯಸೂಕ್ತದಲ್ಲಿರುವ ಋಕ್ಸಂಖ್ಯೆಯನ್ನೂ ಛಂದಸ್ಸನ್ನೂ ತಿಳಿಸುವರು. ಈ ಸೂಕ್ತದಲ್ಲಿ ಎಂಟು ಋಕ್ಕುಗಳಿರುವವು. ಈ ಋಕ್ಕುಗಳ ಛಂದಸ್ಸು ಪಂಕ್ತಿಯು. ಪಂಕ್ತಿಛಂದಸ್ಸು ಯಜ್ಞಸ್ವರೂಪವೇ ಆಗಿರುವುದು. ಯಜ್ಞವು ಹವಿರಾದಿಗಳ ಸ್ವರೂಪವೆಂದು ಹಿಂದೆಯೇ ಹೇಳಲಾಗಿದೆ. ಈ ಛಂದಸ್ಸು ಪಶುಸಂಪತ್ತಿನ ವೃದ್ಧಿಗೆ ಕಾರಣವಾಗಿರುವುದು. ಏಕೆಂದರೆ ಈ ಛಂದಸ್ಸಿನಲ್ಲಿ ಐದು ಪಾದಗಳಿರುವವು. ಪಶುಗಳಲ್ಲಿಯೂ ನಾಲ್ಕು ಪಾದಗಳು, ಒಂದು ಮುಖವೂ ಸೇರಿ ಐದು ಮುಖ್ಯಾವಯವಗಳಿರುವುದರಿಂದ ಪಂಕ್ತಿಛಂದಸ್ಸು ಪಶುಗಳ ಸಂಕೇತವಾಗಿರುವುದು ಮತ್ತು ಪಶುಗಳನ್ನು ವೃದ್ಧಿಪಡಿಸುವುದು.

## ತಾ ಉ ದಶ ಜಗತ್ಯೋ ಜಗತ್ಪ್ರಾತಃಸವನ ಏಷತ್ರ್ಯಹಸ್ತೇನ ಚತುರ್ಥಸ್ಯಾಹ್ನೋ ರೂಪಂ ॥

**ಜಗತೀದ್ವಾರಾ ಪುನಃ ಪ್ರಶಂಸತಿ—ತಾ ಉ ತಾಸ್ತು ಸೂಕ್ತಗತಾ ಅಷ್ಟಾವೃಚೋ ದಶ ಜಗತ್ಯಃ ಸಂಪದ್ಯಂತೇ । ಕಥಂ ಸಂಪತ್ತಿರಿತಿ ತದುಚ್ಯತೇ । ಸೂಕ್ತಸ್ಯಾದ್ಯಂತಯೋರ್ಋಚೋಸ್ತ್ರಿರಾವೃತ್ಯಾ ದ್ವಾದಶ ಪಂಕ್ತಯೋ ಭವನ್ತಿ । ಪಂಕ್ತಿಶ್ಚೈಕಚತ್ವಾರಿಂಶದಕ್ಷರಾ । ತತೋ ಮಿಲಿತ್ವಾऽಶೀತ್ಯಧಿಕಚತುಃಶತಾಕ್ಷರಾಣಿ ಸಂಪದ್ಯಂತೇ । ಅಷ್ಟಾಚತ್ವಾರಿಂಶದಕ್ಷರಾಣಾಂ ಜಗತೀನಾಂ ದಶಸಂಖ್ಯಾಕಾನಾಂ ತಾವಂತ್ಯೇವಾಕ್ಷರಾಣಿ । ಏವಂ ಜಗತೀಸಂಪತ್ತಿಃ । ಜಗತೀಛಂದೋಯುಕ್ತಂ ಪ್ರಾತಃಸವನಂ ಯಸ್ಯ ಮಧ್ಯಮಸ್ಯ ತ್ರ್ಯಹಸ್ಯ ಸೋऽಯಂ ಜಗತ್ಪ್ರಾತಃ ಸವನಃ। ಪೂರ್ವಮೇವ ಚ್ಛಂದಸಾಂ ವಿವಾದೋ(ದೇ) ಜಗತ್ಯಾಃ ಪ್ರಾತಃಸವನಸ್ಥಾನಮುಕ್ತಮ್ । ಅತಃ ಪ್ರಾತಃಸವನಜಗತೀಸಂಬಂಧಶ್ಚತುರ್ಥಸ್ಯಾಹ್ನೋ ನಿರೂಪಕಃ ॥**

ಈ ಸೂಕ್ತವನ್ನು ಜಗತೀಛಂದಸ್ಸಿನ ಮೂಲಕ ಪುನಃ ಪ್ರಶಂಸೆಮಾಡುವರು. ಈ ಸೂಕ್ತದಲ್ಲಿರುವ ಎಂಟು ಪಂಕ್ತಿಛಂದಸ್ಸನ್ನು ಅಕ್ಷರಸಂಖೆಗೆ ಅನುಸಾರವಾಗಿ ಪರಿವರ್ತಿಸಿದರೆ ಹತ್ತು ಜಗತೀಛಂದಸ್ಸುಗಳಾಗುವವು. ಹೇಗೆಂದರೆ ಈ ಸೂಕ್ತದ ಎಂಟು

ಋಕ್ಕುಗಳನ್ನು ಮೂರುಮೂರಾವರ್ತಿ ಪಠಿಸುವುದರಿಂದ ಒಟ್ಟು ಹನ್ನೆರಡು ಋಕ್ಕುಗಳಾಗುವವು. ಎಂದರೆ ಹನ್ನೆರಡು ಪಂಕ್ತಿಶ್ಛಂದಸ್ಸಿನ ಋಕ್ಕುಗಳಾಗುವವು. ಪಂಕ್ತಿಶ್ಛಂದಸ್ಸಿನಲ್ಲಿ ನಲವತ್ತೊಂದಕ್ಷರಗಳಿರುವವು. ಈ ಹನ್ನೆರಡು ಋಕ್ಕುಗಳ ಅಕ್ಷರಗಳೆಲ್ಲವನ್ನೂ ಒಟ್ಟಾಗಿ ಸೇರಿಸಿದರೆ 482 (492) ಅಕ್ಷರಗಳಾಗುವವು. ಜಗತೀಛಂದಸ್ಸಿನಲ್ಲಿ ನಲವತ್ತೆಂಟು ಅಕ್ಷರಗಳಿರುವವು. ಆದ್ದರಿಂದ ನಲವತ್ತೆಂಟು ಅಕ್ಷರಗಳುಳ್ಳ ಹತ್ತು ಜಗತೀಛಂದಸ್ಸುಗಳಾಗುವವು. ಇಂತಹ ಜಗತೀಛಂದಸ್ಸಿನಿಂದ ಯುಕ್ತವಾದ ಪ್ರಾತಃಸವನವು ಮಧ್ಯಮತ್ರ್ಯಹದ (ನಾಲ್ಕನೇ ದಿವಸದ) ಜಗತ್ಯಾತ್ಮಕವಾದ ಪ್ರಾತಃಸವನವು ಛಂದಸ್ಸಿನ ವಿವಾದವಿಚಾರದಲ್ಲಿ ಜಗತೀಛಂದಸ್ಸಿನ ಸ್ಥಾನವು ಪ್ರಾತಸ್ಸವನವೆಂದು ಹಿಂದೆಯೇ ತಿಳಿಸಲಾಗಿದೆ. ಆದ್ದರಿಂದ ಜಗತೀಸಂಬಂಧವಾದ ಪ್ರಾತಸ್ಸವನವು ನಾಲ್ಕನೆಯ ದಿವಸದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರಬೇಕಾದ ಲಕ್ಷಣವು.

## ತಾ ಉ ಪಂಚದಶಾನುಷ್ಟುಭ ಆನುಷ್ಟುಭಂ ಹ್ಯೇತದಹಸ್ತೇನ ಚತುರ್ಥಸ್ಯಾಹ್ನೋ ರೂಪಂ

**ಅನುಷ್ಟುಪ್ಸಂಬಂಧೇನ ಪ್ರಶಂಸತಿ—ತಾಸ್ತು ದಶ ಜಗತ್ಯಃ ಪಂಚದಶಾನುಷ್ಟುಭಃ ಸಂಪದ್ಯಂತೇ । ತಥಾ ಹಿ । ಅಷ್ಟಾಚತ್ವಾರಿಂಶದಕ್ಷರಾ ಜಗತೀ । ದ್ವಾತ್ರಿಂಶದಕ್ಷರಾಽನುಷ್ಟುಪ್ ತಥಾ ಸತ್ಯೇಕೈಕಾ ಜಗತೀ ಸಾರ್ಧಾನುಷ್ಟುಬ್ಭವತಿ । ಅಹಶ್ಚೈತದನುಷ್ಟುಭಃ ಸಂಬಂಧ್ಯನುಷ್ಟುಭೋ ನಿರ್ವಾಹಕತ್ವಸ್ಯೋಕ್ತತ್ವಾತ್ । ತೇನೇದಂ ಸೂಕ್ತಮನುಷ್ಟುಬ್‌ದ್ವಾರಾ ಚತುರ್ಥಸ್ಯಾಹ್ನೋ ನಿರೂಪಕಮ್ ।**

ಈ ಸೂಕ್ತವನ್ನು ಅನುಷ್ಟುಪ್‌ಛಂದಸ್ಸಿನ ಪ್ರಕಾರವಾಗಿ ಪ್ರಶಂಸಿಸುವರು. ಮೇಲೆ ಹೇಳಿದಂತೆ ಹತ್ತು ಜಗತೀಛಂದಸ್ಸುಗಳ ಅಕ್ಷರಸಂಖ್ಯೆಯನ್ನು ಅನುಷ್ಟುಪ್ ಛಂದಸ್ಸಿಗೆ ಪರಿವರ್ತಿಸಿದರೆ ಹದಿನೈದು ಅನುಷ್ಟುಪ್‌ಛಂದಸ್ಸುಗಳಾಗುವವು ಇದಲ್ಲದೆ **ಅಷ್ಟಾಚತ್ವಾರಿಂಶದಕ್ಷರಾ ಜಗತೀ ದ್ವಾತ್ರಿಂಶದಕ್ಷರಾಽನುಷ್ಟುಪ್** ಎಂಬ ವಿಧಿಪ್ರಕಾರವಾಗಿ ಒಂದೊಂದು ಜಗತೀಛಂದಸ್ಸಿಗೆ ಒಂದೂವರೆ ಅನುಷ್ಟುಪ್‌ಛಂದಸ್ಸಾಗುವುದು. ಎಂದರೆ ಹತ್ತು ಜಗತೀಛಂದಸ್ಸುಗಳಿಗೆ ಹದಿನೈದು ಅನುಷ್ಟುಪ್ ಛಂದಸ್ಸುಗಳಾಗುವವು. ಈ ಅನುಷ್ಟುಪ್‌ಛಂದಸ್ಸೇ ನಾಲ್ಕನೇ ದಿವಸಕ್ಕೆ ನಿರ್ವಾಹಕವಾಗಿರುವುದು. ಆದ್ದರಿಂದ ಈ ಅನುಷ್ಟುಪ್ ಛಂದಸ್ಸೇ ನಾಲ್ಕನೆಯ ದಿವಸದಲ್ಲಿ ಪಠಿಸುವ ಮಂತ್ರಗಳಲ್ಲಿರಬೇಕಾದ ಲಕ್ಷಣವಾಗಿರುವುದು.

## ತಾ ಉ ವಿಂಶತಿರ್ಗಾಯತ್ರ್ಯಃ ಪುನಃ ಪ್ರಾಯಣೀಯಂ ಹ್ಯೇತದಹಸ್ತೇನ ಚತುರ್ಥಸ್ಯಾಹ್ನೋ ರೂಪಂ ।

**ಗಾಯತ್ರೀದ್ವಾರಾ ಪ್ರಶಂಸತಿ—ತಾಸ್ತು ದಶ ಜಗತ್ಯಃ ಪುನರಪಿ ಪ್ರತ್ಯೇಕಂ ದ್ವೇಧಾ ವಿಭಜ್ಯಮಾನಾಶ್ಚತುರ್ವಿಂಶತ್ಯಕ್ಷರಾ ಗಾಯತ್ರ್ಯೋ ವಿಂಶತಿರ್ಭವಂತಿ । ಗಾಯತ್ರೀಸಂಬಂಧಂ ಚಾನ್ಯತ್ರ ಪ್ರಾಯಣೀಯಂ ಪ್ರಥಮಮಹಃ । ಗಾಯತ್ರೋ ವಾ ಐಂದ್ರವಾಯವೋ ಗಾಯತ್ರಂ ಪ್ರಾಯಣೀಯಮಹರಿತಿ ಶ್ರುತ್ಯಂತರಾತ್ । ಇ(ಐ)ಂದ್ರಂ ಚಾಹರ್ಮಧ್ಯಮೇ ತ್ರ್ಯಹೇ ಪ್ರಥಮತ್ವಾತ್ ಪ್ರಾಯಣೀಯಂ । ಅತೋ ಗಾಯತ್ರೀದ್ವಾರಾ ಸಂಬಂಧಸ್ಯ ವಕ್ತುಂ ಶಕ್ಯತ್ವಾದೇತತ್ಸೂಕ್ತಂ ಚತುರ್ಥಸ್ಯಾಹ್ನೋ ನಿರೂಪಕಂ ॥**

ಗಾಯತ್ರೀಛಂದಸ್ಸಿನಂತೆ ಪ್ರಶಂಸೆ ಮಾಡುವರು. ಈ ಸೂಕ್ತದ ಹತ್ತು ಜಗತೀಛಂದಸ್ಸಿನ ಅಕ್ಷರಗಳನ್ನು ಗಾಯತ್ರೀ ಛಂದಸ್ಸಿಗೆ ಪರಿವರ್ತಿಸಿದರೆ ಇಪ್ಪತ್ತುನಾಲ್ಕು ಅಕ್ಷರಗಳುಳ್ಳ ಇಪ್ಪತ್ತು ಗಾಯತ್ರೀಛಂದಸ್ಸುಗಳಾಗುವವು. ಯಜ್ಞದ ಮೊದಲನೇ ದಿವಸದಲ್ಲಿ ಮಾಡುವ ಪ್ರಾಯಣೀಯವೆಂಬ ಹೋಮಕ್ಕೆ ಗಾಯತ್ರೀಛಂದಸ್ಸಿನ ಸಂಬಂಧವಿರಬೇಕು. ಬೇರೊಂದು ಶ್ರುತಿಯಲ್ಲಿ—**ಗಾಯತ್ರೋ ವಾ ಐಂದ್ರವಾಯವೋ ಗಾಯತ್ರಂ ಪ್ರಾಯಣೀಯಮಹಃ** ಎಂದು ಹೇಳಿದೆ. ಮಧ್ಯಮತ್ರ್ಯಹವಾದ ನಾಲ್ಕನೇ ದಿನದಲ್ಲಿ ಇಂದ್ರನ ಸಂಬಂಧವಿರುವುದರಿಂದ ಇದು ಪ್ರಾಯಣೀಯವು. ಇದಕ್ಕೆ ಗಾಯತ್ರೀಸಂಬಧವಿರುವುದೆಂದು ಹೇಳಲು ಸಾಧ್ಯವಿರುವುದರಿಂದ ಈ ಸೂಕ್ತವು ನಾಲ್ಕನೆಯ ದಿವಸದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರಬೇಕಾದ ಲಕ್ಷಣವಾಗಿರುವುದು.

**ತದೇತದಸ್ತುತಮಶಸ್ತಮಯಾತಯಾಮಸೂಕ್ತಂ ಯಜ್ಞ ಏವ ಸಾಕ್ಷಾತ್ತ್ಯದೇತಚ್ಚತುರ್ಥಸ್ಯಾಹ್ನ ಆಜ್ಯಂ ಭವತಿ ಯಜ್ಞಾದೇವ ತದ್ಯಜ್ಞಂ ತನ್ವತೇ ವಾಚಮೇವ ತತ್ಪುನರುಪಯಂತಿ ಸಂತತ್ಯೈ ॥**

**ಸಾರಯುಕ್ತತ್ವೇನ ಪುನಃ ಪ್ರಶಂಸತಿ — ತದೇತದಾಗ್ನಿಮಿತ್ಯಾದಿಸೂಕ್ತಮುದ್ಗಾತೃಭಿಃ ಪೂರ್ವಮಸ್ತುತಂ ಹೋತೃಭಿರಪ್ಯಶಸ್ತಂ । ತಸ್ಮಾದಯಾತಯಾಮಂ ಗತಸಾರಂ ನ ಭವತಿ ಸಾಕ್ಷಾದ್ಯಜ್ಞ ಏವ ಯಜ್ಞಮಧ್ಯೇ ಸಾರತ್ವಾತ್ । ತಥಾ ಸತಿ ಯದ್ಯೇತತ್ಸೂಕ್ತಮತ್ರಾಜ್ಯಂ ಭವೇತ್ತದಾನೀಂ ಯಜ್ಞರೂಪಾದೇವ ಸೂಕ್ತಾದ್ಯಜ್ಞರೂಪಮಹಸ್ತನ್ವತೇ ವಿಸ್ತಾರಯನ್ತಿ । ಕಿಂ ಚಾಹರ್ದೇವತಾಂ ವಾಚಮೇವ ತೇನ ಸಾರಯುಕ್ತೇನ ಪುನಃ ಪ್ರಾಪ್ನುವನ್ತಿ । ತತ್ರ (ಚ್ಚ) ಮಧ್ಯಮಸ್ಯ ತ್ರ್ಯಹಸ್ಯ ಸಂತತ್ಯೈ ವಿಚ್ಛೇದರಾಹಿತ್ಯಾಯ ಭವತಿ ॥**

ಈ ಸೂಕ್ತದ ಸಾರವನ್ನು ತಿಳಿಸುವುದರಿಂದ ಇದನ್ನು ಪುನಃ ಪ್ರಶಂಸೆಮಾಡುವರು. ಈ ಆऽಗ್ನಿಂ ಎಂಬ ಆಜ್ಯಸೂಕ್ತವನ್ನು ಹಿಂದೆ ಉದ್ಗಾತೃಗಳಾಗಲಿ, ಹೋತೃಗಳಾಗಲಿ ಪಠಿಸಿರುವುದಿಲ್ಲ. ಆದ್ದರಿಂದ ಇದರ ಸಾರವನ್ನು ಯಾರೂ ಕೇಳಿ ತಿಳಿದಿರುವುದಿಲ್ಲ. ಆದ್ದರಿಂದ ಈ ಸೂಕ್ತವನ್ನು ಆಜ್ಯಸೂಕ್ತವನ್ನಾಗಿ ಪ್ರಥಮತಃ ಪಠಿಸುವುದರಿಂದ ಇದು ಯಜ್ಞದ ಈ ದಿನದ ಸ್ವರೂಪವಾಗಿ ಪರಿಣಮಿಸಿ ಯಜ್ಞವನ್ನು ವಿಸ್ತಾರಗೊಳಿಸುವುದು. ಎಂದರೆ ಈ ನಾಲ್ಕನೇ ದಿನದ ದೇವತೆಯಾದ ವಾಗ್ದೇವತೆಯನ್ನು ಸಾರಯುತವಾದ ಮಂತ್ರಗಳಿಂದ ಯಜಮಾನರು ತೃಪ್ತಿಗೊಳಿಸುವರು. ಹೀಗೆ ಮಾಡುವುದರಿಂದ ಮಧ್ಯಮತ್ರ್ಯಹವು ವಿಚ್ಛೇದರಹಿತವಾಗಿ ಎಂದರೆ ನಿರ್ವಿಘ್ನವಾಗಿ ಕೊನೆಯವರೆಗೂ ನಡೆಯುವುದು.

**ಸಂತತೈಸ್ತ್ರ್ಯಹೈರವ್ಯವಚ್ಛಿನ್ನೈರ್ಯಂತಿ ಯ ಏವಂ ವಿದ್ವಾಂಸೋಯಂತಿ ॥**

**ವೇದನಪೂರ್ವಮನುಷ್ಠಾನಂ ಪ್ರಶಂಸತಿ— ಪೂರ್ವವದ್ವ್ಯಾಖ್ಯೇಯಂ ॥**

ವಿದ್ವಾಂಸನಾದ ಯಾವ ಪುರುಷನು ಮೇಲೆ ಹೇಳಿದ ವಿಷಯಗಳೆಲ್ಲವನ್ನೂ ತಿಳಿದು ಅದರಂತೆ ಅನುಷ್ಠಾನಮಾಡುವನೋ ಅವನು ಆಚರಿಸುವ ಯಜ್ಞದಲ್ಲಿ ಮಧ್ಯಮತ್ರ್ಯಹವು ಮಧ್ಯದಲ್ಲಿ ಯಾವ ವಿಧವಾದ ವಿಚ್ಛಿತ್ತಿ ಅಥವಾ ಅಡಚಣೆಗಳಿಲ್ಲದೆ ನಿರ್ವಿಘ್ನವಾಗಿ ನೆರವೇರುವುದು.

**ವಾಯೋ ಶುಕ್ರೋ ಅಯಾಮಿ ತೇ ವಿಹಿ ಹೋತ್ರಾ ಅವೀತಾ ವಾಯೋ ಶತಂ ಹರೀಣಾಮಿಂದ್ರಶ್ಚ ವಾಯವೇಷಾಂ ಸೋಮಾನಾಮಾ ಚಿಕಿತಾನಸುಕ್ರತೂ ಆ ನೋ ವಿಶ್ವಾಭಿರೂತಿಭಿಸ್ತ್ಯಮು ಷೋ ಅಪ್ರಹಣಮಪತ್ಯಂ ವೃಜಿನಂ ರಿಪುಮಂಬಿತಮೇ ನದೀತಮ ಇತ್ಯಾನುಷ್ಟುಭಂ ಪ್ರಉಗಮೇತಿ ಚ ಪ್ರೇತಿ ಚ ಶುಕ್ರವಚ್ಚ ಚತುರ್ಥೇಽಹನಿ ಚತುರ್ಥಸ್ಯಾಹ್ನೋ ರೂಪಂ ॥**

ಅಥ ಪ್ರಉಗಶಸ್ತ್ರಂ ವಿಧತ್ತೇ –ವಾಯೋ ಶುಕ್ರ ಇತ್ಯಾದ್ಯಂ ಪ್ರತೀಕಂ ವಿಹಿ ಹೋತ್ರಾ ಇತಿ ದ್ವಿತೀಯಂ ವಾಯೋ ಶತಮಿತಿ ತೃತೀಯಮಿಂದ್ರಶ್ಚೇತಿ ಚತುರ್ಥಮಾಚಿಕಿತಾನೇತಿ ಪಂಚಮಮಾ ನೋ ವಿಶ್ವಾಭಿರಿತಿ ಷಷ್ಠಂ ತ್ಯಮುವ ಇತಿ ಸಪ್ತಮಮಪತ್ಯಮಿತ್ಯಷ್ಟಮಮಂಬಿತಮ ಇತಿ ನವಮಂ । ಅತ್ರಾಽದ್ಯೈಸ್ತ್ರಿಭಿಃ ಪ್ರತೀಕೈರೇಕಸ್ತ್ರೃಚ ಇತರೈಃ ಷಟ್ಪ್ರತೀಕೈಃ ಷಟ್ತ್ರ್ಯಚಾಃ । ಏತತ್ಸರ್ವಮನುಷ್ಟುಪ್ಛಂದಸ್ಕಂ ಉ್ರಉಗಶಸ್ತ್ರಂ ಕಾರ್ಯಂ । ಅತ್ರಾಕಾರಃ ಪ್ರಶಬ್ದಃ ಶುಕ್ರಶಬ್ದಶ್ಚೇತಿ ಲಿಂಗಾನಿ ದ್ರಷ್ಟವ್ಯಾನಿ । ವಾಯೋ, ಇತ್ಯತ್ರ ಶುಕ್ರವಲ್ಲಿಂಗಂ । ವಿಹಿ ಹೋತ್ರೇತ್ಯಸ್ಯಾಮೃಚಿ ವಾಯವಾಚಂದ್ರೇಣೇತ್ಯಾಕಾರಃ । ವಾಯೋ ಶತಮಿತ್ಯತ್ರ ರಥ ಆ ಯಾತ್ವಿತ್ಯಾಕಾರಃ । ಇಂದ್ರಶ್ಚೇತ್ಯತ್ರ ದ್ವಿತೀಯಸ್ಯಾಮೃಚ್ಯಾಯಾತಮಿತ್ಯಾಕಾರಃ । ಆಚಿಕಿತಾನೇತ್ಯತ್ರಾಽಽನೋ ವಿಶ್ವಾಭಿರಿತ್ಯತ್ರ ಚಾಕಾರೌ ಸ್ಪಷ್ಟೌ । ತ್ಯಮು ಷೋ ಅಪ್ರಹಣಮಿತ್ಯತ್ರ ಪ್ರಶಬ್ದಃ । ಅಪತ್ಯಂ ವೃಜಿನಮಿತ್ಯತ್ರ ತೃತೀಯಸ್ಯಾಮೃಚ್ಯಾ ಸುಗಮಿತ್ಯಾಕಾರಃ । ಅಂಬಿತಮ ಇತ್ಯತ್ರ ಪ್ರಶಸ್ತಿಮಂಬೇತಿ ಪ್ರಶಬ್ದಃ । ಅತೋ ಲಿಂಗಸದ್ಭಾವೇನ ಚತುರ್ಥೇಽಹನಿ ಯೋಗ್ಯತ್ವಾದಿದಂ ಸರ್ವಂ ಚತುರ್ಥಸ್ಯಾಹ್ನೋ ನಿರೂಪಕಂ ॥

ಈಗ ಪ್ರಉಗಶಸ್ತ್ರವನ್ನು ವಿವರಿಸುವರು. ಈ ಶಸ್ತ್ರದಲ್ಲಿ ವಾಯೋ ಶುಕ್ರೋ ಅಯಾಮಿ ತೇ (ಋ. ಸಂ. ೪-೪೭-೧) **ವಿಹಿ ಹೋತ್ರಾ ಅವೀತಾ** (ಋ. ಸಂ. ೪-೪೮-೧) ವಾಯೋ ಶತಂ ಹರೀಣಾಂ (ಋ. ಸಂ. ೪-೪೮-೫) ಎಂಬ ಋಕ್ಕುಗಳೂ, ಇಂದ್ರಶ್ಚ ವಾಯವೇಷಾಂ (ಋ. ಸಂ. ೫-೫೧-೬) ಆಚಿಕಿತಾನ ಸುಕ್ರತೂ (ಋ. ಸಂ. ೫-೬೬-೧) **ಆ ನೋ ವಿಶ್ವಾಭಿರೂತಿಭಿಃ** (ಋ. ಸಂ. ೬-೨೪-೪, ೮-೮-೧) ತ್ಯಮು ಷೋ ಅಪ್ರಹಣಂ (ಋ. ಸಂ ೬-೪೪-೪) **ಅಪತ್ಯಂ ವೃಜಿನಂ** (ಋ. ಸಂ.೬-೫೧-೧) **ಅಂಬಿತಮೇ ನದೀತಮೇ** (ಋ. ಸಂ. ೨-೪೧-೧೬) ಎಂಬ ಆರು ತೃಚಗಳೂ ಒಟ್ಟು ಒಂಭತ್ತೂ ಸೇರಿ ಪ್ರಉಗಶಸ್ತ್ರವಾಗಿರುವವು. ಮೊದಲ ಮೂರೂ ಒಂದೊಂದು ಋಕ್ಕುಗಳು ಮುಂದಿನ ಆರು ತೃಚಗಳ ಸಂಕೇತವು. ಈ ಋಕ್ಕುಗಳೆಲ್ಲವೂ ಅನುಷ್ಟುಪ್ಛಂದಸ್ಕವು ಮತ್ತು ಪ್ರಉಗಶಸ್ತ್ರಮಂತ್ರಗಳು. ಇಲ್ಲ ಎಂದರೆ ಈ ಮಂತ್ರಗಳಲ್ಲಿರುವ ಆಕಾರ, ಪ್ರಶಬ್ದ ಶುಕ್ರಶಬ್ದಗಳಿರುವುದನ್ನು ನೋಡಿ ತಿಳಿಯಬಹುದು. ಹೇಗೆಂದರೆ ವಾಯೋ ಎಂಬಲ್ಲಿ ಶುಕ್ರವತ್ ಎಂಬ ಲಕ್ಷಣವು, ವಿಹಿ ಹೋತ್ರಾ ಎಂಬ ಋಕ್ಕಿನಲ್ಲಿ ಆ ಎಂಬ ಆಕಾರಲಕ್ಷಣವು, ವಾಯೋ ಶತಂ ಎಂಬ ಋಕ್ಕಿನಲ್ಲಿ ಆ ಯಾತ್ವಿತಿ ಆಕಾರವು, ಇಂದ್ರಶ್ಚ ಎಂಬ ತೃಚದ ಎರಡನೇ ಋಕ್ಕಿನಲ್ಲಿ **ಆಯಾತಮಿಂದ್ರ** ಎಂಬಲ್ಲಿರುವ ಆಕಾರವು, ಆಚಿಕಿತಾನ ಎಂಬ ಋಕ್ಕಿನಲ್ಲಿಯೂ ಆನೋ ವಿಶ್ವಾಭಿ ಎಂಬ ಋಕ್ಕಿನಲ್ಲಿಯೂ ಆ ಎಂಬ ಆಕಾರಗಳು, ತ್ಯಮುವೊ ಅಪ್ರಹಣಂ ಎಂಬ ಋಕ್ಕಿನಲ್ಲಿ ಪ್ರಶಬ್ದವು, ಅಪತ್ಯಂ ವೃಜಿನಂ

ಎಂಬ ತೃಚದ ಮೂರನೇ ಋಕ್ಕಿನಲ್ಲಿ ಆಕಾರವು ಅಂಬಿತಮ ಎಂಬ ಋಕ್ಕಿನಲ್ಲಿ ಪ್ರಶಬ್ದವು ಕಂಡುಬರುವುವು ಆದ್ದರಿಂದ ಈ ಲಕ್ಷಣಗಳೆಲ್ಲವೂ ನಾಲ್ಕನೆಯ ದಿವಸದಲ್ಲಿ ಪಠಿಸುವ ಮಂತ್ರಗಳಲ್ಲಿರಬೇಕಾದ ಲಕ್ಷಣಗಳಾಗಿರುವವು.

**ತಂ ತ್ವಾ ಯಜ್ಞೇಭಿರೀಮಹ ಇತಿ ಮರುತ್ವತೀಯಸ್ಯ ಪ್ರತಿಪದೀಮಹ ಇತ್ಯಭ್ಯಾಯಾಮ್ಯಮಿವೈತದಹಸ್ತೇನ ಚತುರ್ಥಸ್ಯಾಹ್ನೋ ರೂಪಂ ॥**

**ಮರುತ್ವತೀಯಶಸ್ತ್ರಸ್ಯ ಪ್ರತಿಪದಂ ವಿಧತ್ತೇ – ಅತ್ರ ಯದೇತದೀಮಹ ಇತಿ ಪದಮಸ್ತಿ ತದ್ಯಾಚಾಮಹ ಇತ್ಯಸ್ಮಿನ್ನರ್ಥೇ ವರ್ತತೇ । ಯಾಚ್ಞಾ ಚ ದೀರ್ಘಕಾಲೇನ ಫಲಪ್ರದಾ । ತಸ್ಮಾದೇತದಹರಭ್ಯಾಯಾಮ್ಯಮಿವಾಭಿತೋ ದೀರ್ಘಂ ಕರ್ತವ್ಯಮಿವ ಪ್ರಯೋಗಬಾಹುಲ್ಯೇನ ದೃಶ್ಯತೇ । ತೇನ ಯಾಚ್ಞಾರ್ಥವಾಚಿಧಾತುದ್ವಾರೇಣ ದೀರ್ಘತ್ವೇನ ಸಾಮ್ಯಪ್ರತೀತೇರಿದಂ ಮಂತ್ರವಾಕ್ಯಂ ಚತುರ್ಥಸ್ಯಾಹ್ನೋ ನಿರೂಪಕಂ ॥**

ಈಗ ಮರುತ್ವತೀಯ ಶಸ್ತ್ರದ ಮೊದಲನೆಯ ಋಕ್ಕನ್ನು ತಿಳಿಸುವರು. **ತಂ ತ್ವಾ ಯಜ್ಞೇಭಿರೀಮಹೇ** (ಋ. ಸಂ. ೮-೬೮-೧೦) ಎಂಬುದು ಮರುತ್ವತೀಯಶಸ್ತ್ರದ ಪ್ರತಿಪತ್ (ಮೊದಲನೆಯ) ಋಕ್ಕು. ಇದರಲ್ಲಿರುವ **ಈಮಹೇ** ಎಂಬ ಶಬ್ದಕ್ಕೆ **ಯಾಚಾಮಹೇ**–ಪ್ರಾರ್ಥಿಸುತ್ತೇವೆ ಎಂಬರ್ಥವಿರುವುದು. ಯಾಚನೆಮಾಡುವುದರಿಂದ ಫಲವು ನಿಧಾನವಾಗಿ ಪ್ರಾಪ್ತವಾಗುವುದು. ಈ ದಿನದ ಕಾರ್ಯಕಲಾಪಗಳು ಬಹಳವಾಗಿರುವುದರಿಂದ ಇವೆಲ್ಲವನ್ನೂ ನೆರವೇರಿಸಲು ಬಹಳಕಾಲ ಹಿಡಿಯುವುದು. ಇದರ ಫಲವೂ ನಿಧಾನವಾಗಿಯೇ ದೊರೆಯುವುದು. ಇಲ್ಲಿ ಅನೇಕ ಕಾರ್ಯಕಲಾಪಗಳು ಎಂದು ಹೇಳಿರುವುದರಿಂದ ಇದು ನಾಲ್ಕನೆಯ ದಿನದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರಬೇಕಾದ ಲಕ್ಷಣವಾಗಿರುವುದು.

**ಇದಂ ವಸೋ ಸುತಮಂಧ ಇಂದ್ರ ನೇದೀಯ ಏದಿಹಿ ಪ್ರೈತು ಬ್ರಹ್ಮಣಸ್ಪತಿರಗ್ನಿರ್ನೇತಾ ತ್ವಂ ಸೋಮ ಕ್ರತುಭಿಃ ಪಿನ್ವಂತ್ಯಪಃ ಪ್ರ ವ ಇಂದ್ರಾಯ ಬೃಹತ ಇತಿ ಪ್ರಥಮೇನಾಹ್ನಾ ಸಮಾನ ಆತಾನಶ್ಚತುರ್ಥೇಽಹನಿ ಚತುರ್ಥಸ್ಯಾಹ್ನೋ ರೂಪಂ ॥**

**ಮಂತ್ರಾಂತರಾಣಿ ವಿಧತ್ತೇ—ಆತಾನಃ ಶಸ್ತ್ರಕ್ಲೃಪ್ತಿಃ । ಸಾ ಚೇದಂ ವಸೋಃ ಸುತಮಿತ್ಯಾದಿಕಾಸ್ಮಿಂಶ್ಚತುರ್ಥೇಽಹನಿ ಪೂರ್ವೋಕ್ತೇನ ಪ್ರಥಮೇನಾಹ್ನಾ ಸಮಾನಾ । ತತ್ಸಾಮ್ಯಂ ಚೈಕಂ ಲಿಂಗಂ ॥**

ಮರುತ್ವತೀಯ ಶಸ್ತ್ರದ ಇತರ ಮಂತ್ರಗಳನ್ನು ತಿಳಿಸುವರು. **ಇದಂ ವಸೋ ಸುತಮಂಧಃ** (ಋ. ಸಂ. ೮-೨-೧) **ಇಂದ್ರನೇದೀಯ ಏದಿಹಿ** (ಋ. ಸಂ. ೮-೫೨-೫) **ಪ್ರೈತು ಬ್ರಹ್ಮಣಸ್ಪತಿಃ** (ಋ. ಸಂ.೧-೪೦-೩) **ಅಗ್ನಿರ್ನೇತಾ ಭಗಃ** (ಋ. ಸಂ. ೩-೨೦-೪) **ತ್ವಂ ಸೋಮ ಕ್ರತುಭಿಃ** (ಋ. ಸಂ. ೧-೯೧-೨) **ಪಿನ್ವಂತ್ಯಪೋ ಮರುತಃ** (ಋ. ಸಂ. ೧-೬೪-೬) **ಪ್ರ ವ ಇಂದ್ರಾಯ ಬೃಹತೇ** (ಋ. ಸಂ. ೮-೮೯-೩) ಎಂಬ ಋಕ್ಕುಗಳೆಲ್ಲವೂ ಪ್ರಥಮ ದಿವಸದಲ್ಲಿಯೇ ಪಠಿಸಿರುವುದರಿಂದಲೂ ಇಲ್ಲಿಯೂ ಪಠಿಸಬೇಕಾಗಿರುವುದರಿಂದಲೂ ಈ ಋಕ್ಕುಗಳು ಎರಡುಕಡೆಯೂ ಸಮಾನವು ಪ್ರಥಮದಿವಸದ ಲಕ್ಷಣಗಳೆಲ್ಲವೂ ಇಲ್ಲಿಯೂ ಸಮಾನವಾಗಿರುವುದರಿಂದ ಇಲ್ಲಿಯೂ ನಾಲ್ಕನೆಯ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳಿದ್ದಂತಾಯಿತು.

**ಶ್ರುಧೀ ಹವಮಿಂದ್ರ ಮಾ ರಿಷಣ್ಯ ಇತಿ ಸೂಕ್ತಂ ಹವವಚ್ಚತುರ್ಥೇಽಹನಿ ಚತುರ್ಥಸ್ಯಾಹ್ನೋ ರೂಪಂ ॥**

**ಸೂಕ್ತಾಂತರಂ ವಿಧತ್ತೇ–ಹವಶಬ್ದೋಪೇತಮೇತಸ್ಯಾಹ್ನೋ ವಿಶೇಷಲಿಂಗಮಿತಿ ಪೂರ್ವಮುಕ್ತಂ ॥**

ಮುಂದಿನ ಬೇರೆ ಸೂಕ್ತವನ್ನು ವಿವರಿಸುವರು. ಶ್ರುಧೀ ಹವಮಿಂದ್ರ ಮಾ ರಿಷಣ್ಯಃ (ಋ. ಸಂ. ೨-೧೧-೨) ಎಂಬುದೇ ಆ ಸೂಕ್ತವು. ಇದರಲ್ಲಿ ಹವಶಬ್ದವಿರುವುದರಿಂದ ಹಿಂದೆ ಹೇಳಿದಂತೆ ನಾಲ್ಕನೆಯ ದಿವಸದ ಲಕ್ಷಣವಿದ್ದಂತಾಯಿತು.

**ಮರುತ್ವಾँ ಇಂದ್ರ ವೃಷಭೋ ರಣಾಯೇತಿ ಸೂಕ್ತಮುಗ್ರಂ ಸಹೋದಾಮಿಹ ತಂ ಹುವೇಮೇತಿ ಹವವಚ್ಚತುರ್ಥೇಽಹನಿ ಚತುರ್ಥಸ್ಯಾಹ್ನೋ ರೂಪಂ ॥**

**ಅನ್ಯಸ್ಮಿನ್ನಪಿ ಸೂಕ್ತೇ ತಲ್ಲಿಂಗಂ ದರ್ಶಯತಿ–ಮರುತ್ವಾನಿತ್ಯಸ್ಯ ಸೂಕ್ತಸ್ಯೋಗ್ರಮಿತ್ಯಾದಿರಂತಿಮಃ ಪಾದಸ್ತತ್ರ ಹುವೇಮೇತಿ ಹವಶಬ್ದಾರ್ಥವಾಚೀ ಧಾತುರ್ದೃಶ್ಯತೇ ಅತೋ ಲಿಂಗಸದ್ಭಾವಾದಹ್ನೋ ನಿರೂಪಕಂ ॥**

ಮುಂದಿನ ಸೂಕ್ತದಲ್ಲಿರುವ ಲಕ್ಷಣವನ್ನೂ ತಿಳಿಸುವರು. ಮರುತ್ವಾँ ಇಂದ್ರ ವೃಷಭೊ ರಣಾಯ (ಋ. ಸಂ. ೩-೪೭-೧) ಎಂಬುದೇ ಆ ಸೂಕ್ತವು. ಈ ಸೂಕ್ತದಲ್ಲಿರುವ ಈ ಋಕ್ಕಿನ ಕೊನೆಯ ಪಾದದಲ್ಲಿ ಹುವೇಮ ಎಂದು ಹವಶಬ್ದಾರ್ಥವಿರುವುದರಿಂದ ಇದರಲ್ಲಿ ನಾಲ್ಕನೆಯ ದಿನದ ಮಂತ್ರದಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

**ತದು ತ್ರೈಷ್ಟುಭಂ ತೇನ ಪ್ರತಿಷ್ಠಿತಪದೇನ ಸವನಂ ದಾಧಾರಾಽಽಯತನಾದೇವೈತೇನ ನ ಪ್ರಚ್ಯವತೇ ॥**

**ಏತತ್ಸೂಕ್ತಂ ಪ್ರಶಂಸತಿ–ತದು ತತ್ತು ಸೂಕ್ತಂ ತ್ರಿಷ್ಟುಪ್ ಛಂದಸ್ಕಂ । ಪ್ರತಿಷ್ಠಿತಾನಿ ಪದಾನಿ ಪ್ರತಿನಿಯತಾಕ್ಷರಸಂಖ್ಯಾಯುಕ್ತಾಃ ಪಾದಾ ಯಸ್ಮಿನ್ಸೂಕ್ತೇ ತತ್ಪ್ರತಿಷ್ಠಿತಪದಂ । ತಾದೃಶೇನ ತೇನ ಸೂಕ್ತೇನ ಸವನಂ ಮಾಧ್ಯಂದಿನಸವನಗತಂ ಮರುತ್ವತೀಯಶಸ್ತ್ರಂ ದಾಧಾರ ಧಾರಿತವಾನ್ಭವತಿ । ಏತೇನ ಸೂಕ್ತೇನ ಸ್ವಯಮಾಯತನಾತ್ಸ್ವಕೀಯಗೃಹಾತ್ಕದಾಚಿದಪಿ ನ ಪ್ರಚ್ಯವತೇ ॥**

ಈ ಸೂಕ್ತವನ್ನು ಪ್ರಶಂಸೆಮಾಡುವರು. ಈ ಸೂಕ್ತವು ತ್ರಿಷ್ಟುಪ್‌ಛಂದಸ್ಕವು. ಋಕ್ಕಿನ ಪಾದಗಳಲ್ಲಿ ಕ್ಲೃಪ್ತಸಂಖ್ಯೆಯ ಅಕ್ಷರಗಳಿದ್ದು ಹೆಚ್ಚುಕಡಿಮೆ ಇಲ್ಲದಿದ್ದರೆ ಅಂತಹ ಋಕ್ಕುಗಳಿರುವ ಸೂಕ್ತಕ್ಕೆ ಪ್ರತಿಷ್ಠಿತಪದ ಎಂದು ಹೆಸರು. ಇಂತಹ ಸೂಕ್ತದಿಂದ ಕೂಡಿದ ಮಾಧ್ಯಂದಿನ ಸವನವು ಮರುತ್ವತೀಯ ಶಸ್ತ್ರಕೆ ಪ್ರಾಧಾನ್ಯತೆಯನ್ನುಂಟುಮಾಡುವುದು. ಇಂತಹ ಸೂಕ್ತಪಠನದಿಂದ ಯಜಮಾನನು ತನ್ನ ಸ್ವಂತ ನಿವಾಸವನ್ನು ಬಿಟ್ಟು ಬೇರೆ ಹೋಗುವ ಅವಶ್ಯಕತೆ ಎಂದರೆ ಸ್ಥಾನಭ್ರಷ್ಟತೆಯು ಎಂದಿಗೂ ಉಂಟಾಗುವುದಿಲ್ಲ.

**ಇಮಂ ನು ಮಾಯಿನಂ ಹುವ ಇತಿ ಪರ್ಯಾಸೋ ಹವವಾಂಶ್ಚತು-ರ್ಥೇಽಹನಿ ಚತುರ್ಥಸ್ಯಾಹ್ನೋ ರೂಪಂ ॥**

ಅಂತ್ಯಂ ತೃಚಂ ವಿಧತ್ತೇ—ಇಮಂ ನ್ವಿತ್ಯಾದಿತೃಚವಿಶೇಷಃ ಪರಿತಃ ಪೂರ್ವೋಕ್ತಾ-ನಾಮಂತೇ ಪ್ರಕ್ಷೇಪಣೀಯಃ । ತತ್ರ ಹುವ ಇತಿ ಹವಶಬ್ದಾರ್ಥೇ ಧಾತುರಸ್ತ್ಯತಶ್ಚತುರ್ಥ-ಸ್ಯಾಹ್ನೋ ನಿರೂಪಕಸ್ತೃಚಃ ॥

ಈ ಸೂಕ್ತದ ಕೊನೆಯ ತೃಚವನ್ನು ವಿವರಿಸುವರು. ಇಮಂ ನು ಮಾಯಿನಂ ಹುವೇ (ಋ. ಸಂ. ೮-೭೬-೧) ಎಂಬುವೇ ಆ ಕೊನೆಯ ತೃಚವು. ಇವನ್ನು ಹಿಂದೆ ಹೇಳಿದ ಮಂತ್ರಗಳ ಕೊನೆಯಲ್ಲಿ ಸೇರಿಸಿ ಹೇಳಬೇಕು. ಹುವೆ ಎಂಬ ಶಬ್ದವಿರುವುದರಿಂದ ನಾಲ್ಕನೆಯ ದಿನವಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

**ತಾ ಉ ಗಾಯತ್ರ್ಯೋ ಗಾಯತ್ರ್ಯೋ ವಾ ಏತಸ್ಯ ತ್ರ್ಯಹಸ್ಯ ಮಧ್ಯಂದಿನಂ ವಹಂತಿ ॥**

ತದೇತತ್ಪ್ರಶಂಸತಿ—ತಾ ಉ ತಾಃ ಸೂಕ್ತಗತಾ ಋಚೋ ಗಾಯತ್ರೀಛಂದಸ್ಕಾ-ಗಾಯತ್ರ್ಯಶ್ಚೈತಸ್ಯ ಮಧ್ಯಮಸ್ಯ ತ್ರ್ಯಹಸ್ಯ ಮಾಧ್ಯಂದಿನಂ ಸವನಂ ವಹಂತಿ ॥ ಪೂರ್ವೋಕ್ತ-ನಿರ್ವಾಹಕ್ರಮೇಣ ಜಗತ್ಯಾಃ ಪ್ರಾತಃಸವನನಿರ್ವಾಹಿತ್ವಂ ಗಾಯತ್ರ್ಯಾ ಮಾಧ್ಯಂದಿನಸವನನಿರ್ವಾ-ಹಿತ್ವಂ ಚ ದರ್ಶಿತಂ ॥

ಮೇಲಿನ ತೃಚವನ್ನು ಪ್ರಶಂಸೆಮಾಡುವರು. ಈ ಸೂಕ್ತದಲ್ಲಿರುವ ಋಕ್ಕುಗಳೆಲ್ಲವೂ ಗಾಯತ್ರೀಛಂದಸ್ಕವು. ಈ ಗಾಯತ್ರೀಛಂದಸ್ಸಿನ ಋಕ್ಕುಗಳೆಲ್ಲವೂ ಈ ಮಧ್ಯಮತ್ರ್ಯಹದ ಮಾಧ್ಯಂದಿನಸವನವನ್ನು ನಿರ್ವಹಿಸುವವು. ಹಿಂದೆ ಹೇಳಿದ ಪ್ರಕಾರ ಜಗತೀಛಂದಸ್ಸಿನ ಮಂತ್ರಗಳು ಪ್ರಾತಸ್ಸವನವನ್ನು ನಿರ್ವಹಿಸುವವು. ಗಾಯತ್ರೀಛಂದಸ್ಸಿನ ಋಕ್ಕುಗಳು ಮಾಧ್ಯಂದಿನ ಸವನವನ್ನು ನಿರ್ವಹಿಸುವವು.

**ತದ್ವೈತಚ್ಛಂದೋ ವಹತಿ ಯಸ್ಮಿನ್ನಿವಿದ್ಧೀಯತೇ ತಸ್ಮಾದ್ಗಾಯತ್ರೀಷು ನಿವಿದಂ ದಧಾತಿ ॥**

ಅಸ್ಮಿನ್ತ್ರ್ಯಚೇ ನಿವಿದ್ಧಾನಂ ವಿಧತ್ತೇ—ಯಸ್ಮಿಂಶ್ಛಂದಸಿ ನಿವಿತ್ಪದಸಮೂಹಃ ಪ್ರಕ್ಷಿ-ಪ್ಯತೇ ತದೇತಚ್ಛಂದೋ ವಹತಿ ಸವನಸ್ಯ ನಿರ್ವಾಹಕಂ ಭವತಿ । ತಸ್ಮಾನ್ನಿರ್ವಾಹಣಾಯ ತಾಸು ಗಾಯತ್ರೀಷು ನಿವಿದಂ ದಧ್ಯಾತ್ ।

ಈ ತೃಚದಲ್ಲಿ ನಿವಿದ್ಧಾನಮಂತ್ರವನ್ನು ಸೇರಿಸುವರು. ಯಾವ ಛಂದಸ್ಸಿನ ಮಂತ್ರಗಳಲ್ಲಿ ನಿವಿತ್ಪದಸಮೂಹವನ್ನು ಸೇರಿಸುವರೋ ಆ ಛಂದಸ್ಸಿನ ಮಂತ್ರಗಳು ಸವನವನ್ನು ನಿರ್ವಹಿಸುವವು. ಆದ್ದರಿಂದ ಗಾಯತ್ರೀಛಂದಸ್ಸಿನ ಮಂತ್ರಗಳಲ್ಲಿ ನಿವಿತ್ಪದಗಳನ್ನು ಸೇರಿಸುವುದರಿಂದ ಗಾಯತ್ರೀಛಂದಸ್ಸಿನ ಮಂತ್ರಗಳೇ ಇಲ್ಲಿ ಸವನವನ್ನು ನಿರ್ವಹಿಸುವವು.

**ಪಿಬಾ ಸೋಮಮಿಂದ್ರ ಮಂದತು ತ್ವಾ ಶ್ರುಧೀ ಹವಂ ವಿಪಿಪಾನಸ್ಯಾ-ದ್ರೇರಿತಿ ವೈರಾಜಂ ಪೃಷ್ಠಂ ಭವತಿ ಬಾರ್ಹತೇಽಹನಿ ಚತುರ್ಥೇಽ-ಹನಿ ಚತುರ್ಥಸ್ಯಾಹ್ನೋ ರೂಪಂ ॥**

**ಅಥ ವೈರಾಜಸಾಮಸಂಬದ್ಧಂ ತ್ರ್ಯಚದ್ವಯಂ ವಿಧತ್ತೇ— ಪೃಷ್ಠಸ್ತೋತ್ರಸಾಧನಸ್ಯ ವೈರಾಜಸಾಮ್ನ ಆಧಾರಃ ಪಿಬಾ ಸೋಮಮಿತ್ಯಾದಿಃ ಸ್ತೋತ್ರಿಯಸ್ತ್ರ್ಯಚಃ ಶ್ರುಧೀ ಹವಮಿತ್ಯಾ-ದ್ಯನುರೂಪೋಽತೋ ವೈರಾಜಸಾಮಸಂಬಂಧೋ ಲಿಂಗಂ । ಕಿಂ ಚ ಬೃಹತ್ಸಾಮ್ನೋಽಪತ್ಯಂ ವೈರಾಜಸಾಮ । ಇದಂ ಚಾಹರ್ಯುಗ್ಮರೂಪತ್ವಾದ್‌ಬೃಹತ್ಸಾಮಸಂಬಂಧಿ । ಅತೋಽಪಿ ಕಾರ-ಣಾದಸ್ಮಿನ್ನಹನ್ಯೇತತ್ತ್ರ್ಯಚದ್ವಯಂ ಯುಕ್ತಂ ॥**

ಈಗ ವೈರಾಜಸಂಬಂಧವಾದ ಎರಡು ತೃಚಗಳನ್ನು ವಿವರಿಸುವರು. ಪ್ರಷ್ಠಸ್ತೋತ್ರಕ್ಕೆ ಸಾಧನಭೂತವಾದ ವೈರಾಜ ಸಾಮಕ್ಕೆ **ಪಿಬಾ ಸೋಮಮಿಂದ್ರ ಮಂದತು** (ಋ. ಸಂ. ೭-೨೨-೧) ಎಂಬ ಋಕ್ಕೇ ಆಧಾರವು. **ಶ್ರುಧೀ ಹವಂ ವಿಪಿಪಾನಸ್ಯಾದ್ರೇಃ** (ಋ. ಸಂ. ೭-೨೨-೪) ಎಂಬ ಋಕ್ಕು ಅನುರೂಪತೃಚವು. ಇದೂ ವೈರಾಜಸಂಬಂಧವು ಮತ್ತು ಬೃಹತ್ಸಾಮಕ್ಕೆ ಈ ವೈರಾಜಸಾಮವು ಅಪತ್ಯಸ್ಥಾನದಲ್ಲಿರುವುದು. ಈ ನಾಲ್ಕನೇ ದಿನವೂ ಬೃಹತ್ಸಾಮಸಂಬಂಧಿಯಾಗಿರುವುದು. ಆದ್ದರಿಂದ ಈ ಬಾರ್ಹತವೆಂಬ ನಾಲ್ಕನೇ ದಿನದಲ್ಲಿ ಈ ತೃಚದ್ವಯವನ್ನು (ಎರಡು ತೃಚಗಳನ್ನು) ಪಠಿಸುವುದು ಯುಕ್ತವೇ ಆಗಿರುವುದು.

**ಯದ್ವಾವಾನೇತಿ ಧಾಯ್ಯಾಽಚ್ಯುತಾ ॥**

**ಋಗಂತರಂ ವಿಧತ್ತೇ—ಅಚ್ಯುತತ್ವಂ ಸರ್ವಸಂಬಂಧಿಲಿಂಗಮಿತ್ಯುಕ್ತಂ ।**

ಮುಂದಿನ ಋಕ್ಕನ್ನು ವಿವರಿಸುವರು. **ಯದ್ವಾವಾನ ಪುರುತಮಂ** (ಋ. ಸಂ. ೧೦-೭೪-೬) ಎಂಬ ಋಕ್ಕು ಅಚ್ಯುತತ್ವವೆಂಬ ಎಂದರೆ ಸರ್ವಸಂಬಂಧವಾದ ಲಕ್ಷಣಗಳಿಂದ ಕೂಡಿದ ಋಕ್ಕಾಗಿರುವುದು.

**ತ್ವಾಮಿದ್ಧಿ ಹವಾಮಹ ಇತಿ ಬೃಹತೋ ಯೋನಿಮನುನಿವರ್ತಯತಿ ಬಾರ್ಹತಂ ಹ್ಯೇತದಹರಾಯತನೇನ**

**ತಸ್ಮಾತ್ತ್ರ್ಯ (ಸ್ಯಾ ಋ) ಚ ಊರ್ಧ್ವಮನ್ಯಂ ಪ್ರಗಾಥಂ ವಿಧತ್ತೇ–ತ್ವಾಮಿದ್ಧೀತ್ಯಸ್ಯಾಮೃಚಿ ಬೃಹತ್ಸಾಮೋತ್ಪನ್ನಂ ತಸ್ಮಾದೇತಂ ಯೋನಿಭೂತಂ ಪ್ರಗಾಥಂ ಪೂರ್ವೋಕ್ತಧಾಯ್ಯಾಮನು ಪಶ್ಚಾಚ್ಛಂಸೇತ್ । ಏತಚ್ಚಾಹರಾಯತನೇನ ಯುಗ್ಮಾಹಸ್ಸ್ವರೂಪಸ್ಥಾನೇನ ಬೃಹತ್ಸಾಮಸಂ-ಬಂಧಂ ಲಿಂಗಮಿತ್ಯುಕ್ತಂ ॥**

ಈ ಋಕ್ಕಿನ ಮುಂದಿನ ಬೇರೊಂದು ಪ್ರಗಾಥವನ್ನು ವಿವರಿಸುವರು. **ತ್ವಾಮಿದ್ಧಿ ಹವಾಮಹೇ** (ಋ. ಸಂ ೬-೪೬-೧) ಎಂಬ ಋಕ್ಕಿನಿಂದ ಬೃಹತ್ಸಾಮವು ಉತ್ಪನ್ನವಾಗಿರುವುದು. ಆದ್ದರಿಂದ ಈ ಋಕ್ಕು ಈ ಬೃಹತ್ಸಾಮಕ್ಕೆ ಯೋನಿ ಭೂತವಾಗಿರುವುದು. ಈ ಕಾರಣದಿಂದ ಈ ಪ್ರಗಾಥವನ್ನು (ಋಕ್ಕನ್ನು) ಧಾಯ್ಯಾಮಂತ್ರಪಠನಾನಂತ ಪಠಿಸಬೇಕು. ಇದು

ಯುಗ್ಮಾಹಸ್ವರೂಪ ಎಂದರೆ ಎರಡು ದಿನದ ಸ್ವರೂಪವಾಗಿರುವುದರಿಂದ ಬಾರ್ಹತಂ ಎಂದರೆ ಬೃಹತೀಛಂದಸ್ಸಿನಿಂದ ಕೂಡಿರುವುದೂ ಬೃಹತ್ಸಾಮಸಂಬಂಧಯುಕ್ತವೂ ಆಗಿರುವುದು. ಆದ್ದರಿಂದ ನಾಲ್ಕನೆಯ ದಿವಸದ ಲಕ್ಷಣವು ಇದ್ದಂತಾಯಿತು.

## ತ್ವಮಿಂದ್ರ ಪ್ರತೂರ್ತಿಷ್ವಿತಿ ಸಾಮಪ್ರಗಾಥಃ ॥

**ವೈರಾಜಸಾಮ್ನಃ ಸಂಬಂಧಿನಂ ಪ್ರಗಾಥಂ ವಿಧತ್ತೇ—**

ವೈರಾಜಸಾಮದ ಸಂಬಂಧವಾದ ಪ್ರಗಾಥಮಂತ್ರವನ್ನು ಹೇಳುವರು. **ತ್ವಮಿಂದ್ರ ಪ್ರತೂರ್ತಿಷು** (ಋ. ಸಂ. ೮-೯೯-೫) ಎಂಬ ಋಕ್ಕೇ ಆ ಪ್ರಗಾಥವು.

## ಅಶಸ್ತಿಹಾ ಜನಿತೇತಿ ಜಾತವಾಂಶ್ಚತುರ್ಥೇಽಹನಿ ಚತುರ್ಥಸ್ಯಾಹ್ನೋ ರೂಪಂ

**ತತ್ರ ಲಿಂಗಂ ದರ್ಶಯತಿ— ಉಕ್ತೇ ಪ್ರಗಾಥೇ ತೃತೀಯಪಾದೋಽಯಮತ್ರಾಶಸ್ತಿಹಾ ಜನಿತೇತಿ ತತೋಽಯಂ ಜಾತವಾನ್ । ಜನಿಧಾತುಯುಕ್ತಂ ಜಾತವತ್ತ್ವಂ ಚೈತಸ್ಯಾಹ್ನೋ ಲಿಂಗಂ ॥**

ಈ ಪ್ರಗಾಥದ ಲಕ್ಷಣವನ್ನು ತಿಳಿಸುವರು. ಈ ಪ್ರಗಾಥದ ಮೂರನೇ ಪಾದದಲ್ಲಿ **ಅಶಸ್ತಿಹಾ ಜನಿತಾ** ಎಂದಿರುವುದು. ಜನಿತಾ ಎಂದರೆ ಜಾತವಾನ್ ಎಂದರ್ಥವು. ಇಲ್ಲಿ ಜನಿಧಾತುಯುಕ್ತವಾದ ಶಬ್ದವಿರುವುದರಿಂದ ಇದು ನಾಲ್ಕನೇ ದಿನದಲ್ಲಿ ಪಠಿಸಬೇಕಾದ ಮಂತ್ರದ ಲಕ್ಷಣವಿದ್ದಂತಾಯಿತು.

## ತ್ಯಮೂಷು ವಾಜಿನಂ ದೇವಜೂತಮಿತಿ ತಾರ್ಕ್ಷ್ಯೋಽಚ್ಯುತಃ ॥

**ತ್ಯಮೂ ಷ್ವಿತಿ ಸೂಕ್ತವಿಶೇಷಸ್ಯಾಚ್ಯುತತ್ವಂ ಲಿಂಗ ದರ್ಶಯತಿ—**

ತ್ಯಮೂಷು ಎಂಬ ಸೂಕ್ತದಲ್ಲಿರುವ ಅಚ್ಯುತತ್ವವೆಂಬ ಲಕ್ಷಣವನ್ನು ತಿಳಿಸುವರು. **ತ್ಯಮೂಷು ವಾಜಿನಂ ದೇವಜೂತಂ** (ಋ. ಸಂ. ೧೦-೧೭೮-೧) ಎಂಬುದು ಈ ಶಸ್ತ್ರದ ಒಂದು ಸೂಕ್ತವು. ಇದರಲ್ಲಿ ಅಚ್ಯುತತ್ವಲಕ್ಷಣವಿರುವುದರಿಂದ ನಾಲ್ಕನೆಯ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

*English Translation*

**(The characteristics of the fourth day. The Shastras of the morning and midday libations).**

The leading deity of the fourth day is the Vach. The Stoma is the twenty-one-fold, the Saman is Vairaja, the metre is Anushtubh. He who knows what deity, what Stoma, what Saman, what metre are required on the fourth day, succeeds through it (the fourth day). The terms a and pra are the characterist-

ics of the fourth day. The fourth day has all the characteristics of the first, viz , yukta ratha, asu, pa (to drink); the mentioning of the deity in the first pada, an allusion to this world. Other characteristics of the fourth day are, jata, hava, sukra, what has the form of speech (the Nyunkha), what is by Vimada viriphita. what has different metres (vichandas,) what is wanting in syllables, and what has an excess of them; what refers to Viraj and to Anushtubh; the tense is future (karishyat).

Agnim na svavriktibhih (10, 21) is the Ajya hymn of the fourth day.

It is by the Rishi Vimada, whose name is contained in al alliteration in it (in vi vo made), and has alliterations, consonances, and assonances (viriphitam). Such a hymn is a characteristic of the fourth day. It consists of eight verses, and is in the Pankti metre; because the sacrifice is a Pankti (series of ceremonies); and cattle are of the Pankti nature (i.e. they conssist of five parts); it is done for obtaining cattle.

These eight verses make ten Jagatis, because this morning libation of the middle three days from the fourth to the sixth belongs to the Jagat (i. e. Jagati). This (the connection of the Jagati with the morning libation) is a characteristic of the fourth day.

These eight verses comprise ten Anushtubhs; for this is the Anushtubh day, in the application of which metre one of the characteristics of the fourth day consists. These eight verses contain twenty Gayatris; for this day is again a day of commencement like the first, where Gayatri is the metre. In this consists a characteristic of the fourth day.

Although this hymn is neither accompanied by the chants of the Sama singers, nor by the recitations of the Hotri priests, the sacrifice does not lose its essence by it; but the sacrificial personage is even actually present in it; thence it serves as the Ajya Shastra of the fourth day. They thus develop (stretch out) of the form of the sacrifice contained in this hymn, the sacrifice (i. e. this hymn is the external shape, in the boundary of which the sacrifice - conceived as a being - extends and thrives,) and obtain through the medinm of this hymn) the Vach again. This is done for establishing a connection between the several periods of three days. Those who have such a knowledge move continually within the closely connected and uninterrupted periods of three days (required for having success in the sacrifice.)

The Pra-uga Shastra, which is in the Anushtubh metre, is composed of the following verses: Vayo sukro (4-47-1) vihi hotra avita (4, 48, 1), vayo satam

harinam (4, 48, 5), indras'cha vayav esham (4, 48, 2–4), a chikitana sukratu (5, 66, 1-3) a no visvabhir utibhih (7, 24, 4-6) tyam u vo aprahanam (6, 44, 4-6), apa tyam vrijinam ripum (6, 51, 13-15), ambitame naditame (2, 41, 1-3). In them there occur the words a, pra and sukra, which are characteristics of the fourth day.

Tam tva yajnebhir imahe (8, 57, 10) is the beginning (pratipati) of the of the Marutvatiya Shastra. The word imahe, "we ask for" in this verse means, that this day's work is to be made long (in consequence of the multitude of rites as it were (just as one has to wait long before a request is acceded to). This is a characteristic of the fourth day for it indicates the multitude of its rites.

The verses, Idam vaso sutam andhah, (8, 2, 1-2), Indra nediya (Val. 5, 5-6) praitu Brahmanaspatir (1, 40, 34), Agnir neta (3, 20, 4) tvam Soma kratubhih (1, 91, 2) pinvanty apo (164, 6), prava indraya brihate (8, 78, 3), which form part of the Marutvatiya Shastra of the first day, are also required for the fourth day, and a characteristic of it. Srudhi hvam ma rishanya (2, 11, 1) is the hymn which contains the word hava, (call) being a characteristic of the fourth day. In the hymn Marutvam Indra vrishabho (3, 47) there is in its last quarter (47, 5) in the word havema, the root hu perceptible, which is a characteristic of the fourth day. This hymn is in the Trishtubh metre.

By means of the padas of this hymn which stand firm, the Hotar keeps the libation lest it fall from its proper place (it should be kept in its proper place, like a piece in machinery). Imam nu mayinam huva (8, 65, 13) is the setting (paryasa) containing the word huva which is a characteristic of the fourth day. The verses of this hymn are in the Gayatri metre, for the Gayatri verses are the leaders of the midday libation in these latter three days. That metre is the leading one in which the Nivid is placed; therefore one puts in these Gayatri verses the Nivid.

Piba Somam Indra mandatu (7, 22, 1-2) and srudhi havam vipipanasyadrer (7, 22, 4-5) is the Vairaja Prishtham of the Brihat days, to which the fourth day belongs. This reference to the Brihat is a characteristic of the fourth day.

Yad vavana (10, 74, 6) is the immovable Dhayya.

Tvam iddhi havamahe (6, 46, 1) forms the womb, (central vese) to which the Hotar brings all back, after the Dhayya, has been recited; for this is a Brihat Sama day according to its position (thence the Pragatha, constituting the text of the Brihat Saman is its womb.)

Tvam Indra praturtishu (8, 88, 5) is the Sama Pragatha; the third pada as astiha janita contains the term "jata" which is a characteristic of the fourth day. Tyam u shu vajinam (10, 178) is the immovable Tarkshya.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಏಕವಿಂಶಾಧ್ಯಾಯೇ ಚತುರ್ಥಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೊಂದನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವಾದುದು.



## ಅಥ ಏಕವಿಂಶಾಧ್ಯಾಯೇ ಪಂಚಮಃ ಖಂಡಃ

### ಇಪ್ಪತ್ತೊಂದನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ ನಿಷ್ಕೇವಲ್ಯಶಸ್ತ್ರದ ಉಳಿದ ಮಂತ್ರಗಳು ; ತೃತೀಯಸವನದಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳು ಇತ್ಯಾದಿ.]



**ಕುಹ ಶ್ರುತ ಇಂದ್ರಃ ಕಸ್ಮಿನ್ನದ್ಯೇತಿ ಸೂಕ್ತಂ ವೈಮದಂ ವಿರಿಫಿತಂ ವಿರಿಫಿತಸ್ಯ ಋಷೇಶ್ಚತುರ್ಥೇಽಹನಿ ಚತುರ್ಥಸ್ಯಾಹ್ನೋ ರೂಪಂ.**

ವಿಮದೇನ ಮಹರ್ಷಿಣಾ ದೃಷ್ಟಂ ನ್ಯೂಙ್ಖಸಹಿತಂ ಸೂಕ್ತಂ ವಿಧತ್ತೆ—ಪೂರ್ವವದ್ವ್ಯಾಖ್ಯೇಯಂ ||

ವಿಮದನೆಂಬ ಮಹರ್ಷಿದೃಷ್ಟವಾದ ಮತ್ತು ನ್ಯೂಂಖಸಹಿತವಾದ ಸೂಕ್ತವನ್ನು ವಿವರಿಸುವರು **ಕುಹ ಶ್ರುತ ಇಂದ್ರಃ** (ಋ. ಸಂ. ೧೦-೨೨-೧) ಎಂಬ ಸೂಕ್ತವು ವಿಮದನೆಂಬ ಮಹರ್ಷಿಯಿಂದ ದೃಷ್ಟವಾದುದು ಮತ್ತು ಈ ಸೂಕ್ತದ ಆದಿಯಲ್ಲಿ ನ್ಯೂಂಖವನ್ನು ಸೇರಿಸಿ ಪಠಿಸಬೇಕು, ವಿರಫಿತಂ ಎಂದಿರುವುದು ಈ ಮಂತ್ರದಲ್ಲಿ ನಾಲ್ಕನೆಯ ದಿವಸದಲ್ಲಿ ಪಠಿಸಬೇಕಾದ ಲಕ್ಷಣವಿದ್ದಂತಾಯಿತು.

ಯುಧ್ಮಸ್ಯ ತೇ ವೃಷಭಸ್ಯ ಸ್ವರಾಜ ಇತಿ ಸೂಕ್ತಮುರುಂ ಗಭೀರಂ ಜನುಷಾಽಭ್ಯುಗ್ರಮಿತಿ ಜಾತವಚ್ಚತುರ್ಥೇಽಹನಿ ಚತುರ್ಥ-ಸ್ಯಾಹ್ನೋ ರೂಪಂ

ಸೂಕ್ತಾಂತರಂ ವಿಧತ್ತೇ---ಯುಧ್ಮಸ್ಯೇತಿ ಸೂಕ್ತ ಉರುಂ ಗಭೀರಮಿತಿ ಯಃ ಪಾದ-ಸ್ತತ್ರ ಜನುಷೇತಿ ಶ್ರವಣಾಜ್ಜಾತವಜ್ಜನಿಧಾತುಯುಕ್ತಂ ಲಿಂಗಮಸ್ತಿ ॥

ಮುಂದಿನ ಸೂಕ್ತವನ್ನು ವಿವರಿಸುವರು. ಯುಧ್ಮಸ್ಯ ತೇ ವೃಷಭಸ್ಯ (ಋ. ಸಂ. ೨-೪೬-೧) ಎಂಬುದೇ ಆ ಸೂಕ್ತವು ಈ ಸೂಕ್ತದಲ್ಲಿರುವ ಋಕ್ಕಿನ ಉರುಂ ಗಭೀರಂ ಎಂಬ ಪಾದದಲ್ಲಿ ಜನುಷಾ ಎಂಬ ಪದವಿರುವುದು. ಜನಿಧಾತು ವಿರುವುದರಿಂದ ನಾಲ್ಕನೆಯ ದಿವಸದ ಮಂತ್ರದಲ್ಲಿರುವ ಲಕ್ಷಣವಿದ್ದಂತಾಯಿತು.

ತದು ತ್ರೈಷ್ಟುಭಂ ತೇನ ಪ್ರತಿಷ್ಠಿತಪದೇನ ಸವನಂ ದಾಧಾರಾಽಽಯತ-ನಾದೇವೈತೇನ ನ ಪ್ರಚ್ಯವತೇ ॥

ಸೂಕ್ತಗತಂ ಛಂದೋಽವಲಂಬ್ಯ ಪ್ರಶಂಸತಿ ಪೂರ್ವವದ್ವ್ಯಾಖ್ಯೇಯಂ ॥

ಈ ಸೂಕ್ತದ ಋಕ್ಕುಗಳಲ್ಲಿ ಪ್ರತಿಷ್ಠಿತಪದಗಳಿರುವವು. ಎಂದರೆ ಋಕ್ಕಿನ ಪಾದಗಳಲ್ಲಿ ಇರಬೇಕಾದ ಅಕ್ಷರಸಂಖ್ಯೆಯು ಹೆಚ್ಚುಕಡಿಮೆ ಇಲ್ಲದಂತೆ ಒಂದೇಸಮನಾಗಿರುವವು. ಆದ್ದರಿಂದ ಇದನ್ನು ಪಠಿಸುವ ಋತ್ವಿಗ್ಯಜಮಾನರು ತಮ್ಮ ಸ್ವಸ್ಥಾನದಿಂದ ಭ್ರಷ್ಟರಾಗುವುದಿಲ್ಲ.

ತ್ಯಮುವಃ ಸತ್ರಾಸಾಹಮಿತಿ ಪರ್ಯಾಸೋ ವಿಶ್ವಾಸು ಗೀಷ್ವಾಯತಮಿ-ತ್ಯಭ್ಯಾಯಾಮ್ಯಮಿವೈತದಹಸ್ತೇನ ಚತುರ್ಥಸ್ಯಾಹ್ನೋ ರೂಪಂ

ತೃತೀಯಂ ತ್ರ್ಯಚಂ ವಿಧತ್ತೇ---ಪರಿತಃ ಪ್ರಕ್ಷೇಪಣೀಯಃ ಪರ್ಯಾಸೋಽಂತಿಮಸ್ತ್ರ್ಯಚ-ಸ್ತಸ್ಮಿನ್ವಿಶ್ವಾಸ್ವಿತಿ ಯಃ ಪಾದಸ್ತತ್ರಾಯಾತಮಿತಿ ಶಬ್ದೋ ದೀರ್ಘತ್ವವಾಚಕಃ ಶ್ರೂಯತೇ । ಅಹ-ಶ್ಚೈತದಭ್ಯಾಯಾಮ್ಯಮಿವ ಪ್ರಯೋಗಾಧಿಕ್ಯಾದತಿದೀರ್ಘಮಿವಾತೋಽತ್ರ ದೀರ್ಘತ್ವಂ ಲಿಂಗಂ ॥

ಮೂರನೇ ತೃಚವನ್ನು ವಿವರಿಸುವರು. ತ್ಯಮುವಃ ಸತ್ರಾಸಾಹಂ (ಋ. ಸಂ. ೮-೯೨-೭) ಎಂಬ ಕೊನೆಯು ತೃಚದಲ್ಲಿ ವಿಶ್ವಾಸು ಎಂಬ ಪಾದವಿರುವುದು. ಇದರಲ್ಲಿ ಆಯತ ಎಂಬ ದೀರ್ಘವನ್ನು ಸೂಚಿಸುವ ಶಬ್ದವಿರುವುದು ಮತ್ತು ಈ ದಿನದಲ್ಲಿ ಅಭ್ಯಾಯಾಮ್ಯಮಿವ ಎಂದು ಪ್ರಯೋಗವಿರುವುದರಿಂದ ಈ ಮಂತ್ರದಲ್ಲಿ ನಾಲ್ಕನೆಯ ದಿನದಲ್ಲಿ ಉಪಯೋಗಿಸುವ ಮಂತ್ರದ ಲಕ್ಷಣವಿದ್ದಂತಾಯಿತು.

ತಾ ಉ ಗಾಯತ್ರ್ಯೋ ಗಾಯತ್ರ್ಯೋ ವಾ ಏತಸ್ಯ ತ್ರ್ಯಹಸ್ಯ ಮಾಧ್ಯಂ-ದಿನಂ ವಹಂತಿ ತದ್ವೈತಚ್ಛಂದೋ ವಹತಿ ಯಸ್ಮಿನ್ನಿವಿದ್ಧೀಯತೇ ತಸ್ಮಾದ್ಗಾಯತ್ರೀಷು ನಿವಿದಂ ದಧಾತಿ ॥

ಛಂದೋ ದ್ವಾರಾ ಪ್ರಶಂಸತಿ— ಪೂರ್ವವದ್ವ್ಯಾಖ್ಯೇಯಂ ||

ಈ ಸೂಕ್ತವನ್ನು ಛಂದಸ್ಸಿನ ಮೂಲಕ ಪ್ರಶಂಸಿಸುವರು. ಈ ಸೂಕ್ತದಲ್ಲಿರುವ ಋಕ್ಕುಗಳು ಗಾಯತ್ರೀಛಂದಸ್ಕವು ಗಾಯತ್ರೀಛಂದಸ್ಸುಗಳು ಈ ತ್ರ್ಯಹದಲ್ಲಿ ಎಂದರೆ ನಾಲ್ಕು, ಐದು, ಆರು ಎಂಬ ಮೂರುದಿನಗಳಲ್ಲಿ ಮಾಧ್ಯಂದಿನಸವನವನ್ನು ನಿರ್ವಹಿಸುವವು. ಆದ್ದರಿಂದ ಸವನನಿರ್ವಾಹತವಾದ ಈ ಗಾಯತ್ರೀಛಂದಸ್ಸಿನ ಋಕ್ಕುಗಳಲ್ಲಿ ನಿವಿತ್ಪದಸಮೂಹವನ್ನು ಸೇರಿಸುವರು.

## ವಿಶ್ವೋ ದೇವಸ್ಯ ನೇತುಸ್ತತ್ಸವಿತುರ್ವರೇಣ್ಯಮಾ ವಿಶ್ವದೇವಂ ಸತ್ಪತಿಮಿತಿ ವೈಶ್ವದೇವಸ್ಯ ಪ್ರತಿಪದನುಚರೌ ಬಾರ್ಹತೇಽಹನಿ ಚತುರ್ಥೇಽಹನಿ ಚತುರ್ಥಸ್ಯಾಹ್ನೋ ರೂಪಂ

ಶಸ್ತ್ರಾಂತರಂ ವಿಧತ್ತೇ— ವಿಶ್ವೋ ದೇವಸ್ಯೇತ್ಯೃಗೇಕಾ ತತ್ಸವಿತುರಿತಿ ದ್ವೇ ಋಚೌ | ಏಷ ತ್ರ್ಯೃಚೋ ಬೃಹತ್ಸಾಮಸಂಬಂಧೀ ವೈಶ್ವದೇವಸ್ಯ ಪ್ರತಿಪತ್ | ಆ ವಿಶ್ವದೇವಮಿತಿ ತ್ರ್ಯೃಚೋಽನುಚರಃ | ಅಹ್ನೋ ಯುಗ್ಮತ್ವಾದ್ಬಾರ್ಹತತ್ವಂ | ಬೃಹತ್ಸಾಮಸಂಬಂಧ ಏವ ಮಂತ್ರಲಿಂಗಂ ||

ಮುಂದಿನ ಶಸ್ತ್ರಮಂತ್ರವನ್ನು ವಿವರಿಸುವರು. ವಿಶ್ವೋ ದೇವಸ್ಯ ನೇತುಃ (ಋ. ಸಂ. ೫-೫೦-೧) ಎಂಬುದೇ ಆಸೂಕ್ತವು. ಇದರಲ್ಲಿ ವಿಶ್ವೋ ದೇವಸ್ಯ ನೇತುಃ ಎಂಬ ಋಕ್ಕೂ, ತತ್ಸವಿತುರ್ವರೇಣ್ಯಂ (ಋ. ಸಂ. ೩-೬೨-೧೦) ಎಂಬ ಋಕ್ಕೂ, ಆ ವಿಶ್ವದೇವಂ ಸತ್ಪತಿಂ (ಋ. ಸಂ. ೫-೮೨-೭) ಎಂಬ ಋಕ್ಕೂ ಈ ಶಸ್ತ್ರದ ಪ್ರತಿಪತ್ ಮತ್ತು ಅನುಚರ(ಮೊದಲು ಮತ್ತು ಮುಂದಿನ) ಋಕ್ಕುಗಳು. ಈ ಮೂರು ಋಕ್ಕುಗಳೂ ಸೇರಿ ಆಗುವ ತೃಚವು ಬೃಹತ್ಸಾಮಸಂಬಂಧವಾದ ಋಕ್ಕುಗಳೂ ಮತ್ತು ವೈಶದೇವಶಸ್ತ್ರದ ಪ್ರತಿಪತ್ ತೃಚವು. ಆ ವಿಶ್ವದೇವಂ ಸತ್ಪಿತಂ ಎಂಬುದು ಅನುಚರ ತೃಚವು. ಬಾರ್ಹತದಿನವಾದ ಈ ನಾಲ್ಕನೆಯ ದಿನದಲ್ಲಿ ಬೃಹತ್ಸಾಮಸಂಬಂಧವಿರುವುದರಿಂದ ಈ ದಿನದಲ್ಲಿ ಇರಬೇಕಾದ ಲಕ್ಷಣವಿದ್ದಂತಾಯಿತು.

## ಆ ದೇವೋ ಯಾತು ಸವಿತಾ ಸುರತ್ನ ಇತಿ ಸಾವಿತ್ರಮೇತಿ ಚತುರ್ಥೇಽಹನಿ ಚತುರ್ಥಸ್ಯಾಹ್ನೋ ರೂಪಂ ||

ಸವಿತೃದೇವತಾಕಂ ಸೂಕ್ತಂ ವಿಧತ್ತೇ— ಆಕಾರೋಽತ್ರ ಲಿಂಗಂ ||

ಸವಿತೃದೇವತಾಕವಾದ ಸೂಕ್ತವನ್ನು ವಿವರಿಸುವರು. ಆ ದೇವೋ ಯಾತು ಸವಿತಾ ಸುರತ್ನ (ಋ. ಸಂ. ೭-೪೫-೧) ಎಂಬುದೇ ಆ ಸೂಕ್ತವು. ಈ ಋಕ್ಕಿನಲ್ಲಿ ಆಕಾರವಿರುವುದರಿಂದ ನಾಲ್ಕನೇ ದಿನದ ಮಂತ್ರದಲ್ಲಿರಬೇಕಾದ ಲಕ್ಷಣ ವಿದ್ದಂತಾಯಿತು.

## ಪ್ರ ದ್ಯಾವಾ ಯಜ್ಞೈಃ ಪೃಥಿವೀ ನಮೋಭಿರಿತಿ ದ್ಯಾವಾಪೃಥಿವೀಯಂ ಪ್ರೇತಿ ಚತುರ್ಥೇಽಹನಿ ಚತುರ್ಥಸ್ಯಾಹ್ನೋ ರೂಪಂ ರೂಪಂ ||

ಪ್ರಶಬ್ದಲಿಂಗೋಪೇತಂ ಸೂಕ್ತಂ ವಿಧತ್ತೇ—

ಪ್ರಶಬ್ದವಿರುವ ಸೂಕ್ತವನ್ನು ಹೇಳುವರು. **ಪ್ರ ದ್ಯಾವಾ ಯಜ್ಞೈಃ ಪೃಥಿವೀ ನಮೋಭಿಃ** (ಋ. ಸಂ. ೭-೫೩-೧) ಎಂಬುವುದೇ ಆ ಸೂಕ್ತವು. ಇದು ದ್ಯಾವಾಪೃಥಿವೀ ದೇವತಾಕವಾದುದು. ಇದರಲ್ಲಿ ಪ್ರಶಬ್ದವಿರುವುದರಿಂದ ನಾಲ್ಕನೆಯ ದಿವಸದಲ್ಲಿ ಪಠಿಸುವ ಮಂತ್ರದಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

**ಪ್ರ ಋಭುಭ್ಯೋ ದೂತಮಿವ ವಾಚಮಿಷ್ಯ ಇತ್ಯಾರ್ಭವಂ ಪ್ರೇತಿ ಚ ವಾಚಮಿಷ್ಯ ಇತಿ ಚ ಚತುರ್ಥೇಽಹನಿ ಚತುರ್ಥಸ್ಯಾಹ್ನೋ ರೂಪಂ ॥**

**ಪ್ರಶಬ್ದೋ ವಾಕ್ಸಂಬಂಧಶ್ಚೇತಿ ಲಿಂಗದ್ವಯೋಪೇತಂ ಸೂಕ್ತಂ ವಿಧತ್ತೇ—ಋಭುದೇವತಾಕತ್ವಂ ಸ್ಪಷ್ಟಂ । ಪ್ರಶಬ್ದೋ ವಾಕ್ಸಂಬಂಧಶ್ಚ ಪ್ರೇತಿ ಚೇತ್ಯಾದಿನಾ ಪ್ರದರ್ಶ್ಯತೇ ॥**

ಪ್ರಶಬ್ದ ಮತ್ತು ವಾಕ್ಸಂಬಂಧ ಎಂಬ ಎರಡು ಲಕ್ಷಣಗಳಿಂದ ಕೂಡಿದ ಒಂದು ಸೂಕ್ತವನ್ನು ತಿಳಿಸುವರು **ಪ್ರ ಋಭುಭ್ಯೋ ದೂತಮಿವ** (ಋ. ಸಂ. ೪-೩೩-೧) ಎಂಬುದೇ ಆ ಸೂಕ್ತವು. ಇದು ಋಭುದೇವತಾಕವು. ಇದರಲ್ಲಿ ಪ್ರ ಎಂಬ ಶಬ್ದವೂ ವಾಚಂ ಎಂಬ ವಾಕ್‌ಶಬ್ದವೂ ಎಂದು ಎರಡುವಿಧ ಲಕ್ಷಣಗಳಿರುವವು. ಈ ಎರಡುವಿಧ ಲಕ್ಷಣಗಳಿರುವುದರಿಂದ ನಾಲ್ಕನೇ ದಿವಸದ ಮಂತ್ರದಲ್ಲಿರಬೇಕಾದ ಲಕ್ಷಣಗಳಿದ್ದಂತಾಯಿತು.

**ಪ್ರ ಶುಕ್ರೈತು ದೇವೀ ಮನೀಷೇತಿ ವೈಶ್ವದೇವಂ ಪ್ರೇತಿ ಚ ಶುಕ್ರವಚ್ಚ ಚತುರ್ಥೇಽಹನಿ ಚತುರ್ಥಸ್ಯಾಹ್ನೋ ರೂಪಂ ॥**

**ಪ್ರಶಬ್ದೇನ ಶುಕ್ರಶಬ್ದೇನ ಚೋಪೇತಂ ಸೂಕ್ತಾಂತರಂ ವಿಧತ್ತೇ—ಬಹುದೇವತಾಕತ್ವಾದ್ವೈಶ್ವದೇವತ್ವಂ ॥**

ಪ್ರಶಬ್ದ ಮತ್ತು ಶುಕ್ರಶಬ್ದ ಎಂಬ ಲಕ್ಷಣಗಳಿಂದ ಕೂಡಿದ ಸೂಕ್ತವನ್ನು ತಿಳಿಸುವರು. **ಪ್ರ ಶುಕ್ರೈತು ದೇವೀ ಮನೀಷಾ** (ಋ. ಸಂ. ೭-೩೪-೧) ಎಂಬುದೇ ಆ ಸೂಕ್ತವು. ಇದರಲ್ಲಿ ಅನೇಕ ದೇವತೆಗಳ ಹೆಸರಿರುವುದರಿಂದ ಇದು ವೈಶ್ವದೇವತಾಕವು. ಇದರಲ್ಲಿ ಪ್ರ ಮತ್ತು ಶುಕ್ರಶಬ್ದಗಳಿರುವುದರಿಂದ ನಾಲ್ಕನೇ ದಿನದಲ್ಲಿ ಪಠಿಸಬೇಕಾದ ಮಂತ್ರಗಳ ಲಕ್ಷಣವಿದ್ದಂತಾಯಿತು.

**ತಾ ಉ ವಿಚ್ಛಂದಸಃ ಸಂತಿ ದ್ವಿಪದಾಃ ಸಂತಿ ಚತುಷ್ಪದಾಸ್ತೇನ ಚತುರ್ಥಸ್ಯಾಹ್ನೋ ರೂಪಂ ॥**

**ನಾನಾವಿಧಚ್ಛಂದೋಯುಕ್ತತ್ವರೂಪಂ ಲಿಂಗಾಂತರಂ ದರ್ಶಯತಿ—ತಾ ಉ ತಾಸ್ತು ಸೂಕ್ತಗತಾ ಋಚೋ ವಿಚ್ಛಂದಸೋ ವಿವಿಧಚ್ಛಂದೋಯುಕ್ತಾಃ ತತ್ರೈಕವಿಂಶತಿರ್ದ್ವಿಪದಾಃ ಸಂತಿ । ಅವಶಿಷ್ಟಾಶ್ಚತುಷ್ಪದಾಃ ಸಂತಿ । ತೇನ ವಿಚ್ಛಂದಸ್ತ್ವೇನಾಹ್ನೋ ನಿರೂಪಕಂ ॥**

ನಾನಾವಿಧ ಛಂದಸ್ಸುಗಳಿಂದ ಕೂಡಿದ ಲಕ್ಷಣವಿರುವ ಸೂಕ್ತವನ್ನು ವಿವರಿಸುವರು. ಈ ಸೂಕ್ತದಲ್ಲಿರುವ ಛಂದಸ್ಸುಗಳು ನಾನಾವಿಧಗಳಾಗಿರುವವು. ಈ ಛಂದಸ್ಸುಗಳಲ್ಲಿ ಇಪ್ಪತ್ತೊಂದು ಋಕ್ಕುಗಳು ದ್ವಿಪದಾ ಎಂಬ ಛಂದಸ್ಸಿನವು. ಎಂದರೆ ಈ ಋಕ್ಕು

ಗಳಲ್ಲಿ ಎರಡು ಪಾದಗಳುಮಾತ್ರವಿರುವವು. ಉಳಿದ ಋಕ್ಕುಗಳಲ್ಲಿ ನಾಲ್ಕು ಪಾದಗಳಿರುವವು. ಆದ್ದರಿಂದ ವಿವಿಧ ಛಂದಸ್ಸುಗಳಿಂದ ಕೂಡಿರುವ ಈ ಲಕ್ಷಣವೇ ನಾಲ್ಕನೆಯ ದಿವಸದಲ್ಲಿ ಪಠಿಸಬೇಕಾದ ಮಂತ್ರಗಳ ಲಕ್ಷಣವು.

**ವೈಶ್ವಾನರಸ್ಯ ಸುಮತೌ ಸ್ಯಾಮೇತ್ಯಾಗ್ನಿಮಾರುತಸ್ಯ ಪ್ರತಿಪದಿತೋ ಜಾತ ಇತಿ ಜಾತವಚ್ಚತುರ್ಥೇಽಹನಿ ಚತುರ್ಥಸ್ಯಾಹ್ನೋ ರೂಪಂ ॥**

**ಶಸ್ತ್ರಾಂತರಸ್ಥಂ ಪ್ರತಿಪತ್ಸೂಕ್ತಂ ವಿಧತ್ತೇ— ತಸ್ಯ ಸೂಕ್ತಸ್ಯ ಪ್ರಥಮಾಯಾ ಋಚಸ್ತೃತೀಯಪಾದ ಇತೋ ಜಾತ ಇತಿ ಶ್ರವಣಾಜ್ಜಾತವಚ್ಛಬ್ದೋಪೇತಂ ಲಿಂಗಮಸ್ತಿ ॥**

ಬೇರೊಂದು ಶಸ್ತ್ರದ ಪ್ರತಿಪತ್ಸೂಕ್ತವನ್ನು (ಮೊದಲನೇ ಸೂಕ್ತ) ವಿವರಿಸುವರು. **ವೈಶ್ವಾನರಸ್ಯ ಸುಮತೌ ಸ್ಯಾಮ** (ಋ. ಸಂ. ೧-೯೮-೧) ಎಂಬುದೇ ಆ ಸೂಕ್ತವು. ಹುಟ್ಟಿದ ಅಥವಾ ಉತ್ಪನ್ನವಾದ ಸಮಸ್ತವಸ್ತುಗಳನ್ನೂ ಅಗ್ನಿಯು ತಿಳಿದಿರುವುದರಿಂದ ಅಗ್ನಿಗೆ ಜಾತವೇದಾಃ ಎಂದು ಹೆಸರು. ಹಸ್ತಚ್ಯುತೀ ಜನಯಂತ ಎಂಬ ಈ ಸೂಕ್ತದ ಮೊದಲನೇ ಋಕ್ಕಿನ ಮೂರನೇ ಪಾದದಲ್ಲಿ ಇತೋಜಾತ ಎಂದು ಪದವಿರುವುದರಿಂದ ಈ ಮಂತ್ರದಲ್ಲಿ ನಾಲ್ಕನೇ ದಿವಸದ ಲಕ್ಷಣವಿದ್ದಂತಾಯಿ.

**ಕ ಈಂ ವ್ಯಕ್ತಾ ನರಃ ಸನೀಳಾ ಇತಿ ಮಾರುತಂ ನಕಿರ್ಹ್ಯೇಷಾಂ ಜನೂಂಷಿ ವೇದೇತಿ ಜಾತವಚ್ಚತುರ್ಥೇಽಹನಿ ಚತುರ್ಥಸ್ಯಾಹ್ನೋ ರೂಪಂ ॥**

**ಮರುದ್ದೇವತಾಕಂ ಸೂಕ್ತಂ ವಿಧತ್ತೇ— ಅಸ್ಮಿನ್ಸೂಕ್ತೇ ತೃತೀಯಸ್ಯಾಮೃಚಿ ಮರುದ್ಭಿರಸ್ತ್ವಿತಿ ಶ್ರವಣಾನ್ಮಾರುತ(ತ್ವ)ಮ್ । ನಕಿರ್ಹೀತ್ಯಾದಿಕಃ ಪ್ರಥಮಾಯಾ ಋಚಸ್ತೃತೀಯಃ ಪಾದಸ್ತತ್ರ ಜನೂಂಷೀತಿ ಜನಿಧಾತುಯುಕ್ತತ್ವಂ ಲಿಂಗಂ ।**

ಈಗ ಮರುದ್ದೇವತಾಕವಾದ ಒಂದು ಸೂಕ್ತವನ್ನು ತಿಳಿಸುವರು. **ಕ ಈಂ ವ್ಯಕ್ತಾ ನರಃ** (ಋ. ಸಂ. ೭-೫೬-೧) ಎಂಬುವದೇ ಆ ಮರುದ್ದೇವತಾಕವಾದ ಸೂಕ್ತವು. ಈ ಸೂಕ್ತದ ಮೂರನೆಯ ಋಕ್ಕಿನಲ್ಲಿ ಮರುದ್ಭಿರಸ್ತು ಎಂದಿರುವುದರಿಂದ ಈ ಸೂಕ್ತವು ಮರುದ್ದೇವತಾಕವು. ನಕಿರ್ಹೀಂ ಎಂಬುದು ಈ ಸೂಕ್ತದ ಮೊದಲನೆಯ ಋಕ್ಕು. ಈ ಋಕ್ಕಿನ ಮೂರನೆಯ ಪಾದದಲ್ಲಿ **ಜನೂಂಷಿ** ಎಂಬ ಜನಿಧಾತುಯುಕ್ತವಾದ ಪದವಿರುವುದರಿಂದ ಇಲ್ಲಿ ನಾಲ್ಕನೆಯ ದಿವಸದಲ್ಲಿ ಪಠಿಸಬೇಕಾದ ಮಂತ್ರಗಳ ಲಕ್ಷಣವಿದ್ದಂತಾಯಿತು.

**ತಾ ಉ ವಿಚ್ಛಂದಸಃ ಸಂತಿ ದ್ವಿಪದಾಃ ಸಂತಿ ಚತುಷ್ಪದಾಸ್ತೇನ ಚತುರ್ಥಸ್ಯಾಹ್ನೋ ರೂಪಂ ॥**

**ವಿವಿಧಚ್ಛಂದಸ್ತ್ವಂ ಲಿಂಗಾಂತರಂ ದರ್ಶಯತಿ— ಅಸ್ಮಿನ್ಸೂಕ್ತ ಏಕಾದಶ ದ್ವಿಪದಾ ಇತರಾಶ್ಚತುಷ್ಪದಾಃ ॥**

ವಿವಿಧ ಛಂದಸ್ಸುಗಳು ಇರುವ ಲಕ್ಷಣವನ್ನು ತಿಳಿಸುವರು. ಈ ಸೂಕ್ತದ ಋಕ್ಕುಗಳಲ್ಲಿ ಹನ್ನೊಂದು ಋಕ್ಕುಗಳು ದ್ವಿಪದಾ ಎಂಬ ಛಂದಸ್ಸಿನವು. ಉಳಿದ ಋಕ್ಕುಗಳು ನಾಲ್ಕು ಪಾದಗಳಿರುವ ಚತುಷ್ಪದಾ ಎಂಬ ಛಂದಸ್ಸಿನವು. ಈರೀತಿ ಬೇರೆ ಬೇರೆ ಛಂದಸ್ಸುಗಳಿಂದ ಕೂಡಿರುವುದೇ ನಾಲ್ಕನೆಯ ದಿನದಲ್ಲಿರಬೇಕಾದ ಲಕ್ಷಣಗಳಿದ್ದಂತಾಯಿತು.

**ಜಾತವೇದಸೇ ಸುನವಾಮ ಸೋಮಮಿತಿ ಜಾತವೇದಸ್ಯಾಽಚ್ಯುತಾ ॥**

**ಅಚ್ಯುತತ್ವಲಿಂಗೋಪೇತಾಮೃಚಂ ವಿಧತ್ತೇ—**

ಅಚ್ಯುತತ್ವವೆಂಬ ಲಕ್ಷಣವಿರುವ ಋಕ್ಕನ್ನು ತಿಳಿಸುವರು. ಈ ಋಕ್ಕನ್ನು ಹಿಂದೆಯೇ ಒಂದಾವರ್ತಿ ಪಠಿಸಿರುವುದರಿಂದ ಇದರಲ್ಲಿ ಅಚ್ಯುತತ್ವವೆಂಬ ಲಕ್ಷಣವಿದ್ದಂತಾಯಿತು.

**ಅಗ್ನಿಂ ನರೋ ದೀಧಿತಿಭಿರರಣ್ಯೋರಿತಿ ಜಾತವೇದಸ್ಯಂ ಹಸ್ತಚ್ಯುತೀ ಜನಯಂತೇತಿ ಜಾತವಚ್ಚತುರ್ಥೇಽಹನಿ ಚತುರ್ಥಸ್ಯಾಹ್ನೋ ರೂಪಂ ॥**

**ಜಾತವೇದೋದೇವತಾಕಮನ್ಯತ್ಸೂಕ್ತಂ ವಿಧತ್ತೇ—ಜಾತಸ್ಯ ಜಗತೋ ವೇದಿತತ್ವಾದಗ್ನಿರೇವ ಜಾತವೇದಾಃ । ಹಸ್ತಚ್ಯುತೀತ್ಯಾದಿರ್ದ್ವಿತೀಯಃ ಪಾದಸ್ತತ್ರ ಜನಯಂತೇತಿ ಶ್ರವಣಾಜ್ಜನಿಧಾತುಯುಕ್ತಂ ಲಿಂಗಂ ॥**

ಜಾತವೇದೋದೇವತಾಕವಾದ ಬೇರೊಂದು ಸೂಕ್ತವನ್ನು ವಿವರಿಸುವರು. **ಅಗ್ನಿಂ ನರೋ ದೀಧಿತಿಭಿಃ** (ಋ. ಸಂ. ೭-೧-೧) ಎಂಬುವುದೇ ಜಾತವೇದೋದೇವತಾಕವಾದ ಸೂಕ್ತವು. ಜಗತ್ತಿನಲ್ಲಿ ಹುಟ್ಟಿದ ಸಮಸ್ತವನ್ನೂ ತಿಳಿದಿರುವುದರಿಂದ ಅಗ್ನಿಗೆ ಜಾತವೇದ ಎಂದು ಹೆಸರು. ಈ ಸೂಕ್ತದ ಪ್ರಥಮ ಋಕ್ಕಿನ ಎರಡನೇ ಪಾದದಲ್ಲಿ ಹಸ್ತಚ್ಯುತೀ ಜನಯಂತ ಎಂದಿರುವುದು. ಇಲ್ಲಿ ಜನಯಂತ ಎಂದು ಜನಿಧಾತುವಿನಿಂದ ನಿಷ್ಪನ್ನವಾದ ಶಬ್ದವಿರುವುದರಿಂದ ನಾಲ್ಕನೇ ದಿನದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರುವ ಲಕ್ಷಣವಿದ್ದಂತಾಯಿತು.

**ತಾ ಉ ವಿಚ್ಛಂದಸಃ ಸಂತಿ ವಿರಾಜಃ ಸಂತಿ ತ್ರಿಷ್ಟುಭಸ್ತೇನ ಚತುರ್ಥಸ್ಯಾಹ್ನೋ ರೂಪಮಹ್ನೋ ರೂಪಂ ॥**

**ವಿವಿಧಚ್ಛಂದೋರೂಪಂ ಲಿಂಗಾಂತರಂ ದರ್ಶಯತಿ—ಅತ್ರಾಷ್ಟಾದಶ ವಿರಾಜ ಇತರಾಸ್ತ್ರಿಷ್ಟುಭಃ । ಅಭ್ಯಾಸೋಽಧ್ಯಾಯಪರಿಸಮಾಪ್ತ್ಯರ್ಥಃ ॥**

ವಿವಿಧ ಛಂದಸ್ಸುಗಳಿರುವ ಲಕ್ಷಣವನ್ನೂ ತಿಳಿಸುವರು. ಈ ಸೂಕ್ತದಲ್ಲಿ ಹದಿನೆಂಟು ಋಕ್ಕುಗಳು ವಿರಾಟ್ ಎಂಬ ಛಂದಸ್ಸಿನವು. ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಸಿನವು. ಆದ್ದರಿಂದ ಇಲ್ಲಿ ವಿವಿಧ ಛಂದಸ್ಸುಗಳಿದ್ದಂತಾಯಿತು. ಇದೇ ಈ ನಾಲ್ಕನೇ ದಿನದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರಬೇಕಾದ ಲಕ್ಷಣವು. ಅದು ಈ ಸೂಕ್ತದಲ್ಲಿಂತಾಯಿತು.



*English Translation*

**The remainder of the Nishkevalya Shastra, and the Shastras of the evening libation)**

Kuha sruta indrah (10, 22) is the Vimada hymn with alliterations, assonances and consonances, by the Rish whose name is contained in an alliteration (vi vo made in 10, 21) beiug taken as equal to vimada). This is one of the characteristics of the fourth day. The hymn yudhmasya te vrishabhasya (3,46) contains in the fourth verse the word janusha (from the root jan "to be born,") which is a characteristic of the fourth day. It is in the trishtubh metre. By means of the padas of this hymn which stand firm, the Hotar keeps the libation, lest it fall from its proper place.

Tyam uvah satrasaham (8, 81) is the setting. Its words visvasu girshv ayatam indicate tnat this day's work is to be made long, as it were, which is one of the characteristics of the fourth day. They are in the Gayatri metre; the Gayatris are the leaders of the midday libation in these three latter days.

The Nivid is to be put in that metre which leads the day; therefore they put the Nivid in the Gayatris. Visvo devasya netus (5, 50, 1), tat savitur varenyam (3, 62, 10-11), a visvadevam saptatim (5,82, 7-9) are the beginning and sequel of the Vaisvadeva Shastra on the fonrth day, which is a Brihat day, being one of the characteristics of the fourth day. A devo yatu (7, 45) is the Nivid hymn for Savitar; it contains the term a, which is a Brihat day, being one of the characteristics of the fourth day. A devo yatu (7, 45) is the (Nivid) hymn for Savitar; it contains the term a, which is a characteristics of the fourth day.

Pra dyava yajnaih prithivi (7, 53) is the Nivid hymn for Dyavaprithivi; it contains the term pra, which is a characteristic of the fourth day. Pra ribhubhyo dutam iva vacham ishya (4, 33) is the Nivid hymn for the Ribhus; it contains the words pra and vacham ishya, which are characteristics of the fourth day. Pra sukraitu devi manisha (7, 34) is the Nivid hymn for the Visvedevah; it contains the terms pra and sukra, which are characteristics of the fourth day. It has different metres, such as consist of two padas, and such as consist of fonr padas. This is a characteristic of the fourth day.

Vaisvanarasya sumatau syama (1, 98) is the beginning of the Agnimaruta Shastra, it contains the term jata, which is a characteristic of the fourth day. K im vyakta (7, 56) is the Nivid hymn for the Marutas. In the third pada of its first verse there are the words, nakir by esham janushi veda, which contain the

root jan to be born in janunshi, which is a characteristic of the fourth day. The verses of this hymn are unequal metres; some have two padas, some four. This constitutes a characteristic of the fourth day.

Jatavedase sunavma somam (1, 99, 1) is the immoveable Jatavedas verse. Agnim naro didhibhir (7, 1) is the Nivid hymn for Jatavedas; it contains the term janayanta, which a characteristic of the fourth day. Its metres are unequal; there are in it Virajas and Trishtubhs. This constitutes a characteristic of the fourth day.

**ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ಏಕವಿಂಶಾಧ್ಯಾಯೇ ಪಂಚಮಃ ಖಂಡಃ ಸಮಾಪ್ತಃ**

**ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೊಂದನೆಯ ಅಧ್ಯಾಯದಲ್ಲಿ ಐದನೆಯ ಖಂಡವು ಸಮಾಪ್ತವಾದುದು.**

**ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.**



# ಅಥೈತರೇಯಬ್ರಾಹ್ಮಣೇ ದ್ವಾವಿಂಶಾಧ್ಯಾಯೇ ಪ್ರಥಮಃ ಖಂಡಃ

## ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು



[ ಈ ದ್ವಾದಶಾಹ ಯಜ್ಞದ ಐದು ಮತ್ತು ಆರನೇ ದಿವಸಗಳಲ್ಲಿ ಆಚರಿಸಬೇಕಾದ (ಪಠಿಸಬೇಕಾದ) ಶಸ್ತ್ರಮಂತ್ರಗಳ ಲಕ್ಷಣಗಳು.]



[ ದ್ವಾದಶಾಹದ ಐದನೇ ದಿನದಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳ ಲಕ್ಷಣಗಳು ; ಈ ದಿವಸದ ಪ್ರಾತಸ್ಸವನ ಮತ್ತು ಮಾಧ್ಯಂದಿನಸವನಗಳಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳು.]



**ಗೌರ್ವೈ ದೇವತಾ ಪಂಚಮಮಹರ್ವಹತಿ ತ್ರಿಣವಃ ಸ್ತೋಮಃ ಶಾಕ್ವರಂ ಸಾಮ ಪಂಕ್ತಿಶ್ಛಂದೋ ಯಥಾದೇವತಮೇನೇನ ಯಥಾಸ್ತೋಮಂ ಯಥಾಸಾಮ ಯಥಾಛಂದಸಂ ರಾಧ್ನೋತಿ ಯ ಏವಂ ವೇದ ॥**

ಅಥ ನವರಾತ್ರಾಪೇಕ್ಷಯಾ ಪಂಚಮಂ ಮಧ್ಯಮತ್ರ್ಯಹಾಪೇಕ್ಷಯಾ ದ್ವಿತೀಯಮಹರ್ವಿಧತ್ತೇ—ಪೂರ್ವತ್ರ ವಾಗೇಕಂ ಗೌರೇಕಂ ದ್ಯೌರೇಕಮಿತಿ ದೇವತಾಯಾ ರೂಪತ್ರಯಮುಕ್ತಮ್ । ತತ್ರ ವಾಗಾತ್ಮಕಂ ರೂಪಂ ಚತುರ್ಥೇಽಹನ್ಯುಕ್ತಂ । ಪಂಚಮಸ್ಯಾಹ್ನೋ ಗೌರೇವ ದೇವತಾ ನಿರ್ವಾಹಿಕಾ ಸ್ತೋಮಾನಾಂ ಮಧ್ಯೇ ತ್ರಿಣವೋ ನಿರ್ವಾಹಕಃ । ತಸ್ಯ ತ್ರಿಣವಸ್ಯ ಸ್ತೋಮಸ್ಯ ಸ್ವರೂಪಂ ಛಂದೋಗೈರೇವಮಾಮ್ನಾತಂ ।—'ನವಭ್ಯೋ ಹಿಂ ಕರೋತಿ ಸ ತಿಸೃಭಿಃ ಸ ಪಂಚಭಿಃ ಸ ಏಕಯಾ । ನವಭ್ಯೋ ಹಿಂ ಕರೋತಿ ಸ ಏಕಯಾ ಸ ತಿಸೃಭಿಃ ಸ ಪಂಚಭಿಃ । ನವಭ್ಯೋ ಹಿಂ ಕರೋತಿ ಸ ಪಂಚಭಿಃ ಸ ಏಕಯಾ ಸ ತಿಸೃಭಿಃ । ವಜ್ರೋ ವೈ ತ್ರಿಣವಃ ।' ಇತಿ । ಅಸ್ಯಾಯಮರ್ಥಃ । ಏಕಸ್ತೃಚಸ್ತ್ರಿಭಿಃ ಪರ್ಯಾಯೈರಾವರ್ತನೀಯಃ । ತತ್ರ ಪ್ರಥಮಾಯಾಸ್ತ್ರಿ ಪಾಠೋ ದ್ವಿತೀಯಾಯಾಃ ಪಂಚಕೃತ್ವಃ ಪಾಠಸ್ತೃತೀಯಸ್ಯಾಃ ಸಕೃದೇವ ಪಾಠಃ । ದ್ವಿತೀಯಪರ್ಯಾಯೇ ಪ್ರಥಮಾಯಾಃ ಸಕೃತ್ಪಾಠೋ ದ್ವಿತೀಯಸ್ಯಾಸ್ತ್ರಿಃ ಪಾಠಸ್ತೃತೀಯಸ್ಯಾಃ ಪಂಚಕೃತ್ವಃ ಪಾಠಃ ತೃತೀಯಪರ್ಯಾಯೇ ಪ್ರಥಮಾಯಾಃ ಪಂಚಕೃತ್ವಃ ಪಾಠೋ ದ್ವಿತೀಯಸ್ಯಾಃ ಸಕೃತ್ಪಾಠಸ್ತೃತೀಯಸ್ಯಾಸ್ತ್ರಿಃ ಪಾಠಃ । ಏವಮಾವೃತ್ತಾಭಿಃ ಸಪ್ತವಿಂಶತಿಸಂಖ್ಯಾಕಾಭಿರ್ಋಗ್ಭಿಸ್ತ್ರಿಣವಃ ಸ್ತೋಮೋ ಭವತಿ । ಅನ್ಯತ್ಪೂರ್ವವದ್ವ್ಯಾಖ್ಯೇಯಂ ॥

ದ್ವಾದಶಾಹಯಜ್ಞದಲ್ಲಿ ಪ್ರಥಮ, ದಶಮ, ದ್ವಾದಶ ಎಂಬ ಮೂರು ದಿನಗಳನ್ನು ಬಿಟ್ಟರೆ ಉಳಿಯುವುದು ಒಂಭತ್ತು ದಿವಸಗಳು ಇದಕ್ಕೆ ನವರಾತ್ರವೆಂದು ಹೆಸರು. ಮೂರು ಮೂರು ದಿನಗಳಿಗೆ ಒಂದೊಂದು ಗುಂಪಿನಂತೆ ಈ ಒಂಭತ್ತು ದಿನಗಳನ್ನು

ಮೂರು ಗುಂಪುಗಳನ್ನಾಗಿ ವಿಂಗಡಿಸುವರು. ಇದುವರೆಗೆ ಮೊದಲನೆಯ ಗುಂಪಾದ ಪ್ರಥಮ, ದ್ವಿತೀಯ, ತೃತೀಯಗಳೆಂಬ ಮೊದಲನೆಯ ಗುಂಪನ್ನೂ ಎರಡನೇ ಗುಂಪಾದ ಮಧ್ಯದ ಗುಂಪಿನಲ್ಲಿರುವ ಚತುರ್ಥ, ಪಂಚಮ, ಷಷ್ಠ ಎಂಬ ಎರಡನೇ ಗುಂಪಿನ ದಿನಗಳಲ್ಲಿ ಮೊದಲನೇ ದಿನವಾದ ಚತುರ್ಥ ಎಂಬ ನಾಲ್ಕನೇ ದಿನವನ್ನೂ ವಿವರಿಸಿದ್ದಾಯಿತು. ಈಗ ಮಧ್ಯಮತ್ರ್ಯಹದ (ಗುಂಪಿನ) ಐದನೇ ದಿನವನ್ನು ಅಥವಾ ಎರಡನೇ ಗುಂಪಿನ (ದ್ವಿತೀಯ ತ್ರ್ಯಹದ) ಎರಡನೇ ದಿನವನ್ನು ಎಂದರೆ ಒಟ್ಟು ಒಂಭತ್ತು ದಿನಗಳಲ್ಲಿ ಐದನೇ ದಿನವನ್ನು ವಿವರಿಸುವರು. ಹಿಂದೆ ವಾಗ್ದೇವತೆಗೆ, ವಾಕ್, ಗೌಃ, ದ್ಯೌಃ ಎಂದು ಮೂರು ಸ್ವರೂಪಗಳು ಇರುವವೆಂದು ಹೇಳಿರುವುದಷ್ಟೆ. ಇವುಗಳಲ್ಲಿ ವಾಗಾತ್ಮಕಸ್ವರೂಪವನ್ನು ನಾಲ್ಕನೆಯ ದಿನದ ಕಾರ್ಯಕಲಾಪಗಳಲ್ಲಿ ವಿವರಿಸಿದ್ದಾಯಿತು. ಆದ್ದರಿಂದ ಈಗ ವಿವರಿಸಬೇಕಾಗಿರುವ ಐದನೆಯ ದಿವಸದ ಕಾರ್ಯಕಲಾಪಗಳಲ್ಲಿ ಗೌಃ ಎಂಬ ದೇವತೆಯೇ (ವಾಗ್ದೇವತೆಯ ಎರಡನೇ ಸ್ವರೂಪ) ಈ ದಿನದ ಕಾರ್ಯಗಳನ್ನು ನಿರ್ವಹಿಸುವ ದೇವತೆಯಾಗಿರುವಳು. ಸ್ತೋಮಗಳ ಮಧ್ಯದಲ್ಲಿ ತ್ರಿಣವಸ್ತೋಮವೇ ನಿರ್ವಾಹಕವು; ಈ ತ್ರಿಣವಸ್ತೋಮದ ಸ್ವರೂಪವನ್ನು ಛಂದೋಗರು ಎಂದರೆ ಸಾಮಕರು ಈರೀತಿ ಹೇಳುವರು—**ನವಭ್ಯೋ ಹಿಂಕರೋತಿ ಸ ತಿಸೃಭಿಃ ಸ ಪಂಚಭಿಃ ಸ ಏಕಯಾ । ನವಭ್ಯೋ ಹಿಂಕರೋತಿ ಸ ಏಕಯಾ ಸ ತಿಸೃಭಿಃ ಸ ಪಂಚಭಿಃ । ನವಭ್ಯೋ ಹಿಂಕರೋತಿ ಸ ಪಂಚಭಿಃ ಸ ಏಕಯಾ ಸ ತಿಸೃಭಿಃ । ವಜ್ರೋ ವೈ ತ್ರಿಣವಃ ॥** ಎಂದು. ಇದರ ಅರ್ಥವು ಹೀಗಿರುವುದು. ಒಂದೊಂದು ತೃಚಕ್ಕೂ (ಮೂರು ಋಕ್ಕಿನ ಸಮೂಹಕ್ಕೆ ತೃಚವೆಂದು ಹೆಸರು) ಮೂರು ಪರ್ಯಾಯಗಳಿರುವವು. ಮೊದಲನೇ ಪರ್ಯಾಯದಲ್ಲಿ ತೃಚದಲ್ಲಿರುವ ಮೊದಲನೆಯ ಋಕ್ಕನ್ನು ಮೂರಾವರ್ತಿಯೂ, ಎರಡನೆಯ ಋಕ್ಕನ್ನು ಐದಾವರ್ತಿಯೂ, ಮೂರನೆಯ ಋಕ್ಕನ್ನು ಒಂದಾವರ್ತಿಯೂ ಗಾನಮಾಡಬೇಕು (೩+೫+೧=೯); ದ್ವಿತೀಯ ಪರ್ಯಾಯದಲ್ಲಿ ಪ್ರಥಮ ಋಕ್ಕನ್ನು ಒಂದಾವರ್ತಿಯೂ, ದ್ವಿತೀಯ ಋಕ್ಕನ್ನು ಮೂರಾವರ್ತಿಯೂ, ತೃತೀಯ ಋಕ್ಕನ್ನು ಐದಾವರ್ತಿಯೂ ಗಾನಮಾಡಬೇಕು (೧+೩+೫=೯) ತೃತೀಯಪರ್ಯಾಯದಲ್ಲಿ ಮೊದಲನೇ ಋಕ್ಕನ್ನು ಐದಾವರ್ತಿಯೂ, ಎರಡನೇ ಋಕ್ಕನ್ನು ಒಂದಾವರ್ತಿಯೂ, ಮೂರನೇ ಋಕ್ಕನ್ನು ಮೂರಾವರ್ತಿಯೂ ಗಾನಮಾಡಬೇಕು. (೫+೧+೩=೯); ಈರೀತಿ ಮೂರಾವೃತ್ತಿ (ಮೂರುಪರ್ಯಾಯಗಳಲ್ಲಿ) ಗಾನಮಾಡುವುದರಿಂದ (೯+೯+೯=೨೭) ಒಟ್ಟು ೨೭ ಋಕ್ಕುಗಳನ್ನು ಗಾನಮಾಡಿದಂತಾಗುವುದು. ಈ ವಿಧವಾದ (೨೭ ಋಕ್ಕುಗಳ) ಸ್ತೋಮಕ್ಕೆ ತ್ರಿಣವಃಸ್ತೋಮವೆಂದು ಹೆಸರು. ಸಾಮಗಳಲ್ಲಿ ಶಾಕ್ವರಂ ಎಂಬ ಸಾಮವು, ಛಂದಸ್ಸುಗಳಲ್ಲಿ ಪಂಕ್ತಿಶ್ಛಂದಸ್ಸು ಇವುಗಳಲ್ಲಿ ಈ ಐದನೆಯ ದಿನದಲ್ಲಿ ಪ್ರಾಧಾನ್ಯತೆಯಿಂದಿರುವವು. ಆದ್ದರಿಂದ ಯಾವ ಪುರುಷನು ಈ ಐದನೆಯ ದಿವಸದ ಪ್ರಧಾನದೇವತೆಗೆ (ಗೌಃ) ತ್ರಿಣವಸ್ತೋಮ ಶಾಕ್ವರ ಎಂಬ ಸಾಮ, ಪಂಕ್ತಿಶ್ಛಂದಸ್ಸು ಎಂಬ ವಿವರಗಳನ್ನು ತಿಳಿದುಕೊಂಡು ಅದರಂತೆ ಅನುಷ್ಠಾನ ಮಾಡುವನೋ ಆ ಪುರುಷನು ಸಮಸ್ತವಿಷಯದಲ್ಲಿಯೂ ಅಭಿವೃದ್ಧಿಯನ್ನು ಪಡೆಯುವನು.

## ಯದ್ವೈ ನೇತಿ ನ ಪ್ರೇತಿ ಯತ್ಸ್ಥಿತಂ ತತ್ಪಂಚಮಸ್ಯಾಹ್ನೋ ರೂಪಂ

**ಪಂಚಮಸ್ಯಾಹ್ನೋ ಮಂತ್ರಲಿಂಗಾನಿ ದರ್ಶಯತಿ—ಆಕಾರಃ ಪ್ರಶಬ್ದಶ್ಚ ನಾತ್ರ ಲಿಂಗಮಿತಿ ನಕಾರದ್ವಯೇನ ಪ್ರತಿಷಿಧ್ಯತೇ । ಯತ್ತು ಸ್ಥಿತಂ ತಿಷ್ಠತಿಧಾತ್ವರ್ಥರೂಪಮಪ್ರಚಲಿತಂ ತತ್ಪಂಚಮಸ್ಯಾಹ್ನೋ ನಿರೂಪಕಂ ॥**

ಐದನೆಯ ದಿನದಲ್ಲಿ ಪಠಿಸುವ ಮಂತ್ರಗಳಲ್ಲಿರಬೇಕಾದ ಲಕ್ಷಣಗಳನ್ನು ವಿವರಿಸುವರು. ಮೊದಲನೇ ದಿನದಲ್ಲಿ ಇರಬೇಕಾದ ಆ ಎಂಬ ಶಬ್ದವು ಪ್ರ ಎಂಬ ಶಬ್ದವು ಈ ಐದನೆಯ ದಿನದ ಮಂತ್ರಗಳಲ್ಲಿ ಇರಬೇಕಾಗಿಲ್ಲ. ಮತ್ತು ತಿಷ್ಠತಿಧಾತುವಿನಿಂದ ನಿಷ್ಪನ್ನವಾದ ಶಬ್ದವು ಇರಬೇಕು. ಇದೇ ಈ ಐದನೆಯ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣವು.

**ಯದ್ಧೇವ ದ್ವಿತೀಯಮಹಸ್ತದೇತತ್ಪುನರ್ಯತ್ಪಂಚಮಂ ॥**

ದ್ವಿತೀಯೇಽಹನ್ಯುಕ್ತಂ ಲಿಂಗಜಾತಂ ಪಂಚಮೇಽಹನ್ಯತಿದಿಶತಿ—ನವರಾತ್ರಾಪೇಕ್ಷಯಾ ಯತ್ಪಂಚಮಮಹರ್ವಿದ್ಯತೇ ತತ್ಪೃಥಙ್ನ ಭವತಿ । ಕಿಂತು ಯದೇವ ದ್ವಿತೀಯಮಹಸ್ತ-ದೇವ ಪಂಚಮತ್ವೇನ ಪುನಃ ಕ್ರಿಯತೇ । ತತ್ರತ್ಯಂ ಲಿಂಗಜಾತಮತ್ರಾನುಸಂಧೇಯಮಿತ್ಯರ್ಥಃ ॥

ನವರಾತ್ರಿಯ (ಒಂಭತ್ತು ದಿನಗಳ) ಪ್ರಕಾರ ಈ ಐದನೆಯ ದಿವಸದಲ್ಲಿ ಇಂತಹ ನಿರ್ದಿಷ್ಟಲಕ್ಷಣಗಳೇ ಇಲ್ಲಿರಬೇಕೆಂಬ ನಿಯಮವಿಲ್ಲ. ಆದರೆ ಎರಡನೆಯ ದಿವಸದಲ್ಲಿರಬೇಕಾದ ಲಕ್ಷಣಗಳು ಈ ಐದನೆಯ ದಿವಸದಲ್ಲಿಯೂ ಇರುವವು.

**ಯದೂರ್ಧ್ವವದ್ಯತ್ಪ್ರತಿವದ್ಯದಂತರ್ವದ್ಯದ್ವೃಷಣ್ವದ್ಯದ್ವೃಧನ್ವದ್ಯನ್ಮಧ್ಯಮೇ ಪದೇ ದೇವತಾ ನಿರುಚ್ಯತೇ ಯದಂತರಿಕ್ಷಮಭ್ಯುದಿತಂ ॥**

ತಾನಿ ಲಿಂಗಾನಿ ದರ್ಶಯತಿ—ಪೂರ್ವವದ್ವ್ಯಾಖ್ಯೇಯಂ ॥

ಹಿಂದೆ ಎರಡನೇ ದಿವಸದ ಲಕ್ಷಣಗಳನ್ನು ಹೇಳಿದೆಯಷ್ಟೆ. ಅದನ್ನು ಇಲ್ಲಿ ಪುನಃ ತಿಳಿಸಲಾಗಿದೆ. ಊರ್ಧ್ವವತ್, ಪ್ರತಿವತ್, ಅಂತರ್ವತ್, ವೃಷಣ್ವತ್, ವೃಧನ್ವತ್ ಎಂಬ ಪದಗಳಿಂದ ಕೂಡಿದ ಲಕ್ಷಣಗಳು ಈ ಐದನೆಯ ದಿವಸದಲ್ಲಿಯೂ ಇರಬೇಕು ಮತ್ತು ಋಕ್ಕಿನ ಮಧ್ಯದ ಪಾದದಲ್ಲಿ (ಮೂರನೆಯ ಪಾದದಲ್ಲಿ) ನಿರ್ದಿಷ್ಟದೇವತೆಯ ಹೆಸರಿರಬೇಕು. ಅಂತರಿಕ್ಷ ಸ್ಥಾನವನ್ನು ನಿರ್ದೇಶಿಸುವ ಪದವಿರಬೇಕು. ಇವೆಲ್ಲವೂ ಐದನೆಯ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳು.

**ಯದ್ದುಗ್ಧವದ್ಯದೂಧವದ್ಯದ್ಧೇನುಮದ್ಯತ್ಪೃಶ್ನಿಮದ್ಯನ್ಮದ್ವದ್ಯತ್ಪಶುರೂಪಂ ಯದಧ್ಯಾಸವದ್ವಿಕ್ಷುದ್ರಾ ಇವ ಹಿ ಪಶವೋ ಯಜ್ಜಾಗತಂ ಜಾಗತಾ ಹಿ ಪಶವೋ ಯದ್ಬಾರ್ಹತಂ ಬಾರ್ಹತಾ ಹಿ ಪಶವೋ ಯತ್ಪಾಂಕ್ತಂ ಪಾಂಕ್ತಾ ಹಿ ಪಶವೋ ಯದ್ವಾಮಂ ವಾಮಂ ಹಿ ಪಶವೋ ಯದ್ಧವಿಷ್ಮದ್ಧವಿರ್ಹಿ ಪಶವೋ ಯದ್ವಪುಷ್ಮದ್ವಪುರ್ಹಿ ಪಶವೋ ಯಚ್ಛಾಕ್ವರಂ ಯತ್ಪಾಂಕ್ತಂ ಯತ್ಕುರ್ವದ್ಯದ್ದ್ವಿ-ತೀಯಸ್ಯಾಹ್ನೋ ರೂಪಮೇತಾನಿ ವೈ ಪಂಚಮಸ್ಯಾಹ್ನೋ ರೂಪಾಣಿ ॥**

ಅಥ ವಿಶೇಷಲಿಂಗಾನಿ ದರ್ಶಯತಿ— ದುಗ್ಧೋಧಧೇನುಪೃಶ್ನಿಮಚ್ಛಬ್ದೈರುಪೇತಂ ಯದ್ಯದಸ್ತಿ ತತ್ಸರ್ವಂ ಲಿಂಗಂ । ತಥಾವಿಧಂ ಚ ಪಶುರೂಪಂ ಯದಸ್ತಿ ತದಪಿ ಲಿಂಗಂ । ಪಶು-ರೂಪಸ್ಯ ಬಹುವಿಧತ್ವಮೇವ ಯದಧ್ಯಾಸವದಿತ್ಯಾದಿನಾ ಪ್ರಪಂಚ್ಯತೇ । ಅಧಿಕಪಾದಸ್ಯ ಪ್ರಕ್ಷೇಪೋಽಧ್ಯಾಸಃ । ಪ್ರಕೃತೌ ಯಾವದಸ್ತಿ ತಾವತೋಽಪ್ಯಧಿಕಪದೋಪೇತಮಧ್ಯಾಸವತ್ । ಪಶೂನಾಮಪಿ ಚತುರ್ಭ್ಯಃ ಪಾದೇಭ್ಯೋಽಧಿಕಂ ಮುಖಮೇಕಂ ಪರಿಗಣ್ಯತೇ । ಅತೋಽಧ್ಯಾ-

ಸವತ್ಪಶುರೂಪಂ ಭವತಿ । ತದೇವ ವಿಕ್ಷುದ್ರಾ ಇತ್ಯನೇನ ಸ್ಪಷ್ಟೀಕ್ರಿಯತೇ । ವಿವಿಧಾಃ ಕ್ಷುದ್ರಾ ವಿಕ್ಷುದ್ರಾಃ । ಏಕಸ್ಮಾದನ್ಯೋ ನ್ಯೂನಸ್ತಸ್ಮಾದಪ್ಯನ್ಯೋ ನ್ಯೂನಃ । ಗಜಾಪೇಕ್ಷಯಾಽಶ್ವಃ ಕ್ಷುದ್ರಸ್ತದಪೇಕ್ಷಯಾ ಮಹಿಷಃ ಕ್ಷುದ್ರಸ್ತತೋ ಗೌಸ್ತತೋಽಜೇತ್ಯೇವಂ ಪಶುಷು ಕ್ಷುದ್ರತ್ವಂ ದ್ರಷ್ಟವ್ಯಂ । ಜಾಗತಂ ಜಗತೀಸಂಬದ್ಧಂ ಯದಸ್ತಿ ತದಪಿ ಪಶುರೂಪಂ । ಸೋಮಾಹರಣಪ್ರಸಂಗೇ ಜಗತ್ಯಾ ಪಶೂನಾಮಾನೀತತ್ವಾಜ್ಜಾಗತತ್ವಂ । ತಥಾ ಬಾರ್ಹತಂ ಬೃಹತೀಸಂಬಂಧಂ ಪಶುರೂಪಂ । ಪಶುವಿಷಯೇ ಛಂದಸಾಮಾಜಿಧಾವನೇ ಬೃಹತ್ಯಾ ವಿಜಯೇನ ಪಶೂನಾಂ ಬಾರ್ಹತತ್ವಂ । ಪಂಕ್ತಿಚ್ಛಂದಃ ಸಂಬದ್ಧಮಪಿ ಪಶುರೂಪಂ । ಪಂಕ್ತಿಮುಖೇನ ಪಂಚಾವಯವೈರುಪೇತಾಃ ಪಶವಃ ಪಾಂಕ್ತಾಃ । ಯದ್ವಾಮಂ ರಮಣೀಯಂ ಸೂಕ್ತಂ ಸ್ವರವರ್ಣಾದಿಭಿಃ ಶ್ರಾವ್ಯಂ ಭವತಿ ತದಪಿ ಪಶುರೂಪಂ । ಲೋಕೇಽಪಿ ಗವಾಶ್ವಾದಿಪಶವ ಇತಿ ಯದಸ್ತಿ ತದ್ವಾಮಂ ರಮಣೀಯಂ ದೃಶ್ಯತೇ । ಹವಿಷ್ಮದ್ಧವಿಃ ಸಂಜ್ಞೋಪೇತಂ ಯದಸ್ತಿ ತದಪಿ ಪಶುಸ್ವರೂಪಂ । ಪಶವೋ ಹಿ ದೇವತಾಸಂಬದ್ಧಹವಿಃ ಸ್ವರೂಪೇಣ ಹೂಯಂತೇ । ವಪುಃಸಂಜ್ಞೋಪೇತಂ ಯದಸ್ತಿ ತದಪಿ ಪಶುಸ್ವರೂಪಂ । ಪಶವೋ ಹಿ ವಪುಃ ಪುಷ್ಟ್ಯಾಂಗಭೂತಾ ದೃಶ್ಯಂತೇ । ವಿದಾಮಘವನ್ನಿತ್ಯಾದಿಷು ಮಹಾನಾಮ್ನೀಷೂತ್ಪನ್ನಂ ಶಾಕ್ವರಂ ಸಾಮ ತತ್ಸಂಬದ್ಧಮೇಕಂ ಲಿಂಗಂ । ಪಾಂಕ್ತಮಿತಿ ಯತ್ಪುನರ್ವಚನಂ ತತ್ಪಂಚಸಂಖ್ಯಾಯುಕ್ತಂ ಪೂರ್ವತ್ರ ಪಂಕ್ತಿಚ್ಛಂದಃ ಸಂಬದ್ಧಮಿತಿ ವಿಶೇಷಃ । ಕುರ್ವದಿತಿ ವರ್ತಮಾನಾರ್ಥವಾಚಿಪ್ರತ್ಯಯೋಪೇತಂ ಧಾತುಮಾತ್ರಂ ವಿವಕ್ಷಿತಮ್ । ಏತಚ್ಚ ದ್ವಿತೀಯಸ್ಯಾಹ್ನೋ ರೂಪಮಿತಿ ಪೂರ್ವಮುಕ್ತಂ ಏವಂ ಚ ಸತಿ ಯಾನಿ ದ್ವಿತೀಯೇಽಹನ್ಯುಕ್ತಾನಿ ಲಿಂಗಾನಿ ಯಾನಿ ಚಾತ್ರ ನೂತನಾನ್ಯೇತಾನಿ ಸರ್ವಾಣ್ಯಪಿ ಪಂಚಮಸ್ಯಾಹ್ನೋ ನಿರೂಪಕಾಣಿ ದ್ರಷ್ಟವ್ಯಾನಿ ॥

ಈಗ ವಿಶೇಷಲಕ್ಷಣಗಳನ್ನು ತಿಳಿಸುವರು. ಮೇಲಿನ ವಾಕ್ಯದಲ್ಲಿರುವ ದುಗ್ಧ, ಊಧ, ಪೃಶ್ನಿ ಎಂಬ ಶಬ್ದಗಳು (ಈ ಐದನೆಯ ದಿವಸದ) ಲಕ್ಷಣಗಳು. ಈ ಶಬ್ದಗಳಿಗೆ ಸಂಬಂಧಪಟ್ಟ ಪಶುಗಳು ಎಂದರೆ ಗೋವುಗಳೂ ಸಹ ಈ ಲಕ್ಷಣಗಳೇ ಆಗಿರುವವು. ಮೇಲೆ ಅಧ್ಯಾಸ ಎಂದು ಹೇಳಿರುವುದು ಅನೇಕ ವಿಧಗಳಾದ ಪಶುರೂಪಗಳು ಎಂಬರ್ಥವನ್ನು ಸೂಚಿಸುವುದು. ಅಧಿಕಪಾದಗಳಿಂದ ಪಾದಪ್ರಕ್ಷೇಪಮಾಡುವುದು ಎಂದರೆ ನಡೆಯುವುದಕ್ಕೆ ಅಧ್ಯಾಸವೆಂದು ಹೆಸರು ಮತ್ತು ಪ್ರಕೃತಿಯಲ್ಲಿ ಅಧಿಕ ಪಾದಪ್ರಕ್ಷೇಪವನ್ನಿಡುವ ಯಾವ ಪ್ರಾಣಿಗಾದರೂ ಅಧ್ಯಾಸವೆಂದೇ ಹೆಸರು ಪಶುಗಳಿಗೆ ನಾಲ್ಕು ಪಾದಗಳೂ ಒಂದು ಮುಖವೂ ಇರುವುದು. ಆದ್ದರಿಂದ ಅಧ್ಯಾಸವೆಂದರೆ ಪಶುರೂಪವೆಂದೇ ಅರ್ಥವು. ಇದನ್ನೇ ವಿಕ್ಷುದ್ರಾ ಎಂಬ ಶಬ್ದದಿಂದ ವಿಶದಪಡಿಸುವರು. ವಿಕ್ಷುದ್ರ ಎಂದರೆ ಅನೇಕ ನ್ಯೂನತೆಗಳು ಎಂದರೆ ಒಂದು ಪ್ರಾಣಿಯಲ್ಲಿರುವ ಶಕ್ತಿಯು ಮತ್ತೊಂದರಲ್ಲಿ ಇಲ್ಲದಿರುವುದು (ಕಮ್ಮಿಯಾಗಿರುವುದು) ಆನೆಯಲ್ಲಿರುವ ಶಕ್ತಿಯು ಕುದುರೆಯಲ್ಲಿರುವುದಿಲ್ಲ. ಕುದುರೆಯಲ್ಲಿರುವ ಶಕ್ತಿಯು ಎಮ್ಮೆಯಲ್ಲಿರುವುದಿಲ್ಲ ಅದಕ್ಕಿಂತ ಗೋವಿನಲ್ಲಿ ಶಕ್ತಿಯು ಕಡಮೆಯಾಗಿರುವುದು. ಗೋವಿಗಿಂತ ಆಡಿನಲ್ಲಿ ಕಮ್ಮಿಯಾಗಿರುವುದು. ಈರೀತಿ ಒಂದು ಪ್ರಾಣಿಗಿಂತ ಮತ್ತೊಂದು ಪ್ರಾಣಿಯಲ್ಲಿ ಶಕ್ತಿಯು ಕಮ್ಮಿಯಾಗಿರುವುದಕ್ಕೆ ಕ್ಷುದ್ರವೆಂದು ಹೆಸರು. **ಜಾಗತಂ** ಎಂದರೆ ಜಗತೀ ಸಂಬಂಧವು, ಪಶುರೂಪವು ಎಂದರ್ಥವು. ಏಕೆಂದರೆ ಸೋಮಾಹರಣಕಾಲದಲ್ಲಿ ಜಗತೀಛಂದಸ್ಸು ಸ್ವರ್ಗದಿಂದ ಪಶುಗಳನ್ನು ತಂದಿತು ಎಂದು ಹೇಳಲಾಗಿದೆ. ಹಾಗೆಯೇ **ಬಾರ್ಹತಂ** ಎಂದರೆ ಬೃಹತೀಸಂಬಂಧವಾದ ಪಶುರೂಪವು. ಏಕೆಂದರೆ ಪಶು ವಿಷಯದಲ್ಲಿ ಛಂದಸ್ಸುಗಳಿಗೆ ಪರಸ್ಪರ ಸ್ಪರ್ಧೆಯುಂಟಾದಾಗ ಬೃಹತೀಛಂದಸ್ಸು ಎಲ್ಲಾ ಛಂದಸ್ಸುಗಳಿಗಿಂತಲೂ ಮುಂದೆ ಓಡಿ

ಜಯಶಾಲಿಯಾಯಿತು. ಮತ್ತು ಪಂಕ್ತಿಶ್ಛಂದಸ್ಸೂ ಸಹ ಪಶುರೂಪವು. ಏಕೆಂದರೆ ಪಂಕ್ತಿಶ್ಛಂದಸ್ಸಿಗೆ ಐದು ಪಾದಗಳಿರುವವು. ಪಶುಗಳಿಗೂ ನಾಲ್ಕು ಪಾದಗಳು ಒಂದು ಮುಖ (ಮೂತಿ) ಎಂದು ಐದು ಮುಖ್ಯಾವಯಗಳಿರುವುದರಿಂದ ಪಂಕ್ತಿಶ್ಛಂದಸ್ಸಿಗೂ ಪಶುಗಳಿಗೂ ಸಾಮ್ಯವಿರುವುದು. **ವಾಮಂ** ಎಂದರೆ ರಮಣೀಯವಾಗಿಯು ಕೇಳುವುದಕ್ಕೆ ಹಿತಕರವಾಗಿಯೂ ಇರುವ ಸೂಕ್ತಕ್ಕೂ ಪಶುಸಂಬಂಧವಿರುವುದು. ಪ್ರಪಂಚದಲ್ಲಿಯೂ ನೋಡುವುದಕ್ಕೆ ಚೆನ್ನಾಗಿ ಆಕರ್ಷಕವಾದ ರೂಪವುಳ್ಳ ಪಶುಗಳಿಗೂ ವಾಮವೆಂಬ ಹೆಸರಿರುವುದು. ಗೋವುಗಳು, ಅಶ್ವಗಳು ಪುಷ್ಟವಾಗಿ ಚೆನ್ನಾಗಿ ಬೆಳೆದಿದ್ದರೆ ರಮಣೀಯವಾಗಿರುವುದು ಲೋಕದಲ್ಲಿ ಪ್ರಸಿದ್ಧಿಯಾಗಿದೆ. **ಹವಿಷ್ಮತ್** ಎಂದ ಹವಿಸ್ಸಿನ ಸಂಬಂಧವಾದ (ಎಂದರೆ ಆಜ್ಯ ಮೊದಲಾದ) ಸಂಬಂಧವಿರುವುದು ಪಶುಗಳಲ್ಲಿಯೇ ಎಂದರೆ ಪಶುಗಳಿಂದಲೇ ನಮಗೆ ಹವಿಸ್ಸು ದೊರೆಯುವುದು. ಮತ್ತು ಈ ಹವಿಸ್ಸನ್ನು ನಾವು ದೇವತೆಗಳಿಗೆ ಅರ್ಪಿಸುವುದರಿಂದ ದೇವತೆಗಳಗೂ ಪಶುಗಳಿಗೂ ಸಂಬಂಧವಿದ್ದಂತಾಯಿತು. ವಪುಃ (ಶರೀರ) ಎಂಬ ಶಬ್ದವೂ ಪಶುಗಳನ್ನೇ ಸೂಚಿಸುವುದು. ಏಕೆಂದರೆ ಪಶುಗಳು ಪುಷ್ಟವಾದ ಅಂಗಗಳಿಂದ ಕೂಡಿರುವವು. ವಿದಾಮಘವನ್ ಮುಂತಾದ ವಾಕ್ಯಗಳಲ್ಲಿ ಮಹಾನಾಮ್ನೀ ವ್ರತದಲ್ಲಿ ಉತ್ಪನ್ನವಾದ ಶಾಕ್ವರವೆಂಬ ಸಾಮವಿರುವುದು. ಇದೂ ಸಹ ಐದನೆಯ ದಿನದಲ್ಲಿರುವ ಒಂದು ಲಕ್ಷಣವು ಪಾಂಕ್ತಂ ಎಂದಿರುವುದು ಐದುಪಾದಗಳುಳ್ಳ ಪಂಕ್ತಿಶ್ಛಂದಸ್ಸಿನಿಂದ ಕೂಡಿರುವುದೂ ಒಂದು ವಿಶೇಷ ಲಕ್ಷಣವೆನಿಸುವುದು. **ಕುರ್ವದಿತಿ** ಎಂಬ ಶಬ್ದವು ವರ್ತಮಾನಕಾಲವನ್ನು ಸೂಚಿಸುವ ಧಾತುರೂಪವು. ಈ ರೂಪವು ಎರಡನೆಯ ದಿವಸದ ಲಕ್ಷಣವೆಂದು ಹಿಂದೆಯೇ ಹೇಳಲ್ಪಟ್ಟಿರುವುದು. ಎರಡನೆಯ ದಿನದ ಲಕ್ಷಣಗಣಗಳೆಲ್ಲವೂ ಐದನೆಯ ದಿನದ ಲಕ್ಷಣಗಳಾಗಿರುವವು ಎಂದು ಸಹ ಹಿಂದೆ ಹೇಳಿರುವುದನ್ನು ಜ್ಞಾಪಕಮಾಡಿಕೊಳ್ಳಬಹುದು.



**ಇಮಮೂ ಷು ವೋ ಅತಿಥಿಮುಷರ್ಬುಧಮಿತಿ ಪಂಚಮಸ್ಯಾಹ್ನ ಆಜ್ಯಂ ಭವತಿ ಜಾಗತಮಧ್ಯಾಸವತ್ಪಶುರೂಪಂ ಪಂಚಮೇಽಹನಿ ಪಂಚಮಸ್ಯಾಹ್ನೋ ರೂಪಂ ॥**

**ಆಜ್ಯಶಸ್ತ್ರಂ ವಿಧತ್ತೇ— ಇಮಮೂ ಷ್ವಿತ್ಯಾದಿಸೂಕ್ತೇ ಜಗತೀಛಂದೋಯುಕ್ತಾ ಅದ್ಯಾನವರ್ಚಃ ಶಂಸನೀಯಾಸ್ತತ್ರ ತೃತೀಯಸ್ಯಾಮೃಚಿ ಜಗತೀಛಂದಸ್ಕೇಭ್ಯಶ್ಚತುರ್ಥ(ಭ್ಯಃ) ಪಾದೇಭ್ಯೋಽಧಿಕಃ ಪಾದೋ ಭರದ್ವಾಜಾಯ ಸಪ್ರಥ ಇತ್ಯೇಷ ಸಮಾಮ್ನಾಯತೇ । ಅತೋಽಧಿಕಪಾದಯುಕ್ತತ್ವಾದಿದಮಧ್ಯಾಸವಲ್ಲಿಂಗಂ । ತತ್ರ(ಚ್ಚ ?) ಪಶುಸ್ವರೂಪಂ ಪಶೋರಪಿ ಪಾದಚತುಷ್ಟಯಾದಧಿಕಸ್ಯ ಮುಖಸ್ಯ ವಿದ್ಯಮಾನತ್ವಾತ್ । ತದೇತಲ್ಲಿಂಗಯುಕ್ತಂ ಪಂಚಮೇಽಹನಿ ವಿನಿಯೋಕ್ತುಂ ಯುಕ್ತಂ ಯೋಗ್ಯಂ । ತಸ್ಮಾದೇತತ್ಪಂಚಮಸ್ಯಾಹ್ನೋ ನಿರೂಪಕಂ ॥**

ಆಜ್ಯಶಸ್ತ್ರವನ್ನು ವಿವರಿಸುವರು. ಇಮಮೂ ಷು ವೋ ಅತಿಥಿಮುಷಃ (ಋ. ಸಂ. ೬-೧೫-೧) ಎಂಬುದು ಆಜ್ಯಸೂಕ್ತವು. ಈ ಸೂಕ್ತದಲ್ಲಿ ಜಗತೀಛಂದಸ್ಸಿನ ಒಂಭತ್ತು ಋಕ್ಕುಗಳನ್ನು ಪಠಿಸಬೇಕು. ಆದರೆ ಮೂರನೇ ಋಕ್ಕಿನಲ್ಲಿ ಜಗತೀಛಂದಸ್ಸಿನಲ್ಲಿರಬೇಕಾದ ನಾಲ್ಕು ಪಾದಗಳಿಗಿಂತಲೂ ಒಂದು ಪಾದವು ಅಧಿಕವಾಗಿರುವುದು. ಇದು ಭಾರದ್ವಾಜಋಷಿದೃಷ್ಟವಾದುದು. ಅಧಿಕಪಾದದಿಂದ ಕೂಡಿದ ಋಕ್ಕಿರುವುದೇ ಈ ಐದನೆಯ ದಿವಸದ ಲಕ್ಷಣವಾಗಿರುವುದು. ಪಶುಗಳಿಗೂ ನಾಲ್ಕು ಪಾದಗಳು, ಒಂದು ಮುಖ ಎಂದು ಐದು ಮುಖ್ಯವಾದ ಅವಯವಗಳಿರುವುದರಿಂದ ಈ ಅಧಿಕಪಾದಯುಕ್ತವಾದ ಋಕ್ಕನ್ನು ಈ ಐದನೆಯ ದಿನದ ಲಕ್ಷಣವಾಗಿ ಪಠಿಸುವುದು ಯುಕ್ತವು.

**ಆ ನೋ ಯಜ್ಞಂ ದಿವಿಸ್ಪೃಶಮಾ ನೋ ವಾಯೋ ಮಹೇತನೇ ರಥೇನ ಪೃಥುಪಾಜಸಾ ಬಹವಃ ಸೂರಚಕ್ಷಸ ಇಮಾ ಉ ವಾಂ ದಿವಿಷ್ಟಯಃ ಪಿಬಾ ಸುತಸ್ಯ ರಸಿನೋ ದೇವಂ ದೇವಂ ವೋ ವಸೇ ದೇವಂ ದೇವಂ ಬೃಹದುಗಾಯಿಷೇ ವಚ ಇತಿ ಬಾರ್ಹತಂ ಪ್ರಉಗಂ ಪಂಚಮೇಽಹನಿ ಪಂಚಮಸ್ಯಾಹ್ನೋ ರೂಪಂ ॥**

ಅಥ ಪ್ರಉಗಶಸ್ತ್ರಂ ವಿಧತ್ತೇ—ಆನೋ ಯಜ್ಞಮಿತಿ ದ್ವೇ ಋಚೌ । ಆ ನೋ ವಾಯೋ ಇತ್ಯೇಕಾ । ಸೋಽಯಂ ಪ್ರಥಮಸ್ತ್ರ್ಯೃಚೋ ರಥೇನೇತ್ಯಾದಿರ್ದ್ವಿತೀಯೋ ಬಹವ ಇತ್ಯಾದಿಸ್ತೃತೀಯ ಇಮಾ ಉ ವಾಮಿತ್ಯಾದಿಶ್ಚತುರ್ಥಃ ಪಿಬಾ ಸುತಸ್ಯೇತ್ಯಾದಿಃ ಪಂಚಮೋ ದೇವಂ ದೇವಮಿತಿ ಷಷ್ಠೋ ಬೃಹದಿತಿ ಸಪ್ತಮಃ । ತದೇತತ್ಸಪ್ತಮಂ ಬೃಹತೀಛಂದೋಯೋಗಾದ್ಬಾರ್ಹತಂ । ಅತೋ ಲಿಂಗಸದ್ಭಾವಾತ್ಪಂಚಮೇಽಹನಿ ಯೋಗ್ಯತಯಾ ತಸ್ಯ ನಿರೂಪಕಂ ॥

ಈಗ ಪ್ರಉಗಶಸ್ತ್ರವನ್ನು ವಿವರಿಸುವರು. **ಆ ನೋ ಯಜ್ಞಂ ದಿವಿಸ್ಪೃಶಂ** (ಋ. ಸಂ. ೮-೧೧-೯) ಎಂದು ಮೊದಲಾದ ಎರಡು ಋಕ್ಕುಗಳು, **ಆ ನೋ ವಾಯೋ ಮಹೇತನೇ** (ಋ. ಸಂ. ೮-೪೬-೨೫) ಎಂಬ ಒಂದು ಋಕ್ಕೂ ಸೇರಿ ಈ ಶಸ್ತ್ರಮಂತ್ರದ ಮೊದಲನೇ ತೃಚವಾಗುವುದು. **ರಥೇನ ಪೃಥುಪಾಜಸಾ** (ಋ. ಸಂ. ೪-೪೬-೫) ಎಂದು ಮೊದಲಾಗುವ ತೃಚವು ಎರಡನೆಯದು. **ಬಹವಃ ಸೂರಚಕ್ಷಸಃ** (ಋ. ಸಂ. ೭-೬೬-೧೦) ಎಂಬ ತೃಚವು ಮೂರನೆಯದು. **ಇಮಾ ಉ ವಾಂ ದಿವಿಷ್ಟಯಃ** (ಋ. ಸಂ. ೭-೭೪-೧) ಎಂಬ ತೃಚವು ನಾಲ್ಕನೆಯದು. **ಪಿಬಾ ಸುತಸ್ಯ ರಸಿನಃ** (ಋ. ಸಂ. ೮ ೩-೧) ಎಂಬ ತೃಚವು ಐದನೆಯದು. **ದೇವಂ ದೇವಂ ವೋ ವಸೇ** (ಋ. ಸಂ. ೮-೧೨-೧೯) ಎಂಬ ತೃಚವು ಆರನೆಯದು. **ಬೃಹದು ಗಾಯಿಷೇ ವಚ** (ಋ. ಸಂ. ೭-೯೬-೧) ಎಂಬ ತೃಚವು ಏಳನೆಯದು. ಈ ಏಳನೇ ತೃಚವು ಬೃಹತೀಛಂದಸ್ಕವು. ಆದ್ದರಿಂದ ಎಂದರೆ ಬೃಹತೀ ಛಂದಸ್ಸಿನ ಸಂಬಂಧವಿರುವುದರಿಂದ ಈ ಸೂಕ್ತದಲ್ಲಿ ಐದನೆಯ ದಿವಸ ಪಠಿಸಬೇಕಾದ ಲಕ್ಷಣವಿದ್ದಂತಾಯಿತು.

**ಯತ್ಪಾಂಚಜನ್ಯಯಾ ವಿಶೇತಿ ಮರುತ್ವತೀಯಸ್ಯ ಪ್ರತಿಪತ್ಪಾಂಚಜನ್ಯಯೇತಿ ಪಂಚಮೇಽಹನಿ ಪಂಚಮಸ್ಯಾಹ್ನೋ ರೂಪಂ ॥**

ಅಥ ಶಸ್ತ್ರಾಂತರಸ್ಯ ಪ್ರತಿಪದಂ ವಿಧತ್ತೇ—ಅಸ್ಮಿಂಸ್ತ್ರ್ಯೃಚೇ ಪ್ರಥಮಾಯಾಮೃಚಿ ಪಾಂಚಜನ್ಯಯೇತಿ ಪದೇ ಪಂಚಶಬ್ದಯೋಗೋ ಲಿಂಗಂ ॥

ಬೇರೆಶಸ್ತ್ರದ ಪ್ರತಿಪತ್ ಋಕ್ಕನ್ನು ವಿವರಿಸುವರು. **ಯತ್ಪಾಂಚಜನ್ಯಯಾ ವಿಶಾ** (ಋ. ಸಂ. ೮-೬೩-೭) ಎಂಬ ಋಕ್ಕು ಮರುತ್ವತೀಯಶಸ್ತ್ರದ ಪ್ರತಿಪತ್ (ಮೊದಲನೆಯ) ಋಕ್ಕು ಈ ಋಕ್ಕಿನಲ್ಲಿ ಪಂಚ ಎಂಬ ಶಬ್ದವಿರುವುದರಿಂದ ಇಲ್ಲಿ ಐದನೆಯ ದಿವಸದಲ್ಲಿ ಪಠಿಸಬೇಕಾದ ಮಂತ್ರದ ಲಕ್ಷಣಹೆದ್ದಂತಾಯಿತು.

**ಇಂದ್ರ ಇತ್ಸೋಮಪಾ ಏಕ ಇಂದ್ರ ನೇದೀಯ ಏದಿಹ್ಯುತ್ತಿಷ್ಠ ಬ್ರಹ್ಮಣಸ್ಪತೇಽಗ್ನಿರ್ನೇತಾ ತ್ವಂ ಸೋಮ ಕ್ರತುಭಿಃ ಪಿನ್ವಂತ್ಯಪೋ ಬೃಹ-**

**ದಿಂದ್ರಾಯ ಗಾಯತೇತಿ ದ್ವಿತೀಯೇನಾನ್ನಾ ಸಮಾನ ಆತಾನಃ ಪಂಚಮೇಽಹನಿ ಪಂಚಮಸ್ಯಾಹ್ನೋ ರೂಪಂ ॥**

**ಅಥ ದ್ವಿತೀಯೇನಾಹ್ನಾ ಸಮಾನತ್ವಲಿಂಗಯುಕ್ತಶಸ್ತ್ರಕ್ಲೃಪ್ತಿಂ ವಿಧತ್ತೇ—ಆತಾನಃ ಶಬ್ದಕ್ಲೃಪ್ತಿಃ ॥**

**ಇಂದ್ರ ಸೋಮಪಾ ಏಕಃ** (ಋ. ಸಂ ೮-೨-೪) ಎಂಬ ಋಕ್ಕು; **ಇಂದ್ರ ನೇದೀಯ ಏದಿಹಿ** (ಋ. ಸಂ ೮-೫೩-೫) ಎಂಬ ಋಕ್ಕು; **ಉತ್ತಿಷ್ಠ ಬ್ರಹ್ಮಣಸ್ಪತೇ** (ಋ. ಸಂ ೧-೪೦-೧) ಎಂಬ ಋಕ್ಕು, **ಅಗ್ನಿರ್ನೇತಾ ಭಗ ಇವ** ಋ. ಸಂ ೩-೨೦-೪) ಎಂಬ ಋಕ್ಕು, **ತ್ವಂ ಸೋಮ ಕ್ರತುಭಿಃ** (ಋ. ಸಂ ೧-೯೧-೨) ಎಂಬ ಋಕ್ಕು, **ಪಿನ್ವಂತ್ಯಪೋ ಮರುತಃ** (ಋ. ಸಂ ೧-೬೪-೬) ಎಂಬ ಋಕ್ಕು, **ಬೃಹದಿಂದ್ರಾಯ ಗಾಯತ** (ಋ. ಸಂ ೮-೮೯-೧) ಎಂಬ ಋಕ್ಕು, ಈ ಋಕ್ಕುಗಳೆಲ್ಲವೂ ಎರಡನೇ ದಿನದ ಋಕ್ಕುಗಳಿಗೆ ಸಮಾನವಾಗಿಯೇ (ಒಂದೇ ಆಗಿರುವುದರಿಂದ) ಇವುಗಳೆಲ್ಲದರಲ್ಲಿಯೂ ಐದನೆಯ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳಿದ್ದಂತಾಯಿತು.

**ಅವಿತಾಽಸಿ ಸುನ್ವತೋ ವೃಕ್ತಬರ್ಹಿಷ ಇತಿ ಸೂಕ್ತಂ ಮದ್ವತ್ಪಾಂಕ್ತಂ ಪಂಚಪದಂ ಪಂಚಮೇಽಹನಿ ಪಂಚಮಸ್ಯಾಹ್ನೋ ರೂಪಂ ॥**

**ಅಥ ಮದಶಬ್ದಲಿಂಗೇನ ಪಂಚಪಾದೋಪೇತಪಾಂಕ್ತತ್ವಲಿಂಗೇನ ಚೋಪೇತಂ ಸೂಕ್ತಂ ವಿಧತ್ತೇ—ಅತ್ರ ದ್ವಿತೀಯಪಾದೇ ಪಿಬಾ ಸೋಮಂ ಮದಾಯೇತಿ ಶ್ರವಣಾದಿದಂ ಸೂಕ್ತಂ ಮದ್ವದ್ಭವತಿ । ಪಂಚ ಪಾದಾ ವಿಸ್ಪಷ್ಟಾಃ ॥**

ಇಲ್ಲಿ ಮದಶಬ್ದವಿರುವ ಲಕ್ಷಣ ಮತ್ತು ಐದು ಪಾದಗಳಿರುವ ಪಂಕ್ತಿಚ್ಛಂದಸ್ಸಿನ ಲಕ್ಷಣಗಳಿಂದ ಕೂಡಿದ ಸೂಕ್ತವನ್ನು ವಿವರಿಸುವರು. **ಅವಿತಾಽಸಿ ಸುನ್ವತೋ ವೃಕ್ತಬರ್ಹಿಷಃ** (ಋ. ಸಂ ೮-೩೬-೧) ಎಂಬ ಸೂಕ್ತದ ಮೊದಲನೇಯ ಋಕ್ಕು ಪಂಕ್ತಿಚ್ಛಂದಸ್ಕವು. ಈ ಋಕ್ಕಿನ ಎರಡನೇ ಪಾದದಲ್ಲಿ **ಮದಾಯ** ಎಂದು ಮದಶಬ್ಧವಿರುವುದು ಮತ್ತು ಈ ಋಕ್ಕಿನಲ್ಲಿ ಐದು ಪಾದಗಳಿರುವವು. ಆದ್ದರಿಂದ ಈ ಸೂಕ್ತದಲ್ಲಿ ಐದನೆಯ ದಿನದಲ್ಲಿ ಪಠಿಸಲು ಬೇಕಾದ ಲಕ್ಷಣಗಳಿದ್ದಂತಾಯಿತು.

**ಇತ್ಥಾ ಹಿ ಸೋಮ ಇನ್ಮದ ಇತಿ ಸೂಕ್ತಂ ಮದ್ವತ್ಪಾಂಕ್ತಂ ಪಂಚಪದಂ ಪಂಚಮೇಽಹನಿ ಪಂಚಮಸ್ಯಾಹ್ನೋ ರೂಪಂ ॥**

**ತಾದೃಶಮೇವಾನ್ಯತ್ಸೂಕ್ತಂ ವಿಧತ್ತೇ—**

ಮೇಲೆ ಹೇಳಿದ ಲಕ್ಷಣಗಳೇ ಇರುವ ಮತ್ತೊಂದು ಸೂಕ್ತವನ್ನು ವಿವರಿಸುವರು. **ಇತ್ಥಾ ಹಿ ಸೋಮ ಇನ್ಮದೆ** (ಋ. ಸಂ ೧-೮೦-೧) ಎಂಬ ಸೂಕ್ತದಲ್ಲಿ ಹಿಂದೆ ಹೇಳಿದಂತೆ ಮದಶಬ್ದಪ್ರಯೋಗವೂ ಐದು ಪಾದಗಳ ಋಕ್ಕಾದ ಪಂಕ್ತಿಚ್ಛಂದಸ್ಸೂ ಇರುವುದರಿಂದ ಇಲ್ಲಿಯೂ ಐದನೆಯ ದಿವಸದಲ್ಲಿರುವ ಲಕ್ಷಣಗಳಿದ್ದಂತಾಯಿತು.

**ಇಂದ್ರ ಪಿಬ ತುಭ್ಯಂ ಸುತೋ ಮದಾಯೇತಿ ಸೂಕ್ತಂ ಮಧ್ಯತ್ರೈಷ್ಟುಭಂ ತೇನ ಪ್ರತಿಷ್ಠಿತಪದೇನ ಸವನಂ ದಾಧಾರಾಽಽಯತನಾದೇವೈತೇನ ನ ಪ್ರಚ್ಯವತೇ ॥**

ಪುನರಪಿ ಮದಶಬ್ದಲಿಂಗೋಪೇತಂ ತ್ರಿಷ್ಟುಪ್‌ಛಂದಸ್ಕಂ ಸೂಕ್ತಂ ವಿಧತ್ತೇ--ಪೂರ್ವವದ್ವ್ಯಾಖ್ಯೇಯಂ ॥

ಮತ್ತೆ ಮದಶಬ್ದ ಪ್ರಯೋಗವಿರುವ ತ್ರಿಷ್ಟುಪ್ ಛಂದಸ್ಸಿನ ಸೂಕ್ತವನ್ನು ವಿವರಿಸುವರು. **ಇಂದ್ರ ಪಿಬ ತುಭ್ಯಂ ಸುತೋಮದಾಯ** (ಋ. ಸಂ. ೬-೪೦-೧) ಎಂಬ ಸೂಕ್ತದಲ್ಲಿ ಮದಾಯ ಎಂದು ಮದಶಬ್ದ ಪ್ರಯೋಗವಿರುವುದು. ಮತ್ತು ಈ ಸೂಕ್ತದ ಎಲ್ಲಾ ಋಕ್ಕಿನ ಪಾದಗಳಲ್ಲಿಯೂ ಸಮಾನಸಂಖ್ಯೆಯ ಅಕ್ಷರಗಳಿರುವವು. ಆದ್ದರಿಂದ ಈ ಸೂಕ್ತವನ್ನು ಪಠಿಸುವವನು ತನ್ನ ನಿವಾಸಸ್ಥಾನದಿಂದ ಚ್ಯುತ (ಭ್ರಷ್ಟ) ನಾಗುವುದಿಲ್ಲ.

**ಮರುತ್ವಾँ ಇಂದ್ರ ಮೀಢ್ವ ಇತಿ ಪರ್ಯಾಸೋ ನೇತಿ ನ ಪ್ರೇತಿ ಪಂಚಮೇಽಹನಿ ಪಂಚಮಸ್ಯಾಹ್ನೋ ರೂಪಂ ॥**

ಆಕಾರಪ್ರಶಬ್ದವರ್ಜಿತತ್ವಮರುತ್ವತೀಯಶಸ್ತ್ರಸ್ಯಾಂತೇ ಪ್ರಕ್ಷೇಪಣೀಯಂ ತ್ರ್ಯೃಚಂ ವಿಧತ್ತೇ—ಪರಿತೋಽಂತೇ ಪ್ರಕ್ಷೇಪಣೀಯಃ ಪರ್ಯಾಸಃ ।

ಮರುತ್ವತೀಯ ಶಸ್ತ್ರದ ಕೊನೆಯಲ್ಲಿ ಆಕಾರ ಮತ್ತು ಪ್ರಶಬ್ದಗಳಿಲ್ಲದಿರುವ ಮತ್ತು ಸೇರಿಸಲ್ಪಡುವ ಒಂದು ತೃಚವನ್ನು ಹೇಳುವರು. ಇಲ್ಲಿ ಪರ್ಯಾಸವೆಂದರೆ ಕೊನೆಯಲ್ಲಿ ಸೇರಿಸಬೇಕಾದ ಎಂದರ್ಥವು. ಮರುತ್ವತೀಯ ಶಸ್ತ್ರದ ಕೊನೆಯಲ್ಲಿ **ಮರುತ್ವಾँ ಇಂದ್ರ ಮೀಢ್ವಃ** (ಋ. ಸಂ. ೮-೭೬-೭) ಎಂಬ ತೃಚವನ್ನು ಸೇರಿಸಬೇಕು. ಈ ತೃಚದಲ್ಲಿ ಆ ಮತ್ತು ಪ್ರ ಎಂಬ ಶಬ್ದಗಳಿರುವುದಿಲ್ಲ. ಆದ್ದರಿಂದ ಇಲ್ಲಿ ಐದನೆಯ ದಿನಸ ಪಠಿಸುವ ಮಂತ್ರಗಳ ಲಕ್ಷಣವಿದ್ದಂತಾಯಿತು.

**ತಾ ಉ ಗಾಯತ್ರ್ಯೋ ಗಾಯತ್ರ್ಯೋ ವಾ ಏತಸ್ಯ ತ್ರ್ಯಹಸ್ಯ ಮಧ್ಯಂದಿನಂ ವಹಂತಿ ತದ್ವೈತಚ್ಛಂದೋ ವಹತಿ ಯಸ್ಮಿನ್ನಿವಿದ್ಧೀಯತೇ ತಸ್ಮಾದ್ಗಾಯತ್ರೀಷು ನಿವಿದಂ ದಧಾತಿ ॥**

ತಸ್ಮಿಂಸ್ತ್ರ್ಯೃಚೇ ನಿವಿದ್ಧಾನಂ ವಿಧತ್ತೇ---ಪೂರ್ವವದ್ವ್ಯಾಖ್ಯೇಯಂ ॥

ಈ ತೃಚದಲ್ಲಿ ನಿವಿದ್ಧಾನವನ್ನು ಸೇರಿಸುವುದನ್ನು ತಿಳಿಸುವರು. ಮೇಲೆ ಹೇಳಿದ **ಮರುತ್ವಾँ ಇಂದ್ರ ಮೀಢ** ಎಂಬ ಸೂಕ್ತದಲ್ಲಿರುವ ಋಕ್ಕುಗಳು ಗಾಯತ್ರೀ ಛಂದಸ್ಕವು. ಈಗಾಯತ್ರೀ ಛಂದಸ್ಸುಗಳು ನಾಲ್ಕು, ಐದು, ಆರು ಎಂಬ (ಮಧ್ಯದ ಗುಂಪಿನ) ಮೂರು ದಿನಗಳ ಕಾರ್ಯಗಳನ್ನು ನಿರ್ವಹಿಸುವವು. ಆದ್ದರಿಂದ ಈ ಗಾಯತ್ರೀ ಛಂದಸ್ಸಿನ ಋಕ್ಕುಗಳಲ್ಲಿ ನಿವಿತ್ಪದಗಳ ಸಮೂಹವನ್ನು ಸೇರಿಸಿ ಪಠಿಸುವರು.

*English Translation*

**(The Characteristics and Shastras of the fifth and sixth days of the Dvadasaha)**

**(The Characteristics of the fifty day. The Shastras of the morning and midday libations)**

The leading deity of the fifty day is Gaus (the cow). Its Stoma is the Trinava (twenty-seven-fold), the Saman ts the Sakvaram, the metre is Pankti. He who knows what deity, what Stoma, what Saman, what metre are required on this day, succeeds by it. What is not a and not pra, what is fixed (standing), that is a characteristic of the fifth day. Besides, the characteristics of the second day re-occur in the fifth, such as urdhva, prati, antar, vrishan, vridhan; the mentioning of the deity in the middle pada, an allusion to the airy region. (In addition to these there are the following peculiar characteristics), dugdha, (duh to milk) udha (udder), dhenu (cow), prisni cloud, cow, mad (drunk), the animal form, an increase (adhyasah) for the animals differ in size, as it were, one being smaller or bigger than the other. This fifth day is jagatam, i. e it refers to the movable jagat things or the Jagati metre, for the animals are movable; it is panktam, for the animals refer to the Pankti metre, it is vamam, i. e. left, because the animals are of this quality. It is havishmat, i. e. having offerings; because the animals are on offering (serve as an offering); it is vapushmat, i. e. having a body; for the animals have a body; it is sakvaram panktam, and has the present tence, just as the second day.

Imam u shu vo adithim (6, 15) is the Ajya Shastra. It is in the Jagati metre with additional other metres (such as Sakvari, Atisakvari & co.); this is animal characteristic of the fifty day.

The Pra-uga Shastra of the fifth day, which is in the Brihati metre, consists of the following verses: A no yajnam divisprisam (8, 90, 9–10), a no vayo (8, 46, 25), rathena prithapajasa (4, 46, 5–7), bahavah surachakshasa (7, 66, 10–12) ima u vam divishtaya (7, 74, 1-3) piba sutasya rasino (8, 3, 1-3), devam devam vo vase devam (8, 27, 13-15) brihad u gayishe vacha (7, 96, 1-3).

In the verse yat panchajanyayvisa (8, 52, 7) which is the beginning of the Marutvatiya Shastra, there is the word panchajanyaya (consisting of five families) which five is a characteristic of the fifth day (it being pankta, i. e, five-fold).

Indra it somapa ekah (82, 4,) Indra nediya ed ihi (Val. 5, 5), uttishtha Brahmanaspate (1, 40, 1), Agnir neta (3, 20, 1) tvam soma kratubhih (1, 91, 2), pinvanty apo (1, 64, 6), brihad Indraya gayata (8, 78, 1) is the extension (of the

Marutvatiya Shastra) of the fifth day, which is identical with that of the second day.

Avitasai sunvato (8, 36) is a hymn which contains the word mad (to be drunk). There are in the first verse five padas, which is in the Pankti metre, all these are characteristic of the fifth day. Ittha, hi soma is mada (1, 80) is another hymn in the Pankti metre consisting of five padas, which contains the word mad also.

The hymn Indra piba tubhyam suto madaya (6, 40,) composed in the Trishtubh metre, contains the word mad also. By means of this pada which remained firm, the Hotar keeps the libation in its proper place, preventing it from slipping down. The triplet marutam indra midhva (8, 65, 7-9) is the setting containing neither the words a nor pra which is a characteristic of the fifth day. These verses are in the Gayatri metre, which lead the midday libation of the three day's sacrifice. The Nivid is placed in that metre which is the leading one. Therefore the Hotar places the Nivid in these Gayatris.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾವಿಂಶಾಧ್ಯಾಯಸ್ಯ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವಾದುದು.



## ಅಥ ದ್ವಾವಿಂಶಾಧ್ಯಾಯೇ ದ್ವಿತೀಯಃ ಖಂಡಃ

### ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ಶಾಕ್ವರಸಾಮ ಮತ್ತು ಮಹಾನಾಮ್ನೀ ಋಕ್ಕುಗಳ ವಿಷಯ: ನಿಷ್ಕೇವಲ್ಯಶಸ್ತ್ರವು.]



ಮಹಾನಾಮ್ನೀಷ್ವತ್ರ ಸ್ತುವತೇ ಶಾಕ್ವರೇಣ ಸಾಮ್ನಾ ರಾಥಂತರೇಽಹನಿ
ಪಂಚಮೇಽಹನಿ ಪಂಚಮಸ್ಯಾಹ್ನೋ ರೂಪಂ ॥

ಅಥ ಶಾಕ್ವರಸಾಮಸಂಬಂಧೇನ ಲಿಂಗೇನ ಯುಕ್ತಾ ಋಚೋ ವಿಧತ್ತೇ—ವಿದಾ ಮಘವನ್ನಿತ್ಯಾದಯೋ ನವರ್ಚೋ ಮಹಾನಾಮ್ನೀಸಂಜ್ಞಕಾಸ್ತಾಸೂದ್ಗಾತಾರಃ ಶಾಕ್ವರಾಖ್ಯೇನ ಸಾಮ್ನಾ ಸ್ತುವತೇ । ಅಹಶ್ಚೇದಮಯುಗ್ಮತ್ವಾದ್ರಾಥಂತರಂ ಶಾಕ್ವರಂ ಚ ಸಾಮ ರಥಂತರರೂಪ ಜನ್ಯತ್ವಾದ್ರಾಥಂತರಮತೋಽತ್ರ ತಾ ಋಚೋ ಯೋಗ್ಯಾಃ ॥

ಈಗ ಶಾಕ್ವರಸಾಮ ಎಂಬ ಲಕ್ಷಣದಿಂದ ಕೂಡಿದ ಋಕ್ಕುಗಳನ್ನು ವಿವರಿಸುವರು. ವಿದಾ ಮಘವನ್ವಿದಾ ಎಂದು ಮೊದಲಾಗುವ ಒಂಭತ್ತು ಋಕ್ಕುಗಳಿಗೆ ಮಹಾನಾಮ್ನೀ ಋಕ್ಕುಗಳೆಂದು ಹೆಸರು. ಈ ಋಕ್ಕುಗಳನ್ನು ಉದ್ಗಾತೃಗಳು (ಸಾಮಗಾಯಕರು) ಶಾಕ್ವರ ಎಂಬ ಸಾಮಮಂತ್ರದಂತೆ ಗಾನಮಾಡುವರು. ಇದನ್ನು ರಾಥಂತರವೆಂಬ ಐದನೆಯ ದಿನದಲ್ಲಿ ಗಾನಮಾಡುವರು. ಇಲ್ಲಿ ಶಾಕ್ವರ ಎಂಬ ಸಾಮದ ಸಂಬಂಧವಿರುವುದರಿಂದ ಐದನೆಯ ದಿವಸದಲ್ಲಿ ಪಠಿಸುವ ಮಂತ್ರಗಳಲ್ಲಿರ ಬೇಕಾದ ಲಕ್ಷಣವು ಇಲ್ಲಿದ್ದಂತಾಯಿತು.

ಇಂದ್ರೋ ವಾ ಏತಾಭಿರ್ಮಹಾನಾತ್ಮಾನಂ ನಿರಮಿಮೀತ ತಸ್ಮಾನ್ಮಹಾನಾಮ್ನ್ಯೋಽಥೋ ಇಮೇ ವೈ ಲೋಕಾ ಮಹಾನಾಮ್ನ್ಯ ಇಮೇ ಮಹಾಂತಃ ॥

ಮಹಾನಾಮ್ನೀಶಬ್ದಂ ನಿರ್ವಕ್ತಿ—ಪುರಾ ಕದಾಚಿದಿಂದ್ರಃ ಸ್ವಯಮೇವೈಶ್ವರ್ಯಾದಿಗುಣೈರ್ಮಹಾನ್ಭವಿಷ್ಯಾಮೀತಿ ವಿಚಾರ್ಯ ವಿದಾಮಘವನ್ನಿತ್ಯಾದಿಭಿರ್ಋಗ್ಭಿಃ ಸ್ವಾತ್ಮಾನಂ ಗುಣೈರ್ಮಹಾಂತಂ ನಿರ್ಮಿತವಾನ್ । ತಸ್ಮಾನ್ಮಹತ್ತ್ವನಿರ್ಮಾಣಸಾಧನತ್ವಾನ್ಮಹಾನಾಮ್ನೀಶಬ್ದವಾಚ್ಯಾಃ ಸಂಪನ್ನಾಃ । ಅಪಿ ಚ ಮಹಾನಾಮ್ನ್ಯೋ ಭೂರಾದಿಲೋಕತ್ರಯಸ್ವರೂಪಾ ಲೋಕಾಶ್ಚ ಮಹಾಂತಸ್ತಸ್ಮಾದಪ್ಯಾಸಾಂ ಮಹಾನಾಮ್ನೀತ್ವಂ ॥

ಮಹಾನಾಮ್ನೀಶಬ್ದದ ನಿರ್ವಚನವನ್ನು ತಿಳಿಸುವರು. ಪೂರ್ವದಲ್ಲಿ ಇಂದ್ರನು ತಾನು ಐಶ್ವರ್ಯಾದಿಗುಣಗಳಿಂದ ಮಹತ್ವವನ್ನು (ಪ್ರಾಧಾನ್ಯತೆಯನ್ನು) ಪಡೆಯಬೇಕೆಂದು ಆಲೋಚಿಸಿ ವಿದಾಮಘವನ್ವಿದಾ ಎಂದು ಮೊದಲಾಗುವ (ಒಂಭತ್ತು) ಋಕ್ಕುಗಳಿಂದ ತನ್ನ ಸ್ವಂತ ಗುಣಗಳನ್ನು ಹೆಚ್ಚಿಸಿಕೊಂಡು ತನ್ನ ಮಹತ್ವದವಿಯನ್ನು ನಿರ್ಮಿಸಿಕೊಂಡನು. ಇಂದ್ರನು ತನಗೆ ಮಹತ್ವದವಿಯನ್ನು ನಿರ್ಮಿಸಿಕೊಳ್ಳಲು ಈ ಋಕ್ಕುಗಳು ಸಾಧನಭೂತವಾದ್ದರಿಂದ ಈ ಋಕ್ಕುಗಳಿಗೆ ಮಹಾನಾಮ್ನೀಋಕ್ಕುಗಳೆಂಬ ಹೆಸರು ಪ್ರಸಿದ್ಧವಾಯಿತು. ಇದಲ್ಲದೆ ಮಹಾನಾಮ್ನ್ಯಃ ಎಂದರೆ ಭೂರಾದಿ (ಪೃಥಿವ್ಯಂತರಿಕ್ಷ ಸ್ವರ್ಗಗಳೆಂಬ) ಮೂರು ಲೋಕಗಳು ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವುದರಿಂದ ಈ ಋಕ್ಕುಗಳಿಗೆ ಮಹಾನಾಮ್ನೀ ಋಕ್ಕುಗಳೆಂಬ ಹೆಸರು ಬಂದಿತು.

ಇಮಾನ್ವೈ ಲೋಕಾನ್ಪ್ರಜಾಪತಿಃ ಸೃಷ್ಟ್ವೇದಂ ಸರ್ವಮಶಕ್ನೋದ್ಯದಿದಂ ಕಿಂಚ ಯದಿಮಾಂಲ್ಲೋಕಾನ್ಪ್ರಜಾಪತಿಃ ಸೃಷ್ಟ್ವೇದಂ ಸರ್ವಮಶಕ್ನೋದ್ಯದಿದಂ ಕಿಂಚ ತಚ್ಛಕ್ವರ್ಯೋಽಭವಂಸ್ತಚ್ಛಕ್ವರೀಣಾಂ ಶಕ್ವರೀತ್ವಂ ॥

ನನು ಶಕ್ವರೀಷೂತ್ಪನ್ನಂ ಸಾಮ ಶಾಕ್ವರಮಿತಿ ವಕ್ತವ್ಯಂ । ಶಕ್ವರೀ ಚ ಸಪ್ತಪಾದೋಪೇತಾ । ನ ಚೈತಾ ಋಚಸ್ತಥಾವಿಧಾಃ । ಕಿಂತು ಪಾದಚತುಷ್ಟಯೋಪೇತಾ ಅನುಷ್ಟುಭಸ್ತತ್ಕಥಮಾಸಾಂ ಶಕ್ವರೀತ್ವಮಿತ್ಯಾಶಂಕ್ಯ ಶಕ್ತಿಪ್ರದತ್ವಾಚ್ಛಕ್ವರೀತ್ವಮಿತಿ ನಿರ್ವಚನಂ ದರ್ಶಯತಿ-- ಪುರಾ ಪ್ರಜಾಪತಿರ್ವಿದಾಮಘವನ್ನಿತ್ಯಾದಿಕಾ ಮಹಾನಾಮ್ನೀರನುಸಂಧಾಯ ತದಾತ್ಮಕಾನ್ ಲೋಕಾನ್ಪ್ರಜಾಪತಿಃ (ಕಾನ್ಸೃ) ಸೃಷ್ಟ್ವಾ ತಾಭಿರ್ಮಹಾನಾಮ್ನೀಭಿರನುಗೃಹೀತಂ (ತಃ) ಪಶ್ಚಾದೇಷು ಲೋಕೇಷು ಯತ್ಕಿಂಚಿತ್ ಸ್ಥಾವರಂ ಜಂಗಮಂ ಪ್ರಾಣಿಜಾತಂ ಸ್ರಷ್ಟವ್ಯಮಸ್ತಿ ತತ್ಸರ್ವಂ ಸ್ರಷ್ಟುಮಶಕ್ನೋಚ್ಛಕ್ತಿಮಾನಭೂತ್ । ಯಸ್ಮಾದೇವಂ ಪ್ರಜಾಪತಿರಕರೋತ್ತಸ್ಮಾಚ್ಛಕ್ತಿಹೇತುತ್ವಾದೇತಾ ಋಚಃ ಶಕ್ವರೀನಾಮಿಕಾ ಅಭವನ್ । ಅನೇನ ಪ್ರಕಾರೇಣ ತಾಸಾಂ ಶಕ್ವರೀತ್ವಂ ಸಂಪನ್ನಂ ॥

ಶಕ್ವರೀ ಎಂಬ ಛಂದಸ್ಸುಗಳಲ್ಲಿ ಉತ್ಪನ್ನವಾದ ಸಾಮಕ್ಕೆ ಶಾಕ್ವರವೆಂದು ಹೆಸರಾಯಿತು. ಈ ಶಕ್ವರಿಯಲ್ಲಿ ಏಳು ಪಾದಗಳಿರುವವು. ಆದರೆ ಈ ಋಕ್ಕುಗಳಲ್ಲಿ ಏಳುಪಾದಗಳಿರುವುದಿಲ್ಲ. ಆದರೆ ನಾಲ್ಕು ಪಾದಗಳಿಂದ ಕೂಡಿರುವ ಅನುಷ್ಟುಪ್ ಛಂದಸ್ಸೇ ಶಕ್ವರೀ ಛಂದಸ್ಸಾಗಿರುವುದು. ಆದರೆ ಈ ಋಕ್ಕುಗಳಿಗೆ ಶಕ್ವರೀ ಎಂಬ ಹೆಸರು ಹೇಗೆ ಬಂದಿತು ಎಂದರೆ ಈ ಶಕ್ವರೀ ಋಕ್ಕುಗಳು ಶಕ್ತಿಪ್ರದವಾದವುಗಳಾದ್ದರಿಂದ ಇವುಗಳಿಗೆ ಶಕ್ವರೀ ಎಂಬ ಹೆಸರು ಸ್ಥಿರವಾಯಿತು ಎಂದು ಶಕ್ವರೀ ಶಬ್ದದ ನಿರ್ವಚನವನ್ನು ವಿವರಿಸುವರು. ಪೂರ್ವದಲ್ಲಿ ಪ್ರಜಾಪತಿಯು ವಿದಾಮಘನನ್ವಿದಾ ಎಂಬ ಮಹಾನಾಮ್ನಾ ಋಕ್ಕುಗಳನ್ನು ಅನುಸಂಧಾನಮಾಡಿ ಈ ಋಕ್ಕುಗಳ ಸಂಬಂಧವಾದ ಮೂರು ಲೋಕಗಳನ್ನು ಸೃಷ್ಟಿಮಾಡಿಅನಂತರ ಈ ಋಕ್ಕುಗಳ ಅನುಗ್ರಹದಿಂದ ಈ ಮೂರು ಲೋಕಗಳಲ್ಲಿಯೂ ಸೃಷ್ಟಿಸಬೇಕಾದ ಸಮಸ್ತಪ್ರಾಣಿಗಳನ್ನು ಮತ್ತು ಇನ್ನೂ ಸೃಷ್ಟಿಮಾಡಬೇಕಾದ ವಸ್ತುಗಳೆಲ್ಲವನ್ನೂ ಸೃಷ್ಟಿಸಲು ಸಮರ್ಥನಾದನು. ಆದ್ದರಿಂದ ಎಂದರೆ ಪ್ರಜಾಪತಿಯು ಈ ಸೃಷ್ಟಿಮಾಡುವ ಸಾಮರ್ಥ್ಯವನ್ನು ಈ ಮಹಾನಾಮ್ನಾ ಋಕ್ಕುಗಳಿಂದ ಪಡೆದಿದ್ದರಿಂದ ಈ ಋಕ್ಕುಗಳಿಗೆ ಶಕ್ವರೀ ಎಂಬ ಹೆಸರಾಯಿತು. ಈ ಋಕ್ಕುಗಳಿಗೆ ಶಕ್ವರೀ ಎಂದು ಹೆಸರು ಬರಲು ಇದೇ ಕಾರಣವು.

**ತಾ ಊರ್ಧ್ವಾಃ ಸೀಮ್ನೋಽಭ್ಯಸೃಜತ ಯದೂರ್ಧ್ವಾಃ ಸೀಮ್ನೋಽಭ್ಯಸೃಜತ**
**ತತ್ಸಿಮಾ ಅಭವಂಸ್ತತ್ಸಿಮಾನಾಂ ಸಿಮಾತ್ವಂ ॥**

ಪ್ರಕಾರಾಂತರೇಣ ಮಹಾನಾಮ್ನೀಃ ಪ್ರಶಂಸತಿ ಯಾ ಏತಾ ಮಹಾನಾಮ್ನ್ಯಃ ಸಂತಿ ತಾಃ ಸೀಮ್ನ ಊರ್ಧ್ವಾ ಅಭ್ಯಸೃಜತ । ಅಗ್ನಿಮೀಳ ಇತ್ಯಾರಭ್ಯ ಯಥಾ ವಃ ಸುಸಹಾಸತೀತ್ಯಂತಾ ದಾಶತಯೀನಾಂ ಸೀಮಾ ತಸ್ಯಾಃ ಸೀಮ್ನಃ ಊರ್ಧ್ವಭಾವಿನೀಃ ಕೃತ್ವಾ ಪ್ರಜಾಪತಿರಭಿತಃ ಸೃಷ್ಟವಾನ್ । ಅತ ಏವೈತಾಃ ಸಂಹಿತಾಃ ಸಂಹಿತಾಯಾಂ ನಾಮ್ನಾಯಂತೇ । ಕಿಂತ್ವಾರಣ್ಯಕಾಂಡ ಆಮ್ನಾಯಂತೇ । ಅಥವಾ ನನ್ವೈತಾ ಋಚಸ್ತ್ರಿವೇದೇಭ್ಯ ಉಪರಿಸ್ಥಿತತ್ವೇನ ಪ್ರಯುಜ್ಯಂತೇ । ತಥಾಚಾಶ್ವಲಾಯನ ಆಹ–' ಶಾಕ್ವರಂ ಚೇತ್ಪೃಷ್ಠಂ ಮಹಾನಾಮ್ನ್ಯಃ ಸ್ತೋತ್ರಿಯ ಇತಿ ತಾ ಅಧ್ಯರ್ಧಕಾರಂ ನವ ಪ್ರಕೃತ್ಯಾ ತಿಸ್ರೋ ಭವನ್ತಿ' ಇತಿ । ಅಸ್ಯಾಯಮರ್ಥಃ । ಯದಾ ಶಾಕ್ವರಸಾಮ್ನಾ ಪೃಷ್ಠಸ್ತೋತ್ರಂ ನಿಷ್ಪಾದ್ಯತೇ ತದಾನೀಂ ಮಹಾನಾಮ್ನ್ಯಃ ಋಚಃ ಸ್ತೋತ್ರಿಯಸ್ತ್ರ್ಯೃಚೋ ಭವತಿ । ತಾಸ್ತು ಪ್ರಕೃತ್ಯಾ ಸ್ವಭಾವೇನ ನವಸಂಖ್ಯಾಕಾಸ್ತಥಾಪಿ ತಿಸ್ರಃ

**ಕರ್ತವ್ಯಾ ಅಧ್ಯರ್ಧಕಾರಮಿತಿ ತತ್ರೋಪಾಯ ಉಚ್ಯತೇ । ಅಧಿಕೇನಾರ್ಧೇನ ಯುಕ್ತಾಮೇಕಾಮೃಚಮೇಕಮರ್ಧರ್ಚಂ ಕೃತ್ವೇತ್ಯುಕ್ತಂ ಭವತಿ । ತತಸ್ತ್ರಯಾಣಾಮರ್ಧರ್ಚಾನಾಮೇಕಾರ್ಧತ್ವೇ ಸತಿ ತಿಸ್ರ ಋಚೋ ಭವನ್ತೀತಿ । ಸೋಽಯಂ ಸೀಮ್ನ ಉಲ್ಲಙ್ಘನಪ್ರಕಾರಃ । ಯಸ್ಮಾತ್ಸೀಮ್ನ ಊರ್ಧ್ವಾಃ ಸತೀಃ ಪ್ರಜಾಪತಿರಸೃಜತ ತಸ್ಮಾತ್ಸಿಮಾ ಇತ್ಯೇತನ್ನಾಮಿಕಾ ಅಭವನ್ । ಮಹಾನಾಮ್ನೀನಾಮೇತೇನ ಪ್ರಕಾರೇಣ ಸಿಮಾನಾಮಕತ್ವಂ ವಿಜ್ಞೇಯಂ ॥**

ಈ ಮಹಾನಾಮ್ನೀ ಋಕ್ಕುಗಳನ್ನು ಬೇರೆವಿಧವಾಗಿ ವರ್ಣಿಸುವರು. ಪ್ರಜಾಪತಿಯು ಮಹಾನಾಮ್ನೀ ಋಕ್ಕುಗಳನ್ನು ಸೃಷ್ಟಿಸುವಾಗ ರೂಢಿಯಲ್ಲಿರುವ ಋಗ್ವೇದಮಂತ್ರ ಎಂದರೆ ಅಗ್ನಿಮೀಳೇ ಪುರೋಹಿತಂ ಎಂದು ಪ್ರಾರಂಭವಾಗುವ ಋಗ್ವೇದ ಮೊದಲನೆಯ ಋಕ್ಕಿನಿಂದ ಮೊದಲುಮಾಡಿ ಕೊನೆಯ ಋಕ್ಕಿನ ಅಂತ್ಯವಾದ ಯಥಾವಃ ಸುಸಹಾಸತಿ ಎಂಬ ಋಕ್ಕುಗಳೆಲ್ಲವನ್ನೂ ಸೃಷ್ಟಿಸಿದನಂತರವೇ ಇವುಗಳಿಗೆ ಸೇರದಂತೆ ಗಡಿಯಿಂದಾಚೆಗೆ ಪ್ರತ್ಯೇಕವಾಗಿ ಸೃಷ್ಟಿಮಾಡಿದನು. ಆದ್ದರಿಂದಲೇ ಈ ಮಹಾನಾಮ್ನಾ ಮಂತ್ರಗಳು ಋಗ್ವೇದ ಮಂತ್ರಗಳಲ್ಲಿರುವುದಿಲ್ಲ ಎಂದರೆ ಋಗ್ವೇದಸಂಹಿತೆಯಲ್ಲಿರುವುದಿಲ್ಲ. ಆದ್ದರಿಂದ ಇವು ಆರಣ್ಯಕಕಾಂಡದಲ್ಲಿರುವವು. ಅಥವಾ ಋಗ್ವೇದ, ಯಜುರ್ವೇದ, ಸಾಮವೇದಗಳೆಂಬ ಮೂರು ವೇದಗಳಲ್ಲಿಯೂ ಇಲ್ಲದೆ ಇವುಗಳಿಂದಾಚೆ ಪ್ರತ್ಯೇಕವಾಗಿ ಸೃಷ್ಟಿಸಲ್ಪಟ್ಟಿರುವವು. ಈ ವಿಷಯದಲ್ಲಿ ಆಶ್ವಲಾಯನ ಮಹರ್ಷಿಯು ಹೀಗೆ ಹೇಳಿರುವರು— **ಶಾಕ್ವರಂ ಚೇತ್ಪೃಷ್ಠ ಮಹಾನಾಮ್ನ್ಯಃ ಸ್ತೋತ್ರಿಯ ಇತಿ ತಾ ಅಧ್ಯರ್ಧಕಾರಂ ನವ ಪ್ರಕೃತ್ಯಾ ತಿಸ್ರೋ ಭವಂತಿ ।** ಎಂದು. ಇದರ ಅರ್ಥವು—ಯಾವಾಗ ಶಾಕ್ವರಸಾಮದಿಂದ ಪೃಷ್ಠಸ್ತೋತ್ರವು ನಿಷ್ಪನ್ನವಾಗುವುದೋ ಆಗ ಮಹಾನಾಮ್ನ್ಯಃ ಎಂಬ (ಒಂಭತ್ತು) ಋಕ್ಕುಗಳು ಸ್ತೋತ್ರಿಯ ತೃಚಗಳಾಗಿರುವವು. ಈ ಋಕ್ಕುಗಳು ಪ್ರಕೃತಿಸ್ವಭಾವವಾಗಿ ಒಂಭತ್ತು ಸಂಖ್ಯೆಯಿಂದ ಇದ್ದರೂ ಮೂರು ಇರುವವು. ಇದಕ್ಕೆ ಅಧ್ಯರ್ಧಕಾರವೆಂದು ಹೆಸರು. ಎಂದರೆ ಒಂದು ಋಕ್ಕಿನ ಜತೆಗೆ ಒಂದು ಅರ್ಧ ಋಕ್ಕನ್ನು ಹೆಚ್ಚಾಗಿ ಸೇರಿಸಿದರೆ ಅದು ಒಂದು ಅರ್ಧ ಋಕ್ಕಾಗುವುದು. ಆದ್ದರಿಂದ ಮೂರು ಅರ್ಧ ಋಕ್ಕುಗಳನ್ನು ಒಂದು ಅರ್ಧ ಋಕ್ಕಿನಂತೆ ಮಾಡಿ ಸೇರಿಸಿದರೆ ಒಟ್ಟು ಮೂರು ಋಕ್ಕುಗಳಾಗುವವು. ಹೀಗೆ ಮಾಡುವುದು ಸೀಮೆಯ (ಗಡಿಯ)ನ್ನು ಅತಿಕ್ರಮಿಸುವ ಪ್ರಕಾರವು. ಗಡಿಯಿಂದ ಆಚೆಗೆ ಇರುವಂತೆ ಪ್ರಜಾಪತಿಯು ಇವುಗಳನ್ನು ಸೃಷ್ಟಿಸಿದ್ದರಿಂದ ಇವುಗಳಿಗೆ ಸಿಮಾ ಎಂಬ ಹೆಸರಾಯಿತು. ಮಹಾನಾಮ್ನಾ ಎಂಬ ಈ ಪ್ರಕಾರವು ಸಿಮಾನಾಮಕವೆಂದು ತಿಳಿಯಬೇಕು. (ಇಲ್ಲಿ ಸ್ವಲ್ಪ ವಿವರಣೆಯು ಅವಶ್ಯಕವು. ಮಹಾನಾಮ್ನಾ ಋಕ್ಕುಗಳು ಒಂಭತ್ತು ಎಂದು ಹೇಳಿದೆಯಷ್ಟೆ. ಒಂದೊಂದು ಋಕ್ಕಿನಲ್ಲಿರುವ ಎರಡು ಅರ್ಧಗಳ ಜತೆಗೆ ಮತ್ತೊಂದು ಅರ್ಧವನ್ನು (೩ ಅರ್ಧ) ಸೇರಿಸಿದರೆ ಒಂದು ಋಕ್ಕಿನ ಒಂದು ಅರ್ಧವಾಗುವುದು. ಇಂತಹ ಎರಡು ಅರ್ಧಗಳನ್ನು ಎಂದರೆ ೬ ಅರ್ಧಗಳನ್ನು ಸೇರಿಸಿದರೆ ೧ ಋಕ್ಕಾಗುವುದು ಎಂದರೆ ಸಾಮಾನ್ಯವಾದ ೩ ಋಕ್ಕುಗಳಿಗೆ ಅಧ್ಯರ್ಧದ ಒಂದು ಋಕ್ಕಾಗುವುದು. ಈ ಕ್ರಮಪ್ರಕಾರ ೯ ಋಕ್ಕುಗಳಿಗೆ ಒಂದು ಅಧ್ಯರ್ಧ ತೃಚ ಅಥವಾ ೩ ಮೂರು ಋಕ್ಕುಗಳಾಗುವವು ಎಂದಭಿಪ್ರಾಯವು.

## ಸ್ವಾದೋರಿತ್ಥಾ ವಿಷೂವತ ಉಪ ನೋ ಹರಿಭಿಃ ಸುತಮಿಂದ್ರಂ ವಿಶ್ವಾ ಅವೀವೃಧನ್ನಿತ್ಯನುರೂಪೋ ವೃಷಣ್ವಾನ್ಪೃಶ್ನಿಮಾನ್ಮದ್ವಾನ್ಪೃಧನ್ವಾನ್ಪಂಚಮೇಽಹನಿ ಪಂಚಮಸ್ಯಾಹ್ನೋ ರೂಪಂ

**ಸ್ತೋತ್ರಿಯಮುಕ್ತ್ವಾಽನುರೂಪಂ ತ್ರ್ಯೃಚಂ ವಿಧತ್ತೇ—ಸ್ವಾದೋರಿತ್ಥಾದಿರಧ್ಯಯನಪ್ರಕಾರೇಣೈಕಸ್ತ್ರ್ಯೃಚ ಉಪ ನ ಇತ್ಯಾದಿರ್ದ್ವಿತೀಯ ಇಂದ್ರಂ ವಿಶ್ವಾ ಇತಿ ತೃತೀಯಃ । ಏತ-**

**ತ್ರಯಂ ಮಿಲಿತ್ವಾ ಪೂರ್ವೋಕ್ತಸ್ತೋತ್ರಿಯಸಾದೃಶ್ಯಾದನುರೂಪಸ್ತೃಚೋ ಭವತಿ । ತತ್ರ ಸ್ವಾದೋರಿತ್ಥೇತಸ್ಮಿನ್ವೃಷ್ಣಾ ಮದಂತೀತಿ ವೃಷಣ್ವತ್ತ್ವಂ ಮದ್ವತ್ತ್ವಂ ಚ ದೃಶ್ಯತೇ । ಸೋಮಂ ಶ್ರೀಣಂತಿ ಪೃಶ್ನಯ ಇತಿ ಪೃಶ್ನಿಮತ್ತ್ವಂ । ಇಂದ್ರಂ ವಿಶ್ವಾ ಅವೀವೃಧನ್ನಿತಿ ವೃಧನ್ವತ್ತ್ವಂ। ತಾನ್ಯೇತಾನಿ ಪಂಚಮೇಽಹನಿ ಯೋಗ್ಯತ್ವಾತ್ಪಂಚಮಸ್ಯ ಗಮಕಾನಿ ॥**

ಸ್ತೋತ್ರಿಯ ತೃಚವನ್ನು ಹೇಳಿ ಈಗ ಅನುರೂಪತೃಚವನ್ನು ಹೇಳುವರು. ಈ ಸ್ತೋತ್ರಿಯ ತೃಚದಲ್ಲಿರುವಂತೆ ಅನುರೂಪತೃಚ (ಅಧ್ಯರ್ಧತೃಚ) ದಲ್ಲಿಯೂ ಮೂರು ಅಧ್ಯರ್ಧ ಋಕ್ಕುಗಳಿರುವವು. ೩ ಸಾಮಾನ್ಯ ಋಕ್ಕುಗಳೂ ಒಂದು ಅಧ್ಯರ್ಧ ಋಕ್ಕು ಸಮಾನವು, ಆದ್ದರಿಂದ ಮುಂದೆ ಹೇಳುವ ಮೂರು (ಸಾಮಾನ್ಯ) ತೃಚಗಳನ್ನು ಒಂದು ಅಧ್ಯರ್ಧ ತೃಚವನ್ನಾಗಿ ಪರಿವರ್ತಿಸಬೇಕು. ಹೇಗೆಂದರೆ **ಸ್ವಾದೋರಿತ್ಥಾ ವಿಷೂವತಃ** (ಋ. ಸಂ. ೧-೮೪-೧) ಎಂಬ ಋಕ್ಕು ಮತ್ತು ಮುಂದಿನ ಎರಡು ಋಕ್ಕುಗಳೂ ಸೇರಿ ಒಂದು ಸಾಮಾನ್ಯ ತೃಚವಾಗುವುದು. **ಉಪ ನೋ ಹರಿಭಿಃ ಸುತಂ** (ಋ. ಸಂ. ೮-೨೩-೩೧) ಎಂದು ಮೊದಲಾಗುವ ತೃಚವು ಎರಡನೆಯ ಸಾಮಾನ್ಯ ತೃಚವು. **ಇಂದ್ರಂ ವಿಶ್ವಾ ಅವೀವೃಧನ್** (ಋ. ಸಂ. ೧-೧೧-೧) ಎಂದು ಮೊದಲಾಗುವ ತೃಚವು ಸಾಮಾನ್ಯವಾದ ಮೂರನೇ ತೃಚವು. ಈ ಮೂರು ಸಾಮಾನ್ಯ (ಎಂದರೆ ಅಧ್ಯಯನ ಪ್ರಕಾರ) ತೃಚಗಳನ್ನು ಹಿಂದೆ ಹೇಳಿದ ಕ್ರಮದಂತೆ ಪರಿವರ್ತಿಸಿದರೆ ಮೂರು ಅಧ್ಯರ್ಧ ಋಕ್ಕುಗಳು ಅಥವಾ ಒಂದು ಅಧ್ಯರ್ಧತೃಚವಾಗುವುದು. ಇದೇ ಅನುರೂಪತೃಚವು. ಇವು ಐದನೆಯ ದಿನದಲ್ಲಿ ಪಠಿಸುವುದಕ್ಕೆ ಯೋಗ್ಯವಾದವುಗಳು.

## ಯದ್ವಾವಾನೇತಿ ಧಾಯ್ಯಾಽಚ್ಯುತಾ ॥

**ಅಚ್ಯುತತ್ವಲಿಂಗೇನ ಧಾಯ್ಯಾಂ ವಿಧತ್ತೇ—**

**ಯದ್ವಾವಾನ ಪುರುತಮಂ** (ಋ. ಸಂ. ೧೦-೫೪-೬೮) ಎಂಬ ಋಕ್ಕು ಇಲ್ಲಿ ಧಾಯ್ಯಾಮಂತ್ರವಾಗಿರುವುದು ಇದರಲ್ಲಿ ಅಚ್ಯುತತ್ವಲಕ್ಷಣವಿರುವುದರಿಂದ ಇಲ್ಲಿ ಐದನೆಯ ದಿನದ ಲಕ್ಷಣಗಳಿರುವವು.

## ಅಭಿ ತ್ವಾ ಶೂರ ನೋನುಮ ಇತಿ ರಥಂತರಸ್ಯ ಯೋನಿಮನು ನಿವರ್ತಯತಿ ರಾಥಂತರಂ ಹ್ಯೇತದಹರಾಯತನೇನ ।

**ತಾಂ ಧಾಯ್ಯಾಮನು ರಥಂತರಸಾಮಯೋನೇಃ ಶಂಸನಂ ವಿಧತ್ತೇ--ಅಯುಗ್ಮತ್ವಾದಹ್ನೋ ರಥಂತರಾಯತನತ್ವಮೇತದೇವ ತಲ್ಲಿಙ್ಗಂ ॥**

**ಅಭಿತ್ವಾ ಶೂರ ನೋನುಮ** (ಋ. ಸಂ. ೭-೩೩-೨೨) ಎಂಬ ಋಕ್ಕು ರಥಂತರಸಾಮಕ್ಕೆ ಯೋನಿಭೂತವಾಗಿರುವುದು. ಧಾಯ್ಯಾನಂತರ ರಥಂತರಸಾಮಕ್ಕೆ ಯೋನಿಭೂತವಾದ ಮೇಲಿನ ಋಕ್ಕನ್ನು ಪಠಿಸಬೇಕು. ಇಲ್ಲಿ ರಥಂತರ ಸಂಬಂಧವಿರುವುದರಿಂದ ಐದನೆಯ ದಿವಸ ಪಠಿಸುವ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

## ಮೋಷು ತ್ವಾ ವಾಘತಶ್ಚನೇತಿ ಸಾಮಪ್ರಗಾಥೋಽಧ್ಯಾಸವಾನ್ಪಶುರೂಪಂ ಪಂಚಮೇಽಹನಿ ಪಂಚಮಸ್ಯಾಹ್ನೋ ರೂಪಂ ॥

ಶಾಕ್ವರಸಾಮುಸಂಬಂಧಿಸಾಮುಪ್ರಗಾಥಂ ವಿಧತ್ತೇ— ಋಗ್ದ್ವಯಮೇವ ಸರ್ವತ್ರ ಪ್ರಗಾಥಸ್ಯ ಸ್ವರೂಪಂ । ಅತ್ರ ತು ರಾಯಸ್ಕಾಮ ಇತ್ಯೇಷಾ ದ್ವಿಪದಾಧಿಕತ್ವೇನ ಪ್ರಕ್ಷಿಪ್ತಾ ತಸ್ಮಾದಯಂ ಪ್ರಗಾಥೋಽಧ್ಯಾಸವಾ೯ । ತಚ್ಚ ಪಶುರೂಪತ್ವಾತ್ಪಂಚಮೇಽಹನಿ ಯೋಗ್ಯಂ ॥

ಶಾಕ್ವರಸಾಮುಸಂಬಂಧಿಯಾದ ಸಾಮುಪ್ರಗಾಥವನ್ನು ವಿವರಿಸುವರು. **ಮೋ ಷು ತ್ವಾ ವಾಘತಶ್ಚನ** (ಋ. ಸಂ. ೭-೩೨-೧) ಎಂಬ ಋಕ್ಕು ಸಾಮುಪ್ರಗಾಥವು. ಪ್ರಗಾಥವೆಂದರೆ ಯಾವಾಗಲೂ ಎರಡು ಋಕ್ಕುಗಳಿರುವವು. ಆದರೆ ಇಲ್ಲಿ **ರಾಯಸ್ಕಾಮ** ಎಂಬ ದ್ವಿಪದಾಛಂದಸ್ಸಿನ ಒಂದು ಮಂತ್ರವು ಹೆಚ್ಚಾಗಿ ಸೇರಿಸಲ್ಪಟ್ಟಿರುವುದು. ಆದ್ದರಿಂದ ಇದು ಅಧ್ಯಾಸವಾದ ಪ್ರಗಾಥವು. ಅಧ್ಯಾಸವು (ನಡಗೆಯು, ಪಾದವಿಕ್ಷೇಪವು) ಪಶುತ್ವವನ್ನು ಸೂಚಿಸುವುದು. ಆದ್ದರಿಂದ ಇಲ್ಲಿ ಐದನೆಯ ದಿವಸದ ಲಕ್ಷಣವಿದ್ದಂತಾಯಿತು.

**ತ್ಯಮೂ ಷು ವಾಜಿನಂ ದೇವಜೂತಮಿತಿ ತಾರ್ಕ್ಷ್ಯೋಽಚ್ಯುತಃ ॥**

ಅಚ್ಯುತತ್ವಲಿಂಗೇನ ಸೂಕ್ತವಿಶೇಷಂ ವಿಧತ್ತೇ—

ಇಲ್ಲಿ **ತ್ಯಮೂಷು ವಾಜಿನಂ ದೇವಜೂತಂ** (ಋ. ಸಂ. ೧೦-೧೭೮-೧) ಎಂಬ ಬೇರೊಂದು ಸೂಕ್ತವನ್ನು ಶಿಳಿಸುವರು. ಈ ಸೂಕ್ತವು ತಾರ್ಕ್ಷ್ಯದೇವತಾಕವು. ಇಲ್ಲಿ ಅಚ್ಯುತತ್ವಲಕ್ಷಣವಿರುವುದರಿಂದ ಇದನ್ನು ಐದನೆಯ ದಿವಸ ಪಠಿಸಲು ಯೋಗ್ಯವಾಗಿರುವುದು.

## *English Translation*

### (On the Sakvara, Saman and the Mahanamnis. The Nishkevalya Shastra)

On this fifth day, which is a Rathantara day, the Sama singers chant the Mahanamni verses according to the Sakvara tune ; this is a characteristic of the fifth day. Indra having had once a desire of becoming great made himself great by means of these verses ; therefore they are called Mahanamni. These worlds also are Mahanamni for they are great.

Prajapati had, when he created the universe, the power of making all this and everything. The power possessed by Prajapati to make all this and everything when creating these worlds became the Sakvari verses. Thence they are called Sakvaris (from saknoti, he has the power). He (Prajapati) made them these Mahanamnis to extend beyond the frontiers. All that he created as extending beyond the frontiers, turned cords sima. Thence comes the word saman, from sima, a cord.

The verses Svador ittha vishuvato (1, 84, 10) upa no haribhih sutam (8, 82, 31), indram visva avivridhann (1, 111, 1) are the Anurupa (of the Nishkevalya Shastra) ; they contain the words vrishan, prisni, mad, vridhan, which are

characteristics of the fifth day. Yad vavana (10, 74, 6) is the immovable Dhayya. By repeating Abhi tva sura nonumo after the Dhayya, the Hotar returns to the womb of the Rathantaram (as the receptacle of all ceremonies), this fifth day being a Rathantara day by its position. Mo shu tva vaghatschana (7, 32, 1-2) is the Sama Pragatha with an additional foot, having the animal form (five parts) which is a characteristic of the fifth day. Tyam u shu vajinam is the immovable Tarkshya.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾವಿಂಶಾಧ್ಯಾಯಸ್ಯ ದ್ವಿತೀಯಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವಾದುದು.**



## ಅಥ ದಾವಿಂಶಾಧ್ಯಾಯೇ ತೃತೀಯಃ ಖಂಡಃ

**ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು**



[ನಿಷ್ಕೇವಲ್ಯಶಸ್ತ್ರದ ಉಳಿದ ಭಾಗಗಳು ; ತೃತೀಯಸವನದ ಶಸ್ತ್ರಮಂತ್ರಗಳು.]



### ಪ್ರೇದಂ ಬ್ರಹ್ಮ ವೃತ್ರತೂರ್ಯೇಷ್ವಾವಿಥೇತಿ ಸೂಕ್ತಂ ಪಾಂಕ್ತಂ ಪಂಚ-ಪದಂ ಪಂಚಮೇಽಹನಿ ಪಂಚಮಸ್ಯಾಹ್ನೋ ರೂಪಂ ॥

**ಪಂಚಪಾದೋಪೇತತಯಾ ಪಾಂಕ್ತತ್ವಲಿಂಗಯುಕ್ತಂ ಸೂಕ್ತಂ ವಿಧತ್ತೇ—**

ಇಲ್ಲಿ ಐದು ಪಾದಗಳುಳ್ಳ ಪಂಕ್ತಿಛಂದಸ್ಸಿನ ಸೂಕ್ತವನ್ನು ತಿಳಿಸುವರು. **ಪ್ರೇದಂ ಬ್ರಹ್ಮ ವೃತ್ರತೂರ್ಯೇ** (ಋ. ಸಂ. ೮-೩೭-೧) ಎಂಬ ಸೂಕ್ತವು ಪಂಕ್ತಿಛಂದಸ್ಸಿನದು. ಪಂಕ್ತಿಛಂದಸ್ಸಿನಲ್ಲಿ ಐದು ಪಾದಗಳಿರುವವು. ಇಲ್ಲಿ ಪಂಚ ಎಂಬ ಶಬ್ದಪ್ರಯೋಗವಿರುವುದರಿಂದ ಇಲ್ಲಿ ಐದನೆಯ ದಿವಸ ಪಠಿಸುವ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

**ಇಂದ್ರೋ ಮದಾಯ ವಾವೃಧ ಇತಿ ಸೂಕ್ತಂ ಮದ್ವತ್ಪಾಂಕ್ತಂ ಪಂಚ-ಪದಂ ಪಂಚಮೇಽಹನಿ ಪಂಚಮಸ್ಯಾಹ್ನೋ ರೂಪಂ ॥**

ಮದಶಬ್ದೇನ ಪಾಂಕ್ತತ್ವೇನ ಚ ಲಿಂಗದ್ವಯೇನೋಪೇತಂ ಸೂಕ್ತಂ ವಿಧತ್ತೇ—

ಮದಶಬ್ದ ಮತ್ತು ಪಂಕ್ತಿಛಂದಸ್ಸೆಂಬ ಲಕ್ಷಣಗಳಿಂದ ಕೂಡಿದ ಸೂಕ್ತವನ್ನು ವಿವರಿಸುವರು. **ಇಂದ್ರೋ ಮದಾಯ ವಾವೃಧೇ** (ಋ. ಸಂ. ೧-೮೧-೧) ಎಂಬ ಸೂಕ್ತದಲ್ಲಿ ಮದಶಬ್ದಪ್ರಯೋಗವೂ ಐದು ಪಾದಗಳಿರುವ ಪಂಕ್ತಿಛಂದಸ್ಸೂ ಇರುವುದರಿಂದ ಐದನೆಯ ದಿನದಲ್ಲಿ ಪಠಿಸಬೇಕಾದ ಲಕ್ಷಣಗಳಿದ್ದಂತಾಯಿತು.

**ಸತ್ರಾ ಮದಾಸಸ್ತವ ವಿಶ್ವಜನ್ಯಾ ಇತಿ ಸೂಕ್ತಂ ಮದ್ವತ್ತ್ರೈಷ್ಟುಭಂ ತೇನ ಪ್ರತಿಷ್ಠಿತಪದೇನ ಸವನಂ ದಾಧಾರಾಽಯತನಾದೇವೈತೇನ ನ ಪ್ರಚ್ಯವತೇ ॥**

ಮದಿಧಾತುಲಿಂಗಕಂ ತ್ರಿಷ್ಟುಪ್ ಛಂದಸ್ಕಂ ಸೂಕ್ತಂ ವಿಧತ್ತೇ—

ಮದಿಧಾತುಯುಕ್ತವೂ ತ್ರಿಷ್ಟುಪ್‌ಛಂದಸ್ಕವೂ ಆದ ಸೂಕ್ತವನ್ನು ವಿವರಿಸುವರು. **ಸತ್ರಾ ಮದಾಸಸ್ತವ ವಿಶ್ವ-ಜನ್ಯಾ** (ಋ. ಸಂ. ೬-೩೬-೧) ಎಂಬ ಸೂಕ್ತವು ತ್ರಿಷ್ಟುಪ್‌ಛಂದಸ್ಕವು. ಇದರಲ್ಲಿ ಮದಶಬ್ದಪ್ರಯೋಗವಿರುವುದು. ಇದರಲ್ಲಿರುವ ಋಕ್ಕುಗಳೆಲ್ಲವೂ ಹೆಚ್ಚುಕಡಿಮೆಯಿಲ್ಲದಂತೆ ಒಂದೇಸಮವಾದ ಅಕ್ಷರಸಂಖ್ಯೆಯಿಂದ ಕೂಡಿವೆ. ಈ ಋಕ್ಕುಗಳು ಸವನವನ್ನು ನಿರ್ವಹಿಸುವುದಲ್ಲದೆ ಇದನ್ನು ಪಠಿಸುವ ಪುರುಷನಿಗೆ ನಿವಾಸಸ್ಥಾನದಿಂದ ಚ್ಯುತಿ ಇರುವುದಿಲ್ಲ.

**ತಮಿಂದ್ರಂ ವಾಜಯಾಮಸೀತಿ ಪರ್ಯಾಸಃ ಸ ವೃಷಾ ವೃಷಭೋ ಭುವದಿತಿ ಪಶುರೂಪಂ ಪಂಚಮೇಽಹನಿ ಪಂಚಮಸ್ಯಾಹ್ನೋ ರೂಪಂ ॥**

ಶಸ್ತ್ರಾಂತೇ ಪ್ರಕ್ಷೇಪಣೀಯಂ ತ್ರ್ಯಚಂ ವಿಧತ್ತೇ—ಸ ವೃಷೇತ್ಯಾದಿಸ್ತೃತೀಯಃ ಪಾದ-ಸ್ತತ್ರ ವೃಷಭಶಬ್ದಶ್ರವಣಾತ್ಪಶುರೂಪತ್ವಂ ॥

ಈ ಶಸ್ತ್ರದ ಕೊನೆಯಲ್ಲಿ ಸೇರಿಸಬೇಕಾದ ತೃಚವನ್ನು ತಿಳಿಸುವರು. **ತಮಿಂದ್ರಂ ವಾಜಯಾಮಸಿ** (ಋ. ಸಂ. ೮-೯೩-೭) ಎಂಬ ಋಕ್ಕಿನ ಮೂರನೆಯ ಪಾದದಲ್ಲಿ **ಸ ವೃಷಾ ವೃಷಭೋ ಭುವತ್** ಎಂದಿರುವುದರಿಂದ ಇಲ್ಲಿ ವೃಷಭಶಬ್ದ ಪ್ರಯೋಗವಿರುವುದು. ಮತ್ತು ಇದು ಪಶುರೂಪವನ್ನೂ ಸೂಚಿಸುವುದು. ಆದ್ದರಿಂದ ಈ ಐದನೆಯ ದಿವಸದಲ್ಲಿ ಪಠಿಸುವ ಮಂತ್ರಗಳಲ್ಲಿ ಅವಶ್ಯವಾದ ಲಕ್ಷಣಗಳು ಇದ್ದಂತಾಯಿತು.

**ತಾ ಉ ಗಾಯತ್ರ್ಯೋ ಗಾಯತ್ರ್ಯೋ ವಾ ಏತಸ್ಯ ತ್ರ್ಯಹಸ್ಯ ಮಧ್ಯಂ-ದಿನಂ ವಹಂತಿ ತದ್ವೈತಚ್ಛಂದೋ ವಹತಿ ಯಸ್ಮಿನ್ನಿವಿದ್ಧೀಯತೇ ತಸ್ಮಾದ್ಗಾಯತ್ರೀಷು ನಿವಿದಂ ದದಾತಿ ॥**

**ತಸ್ಮಿಂಸ್ತ್ರ್ಯೃಚೇ ನಿವಿದ್ಧಾನಂ ವಿಧತ್ತೇ—**

ಮೇಲೆ ಹೇಳಿದ ತೃಚದಲ್ಲಿ ನಿವಿನ್ಮಂತ್ರಗಳನ್ನು ಸೇರಿಸುವರು. ಮೇಲೆ ಹೇಳಿದ ಸೂಕ್ತದಲ್ಲಿರುವ ಋಕ್ಕುಗಳು ಗಾಯತ್ರೀಛಂದಸ್ಕವು. ಈ ಗಾಯತ್ರೀಛಂದಸ್ಸಿನ ಋಕ್ಕುಗಳು ನಾಲ್ಕು, ಐದು, ಆರು ಎಂಬ ಮಧ್ಯಮ ತ್ರ್ಯಹದ (ಮಧ್ಯದ ಗುಂಪಿನ) ಮೂರುದಿನಗಳ ಕಾರ್ಯವನ್ನು ನಿರ್ವಹಿಸುವವು. ಆದ್ದರಿಂದ ಈ ಗಾಯತ್ರೀ ಛಂದಸ್ಸಿನ ಋಕ್ಕುಗಳಲ್ಲಿ ನಿವಿತ್ಪದಗಳ ಸಮೂಹವನ್ನು ಸೇರಿಸಿ ಪಠಿಸುವರು.

**ತತ್ಸವಿತುರ್ವೃಣೀಮಹೇಽದ್ಯಾ ನೋ ದೇವ ಸವಿತರಿತಿ ವೈಶ್ವದೇವಸ್ಯ ಪ್ರತಿಪದನುಚರೌ ರಾಥಂತರೇಽಹನಿ ಪಂಚಮೇಽಹನಿ ಪಂಚಮಸ್ಯಾಹ್ನೋ ರೂಪಂ ॥**

**ವೈಶ್ವದೇವಶಸ್ತ್ರಸ್ಯ ತ್ರ್ಯೃಚದ್ವಯಂ ವಿಧತ್ತೇ—ತತ್ಸವಿತುರಿತಿ ತ್ರ್ಯೃಚಃ ಪ್ರತಿಪತ್ । ಅದ್ಯಾ ಇತಿ ತ್ರ್ಯೃಚೋಽನುಚರಃ ತಾವುಭೌ ರಥಂತರಸಂಬಂಧಿನೌ । ಅಹಶ್ಚಾಯುಗ್ಮತ್ವಾದ್ರಾಥಂತರಮೇವಂ ಲಿಂಗಂ ಸಂಪಾದನೀಯಂ ॥**

ಈಗ ವೈಶ್ವದೇವಶಸ್ತ್ರದ ಎರಡು ತೃಚಗಳನ್ನು ಹೇಳುತ್ತಾರೆ. ಈ ವೈಶ್ವದೇವಶಸ್ತ್ರದಲ್ಲಿ **ತತ್ಸವಿತುರ್ವೃಣೀಮಹೇ** (ಋ. ಸಂ. ೯-೩೯-೧) ಎಂಬ ಋಕ್ಕು ಪ್ರತಿಪತ್ (ಮೊದಲನೇ) ಋಕ್ಕು. **ಅದ್ಯಾ ನೋ ದೇವ ಸವಿತಃ** (ಋ. ಸಂ. ೮-೮೩-೭) ಎಂಬ ಋಕ್ಕು ಅನುಚರ ಋಕ್ಕು ಇವೆರಡು ಋಕ್ಕುಗಳಿಗೂ ರಥಂತರ ಸಂಬಂಧವಿರುವುದು. ಈ ಐದನೆಯ ದಿನವು ಅಯುಗ್ಮವಾದುದರಿಂದಲೂ ರಥಂತರ ಸಂಬಂಧವಿರುವುದರಿಂದಲೂ ಇಲ್ಲಿ ಐದನೆಯ ದಿವಸ ಪಠಿಸಬೇಕಾದ ಮಂತ್ರಗಳಲ್ಲಿ ಅವಶ್ಯಕವಾದ ಲಕ್ಷಣಗಳಿದ್ದಂತಾಯಿತು.

**ಉದುಷ್ಯ ದೇವಃ ಸವಿತಾ ದಮೂನಾ ಇತಿ ಸಾವಿತ್ರಮಾ ದಾಶುಷೇ ಸುವತಿ ಭೂರಿ ವಾಮಮಿತಿ ವಾಮಂ ಪಶುರೂಪಂ ಪಂಚಮೇಽಹನಿ ಪಂಚಮಸ್ಯಾಹ್ನೋ ರೂಪಂ ॥**

**ರಮಣೀಯತ್ವವಾಚಕೇನ ವಾಮಶಬ್ದಲಿಂಗೇನ ಯುಕ್ತಂ ತ್ರ್ಯೃಚಂ ವಿಧತ್ತೇ—ಸಾವಿತ್ರತ್ವಂ ಸ್ಪಷ್ಟಂ । ಆ ದಾಶುಷ ಇತಿ ಚತುರ್ಥಃ ಪಾದಸ್ತತ್ರ ಭೂರಿ ವಾಮಮಿತಿ ವಾಮಶಬ್ದರೂಪಂ ಲಿಂಗಂ ಪಶುರೂಪಮಸ್ತಿ ॥**

ಇಲ್ಲಿ ರಮಣೀಯವಾಚಕವಾದ ವಾಮಶಬ್ದದಿಂದ ಕೂಡಿದ ತೃಚವನ್ನು ವಿವರಿಸುವರು. **ಉದುಷ್ಯದೇವಃ ಸವಿತಾ ದಮೂನಾ** (ಋ. ಸಂ. ೯-೭೧-೪) ಎಂಬ ಈ ಸೂಕ್ತವು ಸವಿತೃದೇವತಾಕವು. **ಆದಾಶುಷ** ಎಂಬುವುದು ಈ ಋಕ್ಕಿನ ನಾಲ್ಕನೆಯ ಪಾದವು. ಇಲ್ಲಿ **ಭೂರಿ ವಾಮಂ** ಎಂದು ವಾಮಶಬ್ದಪ್ರಯೋಗವಿದೆ. ವಾಮಶಬ್ದಪ್ರಯೋಗವಿರುವುದರಿಂದ ಈ ಐದನೆಯ ದಿವಸ ಪಠಿಸಬೇಕಾದ ಮಂತ್ರಗಳಲ್ಲಿರುವ ಲಕ್ಷಣವಿದ್ದಂತಾಯಿತು.

**ಮಹೀ ದ್ಯಾವಾಪೃಥಿವೀ ಇಹ ಜ್ಯೇಷ್ಠೇ ಇತಿ ದ್ಯಾವಾಪೃಥಿವೀಯಂ ರುವದ್ಧೋಕ್ಷೇತಿ ಪಶುರೂಪಂ ಪಂಚಮೇಽಹನಿ ಪಂಚಮಸ್ಯಾಹ್ನೋ ರೂಪಂ ॥**

**ಪಶುವಾಚಕೇನೋಕ್ಷಶಬ್ದರೂಪೇಣ ಲಿಂಗೇನ ಯುಕ್ತಂ ಚತುರ್ಋಚಂ ವಿಧತ್ತೇ—ರುವದಿತ್ಯಾದಿಶ್ಚತುರ್ಥಃ ಪಾದಸ್ತತ್ರೋಕ್ಷೇತಿ ಪುಂಗವಾಭಿಧಾಯಕಃ ಶಬ್ದೋಽಸ್ತಿ ॥**

ಪಶುಶಬ್ದ ಮತ್ತು ಉಕ್ಷಶಬ್ದಪ್ರಯೋಗವೂ ಇರುವ ಲಕ್ಷಣಗಳಿಂದ ಕೂಡಿದ ನಾಲ್ಕು ಋಕ್ಕುಗಳನ್ನು ತಿಳಿಸುವರು. **ಮಹೀ ದ್ಯಾವಾಪೃಥಿವೀ ಇಹ ಜ್ಯೇಷ್ಠೇ** (ಋ. ಸಂ. ೪-೫೬-೧) ಎಂಬ ಸೂಕ್ತವು ದ್ಯಾವಾಪೃಥಿವೀದೇವತಾಕವು. ಈ ಋಕ್ಕಿನಲ್ಲಿ ರುವತ್ ಎಂಬ ವೃಷಭನಾಡುವ ಶಬ್ದವೂ **ಉಕ್ಷ** ಎಂಬ ಶಬ್ದವೂ ಇರುವುದರಿಂದ ಐದನೆಯ ದಿವಸದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳಿದ್ದಂತಾಯಿತು.

**ಋಭುರ್ವಿಭ್ವಾ ವಾಜ ಇಂದ್ರೋ ನೋ ಅಚ್ಛೇತ್ಯಾರ್ಭವಂ ವಾಜೋ ವೈ ಪಶವಃ ಪಶುರೂಪಂ ಪಂಚಮೇಽಹನಿ ಪಂಚಮಸ್ಯಾಹ್ನೋ ರೂಪಂ ॥**

**ಋಭುದೇವತಾಕಂ ಸೂಕ್ತಂ ವಿಧತ್ತೇ—ಪಶೋರ್ಹವಿಷ್ಟ್ವೇನ ದೇವತಾನ್ನತ್ವಾದನ್ನವಾಚೀ ವಾಜಶಬ್ದಃ ಪಶುರೂಪಂ ಲಿಂಗಂ ॥**

ಋಭುದೇವತಾಕವಾದ ಒಂದು ಸೂಕ್ತವನ್ನು ವಿವರಿಸುವರು. **ಋಭುರ್ವಿಭ್ವಾ ವಾಜ ಇಂದ್ರಃ** (ಋ. ಸಂ. ೪-೩೪-೧) ಎಂಬುದು ಋಭುದೇವತಾಕವಾದ ಸೂಕ್ತವು. ಈ ಋಕ್ಕಿನಲ್ಲಿ ವಾಜಶಬ್ದವಿರುವುದು. ಇದು ಅನ್ನರೂಪವಾದ ಹವಿಸ್ಸನ್ನೂ ಸೂಚಿಸುವುದು. ಅನ್ನದಿಂದ ಪಶುವು ಭಾಸವಾಗುವುದು. ಆದ್ದರಿಂದ ಈ ಸೂಕ್ತದಲ್ಲಿ ಐದನೆಯ ದಿವಸದ ಮಂತ್ರಗಳಲ್ಲಿರುವ ಲಕ್ಷಣವಿದ್ದಂತಾಯಿತು.

**ಸ್ತುಷೇ ಜನಂ ಸುವ್ರತಂ ನವ್ಯಸೀಭಿರಿತಿ ವೈಶ್ವದೇವಮಧ್ಯಾಸವತ್ಪಶುರೂಪಂ ಪಂಚಮೇಽಹನಿ ಪಂಚಮಸ್ಯಾಹ್ನೋ ರೂಪಂ ॥**

**ಅಧ್ಯಾಸಲಿಂಗಕಂ ಸೂಕ್ತಂ ವಿಧತ್ತೇ—ತ್ರಿಷ್ಟುಪ್‌ಛಂದಸ್ಕೇ ಸೂಕ್ತೇ ವಿಶ ಆ ದೇವೀರಿತ್ಯೇಕಃ ಪಾದೋಽಧಿಕಃ ಪ್ರಕ್ಷಿಪ್ಯತೇ ಸೋಽಯಮಧ್ಯಾಸೋ ಲಿಂಗಂ ॥**

ಅಧ್ಯಾಸಲಕ್ಷಣವಿರುವ ಸೂಕ್ತವನ್ನು ತಿಳಿಸುವರು. **ಸ್ತುಷೇ ಜನಂ ಸುವ್ರತಂ ನವ್ಯಸೀಭಿಃ** (ಋ. ಸಂ. ೬-೪೯-೧) ಎಂಬ ಸೂಕ್ತವು ವಿಶ್ವೇದೇವತಾಕವಾದುದು. ಇದು ತ್ರಿಷ್ಟುಪ್‌ಛಂದಸ್ಕವು. ಈ ಸೂಕ್ತದಲ್ಲಿ **ವಿಶ ಆ ದೇವೀಃ** ಎಂಬ ಒಂದು ಪಾದವನ್ನು ಹೆಚ್ಚಾಗಿ ಸೇರಿಸಲಾಗಿದೆ. ಇದರಲ್ಲಿ ಅಧ್ಯಾಸವೆಂಬ ಲಕ್ಷಣವಿರುವುದರಿಂದ ಐದನೆಯ ದಿನದಲ್ಲಿ ಪಠಿಸಬೇಕಾಗಿರುವ ಲಕ್ಷಣವಿದ್ದಂತಾಯಿತು.

**ಹವಿಷ್ಪಾಂತಮಜರಂ ಸ್ವರ್ವಿದೀತ್ಯಾಗ್ನಿಮಾರುತಸ್ಯ ಪ್ರತಿಪದ್ಧವಿಷ್ಮತ್ಪಂಚಮೇಽಹನಿ ಪಂಚಮಸ್ಯಾಹ್ನೋ ರೂಪಂ ॥**

**ಶಸ್ತ್ರಾಂತರಸ್ಯ ಪ್ರತಿಪದಂ ಸೂಕ್ತಂ ವಿಧತ್ತೇ—ಹವಿಃ ಶಬ್ದೋಪೇತತ್ವಮತ್ರ ಲಿಂಗಂ ॥**

ಶಾಖಾಂತರ (ಬೇರೆ ವೇದ) ದಲ್ಲಿರುವ ಪ್ರತಿಪತ್ ಋಕ್ಕಿನಿಂದ ಕೂಡಿದ ಸೂಕ್ತವನ್ನು ವಿವರಿಸುವರು. **ಹವಿಷ್ಪಾಂತಮಜರಂ ಸ್ವರ್ವಿದಿ** (ಋ. ಸಂ. ೧೦-೮೮-೧) ಎಂಬ ಋಕ್ಕು ಆಗ್ನಿಮಾರುತಶಸ್ತ್ರದ ಪ್ರತಿಪದೃಕ್ಕಾಗಿರುವುದು. ಇದರಲ್ಲಿ ಹವಿಷ್ಮತ್ ಎಂಬ ಶಬ್ದಪ್ರಯೋಗವಿರುವುದರಿಂದ ಐದನೆಯ ದಿವಸದಲ್ಲಿ ಪಠಿಸುವ ಋಕ್ಕುಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

**ವಪುರ್ನ ತಚ್ಚಿಕಿತುಷೇ ಚಿದಸ್ತ್ವಿತಿ ಮಾರುತಂ ವಪುಷ್ಮತ್ಪಂಚಮೇಽಹನಿ ಪಂಚಮಸ್ಯಾಹ್ನೋ ರೂಪಂ ॥**

**ವಪುಃ ಶಬ್ದೋಪೇತಂ ಮರುದ್ದೇವತಾಕಂ ಸೂಕ್ತಂ ವಿಧತ್ತೇ—ಮರುತೋ ವಾವೃಧಂತ ಇತಿ ಶ್ರವಣಾತ್ತತ್ಸೂಕ್ತಂ ಮಾರುತಂ । ವಪುಃ ಶಬ್ದಲಿಂಗಂ ತು ಸ್ಪಷ್ಟಂ ।**

ಈಗ ವಪುಃಶಬ್ದೋಪೇತವಾದ ಮರುದ್ದೇವತಾಕವಾದ ಸೂಕ್ತವನ್ನು ತಿಳಿಸುವರು. **ವಪುರ್ನ ತಚ್ಚಿಕಿತುಷೇ ಚಿದಸ್ತು** (ಋ. ಸಂ. ೬-೬೬-೧) ಎಂಬುದು ಮರುದ್ದೇವತಾಕವಾದ ಸೂಕ್ತವು. ಇದರಲ್ಲಿ ವಪುಃಶಬ್ದವಿರುವುದರಿಂದ ಐದನೆಯ ದಿವಸದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರುವ ಲಕ್ಷಣವಿದ್ದಂತಾಯಿತು.

**ಜಾತವೇದಸೇ ಸುನವಾಮ ಸೋಮಮಿತಿ ಜಾತವೇದಸ್ಯಾಽಚ್ಯುತಾ ॥**

**ಅಚ್ಯುತತ್ವಲಿಂಗಯುಕ್ತಾಮೃಚಂ ವಿಧತ್ತೇ—**

ಅಚ್ಯುತತ್ವವೆಂಬ ಲಕ್ಷಣವಿರುವ ಋಕ್ಕನ್ನು ತಿಳಿಸುವರು. **ಜಾತವೇದಸೇ ಸುನವಾಮ ಸೋಮಂ** (ಋ. ಸಂ. ೧-೯೯-೧) ಎಂಬುವುದು ಜಾತವೇದಸ್ಯಾ ಋಕ್. ಇದರಲ್ಲಿ ಅಚ್ಯುತತ್ವವೆಂಬ ಲಕ್ಷಣವಿರುವುದರಿಂದ ಇದನ್ನು ಐದನೆಯ ದಿವಸದಲ್ಲಿ ಪಠಿಸಲು ಯೋಗ್ಯವಾಗಿದೆ.

**ಅಗ್ನಿರ್ಹೋತಾ ಗೃಹಪತಿಃ ಸ ರಾಜೇತಿ ಜಾತವೇದಸ್ಯಮಧ್ಯಾಸವತ್ಪಶುರೂಪಂ ಪಂಚಮೇಽಹನಿ ಪಂಚಮಸ್ಯಾಹ್ನೋ ರೂಪಂ ॥**

**ಅಧ್ಯಾಸಲಿಂಗೇನ ಯುಕ್ತಂ ಜಾತವೇದೋದೇವತಾಕಂ ತ್ರ್ಯೃಚಂ ವಿಧತ್ತೇ—ತ್ರಿಷ್ಟುಪ್ ಛಂದಸ್ಕಸ್ಯ ತ್ರ್ಯೃಚಸ್ಯಾವಸಾನೇ ತಾ ತರೇಮೇತ್ಯಧಿಕಃ ಪಾದೋಽಧ್ಯಾಸಃ ॥**

ಅಧ್ಯಾಸಲಕ್ಷಣದಿಂದ ಕೂಡಿದ ಜಾತವೇದೋದೇವತಾಕವಾದ ತೃಚವನ್ನು ವಿವರಿಸುತ್ತಾರೆ. **ಅಗ್ನಿರ್ಹೋತಾ ಗೃಹಪತಿಃ** (ಋ. ಸಂ. ೬-೧೫-೧೩) ಎಂಬುದು ಜಾತವೇದೋದೇವತಾಕವಾದ ತೃಚವು. ಇದರಲ್ಲಿ ಅಧ್ಯಾಸವೆಂಬ ಲಕ್ಷಣವೂ ಪಶುರೂಪಭಾಸವೂ ಇರುವುದರಿಂದ ಐದನೆಯ ದಿವಸದಲ್ಲಿ ಪಠಿಸುವ ಮಂತ್ರಗಳಲ್ಲಿರಬೇಕಾದ ಲಕ್ಷಣವು ಇಲ್ಲಿದ್ದಂತಾಯಿತು.

**(The remainder of the Nishkevalya Shastra. The Shastras of the evening libation).**

The hymn, predam brahma (8, 37) is in the Pankti metre, comprising five padas. The hymn, Indro madaya vavridha (1, 81) is in the Pankti metre, consisting of five padas, and containing the term "mad". By means of the hymn Satra madasas tava (6, 36, 1) which contains the term "mad" also, and is in the Trishtubh metre, the Hotar keeps through, its padas which remained firm, the libation in its proper place, thus preventing it from falling down. The triplet, tam Indram vajayamsai (8, 82, 7-9) is the setting (paryasa). Its third pada sa vrisha vrishabho bhuvat, contains the animal form (there is the word vrishan, i.e. male, in it). It is in the Gayatri metre, for the Gayatris are the leading metres at the midday libation in this Tryaha (the three days from the fourth to the sixth). The Nivid is placed in that metre which is the leading. Thefore the Hotrr places the Nivid in these Gayatris.

The verses, tat savitur, vrinimahe (5, 82, 13), adya no deva savitar (5, 82, 13-15) are the beginning and sequel of the Vaisvadeva Shastra on the Rathantara day, of which the fifth is one. Ud u shya devah savita damuna (6, 71, 4-6) is the Nivid hymn for Savitar. In it there is the word vaman (in the last pada) i.e. left which is a characteristic of the animal form. In the Dyavaprithvi hymn, mahi dyavaprithivi (4, 56) the words ruvad dhiksha (in the last pada) contain the animal form (because the word dhoksha, from the root duh to milk, is in it).

Ribhur vibhva vaja (4, 34) is the Ribhu hymn. Because the animals are vajah, i.e. property, booty, which (vajah) is an animal form. Stushe janam suvratam navyasbhir (6, 49, 1) is a hymn in the Trishtubh metre with an additional pada in the last verse, which is in the Sakvari, instead of in the Trishtubh metre. This is the animal form (animals being supposed to have five feet instead of four, the mouth being counted as the fifth) which is characteristic of the fifth day. Havish pantam ajaram (10, 88, 1) is the beginning of the Abnimaruta Shastra, It contains the word havis, i.e. offering, which is a characteristic of the fifth day. Vapur na tachchikitushe (6, 66) is the Nivid hymn for the Marutas, which contains the word vapus i.e. form. Jatavddase sunavama is the invariable Dhayya. Agnir hota grihapatih (6, 15 13) is the Nivid hymn for Jatavedas, with an additional pada at the end; this is the animal form, which is a characteristic of the fifth day.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾವಿಂಶಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೊಂದನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು
ಸಮಾಪ್ತವಾದುದು.

# ಅಥ ದ್ವಾವಿಂಶಾಧ್ಯಾಯೇ ಚತುರ್ಥಃ ಖಂಡಃ

## ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ ಆರನೆಯ ದಿವಸದಲ್ಲಿ ಆಚರಿಸುವ ಋತುಯಾಜವೆಂಬ ಹೋಮವು. ]

**ದೇವಕ್ಷೇತ್ರಂ ವಾ ಏತದ್ಯತ್ಷಷ್ಠಮಹರ್ದೇವಕ್ಷೇತ್ರಂ ವಾ ಏತ ಆಗಚ್ಛಂತಿ ಯೇ ಷಷ್ಠಮಹರಾಗಚ್ಛಂತಿ ॥**

ಅಥ ಷಷ್ಠಮಹರಾರಭ್ಯತೇ— ದ್ವಾದಶಾಹಮಧ್ಯೇ ನವರಾತ್ರಾಂತರ್ಗತೇ ಪೃಷ್ಠ್ಯಷಡಹೇ ಯತ್ ಷಷ್ಠಮಹರಸ್ತಿ ತದೇತದ್ದೇವಕ್ಷೇತ್ರಂ ವೈ ದೇವಾನಾಂ ನಿವಾಸಸ್ಥಾನಮೇವ । ಏವಂ ಸತಿ ಯೇ ಯಜಮಾನಾಃ ಷಷ್ಠಮಹರನುತಿಷ್ಠಂತಿ, ಏತೇ ದೇವಾನಾಂ ನಿವಾಸಸ್ಥಾನಮಾಗಚ್ಛಂತಿ ॥

ಈಗ ಆರನೆಯ ದಿವಸದ ಕಾರ್ಯಕಲಾಪಗಳನ್ನು ವಿವರಿಸುವರು. ದ್ವಾದಶಾಹಮಧ್ಯದಲ್ಲಿ ನವರಾತ್ರಾಂತರ್ಗತವಾದ ಪೃಷ್ಠ್ಯಷಡಹದಲ್ಲಿ ಇರುವ ಆರನೇದಿವಸವು ದೇವಕ್ಷೇತ್ರವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವುದು. ದೇವಕ್ಷೇತ್ರವೆಂದರೆ ದೇವತೆಗಳ ನಿವಾಸಸ್ಥಾನವು. ಆದ್ದರಿಂದ ಯಜ್ಞಮಾಡುವ ಯಜಮಾನರು ಈ ಆರನೇ ದಿವಸದ ಕಾರ್ಯಕಲಾಪಗಳನ್ನು ವಿಧಿಪೂರ್ವಕವಾಗಿ ಅನುಷ್ಠಾನಮಾಡಿದಲ್ಲಿ ಅವರು ದೇವತೆಗಳ ನಿವಾಸಸ್ಥಾನಕ್ಕೆ (ಸ್ವರ್ಗಕ್ಕೆ) ಹೋಗುವರು.

**ನ ವೈ ದೇವಾ ಅನ್ಯೋನ್ಯಸ್ಯ ಗೃಹೇ ವಸಂತಿ ನರ್ತುಋರ್ತೋರ್ಗೃಹೇ ವಸತೀತ್ಯಾಹುಸ್ತದ್ಯಥಾಯಥಮೃತ್ವಿಜ ಋತುಯಾಜಾನ್ಯಜಂತ್ಯಸಂಪ್ರದಾಯಂ ತದ್ಯಥರ್ತ್ವೃತೂನ್ಕಲ್ಪಯಂತಿ ಯಥಾಯಥಂ ಜನತಾಃ ॥**

ಅಥಾಸ್ಮಿನ್ ಷಷ್ಠೇಽಹನಿ ಋತುಪ್ರೈಷೇಷು ಋತುಯಾಜ್ಯಾಸೂಕ್ತೇ ಕಂಚಿದ್ವಿಶೇಷಂ ವಿಧಾತುಂ ಪ್ರಸ್ತೌತಿ— ದೇವಾಸ್ಸರ್ವೇಽಪ್ಯನ್ಯೋನ್ಯಸ್ಯ ಗೃಹೇ ವಾಸಂ ನೈವ ಕುರ್ವಂತಿ ಕಿಂತು ಸ್ವೇ ಸ್ವ ಏವ ಗೃಹೇ । ಏವಂ ಚ ಸತ್ಯೃತುರಪ್ಯೃತೋರನ್ಯಸ್ಯ ಸ್ಥಾನೇ ನ ವಸತಿ ಕಿಂತು ಸರ್ವೋಽಪಿ ವಸಂತಾದ್ಯೃತುಃ ಸ್ವೇ ಸ್ವ ಏವ ಸ್ಥಾನೇ ನಿವಸತಿ । ತಸ್ಮಾತ್ಕಾರಣಾದ್ಯಥಾಯಥಂ ಸ್ವಸ್ವಸ್ಥಾನಮನತಿಕ್ರಮ್ಯ ಸರ್ವೇಽಪ್ಯೃತ್ವಿಜಃ ಋತುಯಾಜಾನ್ಯಜೇಯುರಸಂಪ್ರದಾಯಮನ್ಯಸ್ಮಾ ಅದತ್ವಾ । ಅಯಮರ್ಥಃ । ಋತುಗ್ರಹಾಣಾಂ ಪ್ರಚಾರೋ ಯದಾ ವರ್ತತೇ ತದಾನೀಂ ಮೈತ್ರಾವರುಣಃ ಪ್ರೈಷಸೂತ್ರಗತೇನ ಮಂತ್ರೇಣ ಹೋತ್ರಾದೀನ್ ಪ್ರೇಷ್ಯತಿ ತೇ ಚ ಯಾಜ್ಯಯಾ ವಷಟ್ ಕುರ್ವಂತಿ । ಅಧ್ವರ್ಯುರ್ಯಜಮಾನೌ ತು ಪ್ರೇಷಿತೌ ಸ್ವಸ್ವಯಾಜ್ಯಾಂ ಹೋತ್ರೇ ಪ್ರಯಚ್ಛತಃ ।

**ತದಿದಂ ಪ್ರಕೃತಾವನುಷ್ಠಾನಂ । ಅತ್ರ ತು ತೌ ಹೋತ್ರೇ ನ ಪ್ರಯಚ್ಛತಃ ಕಿಂತು ಸ್ವಯಮೇವ ಯಾಜ್ಯಾಂ ಪಠತ ಇತಿ । ತಥಾ ಸತಿ ಯಥರ್ತುರ್ತು ತಂ ತಮೃತುಮನತಿಕ್ರಮ್ಯ ಸರ್ವಾನೃತೂನೃತ್ವಿಜಃ ಕಲ್ಪಯಂತಿ ಸ್ವಸ್ವಪ್ರಯೋಜನಸಮರ್ಥಾನ್ ಕುರ್ವಂತಿ । ಋತೂನಾಂ ತಥಾ ಕಲ್ಪನೇ ಸತಿ ಜನತಾ ಜನಸಮೂಹಾ ಯಥಾಯಥಂ ಸ್ವಂ ಸ್ವಂ ಸ್ಥಾನಮನತಿಕ್ರಮ್ಯ ವ್ಯವಸ್ಥಿತಾಃ ಸುಖಿನೋ ಭವಂತಿ । ಏವಮೃತುಯಾಜಾ ಅತ್ರ ಪ್ರಸ್ತುತಾಸ್ತತ್ರೈತಚ್ಚಿಂತ್ಯತೇ ಕಿಮೃತುಯಾಜೇಷು ಪ್ರೈಷವಷಟ್ಕಾರೌ ಪ್ರಕೃತಿವನ್ನ ಕರ್ತವ್ಯಾವುತ ಕರ್ತವ್ಯಾವಾಹೋಸ್ವಿತ್ಪ್ರಕಾರಾಂತರೇಣ ಕರ್ತವ್ಯಾವಿತಿ ॥**

ಈ ಆರನೇ ದಿವಸದಲ್ಲಿ ಪಠಿಸುವ ಋತುಯಾಜ್ಯಾಸೂಕ್ತದಲ್ಲಿರುವ ಒಂದು ವಿಶೇಷವಿಷಯವನ್ನು ಹೇಳಲು ಉಪಕ್ರಮಿಸುವರು. ದೇವತೆಗಳೆಲ್ಲರೂ ಅನ್ಯೋನ್ಯವಾಗಿ ಎಂದರೆ ಒಬ್ಬರು ಮತ್ತೊಬ್ಬರ ಮನೆಯಲ್ಲಿ ವಾಸಮಾಡುವುದಿಲ್ಲ, ತಮ್ಮ ತಮ್ಮ ಸ್ವಂತ ಮನೆಗಳಲ್ಲಿಯೇ ವಾಸಮಾಡುವರು. ಹೀಗಿರುವುದರಿಂದ ವಸಂತಾದಿ ಋತುಗಳ ಅಭಿಮಾನಿದೇವತೆಗಳೂ ಸಹ ಇತರರ ಮನೆಯಲ್ಲಿ ವಾಸಮಾಡುವುದಿಲ್ಲ, ಎಲ್ಲರೂ ತಮ್ಮ ಸ್ವಂತ ನಿವಾಸದಲ್ಲಿಯೇ ವಾಸಮಾಡುವರು. ಈ ಕಾರಣದಿಂದ ಯಜ್ಞದಲ್ಲಿ ಭಾಗವಹಿಸುತ್ತಿರುವ ಎಲ್ಲಾ ಋತ್ವಿಜರೂ ತಮ್ಮ ತಮ್ಮ ಸ್ಥಾನಗಳನ್ನು ಬಿಟ್ಟೇಳದೆ ಋತುಯಾಜಹೋಮಾದಿಗಳನ್ನು ಮಾಡುವರು. ಇದು ಸಂಪ್ರದಾಯವು ಇದನ್ನು ಯಾರೂ ಅತಿಕ್ರಮಿಸುವುದಿಲ್ಲ. ಇದರ ಅರ್ಥವು--ಋತುಗ್ರಹಪ್ರಚಾರವು ನಡೆಯುತ್ತಿರುವಾಗ ಮೈತ್ರಾವರುಣನೆಂಬ ಋತ್ವಿಜನು ಪ್ರೈಷಸೂಕ್ತದ ಮಂತ್ರದಿಂದ ಹೋತ್ರಾದಿಋತ್ವಿಜರನ್ನು ಆಹ್ವಾನಮಾಡುವನು. ಅವರು ಯಾಜ್ಯಾಮಂತ್ರವನ್ನು ಪಠಿಸಿ ವಷಟ್ಕಾರಪೂರ್ವಕವಾಗಿ ಹೋಮಮಾಡುವರು. ಅಧ್ವರ್ಯು ಮತ್ತು ಯಜ್ಞಮಾಡುವ ಯಜಮಾನನು ಪ್ರೈಷದಿಂದ ನಿರ್ದೇಶಿಸಲ್ಪಟ್ಟನಂತರ ತಮ್ಮ ತಮ್ಮ ಯಾಜ್ಯಾಹುತಿಗಳನ್ನು ಹೋತೃವಿಗೆ ಕೊಡುವರು. ಹೋತೃವು ಅವರ ಪರವಾಗಿ ವಷಟ್ಕಾರಾದಿಗಳನ್ನು ಮಾಡುವನು. ಇದು ಸಾಧಾರಣವಾಗಿ ಮಾಡಬೇಕಾದ ಕ್ರಮವು ಆದರೆ ಈ ಸಂದರ್ಭದಲ್ಲಿ ಅಧ್ವರ್ಯು ಮತ್ತು ಯಜಮಾನರು ತಾವು ಮಾಡಬೇಕಾದ ಯಾಜ್ಯಾದಿಗಳನ್ನು ಹೋತೃವಿನ ಕೈಗೆ ಕೊಡುವುದಿಲ್ಲ. ಆದರೆ ತಾವೇ ಯಾಜ್ಯಾದಿಗಳನ್ನು ಪಠಿಸುವರು. ಹೀಗಿರುವಾಗ ಋತ್ವಿಜರೆಲ್ಲರೂ ಆಯಾ ಋತುದೇವತೆಗಳನ್ನು ಅತಿಕ್ರಮಿಸದೆ ಅವರು ತಮ್ಮ ತಮ್ಮ ಕಾರ್ಯದಲ್ಲಿ ಸಮರ್ಥರಾಗುವಂತೆ ಮಾಡುವರು. ಹೀಗೆ ಮಾಡುವುದರಿಂದ ಜನರೂ ಸಹ ತಮ್ಮ ತಮ್ಮ ಸ್ಥಾನಗಳಲ್ಲಿದ್ದು ಯಾವ ತೊಂದರೆಗಳಿಗೂ ಒಳಗಾಗದೆ ಸುಖದಿಂದಿರುವರು. ಋತುಯಾಜಗಳನ್ನು ಹೀಗೆ ಮಾಡುವುದರಿಂದ ಕೆಲವರು ಹೀಗೆ ಯೋಚಿಸುವರು. ಋತುಯಾಜಗಳಲ್ಲಿ ಸಾಧಾರಣನಿಯಮಗಳನ್ನು ಅನುಸರಿಸದೆ ಪ್ರೈಷವಷಟ್ಕಾರಗಳನ್ನು ಏಕೆ ಮಾಡುವರು? ಪ್ರಕಾರಾಂತರವಾಗಿ ಏಕೆ ಮಾಡಬೇಕು?

**ತದಾಹುರ್ನರ್ತುಪ್ರೈಷೈಃ ಪ್ರೇಷಿತವ್ಯಂ ನರ್ತುಪ್ರೈಷೈರ್ವಷಟ್ಕೃತ್ಯಂ ವಾಗ್ವಾ ಋತುಪ್ರೈಷಾ ಆಪತ್ಯೇ ವೈ ವಾಕ್ ಷಷ್ಠೇಽಹನೀತಿ ॥**

ತತ್ರ ತಾವದಕರಣಪಕ್ಷಮುಪನ್ಯಸ್ಯತಿ—ಋತುಯಾಜಾರ್ಥಂ ಮೈತ್ರಾವರುಣೇನ ಪಠಿತವ್ಯಾ ಮಂತ್ರಾ ಋತುಪ್ರೈಷಾಃ । ತೈಃ ಪ್ರೈಷಮಂತ್ರೈರ್ಹೋತ್ರಾದೀನ್ ಪ್ರತಿ ಚ ನ ಪ್ರೇಷಿತವ್ಯಂ । **ಹೋತಾ ಯಕ್ಷದಿಂದ್ರಮಿತ್ಯಾದಿಭಿಃ ಪ್ರೈಷಣಂ ನ ಕರ್ತವ್ಯಂ । ಹೋತ್ರಾದಿಭಿಶ್ಚರ್ತುಪ್ರೈಷಮಂತ್ರೈರ್ನವಷಟ್ಕರ್ತವ್ಯಂ । ಯಾಜ್ಯಾತ್ವೇನ ನ ಪಠಿತವ್ಯಾ ಇತ್ಯರ್ಥಃ । ತತ್ರೇಯಮುಪಪತ್ತಿಃ । ಯ ಋತುಪ್ರೈಷಾಸ್ತೇ ಸರ್ವೇಽಪಿ ವಾಗ್ವೈ ವಾಗ್ರೂಪಾ ಏವ ವಾಕ್ಚ**

ಷಷ್ಠೇಽಹನ್ಯಾಪ್ಯಾಯತೇ ಸಮಾಪ್ಯಾಯತೇ । ನ ಹಿ ಸಮಾಪ್ತಾಯಾಂ ವಾಚಿ ಮಂತ್ರಪ್ರ-ಯೋಗೋ ಯುಜ್ಯತ ಇತಿ ನಿಷೇಧವಾದಿನಾಮಭಿಪ್ರಾಯಃ ॥

ಅದರ ಉತ್ತರವನ್ನು ವಿವರಿಸುವರು. ಋತುಯಾಜಾರ್ಥವಾಗಿ ಮೈತ್ರಾವರುಣನೆಂಬ ಋತ್ವಿಜನಿಂದ ಪಠಿಸಲ್ಪಡುವ ಮಂತ್ರಗಳಿಗೆ ಋತುಪ್ರೈಷವೆಂದು ಹೆಸರು. ಈ ಪ್ರೈಷಮಂತ್ರಗಳಿಂದ ಹೋತ್ರಾದಿ ಋತ್ವಿಜರನ್ನು ನಿರ್ದೇಶಿಸಬಾರದು. ಎಂದರೆ **ಹೋತಾಯಕ್ಷದಿಂದ್ರಂ** ಎಂದು ಮೊದಲಾದ ಪ್ರೈಷಮಂತ್ರಗಳಿಂದ ನಿರ್ದೇಶಮಾಡಬಾರದು. ಮತ್ತು ಹೊತ್ರಾದಿ ಋತ್ವಿಜರೂ ಸಹ ನಾಲ್ಕು ಋತುಪ್ರೈಷಮಂತ್ರಗಳಿಂದ ವಷಟ್ಕಾರಾದಿಗಳನ್ನು ಮಾಡಕೂಡದು. ಎಂದರೆ ಈ ಸಂಬಂಧವಾಗಿ ಯಾಜ್ಯಾದಿ ಮಂತ್ರಗಳನ್ನು ಪಠಿಸಕೂಡದು ಎಂದರ್ಥವು. ಅದರ ಕಾರಣವು ಹೀಗಿರುವುದು–ಋತುಪ್ರೈಷಮಂತ್ರಗಳೆಲ್ಲವೂ ವಾಗ್ರೂಪ ಗಳಾಗಿರುವವು. ವಾಕ್ಕುಗಳು (ವಾಕ್ಯಗಳು) ಆರನೇ ದಿನದಲ್ಲಿ ಸಮಾಪ್ತಿಗೊಳ್ಳುವವು. ಆದ್ದರಿಂದ ಸಮಾಪ್ತಿಗೊಂಡ ವಾಕ್ಯ ಗಳನ್ನು (ಮಂತ್ರಪ್ರಯೋಗವನ್ನು) ಪುನಃ ಪ್ರಯೋಗಿಸಬಾರದು ಎಂದು ನಿಷೇಧವನ್ನು ಪ್ರತಿಪಾದಿಸುವವರು ಹೇಳುವರು.

**ಯದೃತುಪ್ರೈಷೈಃ ಪ್ರೇಷ್ಯೇಯುರ್ಯದೃತುಪ್ರೈಷೈರ್ವಷಟ್ಕುರ್ಯುರ್-ವಾಚಮೇವ ತದಾಪ್ತಾಂ ಶ್ರಾಂತಾಮೃಕ್ಣವಹೀಂ ವಹರಾವಿಣೀ-ಮೃಚ್ಛೇಯುಃ ॥**

**ತೇಷಾಮೇವ ಮತಮಾಶ್ರಿತ್ಯ ವಿಧಿವಾದಿನಾಂ ಪಕ್ಷೇ ದೋಷಂ ದರ್ಶಯತಿ — ಯ(ದೃ) ತುಪ್ರೈಷಾಸ್ತತ್ಪೂರ್ವಕೋ ವಷಟ್ಕಾರಶ್ಚಾನುಷ್ಠೀಯೇರಂಸ್ತದಾನೀಮಾಪ್ತಾಂ ಸಮಾ-ಪ್ತಾಂ ವಾಚಮೇವ ಋಚ್ಛೇಯುಃ ॥ ಕೀದೃಶೀಂ ವಾಚಮೃಕ್ಣವಹೀಂ ವಹೋ ಬಲೀವರ್ದಸ್ಯ ಲಾಂಗಲಾದಿವಹನಪ್ರದೇಶಃ । ವೃ(ಋ)ಕ್ಣೋ ಭಗ್ನಃ । ವೃ(ರು)ಜೋ ಭಂಗ ಇತಿ ಧಾತುಃ । ವೃ(ಋ)ಕ್ಣೋ ಭಗ್ನೋ ವಹೋ ವಹನಪ್ರದೇಶೋ ಯಸ್ಯಾ ವಾಚಃ ಸಾ, ಋಕ್ಣವಹೀ ಶ್ರಾಂತ-ತ್ವಾದ್ಯಜ್ಞಭಾರಂ ವೋಢುಮಶಕ್ತೇತ್ಯರ್ಥಃ । ವಹರಾವಿಣೀಮಶಕ್ಯವಹನನಿಮಿತ್ತೋ ರಾವೋ ರೋದನರೂಪೋ ಧ್ವನಿರ್ಯಸ್ಯಾಃ ಸಾ ವಹರಾವಿಣೀ ತಾದೃಶೀಮುಪದ್ರವದ್ವಯಯುಕ್ತಾಂ ಕೃತ್ವಾ ವಾಚಂ ವಿನಾಶಯೇಯುಃ ॥**

ಮೇಲೆ ಹೇಳಿದ ಮತಪ್ರಕಾರ ವಿಧಿನಿಯಮಗಳನ್ನು ಪ್ರತಿಪಾದಿಸುವವರು ಮೇಲಿನ ಪಕ್ಷದಲ್ಲಿರುವ ದೋಷವನ್ನು ತಿಳಿಸುವರು. ಯಾರು ಋತುಪ್ರೈಷಕ್ಕಿಂತಲೂ ಮೊದಲು ವಷಟ್ಕಾರವನ್ನು ಮಾಡುವರೋ ಆಗ ಅವರು ಸಮಾಪ್ತಗೊಂಡ ಋಕ್ಕುಗಳನ್ನು ಮತ್ತೆ ಪಠಿಸಿದಂತಾಗುವುದು. ಆ ವಾಕ್ಯಗಳು (ಮಂತ್ರಗಳು) ಎತ್ತಿನ ಭುಜಪ್ರದೇಶದ ಭಾರವನ್ನು ವಹಿಸುವ ಸ್ಥಳವು ಮುರಿದುಹೋಗುವಂತೆ ಮಾಡುವವು ಭಗ್ನವಾಗುವವು ಎಂದರ್ಥವು. ವಾಕ್ಯಗಳ (ಮಂತ್ರಗಳ) ಭಾರವನ್ನು ವಹಿಸುವ ಪ್ರದೇಶವು ಭಗ್ನವಾದರೆ ಮಂತ್ರಗಳಿಗೆ ಯಜ್ಞಭಾರವನ್ನು ವಹಿಸುವ (ತಡೆದುಕೊಳ್ಳುವ) ಶಕ್ತಿಯು ಇಲ್ಲದಂತಾಗುವುದು. ಭಾರವನ್ನು ವಹಿಸುವ ಎತ್ತುಗಳಿಗೆ ಅತಿಭಾರವನ್ನು ಹೇರಿದರೆ ಅದು ಘಟ್ಟಿಯಾಗಿ ಕಿರಿಚಿಕೊಳ್ಳುವುದು. ಅದರಂತೆ ಯಜ್ಞಭಾರ ವನ್ನು ವಹಿಸುವ ಸಾಮರ್ಥ್ಯವಿಲ್ಲದಿರುವ ಮಂತ್ರಗಳು ತಮ್ಮ ಶಕ್ತಿಯು ಕುಗ್ಗಿಹೋಗಿರುವುದರಿಂದ ರೋದನಧ್ವನಿಯು ಕೇಳಿ ಬರುವುದು. ಈ ವಿಧವಾದ ರೋದನಧ್ವನಿಯು ಯಜ್ಞಭಾರವನ್ನು ತಡೆದುಕೊಳ್ಳುವುದರಲ್ಲಿ ಸಾಮರ್ಥ್ಯವಿಲ್ಲದಿರುವುದೂ ಸಹ ವಾಕ್ಯವನ್ನು (ಮಂತ್ರವನ್ನು) ನಾಶಪಡಿಸುವವು

ಯದ್ವೇಭಿರ್ನ ಪ್ರೇಷ್ಯೇಯುರ್ಯದ್ವೇಭಿರ್ನ ವಷಟ್ಕುರ್ಯುರ್ಯಚ್ಯುತಾದ್ಯಜ್ಞಸ್ಯ ಚ್ಯವೇರನ್ಯಜ್ಞಾತ್ಪ್ರಾಣಾತ್ಪ್ರಜಾಪತೇಃ ಪಶುಭ್ಯೋ ಜಿಹ್ಮಾ ಈಯುಃ ॥

ಏವಮನುಷ್ಠಾನಪಕ್ಷೇ ದೋಷಮುಕ್ತ್ವಾ ನಿಷೇಧಪಕ್ಷೇ ವ್ಯವಸ್ಥಿತೇಸತಿ ವಿಧಿವಾದೀ ಸ್ವಾಭಿಪ್ರೇತಮನುಷ್ಠಾನಂ ಹೃದಿ ನಿಧಾಯ ನಿಷೇಧಪಕ್ಷೇ ಬಾಧಮುಪನ್ಯಸ್ಯತಿ—ಯದು ಯದಿ ವಾ ಏಭಿರ್ಮಂತ್ರೈರ್ನ ಪ್ರೇಷ್ಯೇಯುರ್ಯದಿ ವಾ ಏಭಿರ್ಯಾಜ್ಯಾಮಂತ್ರೈರ್ನ ವಷಟ್‌ಕುರ್ಯುಸ್ತದಾನೀಮೃತ್ವಿಜೋ ಯಜ್ಞಸ್ಯಾಚ್ಯುತಾದವಿನಷ್ಟಾತ್ ಪ್ರಯೋಗಾಚ್ಚ್ಯವೇರನ್ವಿನಶ್ಯೇಯುರ್ಯಜ್ಞಪ್ರಯೋಗಃ ಸಾಂಗೋ ನ ಭವೇದಿತ್ಯರ್ಥಃ । ಕಿಂಚೈತಸ್ಮಾದ್ಯಜ್ಞಾತ್ ಸ್ವಕೀಯಪ್ರಾಣಾತ್ಪ್ರಜಾಪತೇಃ ಸ್ವಕೀಯಯಜಮಾನಾದ್ಗವಾದಿಪಶುಭ್ಯಶ್ಚ ಜಿಹ್ಮಾ ಈಯುಋರ್ತ್ವಿಜಃ ಸರ್ವೇಽಪಿ ಕುಟಿಲಾ ಭೂತ್ವಾ ಗಚ್ಛೇಯುರ್ಯಜ್ಞಪ್ರಾಣಯಜಮಾನಪಶುಭ್ಯೋ ಭ್ರಷ್ಟಾ ಭವೇಯುರಿತ್ಯರ್ಥಃ ॥

ಒಂದುವೇಳೆ ಈ ಮಂತ್ರಗಳಿಂದ ಪ್ರೈಷನಿರ್ದೇಶವನ್ನೂ ಮಾಡದೆ, ಈ ಯಾಜ್ಯಾಮಂತ್ರಗಳಿಂದ ವಷಟ್ಕಾರವನ್ನೂ ಮಾಡದಿದ್ದರೆ, ಆಗ ಋತ್ವಿಜರು ಮಾಡುವ ಯಜ್ಞಪ್ರಯೋಗಾದಿಗಳು ಸಾಂಗವಾಗಿ ನೆರವೇರದೆ ಕುಂಠಿತವಾಗುವವು ಎಂದರೆ ನಾಶವಾಗುವವು. ಮತ್ತು ಇದರಿಂದ ಎಂದರೆ ಈ ವಿಧವಾದ ಯಜ್ಞನಾಶದಿಂದ ಪ್ರಜಾಪತಿಯ ಸ್ವಕೀಯ ಪ್ರಾಣರೂಪವಾದ ಯಜ್ಞನಾಶದಿಂದ ಯಜ್ಞಮಾಡುವ ಯಜಮಾನ ಗವಾದಿಪಶುಗಳು, ಎಲ್ಲಾ ಋತ್ವಿಜರು ಸಹ ಭ್ರಷ್ಟರಾಗುವರು.

ತಸ್ಮಾದೃಗ್ಮ್ಯೇಭ್ಯ ಏವಾಧಿ ಪ್ರೇಷಿತವ್ಯಮೃಗ್ಮ್ಯೇಭ್ಯೋಽಧಿ ವಷಟ್ಕೃತ್ಯಂ ತನ್ನ ವಾಚಮಾಸ್ತಾಂ ಶ್ರಾಂತಾಮೃಕ್ಣವಹೀಂ ವಹರಾವಿಣೀಮೃಚ್ಛಂತಿ ನಾಚ್ಯುತಾದ್ಯಜ್ಞಸ್ಯ ಚ್ಯವಂತೇ ನ ಯಜ್ಞಾತ್ಪ್ರಾಣಾತ್ಪ್ರಜಾಪತೇಃ ಪಶುಭ್ಯೋಜಿಹ್ಮಾಯಂತಿ ॥

ಇತ್ಥಂ ವಿಧಿನಿಷೇಧಪಕ್ಷಯೋರುಭಯೋರಪಿ ಬಾಧಮುಕ್ತ್ವಾ ಪ್ರಕಾರಾಂತರೇಣಾನುಷ್ಠಾನಂ ಸಿದ್ಧಾಂತಯತಿ—ಯಸ್ಮಾದನುಷ್ಠಾನಪಕ್ಷೇ ಶ್ರಾಂತಾಮಿತ್ಯಾದ್ಯುಕ್ತದೋಷಃ ಪರಿತ್ಯಾಗಪಕ್ಷೇ ತ್ವಚ್ಯುತಾದಿತ್ಯಾದ್ಯುಕ್ತದೋಷಸ್ತಸ್ಮಾದ್ದೋಷದ್ವಯಪರಿಹಾರಾಯ ಪ್ರಕಾರಾಂತರೇಣಾನುಷ್ಠೇಯಂ । ಪ್ರಕೃತೌ ಹಿ ಮೈತ್ರಾವರುಣಸ್ತಂ ತಂ ಪ್ರೈಷಮಂತ್ರಂ ಪಠಿತ್ವಾ ಹೋತರ್ಯಜೇತ್ಯಾದಿನಾ ಪ್ರೇಷ್ಯತಿ । ಹೋತ್ರಾದಯಶ್ಚ ತತ ಊರ್ಧ್ವಂ ಯಾಜ್ಯಾಂ ಪ್ರೈಷರೂಪಾಮೇವ ಪಠಿತ್ವಾ ತದಂತೇ ವೌಷಡಿತಿ ವಷಟ್‌ಕುರ್ವನ್ತಿ । ಅತ್ರ ತು ನ ತಥಾ ಕರ್ತವ್ಯಂ । ಕಿಂ ತರ್ಹಿ ಋಗ್ಮ್ಯೇಭ್ಯಃ ಏವಾಧಿ ಋಕ್‌ಶಿರಸ್ಕೇಭ್ಯೋ ಹೋತ್ರಾದಿವಿಷಯಪ್ರೈಷೇಭ್ಯ ಏವೋರ್ಧ್ವಂ ಮೈತ್ರಾವರುಣೋ ಹೋತರ್ಯಜೇತ್ಯಾದಿನಾ ಪ್ರೇಷ್ಯೇತ್ । ಹೋತ್ರಾದಯಶ್ಚ ತಥೈವ ಋಗ್ಮ್ಯೇಭ್ಯೋಽಧಿ ವಷಟ್‌ಕೃತ್ಯ ತುಭ್ಯಂ ಹಿನ್ವಾನ ಇತ್ಯಾದ್ಯೃಕ್‌ಶಿರಸ್ಕೈಃ ಪ್ರೈಷೈರ್ಯಜೇಯುಃ । ತಥಾ ಸತಿ ಪ್ರಕೃತಿವದನುಷ್ಠಾನಾಭಾವಾದ್ವಾಚಮಾಸ್ತಾಮಿತ್ಯಾದಿರನುಷ್ಠಾನಪಕ್ಷೇ ಪ್ರೋಕ್ತೋ

**ದೋಷೋ ನ ಭವತಿ । ಅನುಷ್ಠಾನಪರಿತ್ಯಾಗಸ್ಯಾಪ್ಯಭಾವಾತ್ಪ್ರತಿಷೇಧಪಕ್ಷೇ ಪ್ರೋಕ್ತೋಽಚ್ಯುತಾದಿತ್ಯಾದಿದೋಷೋಽಪಿ ನ ಭವಿಷ್ಯತಿ ॥**

ಈ ಪ್ರಕಾರವಾಗಿ ವಿಧಿನಿಷೇದಗಳೆರಡರಲ್ಲಿಯೂ ಇರುವ ಬಾಧಕಗಳನ್ನು ತಿಳಿಸಿ ಈ ಅನುಷ್ಠಾನವನ್ನು ಬೇರೆವಿಧವಾಗಿ ಮಾಡಬೇಕೆಂಬ ಸಿದ್ಧಾಂತ (ನಿರ್ಣಯವನ್ನು) ತಿಳಿಸುವರು. ಮಂತ್ರ (ವಾಕ್ಯ) ಸಮಾಪ್ತಿಯಾದನಂತರ ಬಳಲಿರುವ ಮಂತ್ರಗಳನ್ನು ಪುನಃ ಪಠಿಸಿದರೆ ಮಂತ್ರಗಳು ಭಾರವನ್ನು ವಹಿಸಲಾರದೆ ಯಜ್ಞವು ಕೆಡುವುದು ಎಂಬ ದೋಷವು ಒಂದುಕಡೆ, ಬಳಲಿರುವ ಮಂತ್ರಗಳನ್ನು ಉಚ್ಚರಿಸದೆ ಯಜ್ಞಮಾಡಿದರೆ ಮಂತ್ರಲೋಪದಿಂದ ಉಂಟಾಗುವ ಯಜ್ಞನಾಶವು ಒಂದುಕಡೆ ಈರೀತಿ ಎರಡು ವಿಧವಾದ ದೋಷಗಳಿರುವವು. ಆದ್ದರಿಂದ ಈ ಎರಡುವಿಧ ದೋಷಪರಿಹಾರಕ್ಕಾಗಿ ಮತ್ತೊಂದು ಪ್ರಕಾರವಾಗಿ ಇದನ್ನು ಅನುಷ್ಠಾನ ಮಾಡಬೇಕು. ಪ್ರಕೃತಿಯಲ್ಲಿ ಎಂದರೆ ಸಾಧಾರಣ ಪ್ರಯೋಗಕಾಲದಲ್ಲಿ ಮೈತ್ರಾವರುಣನು ಆಯಾ ಕಾಲಗಳಲ್ಲಿ ಆಯಾ ಪ್ರೈಷ ಮಂತ್ರಗಳ ಪಠನದಿಂದ **ಹೋತರ್ಯಜ** ಎಂದು ಹೋತೃವನ್ನು ನಿರ್ದೇಶಮಾಡುವನು. ಆದರೆ ಈ ಸಂದರ್ಭದಲ್ಲಿ ಆರೀತಿ ಮಾಡಕೂಡದು. ಆದರೆ ಪ್ರೈಷಮಂತ್ರಾದಿಗಳಿಂದ ಹೋತೃವನ್ನು ನಿರ್ದೇಶಮಾಡಿದಮೇಲೆ ಋಕ್ಕುಗಳಿಗೆ ಶಿರಸ್ಸಿನಂತಿರುವ ಮತ್ತೊಂದು ಋಕ್ಕನ್ನು ಪಠಿಸಿ ಹೋತೃವನ್ನು ಪ್ರೈಷಮಂತ್ರದಿಂದ ನಿರ್ದೇಶಿಸಬೇಕು. ಅನಂತರ ಹೊತ್ರಾದಿಋತ್ವಿಜರನ್ನು ಅದೇಪ್ರಕಾರವಾಗಿ **ತುಭ್ಯಂ ಹಿನ್ವಾನ** ಎಂಬ ಋಕ್ಶಿರಸ್ಕ ಮಂತ್ರಗಳಿಂದ ಪ್ರೈಷಮಂತ್ರಪೂರ್ವಕವಾಗಿ ಯಾಜ್ಯಾಮಂತ್ರಗಳನ್ನು ಪಠಿಸಿ ವಷಟ್ಕಾರಪೂರ್ವಕವಾಗಿ ಹೋಮಮಾಡಬೇಕು. ಹೀಗೆ ಮಾಡುವುದರಿಂದ ಹಿಂದೆ ಹೇಳಿದ ಎಂದರೆ ಶ್ರಾಂತ (ಬಳಲಿದ) ಋಕ್ಕುಗಳಿಂದ ಅನುಷ್ಠಾನಮಾಡಿದರೆ ಉಂಟಾಗುವ ದೋಷವೂ, ಮಂತ್ರಾದಿಗಳನ್ನುಚ್ಚರಿಸದೆ ಯಜ್ಞಮಾಡುವುದನ್ನೇ ತ್ಯಜಿಸುವ ದೋಷವೂ (ಎರಡುವಿಧವಾದ ದೋಷವೂ) ಸಂಭವಿಸುವುದಿಲ್ಲ. ಪ್ರಜಾಪತಿ, ಪ್ರಾಣ, ಯಜ್ಞ, ಪಶುಗಳು ಮೊದಲಾದವುಗಳಿಗೆ ಯಾವ ಕೇಡೂ ಉಂಟಾಗುವುದಿಲ್ಲ.

## *English Translation*

### (On the Rituyajas of the sixth day)

The sixth day is deva kshetra, i.e., the field of the gods. Those who enter on the sixth day, enter the field of the gods who do not live together, but each in his own house. They say, No Ritu (season) lives in the house of another Ritu. Therefore the priests perform the Rituyajas (offerings to the Ritus), each for himself, without appointing another one to do it for them. Thus the priests prepare all the Ritus without foregoing such or such one and make them fit for their own use, that the wholeassemblage enjoys happiness, each in his own place. They say, No order for making the Ritu offering is required, nor is the formula "vaushat" to be repeated. Because the order given by the Maitravaruna, for the Ritu offerings are the Vach, who is wearied on the sixth day. When they would give the order for repeating the Yajyas for the Ritu offerings, and call "vaushat", then they would have Vach wearied, tired, sinking under her load (the number of mantras recited on the previous days) and faltering in her voice. But if the priests do not repeat the order for the Ritu offerings, nor repeat

vaushat after the Yajyas, then they fall from the line of the sacrifice which should not be broken and consequently they fall from the sacrifice, from the prana (breath), Prajapati and cattle, and will henceforth walk crooked. Therefore the order (praisha) to repeat the mantras, as well as the Yajya verse at the end of which the Vashatkara occurs should be preceded by a Rik verse. Thus they will not have the Vach wearied, tired, sinking beneath her load, faltering in her voice, nor will they fall from the line of sacrifice which should not be broken, nor from the sacrifice, nor from the prana, nor from Prajapati, nor from the cattle, nor walk crooked.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾವಿಂಶಾಧ್ಯಾಯಸ್ಯ ಚತುರ್ಥಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವಾದುದು.**



# ಅಥ ದ್ವಾವಿಂಶಾಧ್ಯಾಯೇ ಪಂಚಮಃ ಖಂಡಃ

**ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ಐದನೆಯ ಖಂಡವು**



[ ಪರುಚ್ಛೇಪಋಷಿದೃಷ್ಟವಾದ ಋಕ್ಕುಗಳ ಲಕ್ಷಣಗಳು ಮತ್ತು ಅರ್ಥವೂ ಸಹ ]

ಪಾರುಚ್ಛೇಪೀರುಪದದತಿ ಪೂರ್ವಯೋಃ ಸವನಯೋಃ ಪುರುಸ್ತಾತ್ಪ್ರಸ್ಥಿತಯಾಜ್ಯಾನಾಂ ರೋಹಿತಂ ವೈ ನಾಮೈತಚ್ಛಂದೋ ಯತ್ಪಾರುಚ್ಛೇಪಮೇತೇನ ವಾ ಇಂದ್ರಃ ಸಪ್ತ ಸ್ವರ್ಗಾಂಲ್ಲೋಕಾನರೋಹತ್ ॥ ರೋಹತಿ ಸಪ್ತ ಸ್ವರ್ಗಾಂಲ್ಲೋಕಾನ್ಯ ಏವಂ ವೇದ ॥

ಅಥ ಸವನದ್ವಯೇ ಕಾಂಶ್ಚಿದೃಗ್ವಿಶೇಷಾನ್ವಿಧತ್ತೇ—ಪ್ರಾತಃಸವನೇ ಮಾಧ್ಯಂದಿನಸವನೇ ಚ ಯಾಃ ಪ್ರಸ್ಥಿತಯಾಜ್ಯಾಶ್ಚೋದಕೇನ ಪ್ರಕೃತಿತಃ ಪ್ರಾಪ್ತಾಃ ತಾಸಾಂ ಪುರಸ್ತಾತ್ಪಾರುಚ್ಛೇಪೀಃ ಪರುಚ್ಛೇಪಾಖ್ಯೇನ ಮಹರ್ಷಿಣಾ ದೃಷ್ಟಾ ಋಚಃ ಉಪದಧ್ಯಃ । ಏಕೈಕಾಂ ಪಾರುಚ್ಛೇಪೀಮೃಚಮುಕ್ತ್ವಾ ಪಶ್ಚಾದೇಕೈಕಾಂ ಪ್ರಸ್ಥಿತಯಾಜ್ಯಾಂ ಪಠೇತ್ । ವೃಷನ್ನಿಂದ್ರ ವೃಷ-

ಪಾಣಾಸ ಇಂದವ ಇತ್ಯಾದ್ಯಾಃ ಪಿಬಾ ಸೋಮಮಿಂದ್ರ ಸುವಾನಮದ್ರಿಭಿರಿತ್ಯಾದ್ಯಾಶ್ಚ ಪಾರುಚ್ಛೇಪ್ಯ ಋಚಃ ಸೂತ್ರಕಾರೇಣ ವಿಸ್ಪಷ್ಟಮುದಾಹೃತಾಃ । ಪಾರುಚ್ಛೇಪೀಷ್ವೃಕ್ಷು ಯಚ್ಛಂದೋಽಸ್ತಿ ತದಿದಂ ರೋಹಿತನಾಮಕಂ । ಕಥಮಿತಿ ತದುಚ್ಯತೇ । ಏತೇನ ಪಾರುಚ್ಛೇಪೀಯೇನ ಚ್ಛಂದಸಾ ಪುರಾ ಕದಾಚಿದಿಂದ್ರಃ ಸಪ್ತ ಸ್ವರ್ಗಾ ಲೋಕಾನಾರೋಹತ್ । ಉತ್ತಮಾಧಮಭೋಗಾವಸ್ಥಾನವಿಶೇಷಾಃ ಸಪ್ತಸಂಖ್ಯಾಕಾಃ ಸ್ವರ್ಗಾಃ । ರೋಹತ್ಯನೇನ ಚ್ಛಂದಸೇತಿ ರೋಹಿತನಾಮ ಸಂಪನ್ನಂ ॥ ವೇದನಂ ಶಂಸತಿ ॥

ಈಗ ಪ್ರಾತಸ್ಸವನ, ಮಾಧ್ಯಂದಿನಸವನಗಳೆಂಬ ಎರಡು ಸವನಗಳಲ್ಲಿ ಕೆಲವು ವಿಶೇಷಸಂಗತಿಗಳನ್ನು ತಿಳಿಸುವರು ಪ್ರಾತಃಸವನ ಮತ್ತು ಮಾಧ್ಯಂದಿನಸವನಗಳಲ್ಲಿ ಪ್ರಸ್ಥಿತಯಾಜ್ಯಾಮಂತ್ರಗಳನ್ನು ಪಠಿಸುವಾಗ ಎಂದರೆ ಮೊದಲು ಪರುಚ್ಛೇಪಋಷಿ ದೃಷ್ಟವಾದ ಋಕ್ಕುಗಳನ್ನು ಪಠಿಸಬೇಕಾಗಿರುವುದು. ಎಂದರೆ ಮೊದಲು ಒಂದೊಂದು ಪಾರುಚ್ಛೇಪೀಋಕ್ಕನ್ನು ಪಠಿಸಿದನಂತರ ಒಂದೊಂದು ಪ್ರಸ್ಥಿತಯಾಜ್ಯಾಮಂತ್ರವನ್ನು ಪಠಿಸಬೇಕು. **ವೃಷನ್ನಿಂದ್ರ ವೃಷಪಾಣಾಸ ಇಂದವಃ** ಎಂಬ ಋಕ್ಕಿನಿಂದ ಮೊದಲುಮಾಡಿ **ಪಿಬಾ ಸೋಮಮಿಂದ್ರ ಸುವಾನಮದ್ರಿಭಿಃ** ಎಂಬ ಋಕ್ಕಿನವರೆಗೆ ಇರುವ ಋಕ್ಕುಗಳು ಪಾರುಚ್ಛೇಪೀ ಋಕ್ಕುಗಳೆಂದು ಸೂತ್ರಕಾರರು ಸ್ಪಷ್ಟವಾಗಿ ಉದಾಹರಿಸಿರುವರು. ಪಾರುಚ್ಛೇಪೀಋಕ್ಕುಗಳಲ್ಲಿ ಯಾವ ಛಂದಸ್ಸಿರುವುದೋ ಅದಕ್ಕೆ **ರೋಹಿತ**ವೆಂದು ಹೆಸರು. ಹೇಗೆಂದರೆ, ಈ ಪಾರುಚ್ಛೇಪೀ ಛಂದಸ್ಸಿನ ಋಕ್ಕುಗಳ ಪಠನದಿಂದ ಪೂರ್ವದಲ್ಲಿ ಇಂದ್ರನು ಏಳು ಹಂತಗಳ ಸ್ವರ್ಗಲೋಕಗಳನ್ನು ಹತ್ತಿಹೋದನು. ಉತ್ತಮಾಧಮಭೋಗಾವಸ್ಥಾನಗಳಿಂದ ಕೂಡಿದ ಸ್ವರ್ಗಲೋಕಗಳು ಏಳು ಹಂತಗಳಲ್ಲಿರುವವು. **ರೋಹತ್ಯನೇನ** ಹತ್ತಿಹೋದನು ಎಂಬರ್ಥವಿರುವ **ರೋಹಿತ** ಎಂಬ ಛಂದಸ್ಸಿನಿಂದ ಈ ಛಂದಸ್ಸುಗಳಿಗೆ ರೋಹಿತ ಎಂಬ ಹೆಸರಾಯಿತು. ಈ ವಿಷಯಗಳನ್ನು ಚೆನ್ನಾಗಿ ತಿಳಿದಿರುವ ಪುರುಷನು ಸ್ವರ್ಗಾದಿಲೋಕಗಳನ್ನು ಹತ್ತಿ ಹೋಗುವನು.

ತದಾಹುರ್ಯತ್ಪಂಚಪದಾಃ ಏವ ಪಂಚಮಸ್ಯಾಹ್ನೋ ರೂಪಂ ಷಟ್ಪದಾಃ
ಷಷ್ಠಸ್ಯಾಥ ಕಸ್ಮಾತ್ಸಪ್ತಪದಾಃ ಷಷ್ಠೇಽಹಂಚ್ಛಸ್ಯಂತ ಇತಿ ॥

ತಸ್ಮಿಂಶ್ಛಂದಸಿ ಚೋದ್ಯಮುದ್ಭಾವಯತಿ — ಸಂಖ್ಯಾಸಾಮ್ಯಾತ್ಪಂಚಪದೋಪೇತಾ ಋಚಃ ಪಂಚಮೇಽಹನಿ ಯುಕ್ತಾಃ ಷಟ್‍ಪದೋಪೇತಾಃ ಷಷ್ಠೇಽಹನಿ ಪಾರುಚ್ಛೇಪ್ಯಸ್ತು ಸಪ್ತಪದೋಪೇತಾ ಅತಃ ಷಷ್ಠೇಽಹನಿ ತಚ್ಛಂಸನಮಯುಕ್ತಮಿತಿ ಚೋದ್ಯವಾದಿನಾಮಭಿಪ್ರಾಯಃ ॥

ಈ ಛಂದಸ್ಸಿನಲ್ಲಿರುವ ಒಂದು ವಿಶೇಷವನ್ನು ತಿಳಿಸುವರು. ಸಂಖ್ಯಾನುಸಾರವಾಗಿ ಐದನೆಯ ದಿವಸದಲ್ಲಿ ಐದು ಪಾದಗಳಿರುವ ಋಕ್ಕುಗಳನ್ನು ಪಠಿಸಬೇಕು. ಆರನೇ ದಿವಸದಲ್ಲಿ ಆರು ಪಾದಗಳಿರುವ ಋಕ್ಕುಗಳನ್ನೂ ಏಳನೆಯ ದಿವಸದಲ್ಲಿ ಏಳು ಪಾದಗಳಿರುವ ಋಕ್ಕುಗಳನ್ನೂ ಪಠಿಸಬೇಕು. ಇದು ನ್ಯಾಯವು. ಆದರೆ ಈ ಆರನೇದಿನದಲ್ಲಿ ಏಳು ಪಾದಗಳಿರುವ ಪಾರುಚ್ಛೇಪೀಯ ಋಕ್ಕುಗಳನ್ನು ಪಠಿಸುವುದು ಯುಕ್ತವಲ್ಲ ಎಂದು ಚೋದ್ಯವಾದಿಗಳು ಹೇಳುವರು.

ಷಡ್ಭಿರೇವ ಪದೈಃ ಷಷ್ಠಮಹರಾಪ್ನುವಂತ್ಯಪಚ್ಛಿದ್ಯೇ(ದ್ಯೈ)ವೈತದಹರ್ಯತ್ಸಪ್ತಮಂ ತದೇವ ಸಪ್ತಮೇನ ಪದೇನಾಭ್ಯಾರಭ್ಯ ವಸಂತಿ ವಾಚಮೇವ ತತ್ಪುನರುಪಯಂತಿ ಸಂತತ್ಯೈ ॥

ತತ್ರೋತ್ತರಮಾಹ— ಏಕೈಕಸ್ಯಾಮೃಚಿ ಯ ಏತೇ ಪ್ರಥಮಭಾವಿನಃ ಷಟ್ಪದಾಸ್ತೈಃ ಸರ್ವೈರ್ಯದಾ ಷಷ್ಠಮಹರಾಪ್ನುವಂತಿ ತದಾನೀಮುಪರಿತನಂ ಯತ್ಸಪ್ತಮಮಹಸ್ತದಪಚ್ಛಿದ್ಯೈವ ಪೃಥಕ್ತ್ವೇನ ತಸ್ಯ ವಿಚ್ಛೇದಂ ಕೃತ್ವೈವ ಪ್ರಾಪ್ನೋತಿ । ತಸ್ಮಾದ್ವಿಚ್ಛಿನ್ನಂ ಸಪ್ತಮಮಹಸ್ತೇನ ಸಪ್ತಮೇನ ಪಾ(ಪ) ದೇನಾಽಽಭಿಮುಖ್ಯೇನೋಪಕ್ರಮ್ಯ ವಸಂತಿ । ತಥಾ ಸತಿ ವಿಚ್ಛಿನ್ನಾಂ ವಾಚಮೇವ ಪುನರಪಿ ಪ್ರಾಪ್ನುವಂತಿ । ತಚ್ಚ ಮಧ್ಯಮಯೋಸ್ತ್ರ್ಯಹಯೋಃ ಸಂತತ್ಯೈ ಸಂಪದ್ಯತೇ ॥ ವೇದನಪೂರ್ವಕಮನುಷ್ಠಾನಂ ಪ್ರಶಂಸತಿ— ಪೂರ್ವವದ್ವ್ಯಾಖ್ಯೇಯಂ ॥

ಮೇಲಿನ ಪ್ರಶ್ನೆಗೆ ಉತ್ತರವನ್ನು ಹೇಳುವರು. ಋಕ್ಕಿನಲ್ಲಿರುವ ಏಳು ಪಾದಗಳ ಪೈಕಿ ಆರನೇದಿನ ಆರು ಪಾದಗಳಿಂದ ಆರನೇದಿನವನ್ನು ಪಡೆಯುವರು. ಏಳನೇ ಪಾದದಿಂದ ಸ್ವರ್ಗದಲ್ಲಿ (ಅದನ್ನು ಸೇರಿ) ವಾಸಿಸುವರು. ಹಿಂದೆ ಸಮಾಪ್ತಿಯಾಗಿದ್ದ ವಾಕ್ಯವನ್ನು (ಮಂತ್ರವನ್ನು) ಮತ್ತೆ ಪಡೆಯುವರು. ಎಂದರೆ ಆಯಾಸದಿಂದ ಬಳಲಿ ಯಜ್ಞನಿರ್ವಾಹವನ್ನು ಮಾಡಲು ಅಶಕ್ತವಾಗಿದ್ದ ಮಂತ್ರಗಳು ಪುನಃ ತಮ್ಮ ಶಕ್ತಿಸಾಮರ್ಥ್ಯಗಳನ್ನು ಮುಂಚಿನಂತೆ ಪಡೆಯುವವು. ಈ ವಿಷಯವನ್ನು ತಿಳಿದಿರುವ ವಿದ್ವಾಂಸರಾದ ಪುರುಷರು ಮೂರು ದಿವಸದವರೆಗೆ ವಿಚ್ಛಿನ್ನವಾಗಿದ್ದ ವಾಕ್ಯಗಳನ್ನು ಎಂದರೆ ಮಂತ್ರಗಳನ್ನು ಪುನಃ ಪಡೆಯುತ್ತಾರೆ ಮತ್ತು ನಿರಂತರವಾಗಿ ಪಠಿಸಲು ಸಮರ್ಥರಾಗುತ್ತಾರೆ.

*English Translation*

**(On the nature and meaning of the Paruchhepa verses)**

The place at the two first libations a Paruchhepa verse one seen by the Rishi Paruchhepa before each of the Yajyas, which are repeated by the seven Hotars in their order the so-called prasthitas. The name of their metre is Rohita. By means of it Indra ascended the seven heavens. Thus he who has this knowledge ascends the seven heavens. They say, verses which consist of five padas (steps) are a characteristic of the fifth day, and such ones as consist of six padas are fit for the sixth day, why then are metres of seven padas (as the Rohita is) recited on the sixth day ? The reason is by six steps the sixth day is reached, but by cutting off, as it were, the seventh day by taking it single they settle with the seventh step down in heaven after having reached it by six. Thus they regain the Vach for the connection of the whole. Those who are possessed of such a knowledge have the three days connected and unbroken.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾವಿಂಶಾಧ್ಯಾಯಸ್ಯ ಪಂಚಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ಐದನೆಯ ಖಂಡವು ಸಮಾಪ್ತವಾದುದು.

# ಅಥ ದ್ವಾವಿಂಶಾಧ್ಯಾಯೇ ಷಷ್ಠಃ ಖಂಡಃ

## ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ಆರನೆಯ ಖಂಡವು



[ ಪಾರುಚ್ಛೇಪೀಯ ಋಕ್ಕುಗಳು ಪೂರ್ವವಿವರಣೆ ]



**ದೇವಾಸುರಾ ವಾ ಏಷು ಲೋಕೇಷು ಸಮಯತಂತ ತೇ ವೈ ದೇವಾಃ ಷಷ್ಠೇನೈವಾಹ್ನೈಭ್ಯೋ ಲೋಕೇಭ್ಯೋಽಸುರಾನ್ಪ್ರಾಣುದಂತ ತೇಷಾಂ ಯಾನ್ಯಂತರ್ಹಸ್ತೀನಾನಿ ವಸೂನ್ಯಾಸಂಸ್ತಾನ್ಯಾದಾಯ ಸಮುದ್ರಂ ಪ್ರೋಷ್ಯಂತ ತ ಏತೇನೈವ ಛಂದಸಾನುಹಾಯಾರ್ಂತರ್ಹಸ್ತೀನಾನಿ ವಸೂನ್ಯಾದದತ ತದ್ಯದೇತತ್ಪದಂ ಪುನಃ ಪದಂ ಸ ಏವಾಂಕುಶ ಆಸಂಜನಾಯ ॥**

ಪಾರುಚ್ಛೇಪೀಯಂ ಛಂದ ಉಪಾಖ್ಯಾನೇನ ಪ್ರಶಂಸತಿ—ದೇವಾಶ್ಚಸುರಾಶ್ಚಾ ಲೋಕವಿಷಯೇ ಯದಾ ಸಮಯತಂತ ಸಂಗ್ರಾಮಮಕುರ್ವತ ತದಾನೀಂ ತೇ ದೇವಾಃ ಷಷ್ಠಮಹರನುಷ್ಠಾಯ ತತ್ಸಾಮರ್ಥ್ಯೇನಾಸುರಾನ್ ಲೋಕೇಭ್ಯೋ ನಿಃಸಾರಿತವಂತಃ । ತದಾನೀಂ ತೇಷಾಮಸುರಾಣಾಂ ಸಂಬಂಧೀನಿ ವಸ್ತೂನಿ ಧನಾನಿ ಬಹೂನ್ಯಾಸನ್ । ಕೀದೃಶಾನ್ಯಂತರ್ಹಸ್ತೀನಾನಿ ಹಸ್ತಿನಾಂ ಗಜಾನಾಮುಪರಿ ಭಾರವಹನಾಯ ಸ್ಥಾಪಿತಾನಿ । ಯದ್ವಾ ಸ್ವಕೀಯಸ್ಯ ಹಸ್ತಸ್ಯಾಂತರ್ಮಧ್ಯೇ ಗೋಪ್ಯತ್ವೇನ ಸ್ಥಾಪಿತಾನ್ಯಂತರ್ಹಸ್ತೀನಾನಿ । ತಾನಿ ಸರ್ವಾಣ್ಯಾದಾಯಾಸುರಾಃ ಸಮುದ್ರಂ ಪ್ರಾಪ್ಯಂತ । ಸಮುದ್ರಂ ಗತವದ್ಭಿರಸುರೈಸ್ತಸ್ಮಿನ್ಸಮುದ್ರೇ ತಾನಿ ಧನಾನಿ ಪ್ರಕ್ಷಿಪ್ತಾನಿ । ತತೋ ದೇವಾ ಏತತ್ಪಾರುಚ್ಛೇಪೀಯಂ ಛಂದೋಽನುಷ್ಠಾಯ ತಸ್ಮಾತ್ಸಾಮರ್ಥ್ಯಾದನುಹಾಯ ಪೃಷ್ಠತೋ ಗತ್ವಾ ಹಸ್ತಿನಾಮುಪರಿಸ್ಥಿತಾನಿ ತದೀಯಹಸ್ತೇಽವಸ್ಥಿತಾನಿ ವಾ ಸರ್ವಾಣಿ ಧನಾನ್ಯಾದದತ ಸ್ವೀಕೃತವಂತಃ ॥ ಸಮುದ್ರಮಧ್ಯಸ್ಥಿತಾನಾಂ ಧನಾನಾಮಾಕರ್ಷಣೇ ಕಿಂ ಸಾಧನಮಿತಿ ತದುಚ್ಯತೇ । ತತ್ರತ್ರ ಪಾರುಚ್ಛೇಪೀಯಾಸ್ವೃಕ್ಷು ಯದೇತತ್ಪದಂ ಪಾಠೋಽಸ್ತಿ ಕೀದೃಶಂ ಪುನಃಪದಂ ಷಟ್ಸು ಪಾದೇಷು ಸಮಾಪ್ತೇಷು ಪುನಃ ಪಶ್ಚಾದುಚ್ಚಾರ್ಯಮಾಣಃ ಸುಮೃಳೀಕೋ ನ ಆಗಹೀತ್ಯೇವಂವಿಧಃ ಸಪ್ತಮಃ ಪಾದಃ । ಸ ಏವ ಧನಾನಾಮಾಸಂಜನಾಯಾಽಽಸಕ್ತಾನಿ ಕೃತ್ವಾ ಸಮಾಕರ್ಷಣಾಯಾಂಕುಶೋಽಭೂತ್ । ಯಥಾ ಲೋಕೇಽಂಕುಶೇನಾಕೃಷ್ಯತೇ ತದ್ವತ್ಸಪ್ತಮೇನ ಪಾದೇನಾಸುರಧನಾನ್ಯಾಕೃಷ್ಟಾನಿ ॥

ಪಾರುಚ್ಛೇಪೀಯ ಛಂದಸ್ಸುಗಳನ್ನು ಪೂರ್ವೇತಿಹಾಸದ ಮೂಲಕ ಪ್ರಶಂಸೆಮಾಡುವರು. ಪೂರ್ವದಲ್ಲಿ ಈ ಲೋಕವನ್ನು ಜಯಿಸಿ ಪಡೆದುಕೊಳ್ಳುವ ವಿಷಯದಲ್ಲಿ ದೇವತೆಗಳಿಗೂ ಅಸುರರಿಗೂ ದೊಡ್ಡ ಯುದ್ಧವು ನಡೆಯಿತು. ಆಗ ದೇವತೆಗಳು (ದ್ವಾದಶಾಹದ) ಈ ಆರನೇ ದಿನದ ಕಾರ್ಯಕಲಾಪಗಳನ್ನು ಮಾಡಿ ಮುಗಿಸಿ ಅವುಗಳ ಸಾಮರ್ಥ್ಯದಿಂದ ಅಸುರರನ್ನು ಈ ಲೋಕದಿಂದ ಓಡಿಸಿದರು. ಆ ಕಾಲದಲ್ಲಿ ಅಸುರರ ಹತ್ತರ ಉತ್ತಮವಾದ ಅನೇಕ ವಸ್ತುಗಳೂ ಬಹಳವಾದ ಧನಾದಿಸಂಪತ್ತೂ ಇದ್ದವು. ಈ ಧನಾದಿಗಳು ತಮ್ಮನ್ನು ಜಯಿಸಿದ ದೇವತೆಗಳ ಪಾಲಾಗಬಾರದೆಂದು ಅಸುರರು ಯೋಚಿಸಿ ಅವುಗಳನ್ನೆಲ್ಲಾ ಅನೇಕ ಆನೆಗಳ ಮೇಲೆ ಹೇರಿಕೊಂಡು ಹೊರಟುಹೋದರು. **ಅಂತರ್ಹಸ್ತೀನಾನಿ** ಎಂಬ ಪದಕ್ಕೆ ಆನೆಗಳಮೇಲೆ ಅಥವಾ ತಮ್ಮ ಹಸ್ತ(ಕೈ)ಗಳಲ್ಲಿ ಬಚ್ಚಿಟ್ಟುಕೊಂಡು ಎಂದು ಎರಡುವಿಧವಾಗಿ ಅರ್ಥಮಾಡಬಹುದು ಎಂದು ಭಾಷ್ಯಕಾರರು ಹೇಳಿದ್ದಾರೆ. ಅದರಂತೆ ಅಸುರರು ತಮ್ಮಬಳಿ ಇದ್ದ ಅಪಾರವಾದ ಧನರಾಶಿಯನ್ನು ತೆಗೆದುಕೊಂಡು ಸಮರಭೂಮಿಯಿಂದ ಓಡಿಹೋಗಿ ಆ ಧನವು ದೇವತೆಗಳಿಗೆ ಸಿಕ್ಕಬಾರದೆಂದು ನಿಶ್ಚಯಿಸಿ ಸಮುದ್ರವನ್ನು ಪ್ರವೇಶಿಸಿ ಅಲ್ಲಿ ಗೋಪ್ಯವಾಗಿ ಅವಿತುಕೊಂಡಿದ್ದರು. ಅನಂತರ ದೇವತೆಗಳು ಇದನ್ನು ತಿಳಿದು ಅಸುರರ ಈ ಧನವನ್ನು ಹೇಗೆ ಬರಮಾಡಿಕೊಳ್ಳಬೇಕೆಂದು ಚಿಂತಿಸಿ ಅಸುರರನ್ನು ಹಿಂಬಾಲಿಸಿ ಸಮುದ್ರದವರೆಗೂ ಹೋಗಿ ಅಲ್ಲಿ ಸಮುದ್ರದಲ್ಲಿರುವ ದ್ರವ್ಯವನ್ನು ಮೇಲೆ ತರುವುದಕ್ಕಾಗಿ ಪರುಚ್ಛೇಪಋಷಿದೃಷ್ಟವಾದ ಮಂತ್ರಗಳನ್ನು ಪಠಿಸಿ ಅವುಗಳ ಸಾಮರ್ಥ್ಯದಿಂದ ಸಮುದ್ರಮಧ್ಯದಲ್ಲಿ ಆನೆಗಳಮೇಲೆ ಹೇರಿ ರಹಸ್ಯವಾಗಿಟ್ಟದ್ದ ಧನಾದಿಗಳನ್ನು ಹಿಂದಕ್ಕೆ ಪಡೆದರು. ಪಾರುಚ್ಛೇಪೀಯ ಋಕ್ಕುಗಳಿಂದ ದೇವತೆಗಳು ಸಮುದ್ರಮಧ್ಯದಲ್ಲಿದ್ದ ಅಸುರರ ಧನವನ್ನು ಹಿಂದಕ್ಕೆ ಪಡೆಯಲು ಹೇಗೆ ಸಾಧ್ಯವಾಯಿತು ಎಂದರೆ ಈ ಪಾರುಚ್ಛೇಪೀಯ ಋಕ್ಕುಗಳಲ್ಲಿ (ಅಂತ್ಯದಲ್ಲಿ) ಆರು ಪಾದಗಳನ್ನು ಪಠಿಸಿದನಂತರ ಏಳನೇ ಪಾದದಲ್ಲಿ ಹಿಂದೆ ಪಠಿಸಿದ್ದನ್ನೇ ಮತ್ತೆ ಪಠಿಸಲಾಗಿರುವುದು ಹೇಗೆಂದರೆ ಒಂದು ಋಕ್ಕಿನಲ್ಲಿ (ಋ. ಸಂ. ೧-೧೩೯-೬) ಮೂರನೇ ಅರ್ಧದಲ್ಲಿ (ಪ್ರತಿ ಋಕ್ಕಿನಲ್ಲಿಯೂ) ಮೂರು ಮೂರು ಅರ್ಧಗಳಿರುವವು. ಮೊದಲನೆಯ ಅರ್ಧದಲ್ಲಿ ಮೂರು ಪಾದಗಳೂ, ಎರಡನೆಯ ಅರ್ಧದಲ್ಲಿ ಎರಡು ಪಾದಗಳೂ, ಮೂರನೆಯ ಅರ್ಧದಲ್ಲಿ ಎರಡು ಪಾದಗಳೂ ಇರುವವು. ಒಟ್ಟು ಮೂರು ಅರ್ಧಗಳಲ್ಲಿ ಏಳು ಪಾದಗಳು ಇರುವವು. ಮೂರನೆಯ ಅರ್ಧವು ಈರೀತಿ ಇರುವುದು— **ಗೀರ್ಭಿರ್ಗಿರ್ವಾಹಃ ಸ್ತವಮಾನ ಆ ಗಹಿ ಸುಮೃಳೀಕೋ ನ ಆ ಗಹಿ ॥** ಎಂದು ಇರುವುದು. ಇಲ್ಲಿ **ಆ ಗಹಿ** ಎಂಬ ಶಬ್ದಗಳು ಆರನೇ ಪಾದದಲ್ಲಿ ಪಠಿತವಾಗಿದ್ದರೂ ಪುನಃ ಏಳನೆಯ ಪಾದದಲ್ಲಿ ಪಠಿತವಾಗಿರುವುದು. ಈರೀತಿ ಇರುವುದರಿಂದ ಅಂಕುಶವು ವೃಕ್ಷಾಗ್ರದಲ್ಲಿರುವ ಫಲಾದಿವಸ್ತುವನ್ನು ತನ್ನ ಕೊಕ್ಕೆಯಿಂದ ಯಾವರೀತಿ ಆಕರ್ಷಿಸಿ ತರುವುದೋ ಅದರಂತೆ ಈ ಸಪ್ತಮಪಾದವು (ಅಂಕುಶದಂತೆ) ಸಮುದ್ರಮಧ್ಯದಲ್ಲಿರುವ ಅಸುರರ ಧನಾದಿಗಳನ್ನು ಆಕರ್ಷಿಸಿ ದೇವತೆಗಳ ಸಮೀಪಕ್ಕೆ ತರುವುದು ಎಂದಭಿಪ್ರಾಯವು. ಪಾರಚ್ಛೇಪೀಯ ಋಕ್ಕುಗಳಲ್ಲಿ ಆರನೇ ಪಾದದಲ್ಲಿ ಹೇಳಿರುವ ವಿಷಯವನ್ನೇ ಮತ್ತೆ ಏಳನೆಯ ಪಾದದಲ್ಲಿಯೂ ಪುನಃ ಪಠಿತವಾಗಿರುವುದರಿಂದ ಈ ಋಕ್ಕುಗಳಿಗೆ ಅಂಕುಶದಂತೆ ಸಾಮರ್ಥ್ಯವಿರುವುದೆಂದಭಿಪ್ರಾಯವು.

**ಆ ದ್ವಿಷತೋ ವಸು ದತ್ತೇ ನಿರೇನಮೇಭ್ಯಃ ಸರ್ವೇಭ್ಯೋ ಲೋಕೇಭ್ಯೋ ನುದತೇ ಯ ಏವಂ ವೇದ ॥**

**ವೇದನಂ ಪ್ರಶಂಸತಿ—ವೇದಿತಾ ದ್ವಿಷತಃ ಶತ್ರೋಃ ಸಂಬಂಧಿ ವಸು ಧನಂ ಸರ್ವಮಾದತ್ತೇ । ಏವಂ(ನಂ) ಚ ದ್ವಿಷಂತಂ ಶತ್ರುಂ ಲೋಕೇಭ್ಯೋ ನಿರ್ಣುದತೇ ನಿಃಸಾರಯತಿ ॥**

ಯಾವ ಪುರುಷನು ಮೇಲೆ ಹೇಳಿರುವ ವಿಷಯಗಳೆಲ್ಲವನ್ನೂ ತಿಳಿದು ಅದರಂತೆ ಆಚರಿಸುವನೋ ಅವನು ತನ್ನನ್ನು ದ್ವೇಷಿಸುವ ಶತ್ರುವಿನಿಂದ ಧನವನ್ನು ಕಿತ್ತುಕೊಳ್ಳಲು ಸಮರ್ಥನಾಗುವನು ಮತ್ತು ತನ್ನ ಶತ್ರುವನ್ನು ಈ ಲೋಕದಿಂದಲೂ ಹೊರದೂಡಲು ಸಮರ್ಥನಾಗುವನು.

*English Translation*

**(On the origin of the Paruchhepa verses)**

The Devas and Asuras waged war in these worlds. The Devas turned the Asuras by means of the sixth day's ceremonies out of these worlds. The Asuras seized all things which they could grasp, took them and threw them into the sea. The Devas following them behind, seized by means of this metre of the Paruchhepa verses which have seven padas all they (the Asuras) had grasped. Just this pada, viz. the additional pada (the seventh in the Paruchhepa verses) became a hook for the purpose of gathering the treasures (thrown into the sea by the Asuras). Therefore he who has this knowledge deprives his enemy of his fortune and turns him out of all these worlds.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾವಿಂಶಾಧ್ಯಾಯಸ್ಯ ಷಷ್ಠಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ಆರನೆಯ ಖಂಡವು ಸಮಾಪ್ತವಾದುದು.**



## ಅಥ ದ್ವಾವಿಂಶಾಧ್ಯಾಯೇ ಸಪ್ತಮಃ ಖಂಡಃ

**ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ಏಳನೆಯ ಖಂಡವು**



[ ಆರನೆಯ ದಿವಸದ ಕಾರ್ಯಕಲಾಪಗಳು ; ಪ್ರಾತಃಸವನ ಮತ್ತು ಮಾಧ್ಯಂದಿನ ಸವನಗಳಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳು.]



ದ್ಯೌರ್ವೈ ದೇವತಾ ಷಷ್ಠಮಹರ್ವಹತಿ ತ್ರಯಸ್ತ್ರಿಂಶಃ ಸ್ತೋಮೋ ರೈವತಂ ಸಾಮಾತಿಚ್ಛಂದಾಶ್ಛಂದೋ ಯಥಾದೇವತಮೇನೇನ ಯಥಾ-ಸ್ತೋಮಂ ಯಥಾಸಾಮ ಯಥಾಚ್ಛಂದಸಂ ರಾಧ್ನೋತಿ ಯ ಏವಂ ವೇದ ॥

ಇದಾನೀಂ ಷಷ್ಠಮಹರ್ವಿಧತ್ತೇ—ಪೂರ್ವತ್ರ ವಾಗೇಕಂ ಗೌರೇಕಂ ದ್ಯೌರೇಕಮಿತಿ ಯತ್ತೃತೀಯಂ ದೇವತಾಸ್ವರೂಪಮುಕ್ತಂ ಸೇಯಂ ದೇವತಾ ಷಷ್ಠಮಹರ್ನಿರ್ವಹತಿ । ತಥಾ ಸ್ತೋಮಾನಾಂ ಮಧ್ಯೇ ತ್ರಯಸ್ತ್ರಿಂಶಃ ಸ್ತೋಮೋ ನಿರ್ವಾಹಕಃ । ತಸ್ಯ ಸ್ತೋಮಸ್ಯ ರೂಪಂ ಛಂದೋಗೈರೇವಮಾಮ್ನಾಯತೇ—ಏಕಾದಶಭ್ಯೋ ಹಿಂ ಕರೋತಿ ಸ ತಿಸೃಭಿಃ ಸ ಸಪ್ತಭಿಃ ಸ ಏಕಯಾ । ಏಕಾದಶಭ್ಯೋ ಹಿಂ ಕರೋತಿ ಸ ಏಕಯಾ ಸತಿಸೃಭಿಃ ಸ ಸಪ್ತಭಿರೇಕಾದಶಭ್ಯೋ ಹಿಂ ಕರೋತಿ ಸ ಸಪ್ತಭಿಃ ಸ ಏಕಯಾ ಸ ತಿಸೃಭಿರಂತೋ ವೈ ತ್ರಯಸ್ತ್ರಿಂಶಃ '' ಇತಿ । ಅಸ್ಯಾಯಮರ್ಥಃ । ಏಕ ಏವ ತ್ರ್ಯೃಚಸ್ತ್ರಿಭಿಃ ಪರ್ಯಾಯೈರಾವರ್ತನೀಯಃ । ತತ್ರ ಪ್ರಥಮೇ ಪರ್ಯಾಯೇ ಪ್ರಥಮಾಯಾಸ್ತ್ರಿರಭ್ಯಾಸೋ ಮಧ್ಯಮಾಯಾಃ ಸಪ್ತಕೃತ್ವೋಽಭ್ಯಾಸ ಉತ್ತಮಾಯಾಃ ಸಕೃತ್ಪಾಠಃ । ದ್ವಿತೀಯಪರ್ಯಾಯೇ ಪ್ರಥಮಾಯಾಃ ಸಕೃತ್ಪಾಠೋ ಮಧ್ಯಮಾಯಾಸ್ತ್ರಿರಭ್ಯಾಸ ಉತ್ತಮಾಯಾಃ ಸಪ್ತಕೃತ್ವೋಭ್ಯಾಸಃ । ತೃತೀಯಪರ್ಯಾಯೇ ಪ್ರಥಮಾಯಾಃ ಸಪ್ತಕೃತ್ವೋಽಭ್ಯಾಸೋ ಮಧ್ಯಮಾಯಾಃ ಸಕೃತ್ಪಾಠ ಉತ್ತಮಾಯಾಸ್ತ್ರಿರಭ್ಯಾಸಃ । ಏವಂ ತ್ರಯಸ್ತ್ರಿಂಶಸ್ತೋಮನಿಷ್ಪತ್ತಿರಿತಿ । ರೇವತೀರ್ನಃ ಸಧಮಾದೇ, ಇತ್ಯಸ್ಯಾಮೃಚ್ಯುತ್ಪನ್ನಂ ಸಾಮರೈವತಂ । ಗಾಯತ್ರ್ಯಾದಿಭ್ಯಶ್ಛಂದೋಭ್ಯೋಽಕ್ಷರೈರಧಿಕತ್ವಾದತಿಚ್ಛಂದಾ ಇತಿ ಕಸ್ಯಚಿಚ್ಛಂದಸೋ ನಾಮಧೇಯಮ್ । ಅನ್ಯತ್ಪೂರ್ವವದ್ವ್ಯಾಖ್ಯೇಯಂ ॥

ಈಗ ಆರನೆಯ ದಿವಸದ ಕಾರ್ಯಕಲಾಪಗಳನ್ನು ವಿವರಿಸುವರು. ಹಿಂದೆ ಮಧ್ಯಮತ್ರ್ಯಹದ ಮೂರು ದಿನಗಳಲ್ಲಿ ನಾಲ್ಕನೇ ದಿನಕ್ಕೆ ವಾಕ್, ಐದನೆಯ ದಿನಕ್ಕೆ ಗೌಃ ಎಂದು ಹೇಳಿದೆಯಷ್ಟೆ. ಈ ಆರನೇ ದಿನಕ್ಕೆ ದ್ಯೌಃ ಎಂಬುದೇ ದೇವತೆಯು. ಈ ಮೂರು ವಾಗ್ದೇವತೆಯ ಮೂರು ಸ್ವರೂಪಗಳೆಂದೂ ಹಿಂದೆಯೇ ಹೇಳಲಾಗಿದೆ. ಈ ದಿನಕ್ಕೆ ಅನುರೂಪವಾದ ದ್ಯೌಃ ಎಂಬ ದೇವತೆಯು ಆರನೆಯ ದಿವಸದ ಕಾರ್ಯಗಳನ್ನು ನಿರ್ವಹಿಸುವುದು. ಆದ್ದರಿಂದ ಈ ಆರನೆಯ ದಿವಸಕ್ಕೆ ದ್ಯೌಃ ಎಂಬುವುದ ದೇವತೆಯು; ಸ್ತೋಮಗಳಲ್ಲಿ ತ್ರಯಸ್ತ್ರಿಂಶವೆಂಬ ಸ್ತೋಮವು ನಿರ್ವಾಹಕವು; ಈ ಸ್ತೋಮದ ರೂಪವನ್ನು ಛಂದೋಗರ ಎಂದರೆ ಸಾಮಗಾಯಕರು ಈರೀತಿ ಹೇಳುತ್ತಾರೆ—**ಏಕಾದಶಭ್ಯೋ ಹಿಂಕರೋತಿ ಸ ತಿಸೃಭಿಃ ಸಸಪ್ತಭಿಃ ಸ ಏಕಯಾ । ಏಕಾದಶಭ್ಯೋ ಹಿಂಕರೋತಿ ಸ ಏಕಯಾ ಸ ತಿಸೃಭಿಃ ಸಸಪ್ತಭಿಃ । ಏಕಾದಶಭ್ಯೋ ಹಿಂಕರೋತಿ ಸ ಸಪ್ತಭಿಃ ಸ ಏಕಯಾ ಸ ತಿಸೃಭಿಃ ।** ಅಂತೋ ವೈ ತ್ರಯಸ್ತ್ರಿಂಶಃ ಎಂದು ಇದರ ಅರ್ಥವು. ಒಂದು ತೃಚದಲ್ಲಿ ಮೂರು ಋಕ್ಕುಗಳಿರುವವು. ಈ ಮೂರು ಋಕ್ಕುಗಳನ್ನೂ ಮೂರು ಪರ್ಯಾಯಗಳಲ್ಲಿ ಒಟ್ಟು ಹನ್ನೊಂದಾವರ್ತಿಯಾಗುವಂತೆ ಆವರ್ತನೆಯಿಂದ ಗಾನಮಾಡುವರು. ಈ ಮೂರು ಪರ್ಯಾಯಗಳಿಂದ ಒಟ್ಟು (೧೧×೩=೩೩) ಮೂವತ್ತಮೂರು ಋಕುಗಳಾಗುವುದರಿಂದ ಈ ಸ್ತೋಮಕ್ಕೆ ತ್ರಯಸ್ತ್ರಿಂಶಸ್ತೋಮವೆಂಬ ಹೆಸರು ಬಂದಿರುವುದು ಪ್ರಥಮ ಪರ್ಯಾಯದಲ್ಲಿ ತೃಚದಲ್ಲಿರುವ ಮೂರು ಋಕ್ಕುಗಳಲ್ಲಿ ಮೊದಲನೆಯ ಋಕ್ಕನ್ನು ಮೂರಾವರ್ತಿಯೂ, ಎರಡನೆಯ ಋಕ್ಕನ್ನು ಏಳಾವರ್ತಿಯೂ, ಮೂರನೆಯ ಋಕ್ಕನ್ನು ಒಂದಾವರ್ತಿಯೂ ಪಠಿಸಬೇಕು. (೩+೭+೧=೧೧); ಇದು ಪ್ರಥಮ ಪರ್ಯಾಯವು. ದ್ವಿತೀಯ ಪರ್ಯಾಯದಲ್ಲಿ—ಪ್ರಥಮ ಋಕ್ಕನ್ನು ಮೊದಲನೆಯ ಋಕ್ಕನ್ನು ಒಂದಾವರ್ತಿಯೂ, ಎರಡನೆಯ ಋಕ್ಕನ್ನೂ ಮೂರಾವರ್ತಿಯೂ, ಮೂರನೆಯ ಋಕ್ಕನ್ನು ಏಳಾವರ್ತಿಯೂ ಗಾನಮಾಡಬೇಕು. ಇದು ದ್ವಿತೀಯ ಪರ್ಯಾಯಕ್ರಮವು. (೧+೩+೭=೧೧) ಮೂರನೆಯ ಪರ್ಯಾಯದಲ್ಲಿ ಮೊದಲ ಋಕ್ಕನ್ನು ಏಳಾವರ್ತಿಯೂ, ಎರಡನೇ ಋಕ್ಕನ್ನು ಒಂದಾವರ್ತಿಯೂ, ಮೂರನೆಯ ಋಕ್ಕನ್ನು ಮೂರಾವರ್ತಿಯೂ ಗಾನಮಾಡಬೇಕು. (೭+೧+೩=೧೧) ಇದು ತೃತೀಯ ಪರ್ಯಾಯವು. ಈ ಮೂರು

ಪರ್ಯಾಯಗಳಿಂದ ರತ್ರಯಸ್ತ್ರಿಂಶಸ್ತೋಮಕ್ಕೆ (೧೧×೩=೩೩) ಮೂವತ್ತಮೂರು ಋಕ್ಕುಗಳಿರುವವು. **ರೇವತೀರ್ನಃ ಸಧಮಾದೇ** ಎಂಬ ಋಕ್ಕಿನಿಂದ ನಿಷ್ಪನ್ನವಾದ ಸಾಮಕ್ಕೆ ರೈವತಂ ಎಂದು ಹೆಸರು. ಗಾಯತ್ರ್ಯಾದಿ ಛಂದಸ್ಸುಗಳಿಗಿಂತ ಅಧಿಕಾಕ್ಷರಗಳಿರುವ ಛಂದಸ್ಸಿಗೆ **ಅತಿಚ್ಛಂದ**ವೆಂದು ಹೆಸರು. ಇವೆಲ್ಲವೂ ಆರನೆಯ ದಿವಸದ ದೇವತೆ, ಸ್ತೋಮ, ಸಾಮ ಮತ್ತು ಛಂದಸ್ಸುಗಳು ಇವು ಆರನೆಯ ದಿನದ ಕಾರ್ಯಕಲಾಪಗಳನ್ನು ನಿರ್ವಹಿಸುವವು. ಆದ್ದರಿಂದ ಯಾವ ಪುರುಷನು ಈ ಆರನೆಯ ದಿವಸದ ದೇವತೆ, ಸ್ತೋಮ, ಸಾಮ ಮತ್ತು ಛಂದಸ್ಸುಗಳ ವಿವರಗಳನ್ನು ತಿಳಿದು ಅದರಂತೆ ಆಚರಿಸುವನೋ ಅವನು ಸರ್ವ ಸಮೃದ್ಧಿಯನ್ನೂ ಪಡೆದು ಸುಖಿಸುವನು.

ಯದ್ವೈ ಸಮಾನೋದರ್ಕಂ ತತ್ಷಷ್ಠಸ್ಯಾಹ್ನೋ ರೂಪಂ ಯದ್ಧ್ಯೇವ ತೃತೀಯಮಹಸ್ತದೇತತ್ಪುನರ್ಯತ್ಷಷ್ಠಂ ಯದಶ್ವವದ್ಯದಂತವದ್ಯತ್ಪುನರಾವೃತ್ತಂ ಯತ್ಪುನರ್ನಿನೃತ್ತಂ ಯದ್ರತವದ್ಯತ್ಪರ್ಯಸ್ತವದ್ಯತ್ತ್ರಿವದ್ಯದಂತರೂಪಂ ಯದುತ್ತಮೇ ಪದೇ ದೇವತಾ ನಿರುಚ್ಯತೇ ಯದಸೌ ಲೋಕೋಽಭ್ಯುದಿತಃ ॥

**ಅತ್ರ ಶಸ್ತ್ರಗತಮಂತ್ರಲಿಂಗಾನಿ ದರ್ಶಯತಿ— ಸಮಾನೋದರ್ಕಂ ತುಲ್ಯಸಮಾಪ್ತಿಕಂ ಯದಸ್ತಿ ತತ್ ಷಷ್ಠಸ್ಯಾಹ್ನೋ ರೂಪಂ । ಯದ್ಧ್ಯೇವ ಯದಪ್ಯನ್ಯತ್ಪೂರ್ವತ್ರ ಪ್ರಥಮೇ ತ್ರ್ಯಹೇ ತೃತೀಯಮಹರಸ್ತಿ ತದೇತತ್ಪುನರತ್ರಾನುಸಂಧೇಯಂ । ಯದಿದಾನೀಂ ಷಷ್ಠಮಹಃ ಪ್ರಸ್ತೂಯತೇ ತದೇವ ಭವತಿ ಪೂರ್ವಸ್ಮಿಂಸ್ತೃತೀಯೇಽಹನಿ ಯದ್ಯಲ್ಲಿಂಗಮುಕ್ತಂ ತತ್ ಷಷ್ಠೇಽಪಿ ದ್ರಷ್ಟವ್ಯಮಿತ್ಯರ್ಥಃ । ಯದಶ್ವವದಿತ್ಯಾದಿನಾ ಯದಸೌ ಲೋಕೋಽಭ್ಯುದಿತ ಇತ್ಯಂತೇನ ತಾನ್ಯೇವ ಲಿಂಗಾನಿ ದರ್ಶಿತಾನಿ ॥**

ಈ ಆರನೆಯ ದಿವಸದಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳಲ್ಲಿರುವ ಲಕ್ಷಣಗಳನ್ನು ತಿಳಿಸುವರು. ಇಲ್ಲಿ **ಸಮಾನೋದರ್ಕಂ** ಎಂದರೆ ಮಂತ್ರಗಳ ಪರಿಸಮಾಪ್ತಿಯು ಒಂದೇ ವಿಧವಾಗಿರುವುದು. ಇದು ಆರನೆಯ ದಿನದ ಲಕ್ಷಣವು. **ಯದ್ಧ್ಯೇವ** ಎಂದರೆ ಹಿಂದೆ ಮೂರನೆಯ ದಿವಸದಲ್ಲಿ ಆ ದಿವಸದ ಲಕ್ಷಣಗಳು ಯಾವರೀತಿ ಇರುವುದೋ ಅದೇ ಲಕ್ಷಣಗಳು ಆರನೇ ದಿನದಲ್ಲಿಯೂ ಇರುವವು. ಅಶ್ವ, ಅಂತ, ಪುನರಾವೃತ್ತವಾದ ಶಬ್ದ ಮತ್ತು ನಿನೃತ್ತಂ, ರತ, ಪರ್ಯಸ್ತ ತ್ರಿಶಬ್ದ, ಕೊನೆಯರೂಪ, ಋಕ್ಕಿನ ಕೊನೆಯಪಾದದಲ್ಲಿ ನಿರ್ದಿಷ್ಟದೇವತೆಯ ಹೆಸರಿರುವುದು, ಇವುಗಳೆಲ್ಲಾ (ಎಂದರೆ ಮೂರನೆಯ ದಿವಸದಲ್ಲಿ ಯಾವ ಯಾವ ಲಕ್ಷಣಗಳಿರಬೇಕೆಂದು ಹಿಂದೆ ತಿಳಿಸಲಾಗಿದೆಯೋ ಆ ಲಕ್ಷಣಗಳೆಲ್ಲಾ) ಈ ಆರನೆಯ ದಿವಸದಲ್ಲಿಯೂ ಇರಬೇಕು.

ಯತ್ಪಾರುಚ್ಛೇಪಂ ಯತ್ಸಪ್ತಪದಂ ಯನ್ನಾರಾಶಂಸಂ ಯನ್ನಾಭಾನೇದಿಷ್ಠಂ ಯದ್ರೈವತಂ ಯದತಿಚ್ಛಂದಾ ಯತ್ಕೃತಂ ಯತ್ತೃತೀಯಸ್ಯಾಹ್ನೋ ರೂಪಮೇತಾನಿ ವೈ ಷಷ್ಠಸ್ಯಾಹ್ನೋ ರೂಪಾಣಿ ॥

**ಅಥ ವಿಶೇಷಲಿಂಗಾನಿ ದರ್ಶಯತಿ— ಪರುಚ್ಛೇಪೇನ ದೃಷ್ಟಂ ಪಾರುಚ್ಛೇಪಂ । ಸಪ್ತಭಿಃ ಪಾದೈರುಪೇತಂ ಸಪ್ತಪದಂ । ನರಾಶಂಸಾಖ್ಯಮಂತ್ರಸಂಬಂಧಿ ನಾರಾಶಂಸಂ । ನಾಭಾನೇದಿಷ್ಠೇನ**

**ದೃಷ್ಟಂ ನಾಭಾನೇದಿಷ್ಠಂ । ರೈವತಸಾಮಸಂಬಂಧಿ ರೈವತಂ । ಸಪ್ತಭ್ಯಶ್ಛಂದೋಭ್ಯೋಽಧಿಕಾಕ್ಷ-ರತ್ವಾದತಿಚ್ಛಂದಾಃ । ಭೂತಾರ್ಥವಾಚಿ ಪ್ರತ್ಯಯಯುಕ್ತಂ ಧಾತುಮಾತ್ರಂ ಕೃತಂ ತದಪ್ಯುಕ್ತ-ಮನುಕ್ತಂ ವಾ ತೃತೀಯಸ್ಯಾಹ್ನೋ ನಿರೂಪಕಂ । ಏತಾನಿ ಸರ್ವಾಣಿ ಷಷ್ಠಸ್ಯಾಹ್ನೋ ನಿರೂಪ-ಕಾಣಿ ವೇದಿತವ್ಯಾನಿ ॥**

ಈ ಆರನೇ ದಿನದ ಶಸ್ತ್ರಮಂತ್ರಗಳ ವಿಶೇಷಲಕ್ಷಣಗಳನ್ನು ತಿಳಿಸುವರು. ಪರುಚ್ಛೇಪಋಷಿಯಿಂದ ದೃಷ್ಟವಾದ ಸೂಕ್ತಕ್ಕೆ ಪಾರಚ್ಛೇಪವೆಂದು ಹೆಸರು. ಏಳುಪಾದಗಳಿಂದ ಕೂಡಿರುವ ಋಕ್ಕಿಗೆ ಸಪ್ತಪದಂ ಎಂದು ಹೆಸರು. ನರಾಶಂಸಾಖ್ಯಮಂತ್ರ ಸಂಬಂಧಿಯಾದ ಸೂಕ್ತಕ್ಕೆ ನಾರಾಶಂಸವೆಂದು ಹೆಸರು. ನಾಭಾನೇದಿಷ್ಠಋಷಿಯಿಂದ ದೃಷ್ಟವಾದ ಸೂಕ್ತಕ್ಕೆ ನಾಭನೇದಿಷ್ಠವೆಂದು ಹೆಸರು. ರೈವತಸಾಮಸಂಬಂಧಿಯಾದ ಸಾಮಕ್ಕೆ ರೈವತವೆಂದು ಹೆಸರು. ರೂಢಿಯಲ್ಲಿರುವ ಗಾಯತ್ರ್ಯಾದಿ ಏಳುಛಂದಸ್ಸು ಗಳಲ್ಲಿರುವ ಅಕ್ಷರ ಸಂಖ್ಯೆಗಿಂತ ಹೆಚ್ಚಾಗಿರುವ ಛಂದಸ್ಸಿಗೆ ಅತಿಚ್ಛಂದಾಃ ಎಂದು ಹೆಸರು. ಭೂತಾರ್ಥಕಾಲವನ್ನು ಸೂಚಿಸುವ ಕೃತಂ ಅಥವಾ ಪೇಳಲಿ, ಹೇಳದಿರಲಿ ಭೂತಾರ್ಥವನ್ನು ಸೂಚಿಸುವ ಧಾತುವು ಇವೆಲ್ಲವೂ ಮೂರನೆಯ ದಿವಸದಲ್ಲಿರಬೇಕಾದ ಇತರ ಲಕ್ಷಣಗಳು, ಇವೆಲ್ಲವೂ ಸೇರಿ ಆರನೆಯ ದಿವಸದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳೆಂದು ತಿಳಿಯಬೇಕು.

ಅಯಂ ಜಾಯತ ಮನುಷೋ ಧರೀಮಣೀತಿ ಷಷ್ಠಸ್ಯಾಹ್ನ ಆಜ್ಯಂ ಭವತಿ ಪಾರುಚ್ಛೇಪಮತಿಚ್ಛಂದಾಃ ಸಪ್ತಪದಂ ಷಷ್ಠೇಽಹನಿ ಷಷ್ಠ-ಸ್ಯಾಹ್ನೋರೂಪಂ ॥

**ಅಥಾಜ್ಯಶಸ್ತ್ರಂ ವಿಧತ್ತೇ—ಪರುಚ್ಛೇಪೇನ ದೃಷ್ಟತ್ವಮೇಕಂ ಲಿಂಗಂ । ಅತಿಚ್ಛಂದಸ್ತ್ವಂ ದ್ವಿತೀಯಂ । ಸಪ್ತಪಾದೋಪೇತತ್ವಂ ತೃತೀಯಂ । ಏತೇನ ಲಿಂಗತ್ರಯೇಣ ಷಷ್ಠಸ್ಯಾಹ್ನೋ ನಿರೂಪಕಂ ॥**

ಈಗ ಆರನೇ ದಿನದ, ಆಜ್ಯಶಸ್ತ್ರವನ್ನು ವಿವರಿಸುವರು. **ಅಯಂಜಾಯತ ಮನುಷೋ ಧರೀಮಣಿ** (ಋ. ಸಂ ೧-೧೨೮-೧) ಎಂಬ ಸೂಕ್ತವು ಈ ಆರನೆಯ ದಿವಸದ ಆಜ್ಯಶಸ್ತ್ರವು. ಈ ಸೂಕ್ತದ ಮಂತ್ರಗಳು ಪರುಚ್ಛೇಪಋಷಿಯಿಂದ ದೃಷ್ಟವಾದ್ದರಿಂದ ಪಾರುಚ್ಛೇಪವು; ಈ ಋಕ್ಕುಗಳ ಅತ್ಯಷ್ಟಿ ಎಂಬ ಹೆಸರಿನ ಅತಿಚ್ಛಂದಾಃ ಎಂಬ ಛಂದಸ್ಸಿನವು. ಈ ಋಕ್ಕುಗಳಲ್ಲಿ ಪ್ರತಿಯೊಂದರಲ್ಲಿಯೂ ಏಳು ಏಳು ಪಾದಗಳಿರುವುದರಿಂದ ಸಪ್ತಪದಂ ಏಳು ಪಾದಗಳುಳ್ಳವು. ಇವುಗಳೆಲ್ಲಾ ಆರನೆಯ ದಿವಸದ ಲಕ್ಷಣಗಳು.

ಸ್ತೀರ್ಣಂ ಬರ್ಹಿರುಪ ನೋ ಯಾಹಿ ವೀತಯ ಆ ವಾಂ ರಥೋ ನಿಯುತ್ವಾನ್ವಕ್ಷ ದವಸೇ ಸುಷುಮಾಯಾತಮದ್ರಿಭಿರ್ಯುರ್ವಾಂ ಸ್ತೋಮೇಭಿರ್ದೇವಯಂತೋ ಅಶ್ವಿನಾಽವರ್ಮಹ ಇಂದ್ರ ವೃಷ-ನ್ನಿಂದ್ರಾಸ್ತು ಶ್ರೌಷಳೋಷೂಣೋ ಆಗ್ನೇ ಶೃಣುಹಿ ತ್ವಮೀಳಿತೋ ಯೇ ದೇವಾಸೋ ದಿವ್ಯೇಕಾದಶಸ್ಥೇಯಮದದಾದ್ರಭಸಮ್ಣಣ-

**ಚ್ಯುತಮಿತಿ ಪ್ರಉಗಂ ಪಾರುಚ್ಛೇಪಮತಿಚ್ಛಂದಾಃ ಸಪ್ತಪದಂ ಷಷ್ಠೇಽಹನಿ ಷಷ್ಠಸ್ಯಾಹ್ನೋ ರೂಪಂ ॥**

ಅಥ ಪ್ರಉಗಶಸ್ತ್ರಂ ವಿಧತ್ತೇ--ಸ್ತೀರ್ಣಂ ಬರ್ಹಿರಿತ್ಯಾದ್ಯಸ್ತ್ರ್ಯೃಚ ಆ ವಾಂ ರಥ ಇತಿ ದ್ವಿತೀಯಃ ಸುಷುಮಾಯಾತಮಿತಿ ತೃತೀಯೋ ಯುವಾಂ ಸ್ತೋಮೇಭಿರಿತಿ ಚತುರ್ಥೋಽವರ್ಮಹ ಇತಿ ದ್ವೇ ಋಚೌ ವೃಷನ್ನಿಂದ್ರೇತ್ಯೇಕೋಭಾಭ್ಯಾಂ ಪಂಚಮಸ್ತ್ರ್ಯೃಚಃ। ಅಸ್ತು ಶ್ರೌಷಳಿತ್ಯೇಕಾ । ಓಷೂಣ ಇತ್ಯೇಕಾ ಯೇ ದೇವಾಸ ಇತ್ಯೇಕಾ । ಏತತ್ತ್ರಿತಯಂ ಷಷ್ಠಃ । ಇಯಮದದಾದಿತಿ ಸಪ್ತಮಃ । ಇತ್ಯೇತತ್ಸರ್ವಂ ಪ್ರಉಗಶಸ್ತ್ರಂ ಕುರ್ಯಾತ್ । ಲಿಂಗಾನಿ ಪೂರ್ವವತ್ ॥

ಈಗ ಆರನೇದಿನದಲ್ಲಿ ಪಠಿಸಬೇಕಾದ ಪ್ರಉಗಶಸ್ತ್ರವನ್ನು ವಿವರಿಸುವರು. **ಸ್ತೀರ್ಣಂ ಬರ್ಹಿರುಪ ನೋ ಯಾಹಿವೀತಯೇ** (ಋ. ಸಂ. ೧-೧೩೫-೧), **ಆ ವಾಂ ರಥೋನಿಯುತ್ವಾನ್ವಕ್ಷದವಸೇ** (ಋ. ಸಂ. ೧-೧೩೫-೪) **ಸುಷುಮಾಯಾತಮದ್ರಿಭಿಃ** (ಋ. ಸಂ. ೧-೧೩೭-೧); **ಯುವಾಂಸ್ತೋಮೇಭಿರ್ದೇವಯಂತಃ** (ಋ. ಸಂ. ೧-೧೩೯-೩), **ಅವರ್ಮಹ ಇಂದ್ರ** (ಋ. ಸಂ. ೧-೩೩-೯), **ವೃಷನ್ನಿಂದ್ರ ವೃಷಣಾ** (ಋ. ಸಂ. ೧-೧೩೯-೯) **ಅಸ್ತು ಶ್ರೌಷಟ್ ಪುರೋ ಅಗ್ನಿಂ** (ಋ. ಸಂ. ೧-೧೩೯-೧), **ಓಷೂಣೋ ಅಗ್ನೇ** (೧-೧೩೯-೭), **ಯೇ ದೇವಾಸೋ ದಿವ್ಯೇಕಾದಶಸ್ಥ** (ಋ. ಸಂ. ೧-೧೩೦-೧೧) **ಇಯಮದದಾದ್ರಭಸಂ** (ಋ. ಸಂ. ೬-೬೧-೧), ಈ ಮಂತ್ರಗಳೆಲ್ಲವೂ ಸೇರಿ ಪ್ರಉಗಶಸ್ತ್ರವಾಗುವುದು. ಈ ಮಂತ್ರಗಳು ಪರುಚ್ಛೇಪಋಷಿದೃಷ್ಟವಾದವು. ಇವು ಅತಿಚ್ಛಂದಾಃ ಎಂಬ ಛಂದಸ್ಸುವು ಮತ್ತು ಈ ಋಕ್ಕುಗಳಲ್ಲಿ ಏಳು ಏಳು ಪಾದಗಳಿರುವವು. ಆದ್ದರಿಂದ ಈ ಮಂತ್ರಗಳಲ್ಲಿ ಆರನೆಯ ದಿವಸದಲ್ಲಿರಬೇಕಾದ ಲಕ್ಷಣಗಳಿದ್ದಂತಾಯಿತು.

**ಸ ಪೂರ್ವ್ಯೋ ಮಹಾನಾಮಿತಿ ಮರುತ್ವತೀಯಸ್ಯ ಪ್ರತಿಪದಂತೋ ವೈ ಮಹದಂತಃ ಷಷ್ಠಮಹಃ ಷಷ್ಠೇಽಹನಿ ಷಷ್ಠಸ್ಯಾಹ್ನೋ ರೂಪಂ ॥**

ಶಸ್ತ್ರಾಂತರಸ್ಯ ಪ್ರತಿಪದಂ ತ್ರ್ಯೃಚಂ ವಿಧತ್ತೇ—ಅತ್ರ ಮಹಾನಾಮಿತಿ ಮಹಚ್ಛಬ್ದಃ ಪಾದಸ್ಯಾಂತೇ ದೃಶ್ಯತೇ । ಷಷ್ಠಂ ಚಾಹಃ ಪೃಷ್ಠ್ಯಾಖ್ಯಸ್ಯ ಷಡಹಸ್ಯಾಂತೋ ಭವತಿ । ತಸ್ಮಾದಂತತ್ವಲಿಂಗೇನ ಷಷ್ಠೇಽಹನಿ ಯೋಗ್ಯಂ । ಯದ್ವಾ ಮಹತೋಽಪ್ಯಧಿಕಸ್ಯಾನ್ಯಸ್ಯಾಭಾವಾನ್ಮಹದಂತ ಇತ್ಯಂತವತ್ತ್ವಂ ವ್ಯಾಖ್ಯೇಯಂ ॥

ಈಗ ಮರುತ್ವತೀಯ ಶಸ್ತ್ರದ ಪ್ರತಿಪತ್ ಋಕ್ಕನ್ನು ತಿಳಿಸುವರು **ಸ ಪೂರ್ವ್ಯೋ ಮಹಾ ನಾಂ** (ಋ. ಸಂ. ೮-೬೩-೧) ಎಂಬ ಋಕ್ಕು ಮರುತ್ವತೀಯ ಶಸ್ತ್ರದ ಪ್ರತಿಪತ್ ಎಂದರೆ ಮೊದಲನೇ ಋಕ್ಕು. ಇಲ್ಲಿ **ಮಹಾನಾಮಿತಿ** ಎಂದು ಮಹಚ್ಛಬ್ದವು ಪಾದದ ಕೊನೆಯಲ್ಲಿರುವುದು. **ಷಷ್ಠಂ ಚಾಹಃ** ಎಂದು ಆರನೆಯ ದಿನಸದ ಅಂತ್ಯವೂ ಇರುವುದು. ಅಥವಾ ಮಹತ್ ಎಂಬ ಶಬ್ದಕ್ಕಿಂತ ಅಧಿಕವಾದ ವಸ್ತುವಿಲ್ಲದ್ದರಿಂದ ಮಹತ್ ಎಂಬ ಶಬ್ದವೇ ವಸ್ತುಗಳಿಗೆ ಅಂತ್ಯವು. ಈ ಅಂತ್ಯಾರ್ಥ ವಿರುವುದರಿಂದಲೂ ಈ ಮಂತ್ರದಲ್ಲಿ ಆರನೆಯ ದಿವಸ ಪಠಿಪಬೇಕಾದ ಮಂತ್ರಗಳ ಲಕ್ಷಣವಿದ್ದಂತಾಯಿತು.

**ತ್ರಯ ಇಂದ್ರಸ್ಯ ಸೋಮಾ ಇಂದ್ರ ನೇದೀಯ ಏದಿಹಿ ಪ್ರ ನೂನಂ ಬ್ರಹ್ಮಣಸ್ಪತಿರಗ್ನಿರ್ನೇತಾ ತ್ವಂ ಸೋಮ ಕ್ರತುಭಿಃ ಪಿನ್ವಂತ್ಯಪೋ ನಕಿಃ ಸುದಾಸೋರಥಮಿತಿ ತೃತೀಯೇನಾಹ್ನಾ ಸಮಾನ ಆತಾನಃ ಷಷ್ಠೇऽಹನಿ ಷಷ್ಠಸ್ಯಾಹ್ನೋ ರೂಪಂ ॥**

**ತೃತೀಯೇನಾಹ್ನಾ ಸಹ ಸಮಾನಶಸ್ತ್ರಕ್ಲಪ್ತಿಯುಕ್ತಂ ಮಂತ್ರಜಾತಂ ದರ್ಶಯತಿ—**

ಮೂರನೆಯ ದಿವಸದ ಮಂತ್ರಗಳಿರುವ ಸಮಾನಲಕ್ಷಣಗಳುಳ್ಳ ಆರನೆಯ ದಿವಸದ ಶಸ್ತ್ರಮಂತ್ರಗಳನ್ನು ತಿಳಿಸುವರು **ತ್ರಯ ಇಂದ್ರಸ್ಯಸೋಮಾಃ** (ಋ. ಸಂ. ೮-೨-೭); **ಇಂದ್ರ ನೇದೀಯ ಏದಿಹಿ** (ಋ. ಸಂ. ೮-೫೩-೫); **ಪ್ರ ನೂನಂ ಬ್ರಹ್ಮಣ ಸ್ಪತಿಃ** (ಋ. ಸಂ. ೧-೪೦-೫); **ಅಗ್ನಿರ್ನೇತಾ ಭಗ ಇವ** (ಋ. ಸಂ. ೩-೨೦-೪); **ತ್ವಂ ಸೋಮ ಕ್ರತುಭಿಃ** (ಋ.ಸಂ. ೧-೯೧-೨); **ಪಿನ್ವಂತ್ಯಪೋ ಮರುತಃ** (ಋ.ಸಂ. ೧-೯೪-೯); **ನಕಿಃ ಸುದಾಸೋ ರಥಂ** (ಋ.ಸಂ. ೭-೩೨-೧); ಈ ಋಕ್ಕುಗಳನ್ನು ಮೂರನೇ ದಿನದಲ್ಲಿ ಉಪಯೋಗಿಸಲಾಗಿದೆ. ಇವುಗಳನ್ನು ಈ ಆರನೆಯ ದಿನದಲ್ಲಿಯೂ ಉಪಯೋಗಿಸುವುದರಿಂದ ಈ ಋಕ್ಕುಗಳೆಲ್ಲವನ್ನೂ ಮೂರು ಮತ್ತು ಆರನೆಯ ದಿವಸ ಉಪಯೋಗಿಸುವುದರಿಂದ ಇವುಗಳೆಲ್ಲವೂ ಸಮಾನ ಆತಾನವೆನಿಸುವವು. ಸಮಾನ ಉಪಯೋಗವೆಂಬ ಲಕ್ಷಣವೇ ಈ ಆರನೆಯ ದಿವಸದಲ್ಲಿದ್ದಂತಾಯಿತು.

**ಯಂ ತ್ವಂ ರಥಮಿಂದ್ರ ಮೇಧಸಾತಯ ಇತಿ ಸೂಕ್ತಂ ಪಾರುಚ್ಛೇಪಮತಿಚ್ಛಂದಾಃ ಸಪ್ತಪದಂ ಷಷ್ಠೇऽಹನಿ ಷಷ್ಠಸ್ಯಾಹ್ನೋ ರೂಪಂ ॥**

**ಪರುಚ್ಛೇಪೇನ ದೃಷ್ಟಂ ಸೂಕ್ತಂ ದರ್ಶಯತಿ—**

ಪರುಚ್ಛೇಪಋಷಿದೃಷ್ಟವಾದ ಸೂಕ್ತವನ್ನು ತಿಳಿಸುವರು. **ಯಂ ತ್ವಂ ರಥಮಿಂದ್ರ ಮೇಧಸಾತಯೇ** (ಋ. ಸಂ. ೧-೧೨೯-೧) ಎಂಬ ಸೂಕ್ತವು ಪರುಚ್ಛೇಪಋಷಿದೃಷ್ಟವಾದುದು. ಇದು ಅತಿಚ್ಛಂದಾಃ ಎಂಬ ಛಂದಸ್ಸವು. ಈ ಸೂಕ್ತದ ಪ್ರತಿಯೊಂದು ಋಕ್ಕಿನಲ್ಲಿಯೂ ಏಳು ಪಾದಗಳಿರುವವು ಆದ್ದರಿಂದ ಈ ಲಕ್ಷಣಗಳೆಲ್ಲವೂ ಆರನೆಯ ದಿವಸ ಪಠಿಸುವ ಮಂತ್ರಗಳಲ್ಲಿದ್ದಂತಾಯಿತು.

**ಸ ಯೋ ವೃಷಾ ವೃಷ್ಣ್ಯೇಭಿಃ ಸಮೋಕಾ ಇತಿ ಸೂಕ್ತಂ ಸಮಾನೋದರ್ಕಂ ಷಷ್ಠೇऽಹನಿ ಷಷ್ಠಸ್ಯಾಹ್ನೋ ರೂಪಂ ॥**

**ತುಲ್ಯಾವಸಾನತ್ವಲಿಂಗೋಪೇತಂ ಸೂಕ್ತಂ ದರ್ಶಯತಿ— ಮರುತ್ವಾನ್ನೋ ಭವತ್ವಿತ್ಯಸ್ಯ ಚತುರ್ಥಪಾದಸ್ಯ ಸರ್ವಾಸ್ವೃಕ್ಷು ವಿದ್ಯಮಾನತ್ವಾತ್ಸಮಾನೋದರ್ಕತ್ವಂ ॥**

**ಸ ಯೋ ವೃಷಾ ವೃಷ್ಣ್ಯೇಭಿಃ ಸಮೋಕಾಃ** (ಋ. ಸಂ. ೧-೧೦೦-೧) ಎಂಬ ಸೂಕ್ತದಲ್ಲಿ ಪ್ರತಿ ಋಕ್ಕಿನ ಕೊನೆಯ ಪಾದದಲ್ಲಿಯೂ **ಮರುತ್ವಾನ್ನೋ ಭವತ್ವಿಂದ್ರ ಊತೀ** ಎಂದಿರುವುದರಿಂದ ಈ ಸೂಕ್ತದ ಋಕ್ಕುಗಳೆಲ್ಲವೂ **ಸಮಾನೋದರ್ಕವು** ಎಂದರೆ ಒಂದೇವಿಧವಾದ (ಸಮಾನವಾದ) ಪರಿಸಮಾಪ್ತಿಯುಳ್ಳವುಗಳು. ಆದ್ದರಿಂದ ಇವುಗಳನ್ನು ಆರನೇ ದಿನದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳು ಇಲ್ಲಿದ್ದಂತಾಯಿ.

**ಇಂದ್ರ ಮರುತ್ವ ಇಹ ಪಾಹಿ ಸೋಮಮಿತಿ ಸೂಕ್ತಂ ತೇಭಿಃ ಸಾಕಂ ಪಿಬತು ವೃತ್ರಖಾದ ಇತ್ಯಂತೋ ವೈ ಖಾದೋಽನ್ತಃ ಷಷ್ಠಮಹಃ ಷಷ್ಠೇಽಹನಿ ಷಷ್ಠಸ್ಯಾಹ್ನೋ ರೂಪಂ ॥**

ತ್ರ್ಯೃಚಾತ್ಮಕಂ ಸೂಕ್ತಾಂತರಂ ವಿಧತ್ತೇ—ಅಸ್ಮಿನ್ಸೂಕ್ತೇ ತೇಭಿಃ ಸಾಕಮಿತ್ಯಾದಿಸ್ತೃತೀಯಸ್ಯಾಮೃಚಿ ತೃತೀಯಃ ಪಾದಃ । ತತ್ರ ವೃತ್ರಂ ಖಾದತಿ ಭಕ್ಷಯತೀತಿ ವೃತ್ರಖಾದಸ್ತೇನ ಭಕ್ಷಣೇನ ವೃತ್ರಸ್ಯಾವಸಾನಂ ಮರಣಂ ಸಂಪದ್ಯತೇ । ತಸ್ಮಾತ್ ಖಾದೋ ವೃತ್ರಸ್ಯಾಂತಃ । ಷಷ್ಠಸ್ಯಾಂತತ್ವಂ ಪೂರ್ವಮೇವೋಕ್ತಮತೋಽಂತವತ್ತ್ವಲಿಂಗಂ । ಯದ್ಯಪೀದಂ ಸೂಕ್ತಂ ನ ಭವತಿ ತಥಾಪಿ ಸೂಕ್ತಸ್ಥಾನಾಪನ್ನತ್ವಾತ್ಸೂಕ್ತಮಿತ್ಯುಕ್ತಂ ॥

ಬೇರೊಂದು ಸೂಕ್ತವನ್ನು ತಿಳಿಸುವರು. **ಇಂದ್ರ ಮರುತ್ವ ಇಹ ಪಾಹಿ** (ಋ. ಸಂ. ೩-೫೧-೭) ಎಂಬ ಸೂಕ್ತದ ಮೂರನೆಯ ಋಕ್ಕಿನಲ್ಲಿ ತೇಭಿಃ ಸಾಕಂ ಎಂದು ಮೂರನೆಯ ಪಾದದಲ್ಲಿರುವುದು. ಅಲ್ಲಿ **ಭಕ್ಷಯತೀತಿ ವೃತ್ರಖಾದಸ್ತೇನ ಭಕ್ಷಣೇನ ವೃತ್ರಸ್ಯಾವಸಾನಂ ಮರಣಂ ಸಂಪದ್ಯತೇ** । ವೃತ್ರಾಸುರನನ್ನು ಇಂದ್ರನು ಭಕ್ಷಿಸುವನು ಎಂದರೆ ನಾಶಮಾಡುವನು ಎಂದು ವೃತ್ರನ ಮರಣದ ವಿಷಯವನ್ನು ಹೇಳಲಾಗಿದೆ. ಎಂದರೆ **ಖಾದಃ** ಭಕ್ಷಿಸುವುದು ಎಂದರೆ ಕೊಲ್ಲುವುದು, ನಾಶ ಮಾಡುವುದು, ಕೊನೆಗಾಣಿಸುವುದು ಎಂದರ್ಥವು. ಅಂತತ್ವ (ಕೊನೆಗಾಣಿಸುವುದು) ಎಂಬ ಅಭಿಪ್ರಾಯವು ಆರನೆಯ ದಿವಸದ ಲಕ್ಷಣವು. ಅಂತವೆಂಬ ಶಬ್ದವೇ ಇಲ್ಲಿರುವುದಿಲ್ಲವಾದರೂ ಅಂತಶಬ್ದದ ಅರ್ಥವನ್ನು ಸೂಚಿಸುವ ಶಬ್ದವಿರುವುದು. ಆದ್ದರಿಂದ ಆರನೆಯ ದಿವಸದಲ್ಲಿ ಪಠಿಸುವ ಮಂತ್ರಗಳಲ್ಲಿರಬೇಕಾದ ಲಕ್ಷಣವು ಇದ್ದಂತಾಯಿತು.

**ತದು ತ್ರೈಷ್ಟುಭಂ ತೇನ ಪ್ರತಿಷ್ಠಿತಪದೇನ ಸವನಂ ದಾಧಾರಾಽಽಯತನಾದೇವೈತೇನ ನ ಪ್ರಚ್ಯವತೇ**

ಸೂಕ್ತಗತಂ ಛಂದಃ ಪ್ರಶಂಸತಿ—ಪೂರ್ವವದ್ವ್ಯಾಖ್ಯೇಯಂ ॥

ಮೇಲಿನ ಸೂಕ್ತದಲ್ಲಿರುವ ಛಂದಸ್ಸನ್ನು ಪ್ರಶಂಸೆಮಾಡುವರು. **ಇಂದ್ರ ಮರುತ್ವ** ಎಂಬ ಮೇಲಿನ ಸೂಕ್ತದಲ್ಲಿರುವ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು ಮತ್ತು ಈ ಸೂಕ್ತದ ಋಕ್ಕುಗಳ ಪಾದಗಳ ಅಕ್ಷರಸಂಖ್ಯೆಯು ಹೆಚ್ಚುಕಡಮೆಯಿಲ್ಲದೆ ಒಂದೇ ಸಮನಾಗಿರುವವು. ಮತ್ತು ಸವನದಲ್ಲಿ ಇದು ಉಪಯೋಗಿಸಲ್ಪಡುವುದರಿಂದ ಹೋತೃಯಜಮಾನರಿಗೆ ತಮ್ಮ ತಮ್ಮ ನಿವಾಸ ಸ್ಥಾನಗಳಿಂದ ಚ್ಯುತಿಯುಂಟಾಗುವುದಿಲ್ಲ.

**ಅಯಂ ಹ ಯೇನ ವಾ ಇದಮಿತಿ ಪರ್ಯಾಸಃ ಸ್ವರ್ಮರುತ್ವತಾ ಜಿತಮಿತ್ಯಂತೋ ವೈ ಜಿತಮಂತಃ ಷಷ್ಠಮಹಃ ಷಷ್ಠೇಽಹನಿ ಷಷ್ಠಸ್ಯಾಹ್ನೋ ರೂಪಂ**

ಶಸ್ತ್ರಸ್ಯಾಂತಿಮಂ ತ್ರ್ಯೃಚಂ ವಿಧತ್ತೇ—ಸ್ವರ್ಮರುತ್ವತಾ ಜಿತಮಿತಿ ದ್ವಿತೀಯಃ ಪಾದಸ್ತತ್ರ ಭೂತಾರ್ಥವಾಚಿಕ್ತಪ್ರತ್ಯಯಾಂತೋ ಯಜ (ಜಯ) ತಿ ಧಾತುರೇಕಂ ಲಿಂಗಂ । ಕಿಂಚ

**ಜಯಸ್ಯ ಯುದ್ಧಾವಸಾನತ್ವಾಜ್ಜಿತಮಿತಿ ಶಬ್ದೋಽಂತಪ್ರತಿಪಾದಕಸ್ತದೇತದಂತವತ್ತ್ವಮುಪರಂ ಲಿಂಗಂ ||**

ಶಸ್ತ್ರದ ಕೊನೆಯ ತೃಚವನ್ನು ತಿಳಿಸುವರು. **ಅಯಂ ಹ ಯೇನ ವಾ ಇದಂ** (ಋ. ಸಂ. ೮-೭೯-೪) ಎಂಬುದು ಈ ಶಸ್ತ್ರದ ಅಂತಿಮ ತೃಚವು. ಇದರ ಎರಡನೇ ಪಾದದಲ್ಲಿ ಸ್ವರ್ಮರುತ್ವ **ಜಿತಂ** ಎಂದಿರುವುದು ಜಿತವೆಂಬ ಶಬ್ದವು ಯುದ್ಧಾವಸಾನವನ್ನು ಸೂಚಿಸುವುದು. ಆದ್ದರಿಂದ **ಜಿತಂ** ಎಂಬ ಶಬ್ದವು ಭೂತಕಾಲದ ಪ್ರತೀಕವಾಗಿದೆ. ಭೂತಕಾಲವು ಆರನೆಯ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣವಾಗಿರುವುದರಿಂದ ಅದು ಇಲ್ಲಿದ್ದಂತಾಯಿತು.

**ತಾ ಉ ಗಾಯತ್ರ್ಯೋ ಗಾಯತ್ರ್ಯೋ ವಾ ಏತಸ್ಯ ತ್ರ್ಯಹಸ್ಯ ಮಾಧ್ಯಂ-ದಿನಂ ವಹಂತಿ ತದ್ವೈತಚ್ಛಂದೋ ವಹತಿ ಯಸ್ಮಿನ್ನಿವಿದ್ಧೀಯತೇ ತಸ್ಮಾದ್ಗಾಯತ್ರೀಷು ನಿವಿದಂ ದದಾತಿ ।**

**ತತ್ರಾವಸ್ಥಿತಚ್ಛಂದಃ ಪ್ರಶಂಸಾದ್ವಾರಾ ನಿವಿದ್ಧಾನಂ ವಿಧತ್ತೇ–ಪೂರ್ವವದ್ವ್ಯಾಖ್ಯೇಯಂ ||**

ಈ ಸೂಕ್ತದಲ್ಲರುವ ಛಂದಸ್ಸುಗಳನ್ನು ವಿವರಿಸುವುದರ ಮೂಲಕ ನಿವಿನ್ಮಂತ್ರಗಳನ್ನು ತಿಳಿಸುವರು. ಈ ಸೂಕ್ತದಲ್ಲಿರುವ ಋಕ್ಕುಗಳು ಗಾಯತ್ರೀಛಂದಸ್ಕವು. ಈ ಗಾಯತ್ರೀಛಂದಸ್ಸಿನ ಋಕ್ಕುಗಳು ದ್ವಾದಶಾಹದ (ನವರಾತ್ರದ) ಮಧ್ಯಮತ್ರ್ಯಹವನ್ನು ಎಂದರೆ ನಾಲ್ಕು, ಐದು, ಆರು ಎಂಬ ಮೂರು ದಿನಗಳ ಕಾರ್ಯಕಲಾಪಗಳನ್ನು ನಿರ್ವಹಿಸುವವು. ಆದ್ದರಿಂದ ಈ ಗಾಯತ್ರೀಚ್ಛಂದಸ್ಸಿನ ಋಕ್ಕುಗಳಲ್ಲಿ ನಿವಿತ್ಪದಸಮೂಹವನ್ನು ಸೇರಿಸಿ ಪಠಿಸುವರು.

**ರೇವತೀರ್ನಃ ಸಧಮಾದೇ ರೇವಾँ ಇದ್ರೇವತಃ ಸ್ತೋತೇತಿ ರೈವತಂ ಪೃಷ್ಠಂ ಭವತಿ ಬಾರ್ಹತೇಽಹನಿ ಷಷ್ಠೇಽಹನಿ ಷಷ್ಠಸ್ಯಾಹ್ನೋ ರೂಪಂ**

**ರೈವತಸಾಮಸಾಧ್ಯಪೃಷ್ಠಸ್ತೋತ್ರಸ್ಯಾಽಽಧಾರಭೂತಂ ಸ್ತೋತ್ರಿಯಂ ತ್ರ್ಯೃಚಮನು-ರೂಪಂ ತ್ರ್ಯೃಚಂ ಚ ವಿಧತ್ತೇ–– ರೇವತೀರ್ನಃ ಸಧಮಾದ ಇತಿ ಸ್ತೋತ್ರಿಯಸ್ತ್ರ್ಯೃಚೋ ರೇವಾನಿತ್ಯನುರೂಪಃ । ರೈವತಂ ಸಾಮ ಬೃಹತ್ಸಾಮ್ನ ಉತ್ಪನ್ನಮಹ್ನಶ್ಚ ಯುಗ್ಮತ್ವಾದ್ಬಾರ್ಹ-ತಮ್ । ಸೋಽಯಂ ಬೃಹತ್ಸಂಬಂಧೋ ಭವತಿ ಲಿಂಗಂ ||**

ರೈವತಸಾಮಸಾಧ್ಯವಾದ ಪೃಷ್ಠಸ್ತೋತ್ರಕ್ಕೆ ಆಧಾರಭೂತವಾದ ಸ್ತೋತ್ರಿಯ ತೃಚವನ್ನೂ ಅನುರೂಪ ತೃಚವನ್ನೂ ವಿವರಿಸುವರು. **ರೇವತೀರ್ನಃ ಸಧಮಾದ** (ಋ. ಸಂ. ೧-೩೦-೧೨) ಎಂಬುದು ಸ್ತೋತ್ರಿಯತೃಚವು, **ರೇವಾँ ಇದ್ರೇ-ವತಃ ಸ್ತೋತಾ** (ಋ. ಸಂ. ೮-೨-೧೩) ಎಂಬುದು ಅನುರೂಪತೃಚವು. ಇವೆರಡೂ ಸೇರಿ ಪೃಷ್ಠಸ್ತೋತ್ರವಾಗುವುದು. ಈ ರೈವತಂ ಎಂಬ ಸಾಮವು ಬೃಹತ್ಸಾಮದಿಂದ ಉತ್ಪನ್ನವಾಗುವುದರಿಂದ ಈ ಎರಡು ಸಾಮಗಳೂ ಆರನೆಯ ದಿವಸದ ಮಂತ್ರಗಳು. ಆದ್ದರಿಂದ ಈ ಆರನೆಯ ದಿವಸಕ್ಕೆ ಬಾರ್ಹತವೆಂದು ಹೆಸರು. ಬೃಹತ್ಸಂಬಂಧವಾದ್ದರಿಂದ ಬಾರ್ಹತವು. ಮೇಲೆ ಹೇಳಿದ ಸಾಮಮಂತ್ರಗಳು ಬಾರ್ಹತಸಂಬಂಧವಾದ ಈ ಆರನೆಯ ದಿವಸದ ಮಂತ್ರಗಳಲ್ಲಿರುವುದರಿಂದ ಇಲ್ಲಿ ಆರನೆಯ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

is in the Trishtubh metre, the Hotar keeps through its padas which remain firm, the libation in its proper place, preventing it from falling. Ayam ha yena (10, 65, 4-6) is the triplrt which serves as a setting, for in its words, svar marutvata jitam there is an anta, jita is an anta. These verses are in the Gayatri metre; the Gayatris are the leading metres at the midday libation during these three days. The Nivid is put in the leading metre; thence the Hotar puts the Nivid in the Gayatri metre.

The verses, revatir na sadhamade (1, 30, 13-15), and revan id (8, 2, 13-15) form the Raivata Prishtha (the Raivaita Sama), which is used on a Brihat day, to which the sixth day belongs. The verse yad vavana is the invariable Dhayya. By "tvam iddhi havamahe" (6, 46, 1-2) which follows the Dhayya, the Hotar returns all to the womb of the Brihat Sama, for this is Brihat day according to its position. Indram id devataya (8, 3, 5-6) is the Sama Pragatha which has the characteristics of niurita (has a consonance). Tyam u shu vajinam is the invariable Tarkshya.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾವಿಂಶಾಧ್ಯಾಯಸ್ಯ ಸಪ್ತಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ಏಳನೆಯ ಖಂಡವು ಸಮಾಪ್ತವಾದುದು.



## ಅಥ ದ್ವಾವಿಂಶಾಧ್ಯಾಯೇ ಅಷ್ಟಮಃ ಖಂಡಃ

### ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು



[ ನಿಷ್ಕೇವಲ್ಯಶಸ್ತ್ರದ ಉಳಿದ ಭಾಗಗಳು ಮತ್ತು ತೃತೀಯಸವನದ ಶಸ್ತ್ರಮಂತ್ರಗಳು.]



**ಐಂದ್ರ ಯಾಹ್ಯುಪ ನಃ ಪರಾವತ ಇತಿ ಸೂಕ್ತಂ ಪಾರುಚ್ಛೇಪಮತಿ-ಚ್ಛಂದಾಃ ಸಪ್ತಪದಂ ಷಷ್ಠೇಽಹನಿ ಷಷ್ಠಸ್ಯಾಹ್ನೋ ರೂಪಂ ॥**

ಪಾರುಚ್ಛೇಪತ್ವಾದಿಲಿಂಗತ್ರಯೋಪೇತಂ ಸೂಕ್ತಂ ವಿಧತ್ತೇ -

ಪಾರುಚ್ಛೇಪಋಷಿದೃಷ್ಟಸೂಕ್ತ ಮೊದಲಾದ ಮೂರು ಲಕ್ಷಣಗಳುಳ್ಳ ಸೂಕ್ತವನ್ನು ತಿಳಿಸುವರು. **ಇಂದ್ರ ಯಾಹ್ಯುಪ ನಃ ಪರಾವತಃ** (ಋ. ಸಂ. ೧-೧೩೦-೧) ಎಂಬ ಈ ಸೂಕ್ತವು ಪರುಚ್ಛೇಪಋಷಿದೃಷ್ಟವಾದುದು. ಈ ಸೂಕ್ತದ ಋಕ್ಕುಗಳು ಅತಿಚ್ಛಂದಾಃ (ಅತ್ಯಷ್ಟಿ) ಎಂಬ ಛಂದಸ್ಸಿನವು. ಈ ಸೂಕ್ತದ ಪ್ರತಿಋಕ್ಕಿನಲ್ಲಿಯೂ ಏಳು ಏಳು ಪಾದಗಳಿರುವವು. ಆದ್ದರಿಂದ ಈ ಮೂರು ಲಕ್ಷಣಗಳೂ ಆರನೆಯ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳು.

**ಪ್ರ ಘಾ ನ್ವಸ್ಯ ಮಹತೋ ಮಹಾನೀತಿ ಸೂಕ್ತಂ ಸಮಾನೋದರ್ಕಂ ಷಷ್ಠೇಽಹನಿ ಷಷ್ಠಸ್ಯಾಹ್ನೋ ರೂಪಂ ॥**

**ತುಲ್ಯಸಮಾಪ್ತಿಕತ್ವಲಿಂಗೋಪೇತಂ ಸೂಕ್ತಂ ವಿಧತ್ತೇ—ಸೋಮಸ್ಯ ತಾ ಮದ ಇಂದ್ರಶ್ಚಕಾರೇತ್ಯಸ್ಯ ಚತುರ್ಥಪಾದಸ್ಯ ಬಹುಷ್ವೃಕ್ಷು ವಿದ್ಯಮಾನತ್ವಾತ್ಸಮಾನೋದರ್ಕತ್ವಂ ॥**

ಪ್ರ ಘಾ ನ್ವಸ್ಯ ಮಹತೋ ಮಹಾನಿ (ಋ. ಸಂ. ೨-೧೫-೧) ಎಂಬ ಸೂಕ್ತದ ಪ್ರತಿಯೊಂದು ಋಕ್ಕಿನ ನಾಲ್ಕನೇ ಪಾದದ ಕೊನೆಯಲ್ಲಿ **ಸೋಮಸ್ಯ ತಾ ಮದ ಇಂದ್ರಶ್ಚಕಾರ** ಎಂದು ಇರುವುದು. ಆದ್ದರಿಂದ ಈ ಸೂಕ್ತದ ಮಂತ್ರಗಳಲ್ಲಿ **ಸಮಾನೋದರ್ಕ** ಎಂದರೆ ಒಂದೇವಿಧವಾದ ಪರಿಸಮಾಪ್ತಿಯಿರುವುದು. ಈ ವಿಧವಾದ ಲಕ್ಷಣವು ಈ ಸೂಕ್ತದಲ್ಲಿರುವುದರಿಂದ ಆರನೆಯ ದಿವಸದಲ್ಲಿ ಪಠಿಸುವ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

**ಆಭೂರೇಕೋ ರಯಿಪತೇ ರಯೀಣಾಮಿತಿ ಸೂಕ್ತಂ ರಥಮಾತಿಷ್ಠ ತುವಿನೃಮ್ಣ ಭೀಮಮಿತ್ಯಂತೋ ವೈ ಸ್ಥಿತಮಂತಃ ಷಷ್ಠಮಹಃ ಷಷ್ಠೇಽಹನಿ ಷಷ್ಠಸ್ಯಾಹ್ನೋ ರೂಪಂ ॥**

**ತಿಷ್ಠತಿಧಾತುರೂಪಲಿಂಗಯುಕ್ತಂ ಸೂಕ್ತಂ ವಿಧತ್ತೇ— ಅಭೂರೇಕ ಇತ್ಯಸ್ಯ ಸೂಕ್ತಸ್ಯ ಪಂಚಮ್ಯಾಮೃಚಿ ರಥಮಾ ತಿಷ್ಠೇತಿ ದ್ವಿತೀಯಃ ಪಾದಸ್ತತ್ರಸ್ಥಿತಶಬ್ದಾರ್ಥವಾಚೀ ತಿಷ್ಠತಿಧಾತುರ್ವಿದ್ಯತೇ । ಸ ಚ ಗತಿನಿವೃತ್ತಿರೂಪತ್ವಾದಂತೋ ಭವತಿ । ಷಷ್ಠಸ್ಯಾಹ್ನೋಂತತ್ವಂ ಪೂರ್ವಮುಕ್ತಮ್ । ಅತೋಽಂತವತ್ತ್ವಂ ಲಿಂಗಂ ॥**

ತಿಷ್ಠತಿಧಾತುಲಕ್ಷಣವಿರುವ ಸೂಕ್ತವನ್ನು ವಿವರಿಸುವರು. **ಅಭೂರೇಕೋ ರಯಿಪತೇ ರಯೀಣಾಂ** (ಋ. ಸಂ. ೬-೩೧-೧) ಎಂಬ ಸೂಕ್ತದ ಐದನೆಯ ಋಕ್ಕಿನಲ್ಲಿ ರಥಮಾತಿಷ್ಠ ಎಂದು ಎರಡನೆಯ ಪಾದದಲ್ಲಿರುವುದು. ಆದ್ದರಿಂದ ಸ್ಥಿತ ಶಬ್ದಾರ್ಥವಾಚಕವಾದ ತಿಷ್ಠತಿಧಾತುವು ಇಲ್ಲಿರುವುದು. ಈ ಶಬ್ದವು ಗತಿನಿವೃತ್ತಿರೂಪವಾದ ಅಂತ (ಕೊನೆಯನ್ನು) ವೆಂಬ ಅರ್ಥವನ್ನು ಸೂಚಿಸುವುದು. ಆದ್ದರಿಂದ ಆರನೆಯ ದಿವಸದಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

**ತದು ತ್ರೈಷ್ಟುಭಂ ತೇನ ಪ್ರತಿಷ್ಠಿತಪದೇನ ಸವನಂ ದಾಧಾರಾಽಽಯತನಾದೇವೈತೇನ ನ ಪ್ರಚ್ಯವತೇ ॥**

**ತತ್ರತ್ಯಂ ಛಂದಃ ಪ್ರಶಂಸತಿ— ಪೂರ್ವವದ್ವ್ಯಾಖ್ಯೇಯಂ ॥**

ಈ ಸೂಕ್ತದಲ್ಲಿರುವ ಛಂದಸ್ಸನ್ನು ಪ್ರಶಂಸಿಸುವರು. ಈ ಸೂಕ್ತದಲ್ಲಿರುವ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು ಮತ್ತು ಈ ಸೂಕ್ತದ ಋಕ್ಕುಗಳ ಪಾದಗಳೆಲ್ಲವೂ ಸಮಾನಸಂಖ್ಯೆಯ ಅಕ್ಷರಗಳಿಂದ ಕೂಡಿರುವವು. ಆದ್ದರಿಂದ ಆರನೆಯ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳು ಇರುವವು ಮತ್ತು ಈ ಸೂಕ್ತವನ್ನು ಪಠಿಸುವ ಹೋತೃ ಮತ್ತು ಯಜಮಾನನು ತಮ್ಮ ತಮ್ಮ ವಾಸಸ್ಥಾನಗಳಿಂದ ಚ್ಯುತರಾಗುವುದಿಲ್ಲ.

**ಉಪ ನೋ ಹರಿಭಿಃ ಸುತಮಿತಿ ಪರ್ಯಾಸಃ ಸಮಾನೋದರ್ಕಃ ಷಷ್ಠೇಽಹನಿ ಷಷ್ಠಸ್ಯಾಹ್ನೋ ರೂಪಂ ॥**

**ನಿಷ್ಕೇವಲ್ಯಸ್ಯ ಶಸ್ತ್ರಸ್ಯಾಂತಿಮಂ ತ್ರ್ಯೃಚಂ ವಿಧತ್ತೇ—ತಿಸೃಷ್ವಪ್ಯೃಕ್ಷೂಪ ನೋ ಹರಿಭಿರಿತಿ ಪಾದಸ್ಯೈಕತ್ವಾತ್ಸಮಾನೋದರ್ಕತ್ವಂ ॥**

ನಿಷ್ಕೇವಲ್ಯಶಸ್ತ್ರದ ಕೊನೆಯ ಋಕ್ಕನ್ನು ವಿವರಿಸುವರು. **ಉಪ ನೋ ಹರಿಭಿಃ ಸುತಂ** (ಋ.ಸಂ. ೮-೭೬-೧) ಎಂಬ ಸೂಕ್ತದ ತೃಚದಲ್ಲಿ ಎಂದರೆ ಮೂರು ಋಕ್ಕುಗಳಲ್ಲಿಯೂ ಕೊನೆಯಲ್ಲಿ **ಉಪ ನೋ ಹರಿಭಿಃ ಸುತಂ** ಎಂದು ಇರುವುದರಿಂದ ಈ ತೃಚದಲ್ಲಿ **ಸಮಾನೋದರ್ಕ**—ಸಮಾನವಾದ ಪರಿಸಮಾಪ್ತಿಯೆಂಬ ಲಕ್ಷಣವಿದ್ದಂತಾಯಿತು. ಇದು ಆರನೆಯ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣವು.

**ತಾ ಉ ಗಾಯತ್ರ್ಯೋ ಗಾಯತ್ರ್ಯೋ ವಾ ಏತಸ್ಯ ತ್ರ್ಯಹಸ್ಯ ಮಧ್ಯಂದಿನಂವಹಂತಿ ತದ್ವೈತಚ್ಛಂದೋ ವಹತಿ ಯಸ್ಮಿನ್ನಿವಿದ್ಧೀಯತೇ ತಸ್ಮಾದ್ಗಾಯತ್ರೀಷು ನಿವಿದಂ ದಧಾತಿ ॥**

**ತತ್ರ ನಿವಿದ್ಧಾನಂ ವಿಧತ್ತೇ—ಪೂರ್ವವದ್ವ್ಯಾಖ್ಯೇಯಂ ॥**

ಮೇಲೆ ಹೇಳಿದ ತೃಚದ ಋಕ್ಕುಗಳೆಲ್ಲವೂ ಗಾಯತ್ರೀಛಂದಸ್ಕವು. ಈ ಗಾಯತ್ರೀಛಂದಸ್ಸಿನ ಋಕ್ಕುಗಳು ಈ ದ್ವಾದಶಾಹದ ಮೂರನೇ ಅಥವಾ ಮಧ್ಯದ ಗುಂಪಾದ ನಾಲ್ಕು, ಐದು, ಆರು ಎಂಬ ಮೂರು ದಿನಗಳ ಕಾರ್ಯಕಲಾಪಗಳನ್ನು ನಿರ್ವಹಿಸುವವು. ಆದ್ದರಿಂದ ಈ ಗಾಯತ್ರೀಛಂದಸ್ಸಿನ ಋಕ್ಕುಗಳಲ್ಲಿ ನಿವಿತ್ಪದಗಳನ್ನು ಸೇರಿಸಿ ಪಠಿಸುವರು.

**ಅಭಿ ತ್ಯಂ ದೇವಂ ಸವಿತಾರಮೋಣ್ಯೋರಿತಿ ವೈಶ್ವದೇವಸ್ಯ ಪ್ರತಿಪದತಿಚ್ಛಂದಾಃ ಷಷ್ಠೇಽಹನಿ ಷಷ್ಠಸ್ಯಾಹ್ನೋ ರೂಪಂ ॥**

**ಶಸ್ತ್ರಾಂತರಸ್ಯ ಪ್ರತಿಪದೇಕಾಮೃಚಂ ವಿಧತ್ತೇ—ಅತಿಚ್ಛಂದಸ್ತ್ವಮತ್ರ ಲಿಂಗಂ ॥**

**ಅಭಿತ್ಯಂ ದೇವಂ ಸವಿತಾರಮೋಣ್ಯೋಃ** (ತೈ. ಸಂ. ೧-೨-೬-೨) ಎಂಬ ಈ ಮಂತ್ರವು ವೈಶ್ವದೇವಶಸ್ತ್ರದ ಪ್ರತಿಪನ್ಮಂತ್ರವು. ಇದು ಅತಿಚ್ಛಂದಾಃ ಎಂಬ ಛಂದಸ್ಸಿನದು. ಆದ್ದರಿಂದ ಆರನೆಯ ದಿವಸದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರುವ ಲಕ್ಷಣವು ಇಲ್ಲದ್ದಂತಾಯಿತು.

**ತತ್ಸವಿತುರ್ವರೇಣ್ಯಂ ದೋಷೋ ಆಗಾದಿತ್ಯನುಚರೋಽನ್ತೋ ವೈ ಗತಮಂತಃ ಷಷ್ಠಮಹಃ ಷಷ್ಠೇಹನಿ ಷಷ್ಠಸ್ಯಾಹ್ನೋ ರೂಪಂ ॥**

**ಪ್ರತಿಪಚ್ಛೇಷಮೃಗ್ದ್ವಯಮನುಚರತ್ರ್ಯೃಚಂ ಚ ವಿಧತ್ತೇ—ತತ್ಸವಿತುರಿತಿ ದ್ವೇ ಋಚೌ ಪ್ರತಿಪಚ್ಛೇಷಭೂತೇ। ದೋಷೋ ಆಗಾದಿತ್ಯೇಷ ಸೂತ್ರೇ ಪಠಿತಸ್ತ್ರ್ಯೃಚೋಽನುಚರಃ। ಅತ್ರ ಭೂತಾರ್ಥವಾಚೀ ಗಮಿಧಾತುರ್ಯೋಽಸ್ತಿ ತಸ್ಯಾರ್ಥ ಆಗಾದಿತಿ ಶಬ್ದೇನೋಚ್ಯತೇ। ಭೂತಾರ್ಥವಾಚಿತ್ವಾದ್ಗತಂ ಗಮನಸಮಾಪ್ತಿರಂತೋ ಭವತಿ। ತದೇತದಂತವತ್ತ್ವಂ ಲಿಂಗಮ್। ಯಸ್ಮಾದತ್ರ ಸೂತ್ರಕಾರೋಽಭಿ ತ್ಯಮಿತ್ಯೇಕಾಮೃಚಂ ತತ್ಸವಿತುರಿತಿ ದ್ವೇ ಋಚೌ ಮಿಲಿತ್ವಾ ಪ್ರತಿಪತ್ತ್ರ್ಯೃಚತ್ವೇನೋಕ್ತ್ವಾ ದೋಷೋ ಆಗಾದಿತ್ಯಾದಿಕಸ್ತ್ರ್ಯೃಚೋಽನುಚರ ಇತ್ಯುಕ್ತವಾಂಸ್ತಸ್ಮಾದಸ್ಮಾಭಿಸ್ತತ್ಸವಿತುರಿತಿ ವಾಕ್ಯಂ ಪೂರ್ವಶೇಷತ್ವೇನ ವಿಚ್ಛೇದನೀಯಮ್ ॥**

ಹಿಂದೆ ವೈಶ್ವದೇವಮಂತ್ರದ ಪ್ರಾರಂಭದ ತೃಚದಲ್ಲಿ **ಅಭಿ ತ್ಯಂ ಮೇಷಂ** ಎಂಬ ಪ್ರತಿಪನ್ಮಂತ್ರವನ್ನು ತಿಳಿಸಿದ್ದಾಯಿತು. ಈಗ ಪ್ರತಿಪತ್ ತೃಚದ ಉಳಿದ (೨ ಮತ್ತು ೩ನೇ) ಎರಡು ಋಕ್ಕುಗಳನ್ನು ತಿಳಿಸುವರು. **ತತ್ಸವಿತುರ್ವರೇಣ್ಯಂ** (ಋ. ಸಂ. ೩-೬೨-೧೦) ಎಂದು ಮೊದಲಾಗುವ ಎರಡು ಋಕ್ಕುಗಳು ಪ್ರತಿಪತ್ ತೃಚದ ಉಳಿದ ೨ ಮತ್ತು ೩ನೇ ಋಕ್ಕುಗಳು. **ದೋಷೋ ಆಗಾತ್** ಎಂಬ ಸೂತ್ರದಲ್ಲಿ ಹೇಳಿರುವ ತೃಚವು ಅನುಚರತೃಚವು. ಇಲ್ಲಿ ಭೂತಾರ್ಥವಾಚಕವಾದ ಗಮಿಧಾತುವಿನ ಭೂತಕಾಲದ ರೂಪವು **ಆಗಾತ್** ಎಂಬ ಶಬ್ದವು ಸೂಚಿಸುವುದು. ಭೂತಾರ್ಥವಾಚಿಯೆಂದರೆ, ಗಮನಸಮಾಪ್ತಿಯನ್ನು ತಿಳಿಸುವ **ಗತಂ** ಎಂಬ ಶಬ್ದವು. ಇದು ಅಂತ (ಕೊನೆ)ಯನ್ನು ತಿಳಿಸುವ ಶಬ್ದವು. ಇಲ್ಲಿ ಸೂತ್ರಕಾರರು **ಅಭಿ ತ್ಯಂ ದೇವಂ** ಎಂಬ ಋಕ್ಕನ್ನು ಪ್ರತಿಪತ್ ತೃಚದ ಮೊದಲನೆಯ ಋಕ್ಕನ್ನಾಗಿ ಮೊದಲು ಹೇಳಿ ಅನಂತರ **ತತ್ಸವಿತುರ್ವರೇಣ್ಯಂ** ಎಂದು ಮೊದಲಾಗುವ ಎರಡು ಋಕ್ಕುಗಳನ್ನು ಪ್ರತಿಪತ್ ತೃಚದ ಎರಡು ಮತ್ತು ಮೂರನೆಯ ಋಕ್ಕುಗಳೆಂದು ಹೇಳಿದಾರೆ. ಅನಂತರ ದೋಷೋ ಆಗಾತ್ ಎಂಬ ತೃಚವು ಅನುಚರ ತೃಚವೆಂದು ತಿಳಿದುಕೊಳ್ಳಬೇಕೆಂದು ಇಲ್ಲಿ ತಿಳಿಸಿದಾರೆ. ಈ ತೃಚಗಳಲ್ಲಿ ಭೂತಾರ್ಥಕಾಲವನ್ನು ತಿಳಿಸುವ **ಗತಂ** ಆಗಾತ್ ಎಂಬ ಶಬ್ದಗಳಿರುವುದರಿಂದ ಆರನೆಯ ದಿವಸಗಳಲ್ಲಿ ಪಠಿಸಬೇಕಾದ ಮಂತ್ರಗಳ ಲಕ್ಷಣವಿದ್ದಂತಾಯಿತು.

**ಉದುಷ್ಯ ದೇವಃ ಸವಿತಾ ಸವಾಯೇತಿ ಸಾವಿತ್ರಂ ಶಶ್ವತ್ತಮಂ ತದಪಾವಸ್ಥಿರಸ್ಥಾದಿತ್ಯಂತೋ ವೈ ಸ್ಥಿತಮಂತಃ ಷಷ್ಠಮಹಃ ಷಷ್ಠೇಽಹನಿ ಷಷ್ಠಸ್ಯಾಹ್ನೋ ರೂಪಂ ॥**

**ಸವಿತೃದೇವತಾಕಂ ಸೂಕ್ತಂ ವಿಧತ್ತೇ—ಶಶ್ವತ್ತಮಮಿತ್ಯಾದಿರ್ದ್ವಿತೀಯಃ ಪಾದಸ್ತಸ್ಮಿನ್ನಸ್ಥಾದಿತಿ ಭೂತಾರ್ಥವಾಚಿಪ್ರತ್ಯಯಾಂತಸ್ತಿಷ್ಠತಿಧಾತುಃ ಶ್ರುತಃ। ತಚ್ಚ ಸ್ಥಿತತ್ವಂ ಗಮನಸ್ಯಾಂತಸ್ತದಿದಮಂತವತ್ತ್ವಂ ಲಿಂಗಂ ॥**

ಸವಿತೃದೇವತಾಕವಾದ ಒಂದು ಸೂಕ್ತವನ್ನು ತಿಳಿಸುವರು. **ಉದುಷ್ಯ ದೇವಃ ಸವಿತಾ ಸವಾಯ** (ಋ. ಸಂ. ೨-೩೮-೧) ಎಂಬ ಸೂಕ್ತವು ಸವಿತೃದೇವತಾಕವು. ಇದರಲ್ಲಿ ಶಶ್ವತ್ತಮಂ ಎಂಬುದು ದ್ವಿತೀಯಪಾದವು. ಇದರಲ್ಲಿ **ಅಸ್ಥಾತ್**

ಎಂಬ ಭೂತಾರ್ಥವಾಚಿಯಾದ ತಿಷ್ಠತಿಧಾತುವಿನ ರೂಪಾಂತರವಿರುವುದು. ಮತ್ತು ಸ್ಥಿತತ್ವಂ ಎಂದರೆ **ಗಮನಸ್ಯಾಂತಃ** ಗಮನದ ಕೊನೆಯನ್ನು ಸೂಚಿಸುವುದು. ಆದ್ದರಿಂದ ಇಲ್ಲಿರುವ **ಅಸ್ಥಾತ್** ಎಂಬ ಭೂತಕಾಲವನ್ನು ಸೂಚಿಸುವ ಪದವೂ ಗಮನದ ಅಂತ (ಕೊನೆ) ಯನ್ನು ತಿಳಿಸುವ ಪದವೂ ಸಹ ಈ ಋಕ್ಕುಗಳಲ್ಲಿರುವುದರಿಂದ ಇಲ್ಲಿ ಆರನೆಯ ದಿವಸ ಪಠಿಸಬೇಕಾದ ಮಂತ್ರಗಳ ಲಕ್ಷಣವಿದ್ದಂತಾಯಿತು.

**ಕತರಾ ಪೂರ್ವಾ ಕತರಾಽಪರಾಽಯೋರಿತಿ ದ್ಯಾವಾಪೃಥಿವೀಯಂ ಸಮಾನೋದರ್ಕಂ ಷಷ್ಠೇಽಹನಿ ಷಷ್ಠಸ್ಯಾಹ್ನೋ ರೂಪಂ ॥**

**ತುಲ್ಯಸಮಾಪ್ತಿಲಿಂಗಕಂ ಸೂಕ್ತಂ ವಿಧತ್ತೇ—ದ್ವಿತೀಯಸ್ಯಾ ಋಚಶ್ಚತುರ್ಥೇ ಪಾದೇ ದ್ಯಾವಾ ರಕ್ಷತಂ ಪೃಥಿವೀ ಇತ್ಯುಕ್ತತ್ವಾದಿದಂ ಸೂಕ್ತಂ ದ್ಯಾವಾಪೃಥಿವೀತ್ವಂ । ತತ್ರ ದ್ಯಾವಾ ರಕ್ಷತಮಿತಿ ಪಾದಸ್ಯ ಬಹುಷು ಋಕ್ಷು ವಿದ್ಯಮಾನತ್ವಾತ್ಸಮಾನೋದರ್ಕತ್ವಂ ॥**

ಒಂದೇವಿಧ (ಸಮಾನವಾದ) ಪರಿಸಮಾಪ್ತಿಯುಳ್ಳ ಋಕ್ಕುಗಳಿರುವ ಸೂಕ್ತವನ್ನು ತಿಳಿಸುವರು. **ಕತರಾ ಪೂರ್ವಾ ಕತರಾಽಪರಾಽಯೋಃ** (ಋ. ಸಂ. ೧-೧೮೫-೧) ಎಂಬ ಸೂಕ್ತವು ದ್ಯಾವಾಪೃಥಿವೀದೇವತಾಕವು. ಎರಡನೇ ಋಕ್ಕಿನ ಪಾದದಲ್ಲಿ **ದ್ಯಾವಾ ರಕ್ಷತಂ ಪೃಥಿವೀ** ಎಂದಿರುವುದರಿಂದ ಈ ಸೂಕ್ತವು ದ್ಯಾವಾಪೃಥಿವೀದೇವತಾಕವು. ಇಲ್ಲಿ **ದ್ಯಾವಾ ರಕ್ಷತಂ** ಎಂಬ ಶಬ್ದಗಳು ಅನೇಕ ಋಕ್ಕುಗಳ ಅಂತ್ಯದಲ್ಲಿರುವುದರಿಂದ ಎಲ್ಲಾ ಋಕ್ಕುಗಳ ಅತತ್ಯವೂ ಒಂದೇ ವಿಧವಾಗಿರುವುದು. ಆದ್ದರಿಂದ ಇಲ್ಲಿ **ಸಮಾನೋದರ್ಕಂ** ಎಂದರೆ ಸಮಾನವಾದ ಪರಿಸಮಾಪ್ತಿಯಿರುವುದರಿಂದ ಇಲ್ಲಿ ಆರನೆಯ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

**ಕಿಮು ಶ್ರೇಷ್ಠಃ ಕಿಂ ಯವಿಷ್ಠೋನ ಆಜಗನ್ನುಪ ನೋ ವಾಜಾ ಅಧ್ವರಮೃಭುಕ್ಷಾ ಇತ್ಯಾರ್ಭವಂ ನಾರಾಶಂಸಂ ತ್ರಿವತ್ ಷಷ್ಠೇಽಹನಿ ಷಷ್ಠಸ್ಯಾಹ್ನೋ ರೂಪಂ**

**ಋಭುದೇವತಾಕಂ ಸೂಕ್ತದ್ವಯಂ ವಿಧತ್ತೇ—ಕಿಮು ಶ್ರೇಷ್ಠ ಇತ್ಯಸ್ಮಿನ್ಸೂಕ್ತೇ ತ್ರಯೋದಶರ್ಚಃ ಶಂಸನೀಯಾಃ । ತತ್ರ ಚತುರ್ಥ್ಯಾ ಋಚಃ ಪ್ರಥಮಪಾದೇ ಚಕೃವಾಂಸ ಋಭವ ಇತಿ ಶ್ರುತತ್ವಾದಿದಮಾರ್ಭವಂ।ಉಪನ ಇತಿ ಸೂಕ್ತೇ ಚತಸ್ರಃ । ತತ್ರ ಪ್ರಥಮಪಾದ ಋಭುಕ್ಷಾ ಇತಿ ಶ್ರುತತ್ವಾತ್ತದಪ್ಯಾರ್ಭವಂ । ಋಭವೋ ಹಿ ನರಾ ಮನುಷ್ಯಾ ಅತ ಏವ ಮನುಷ್ಯಾನಂತಃ ಪ್ರವೇಶಯಿತುಮಸಹಮಾನಾ ಅಗ್ನಿವಸ್ವಾದಯಃ ಸೋಮಪಾನವೇಲಾಯಾಮೃಭೂನ್ನಿಃಸಾರಿತವಂತಃ । ಏತಚ್ಚಾರ್ಭವಂ ಶಂಸತ್ರ್ಯೃಭವೋ ವೈ ದೇವೇಷ್ವಿತ್ಯಾದಾವುಪಾಖ್ಯಾನೇ ತುಲ್ಯಮವಗಮ್ಯತೇ । ತೇ ಚ ನರಾ ಋಭವಃ ಶಸ್ಯಂತೇ ಕಥ್ಯಂತೇ ಯಸ್ಮಿನ್ಸೂಕ್ತೇ ತನ್ನಾರಾಶಂಸಂ ತದೇಕಂ ಲಿಂಗಂ । ತಥೈವೋಪ ನೋ ವಾಜಾ ಇತಿ ಸೂಕ್ತಸ್ಯ ತೃತೀಯಾಯಾಮೃಚಿ ತ್ರ್ಯುದಯಮಿತಿ ತ್ರಿಶಬ್ದಃ ಶ್ರುತಸ್ತದೇತತ್ತ್ರಿತ್ವಂ ದ್ವಿತೀಯಂ ಲಿಂಗಂ ॥**

ಋಭುದೇವತಾಕವಾದ ಎರಡು ಸೂಕ್ತವನ್ನು ತಿಳಿಸುವರು. **ಕಿಮು ಶ್ರೇಷ್ಠಃ ಕಿಂ ಯವಿಷ್ಠಃ** (ಋ. ಸಂ. ೧-೧೯೧-೧) ಎಂಬ ಸೂಕ್ತವೂ **ಉಪ ನೋ ವಾಜಾ ಅಧ್ವರಂ** (ಋ.ಸಂ. ೪-೩೭-೧) ಎಂಬ ಸೂಕ್ತವೂ ಋಭುದೇವತಾಕವು. **ಕಿಮು ಶ್ರೇಷ್ಠ** ಎಂಬ ಸೂಕ್ತದಲ್ಲಿ ಹದಿಮೂರು ಋಕ್ಕುಗಳನ್ನು ಪಠಿಸಬೇಕು. ಈ ಸೂಕ್ತದ ನಾಲ್ಕನೇಋಕ್ಕಿನ ಮೊದಲನೇ ಪಾದದಲ್ಲಿ **ಚಕೃವಾಂಸ ಋಭವ** ಎಂದಿರುವುದರಿಂದ ಈ ಸೂಕ್ತವು ಋಭುದೇವತಾಕವು. **ಉಪನೋವಾಜ ಅಧ್ವರಂ** (ಋ. ಸಂ. ೪-೩೭-೧) ಮತ್ತೊಂದು ಋಭುದೇವತಾಕವಾದ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳನ್ನು ಪಠಿಸಬೇಕು. ಈ ಸೂಕ್ತದ ಪ್ರಥಮಪಾದದಲ್ಲಿ **ಋಭುಕ್ಷಾ** ಎಂದಿರುವುದರಿಂದ ಇದು ಋಭುದೇವತಾಕವು. ಋಭುಗಳು ಮನುಷ್ಯರಾದ್ದರಿಂದ ಅವರನ್ನು ತಮ್ಮ ಬಳಿ ಒಳಗೆ ಎಂದರೆ ಅವರ ಜತೆಯಲ್ಲಿ ಕುಳಿತು ಸೋಮಪಾನ ಮಾಡುವುದಕ್ಕೆ ಅಗ್ನಿವಸುಮೊದಲಾದ ದೇವತೆಗಳು ಒಪ್ಪದೆ ಅವರನ್ನು ಹೊರದೂಡಿದರು. ಈ ಋಭುಗಳನ್ನು **ಋಭವೋ ವೈ ದೇವೇಷು** ಎಂಬ ಸೂಕ್ತದಲ್ಲಿ ಪ್ರಶಂಸೆ ಮಾಡಲಾಗಿರುವುದು. ಈ ಮನುಷ್ಯರಾದ (ನರಾ) ಋಭುಗಳನ್ನು ಯಾವ ಸೂಕ್ತದಲ್ಲಿ ಸ್ತುತಿಸಲಾಗಿದೆಯೋ ಆ ಸೂಕ್ತಕ್ಕೆ ನರಾಶಂಸ ಸೂಕ್ತವೆಂದು ಹೆಸರು. **ಆ ನೋ ವಾಜ** ಎಂಬ ಸೂಕ್ತದ ಮೂರನೆಯ ಋಕ್ಕಿನಲ್ಲಿ ಕ್ರಿ ಎಂಬ ಶಬ್ದವಿರುವುದರಿಂದ ಈ ಶಬ್ದವೂ ನರಾಶಂಸ ಸೂಕ್ತವೂ ಸಹ ಈ ಆರನೆಯ ದಿನದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳು ಇಲ್ಲಿದ್ದಂತಾಯಿತು.

**ಇದಮಿತ್ಥಾ ರೌದ್ರಂ ಗೂರ್ತವಚಾ ಯೋ ಯಜ್ಞೇನ ದಕ್ಷಿಣಯಾ ಸಮುಕ್ತಾ ಇತಿ ವೈಶ್ವದೇವಂ ॥**

**ಅಥ ಬಹುದೇವತಾಕಂ ಸೂಕ್ತಂ ವಿಧತ್ತೇ-ಇದಮಿತ್ಥೇತ್ಯೇಕಂ ಸೂಕ್ತಂ ಯೋ ಯಜ್ಞೇನೇತ್ಯಪರಮ್ ॥**

ಈಗ ಬಹುದೇವತಾಕವಾದ (ಅನೇಕ ದೇವತೆಗಳನ್ನು ಸ್ತುತಿಸಿರುವ) ಸೂಕ್ತವನ್ನು ವಿವರಿಸುವರು. **ಇದಮಿತ್ಥಾ ರೌದ್ರಂ ಗೂರ್ತವಚಾ** (ಋ. ಸಂ. ೧೦-೧೯೧-೧) ಎಂಬ ಸೂಕ್ತವೂ, **ಯೋ ಯಜ್ಞೇನ ದಕ್ಷಿಣಯಾ ಸಮುಕ್ತಾ** ಎಂಬ ಸೂಕ್ತವೂ ಬಹುದೇವತಾಕವಾದ ಎರಡು ವಿಶ್ವೇದೇವತಾಕವಾದ ಸೂಕ್ತಗಳು.

*English Translation*

**(The remainder of the Nishkevalya Shastra and the Shastras of the evening libation).**

Endra yahy upa nah (1, 130) is the Paruchhepa hymn, in the Atichandah metre, compring seven padas. Pra gha nv asya (2, 15) is the hymn whose several verses have the same refrain. In the hymn abhir eko rayipate (6, 31), the words occur (verse 5) ratham atishtha tuvinrimna bhimam ; in it the word stha "to stand", marks an end standing being the end of going, which is a characteristic of the sixth day. By means of this hymn, which is in the Trishtubh metre, the Hotar keeps, through its padas which remain firm, the libation in its proper place, preventing it from falling. Upa no haribhih sutam (8, 82, 31-33) is the setting which has the same refrain. It is in the Gayatri metre, which is leading one of the midday libation of the three lattar days. Therefore the Nivid

is to be placed in it. Abhi tyam devam Savitaram (Vaj. Samh. 4, 25) is the beginning of the Vaisvadeva Shastra, in the Atichanda metre. Tat Savitar varenyam (3, 62, 10-11) and dosho agat form the sequel, because gata i.e., gone, signifies an end which is a characteristic of the sixth day.

Ud u shya devah savita savaya (2, 38) is the Nivid hymn for Savitar; the words therein, sasvattamam tadapa vahnir asthat, contain an anta, for sthita, i. e stauding is an anta.

Katara purva (1, 185, 1) is the Nivid hymn for Dyavaprithivi, whose verses have the same refrain.

Kim u sreshthah kim yavishtho (1, 161) and upa no vaja adhvaram ribhuksha (4, 36) form the Arbhavam Narasam hymns, in which the term "three' occurs, being a characteristics of the third day.

The two hymns Idam ittha raudram (10, 61) and ye yajnena dakshinaya samakta (10, 62) form the Vaisvadeba (Nabhanedishtha) hymns.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾವಿಂಶಾಧ್ಯಾಯೇ ಅಷ್ಟಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೊಂದನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು ಸಮಾಪ್ತವಾದುದು.



## ಅಥ ದ್ವಾವಿಂಶಾಧ್ಯಾಯೇ ನವಮಃ ಖಂಡಃ

### ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ಒಂಬತ್ತನೆಯ ಖಂಡವು



[ಮನುವಿನ ಪುತ್ರನಾದ ನಾಭಾನೇದಿಷ್ಠ ಎಂಬುವನ ವೃತ್ತಾಂತವು.]



ನಾಭಾನೇದಿಷ್ಠಂ ಶಂಸತಿ ॥

ಪೂರ್ವೋಕ್ತೇ ಸೂಕ್ತದ್ವಯೇ ಲಿಂಗಂ ದರ್ಶಯತಿ—ನಾಭಾನೇದಿಷ್ಠಾಖ್ಯಃ ಕಶ್ಚಿನ್ಮಹರ್ಷಿಸ್ತೇನ ದೃಷ್ಟಂ ಪೂರ್ವೋಕ್ತಂ ಸೂಕ್ತದ್ವಯಂ ನಾಭಾನೇದಿಷ್ಠಂ ತಚ್ಛಂಸೇತ್ । ಅಯಂ ಮಹರ್ಷಿಸಂಬಂಧ ಏವಾತ್ರ ಲಿಂಗಂ ॥

ಹಿಂದಿನ ಖಂಡದಲ್ಲಿ ಹೇಳಿರುವ **ಇದಮಿತ್ಥಾರೌದ್ರಂ ಗೂರ್ತವಚಾ** ಮತ್ತು **ಯೇ ಯಜ್ಞೇನ ದಕ್ಷಿಣಯಾ ಸಮುಕ್ತಾ** ಎಂಬ ಎರಡು ಸೂಕ್ತಗಳಲ್ಲಿರುವ ಲಕ್ಷಣಗಳನ್ನು ತಿಳಿಸುವರು. ನಾಭಾನೇದಿಷ್ಠ ಎಂಬ ಓರ್ವ ಮಹರ್ಷಿಯಿಂದ ದೃಷ್ಟವಾದಮೇಲೆ ತಿಳಿಸಿದ ಎರಡು ಸೂಕ್ತಗಳನ್ನು ಇಲ್ಲಿ ಪಠಿಸಬೇಕು. ಇದೇ ಆರನೆಯ ದಿವಸದ ಮಂತ್ರಗಳ ಲಕ್ಷಣವು.

**ನಾಭಾನೇದಿಷ್ಠಂ ವೈ ಮಾನವಂ ಬ್ರಹ್ಮಚರ್ಯಂ ವಸಂತಂ ಭ್ರಾತರೋ ನಿರಭಜನ್ಸೋಽಬ್ರವೀದೇತ್ಯ ಕಿಂ ಮಹ್ಯಮಭಾಕ್ತೇತ್ಯೇತಮೇವ ನಿಷ್ಠಾವಮವವದಿತಾರಮಿತ್ಯಬ್ರುವಂಸ್ತಸ್ಮಾದ್ಧಾಪ್ಯೇತರ್ಹಿ ಪಿತರಂ ಪುತ್ರಾ ನಿಷ್ಠಾವೋಽವವದಿತೇತ್ಯೇವಾಽಽಚಕ್ಷತೇ ॥**

**ತದೇತತ್ಸೂಕ್ತದ್ವಯಂ ಪ್ರಶಂಸಿತುಮುಪಾಖ್ಯಾನಮಾಹ**— ಮನೋಃ ಪುತ್ರೋ ನಾಭಾನೇದಿಷ್ಠೋ ನಾಮ ಬಾಲಕೋ ಗುರುಗೃಹೇ ಬ್ರಹ್ಮಚರ್ಯಂ ವಸತ್ಯುಪನೀತಃ ಸನ್ವೇದಮಧ್ಯೇತುಂ ತತ್ರ ತಿಷ್ಠತಿ । ತದಾನೀಂ ತಸ್ಯ ಜ್ಯೇಷ್ಠಭ್ರಾತರೋ ಮನೋಃ ಪಿತುರ್ಧನಂ ಸ್ವಾರ್ಥಂ ವಿಭಜಂತಸ್ತಂ ಬಾಲಕಂ ನಿರಭಜನ್, ಭಾಗರಹಿತಮಕುರ್ವನ್ । ಬಾಲೋಽಯಂ ಬ್ರಹ್ಮಚಾರೀ ವೇದಮೇವಾಭ್ಯಸ್ಯತು ಕಿಂ ತಸ್ಯ ಧನೇನೇತಿ ಮತ್ವಾ ಭಾಗಂ ನ ದತ್ತವಂತಃ । ತದಾನೀಂ ಸಃ ನಾಭಾನೇದಿಷ್ಠ ಏತ್ಯ ವೇದಾಭ್ಯಾಸಂ ಕೃತ್ವಾ ಸಮಾಗತ್ಯ ಭ್ರಾತೄನಿದಮಬ್ರವೀತ್ । ಹೇ ಭ್ರಾತರೋ ಮಹ್ಯಂ ಕಿಮಭಾಕ್ತ ಕಿಂ ನಾಮ ವಸ್ತು ಭಾಗತ್ವೇನ ಯೂಯಂ ಪೃಥಕ್ತ್ವೇನ ಕೃತವಂತ ಇತಿ । ತೇ ಚ ಭ್ರಾತರ ಏತಮೇವ ಮನುಂ ಪಿತರಂ ಹಸ್ತೇನ ಪ್ರದರ್ಶ್ಯ ಹೇ ನಾಭಾನೇದಿಷ್ಠ ವಯಂ ನೋ ಜಾನೀಮಸ್ತಮೇವ ಪೃಚ್ಛೇತ್ಯಬ್ರುವನ್ । ಕೀದೃಶಂ ಮನುಂ । ನಿಷ್ಠಾವಂ। ಧನವಿಭಾಗಾದೇರ್ಧರ್ಮರಹಸ್ಯಂ (ಸ್ಯಸ್ಯ) ನಿಃಶೇಷೇಣ ಸ್ಥಿತಿರ್ನಿರ್ಣಯೋ ನಿಷ್ಠಾ ಸಾ ಯಸ್ಮಿನ್ನಸ್ತಿ ಸ ನಿಷ್ಠಾವಃ । ತಾದೃಶಂ ಧರ್ಮರಹಸ್ಯನಿರ್ಣೇತಾರಮಿತ್ಯರ್ಥಃ । ಅವವದಿತಾರಂ ಜ್ಯೇಷ್ಠಪುತ್ರಸ್ಯೈತಾವತ್, ದ್ವಿತೀಯಸ್ಯೈತಾವತ್, ಅನ್ಯಸ್ಯೈತಾವತ್, ಇತ್ಯವಚ್ಛಿದ್ಯ ವೇ(ವ)ದಿತುಂ ಸಮರ್ಥೋಽವವದಿತಾ ತಾದೃಶಂ । ಅಯಮರ್ಥಃ । ಅಯಂ ಮನುರ್ಧರ್ಮಶಾಸ್ತ್ರಕರ್ತೃತ್ವಾದ್ಧರ್ಮರಹಸ್ಯನಿರ್ಣಯವಾನ್ ಪಿತೃತ್ವೇನ ತವೈತಾವದಿತ್ಯವಚ್ಛಿದ್ಯ ವಕ್ತುಂ ಸಮರ್ಥಶ್ಚ । ತಸ್ಮಾನ್ಮದೀಯೋ ಭಾಗಃ ಕ ಇತಿ ಮನುಮೇವ ಪೃಚ್ಛೇತ್ಯಬ್ರುವನ್ । ಯಸ್ಮಾದಸ್ಯ ಭ್ರಾತರ ಏವಮುಕ್ತವಂತಸ್ತಸ್ಮಾದಿದಾನೀಮಪಿ ಪಿತರಂ ಪುತ್ರಾ ಇತ್ಯನೇನ ಪ್ರಕಾರೇಣಾ ಚಕ್ಷತೇ । ಕೇನ ಪ್ರಕಾರೇಣೇತಿ ಸೋಽಭಿಧೀಯತೇ । ಅಯಂ ಪಿತಾ ನಿಷ್ಠಾವೋ ನಿರ್ಣಯವಾನಸ್ಯೈತಾವದಿತ್ಯವಚ್ಛಿದ್ಯ ವದಿತಾ ಚೇತಿ ॥

ಮೇಲೆ ಹೇಳಿದ ಎರಡು ನಾಭಾನೇದಿಷ್ಠಸೂಕ್ತಗಳನ್ನು ಪ್ರಶಂಸಿಸುವುದಕ್ಕಾಗಿ ಒಂದು ಪೂರ್ವೇತಿಹಾಸವನ್ನು ಹೇಳುವರು. ಪೂರ್ವದಲ್ಲಿ ಮನುವಿನ ಪುತ್ರನಾದ ನಾಭಾನೇದಿಷ್ಠನೆಂಬ ಬಾಲಕನು ಉಪನಯನವಾದಮೇಲೆ ಗುರುವಿನ ಮನೆಯಲ್ಲಿ ಬ್ರಹ್ಮಚರ್ಯನಿಯಮಗಳನ್ನು ಆಚರಿಸುತ್ತಾ ಅಲ್ಲಿಯೇ ವಾಸವಾಗಿದ್ದು ವೇದಾಧ್ಯಯನವನ್ನು ಮಾಡುತ್ತಿದ್ದನು. ಆಗ ಎಂದರೆ ಆಕಾಲದಲ್ಲಿ ಈ ನಾಭನೇದಿಷ್ಠನ ಜೇಷ್ಠಸಹೋದರರು (ಅಣ್ಣಂದಿರು) ತಮ್ಮ ತಂದೆಯಾದ ಮನುವಿನಿಂದ ಆಸ್ತಿ ಯೆಲ್ಲವನ್ನೂ ತೆಗೆದುಕೊಂಡು ತಮ್ಮ ಸ್ವಾರ್ಥಕ್ಕಾಗಿ ತಾವೇ ಹಂಚಿಕೊಂಡರು. ತಮ್ಮ ತಮ್ಮನಾದ ನಾಭಾನೇದಿಷ್ಠನಿಗೆ ಏನೂ

ಕೊಡದೆ ಎಂದರೆ ಅವನ ಪಾಲಿನ ಆಸ್ತಿಯಲ್ಲಿ ಏನೂ ಕೊಡದೆ ಅವನಿಗೆ ಪಿತೃಧನದಲ್ಲಿ ಏನೂ ಆಸ್ತಿ ಇಲ್ಲದಂತೆ ಮಾಡಿದರು. ಈ ಹುಡುಗನು (ತಮ್ಮ ತಮ್ಮನು) ಬ್ರಹ್ಮಚಾರಿಯು, ಗುರುವಿನ ಮನೆಯಲ್ಲಿ ವಾಸಮಾಡುತ್ತಾ ವೇದಾಧ್ಯಯನಮಾಡುತ್ತಿರುವನು. ಇಂತಹ ಹುಡುಗನಿಗೆ ಧನವೇತಕ್ಕೆ? ಆಸ್ತಿ ಏತಕ್ಕೆ ಎಂದು ಹೇಳುತ್ತಿದ್ದರು. ಆಗ ನಾಭಾನೇದಿಷ್ಠನು (ಬಾಲಕನು) ತನ್ನ ವೇದಾಧ್ಯಯವನ್ನು ಮುಗಿಸಿ ತಂದೆಯ ಮನೆಗೆ ಬಂದು ಅಲ್ಲಿನ ವಿದ್ಯಮಾನವನ್ನು ತಿಳಿದು ತನ್ನ ಜೇಷ್ಠಸಹೋದರರೊಡನೆ ಇಂದು ಕೇಳಿದನು--ಎಲೈ ಅಣ್ಣಂದಿರೇ ನೀವು ತಂದೆಯ ಆಸ್ತಿಯನ್ನೂ ಧನವನ್ನೂ ಎಲ್ಲವನ್ನೂ ನೀವೇ ತೆಗೆದುಕೊಂಡು ಅನುಭವಿಸು ತ್ತಿದ್ದೀರಿ. ನನಗೆ ಬರಬೇಕಾದ ನನ್ನ ಪಾಲಿನ ಆಸ್ತಿಯನ್ನು ಭಾಗಮಾಡಿ ನನಗೆ ಕೊಡಲು ಏನು ಮಾಡಿದ್ದೀರಿ? ನನ್ನ ಪಾಲಿನ ಆಸ್ತಿಯನ್ನು ನನಗೆ ಕೊಡಿ ಎಂದು ಕೇಳಿದನು. ಅದಕ್ಕೆ ಅವನ ಅಣ್ಣಂದಿರು ಎದುರಿಗೆ ಇರುವ ತಮ್ಮ ತಂದೆಯನ್ನು ಕೈಯಿಂದ ತೋರಿಸಿ, ಬಾಲಕನನ್ನು ಕುರಿತು, ಎಲೈ ನಾಭಾನೇದಿಷ್ಠನೇ ನಿನ್ನ ಆಸ್ತಿಯ ವಿಚಾರವು ನಮಗೆ ತಿಳಿಯದು. ಇಲ್ಲೇ ಇರುವ ನಿನ್ನ ತಂದೆಯನ್ನು ಕೇಳು ಎಂದು ಹೇಳಿದರು. ತಂದೆಯಾದ ಮನುವು ಬಹಳ ನಿಷ್ಠಾವ(ನಿಷ್ಠಾವಂತನು). ಎಂದರೆ ಧನವಿಭಾಗಾದಿ ಗಳನ್ನು, ಧರ್ಮರಹಸ್ಯವನ್ನು ರಚಿಸಿ ಅದರ ವಿಷಯವೆಲ್ಲವನ್ನೂ ಚೆನ್ನಾಗಿ ತಿಳಿದು ಅದರಂತೆ ಆಚರಿಸತಕ್ಕವನು. ಅವನು ಈ ವಿಚಾರದಲ್ಲಿ ಇತ್ಯರ್ಥಮಾಡಲು ಸಮರ್ಥನು. ಆದ್ದರಿಂದ ಎಲೈಬಾಲಕನೇ ನಿನ್ನ ಆಸ್ತಿಯ ವಿಷಯದಲ್ಲಿ ನೀನು ನಿನ್ನ ತಂದೆಯನ್ನೇ ಕೇಳು ಎಂದು ಹೇಳಿದರು. ತಂದೆ ಮಕ್ಕಳ ಆಸ್ತಿಯ ವಿಚಾರದಲ್ಲಿ ಈಗಲೂ ಹೀಗೆ ನಡೆಯುತ್ತಿರುವುದು ರೂಢಿ ಯಾಗಿದೆ. ಅನಂತರ ತಂದೆಯು ಪುತ್ರನಿಗೆ ಹೇಳಿದ ವಿಷಯವನ್ನು ಮುಂದೆ ತಿಳಿಸುವರು.

ಸ ಪಿತರಮೇತ್ಯಾಬ್ರವೀತ್ತ್ವಾಂ ಹ ವಾವ ಮಹ್ಯಂ ತ (ತಾ)ತಾಭಾಕ್ಷುರಿತಿ ತಂ ಪಿತಾಬ್ರವೀನ್ಮಾ ಪುತ್ರಕ ತದಾದೃಥಾ ಅಂಗಿರಸೋ ವಾ ಇಮೇ ಸ್ವರ್ಗಾಯ ಲೋಕಾಯ ಸತ್ರಮಾಸತೇ ತೇ ಷಷ್ಠಂ ಷಷ್ಠಮೇವಾ- ಹರಾಗತ್ಯ ಮುಹ್ಯಂತಿ ತಾನೇತೇ ಸೂಕ್ತೇ ಷಷ್ಠೇಽಹನಿ ಶಂಸಯ ತೇಷಾಂ ಯತ್ಸಹಸ್ರಂ ಸತ್ರಪರಿವೇಷಣಂ ತತ್ತೇ ಸ್ವರ್ಯಂತೋ ದಾಸ್ಯಂತೀತಿ ತಥೇತಿ ॥

ತತ ಊರ್ಧ್ವಂ ನಾಭಾನೇದಿಷ್ಠಸ್ಯ ಕೃತ್ಯಂ ದರ್ಶಯತಿ—ಸ ನಾಭಾನೇದಿಷ್ಠೋ ಭ್ರಾತೃ- ಭಿಸ್ತಥೋಕ್ತಃ ಸನ್ಪಿತರಂ ಪ್ರತ್ಯಾಗತ್ಯೇದಮಬ್ರವೀತ್ । ಹೇ ಪಿತರ್ಮಹ್ಯಂ ತ್ವಾ(ತ್ವಾಂ) ಹ ವಾವ ತ್ವಾಮೇವ ಭ್ರಾತರಃ ಸರ್ವೇಽಪ್ಯಭಾಕ್ಷುರ್ಭಾಗಮಕಾರ್ಷುರತೋ ಮದೀಯೋ ಭಾಗ- ಸ್ತ್ವಯ್ಯಸ್ತಿ ತಂ ಮೇ ದೇಹೀತ್ಯಭಿಪ್ರಾಯಃ । ತತಸ್ತಂ ನಾಭಾನೇದಿಷ್ಠಂ ಪಿತಾ ಮನುರೇವಮ- ಬ್ರವೀತ್ । ಹೇ ಪುತ್ರಕ ಬಾಲಕ ಭ್ರಾತೃಣಾಂ ವಚನಂ ಮಾಽಽದೃಥಾಸ್ತಸ್ಮಿನ್ವಚನ ಆದರಂ ಮಾ ಕಾರ್ಷೀಃ । ನಾಸ್ತ್ಯೇವ ಮದ್ಧಸ್ತೇ ತ್ವದೀಯೋ ಭಾಗಃ ಸರ್ವಮಪಿ ಧನಂ ತ್ವದ್ಭ್ರಾತೃಭಿರ್ಗೃ- ಹೀತಂ । ತವ ತು ಧನಪ್ರಾಪ್ತ್ಯರ್ಥಮೇಕಮುಪಾಯಂ ಕಥಯಿಷ್ಯಾಮಿ । ಅಂಗಿರೋನಾಮಕಾ ಮಹರ್ಷಯ ಇಮೇ ಸಮೀಪದೇಶವರ್ತಿನಃ ಸ್ವರ್ಗಾರ್ಥಂ ಸತ್ರಮನುತಿಷ್ಠಂತಿ ತೇ ಪುನಃ ಪುನಃ ಸತ್ರಮುಪಕ್ರಮ್ಯ ತದಾ ತದಾ ಪ್ರಾಪ್ತಂ ತತ್ತತ್ ಷಷ್ಠಮೇವಾಹರಾಗತ್ಯ ತತ್ರ ತತ್ರ ಮಂತ್ರಬಾ- ಹುಲ್ಯೇ ಮುಹ್ಯಂತಿ ಭ್ರಾಂತಾಃ ಸಂತಃ ಸತ್ರಸಮಾಪ್ತಿಮಪ್ರಾಪ್ಯ ಸರ್ವದಾ ಕ್ಲಿಶ್ಯಂತಿ । ತಾನ್- ಮಹರ್ಷೀನ್ ಷಷ್ಠೇಽಹನಿ ತ್ವಂ ಗತ್ವೇದಮಿತ್ಥೇತಿ ಯೇ ಯಜ್ಞೇನೇತಿ ಚೈತೇ ಉಭೇ ಸೂಕ್ತೇ

**ಶಂಸಯ । ತತಸ್ತೇಷಾಮೃಷೀಣಾಂ ಯತ್ಸಹಸ್ರಸಂಖ್ಯಾಕಂ ಧನಂ ಸತ್ರಪರಿವೇಷಣಂ ಸತ್ರಾರ್ಥಂ ಪರಿತಃ ಸಂಪಾದಿತಮಸ್ತಿ ತತ್ಸರ್ವಮನುಷ್ಠಾನಾದೂರ್ಧ್ವಮವಶಿಷ್ಟಂ ಧನಂ ತೇ ತುಭ್ಯಮಂಗಿರಸೋ ಮಹರ್ಷಯಃ ಸ್ವರ್ಗಂ ಪ್ರಾಪ್ನುವಂತೋ ದಾಸ್ಯಂತೀತಿ । ತಥಾಸ್ತ್ವಿತಿ ತತ್ಪಿತೃವಚನಂ ನಾಭಾನೇದಿಷ್ಠೋಽಂಗೀ ಚಕಾರ ॥**

ಅನಂತರ ನಾಭಾನೇದಿಷ್ಠನ ಅಣ್ಣಂದಿರು ಹೀಗೆ ಹೇಳಿದಮೇಲೆ ಆ ಬಾಲಕನು ತನ್ನ ತಂದೆಯ ಬಳಿಗೆ ಹೋಗಿ, ಎಲೈ ತಂದೆಯೇ ತಮ್ಮ ಭಾಗದ ಆಸ್ತಿಯನ್ನು ತೆಗೆದುಕೊಂಡ ನನ್ನ ಸಹೋದರರು ಈರೀತಿ ಹೇಳುತ್ತಾರೆ—ಎಲೈ ಬಾಲಕನೇ ನಿಮ್ಮ ತಂದೆಯೇ ನಮಗೆಲ್ಲಾ ಆಸ್ತಿಯನ್ನು ಭಾಗಮಾಡಿಕೊಟ್ಟನು. ನಮ್ಮದು ಮಾತ್ರ ನಮ್ಮಲ್ಲಿದೆ. ನಿನ್ನದು ನಮ್ಮಲ್ಲಿಲ್ಲ, ನಿನ್ನ ತಂದೆಯ ಬಳಿಯಲ್ಲೇ ಇದೆ, ಆದ್ದರಿಂದ ನಿನ್ನ ತಂದೆಯ ಬಳಿಗೆ ಹೋಗಿ ಕೇಳು ಎಂದು ಹೇಳಲಾಗಿ, ಆ ಬಾಲಕನು ತನ್ನ ತಂದೆಗೆ ಈ ವಿಷಯವನ್ನೆಲ್ಲಾ ತಿಳಿಸಿ ಎಲೈ ತಂದೆಯೇ ನನ್ನ ಪಾಲಿನ ಆಸ್ತಿಯನ್ನು ಈಗಲಾದರೂ ಕೊಡು ಎಂದು ಕೇಳಿದನು. ಅದನ್ನು ಕೇಳಿ ಅವನ ತಂದೆಯು ಪುತ್ರನನ್ನು ಕುರಿತು—ಎಲೈ ಬಾಲಕನೇ ನಿಮ್ಮ ಅಣ್ಣಂದಿರು ಹೇಳುವ ಮಾತು ನಿಜವಲ್ಲ, ಅವರ ಮಾತನ್ನು ನಂಬಬೇಡ ನನ್ನಲ್ಲಿದ್ದ ಆಸ್ತಿಯೆಲ್ಲವನ್ನೂ ಅವರೇ ತೆಗೆದುಕೊಂಡಿರುವರು. ನನ್ನಲ್ಲಿ ಈಗ ಏನೂ ಇಲ್ಲ, ಹೇಗೆ ಕೊಡಲಿ? ಆದರೆ ನಿನಗೆ ಧನವು ಸಿಕ್ಕಬೇಕಾದರೆ ಒಂದು ಉಪಾಯವನ್ನು ಹೇಳುವೆನು ಕೇಳು ಎಂದು ಹೇಳಿ—ಅಂಗಿರಾ ಎಂಬ ಹೆಸರಿನ ಕೆಲವು ಮಹರ್ಷಿಗಳು ಇಲ್ಲಿಯೇ ಸಮೀಪಪ್ರದೇಶದಲ್ಲಿ ಸ್ವರ್ಗಕ್ಕೆ ಹೋಗಬೇಕೆಂದು ಬಯಸಿ ದ್ವಾದಶಾಹವೆಂಬ ಸತ್ರಯಾಗವನ್ನು ಮಾಡುತ್ತಿರುವರು. ಅವರು ಸತ್ರಯಾಗವನ್ನು ಪ್ರಾರಂಭಿಸಿ ಯಜ್ಞಮಾಡುತ್ತಿರುವರು ಅವರು ಸತ್ರಯಾಗವನ್ನು ಪ್ರಾರಂಭಿಸಿ ಯಜ್ಞಮಾಡುತ್ತಿರುವಾಗ ಆರನೇದಿವಸ ಪಠಿಸಬೇಕಾದ ಮಂತ್ರಗಳು ಬಹಳವಾಗಿಯೂ ನಾನಾವಿಧವಾಗಿಯೂ ಇರುವುದರಿಂದ ಯಾವಕಾಲದಲ್ಲಿ ಯಾವಮಂತ್ರವನ್ನು ಪಠಿಸಬೇಕೆಂಬ ವಿಷಯದಲ್ಲಿ ನಿರ್ದಿಷ್ಟಕ್ರಮವನ್ನು ತಿಳಿಯದೆ ಭ್ರಾಂತರಾಗಿರುವರು (ಸಂಶಯಪಡುತ್ತಿರುವರು). ಅನೇಕಾವರ್ತಿ ಯಜ್ಞವನ್ನು ಪ್ರಾರಂಭಿಸಿ ಮಾಡುತ್ತಿದ್ದರೂ ಆರನೆಯ ದಿವಸವು ಪ್ರಾಪ್ತವಾದಾಗ ಮುಂದಿನ ಕ್ರಮವನ್ನು ತಿಳಿಯದೆ ಸಂಶಯಗ್ರಸ್ತರಾಗುತ್ತಿರುವರು. ಆದ್ದರಿಂದ ಸತ್ರಯಾಗವನ್ನು ಸಮಾಪ್ತಿಗೊಳಿಸಲು ಸಾಧ್ಯವಿಲ್ಲದೆ ಸುಮ್ಮನೆ ಕ್ಲೇಶಪಡುತ್ತಿರುವರು. ~~ಆದ್ದರಿಂದ ಸತ್ರಯಾಗವನ್ನು ಸಮಾಪ್ತಿಗೊಳಿಸಲು ಸಾಧ್ಯವಿಲ್ಲದೆ ಸುಮ್ಮನೆ ಕ್ಲೇಶಪಡುತ್ತಿರುವ~~ರು. ಆದ್ದರಿಂದ ನೀನು ಆ ಋಷಿಗಳು ಮಾಡುತ್ತಿರುವ ಯಜ್ಞಕ್ಕೆ ಹೋಗಿ ಅಲ್ಲಿಯೇ ಇದ್ದು ಆರನೆಯ ದಿವಸ ಬಂದಕೂಡಲೇ ನೀನು **ಇದಮಿತ್ಥಾ ರೌದ್ರಂ** ಮತ್ತು **ಯೇ ಯಜ್ಞೇನ** ಎಂಬ ಎರಡು ಸೂಕ್ತಗಳನ್ನು ಈ ಆರನೆಯ ದಿವಸದಲ್ಲಿ ಪಠಿಸುವಂತೆ ಅವರಿಗೆ ತಿಳಿಸು. ಅದರಿಂದ ಅವರು ತಮ್ಮ ಯಜ್ಞವನ್ನು ಮುಗಿಸಿ ಸ್ವರ್ಗಕ್ಕೆ ಹೋಗಲು ಸಾಧ್ಯವಾಗುವುದು. ಆಗ ಆ ಋಷಿಗಳು ಯಜ್ಞನಿರ್ವಾಹಕ್ಕಾಗಿ ಕೂಡಿಸಿಟ್ಟಿರುವ ಅಸಂಖ್ಯವಾದ ಧನವನ್ನು ಯಜ್ಞಸಮಾಪ್ತಿ ಮಾಡಿ ಸ್ವರ್ಗಕ್ಕೆ ಹೋಗುವಾಗ ನಿನಗೆ ಕೊಡುವರು ಇದನ್ನು ಕೇಳಿ ನಾಭಾನೇದಿಷ್ಠನು ಹಾಗೆಯೇ ಆಗಲೆಂದು ತನ್ನ ತಂದೆಯ ವಚನವನ್ನು ಒಪ್ಪಿಕೊಂಡು ಆ ಋಷಿಗಳು ಮಾಡುತ್ತಿರುವ ಯಜ್ಞಶಾಲೆಗೆ ಹೋದನು.

ತಾನುಪೈತ್ಪ್ರತಿಗೃಭ್ಣೀತ ಮಾನವಂ ಸುಮೇಧಸ ಇತಿ ತಮಬ್ರುವನ್ಕಿಂ-
ಕಾಮೋ ವದಸೀದಮೇವ ವಃ ಷಷ್ಠಮಹಃ ಪ್ರಜ್ಞಾಪಯಾನೀತ್ಯ-
ಬ್ರವೀದಥ ಯದ್ವ ಏತತ್ಸಹಸ್ರಂ ಸತ್ರಪರಿವೇಷಣಂ ತನ್ಮೇ ಸ್ವ-
ರ್ಯಂತೋ ದತ್ತೇತಿ ತಥೇತಿ ತಾನೇತೇ ಸೂಕ್ತೇ ಷಷ್ಠೇಽಹನ್ಯಶಂ-
ಸಯತ್ತತೋ ವೈ ತೇ ಪ್ರ ಯಜ್ಞಮಜಾನನ್ಪ್ರ ಸ್ವರ್ಗಂ ಲೋಕಂ ॥

ಅಂಗೀಕಾರಾದೂರ್ಧ್ವಂ ಕಿಂ ಕೃತವಾನಿತ್ಯಾಶಂಕ್ಯ ತದ್ವೃತ್ತಾಂತಂ ದರ್ಶಯತಿ–ತಾನಂಗಿರಸೋ ಮಹರ್ಷೀನುಪೈತ್, ನಾಭಾನೇದಿಷ್ಠಃ ಸಮೀಪಂ ಪ್ರಾಪ್ತವಾನ್ । ಪ್ರಾಪ್ಯ ಚ ಪ್ರತಿಗೃಭ್ಣೀತೇತ್ಯಾದಿಮಂತ್ರಪಾದೇನೈವ ಮಹರ್ಷೀಣಾಮಗ್ರೇ ಕಿಂಚಿದ್ವಚನಮುಕ್ತವಾನ್ । ತಸ್ಯ ಪಾದಸ್ಯಾಯಮರ್ಥಃ । ಹೇ ಸುಮೇಧಸಃ ಶೋಭನಮೇಧಾಯುಕ್ತಾ ಅಂಗಿರಸೋ ಮಾನವಂ ಮನೋಃ ಪುತ್ರಂ ನಾಭಾನೇದಿಷ್ಠಾಖ್ಯಂ ಮಾಂ ಪ್ರತಿಗೃಭ್ಣೀತ ಯೂಯಂ ಸ್ವೀಕುರುತೇತಿ । ತಥಾ ವದಂತಂ ನಾಭಾನೇದಿಷ್ಠಂ ಪ್ರತಿ ಮುನಯ ಇದಮಬ್ರುವನ್ । ಹೇ ನಾಭಾನೇದಿಷ್ಠ ಕಿಂಕಾಮಃ ಕೀದೃಗಪೇಕ್ಷಾಯುಕ್ತಃ ಸನ್ನಸ್ಮಾನ್ ಪ್ರತ್ಯೇವಂ ವದಸೀತಿ । ತತಃ ಸ ನಾಭಾನೇದಿಷ್ಠೋಽಬ್ರವೀತ್ । ಹೇ ಮಹರ್ಷಯೋ ವೋ ಯುಷ್ಮಾಕಮಿದಮೇವ ಷಷ್ಠಮಹಃ ಪ್ರಜ್ಞಾಪಯಾನಿ ಪ್ರಕರ್ಷೇಣ ಬೋಧಯಾಮೀತಿ । ಅಥ ಬೋಧನಾನಂತರಂ ಸತ್ರಪರಿವೇಷಣಂ ಭವದ್ಭಿಃ ಸತ್ರಾರ್ಥಂ ಸಂಪಾದಿತಮನುಷ್ಠಾನಾದೂರ್ಧ್ವಮವಶಿಷ್ಟಂ ಯದೇತತ್ಸಹಸ್ರಸಂಖ್ಯಾಕಂ ಧನಮಸ್ತಿ ತತ್ಸರ್ವಂ ಯೂಯಂ ಮೇ ಮಹ್ಯಂ ಸ್ವರ್ಗಂ ಪ್ರತಿ ಗಚ್ಛಂತೋ ದತ್ತೇತಿ । ತಥೇತಿ ಮುನಿಭಿರಂಗೀಕೃತೇ ಸತಿ ತಾನ್ಮುನೀನೇತೇ ಉಭೇ ಸೂಕ್ತೇ ಷಷ್ಠೇಽಹನ್ಯಶಂಸಯತ್ । ತತ ಏವ ತೇ ಮುನಯೋ ಯಜ್ಞಂ ಪ್ರಕರ್ಷೇಣಾಜಾನನ್ ಜ್ಞಾತವಂತಃ । ತದನುಷ್ಠಾನೇನ ಸ್ವರ್ಗಂ ಲೋಕಮಪಿ ಪ್ರಾಜಾನನ್ ॥

ನಾಭಾನೇದಿಷ್ಠನು ತಂದೆಯ ಮಾತನ್ನು ಕೇಳಿ ಯಜ್ಞಶಾಲೆಗೆ ಹೋದನಂತರ ಮುಂದೆ ಅವನು ಏನು ಮಾಡಿದನೆಂಬ ವಿಷಯವನ್ನು ತಿಳಿಸುವರು. ಅನಂತರ ಆ ನಾಭಾನೇದಿಷ್ಠನು ಅಂಗಿರಾಋಷಿಗಳ ಸಮೀಪಕ್ಕೆ **ಪ್ರತಿಗೃಭ್ಣೀತ** ಎಂಬ ವೇದ ವಚನದ ಒಂದು ವಾಕ್ಯವನ್ನು ಹೇಳಿ ಸುಮ್ಮನಿದ್ದನು. ಈ ವಾಕ್ಯದ ಅರ್ಥವು—ಎಲೈ ಬುದ್ಧಿಶಾಲಿಗಳಾದ ಅಂಗಿರಾಋಷಿಗಳೇ ನಾನು ಮನುವಿನ ಪುತ್ರನಾದ ನಾಭಾನೇದಿಷ್ಠನೆಂಬುವನು, ನನ್ನನ್ನು ನೀವು ಸ್ವೀಕರಿಸಿ ಎಂದು ಹೇಳಿದನು. ಅದನ್ನು ಕೇಳಿ ಆ ಋಷಿಗಳು ಎಲೈ ನಾಭಾನೇದಿಷ್ಠನೇ, ನಮ್ಮ ಬಳಿಗೆ ನೀನು ಬಂದಿರುವ ಕಾರಣವೇನು, ನಿನಗೆ ಏನುಬೇಕು ಅದನ್ನು ತಿಳಿಸು ಎನ್ನಲಾಗಿ, ನಾಭಾನೇದಿಷ್ಠನು—ಎಲೈ ಮಹರ್ಷಿಗಳೇ ನಾನು ಬಂದ ಕಾರಣವನ್ನು ತಿಳಿಸುವೆನು, ದಯವಿಟ್ಟು ಕೇಳಿ, ನೀವು ಮಾಡುತ್ತಿರುವ ಈ ಸತ್ರಯಾಗದಲ್ಲಿ ಇದು ಆರನೆಯ ದಿನವು. ಈದಿನ ಅನೇಕವಿಧವಾದ ಮಂತ್ರಗಳನ್ನು ಪಠಿಸಬೇಕಾಗಿರುವುದರಿಂದ ಯಾವ ಮಂತ್ರವನ್ನು ಯಾವಕಾಲದಲ್ಲಿ ಪಠಿಸಬೇಕು ಎಂಬ ತಿಳುವಳಿಕೆಯೂ ಅನೇಕರಿಗೆ ತಿಳಿದಿರುವುದಿಲ್ಲ. ಆದ್ದರಿಂದ ನನ್ನ ತಂದೆಯ ಮಾತಿನಂತೆ ನಾನು ಈ ದಿವಸ ಅವಶ್ಯಕವಾಗಿ ಪಠಿಸಬೇಕಾಗಿರುವ ಮಂತ್ರಗಳನ್ನು ಬಹಳ ಎಚ್ಚರಿಕೆಯಿಂದ ನಿಮ್ಮ ಗಮನಕ್ಕೆ ತಂದು ಜ್ಞಾಪಕಮಾಡುತ್ತೇನೆ. ಅದರಿಂದ ನೀವು ಸತ್ರಾನುಷ್ಠಾನವನ್ನು ಕ್ರಮವಾಗಿ ಮಾಡಿ ಅನಂತರ ನೀವು ಸ್ವರ್ಗಕ್ಕೆ ಹೋಗುವಾಗ ಯಜ್ಞಾರ್ಥವಾಗಿ ನೀವು ಸಂಗ್ರಹಿಸಿ ಯಜ್ಞಕ್ಕಾಗಿ ಖರ್ಚಾಗಿ ಉಳಿದಿರುವ ಧನವನ್ನು ನನಗೆ ಕೊಡಬೇಕು ಎಂದು ಹೇಳಿ ಆ ದಿನದಲ್ಲಿ ಪಠಿಸಬೇಕಾದ ಇದಮಿತ್ಥಾ ರೌದ್ರಂ ಮತ್ತು **ಯೇ ಯಜ್ಞೇನ ದಕ್ಷಿಣಯಾ ಸಮಕ್ತಾ** ಎಂಬ ಎರಡು ಸೂಕ್ತಗಳನ್ನೂ ಅಲ್ಲಿಯೇ ಪಠಿಸಿದನು. ಈ ಸೂಕ್ತಪಠನದಿಂದ ಆ ಮಹರ್ಷಿಗಳ ಯಜ್ಞವು ಚೆನ್ನಾಗಿ ನೆರವೇರಿಸಲ್ಪಟ್ಟು ಅದರ ಫಲವಾಗಿ ಆ ಮಹರ್ಷಿಗಳು ಸ್ವರ್ಗಲೋಕಕ್ಕೆ ಹೊರಟುಹೋದರು.

**ತದ್ಯದೇತೆ ಸೂಕ್ತೇ ಷಷ್ಠೇಽಹನಿ ಶಂಸತಿ ಯಜ್ಞಸ್ಯ ಪ್ರಜ್ಞಾತ್ಯೈ ಸ್ವರ್ಗಸ್ಯ ಲೋಕಸ್ಯಾನುಖ್ಯಾತ್ಯೈ**

ಸೂಕ್ತದ್ವಯಂ ಪ್ರಶಸ್ಯ ತದ್ವಿಧಿಂ ನಿಗಮಯತಿ—ಯಸ್ಮಾತ್ಸೂಕ್ತದ್ವಯಶಂಸನೇನಾಂಗಿರೋಭಿರ್ಯಜ್ಞಃ ಸ್ವರ್ಗಶ್ಚ ಪ್ರಜ್ಞಾತಸ್ತಸ್ಮಾದ್ಧೋತಾ ತದುಭಯಂ ಶಂಸೇತ್ । ತಚ್ಚ ಯಜ್ಞಸ್ವರ್ಗಯೋರವಗಮಾಯ ಭವತಿ ॥

ಮೇಲೆ ಹೇಳಿದ ಎರಡು ಸೂಕ್ತಗಳನ್ನು ಪ್ರಶಂಸೆಮಾಡಿ ಅವುಗಳನ್ನು ಪಠಿಸುವ ಕ್ರಮವನ್ನು ತಿಳಿಸುವರು. ಮೇಲೆ ಹೇಳಿದ ಎರಡು ಸೂಕ್ತಗಳನ್ನು ಪಠಿಸಿದ್ದರಿಂದ ಅಂಗಿರಾಋಷಿಗಳು ಯಜ್ಞಮಾಡುವ ವಿಧಾನವನ್ನು ತಿಳಿದುಕೊಂಡು ಸ್ವರ್ಗಕ್ಕೆ ಹೋದರಷ್ಟೆ. ಈ ಕಾರಣದಿಂದಲೇ ಈಗಲೂ ಯಜ್ಞದ ಆರನೇ ದಿನದಲ್ಲಿ ಹೋತೃವು ಈ ಎರಡು ಸೂಕ್ತಗಳನ್ನೂ ಪಠಿಸಬೇಕು. ಹೀಗೆ ಮಾಡುವುದರಿಂದ ಯಜ್ಞಮಾಡುವ ತಿಳುವಳಿಕೆಯೂ ಸ್ವರ್ಗಲೋಕಪ್ರಾಪ್ತಿಯೂ ಉಂಟಾಗುವುದು.

ತಂ ಸ್ವರ್ಯಂತೋಽಬ್ರುವನ್ನೇತತ್ತೇ ಬ್ರಾಹ್ಮಣ ಸಹಸ್ರಮಿತಿ ತದೇನಂ ಸಮಾಕುರ್ವಾಣಂ ಪುರುಷಃ ಕೃಷ್ಣಶವಾಸ್ಯುತ್ತರತ ಉಪೋತ್ಥಾಯಾಬ್ರವೀನ್ಮಮ ವಾ ಇದಂ ಮಮ ವೈ ವಾಸ್ತುಹಮಿತಿ ಸೋಽಬ್ರವೀನ್ಮಹ್ಯಂ ವಾ ಇದಮದುರಿತಿ ತಮಬ್ರವೀತ್ತದ್ವೈ ನೌ ತವೈವ ಪಿತರಿ ಪ್ರಶ್ನ ಇತಿ ಸ ಪಿತರಮೈತ್ತಂ ಪಿತಾಽಬ್ರವೀನ್ನನು ತೇ ಪುತ್ರಕಾದೂಃರಿತ್ಯದುರೇವ ಮ ಇತ್ಯಬ್ರವೀತ್ತತ್ತು ಮೇ ಪುರುಷಃ ಕೃಷ್ಣಶವಾಸ್ಯುತ್ತರತ ಉಪೋದತಿಷ್ಠನ್ಮಮ ವಾ ಇದಂ ಮಮ ವೈ ವಾಸ್ತುಹಮಿತ್ಯಾದಿತೇತಿ ತಂ ಪಿತಾಽಬ್ರವೀತ್ತಸ್ಯೈವ ಪುತ್ರಕ ತತ್ತತ್ತು ಸ ತುಭ್ಯಂ ದಾಸ್ಯತೀತಿ ಸ ಪುನರೇತ್ಯಾಬ್ರವೀತ್ತವ ಹ ವಾವ ಕಿಲ ಭಗವ ಇದಮಿತಿ ಮೇ ಪಿತಾಽಽಹೇತಿ ಸೋಽಬ್ರವೀತ್ತದಹಂ ತುಭ್ಯಮೇವ ದದಾಮಿ ಯ ಏವ ಸತ್ಯಮವಾದೀರಿತಿ ॥

ಪುನರಪಿ ಸೂಕ್ತಯೋರ್ಮಹಿಮಾನಂ ದರ್ಶಯಿತುಮುಪಾಖ್ಯಾನಮೇವಾಹ—ತಂ ನಾಭಾನೇದಿಷ್ಠಂ ಸ್ವರ್ಯಂತಃ ಸ್ವರ್ಗಂ ಪ್ರಾಪ್ನುವಂತೋಽಂಗಿರಸೋಽಬ್ರುವನ್ । ಹೇ ಬ್ರಾಹ್ಮಣ ನಾಭಾನೇದಿಷ್ಠೈತದ್ಗೋಸಹಸ್ರಂ ಯಜ್ಞಭೂಮಾವವಶಿಷ್ಟಂ ತೇ ತುಭ್ಯಂ ದತ್ತಮಿತಿ ಶೇಷಃ । ಅತ್ರ ಶಾಖಾಂತರಾನುಸಾರೇಣ ಗೋಸಹಸ್ರಮಿತ್ಯರ್ಥೋ ಲಭ್ಯತೇ । ಶಾಖಾಂತರೇ ಚೈವಮಾಮ್ನಾಯತೇ—'ತೇ ಸುವರ್ಗಂ ಲೋಕಂ ಯಂತೋ ಯ ಏಷಾಂ ಪಶವ ಆಸಂಸ್ತಾನಸ್ಮಾ ಅದದುಃ' ಇತಿ । ತದ್ಗೋಸಹಸ್ರಂ ಸಮಾಕುರ್ವಾಣಂ ಸಮ್ಯಗಾತ್ಮಸಾತ್ಕುರ್ವಂತಮೇನಂ ನಾಭಾನೇದಿಷ್ಠಂ ಕಶ್ಚಿತ್ಪುರುಷೋ ಯಜ್ಞಭೂಮೇರುತ್ತರತ ಉಪೋತ್ಥಾಯ ಸಮೀಪ ಏವೋತ್ಥಿತೋ ಭೂತ್ವೇದಮಬ್ರವೀತ್ । ಕೀದೃಶಃ ಪುರುಷಃ । ಕೃಷ್ಣಶವಾಸೀ, ಅತಿಶಯೇನ ಕೃಷ್ಣಂ ಮಲಿನಂ ವಸ್ತ್ರಂ ಕೃಷ್ಣಶಂ ತದ್ವಸ್ತ್ರ ಆಚ್ಛಾದಯತೀತಿ ಕೃಷ್ಣಶವಾಸೀ । ಅತ್ರಾಯಂ ಮಲಿನವಸ್ತ್ರಃ ಪುರುಷಃ ಪಶುಸ್ವಾಮೀ ರುದ್ರ ಇತ್ಯವಗಂತವ್ಯಂ । ತಥಾ ಚ ಶಾಖಾಂತರೇ ಪಠ್ಯತೇ—'ತಂ

ಪಶುಭಿಶ್ಚರಂತಂಯಜ್ಞವಾಸ್ತೌ ರುದ್ರ ಆಗಚ್ಛತ್' ಇತಿ । ಸ ರುದ್ರಃ ಕಿಮಬ್ರವೀದಿತಿ ತದಭಿಧೀಯತೇ । ಹೇ ನಾಭಾನೇದಿಷ್ಠೇದಂ ಪಶುಸಹಸ್ರಂ ಮಮೈವ ಸ್ವಂ । ತತ್ರೇಯಮುಪಪತ್ತಿಃ । ವಾಸ್ತುಹಂ ವಾಸ್ತು (ಸ್ತೌ) ಯಜ್ಞಭೂಮೌ ಹೀನಂ ಕರ್ಮಾಂತೇ ಪರಿತ್ಯಕ್ತಂ ವಾಸ್ತುಹಂ ತಾದೃಶಂ ಸರ್ವಂ ಮಮೈವ ಸ್ವಮಿತಿ ಸರ್ವತ್ರ ಸಂಪ್ರತಿಪನ್ನಮಿತಿ । ಏವಂ ಪುರುಷೇಣೋಕ್ತಃ ಸ ನಾಭಾನೇದಿಷ್ಠಃ ಪುನರೇನಮಬ್ರವೀತ್ । ಹೇ ರುದ್ರ ಮಹ್ಯಮೇವೇದಂ ಸಹಸ್ರಮಂಗಿರಸೋ ದತ್ತವಂತ ಇತಿ । ತಂ ತಥಾ ವದಂತಂ ನಾಭಾನೇದಿಷ್ಠಂ ಪುನಃ ಪುರುಷೋಽಬ್ರವೀತ್ । ಹೇ ನಾಭಾನೇದಿಷ್ಠ ತದ್ವೈ ತಸ್ಮಿನ್ನೇವ ತ್ವದೀಯಂ ಮದೀಯಮಿತಿ ಸಂದೇಹೇ ಸತಿ ನಾವಾವಯೋರುಭಯೋರಪಿ ತವೈವ ಪಿತರಿ ಮನೌ ನಿರ್ಣಯಾರ್ಥಂ ಪ್ರಶ್ನೋಽಸ್ತ್ವಿತಿ । ತತಃ ಸ ನಾಭಾನೇದಿಷ್ಠಃ ಪಿತರಂ ಪ್ರಷ್ಟುಮೈತ್, ಆಗತವಾನ್ । ಸ ಪಿತಾ ತೇನ ಪೃಷ್ಟಸ್ತಮಬ್ರವೀತ್ । ಹೇ ಪುತ್ರಕ ಬಾಲಕ ತುಭ್ಯಮಂಗಿರಸೋ ಮಹರ್ಷಯೋಽದುರ್ನನು ದತ್ತವಂತಃ ಕಿಂ । ಪ್ಲುತಿಃ ಪ್ರಶ್ನಾರ್ಥಾ । ಏವಂ ಪಿತ್ರಾ ಪೃಷ್ಟಃ ಸ ನಾಭಾನೇದಿಷ್ಠೋ ಮೇ ಮಹ್ಯಮದುರೇವ ದತ್ತವಂತ ಏವೇತ್ಯಬ್ರವೀತ್ । ತರ್ಹಿ ಕಸ್ತವ ವಿಚಾರ ಇತ್ಯಾಶಂಕಿತೇ ಸ ನಾಭಾನೇದಿಷ್ಠ ಏವಮುವಾಚ । ತೇ ಮಹರ್ಷಯೋ ದತ್ತವಂತ ಏವ ಕಿಂ ತು ತದ್ಗೋಸಹಸ್ರಂ ಕಶ್ಚಿತ್ಪುರುಷೋ ಮಲಿನವಸ್ತ್ರಃ ಸನ್ಯಜ್ಞಭೂಮೇರುತ್ತರತ ಉತ್ಥಾಯೇದಂ ಗೋ ಸಹಸ್ರಂ ಮಮೈವ ಸ್ವಂ ಯಜ್ಞವಾಸ್ತೌ ಹೀನತ್ವಾದಿತ್ಯಭಿಧಾಯಾಽಽದಿತಾಽಽದಾನಂ ಕೃತವಾನಪಹೃತವಾನಿತ್ಯರ್ಥಃ । ತಥಾ ಬ್ರುವಂತಂ ಪುತ್ರಂ ಪ್ರತಿ ಪಿತಾಬ್ರವೀತ್ । ಹೇ ಪುತ್ರಕ ಶಿಶೋ ತದ್ಯಜ್ಞವಾಸ್ತೌ ಹೀನಂ ಗೋಸಹಸ್ರಂ ತಸ್ಯೈವ ರುದ್ರಸ್ಯ ಸ್ವಂ ಪಶುಪತಿತ್ವಾದ್ಯಜ್ಞಾವಶಿಷ್ಟಸ್ವಾಮಿತ್ವಾಚ್ಚ । ಕಿಂತು ತಥಾ ಸತ್ಯಪಿ ತವ ಹಾನಿರ್ನಾಸ್ತಿ । ಸ ರುದ್ರಸ್ತದ್ಗೋಸಹಸ್ರಂ ತುಭ್ಯಂ ದಾಸ್ಯತೀತಿ । ಯಜ್ಞಕಾಲೇ ತತ್ಸರ್ವಮಂಗಿರಸಾಂ ಧನಂ ಭವತಿ ಸಮಾಪ್ತೇತು ಯಜ್ಞೇ ಯದವಶಿಷ್ಟಂ ತಸ್ಯ ರುದ್ರ ಏವ ಸ್ವಾಮೀತಿ ನಾಂಗಿರಸಾಂ ದಾತುಮಧಿಕಾರೋಽಸ್ತೀತ್ಯಭಿಪ್ರಾಯಃ । ತಥಾ ರುದ್ರವಚನಂ ಶಾಖಾಂತರ ಏವಮಾಮ್ನಾಯತೇ—'ನ ವೈ ತಸ್ಯ ತದೀಶತ ಇತ್ಯಬ್ರವೀದ್ಯಜ್ಞವಾಸ್ತೌ ಹೀಯತೇ ಮಮ ವೈ ತತ್' ಇತಿ । ತತೋ ದಾಸ್ಯತೀತಿ ವಚನಂ ಶ್ರುತ್ವಾ ಸ ನಾಭನೇದಿಷ್ಠಃ ಪುನರಪಿ ರುದ್ರಸ್ಯ ಸಮೀಪಮೇತ್ಯೇದಮಬ್ರವೀತ್ । ಹೇ ಭಗವನ್ಪೂಜ್ಯ ರುದ್ರ ತವ ಹ ವಾವ ಕಿಲ ತವೈವ ಸರ್ವಮಿದಂ ಸ್ವಮಿತಿ ಮದೀಯಃ ಪಿತಾ ಪ್ರಾಹೇತಿ । ತತಃ ಸ ರುದ್ರೋಽಬ್ರವೀತ್ । ಹೇ ನಾಭಾನೇದಿಷ್ಠ ತತ್ಸರ್ವಂ ತುಭ್ಯಮೇವ ದದಾಮಿ ಯಸ್ತ್ವಂ ಸತ್ಯಮೇವಾವಾದೀರ್ನ ತ್ವನೃತಮುಕ್ತವಾನಸಿ ತಸ್ಮಾತ್ಪರಿತೋಷಾತ್ಸತ್ಯವಾದಿನೇ ತುಭ್ಯಮೇವ ದದಾಮೀತಿ ॥

ಮೇಲಿನ ಎರಡು ಸೂಕ್ತಗಳ ಮಹಿಮೆಯನ್ನು ತಿಳಿಸುವುದಕ್ಕಾಗಿ ಮತ್ತೊಂದು ಉಪಾಖ್ಯಾನವನ್ನು ತಿಳಿಸುವರು. ಯಜ್ಞಪರಿಸಮಾಪ್ತಿಯಾದನಂತರ ಅಂಗಿರಾಋಷಿಗಳು ನಾಭಾನೇದಿಷ್ಠನನ್ನು ಕರೆದು, ಎಲೈ ಬ್ರಾಹ್ಮಣನೇ. ನಾವು ಸ್ವರ್ಗಕ್ಕೆ ಹೋಗುತ್ತೇವೆ. ಆದ್ದರಿಂದ ನಮಗೆ ಈ ಗೋವುಗಳ ಅವಶ್ಯಕತೆ ಇಲ್ಲ. ಹಿಂದೆ ಹೇಳಿದಂತೆ ಈ ಸಹಸ್ರ ಗೋವುಗಳನ್ನು ನಿನಗೆ ಕೊಟ್ಟಿದ್ದೇವೆ. ಅವುಗಳನ್ನು ತೆಗೆದುಕೋ ಎಂದರು. [ಇಲ್ಲಿ ಎಂದರೆ ಮೇಲಿನ ಬ್ರಾಹ್ಮಣವಾಕ್ಯದಲ್ಲಿ ಸಹಸ್ರಂ ಎಂಬ ಶಬ್ದ ಮಾತ್ರವಿರುವುದು. ಸಹಸ್ರಶಬ್ದಕ್ಕೆ ಸಹಸ್ರ ಗೋವುಗಳು ಎಂದರ್ಥವು ಹೇಗಾಯಿತು ಎಂಬ ವಿಷಯದಲ್ಲಿ ಭಾಷ್ಯಕಾರರು— ತೇ

**ಸುವರ್ಗಂ ಲೋಕಂ ಯಂತೋ ಯ ಏಷಾಂ ಪಶವ ಆಸಂಸ್ತಾನಸ್ಮಾ ಅದುದುಃ** ಎಂಬ ಶಾಖಾಂತರಬ್ರಾಹ್ಮಣ ವಾಕ್ಯವನ್ನು ಉದಾಹರಿಸಿದಾರೆ]. ಋಷಿಗಳ ಮಾತಿನಂತೆ ನಾಭಾನೇದಿಷ್ಠನು ಅವರು ಕೊಟ್ಟ ಗೋವುಗಳನ್ನು ತನ್ನ ಹತ್ತಿರ ಒಟ್ಟಾಗಿ ಸೇರಿಸುತ್ತಿರುವಾಗ ಆ ಯಜ್ಞಭೂಮಿಯ ಉತ್ತರಭಾಗದಲ್ಲಿ ಕೊಳಕಾದ ಬಟ್ಟೆಗಳನ್ನು ಧರಿಸಿದ ಓರ್ವಪುರುಷನು ಆವಿರ್ಭವಿಸಿ ನಾಭಾನೇದಿಷ್ಠನನ್ನು ಕುರಿತು ಇಂತೆಂದನು--(ಮೂಲದಲ್ಲಿ **ಕೃಷ್ಣಶವಾಸೀ** ಎಂದಿರುವುದು. **ಅತಿಶಯೇನ ಕೃಷ್ಣಂ ಮಲಿನಂ ವಸ್ತ್ರಂ ಕೃಷ್ಣಶಂ ತದ್ವಸ್ತ್ರ ಆಚ್ಛಾದಯತೀತಿ ಕೃಷ್ಣಶವಾಸೀ। ಅತ್ರಾಯಂ ಮಲಿನವಸ್ತ್ರಃ ಪುರುಷಃ ಪಶುಸ್ವಾಮೀ ರುದ್ರ ಇತ್ಯವಗಂತವ್ಯಂ। ತಥಾ ಚ ಶಾಖಾಂತರೇ ಪಠ್ಯತೇ - ತಂ ಪಶುಭಿಶ್ಚರಂತಂ ಯಜ್ಞವಾಸ್ತೌ ರುದ್ರ ಆಗಚ್ಛತ್।** ಅತಿಶಯವಾಗಿ ಕೊಳಕಾದ ಬಟ್ಟೆಗೆ ಕೃಷ್ಣಶವೆಂದೂ, ಅಂತಹ ಮಲಿನವಸ್ತ್ರವನ್ನು ಧರಿಸಿದವನಿಗೆ ಕೃಷ್ಣಶವಾಸೀ ಎಂದು ಹೆಸರು. ಇಲ್ಲಿ ಆ ಮಲಿನವಸ್ತ್ರಧಾರಿಯು ಯಾರೆಂದರೆ, ಅವನು ರುದ್ರನೇ ಹೊರತು ಬೇರೆ ಯಾರೂ ಅಲ್ಲ. ಈ ವಿಷಯದಲ್ಲಿ **ತಂ ಪಶುಭಿಶ್ಚರಂತಂ ಯಜ್ಞವಾಸ್ತೌ ರುದ್ರ ಆಗಚ್ಛತ್** ಎಂದು ಶ್ರುತಿವಾಕ್ಯವಿರುವುದು). ಎಲೈ ನಾಭಾನೇದಿಷ್ಠನೇ, ಈ ಯಜ್ಞಭೂಮಿಯಲ್ಲಿ ಉಳಿದಿರುವ ಪಶುಗಳೆಲ್ಲವೂ ನನ್ನದು. ಇವುಗಳನ್ನು ನೀನು ತೆಗೆದುಕೊಳ್ಳಕೂಡದು ಎಂದನು. (ಮೂಲದಲ್ಲಿ **ವಾಸ್ತುಹಂ** ಎಂಬ ಶಬ್ದಪ್ರಯೋಗವಿದೆ. ವಾಸ್ತು ಎಂದರೆ ಯಜ್ಞಭೂಮಿಯು **ವಾಸ್ತೌ ಯಜ್ಞಭೂಮೌ ಹೀನಂ ಕರ್ಮಾಂತೇ ಪರಿತ್ಯಕ್ತಂ ವಾಸ್ತುಹಂ ತಾದೃಶಂ ಸರ್ವಂ ಮಮೈವ ಸ್ವಂ**— ಕರ್ಮಸಮಾಪ್ತಿಯಾದಮೇಲೆ ಯಜ್ಞಭೂಮಿಯಲ್ಲಿ ಉಳಿದ ಸಮಸ್ತವೂ ನನ್ನ ಸ್ವತ್ತಾದುದರಿಂದ ನನಗೆ ಸೇರಬೇಕು ಎಂದು ರುದ್ರನ ವಾಕ್ಯವು). ಅದನ್ನು ಕೇಳಿ ನಾಭಾನೇದಿಷ್ಠನು ಆ ಪುರುಷನನ್ನು ಕುರಿತು—ಎಲೈ ರುದ್ರನೇ, ಈ ಸಹಸ್ರ ಗೋವುಗಳನ್ನು ನನಗೆ ಅಂಗಿರಸರು ಕೊಟ್ಟರು. ಆದ್ದರಿಂದ ಅವು ನನ್ನನು ಎನ್ನಲು, ಪುನಃ ರುದ್ರನು ಎಲೈ ನಾಭಾನೇದಿಷ್ಠನೇ, ಈ ಗೋವುಗಳು ನನ್ನದೆಂದು ನಾನೂ, ನನಗೆ ಸೇರಬೇಕೆಂದು ನೀನೂ ಹೇಳುತ್ತಿರುವುದರಿಂದ ಈ ಪ್ರಶ್ನೆಯ ಇತ್ಯರ್ಥವು ನಿನ್ನ ತಂದೆಯಿಂದಲೇ ಆಗಬೇಕಾಗಿದೆ. ಆದ್ದರಿಂದ ನೀನು ನಿನ್ನ ತಂದೆಯ ಬಳಿಗೆ ಹೋಗಿ ಈ ಗೋವುಗಳು ಯಾರದು ಎಂದು ಕೇಳಿಕೊಂಡು ಬಾ ಎಂದನು. ರುದ್ರನ ಮಾತಿನಂತೆ ನಾಭಾನೇದಿಷ್ಠನು ತನ್ನ ತಂದೆಯ ಬಳಿಗೆ ಹೋಗಲು ಅವನ ತಂದೆಯಾದ ಮನುವು ನಾಭಾನೇದಿಷ್ಠನನ್ನು ಕುರಿತು ಎಲೈ ಬಾಲಕನೇ, ಅಂಗಿರಸರು ನಿನಗೆ ಗೋವುಗಳನ್ನು ಕೊಡಲಿಲ್ಲವೇ ಎಂದು ಕೇಳಲು, ನಾಭಾನೇದಿಷ್ಠನು, ಅಂಗಿರಾಋಷಿಗಳು ಗೋವುಗಳನ್ನು ನನಗೆ ಕೊಟ್ಟರು ಎಂದನು. ಮನುವು ಹಾಗಾದರೆ ಈಗ ಏನುವಿಚಾರ, ಗೋವುಗಳನ್ನು ತರದೆ ಬರಿಕೈಯಲ್ಲಿ ಏಕೆಬಂದಿದ್ದೀಯೆ ಎಂದು ಪ್ರಶ್ನೆಮಾಡಲು, ನಾಭಾನೇದಿಷ್ಠನು— ಋಷಿಗಳು ಗೋವುಗಳನ್ನು ಕೊಟ್ಟರು. ಅವುಗಳನ್ನು ನಾನು ತೆಗೆದುಕೊಳ್ಳುತ್ತಿರುವ ಸಮಯದಲ್ಲಿ ಕೊಳಕು ಬಟ್ಟೆಯನ್ನುಟ್ಟ ಓರ್ವ ಪುರುಷನು ಯಜ್ಞಭೂಮಿಯ ಉತ್ತರದಿಕ್ಕಿನಿಂದ ಬಂದು ಈ ಸಹಸ್ರ ಗೋವುಗಳೂ ನನ್ನದು. ಏಕೆಂದರೆ ಯಜ್ಞಭೂಮಿಯಲ್ಲಿ ಕರ್ಮಸಮಾಪ್ತಿಯಾದಮೇಲೆ ಉಳಿಯುವ ಸ್ವತ್ತಿಗೆ ನಾನೇ ಒಡೆಯನು ಎಂದು ಹೇಳಿ ಆ ಗೋವುಗಳನ್ನೆಲ್ಲಾ ತಾನೇ ತೆಗೆದುಕೊಂಡನು ಎಂದು ಹೇಳಿ ಸುಮ್ಮನೆ ನಿಂತುಕೊಂಡನು. ಬಳಿಕ ತಂದೆಯು—ಎಲೈ ಪುತ್ರನೇ, ಆ ಮಲಿನವಸ್ತ್ರಧಾರಿಯಾದ ಪುರುಷನು ಹೇಳುವುದು ಸರಿ. ಯಜ್ಞಭೂಮಿಯಲ್ಲಿ ಉಳಿಯುವ ಗೋವುಗಳಿಗೂ, ಇತರ ಧನಾದಿಗಳಿಗೂ ರುದ್ರನೇ ಒಡೆಯನು. ಏಕೆಂದರೆ, ರುದ್ರನೇ ಪಶುಗಳಿಗೆ ಅಧಿಪತಿಯು ಮತ್ತು ಯಜ್ಞಾವಶಿಷ್ಟಕ್ಕೂ ಅವನೇ ಒಡೆಯನು. ಆದರೂ ನೀನು ಈ ವಿಷಯದಲ್ಲಿ ಯೋಚನೆ ಮಾಡಬೇಡ ಆ ರುದ್ರನು ಗೋವುಗಳನ್ನು ನಿನಗೇ ಕೊಡುವನು ಎಂದು ಹೇಳಿಕಳುಹಿಸಿದನು. ತಂದೆಯ ಮಾತನ್ನು ಕೇಳಿ ನಾಭಾನೇದಿಷ್ಠನು ಪುನಃ ರುದ್ರನಬಳಿಗೆ ಬಂದು ತಂದೆಯಮಾತನ್ನು ಈರೀತಿ ತಿಳಿಸಿದನು— ಈ ಪಶುಗಳೆಲ್ಲವೂ ಯಜ್ಞಕಾಲದಲ್ಲಿ ಅಂಗಿರಸರದಾಗಿತ್ತು ಯಜ್ಞಸಮಾಪ್ತಿಯಾದನಂತರ ಉಳಿದ ಪಶುಗಳಿಗೂ ಧನಕ್ಕೂ ರುದ್ರನೇ ಸ್ವಾಮಿಯು. ಆದ್ದರಿಂದ ಅವುಗಳನ್ನು ಇತರರಿಗೆ ಕೊಡಲು ಅಂಗಿರಸರಿಗೆ ಯಾವ ಅಧಿಕಾರವೂ ಇಲ್ಲ. ಆದ್ದರಿಂದ ಎಲೈ ಪೂಜ್ಯನೇ, ಇವೆಲ್ಲವೂ ನಿನ್ನದೇ ಆಗಿದೆ ಎಂದು ತಂದೆಯ ವಚನವನ್ನು ರುದ್ರನಿಗೆ ತಿಳಿಸಿದನು. (ಶಾಖಾಂತರದಲ್ಲಿ ರುದ್ರವಚನವು ಈರೀತಿ ಇರುವುದೆಂದು—**ನ ವೈ ತಸ್ಯ ಶಧೀಶತ**

ಇತ್ಯಬ್ರವೀದ್ಯಜ್ಞವಾಸ್ತೌ ಹೀಯತೇ ಮಮ ವೈ ತತ್ ಎಂದು ಭಾಷ್ಯಕಾರರು ಶ್ರುತಿವಾಕ್ಯವನ್ನುದಾಹರಿಸಿದ್ದಾರೆ). ರುದ್ರನು ನಾಭಾನೇದಿಷ್ಠನ ಮಾತಿಗೆ ಸಂತೋಷಪಟ್ಟು ಎಲೈ ಬ್ರಾಹ್ಮಣನೇ, ನೀನು ಸುಳ್ಳುಹೇಳದೆ ಸತ್ಯವನ್ನೇ ನುಡಿದಿರುವಿಯಾದ್ದರಿಂದ ಆ ಸಹಸ್ರ ಗೋವುಗಳನ್ನು ನಿನಗೆ ಕೊಡುತ್ತೇನೆ ತೆಗೆದುಕೋ ಎಂದು ಹೇಳಿ ಸಹಸ್ರ ಗೋವುಗಳನ್ನೂ ಅವನಿಗೆ ಕೊಟ್ಟನು.

**ತಸ್ಮಾದೇವಂ ವಿದುಷಾ ಸತ್ಯಮೇವ ವದಿತವ್ಯಂ ಸ ಏಷ ಸಹಸ್ರಸನಿ-ರ್ಮಂತ್ರೋ ಯನ್ನಾಭಾನೇದಿಷ್ಠಃ ಉಪೈನಂ ಸಹಸ್ರಂ ನಮತಿ ಪ್ರ ಷಷ್ಠೇನಾಹ್ನಾ ಸ್ವರ್ಗಂ ಲೋಕಂ ಜಾನಾತಿ ಯ ಏವಂ ವೇದ ॥**

ಇತ್ಥಮುಪಾಖ್ಯಾನಂ ಪರಿಸಮಾಪ್ಯ ಪ್ರಸಂಗಾತ್ಪುರುಷಾರ್ಥತ್ವೇನ ಸತ್ಯವದನಂ ವಿಧತ್ತೇ ಏವಂ ವಿದುಷಾ ಸತ್ಯಸ್ಯ ಶ್ರೇಯೋಹೇತುತ್ವಂ ಜಾನತಾ ॥ ಉಪಾಖ್ಯಾನಸ್ಯ ಸರ್ವಸ್ಯ ತಾತ್ಪರ್ಯಂ ದರ್ಶಯತಿ— ನಾಭಾನೇದಿಷ್ಠೇನ ಮಹರ್ಷಿಣಾ ದೃಷ್ಟೋ ಯೋ ಮಂತ್ರಸಮೂಹಃ ಸ ಏಷಃ ಸಹಸ್ರಸನಿಃ ಸಹಸ್ರಸಂಖ್ಯಾಕಸ್ಯ ವಸ್ತುನಃ ಸನಿರ್ಲಾಭೋ ಯಸ್ಮಿನ್ಮಂತ್ರೇ ಸೋಽಯಂ ಸಹಸ್ರ-ಸನಿಃ ॥ ವೇದನಂ ಪ್ರಶಂಸತಿ — ಏನಂ ವೇದಿತಾರಂ ಸಹಸ್ರಸಂಖ್ಯಾಕಂ ಧನಮುಪನಮತಿ ಪ್ರಾಪ್ನೋತಿ । ಸ ಚ ಕಾಲಾಂತರೇ ಷಷ್ಠಮಹರನುಷ್ಠಾಯ ತೇನ ಸ್ವರ್ಗಂ ಲೋಕಂ ಪ್ರಜಾನಾತಿ ॥

ಆದ್ದರಿಂದ ವಿದ್ವಾಂಸನಾಗಿ ಎಲ್ಲವನ್ನೂ ತಿಳಿದವನು ಯಾವಾಗಲೂ ಸತ್ಯವನ್ನೇ ಹೇಳಬೇಕು. ನಾಭಾನೇದಿಷ್ಠನಿಂದ ಪಠಿತವಾದ ಈ ಮಂತ್ರವು ಸಹಸ್ರಸಂಖ್ಯಾಕವಾದ ವಸ್ತುಗಳನ್ನು ಕೊಡುವುದರಿಂದ ಇದು ಸಹಸ್ರಸನಿಃ ಎಂದು ಪ್ರಸಿದ್ಧವಾಗಿದೆ. ಈ ಮಂತ್ರವನ್ನೂ ಈ ಮಂತ್ರದ ಅರ್ಥವನ್ನೂ ತಿಳಿದಿರುವ ಪುರುಷನು ಸಹಸ್ರಸಂಖ್ಯಾಕವಾದ ಧನವನ್ನು ಪಡೆಯುವುದಲ್ಲದೆ. ಯಾಗದ ಆರನೆಯ ದಿನ ಇದರಂತೆ ಕರ್ಮಾನುಷ್ಠಾನಮಾಡಿ ಸ್ವರ್ಗಲೋಕವನ್ನು ಹೊಂದುವ ವಿಧಾನವನ್ನು ತಿಳಿದುಕೊಳ್ಳುವನು,

ಕೃಷ್ಣಯಜುರ್ವೇದ ತೈತ್ತಿರೀಯ ಸಂಹಿತೆಯಲ್ಲಿಯೂ ಈ ವಿಷಯದ ಪ್ರಸ್ತಾಪವಿದೆ. ಮಂಥಿಸಂಸ್ರಾವ ಹೋಮದ ವಿಷಯವನ್ನು ವಿವರಿಸುತ್ತಾ ಅದರ ಅವಶ್ಯಕತೆಯನ್ನು ತಿಳಿಸುವುದಕ್ಕಾಗಿ ಈ ಉಪಾಖ್ಯಾನದ ವಿವರಣೆ ಇದೆ—

ಮನುಃ ಪುತ್ರೇಭ್ಯೋ ದಾಯಂ ವ್ಯಭಜತ್ಸ ನಾಭಾನೇದಿಷ್ಠಂ ಬ್ರಹ್ಮಚರ್ಯಂ ವಸಂತಂ ನಿರಭಜತ್ಸ ಆಗಚ್ಛತ್ಸೋಽಬ್ರವೀತ್ಕಥಾ ಮಾ ನಿರಭಾಗಿತಿ ನ ತ್ವಾ ನಿರಭಾಕ್ಷಮಿತ್ಯಬ್ರವೀದಂಗಿರಸ ಇಮೇ ಸತ್ರಮಾಸತೇ ತೇ ಸುವರ್ಗಂ ಲೋಕಂ ನ ಪ್ರ ಜಾನಂತಿ ತೇಭ್ಯ ಇದಂ ಬ್ರಾಹ್ಮಣಂ ಬ್ರೂಹಿ ತೇ ಸುವರ್ಗಂ ಲೋಕಂ ಯಂತೋ ಯ ಏಷಾಂ ಪಶವಸ್ತಾಗ್ ಸ್ತೇ ದಾಸ್ಯಂತೀತಿ ತದೇಭ್ಯೋಽಬ್ರವೀತ್ತೇ ಸುವರ್ಗಂ ಲೋಕಂ ಯಂತೋ ಯ ಏಷಾಂ ಪಶವ ಆಸನ್ತಾನಸ್ಮಾ ಅದದುಸ್ತಂ ಪಶುಭಿಶ್ಚರಂತಂ ಯಜ್ಞವಾಸ್ತೌ ರುದ್ರ ಆಗಚ್ಛತ್ಸೋಽಬ್ರವೀನ್ಮಮ ವಾ ಇಮೇ ಪಶವ ಇತ್ಯದುರ್ವೈ ಮಹ್ಯಮಿಮಾನಿತ್ಯಬ್ರವೀನ್ನ ವೈ ತಸ್ಯ ತ ಈಶತ ಇತ್ಯಬ್ರವೀದ್ಯಜ್ಞವಾಸ್ತೌ ಹೀಯತೇ ಮಮ ವೈ ತದಿತಿ ತಸ್ಮಾದ್ಯಜ್ಞವಾಸ್ತು ನಾಭ್ಯವೇತ್ಯಗ್ಂ ಸೋಽಬ್ರವೀದ್ಯಜ್ಞೇ ಮಾಭಜಾಥ ತೇ ಪಶೂನ್ನಾಭಿಮಗ್ಂಸ್ಯ ಇತಿ ತಸ್ಮಾ ಏತಂ ಮಂಥಿನಸ್ಸಗ್ಂಸ್ರಾವಮಜುಹೋ-

**ತ್ತತೋ ವೈ ತಸ್ಯ ರುದ್ರಃ ಪಶೂನ್ನಾಭ್ಯಮನ್ಯತ ಯತ್ರೈತಮೇವಂ ವಿದ್ವಾನ್ಮಂಥಿನಸ್ಸಂಗ್ಗ್‌ರ್ಸ್ರಾವಂ ಜುಹೋತಿ ನ ತತ್ರ ರುದ್ರಃ ಪಶೂನಭಿ ಮನ್ಯತೇ ॥**

(ತೈ. ಸಂ. ೩-೧-೯-೪, ೫, ೬, ೭)

ಪೂರ್ವದಲ್ಲಿ ಮನುವು ತನ್ನ ಆಸ್ತಿಯನ್ನು ತನ್ನ ಪುತ್ರರಿಗೆ ವಿಭಾಗಮಾಡಿಕೊಟ್ಟನು. ಆ ಕಾಲದಲ್ಲಿ ಅವನ ಕಿರಿಯ ಪುತ್ರನಾದ ನಾಭಾನೇದಿಷ್ಠನೆಂಬುವನು ತಂದೆಯಬಳಿ ಇರಲಿಲ್ಲ. ಗುರುವಿನಬಳಿ ಬ್ರಹ್ಮಚರ್ಯವ್ರತಸ್ಥನಾಗಿ ವೇದಾಧ್ಯಯನವನ್ನು ಮಾಡುತ್ತಿದ್ದನು. ಆದ್ದರಿಂದ ಅವನ ಜ್ಞಾಪಕವಿಲ್ಲದ್ದರಿಂದಲೋ ಅಥವಾ ಅವನ ಜ್ಯೇಷ್ಠ ಸಹೋದರರ ಪ್ರೇರಣೆಯಿಂದಲೋ ಅಥವಾ ಮತ್ತಾವ ಕಾರಣದಿಂದಲೋ ನಾಭಾನೇದಿಷ್ಠನನ್ನು ಬಿಟ್ಟು ಉಳಿದ ಪುತ್ರರಿಗೆ ಎಲ್ಲಾ ಆಸ್ತಿಯನ್ನೂ ವಿಭಾಗಮಾಡಿ ಹಂಚಿದನು. ಕೆಲವು ಕಾಲದಮೇಲೆ ಗುರುಕುಲದಲ್ಲಿದ್ದ ನಾಭಾನೇದಿಷ್ಠನು ತನ್ನ ವಿದ್ಯಾಭ್ಯಾಸವನ್ನು ಮುಗಿಸಿ ತಂದೆಯ ಬಳಿಗೆ ಬಂದು ಆಸ್ತಿಯೆಲ್ಲವೂ ತನ್ನ ಜ್ಯೇಷ್ಠ ಸಹೋದರರಿಗೇ ಸೇರಿಹೋಗಿರುವುದನ್ನೂ ತನಗೆ ಏನೂ ಇಲ್ಲದಿರುವುದನ್ನೂ ಕಂಡು ತನ್ನ ತಂದೆಯನ್ನು ಕುರಿತು—ಎಲೈ ತಂದೆಯೇ, ಏತಕ್ಕಾಗಿ ನನಗೆ ಆಸ್ತಿಯಲ್ಲಿ ಭಾಗವನ್ನು ಕೊಡಲಿಲ್ಲ ಎಂದು ಪ್ರಶ್ನೆಮಾಡಲು, ಆದಕ್ಕೆ ಮನುವು—ಎಲೈ ಪುತ್ರನೇ, ನಿನಗೆ ಆಸ್ತಿಯಲ್ಲಿ ಭಾಗವಿಲ್ಲದಂತೆ ನಾನು ಮಾಡಿಲ್ಲ. ನಿನಗಿರುವ ಆಸ್ತಿಯನ್ನು ತಿಳಿಸುವೆನು ಕೇಳು. ಈಗ ಅಂಗಿರಸರೆಂಬ ಋಷಿಗಳು ಸ್ವರ್ಗಕ್ಕೆ ಹೋಗಬೇಕೆಂದು ಬಯಸಿ ಸತ್ರಯಾಗವನ್ನು ಮಾಡುತ್ತಿರುವರು. ಆವರೆ ಸ್ವರ್ಗಪ್ರಾಪ್ತಿಗಾಗಿ ಯಾವ ಮಂತ್ರವನ್ನು ಪಠಿಸಬೇಕು? ಸ್ವರ್ಗಸಾಧನ ಉಪಾಯ ಯಾವುದು? ಎಂಬುದನ್ನು ತಿಳಿಯದೆ ಪೇಚಾಡುತ್ತಿರುವರು. ನೀನು ಅವರು ಮಾಡುತ್ತಿರುವ ಯಜ್ಞಭೂಮಿಗೆ ಹೋಗಿ ಈ ಮಂತ್ರವನ್ನು (ಋ. ಸಂ. ೧೦ ನೇ ಮಂಡಲದ ೬೧ ಮತ್ತು ೬೨ ನೇ ಸೂಕ್ತಗಳನ್ನು) ಅವರಿಗೆ ತಿಳಿಸು. ಅದರಿಂದ ಅವರು ಯಜ್ಞವನ್ನು ಸಾಂಗವಾಗಿ ನೆರವೇರಿಸಿ ಯಜ್ಞಾರ್ಥವಾಗಿ ಸಂಗ್ರಹಿಸಿರುವ ಪಶುಗಳಲ್ಲಿ ಉಳಿದಿರುವ ಪಶುಗಳನ್ನು ನಿನಗೆ ಕೊಡುವರು. ಅದೇ ನಿನ್ನ ಭಾಗವು ಎಂದು ಹೇಳಿದನು. ಅದರಂತೆ ನಾಭಾನೇದಿಷ್ಠನ ಅಂಗಿರಸರ ಬಳಿಗೆ ಹೋಗಿ ತಂದೆಯು ತಿಳಿಸಿದ ಮಂತ್ರವನ್ನು ಉಪದೇಶಿಸಲು ಅವರು ಸಂತುಷ್ಟರಾಗಿ ಯಜ್ಞವನ್ನು ಮುಗಿಸಿ ಸ್ವರ್ಗಕ್ಕೆ ಹೋಗುವ ಸಮಯದಲ್ಲಿ ಯಜ್ಞಶೇಷವಾಗಿ ಉಳಿದಿದ್ದ ಗೋವುಗಳನ್ನೆಲ್ಲಾ ನಾಭಾನೇದಿಷ್ಠನಿಗೆ ಕೊಟ್ಟರು. ಆ ಪಶುಗಳನ್ನು ತೆಗೆದುಕೊಳ್ಳುವ ಸಮಯದಲ್ಲಿ ಅಲ್ಲಿಯೇ ಯಜ್ಞಭೂಮಿಯಲ್ಲಿ ಸಂಚರಿಸುತ್ತಿದ್ದ ರುದ್ರನು ಬಂದು, ಎಲೈ ನಾಭಾನೇದಿಷ್ಠನೇ, ಈ ಪಶುಗಳು ನನ್ನವು ಅದನ್ನು ನೀನು ತೆಗೆದುಕೊಳ್ಳಕೂಡದು ಎಂದು ತಡೆದನು.. ನಾಭಾನೇದಿಷ್ಠನು ಇದನ್ನು ಕೇಳಿ— ಎಲೈ ರುದ್ರನೇ, ಈ ಪಶುಗಳನ್ನು ಅಂಗಿರಸರು ಕೊಟ್ಟಿರುವರು. ಆದ್ದರಿಂದ ಅವು ನನಗೆ ಸೇರಬೇಕು ಎನ್ನಲು ರುದ್ರನು ಪುನಃ ಯಜ್ಞಸಮಾಪ್ತಿಕಾಲದಲ್ಲಿ ಉಳಿಯುವ ಪಶುಗಳಿಗೆ ಅಂಗಿರಸರು ಒಡೆಯರಲ್ಲ. ಅವರಿಗೆ ಅವುಗಳಮೇಲೆ ಯಾವ ಅಧಿಕಾರವೂ ಇಲ್ಲ. ಆದ್ದರಿಂದ ಅವುಗಳನ್ನು ಇತರರಿಗೆ ದಾನಮಾಡುವ ಅಧಿಕಾರವೂ ಅವರಿಗಿಲ್ಲ. ಅದರ ಸ್ವಾಮಿತ್ವವು ನನಗೆ ಸೇರಿದೆ ಎಂದು ಹೇಳಿ ಮತ್ತಿಂತೆಂದನು. ಎಲೈ ನಾಭಾನೇದಿಷ್ಠನೇ, ಒಂದುವೇಳೆ ಈ ಗೋವುಗಳನ್ನು ನೀನು ಅಪೇಕ್ಷಿಸುವಿಯಾದರೆ ಯಜ್ಞದಲ್ಲಿ ನನ್ನನ್ನು ಭಜಿಸು ಎಂದರೆ ನನ್ನನ್ನುದ್ದೇಶಿಸಿ ಮಂಥಿಸಂಸ್ರಾವಹೋಮವನ್ನು ಅರ್ಪಿಸು. ಅದರಿಂದ ನಾನು ಸಂತುಷ್ಟನಾಗಿ ಪಶುಗಳನ್ನು ನೀನು ತೆಗೆದುಕೊಳ್ಳುವುದಕ್ಕೆ ನಾನು ಸಮ್ಮತಿಸುವೆನು ಎಂದನು. ಅದನ್ನು ಕೇಳಿ ನಾಭಾನೇದಿಷ್ಠನು ಮಂಥಿಸಂಸ್ರಾವಹೋಮವನ್ನು ಅರ್ಪಿಸಿ ಗೋವುಗಳನ್ನು ಪಡೆದನು. ಆದ್ದರಿಂದ ವಿವೇಕಿಯಾದ ಪುರುಷನು ರುದ್ರನಿಗೆ ಮಂಥಿಸಂಸ್ರಾವಹೋಮವನ್ನು ಅರ್ಪಿಸಿದರೆ ಪಶುಪ್ರಾಪ್ತಿಯ ವಿಷಯದಲ್ಲಿ ರುದ್ರನು ಅವನಿಗೆ ಯಾವ ಅಡ್ಡಿಯನ್ನೂ ಮಾಡುವುದಿಲ್ಲ.

ಐತರೇಯ ಬ್ರಾಹ್ಮಣದಲ್ಲಿ ಹೇಳಿರುವ ಉಪಾಖ್ಯಾನಕ್ಕೂ ಇದಕ್ಕೂ ಕೊನೆಯ ಭಾಗದಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಮುಖ್ಯ ವಿಷಯಗಳಲ್ಲಿ ಏನೂ ವ್ಯತ್ಯಾಸವಿಲ್ಲ. ಈ ಉಪಾಖ್ಯಾನದಲ್ಲಿ ಅಂಗಿರಸರು ಸತ್ರಯಾಗವನ್ನು ಮಾಡಿದ ವಿಷಯವು ಉಕ್ತವಾಗಿರುವುದನ್ನು ತೈತ್ತಿರೀಯಬ್ರಾಹ್ಮಣದಲ್ಲಿ ಈರೀತಿ ತಿಳಿಸಿದೆ—

ಅಂಗಿರಸೋ ವೈ ಸತ್ರಮಾಸತ । ತೇಷಾಂ ಪೃಶ್ನಿರ್ಘರ್ಮಧುಗಾಸೀತ್ । ಸರ್ಜಿಷೇಣಾಜೀವತ್ । ತೇಽಬ್ರುವನ್ । ಕಸ್ಮೈ ನು ಸತ್ರಮಾಸ್ಮಹೇ । ಯೇಽಸ್ಯಾ ಓಷಧೀರ್ನ ಜನಯಾಮ ಇತಿ । ತೇ ದಿವೋ ವೃಷ್ಟಿಮಸೃಜಂತ । ಯಾವಂತಸ್ತೋಕಾ ಅವಾಪದ್ಯಂತ । ತಾವತೀರೋಷಧಯೋಽಜಾಯಂತ । ತಾ ಜಾತಾಃ ಪಿತರೋ ವಿಷೇಣಾಲಿಂಪನ್ । ತಾಸಾಂ ಜಗ್ಧ್ವಾ ರುಪ್ಯಂತ್ಯೈತ್ । ತೇಽಬ್ರುವನ್ । ಕ ಇದಮಿತ್ಥಮಕರಿತಿ । ವಯಂ ಭಾಗಧೇಯಮಿಚ್ಛಮಾನಾ ಇತಿ ಪಿತರೋಽಬ್ರುವನ್ । ಕಿಂ ವೋ ಭಾಗದೇಯಮಿತಿ । ಅಗ್ನಿಹೋತ್ರ ಏವ ನೋಽಪ್ಯಸ್ತ್ವಿತ್ಯಬ್ರುವನ್ । ತೇಭ್ಯ ಏತದ್ಭಾಗಧೇಯಂ ಪ್ರಾಯಚ್ಛನ್ । ಯದ್ಧುತ್ವಾ ನಿಮಾರ್ಷ್ಟಿ । ತತೋ ವೈ ತ ಓಷಧೀರಸ್ವದಯನ್ । ಯ ಏವಂ ವೇದ । ಸ್ವದಂತೇಽಸ್ಮಾ ಓಷಧಯಃ । ತೇ ವತ್ಸಮುಪಾವಾಸೃಜನ್ । ಇದಂ ನೋ ಹವ್ಯಂ ಪ್ರದಾಪಯೇತಿ । ಸೋಽಬ್ರವೀದ್ವರಂ ವೃಣೈ । ದಶ ಮಾ ರಾತ್ರೀರ್ಜಾತಂ ನ ದೋಹನ್ । ಆಸಂಗವಂ ಮಾತ್ರಾ ಸಹ ಚರಾಣೀತಿ । ತಸ್ಮಾದ್ವತ್ಸಂ ಜಾತಂ ದಶ ರಾತ್ರೀರ್ನ ದುಹಂತಿ । ಆಸಂಗವಂ ಮಾತ್ರಾ ಸಹ ಚರತಿ । ವಾರೇವೃತಗ್ಂ ಹಸ್ಯ ತಸ್ಮಾದ್ವತ್ಸಗ್ ಸಗ್ಂಸೃಷ್ಟಧಯಗ್ಂ ರುದ್ರೋ ಘಾತುಕಃ । ಅತಿ ಹಿ ಸಂಧಾಂ ಧಯತಿ ॥

(ತೈ. ಬ್ರಾ. ೨-೧-೧-೧, ೨, ೩)

ಅಗ್ನಿಹೋತ್ರವನ್ನು ವಿವರಿಸುವುದಕ್ಕಾಗಿ ಅಂಗಿರಸರೆಂಬ ಋಷಿಗಳು ಸತ್ರಯಾಗವನ್ನು ಮಾಡಿದ ವಿಷಯವನ್ನು ಪೀಠಿಕಾ ರೂಪವಾಗಿ ಪ್ರಸ್ತಾಪಮಾಡಲಾಗಿದೆ. ಅಂಗಿರಸರೆಂಬ ಋಷಿಗಳು ಸತ್ರಯಾಗವನ್ನು ಮಾಡಿದಾಗ ಪೃಶ್ನೀ ಎಂಬ ಶ್ವೇತವರ್ಣದ ಗೋವು (ಈ ಗೋವು ಮರುದ್ದೇವತೆಗಳ ಮಾತೆಯೆಂದು ಪ್ರಸಿದ್ಧವಾಗಿದೆ. ಇದರ ವಿಷಯವನ್ನು ನಾವು ಹಿಂದೆ ವಿಸ್ತಾರವಾಗಿ ವಿವರಿಸಿದ್ದೇವೆ). ಪ್ರವರ್ಗ್ಯಾರ್ಥವಾಗಿ ಹಾಲನ್ನು ಕರೆಯುತ್ತಿತ್ತು. ಆ ಕಾಲದಲ್ಲಿ ಅನಾವೃಷ್ಟಿಯಿದ್ದುದರಿಂದ ಗೋವುಗಳ ಆಹಾರವಾದ ಹುಲ್ಲಿಗೆ ಅಭಾವವಾಗಿತ್ತು. ಆದ್ದರಿಂದ ಆ ಪೃಶ್ನಿಯೆಂಬ ಧೇನುವು ಆಹಾರಕ್ಕಾಗಿ ಋಜೀಷವೆಂಬ ರಸವನ್ನು ತೆಗೆದ ಸೋಮ ಲತೆಗಳ ಸಿಪ್ಪೆಯನ್ನು ತಿಂದು ಜೀವಿಸಬೇಕಾಗಿತ್ತು. ಈರೀತಿ ಆಹಾರಕ್ಕಾಗಿ ತೊಂದರೆಪಡುತ್ತಿರುವ ಪೃಶ್ನಿಯನ್ನು ನೋಡಿ ಅಂಗಿರಸ ಋಷಿಗಳು ತಮ್ಮತಮ್ಮಲ್ಲಿ ಈರೀತಿ ಮಾತನಾಡಿಕೊಂಡರು. ಯಾವ ಪ್ರಯೋಜನಕ್ಕಾಗಿ ನಾವು ಸತ್ರಯಾಗವನ್ನು ಮಾಡುತ್ತಿದ್ದೇವೆ? ಈ ಗೊವಿಗೆ ತೃಣಾದಿಗಳಿಲ್ಲದೆ ಕಷ್ಟಪಡುತ್ತಿದೆಯಲ್ಲಾ ಇದಕ್ಕೆ ಏನುಮಾಡಬೇಕು? ಹಸುರುಹುಲ್ಲು ಮೊದಲಾದ ವನಸ್ಪತಿ ಲತಾದಿಗಳು ಯಥೇಚ್ಛವಾಗಿ ಬೆಳೆಯುವಂತೆ ಮಾಡಬೇಕು. ಇದಕ್ಕಾಗಿ ಅದಕ್ಕಾಗಿ ಅಂತರಿಕ್ಷದಿಂದ ಮಳೆಬರುವಂತೆ ಮಾಡಬೇಕು ಎಂದಾಲೋಚಿಸಿ ಅದರಂತೆ ವೃಷ್ಟಿಯನ್ನು ಉತ್ಪತ್ತಿಮಾಡಿದರು. ಆ ವೃಷ್ಟಿಯಿಂದ ಭೂಮಿಯಮೇಲೆ ಎಷ್ಟು ಹನಿಗಳು (ಬಿಂದುಗಳು) ಬಿದ್ದವೋ ಅಷ್ಟು ಸಂಖ್ಯೆಯಲ್ಲಿ ಓಷಧಿವನಸ್ಪತಿಗಳು ಉತ್ಪನ್ನವಾದವು. ಆಗ ಪಿತೃದೇವತೆಗಳು ಅಗ್ನಿಹೋತ್ರದಲ್ಲಿ ತಮಗೂ ಒಂದು ಭಾಗಬೇಕೆಂದು ಅಪೇಕ್ಷಿಸಿ ಅದನ್ನು ಹೊಂದುವುದಕ್ಕಾಗಿ ವೃಷ್ಟಿಯಿಂದ ಉತ್ಪನ್ನವಾದ ಓಷಧಿವನಸ್ಪತಿಗಳನ್ನು ವಿಷದಿಂದ ಸವರಿ ಕಹಿಯಾಗುವಂತೆ ಮಾಡಿದರು. ಕಹಿಯಾದ ತೃಣಾದಿಗಳನ್ನು ಭಕ್ಷಿಸಿ ಆ ಪೃಶ್ನಿಯು ಮೂರ್ಛೆಯನ್ನು ಹೊಂದಿತು. ಇದನ್ನು ಕಂಡು ಅಂಗಿರಃಋಷಿಗಳು — ಈ ತೃಣಾದಿಗಳನ್ನು ಕಹಿಯಾಗುವಂತೆ ಯಾರು ಮಾಡಿದರು ಎಂದು ಕೇಳಲು, ಪಿತೃದೇವತೆಗಳು ನಮಗೆ ಆಹುತಿಯಲ್ಲಿ ಒಂದುಭಾಗವು ಬೇಕೆಂದು ಬಯಸಿ ಅದಕ್ಕಾಗಿ ತೃಣಾದಿಗಳನ್ನು ಕಹಿಯಾಗುವಂತೆ ನಾವೇ ಮಾಡಿದೆವು ಎಂದು ಪ್ರತ್ಯುತ್ತರಕೊಟ್ಟರು. ನಿಮ್ಮ ಭಾಗವೇನು? ನಿಮಗೆ ಏನುಬೇಕು? ಎಂದು ಪುನಃ ಕೇಳಲು, ಅಗ್ನಿಹೋತ್ರದಲ್ಲಿ ನಮಗೂ ಒಂದು ಭಾಗವಿರಬೇಕೆಂದು ಕೇಳಿದರು. ಅಂಗಿರಸಋಷಿಗಳು ಹಾಗೆಯೇ ಆಗಲೆಂದು ಪಿತೃಗಳಿಗೂ (ಸ್ವಧಾ ಪಿತೃಭ್ಯಃ ಎಂಬ ಆಹುತಿಯನ್ನು) ಒಂದು ಭಾಗವನ್ನು ಕೊಡಲು ಅವರು ತೃಣಾದಿಗಳಲ್ಲಿದ್ದ ಕಹಿಯನ್ನು ಹೋಗಲಾಡಿಸಿ ಸಿಹಿಯಾಗಿ ಸಿಹಿ

ಯಾಗಿ ರುಚಿಕರವಾಗಿರುವಂತೆ ಮಾಡಿದರು. ಈ ವಿಷಯವನ್ನು ತಿಳಿದ ಪುರುಷನ ವಿಷಯದಲ್ಲಿ ತೃಣಲತಾದಿಗಳು ಸ್ವಾದು (ರುಚಿ) ಯಾಗಿಯೇ ಇರುತ್ತವೆ.

ಅನಂತರ ಆ ಅಂಗಿರಸಋಷಿಗಳು ಹಾಲನ್ನು ಕರೆಯುವುದಕ್ಕಾಗಿ ಕರುವನ್ನು ಗೋವಿನಬಳಿಗೆ ಕರೆತಂದು ಎಲೈ ವತ್ಸವೇ, (ಕರುವೇ) ಯಜ್ಞದಲ್ಲಿ ಹವ್ಯವನ್ನು ಸಿದ್ಧಪಡಿಸುವುದಕ್ಕಾಗಿ ಹಾಲು ಬೇಕಾಗಿರುವುದು, ಅದನ್ನು ನಮಗೆ ಕೊಡು ಎಂದು ಕೇಳಿದರು. ಆದಕ್ಕೆ ಕರುವು ನಿಮಗೆ ಹಾಲು ಬೇಕಾದರೆ ನನಗೆ ಒಂದು ವರವನ್ನು ಕೊಡಬೇಕು. ಕರುವು ಹುಟ್ಟಿದಮೇಲೆ ಹತ್ತುರಾತ್ರಿಗಳ ವರೆಗೆ (ಹತ್ತುದಿನಗಳವರೆಗೆ) ಹಸುವಿನಿಂದ ಹಾಲನ್ನು ಕರೆಯಕೂಡದು, ಹತ್ತು ದಿನಗಳು ಕಳೆದನಂತರವೂ ಹಾಲನ್ನು ಕರೆಯುವ ಸಮಯದಲ್ಲಿ ಪ್ರತಿದಿನವೂ ತಾಯಿಯೊಡನೆ ನಾನು ಅರ್ಧಪ್ರಹರಕಾಲ ಹಾಲನ್ನು ಪಾನಮಾಡುತ್ತಾ ಸುಖವಾಗಿ ಸಂಚರಿಸುತ್ತಿರ ಬೇಕು ಎಂದು ವರವನ್ನು ಕೇಳಿತು. ಋಷಿಗಳು ಹಾಗೆಯೇ ಆಗಲೆಂದೊಪ್ಪಿ ಅದರಂತೆ ವರವನ್ನು ಕೊಟ್ಟರು. ಆದ್ದರಿಂದ ಈಗಲೂ ಹೋಮಾರ್ಥವಾಗಿ ಗೋದೋಹನಮಾಡುವಾಗ ಹೊಸದಾಗಿ ಕರುಹಾಕಿದ ಗೋವಿನಲ್ಲಿ ಹತ್ತುದಿನಗಳವರೆಗೆ ಹಾಲನ್ನು ಕರೆಯುವುದಿಲ್ಲ. ಕರುವೂ ಹಾಲನ್ನು ಪಾನಮಾಡುತ್ತಾ ತಾಯಿಯ ಬಳಿ ಇರುವುದು. ಒಂದುವೇಳೆ ಇದಕ್ಕೆ ವಿರುದ್ಧವಾಗಿ ಹತ್ತುದಿನಗಳು ಕಳೆಯುವುದಕ್ಕೆ ಮುಂಚಿತವಾಗಿಯೇ ಹೋಮಾರ್ಥವಾಗಿ ಹಾಲನ್ನು ಕರೆದರೆ ಅಥವಾ ಹತ್ತುರಾತ್ರೆ ಕಳೆದನಂತರ ಕೆಚ್ಚಲಿನಲ್ಲಿರುವ ಹಾಲನ್ನೆಲ್ಲಾ ಕರೆದು ಕರುವಿಗೆ ಸ್ವಲ್ಪವೂ ಬಿಡದಿದ್ದರೆ ಅಂತಹ ಪುರುಷನನ್ನು ರುದ್ರದೇವನೇ ದಂಡಿಸುವನು. ಅವನ ಯಜ್ಞವನ್ನು ನಾಶಮಾಡುವನು ಎಂದು ಈ ಉಪಾಖ್ಯಾನದ ವಿವರಣೆ ಇದೆ.

*English Translation*

## The Story of Nabhanedishtha, the son of Manu

He recites Nabhanedistham. Nabhanedishtha was a son of Manu, who was given to the sacred duty after his investitute in the house of his Guru; his brothers deprived him of his share in the paternal property. He went to them and said, "what portion is left to me?" They answered, "Go to the adjudicator and arbitrator." He went to his father and said, "They have divided the property including my share among themselves." The father answered, "My dear son, do uot mind that. There are the Angirasah just engaged in holding their sacrificial session (Sattra) for going to heaven. As often as they commence the ceremonies of the sixth day, they are puzzuled (frustrated in their design). Let them recite on the sixth day those two hymns (abovementioned, Rigveda 10, 61–62), then they wili give thee the sum of a thousand which is contributed by all the sacrificers who participate in the sacrificial session, when they go to heaven," He said, "Well, let it be so." He then went to them, saying, "Receive me, the son of Manu, among you, O ye wise!" They said, "What does thou wish, that thou speakest thus?" He answered, "I will show you how to perform the sixth day, then give me the reward for the sacrificial session of a thousand cows or other valuables, when you go up to heaven." They said, "Well, let it be so." He made them recite on the sixth day those two hymns; then they became aware of the Yajna (the sacrifice regarded as a person, leading to

heaven,) and of the heaven-world. Therefore the Hotar recites those two hymns on the sixth day, in order that the sacrificer might become aware of the sacrifice, and to have subsequently pointed out the heaven-world. When there going up, they said, "This thousand, O Brahmana, belongs to thee." When he was putting all together the thousand pieces, a man clothed in a blackish dirty dress alighted and approaching him, said, "This is mine: I have left it here." He answered, "The Angirasah have given it to me" The man said, "Then it belongs to either of us, thy father may decide." He went to his father. He asked him," "Have they not, my dear son, given you the reward?" He said, "They have given mə but a man clothed in a blackish dress alighted and approaching me, said, this is mine, have left it here." So saying, he took it. The father said, "It is his, my dear son! but he will give it to thee." He went back to him, and said, "Sir this belongs only to you; so says my father." He said, "I give it to thee, because you have spoken the truth, (i. e. acknowledged that it is my property)" Therefore a man who is learned must speak only the truth. This is the mantra of "the thousand gifts," the Nabhanedishtha hymn. Upon that man who has this knowledge a thousand gifts shower, and he gets a glimpse of heaven by means of the sixth day.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾವಿಂಶಾಧ್ಯಾಯಸ್ಯ ನವಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ಒಂಬತ್ತನೆಯ ಖಂಡವು
ಸಮಾಪ್ತವಾದುದು.



# ಅಥ ದ್ವಾವಿಂಶಾಧ್ಯಾಯೇ ದಶಮಃ ಖಂಡಃ

## ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ಹತ್ತನೆಯ ಖಂಡವು



[ ತೃತೀಯಸವನದಲ್ಲಿ ಪಠಿಸಬೇಕಾದ ಸಹಚರಶಸ್ತ್ರಗಳು ; ನಾಭಾನೇದಿಷ್ಠ ವಾಲಖಿಲ್ಯ, ಸುಕೀರ್ತಿ, ಸೂಕ್ತಗಳು, ವೃಷಾಕಪಿ ಮತ್ತು ಏವಯಾಮರುತ್ ಎಂಬ ಸೂಕ್ತಗಳು.
ಆರನೆಯ ತಿವಸ ಪಠಿಸಬೇಕಾದ ಆಗ್ನಿಮಾರುತಶಸ್ತ್ರ.]



**ತಾನ್ಯೇತಾನಿ ಸಹಚರಾಣೀತ್ಯಾಚಕ್ಷತೇ ನಾಭಾನೇದಿಷ್ಠಂ ವಾಲಖಿಲ್ಯಾ ವೃಷಾಕಪಿಮೇವಯಾಮರುತಂ ತಾನಿ ಸಹೈವ ಶಂಸೇತ್ ॥**

ಅಥ ನಾಭಾನೇದಿಷ್ಠೀಯೇನ ಸೂಕ್ತದ್ವಯೇನ ಸಹ ಪಠಿತವ್ಯಾನಿ ಮಂತ್ರಾಂತರಾಣಿ ವಿಧತ್ತೇ—ತಾನ್ಯೇತಾನಿ ವಕ್ಷ್ಯಮಾಣಾನಿ ಚತುರ್ವಿಧಮಂತ್ರಜಾತಾನಿ ಸಹಚರಾಣಿ ಪ್ರಯೋಗ-ಕಾಲೇ ಸಹೈವ ವರ್ತಂತ ಇತ್ಯೇವಂ ಯಾಜ್ಞಿಕಾ ಆಚಕ್ಷತೇ । ತತ್ರ ನಾಭಾನೇದಿಷ್ಠಂ ಸೂಕ್ತ-ದ್ವಯಂ ಯದಸ್ತಿ, ವಾಲಖಿಲ್ಯೈರ್ಮಹರ್ಷಿಭಿರ್ದೃಷ್ಟಾ ಅಭಿ ಪ್ರ ವಃ ಸುರಾಧಸಮಿತ್ಯಾದ್ಯಾ ವಾಲಖಿಲ್ಯನಾಮಕಾ ಮಂತ್ರಾ ಯೇ ಸಂತಿ, ವೃಷಾಕಪಿನಾ ಮಹರ್ಷಿಣಾ ದೃಷ್ಟಂ ವಿ ಹಿ ಸೋತೋರಸೃಕ್ಷತೇತಿ ಸೂಕ್ತಂ ಯದಸ್ತಿ, ಏವಯಾಮರುನ್ನಾಮ್ನಾ ಮಹರ್ಷಿಣಾ ದೃಷ್ಟಂ ಪ್ರ ವೋ ಮಹೇ ಮತಯೋ ಯಂತು ವಿಷ್ಣವ ಇತಿ ಸೂಕ್ತಂ ಯದಸ್ತಿ, ತಾನಿ ಚತ್ವಾರಿ ಸಹೈವ ಶಂಸೇತ್ ।

ಈಗ ನಾಭಾನೇದಿಷ್ಠ ಎಂಬ ಎರಡು ಸೂಕ್ತಗಳೊಡನೆ ಪಠಿಸಬೇಕಾದ ಕೆಲವು ಸಹಚರ ಮಂತ್ರಗಳನ್ನು ತಿಳಿಸುವರು. ಮುಂದೆ ಹೇಳುವ ನಾಲ್ಕು ಸೂಕ್ತಗಳನ್ನು ನಾಭಾನೇದಿಷ್ಠಸೂಕ್ತದ್ವಯಗಳ ಜತೆಯಲ್ಲಿ ಸಹಚರಸೂಕ್ತವನ್ನಾಗಿ ಪಠಿಸಬೇಕೆಂದು ಯಾಜ್ಞಿಕರು ಹೇಳುವರು. ಇವುಗಳಲ್ಲಿ ನಾಭಾನೇದಿಷ್ಠಂ ಎಂಬ ಎರಡು ಸೂಕ್ತಗಳು ; ವಾಲಖಿಲ್ಯ ಎಂಬ ಮಹರ್ಷಿಗಳಿಂದ ದೃಷ್ಟವಾದ **ಅಭಿ ಪ್ರ ವಃ ಸುರಾಧಸಂ** ಎಂಬ ಸೂಕ್ತವು (ಋ. ಸಂ. ೮-೪೯-೧) ವಾಲಖಿಲ್ಯ ಎಂಬ ಋಷಿಗಳಿಂದಲೇ ದೃಷ್ಟವಾದುದು ; **ವಿ ಹಿ ಸೋತೋರಸೃಕ್ಷತ** (ಋ. ಸಂ. ೧೦-೮೬-೧) ಎಂಬ ಸೂಕ್ತವು ವೃಷಾಕಪಿಯಿಂದ ದೃಷ್ಟವಾದುದು ; **ಪ್ರ ವೋ ಮಹೇ ಮತಯೋ ಯಂತು ವಿಷ್ಣವೇ** (ಋ. ಸಂ. ೫-೮೭-೧) ಎಂಬ ಸೂಕ್ತವು ಏವಯಾಮರುತ್ ಎಂಬ ಋಷಿಯಿಂದ ದೃಷ್ಟವಾದುದು. ಈ ನಾಲ್ಕು ಸೂಕ್ತಗಳನ್ನೂ ಒಟ್ಟಿಗೇ ಪಠಿಸಬೇಕು.

**ಯದೇಷಾಮಂತರಿಯಾತ್ತದ್ಯಜಮಾನಸ್ಯಾಂತರಿಯಾತ್ ॥**

ಸಹಶಂಸನಾಭಾವೇ ಬಾಧಂ ದರ್ಶಯತಿ—ಯದಿ ಕಥಂಚಿದೇಷಾಂ ಚತುರ್ಣಾಂ ಮಧ್ಯ ಏಕಮಪ್ಯಂತರಿಯಾದಂತರಿತಂ ಲುಪ್ತಂ ಕುರ್ಯಾತ್ತದಾನೀಂ ಯಜಮಾನಸ್ಯ ಸಂಬಂಧಿ ಶ್ರೇಯೋಽಂತರಿಯಾದ್ವಿನಾಶಯೇತ್ ॥

ಮೇಲೆ ತಿಳಿಸಿದ ನಾಲ್ಕು ಸೂಕ್ತಗಳನ್ನು ಜತೆಯಲ್ಲಿ ಪಠಿಸದಿದ್ದಲ್ಲಿ ಸಂಭವಿಸುವ ತೊಂದರೆಯನ್ನು ತಿಳಿಸುವರು. ಮೇಲೆ ಹೇಳಿದ ನಾಲ್ಕು ಸಹಚರ ಸೂಕ್ತಗಳಲ್ಲಿ ಒಂದನ್ನು ಪಠಿಸದೆ ಬಿಟ್ಟರೂ ಅದರಿಂದ ಯಜಮಾನನಿಗೆ ಹಾನಿಯುಂಟಾಗುವುದು.

ಯದಿ ನಾಭಾನೇದಿಷ್ಠಂ ತೇತೋಽಸ್ಯಾಂತರಿಯಾದ್ಯದಿ ವಾಲಖಿಲ್ಯಾಃ ಪ್ರಾಣಾನಸ್ಯಾಂತರಿಯಾದ್ಯದಿ ವೃಷಾಕಪಿಮಾತ್ಮಾನ ಮಸ್ಯಾಂತರಿಯಾದ್ಯದ್ಯೇವಯಾಮರುತಂ ಪ್ರತಿಷ್ಠಾಯಾ ಏವಂ ಚ್ಯಾವಯೇದ್ದೈವ್ಯೈ ಚ ಮಾನುಷ್ಯೈ ಚ ॥

ಸಾಮಾನ್ಯಾಕಾರೇಣ ಬಾಧಮುಕ್ತ್ವಾ ಪುನರ್ವಿಶೇಷಾಕಾರೇಣ ಬಾಧಂ ದರ್ಶಯತಿ—ಯದ್ಯಯಂ ಹೋತಾ ನಾಭಾನೇದಿಷ್ಠಮಂತ್ರಾನ್ವಿಲೋಪಯೇತ್ತದಾನೀಮಸ್ಯ ಯಜಮಾನಸ್ಯ ಪುತ್ರಾದ್ಯುತ್ಪಾದಕಂ ರೇತೋ ವಿಲೋಪಯೇತ್। ವಾಲಖಿಲ್ಯಾನಾಮಂತರಾಯೇ ಯಜಮಾನಸ್ಯ ಪ್ರಾಣವಿಚ್ಛೇದಃ ವೃಷಾಕಪಿಸೂಕ್ತಸ್ಯಾಂತರಾಯೇ ಯಜಮಾನಸ್ಯಾತ್ಮಾನಂ ಮಧ್ಯದೇಹಂ ವಿಚ್ಛಿಂದ್ಯಾತ್ । ಏವಯಾಮರುತಸ್ಯಾಂತರಾಯೇ ಯಜಮಾನಂ ದೈವ್ಯಾ ಮಾನುಷ್ಯಾಶ್ಚ ಪ್ರತಿಪ್ರಚ್ಯಾವಯೇತ್ । ಅವಿಘ್ನೇನ ಕರ್ಮಸಮಾಪ್ತಿರ್ದೈವೀ ಪ್ರತಿಷ್ಠಾ। ತತ್ಸಾಧನಭೂತನಾದಿಸಂಪತ್ತಿರ್ಮಾನುಷೀ ಪ್ರತಿಷ್ಠಾ ॥

ಈ ಸಹಚರಸೂಕ್ತಗಳನ್ನು ಪಠಿಸದೆ ಬಿಟ್ಟಲ್ಲಿ ಆಗುವ ಹಾನಿಯನ್ನು ಸಾಮಾನ್ಯವಾಗಿ ಹೇಳಿ ಈಗ ವಿಶೇಷರೀತಿಯಾಗಿ ತಿಳಿಸುವರು. ಯಜ್ಞದಲ್ಲಿ ಮಂತ್ರಾದಿಗಳನ್ನು ಪಠಿಸುತ್ತಿರುವಾಗ ಹೋತೃವು ನಾಭಾನೇದಿಷ್ಠಮಂತ್ರಗಳ ವಿಷಯದಲ್ಲಿ ಲೋಪ ಮಾಡಿದ್ದೇ ಆದರೆ ಯಜ್ಞಮಾಡುವ ಯಜಮಾನನಿಗೆ ಪುತ್ರೋತ್ಪಾದನಿಗೆ ಸಾಧನಭೂತವಾದ ರೇತಸ್ಸು (ವೀರ್ಯವು) ಲೋಪ ವಾಗುವುದು. ವಾಲಖಿಲ್ಯಮಂತ್ರಪಠನವಿಷಯದಲ್ಲಿ ಲೋಪಮಾಡಿದರೆ ಪ್ರಾಣಾಪಾಯವೇ ಸಂಭವಿಸುವುದು. ವೃಷಾಕಪಿ ಸೂಕ್ತವನ್ನು ಪಠಿಸುವುದರಲ್ಲಿ ಲೋಪವುಂಟಾದರೆ ಯಜಮಾನನ ದೇಹನ ಮಧ್ಯಭಾಗಕ್ಕೆ (ಉದರ) ಅಪಾಯವುಂಟಾಗುವುದು. ಏವಯಾ ಮರುತ್ಸೂಕ್ತ ವಿಷಯದಲ್ಲಿ ಲೋಪವುಂಟಾದರೆ ದೇವತೆಗಳಿಂದಲೂ ಮನುಷ್ಯರಿಂದಲೂ ಯಜಮಾನನ ಪ್ರತಿಷ್ಠೆಗೆ ಭಂಗವುಂಟಾಗುವುದು. ವಿಘ್ನಾದಿಗಳಿಲ್ಲದೆ ಕರ್ಮಸಮಾಪ್ತಿಯಾಗುವುದಕ್ಕೆ ದೈವೀಪ್ರತಿಷ್ಠೆಯೆಂದು ಹೆಸರು. ಯಜ್ಞಕ್ಕೆಸಾಧನ ಭೂತವಾದ ಧನಾದಿಸಂಪತ್ತಿಗೆ ಮಾನುಷೀ ಪ್ರತಿಷ್ಠಾ ಎಂದು ಹೆಸರು.

ನಾಭಾನೇದಿಷ್ಠೇನೈವ ರೇತೋಽಸಿಂಚತ್ತದ್ವಾಲಖಿಲ್ಯಾಭಿರ್ವ್ಯಕರೋತ್ಸುಕೀರ್ತಿನಾ ಕಾಕ್ಷೀವತೇನ ಯೋನಿಂ ವ್ಯಹಾಪಯದುರೌ ಯಥಾ ತವ ಶರ್ಮನ್ಮದೇಮೇತಿ ತಸ್ಮಾಜ್ಜ್ಯಾಯಾನ್ಸನ್ಗರ್ಭಃ ಕನೀಯಾಸಂ ಸಂತಂ ಯೋನಿಂ ನ ಹಿನಸ್ತಿ ಬ್ರಾಹ್ಮಣಾ ಹಿ ಸೃಪ್ತ ಏವ-

**ಯಾಮುರುತ್ಯೈತವ್ಯೆ ಕರೋತಿ ತೇನೇದಂ ಸರ್ವಮೇತವ್ಯೆ ಕೃತಮೇತಿ ಯದಿದಂ ಕಿಂಚ ॥**

ಅಂತರಾಯೇ ಬಾಧಮುಕ್ತ್ವಾ ತದನುಷ್ಠಾನೇ ಲಾಭಂ ದರ್ಶಯತಿ ಅತ್ರ ಮಂತ್ರ-ಸಮೂಹಾದ್ಯಜಮಾನಸ್ಯ ನೂತನಂ ಜನ್ಮ ವರ್ಣ್ಯತೇ । ಯದ್ವಾಪುತ್ರೋತ್ಪಾದನಂ ವರ್ಣ್ಯತೇ । ಯನ್ನಾಭಾನೇದಿಷ್ಠಂ ಸೂಕ್ತದ್ವಯಮಸ್ತಿ ತೇನೈವಹೋತಾ ರೇತಃ ಸಿಕ್ತವಾನ್ಭವತಿ । ಯಾಸ್ತು ವಾಲಖಿಲ್ಯಾ ಋಚಸ್ತಾಭಿಸ್ತದ್ರೇತೋ ವ್ಯಕರೋತ್, ವಿಕೃತಂ ಗರ್ಭಾಕಾರಮಕರೋತ್ । ಕಕ್ಷೀವಾನಿತ್ಯಭಿಹಿತಃ ಕಶ್ಚಿದೃಷಿಸ್ತಸ್ಯ ಪುತ್ರಃ ಸುಕೀರ್ತಿನಾಮಕಸ್ತೇನ ದೃಷ್ಟಮಪ ಪ್ರಾಚ ಇಂದ್ರೇತಿ ಸೂಕ್ತಮಪಿ ತನ್ನಾಮಕಂ ತಚ್ಚ ವೃಷಾಕಪಿಸೂಕ್ತಾತ್ ಪ್ರಾಗೇವ ಸಮೀಪೇ ಶಂಸನೀಯಂ । ತೇನ ಸುಕೀರ್ತಿನಾ ಹೋತಾ ಯೋನಿಂ ವ್ಯಹಾಪಯತ್, ಗರ್ಭನಿರ್ಗಮಾಯ ವಿವೃತಮಕರೋತ್ । ಅತ ಏವ ತಸ್ಯಾ ಋಚಶ್ಚತುರ್ಥಪಾದ ಉರೌ ಯಥೇತ್ಯಾದಿರಾಮ್ನಾ-ಯತೇ । ತಸ್ಯಾಯಮರ್ಥಃ । ಹೇ ಇಂದ್ರ ಯಥಾ ಜನ ಉರೌ ವಿಸ್ತೀರ್ಣೇ ಶರ್ಮನ್ ಶರ್ಮಣಿ ಸುಖಹೇತೌ ಗೃಹೇ ವಿಸ್ರಂಭೇಣ ತಿಷ್ಠತಿ । ತಥಾ ತವ ಪ್ರಸಾದಾದ್ವಯಂ ವಿಸ್ತೀರ್ಣೇ ಯೋನಿ-ಪ್ರದೇಶೇ ಮದೇಮ ಸಂಕೋಚಾಭಾವೇನ ಹೃಷ್ಟಾಃ ಸ್ಮಃ । ಇತ್ಯೇಷ ಪಾದೋ ಯೋನಿ-ವಿವೃತೇರ್ಗಮಕಃ । ಯಸ್ಮಾದನೇನ ವಿವೃತಿಃ ಕೃತಾ ತಸ್ಮಾಲ್ಲೋಕೇ ಜಾಯಮಾನೋ ಗರ್ಭೋ ಜ್ಯಾಯಾನ್ಸನ್ಯೋನಿದ್ವಾರಾಪೇಕ್ಷಯಾಽತ್ಯಂತಂ ಪ್ರೌಢಃ ಸನ್ನಪಿ ಸ್ವಾಪೇಕ್ಷಯಾ ಕನೀಯಾಂಸಮತ್ಯಲ್ಪಂ ಸಂತಂ ಯೋನಿಂ ನ ಹಿನಸ್ತಿ ನ ವಿನಾಶಯತಿ । ಯಸ್ಮಾದ್ಬ್ರಹ್ಮಣಾ ಸುಕೀರ್ತಿನಾಮಕೇನ ಮಂತ್ರೇಣ ಸ ಯೋನಿಃ ಕ್ಲಪ್ತೋ ನಿರ್ಮಿತಸ್ತಸ್ಮಾದವಿನಾಶೋ ಯುಕ್ತಃ । ಏವಯಾಮರುನ್ನಾಮಕೇನ ಸೂಕ್ತೇನ ಯಜಮಾನಮೇತವ್ಯೆ ಸರ್ವತ್ರ ಗಂತುಂ ಸಮರ್ಥಂ ಕರೋತಿ ಯದಿದಂ ಕಿಂ ಚ ಜಗದಸ್ತಿ ತದಿದಂ ಸರ್ವಂ ತೇನ ಸೂಕ್ತೇನೈತವ್ಯೆ ಕೃತಂ ಗಂತುಂ ಸಮರ್ಥಂ ಕೃತಂ ಸತ್ಪಶ್ಚಾದೇತಿ ಗಚ್ಛತಿ । ತಸ್ಮಾದಿದಮೇವ ಸೂಕ್ತಂ ಯಜಮಾನಸ್ಯಾಪಿ ಗಮನಸಾಮರ್ಥ್ಯಂ ಪ್ರಯಚ್ಛತಿ ॥

ಮಂತ್ರಲೋಪವಿಷಯದಲ್ಲಿ ಉಂಟಾಗುವ ಹಾನಿಯನ್ನು ಹೇಳಿ ಈಗ ಮಂತ್ರಲೋಪವಿಲ್ಲದಂತೆ ಅನುಷ್ಠಾನಮಾಡಿದರೆ ಉಂಟಾಗುವ ಲಾಭವನ್ನು ತಿಳಿಸುವರು. ಮೇಲೆಹೇಳಿದ ಮಂತ್ರಸಮೂಹವನ್ನೆಲ್ಲಾ ಪಠಿಸುವುದರಿಂದ ಯಜಮಾನನಿಗೆ ನೂತನ ಜನ್ಮವು ಪ್ರಾಪ್ತವಾದಂತಾಗುವುದು. ಅಥವಾ ಯಜಮಾನನಿಗೆ ಪುತ್ರೋತ್ಪವವಾದರೂ ಆಗಬಹುದು. ನಾಭಾನೇದಿಷ್ಠಸೂಕ್ತ ವನ್ನು ಹೋತೃವು ಪಠಿಸುವುದರಿಂದ ರೇತಸ್ಸನ್ನು ಸೇಚನಮಾಡಿದಂತಾಗುವುದು. ವಾಲಖಿಲ್ಯಸೂಕ್ತವನ್ನು ಪಠಿಸುವುದರಿಂದ ಯೋನಿಯಲ್ಲಿ ಸಿಕ್ತವಾದ ರೇತಸ್ಸು ಗರ್ಭಾಕಾರವನ್ನು ಪಡೆಯುವುದು ಕಕ್ಷೀವಾನ್ ಎಂಬ ಹೆಸರಿನ ಒಬ್ಬ ಮಹರ್ಷಿಯಿದ್ದನು ಅವನಿಗೆ ಸುಕೀರ್ತಿ ಎಂಬ ಹೆಸರಿನ ಪುತ್ರನಿದ್ದನು. ಈ ಸುಕೀರ್ತಿಯಿಂದ ದೃಷ್ಟವಾದ ಅಪಪ್ರಾಚ ಇಂದ್ರ ಎಂಬ ಸೂಕ್ತವನ್ನು ವೃಷಾಕಪಿಸೂಕ್ತವನ್ನು ಪಠಿಸುವುದಕ್ಕೆ ಮುಂಚಿತವಾಗಿಯೇ ಪಠಿಸಬೇಕು. ಈ ಸುಕೀರ್ತಿ ದೃಷ್ಟವಾದ ಸೂಕ್ತದಿಂದ (ಹೋತೃವು ಪಠಿಸುವುದರಿಂದ) ಗರ್ಭವು ಯೋನಿಯಿಂದ ಹೊರಗೆ ಬರುವುದಕ್ಕಾಗಿ ಮಾರ್ಗವನ್ನು ಸುಗಮ ಮಾಡಿದಂತಾಗುವುದು. ಎಲೈ ಇಂದ್ರನೇ, ಜನರು ವಿಸ್ತಾರವಾದ ತಮ್ಮ ಗೃಹದಲ್ಲಿ ವಾಸಿಸುತ್ತಿರುವರೋ ಅದರಂತೆ ನಿನ್ನ ಅನುಗ್ರಹದಿಂದ ವಿಸ್ತಾರವಾದ ಈ ಯೋನಿಪ್ರದೇಶದಲ್ಲಿ ಸಂತೋಷವಾಗಿ ಸುಖಪಡೆವೆವು ಎಂದು ಇದರ ಅರ್ಥವು. ಈ ಅರ್ಥವಿರುವ ಈ ಪಾದದಲ್ಲಿ ಗರ್ಭವು

ಯೋನಿಯಿಂದ ಹೊರಬರುವುದನ್ನು ತಿಳಿಸಲಾಗಿದೆ. ಆದ್ದರಿಂದ ಲೋಕವ್ಯವಹಾರದಲ್ಲಿ ಗರ್ಭವು (ಗರ್ಭಸ್ಥಶಿಶುವು) ದೊಡ್ಡದಾಗಿದ್ದರೂ ಸಣ್ಣದಾದ ಯೋನಿಪ್ರದೇಶದಿಂದ ಹೊರಕ್ಕೆ ಬರುವಾಗ ಯೋನಿಪ್ರದೇಶಕ್ಕೆ ಅಪಾಯವನ್ನುಂಟುಮಾಡುವುದಿಲ್ಲ. ಏಕೆಂದರೆ ಹಿಂದೆ ಬ್ರಹ್ಮನು ಸುಕೀರ್ತಿಋಷಿದೃಷ್ಟವಾದ ಮಂತ್ರದಿಂದಲೇ ಸ್ತ್ರೀಯೋನಿಯನ್ನು ನಿರ್ಮಿಸಿದನು. ಏವಯಾಮರುತ್ ಎಂಬ ಸೂಕ್ತವು ಯಜ್ಞಮಾಡುವ ಯಜಮಾನನಿಗೆ ಗಮನಸಾಮರ್ಥ್ಯವನ್ನು ಉಂಟುಮಾಡುವುದು.

ಅಹಶ್ಚ ಕೃಷ್ಣಮಹರರ್ಜುನಂ ಚೇತ್ಯಾಗ್ನಿಮಾರುತಸ್ಯ ಪ್ರತಿಪದಹಶ್ಚಾಹಶ್ಚೇತಿ ಪುನರಾವೃತ್ತಂ ಪುನರ್ನಿನೃತ್ತಂ ಷಷ್ಠೇಽಹನಿ ಷಷ್ಠಸ್ಯಾಹ್ನೋ ರೂಪಂ ||

**ಆಗ್ನಿಮಾರುತಶಸ್ತ್ರಸ್ಯ ಪ್ರತಿಪತ್ಸೂಕ್ತಂ ವಿಧತ್ತೇ—ಅಹಃ ಶಬ್ದೋಽತ್ರ ಪುನಃ ಪುನಃ ಪಠ್ಯಮಾನತ್ವಾತ್ಪುನರಾವೃತ್ತಮಿತ್ಯುಚ್ಯತೇ । ತಾಲಧ್ವನಿಸಮಾನತ್ವಾಚ್ಚ ಪುನರ್ನಿನೃತ್ತಮಿತಿ ಲಿಂಗದ್ವಯಂ ||**

ಈಗ ಆಗ್ನಿಮಾರುತಶಸ್ತ್ರದ ಮೊದಲನೇ ಸೂಕ್ತವನ್ನು ವಿವರಿಸುವರು. ಇಲ್ಲಿ ಅಹಃಶಬ್ದವು ಪುನಃಪುನಃ ಪಠಿಸಲ್ಪಡುವ ಮಂತ್ರವನ್ನು ಸೂಚಿಸುವುದು. ಹಾಗೆಯೇ ತಾಲಧ್ವನಿಯು ಸಮನಾಗಿರುವುದರಿಂದ ಇಲ್ಲಿ ನಿನೃತವೆಂಬ ಲಕ್ಷಣವೂ ಇರುವುದು. ಆದ್ದರಿಂದ ಆರನೆಯ ದಿನದಲ್ಲಿ ಪಠಿಸಬೇಕಾದ ಮಂತ್ರಗಳ ಲಕ್ಷಣಗಳು ಇಲ್ಲಿದ್ದಂತಾಯಿತು.

ಮಧ್ವೋ ವೋ ನಾಮ ಮಾರುತಂ ಯಜತ್ರಾ ಇತಿ ಮಾರುತಂ ಬಹ್ವಭಿವ್ಯಾಹೃತ್ಯಮಂತೋ ವೈ ಬಹ್ವಂತಃ ಷಷ್ಠಮಹಃ ಷಷ್ಠೇಽಹನಿ ಷಷ್ಠಸ್ಯಾಹ್ನೋ ರೂಪಂ ||

**ಮರುದ್ದೇವತಾಕಂ ಸೂಕ್ತಂ ವಿಧತ್ತೇ—ಅಸ್ಮಿನ್ಸೂಕ್ತೇ ಮರುದ್ವಿಷಯಮಭಿವ್ಯಾಹರಣೀಯಮರ್ಥಜಾತಂ ಬಹ್ವಸ್ತಿ । ಬಹುತ್ವಂ ಚೈಕತ್ವದ್ವಿತ್ವಾಪೇಕ್ಷಯಾ ಸಂಖ್ಯಾಯಾಮವಸಾನತ್ವಾದಂತೋ ಭವತಿ ತದೇತದಂತವತ್ತ್ವಂ ಲಿಂಗಂ ।**

ಮರುದ್ದೇವತಾಕವಾದ ಒಂದು ಸೂಕ್ತವನ್ನು ವಿವರಿಸುವರು. ಈ ಸೂಕ್ತದಲ್ಲಿ ಮರುದ್ದೇವತೆಗಳ ವಿಷಯವನ್ನು ತಿಳಿಸುವಂತೆ ಅರ್ಥವಾಗುವುದರಿಂದ ಇದು ಮರುದ್ದೇವತಾಕವಾದ ಸೂಕ್ತವು. ಇದರಲ್ಲಿ ಬಹುತ್ವ, ಏಕತ್ವ, ದ್ವಿತ್ವ ಮೊದಲಾದ ಸಂಖ್ಯಾಗುಣವಾಗಿಯೂ, ಕೊನೆ ಅಥವಾ ಅವಸಾನವನ್ನು ಸೂಚಿಸುವ ವಿಷಯವೂ ಇರುವುದರಿಂದ ಇದರಲ್ಲಿ ಬಹುತ್ವ ಮತ್ತು ಅಂತತ್ವವೆಂಬ ಆರನೆಯ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳಿದ್ದಂತಾಯಿತು.

ಜಾತವೇದಸೇ ಸುನವಾಮ ಸೋಮಮಿತಿ ಜಾತವೇದಸ್ಯಾಽಚ್ಯುತಾ

**ಅಚ್ಯುತತ್ವಲಿಂಗಯುಕ್ತಾಮೃಚಂ ವಿಧತ್ತೇ—**

ಈ ಸೂಕ್ತವು ಜಾತವೇದೋದೇವತಾಕವು. ಇದರಲ್ಲಿ ಆರನೆಯ ದಿವಸದ ಮಂತ್ರದಲ್ಲಿರಬೇಕಾದ ಅಚ್ಯುತತ್ವಲಕ್ಷಣವಿರುವುದು.

**ಸ ಪ್ರತ್ನಥಾ ಸಹಸಾ ಜಾಯಮಾನ ಇತಿ ಜಾತವೇದಸ್ಯಂ ಸಮಾನೋ-ದರ್ಕಂ ಷಷ್ಠೇಽಹನಿ ಷಷ್ಠಸ್ಯಾಹ್ನೋ ರೂಪಂ ॥**

**ಜಾತವೇದೋ ದೇವತಾಕಂ ಸೂಕ್ತಂ ವಿಧತ್ತೇ--ದೇವಾ ಅಗ್ನಿಮಿತ್ಯಸ್ಯ ಚತುರ್ಥ-ಪಾದಸ್ಯ ಸರ್ವಾಸ್ವಪ್ಯೃಕ್ಷು ಪಠಿತತ್ವಾತ್ಸಮಾನೋದರ್ಕತ್ವಂ ॥**

ಜಾತವೇದೋದೇವತಾಕವಾದ ಸ ಪ್ರತ್ನಥಾ ಸಹಸಾ ಜಾಯಮಾನಃ (ಋ. ಸಂ. ೧-೯೬-೧) ಎಂಬ ಮತ್ತೊಂದು ಸೂಕ್ತವನ್ನು ತಿಳಿಸುವರು. ಈ ಋಕ್ಕುಗಳ ನಾಲ್ಕನೆಯ ಪಾದಗಳಲ್ಲೆಲ್ಲಾ ದೇವಾಃ ಅಗ್ನಿಂ ಎಂದು ಹೇಳಿರುವುದರಿಂದ ಈ ಸೂಕ್ತವು ಸಮಾನೋದರ್ಕವು. ಎಂದರೆ ಇದರ ಋಕ್ಕುಗಳೆಲ್ಲವೂ ಒಂದೇವಿಧವಾದ ಪರಿಸಮಾಪ್ತಿಯುಳ್ಳವು. ಆದ್ದರಿಂದ ಆರನೆಯ ದಿವಸದ ಮಂತ್ರಗಳಲ್ಲಿರಬೇಕಾದ ಸಮಾನಪರಿಸಮಾಪ್ತಿಯೆಂಬ ಲಕ್ಷಣವಿದ್ದಂತಾಯಿತು.

**ಧಾರಯನ್ಧಾರಯನ್ನಿತಿ ಶಂಸತಿ ಪ್ರಸ್ರಂಸಾದ್ವಾ ಅಂತಸ್ಯಬಿಭಾಯ ತದ್ಯಥಾ ಪುನರಾಗ್ರಂಥಂ ಪುನರ್ನಿಗ್ರಂಥಮಂತಂ ಬಧ್ನೀಯಾನ್ಮ-ಯೂಖಂ ವಾಂತತೋ ಧಾರಣಾಯ ನಿಹನ್ಯಾತ್ತಾದೃಕ್ತದ್ಯದ್ಧಾರ-ಯನ್ಧಾರಯನ್ನಿತಿ ಶಂಸತಿ ಸಂತತ್ಯೈ ॥**

**ಧಾರಯನ್ನಿತ್ಯೇತಸ್ಯ ಪುನಃ ಪುನಃ ಪಠಿತಸ್ಯಾನುವಾದೇನ ತದಭಿಪ್ರಾಯಂ ಸದೃಷ್ಟಾಂತಂ ದರ್ಶಯತಿ--ಹೋತಾಸ್ಮಿನ್ಸೂಕ್ತೇ ಚತುರ್ಥೇಷು ಪಾದೇಷು ಧಾರಯನ್ಧಾರಯನ್ನಿತಿ ಪುನಃ ಪುನಃ ಪಠಿತ್ವಾ ಶಂಸತಿ । ತಸ್ಯ ಕೋಽಭಿಪ್ರಾಯ ಇತಿ ಸೋಽಭಿಧೀಯತೇ । ಅಂತಃ ಶಸ್ತ್ರಸ್ಯಾವ-ಸಾನಪ್ರದೇಶಾತ್ತ (ಶಸ್ತ್ರ)ಸ್ಯ ಪ್ರಶಂ (ಸ್ರಂ)ಸಾಪ್ರ (ತ್ಪ್ರ)ಕರ್ಷೇಣ ಸ್ರಂಸನಾಚ್ಛೈಥಿಲ್ಯಾದಯಂ ಹೋತಾ ಬಿಭಾಯ ಭೀತಿಂ ಪ್ರಾಪ್ತವಾನ್ । ಸ್ರಂಸನಪರಿಹಾರಾರ್ಥೇ ದೃಷ್ಟಾಂತೋಽಭಿಧೀ-ಯತೇ । ತದ್ಯಥಾ । ಲೋಕೇ ರಜ್ಜುಂ ನಿರ್ಮಿಮಾಣಃ ಪುರುಷಃ ಪುನರಾಗ್ರಂಥಂ ಪುನಃ ಪುನರಾಗ್ರಥ್ಯಾಽಽಗ್ರಥ್ಯ ಪುನರ್ನಿಗ್ರಂಥಂ ಪುನಃ ಪುನರ್ನಿಗ್ರಥ್ಯ ನಿರ್ಗಥ್ಯ ತಸ್ಯಾ ರಜ್ಜೋರಂತಂ ಬಧ್ನೀಯಾತ್ । ದೀರ್ಘರಜ್ಜ್ವಾ ಅಗ್ರಂ ಸೂಕ್ಷ್ಮಂ ಪುನಃ ಪೃಷ್ಠತಃ ಪ್ರತ್ಯಾಕೃಷ್ಯ ವೇಷ್ಟನಂ ಕೃತ್ವಾ ಗ್ರಥನಂ ನಾಮ ತಸ್ಯ ದೃಢೀಭಾವೋ ನಿರ್ಗ್ರಂಥನಾಮಕೋ ದೃಷ್ಟಾಂತಃ । ಅನ್ಯೋಽಪ್ಯ-ಭಿಧೀಯತೇ । ಯಥಾ ವಾ ಲೋಕೇ ಚರ್ಮಕಾರ ಆರ್ದ್ರಸ್ಯ ಚರ್ಮಣಃ ಸಂಕೋಚನಿವಾರ-ಣಾಯ ಭೂಮೌ ತತ್ಪ್ರಸಾರ್ಯ ದೃಢಮಾಕೃಷ್ಯ ಚರ್ಮಣೋಽಂತೇ ಮಯೂಖಂ ಶಂಕುಂ ಚರ್ಮಣೋ ಧಾರಣಾಯ ಭೂಮೌ ನಿಹನ್ಯಾತ್ । ದೃಢಂ ಭೂಮಿಪ್ರವಿಷ್ಟಂ ಕುರ್ಯಾತ್ । ಹೋತುಃ ಪುನರ್ಧಾರಯನ್ನಿತಿಶಂಸನಂ ಯದಸ್ತಿ ತದೇತತ್ತಾದೃಶಂ ಪೂರ್ವೋಕ್ತದೃಷ್ಟಾಂತ-ಸಮಾನಂ ದ್ರಷ್ಟವ್ಯಂ ತದೇತಚ್ಛಂಸನಂ ಯಜ್ಞಸ್ಯಂ ಸಂತತ್ಯೈ ಭವತಿ ॥**

ಧಾರಾಯನ್ಧಾರಯನ್ ಎಂದು ಇಲ್ಲಿ ಪುನಃಪುನಃ ಪಠಿತವಾಗಿರುವುದರಿಂದ ಅದರ ಅಭಿಪ್ರಾಯವನ್ನು ದೃಷ್ಟಾಂತಮೂಲಕ ತಿಳಿಸುವರು. ಹೋತೃವು ಈ ಸೂಕ್ತವನ್ನು ಪಠಿಸುವಾಗ ನಾಲ್ಕನೆಯ ಪಾದದಲ್ಲಿ ಧಾರಯನ್ ಧಾರಯನ್ ಎಂದು ಪುನಃ ಪುನಃ

ಪಠಿಸುತ್ತಾ ಪ್ರಶಂಸೆಮಾಡುವನು. ಇದಕ್ಕೆ ಏನು ಅಭಿಪ್ರಾಯವೆಂದರೆ—ಶಸ್ತ್ರಮಂತ್ರಗಳ ಕೊನೆಯಲ್ಲಿ ಹೋತೃವು ಧಾರಯನ್ ಧಾರಯನ್ ಎಂದು ಪದೇಪದೆ ಹೇಳುತ್ತಿರುವನು. ಏಕೆಂದರೆ ಕೊನೆಯಲ್ಲಿ ಈ ಮಂತ್ರಗಳು ಜಾರಿಬಿದ್ದು ಹೋಗಬಹುದೆಂಬ ಭೀತಿಯಿಂದ, ಅವು ಘಟ್ಟಿಯಾಗಿ (ಸ್ಥಿರವಾಗಿ) ನಿಂತಿರುವುದಕ್ಕಾಗಿ ಹೋತೃವು ಹೀಗೆ ಮಾಡುವನು. ಹೇಗೆಂದರೆ ಲೋಕವ್ಯವಹಾರದಲ್ಲಿ ಒಬ್ಬ ಪುರುಷನು ಒಂದು ಹಗ್ಗವನ್ನು ಹೊಸೆಯುತ್ತಿರುವಾಗ, ಹೊಸೆಯುತ್ತಿರುವ ಭಾಗವು ಪುನಃ ಬಿಚ್ಚಿಹೋಗದಂತೆ ಮಾಡುವುದಕ್ಕಾಗಿ ಹೊಸೆದನಂತರ ಕೊನೆಯಲ್ಲಿ ಎಳೆಗಳು ಬಿಚ್ಚಿಹೋಗದಂತೆ ಭದ್ರವಾಗಿ ಗಂಟುಹಾಕುವನು. ಅನಂತರ ಅದನ್ನು ಸಿಂಬಿಯಾಗಿ ಸುತ್ತುವನು. ಹೀಗೆ ಮಾಡುವುದರಿಂದ ಹೊಸೆದ ಹಗ್ಗವು ಬಿಚ್ಚಿಹೋಗುವುದಿಲ್ಲ ಅಥವಾ ಒಬ್ಬ ಚರ್ಮವನ್ನು ಹದಮಾಡುವವನು ಹಸೀಚರ್ಮವನ್ನು ಒಣಗಿಸುವಾಗ ಅದು ಒಣಗಿದನಂತರ ಸುರುಳಿಯಾಗಿ ಸುತ್ತಿಕೊಳ್ಳದಂತೆ ಮಾಡುವುದಕ್ಕಾಗಿ ಅದನ್ನು ನೆಲದಮೇಲೆ ಚೆನ್ನಾಗಿ ಹರಡಿ ಅದರ ಸುತ್ತಲೂ ಅಂಚುಗಳಲ್ಲಿ ಮತ್ತು ತುದಿಗಳಲ್ಲಿ ಹರಿತವಾದ ಮೊಳೆಗಳನ್ನು ಅಥವಾ ಮುಳ್ಳುಗಳನ್ನು ನೆಲಕ್ಕೆ ಸೇರಿಸಿ ಹೊಡೆಯುತ್ತಾನೆ. ಹೀಗೆ ಮಾಡುವುದರಿಂದ ಚರ್ಮವು ಸುರಟಿಕೊಳ್ಳದೆ ಅಗಲವಾಗಿಯೇ ಇದ್ದು ಒಣಗುವುದು. ಅದರಂತೆ ಈ ಶಸ್ತ್ರದ ಅಂತ್ಯದಲ್ಲಿ ಪಠಿಸುವ ಮಂತ್ರಗಳು ಜಾರಿ ಬಿದ್ದುಹೋಗದಂತೆ ಹೋತೃವು ಧಾರಯನ್ ಎಂಬ ಪದವನ್ನು ಪುನಃ ಪುನಃ ಪಠಿಸಿ ಮಂತ್ರಗಳು ಅಲ್ಲಿಯೇ ಸ್ಥಿರವಾಗಿ ನೆಲಸುವಂತೆ ಮಾಡುವನು. ಈ ಅಭಿಪ್ರಾಯವನ್ನು ಇಲ್ಲಿ ಎರಡು ಉದಾಹರಣೆಗಳ ಮೂಲಕ ಸ್ಪಷ್ಟಪಡಿಸಿರುವರು.

**ಸಂತತ್ಯೈಸ್ತ್ರ್ಯಹೈರವ್ಯವಚ್ಛಿನ್ನೈರ್ಯಂತಿ ಯ ಏವಂ ವಿದ್ವಾಂಸೋ ಯಂತಿ ಯಂತಿ ॥**

ವೇದನಪೂರ್ವಕಮನುಷ್ಠಾನಂ ಪ್ರಶಂಸತಿ ಪೂರ್ವವದ್ವ್ಯಾಖ್ಯಾನಂ ॥

ಮೇಲೆ ಹೇಳಿದಂತೆ ಅನುಷ್ಠಾನಮಾಡುವ ಪುರುಷರು ತಮ್ಮ ಯಜ್ಞವನ್ನು ಯಾವ ವಿಚ್ಛಿತ್ತಿಯು (ವಿಘ್ನವೂ) ಇಲ್ಲದಂತೆ ನೆರವೇರಿಸಿ ಯಜ್ಞಸಮಾಪ್ತಿಮಾಡುವರು ಎಂದರೆ ಮುಗಿಸುವರು.

*English Translation*

**(On the auxiliary Shastras at the evening libation, Nabhanedishtha, Valakkilya, the Sukirti hymn, Vrishakapi and Evayamarut. The Agnimaruta Shastra of the sixth day. See 6, 27–30.)**

The Hotar ought to to repeat those Shastras which are called the accompaniments of the others on the sixth day, viz. the Nabhanedishtham, Valakhilya, Vrishakapi and Evayamaruta only as auxiliaries to the Vaisvadeva-Shastra. If the Hotar foregoes only one of them, these additional Shastras the sacrificer will lose something. If he foregoes the Nabhanedishtham, then the sacrificer will lose his semen; if he foregoes the Valakhilyas, then the sacrificer will lose his breath: If he foregoes the Vrishakapi, the sacrificer will loss his soul, and if he foregoes the Evayamarutam, then he will turn the sacrificer out of his divine and human position. By means of the Nabhanedishtham, he (the priest) poured the semen into the sacrificer; by means of the Valakhilya verses he transformed

them to make an embryo. By means of the hymn by Sukirti, the son of Kakshivat, he made the womb set forth the child, because therein, in the first verse is said, "Let us rejoice in the shelter, Indra! (just as people find pleasure in a large commodious room." Thence the child (garbha) though being large does not damage the womb which is much smaller. If the womb is prepared by this sacred hymn (Brahma, the Sukirti hymn), then the Hotar imparts to the sacrificer the faculty of walking by means of the Evayamaruta hymn (5, 87). If he has done all required for making the sacrificer walk, then he walks (he has obtained the faculty of walking.)

Ahascha krishnam ahar arjunam (6, 9, 1-3) is the beginning of the Agnimaruta Shastra, because ahas ahas is a repetition, and a consonance, which is a characteristic of the sixth day. Madhvo vo nama marutam yajatra (7, 57) is the Maruta hymn. Here is the plural (because the Marutas are many) to be urged; because the plural is an anta, and this is a characteristic of the sixth day.

The priest, apprehending the anta, i e. ends of the sacrifice, might fall down, keeps them up by repeating twice the word dhrayan, i.e. they may hold, just as one ties and unties successively the ends of a cord, or just as one (a tanner) is driving in the end of a wetted skin a peg in order to keep it expanded. It is done to keep the sacrifice uninterrupted. Those who have such a knowledge have the three days continuous and unbroken (undisturbed).

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ದ್ವಾವಿಂಶಾಧ್ಯಾಯೇ
ದಶಮಃ ಖಂಡಃ ಸಮಾಪ್ತಃ

ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದಲ್ಲಿ
ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ಹತ್ತನೆಯ ಖಂಡವು ಸಮಾಪ್ತವಾದುದು.

ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



# ಅಥೈತರೇಯಬ್ರಾಹ್ಮಣೇ ತ್ರಯೋವಿಂಶಾಧ್ಯಾಯೇ ಪ್ರಥಮಃ ಖಂಡಃ

## ಇಪ್ಪತ್ತಮೂರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು



[ದ್ವಾದಶಾಹಯಜ್ಞದ ಏಳು ಮತ್ತು ಎಂಟನೇ ದಿವಸಗಳಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳು]

[ದ್ವಾದಶಾಹದ ಏಳನೆಯ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳು ; ಪ್ರಾತಸ್ಸವನ ಮತ್ತು ಮಾಧ್ಯಂದಿನ ಸವನಗಳಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳು.]



**ಯದ್ವಾ ಏತಿ ಚ ಪ್ರೇತಿ ಚ ತತ್ಸಪ್ತಮಸ್ಯಾಹ್ನೋ ರೂಪಂ ।**
**ಯದ್ಧ್ಯೇವ ಪ್ರಥಮಮಹಸ್ತದೇವೈತತ್ಪುನರ್ಯತ್ಸಪ್ತಮಂ ॥**

ದ್ವಾದಶಾಹಗತೇ ನವರಾತ್ರೇ ತ್ರಯಸ್ತ್ರ್ಯಹಾಃ । ತತ್ರ ಪ್ರಥಮದ್ವಿತೀಯೌ ತ್ರ್ಯಹಾವುಕ್ತೌ । ತಾವತಾ ಪೃಷ್ಠ್ಯಃ ಷಡಹಃ ಸಮಾಪ್ತಃ । ಯಸ್ತು ತೃತೀಯಸ್ತ್ರ್ಯಹಸ್ತತ್ರಯಾಣಿ ತ್ರೀಣ್ಯಹಾನಿ ತಾನಿ ಛಂದೋಮನಾಮಕಾನಿ । ತತ್ರ ಪ್ರಥಮಂ ನವರಾತ್ರಾಪೇಕ್ಷಯಾ ಸಪ್ತಮಂ ಯದಹರಸ್ತಿ ತತ್ರ ಮಂತ್ರಲಿಂಗಂ ದರ್ಶಯತಿ ॥ ಆಕಾರಃ ಪ್ರಶಬ್ದಶ್ಚೇತಿ ಲಿಂಗದ್ವಯಂ ಸಪ್ತಮಸ್ಯಾಹ್ನೋ ನಿರೂಪಕಂ ॥ ಪ್ರಥಮೇಽಹನಿ ಯಲ್ಲಿಂಗಜಾತಮಸ್ತಿ ತದಸ್ಮಿನ್ನಪಿ ದಿಶತಿ— ನವರಾತ್ರೇ ಪ್ರಥಮಮಹರ್ಯಾದೃಶಲಿಂಗೋಪೇತಂ ತದೇವೈತತ್ಪುನರನುಸಂಧೀಯಮಾನಂ ಯತ್ಸಪ್ತಮಹಸ್ತದ್ಭವತಿ ॥

ದ್ವಾದಶಾಹವೆಂಬ ಸತ್ರಯಾಗವನ್ನು ಮೂರು ದಿನಗಳಿಗೆ ಒಂದು ಗುಂಪಂತೆ ಒಂಭತ್ತು ದಿನಗಳನ್ನು ಮೂರು ಗುಂಪುಗಳನ್ನಾಗಿ ವಿಂಗಡಿಸಲಾಗಿದೆಯಷ್ಟೆ. ಈ ದ್ವಾದಶಾಹವೆಂಬ ಹನ್ನೆರಡು ದಿನಗಳಲ್ಲಿ ಮೊದಲು, ಹತ್ತುಕಡೆಯ ದಿನಗಳನ್ನು ಬಿಟ್ಟರೆ ಉಳಿಯುವ ಒಂಭತ್ತು ದಿನಗಳೇ ನವರಾತ್ರೆಯು. ಇದನ್ನೇ ಮೂರು ದಿನಗಳಿಗೆ ಒಂದು ಗುಂಪಂತೆ ಮೂರು ಗುಂಪುಗಳನ್ನಾಗಿ ವಿಂಗಡಿಸಿ ಆ ಪೈಕಿ ಮೊದಲ ಎರಡು ಗುಂಪುಗಳನ್ನು ಎಂದರೆ ಒಂದರಿಂದ ಆರುದಿನಗಳವರೆಗೆ ಆಗುವ ಎರಡು ಗುಂಪುಗಳನ್ನು ಇದುವರೆಗೆ ವಿವರಿಸಿದ್ದಾಯಿತು. ಇಲ್ಲಿಗೆ ಪೃಷ್ಠ್ಯಷಡಹವೆಂಬ ಭಾಗವೂ ಮುಗಿಯಿತು. ಈಗ ಮೂರನೆಯ ಗುಂಪಿನಲ್ಲಿರುವ ಏಳು, ಎಂಟು, ಒಂಭತ್ತು ಎಂಬ ದಿನಗಳ ಕಾರ್ಯಕಲಾಪಗಳನ್ನು ವಿವರಿಸುವರು. ಈ ಮೂರು ದಿನಗಳಿಗೆ **ಛಂದೋಮಾ** ಎಂದು ಹೆಸರು. ಆದ್ದರಿಂದ ಈ ಮೂರನೆಯ ಗುಂಪಿನ ಮೊದಲ ದಿನ ಅಥವಾ ಒಟ್ಟು ಒಂಭತ್ತು ದಿನಗಳಲ್ಲಿ ಏಳನೆಯ ದಿನದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರುವ ಲಕ್ಷಣಗಳನ್ನು ಇಲ್ಲಿ ವಿವರಿಸುವರು. ಆ ಮತ್ತು ಪ್ರ ಎಂಬ ಶಬ್ದಗಳ ಮೊದಲನೆಯ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳೆಂದು ಹಿಂದೆಯೇ ಹೇಳಿದೆ. ಆ ಲಕ್ಷಣಗಳು ಈ ಏಳನೆಯ ದಿವಸದ ಮಂತ್ರಗಳಿಗೂ

ಅನ್ವಯಿಸುವುದು ಮತ್ತು ನವರಾತ್ರಿಯ (ಒಂಭತ್ತು ದಿನಗಳಲ್ಲಿ) ಮೊದಲನೇ ದಿವಸದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿ ಯಾವ ಯಾವ ಲಕ್ಷಣಗಳಿರಬೇಕೆಂದು ಹೇಳಲಾಗಿದೆಯೋ ಅವುಗಳೆಲ್ಲವೂ ಈ ಏಳನೆಯ ದಿವಸದ ಮಂತ್ರಗಳಲ್ಲಿಯೂ ಇರಬೇಕು.

**ಯದ್ಯುಕ್ತವದ್ಯದ್ರಥವದ್ಯದಾಶುಮದ್ಯತ್ಪಿಬವದ್ಯತ್ಪ್ರಥಮೇ ಪದೇ ದೇವತಾ ನಿರುಚ್ಯತೇ ಯದಯಂ ಲೋಕೋಽಭ್ಯುದಿತಃ ॥**

**ತಾನ್ಯತಿದಿಷ್ಟಾನಿ ಲಿಂಗಾನಿ ದರ್ಶಯತಿ—ಏತಾನಿ ಪ್ರಥಮಾದಹ್ನೋಽತ್ರಾತಿದಿಷ್ಟಾನಿ ಲಿಂಗಾನಿ ॥**

ಈ ಏಳನೆಯ ದಿವಸದ ಲಕ್ಷಣಗಳು ಮೊದಲನೇ ದಿನದ ಲಕ್ಷಣಗಳಂತೆಯೇ ಇರುವವು. ಎಂದರೆ **ಯುಕ್ತ, ರಥ, ಆಶು, ಪಿಬ** ಋಕ್ಕಿನ ಮೊದಲನೇ ಪಾದದಲ್ಲಿ ನಿರ್ದಿಷ್ಟದೇವತೆಯ ಹೆಸರು, ಈ ಭೂಲೋಕದ ವಿಷಯವನ್ನು ಸೂಚಿಸುವ ಪದ ಇವುಗಳೆಲ್ಲವೂ (ಇವು ಮೊದಲನೇ ದಿನದ ಮಂತ್ರಗಳಲ್ಲಿರುವವು) ಏಳನೆಯ ದಿನದ ಮಂತ್ರಗಳಲ್ಲಿಯೂ ಇರಬೇಕು.

**ಯಜ್ಜಾತವದ್ಯದನಿರುಕ್ತಂ । ಯತ್ಕರಿಷ್ಯದ್ಯತ್ಪ್ರಥಮಸ್ಯಾಹ್ನೋರೂಪಮೇ-ತಾನಿ ವೈ ಸಪ್ತಮಸ್ಯಾಹ್ನೋ ರೂಪಾಣಿ ॥**

**ನೂತನಮಪಿ ಲಿಂಗಂ ದರ್ಶಯತಿ—ಜಾತವಜ್ಜನಿಧಾತುಯುಕ್ತಮನಿರುಕ್ತಮಸ್ಪಷ್ಟ-ದೇವತಾಕಂ ॥ ಅತಿದಿಷ್ಟೇನ ಲಿಂಗಜಾತೇನ ಸಹ ಸರ್ವಂ ಲಿಂಗಜಾತಮುಪಸಂಹರತಿ—ಭವಿಷ್ಯದರ್ಥವಾಚಿಪ್ರತ್ಯಯಾಂತಂ ಧಾತುಮಾತ್ರಂ ಕರಿಷ್ಯದಿತ್ಯುಚ್ಯತೇ । ಏತಚ್ಚಾನ್ಯಚ್ಚ ಯತ್ಪ್ರಥಮಸ್ಯಾಹ್ನೋ ಲಿಂಗಜಾತಮಸ್ತಿ ತೇನ ಸಹ ಸರ್ವಾಣ್ಯೇತಾನಿ ಸಪ್ತಮಸ್ಯಾಹ್ನೋ ರೂಪಾಣಿ ॥**

ಮೇಲೆ ಹೇಳಿದ ಲಕ್ಷಣಗಳಲ್ಲದೆ ಕೆಲವು ಹೊಸ ಲಕ್ಷಣಗಳೂ ಈ ಏಳನೆಯ ದಿವಸದ ಮಂತ್ರಗಳಲ್ಲಿರಬೇಕು. ಅವು ಯಾವವೆಂದರೆ— **ಜಾತ, ಅನಿರುಕ್ತ ಕರಿಷ್ಯತ್** (ಭವಿಷ್ಯತ್ಕಾಲವನ್ನು ಸೂಚಿಸುವ ಪದ). ಇವುಗಳೂ ಏಳನೆಯ ದಿವಸದಲ್ಲಿ ಪಠಿಸಬೇಕಾದ ಮಂತ್ರಗಳ ಲಕ್ಷಣಗಳು.

**ಸಮುದ್ರಾದೂರ್ಮಿರ್ಮಧುಮಾँ ಉದಾರದಿತಿ ಸಪ್ತಮಸ್ಯಾಹ್ನ ಆಜ್ಯಂ ಭವತ್ಯನಿರುಕ್ತಂ ಸಪ್ತಮೇಽಹನಿ ಸಪ್ತಮಸ್ಯಾಹ್ನೋರೂಪಂ ॥**

**ಆಜ್ಯಶಸ್ತ್ರಂ ವಿಧತ್ತೇ—ನಿಃಶೇಷೇಣ ಸ್ಪಷ್ಟಮುಕ್ತಂ ದೇವತಾಸ್ವರೂಪಂ ನಿರುಕ್ತಂ । ತದ್ವಿಪರೀತಮನಿರುಕ್ತಂ । ಸಮುದ್ರಾದಿತಿ ಸೂಕ್ತೇನ ಕಾಚಿದ್ದೇವತಾ ವಿಸ್ಪಷ್ಟಾ । ತಸ್ಮಾದಿದಂ ಲಿಂಗಸದ್ಭಾವಾತ್ಸಪ್ತಮೇಽಹನಿ ಯೋಗ್ಯತಯಾ ಸಪ್ತಮಸ್ಯಾಹ್ನೋ ನಿರೂಪಕಂ ॥**

ಯಾವುದಾದರೂ ಒಂದು ವಿಷಯವನ್ನು ಸ್ವಲ್ಪವೂ ಬಿಡದೆ ನಿಃಶೇಷವಾಗಿಯೂ ಸ್ಪಷ್ಟವಾಗಿಯೂ ಹೇಳುವುದಕ್ಕೆ ನಿರುಕ್ತವೆಂದು ಹೆಸರು. ಅದಕ್ಕೆ ವಿರುದ್ಧವಾಗಿ ಎಂದರೆ ವ್ಯತಿರಿಕ್ತವಾಗಿ ಹೇಳಿದರೆ ಅದಕ್ಕೆ ಅನಿರುಕ್ತವೆಂದು ಹೆಸರು. ಮೇಲೆ

ಹೇಳಿದ ಸಮುದ್ರಾದೂರ್ಮಿರ್ಮಧುಮಾಁ ಉದಾರತ್ (ಋ. ಸಂ. ೪-೫೮-೧) ಎಂಬ ಸೂಕ್ತಕ್ಕೆ ದೇವತೆ ಯಾವುದು ಎಂದು ಸ್ಪಷ್ಟವಾಗಿಲ್ಲ. ಆದ್ದರಿಂದ ಈ ಸೂಕ್ತದ ದೇವತೆಯು ಅನಿರುಕ್ತವು. ಈ ಅನಿರುಕ್ತವೇ ಈ ಏಳನೆಯ ದಿವಸದ ಮಂತ್ರದಲ್ಲಿರಬೇಕಾದ ಲಕ್ಷಣವು. ಅದು ಈ ಸೂಕ್ತದಲ್ಲಿದ್ದಂತಾಯಿತು.

ವಾಗ್ವೈ ಸಮುದ್ರೋ ನ ವೈ ವಾಕ್ಕ್ಷೀಯತೇ ನ ಸಮುದ್ರಃ ಕ್ಷೀಯತೇ ತದ್ಯದೇತತ್ಸಪ್ತಮಸ್ಯಾಹ್ನ ಆಜ್ಯಂ ಭವತಿ ಯಜ್ಞಾದೇವ ತದ್ಯಜ್ಞಂ ತನ್ವತೇ ವಾಚಮೇವ ತತ್ಪುನರುಪಯಂತಿ ಸಂತತ್ಯೈ । ಸಂತತ್ಯೈ-ಸ್ತ್ರ್ಯಹೈರವ್ಯವಚ್ಛಿನ್ನೈರ್ಯಂತಿ ಯ ಏವಂ ವಿದ್ವಾಂಸೋ ಯಂತಿ ॥

ತದೇತತ್ಸೂಕ್ತಂ ಪ್ರಶಂಸತಿ—ಸಮುದ್ರಾದೂರ್ಮಿರಿತ್ಯತ್ರ ಯಃ ಸಮುದ್ರಃ ಪ್ರೋಕ್ತಃ ಸೋಽಯಂ ವಾಕ್‌ಸ್ವರೂಪ ಏವ ತಯೋರ್ವಾಕ್ಸಮುದ್ರಯೋರಕ್ಷಯ್ಯತ್ವಸಾಮ್ಯಾತ್ । ಏಕೈಕಸ್ಯ ವಸ್ತುನಃ ಕವಿಭಿರ್ಬಹುಧಾ ವರ್ಣ್ಯಮಾನತ್ವಾನ್ನಾಸ್ತಿ ವಾಚಃ ಕ್ಷಯಃ, ಸಮುದ್ರೇಽಪಿ ಜಲಂ ನ ಶುಷ್ಯತಿ । ತಸ್ಮಾತ್ಸಮುದ್ರಸ್ಯ ವಾಗ್ರೂಪತ್ವಾದ್ಯದೇತತ್ಸಮುದ್ರಾದಿತಿ ಸೂಕ್ತ-ಮತ್ರಾಽಽಜ್ಯಶಸ್ತ್ರಂ ಭವತಿ । ತದಾನೀಂ ವಾಙ್‌ನಿಷ್ಪಾದ್ಯಮಂತ್ರಾತ್ಮಕಾದ್ಯಜ್ಞಾದೇವಾನುಷ್ಠಾನ-ರೂಪಂ ಯಜ್ಞಂ ತನ್ವತೇ ವಿಸ್ತಾರಯಂತಿ । ತದ್ವಿಸ್ತಾರೇ ಚ ಮಂತ್ರಾಣಾಂ ಬಹೂನಾಂ ಪಠಿತವ್ಯತ್ವಾತ್ಪುನಃ ಪುನರ್ವಾಚಮೇವ ಪ್ರಾಪ್ನುವಂತಿ । ತಚ್ಚ ಯಜ್ಞಸಂತತ್ಯೈ ಸಂಪದ್ಯತೇ ॥ ವೇದನಪೂರ್ವಕಮನುಷ್ಠಾನಂ ಪ್ರಶಂಸತಿ—ಪೂರ್ವವದ್ವ್ಯಾಖ್ಯೇಯಂ ॥

ಮೇಲಿನ **ಸಮುದ್ರಾತ್** ಎಂಬ ಸೂಕ್ತದಲ್ಲಿ ಸಮುದ್ರಶಬ್ದವಿರುವುದು. ಈ ಸಮುದ್ರವು ವಾಕ್ಸ್ವರೂಪವು ಹೇಗೆಂದರೆ ಕವಿಗಳು ಒಂದು ವಸ್ತುವನ್ನು ಒಬ್ಬೊಬ್ಬರು ಒಂದೊಂದು ವಿಧವಾಗಿ ವರ್ಣಿಸುವರು. ಮನುಷ್ಯರು ಆಡುವ ಮಾತುಗಳಿಗೆ ಕೊನೆ ಮೊದಲಿಲ್ಲ. ಹಾಗೆಯೇ ಸಮುದ್ರದಲ್ಲಿಯೂ ನೀರಿಗೆ ಅಭಾವವಿರುವುದಿಲ್ಲ. ಸಮುದ್ರದ ನೀರು ಒಣಗುವುದಿಲ್ಲ. ಆದ್ದರಿಂದ ಸಮುದ್ರಕ್ಕೂ ವಾಕ್ಯಗಳಿಗೂ ಸಾಮ್ಯವಿರುವುದು. ಈ ಸೂಕ್ತವು ಇಲ್ಲಿ ಆಜ್ಯಶಸ್ತ್ರವಾಗಿರುವುದು. ಈ ವಾಕ್ಯಗಳು ಯಾವಾಗಲೂ ಹೆಚ್ಚಾಗಿಯೇ ಇರುವುದರಿಂದ ಈ ಆಜ್ಯಶಸ್ತ್ರವಾದ ಈ ಸೂಕ್ತವು ಯಜ್ಞವನ್ನು ಅತಿಶಯವಾಗಿ ವೃದ್ಧಿಮಾಡುವುದು. ಇಂತಹ ಯಜ್ಞವೃದ್ಧಿಯನ್ನುಂಟುಮಾಡುವ ಆಜ್ಯಶಸ್ತ್ರವನ್ನು ಪಠಿಸಿ ಅನುಷ್ಠಾನಮಾಡುವ ವಿದ್ವಾಂಸರಾದ ಋತ್ವಿಜರು ಸಕಲ ವಿಷಯ ಗಳಲ್ಲಿಯೂ ಅಭಿವೃದ್ಧಿಯನ್ನು ಪಡೆಯುವರು.

ಆಪ್ಯಂತೇ ವೈ ಸ್ತೋಮಾ ಆಪ್ಯಂತೆ ಛಂದಾಂಸಿ ಷಷ್ಠೇಽಹನಿ ತದ್ಯಥೈ-ವಾದ ಆಜ್ಯೇನಾವದಾನಾನಿ ಪುನಃ ಪ್ರತ್ಯಭಿಘಾರಯಂತ್ಯಯಾತ-ಯಾಮತಾಯಾ ಏವಮೇವೈತತ್ಸ್ತೋಮಾಂಶ್ಚ ಛಂದಾಂಸಿ ಚ ಪುನಃ ಪ್ರತ್ಯುಪಯಂತ್ಯಯಾತಯಾಮತಾಯೈ ಯದೇತತ್ಸಪ್ತಮ-ಸ್ಯಾಹ್ನ ಆಜ್ಯಂ ಭವತಿ ॥

ತಸ್ಮಿನ್ನಾಜ್ಯಶಸ್ತ್ರೇ ಘೃತಸ್ಯ ನಾಮ ಗುಹ್ಯಮಿತಿ ಯೋ ಘೃತಶಬ್ದಃ ಶ್ರುತಸ್ತಮಭಿಪ್ರೇತ್ಯ ತದ್ವದ್ದೃಷ್ಟಾಂತಪೂರ್ವಕಮಾಜ್ಯಶಸ್ತ್ರಂ ಪ್ರಶಂಸತಿ ತ್ರಿವೃತ್ಪಂಚದಶಸಪ್ತದಶೈಕವಿಂಶತ್ರಿಣವ-ತ್ರಯಸ್ತ್ರಿಂಶಾಖ್ಯಾ ಯೇ ಸ್ತೋಮಾಸ್ತೇ ಸರ್ವೇಽಪಿ ಷಷ್ಠೇಽಹನ್ಯಾಪ್ಯಂತೇ ಸಮಾಪ್ತಾಃ। ಗಾಯತ್ರೀತ್ರಿಷ್ಟುಬ್‌ಜಗತ್ಯನುಷ್ಟುಪ್ಪಂಕ್ತ್ಯತಿಛಂದೋಭಿಧಾನಿ ಸರ್ವಾಣಿಚ್ಛಂದಾಂಸಿ ಚ ಸಮಾಪ್ತಾನಿ। ತಥಾ ಸತಿ ತ(ಯ)ಥೈವಾದೋ ವಕ್ಷ್ಯಮಾಣಂ ನಿದರ್ಶನಂ। ತಥೈವ ಸಪ್ತ-ಮಸ್ಯಾಹ್ನಃ ಪ್ರವೃತ್ತಿರ್ದ್ರಷ್ಟವ್ಯಾ। ಕಿಂ ನಿದರ್ಶನಮಿತಿ ತದುಚ್ಯತೇ।ಯಥಾ ದರ್ಶಪೂರ್ಣಮಾ-ಸಾದೀಷು ಪುರೋಡಾಶಾದಿದ್ರವ್ಯಾಣ್ಯವದಾಯ ಪಶ್ಚಾತ್ತಾನ್ಯವದಾನಸ್ಥಾನಾನ್ಯಾಜ್ಯಸ್ಥಾಲ್ಯಾ ಆಜ್ಯೇನ ಪುನಃ ಪ್ರತ್ಯಭಿಘಾರಯಂತಿ। ಕಿಮರ್ಥಮಿತಿ ತದುಚ್ಯತೇ। ಅಯಾತಯಾಮತಾಯೈ ಗತಸಾರತ್ವಪರಿಹಾರಾಯ ಪುನರಪಿ ಹವಿಷ್ಟ್ವಯೋಗ್ಯತಾರ್ಥಮೇತಮೇವೈತಸ್ಮಿನ್ಸಪ್ತಮೇಽಹನಿ ಸ್ತೋಮಾಂಶ್ಛಂದಾಂಸಿ ಚ ಪುನರಪಿ ಪ್ರತ್ಯುಪಯಂತಿ ಪ್ರತಿಪದ್ಯಾನುತಿಷ್ಠಂತಿ। ತಥಾ ಸತ್ಯನು-ಷ್ಠಿತಸ್ಯ ಪುನರುಷ್ಠಾನಂ ಚರ್ವಿತಚರ್ವಣಸಮಾನಮಿತಿ ಯಾತಯಾಮತ್ವಂ ಗತಸಾರತ್ವಂ ಭವೇತ್। ಅತೋ ಯದೇತತ್ಸಮುದ್ರಾದೂರ್ಮಿರಿತ್ಯಾದಿಕಂ ಸಪ್ತಮಸ್ಯಾಹ್ನ ಆಜ್ಯಂ ಭವತಿ ತದೇತದಯಾತಯಾಮತಾಯೈ ಪುನರಪಿ ಸಾರತ್ವಸಿದ್ಧ್ಯರ್ಥಂ ಭವತಿ। ತಸ್ಮಿನ್ ಶಸ್ತ್ರೇ ಘೃತಸ್ಯ ನಾಮ ಗುಹ್ಯಮಿತಿ ಘೃತಶಬ್ದಸ್ಯ ವಿದ್ಯಮಾನತ್ವಾತ್ ಪ್ರತ್ಯಭಿಘಾರಣಸಾಮ್ಯಂ ಭವತಿ। ಯದ್ಯಪಿ ತ್ರಿವೃದಾದಯಃ ಸ್ತೋಮಾಃ ಸಪ್ತಮೇಽಹನಿ ಪುನರ್ನಾನುಷ್ಠೀಯಂತೇ ತಥಾಪಿ ಚತುರ್ವಿಂಶಾದಯಶ್ಛಂದೋಮನಾಮಕಾ ಅನುಷ್ಠಾಸ್ಯಂತೇ। ತಸ್ಮಾದಯಾಮತ್ವಂ ಸ್ತೋಮ-ತ್ವಸಾಮ್ಯೇನಾಭಿಹಿತಂ ॥

ಈ ಸೂಕ್ತದಲ್ಲಿ ಘೃತಸ್ಯ ನಾಮ ಗುಹ್ಯಂ ಯದಸ್ತಿ ಎಂದು ಘೃತಶಬ್ದವಿರುವುದು. ಈ ಘೃತಶಬ್ದವನ್ನು ದೃಷ್ಟಾಂತಪೂರ್ವಕವಾಗಿ ವಿವರಿಸಿ ಆಜ್ಯಶಸ್ತ್ರವನ್ನು ಪ್ರಶಂಸೆಮಾಡುವರು. ಇದುವರೆಗೆ ತ್ರಿವೃತ್, ಪಂಚದಶ, ಸಪ್ತದಶ, ಏಕವಿಂಶ, ತ್ರಿಣವ ತ್ರಯಸ್ತ್ರಿಂಶ ಎಂಬ ಸ್ತೋಮಗಳನ್ನು ಆರು ದಿನಗಳಲ್ಲಿ ವಿವರಿಸಿ ಮುಗಿಸಿದ್ದಾಯಿತು. ಹಾಗೆಯೇ ಗಾಯತ್ರೀ, ತ್ರಿಷ್ಟುಪ್, ಜಗತೀ ಅನುಷ್ಟುಪ್, ಪಂಕ್ತಿ, ಅತಿಚ್ಛಂದ ಎಂಬ ಛಂದಸ್ಸುಗಳ ವಿಷಯವನ್ನೂ ಹೇಳಿ ಮುಗಿಸಿದ್ದಾಯಿತು. ಆದ್ದರಿಂದ ಈಗ ಒಂದು ನಿದರ್ಶನವನ್ನು (ದೃಷ್ಟಾಂತ) ಹೇಳುವರು. ದರ್ಶಪೂರ್ಣಮಾಸಾದಿ ಇಷ್ಟಿಗಳಲ್ಲಿ ಪುರೋಡಾಶಾದಿ ದ್ರವ್ಯಗಳನ್ನು ಹೋಮಮಾಡುವಾಗ ಅವದಾನಕ್ರಮದಿಂದ (ಹೋಮಮಾಡುವ ಸ್ರುಕ್‌ನಲ್ಲಿ ಕೆಲವು ಸಲ ಹಾಕಿಕೊಂಡು) ಹೋಮಮಾಡುವರು. ಅನಂತರ ಪಾತ್ರೆಯಲ್ಲಿ ಉಳಿಯುವ ಪುರೋಡಾಶಾದಿಹೋಮದ್ರವ್ಯವನ್ನು ಪುನಃ ಹೋಮಮಾಡಬೇಕಾದಾಗ ಆ ಶೇಷದ್ರವ್ಯವನ್ನು ಪುನಃ (ಮತ್ತೊಂದಾವರ್ತಿ) ಆಜ್ಯದಿಂದ ಅಭಿಘಾರಮಾಡಿ ಅನಂತರ ಹೋಮಮಾಡುವರು. ಏಕೆಂದರೆ ಒಂದಾವರ್ತಿ ಅಗ್ನಿಯಲ್ಲಿ ಹೋಮಮಾಡಿದಮೇಲೆ ಉಳಿಯುವ ಶೇಷದ್ರವ್ಯದಲ್ಲಿ ಸಾರವಿರುವುದಿಲ್ಲ. ಆ ಸಾರವನ್ನುಂಟುಮಾಡುವುದಕ್ಕಾಗಿ ಹೋಮ ದ್ರವ್ಯವನ್ನು ಪುನಃ ಅಭಿಘಾರಮಾಡುವರು. ಹೋಮದ್ರವ್ಯವನ್ನು ಪುನಃ ಅಭಿಘಾರಮಾಡಿ ಅದರ ಸಾರವನ್ನು ಹೆಚ್ಚಿಸುವರು. ಆದರೆ ಗಾಯತ್ರ್ಯಾದಿ ಛಂದಸ್ಸುಗಳನ್ನೂ ತ್ರಿವೃದಾದಿಸ್ತೋಮಗಳನ್ನೂ ಒಂದಾವರ್ತಿ ಪಠಿಸಿರುವುದರಿಂದ ಇವುಗಳಲ್ಲಿಯೂ ಸಾರವಿರುವುದಿಲ್ಲ. ಪುನಃ ಈ ಮಂತ್ರಗಳಲ್ಲಿ ಸಾರವನ್ನುಂಟುಮಾಡುವುದಕ್ಕಾಗಿಯೇ ಸಮುದ್ರಾತ್ ಎಂಬ ಆಜ್ಯಸೂಕ್ತವನ್ನು ಪಠಿಸುವರು. ಈ ಆಜ್ಯಸೂಕ್ತವು ಯಜ್ಞಾಂಗಕರ್ಮಗಳನ್ನು ಹೆಚ್ಚಾಗಿ ವೃದ್ಧಿಪಡಿಸುವ ಸಾಮರ್ಥ್ಯವುಳ್ಳದ್ದೆಂದು ಹಿಂದೆಯೇ ಹೇಳಲಾಗಿದೆ. ಈ ಸೂಕ್ತದಲ್ಲಿ ಘೃತಸ್ಯನಾಮ ಎಂದು ಘೃತಶಬ್ದಪ್ರಯೋಗವಿರುವುದರಿಂದ ಇದು ಯಜ್ಞವೃದ್ಧಿಯನ್ನುಂಟು

ಮಾಡುವುದು. ಆದರೆ ಈ ಏಳನೇ ದಿವಸದ ಪ್ರಯೋಗಗಳಲ್ಲಿ ತ್ರಿವೃದಾದಿಸ್ತೋಮಗಳನ್ನು ಉಪಯೋಗಿಸದಿದ್ದರೂ ಚತುರ್ವಿಂಶಿ ಸಂಖ್ಯಾಕವಾದ ಛಂದೋಮ ಎಂಬ ಮಂತ್ರಗಳನ್ನು ಉಪಯೋಗಿಸುವರು. ಈ ಕಾರಣದಿಂದ ಯಜ್ಞಾಭಿವೃದ್ಧಿಯುಂಟಾಗುವುದು.

**ತದು ತ್ರೈಷ್ಟುಭಂ ತ್ರಿಷ್ಟುಪ್ ಪ್ರಾತಃಸವನ ಏಷತ್ರ್ಯಹಃ ॥**

**ಆಜ್ಯಶಸ್ತ್ರಗತಂ ಛಂದಃ ಪ್ರಶಂಸತಿ—ತದು ತದಪಿ ಸಮುದ್ರಾದೂರ್ಮಿರಿತ್ಯಾದಿಕಂ ಶಸ್ತ್ರಂ ತ್ರಿಷ್ಟುಪ್‌ಛಂದಸ್ಕಂ । ಪ್ರಾತಃ ಸವನೇ ತ್ರಿಷ್ಟುಪ್ ಛಂದೋ ಯಸ್ಮಿಂಸ್ತೃತೀಯೇ ತ್ರ್ಯಹೇ ಸೋಽಯಂ ತ್ರಿಷ್ಟುಪ್‌ಪ್ರಾತಃ ಸವನಃ । ಯಥಾ ಪ್ರಥಮಸ್ಯ ತ್ರ್ಯಹಸ್ಯ ಪ್ರಾತಃಸವನೇ ಗಾಯತ್ರೀ ಯಥಾ ವಾ ಮಧ್ಯಮಸ್ಯ ತ್ರ್ಯಹಸ್ಯ ಪ್ರಾತಃಸವನೇ ಜಗತೀ, ಏವಮುತ್ತಮಸ್ಯ ತ್ರ್ಯಹಸ್ಯ ಪ್ರಾತಃಸವನೇ ತ್ರಿಷ್ಟುಬವಗಂತವ್ಯಾ । ಏತಚ್ಛಂದಸಾಂ ವಿವಾದೇ ನಿರ್ಣೀತಂ ॥**

ಆಜ್ಯಶಸ್ತ್ರದಲ್ಲಿರುವ ಛಂದಸ್ಸುಗಳನ್ನು ಪ್ರಶಂಸಿಸುವರು—ಈ **ಸಮುದ್ರಾದೂರ್ಮಿರ್ಮಧುಮಾನ್** ಎಂಬ ಈ ಆಜ್ಯಶಸ್ತ್ರಸೂಕ್ತವು ತ್ರಿಷ್ಟುಪ್‌ಛಂದಸ್ಕವು ಮೂರನೇತ್ರ್ಯಹೇ (ಮೂರನೇ ಗುಂಪಿನಲ್ಲಿ) ಯಾವ ಪ್ರಾತಸ್ಸವನದಲ್ಲಿ ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳನ್ನು ಪಠಿಸುವರೋ ಅದು ತ್ರಿಷ್ಟುಪ್‌ಪ್ರಾತಸ್ಸವನವೆನಿಸುವುದು. ಮೊದಲನೇ ತ್ರ್ಯಹದ ಪ್ರಾತಸ್ಸವನದಲ್ಲಿ ಗಾಯತ್ರೀಛಂದಸ್ಸನ್ನು ಉಪಯೋಗಿಸುವರು. ಮಧ್ಯಮತ್ರ್ಯಹದ ಪ್ರಾತಸ್ಸವನದಲ್ಲಿ ಜಗತೀಛಂದಸ್ಸನ್ನು ಉಪಯೋಗಿಸುವರು ಅದರಂತೆ ಕೊನೆಯ (ಮೂರನೆಯ) ತ್ರ್ಯಹದ ಪ್ರಾತಸ್ಸವನದಲ್ಲಿ ತ್ರಿಷ್ಟುಭಛಂದಸ್ಸನ್ನು ಉಪಯೋಗಿಸಬೇಕು.

**ಆ ವಾಯೋ ಭೂಷ ಶುಚಿಪಾ ಉಪ ನಃ ಪ್ರಯಾಭಿರ್ಯಾಸಿ ದಾಶ್ವಾಂಸ-ಮಚ್ಛಾ ನೋ ನಿಯುದ್ಭಿಃ ಶತಿನೀಭಿರಧ್ವರಂ ಪ್ರ ಸೋತಾ ಜೀರೋ ಅಧ್ವರೇಷ್ವಸ್ಥಾದ್ಯೇ ವಾಯುವ ಇಂದ್ರಮಾದನಾಸೋ ಯಾ ವಾಂ ಶತಂ ನಿಯುತೋ ಯಾಃ ಸಹಸ್ರಂ ಪ್ರ ಯದ್ವಾಂ ಮಿತ್ರಾವರುಣಾ ಸ್ಪೂರ್ಧನ್ನಾ ಗೋಮತಾ ನಾಸತ್ಯಾ ರಥೇನಾಽಽ ನೋ ದೇವ ಶವಸಾ ಯಾಹಿ ಶುಷ್ಮಿನ್ಪ್ರ ವೋ ಯಜ್ಞೇಷು ದೇವಯಂತೋ ಅರ್ಚನ್ಪ್ರ-ಕ್ಷೋದಸಾ ಧಾಯಸಾ ಸಸ್ರ ಏಷೇತಿ ಪ್ರಉಗಮೇತಿ ಚ ಪ್ರೇತಿ ಚ ಸಪ್ತಮೇಽಹನಿ ಸಪ್ತಮಸ್ಯಾಹ್ನೋ ರೂಪಂ ತದು ತ್ರೈಷ್ಟುಭಂ ತ್ರಿಷ್ಟುಪ್ಪ್ರಾತಃಸವನ ಏಷ ತ್ರ್ಯಹಃ ॥**

**ಅಥ ಪ್ರಉಗಶಸ್ತ್ರಂ ವಿಧತ್ತೇ—ಆ ವಾಯೋ ಭೂಷ ಇತಿ ಪ್ರಥಮಂ ಪ್ರತೀಕಂ ತಸ್ಮಿನ್ನಾಕಾರೋ ಲಿಂಗಂ । ಪ್ರಯಾಭಿರಿತಿ ದ್ವಿತೀಯಂ । ತತ್ರ ಪ್ರಶಬ್ದೋ ಲಿಂಗಂ । ಆ ನೋ ನಿಯುದ್ಭಿರಿತಿ ತೃತೀಯಂ । ತಸ್ಮಿನ್ನಾಕಾರಃ । ಪ್ರ ಸೋತೇತಿ ಚತುರ್ಥೇ ಪ್ರಶಬ್ದಃ । ಯೇ ವಾಯವ ಇಂದ್ರೇತಿ ಪಂಚಮಂ ತತ್ರ ದ್ವಿತೀಯಪಾದ ಆ ದೇವಾಸ ಇತ್ಯಾಕಾರಃ । ಯಾ ವಾಂ ಶತಮಿತಿ ಷಷ್ಠಂ ತಸ್ಯ ತೃತೀಯಪಾದಾದಾವಾಕಾರಃ ಶ್ರುತಃ । ಪ್ರ ಯದ್ವಾಮಿತಿ ಸಪ್ತಮೇ**

**ಪ್ರಶಬ್ದಃ । ಆ ಗೋಮತೀತ್ಯಷ್ಟಮ ಆಕಾರಃ । ಆ ನೋ ದೇವೇತಿ ನವಮೋಽಪ್ಯಾಕಾರಃ । ಪ್ರ ವೋ ಯಜ್ಞೇಷ್ವಿತಿ ದಶಮೋ ಪ್ರಶಬ್ದಃ । ಪ್ರ ಕ್ಷೋದಸೇತ್ಯೇಕಾದಶೋಽಪಿ ಪ್ರಶಬ್ದಃ । ಅತ್ರಾಽಽದ್ಯೈಃ ಷಡ್ಭಿರ್ದ್ವೌ ತ್ರ್ಯೃಚೌ । ಇತರೇ ಪಂಚ ತ್ರ್ಯೃಚಾಃ । ತದೇತತ್ಸರ್ವಂ ಪ್ರಉಗ-ಶಸ್ತ್ರಮುಕ್ತಲಿಂಗಸದ್ಭಾವಾತ್ಸಪ್ತಮೇಽಹನಿ ಯೋಗ್ಯಂ । ಅನ್ಯತ್ಪೂರ್ವವದ್ವ್ಯಾಖ್ಯೇಯಂ ॥**

ಈಗ ಪ್ರಉಗಶಸ್ತ್ರವನ್ನು ಹೇಳುವರು—**ಆ ವಾಯೋ ಭೂಷ ಶುಚಿಪಾ ಉಪ ನಃ** (ಋ. ಸಂ. ೭-೯೨-೧) ಎಂಬ ಸೂಕ್ತವು ಪ್ರಉಗಶಸ್ತ್ರಸೂಕ್ತಗಳಲ್ಲಿ ಮೊದಲನೆಯದು ಈ ಸೂಕ್ತದಲ್ಲಿ ಆ ಎಂಬ ಆಕಾರವು ಏಳನೆಯ ದಿವಸದ ಲಕ್ಷಣವಾಗಿರುವುದು; **ಪ್ರಯಾಭಿರ್ಯಾಸಿ ದಾಶ್ವಾಂಸಂ** (ಋ. ಸಂ. ೭-೯೨-೩) ಎಂಬುದು ಎರಡನೆಯದು ಇದರಲ್ಲಿ ಪ್ರ ಎಂಬ ಲಕ್ಷಣವಿರುವುದು; **ಆ ನೋ ನಿಯುದ್ಭಿಃ ಶತಿನೀಭಿರಧ್ವರಂ** (ಋ. ಸಂ. ೧-೧೩೫-೩) ಎಂಬುದು ಮೂರನೆಯದು. ಇದರಲ್ಲಿ ಆ ಎಂಬ ಆಕಾರಲಕ್ಷಣವಿರುವುದು; **ಪ್ರ ಸೋತಾ ಜೀರೋ ಅಧರೇಷ್ವಸ್ಥಾತ್** (ಋ. ಸಂ. ೭-೯೨-೨) ಎಂಬುದು ನಾಲ್ಕನೆಯದು, ಇದರಲ್ಲಿ ಪ್ರ ಎಂಬ ಲಕ್ಷಣವಿರುವುದು; **ಯೇ ವಾಯವ ಇಂದ್ರಮಾದನಾಸಃ** (ಋ. ಸಂ. ೭-೯೨-೪) ಎಂಬುದು ಐದನೆಯದು. ಈ ಋಕ್ಕಿನ ಎರಡನೇ ಪಾದದಲ್ಲಿ ಆ ದೇವಾಸಃ ಎಂದು ಆಕಾರಲಕ್ಷಣವಿರುವುದು. **ಯಾ ವಾಂ ಶತಂ ನಿಯುತೋ ಯಾಃ ಸಹಸ್ರಂ** (ಋ. ಸಂ. ೭-೯೨-೬) ಎಂಬುದು ಆರನೆಯದು. ಈ ಋಕ್ಕಿನ ಮೂರನೇ ಪಾದದಲ್ಲಿ ಆ ಎಂಬ ಲಕ್ಷಣವಿರುವುದು; ಪ್ರ ಯದ್ವಾಂ ಮಿತ್ರಾವರುಣಾ ಸ್ಪೂರ್ಧನ್ (ಋ. ಸಂ. ೬-೬೭-೯) ಎಂಬುದು ಏಳನೆಯದು. ಇದರಲ್ಲಿ ಪ್ರಶಬ್ದಪ್ರಯೋಗವಿರುವುದು; **ಆ ಗೋಮತಾ ನಾಸತ್ಯಾ ರಥೇನ** (ಋ. ಸಂ. ೭-೭೨-೧) ಎಂಬುದು ಎಂಟನೆಯದು. ಇದರಲ್ಲಿ ಆ ಎಂಬ ಆಕಾರಲಕ್ಷಣವಿರುವುದು; **ಆ ನೋ ದೇವ ಶವಸಾ ಯಾಹಿ ಶುಷ್ಮಿನ್** (ಋ. ಸಂ. ೭ ೩೦-೧) ಎಂಬುದು ಒಂಭತ್ತನೆಯದು. ಇದರಲ್ಲಿಯೂ ಆ ಎಂಬ ಆಕಾರಲಕ್ಷಣವಿರುವುದು; **ಪ್ರ ವೋ ಯಜ್ಞೇಷು ದೇವಯಂತೋ ಅರ್ಚನ್** (ಋ. ಸಂ. ೭-೪೩-೧) ಎಂಬುದು ಹತ್ತನೆಯದು. ಇದರಲ್ಲಿ ಪ್ರ ಎಂಬ ಲಕ್ಷಣವಿರುವುದು; **ಪ್ರ ಕ್ಷೋದಸಾ ಧಾಯಸಾ ಸಸ್ರ ಏಷಾ** (ಋ. ಸಂ. ೭-೯೫-೧) ಎಂಬುದು ಹನ್ನೊಂದನೆಯದು. ಇದರಲ್ಲಿಯೂ ಪ್ರ ಎಂಬ ಲಕ್ಷಣವಿರುವುದು. ಇವುಗಳಲ್ಲಿ ಮೊದಲ ಆರು ಋಕ್ಕುಗಳೂ ಸೇರಿ ಎರಡು ತೃಚಗಳಾದವು. ಉಳಿದ ಋಕ್ಕುಗಳು ಐದು ತೃಚಗಳಾಗುವವು. ಈ ಮಂತ್ರಗಳೆಲ್ಲದರಲ್ಲಿಯೂ ಪ್ರಉಗ ಶಸ್ತ್ರಮಂತ್ರಗಳು. ಇವುಗಳಲ್ಲಿ ಏಳನೆಯ ದಿವಸದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳೆಲ್ಲವೂ ಇರುವವು.

**ಆ ತ್ವಾ ರಥಂ ಯಥೋತಯ ಇದಂ ವಸೋ ಸುತಮಂಧ ಇಂದ್ರ ನೇದೀಯ ಏದಿಹಿ ಪ್ರೈತು ಬ್ರಹ್ಮಣಸ್ಪತಿರಗ್ನಿರ್ನೇತಾ ತ್ವಂ ಸೋಮ ಕ್ರತುಭಿಃ ಪಿನ್ವಂತ್ಯಪಃ ಪ್ರ ವ ಇಂದ್ರಾಯ ಬೃಹತ ಇತಿ ಪ್ರಥ-ಮೇನಾಹ್ನಾ ಸಮಾನ ಆತಾನಃ ಸಪ್ತಮೇಽಹನಿ ಸಪ್ತಮಸ್ಯಾಹ್ನೋ ರೂಪಂ ॥**

**ಶಸ್ತ್ರಕ್ಲಪ್ತಿಸಮುತ್ಪಲಿಂಗಕಾನ್ಮಂತ್ರಾನ್ವಿಧತ್ತೇ—**

ಶಸ್ತ್ರಮಂತ್ರಗಳಲ್ಲಿ ಒಂದೇವಿಧ ಲಕ್ಷಣಗಳಿರುವ ಮಂತ್ರಗಳನ್ನು ತಿಳಿಸುವರು. **ಆ ತ್ವಾ ರಥಂ ಯಥೋತಯೇ** (ಋ. ಸಂ. ೮-೬೮-೧); **ಇದಂ ವಸೋ ಸುತಮಂಧಃ** (ಋ. ಸಂ. ೮-೨-೧); **ಇಂದ್ರ ನೇದೀಯ ಏದಿಹಿ ; ಪ್ರೈತು**

ಬ್ರಹ್ಮಣಸ್ಪತಿಃ (ಋ. ಸಂ. ೧-೪೦-೩); ಅಗ್ನಿರ್ನೇತಾ ಭಗ ಇವ (ಋ. ಸಂ. ೩-೨೦-೪); ತ್ವಂ ಸೋಮ ಕ್ರತುಭಿಃ (ಋ. ಸಂ. ೧-೯೧-೨); ಪಿನ್ವಂತ್ಯಪೋ ಮರುತಃ ಸುದಾನವಃ (ಋ. ಸಂ. ೧-೬೪-೬); ಪ್ರ ವ ಇಂದ್ರಾಯ ಬೃಹತೇ (ಋ. ಸಂ. ೬-೬-೧೧) ಈ ಋಕ್ಕುಗಳೆಲ್ಲಾ ಮೊದಲನೇ ದಿವಸದಲ್ಲಿಯೂ ಪಠಿಸಿದ್ದರಿಂದ ಇವುಗಳೆಲ್ಲಾ ಏಳನೆಯ ದಿವಸ ಪಠಿಸುವ ಋಕ್ಕುಗಳಿಗೆ ಸಮಾನವು. ಇವುಗಳ ಲಕ್ಷಣವೂ ಮೊದಲನೇ ದಿವಸದ ಋಕ್ಕುಗಳಂತೆಯೇ ಇರುವವು.

**ಕಯಾ ಶುಭಾ ಸವಯಸಃ ಸನೀಳಾ ಇತಿ ಸೂಕ್ತಂ ನ ಜಾಯಮಾನೋ ನ ಶತೇನ ಜಾತ ಇತಿ ಜಾತವತ್ಸಪ್ತಮೇಽಹನಿ ಸಪ್ತಮಸ್ಯಾಹ್ನೋ ರೂಪಂ ॥**

ಅಥ ಜಾಗತಲಿಂಗಕಂ ಸೂಕ್ತಂ ವಿಧತ್ತೇ— ಅಸ್ಯ ಸೂಕ್ತಸ್ಯ ನವಸ್ಯಾಮೃಚಿ ನ ಜಾಯಮಾನ ಇತ್ಯಾದಿಸ್ತೃತೀಯಃ ಪಾದಃ । ತತ್ರ ಜಾತಶಬ್ದೋಪೇತತ್ವಂ ಲಿಂಗಂ ॥

ಕಯಾ ಶುಭಾ ಸವಯಸಃ ಸನೀಳಾ (ಋ. ಸಂ. ೧-೧೬೫-೧) ಎಂಬ ಸೂಕ್ತದ ಒಂಭತ್ತನೆಯ ಋಕ್ಕಿನಲ್ಲಿ ನ ಜಾಯಮಾನಃ ಎಂದು ಪ್ರಾರಂಭವಾಗುವ ಮೂರನೆಯ ಪಾದವಿರುವುದು. ಇಲ್ಲಿ ಜಾತಶಬ್ದವಿರುವುದರಿಂದ ಏಳನೆಯ ದಿವಸದಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

**ತದು ಕಯಾಶುಭೀಯಮೇತದ್ವೈ ಸಂಜ್ಞಾನಂ ಸಂತನಿ ಸೂಕ್ತಂ ಯತ್ಕಯಾ ಶುಭೀಯಮೇತೇನ ಹ ವಾ ಇಂದ್ರೋಽಗಸ್ತ್ಯೋ ಮರುತಸ್ತೇ ಸಮಜಾನತ ತದ್ಯತ್ಕಯಾಶುಭೀಯಂ ಶಂಸತಿ ಸಂಜ್ಞಾತ್ಯಾ ಏವ ॥**

ಏತತ್ಸೂಕ್ತಂ ಪ್ರಶಂಸತಿ—ತದು ತತ್ಸೂಕ್ತಂ ಕಯಾಶುಭಶಬ್ದೋಪೇತತ್ವಾತ್ಕಯಾಶುಭೀಯನಾಮಕಂ । ಅಸ್ತ್ವೇವಂ ಕಿಂ ತತ ಇತಿ ಚೇತ್ । ಉಚ್ಯತೇ । ಏತದೇವ ಕಯಾಶುಭೀಯನಾಮಕಂ ಸೂಕ್ತಂ ಸಂಜ್ಞಾನಂ ಪರಸ್ಪರೈಕಮತ್ಯಸಾಧನಂ । ಕಿಂ ಚೈತತ್ಸೂಕ್ತಂ ಸಂತನಿ ಸಂತಾನಕರಂ ಪ್ರಾಣಾನಾಮವಿಚ್ಛೇದೇನ ದೀರ್ಘಾಯುಷ್ಯಕಾರಣಂ । ಯದೇತತ್ಕಯಾಶುಭೀಯಸೂಕ್ತಮಸ್ತಿ, ಏತದನುಷ್ಠಾನೇನೈವೇಂದ್ರಾಗಸ್ತ್ಯಮರುತೋ ಯೇ ಸಂತಿ ತೇ ಸರ್ವೇ ಸಮಜಾನತ ಸಂಜ್ಞಾನಂ ಪರಸ್ಪರೈಕಮತ್ಯಂ ಪ್ರಾಪ್ನುವನ್ । ತಥಾ ಸತ್ಯೇತಚ್ಛಂಸನಂ ವಿಪ್ರತಿಪನ್ನಾನಾಮೈಕಮತ್ಯಾರ್ಥಂ ಸಂಪದ್ಯತೇ ॥

ಈ ಸೂಕ್ತದಲ್ಲಿ ಕಯಾಶುಭಾ ಎಂದಿರುವುದರಿಂದ ಇದಕ್ಕೆ ಕಯಾಶುಭೀಯಸೂಕ್ತವೆಂದು ಹೆಸರು ಬಂದಿರುವುದು. ಏಕೆಂದರೆ, ಈ ಕಯಾಶುಭೀಯಸೂಕ್ತದಿಂದ ಮರುದ್ದೇವತೆಗಳಿಗೂ ಅಗಸ್ತ್ಯಋಷಿಗಳಿಗೂ ಉಂಟಾಗಿದ್ದ ಭಿನ್ನಾಭಿಪ್ರಾಯವು ನಿವಾರಣೆಯಾಗಿ ಪರಸ್ಪರ ಸಂಜ್ಞಾನ ಎಂದರೆ ತಿಳುವಳಿಕೆ ಉಂಟಾಗಲು ಕಾರಣವಾಯಿತು. ಇದಲ್ಲದೆ ಈ ಸೂಕ್ತಕ್ಕೆ ಸಂತಾನವನ್ನುಂಟುಮಾಡುವ ಸಾಮರ್ಥ್ಯವೂ ಪ್ರಾಣಕ್ಕೆ ಅಪಾಯವಾಗದಂತೆ ದೀರ್ಘಾಯುಸ್ಸನ್ನುಂಟುಮಾಡುವ ಸಾಮರ್ಥ್ಯವೂ ಇರುವುದು.

ಈ ಕಯಾಶುಭೀಯಸೂಕ್ತದ ಅನುಷ್ಠಾನದಿಂದ ಇಂದ್ರ, ಅಗಸ್ತ್ಯಋಷಿ, ಮರುದ್ದೇವತೆಗಳು ಇವರಲ್ಲುಂಟಾಗಿದ್ದ ಮನಃಕಿಲ್ಬಿಷವು (ಅಸಮಾಧಾನವು) ಪರಿಹಾರವಾಗಿ ಎಲ್ಲರಿಗೂ ಪರಸ್ಪರ ಸ್ನೇಹಭಾವವುಂಟಾಯಿತು ಆದ್ದರಿಂದ ಈ ಸೂಕ್ತಪಠನದಿಂದ ಭಿನ್ನಾಭಿಪ್ರಾಯದಿಂದ ಎಂದರೆ ತಪ್ಪುತಿಳುವಳಿಕೆಯಿಂದ ಮನಃಕ್ಲೇಶವನ್ನು ಹೊಂದಿ ಪರಿತಪಿಸುವ ಜನರಿಗೆ ಅವರ ಕ್ಲೇಶವು ನಿವಾರಣೆಯಾಗುವುದು.

**ತದ್ವಾಯುಷ್ಯಂ ತದ್ಯೋಽಸ್ಯ ಪ್ರಿಯಃ ಸ್ಯಾತ್ಕುರ್ಯಾದೇವಾಸ್ಯ ಕಯಾ-ಶುಭೀಯಂ ॥**

ಪ್ರಕಾರಾಂತರೇಣ ಪ್ರಶಂಸತಿ—ತದು ತತ್ತು ಸೂಕ್ತಮಾಯುಷ್ಕರಂ ಸಂತನೀತಿ ಪೂರ್ವ-ಮುಕ್ತತ್ವಾತ್ । ತಥಾ ಸತ್ಯಸ್ಯ ಯಜಮಾನಸ್ಯಯಃ ಪುತ್ರಾದಿಃ ಪ್ರಿಯಃ ಸ್ಯಾತ್ತಸ್ಯಾಽಽಯು-ರ್ವೃದ್ಧ್ಯರ್ಥಂ ಕಯಾಶುಭೀಯಸೂಕ್ತಂ ಕುರ್ಯಾದೇವ ॥

ಈ ಸೂಕ್ತವನ್ನು ಪ್ರಕಾರಾಂತರವಾಗಿ ಪ್ರಶಂಸೆಮಾಡುವರು. ಈ ಸೂಕ್ತವು ಆಯುರ್ವೃದ್ಧಿಯನ್ನೂ ಸಂತಾನವನ್ನೂ ಉಂಟುಮಾಡುವುದೆಂದು ಹಿಂದೆಯೇ ಹೇಳಲಾಗಿದೆಯಷ್ಟೆ. ಆದ್ದರಿಂದ ಯಜ್ಞಮಾಡುವ ಯಜಮಾನನಿಗೆ ಪ್ರೀತಿಪಾತ್ರರಾದ ಪುತ್ರಾದಿಗಳಿದ್ದರೆ ಅವರ ಆಯುರ್ವೃದ್ಧಿಗಾಗಿ ಈ ಸೂಕ್ತವನ್ನು ಅವಶ್ಯವಾಗಿ ಪಠಿಸಬೇಕು.

**ತದು ತ್ರೈಷ್ಟುಭಂ ತೇನ ಪ್ರತಿಷ್ಠಿತಪದೇನ ಸವನಂ ದಾಧಾರಾಽಽಯತ-ನಾದೇವೈತೇನ ನ ಪ್ರಚ್ಯವತೇ ॥**

ಪುನರಪಿ ಚ್ಛಂದೋದ್ವಾರಾ ಪ್ರಶಂಸತಿ ಪೂರ್ವವದ್ವ್ಯಾಖ್ಯೇಯಂ ॥

ಮೇಲಿನ ಸೂಕ್ತವನ್ನು ಛಂದಸ್ಸಿನ ಪ್ರಕಾರವಾಗಿ ಪ್ರಶಂಸೆಮಾಡುವರು. ಈ ಕಯಾಶುಭೀಯಸೂಕ್ತವು ತ್ರಿಷ್ಟುಪ್ ಛಂದಸ್ಕವು. ಈ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳಲ್ಲಿ ಪ್ರತಿಪಾದದಲ್ಲಿಯೂ ಕ್ಲೃಪ್ತವಾದ (ನಿರ್ದಿಷ್ಟಸಂಖ್ಯೆಯ) ಅಕ್ಷರಗಳಿರುವುದರಿಂದ ಈ ಮಂತ್ರವನ್ನು ಪಠಿಸುವ ಯಜಮಾನ ಮುಂತಾದವರಿಗೆ ಸ್ವಸ್ಥಾನವಾದ ನಿವಾಸಸ್ಥಾನದಿಂದ ಎಂದಿಗೂ ಚ್ಯುತಿಯುಂಟಾಗುವುದಿಲ್ಲ.

**ತ್ಯಂ ಸು ಮೇಷಂ ಮಹಯಾ ಸ್ವರ್ವಿದಮಿತಿ ಸೂಕ್ತಮತ್ಯಂ ನ ವಾಜಂ ಹವನಸ್ಯದಂ ರಥಮಿತಿ ರಥವತ್ಸಪ್ತಮೇಽಹನಿ ಸಪ್ತಮಸ್ಯಾಹ್ನೋ ರೂಪಂ ॥**

ರಥಲಿಂಗಕಂ ಸೂಕ್ತಂ ವಿಧತ್ತೇ—ತ್ಯಂ ಸು ಮೇಷಮಿತಿ ಸೂಕ್ತಸ್ಯಾತ್ಯಂ ನ ವಾಜಮಿತಿ ತೃತೀಯಃ ಪಾದಸ್ತತ್ರ ರಥಶಬ್ದಃ ಶ್ರೂಯತೇ ॥

ರಥಶಬ್ದಲಕ್ಷಣವಿರುವ ಸೂಕ್ತವನ್ನು ತಿಳಿಸುವರು. ತ್ಯಂ ಸು ಮೇಷಂ ಮಹಯಾ ಸ್ವರ್ವಿದಂ (ಋ. ಸಂ. ೧-೫೨-೧) ಎಂಬ ಸೂಕ್ತದ (ಋಕ್ಕಿನ) ಮೂರನೆಯ ಪಾದದಲ್ಲಿ ಅತ್ಯಂ ನ ವಾಜಂ ಎಂದಿರುವುದು. ಇಲ್ಲಿ ರಥಶಬ್ದಪ್ರಯೋಗವಿರುವುದರಿಂದ ಈ ಏಳನೆಯ ದಿವಸದಲ್ಲಿ ಪಠಿಸುವ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

**ತದು ಜಾಗತಂ ಜಗತ್ಯೋ ವಾ ಏತಸ್ಯ ತ್ರ್ಯಹಸ್ಯ ಮಧ್ಯಂದಿನಂ ವಹಂತಿ ತದ್ವೈತಚ್ಛಂದೋ ವಹತಿ ಯಸ್ಮಿನ್ನಿವಿದ್ಧೀಯತೇ ತಸ್ಮಾಜ್ಜಗತೀಷು ನಿವಿದಂ ದಧಾತಿ ॥**

ತಸ್ಮಿನ್ಸೂಕ್ತೇ ನಿವಿದ್ಧಾನಂ ವಿಧತ್ತೇ— ಅಸ್ಯ ಸೂಕ್ತಸ್ಯ ಜಗತೀಛಂದಸ್ಕತ್ವಾಜ್ಜಗತೀನಾಂ ಚ ವಿವಾದಕ್ರಮೇಣೋತ್ತರೇ ತ್ರ್ಯಹೇ ಮಾಧ್ಯಂದಿನಸವನನಿರ್ವಾಹಿಕ (ಕಾ) ತ್ವಾದಸ್ಮಿನ್ಮಾಧ್ಯಂದಿನಸವನಗತೇ ಶಸ್ತ್ರೇ ತತ್ಸವನನಿರ್ವಾಕತಯಾ ಜಗತೀಛಂದಸ್ಕಾಸ್ವೃಕ್ಷು ನಿವಿದಂ ಪ್ರಕ್ಷಿಪೇತ ॥

ಈ ಸೂಕ್ತದಲ್ಲಿ ನಿವಿನ್ಮಂತ್ರಗಳನ್ನು ಸೇರಿಸುವ ವಿಷಯವನ್ನು ತಿಳಿಸುತ್ತಾರೆ. ಈ ಸೂಕ್ತವು ಜಗತೀಛಂದಸ್ಕವು ಮುಂದಿನ ತ್ರ್ಯಹದಲ್ಲಿ ಈ ಜಗತೀಛಂದಸ್ಸು ಮಾಧ್ಯಂದಿನಸವನವನ್ನು ನಿರ್ವಹಿಸುವುದು. ಆದ್ದರಿಂದ ಮಾಧ್ಯಂದಿನಸವನವನ್ನು ನಿರ್ವಹಿಸುವ ಈ ಜಗತೀಛಂದಸ್ಸಿನ ಮಂತ್ರಗಳ ಮಧ್ಯದಲ್ಲಿ ನಿವಿನ್ಮಂತ್ರಗಳನ್ನು ಸೇರಿಸಬೇಕು.

**ಮಿಥುನಾನಿ ಸೂಕ್ತಾನಿ ಶಸ್ಯಂತೇ ತ್ರೈಷ್ಟುಭಾನಿ ಚ ಜಾಗತಾನಿ ಚ ಮಿಥುನಂ ವೈ ಪಶವಃ ಪಶವಶ್ಛಂದೋಮಾಃ ಪಶೂನಾಮವರುದ್ಧ್ಯೈ ॥**

ಪೂರ್ವೋಕ್ತಂ ತ್ರಿಷ್ಟುಪ್‌ಛಂದ ಇದಾನೀಮುಚ್ಯಮಾನಂ ಜಗತೀಛಂದಶ್ಚ ಮಿಲಿತ್ವಾ ಪ್ರಶಂಸತಿ—ತಥಾ ಪರಸ್ಪರವಿಲಕ್ಷಣಯೋಃ ಸ್ತ್ರೀಪುರುಷಯೋರ್ಮೇಲನೇ ಮಿಥುನಂ ಭವತಿ। ಏವಂ ಛಂದೋದ್ವಯಮೇಲನೇ ಮಿಥುನತ್ವಂ । ಗವಾಶ್ವಾದಿಪಶವಶ್ಚ ಮಿಥುನರೂಪಾಃ। ಚತುರ್ವಿಂಶ ಚತುಶ್ಚತ್ವಾರಿಂಶಾಷ್ಟಾ ಚತ್ವಾರಿಂಶಾಖ್ಯಾಶ್ಛಂದೋಮಾಃ ಪಶುಸಾಧನತ್ವಾತ್ಪಶುರೂಪಾಃ । ತಸ್ಮಾಚ್ಛಂದೋಮಯುಕ್ತೇಽಸ್ಮಿಂಸ್ತ್ರ್ಯಹೇ ಛಂದೋದ್ವಯಾನುಷ್ಠಾನಂ ಪಶುಪ್ರಾಪ್ತ್ಯೈ ಭವತಿ । ಛಂದೋಭಿರ್ಗಾಯತ್ರೀ ತ್ರಿಷ್ಟುಬ್ ಜಗತೀಭಿರಕ್ಷರಸಂಖ್ಯಾದ್ವಾರೇಣೋಪಮೀಯಂತ ಇತಿ ಚತುರ್ವಿಂಶಾದಯಸ್ತ್ರಯಶ್ಛಂದೋಮಾಃ । ತತ್ರ ಗಾಯತ್ರ್ಯಾ ಚತುರ್ವಿಂಶತ್ಯಕ್ಷರಯಾ ಸದೃಶೋ ಯಶ್ಚತುರ್ವಿಂಶಃ ಸ್ತೋಮಸ್ತಸ್ಯ ಪ್ರತಿಪಾದಕಮಷ್ಟಭ್ಯೋ ಹಿಂ ಕರೋತೀತ್ಯಾದಿಕಂ ಛಂದೋಗಬ್ರಾಹ್ಮಣಂ । ಚತುರ್ವಿಂಶಮೇತದಹರುಪಯಂತೀತ್ಯಾರಂಭಣೀಯಮಿತ್ಯತ್ರೈವೋದಾಹೃತಂ । ಯಚ್ಚ (ಅಥ ಚ)ತುಶ್ಚತ್ವಾರಿಂಶಸ್ತೋಮಸ್ಯ ನಿರೂಪಕಂ ಛಂದೋಗಬ್ರಾಹ್ಮಣಮೇವಮಾಮ್ನಾಯತೇ-' ಪಂಚದಶಭ್ಯೋ ಹಿಂ ಕರೋತಿ ಸ ತಿಸೃಭಿಃ ಸ ಏಕಾದಶಭಿಃ ಸ ಏಕಯಾ ಚತುರ್ದಶಭ್ಯೋ ಹಿಂ ಕರೋತಿ ಸ ಏಕಯಾ ಸ ತಿಸೃಭಿಃ ಸ ದಶಭಿಃ ಪಂಚದಶಭ್ಯೋ ಹಿಂ ಕರೋತಿ ಸ ಏಕಾದಶಭಿಃ ಸ ಏಕಯಾ ಸ ತಿಸೃಭಿಃ ಇತಿ । ಅಸ್ಯಾಯಮರ್ಥಃ । ತ್ರಿಭಿಃ ಪರ್ಯಾಯೈಸ್ತ್ರ್ಯೃಚಸ್ಯಾಽಽವೃತ್ತೌ ಪ್ರಥಮೇ ಪರ್ಯಾಯೇ ಪ್ರಥಮಾಯಾ ಋಚಸ್ತ್ರಿರಭ್ಯಾಸೋ ಮಧ್ಯಮಾಯಾ ಋಚ ಏಕಾದಶಕೃತ್ವೋಽಭ್ಯಾಸಃ । ಉತ್ತಮಾಯಾ ಋಚಃ ಸಕೃತ್ಪಾಠಃ । ದ್ವಿತೀಯಪರ್ಯಾಯೇ ಪಥಮಾಯಾಃ ಸಕೃತ್ಪಾಠಃ । ಮಧ್ಯಮಾಯಾಸ್ತ್ರಿರಭ್ಯಾಸಃ।

**ಉತ್ತಮಾಯಾದಶಕೃತ್ವೋಽಭ್ಯಾಸಃ । ತೃತೀಯೇ ಪರ್ಯಾಯೇ ಪ್ರಥಮಾಯಾ ಏಕಾದಶಕೃತ್ವೋಽಭ್ಯಾಸಃ । ಮಧ್ಯಮಾಯಾಃ ಸಕೃತ್ಪಾಠಃ । ಉತ್ತಮಾಯಾಸ್ತ್ರಿರಭ್ಯಾಸಃ । ಸೋಽಯಂ ಚತುಶ್ಚತ್ವಾರಿಂಶಸ್ತೋಮ ಇತಿ । ಅಥಾಷ್ಟಾಚತ್ವಾರಿಂಶಸ್ತೋಮಸ್ಯ ಬ್ರಾಹ್ಮಣಮೇವಮಾಮ್ನಾಯತೇ—ಷೋಡಶಭ್ಯೋ ಹಿಂ ಕರೋತಿ ಸ ತಿಸೃಭಿಃ ಸ ದ್ವಾದಶಭಿಃ ಸ ಏಕಯಾ । ಷೋಡಶಭ್ಯೋ ಹಿಂ ಕರೋತಿ ಸ ಏಕಯಾ ಸ ತಿಸೃಭಿಃ ಸ ದ್ವಾದಶಭಿಃ । ಷೋಡಶಭ್ಯೋ ಹಿಂ ಕರೋತಿ ಸ ದ್ವಾದಶಭಿಃ ಸ ಏಕಯಾ ಸ ತಿಸೃಭಿಃ । ಅಂತೋ ವಾಽಷ್ಟಾಚತ್ವಾರಿಂಶಃ ಇತಿ । ಅಸ್ಯಾಯಮರ್ಥಃ । ಪ್ರಥಮೇ ಪರ್ಯಾಯೇ ಪ್ರಥಮಾಯಾಸ್ತ್ರಿರಭ್ಯಾಸಃ । ಮಧ್ಯಮಾಯಾ ದ್ವಾದಶಕೃತ್ವೋಽಭ್ಯಾಸಃ । ಉತ್ತಮಾಯಾಃ ಸಕೃತ್ಪಾಠಃ । ದ್ವಿತೀಯಪರ್ಯಾಯೇ ಪ್ರಥಮಾಯಾಃ ಸಕೃತ್ಪಾಠೋ ಮಧ್ಯಮಾಯಾಸ್ತ್ರಿರಭ್ಯಾಸ ಉತ್ತಮಾಯಾ ದ್ವಾದಶಕೃತ್ವೋಽಭ್ಯಾಸಃ । ತೃತೀಯಪರ್ಯಾಯೇ ಪ್ರಥಮಾಯಾ ದ್ವಾದಶಕೃತ್ವೋಽಭ್ಯಾಸಃ । ಮಧ್ಯಮಾಯಾಃ ಸಕೃತ್ಪಾಠಃ । ಉತ್ತಮಾಯಾಸ್ತ್ರಿರಭ್ಯಾಸ ಇತಿ । ಏವಮಷ್ಟಾಚತ್ವಾರಿಂಶಸ್ತೋಮ ಇತಿ । ಏವಂ ತ್ರಯಶ್ಛಂದೋಮಾ ಅವಗಂತವ್ಯಾಃ ॥**

ಹಿಂದೆ ಹೇಳಿದ ತ್ರಿಷ್ಟುಪ್‌ಛಂದಸ್ಸನ್ನೂ ಮುಂದೆ ಹೇಳುವ ಜಗತೀಛಂದಸ್ಸನ್ನೂ ಒಟ್ಟಿಗೆ ಸೇರಿಸಿ ಪ್ರಶಂಸೆಮಾಡುವರು. ಲೋಕದಲ್ಲಿ ಸ್ತ್ರೀಪುರುಷರು ಪರಸ್ಪರ ವಿಲಕ್ಷಣರೂಪ ಮತ್ತು ಸ್ವಭಾವವುಳ್ಳವರು. ಇವರ ಮೇಲನದಿಂದ (ಸೇರುವುದರಿಂದ) ಮಿಥುನವುಂಟಾಗುವುದು. ಇದೇರೀತಿಯಾಗಿ ಬೇರೆಬೇರೆ ಅಕ್ಷರಸಂಖ್ಯೆಯುಳ್ಳ ಎರಡು ಛಂದಸ್ಸುಗಳ ಸಂಮೇಲನದಿಂದ ಮಿಥುನವುಂಟಾಗುವುದು. ಗೋವುಗಳು, ಅಶ್ವಗಳು ಮೊದಲಾದ ಪ್ರಾಣಿಗಳಲ್ಲಿಯೂ ಹೀಗೆಯೇ ಮಿಥುನವುಂಟಾಗುವುದು. ಚತುರ್ವಿಂಶ, ಚತುಶ್ಚತ್ವಾರಿಂಶ, ಅಷ್ಟಾಚತ್ವಾರಿಂಶಗಳೆಂಬ ಸ್ತೋಮಗಳೂ ಪಶುಪ್ರಾಪ್ತಿಗೆ ಸಾಧನಭೂತವಾದವುಗಳಾಗಿರುವುರಿಂದ ಈ ಮೂರು ಸ್ತೋಮಗಳೂ ಪಶುರೂಪಗಳೆಂದು ಹೇಳಲ್ಪಡುವವು. ಆದ್ದರಿಂದ ಛಂದೋಮ ಎಂದು ಹೇಳಲ್ಪಡುವ ಎರಡುವಿಧವಾದ ಈ ಛಂದಸ್ಸುಗಳ ಪ್ರಯೋಗದಿಂದ ಇಲ್ಲಿ ಮಿಥುನವುಂಟಾಗುವುದು. ಹೇಗೆಂದರೆ ಚತುರ್ವಿಂಶಸ್ತೋಮದಲ್ಲಿ ಮೂರು ಪರ್ಯಾಯಗಳಿಂದ ಇಪ್ಪತ್ತುನಾಲ್ಕು ಆವೃತ್ತಿಗಳಿರುವವು. ಗಾಯತ್ರಿಛಂದಸ್ಸಿನಲ್ಲಿಯೂ ಇಪ್ಪತ್ತುನಾಲ್ಕು ಅಕ್ಷರಗಳಿರುವವು. ಇದೇರೀತಿ ತ್ರಿಷ್ಟುಪ್‌ಛಂದಸ್ಸಿನಲ್ಲಿ ನಲವತ್ತುನಾಲ್ಕು ಅಕ್ಷರಗಳೂ ಅದೇಸಂಖ್ಯೆಯ ಆವೃತ್ತಿಯೂ ಜಗತೀಛಂದಸ್ಸಿನಲ್ಲಿ ನಲವತ್ತೆಂಟು ಅಕ್ಷರಗಳೂ ಆ ಸ್ತೋಮದಲ್ಲಿ ನಲವತ್ತೆಂಟು ಆವೃತ್ತಿಯೂ ಇರುವವು. ಆದ್ದರಿಂದ ಚತುರ್ವಿಂಶ, ಚತುಶ್ಚತ್ವಾರಿಂಶ, ಅಷ್ಟಾಚತ್ವಾರಿಂಶ ಎಂಬ ಈ ಮೂರು ಸ್ತೋಮಗಳಿಗೆ ಛಂದೋಮಾಃ ಎಂದು ಹೆಸರಿರುವುದು. ಗಾಯತ್ರಿಛಂದಸ್ಸಿನಲ್ಲಿರುವ ಅಕ್ಷರಸಂಖ್ಯೆಗೆ (೨೪) ಅನುಸಾರವಾಗಿ ಚತುರ್ವಿಂಶ ಸ್ತೋಮವಿರುವುದು. ಛಂದೋಗ(ಸಾಮ) ಬ್ರಾಹ್ಮಣದಲ್ಲಿ ಈ ವಿಷಯವು ಈರೀತಿ ಹೇಳಲ್ಪಟ್ಟಿದೆ—ಇದರ ವಿವರವನ್ನು ಹಿಂದೆಯೇ ಹೇಳಲಾಗಿದೆ. ಈಗ ಚತುಶ್ಚತ್ವಾರಿಂಶಸ್ತೋಮದ ವಿವರವನ್ನು ತಿಳಿಸುವರು—**ಪಂಚದಶಭ್ಯೋ ಹಿಂಕರೋತಿ ಸ ತಿಸೃಭಿಃ ಸ ಏಕಾದಶಭಿಃ ಸ ಏಕಯಾ ॥ ಚತುರ್ದಶಭ್ಯೋ ಹಿಂಕರೋತಿ ಸ ಏಕಯಾ ಸ ತಿಸೃಭಿಃ ಸ ದಶಭಿಃ ॥ ಪಂಚದಶಭ್ಯೋ ಹಿಂಕರೋತಿ ಸ ಏಕಾದಶಭಿಃ ಸ ಏಕಯಾ ಸ ತಿಸೃಭಿಃ ॥** ಎಂದು ಇದರ ಅರ್ಥವು. ಈ ತೃಚದಲ್ಲಿರುವ ಮೂರು ಋಕ್ಕುಗಳನ್ನೂ ಮೂರು ಪರ್ಯಾಯದಲ್ಲಿ ಕೆಳಗೆ ಹೇಳುವಂತೆ ಗಾನಮಾಡುವರು. ಹೇಗೆಂದರೆ ಮೊದಲನೇ ಪರ್ಯಾಯದಲ್ಲಿ ತೃಚದ ಮೊದಲನೇ ಋಕ್ಕನ್ನು ಮೂರಾವರ್ತಿಯೂ, ಎರಡನೆಯ ಋಕ್ಕನ್ನು ಹನ್ನೊಂದಾವರ್ತಿಯೂ, ಮೂರನೆಯ ಋಕ್ಕನ್ನು ಒಂದಾವರ್ತಿಯೂ ಗಾನಮಾಡುವರು. (೩+೧೧+೧=೧೫) ದ್ವಿತೀಯ ಪರ್ಯಾಯದಲ್ಲಿ ಅದೇತೃಚದ ಮೊದಲನೆಯ ಋಕ್ಕನ್ನು ಒಂದಾವರ್ತಿಯೂ, ಎರಡನೇ ಋಕ್ಕನ್ನು ಮೂರಾವರ್ತಿಯೂ,

ಮೂರನೇ ಋಕ್ಕನ್ನು ಹತ್ತಾವರ್ತಿಯೂ ಗಾನಮಾಡುವರು. (೧+೩+೧೦=೧೪) ತೃತೀಯ ಪರ್ಯಾಯದಲ್ಲಿ ಮೊದಲನೇ ಋಕ್ಕನ್ನು ಹನ್ನೊಂದಾವರ್ತಿಯೂ, ಎರಡನೆಯ ಋಕ್ಕನ್ನು ಒಂದಾವರ್ತಿಯೂ, ಮೂರನೆಯ ಋಕ್ಕನ್ನು ಮೂರಾವರ್ತಿಯೂ ಗಾನಮಾಡುವರು. (೧೧+೧+೩=೧೫) ಆದ್ದರಿಂದ ಈ ಮೂರು ಪರ್ಯಾಯಗಳಿಂದ ೧೫+೧೪+೧೪=೪೪ ಈ ಚತುಶ್ಚಾತ್ವಾರಿಂಶಸ್ತೋಮವು ೪೪ ಆವರ್ತಿ ಗಾನಮಾಡಲ್ಪಡುವವು. ಹೀಗೆಯೇ ಅಷ್ಟಾಚತ್ವಾರಿಂಶಸ್ತೋಮವೂ ಛಂದೋಗ ಬ್ರಾಹ್ಮಣದಲ್ಲಿ ವಿವರಿಸಲ್ಪಟ್ಟಿರುವುದು--ಹೇಗೆಂದರೆ, **ಷೋಡಶಭ್ಯೋ ಹಿಂಕರೋತಿ ಸ ತಿಸೃಭಿಃ ಸ ದ್ವಾದಶಭಿಃ ಸ ಏಕಯಾ॥ ಷೋಡಶಭ್ಯೋ ಹಿಂಕರೋತಿ ಸ ಏಕಯಾ ಸ ತಿಸೃಭಿಃ ಸ ದ್ವಾದಶಭಿಃ ॥ ಷೋಡಶಭ್ಯೋ ಹಿಂಕರೋತಿ ಸ ದ್ವಾದಶಭಿಃ ಸ ಏಕಯಾ ಸ ತಿಸೃಭಿಃ ॥** ಇದರ ಅರ್ಥವು. ಮೊದಲನೇ ಪರ್ಯಾಯದಲ್ಲಿ ತೃಚದ ಮೊದಲನೇ ಋಕ್ಕನ್ನು ಮೂರಾವರ್ತಿಯೂ, ಎರಡನೇ ಋಕ್ಕನ್ನು ಹನ್ನೆರಡಾವರ್ತಿಯೂ, ಮೂರನೇ ಋಕ್ಕನ್ನು ಒಂದಾವರ್ತಿಯು ಗಾನಮಾಡುವರು. (೩+೧೨+೧=೧೬) ಎರಡನೇ ಪರ್ಯಾಯದಲ್ಲಿ ಮೊದಲನೇ ಋಕ್ಕನ್ನು ಒಂದಾವರ್ತಿಯೂ, ಎರಡನೇ ಋಕ್ಕನ್ನು ಮೂರಾವರ್ತಿಯೂ, ಮೂರನೇ ಋಕ್ಕನ್ನು ಹನ್ನರಡಾವರ್ತಿಯೂ ಗಾನಮಾಡುವರು. (೧+೩+೧೨=೧೬) ಮೂರನೇ ಪರ್ಯಾಯದಲ್ಲಿ ಮೊದಲನೇ ಪರ್ಯಾಯದಲ್ಲಿ ಮೊದಲನೇ ಋಕ್ಕನ್ನು ಹನ್ನೆರಡಾವರ್ತಿಯೂ, ಎರಡನೇ ಋಕ್ಕನ್ನು ಒಂದಾವರ್ತಿಯೂ, ಮೂರನೇ ಋಕ್ಕನ್ನು ಮೂರಾವರ್ತಿಯೂ ಗಾನಮಾಡುವರು. (೧೨+೧+೩=೧೬) ಈ ಮೂರು ಪರ್ಯಾಯಗಳಿಂದ ಒಟ್ಟು ನಲವತ್ತೆಂಟು ಋಕ್ಕುಗಳನ್ನು ಗಾನಮಾಡಿದಂತಾಗುವುದು. ಆದ್ದರಿಂದ ಈ ಸ್ತೋಮಕ್ಕೆ ಅಷ್ಟಾಚತ್ವಾರಿಂಶಸ್ತೋಮವೆಂಬ ಹೆಸರು ಬಂದಿರುವುದು. (೧೬+೧೬+೧೬=೪೮). ಛಂದೋಮಾ ಎಂಬ ಋಕ್ಕುಗಳ ವಿವರವು ಈರೀತಿ ಇರುವುದು.

## ತ್ವಾಮಿದ್ಧಿ ಹವಾಮಹೇ ತ್ವಂ ಹ್ಯೇಹಿ ಚೇರವ ಇತಿ ಬೃಹತ್ಪೃಷ್ಠಂ ಭವತಿ ಸಪ್ತಮೇಽಹನಿ ॥

**ಅಥ ಬೃಹತ್ಸಾಮಸಾಧ್ಯಪೃಷ್ಠಸ್ತೋತ್ರಿಯಸ್ಯಾಽಧಾರಭೂತಂ ಸ್ತೋತ್ರಿಯಂ ಪ್ರಗಾಥಂ ತದನುರೂಪಂ ಚ ವಿಧತ್ತೇ--ತ್ವಾಮಿದ್ಧೀತ್ಯೇಕಃ ಪ್ರಗಾಥಃ । ತ್ವಂ ಹ್ಯೇಹೀತಿ ದ್ವಿತೀಯಃ । ತದುಭಯಂ ಸಪ್ತಮೇಽಹನಿ ನಿಷ್ಕೇವಲ್ಯಶಸ್ತ್ರೇ ಶಂಸನೀಯಂ। ನನ್ವಯುಗ್ಮಮಹಃ ಸಪ್ತಮಂ ತಥಾ ಸತಿ ರಥಂತರಪೃಷ್ಠಂ ಪರಿತ್ಯಜ್ಯ ಬೃಹತ್ಪೃಷ್ಠಂ ಕಿಮಿತ್ಯುಪಾದೀಯತ ಇತಿ ಚೇತ್ । ವಚನಬಲಾದಿತಿ ಬ್ರೂಮಃ । ಕಿಂ ಹಿ ವಚನಂ ನ ಕುರ್ಯಾನ್ನಾಸ್ತಿ ವಚನಸ್ಯಾತಿಭಾರ ಇತಿ ನ್ಯಾಯಾತ್ ॥**

ಈಗ ಬೃಹತ್ಸಾಮಪೃಷ್ಠಸ್ತೋತ್ರಿಯಕ್ಕೆ ಆಧಾರಭೂತವಾದ ಸ್ತೋತ್ರಿಯಪ್ರಗಾಥವನ್ನೂ ಅದರ ಅನುರೂಪಪ್ರಗಾಥವನ್ನೂ ತಿಳಿಸುವರು. **ತ್ವಾಮಿದ್ಧಿ ಹವಾಮಹೇ** (ಋ. ಸಂ. ೬-೪೬-೧) ಎಂಬುದು ಒಂದು ಪ್ರಗಾಥವು; **ತ್ವಂ ಹ್ಯೇಹಿ** ಎಂಬುದು ಎರಡನೆಯದು. ಈ ಎರಡು ಪ್ರಗಾಥಗಳನ್ನೂ ಏಳನೆಯ ದಿವಸ ನಿಷ್ಕೇವಲ್ಯಶಸ್ತ್ರಮಂತ್ರಗಳಲ್ಲಿ ಸೇರಿಸಿ ಪಠಿಸಬೇಕು. ಈ ಏಳನೆಯ ದಿವಸವು ಅಯುಗ್ಮವು. ಈ ದಿನದಲ್ಲಿ ರಥಂತರಪೃಷ್ಠವನ್ನು ತ್ಯಜಿಸಿ ಬೃಹತ್ಪೃಷ್ಠವನ್ನು ಪಠಿಸಬೇಕು. ಏಕೆಂದರೆ ಇದಕ್ಕೆ ವಿಧಿವಾಕ್ಯದ ಬೆಂಬಲವಿರುವುದು.

## ಯದೇವ ಪೃಷ್ಠಸ್ಯಾಹ್ನಸ್ತತ್ ॥

**ಬೃಹತ್ಪೃಷ್ಠಸ್ವೀಕಾರೇ ಕಾಂಚಿದ್ಯುಕ್ತಿಮಾಹ—ಪೂರ್ವಸ್ಯ ಷಷ್ಠಸ್ಯಾಹ್ನೋ ಯದೇವ ಪೃಷ್ಠಸ್ತೋತ್ರಂ ತದೇವಾತ್ರ ಕೃತಂ ಭವತಿ । ತಸ್ಯ ಪ್ರಯೋಜನಂ ತೂಪರಿಷ್ಟಾದ್ವಕ್ಷ್ಯತೇ ।**

**ನನು ಷಷ್ಠೇಽಪ್ಯಹನಿ ರೈವತಂ ಪೃಷ್ಠಂ ನ ತು ಬೃಹದಿತಿ ಚೇತ್ । ನೈಷ ದೋಷಃ । ಬೃಹ-ದ್ರೈವತಯೋಃ ಕಾರ್ಯಕಾರಣಭಾವೇನೈಕತ್ವಾದಿತ್ಯಭಿಪ್ರೇತ್ಯ ಬೃಹಚ್ಚ ವಾ ಇದಮಗ್ರೇ ರಥಂತರಂ ಚಾಽಽಸ್ತಾಮಿತ್ಯತ್ರ ಪ್ರತಿಪಾದಿತಂ ॥**

ಮೇಲಿನ ವಿಷಯಕ್ಕೆ ಕಾರ್ಯಕಾರಣಸಂಬಂಧವನ್ನು ತಿಳಿಸುವರು. ವೈರೂಪ ಮತ್ತು ಶಾಕ್ವರಸಾಮಗಳಿಗೆ ರಥಂತರ ಸಂಬಂಧವಿರುವುದು (ಇವು ರಥಂತರ ಜನ್ಯವಾದ್ದರಿಂದ) ಮತ್ತು ವೈರಾಜರೈವತಸಾಮಗಳಿಗೆ ಬೃಹತ್ಸಾಮಸಂಬಂಧವಿರುವುದು. ಆದ್ದರಿಂದ ಆರನೇದಿವಸದಲ್ಲಿ ರೈವತವೆಂಬ ಸಾಮಕ್ಕೆ ಬೃಹತ್ಸಾಮಸಂಬಂಧವಿರುವುದು. ಆರನೆಯ ದಿನದಲ್ಲಿ ರೈವತಸಾಮ ಸಂಬಂಧವಾದ ಪೃಷ್ಠಸ್ತೋತ್ರವನ್ನು ಪಠಿಸಬೇಕು. ಬೃಹತ್ಸಾಮವಲ್ಲ ಎಂದು ಹೇಳುವುದಾದರೆ ಅದರಿಂದ ಬಾಧಕವೇನೂ ಇಲ್ಲ. ಏಕೆಂದರೆ ಬೃಹತ್ ಮತ್ತು ರೈವತಸಾಮಗಳಿಗೆ ಕಾರ್ಯಕಾರಣ ಸಂಬಂಧವಿರುವುದರಿಂದ ಇದರಲ್ಲಿ ಯಾವ ದೋಷವೂ ಇರುವುದಿಲ್ಲ.

## ಯದ್ವೈ ರಥಂತರಂ ತದ್ವೈರೂಪಂ ಯದ್ಬೃಹತ್ತದ್ವೈರಾಜಂ ಯದ್ರಥಂ-ತರಂ ತಚ್ಛಾಕ್ವರಂ ಯದ್ಬೃಹತ್ತದ್ರೈವತಂ ॥

**ಕಾರ್ಯಕಾರಣಭಾವಮಿಹ ಸ್ಮಾರಯತಿ—ವೈರೂಪಶಾಕ್ವರಯೋಃ ರಥಂತರಜನ್ಯತ್ವಾತ್ತ-ದ್ರೂಪತ್ವಮೇವಂ ಚ ಸತಿ ಷಷ್ಠೇಹನಿ ರೈವತಸ್ಯ ಬೃಹತ್ತ್ವಂ ವ್ಯವಹರ್ತುಂ ಶಕ್ಯತೇ ॥**

ಕಾರ್ಯಕಾರಣಸಂಬಂಧವನ್ನು ತಿಳಿಸುವರು. ವೈರೂಪ ಮತ್ತು ಶಾಕ್ವರ ಎಂಬ ಸಾಮಗಳು ರಥಂತರಸಾಮದಿಂದ ಉತ್ಪನ್ನವಾದ್ದರಿಂದ ಅವುಗಳಿಗೆ ರಥಂತರಸಂಬಂಧವಿರುವುದು. ಹಾಗೆಯೇ ವೈರಾಜ ಮತ್ತು ರೈವತ ಎಂಬ ಸಾಮಗಳು ಬೃಹತ್ಸಾಮದಿಂದ ಉತ್ಪನ್ನವಾದ್ದರಿಂದ ವೈರಾಜ ಮತ್ತು ರೈವತಸಾಮಗಳಿಗೆ ಬೃಹತ್ಸಾಮದ ಸಂಬಂಧವಿರುವುದು. ಈ ಕಾರಣ ದಿಂದ ಆರನೇದಿವಸ ರೈವತಸಾಮಕ್ಕೆ ಪ್ರತಿಯಾಗಿ ಬೃಹತ್ಸಾಮವನ್ನು ಉಪಯೋಗಿಸುವುದರಿಂದ ಬಾಧಕವಿಲ್ಲ.

## ತದ್ಯದ್ಬೃಹತ್ಪೃಷ್ಠಂ ಭವತಿ ಬೃಹತ್ಯೈವ ತದ್ಬೃಹತ್ಪ್ರತ್ಯುತ್ತಭ್ನುವಂತ್ಯಸ್ತೋ-ಮಕೃನ್ತತ್ರಾಯ ॥

**ಇದಾನೀಮತ್ರ ಸಪ್ತಮೇಽಹನಿ ಬೃಹತ್ಪೃಷ್ಠಸ್ವೀಕಾರೇ ಪ್ರಯೋಜನಮಾಹ ತತ್ತಸ್ಮಾತ್ ಷಷ್ಠೇಽಹನಿ ಕೃತಸ್ಯ ರೈವತಸ್ಯ ಬೃಹದ್ರೂಪತ್ವಾತ್ಕಾರಣಾದ್ಯತ್ರಸಪ್ತಮೇಽಹನಿ ಬೃಹತ್ಪೃಷ್ಠಂ ಕ್ರಿಯತೇ ತದಿದಾನೀಂ ಷಷ್ಠೇಽಹನ್ಯನುಷ್ಠಿತೇನ ಬೃಹತ್ಯೈವಾಸ್ಮಿನ್ಸಪ್ತಮೇಽಹನಿ ತದ್‌ಬೃಹತ್ಪೃಷ್ಠಂ ಪ್ರತ್ಯುತ್ತಭ್ನುವಂತಿ । ಅತೀತತ್ವೇನ ನಷ್ಟಸ್ಯ ಪುನರುದ್ಧರಣಂ ಪ್ರತ್ಯುತ್ತಂಭನಂ । ಏತಚ್ಚಾ-ಸ್ತೋಮಕೃಂತತ್ರಾಯ ಸಂಪದ್ಯತೇ । ಸ್ತೋಮಾನಾಂ ತ್ರಿವೃತ್ಪಂಚದಶಾದೀನಾಂ ಕೃಂತತ್ರಂ-ಕೃಂತನಂ ಛೇದಃ, ತದ್ರಾಹಿತ್ಯಮಸ್ತೋಮಕೃಂತತ್ರಂ ತದರ್ಥಮತ್ರ ಸ್ವೀಕಾರಃ ॥**

ಈಗ ಏಳನೇ ದಿನದಲ್ಲಿ ಬೃಹತ್ಪೃಷ್ಠವನ್ನುಪಯೋಗಿಸುವುದರಿಂದ ಲಭಿಸುವ ಪ್ರಯೋಜನವನ್ನು ತಿಳಿಸುವರು. ಆದ್ದರಿಂದ ಆರನೇ ದಿವಸ ಉಪಯೋಗಿಸುವ ರೈವತಸಾಮವು ಬೃಹತ್ಸಾಮರೂಪವಾದ್ದರಿಂದ ಏಳನೇದಿವಸ ಬೃಹತ್ಪೃಷ್ಠಸ್ತೋತ್ರ ವನ್ನು ಪಠಿಸಿದಂತಾಗುವುದು. ಆರನೇ ದಿವಸ ಬೃಹತ್ಸಾಮವನ್ನು ಅನುಷ್ಠಾನಮಾಡುವುದರಿಂದ ಏಳನೆಯ ದಿವಸ ಅದನ್ನು

ಅನುಷ್ಠಾನಮಾಡಿದಂತಾಗುವುದಿಲ್ಲ. ಏಕೆಂದರೆ ಒಂದಾವರ್ತಿ ಪಠಿಸಿದ ಮಂತ್ರವು ತನ್ನ ಸಾರವನ್ನು ಕಳೆದುಕೊಂಡಿರುವುದರಿಂದ ಅದನ್ನು ಮತ್ತೆ ಪಠಿಸಿದರೆ (ಸಾರವಿಲ್ಲದ್ದರಿಂದ) ಯಾವ ಪ್ರಯೋಜನವೂ ಉಂಟಾಗುವುದಿಲ್ಲ. ಈ ಕಾರಣಕ್ಕಾಗಿ ನಷ್ಟಸಾರವುಳ್ಳ ಮಂತ್ರವನ್ನು ಪುನರುದ್ಧಾರಮಾಡಬೇಕು. ಈ ಪುನರುದ್ಧಾರಕ್ರಮಕ್ಕೆ **ಪ್ರತ್ಯುತ್ತಂಭನ**ವೆಂದು ಹೆಸರು. ಸ್ತೋಮಗಳು (ತ್ರಿವೃತ್ಪಂಚದಶಾದಿ) ಸ್ತೋಮಗಳು ತಮ್ಮ ಸಾರವನ್ನು ಕಳೆದುಕೊಳ್ಳುವುದಕ್ಕೆ **ಕೃಂತತ್ರಂ, ಕೃಂತನಂ ಛೇದಃ** ಎಂದು ಹೆಸರು. ಈ ಸ್ತೋಮಗಳನ್ನು ಮುಂಚಿನಂತೆ ಪುನರುದ್ಧಾರ (ಸಾರವುಳ್ಳದ್ದನ್ನಾಗಿ) ಮಾಡುವುದಕ್ಕೆ ಪ್ರತ್ಯುತ್ತಂಭನವೆಂದು ಹೆಸರು.

## ಯದ್ರಥಂತರಂ ಸ್ಯಾತ್ಕೃಂತತ್ರಂ ಸ್ಯಾತ್ ॥

**ವಿಪಕ್ಷಬಾಧೋಪನ್ಯಾಸಮುಖೇನೈವ ತದೇವ ಸ್ಪಷ್ಟಯತಿ—ಷಷ್ಠೇಽಹನ್ಯನುಷ್ಠಿತಸ್ಯ ಬೃಹತೋಽಸ್ಮಿನ್ಸಪ್ತಮೇಽಹನ್ಯನುವೃತ್ತಿಂ ಪರಿತ್ಯಜ್ಯಯುಗ್ಮದಿನತ್ವಮಾಶ್ರಿತ್ಯ ರಥಂತರಂ ಪೃಷ್ಠಂ ಸ್ವೀಕ್ರಿಯತೇ ತದಾನೀಂ ಷಷ್ಠಸಪ್ತಮಯೋರನುವೃತ್ತ್ಯಭಾವಾತ್ಕೃಂತತ್ರಂ ವಿಚ್ಛೇದನಂ ಸ್ಯಾತ್ । ಷಷ್ಠೇ ಬೃಹತ್ಕೃತಂ ಸಪ್ತಮೇ ತನ್ನ ಕೃತಮ್ । ಕಿಂತು ರಥಂತರಂ ಕೃತಮಿತಿ ವಿಚ್ಛೇದಃ ॥**

ಪ್ರತಿಪಕ್ಷದಲ್ಲಿ ಉಂಟಾಗುವ ಹಾನಿಯನ್ನು ತೋರಿಸಿ ಹಿಂದೆ ಹೇಳಿರುವ ವಿಷಯವನ್ನು ಸ್ಪಷ್ಟಪಡಿಸುವರು. ಆರನೇ ದಿನ ಬೃಹತ್ಸಾಮವನ್ನು ಅನುಷ್ಠಾನಮಾಡಿರುವುದರಿಂದ ಏಳನೆಯ ದಿವಸ ಇದನ್ನೂ ಮಾಡಬೇಕಾಗಿಲ್ಲವೆಂದು ತ್ಯಜಿಸಿ ರಥಂತರ ಸಾಮವನ್ನೆ (ಯುಗ್ಮದಿನವಾದ್ದರಿಂದ) ಸ್ವೀಕರಿಸಿದಲ್ಲಿ ಆಗ ಆರು ಮತ್ತು ಏಳನೆಯ ಎರಡು ದಿವಸಗಳಲ್ಲಿಯೂ ಅನುಷ್ಠಾನರಾಹಿತ್ಯ ವುಂಟಾಗಿ ಮಂತ್ರವಿಚ್ಛೇದವುಂಟಾಗುವುದು. ಹೇಗೆಂದರೆ ಆರನೆಯ ದಿವಸ ಬೃಹತ್ಸಾಮವನ್ನು ಅನುಷ್ಠಾನಮಾಡಲಾಯಿತು ಎಂದು ಹೇಳಿ ಹೀಗೆ ಮಾಡುವುದೇ ಮಂತ್ರವಿಚ್ಛೇದನವನ್ನು ಮಾಡಿದಂತಾಗುವುದು.

## ತಸ್ಮಾದ್ಬೃಹದೇವ ಕರ್ತವ್ಯಂ ॥

**ವಿಪಕ್ಷಬಾಧಮುಪನ್ಯಸ್ಯ ಸ್ವಪಕ್ಷಮುಪಸಂಹರತಿ—ಯಸ್ಮಾತ್ ಬೃಹತಿ ಕೃತೇ ವಿಚ್ಛೇದಃ ಪರಿಹ್ರಿಯತೇ ತಸ್ಮಾದಿತ್ಯರ್ಥಃ ॥**

ಆದ್ದರಿಂದ ಬೃಹತ್ಸಾಮವನ್ನು (ಆರನೇ ದಿನ ಅನುಷ್ಠಾನಮಾಡಿದ್ದರೂ ಪುನಃ) ಏಳನೆಯ ದಿನ ಮಾಡಲೇಬೇಕು. ಹೀಗೆ ಮಾಡುವುದರಿಂದ ಮಂತ್ರವಿಚ್ಛೇದವು ಪರಿಹಾರವಾಗುವುದು.

## ಯದ್ವಾವಾನೇತಿ ಧಾಯ್ಯಾಽಚ್ಯುತಾ ॥

**ಅಚ್ಯುತತ್ವಲಿಂಗಯುಕ್ತಾಮೃಚಂ ವಿಧತ್ತೇ—**

ಯದ್ವಾವಾನ ಪುರುತಮಂ (ಋ. ಸಂ. ೧೦-೭೪-೬) ಎಂಬ ಋಕ್ಕು ಧಾಯ್ಯಾಮಂತ್ರವು. ಇದರಲ್ಲಿ ಏಳನೇ ದಿನ ಇರಬೇಕಾದ ಅಚ್ಯುತತ್ವಲಕ್ಷಣವಿರುವುದು.

## ಅಭಿ ತ್ವಾ ಶೂರ ನೋನುಮ ಇತಿ ರಥಂತರಸ್ಯ ಯೋನಿಮನು ನಿವರ್ತಯತಿ ರಾಥಂತರಂ ಹ್ಯೇತದಹರಾಯತನೇನ ॥

ಅಥ ಯುಗ್ಮದಿನತ್ವಮುಪಜೀವ್ಯ ರಥಂತರಸಂಬಂಧಾತ್ತದೀಯಾಮೃಚಂ ವಿಧತ್ತೇ— ನಿತರಾಂ ವರ್ತನಮನುಷ್ಠಾನಂ ನಿವರ್ತನಂ ನ ತು ಪರಿತ್ಯಾಗಃ । ಆಯತನೇನಾಯುಗ್ಮತ್ವಸ್ಥಾನೇನ ರಥಂತರಸಂಬಂಧಃ ॥

**ಹೋತೃವು, ಅಭಿ ತ್ವಾ ಶೂರ ನೋನುಮ** (ಋ. ಸಂ. ೭-೩೩-೨೨) ಎಂಬ ರಥಂತರ ಸಾಮವನ್ನು ಮತ್ತೆ ಪಠಿಸುವುದರಿಂದ ಅದನ್ನು ಪುನಃ ಯೋನಿಸ್ಥಾನಕ್ಕೆ ತರುವನು ಈ ರಾಥಂತರ ಸಾಮವೇ ಈ ಏಳನೆಯ ದಿವಸದ ಅಯುಗ್ಮ ಸ್ಥಾನವಾಗಿರುವುದು.

**ಪಿಬಾ ಸುತಸ್ಯ ರಸಿನ ಇತಿ ಸಾಮಪ್ರಗಾಥಃ ಪಿಬವಾನ್ಸಪ್ತಮೇಽಹನಿ ಸಪ್ತಮಸ್ಯಾಹ್ನೋ ರೂಪಂ ॥**

ಪಿಬಶಬ್ದಲಿಂಗಕಂ ಪ್ರಗಾಥಾಂತರಂ ವಿಧತ್ತೇ—

ಪಿಬಶಬ್ದವಿರುವ ಬೇರೆ ಒಂದು ಪ್ರಗಾಥವನ್ನು ತಿಳಿಸುವರು. **ಪಿಬಾ ಸುತಸ್ಯ ರಸಿನಃ** (ಋ. ಸಂ. ೮-೩-೧) ಎಂಬ ಋಕ್ಕೆ ಇಲ್ಲಿ ಸೋಮಪ್ರಗಾಥವು. ಈ ಋಕ್ಕಿನಲ್ಲಿ ಪಿಬಶಬ್ದವಿರುವುದರಿಂದ ಇಲ್ಲಿ ಏಳನೆಯ ದಿವಸ ಪಠಿಸಬೇಕಾದ ಮಂತ್ರಗಳಲ್ಲಿರುವ ಲಕ್ಷಣವಿದ್ದಂತಾಯಿತು.

**ತ್ಯಮೂಷು ವಾಜಿನಂ ದೇವಜಾತಮಿತಿ ತಾರ್ಕ್ಷ್ಯೋಽಚ್ಯುತಃ ॥**

ಅಚ್ಯುತತ್ವಲಿಂಗಕಂ ಸೂಕ್ತವಿಶೇಷಂ ವಿಧತ್ತೇ—

**ತ್ಯಮೂಷು ವಾಜಿನಂ ದೇವಜೂತಂ** (ಋ. ಸಂ. ೧೦-೧೭೮-೧) ಎಂಬುದು ಒಂದು ಸೂಕ್ತವು. ಇದರಲ್ಲಿ ಅಚ್ಯುತತ್ವಲಕ್ಷಣವಿರುವುದರಿಂದ ಏಳನೆಯ ದಿನದ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

*English Translation*

**(The characteristics and Shastras of the seventh and eighth days)**

**(The characteristics of the seventh day. The Shastras of the moring and middy libation.)**

The terms a and pra are the characteristics of the seventh day. The seventh day is just like the first, yukta, ratha, asu, piba, the allusion to this world (earth), jata, anirukth, karishyat (futre), these are the characteristics of the seventh day.

Samudrad urmim (10, 123, 2) is the Ajya hymn. Here is some-thing hidden (aniruktam i.e. not explicityly stated) which is a characteristic of the seventh day. In the sea (Samudra) is Vach ; because neither the sea becomes over extinct, nor Vach. Thence this hymn is the Ajya Shastra of the seventh day. From the Yajna (sacrifice) only, the Hotar thus extends the sacrifice, and

thus they reeover Vach again to continue the sacrifice. The Stomas are at an end, the metres are at an end on the sixth day. Just as at the Darsapurnamasa Ishti they cause to drip upon the pieces of sacrificial food drops of melted butter (ajya), in order to make them hot again for recovering its essense already gone; in the same way they recover the Stomas and metres for regaining the essence of the sacrifice again by this Ajya Shastra of the seventh day. It is in the Trishtubh metre; because this is the metre at the morning libation during the last three days.

The Pra-uga Shastra consists of the following mantras; a vayo bhusha (7, 92, 1), prayabhir yasi (7, 92, 1), prayabhir yasi (7, 92, 3), a no niyudhih satinir (7, 92, 5), pra sota jiro adhvareshv as that (7, 92, 2) pra yad vam Mitra-varuna (6, 67, 9–11) a gomata nasatya (7, 72, 1-3) a no deva savasa (7, 30, 1-3), pra vo yajneshu (7, 43, 1- ), pra kshodasa dhayasa (7, 95, 1-3). In these verses there are the characteristics of the seventh day, a and pra, contained. They are in the Trishtubh metra, because this is the metre at the morning libation during the last three days.

A tva ratham yathotaya (8, 57, 1-2) idam vasu sutan andah (8, 2, 1–2), Indra nediya ed ihi (Val. 5, 5–6), praitu Brahmanaspatir (1, 40, 3–4), Agnir neta (3, 20, 4) tvam soma kratubhih (1, 91, 2), pinvanty apah, (1, 64, 6) pra ra indraya brihate (8, 78, 3) are the extension of ihe Marutvatiya Shastra of the seventh day, identical with that of the first.

In the hymn, Kaya subha savayasah (1, 165) 9th verse; in the words na jayamano nasate na jata the term jata occurs, which is one of the characteristics of the seventh day. This is the Kayasubhiya hymn which effects unanimity among people and the Maruts became unanimous. By reciting the Kaya-subhiyam hymn, the Hotar produces unanimity. But it bears upon the prolongation of life also. Who desires that, may have repeated the Kayasubhiyam. It is in the Trishtubh metre. By means of its pada which remains firm, the Hotar keeps the libation in the proper, place, preveuting it from falling down.

The hymn, tyam su mesham mahaya (1, 52) contains in the second pada of the first verse the words atyam na vajam havanasyadamratham, the term ratha, i.e., carriage, being a characteristice of the seventh day. It is in the Jagati metre, for the Jagatis are the leading metres at the middy libation of these three last days. The Nivid is placed in that mere which is the leading; thence one places here the Nivid in the Jagatis.

The hymns representing cohabitation are now repeated; they are in the Trishtubh and Jagati metres. Because cattle is represented by cohabitation

and the Chandomas are cattle and calculated for obtaining cattle. Tvam iddhi havamahe, and tvam hy ehi eherave (8, 50, 1-2) from the Brihat Prishtha on the seventh day. The same Prishthas take place as on the sixth day. The Vairupam (Sama) belongs to the Rathantaram; the Vairajam to the Brihat; the Sakvaram to the Rathantaram, and the Raivatam to the Brihat. Therefore (Because the Raivatam representing the Brihat was chanted on the sixth day) the Brihat Prishthat takes place on the seventh day; for they fasten through that Brihat of the sixth day the Brihat of the seventh day to prevent the cutting off of the Stomas; for if thə Rathantaram (which is opposed to the Brihat) is used, then the union (of the sixth and seventh days) is destroyed. Therefore only the Brihat is to be used on the seventh day.

Yad vavana is the immovable Dhayya. By the subsequent recital of the Rathantaram abhi tva sura nonumah, the Hotar brings all back to the womb; for this is a Rathantara day according to its position. Piba sutasya rainah (8, 3, 1-2) is the Sama Pragatha, which has piba, one of the characteristics of the seventh day. Tyam u shu vajinam is the invariable Tarkshya.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ತ್ರಯೋವಿಂಶಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತಮೂರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವಾದುದು.



## ಅಥ ತ್ರಯೋವಿಂಶಾಧ್ಯಾಯೇ ದ್ವಿತೀಯಃ ಖಂಡಃ

### ಇಪ್ಪತ್ತಮೂರನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ ನಿಷ್ಕೇವಲ್ಯಶಸ್ತ್ರದ ಉಳಿದ ಭಾಗಗಳು. ತೃತೀಯಸವನದ ಶಸ್ತ್ರಮಂತ್ರಗಳು ]



ಇಂದ್ರಸ್ಯ ನು ವೀರ್ಯಾಣಿ ಪ್ರವೋಚಮಿತಿ ಸೂಕ್ತಂ ಪ್ರೇತಿ ಸಪ್ತಮೇಽ-
ಹನಿ ಸಪ್ತಮಸ್ಯಾಹ್ನೋ ರೂಪಂ ॥

ಪ್ರಶಬ್ದಲಿಂಗಕಂ ಸೂಕ್ತಂ ವಿಧತ್ತೇ—

ನಿಷ್ಕೇವಲ್ಯಶಸ್ತ್ರದ ಉಳಿದ ಮಂತ್ರಗಳನ್ನು ತಿಳಿಸುವರು. ಇಂದ್ರಸ್ಯ ನು ವೀರ್ಯಾಣಿ ಪ್ರ ವೋಚಂ (ಋ. ಸಂ. ೧-೩೨-೧) ಎಂಬ ಸೂಕ್ತದಲ್ಲಿ ಪ್ರ ಎಂಬ ಶಬ್ದಪ್ರಯೋಗವಿರುವುದರಿಂದ ಏಳನೆಯ ದಿವಸದ ಮಂತ್ರಗಳ ಲಕ್ಷಣ ವಿದ್ದಂತಾಯಿತು.

ತದು ತ್ರೈಷ್ಟುಭಂ ತೇನ ಪ್ರತಿಷ್ಠಿತಪದೇನ ಸವನಂ ದಾಧಾರಾಽಯತ-
ನಾದೇವೈತೇನ ನ ಪ್ರಚ್ಯವೇತ ॥

ತತ್ರತ್ಯಂ ಛಂದಃ ಪ್ರಶಂಸತಿ—

ಈ ಸೂಕ್ತದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಈ ಋಕ್ಕಿನ ಪಾದಗಳಲ್ಲಿ ನಿರ್ದಿಷ್ಟ (ಕ್ಲೃಪ್ತವಾದ) ಅಕ್ಷರಸಂಖ್ಯೆ ಯಿರುವುದರಿಂದ ಈ ಸೂಕ್ತವನ್ನು ಪಠಿಸುವ ಹೋತೃವೂ, ಯಜಮಾನನೂ ತಮ್ಮ ನಿವಾಸಸ್ಥಾನಗಳಿಂದ ಭ್ರಷ್ಟರಾಗುವುದಿಲ್ಲ.

ಅಭಿ ತ್ಯಂ ಮೇಷಂ ಪುರುಹೂತಮೃಗ್ಮಿಯಮಿತಿ ಸೂಕ್ತಂ ಯದ್ವಾವ
ಪ್ರೇತಿ ತದಭೀತಿ ಸಪ್ತಮೇಽಹನಿ ಸಪ್ತಮಸ್ಯಾಹ್ನೋ ರೂಪಂ ॥

ಅಭಿಶಬ್ದಪ್ರಶಬ್ದಯೋರುಪಸರ್ಗತ್ವಸಾಮ್ಯೇನಾರ್ಥೈಕತ್ವಮಭಿಪ್ರೇತ್ಯ ತದ್ವಾರಾ ಶಬ್ದೈಕತ್ವಮುಪ್ಯಾರೋಪ್ಯ ಪ್ರಶಬ್ದಲಿಂಗಕಂ ಸೂಕ್ತಂ ವಿಧತ್ತೇ—

ಅಭಿಶಬ್ದಪ್ರಯೋಗವಿರುವ ಮತ್ತು ಪ್ರ ಎಂಬ ಶಬ್ದವಿರುವ ಸೂಕ್ತವನ್ನು ವಿವರಿಸುವರು. ಅಭಿ ತ್ಯಂ ಮೇಷಂ ಪುರುಹೂತಮೃಗ್ಮಿಯಂ (ಋ. ಸಂ. ೧-೫೧-೧) ಎಂಬ ಸೂಕ್ತದಲ್ಲಿ ಅಭಿ ಮತ್ತು ಪ್ರ ಎಂಬ ಶಬ್ದಗಳ ಪ್ರಯೋಗವಿರುವುದು ಆದ್ದರಿಂದ ಈ ಸೂಕ್ತದಲ್ಲಿ ಏಳನೆಯ ದಿವಸಗಳಲ್ಲಿ ಪಠಿಸುವ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

ತದು ಜಾಗತಂ ಜಗತ್ಯೋ ವಾ ಏತಸ್ಯ ತ್ರ್ಯಹಸ್ಯ ಮಧ್ಯಂದಿನಂ ವಹಂತಿ
ತದ್ವೈತಚ್ಛಂದೋ ವಹತಿ ಯಸ್ಮಿನ್ನಿವಿದ್ಧೀಯತೇ ತಸ್ಮಾಜ್ಜಗತೀಷು
ನಿವಿದಂ ದಧಾತಿ ॥

ಅಸ್ಮಿನ್ಸೂಕ್ತೇ ನಿವಿದ್ಧಾನಂ ವಿಧತ್ತೇ—

ಈ ಸೂಕ್ತದಲ್ಲಿ ನಿವಿನ್ಮಂತ್ರಗಳನ್ನು ಸೇರಿಸುವ ವಿಷಯವನ್ನು ತಿಳಿಸುವರು. ಈ ಸೂಕ್ತದ ಋಕ್ಕುಗಳು ಜಗತೀ ಛಂದಸ್ಕವು. ಈ ಜಗತೀಛಂದಸ್ಸಿನ ಋಕ್ಕುಗಳು ಈ ಕೊನೆಯ ತ್ರ್ಯಹದ (ಮೂರನೆಯ ಗುಂಪಿನ ಎಂದರೆ ಏಳು, ಎಂಟ, ಒಂಭತ್ತನೇ ದಿನಗಳ) ಮಧ್ಯದ ದಿನವನ್ನು ಎಂದರೆ ಏಳನೆಯ ದಿನವನ್ನು ನಿರ್ವಹಿಸುವವು. ಆದ್ದರಿಂದ ಈ ಜಗತೀಛಂದಸ್ಸಿನ ಋಕ್ಕುಗಳಲ್ಲಿ ನಿವಿನ್ಮಂತ್ರಗಳನ್ನು ಸೇರಿಸಿ ಪಠಿಸುವರು.

**ಮಿಥುನಾನಿ ಸೂಕ್ತಾನಿ ಶಸ್ಯಂತೇ ತ್ರೈಷ್ಟುಭಾನಿ ಚ ಜಾಗತಾನಿ ಚ ಮಿಥುನಂ ವೈ ಪಶವಃ ಪಶವಶ್ಛಂದೋಮಾಃ ಪಶೂನಾಮುವ ರುದ್ಧ್ಯೈ ॥**

**ಛಂದೋದ್ವಯಂ ಮಿಲಿತ್ವಾ ಪ್ರಶಂಸತಿ—**

ಮೇಲೆ ಹೇಳಿದ ಎರಡು ಸೂಕ್ತಗಳ ತ್ರಿಷ್ಟುಪ್ ಮತ್ತು ಜಗತೀಛಂದಸ್ಸುಗಳನ್ನು ಒಟ್ಟಿಗೆ ಪ್ರಶಂಸೆಮಾಡುವರು. ಈ ಎರಡು ಸೂಕ್ತಗಳ ಋಕ್ಕುಗಳು ತ್ರಿಷ್ಟುಪ್ ಮತ್ತು ಜಗತೀಛಂದಸ್ಸಿನವು. ಇವೆರಡೂ ಸೇರಿ ಮಿಥುನರೂಪವಾಗುವವು. ಪಶುಗಳೂ ಸಹ ಮಿಥುನಭಾವದಿಂದಿರುವವು. ಮತ್ತು ಛಂದೋಮಾಃ ಎಂದು ಚತುರ್ವಿಂಶತ್, ಚತುಶ್ಚತ್ವಾರಿಂಶತ್, ಅಷ್ಟಾಚತ್ವಾರಿಂಶತ್ ಎಂಬ ಮೂರು ಸ್ತೋಮಗಳೂ ಛಂದೋಮಾಃ ಎಂಬ ಹೆಸರಿನಿಂದ ಪ್ರಖ್ಯಾತವಾಗಿ ಪಶುಸ್ವರೂಪವಾಗಿಯೇ ಇರುವವು. ಆದ್ದರಿಂದ ಪಶುಸಂಪತ್ತನ್ನು ಪಡೆಯುವುದಕ್ಕಾಗಿ ಮಿಥುನರೂಪವಾದ ಈ ಎರಡು ಸೂಕ್ತಗಳನ್ನು ಪಠಿಸಬೇಕು.

**ತತ್ಸವಿತುರ್ವೃಣೀಮಹೇಽದ್ಯಾ ನೋ ದೇವ ಸವಿತರಿತಿ ವೈಶ್ವದೇವಸ್ಯ ಪ್ರತಿಪದನುಚರೌ ರಾಥಂತರೇಽಹನಿ ಸಪ್ತಮೇಽಹನಿ ಸಪ್ತಮಸ್ಯಾಹ್ನೋ ರೂಪಂ ॥**

**ಶಸ್ತ್ರಾಂತರಸ್ಯ ಪ್ರತಿಪದನುಚರೌ ವಿಧತ್ತೇ—ತತ್ಸವಿತುರಿತ್ಯಾದೇಃ ಕ್ವಚಿದ್ರಥಂತರಸಾಮಾಧಾರತ್ವಮಭಿಪ್ರೇತ್ಯ ರಾಥಂತರತ್ವಂ ಲಿಂಗಮುಕ್ತಮ್ ॥**

ಮುಂದಿನ ಶಸ್ತ್ರದ ಪ್ರತಿಪತ್ ಮತ್ತು ಅನುಚರ ಋಕ್ಕುಗಳನ್ನು ವಿವರಿಸುವರು. **ತತ್ಸವಿತುರ್ವೃಣೀಮಹೇ** (ಋ. ಸಂ. ೫-೮೨-೧) ಎಂಬ ಋಕ್ಕು ವೈಶ್ವದೇವಶಸ್ತ್ರದ ಪ್ರತಿಪತ್ (ಮೊದಲನೇ) ಮಂತ್ರವು, **ಅದ್ಯಾ ನೋ ದೇವ ಸವಿತಃ** (ಋ. ಸಂ. ೫-೮೨-೪) ಎಂಬ ಋಕ್ಕು ವೈಶದೇವಶಸ್ತ್ರದ ಎರಡನೆಯ ಮಂತ್ರವು.

**ಅಭಿ ತ್ವಾ ದೇವ ಸವಿತರಿತಿ ಸಾವಿತ್ರಂ ಯದ್ವಾವ ಪ್ರೇತಿ ತದಭೀತಿ ಸಪ್ತಮೇಽಹನಿ ಸಪ್ತಮಸ್ಯಾಹ್ನೋ ರೂಪಂ ॥**

**ಅಭಿಶಬ್ದಪ್ರಶಬ್ದಯೋಃ ಪೂರ್ವವದೇಕತ್ವಮಾರೋಪ್ಯ ಪ್ರಶಬ್ದಲಿಂಗಕಂ ತ್ರ್ಯೃಚಾತ್ಮಕಂ ಸೂಕ್ತಂ ವಿಧತ್ತೇ—**

ಅಭಿಶಬ್ದ ಮತ್ತು ಪ್ರಶಬ್ದಗಳಿಗೆ ಏಕತ್ವವನ್ನು ಹೇಳಿ ಪ್ರಶಬ್ದಪ್ರಯೋಗವಿರುವ ತೃಚಾತ್ಮಕವಾದ ಸೂಕ್ತವನ್ನು ತಿಳಿಸುವರು. **ಅಭಿ ತ್ವಾ ದೇವ ಸವಿತಃ** (ಋ. ಸಂ. ೧-೨೪-೩) ಎಂಬ ಮಂತ್ರವು ಸವಿತೃದೇವತಾಕವು ಇದರಲ್ಲಿ ಅಭಿ ಮತ್ತು ಪ್ರ ಶಬ್ದಗಳಿರುವುದರಿಂದ ಏಳನೆಯ ದಿವಸಗಳ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

**ಪ್ರೇತಾಂ ಯಜ್ಞಸ್ಯ ಶಂಭುವೇತಿ ದ್ಯಾವಾಪೃಥಿವೀಯಂ ಪ್ರೇತಿ ಸಪ್ತಮೇಽಹನಿ ಸಪ್ತಮಸ್ಯಾಹ್ನೋ ರೂಪಂ ॥**

ಆರೋಪಿತಪ್ರಶಬ್ದ ಲಿಂಗಕಮುಕ್ತ್ವಾಮುಖ್ಯಪ್ರಶಬ್ದಲಿಂಗಕಂ ತ್ರ್ಯೃಚಾತ್ಮಕಂ ಸೂಕ್ತಂ ವಿಧತ್ತೇ—ದ್ವಿತೀಯಸ್ಯಾಮೃಚಿ ದ್ಯಾವಾ ನಃ ಪೃಥಿವೀತ್ಯುಕ್ತತ್ವಾದಿದಂ ದ್ಯಾವಾಪೃಥಿವೀ ದೇವತಾಕಮ್ ||

ಪ್ರೇತಾಂ ಯಜ್ಞಸ್ಯ ಶಂಭುವಾ (ಋ. ಸಂ. ೨-೪೧-೧೯) ಎಂಬ ಋಕ್ಕು ದ್ಯಾವಾಪೃಥಿವೀದೇವತಾಕವು. ಇದರಲ್ಲಿ ಪ್ರಶಬ್ದಪ್ರಯೋಗವಿರುವುದರಿಂದ ಏಳನೆಯ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

**ಅಯಂ ದೇವಾಯ ಜನ್ಮನ ಇತ್ಯಾರ್ಭವಂ ಜಾತವತ್ಸಪ್ತಮೇಽಹನಿ ಸಪ್ತಮಸ್ಯಾಹ್ನೋ ರೂಪಂ ||**

ಜಾತಲಿಂಗಕಂ ತ್ರ್ಯೃಚಾತ್ಮಕಂ ಸೂಕ್ತಂ ವಿಧತ್ತೇ—ಅತ್ರ ಸೂಕ್ತೇ ಚತುರ್ಥ್ಯಾಮೃಚಿ ಋಭವೋ ವಿಷ್ಟ್ಯಕ್ರತೇತಿ ಶ್ರುತತ್ವಾದಯಮಪಿ ತ್ರ್ಯೃಚ ಆರ್ಭವಃ । ಜನ್ಮನ ಇತ್ಯುಕ್ತತ್ವಾಜ್ಜಾತವಲ್ಲಿಂಗಂ ||

**ಅಯಂ ದೇವಾಯ ಜನ್ಮನೇ** (ಋ. ಸಂ. ೧-೨೦-೧) ಎಂಬ ಸೂಕ್ತದ ನಾಲ್ಕನೇ ಋಕ್ಕಿನಲ್ಲಿ **ಋಭವೋ ವಿಷ್ಟ್ಯಕ್ರತ** ಎಂದು ಋಭುಶಬ್ದಪ್ರಯೋಗವಿರುವುದರಿಂದ ಈ ಸೂಕ್ತವು ಋಭು ದೇವತಾಕವು. ಈ ಸೂಕ್ತದ ಮೊದಲನೇ ಋಕ್ಕಿನ ಮೊದಲನೇ ಪಾದದಲ್ಲಿ ಜನ್ಮನೆ ಎಂಬ ಜನಿಧಾತುಪ್ರಯೋಗವಿರುವುದರಿಂದ ಇಲ್ಲಿ ಏಳನೆಯ ದಿವಸದಲ್ಲಿ ಪಠಿಸುವ ಮಂತ್ರಗಳಲ್ಲಿರಬೇಕಾದ ಲಕ್ಷಣವಿಲ್ಲದ್ದಂತಾಯಿತು.

**ಆ ಯಾಹಿ ವನಸಾ ಸಹೇತಿ ದ್ವಿಪದಾಃ ಶಂಸತಿ ದ್ವಿಪಾದ್ವೈ ಪುರುಷಶ್ಚತುಷ್ಪಾದಾಃ ಪಶವಃ ಪಶವಶ್ಛಂದೋಮಾಃ ಪಶೂನಾಮವರುದ್ಧ್ಯೈ ತದ್ಯದ್ದ್ವಿಪದಾಃ ಶಂಸತಿ ಯಜಮಾನಮೇವ ತದ್ದ್ವಿಪ್ರತಿಷ್ಠಂ ಚತುಷ್ಪಾತ್ಸು ಪಶುಷು ಪ್ರತಿಷ್ಠಾಪಯತಿ ||**

ಅಥ ಪಾದದ್ವಯೋಪೇತಾ ಋಚೋ ವಿಧಾಯ ಪ್ರಶಂಸತಿ—ಛಂದೋಗಾ(ಮಾ)ನಾಂ ಪೂರ್ವೋಕ್ತಚತುರ್ವಿಂಶಾದೀನಾಂ ಪಶುಪ್ರಾಪ್ತಿಸಾಧನತ್ವಾತ್ಪಶುತ್ವಂ ||

ಈಗ ಎರಡು ಪಾದಗಳು ಮಾತ್ರವಿರುವ ಋಕ್ಕುಗಳನ್ನು ಪ್ರಶಂಸೆಮಾಡುವರು. **ಆ ಯಾಹಿ ಮನಸಾ ಸಹ** (ಋ. ಸಂ. ೧-೧೭೨-೧) ಎಂಬ ಋಕ್ಕಿನಲ್ಲಿ ಎರಡು ಪಾದಗಳು ಮಾತ್ರ ಇರುವವು ಎಂದರೆ ಇದು ದ್ವಿಪದಾಛಂದಸ್ಕವು. ಇದನ್ನು ಇಲ್ಲಿ ಪ್ರಶಂಸೆಮಾಡುವರು. ಪುರುಷನಿಗೆ ಎರಡು ಪಾದ (ಕಾಲು) ಗಳಿರುವವು. ಪಶುಗಳಿಗೆ ನಾಲ್ಕುಪಾದಗಳಿರುವವು. ಪಶುಗಳ ಛಂದೋಮಾಸ್ವರೂಪವು. ಛಂದೋಮಾ ಎಂದು ಚತುರ್ವಿಂಶ, ಚತುಶ್ಚತ್ವಾರಿಂಶ, ಅಷ್ಟಾಚತ್ವಾರಿಂಶ ಎಂಬ ಮೂರು ಸ್ತೋಮಗಳ ಸ್ವರೂಪದಿಂದಿರುವವು. ಆದ್ದರಿಂದ ಈ ಸ್ತೋಮಗಳಿಂದ ಪಶುಸಂಪತ್ತಿನ ಪ್ರಾಪ್ತಿಗಾಗಿ ಯಜಮಾನನು (ಅಥವಾ ಹೋತೃವು) ಪಶುಗಳನ್ನು ಪ್ರಶಂಸೆಮಾಡುವನು. ಯಜಮಾನನನ್ನು ಹೋತೃವು ಪಶುಸಂಪತ್ತಿನ ಪ್ರಾಪ್ತಿಗಾಗಿ ದ್ವಿಪದಾಛಂದಸ್ಸಿನ ಮಂತ್ರಗಳಿಂದ ಪ್ರಶಂಸೆಮಾಡುವನು. ಹೀಗೆ ಮಾಡುವುದರಿಂದ ಯಜಮಾನನನ್ನು ಪಶುಗಳಲ್ಲಿ ನೆಲಸುವಂತೆ ಎಂದರೆ ಪಶುಸಂಪತ್ತನ್ನು ಪಡೆಯುವಂತೆ ಹೋತೃವು ಮಾಡುವನು.

**ಐಭಿರಗ್ನೇ ದುವೋ ಗಿರ ಇತಿ ವೈಶ್ವದೇವಮೇತಿ ಸಪ್ತಮೇಽಹನಿ ಸಪ್ತಮಸ್ಯಾಹ್ನೋ ರೂಪಂ ॥**

**ಆಕಾರಲಿಂಗಕಂ ಬಹುದೇವತಾಕಂ ಸೂಕ್ತಂ ವಿಧತ್ತೇ—**

**ಐಭಿರಗ್ನೇ ದುವೋ ಗಿರಃ** (ಋ. ಸಂ. ೧-೧೪-೧೧) ಎಂಬ ಸೂಕ್ತವು ವಿಶ್ವೇದೇವತಾಕವು. ಇದರಲ್ಲಿ ಆ ಎಂಬ ಶಬ್ದಪ್ರಯೋಗವಿರುವುದರಿಂದ ಏಳನೆಯ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

**ತ್ಯಾನ್ಯ ಗಾಯತ್ರಾಣಿ ಗಾಯತ್ರತೃತೀಯಸವನ ಏಷ ತ್ರ್ಯಹಃ ॥**

**ಉಕ್ತೇಷು ಸೂಕ್ತೇಷು ಛಂದಃ ಪ್ರಶಂಸತಿ—ತಾನ್ಯ ತಾನಿ ತು ಸೂಕ್ತಾನ್ಯದ್ಯಾ ನೋ ದೇವ ಸವಿತರಿತ್ಯಾರಭ್ಯ ಮಧ್ಯೇ ದ್ವಿಪದಾ ವರ್ಜಯಿತ್ವೈಭಿರಗ್ನ ಇತ್ಯಂತಾನಿ ಗಾಯತ್ರೀ ಛಂದಸ್ಕಾನಿ ವೈಶ್ವದೇವಶಸ್ತ್ರೇಽಭಿಹಿತಾನಿ । ಏಷು ಚೋತ್ತಮಸ್ತ್ರ್ಯಹೋ ಗಾಯತ್ರತೃತೀಯಸವನೋ ಗಾಯತ್ರೀಛಂದಸ್ತೃತೀಯಸವನೋ ಯಸ್ಯ ತ್ರ್ಯಹಸ್ಯಸೋಽಯಂ ಗಾಯತ್ರತೃತೀಯಸವನಃ । ತದೇವಚ್ಛಂದೋ ವಿವಾಹಪ್ರಸ್ತಾವೇಽನುಸಂಧೇಯಂ ॥**

ಮೇಲಿನ ಸೂಕ್ತಗಳಲ್ಲಿರುವ ಛಂದಸ್ಸುಗಳನ್ನು ಪ್ರಶಂಸೆಮಾಡುವರು. ಈ ಸೂಕ್ತಗಳಲ್ಲಿ **ಅದ್ಯಾ ನೋ ದೇವ ಸತವಿಃ** ಎಂಬ ಸೂಕ್ತದಿಂದ ಪ್ರಾರಂಭಿಸಿ (ಮಧ್ಯದಲ್ಲಿರುವ **ಆಯಾಹಿ ಮನಸಾ ಸಹ** ಎಂಬ ದ್ವಿಪದಾಛಂದಸ್ಸಿನ ಸೂಕ್ತವನ್ನು ಬಿಟ್ಟು) **ಐಭಿರಗ್ನೇ ದುವೋ ಗಿರಃ** ಎನ್ನುವವರೆಗೆ ಇರುವ ಸೂಕ್ತಗಳೆಲ್ಲವೂ ಗಾಯತ್ರೀಛಂದಸ್ಕವು. ಇವುಗಳನ್ನು ವೈಶ್ವದೇವ ಶಸ್ತ್ರದಲ್ಲಿ ಪಠಿಸಬೇಕು. ಇಲ್ಲಿ **ಗಾಯತ್ರತೃತೀಯಸವನ** ಎಂದರೆ ಕೊನೆಯ ತ್ರ್ಯಹದಲ್ಲಿ ಎಂದರೆ ಏಳು, ಎಂಟು, ಒಂಭತ್ತನೇ ದಿವಸಗಳಲ್ಲಿ ಆಚರಿಸುವ ತೃತೀಯಸವನದಲ್ಲಿ ಗಾಯತ್ರೀಛಂದಸ್ಸನ್ನು ಪಠಿಸುವರು. ಆದ್ದರಿಂದ ಈ ಮೂರು ದಿನಗಳ ತೃತೀಯಸವನದಲ್ಲಿ ಆಚರಿಸುವ ತೃತೀಯಸವನಕ್ಕೆ ಗಾಯತ್ರತೃತೀಯಸವನವೆಂದು ಹೆಸರು.

**ವೈಶ್ವಾನರೋ ಅಜೀಜನದಿತ್ಯಾಗ್ನಿಮಾರುತಸ್ಯ ಪ್ರತಿಪಜ್ಜಾತವತ್ಸಪ್ತಮೇಽಹನಿ ಸಪ್ತಮಸ್ಯಾಹ್ನೋ ರೂಪಂ ॥**

**ಶಸ್ತ್ರಾಂತರಸ್ಯ ಜನಿಧಾತುಲಿಂಗಯುಕ್ತಾಂ ಪ್ರತಿಪದಂ ವಿಧತ್ತೇ—**

ಬೇರೆ ಶಸ್ತ್ರದಲ್ಲಿ ಜನಿಧಾತುಯುಕ್ತವಾದ ಪ್ರತಿಪತ್ (ಮೊದಲನೇ) ಋಕ್ಕನ್ನು ವಿವರಿಸುವರು. **ವೈಶ್ವಾನರೋ ಅಜೀಜನತ್** ಎಂಬ ಋಕ್ಕು ಆಗ್ನಿಮಾರುತಶಸ್ತ್ರದ ಪ್ರತಿಪತ್ ಋಕ್ಕು (ಮೊದಲನೇ ಋಕ್ಕು) ಇದರಲ್ಲಿ ಜಾತಶಬ್ದ ಪ್ರಯೋಗವಿರುವುದರಿಂದ ಈ ಮಂತ್ರದಲ್ಲಿ ಏಳನೆಯ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

**ಪ್ರ ಯದ್ವಸ್ತ್ರಿಷ್ಟುಭಮಿಷಮಿತಿ ಮಾರುತಂ ಪ್ರೇತಿ ಸಪ್ತಮೇಽಹನಿ ಸಪ್ತಮಸ್ಯಾಹ್ನೋ ರೂಪಂ ॥**

**ಪ್ರಶಬ್ದಲಿಂಗಕಂ ಸೂಕ್ತಂ ವಿಧತ್ತೇ—ದ್ವಿತೀಯಪಾದೇ ಮರುತೋ ವಿಪ್ರ ಇತಿ ಶ್ರುತತ್ವಾದಿದಂ ಸೂಕ್ತಂ ಮರುದ್ದೇವತಾಕಂ ॥**

ಪ್ರಶಬ್ದಲಕ್ಷಣವಿರುವ ಸೂಕ್ತವನ್ನು ತಿಳಿಸುವರು. **ಪ್ರಯುದ್ಧಸ್ತ್ರಿಷ್ಟುಭಮಿಷಂ** (ಋ. ಸಂ. ೮–೭–೧) ಎಂಬ ಸೂಕ್ತವು ಮರುದ್ದೇವತಾಕವು. ಇದರಲ್ಲಿ ಪ್ರಶಬ್ದಪ್ರಯೋಗವಿರುವುದರಿಂದ ಏಳನೆಯ ದಿವಸ ಪಠಿಸುವ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

## ಜಾತವೇದಸೇ ಸುನವಾಮ ಸೋಮಮಿತಿ ಜಾತವೇದಸ್ಯಾಽಚ್ಯುತಾ ॥

**ಅಚ್ಯುತತ್ವಲಿಂಗಯುಕ್ತಾಮೃಚಂ ವಿಧತ್ತೇ—**

ಅಚ್ಯುತತ್ವಲಕ್ಷಣವಿರುವ ಸೂಕ್ತವನ್ನು ತಿಳಿಸುವರು. **ಜಾತವೇದಸೇ ಸುನವಾಮ ಸೋಮಂ** (ಋ. ಸಂ. ೧–೯೯–೧) ಎಂಬ ಸೂಕ್ತವು ಜಾತವೇದೋದೇವತಾಕವು. ಇದರಲ್ಲಿ ಅಚ್ಯುತತ್ವಲಕ್ಷಣವಿರುವುದರಿಂದ ಏಳನೆಯ ದಿವಸ ಪಠಿಸಬೇಕಾದ ಮಂತ್ರದಲ್ಲಿರುವ ಲಕ್ಷಣವಿದ್ದಂತಾಯಿತು.

## ದೂತಂ ವೋ ವಿಶ್ವವೇದಸಮಿತಿ ಜಾತವೇದಸ್ಯಮನಿರುಕ್ತಂ ಸಪ್ತಮೇಽಹನಿ ಸಪ್ತಮಸ್ಯಾಹ್ನೋ ರೂಪಂ ॥

**ಅಸ್ಪಷ್ಟದೇವತಾಕಂ ಸೂಕ್ತಂ ವಿಧತ್ತೇ—ಜಾತವೇದಃಶಬ್ದಸ್ಯಾಗ್ನಿಶಬ್ದಸ್ಯ ವಾ ಸ್ಪಷ್ಟದೇವತಾವಾಚಕಸ್ಯಾಭಾವಾದನಿರುಕ್ತತ್ವಂ ॥**

ಅಸ್ಪಷ್ಟದೇವತಾಕವಾದ ಸೂಕ್ತವೊಂದನ್ನು ತಿಳಿಸುವರು. **ದೂತಂ ವೋ ವಿಶ್ವವೇದಸಂ** (ಋ. ಸಂ. ೪-೮-೧) ಎಂಬ ಸೂಕ್ತದಲ್ಲಿ ಪ್ರತಿಪಾದಿತವಾದ ದೇವತೆಯು ಸ್ಪಷ್ಟವಾಗಿಲ್ಲವಾದ್ದರಿಂದ ಇದು ಅಸ್ಪಷ್ಟದೇವತಾಕವಾದ ಸೂಕ್ತವು. ಈ ಸೂಕ್ತಕ್ಕೆ ಜಾತವೇದಃ ಅಥವಾ ಅಗ್ನಿಯು ಇವರಲ್ಲಿ ಯಾರು ದೇವತೆ ಎಂಬುವುದು ಸ್ಪಷ್ಟವಾಗಿಲ್ಲ. ಆದ್ದರಿಂದ ಈ ಸೂಕ್ತದಲ್ಲಿ ಅನಿರುಕ್ತ (ಅಸ್ಪಷ್ಟ) ದೇವತಾಲಕ್ಷಣವಿರುವುದರಿಂದಲ್ಲಿ ಏಳನೆಯ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

## ತಾನ್ಯು ಗಾಯತ್ರಾಣಿ ಗಾಯತ್ರತೃತೀಯಸವನ ಏಷ ತ್ರ್ಯಹಃ ॥

**ವೈಶ್ವಾನರೋ ಅಜೀಜನದಿತ್ಯಾದಿಷು ದೂತಂ ವ ಇತ್ಯೇತೇಷು ಸೂಕ್ತೇಷು ಜಾತವೇದಸ ಇತ್ಯೇತದ್ವರ್ಜಿತೇಷು ವಿದ್ಯಮಾನಂ ಛಂದಃ ಪ್ರಶಂಸತಿ—**

ಮೇಲಿನ ಸೂಕ್ತದಲ್ಲಿರುವ ಛಂದಸ್ಸನ್ನು ಪ್ರಶಂಸೆಮಾಡುವರು. ಈ ಸೂಕ್ತದಲ್ಲಿರುವ ಋಕ್ಕುಗಳೆಲ್ಲವೂ ಗಾಯತ್ರೀ ಛಂದಸ್ಕವು. ಮೂರನೇ ತ್ರ್ಯಹ (ಮೂರುದಿನಗಳ ಗುಂಪು ಎಂದರೆ ಏಳು, ಎಂಟು ಒಂಭತ್ತನೇ ದಿನಗಳಲ್ಲಿ) ದಲ್ಲಿ ಆಚರಿಸುವ ತೃತೀಯಸವನದ ಕಾರ್ಯಕಲಾಪಗಳನ್ನು ಗಾಯತ್ರೀಛಂದಸ್ಸಿನ ಋಕ್ಕುಗಳೇ ನಿರ್ವಹಿಸುವವು.

*English Translation*

**(The remainder of the Nishkevalya Shastra. The Shastras of the evening lination.)**

Indrasaya nu viryani (1, 32) is a hymn which has the characteristic word pra of the seventh day. It is in the Trishtubuh metre. By means of the padas

which remain firm, the Hotar keeps the libation in its proper place, preventing it from falling down.

Abhi tyam mesham puruhutam (1, 51, 1) is a hymn in which pra is replaced by abhi, forming a characteristic of the seventh day. It is in the Jagati metre, because the Jagatis are the leading metree at the midday libation. Therefore the Nivid is to be placed in it.

These hymns representing cohaitation are now repeated, which are in the Trishtubh and Jagati meres, because cohabitation represents cattle, and the Chandomas represent cattle; (this is done) in order to obtain cattle.

The Savitar vrinimahe (5, 82, 1-3) adya no deva Savitar (5, 82, 3-5) are the beginning and sequel of the Vaisvadeva Shastra in the Rathantara days, on seventh day. Abhi tva deva Savitar (1, 24, 3) is the Nivid hymn for Savitar, which contains instead of pra the word abhi, which is identical with pra, a characteristic of the seventh day.

Pretam yajnasya (2, 41, 19) is the Nivid hymn for Dyavaprithvi, which contains the word pra. Ayam devayajanmana (1, 20) is the Nivid hymn for the Ribhus, which contains the word, jan, to be born.

He repeats now the verses, consisting of two padas, commencing ayahs ranasa saha, (10, 172, 1); for man has two feet, and animals have four, animals are represented by the Chandomas. This is done for obtaining cattle. If he repeats these verses which consist of two feet, then he places the sacrificer, who has two legs, among the four-footed cattle.

Abhir agne duvo (1, 14) is the Nivid hymn for the Visvedevah, which has the characteristic a of the seventh day. It is in the Gayatri metre; for the third libation is headed by the Gayatri during these three days.

Visvanaro ajijanat is the beginnig of the Agnimaruta Shastra, which contains the word jan to be born. Pra yad vas trishtubham (8, 7) is the Nivid hymn for the Marutas, which has the word pra. Jatavedas verse. Dutam vo visvavedasam (4, 8) is the Nivid hymn for Jayavedas, where the name Jatavedas is not explicityly mentioned only hinted at. All these are in the Gayatri metre; for the third libation on these three days is headed by the Gayatri.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ತ್ರಯೋವಿಂಶಾಧ್ಯಾಯಸ್ಯ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತಮೂರನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು
ಸಮಾಪ್ತವಾದುದು.

## ಅಥ ತ್ರಯೋವಿಂಶಾಧ್ಯಾಯೇ ತೃತೀಯಃ ಖಂಡಃ

### ಇಪ್ಪತ್ತಮೂರನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ದ್ವಾದಶಾಹದ ಎಂಟನೇ ದಿನದ ಕಾರ್ಯಕಲಾಪಗಳು ಮತ್ತು ಆ ದಿನದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳು. ಆ ದಿವಸದ ಪ್ರಾತಸ್ಸವನ ಮತ್ತು ಮಾಧ್ಯಂದಿನಸವನಗಳಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳು.]



**ಯದ್ವೈ ನೇತಿ ನ ಪ್ರೇತಿ ಯತ್ಸ್ಥಿತಂ ತದಷ್ಟಮಸ್ಯಾಹ್ನೋ ರೂಪಂ ॥**

ಸಪ್ತಮಮಹರಭಿಧಾಯಾಷ್ಟಮಸ್ಯಾಹ್ನೋ ಮಂತ್ರಲಿಂಗಾನಿ ದರ್ಶಯತಿ – ಆಕಾರಸ್ಯ ಚ ಪ್ರಶಬ್ದಸ್ಯ ಚ ಲಿಂಗತ್ವಂ ನಕಾರದ್ವಯೇನ ನಿಷಿಧ್ಯತೇ । ಯತ್‌ಸ್ಥಿತಮಚ್ಯುತತ್ವೇನ ನಿಯತಂ ತಿಷ್ಠತಿಧಾತುಯುಕ್ತಂ ವಾ ತದಷ್ಟಮಸ್ಯಾಹ್ನೋ ನಿರೂಪಕಂ ॥

ದ್ವಾದಶಾಹದ ಎಂಟನೇ ದಿನದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿ ಆ ಮತ್ತು ಪ್ರ ಎಂಬ ಶಬ್ದಗಳ ಪ್ರಯೋಗವಿರುವುದಿಲ್ಲ. ಆದರೆ ಯತ್ಸ್ಥಿತಂ ಎಂದು ತಿಷ್ಠತಿಧಾತುವಿನ ರೂಪವು ಇರುವುದು. ಇದೇ ಈ ಎಂಟನೇ ದಿನದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರುವ ಲಕ್ಷಣಗಳು.

**ಯದ್ಧ್ಯೇವ ದ್ವಿತೀಯಮಹಸ್ತದೇವೈತತ್ಪುನರ್ಯದಷ್ಟಮಂ ॥**

ದ್ವಿತೀಯಸ್ಮಿನ್ನಹನಿ ಪ್ರೋಕ್ತಾನಿ ಲಿಂಗಾನ್ಯಷ್ಟಮೇಽಹನ್ಯತಿದಿಶತಿ— ಯಲ್ಲಿಂಗಕಮೇವ ದ್ವಿತೀಯಮಹಸ್ತಲ್ಲಿಂಗಕಮೇವೈತತ್ಪುನರಪಿ ಭವತಿ । ಯದಷ್ಟಮಮಹಸ್ತತ್ಪೂರ್ವೋಕ್ತಲಿಂಗಕಮ್ ॥

ಈ ದ್ವಾದಶಾಹದ ಎರಡನೇ ದಿನದ ಮಂತ್ರಗಳಲ್ಲಿ ಯಾವ ಲಕ್ಷಣಗಳು ಇರಬೇಕೆಂದು ಹಿಂದೆ ಹೇಳಲಾಗಿದೆಯೋ ಆ ಲಕ್ಷಣಗಳು ಎಂಟನೇ ದಿನದಲ್ಲಿಯೂ ಇರುವವು. ಎರಡನೇ ದಿನದ ಲಕ್ಷಣಗಳು ಎಂಟನೇ ದಿನದ ಲಕ್ಷಣಗಳು ಎಂದರೆ ಎರಡನೇ ದಿನದ ಲಕ್ಷಣಗಳು ಎಂಟನೇ ದಿನದಲ್ಲಿ ಇದ್ದಲ್ಲಿ ಆ ಲಕ್ಷಣಗಳೇ ಎಂಟನೇ ದಿನದಲ್ಲಿರಬೇಕಾದ ಲಕ್ಷಣಗಳಿದ್ದಂತಾಯಿತು.

**ಯದೂರ್ಧ್ವವದ್ಯತ್ಪ್ರತಿವದ್ಯದಂತರ್ವದ್ಯದ್ವೃಧನ್ವದ್ಯನ್ಮಧ್ಯಮೇ ಪದೇ ದೇವತಾ ನಿರುಚ್ಯತೇ ಯದಂತರಿಕ್ಷಮಭ್ಯುದಿತಂ ॥**

ತಾನಿ ಲಿಂಗಾನ್ಯುಪನ್ಯಸ್ಯತಿ—

ಎಂಟನೇ ದಿವಸದಲ್ಲಿ ಪಠಿಸಬೇಕಾದ ಮಂತ್ರಗಳ ಲಕ್ಷಣಗಳನ್ನು ತಿಳಿಸುವರು. ಊರ್ಧ್ವ, ಪ್ರತಿ, ಅಂತರ್, ವೃಷನ್, ವೃಧನ್, ಋಕ್ಕಿನ ಮಧ್ಯಮ-ಪಾದ (ಮೂರನೇ ಪಾದದಲ್ಲಿ) ನಿರ್ದಿಷ್ಟದೇವತೆಯ ಹೆಸರು, ಅಂತರಿಕ್ಷಲೋಕದ ವಿಷಯ ಇವು ಗಳೆಲ್ಲವೂ ಎಂಟನೇ ದಿನದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳು.

## ಯದ್ವ್ಯಗ್ನಿ ಯನ್ಮಹದ್ವದ್ಯದ್ದ್ವಿಹೂತವದ್ಯತ್ಪುನರ್ನವದ್ಯತ್ಕುರ್ವರ್ತ್ ॥

**ಅಥ ನೂತನಾನಿ ಲಿಂಗಾನಿ ದರ್ಶಯತಿ–ಅಗ್ನಿಶಬ್ದದ್ವಯೋಪೇತಂ ದ್ವ್ಯಗ್ನೀತ್ಯುಚ್ಯತೇ। ಮಹಚ್ಛಬ್ದೋಪೇತಂ ಮಹದ್ವತ್। ದ್ವಯೋರ್ದೇವತಯೋರ್ಹೂತಮಾಹ್ವಾನಂ ಯಸ್ಮಿಂಸ್ತಾ-ದೃಶಂ ದ್ವಿಹೂತವತ್। ಪುನಃ ಶಬ್ದೋಪೇತಂ ಪುನರ್ವತ್। ದ್ವಿತೀಯೇಽಹನಿ ವರ್ತಮಾನಾರ್ಥ-ವಾಚಿ ಪ್ರತ್ಯಯಾಂತಂ ಕುರ್ವಚ್ಛಬ್ದೇನೋಕ್ತಂ ॥**

ಒಂದೇ ಪಾದದಲ್ಲಿ ಅಗ್ನಿಯನ್ನು ಎರಡಾವರ್ತಿ ಸೂಚಿಸಿರುವುದು, ಮಹತ್, ಎರಡು ದೇವತೆಗಳನ್ನು ಒಟ್ಟಿಗೆ ಆಹ್ವಾನ ಮಾಡಿರುವುದು, ಪುನಃ ಎಂಬ ಶಬ್ದವಿರುವುದು ಈ ಲಕ್ಷಣಗಳೆಲ್ಲವೂ ಎಂಟನೇ ದಿವಸದ ಮಂತ್ರಗಳಲ್ಲಿರಬೇಕು.

## ಯದ್ದ್ವಿತೀಯಸ್ಯಾಹ್ನೋ ರೂಪಮೇತಾನಿ ವಾ ಅಷ್ಟಮಸ್ಯಾಹ್ನೋ ರೂಪಾಣಿ ॥

**ತೇನ ಸಹ ಸರ್ವಾಣಿ ಲಿಂಗಾನ್ಯುಪಸಂಹರತಿ ॥**

ಇದಲ್ಲದೆ ದ್ವಾದಶಾಹದ ಎರಡನೇ ದಿನದ ಮಂತ್ರಗಳಿಗೆ ಯಾವ ಯಾವ ಲಕ್ಷಣಗಳಿರಬೇಕೆಂದು ಹೇಳಿವೆಯೋ ಅವುಗಳೆಲ್ಲವೂ ಎಂಟನೇ ದಿವಸದ ಲಕ್ಷಣಗಳಲ್ಲಿಯೂ ಇರಬೇಕು.

## ಅಗ್ನಿಂ ವೋ ದೇವಮಗ್ನಿಭಿಃ ಸಜೋಷಾ ಇತ್ಯಷ್ಟಮಸ್ಯಾಹ್ನ ಆಜ್ಯಂ ಭವತಿ ಹ್ಯಗ್ನ್ಯಷ್ಟಮೇಽಹನ್ಯಷ್ಟಮಸ್ಯಾಹ್ನೋ ರೂಪಂ ॥

**ತತ್ರಾಜ್ಯಶಸ್ತ್ರಂ ವಿಧತ್ತೇ– ದ್ವಾವಗ್ನಿಶಬ್ದೌ ಯಸ್ಮಿನ್ಸೂಕ್ತೇ ವಿದ್ಯೇತೇ ತತ್ಸೂಕ್ತಂ ದ್ವ್ಯಗ್ನಿ। ಅತೋಽಷ್ಟಮೇಽಹನಿ ಯೋಗ್ಯತ್ವಾದೇತದಷ್ಟಮಸ್ಯಾಹ್ನೋ ನಿರೂಪಕಂ ॥**

ಈ ದಿನದ ಆಜ್ಯಶಸ್ತ್ರವನ್ನು ತಿಳಿಸುವರು. ಯಾವ ಮಂತ್ರದಲ್ಲಿ ಅಗ್ನಿ ಎಂಬ ಶಬ್ದವನ್ನು ಎರಡಾವರ್ತಿ ಪಠಿಸಲಾ ಗಿದೆಯೋ ಆ ಸೂಕ್ತಕ್ಕೆ ದ್ವ್ಯಗ್ನಿ ಎಂದು ಹೆಸರು. ಆದ್ದರಿಂದ ಎರಡಾವರ್ತಿ ಅಗ್ನಿಶಬ್ದಪ್ರಯೋಗವಿರುವ ಈ ಸೂಕ್ತದಲ್ಲಿ ಎಂಟನೆಯ ದಿವಸ ಪಠಿಸಬೇಕಾದ ಲಕ್ಷಣಗಳಿದ್ದಂತಾಯಿತು. ಮತ್ತು **ಅಗ್ನಿಂ ವೋ ದೇವಮಗ್ನಿಭಿಃ** (ಋ. ಸಂ. ೭-೩-೧) ಎಂಬ ಈ ಸೂಕ್ತವು ಇಲ್ಲಿ ಆಜ್ಯಸೂಕ್ತವಾಗಿರುವುದು.

## ತದು ತ್ರೈಷ್ಟುಭಂ ತ್ರಿಷ್ಟುಪ್ ಪ್ರಾತಸ್ಸವನ ಏಷ ತ್ರ್ಯಹಃ ॥

**ತತ್ರತ್ಯಂ ಛಂದಃ ಪ್ರಶಂಸತಿ—**

ಈ ಮೇಲಿನ ಸೂಕ್ತವು ತ್ರಿಷ್ಟುಪ್‌ಛಂದಸ್ಕವು ಈ ಮೂರನೇ ತ್ರ್ಯಹದಲ್ಲಿ (ಎಂಟು, ಒಂಭತ್ತು ಹತ್ತನೆ ದಿನಗಳಲ್ಲಿ) ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳನ್ನೇ ಪ್ರಾತಸ್ಸವನದಲ್ಲಿ ಉಪಯೋಗಿಸುವರು.

ಕುವಿದಂಗ ನಮಸಾ ಯೇ ವೃಧಾಸಃ ಪೀವೋ ಅನ್ನಾ ರಯಿವೃಧಃ ಸುಮೇಧಾ ಉಚ್ಛನ್ನುಷಸಃ ಸುದಿನಾ ಅರಿಪ್ರಾ ಉಶಂತಾ ದೂತಾ ನ ದಭಾಯ ಗೋಪಾ ಯಾವತ್ತರಸ್ತನ್ವೋ೩ ಯಾವದೋಜಃಪ್ರತಿ ವಾಂ ಸೂರ ಉದಿತೇ ಸೂಕ್ತೈರ್ಧೇನುಃ ಪ್ರತ್ನಸ್ಯ ಕಾವ್ಯಂ ದುಹಾನಾ ಬ್ರಹ್ಮಾಣ ಇಂದ್ರೋಪ ಯಾಹಿ ವಿದ್ವಾನೂರ್ಧ್ವೋ ಅಗ್ನಿಃ ಸುಮತಿಂ ವಸ್ವೋ ಅಶ್ರೇದುತ ಸ್ಯಾನಃ ಸರಸ್ವತೀ ಜುಷಾಣೇತಿ ಪ್ರಉಗಂ ಪ್ರತಿವದಂತರ್ವದ್ದ್ವಿಹೂತವದೂರ್ಧ್ವವದಷ್ಟಮೇಽಹನ್ಯಷ್ಟಮಸ್ಯಾಹ್ನೋ ರೂಪಂ ॥

ಅಥ ಪ್ರಉಗಶಸ್ತ್ರಂ ವಿಧತ್ತೇ—ಕುವಿದಂಗೇತಿ ಪ್ರಥಮಂ ಪ್ರತೀಕಂ । ಪೀವೋ ಅನ್ನಾನಿತಿ ದ್ವಿತೀಯಂ । ಉಚ್ಛನ್ನುಷಸ ಇತಿ ತೃತೀಯಂ। ಉಶಂತೇತಿ ಚತುರ್ಥಂ। ಯಾವತ್ತರ ಇತಿ ಪಂಚಮಂ। ಪ್ರತಿ ವಾಮಿತಿ ಷಷ್ಠಂ । ಧೇನುಃ ಪ್ರತ್ನಸ್ಯೇತಿ ಸಪ್ತಮಂ । ಬ್ರಹ್ಮಾಣ ಇತ್ಯಷ್ಟಮಂ। ಊರ್ಧ್ವ ಅಗ್ನಿರಿತಿ ನವಮಂ। ಉತ ಸ್ಯಾ ನ ಇತಿ ದಶಮಂ। ಅತ್ರಾಽಽದ್ಯೈಸ್ತ್ರಿಭಿಃ ಪ್ರತೀಕೈರೇಕಸ್ತ್ರ್ಯೃಚಶ್ಚತುರ್ಥ್ಯೈ(ರ್ಥ ಏ ?)ಕಾ ಪಂಚಮೇ ದ್ವೇ ತದುಭಯಂ ಮಿಲಿತ್ವಾ ದ್ವಿತೀಯಸ್ತ್ರ್ಯೃಚಃ। ಇತರೇ ಪಂಚ ತ್ರ್ಯೃಚಾ ಏತತ್ಸರ್ವಂ ಪ್ರಉಗಂ।ತತ್ರ ದಶಮೇ ಪ್ರತೀಕೇ ಪ್ರತಿಸ್ತೋಮಮಿತಿ ಪ್ರತಿಶಬ್ದೋಪೇತಂ ಲಿಂಗಮಸ್ತಿ । ಧೇನುಃ ಪ್ರತ್ನಸ್ಯೇತ್ಯಸ್ಯ ದ್ವಿತೀಯಪಾದೇಽಂತಃ ಪುತ್ರ ಇತ್ಯಂತಶಬ್ದೋಪೇತಂ ಲಿಂಗಂ । ಊರ್ಧ್ವೋ ಅಗ್ನಿರಿತ್ಯಸ್ಮಿನ್ನೂರ್ಧ್ವಶಬ್ದೋಪೇತಂ ಲಿಂಗಂ। ಅವಶಿಷ್ಟೇಷು ದ್ವಯೋರಾಹ್ವಾನಂ ಲಿಂಗಂ। ಕ್ವಚಿದಿಂದ್ರವಾಯ್ವೋಃ ಕ್ವಚಿನ್ಮಿತ್ರಾವರುಣಯೋರಿತಿ ದ್ರಷ್ಟವ್ಯಂ ॥

ಈಗ ಪ್ರಉಗಶಸ್ತ್ರಮಂತ್ರಗಳನ್ನು ವಿವರಿಸುವರು--**ಕುವಿದಂಗ ನಮಸಾ ಯೇ ವೃಧಾಸಃ** (ಋ. ಸಂ. ೭-೯೧-೧) ಎಂಬುದು ಮೊದಲನೇ ಪ್ರತೀಕವು; **ಪೀವೋ ಅನ್ನಾರಯಿವೃಧಃ ಸುಮೇಧಾಃ** (ಋ. ಸಂ. ೭-೯೧-೩) ಎಂಬುದು ಎರಡನೆಯದು; **ಉಚ್ಛನ್ನುಷಸಃ ಸುದಿನಾ ಅರಿಪ್ರಾ** (ಋ. ಸಂ. ೭-೯೦-೪) ಎಂಬುದು ಮೂರನೆಯದು; **ಉಶಂತಾ ದೂತಾ ನ ದಭಾಯ ಗೋಪಾ** (ಋ. ಸಂ. ೭-೯೧-೨) ಎಂಬುದು ನಾಲ್ಕನೆಯದು; **ಯಾವತ್ತರಸ್ತನ್ವೋ೩ ಯಾವದೋಜಃ** (ಋ. ಸಂ. ೭-೯೧-೪) ಎಂಬುದು ಐದನೆಯದು. **ಪ್ರತಿ ವಾಂ ಸೂರ ಉದಿತೇ ಸೂಕ್ತೈಃ** (ಋ. ಸಂ. ೭-೬೫-೧) ಎಂಬುದು ಆರನೆಯದು; **ಧೇನುಃ ಪ್ರತ್ನಸ್ಯ ಕಾವ್ಯಂ ದುಹಾನಾ** (ಋ. ಸಂ. ೩-೫೮-೧) ಎಂಬುದು ಏಳನೆಯದು; **ಬ್ರಹ್ಮಾಣ ಇಂದ್ರೋಪ ಯಾಹಿ ವಿದ್ವಾನ್** (ಋ ಸಂ. ೭-೨೮-೧) ಎಂಬುದು ಎಂಟನೆಯದು; ಊರ್ಧ್ವೋ ಅಗ್ನಿಃ ಸುಮತಿಂ ವಸ್ವೋ ಅಶ್ರೇತ್ (ಋ. ಸಂ. ೭-೩೯-೧) ಎಂಬುದು ಒಂಭತ್ತನೆಯದು; **ಉತಸ್ಯಾನಃ ಸರಸ್ವತೀ ಜುಷಾಣಾ** (ಋ. ಸಂ. ೭-೯೫-೪) ಎಂಬುದು ಹತ್ತನೆಯದು; ಇವುಗಳಲ್ಲಿ ಮೊದಲನೇ ಮೂರು ಋಕ್ಕುಗಳೂ ಸೇರಿ ಮೊದಲನೇ ತೃಚವು.

ನಾಲ್ಕನೆಯದು ಮತ್ತು ಐದರಲ್ಲಿ ಎರಡು ಋಕ್ಕುಗಳೂ ಸೇರಿ ಎರಡನೇ ತೃಚವು; ಬಾಕಿ ಉಳಿದ ಐದು ಋಕ್ಕುಗಳೂ (ಮುಂದಿನ ಎರಡು ಋಕ್ಕುಗಳೂ ಸೇರಿ) ಉಳಿದ ಐದು ತೃಚಗಳು; ಇವೆಲ್ಲವೂ ಸೇರಿ ಪ್ರಉಗಶಸ್ತ್ರಮಂತ್ರಗಳಾಗುವವು; ಈ ಹತ್ತು ಪ್ರತೀಕಗಳಲ್ಲಿ ಹತ್ತನೇ ಪ್ರತೀಕದಲ್ಲಿ ಪ್ರತಿಸ್ತೋಮಂ ಎಂದು ಪ್ರತಿಶಬ್ದಪ್ರಯೋಗವಿರುವುದರಿಂದ ಎಂಟನೆಯ ದಿವಸದ ಲಕ್ಷಣವಿದ್ದಂತಾಯಿತು. **ಧೇನುಃ ಪ್ರತ್ನಸ್ಯ** ಎಂಬ ಎರಡನೆಯ ಪಾದದಲ್ಲಿ ಅಂತಃಪುತ್ರ ಎಂದು ಅಂತಶ್ಶಬ್ದಪ್ರಯೋಗವಿರುವುದು; **ಊರ್ಧ್ವೋ ಅಗ್ನಿಃ** ಎಂಬಲ್ಲಿ ಊರ್ಧ್ವಶಬ್ದಪ್ರಯೋಗವಿರುವುದು. ಉಳಿದ ಋಕ್ಕುಗಳಲ್ಲಿ ಎರಡಾವರ್ತಿ ದೇವತೆಗಳ ಆಹ್ವಾನವಿರುವುದರಿಂದ ಅದೇ ಇಲ್ಲಿ ಅವಶ್ಯಕವಾದ ಲಕ್ಷಣವು ಕೆಲವು ಕಡೆ **ಇಂದ್ರವಾಯ್ವೋಃ** ಎಂದೂ ಕೆಲವು ಕಡೆ **ಮಿತ್ರಾವರುಣಯೋಃ** ಎಂದು ಎರಡು ದೇವತೆಗಳ ಆಹ್ವಾನವಿರುವುದು ಇವುಗಳೆಲ್ಲಾ ಎಂಟನೇ ದಿನದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳು ಈ ಸೂಕ್ತದಲ್ಲಿದ್ದಂತಾಯಿತು.

**ತದು ತ್ರೈಷ್ಟುಭಂ ತ್ರಿಷ್ಟುಪ್ ಪ್ರಾತಃಸವನ ಏಷ ತ್ರ್ಯಹಃ**

**ಉಕ್ತಮಂತ್ರಗತಂ ಛಂದಃ ಪ್ರಶಂಸತಿ--**

ಮೇಲಿನ ಸೂಕ್ತದ ಋಕ್ಕುಗಳೆಲ್ಲವೂ ತ್ರಿಷ್ಟುಪ್‌ಛಂದಸ್ಕವು; ಈ ಮೂರನೇ ತ್ರ್ಯಹದ ಪ್ರಾತಸ್ಸವನಗಳಲ್ಲಿ ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳೇ ಕಾರ್ಯನಿರ್ವಾಹತ್ವವನ್ನು ವಹಿಸುವುದರಿಂದ ಈ ಮೂರು ದಿನದ ಪ್ರಾತಸ್ಸವನಗಳಲ್ಲಿ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳನ್ನೇ ಉಪಯೋಗಿಸುವರು.

**ವಿಶ್ವಾನರಸ್ಯ ವಸ್ಪತಿಮಿಂದ್ರ ಇತ್ಸೋಮಪಾ ಏಕ ಇಂದ್ರ ನೇದೀಯ ಏದಿಹ್ಯುತ್ತಿಷ್ಠ ಬ್ರಹ್ಮಣಸ್ಪತೇಽಗ್ನಿರ್ನೇತಾ ತ್ವಂ ಸೋಮ ಕ್ರತುಭಿಃ ಪಿನ್ವಂತ್ಯಪೋ ಬೃಹದಿಂದ್ರಾಯ ಗಾಯತೇತಿ ದ್ವಿತೀಯೇನಾಹ್ನಾ ಸಮಾನ ಜಾತಾನೋಽಷ್ಟಮೇಽಹನ್ಯಷ್ಟಮಸ್ಯಾಹ್ನೋ ರೂಪಂ ॥**

**ಅಥ ಮರುತ್ವತೀಯಶಸ್ತ್ರೇ ತುಲ್ಯಶಸ್ತ್ರಕ್ಲಪ್ತ್ಯಾ ಋಕ್ಷೇಸ ಲಿಂಗೇನೋಪೇತಾನ್ಮಂತ್ರಾನ್ವಿಧತ್ತೇ** -

ಈಗ ಮರುತ್ವತೀಯಶಸ್ತ್ರಮಂತ್ರಗಳಲ್ಲಿ ಎರಡನೇ ದಿವಸದ ಮಂತ್ರಗಳ ಸಮಾನ ಲಕ್ಷಣಗಳು ಎಂಟನೇ ದಿವಸದಲ್ಲಿಯೂ ಇರುವ ಮಂತ್ರಗಳನ್ನು ವಿವರಿಸುವರು. **ವಿಶ್ವಾನರಸ್ಯ ವಸ್ಪತಿಂ** (ಋ. ಸಂ. ೮-೬೮-೪) **ಇಂದ್ರ ಇತ್ಸೋಮಪಾ ಏಕಃ** (ಋ. ಸಂ. ೮-೨-೪) **ಇಂದ್ರ ನೇದೀಯ ಏದಿಹಿ** (ಋ. ಸಂ. ೮-೫೩-೫) **ಉತ್ತಿಷ್ಠ ಬ್ರಹ್ಮಣಸ್ಪತೇ** (ಋ. ಸಂ. ೧-೪೧-೪) **ಅಗ್ನಿರ್ನೇತಾ ಭಗ ಇವ** (ಋ. ಸಂ. ೩-೨೦-೪) **ತ್ವಂ ಸೋಮ ಕ್ರತುಭಿಃ** (ಋ. ಸಂ. ೧-೯೧-೨) **ಪಿನ್ವಂತ್ಯಪೋ ಮರುತಃ** (ಋ. ಸಂ. ೧-೬೪-೪) **ಬೃಹದಿಂದ್ರಾಯ ಗಾಯತ** (ಋ. ಸಂ. ೮-೮೯-೧) ಎಂಬ ಋಕ್ಕುಗಳು ಎರಡನೇ ದಿವಸದ ಮಂತ್ರಗಳಲ್ಲಿಯೂ ಎಂಟನೇ ದಿವಸದ ಮಂತ್ರಗಳಲ್ಲಿಯೂ ಇರುವವು. ಆದ್ದರಿಂದ ಈ ಎರಡು ದಿನದ ಮಂತ್ರಗಳಲ್ಲಿಯೂ ಸಮಾನಲಕ್ಷಣವಿದ್ದಂತಾಯಿತು. ಈ ವಿಧವಾದ ಸಮಾನಲಕ್ಷಣಗಳಿರುವುದೇ ಎಂಟನೇ ದಿನದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳು.

## ಶಂಸಾಮಹಾಮಿಂದ್ರಂ ಯತ ಏತಾನಿತಿ ಸೂಕ್ತಂ ಮಹದ್ವದಷ್ಟಮೇಽಹನ್ಯಷ್ಟಮಸ್ಯಾಹ್ನೋ ರೂಪಂ ॥

ಮಹಚ್ಛಬ್ದಲಿಂಗಕಂ ಸೂಕ್ತಂ ವಿಧತ್ತೇ— ಅತ್ರ ಮಹಾಮಿತ್ಯೇಷಮಹಚ್ಛಬ್ದಃ ॥

ಮಹಚ್ಛಬ್ದಯುಕ್ತವಾದ ಬೇರೊಂದು ಸೂಕ್ತವನ್ನು ತಿಳಿಸುವರು. ಶಂಸಾಮಹಾಮಿಂದ್ರಂ ಯಸ್ಮಿನ್ವಿಶ್ವಾ (ಋ. ಸಂ. ೩-೪೯-೧) ಎಂಬ ಸೂಕ್ತದಲ್ಲಿ ಮಹತ್ ಎಂಬ ಶಬ್ದಪ್ರಯೋಗವಿರುವುದರಿಂದ ಎಂಟನೇ ದಿನದ ಮಂತ್ರಗಳಲ್ಲಿ ಪಠಿಸಬೇಕಾದ ಲಕ್ಷಣವಿದ್ದಂತಾಯಿತು.

## ಮಹಶ್ಚಿತ್ತ್ವಮಿಂದ್ರ ಯತ ಏತಾನಿತಿ ಸೂಕ್ತಂ ಮಹದ್ವದಷ್ಟಮೇಽಹನ್ಯಷ್ಟಮಸ್ಯಾಹ್ನೋ ರೂಪಂ ॥

ಪುನರಪಿ ಮಹಚ್ಛಬ್ದಯುಕ್ತಂ ಸೂಕ್ತಾಂತರಂ ವಿಧತ್ತೆ— ಅತ್ರ ಮಹ ಇತ್ಯೇಷ ಏವ ಮಹಚ್ಛಬ್ದಃ ॥

ಮಹಚ್ಛಬ್ದಯುಕ್ತವಾದ ಮತ್ತೊಂದು ಸೂಕ್ತವನ್ನು ತಿಳಿಸುವರು. ಮಹಶ್ಚಿತ್ತ್ವಮಿಂದ್ರಾಯ ಗಾಯತ (ಋ.ಸಂ ೧-೧೬೯-೧) ಎಂಬ ಸೂಕ್ತದಲ್ಲಿ ಮಹಚ್ಛಬ್ದಪ್ರಯೋಗವಿರುವುದರಿಂದ ಎಂಟನೇ ದಿವಸದ ಲಕ್ಷಣವಿದ್ದಂತಾಯಿತು.

## ಪಿಬಾ ಸೋಮಮಭಿಯಮುಗ್ರ ತರ್ದ ಇತಿ ಸೂಕ್ತಮೂರ್ವಂ ಗವ್ಯಂ ಮಹಿ ಗೃಣಾನ ಇಂದ್ರೇತಿ ಮಹದ್ವದಷ್ಟಮೇಽಹನ್ಯಷ್ಟಮಸ್ಯಾಹ್ನೋ ರೂಪಂ ॥

ಪುನರಪಿ ಮಹಚ್ಛಬ್ದಯುಕ್ತಂ ಸೂಕ್ತಾಂತರಂ ವಿಧತ್ತೇ— ಪಿಬಾ ಸೋಮಮಿತ್ಯಾದಿಸೂಕ್ತಸ್ಯೋರ್ವಂ ಗವ್ಯಮಿತಿ ದ್ವಿತೀಯಃ ಪಾದಸ್ತತ್ರ ಮಹೀತ್ಯೇಷ ಮಹಚ್ಛಬ್ದಃ ॥

ಪಿಬಾ ಸೋಮಮಭಿಯಮುಗ್ರ (ಋ. ಸಂ. ೬-೧೭-೧) ಎಂಬ ಋಕ್ಕಿನಲ್ಲಿ ಊರ್ವ್ಯಂ ಗವ್ಯಂ ಎಂದು ಎರಡೇ ಪಾದವಿರುವುದು. ಈ ಪಾದದಲ್ಲಿ ಮಹಿಶಬ್ದಪ್ರಯೋಗವಿರುವುದರಿಂದ ಈ ಮಹಚ್ಛಬ್ದಪ್ರಯೋಗವೆಂಬ ಲಕ್ಷಣವು ಎಂಟನೇ ದಿವಸದ ಮಂತ್ರದಲ್ಲಿದ್ದಂತಾಯಿತು.

## ಮಹಾँ ಇಂದ್ರೋ ನೃವದಾಚರ್ಷಣಿಪ್ರಾ ಇತಿ ಸೂಕ್ತಂ ಮಹದ್ವದಷ್ಟಮೇಽಹನ್ಯಷ್ಟಮಸ್ಯಾಹ್ನೋ ರೂಪಂ ॥

ಪುನರಪಿ ಮಹಚ್ಛಬ್ದಯುಕ್ತಂ ಸೂಕ್ತಂ ವಿಧತ್ತೇ— ಅತ್ರ ಮಹಾನಿತ್ಯೇಷ ಮಹಚ್ಛಬ್ದಃ। ಉಕ್ತೇಷು ಚತುರ್ಷ್ವಪಿ ಮಹಚ್ಛಬ್ದೇಷ್ವಂತಸ್ಯ ನೈಲಕ್ಷಣ್ಯೇಽಪ್ಯಾದಿಭಾಗಸ್ಯೈಕವಿಧತ್ವಾನ್ಮಹಚ್ಛಬ್ದತ್ವಂ ದ್ರಷ್ಟವ್ಯಂ ॥

ಮಹಾँ ಇಂದ್ರೋ ನೃವದಾಚರ್ಷಣಿಪ್ರಾ (ಋ. ಸಂ. ೬-೧೯-೧) ಎಂಬ ಋಕ್ಕಿನಲ್ಲಿ **ಮಹಾನ್** ಎಂದು ಮಹ ಚ್ಛಬ್ದವೆಂಬ ಲಕ್ಷಣವು ಎಂಟನೇ ದಿವಸದ ಮಂತ್ರದಲ್ಲಿದ್ದಂತಾಯಿತು.

**ತದು ತ್ರೈಷ್ಟುಭಂ ತೇನ ಪ್ರತಿಷ್ಠಿತಪದೇನ ಸವನಂ ದಾಧಾರ್‍ಯಾಯತನಾ-ದೇವೈತೇನ ನ ಪ್ರಚ್ಯವತೇ ॥**

**ಏತತ್ಸೂಕ್ತ ಚತುಷ್ಟಯಗತಂ ಛಂದಃ ಪ್ರಶಂಸತಿ—**

ಈ ಸೂಕ್ತದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಈ ಛಂದಸ್ಸಿನ ಋಕ್ಕಿನ ಪ್ರತಿಪಾದದಲ್ಲಿಯೂ ಕ್ಲೃಪ್ತಸಂಖೆಯ ಅಕ್ಷರ ಗಳಿರುವವು. ಆದ್ದರಿಂದ ಇಂತಹ ಸೂಕ್ತಪಠನದಿಂದ ಹೋತೃವಾಗಲಿ, ಯಜಮಾನನಾಗಲಿ ತನ್ನ ಸ್ವಂತ ನಿವಾಸಸ್ಥಾನದಿಂದ ಭ್ರಷ್ಟನಾಗುವುದಿಲ್ಲ.

**ತಮಸ್ಯ ದ್ಯಾವಾಪೃಥಿವೀ ಸಚೇತಸೇತಿ ಸೂಕ್ತಂ ಯದೈತ್ಕೃಣ್ವಾನೋ ಮಹಿಮಾನಮಿಂದ್ರಿಯಮಿತಿ ಮಹದ್ವದಷ್ಟಮೇಽಹನ್ಯಷ್ಟಮ-ಸ್ಯಾಹ್ನೋ ರೂಪಂ ॥**

**ಅಥಾಸ್ಮಿನ್ಮಹಚ್ಛಬ್ದೋಪೇತಂ ಸೂಕ್ತಂ ವಿಧತ್ತೇ— ತಮಸ್ಯೇತಿ ಸೂಕ್ತಸ್ಯ ಯದೈತತ್ ಕೃಣ್ವಾನ ಇತಿ ತೃತೀಯಃ ಪಾದಸ್ತತ್ರ ಮಹಿಮಾನಪದೇ ಮಹೀತಿ ಮಹಚ್ಛಬ್ದಃ ಶ್ರೂಯತೇ ॥**

**ತಮಸ್ಯ ದ್ಯಾವಾಪೃಥಿವೀ ಸಚೇತಸಾ** (ಋ. ಸಂ. ೧೦-೧೧೩-೧) ಎಂಬ ಸೂಕ್ತದ **ಯದೈತ್ಕೃಣ್ವಾನಃ** ಎಂಬ ಮೂರನೆಯ ಪಾದದಲ್ಲಿ ಮಹಿಮಾನಮಿಂದ್ರಿಯಂ ಎಂದು ಮಹಚ್ಛಬ್ದವಿರುವುದು. ಈ ಮಹಚ್ಛಬ್ದಪ್ರಯೋಗವು ಎಂಟನೇ ದಿನದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರಬೇಕಾದ ಲಕ್ಷಣವು. ಅದು ಇಲ್ಲಿದ್ದಂತಾಯಿತು.

**ತದು ಜಾಗತಂ ಜಗತ್ಯೋ ವಾ ಏತಸ್ಯ ತ್ರ್ಯಹಸ್ಯ ಮಧ್ಯಂದಿನಂ ವಹಂತಿ ತದ್ವೈತಚ್ಛಂದೋ ವಹತಿ ಯಸ್ಮಿನ್ನಿವಿದ್ಧೀಯತೇ ತಸ್ಮಾಜ್ಜಗತೀಷು ನಿವಿದಂ ದಧಾತಿ ॥**

**ತಸ್ಮಿನ್ಸೂಕ್ತೇ ನಿವಿದ್ಧಾನಂ ವಿಧತ್ತೇ —**

ಈ ಸೂಕ್ತದಲ್ಲಿ ನಿವಿನ್ಮಂತ್ರಗಳನ್ನು ಸೇರಿಸುವ ವಿಷಯವನ್ನು ಹೇಳುವರು. ಈ ಸೂಕ್ತದ ಋಕ್ಕುಗಳು ಜಗತೀ ಛಂದಸ್ಕವು. ಈ ತ್ರ್ಯಹದ (ಕೊನೆಯ ಮೂರುದಿನಗಳ) ಮಾಧ್ಯಂದಿನ ಸವನದಲ್ಲಿ ಆಚರಿಸಬೇಕಾದ ಕಾರ್ಯ-ಕಲಾಪಗಳನ್ನು ಈ ಜಗತೀ ಛಂದಸ್ಸುಗಳು ನಿರ್ವಹಿಸುತ್ತವೆ. ಆದರಿಂದ ಈ ಸೂಕ್ತದ ಜಗತೀಛಂದಸ್ಸಿನ ಮಂತ್ರಗಳಲ್ಲಿ ನಿವಿನ್ಮಂತ್ರಗಳನ್ನು ಪಠಿಸುತ್ತಾರೆ.

**ಮಿಥುನಾನಿ ಸೂಕ್ತಾನಿ ಶಸ್ಯಂತೇ ತ್ರೈಷ್ಟುಭಾನಿ ಚ ಜಾಗತಾನಿ ಚ ಮಿಥುನಂ ವೈ ಪಶವಃ ಪಶವಶ್ಛಂದೋಮಾಃ ಪಶೂನಾಮವರುದ್ಧ್ಯೈ ॥**

ಛಂದೋದ್ವಯಂ ಮಿಲಿತ್ವಾ ಪ್ರಶಂಸತಿ—

ಮೇಲೆ ಹೇಳಿದ ಎರಡು ಸೂಕ್ತಗಳಲ್ಲಿ ಒಂದರಲ್ಲಿ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳೂ ಇನ್ನೊಂದರಲ್ಲಿ ಜಗತೀಛಂದಸ್ಸಿನ ಮಂತ್ರಗಳೂ ಇರುವುವು. ಇವೆರಡೂ ಸೇರಿ ಮಿಥುನವಾಗುವುದು ಪಶುಗಳೂ ಮಿಥುನಸ್ವರೂಪವು ಮತ್ತು ಪಶುಗಳು ಛಂದೋಮಾಃ ಎಂಬ ಸ್ತೋಮಗಳ ಸ್ವರೂಪವು. ಈ (ಛಂದೋಮಾ ಎಂಬ ಮಿಥುನಸ್ವರೂಪವಾದ ಸೂಕ್ತಗಳನ್ನು ಪಠಿಸುವುದರಿಂದ ಹೋತೃವಿಗೂ, ಯಜಮಾನನಿಗೂ ಪಶುಸಂಪತ್ತಿನ ಸಮೃದ್ಧಿಯುಂಟಾಗುವುದು.

## ಮಹದ್ವಂತಿ ಸೂಕ್ತಾನಿ ಶಸ್ಯಂತೇ ಮಹದ್ವಾ ಅಂತರಿಕ್ಷಮಂತರಿಕ್ಷಸ್ಯಾಪ್ತ್ಯೈ ॥

ಉಕ್ತೇಷು ಸೂಕ್ತೇಷು ಮಹಚ್ಛಬ್ದ ಪ್ರಶಂಸತಿ— ಅಂತರಿಕ್ಷಸ್ಯ ಮಹತ್ತ್ವಂ ವಿಸ್ತೀರ್ಣತ್ವಂ ಪ್ರಸಿದ್ಧಂ ॥

ಹಿಂದೆ ಹೇಳಿದ ಎರಡು ಸೂಕ್ತಗಳೂ ಮಹದ್ವಂತಿ ಸೂಕ್ತಗಳು ಎಂದು ಕರೆಯಲ್ಪಡುವವು. ಏಕೆಂದರೆ ಈ ಸೂಕ್ತಗಳಲ್ಲಿ ಮಹಚ್ಛಬ್ದಪ್ರಯೋಗವಿರುವುದು ಮಹತ್ ಎಂದರೆ ದೊಡ್ಡದು ಬಹಳ ವಿಸ್ತೀರ್ಣವುಳ್ಳದ್ದು. ಅಂತರಿಕ್ಷವೂ ಬಹಳ ವಿಸ್ತೀರ್ಣವುಳ್ಳದ್ದಾಗಿರುವುದು. ಈ ಕಾರಣಗಳಿಂದ ಎಂದರೆ ಈ ಸೂಕ್ತದಲ್ಲಿ ಮಹತ್ ಮತ್ತು ಅಂತರಿಕ್ಷಸೂಚಕಶಬ್ದಪ್ರಯೋಗವೂ ಇರುವುದರಿಂದ ಈ ಎಂಟನೇ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣವು ಇಲ್ಲದ್ದಂತಾಯಿತು.

## ಪಂಚ ಸೂಕ್ತಾನಿ ಶಸ್ಯಂತೇ ಪಂಚಪದಾ ಪಂಕ್ತಿಃ ಪಾಂಕ್ತೋ ಯಜ್ಞಃ ಪಾಂಕ್ತಾಃ ಪಶವಃ ಪಶವಶ್ಛಂದೋಮಾಃ ಪಶೂನಾಮವರುದ್ಧ್ಯೈ ॥

ಮಹಚ್ಛಬ್ದಯುಕ್ತಾನಾಂ ಸೂಕ್ತಾನಾಂ ಸಂಖ್ಯಾಂ ಪ್ರಶಂಸತಿ—ಶಂಸಾ ಮಹಾಮಿತಿ ಪ್ರಥಮೇ ಸೂಕ್ತೇ ಮಹಚ್ಛಬ್ದೋ ಮಹಶ್ಚಿತ್ತ್ವಮಿತಿ ದ್ವಿತೀಯೇ ಮಹಿ ಗೃಣಾನ ಇತಿ ತೃತೀಯೇ ಮಹಾಂ ಇಂದ್ರ ಇತಿ ಚತುರ್ಥೇ ಮಹಿಮಾನಮಿತಿ ಪಂಚಮ ಏವಂ ಪಂಚ ಸೂಕ್ತಾನಿ ಮಹಚ್ಛಬ್ದಯುಕ್ತಾನಿ ಶಸ್ಯಂತೇ । ಪಂಚಸಂಖ್ಯಾಯೋಗಾತ್ಪಂಚಪಾದೋಪೇತಾ ಪಂಕ್ತಿಶ್ಛಂದೋರೂಪಾ ಭವತಿ । ಯಜ್ಞಶ್ಚ ಹವಿಷ್ಪಂಕ್ತ್ಯಾದಿನಾ ಪಾಂಕ್ತಃ ॥ ಪಶವಶ್ಚ ಪಂಕ್ತಿಮುಖೇನ ಪಾಂಕ್ತಾಶ್ಛಂದೋಮಾನಾಂ ಚ ಪಶುಸಾಧನತ್ವಾತ್ಪಶುತ್ವಂ । ಅನೇನ ಸಂಬಂಧೇನ ಸೂಕ್ತಪಂಚಕಂ ಪಶುಪ್ರಾಪ್ತ್ಯೈ ಸಂಪದ್ಯತೇ ॥

ಮಹಚ್ಛಬ್ದಯುಕ್ತವಾದ ಸೂಕ್ತಗಳ ಸಂಖ್ಯೆಯನ್ನು ತಿಳಿಸುವರು. ಮಹಚ್ಛಬ್ದಪ್ರಯೋಗವಿರುವ ಸೂಕ್ತಗಳು (ಈ ಎಂಟನೇ ದಿನ ಆಚರಿಸಲ್ಪಡುವ ಸೂಕ್ತಗಳು) ಐದು ಇರುವವು. ಅವುಗಳನ್ನು ಈ ಎಂಟನೇದಿನ ಯಜಮಾನ ಮತ್ತು ಹೋತೃಗಳ ಪಠಿಸುತ್ತಾರೆ. ಮಹಚ್ಛಬ್ದಲಕ್ಷಣವಿರುವ ಸೂಕ್ತಗಳು ಐದು ; ಪಂಕ್ತಿಶ್ಛಂದಸ್ಸಿನಲ್ಲಿ ಐದು ಪಾದಗಳಿರುವವು. ಯಜ್ಞದಲ್ಲಿಯೂ ಪಂಚವಿಧವಾದ ಹವಿಸ್ಸನ್ನು ಹೋಮಮಾಡುವುದರಿಂದ ಯಜ್ಞವೂ ಪಾಂಕ್ತವೆಂದು ಹೇಳಲ್ಪಡುವುದು. ಪಶುಗಳೂ ಪಂಕ್ತಿಶ್ಛಂದಸ್ಸಿಗೆ ಸಂಬಂಧಪಟ್ಟವು, ಏಕೆಂದರೆ ಪಶುಗಳಿಗೆ ನಾಲ್ಕು ಪಾದಗಳೂ ಒಂದು ಮುಖವೂ ಸೇರಿ ಐದು ಮುಖ್ಯವಾದ ಅವಯವಗಳಿರುವವು. ಹಾಗೆಯೇ ಛಂದೋಮಾ ಎಂಬ ತ್ರಿಪಚ್ಚತುಶ್ಚತ್ವಾರಿಂಶದಷ್ಟಾಚತ್ವಾರಿಂಶತ್ (ಗಾಯತ್ರೀತ್ರಿಷ್ಟುಪ್‌ಜಗತೀ) ಎಂಬ ಸ್ತೋಮಗಳೂ ಪಶುಸ್ವರೂಪವು. ಆದ್ದರಿಂದ ಈ ಸ್ತೋಮಗಳನ್ನು ಪಠಿಸುವುದರಿಂದ ಪಶುಸಮೃದ್ಧಿಯುಂಟಾಗುವುದು. (ಮೇಲೆ ಹೇಳಿರುವಂತೆ ಮೊದಲನೇ ಸೂಕ್ತದಲ್ಲಿ ಶಂಸಾಮಹಾಂ ಎಂಬಲ್ಲಿ ಮಹಚ್ಛಬ್ದವೂ ಎರಡನೇ ಸೂಕ್ತದಲ್ಲಿ ಮಹಶ್ಚಿತ್ತ್ವಂ ಎಂಬಲ್ಲಿ ಮಹಚ್ಛಬ್ದ

ವಿರುವುದು. ಮೂರನೇ ಸೂಕ್ತದಲ್ಲಿ ಮಗೃಣಾನ ಎಂಬಲ್ಲಿ ಮಹಶ್ಶಬ್ದವಿರುವುದು. ನಾಲ್ಕನೇ ಸೂಕ್ತದಲ್ಲಿ **ಮಹಾಁ ಇಂದ್ರ** ಎಂಬ ಮಹಚ್ಛಬ್ದವಿರುವುದು ಐದನೆಯ ಸೂಕ್ತದಲ್ಲಿ ಮಹಿಮಾನಂ ಎಂಬಲ್ಲಿ ಮಹಚ್ಛಬ್ದವಿರುವುದು. ಆದ್ದರಿಂದ ಐದು ಸೂಕ್ತ ಗಳಲ್ಲಿ ಮಹಚ್ಛಬ್ದಪ್ರಯೋಗವಿದ್ದಂತಾಯಿತು. ಉಳಿದ ವಿಷಯಗಳೆಲ್ಲಾ ಹಿಂದಿನಂತೆಯೇ)

**ಅಭಿ ತ್ವಾ ಶೂರ ನೋನುಮೋಽಭಿ ತ್ವಾ ಪೂರ್ವಪೀತಯ ಇತಿ ರಥಂತರಂ ಪೃಷ್ಠಂ ಭವತ್ಯಷ್ಟಮೇಽಹನಿ ॥**

ಅಥ ನಿಷ್ಕೇವಲ್ಯಶಸ್ತ್ರಸ್ಯ ರಥಂತರಸಾಮಸಾಧ್ಯಪೃಷ್ಠಸ್ತೋತ್ರಸ್ಯಾಽಽಧಾರಭೂತಂ ಸ್ತೋತ್ರಿಯಮನುರೂಪಂ ಚ ವಿಧತ್ತೇ—ಯದ್ಯಪಿ ಯುಗ್ಮದಿನತ್ವಾನ್ನ್ಯಾಯತೋ ಬೃಹತ್ಪೃಷ್ಠಂ ಪ್ರಾಪ್ತಂ ತಥಾಪಿ ವಚನಬಲಾದ್ರಥಂತರಪೃಷ್ಠತಂ ದ್ರಷ್ಟವ್ಯಂ ॥

ಈಗ ನಿಷ್ಕೇವಲ್ಯಶಸ್ತ್ರದಲ್ಲಿ ರಥಂತರಸಾಮಸಾಧ್ಯವಾದ ಪೃಷ್ಠಸ್ತೋತ್ರಕ್ಕೆ ಆಧಾರಭೂತವಾದ ಸ್ತೋತ್ರಿಯಾನುರೂಪವನ್ನು ತಿಳಿಸುವರು. **ಅಭಿ ತ್ವಾ ಶೂರ ನೋನುಮಃ** (ಋ. ಸಂ. ೭-೩೨-೨೨) ಎಂಬ ಋಕ್ಕು ಮತ್ತು **ಅಭಿ ತ್ವಾ ಪೂರ್ವ-ಪೀತಯೇ** ಎಂಬ ಋಕ್ಕು ಸಹ ಪೃಷ್ಠಸ್ತೋತ್ರಕ್ಕೆ ಆಧಾರಭೂತವಾದ ಸ್ತೋತ್ರಿಯ ಅನುರೂಪಋಕ್ಕುಗಳು. ಇಲ್ಲಿ ಎಂಟನೆಯ ದಿನವು ಯುಗ್ಮದಿನವಾದ್ದರಿಂದ ನ್ಯಾಯವಾಗಿ ಬೃಹತ್ಪೃಷ್ಠವನ್ನು ಉಪಯೋಗಿಸಬೇಕು. ಆದರೆ ವಿಧಿವಚನಕ್ಕನುಸಾರವಾಗಿ ಇಲ್ಲಿ ರಥಂತರಪೃಷ್ಠವನ್ನು ಪಯೋಗಿಸಬೇಕು.

**ಯದ್ವಾವಾನೇತಿ ಧಾಯ್ಯಾಽಚ್ಯುತಾ ॥**

ಅಚ್ಯುತತ್ವಲಿಂಗಯುಕ್ತಾಮೃಚಂ ವಿಧತ್ತೇ—

ಯದ್ವಾವಾನೇತಿ ಪುರುತಮಂ ಎಂಬ ಋಕ್ಕಿನಲ್ಲಿ ಅಚ್ಯುತತ್ವಲಕ್ಷಣವಿರುವುದರಿಂದ ಇದು ಎಂಟನೇ ದಿವಸದ ಮಂತ್ರ ಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

**ತಾಮಿದ್ಧಿ ಹವಾಮಹ ಇತಿ ಬೃಹತೋ ಯೋನಿಮನು ನಿವರ್ತಯತಿ ಬಾರ್ಹತಂ ಹ್ಯೇತದಹರಾಯತನೇನ ॥**

ತಸ್ಯಾ ಉಪರಿ ಬೃಹತ್ಸಾಮಯೋನೇಃ ಶಂಸನಂ ವಿಧತ್ತೇ—ಅಷ್ಟಮಸ್ಯ ಯುಗ್ಮದಿನ-ತ್ವಾದ್ ಬೃಹತ್ಸಂಬಂಧಿಸ್ಥಾನತ್ವಂ ॥

ತ್ವಾಮಿದ್ಧಿ ಹವಾಮಹೇ ಎಂದಿರುವುದರಿಂದ ಬೃಹತೀಛಂದಸ್ಸನ್ನು ಮತ್ತೆ (ಹಿಂತಿರುಗಿ) ಪಠಿಸಿದಂತೆ ಆಯಿತು. ಎಂದರೆ ಅದನ್ನು ಯೋನಿ ಎಂದರೆ ಸ್ವಸ್ಥಾನಕ್ಕೆ ಸೇರಿಸಿದಂತಾಯಿತು. ಏಕೆಂದರೆ ಅಷ್ಟಮದಿನವು ಯುಗ್ಮದಿನವಾದ್ದರಿಂದ ಈ ಬಾರ್ಹತ ಮಂತ್ರವನ್ನು ಅದರ ಸ್ವಸ್ಥಾನದಲ್ಲಿ ತಿರುಗಿ ಸೇರಿಸಲಾಯಿತು.

**ಉಭಯಂ ಶೃಣವಚ್ಚನ ಇತಿ ಸಾಮಪ್ರಗಾಥೋ ಯಚ್ಚೇದಮದ್ಯ ಯದು ಚ ಹ್ಯ ಆಸೀದಿತಿ ಬಾರ್ಹತೇಽಹನ್ಯಷ್ಟಮೇಽಹನ್ಯಷ್ಟಮ-ಸ್ಯಾಹ್ನೋ ರೂಪಂ ॥**

ತಸ್ಯೈವ ಬೃಹತ್ಸಂಬಂಧಿನಂ ಸಾಮಪ್ರಗಾಥಂ ವಿಧತ್ತೇ—ಉಭಯಶಬ್ದತಾತ್ಪರ್ಯಂ ಯಚ್ಚೇದಮಿತ್ಯಾದಿನೋಚ್ಯತೇ । ಅದ್ಯ ಯದಿದಂ ಕಾರ್ಯಮಾಸೀತ್, ಹ್ಯಶ್ಚ ಪೂರ್ವೇದ್ಯುರಪಿ ಯದು ಯದೇವ ಕಾರ್ಯಮಾಸೀತ್, ತದೇತದುಭಯಮಪಿ ಶ್ರುತಮಿತಿ ತಸ್ಯ ಪಾದಸ್ಯಾರ್ಥಃ । ಯುಗ್ಮರೂಪೇ ಬಾರ್ಹತೇಽಹನಿ ಬೃಹತ್ಸಾಮಸಂಬಂಧಃ ಪ್ರಗಾಥೋ ಯುಕ್ತ ಏವ ॥

ಬೃಹತ್ಸಂಬಂಧವಾದ ಒಂದು ಸಾಮಪ್ರಗಾಥಮಂತ್ರವನ್ನು ತಿಳಿಸುವರು. **ಉಭಯಂ ಶೃಣವಚ್ಚ ನಃ** (ಋ.ಸಂ. ೮ ೬೧-೧) ಎಂಬ ಮಂತ್ರವು ಸಾಮಪ್ರಗಾಥವು. ಈ ಪ್ರಗಾಥದಲ್ಲಿರುವ ಉಭಯಶಬ್ದಕ್ಕೆ ಅರ್ಥವೇನೆಂದರೆ— **ಅದ್ಯಯದಿದಂ ಕಾರ್ಯಮಾಸೀತ್ ಹ್ಯಶ್ಚ ಪೂರ್ವೇದ್ಯುರಪಿ ಯದು ಯದೇವ ಕಾರ್ಯಮಾಸೀತ್ ತದೇತದುಭಯಮಪಿ ಶ್ರುತಮಿತಿ ತಸ್ಯ ಪಾದಸ್ಯಾರ್ಥಃ ।** ಈಗ ಯಾವ ಕಾರ್ಯವು ನಡೆಯುತ್ತಿರುವುದೋ ಹಿಂದೆ ಎಂದರೆ ನಿನ್ನೆಯದಿನ ಯಾವ ಕಾರ್ಯವು ಎಲ್ಲಿ ನಡೆಯಿತೋ ಆವೆರಡನ್ನೂ ಕೇಳಲಾಯಿತು ಎಂದು ಈ ಪಾದದ ಅರ್ಥವು. ಯುಗ್ಮರೂಪವಾದ ಈ ಬಾರ್ಹತ ದಿನದಲ್ಲಿ ಬೃಹತ್ಸಾಮಸಂಬಂಧವಾದ ಈ ಪ್ರಗಾಥವನ್ನು ಪಠಿಸುವುದು ಯುಕ್ತವಾಗಿಯೇ ಇರುವುದು.

## ತ್ಯಮೂ ಷು ವಾಜಿನಂ ದೇವಜೂತಮಿತಿ ತಾರ್ಕ್ಷ್ಯೋಽಚ್ಯುತಃ ॥

**ಅಚ್ಯುತತ್ವಲಿಂಗಕಂ ಸೂಕ್ತವಿಶೇಷಂ ವಿಧತ್ತೇ—**

**ತ್ಯಮೂ ಷು ವಾಜಿನಂ ದೇವಜೂತಂ** (ಋ. ಸಂ. ೧೦-೧೭೮-೧) ಎಂಬ ಈ ಸೂಕ್ತವು ತಾರ್ಕ್ಷ್ಯದೇವತಾಕವು. ಇದರಲ್ಲಿ ಅಚ್ಯುತತ್ವಲಕ್ಷಣವಿರುವುದರಿಂದ ಎಂಟನೇ ದಿವಸದಲ್ಲಿ ಪಠಿಸಬೇಕಾದ ಮಂತ್ರದಲ್ಲಿರುವ ಅಚ್ಯುತತ್ವಲಕ್ಷಣವು ಈ ಸೂಕ್ತದಲ್ಲಿದ್ದಂತಾಯಿತು.

*English Translation*

**(The Characteristics of the eighth day. The Shastras of the morning and midday libations)**

Neither the words a nor pra, but what is "standing" is the characteristic of the eighth day; because the eighth is identical with the second. The characteristics are, urdhva, prati, antar, Vrishan, vridhan, the mentioning of the deity in the middle pada, an allusion to the region, twice the name Agni in the same pada, the words manad, vihuta, punar, the present tense.

Agnim vo devam agnibhih (7, 3) is the Ajya of the eighth day; because it contains twice the word agni. It is in the Trishtubh metre; for the Trishtubh is the leading metre at the morning libation during these three days. The Prauga Shatra is composed of the following verses: Kuvid anga namasa (7, 91, 1), pivo anan (7, 91, 3), uchhan ushasah (7, 90, 4), us anta duta (7, 91, 2), yavat taras (7, 91, 4-5), prati vam sura udite (7, 65, 1-3) dhenuh pratnasya (3, 58, 1-3), Brahmana indropa, (7,65, 1-3), urdhvo agnih sumatim (7, 39, 1-3) uta sya nah sarasvati (7, 95, 4-6). In these verses are the characteristics prati, antar, vihuta,

urdhvai contained ; they are in the Trishtubh metre, which is the leading metre at the morning libation on these three days.

The extension of the Marutvatiya Shastra consists of the following verses : Visvanarasya vaspatim (8, 57, 4), Indra it Sompa ekha (8, 2, 4), Indra nediya ed ihi (Val. 5, 5-6), uttishtha Brahmanaspate (1, 40, 1-2), agnir neta, tvam Soma kratubhih, pinvanty apo, brihad indraya gayata. This Shastra is identical with that of the second day.

Now follow the Mahadvat hymns, i. e. such ones as contain the word mahat great. These are samsa maham (3, 49), mahas chit tvam (1, 169), piba somam abhi yam (6, 17 in the words urvam gavyam mahi), maham indro nrivat (6, 19) This hymn is in the Trishtubh metre ; by means of its padas which remain firm, the Hotar keeps the libation in its proper place, preventing it from falling down.

Tam asya dyava prithivi (10, 113) is a mahadvat hymn also ; for in the second pada of the first verse the word mahimano occurs. It is in the Jagati metre. The Jagatis are the leading metres at the midday libation during the three last days (abovementioned). Thence the Nivid is placed in it. These hymns represent cohabitation ; they are in the Trishtubh and Jagati metres, for cattle is represeeted by cohubitation, and for obtaining cattle, the mahadvat hymns are repeated. The air is mahad ; in order to obtain the aíry region, five hymns (there are five, four in Trishtubh, and one in Jagati) are required. For the Pankti metre comprises five padas, the sacrifice belongs to this metre, cattle belong to it; cattle is represented by the Chandomas.

Abhi tva sura nonumah, and abhi tva purvapitaye form the Rathantaram Prishtham of the eighth day. Yad vavana is the invariable Dhayya. By tvam iddhi havamahe all is brought back to the womb ; for this day is a Barhata day according to its position. Ubhayan srinavachcha (8, 50, 1-2) is the Sama Pragatha ; the meaning of ubhayam, i. e. both in it is, what was yesterday, which is a Brihat day. Tyam u shu vajinam is the invariable Tarkshya.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ತ್ರಯೋವಿಂಶಾಧ್ಯಾಯಸ್ಯ ತೃತೀಯಃ ಖಂಡಃ**

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತಮೂರನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವಾದುದು.



# ಅಥ ತ್ರಯೋವಿಂಶಾಧ್ಯಾಯೇ ಚತುರ್ಥಃ ಖಂಡಃ

## ಇಪ್ಪತ್ತಮೂರನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ನಿಷ್ಕೇವಲ್ಯಶಸ್ತ್ರದ ಮಹದ್ವತ್ಸೂಕ್ತಗಳು ; ತೃತೀಯಸವನದಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳು.]



**ಅಪೂರ್ವ್ಯಾ ಪುರುತಮಾನ್ಯಸ್ಮಾ ಇತಿ ಸೂಕ್ತಂ ಮಹೇ ವೀರಾಯ ತವಸೇ ತುರಾಯೇತಿ ಮಹದ್ವದಷ್ಟಮೇಽಹನ್ಯಷ್ಟಮಸ್ಯಾಹ್ನೋ ರೂಪಂ ತಾಂ ಸುತೇ ಕೀರ್ತಿಂ ಮಘವನ್ಮಹಿ ತ್ವೇತಿ ಸೂಕ್ತ ಮಹದ್ವದಷ್ಟಮೇಽಹನ್ಯಷ್ಟಮಸ್ಯಾಹ್ನೋ ರೂಪಂ ತ್ವಂ ಮಹಾँ ಇಂದ್ರ ಯೋ ಹ ಶುಷ್ಮೈರಿತಿ ಸೂಕ್ತಂ ಮಹದ್ವದಷ್ಟಮೇಽಹನ್ಯಷ್ಟಮಸ್ಯಾಹ್ನೋ ರೂಪಂ ತ್ವಂ ಮಹಾँ ಇಂದ್ರ ತುಭ್ಯಂ ಹ ಕ್ಷಾ ಇತಿ ಸೂಕ್ತಂ ಮಹದ್ವದಷ್ಟಮೇಽಹನ್ಯಷ್ಟಮಸ್ಯಾಹ್ನೋ ರೂಪಂ ॥**

**ಮಹಚ್ಛಬ್ದಯುಕ್ತಸೂಕ್ತಚತುಷ್ಟಯಂ ವಿಧತ್ತೇ—ಅಪೂರ್ವ್ಯೇತಿ ಸೂಕ್ತಸ್ಯ ದ್ವಿತೀಯಪಾದೇ ಮಹೇ ವೀರಾಯೇತಿ ಮಹಚ್ಛಬ್ದಃ ಶ್ರುತಃ । ಇತರಸ್ಮಿನ್ಸೂಕ್ತತ್ರಯೇ ಪ್ರಥಮಪಾದ ಏವ ಮಹಚ್ಛಬ್ದಃ ಸ್ಪಷ್ಟಃ ॥**

ಮಹಚ್ಛಬ್ದಪ್ರಯೋಗವಿರುವ ನಾಲ್ಕು ಸೂಕ್ತಗಳನ್ನು ತಿಳಿಸುವರು. **ಅಪೂರ್ವ್ಯಾ ಪುರುತಮಾನ್ಯಸ್ಮೈ** (ಋ. ಸಂ. ೬-೩೨-೧) ಎಂಬ ಸೂಕ್ತದ ಎರಡನೇ ಪಾದದಲ್ಲಿ **ಮಹೇ ವೀರಾಯ ತವಸೇ ತುರಾಯ** ಎಂದು ಮಹಚ್ಛಬ್ದಪ್ರಯೋಗ ವಿರುವುದರಿಂದ ಎಂಟನೇ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು ; **ತಾಂ ಸುತೇ ಕೀರ್ತಿಂ ಮಘವನ್ಮಹಿತ್ವಾ** (ಋ. ಸಂ. ೧೦-೫೪-೧) ಎಂಬ ಸೂಕ್ತದಲ್ಲಿ ಪ್ರಥಮಪಾದದಲ್ಲಿಯೇ ಮಹಚ್ಛಬ್ದಪ್ರಯೋಗವಿರುವುದರಿಂದ ಎಂಟನೇ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು ; **ತ್ವಂ ಮಹಾँ ಇಂದ್ರ ಯೋ ಹ ಶುಷ್ಮೈ** (ಋ. ಸಂ. ೧-೬೩-೧) ಎಂಬ ಸೂಕ್ತದ ಪ್ರಾರಂಭದಲ್ಲಿಯೇ ಮಹಚ್ಛಬ್ದಪ್ರಯೋಗವಿರುವುದರಿಂದ ಎಂಟನೇ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣ ವಿದ್ದಂತಾಯಿತು ; **ತ್ವ ಮಹಾಂ ಇಂದ್ರ ತುಭ್ಯಂ ಹ ಕ್ಷಾ** (ಋ. ಸಂ. ೪-೧೭-೧) ಎಂಬ ಸೂಕ್ತದಲ್ಲಿಯೂ ಪ್ರಾರಂಭ ದಲ್ಲಿಯೇ ಮಹಚ್ಛಬ್ದವಿರುವುದರಿಂದ ಎಂಟನೇ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

**ತದು ತ್ರೈಷ್ಟುಭಂ ತೇನ ಪ್ರತಿಷ್ಠಿತಪದೇನ ಸವನಂ ದಾಧಾರಾಽಯತನಾದೇವೈತೇನ ನ ಪ್ರಚ್ಯವತೇ ॥**

ಸೂಕ್ತಚತುಷ್ಟಯಗತಂ ಛಂದಃ ಪ್ರಶಂಸತಿ—

ಈ ಸೂಕ್ತದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಈ ಛಂದಸ್ಸಿನ ಪಾದಗಳಲ್ಲಿ ನಿರ್ದಿಷ್ಟಸಂಖ್ಯೆಯ ಅಕ್ಷರಗಳಿರುವವು. ಆದ್ದರಿಂದ ಈ ಸೂಕ್ತವನ್ನು ಪಠಿಸುವ ಯಜಮಾನನು ಅಥವಾ ಹೋತೃವು ತನ್ನ ಸ್ವಸ್ಥಾನದಿಂದ ಚ್ಯುತನಾಗುವುದಿಲ್ಲ.

**ದಿವಿಶ್ಚಿದಸ್ಯ ವರಿಮಾ ವಿಪಪ್ರಥ ಇತಿ ಸೂಕ್ತಮಿಂದ್ರಂ ನ ಮಹ್ನೇತಿ ಮಹದ್ವದಷ್ಟಮೋಽಹನ್ಯಷ್ಟಮಸ್ಯಾಹ್ನೋ ರೂಪಂ ॥**

ಯಥಾ ಮರುತ್ವತೀಯಶಸ್ತ್ರೇ ಮಹಚ್ಛಬ್ದಯುಕ್ತಂ ತ್ರಿಷ್ಟುಪ್‌ಛಂದಸ್ಕಂ ಸೂಕ್ತ-ಚತುಷ್ಟಯಮುಕ್ತ್ವಾ ಪಶ್ಚಾಜ್ಜಗತೀಛಂದಸ್ಕಂ ಮಹಚ್ಛಬ್ದಯುಕ್ತಂ ಸೂಕ್ತಾಂತರಮುಕ್ತ-ಮೇವಮತ್ರ ನಿಷ್ಕೇವಲ್ಯೇಽಪಿ ತ್ರಿಷ್ಟುಪ್‌ಛಂದಸ್ಕಂ ಸೂಕ್ತಚತುಷ್ಟಯಮಭಿಧಾಯ ಜಗತೀ-ಛಂದಸ್ಕಂ ಸೂಕ್ತಂ ವಿಧತ್ತೇ—ದಿವಶ್ಚಿದಸ್ಯೇತಿ ಸೂಕ್ತಸ್ಯೇಂದ್ರಮಿತಿ ದ್ವಿತೀಯಪಾದೇ ಮಹ್ನೇತಿ ಮಹಚ್ಛಬ್ದಃ ಶ್ರುತಃ ॥

ಹಿಂದೆ ಮರುತ್ವತೀಯಶಸ್ತ್ರಮಂತ್ರಗಳಲ್ಲಿ ಮಹಚ್ಛಬ್ದಯುಕ್ತವಾದ ತ್ರಿಷ್ಟುಪ್‌ಛಂದಸ್ಸಿನ ನಾಲ್ಕು ಸೂಕ್ತಗಳನ್ನು ಹೇಳಿದ್ದಾಯಿತು. ಅನಂತರ ಅದೇರೀತಿ ಮಹಚ್ಛಬ್ದಯುಕ್ತವಾದ ಮತ್ತು ಜಗತೀಛಂದಸ್ಕವಾದ ಸೂಕ್ತವನ್ನು ಹೇಳಿದ್ದಾಯಿತು. ಈಗ ನಿಷ್ಕೇವಲ್ಯಶಸ್ತ್ರದಲ್ಲಿ ತ್ರಿಷ್ಟುಪ್‌ಛಂದಸ್ಕವಾದ ನಾಲ್ಕು ಸೂಕ್ತಗಳನ್ನು ಹೇಳಿ ಈಗ ಜಗತೀಛಂದಸ್ಕವಾದ ಸೂಕ್ತವನ್ನು ವಿವರಿಸುವರು. **ದಿವಶ್ಚಿದಸ್ಯ ವರಿಮಾ ವಿಪಪ್ರಥ** (ಋ. ಸಂ. ೧-೫೫-೧) ಎಂಬ ಋಕ್ಕಿನ ಎರಡನೇ ಪಾದದಲ್ಲಿ **ಇಂದ್ರಂ ನ ಮಹ್ನೇತಿ** ಎಂದು ಮಹಚ್ಛಬ್ದಪ್ರಯೋಗವಿರುವುದು. ಆದ್ದರಿಂದ ಎಂಟನೆಯ ದಿವಸದ ಮಂತ್ರದಲ್ಲಿರಬೇಕಾದ ಲಕ್ಷಣ ವಿದ್ದಂತಾಯಿತು.

**ತದು ಜಾಗತಂ ಜಗತ್ಯೋವಾ ಏತಸ್ಯ ತ್ರ್ಯಹಸ್ಯ ಮಧ್ಯಂದಿನಂ ವಹಂತಿ ತದ್ವೈತಚ್ಛಂದೋ ವಹತಿ ಯಸ್ಮಿನ್ನಿವಿದ್ಧೀಯತೇ ತಸ್ಮಾಜ್ಜಗತೀಷು ನಿವಿದಂ ದಧಾತಿ ॥**

ತಸ್ಮಿನ್ಸೂಕ್ತೇ ನಿವಿದ್ಧಾನಂ ವಿಧತ್ತೇ—

ಈ ಸೂಕ್ತದ ಛಂದಸ್ಸುಗಳು ಜಗತೀಛಂದಸ್ಕವು. ಈ ಜಗತೀಛಂದಸ್ಸಿನ ಋಕ್ಕುಗಳು ಕೊನೆಯ ತ್ರ್ಯಹದ ಕಾರ್ಯ ಕಲಾಪಗಳನ್ನು ನಿರ್ವಹಿಸುವವು. ಆದ್ದರಿಂದ ಜಗತೀಛಂದಸ್ಸಿನ ಈ ಸೂಕ್ತದಲ್ಲಿ ನಿವಿನ್ಮಂತ್ರಗಳನ್ನು ಸೇರಿಸುವರು.

**ಮಿಥುನಾನಿ ಸೂಕ್ತಾನಿ ಶಸ್ಯಂತೇ ತ್ರೈಷ್ಟುಭಾನಿ ಚ ಜಾಗತಾನಿ ಚ ಮಿಥುನಂ ವೈ ಪಶವಃ ಪಶವಶ್ಛಂದೋಮಾಃ ಪಶೂನಾಮವ-ರುದ್ಧ್ಯೈ ॥**

ಛಂದೋದ್ವಯಂ ಮಿಲಿತ್ವಾ ಪ್ರಶಂಸತಿ—

ಮೇಲೆ ಹೇಳಿದ ಸೂಕ್ತಗಳಲ್ಲಿ ಒಂದರಲ್ಲಿ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳೂ ಇನ್ನೊಂದರಲ್ಲಿ ಜಗತೀಛಂದಸ್ಸಿನ ಋಕ್ಕುಗಳೂ ಇರುವವು. ಇವೆರಡೂ ಸೇರಿದರೆ (ಇವೆರಡನ್ನೂ ಪಠಿಸಿದರೆ) ಮಿಥುನವುಂಟಾಗುವುದು; ಪಶುಗಳು ಮಿಥುನ ಸ್ವರೂಪವು ಪಶುಗಳು ಛಂದೋಮಾ ಎಂಬ ಸ್ತೋಮಗಳ ಸ್ವರೂಪವು. ಇವುಗಳನ್ನು ಪಠಿಸುವುದರಿಂದ ಪಶುಸಂಪತ್ತು ಲಭಿಸುವುದು.

**ಮಹದ್ವಂತಿ ಸೂಕ್ತಾನಿ ಶಸ್ಯಂತೇ ಮಹದ್ವಾ ಅಂತರಿಕ್ಷಮಂತರಿಕ್ಷಸ್ಯಾಪ್ತ್ಯೈ ಪಂಚ ಪಂಚ ಸೂಕ್ತಾನಿ ಶಸ್ಯಂತೇ ಪಂಚಪದಾ ಪಂಕ್ತಿಃ ಪಾಂಕ್ತೋ ಯಜ್ಞಃ ಪಾಂಕ್ತಾಃ ಪಶವಃ ಪಶವಶ್ಛಂದೋಮಾಃ ಪಶೂನಾಮವರುದ್ಧ್ಯೈ ॥**

**ಸೂಕ್ತೇಷು ಮಹಚ್ಛಬ್ದಂ ಪಂಚಸಂಖ್ಯಾಂ ಚ ಪೂರ್ವವತ್ಪ್ರಶಂಸತಿ—**

ಈಗ ಮಹಚ್ಛಬ್ದಪ್ರಯೋಗವಿರುವ ಐದು ಸೂಕ್ತಗಳನ್ನು ಪಠಿಸುವರು. ಅಂತರಿಕ್ಷವು ದೊಡ್ಡದಾಗಿರುವುದು ಅಥವಾ ವಿಸ್ತಾರವಾಗಿರುವುದು. ಇಂತಹ ವಿಸ್ತಾರವಾದ ಅಂತರಿಕ್ಷಲೋಕಪ್ರಾಪ್ತಿಗಾಗಿ ಮಹಚ್ಛಬ್ದಯುಕ್ತವಾದ ಐದು ಸೂಕ್ತಗಳನ್ನು ಪಠಿಸುವರು. ಪಂಕ್ತಿಶ್ಛಂದಸ್ಸಿನ ಋಕ್ಕುಗಳಲ್ಲಿ ಐದೈದು ಪಾದಗಳಿರುವವು; ಯಜ್ಞದಲ್ಲಿಯೂ ಹವಿರ್ದ್ರವ್ಯಗಳ ಐದು ಸಾಲುಗಳಿರುವವು. ನಾಲ್ಕುಪಾದಗಳು ಮತ್ತು ಮುಖವೂ ಸೇರಿ ಪಶುಗಳಿಗೂ ಐದು ಮುಖ್ಯಾವಯವಗಳಿರುವವು; ಛಂದೋಮಾಃ ಎಂಬ ಸ್ತೋಮಗಳೂ ಪಶುಗಳ ಸ್ವರೂಪವಾಗಿರುವವು. ಆದ್ದರಿಂದ ಈ ಪಂಚಸೂಕ್ತಗಳನ್ನು ಪಠಿಸಿದರೆ ಪಶುಪ್ರಾಪ್ತಿಯಾಗುವುದು.

**ತಾನಿ ದ್ವೇಧಾ ಪಂಚಾನ್ಯಾನಿ ಪಂಚಾನ್ಯಾನಿ ದಶ ಸಂಪದ್ಯಂತೇ ಸಾ ದಶಿನೀ ವಿರಾಳನ್ನಂ ವಿರಾಳನ್ನಂ ಪಶವಃ ಪಶವಶ್ಛಂದೋಮಾಃ ಪಶೂನಾಮವರುದ್ಧ್ಯೈ ॥**

**ಶಸ್ತ್ರದ್ವಯಗತಾನಿ ಮಹಚ್ಛಬ್ದಯುಕ್ತಾನಿ ಮಿಲಿತ್ವಾ ಪ್ರಶಂಸತಿ— ಪೂರ್ವೋಕ್ತಾನಿ ಮಹಚ್ಛಬ್ದಯುಕ್ತಾನಿ ಸರ್ವಾಣಿ ಸೂಕ್ತಾನಿ ದ್ವೇಧಾ ವಿಭಕ್ತಾನಿ । ಕಥಮಿತಿ ತದುಚ್ಯತೇ । ಪಂಚಾನ್ಯಾನಿ ಮರುತ್ವತೀಯ ಶಸ್ತ್ರಗತಾನಿ ಪಂಚಸಂಖ್ಯಾಕಾನಿ ಪೃಥಗೇವಾವಸ್ಥಿತಾನಿ ಪುನರಪಿ ಪಂಚಾನ್ಯಾನಿ ನಿಷ್ಕೇವಲ್ಯಶಸ್ತ್ರಗತಾನಿ ಪಂಚಸಂಖ್ಯಾಕಾನಿ ಪೃಥಗೇವಾವಸ್ಥಿತಾನಿ ತಾನಿ ಸರ್ವಾಣಿ ಮಿಲಿತ್ವಾ ದಶಸಂಖ್ಯಾಕಾನಿ ಸಂಪದ್ಯಂತೇ । ಸಾ ದಶಿನೀ ದಶಸಂಖ್ಯಾಸಮೂಹರೂಪಾ ವಿರಾಡ್‌ಭವತಿ । ದಶಾಕ್ಷರಾ ವಿರಾಳಿತಿ ಶ್ರುತೇಃ । ಅನ್ನಸಾಧನತ್ವಾದ್ವಿರಾಟ್‌ಛಂದೋಽನ್ನಂ ॥ ತಚ್ಚಾನ್ನಂ ಕ್ಷೀರಾದಿರೂಪಂ ಪಶುಷೂತ್ಪನ್ನತ್ವಾತ್ಪಶವ ಏವ । ತೇ ಚ ಪಶವಶ್ಛಂದೋಮೈಶ್ಚತುರ್ವಿಂಶಾದಿಭಿಃ ಸ್ತೋಮೈಸ್ತದ್ಯುಕ್ತೈರಹೋಭಿರ್ವಾ ಸಂಪಾದ್ಯತ್ವಾಚ್ಛಂದೋಮಸ್ವರೂಪಾಃ । ಅನೇನ ಸಂಬಂಧೇನ ತತ್ಪಂಚಕದ್ವಯಂ ಪಶುಪ್ರಾಪ್ತ್ಯೈ ಭವತಿ ॥**

ಮರುತ್ವತೀಯ ಮತ್ತು ನಿಷ್ಕೇವಲ್ಯಶಸ್ತ್ರಗಳಲ್ಲಿರುವ ಮಹಚ್ಛಬ್ದಯುಕ್ತವಾದ ಹತ್ತು ಸೂಕ್ತಗಳನ್ನು ಸೇರಿಸಿ ಪ್ರಶಂಸೆ ಮಾಡುವರು–ಮಹಚ್ಛಬ್ಧಯುಕ್ತವಾದ ಮರುತ್ವತೀಯ ಮತ್ತು ನಿಷ್ಕೇವಲ್ಯಶಸ್ತ್ರಗಳಲ್ಲಿರುವ ಹತ್ತು ಸೂಕ್ತಗಳನ್ನು ಎರಡು ವಿಭಾಗ

ಮಾಡುವರು. ಒಂದೊಂದುಭಾಗದಲ್ಲಿ ಐದೈದು ಸೂಕ್ತಗಳಿರುವವು. ಮರುತ್ವತೀಯಶಸ್ತ್ರದಲ್ಲಿರುವ ಐದು ಸೂಕ್ತಗಳು, ನಿಷ್ಕೇವಲ್ಯಶಸ್ತ್ರದಲ್ಲಿರುವ ಐದು ಸೂಕ್ತಗಳು ಇವೆಲ್ಲವನ್ನೂ ಸೇರಿಸಿದರೆ ಒಟ್ಟು ಹತ್ತು ಸೂಕ್ತಗಳಾಗುವವು. ಈ ಹತ್ತು ಸಂಖ್ಯೆಯಂತೆ ವಿರಾಟ್‌ಛಂದಸ್ಸಿನ ಅಕ್ಷರಸಂಖ್ಯೆಯಿರುವುದರಿಂದ ಇವೆರಡಕ್ಕೂ ಸಾದೃಶ್ಯವಿರುವುದು. ವಿರಾಟ್‌ಛಂದಸ್ಸಿಗೆ ಅನ್ನವನ್ನು ಹೊಂದಿಸುವ ಸಾಮರ್ಥ್ಯವಿರುವುದು. ಈ ಅನ್ನವು ಆಹಾರರೂಪ ಎಂದರೆ ಕ್ಷೀರಾದಿರೂಪವಾಗಿರುವುದರಿಂದ ಈ ಕ್ಷೀರಾದಿಗಳು ಪಶುಗಳಿಂದ ಲಭಿಸುವವು. ಈ ಪಶುಗಳೂ ಸಹ ಚತುರ್ವಿಂಶ ಮೊದಲಾದ ಸ್ತೋಮರೂಪವಾಗಿರುವವು. ಈರೀತಿಯಾಗಿ ಪಶುಗಳಿಗೂ ಛಂದೋಮಾ ಎಂಬ ಸ್ತೋಮಗಳಿಗೂ ಸಂಬಂಧವಿರುವುದರಿಂದ ಈ ಸೂಕ್ತಪಠನದಿಂದ ಪಶುಪ್ರಾಪ್ತಿಯುಂಟಾಗುವುದು.

**ವಿಶ್ವೋ ದೇವಸ್ಯ ನೇತುಸ್ತತ್ಸವಿತುರ್ವರೇಣ್ಯಮಾ ವಿಶ್ವದೇವಂ ಸತ್ಪತಿಮಿತಿ ವೈಶ್ವದೇವಸ್ಯ ಪ್ರತಿಪದನುಚರಾ ಬಾರ್ಹತೇಽಹನ್ಯಷ್ಟಮೇಽಹನ್ಯಷ್ಟಮಸ್ಯಾಹ್ನೋ ರೂಪಂ**

**ಶಸ್ತ್ರಾಂತರಸ್ಯ ಪ್ರತಿಪದನುಚರಾ ವಿಧತ್ತೇ– ವಿಶ್ವೋ ದೇವಸ್ಯೇತ್ಯೇಕಾ ತತ್ಸವಿತುರ್ವರೇಣ್ಯಮಿತಿ ದ್ವೇ । ಏತತ್ತ್ರಯಂ ಬೃಹತ್ಸಾಮಸಂಬಂಧೀ ತ್ರ್ಯೃಚಃ ಶಸ್ತ್ರಸ್ಯ ಪ್ರತಿಪತ್ ಆ ವಿಶ್ವದೇವಮಿತಿ ತ್ರ್ಯೃಚೋಽನುಚರಃ । ತದುಭಯಂ ಬೃಹತ್ಸಾಮ ಸಂಬಂಧಾದ್ಬಾರ್ಹತಂ ಯುಗ್ಮತ್ವೇನ ಬೃಹತ್ಸಾಮಸಂಧಿನ್ಯಷ್ಟಮೇಽಹನಿಯೋಗ್ಯಂ ॥**

ಈ ಬೇರೆ ಒಂದು ಶಸ್ತ್ರದ (ವೈಶ್ವದೇವಶಸ್ತ್ರ) ಪ್ರತಿಪತ್ (ಮೊದಲನೇ) ಅನುಚರ (ಎರಡನೇ) ಋಕ್ಕುಗಳನ್ನು ತಿಳಿಸುವರು. **ವಿಶ್ವೋ ದೇವಸ್ಯ ನೇತುಃ** (ಋ. ಸಂ. ೫-೫೦-೧) ಎಂಬ ಋಕ್ಕು ಒಂದು; **ತತ್ಸವಿತುರ್ವರೇಣ್ಯಂ** (ಋ. ಸಂ. ೨-೬೨-೧೦) ಎಂದು ಮೊದಲಾಗುವ ಎರಡು ಋಕ್ಕುಗಳು, ಈ ಮೂರು ಋಕ್ಕುಗಳೂ ಸೇರಿ ವೈಶ್ವದೇವಶಸ್ತ್ರದ ಪ್ರತಿಪತ್ (ಮೊದಲನೇ) ತೃಚವು; ಇದು ಬೃಹತ್ಸಾಮಸಂಬಂಧವಾದ ತೃಚವು; **ಆ ವಿಶ್ವದೇವಂ ಸತ್ಪತಿಂ** (ಋ. ಸಂ. ೫-೮೨-೭) ಎಂದು ಮೊದಲಾಗುವ ಮೂರು ಋಕ್ಕುಗಳು ಅನುಚರತೃಚವು. ಈ ಎರಡು ತೃಚಗಳೂ ಬೃಹತ್ಸಾಮಸಂಬಂಧವುಳ್ಳವು. ಇವಕ್ಕೆ ಬಾರ್ಹತತೃಚಗಳೆಂದು ಹೆಸರು. ಇವುಗಳು ಯುಗ್ಮದಿನವಾದ ಎಂಟನೆಯ ದಿನದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳು.

**ಹಿರಣ್ಯಪಾಣಿಮೂತಯ ಇತಿ ಸಾವಿತ್ರಮೂರ್ಧ್ವವದಷ್ಟಮೇಽಹನ್ಯಷ್ಟಮಸ್ಯಾಹ್ನೋ ರೂಪಂ ॥**

**ಊರ್ಧ್ವಲಿಂಗೋಪೇತಂ ಸವಿತೃದೇವತಾಕಂ ಸೂಕ್ತಸ್ಥಾನೀಯಂ ಚತುರ್ಋಚಂ ವಿಧತ್ತೇ— ದ್ವಿತೀಯಪಾದೇ ಸವಿತಾರಮುಪಹ್ವಯ ಇತಿ ಶ್ರವಣಾತ್ಸವಿತೃದೇವತಾಕಂ ಸೂಕ್ತಂ । ಊರ್ಧ್ವಶಬ್ದಸ್ಯಾಶ್ರವಣೇಽಪಿ ಸವಿತೃಮಂಡಲಸ್ಯೋಪರಿದೇಶವರ್ತಿತ್ವಾದರ್ಥತ ಊರ್ಧ್ವವತ್ತ್ವಂ॥**

ಊರ್ಧ್ವಶಬ್ದಲಕ್ಷಣವಿರುವುದೂ ಸವಿತೃದೇವತಾಕವೂ ಆದ, ಸೂಕ್ತವೆಂದು ಹೇಳಲ್ಪಡುವುದೂ ಆದ ನಾಲ್ಕು ಋಕ್ಕುಗಳನ್ನು ತಿಳಿಸುವರು. **ಹಿರಣ್ಯಪಾಣಿಮೂತಯೇ** (ಋ. ಸಂ. ೧-೨೨-೫) ಎಂಬ ಋಕ್ಕು ಸವಿತೃದೇವತಾಕವು. ಇದರಲ್ಲಿ ಊರ್ಧ್ವಶಬ್ದಪ್ರಯೋಗವಿರುವುದರಿಂದ ಎಂಟನೇ ದಿವಸದ ಮಂತ್ರಗಳಲ್ಲಿ ಪಠಿಸಬೇಕಾದ ಮಂತ್ರಗಳ ಲಕ್ಷಣವಿದ್ದಂತಾಯಿತು.

ಮಹೀ ದ್ಯೌಃ ಪೃಥಿವೀ ಚ ನ ಇತಿ ದ್ಯಾವಾಪೃಥಿವೀಯಂ ಮಹದ್ವದಷ್ಟ-
ಮೇಽಹನ್ಯಷ್ಟಮಸ್ಯಾಹ್ನೋ ರೂಪಂ ॥

**ಮಹಚ್ಛಬ್ದೋಪೇತಂ ಸೂಕ್ತಸ್ಥಾನೀಯಂ ತ್ರ್ಯೃಚಂ ವಿಧತ್ತೇ— ಮಹೀತ್ಯೇಷ ಏವ ಮಹಚ್ಛಬ್ದಃ ॥**

ಮಹಚ್ಛಬ್ದವಿರುವ ಒಂದು ತೃಚ (ಮೂರು ಋಕ್ಕುಗಳನ್ನು) ವನ್ನು ತಿಳಿಸುವರು. **ಮಹೀ ದ್ಯೌಃ ಪೃಥಿವೀ ಚ ನಃ** (ಋ. ಸಂ. ೧-೨೨-೧೩) ಎಂಬ ಋಕ್ಕು ದ್ಯಾವಾಪೃಥಿವೀದೇವತಾಕವು. ಇದರಲ್ಲಿ ಮಹಚ್ಛಬ್ದವಿರುವುದರಿಂದ ಎಂಟನೆಯ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

ಯುವಾನಾ ಪಿತರಾ ಪುನರಿತ್ಯಾರ್ಭವಂ ಪುನರ್ವದಷ್ಟಮೇಽಹನ್ಯಷ್ಟಮ-
ಸ್ಯಾಹ್ನೋ ರೂಪಂ ॥

**ಪುನಃ ಶಬ್ದೋಪೇತಂ ಸೂಕ್ತಸ್ಥಾನೀಯಂ ತ್ರ್ಯೃಚಂ ವಿಧತ್ತೇ—ತೃತೀಯಪಾದ ಋಭವೋ ವಿಷ್ಟ್ಯಕ್ರತೇತಿ ಶ್ರವಣಾದೃಭುದೇವತಾಕಂ ಸೂಕ್ತಂ ॥**

**ಯುವಾನಾ ಪಿತರಾ ಪುನಃ** (ಋ. ಸಂ. ೧-೨೦-೪) ಎಂಬ ಋಕ್ಕಿನ ಮೂರನೇ ಪಾದದಲ್ಲಿ **ಋಭವೋ ವಿಷ್ಟ್ಯಕ್ರತ** ಎಂದಿರುವುದರಿಂದ ಈ ಸೂಕ್ತವು ಋಭುದೇವತಾಕವು. ಈ ಋಕ್ಕಿನಲ್ಲಿ ಪುನಃ ಎಂಬ ಶಬ್ದವಿರುವುದರಿಂದ ಎಂಟನೆಯ ದಿನದ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

ಇಮಾನು ಕಂ ಭುವನಾ ಸೀಷಧಾಮೇತಿ ದ್ವಿಪದಾಃ ಶಂಸತಿ ದ್ವಿಪಾದ್ವೈ-
ಪುರುಷಶ್ಚತುಷ್ಪಾದಾಃ ಪಶವಃ ಪಶವಶ್ಛಂದೋಮಾಃ ಪಶೂನಾಮ-
ವರುದ್ಧ್ಯೈತದ್ಯದ್ದ್ವಿಪದಾಃ ಶಂಸತಿ ಯಜಮಾನಮೇವ ತದ್ದ್ವಿ-
ಪ್ರತಿಷ್ಠಂ ಚತುಷ್ಪಾತ್ಸು ಪಶುಷು ಪ್ರತಿಷ್ಠಾಪಯತಿ ॥

**ದ್ವಿಪದಾ ಋಚೋ ವಿಧಾಯ ಪ್ರಶಂಸತಿ—**

**ಇಮಾ ನು ಕಂ ಭುವನಾ ಸೀಷಧೇಮ** (ಋ. ಸಂ. ಎಂಬ ಸೂಕ್ತವು ದ್ವಿಪದಾ (ಎರಡು ಪಾದಗಳಿರುವ) ಎಂಬ ಛಂದಸ್ಸಿನದು. ಈ ಸೂಕ್ತವನ್ನು ಪಠಿಸುವರು. ಪುರುಷನಿಗೆ ಎರಡು ಪಾದಗಳಿರುವವು. ಪಶುಗಳಿಗೆ ನಾಲ್ಕು ಪಾದಗಳಿರುವವು. ಪಶುಗಳು ಛಂದೋಮಾ ಎಂಬ ಸ್ತೋಮಗಳ ಸ್ವರೂಪವು. ಈ ದ್ವಿಪದಾ ಋಕ್ಕುಗಳ ಸೂಕ್ತವನ್ನು ಪಠಿಸುವುದರಿಂದ ಎರಡು ಪಾದಗಳಿರುವ ಯಜಮಾನನಿಗೆ ನಾಲ್ಕುಪಾದಗಳಿರುವ ಪಶುಗಳು ಲಭಿಸುವವು.

ದೇವಾನಾಮಿದವೋ ಮಹದಿತಿ ವೈಶ್ವದೇವಂ ಮಹದ್ವದಷ್ಟಮೇಽಹನ್ಯ-
ಷ್ಟಮಸ್ಯಾಹ್ನೋ ರೂಪಂ ॥

ಮಹಚ್ಛಬ್ದೋಪೇತಂ ಬಹುದೇವತಾಕಂ ಸೂಕ್ತಂ ವಿಧತ್ತೇ—ಮಹಚ್ಛಬ್ದೋಽತ್ರ ವಿಸ್ಪಷ್ಟಃ ॥

ಮಹಚ್ಛಬ್ದಯುಕ್ತವೂ ಬಹುದೇವತಾಕವೂ ಆದ ಒಂದು ಸೂಕ್ತವನ್ನು ವಿವರಿಸುವರು. **ದೇವಾನಾಮಿದವೋ ಮಹತ್** (ಋ. ಸಂ. ೮-೮೪-೧) ಎಂಬ ಸೂಕ್ತವು ಬಹುದೇವತಾಕವು. ಇದರಲ್ಲಿ ಮಹಚ್ಛಬ್ದವಿರುವುದರಿಂದ ಇದರಲ್ಲಿ ಎಂಟನೇ ದಿವಸದ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

## ತಾನ್ಯ ಗಾಯತ್ರಾಣಿ ಗಾಯತ್ರತೃತೀಯಸವನ ಏಷ ತ್ರ್ಯಹಃ ॥

ದ್ವಿಪದಾವ್ಯತಿರಿಕ್ತಾನಾಂ ತತ್ಸವಿತುರ್ವರೇಣ್ಯಮಿತ್ಯಾರಭ್ಯ ದೇವಾನಾಮಿದವೋ ಮಹ-ದಿತ್ಯಂತಾನಾಂ ಛಂದಃ ಪ್ರಶಂಸತಿ—

ದ್ವಿಪದಾ ಎಂಬ ಛಂದಸ್ಸುಗಳಿಲ್ಲದಿರು ತತ್ಸವಿತುರ್ವರೇಣ್ಯಂ ಎಂಬ ಸೂಕ್ತದಿಂದ ಪ್ರಾರಂಭಿಸಿ **ದೇವಾನಾಮಿ-ದವೋ ಮಹತ್** ಎನ್ನುವವರೆಗೆ ಇರುವ ಸೂಕ್ತಗಳ ಛಂದಸ್ಸನ್ನು ಪ್ರಶಂಸೆಮಾಡುವರು. ಈ ಸೂಕ್ತಗಳಲ್ಲಿರುವ ಋಕು ಗಳೆಲ್ಲವೂ ಗಾಯತ್ರಿಛಂದಸ್ಕವು. ಈ ಗಾಯತ್ರೀಛಂದಸ್ಸಿನ ಋಕ್ಕುಗಳು ಈ ಕೊನೆಯ ತ್ರ್ಯಹದ ತೃತೀಯಸವನದ ಕಾರ್ಯ ಕಲಾಪಗಳನ್ನು ನಿರ್ವಹಿಸುವವು.

## ಋತಾವಾನಂ ವೈಶ್ವಾನರಮಿತ್ಯಾಗ್ನಿಮಾರುತಸ್ಯ ಪ್ರತಿಪದಗ್ನಿರ್ವೈಶ್ವಾ-ನರೋ ಮಹಾನಿತಿ ಮಹದ್ವದಷ್ಟಮೇಽಹನ್ಯಷ್ಟಮಸ್ಯಾಹ್ನೋ ರೂಪಂ ॥

ಶಸ್ತ್ರಾಂತರಸ್ಯ ಪ್ರತಿಪದಂ ವಿಧತ್ತೇ- ಋತಾವಾನಮಿತ್ಯಾದಿಕೇ ಸೂಕ್ತಗತೇ ತ್ರ್ಯೃಚೇ ದ್ವಿತೀಯಸ್ಯಾಮೃಚ್ಯಗ್ನಿರ್ವೈಶ್ವಾನರ ಇತಿ ದ್ವಿತೀಯಃ ಪಾದಸ್ತತ್ರ ಮಹಾನಿತಿ ಮಹಚ್ಛಬ್ದಃ ಶ್ರೂಯತೇ ॥

ಮುಂದಿನ ಬೇರೆ ಶಸ್ತ್ರಮಂತ್ರದ ಪ್ರತಿಪತ್ ಋಕ್ಕನ್ನು ತಿಳಿಸುವರು. **ಋತಾವಾನಂ ವೈಶ್ವಾನರಂ** (ಋ. ಸಂ. ೨-೨೩-೯) ಎಂಬ ಋಕ್ಕು ಆಗ್ನಿಮಾರುತಶಸ್ತ್ರದ ಪ್ರತಿಪತ್ ಎಂಬ ಋಕ್ಕು ಈ ಸೂಕ್ತದ ತೃಚದಲ್ಲಿರುವ ಎರಡನೇ ಋಕ್ಕಿನ ಎರಡನೇ ಪಾದದಲ್ಲಿ ಮಹಾನ್ ಎಂದು ಮಹಚ್ಛಬ್ದವಿರುವುದರಿಂದ ಇಲ್ಲಿ ಎಂಟನೇ ದಿವಸದ ಮಂತ್ರದಲ್ಲಿರಬೇಕಾದ ಲಕ್ಷಣ ವಿದ್ದಂತಾಯಿತು.

## ಕ್ರೀಳಂ ವಃ ಶರ್ಧೋ ಮಾರುತಮಿತಿ ಮಾರುತಂ ಜಂಭೇ ರಸಸ್ಯ ವಾವೃಧ ಇತಿ ವೃಧನ್ವದಷ್ಟಮೇಽಹನ್ಯಷ್ಟಮಸ್ಯಾಹ್ನೋ ರೂಪಂ ॥

ವೃಧಶಬ್ದೋಪೇತಂ ಸೂಕ್ತಂ ವಿಧತ್ತೇ- ಕ್ರೀಳಂ ವ ಇತಿ ಸೂಕ್ತಸ್ಯ ಪಂಚಮ್ಯಾಮೃಚಿ ಜಂಭೇ ರಸಸ್ಯೇತಿ ಪಾದಃ ಶ್ರೂಯತೇ । ತತ್ರ ವಾವೃಧ ಇತಿ ವೃಧಿಧಾತುಮತ್ತ್ವಮ್ ॥

ವೃಧಶಬ್ದವಿರುವ ಸೂಕ್ತವನ್ನು ವಿವರಿಸುವರು. ಕ್ರೀಳಂ ವಃ ಶರ್ಧೋ ಮಾರುತಂ (ಋ. ಸಂ. ೧೩೭-೧) ಎಂಬ ಸೂಕ್ತದ ಐದನೇ ಋಕ್ಕಿನಲ್ಲಿ ಜಂಭೇ ರಸಸ್ಯ ವಾವೃಧೇ ಎಂದು ಪಾದವಿರುವುದು. ಈ ಪಾದದಲ್ಲಿ ವಾವೃಧೇ ಎಂದು ವೃಧಿ ಧಾತುವಿನ ರೂಪವು ಇರುವುದರಿಂದ ಎಂಟನೇ ದಿವಸದ ಮಂತ್ರದಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

## ಜಾತವೇದಸೇ ಸುನವಾಮ ಸೋಮಮಿತಿ ಜಾತವೇದಸ್ಯಾಽಚ್ಯುತಾ ॥

**ಅಚ್ಯುತತ್ವಲಿಂಗಾಮೃಚಂ ವಿಧತ್ತೇ** –

ಅಚ್ಯುತತ್ವಲಕ್ಷಣವಿರುವ ಋಕ್ಕನ್ನು ವಿವರಿಸುವರು. ಜಾತವೇದಸೇ ಸುನವಾಮ ಸೋಮಂ (ಋ. ಸಂ. ೧-೯೯-೧) ಎಂಬ ಋಕ್ಕು ಜಾತವೇದೋದೇವತಾಕವು. ಇದರಲ್ಲಿ ಅಚ್ಯುತತ್ವಲಕ್ಷಣವಿರುವುದರಿಂದ ಎಂಟನೇ ದಿನದ ಮಂತ್ರದಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

## ಅಗ್ನೇ ಮೃಳ ಮಹಾ ಅಸೀತಿ ಜಾತವೇದಸ್ಯಂ ಮಹದ್ವದಷ್ಟಮೇಽಹನ್ಯ-ಷ್ಟಮಸ್ಯಾಹ್ನೋ ರೂಪಂ ॥

**ಮಹಚ್ಛಬ್ದಯುಕ್ತಂ ಜಾತವೇದೋ ದೇವತಾಕಂ ಸೂಕ್ತಂ ವಿಧತ್ತೇ**—

ಮಹಚ್ಛಬ್ದಯುಕ್ತವಾದ ಜಾತವೇದೋಸೂಕ್ತವನ್ನು ವಿವರಿಸುವರು. ಅಗ್ನೇ ಮೃಳ ಮಹಾ ಅಸಿ (ಋ. ಸಂ. ೪-೯-೧) ಎಂಬ ಸೂಕ್ತವು ಜಾತವೇದೋದೇವತಾಕವು. ಇದರಲ್ಲಿ ಮಹಚ್ಛಬ್ದವಿರುವುದರಿಂದ ಎಂಟನೇ ದಿನದಲ್ಲಿ ಪಠಿಸುವ ಮಂತ್ರದ ಲಕ್ಷಣವಿದ್ದಂತಾಯಿತು.

## ತಾನ್ಯ ಗಾಯತ್ರಾಣಿ ಗಾಯತ್ರತೃತೀಯಸವನ ನಿಷತ್ರ್ಯಹ ನಿಷತ್ರ್ಯಹಃ ॥

**ಆಗ್ನಿಮಾರುತಶಸ್ತ್ರಗತೇಷು ಸೂಕ್ತೇಷು ಛಂದಃ ಪ್ರಶಂಸತಿ– ಅಭ್ಯಾಸೋಽಧ್ಯಾಯ ಸಮಾಪ್ತ್ಯರ್ಥಃ ॥**

ಆಗ್ನಿಮಾರುತಶಸ್ತ್ರದಲ್ಲಿರುವ ಈ ಸೂಕ್ತದ ಛಂದಸ್ಸನ್ನು ಪ್ರಶಂಸೆಮಾಡುವರು. ಮೇಲೆ ಹೇಳಿದ **ಅಗ್ನೇಮೃಳ ಮಹಾ** ಅಸಿ ಎಂಬ ಸೂಕ್ತವು ಗಾಯತ್ರೀಛಂದಸ್ಕವು. ಈ ತ್ರ್ಯಹದ (ಎಂದರೆ ಕೊನೆಯ ಮೂರು ದಿವಸಗಳ) ಪ್ರಾತಸ್ಸವನ ಕಾರ್ಯಕಲಾಪಗಳನ್ನು ಈ ಗಾಯತ್ರೀಛಂದಸ್ಸಿನ ಮಂತ್ರಗಳೇ ನಿರ್ವಹಿಸುವವು.

*English Translation*

**(The Mahadvat hymns of the Nishkelya Shastra. The shastras of the evening libation).**

The five Mahadvat hymns are, apurvya purutamani (6, 32), tam su te kirtim (10, 54), tvam mahan Indra yo ga (1, 63), tvam mahan indra tubhyam (4, 17). These four hymns are in the Trishtubh metre; by means of its padas

which remain firm, the Hotar keeps the libation in its proper place, preventing it from falling down. The fifth is in the Jagati metre, viz, divaschid asya varima (1, 55), which contains in the words, indram na mahna the term mahat great. For obtaining cattle these Mahadvat hymns are repeated. The air is mahat, and for obtaining the airy region two times five hymns must be repeated. Because a Pankti (a collection of five hymns) has five feet, the Yajna consists of five parts. Twice five makes ten; this decade is virat, virat is food, cattle are food the Chandomas are cattle.

Visvo devasya netus (50, 50, 1) tat savitar varenyam a visvedevam sapatim (5, 82, 7-8) are the beginning and sequel of the Vaisvadeva Shastra. Hiranya-panim utaye (1, 22, 5-7) which contains the word urdhva, is the Nivid hymn for Savitar. Mahi dyauh prithvi chana (1, 22,–15) is the Nivid hymn for Dyava-prithvi which contains the word mahat. Yuvana pitara punar (1, 20, 4–8) is the Nivid hymn for the Ribhus, which has the characteristic word "punah".

Ima nu kam bhuvana (10, 157) is the hymn which contains only verses of two feet. For man has two feet, whilst the animals have four, and by means of this hymn he places the two-footed sacrificer among the four-footed cattle, Devanam id avo mahad (8, 72, 1) is the Nivid hymn for the Visvedevas, which contains the term mahat. These verses are in the Gayatri metre (except the Dvipadas), because the Gayatri is the leading metre at the evening libation during these three last days.

By ritavanam vaisvanarm (Asv. Sr. S. 8. 10), commences the Agnimaruta Shastra; because in words agnir vaisvanaro mahon, there is the Nivid hymn for the Marutas; because it contains in the fifth verse the word Vavridhe, which is a characteristic of the eighth day.

Jatavedase sunavama is the invariable Jatavedas verse. Agne mrila mahan asi (4, 9) is the Nivid hymn for Jatavedas; it contains the characteristics term mahad. All these verses are in the Gayatri metre, which is the leading metre at the evening libation during these three last days.

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ತ್ರಯೋವಿಂಶಾಧ್ಯಾಯೇ ಚತುರ್ಥಃ ಖಂಡಃ ಸಮಾಪ್ತಃ

ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತಮೂರನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವಾದುದು.

ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.

# ಅಥೈತರೇಯಬ್ರಾಹ್ಮಣೇ ಚತುರ್ವಿಂಶಾಧ್ಯಾಯೇ ಪ್ರಥಮಃ ಖಂಡಃ

## ಇಪ್ಪತ್ತನಾಲ್ಕನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು



[ದ್ವಾದಶಾಹಯಾಗದ ಒಂಭತ್ತು ಮತ್ತು ಹತ್ತನೆಯ ದಿನಗಳ ಕಾರ್ಯಕಲಾಪಗಳು, ಈ ಯಾಗದ ಪರಿಸಮಾಪ್ತಿಯು]

[ದ್ವಾದಶಾಹದ ಒಂಭತ್ತನೆಯ ದಿನದ ಕಾರ್ಯಕಲಾಪಗಳು; ಪ್ರಾತಸ್ಸವನ ಮತ್ತು ಮಾಧ್ಯಂದಿನ ಸವನಗಳಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳು]



**ಯದ್ವೈ ಸಮಾನೋದರ್ಕಂ ತನ್ನವಮಸ್ಯಾಹ್ನೋ ರೂಪಂ ॥**

**ನವಮೇಽಹನಿ ಮಂತ್ರಲಿಂಗಂ ದರ್ಶಯತಿ—ಸಮಾನೋದರ್ಕಂ ತುಲ್ಯಸಮಾಪ್ತಿಕಂ ॥**

ಒಂಭತ್ತನೇ ದಿನದ ಲಕ್ಷಣವನ್ನು ತಿಳಿಸುವರು. ಇಲ್ಲಿ **ಸಮಾನೋದರ್ಕಂ** ಎಂದರೆ ಒಂದೇವಿಧವಾದ ಪರಿಸಮಾಪ್ತಿಯು. ಮಂತ್ರಗಳ ಪರಿಸಮಾಪ್ತಿಯು ಒಂದೇವಿಧವಾಗಿದ್ದರೆ ಅದೇ ಒಂಭತ್ತನೇ ದಿವಸದಲ್ಲಿರಬೇಕಾದ ಲಕ್ಷಣವು.

**ಯದ್ಧ್ಯೇವ ತೃತೀಯಮಹಸ್ತದೇವೈತತ್ಪುನರ್ಯನ್ನವಮಂ ॥**

**ತೃತೀಯೇಽಹನ್ಯುಕ್ತಾನಿ ಲಿಂಗಾನ್ಯಸ್ಮಿನ್ನವಮೇಽಹನ್ಯತಿದಿಶತಿ—ತೃತೀಯಮಹಸ್ತದಪಿ ತಾದೃಶಲಿಂಗೋಪೇತಂ ದ್ರಷ್ಟವ್ಯಂ ॥**

ಈ ದ್ವಾದಶಾಹದ ಮೂರನೇ ದಿನದ ಮಂತ್ರಗಳಲ್ಲಿ ಯಾವ ಯಾವ ಲಕ್ಷಣಗಳಿರಬೇಕೆಂದು ಹೇಳಿದೆಯೋ ಅವೆಲ್ಲವೂ ಒಂಭತ್ತನೇ ದಿನದ ಮಂತ್ರಗಳಲ್ಲಿಯೂ ಇರಬೇಕು.

**ಯದಶ್ವವದ್ಯದಂತವದ್ಯತ್ಪುನರಾವೃತ್ತಂ ಯತ್ಪುನರ್ನಿನೃತ್ತಂ ಯದ್ರತವತ್ಪರ್ಯಸ್ತವದ್ಯತ್ರಿವದ್ಯದಂತರೂಪಂ ಯದುತ್ತಮೇ ನಿರುಚ್ಯತೇ ಯದಸೌ ಲೋಕೋಽಭ್ಯುದಿತಃ ॥**

**ತಾನಿ ಲಿಂಗಾನ್ಯುಪನ್ಯಸ್ಯತಿ—**

ಈ ಒಂಭತ್ತನೇ ದಿನದಲ್ಲಿ ಅಶ್ವ, ಅಂತ, ಹೇಳಿದ್ದನ್ನೇ ಮತ್ತೆ ಹೇಳುವುದು (ಪುನರ್ನಿನೃತ್ತಂ, ರತ, ಪರ್ಯಸ್ತ, ತ್ರಿ (ಮೂರು) ಎಂಬ ಶಬ್ದ, ಅಂತರೂಪ, ಕೊನೆಯ ಪಾದದಲ್ಲಿ ನಿರ್ದಿಷ್ಟದೇವತೆಯ ಹೆಸರು, ಪರಲೋಕದ ಸೂಚನೆ, ಈ ಈ ವಿಷಯಗಳು ಅಥವಾ ಈ ವಿಷಯವನ್ನು ಸೂಚಿಸುವ ಶಬ್ದಗಳು ಈ ಒಂಭತ್ತನೇ ದಿವಸದಲ್ಲಿ ಪಠಿಸುವ ಮಂತ್ರಗಳಲ್ಲಿರಬೇಕು.

**ಯಚ್ಛುಚಿವದ್ಯತ್ಸತ್ಯವದ್ಯತ್ಕ್ಷೇತಿವದ್ಯದ್ಗತವದ್ಯದೋಕವತ್ ॥**

ಅಥ ನೂತನಾನಿ ಲಿಂಗಾನಿ ದರ್ಶಯತಿ— ಶುಚಿಸತ್ಯಕ್ಷೇತಿಗತೌಕಶಬ್ದಾ ನವಮೇಽಹನಿ ಲಿಂಗರೂಪಾ ಭೂತಾರ್ಥವಾಚಿಪ್ರತ್ಯಯಾಂತಧಾತುರೂಪಂ ಯದಸ್ತಿ ತೇನ ಸಹಿತಂ ತೃತೀಯೇಽಹನಿ ವಿದ್ಯಮಾನಂ ಲಿಂಗಂ ॥

ಮೇಲೆ ಹೇಳಿದ ಲಕ್ಷಣಗಳಲ್ಲದೆ ಈ ಒಂಭತ್ತನೇ ದಿನದಲ್ಲಿ ಶುಚಿ, ಸತ್ಯ, ಕ್ಷೇತಿ (ವಾಸಮಾಡು), ಗತ, ಓಕ ಈ ಶಬ್ದಗಳಿಂದ ಕೂಡಿದ ಲಕ್ಷಣಗಳಿರಬೇಕು.

**ಯತ್ಕೃತಂ ಯತ್ತೃತೀಯಸ್ಯಾಹ್ನೋ ರೂಪಮೇತಾನಿ ವೈ ನವಮಸ್ಯಾಹ್ನೋ ರೂಪಾಣಿ ॥**

ಅನ್ಯಾನಿ ಚ ಸರ್ವಾಣಿ ಲಿಂಗಾನ್ಯುಪಸಂಹರತಿ—

ಮತ್ತು ಭೂತಕಾಲವನ್ನು ಸೂಚಿಸುವ ಪದ, ಮೂರನೇ ದಿನದ ಮಂತ್ರಗಳಲ್ಲಿರಬೇಕಾದ ಲಕ್ಷಣಗಳು, ಇವೆಲ್ಲವೂ ಒಂಭತ್ತನೆಯ ದಿವಸದಲ್ಲಿರಬೇಕಾದ ಲಕ್ಷಣಗಳೆಂದು ತಿಳಿಯಬೇಕು.

**ಅಗನ್ಮ ಮಹಾ ನಮಸಾ ಯವಿಷ್ಠಮಿತಿ ನವಮಸ್ಯಾಹ್ನ ಆಜ್ಯಂ ಭವತಿ ಗತವನ್ನವಮೇಽಹನಿ ನವಮಸ್ಯಾಹ್ನೋ ರೂಪಂ ॥**

ಆಜ್ಯಶಸ್ತ್ರಂ ವಿಧತ್ತೇ- ಗತವದ್ಗಮಿಧಾತುಯುಕ್ತಂ । ಅತ್ರ ಚಾಗನ್ಮೇತಿ ಗಮಿಧಾತುಃ ಶ್ರೂಯತೇ ॥

ಆಜ್ಯಶಸ್ತ್ರಮಂತ್ರವನ್ನು ತಿಳಿಸುವರು. ಅಗನ್ಮ ಮಹಾ ನಮಸಾ ಯವಿಷ್ಠಂ (ಋ. ಸಂ. ೭-೧೨-೧) ಎಂಬ ಸೂಕ್ತವು ಆಜ್ಯಶಸ್ತ್ರವು. ಈ ಋಕ್ಕಿನಲ್ಲಿ ಅಗನ್ಮ ಎಂದು ಗಮಿಧಾತುಪ್ರಯೋಗವಿರುವುದರಿಂದ ಇಲ್ಲಿ ಒಂಭತ್ತನೇ ದಿವಸದ ಮಂತ್ರದಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

**ತದು ತ್ರೈಷ್ಟುಭಂ ತ್ರಿಷ್ಟುಪ್ಪ್ರಾತಸ್ಸವನ ಏವ ತ್ರ್ಯಹಃ ॥**

ಸೂಕ್ತಗತಂ ಛಂದಃ ಪ್ರಶಂಸತಿ—

ಈ ಸೂಕ್ತದಲ್ಲಿರುವ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಈ ದ್ವಾದಶಾಹದ ಕೊನೆಯ ತ್ರ್ಯಹದಲ್ಲಿ (ಒಂಭತ್ತನೇ ದಿನ) ತ್ರಿಷ್ಟುಪ್‌ಛಂದಸ್ಸುಗಳು ಪ್ರಾತಸ್ಸವನದಲ್ಲಿ ಕಾರ್ಯಕಲಾಪಗಳನ್ನು ನಿರ್ವಹಿಸುವವು.

**ಪ್ರ ವೀರಯಾ ಶುಚಯೋ ದದ್ರಿರೇ ತೇ ತೇ ಸತ್ಯೇನ ಮನಸಾ ದೀಧ್ಯಾನಾ ದಿವಿ ಕ್ಷಯಂತಾ ರಜಸಃ ಪೃಥಿವ್ಯಾಮಾ ವಿಶ್ವವಾರಾಽಶ್ವಿನಾ ಗತಂ ನೋಽಯಂ ಸೋಮ ಇಂದ್ರ ತುಭ್ಯಂ ಸುನ್ವ ಆ ತು ಪ್ರ**

ಬ್ರಹ್ಮಾಣೋ ಅಂಗಿರಸೋ ನಕ್ಷಂತ ಸರಸ್ವತೀಂ ದೇವಯಂತೋ ಹವಂತ ಆ ನೋ ದಿವೋ ಬೃಹತಃ ಪರ್ವತಾದಾ ಸರಸ್ವತ್ಯಭಿ ನೋ ನೇಷಿ ವಸ್ಯ ಇತಿ ಪ್ರಉಗಂ ಶುಚಿವತ್ಸತ್ಯವತ್ಕ್ಷೇತಿವದ್ಗತವದೋ-ಕವನ್ನವಮೇಽಹನಿ ನವಮಸ್ಯಾಹ್ನೋ ರೂಪಂ ॥

ಪ್ರಉಗಶಸ್ತ್ರಂ ವಿಧತ್ತೇ–– ಅತ್ರ ದದ್ರಿರೇ ತ ಇತಿ ಪ್ರಯೋಗಪಾಠಃ । ಪ್ರ ವೀರಯೇತಿ ಪ್ರಥಮಂ ಪ್ರತೀಕಂ ತತ್ರ ಶುಚಯ ಇತಿ ಶುಚಿಶಬ್ದೋಪೇತಂ ಲಿಂಗಂ । ತೇ ಸತ್ಯೇನೇತಿ ದ್ವಿತೀಯಂ ಪ್ರತೀಕಂ ತತ್ರ ಸತ್ಯಶಬ್ದೋ ಲಿಂಗಂ । ದಿವಿ ಕ್ಷಯಂತೇತಿ ತೃತೀಯಂ ತತ್ರ ಕ್ಷೇತಿ-ಧಾತುರ್ಲಿಂಗಂ । ಆ ವಿಶ್ವವಾರೇತಿ ಚತುರ್ಥಂ । ತತ್ರ ಗತಶಬ್ದೋ ಲಿಂಗಂ । ಅಯಂ ಸೋಮ ಇತಿ ಪಂಚಮಂ । ತಸ್ಮಿನ್ನಾ ತು ಪ್ರ ಯಾಹಿ ಹರಿವಸ್ತದೋಕಾ ಇತಿ ದ್ವಿತೀಯಃ ಪಾದಸ್ತಸ್ಮಿ-ನ್ನೋಕಶಬ್ದೋ ಲಿಂಗಂ । ಪ್ರ ಬ್ರಹ್ಮಾಣ ಇತಿ ಷಷ್ಠಂ । ಸರಸ್ವತೀಮಿತಿ ಸಪ್ತಮಂ । ಆ ನೋ ದಿವ ಇತ್ಯಷ್ಟಂ । ಅತ್ರ ದ್ವಿತೀಯಪಾದೇ ಯಜತಾ ಗಂತುಮಿತಿ ಗಮಿಧಾತುಃ ಶ್ರುತಃ । ಸರಸ್ವ-ತ್ಯಭಿ ನ ಇತಿ ನವಮಂ । ತತ್ರ ಚತುರ್ಥೇ ಪಾದೇಽರಣಾನಿ ಗನ್ಮೇತಿ ಗಮಿಧಾತುಃ ಶ್ರುತಃ । ಪೂರ್ವೋಕ್ತಯೋಃ ಷಷ್ಠಸಪ್ತಮಯೋಃ ಸ್ಪಷ್ಟಲಿಂಗಾಭಾವೇಽಪಿ ಛತ್ರಿಣೋ ಗಚ್ಛಂತೀತಿ ನ್ಯಾಯೇನೇತರಸಾಹಚರ್ಯಾಲ್ಲಿಂಗವತ್ತ್ವಂ ದ್ರಷ್ಟವ್ಯಂ । ಅತ್ರಾಂತಿಮೈಸ್ತ್ರಿಭಿಃ ಪ್ರತೀಕೈರೇಕ-ಸ್ತೃಚಃ । ಇತರೇ ಷಟ್ ತೃಚಾಃ । ತದೇತತ್ಸರ್ವಂ ಪ್ರಉಗಶಸ್ತ್ರಂ ॥

ಈಗ ಪ್ರಉಗಶಸ್ತ್ರವನ್ನು ವಿವರಿಸುವರು. ಅಗನ್ಮ ಮಹಾ ನಮಸಾ (ಋ. ಸಂ. ೭-೧೨-೧) ಎಂಬುದು ಪ್ರಉಗ ಶಸ್ತ್ರದ ಒಂದು ಮಂತ್ರವು. ಪ್ರ ವೀರಯಾ ಶುಚಯೋ ದದ್ರಿರೆ (ಋ. ಸಂ. ೭-೯೦-೧) ಎಂಬ ಋಕ್ಕಿನಲ್ಲಿ ಶುಚಿಶಬ್ದವೆಂಬ ಲಕ್ಷಣವಿರುವುದು. ತೇ ಸತ್ಯೇನ ಮನಸಾ ದೀಧ್ಯಾನಾ (ಋ. ಸಂ. ೭-೯೧-೩) ಎಂಬ ಋಕ್ಕಿನಲ್ಲಿ ಸತ್ಯಶಬ್ದವೆಂಬ ಲಕ್ಷಣವಿರುವುದು. ದಿವಿ ಕ್ಷಯಂತಾ ರಜಸಃ ಪೃಥಿವ್ಯಾಂ (ಋ. ಸಂ. ೭-೬೪-೧) ಎಂಬ ಋಕ್ಕಿನಲ್ಲಿ ಕ್ಷೇತಿ (ಧಾತು) ವೆಂಬ ಲಕ್ಷಣವಿರುವುದು. ಆ ವಿಶ್ವವಾರಾಶ್ವಿನಾ ಗತಂ ನಃ (ಋ. ಸಂ. ೭-೭೦-೧) ಎಂಬ ಋಕ್ಕಿನಲ್ಲಿ ಗತಶಬ್ದಪ್ರಯೋಗವಿರುವುದು. ಅಯಂ ಸೋಮ ಇಂದ್ರ ತುಭ್ಯಂ ಸುನ್ವೇ (ಋ. ಸಂ. ೭-೨೯-೧) ಎಂಬ ಋಕ್ಕಿನಲ್ಲಿ ಆ ತು ಪ್ರ ಯಾ ಹಿ ಹರಿವಸ್ತ-ದೋಕಾಃ ಎಂದು ಎರಡನೇ ಪಾದವಿರುವುದು. ಇದರಲ್ಲಿ ಓಕಶಬ್ದವಿರುವುದರಿಂದ ಇದೇ ಲಕ್ಷಣವು. ಪ್ರ ಬ್ರಹ್ಮಾಣೋ ಅಂಗಿರಸೋ ನಕ್ಷಂತ (ಋ. ಸಂ. ೭-೪೨-೧) ಎಂಬುದು ಏಳನೆಯ ಋಕ್ಕು. ಆ ನೋ ದಿವೋ ಬೃಹತಃ ಪರ್ವತಾದಾ ಸರಸ್ವತಿ (ಋ. ಸಂ. ೫-೪೩-೧೧) ಎಂಬ ಋಕ್ಕು ಎಂಟನೆಯದು. ಈ ಋಕ್ಕಿನ ಎರಡನೇ ಪಾದದಲ್ಲಿ ಯಜತಾ ಗಂತುಂ ಎಂಬಲ್ಲಿ ಗಮಿಧಾತುವಿರುವುದು. ಇದೇ ಇಲ್ಲಿರಬೇಕಾದ ಲಕ್ಷಣವು. ಸರಸ್ವತ್ಯಭಿ ನೋ ನೇಷಿ ವಸ್ಯಃ (ಋ. ಸಂ. ೬-೬೧-೧೪) ಎಂಬ ಋಕ್ಕು ಒಂಭತ್ತನೆಯದು. ಈ ಋಕ್ಕಿನ ನಾಲ್ಕನೇ ಪಾದದಲ್ಲಿ ಅರಣಾನಿ ಗನ್ಮ ಎಂದು ಗಮಿಧಾತುಪ್ರಯೋಗವಿರುವುದು. ಇದೇ ಇಲ್ಲಿ ಲಕ್ಷಣವು. ಇಲ್ಲಿ ಕೊನೆಯ ಮೂರು ಋಕ್ಕುಗಳೂ ಸೇರಿ ಅಂತಿಮ (ಕೊನೆಯ) ತೃಚವಾಗುವುದು. ಉಳಿದ ಆರೂ ಆರು ತೃಚಗಳು. ಇವೆಲ್ಲವೂ ಸೇರಿ ಪ್ರಉಗಶಸ್ತ್ರಮಂತ್ರಗಳಾಗುವವು.

ತದು ತ್ರೈಷ್ಟುಭಂ ತ್ರಿಷ್ಟುಪ್ ಪ್ರಾತಃಸವನ ಏಷತ್ರ್ಯಹಃ ॥

**ಅತ್ರತ್ಯಂ ಛಂದಃ ಪ್ರಶಂಸತಿ—**

ಮೇಲಿನ ಸೂಕ್ತದ ಋಕ್ಕುಗಳೆಲ್ಲವೂ ತ್ರಿಷ್ಟುಪ್‌ಛಂದಸ್ಕವು. ಈ ದ್ವಾದಶಾಹದ ಕೊನೆಯ ತ್ರ್ಯಹದಲ್ಲಿ ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳೇ ಪ್ರಾತಸ್ಸವನದ ಕಾರ್ಯಕಲಾಪಗಳನ್ನು ನಿರ್ವಹಿಸುವವು.

**ತಂ ತಮಿದ್ರಾಧಸೇ ಮಹೇ ತ್ರಯ ಇಂದ್ರಸ್ಯ ಸೋಮಾ ಇಂದ್ರ ನೇದೀಯ ಏದಿಹಿ ಪ್ರ ನೂನಂ ಬ್ರಹ್ಮಣಸ್ಪತಿರಗ್ನಿರ್ನೇತಾ ತ್ವಂ ಸೋಮ ಕ್ರತುಭಿಃ ಪಿನ್ವಂತ್ಯಪೋ ನಕಿಃ ಸುದಾಸೋ ರಥಮಿತಿ ತೃತೀಯೇಽಹ್ನಾ ಸಮಾನ ಆತಾನೋ ನವಮೇಽಹನಿ ನವಮಸ್ಯಾಹ್ನೋ ರೂಪಂ ॥**

**ಮರುತ್ವತೀಯಶಸ್ತ್ರೇ ಕ್ಲಪ್ತಿಲಿಂಗಂ ದರ್ಶಯತಿ —**

ಮರುತ್ವತೀಯ ಶಸ್ತ್ರದಲ್ಲಿರುವ ಮಂತ್ರಗಳ ಲಕ್ಷಣಗಳನ್ನು ತಿಳಿಸುವರು. **ತಂ ತಮಿದ್ರಾಧಸೇ ಮಹೇ । ತ್ರಯ ಇಂದ್ರಸ್ಯ ಸೋಮಾಃ । ಇಂದ್ರ ನೇದೀಯ ಏದಿಹಿ । ಪ್ರನೂನಂ ಬ್ರಹ್ಮಣಸ್ಪತಿಃ । ಅಗ್ನಿರ್ನೇತಾ । ತ್ವಂ ಸೋಮ ಕ್ರತುಭಿಃ । ಪಿನ್ವಂತ್ಯಪಃ । ನಕಿಃ ಸುದಾಸೋ ರಥಂ ।** ಎಂಬ ಈ ಋಕ್ಕುಗಳೆಲ್ಲವೂ ಮೂರನೆಯ ದಿನದ ಮಂತ್ರಗಳು. ಇವುಗಳನ್ನು ಒಂಭತ್ತನೆಯ ದಿವಸದಲ್ಲಿಯೂ ಉಪಯೋಗಿಸಬೇಕು. ಈ ಎರಡು ದಿನಗಳಲ್ಲಿರುವ ಮಂತ್ರಗಳ ಲಕ್ಷಣಗಳೆಲ್ಲವೂ ಸಮಾನವಾಗಿರುವವು ಎಂದರೆ ಒಂದೇ ಆಗಿರುವವು.

**ಇಂದ್ರಃ ಸ್ವಾಹಾ ಪಿಬತು ಯಸ್ಯ ಸೋಮ ಇತಿ ಸೂಕ್ತಮಂತೋ ವೈ ಸ್ವಾಹಾಕಾರೋಽನ್ತೋ ನವಮಮಹರ್ನವಮೇಽಹನಿ ನವಮಸ್ಯಾಹ್ನೋ ರೂಪಂ ॥**

**ಅಂತಲಿಂಗೋಪೇತಂ ಸೂಕ್ತಂ ವಿಧತ್ತೇ—ಅತ್ರ ಸ್ವಾಹಾಶಬ್ದೋ ದೃಶ್ಯತೇ । ಸ ಚ ಹೋಮಮಂತ್ರಸ್ಯಾಂತೋ ನವಮಮಹರ್ನವರಾತ್ರಸ್ಯಾಂತೋಽತೋ ಲಿಂಗಸದ್ಭಾವಾನ್ನವಮೇಽಹನ್ಯೇತದ್ಯುಕ್ತಂ ॥**

ಅಂತಶಬ್ದಲಕ್ಷಣವಿರುವ ಸೂಕ್ತವನ್ನು ತಿಳಿಸುವರು. **ಇಂದ್ರಃಸ್ವಾಹಾ ಪಿಬತು** (ಋ. ಸಂ. ೩-೫೦-೧) ಎಂಬ ಸೂಕ್ತದಲ್ಲಿ ಸ್ವಾಹಾಕಾರವಿರುವುದು. ಈ ಸ್ವಾಹಾಕಾರವು ಹೋಮಮಂತ್ರದ ಕೊನೆಯಲ್ಲಿರುವುದು. ಇಲ್ಲಿ ಒಂಭತ್ತನೇ ದಿವಸವು ನವರಾತ್ರಿಗೆ ಕೊನೆಯದಿವಸವಾದ್ದರಿಂದ ಈ ಕೊನೆಯ ದಿವಸದ ಮಂತ್ರದಲ್ಲಿ ಸ್ವಾಹಾಕಾರವನ್ನು ಸೇರಿಸಿ ಪಠಿಸುವುದು ಯುಕ್ತವು.

**ಗಾಯತ್ಸಾಮ ನಭನ್ಯಂ ಯಥಾ ವೇರಿತಿ ಸೂಕ್ತಮರ್ಚಾಮ ತದ್ವಾವೃಧಾನಂ ಸ್ವರ್ವದಿತ್ಯಂತೋ ವೈ ಸ್ವರಂತೋ ನವಮಮಹರ್ನವಮೇಽಹನಿ ನವಮಸ್ಯಾಹ್ನೋ ರೂಪಂ ॥**

ಪುನರಪ್ಯಂತಲಿಂಗೋಪೇತಂ ಸೂಕ್ತಂ ವಿಧತ್ತೇ—ಗಾಯದಿತಿ ಸೂಕ್ತಸ್ಯಾರ್ಚಾನೇತಿ ದ್ವಿತೀಯಃ ಪಾದಃ । ತತ್ರ ಸ್ವರ್ವದಿತಿ ಸ್ವರ್ಗವಾಚೀ ಶಬ್ದಃ ಶ್ರೂಯತೇ । ಸ್ವರ್ಗಶ್ಚ ಲೋಕತ್ರಯಸ್ಯಾಂತಃ ॥

ಗಾಯತ್ಸಾಮ ನಭನ್ಯಂ ಯಥಾ ವೇಃ (ಋ. ಸಂ. ೧-೧೭೩-೧) ಎಂಬ ಋಕ್ಕಿನ ಎರಡನೇ ಪಾದದಲ್ಲಿ ಅರ್ಚಾಮ ಎಂದಿರುವುದು. ಈ ಪಾದದಲ್ಲಿ ಸ್ವರ್ವತ್ ಎಂದು ಸ್ವರ್ಗವಾಚಿಶಬ್ದವು ಇರುವುದು. ಈ ಸ್ವರ್ಗವು ಮೂರು ಲೋಕಗಳಿಗೂ ಕೊನೆಯಂತಿರುವುದು. ಇಲ್ಲಿ ಸ್ವರ್ಗವಾಚಿಶಬ್ದವಿರುವುದರಿಂದ ಇದೇ ಒಂಭತ್ತನೆಯ ದಿನದ ಲಕ್ಷಣವು.

**ತಿಷ್ಠಾ ಹರೀ ರಥ ಆ ಯುಜ್ಯಮಾನೇತಿ ಸೂಕ್ತಮಂತೋ ವೈ ಸ್ಥಿತಮಂತೋ ನವಮಮಹರ್ನವಮೇಽಹನಿ ನವಮಸ್ಯಾಹ್ನೋ ರೂಪಂ ॥**

ಪ್ರಕಾರಾಂತರೇಣಾಂತವತ್ಸೂಕ್ತಂ ವಿಧತ್ತೇ—ತಿಷ್ಠೇತಿ ಸ್ಥಿತಿಲಕ್ಷಣೋಧಾತ್ವರ್ಥಃ ಶ್ರೂಯತೇ । ಸ ಚ ಗಮನಸ್ಯಾಂತಃ ॥

ತಿಷ್ಠಾ ಹರೀ ರಥ ಆ ಯುಜ್ಯಮಾನಾ ಯಾಹಿ (ಋ. ಸಂ. ೩-೩೫-೧) ಎಂಬ ಋಕ್ಕಿನಲ್ಲಿ ತಿಷ್ಠತಿಧಾತುವಿನ ಪ್ರಯೋಗವಿರುವುದು ಮತ್ತು ಈ ತಿಷ್ಠತಿಧಾತುವು ಗಮನದ (ಪ್ರಯಾಣದ) ಕೊನೆಯನ್ನು ಸೂಚಿಸುವುದು. ಆದ್ದರಿಂದ ತಿಷ್ಠತಿಧಾತು ಮತ್ತು ಅಂತ್ಯಶಬ್ದವನ್ನು ಸೂಚಿಸುವ ಲಕ್ಷಣವೂ ಇಲ್ಲಿರುವುದರಿಂದ ಈ ಒಂಭತ್ತನೆಯ ದಿವಸದ ಲಕ್ಷಣವಿದ್ದಂತಾಯಿತು.

**ಇಮಾ ಉ ತ್ವಾ ಪುರುತಮಸ್ಯ ಕಾರೋರಿತಿ ಸೂಕ್ತಂ ಧಿಯೋ ರಥೇಷ್ಠಾಮಿತ್ಯಂತೋ ವೈ ಸ್ಥಿತಮಂತೋ ನವಮಮಹರ್ನವಮೇಽಹನಿ ನವಮಸ್ಯಾಹ್ನೋ ರೂಪಂ ॥**

ಪುನರಪಿ ತಥಾವಿಧಂ ತಲ್ಲಿಂಗೋಪೇತಂ ಸೂಕ್ತಂ ವಿಧತ್ತೇ—ಇಮಾ ಉ ತ್ವೇತಿ ಸೂಕ್ತಸ್ಯ ಧಿಯೋ ರಥೇಷ್ಠಾಮಿತಿ ತೃತೀಯಃ ಪಾದಃ । ತತ್ರ ಸ್ಥಾಮಿತಿ ಸ್ಥಿತಿಧಾತ್ವರ್ಥೋ ಗಮನಸ್ಯಾಂತಃ ಶ್ರೂಯತೇ ॥

ಮೇಲೆ ಹೇಳಿದ ಲಕ್ಷಣವೇ ಇರುವ ಮತ್ತೊಂದು ಸೂಕ್ತವನ್ನು ತಿಳಿಸುವರು. ಇಮಾ ಉ ತ್ವಾ ಪುರುತಮಸ್ಯ (ಋ. ಸಂ. ೬-೨೧-೧) ಎಂಬ ಸೂಕ್ತದಲ್ಲಿ ಧಿಯೋ ರಥೇಷ್ಠಾಂ ಎಂಬ ಮೂರನೇ ಪಾದವಿರುವುದು. ಇಲ್ಲಿ ಸ್ಥಾ ಎಂಬ ಶಬ್ದವು ಗಮನದ ಅಂತ್ಯವನ್ನು ಸೂಚಿಸುವುದರಿಂದ ಇಲ್ಲಿ ಒಂಭತ್ತನೆಯ ದಿವಸದಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

**ತದು ತ್ರೈಷ್ಟುಭಂ ತೇನ ಪ್ರತಿಷ್ಠಿತಪದೇನ ಸವನಂ ದಾಧಾರಾಽಯತನಾದೇವೈತೇನ ನ ಪ್ರಚ್ಯವತೇ ॥**

**ಏತೇಷ್ವಂತವತ್ಸು ಸೂಕ್ತೇಷು ಚ್ಛಂದಃ ಪ್ರಶಂಸತಿ—**

ಈ ಸೂಕ್ತದಲ್ಲಿರುವ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಈ ತ್ರಿಷ್ಟುಪ್ ಛಂದಸ್ಸಿನ ಪಾದಗಳಲ್ಲಿ ನಿಯತ (ನಿರ್ದಿಷ್ಟ) ಸಂಖ್ಯೆಯ ಅಕ್ಷರಗಳಿರುವವು. ಇಂತ ಋಕ್ಕುಗಳನ್ನು ಸವನಾದಿಗಳಲ್ಲಿ ಪಠಿಸುವುದರಿಂದ ಯಜ್ಞಮಾಡುವ ಯಜಮಾನನಿಗೆ ಸ್ಥಾನಭ್ರಷ್ಟತ್ವವುಂಟಾಗುವುದಿಲ್ಲ.

**ಪ್ರ ಮಂದಿನೇ ಪಿತುಮದರ್ಚತಾ ವಚ ಇತಿ ಸೂಕ್ತಂ ಸಮಾನೋದರ್ಕಂ ನವಮೇಽಹನಿ ನವಮಸ್ಯಾಹ್ನೋ ರೂಪಂ ॥**

**ತುಲ್ಯಸಮಾಪ್ತಿಕಂ ಸೂಕ್ತಂ ವಿಧತ್ತೇ - ಅತ್ರ ಸರ್ವಾಸ್ವೃಕ್ಷು ಮರುತ್ವಂತಂ ಸಖ್ಯಾಯ ಹವಾಮಹ ಇತಿ ಚತುರ್ಥಪಾದಸ್ಯೈಕತ್ವಾತ್ಸಮಾನೋದರ್ಕತ್ವಮ್ ॥**

**ಪ್ರ ಮಂದಿನೇ ಪಿತುಮದರ್ಚತಾ ವಚಃ** (ಋ. ಸಂ. ೧-೧೦೧-೧) ಎಂಬ ಸೂಕ್ತವು ಸಮನೋದರ್ಕವು ಎಂದರೆ ಈ ಸೂಕ್ತದ ಪ್ರತಿಯೊಂದು ಋಕ್ಕಿನ ನಾಲ್ಕನೇ ಪಾದವು **ಮರುತ್ವಂತಂ ಸಖ್ಯಾಯ ಹವಾಮಹೇ** ಎಂದು ಮುಗಿದಿರುವುದರಿಂದ ಈ ಸೂಕ್ತದಲ್ಲಿ ಸಮಾನೋದರ್ಕ (ಸಮಾನವಾದ ಪರಿಸಮಾಪ್ತಿ) ಎಂಬ ಒಂಭತ್ತನೇ ದಿವಸದ ಲಕ್ಷಣವಿದ್ದಂತಾಯಿತು.

**ತದು ಜಾಗತಂ ಜಗತ್ಯೋ ವಾ ಏತಸ್ಯ ತ್ರ್ಯಹಸ್ಯ ಮಧ್ಯಂದಿನಂ ವಹಂತಿ ತದ್ವೈತಚ್ಛಂದೋ ವಹತಿ ಯಸ್ಮಿನ್ನಿವಿದ್ಧೀಯತೇ ತಸ್ಮಾಜ್ಜಗತೀಷು ನಿವಿದಂ ದಧಾತಿ ॥**

**ತಸ್ಮಿನ್ಸೂಕ್ತೇ ನಿವಿದ್ಧಾನಂ ವಿಧತ್ತೇ—**

ಈ ಸೂಕ್ತದ ಋಕ್ಕುಗಳು ಜಗತೀಛಂದಸ್ಕವು. ಈ ಜಗತೀಛಂದಸ್ಸಿನ ಋಕ್ಕುಗಳು ಈ ಕೊನೆಯ ತ್ರ್ಯಹದ ಕಾರ್ಯಕಲಾಪಗಳನ್ನು ನಿರ್ವಹಿಸುವವು. ಆದ್ದರಿಂದ ಈ ಜಗತೀಛಂದಸ್ಸಿನ ಋಕ್ಕುಗಳಲ್ಲಿ ನಿವಿನ್ಮಂತ್ರಗಳನ್ನು ಸೇರಿಸಿ ಪಠಿಸುವರು.

**ಮಿಥುನಾನಿ ಸೂಕ್ತಾನಿ ಶಸ್ಯಂತೇ ತ್ರೈಷ್ಟುಭಾನಿ ಚ ಜಾಗತಾನಿ ಚ ಮಿಥುನಂ ವೈ ಪಶವಃ ಪಶವಶ್ಛಂದೋಮಾಃ ಪಶೂನಾಮವರುದ್ಧ್ಯೈ ॥**

**ಛಂದೋದ್ವಯಂ ಮಿಲಿತ್ವಾ ಪ್ರಶಂಸತಿ—ಮಿಥುನಸ್ಯೈಕತ್ವೇಽಪಿ ಬಹುವಚನಂ ಪೂಜಾರ್ಥಮ್—**

ಹಿಂದೆ ಹೇಳಿದ ತ್ರಿಷ್ಟುಪ್‌ಛಂದಸ್ಸಿನ ಸೂಕ್ತ ಮತ್ತು ಜಗತೀಛಂದಸ್ಸಿನ ಸೂಕ್ತ ಇವೆರಡನ್ನೂ ಪಠಿಸುವರು ಇದರಿಂದ ಮಿಥುನವುಂಟಾಗುವುದು. ಪಶುಗಳು ಮಿಥುನಸ್ವರೂಪವು ಮತ್ತು ಛಂದೋಮಾ ಎಂಬ ಸ್ತೋಮಗಳು ಪಶುಸ್ವರೂಪವು. ಆದ್ದರಿಂದ ಮೇಲಿನ ತ್ರಿಷ್ಟುಪ್ ಮತ್ತು ಜಗತೀಛಂದಸ್ಸಿನ ಸೂಕ್ತಗಳನ್ನೂ ಛಂದೋಮಾ ಎಂಬ ಸ್ತೋಮಗಳನ್ನೂ ಪಠಿಸಿದಲ್ಲಿ ಪಶುಸಂಪತ್ತು ಲಭಿಸುವುದು.

**ಪಂಚ ಸೂಕ್ತಾನಿ ಶಸ್ಯಂತೇ ಪಂಚಪದಾ ಪಂಕ್ತಿಃ ಪಾಂಕ್ತೋ ಯಜ್ಞಃ ಪಾಂಕ್ತಾಃ ಪಶವಃ ಪಶವಶ್ಛಂದೋಮಾಃ ಪಶೂನಾಮವರುದ್ಧ್ಯೈ ॥**

ದ್ವಿವಿಧಸೂಕ್ತಗತಸಂಖ್ಯಾಂ ಪ್ರಶಂಸತಿ—

ಹಿಂದೆ ಹೇಳಿದ ಶಸ್ತ್ರಮಂತ್ರಗಳಲ್ಲಿ ಐದು ಸೂಕ್ತಗಳನ್ನು ಪಠಿಸುವರು. ಪಂಕ್ತಿಛಂದಸ್ಸಿನಲ್ಲಿಯೂ ಐದು ಪಾದಗಳಿರುವವು. ಯಜ್ಞದಲ್ಲಿ ಐದುವಿಧ ಹವಿರ್ದ್ರವ್ಯಗಳಿರುವವು. ಪಂಕ್ತಿಛಂದಸ್ಸಿಗೂ ಪಶುಗಳಿಗೂ ಸಾಮ್ಯವಿರುವುದು. ಪಂಕ್ತಿಛಂದಸ್ಸಿನಲ್ಲಿ ಐದು ಪಾದಗಳಿರುವವು. ಪಶುಗಳಲ್ಲಿ ನಾಲ್ಕು ಪಾದಗಳು ಒಂದು ಮುಖ (ಬಾಯಿ) ಸೇರಿ ಐದು ಮುಖ್ಯಾವಯಗಳಿರುವವು. ಛಂದೋಮಾಃ ಎಂದರೆ ಚತುರ್ವಿಂಶ, ಚತುಶ್ಚತ್ವಾರಿಂಶ, ಅಷ್ಟಾಚತ್ವಾರಿಂಶ ಎಂಬ ಮೂರು ಸ್ತೋಮಗಳು ಪಶುಸ್ವರೂಪವಾಗಿರುವವು. ಆದ್ದರಿಂದ ಈ ಸ್ತೋಮಗಳನ್ನು ಪಠಿಸುವ ಯಜಮಾನನಿಗೆ ಪಶುಸಂಪತ್ತು ವೃದ್ಧಿಯಾಗುವುದು.

**ತ್ವಾಮಿದ್ಧಿ ಹವಾಮಹೇ ತ್ವಂ ಹ್ಯೇಹಿ ಚೇರವ ಇತಿ ಬೃಹತ್ಪೃಷ್ಠಂ ಭವತಿ ನವಮೇಽಹನಿ ॥**

ನಿಷ್ಕೇವಲ್ಯಶಸ್ತ್ರೇ ಬೃಹತ್ಸಾಮ ಸಾಧ್ಯ ಪೃಷ್ಠಸ್ತೋತ್ರಸ್ಯಾಽಽಧಾರಭೂತಂ ಸ್ತೋತ್ರಿಯಂ ತೃಚಂ ತದನುರೂಪಂ ಚ ವಿಧತ್ತೇ— ಅಯುಗ್ಮಸ್ಯಾಹ್ನೋ ರಾಥಂತರತ್ವೇಽಪಿ ಬೃಹತ್ಸಂಬಂಧಸ್ಯ ವಾಚನಿಕತ್ವಾನ್ನವಮೇಽಹನಿ ತದ್ಯೋಗ್ಯತಾ ।

ನಿಷ್ಕೇವಲ್ಯಶಸ್ತ್ರದಲ್ಲಿ ಬೃಹತ್ಸಾಮಸಾಧ್ಯವಾದ ಪೃಷ್ಠಸ್ತೋತ್ರಕ್ಕೆ ಆಧಾರಭೂತವಾದ ಸ್ತೋತ್ರಿಯತೃಚವನ್ನೂ ಅನುರೂಪ ತೃಚವನ್ನೂ ಹೇಳುವರು. ತ್ವಾಮಿದ್ಧಿ ಹವಾಮಹೇ ಮತ್ತು ತ್ವಂ ಹ್ಯೇಹಿ ಚೇರವ (ಋ. ಸಂ. ೬-೪೬-೧) ಎಂಬ ಮಂತ್ರಗಳೂ ಸೇರಿ ಬೃಹತ್ಪೃಷ್ಠವೆಂಬ ಸ್ತೋತ್ರವಾಗುವುದು. ಇದನ್ನು ಒಂಭತ್ತನೇ ದಿವಸ ಪಠಿಸುವರು.

**ಯದ್ವಾವಾನೇತಿ ಧಾಯ್ಯಾಽಚ್ಯುತಾಽಭಿ ತ್ವಾ ಶೂರ ನೋನುಮ ಇತಿ ರಥಂತರಸ್ಯ ಯೋನಿಮನು ನಿವರ್ತಯತಿ ರಾಥಂತರಂ ಹ್ಯೇತದಹರಾಯತನೇಸೇಂದ್ರ ತ್ರಿಧಾತು ಶರಣಮಿತಿ ಸಾಮಪ್ರಗಾಥಸ್ತ್ರಿವಾನ್ನವಮೇಽಹನಿ ನವಮಸ್ಯಾಹ್ನೋ ರೂಪಂ ತ್ಯಮೂಷು ವಾಜಿನಂ ದೇವಜೂತಮಿತಿ ತಾರ್ಕ್ಷ್ಯೋಽಚ್ಯುತಃ ॥**

ತೃತೀಯೇಽಹನಿ ವಿಹಿತಾನ್ಯತ್ರ ಪುನರ್ವಿಧೀಯಂತೇ—

ದ್ವಾದಶಾಹದ ಮೂರನೇ ದಿನದಲ್ಲಿ ಪಠಿಸಲಾದ ಮಂತ್ರಗಳನ್ನು ಇಲ್ಲಿ (ಒಂಭತ್ತನೆಯ ದಿನ) ಮತ್ತೆ ಪಠಿಸಬೇಕೆಂದು ಹೇಳುವರು. ಯದ್ವಾವಾನ ಪುರುತಮಂ (ಋ. ಸಂ. ೧೦-೭೪-೬) ಎಂಬುದು ಧಾಯ್ಯಾಮಂತ್ರವು ಇದರಲ್ಲಿ ಅಚ್ಯುತಲಕ್ಷಣವಿರುವುದು. ಅಭಿ ತ್ವಾ ಶೂರ ನೋನುಮಃ (ಋ. ಸಂ. ೭-೩೨-೨೨) ಎಂಬ ಋಕ್ಕನ್ನು ಯೋನಿಪ್ರದೇಶದಲ್ಲಿ ಮತ್ತೆ ಸ್ಥಾಪಿಸುವನು. ಏಕೆಂದರೆ ಒಂಭತ್ತನೆ ದಿನವು ರಥಂತರ ದಿನವೆಂದು ಹೇಳಲ್ಪಡುವುದು (ಇದರ ಸ್ಥಾನಕ್ಕನುಸಾರವಾಗಿ.)

**ಇಂದ್ರ ತ್ರಿಧಾತು ಶರಣಂ** (ಋ. ಸಂ. ೬-೪೬-೯) ಎಂಬುದು ಸಾಮುಪ್ರಗಾಥವು. ಇದರಲ್ಲಿ ತ್ರಿ (ಮೂರು) ಎಂಬ ಶಬ್ದ ಪ್ರಯೋಗವಿರುವುದು. ಆದ್ದರಿಂದ ಇದರಲ್ಲಿ ಒಂಭತ್ತನೇ ದಿನದ ಲಕ್ಷಣವಿರುವುದು. **ತ್ಯಮೂ ಷು ವಾಜಿನಂ ದೇವಜಾತಂ** (ಋ. ಸಂ. ೧೦-೧೭೮-೧) ಎಂಬ ಸೂಕ್ತವು ತಾರ್ಕ್ಷ್ಯದೇವತಾಕವು. ಇದರಲ್ಲಿ ಅಚ್ಯುತತ್ವಲಕ್ಷಣವಿರುವುದು.

## *English Translation*

(The ninth and tenth days of the Dvadasaha. Conclusion of this sacrifice)

### The characteristics of the ninth day. The Shastras of the morning and midday libations

What has the same refrain, is a characteristic of the ninth day. This day has the same characteristics as the third viz., asva, punarvarittam, rata, paryasta, the number three, antarupa, the mentioning of the deity in the last pada, an alluion to that world, suchi splendour, satyatruth, ksheti to reside, gata gone, oka house, the past tense.

Aganma maha namasa (7, 12, 1) is the Ajya hymn of the ninth day, because it contains the word "gone" (in aganma we went). it is in the Trishtubh metre.

The pra-nga Shastra consits of the following verses: praviraya (7, 90, 1) te te satyena, manasa (7, 90, 5,), divi kshyanta (7, 64, 1) a visva vara (7, 70, 1-3) ayam soma indra tubhyam sunva (7, 29, 1-3) pra Brahmano, (7, 42, 1-3), Sarasvatim devayanto (10, 17, 7-9) (6, 61, 14-16). These verses have the characteristics, suchi, i. e., splendour; satya, i. e. truth; ksheti, i. e. residence; gata, i. e. gone; oka, i. e. house. they are in the Trishtubh metre; which is the leading metre at the morning libation, during the three last days.

The extension of the Marutvatiya Shastra is the same as on the third day. The five hymns representing cohabitation which contain the characteristics of this day, and represent cattle, are, Indra svaha pibatu (3, 50); svaha here is an anta; gayat sama nabhanyam (1, 173), which contains an anta in the word svar; tishtha hari ratha (3, 35), which contains an anta in stha to stand; ima u tva purutamasya (6, 21), which contains in anta in rathestha. These four are in the Trishtubh metre. The fifth is in the Jagati metre, pra mandine pitumat (1, 101), whoe verses have the same refrain. The Jagatis being the leading metre on the three last days, the Nivid is to be put in them. These hymns in the Trishtubh and Jagati metres are repeated as representing cohabitation. For cattle. This is done for obtaining cattle. Five such hymns are repeated. For the Pankti consits of five padas; the sacrifice has the nature of the Pankti, and so have cattle also; the Chandomal are cattle; this is done for obtaining cattle.

Tvam iddhi havamahe and tvam hyeti cherave, form the Brihat Prishtha. Yad vavana is invariable Dayya. By abhi tva sura nonumo all is brought to the womb, because the ninth day is a Rathantara day according to its position. Indra tridhatu saranam (6, 46, 9-10) is the Sama Pragatha containing the characteristic "three" (The Tarkshya just as on the other day.)

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಚತುರ್ವಿಂಶಾಧ್ಯಾಯಸ್ಯ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವಾದುದು.



## ಅಥ ಚತುರ್ವಿಂಶಾಧ್ಯಾಯೇ ದ್ವಿತೀಯಃ ಖಂಡಃ

### ಇಪ್ಪತ್ತನಾಲ್ಕನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ ನಿಷ್ಕೇವಲ್ಯಶಸ್ತ್ರದ ಉಳಿದ ಭಾಗಗಳು ; ತೃತೀಯಸವನದಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳು ]



ಸಂ ಚ ತ್ವೇ ಜಗ್ಮುರ್ಗಿರ ಇಂದ್ರ ಪೂರ್ವೀರಿತಿ ಸೂಕ್ತಂ ಗತವನ್ನವಮೇಽಹನಿ ನವಮಸ್ಯಾಹ್ನೋ ರೂಪಂ ॥

ಅಥಗಮಿಧಾತುಯುಕ್ತಂ ಸೂಕ್ತಂ ವಿಧತ್ತೇ— ಜಗ್ಮುರಿತಿ ಗಮಿಧಾತುಃ ॥

ಈಗ ಗಮಿಧಾತುವಿರುವ ಸೂಕ್ತವನ್ನು ಹೇಳುವರು. **ಸಂ ಚ ತ್ವೇ ಜಗ್ಮುರ್ಗಿರ ಇಂದ್ರ ಪೂರ್ವೀಃ** ಎಂಬ ಸೂಕ್ತದಲ್ಲಿ **ಜಗ್ಮುಃ** ಎಂಬ ಕಡೆ ಗಮಿಧಾತುಪ್ರಯೋಗವಿರುವುದರಿಂದ ಇಲಿ ಒಂಭತ್ತನೇ ದಿವಸದಲ್ಲಿರಬೇಕಾದ ಲಕ್ಷಣ ವಿದ್ದಂತಾಯಿತು.

ಕದಾ ಭುವನ್ರಥಕ್ಷಯಾಣಿ ಬ್ರಹ್ಮೇತಿ ಸೂಕ್ತಂ ಕ್ಷೇತಿವದಂತರೂಪಂ ಕ್ಷೇಶೀವ ವಾ ಅಂತಂ ಗತ್ವಾ ನವಮೇಽಹನಿ ನವಮಸ್ಯಾಹ್ನೋ ರೂಪಂ ॥

**ಕ್ಷೇತಿಧಾತುಲಿಂಗಕಂ ಸೂಕ್ತಂ ವಿಧತ್ತೇ—ಕದಾ ಭುವನ್ನಿತ್ಯತ್ರ ಕ್ಷಯಾಣೇತಿ ಕ್ಷೇತಿಧಾತುರೂಪಂ ಶ್ರೂಯತೇ । ಕ್ಷೇತಿಧಾತುಶ್ಚಾಂತರೂಪಃ । ಕಥಮೇತದಿತಿ ತದುಚ್ಯತೇ । ಮಾರ್ಗಸ್ಯಾಂತಂ ಗತ್ವಾ ಕ್ಷೇತೀವ ವೈ ಕ್ವಚಿನ್ನಿವಸತ್ಯೇವ । ಅತೋ ನಿವಾಸಾರ್ಥವಾಚಿನಃ ಕ್ಷೇತಿಧಾತೋರಂತರೂಪತ್ವಂ ॥**

ಕ್ಷೇತಿಧಾತುಲಕ್ಷಣವಿರುವ ಸೂಕ್ತವನ್ನು ತಿಳಿಸುವರು. ಕದಾ ಭುವನ್ರಥಕ್ಷಯಾಣಿ ಬ್ರಹ್ಮ (ಋ. ಸಂ. ೬-೩೫-೧) ಎಂಬ ಸೂಕ್ತದಲ್ಲಿ ಕ್ಷಯಾಣಿ ಎಂಬ ಶಬ್ದವಿರುವುದು. ಈ ಶಬ್ದಕ್ಕೆ ವಾಸಮಾಡುವುದು ಎಂದರ್ಥವು. ವಾಸಮಾಡುವುದಕ್ಕೆ ಮುಂಚೆ ಪ್ರಯಾಣಮಾಡಿ ಮುಗಿಸಿ ಬಂದು ಕೊನೆಯಲ್ಲಿ (ಅಂತ್ಯ) ವಾಸಮಾಡುವುದು ಪದ್ಧತಿಯಾಗಿದೆ. ಆದ್ದರಿಂದ ಇಲ್ಲಿ ಅಂತ್ಯವನ್ನು ಸೂಚಿಸುವ ಅರ್ಥವು ಭಾಸವಾಗುವುದರಿಂದ ಒಂಭತ್ತನೇ ದಿವಸದಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

**ಆ ಸತ್ಯೋ ಯಾತು ಮಘವಾँ ಋಜೀಷೀತಿ ಸೂಕ್ತಂ ಸತ್ಯವನ್ನವಮೇಽಹನಿ ನವಮಸ್ಯಾಹ್ನೋ ರೂಪಂ ॥**

**ಸತ್ಯಲಿಂಗಕಂ ಸೂಕ್ತಂ ವಿಧತ್ತೇ—ಸತ್ಯಶಬ್ದೋಽತ್ರ ವಿಸ್ಪಷ್ಟಃ ॥**

**ಆ ಸತ್ಯೋ ಯಾತು ಮಘವಾँ ಋಜೀಷೀ** (ಋ. ಸಂ. ೪-೧೬-೧) ಎಂಬ ಸೂಕ್ತದಲ್ಲಿ ಸತ್ಯಶಬ್ದಪ್ರಯೋಗವಿರುವುದರಿಂದ ಇದರಲ್ಲಿ ಒಂಭತ್ತನೇ ದಿನದ ಲಕ್ಷಣವಿದ್ದಂತಾಯಿತು.

**ತತ್ತ ಇಂದ್ರಿಯಂ ಪರಮಂ ಪರಾಚೈರಿತಿ ಸೂಕ್ತಮಂತೋ ವೈ ಪರಮಮಂತೋ ನವಮಹರ್ನವಮೇಽಹನಿ ನವಮಸ್ಯಾಹ್ನೋ ರೂಪಂ ॥**

**ಅಂತಲಿಂಗೋಪೇತಂ ಸೂಕ್ತಂ ವಿಧತ್ತೇ—ತತ್ತ ಇತಿ ಸೂಕ್ತೇ ಪರಮಶಬ್ದ ಉತ್ಕರ್ಷವಾಚೀ ವಿದ್ಯತೇ । ಉತ್ಕರ್ಷಾದಧಿಕಸ್ಯ ಕಸ್ಯಚಿದಭಾವಾತ್ಪರಮಶಬ್ದಸ್ಯಾಂತವಾಚಿತ್ವಂ ॥**

ಅಂತಶಬ್ದವಿರುವ ಸೂಕ್ತವನ್ನು ತಿಳಿಸುವರು. **ತತ್ತ ಇಂದ್ರಿಯಂ ಪರಮಂ ಪರಾಚೈಃ** (ಋ. ಸಂ. ೧-೧೦೩-೧) ಎಂಬ ಸೂಕ್ತದಲ್ಲಿ ಪರಮಶಬ್ದವಿರುವುದು. ಪರಮ ಎಂದರೆ ಉತ್ಕರ್ಷವೆಂದರ್ಥವು. ಉತ್ಕರ್ಷಕ್ಕಿಂತ ಅಧಿಕವಾದದ್ದು ಯಾವುದೂ ಇಲ್ಲವಾದ್ದರಿಂದ ಅದೇ ಕೊನೆಯದು, ಅಂತ್ಯವು. ಈರೀತಿ ಅಂತ ಎಂಬ ಅರ್ಥವು ಭಾಸವಾಗುವುದರಿಂದ ಈ ಋಕ್ಕಿನಲ್ಲಿ ಒಂಭತ್ತನೇ ದಿನದ ಲಕ್ಷಣವಿದ್ದಂತಾಯಿತು.

**ತದು ತ್ರೈಷ್ಟುಭಂ ತೇನ ಪ್ರತಿಷ್ಠಿತಪದೇನ ಸವನಂ ದಾಧಾರಾಽಽಯತನಾದೇವೈತೇನ ನ ಪ್ರಚ್ಯವತೇ ॥**

**ಸಂ ಚ ತ್ವೇತ್ಯಾದಿಸೂಕ್ತಚತುಷ್ಟಯಗತಂ ಛಂದಃ ಪ್ರಶಂಸತಿ—**

ಸಂ ಚ ತ್ವಾ ಎಂದು ಮೊದಲಾಗುವ ನಾಲ್ಕು ಸೂಕ್ತಗಳ ಛಂದಸ್ಸನ್ನು ವಿವರಿಸುವರು. ಈ ಸೂಕ್ತದ ಋಕ್ಕುಗಳು ತ್ರಿಷ್ಟುಪ್ಛಂದಸ್ಕವು. ಈ ತ್ರಿಷ್ಟುಪ್ಛಂದಸ್ಸಿನ ಮಂತ್ರಗಳ ಪಾದಗಳಲ್ಲಿ ನಿರ್ದಿಷ್ಟಸಂಖ್ಯೆಯ ಅಕ್ಷರಗಳಿರುವವು. ಆದ್ದರಿಂದ

ಈ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳು ಈ ದಿವಸದ ಕಾರ್ಯಕಲಾಪಗಳನ್ನು ನಿರ್ವಹಿಸುವವು. ಈ ಕಾರಣದಿಂದ ಈ ಸೂಕ್ತವನ್ನು ಪಠಿಸುವ ಯಜಮಾನನು ತನ್ನ ನಿವಾಸಸ್ಥಾನದಿಂದ ಎಂದಿಗೂ ಚ್ಯುತನಾಗುವುದಿಲ್ಲ.

**ಅಹಂ ಭುವಂ ವಸುನಃ ಪೂರ್ವ್ಯಸ್ಪತಿರಿತಿ ಸೂಕ್ತಮಹಂ ಧನಾನಿ ಸಂಜ-ಯಾಮಿ ಶಶ್ವತ ಇತ್ಯಂತೋ ವೈ ಜಿತಮಂತೋ ನವಮಮಹರ್ನವ-ಮೇಽಹನಿ ನವಮಸ್ಯಾಹ್ನೋ ರೂಪಂ ॥**

ಅಂತಲಿಂಗಕಮನ್ಯತ್ಸೂಕ್ತಂ ವಿಧತ್ತೇ—ಅಹಂ ಭುವಮಿತಿ ಸೂಕ್ತಸ್ಯಾಹಂ ಧನಾನೀತಿ ದ್ವಿತೀಯಃ ಪಾದಃ । ತತ್ರ ಜಯಾಮೀತಿ ಶ್ರೂಯತೇ । ಜಯಶ್ಚ ಯುದ್ಧಸ್ಯಾಂತಃ ॥

**ಅಹಂ ಭುವಂ ವಸು ನಃ ಪೂರ್ವ್ಯಸ್ಪತಿಃ** (ಋ. ಸಂ. ೧೦-೪೮-೧) ಎಂಬ ಸೂಕ್ತದಲ್ಲಿ **ಅಹಂ ಧನಾನಿ ಸಂಜಯಾಮಿ ಶಶ್ವತಃ** ಎಂಬದು ಮೊದಲ ಋಕ್ಕಿನಲ್ಲಿ ಎರಡನೇ ಪಾದವು. ಇಲ್ಲಿ ಜಯಾಮಿ ಎಂಬ ಶಬ್ದವಿರುವುದು. ಜಯವೆಂದರೆ ಯುದ್ಧದ (ಅಂತ್ಯ) ಕೊನೆಯೆಂದು ಸ್ಪಷ್ಟವಾದ ಅರ್ಥವು ಭಾಸವಾಗುವುದು. ಹೀಗೆ ಇಲ್ಲಿ ಅಂತ್ಯಶಬ್ದಾರ್ಥವು ಭಾಸವಾಗುವುದರಿಂದ ಇಲ್ಲಿ ಒಂಭತ್ತನೆಯ ದಿವಸದ ಲಕ್ಷಣವಿದ್ದಂತಾಯಿತು.

**ತದು ಜಾಗತಂ ಜಗತ್ಯೋ ವಾ ಏತಸ್ಯ ತ್ರ್ಯಹಸ್ಯ ಮಧ್ಯಂದಿನಂ ವಹಂತಿ ತದ್ವೈತಚ್ಛಂದೋ ವಹತಿ ಯಸ್ಮಿನ್ನಿವಿದ್ಧೀಯತೇ ತಸ್ಮಾಜ್ಜಗತೀಷು ನಿವಿದಂ ದಧಾತಿ ॥**

**ತಸ್ಮಿನ್ಸೂಕ್ತೇ ನಿವಿದ್ಧಾನಂ ವಿಧತ್ತೇ—**

ಈ ಸೂಕ್ತದಲ್ಲಿರುವ ಋಕ್ಕುಗಳು ಜಗತೀಛಂದಸ್ಕವು. ಈ ಜಗತೀಛಂದಸ್ಸಿನ ಮಂತ್ರಗಳು ಈ ಒಂಭತ್ತನೇ ದಿವಸದ ಕಾರ್ಯಕಲಾಪಗಳನ್ನು ನಿರ್ವಹಿಸುವವು. ಆದಕಾರಣ ಈ ಜಗತೀಛಂದಸ್ಸಿನ ಮಂತ್ರಗಳಲ್ಲಿ ನಿವಿತ್ಪದಗಳನ್ನು ಸೇರಿಸಿ ಪಠಿಸುತ್ತಾರೆ.

**ಮಿಥುನಾನಿ ಸೂಕ್ತಾನಿ ಶಸ್ಯಂತೇ ತ್ರೈಷ್ಟುಭಾನಿ ಚ ಜಾಗತಾನಿ ಚ ಮಿಥುನಂ ವೈ ಪಶವಃ ಪಶವಶ್ಛಂದೋಮಾಃ ಪಶೂನಾಮವರುದ್ಧ್ಯೈ ಪಂಚ ಪಂಚ ಸೂಕ್ತಾನಿ ಶಸ್ಯಂತೇ ಪಂಚಪದಾ ಪಂಕ್ತಿಃ ಪಾಂಕ್ತೋ ಯಜ್ಞಃ ಪಾಂಕ್ತಾಃ ಪಶವಃ ಪಶವಶ್ಛಂದೋಮಾಃ ಪಶೂನಾಮವ-ರುದ್ಧ್ಯೈ ತಾನಿ ದ್ವೇಧಾ ಪಂಚಾನ್ಯಾನಿ ಪಂಚಾನ್ಯಾನಿ ದಶ ಸಂಪ-ದ್ಯಂತೇ ಸಾ ದಶಿನೀ ವಿರಾಳನ್ನಂ ವಿರಾಳನ್ನಂ ಪಶವಃ ಪಶವ-ಶ್ಛಂದೋಮಾಃ ಪಶೂನಾಮವರುದ್ಧ್ಯೈ ॥**

**ಸೂಕ್ತಗತಂ ಛಂದೋದ್ವಯಂ ಸೂಕ್ತಸಂಖ್ಯಾಂ ಚ ಪ್ರಶಂಸತಿ—ಮರುತ್ವತೀಯನಿಷ್ಕೇವಲ್ಯಶಸ್ತ್ರದ್ವಯಗತಸೂಕ್ತಾಪೇಕ್ಷಯಾ ಪಂಚ ಪಂಚೇತಿ ದ್ವಿರುಕ್ತಿಃ ॥**

ಮರುತ್ವತೀಯ ಮತ್ತು ನಿಷ್ಕೇವಲ್ಯ ಎಂಬ ಎರಡು ಶಸ್ತ್ರಗಳನ್ನೂ ಈ ಸೂಕ್ತಗಳಲ್ಲಿರುವ ಸೂಕ್ತಸಂಖ್ಯೆಯನ್ನೂ ಪ್ರಶಂಸೆ ಮಾಡುವರು. ಮೇಲೆ ಹೇಳಿದ ಮರುತ್ವತೀಯ ಮತ್ತು ನಿಷ್ಕೇವಲ್ಯಶಸ್ತ್ರಗಳಲ್ಲಿ ಎರಡು ವಿಧವಾದ ಛಂದಸ್ಸುಗಳಿರುವವು. ತ್ರಿಷ್ಟುಪ್ ಮತ್ತು ಜಗತೀ ಎಂಬ ಛಂದಸ್ಸುಗಳು. ಈ ಎರಡು ಛಂದಸ್ಸುಗಳನ್ನೂ ಪಠಿಸಿದರೆ ಮಿಥುನವುಂಟಾಗುವುದು ಛಂದೋಮಾಃ ಎಂಬ ಸ್ತೋಮಗಳು ಪಶುಗಳ ಸ್ವರೂಪವು. ಈ ಸ್ತೋಮಗಳನ್ನು ಪಠಿಸುವುದರಿಂದ ಪಶುಪ್ರಾಪ್ತಿಯಾಗುವುದು. ಮೇಲೆ ಹೇಳಿದ ಎರಡು ಶಸ್ತ್ರಗಳಲ್ಲಿ ಐದು ಐದು ಸೂಕ್ತಗಳನ್ನು ಪಠಿಸುವರು. ಪಂಕ್ತಿಚ್ಛಂದಸ್ಸಿನಲ್ಲಿ ಐದು ಪಾದಗಳಿರುವವು ಪಶುಗಳಲ್ಲಿಯೂ ನಾಲ್ಕು ಪಾದಗಳು ಒಂದು ಮೂತಿಯೂ ಸೇರಿ ಐದು ಮುಖ್ಯಾವಯವಗಳಿರುವವು. ಯಜ್ಞದಲ್ಲಿ ಐದು ವಿಧ ಹೋಮದ್ರವ್ಯವಿರುವುದು. ಛಂದೋಮಾ ಎಂಬ ಸ್ತೋಮಗಳೂ ಪಶುಸ್ವರೂಪವು. ಈ ಸ್ತೋಮಗಳನ್ನು ಪಠಿಸುವುದರಿಂದ ಪಶುಪ್ರಾಪ್ತಿಯಾಗುವುದು. ಮರುತ್ವತೀಯದಲ್ಲಿ ಐದು ಸೂಕ್ತಗಳೂ ನಿಷ್ಕೇವಲ್ಯಶಸ್ತ್ರದಲ್ಲಿ ಐದು ಸೂಕ್ತಗಳೂ ಒಟ್ಟಿಗೆ ಸೇರಿ ಹತ್ತು ಸೂಕ್ತಗಳಿರುವವು. ಈ ಹತ್ತುಸೂಕ್ತಗಳಿಗೂ (ಹತ್ತು ಅಕ್ಷರ ಪಾದಗಳಿರುವ) ವಿರಾಟ್‌ಛಂದಸ್ಸಿಗೂ ಸಾಮ್ಯವಿರುವುದು. ವಿರಾಟ್‌ಛಂದಸ್ಸು ಅನ್ನದ (ಆಹಾರದ) ಪ್ರತೀಕವು. ಪಶುಗಳಿಂದ ಕ್ಷೀರಾದ್ಯಾಹಾರವು ಲಭಿಸುವುದರಿಂದ ಪಶುಗಳೂ ವಿರಾಟ್ ಸ್ವರೂಪವು ಮತ್ತು ಛಂದೋಮಾ ಎಂಬ ಸ್ತೋಮಗಳೂ ಪಶುಸ್ವರೂಪವು. ಆದ್ದರಿಂದ ಛಂದೋಮಾ ಎಂಬ ಸ್ತೋಮಗಳನ್ನು ಪಠಿಸುವುದರಿಂದ ಯಜಮಾನನಿಗೆ ಪಶುಪ್ರಾಪ್ತಿಯುಂಟಾಗುವುದು.

## ತತ್ಸವಿತುರ್ವೃಣೀಮಹೇಽದ್ಯಾನೋ ದೇವ ಸವಿತರಿತಿ ವೈಶ್ವದೇವಸ್ಯ ಪ್ರತಿಪದನುಚರೌ ರಾಥಂತರೇಽಹನಿ ನವಮೇಽಹನಿ ನವಮಸ್ಯಾಹ್ನೋ ರೂಪಂ ॥

**ತೃತೀಯೇಽಹನಿ ವಿಹಿತೌ ವೈಶ್ವದೇವಸ್ಯ ಪ್ರತಿಪದನುಚರಾವತ್ರಾಪಿ ವಿಧತ್ತೇ**

**ತತ್ಸವಿತುರ್ವೃಣೀಮಹೇ** (ಋ. ಸಂ. ೫-೮೨-೧) ಎಂಬ ಋಕ್ಕು ಮೂರನೇ ದಿನದಲ್ಲಿಯೂ ಮತ್ತು ಒಂಭತ್ತನೇ ದಿನದಲ್ಲಿ ಪಠಿಸಬೇಕಾದ ವೈಶ್ವದೇವಶಾಸ್ತ್ರದ ಪ್ರತಿಪತ್ (ಮೊದಲನೇ) ಋತು. **ಅದ್ಯಾನೋ ದೇವ ಸವಿತಃ** (ಋ. ಸಂ. ೫-೮೨-೪) ಎಂಬ ಋಕ್ಕು ವೈಶ್ವದೇವಶಸ್ತ್ರದ ಅನುಚರ (ಎರಡನೇ) ಋಕ್ಕು. ಇವುಗಳನ್ನು ರಾಥಂತರದಿನವಾದ ಒಂಭತ್ತನೇ ದಿನದಲ್ಲಿ ಪಠಿಸಬೇಕು.

## ದೋಷೋ ಆಗಾದಿತಿ ಸಾವಿತ್ರಮಂತೋ ವೈ ಗತಮಂತೋ ನವಮಮಹರ್ನವಮೇಽಹನಿ ನವಮಸ್ಯಾಹ್ನೋ ರೂಪಂ ॥

**ಅಂತಲಿಂಗಕಂ ತ್ರ್ಯೃಚಾತ್ಮಕಂ ಸೂಕ್ತಂ ವಿಧತ್ತೇ—ಆಗಾದಿತಿ ಗಮಿಧಾತ್ವರ್ಥಃ । ಗಮನಂ ಚ ಸ್ಥಿತೇರಂತಃ । ಅತೋಽಂತತ್ವಂ ಲಿಂಗಂ ॥**

**ದೋಷೋ ಆಗಾತ್** ಎಂಬುದು ಸವಿತೃದೇವತಾಕವು. ಇಲ್ಲಿ ಆಗಾತ್ ಎಂದು ಗಮಿಧಾತುವಿರುವುದು. ಗಮನವು ಸ್ಥಿತಿಗೆ (ಸುಮ್ಮನೆ ಇರುವುದಕ್ಕೆ) ಅಂತವು ಆದ್ದರಿಂದ ಈ ತತ್ವಲಕ್ಷಣವು ಒಂಭತ್ತನೇ ದಿವಸದ ಲಕ್ಷಣವಾಗಿರುವುದು.

**ಪ್ರ ವಾಂ ಮಹಿ ದ್ಯವೀ ಅಭೀತಿ ದ್ಯಾವಾಪೃಥಿವೀಯಂ ಉಪ ಪ್ರಶಸ್ತಯ ಇತಿ ಶುಚಿವನ್ನವಮೇಽಹನಿ ನವಮಸ್ಯಾಹ್ನೋ ರೂಪಂ ॥**

**ಶುಚಿಲಿಂಗಕಂ ಸೂಕ್ತಸ್ಥಾನೀಯಂ ತ್ರ್ಯೃಚಂ ವಿಧತ್ತೇ- ಮಹಿದ್ಯವೀ ಇತಿ ಶ್ರವಣಾದಿದಂ ದ್ಯಾವಾಪೃಥಿವೀಯಂ । ತಸ್ಯ ತೃತೀಯಪಾದೇ ಶುಚೀ ಉಪೇತಿ ಶುಚಿಶಬ್ದಃ ಶ್ರೂಯತೇ ॥**

**ಪ್ರ ವಾಂ ಮಹಿ ದ್ಯವೀ ಅಭಿ** (ಋ. ಸಂ. ೪-೫೬-೫) ಎಂಬ ಋಕ್ಕು ದ್ಯಾವಾಪೃಥಿವೀದೇವತಾಕವು. ಈ ಋಕ್ಕಿನ ಮೂರನೇ ಪಾದದಲ್ಲಿ ಶುಚೀ ಎಂಬ ಶಬ್ದವಿರುವುದರಿಂದ ಒಂಭತ್ತನೇ ದಿನದ ಮಂತ್ರಗಳಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

**ಇಂದ್ರ ಇಷೇ ದದಾತು ನಸ್ತೇ ನೋ ರತ್ನಾನಿ ಧತ್ತನೇತ್ಯಾರ್ಭವಂ ತ್ರಿರಾ ಸಾಪ್ತಾನಿ ಸುನ್ವತ ಇತಿ ತ್ರಿವನ್ನವಮೇಽಹನಿ ನವಮಸ್ಯಾಹ್ನೋ ರೂಪಂ**

**ತ್ರಿಶಬ್ದೋಪೇತಂ ಸೂಕ್ತಸ್ಥಾನೀಯಂ ತ್ರ್ಯೃಚಂ ವಿಧತ್ತೇ— ಇಂದ್ರ ಇಷ ಇತ್ಯೃಗೇಕಾ ತೇ ನೋ ರತ್ನಾನೀತಿ ದ್ವೇ ತ್ರಿತಯಂ ಮಿಲಿತ್ವಾ, ಋಭುದೇವತಾಕಂ ಸೂಕ್ತಂ । ಋಭುಕ್ಷಣಮೃಭುಮಿತಿ ಶ್ರವಣಾತ್ । ತ್ರಿರಾ ಸಾಪ್ತಾನೀತಿ ಪಾದೇ ತ್ರಿಶಬ್ದಃ ಶ್ರುತಃ ॥**

ತ್ರಿಶಬ್ದವಿರುವ ಒಂದು ತೃಚವನ್ನು ತಿಳಿಸುವರು. **ಇಂದ್ರ ಇಷೇ ದದಾತು ನಃ** (ಋ. ಸಂ. ೮-೯೪-೩೪) ಎಂಬುದು ಒಂದು ಋಕ್ಕು. **ತೇ ನೋ ರತ್ನಾನಿ ಧತ್ತನ** (ಋ. ಸಂ. ೧-೨೦-೭) ಎಂಬುದೂ ಅದರ ಮುಂದಿನ ಋಕ್ಕು. ಈ ಮೂರು ಋಕ್ಕುಗಳೂ ಸೇರಿ ಒಂದು ತೃಚವಾಗುವುದು. ಈ ಸೂಕ್ತವು ಋಭುದೇವತಾಕವು. **ಋಭುಕ್ಷಣಂ** ಎಂದು ಋಭುವಿನ ಹೆಸರಿರುವುದು. ತ್ರಿರಾ ಸಾಪ್ತಾನಿ ಎಂಬ ಪಾದದಲ್ಲಿ ತ್ರಿಶಬ್ದವಿರುವುದರಿಂದ ಇಲ್ಲಿ ಒಂಭತ್ತನೆಯ ದಿವಸದ ಲಕ್ಷಣವಿದ್ದಂತಾಯಿತು.

**ಬಭ್ರುರೇಕೋ ವಿಷುಣಃ ಸೂನರೋ ಯುವೇತಿ ದ್ವಿಪದಾಃ ಶಂಸತಿ ದ್ವಿಪಾದ್ವೈ ಪುರುಷಶ್ಚತುಷ್ಪಾದಾಃ ಪಶವಃ ಪಶವಶ್ಛಂದೋಮಾಃ ಪಶೂನಾಮವರುದ್ಧ್ಯೈ ತದ್ಯದ್ದ್ವಿಪದಾಃ ಶಂಸತಿ ಯಜಮಾನಮೇವ ತದ್ದ್ವಿಪ್ರತಿಷ್ಠಂ ಚತುಷ್ಪಾತ್ಸು ಪಶುಷು ಪ್ರತಿಷ್ಠಾಪಯತಿ ॥**

**ಪಾದದ್ವಯೋಪೇತಾ ಋಚೋ ವಿಧಾಯ ಪ್ರಶಂಸತಿ—**

ಎರಡು ಪಾದಗಳು ಮಾತ್ರವಿರುವ ಋಕ್ಕುಗಳನ್ನು ತಿಳಿಸಿ ಅವನ್ನು ಪ್ರಶಂಸೆಮಾಡುತ್ತಾರೆ. **ಬಭ್ರುರೇಕೋ ವಿಷುಣಃ ಸೂನರೋ ಯುವಾ** (ಋ. ಸಂ. ೮-೨೯-೧) ಎಂಬ ಸೂಕ್ತವು ದ್ವಿಪದಾಛಂದಸ್ಕವು. ಪುರುಷನಿಗೆ ಎರಡು ಪಾದಗಳಿರುವವು. ಪಶುಗಳಿಗೆ ನಾಲ್ಕು ಪಾದಗಳಿರುವವು. ಪಶುಗಳು ಛಂದೋಮಾ ಎಂಬ ಸ್ತೋಮಗಳ ಸ್ವರೂಪವು. ಈ ಛಂದೋಮಾ ಎಂಬ ಚತುರ್ವಿಂಶ, ಚತುಶ್ಚತ್ವಾರಿಂಶ, ಅಷ್ಟಾಚತ್ವಾರಿಂಶ ಎಂಬ ಮೂರು ಸ್ತೋಮಗಳನ್ನು ಪಠಿಸುವುದರಿಂದ ಎರಡು ಪಾದಗಳಿರುವ

ಯಜ್ಞಮಾಡುವ ಯಜಮಾನನಲ್ಲಿ ನಾಲ್ಕು ಪಾದಗಳಿರುವ ಪಶುಗಳು ನೆಲೆಸಿ ವೃದ್ಧಿಯನ್ನೈದುವವು. ಈ ದ್ವಿಪದಾಛಂದಸ್ಸಿನ ಸೂಕ್ತವನ್ನು ಪಠಿಸುವುದರಿಂದ ನಾಲ್ಕು ಪಾದಗಳಿರುವ ಪಶುಗಳಿಗೆ ಯಜಮಾನನು ಒಡೆಯನಾಗಿರುವಂತೆ ಹೋತೃವು ಕಲ್ಪಿಸುವನು.

**ಯೇ ತ್ರಿಂಶತಿ ತ್ರಯಸ್ಪರ ಇತಿ ವೈಶ್ವದೇವಂ ತ್ರಿವನ್ನವೇಽಹನಿ ನವಮ-ಸ್ಯಾಹ್ನೋ ರೂಪಂ ॥**

ತ್ರಿಶಬ್ದೋಪೇತಂ ಬಹುದೇವತಾಕಂ ಸೂಕ್ತಂ ವಿಧತ್ತೇ—ತ್ರಿಂಶತೀತಿ ಶ್ರವಣಾದ್ಬಹು-ದೇವತಾಕತ್ವಂ । ತ್ರಯ ಇತಿ ತ್ರಿಶಬ್ದೋ ವಿಸ್ಪಷ್ಟಃ ॥

**ಯೇ ತ್ರಿಂಸತಿ ತ್ರಯಸ್ಪರ** (ಋ. ಸಂ. ೮–೨೮–೧) ಎಂಬ ಸೂಕ್ತದಲ್ಲಿ ತ್ರಿಂಶತಿ (ಮೂವತ್ತು) ಎಂಬ ಶಬ್ದವಿರುವುದರಿಂದ ಈ ಸೂಕ್ತವು ಬಹು ದೇವತಾಕವು. ಇದರಲ್ಲಿ ತ್ರಿಶಬ್ದವಿರುವುದರಿಂದ ಒಂಭತ್ತನೇ ದಿನದಲ್ಲಿರಬೇಕಾದ ಲಕ್ಷಣಗಳು ಇಲ್ಲಿದ್ದಂತಾಯಿತು.

**ತಾನ್ಯು ಗಾಯತ್ರಾಣಿ ಗಾಯತ್ರತೃತೀಯಸವನ ಏಷ ತ್ರ್ಯಹಃ ॥**

ತತ್ಸೂಕ್ತಗತಂ ಛಂದಃ ಪ್ರಶಂಸತಿ—ತಾನ್ಯು ವೈಶ್ವದೇವಶಸ್ತ್ರೇ ಪ್ರೋಕ್ತಾನಿ ತಾನ್ಯಪಿ ಸೂಕ್ತಾನಿ ॥

ಈ ಸೂಕ್ತದ ಛಂದಸ್ಸನ್ನು ವಿವರಿಸುವರು. ಈ ವೈಶ್ವದೇವಶಸ್ತ್ರದಲ್ಲಿರುವ ಸೂಕ್ತಗಳು ಗಾಯತ್ರೀಛಂದಸ್ಕವು. ಈ ಕೊನೆಯ ತ್ರ್ಯಹದಲ್ಲಿ ಗಾಯತ್ರೀಛಂದಸ್ಸಿನ ಋಕ್ಕುಗಳು ತೃತೀಯಸವನದ ಕಾರ್ಯಕಲಾಪಗಳನ್ನು ನಿರ್ವಹಿಸುವವು.

**ವೈಶ್ವಾನರೋ ನ ಊತಯ ಇತ್ಯಾಗ್ನಿಮಾರುತಸ್ಯ ಪ್ರತಿಪದಾ ಪ್ರಯಾತು ಪರಾವತ ಇತ್ಯಂತೋ ವೈ ಪರಾವತೋಽನ್ತೋ ನವಮಮಹರ್ನವ-ಮೇಽಹನಿ ನವಮಸ್ಯಾಹ್ನೋ ರೂಪಂ ॥**

ಶಸ್ತ್ರಾಂತರಸ್ಯ ಪ್ರತಿಪದಂ ವಿಧತ್ತೇ—ಅತ್ರ ಸೂತ್ರಪಠಿತೇ ತ್ರ್ಯಚೇ ಪರಾವತ ಇತಿ ಶಬ್ದೋ ದೂರದೇಶವಾಚೀ । ಸ ಚ ದೇಶೋ ಮಾರ್ಗಸ್ಯಾಂತ ಇತ್ಯಂತವತ್ತ್ವಂ ಲಿಂಗಂ ॥

ಅಗ್ನಿಮಾರುತಶಸ್ತ್ರದ ಪ್ರತಿಪತ್ ಋಕ್ಕನ್ನು (ಋಗ್ವೇದವಲ್ಲದ) ತಿಳಿಸುವರು (**ವೈಶ್ವಾನರೋ ನ ಊತಯಃ** ಎಂಬ ಮಂತ್ರವು. ಅಗ್ನಿಮಾರುತಶಸ್ತ್ರದ ಪ್ರತಿಪತ್ ಋಕ್ಕು **ಆ ಪ್ರಯಾತು ಪರಾವತಃ** ಎಂಬ ಮಂತ್ರವು ಕೊನೆಯದು. ಇಲ್ಲಿ ಪರಾವತಃ (ದೂರದ) ಎಂಬ ಶಬ್ದವು ಅಂತ್ಯವನ್ನು (ಕೊನೆಯನ್ನು) ಸೂಚಿಸುವುದು. ಆದ್ದರಿಂದ ಇಲ್ಲಿ ಒಂಭತ್ತನೇ ದಿವಸದ ಲಕ್ಷಣವಿದ್ದಂತಾಯಿತು.

**ಮರುತೋ ಯಸ್ಯ ಹಿ ಕ್ಷಯ ಇತಿ ಮಾರುತಂ ಕ್ಷೇತಿವದಂತರೂಪಂ ಕ್ಷೇತೀವ ವಾ ಅಂತಂ ಗತ್ವಾನವಮೇಽಹನಿ ನವಮಸ್ಯಾಹ್ನೋ ರೂಪಂ ॥**

ಪ್ರಕಾರಾಂತರೇಣಾಂತಲಿಂಗಕಂ ಸೂಕ್ತಂ ವಿಧತ್ತೇ– ಮರುತ ಇತಿ ಶ್ರವಣಾನ್ಮಾರುತಂ। ಕ್ಷಯ ಇತಿ ಶ್ರವಣಾತ್ ಕ್ಷೇತಿವತ್ ಕ್ಷಯತಿಧಾತುಯುಕ್ತಂ। ಸ ಚ ಧಾತ್ವರ್ಥೋಽತ್ರ ಸ್ವರೂಪಂ। ಕಥಮೇತದಿತಿ ತದುಚ್ಯತೇ। ಸರ್ವೋಽಹಿ ಪುರುಷೋ ಮಾರ್ಗಸ್ಯಾಂತಂ ಗತ್ವಾ ಕ್ಷೇತೀವ ವೈ ಕ್ವಚಿನ್ನಿವಸತ್ಯೇವ ಸೋಽಯಮಂತೋ ಲಿಂಗಂ ॥

ಅಂತ (ಕೊನೆ) ಶಬ್ದಲಕ್ಷಣವಿರುವ ಸೂಕ್ತವನ್ನು ತಿಳಿಸುವರು. **ಮರುತೋ ಯಸ್ಯ ಹಿ ಕ್ಷಯೇ** (ಋ. ಸಂ. ೧-೮೬-೧) ಎಂಬ ಸೂಕ್ತದ ಪ್ರಾರಂಭದಲ್ಲಿಯೇ ಮರುತಃ ಎಂಬ ಶಬ್ದವಿರುವುದರಿಂದ ಈ ಸೂಕ್ತವು ಮರುದ್ದೇವತಾಕವು. ಈ ಋಕ್ಕಿನಲ್ಲಿ ಕ್ಷಯ (ನಿವಾಸಸ್ಥಾನ) ಎಂಬ ಹೆಸರಿನ ಪದವಿರುವುದರಿಂದ ಮಾರ್ಗಕ್ರಮಣಾನಂತರ ವಾಸವು ಎಂದು ಭಾಸವಾಗುವುದು. ವಾಸಮಾಡುವುದು ಮಾರ್ಗಕ್ರಮಣದ ಕೊನೆಯನ್ನು ಸೂಚಿಸುವುದು ಎಂದರೆ ಅಂತ (ಕೊನೆ) ಎಂಬ ಅರ್ಥವಿರುವ ಶಬ್ದವಿರುವುದರಿಂದ ಇಲ್ಲಿ ಒಂಭತ್ತನೇ ದಿನದಲ್ಲಿರಬೇಕಾದ ಲಕ್ಷಣವಿದ್ದಂತಾಯಿತು.

## ಜಾತವೇದಸೇ ಸುನವಾಮಸೋಮಮಿತಿ ಜಾತವೇದಸ್ಯಾಽಚ್ಯುತಾ ॥

ಅಚ್ಯುತತ್ವಲಿಂಗಯುಕ್ತಾಮೃಚಂ ವಿಧತ್ತೇ—

**ಜಾತವೇದಸೇ ಸುನವಾಮ ಸೋಮಂ** (ಋ. ಸಂ. ೧-೯೯-೧) ಎಂಬ ಸೂಕ್ತವು ಜಾತವೇದೋದೇವತಾಕವು. ಇದರಲ್ಲಿ ಅಚ್ಯುತತ್ವಲಕ್ಷಣವಿರುವುದು.

## ಪ್ರಾಗ್ನಯೇ ವಾಚಮೀರಯೇತಿ ಜಾತವೇದಸ್ಯಂ ಸಮಾನೋದರ್ಕಂ ನವಮೇಽಹನಿ ನವಮಸ್ಯಾಹ್ನೋ ರೂಪಂ ॥

ಜಾತವೇದೋವಾಚಕಾಗ್ನಿಶಬ್ದೋಪೇತಂ ಸೂಕ್ತಂ ವಿಧತ್ತೇ –ಏತದೀಯಾಸ್ವೃಕ್ಷು ಸ ನಃ ಪರ್ಷದತಿ ದ್ವಿಷ ಇತಿ ಪಾದೇನ ಸಮಾಪ್ತಿದರ್ಶನಾತ್ಸಮಾನೋದರ್ಕತ್ವಂ ॥

**ಪ್ರಾಗ್ನಯೇ ವಾಚಮೀರಯ** (ಋ. ಸಂ. ೧೦.೧೮೮-೧) ಎಂಬ ಸೂಕ್ತವು ಜಾತವೇದೋದೇವತಾಕವು. ಇದರಲ್ಲಿರುವ ಋಕ್ಕುಗಳ ಕೊನೆಯಲ್ಲಿ ಸ ನಃ ಪರ್ಷದತಿ ದ್ವಿಷಃ ಎಂಬ ಪದಗಳಿರುವುದರಿಂದ, ಪ್ರತಿಯೊಂದು ಋಕ್ಕು ಒಂದೇ ವಿಧವಾದ ಪರಿಸಮಾಪ್ತಿ (ಸಮಾನೋದರ್ಕ) ಯುಳ್ಳದ್ದಾಗಿರುವುದು. ಈ ವಿಧವಾದ ಸಮಾನೋದರ್ಕವು ಒಂಭತ್ತನೇ ದಿವಸದ ಲಕ್ಷಣವಾಗಿರುವುದರಿಂದ ಇಲ್ಲಿ ಆ ದಿವಸದ ಲಕ್ಷಣವಿದ್ದಂತಾಯಿತು.

## ಸ ನಃ ಪರ್ಷದತಿ ದ್ವಿಷಃ ಸ ನಃ ಪರ್ಷದತಿ ದ್ವಿಷ ಇತಿ ಶಂಸತಿ ಬಹು ವಾ ಏತಸ್ಮಿನ್ನವರಾತ್ರೇ ಕಿಂಚ ಕಿಂಚ ವಾರಣಂ ಕ್ರಿಯತೇ ಶಾಂತ್ಯಾ ಏವ ತದ್ಯತ್ಸ ನಃ ಪರ್ಷದತಿ ದ್ವಿಷಃ ಸ ನಃ ಪರ್ಷದತಿ ದ್ವಿಷಃ ಇತಿ ಶಂಸತಿ ಸರ್ವಸ್ಮಾದೇವೈನಾಂಸ್ತದೇನಸಃ ಪ್ರಮುಂಚತಿ

ತಸ್ಯ ಪಾದಸ್ಯ ಪುನಃ ಪುನರಾವೃತ್ತಿಂ ದರ್ಶಯತಿ-- ಸ ನ ಇತ್ಯಾದಿಪಾದಸ್ಯ ಸರ್ವಾಸ್ವೃಕ್ಷು ಪಠಿತಸ್ಯ ಸಂಗ್ರಹಾರ್ಥಂ ವೀಪ್ಸಾರೂಪೇಣ ದ್ವಿರುಕ್ತಿಃ । ಏವಮೇವ ಪಾದಂ ಪುನಃ ಪುನಃ ಶಂಸತೀತ್ಯತ್ರ ಕೋಽಭಿಪ್ರಾಯ ಇತಿ ಸೋಽಭಿಧೀಯತೇ । ಏತಸ್ಮಿನ್ನವರಾತ್ರೇ ತ್ರಿವಿಧತ್ರ್ಯಹಸಮುಷ್ಟಿರೂಪೇ ಪ್ರಯೋಗಾಧಿಕ್ಯಾತ್ತದಾ ತದಾ ವಿಸ್ಮೃತ್ಯ ಕಿಮಪಿ ವಾರಣೀಯಂ ನಿಷಿದ್ಧಾನುಷ್ಠಾನಂ ಬಹು ವೈ ಪ್ರಭೂತಮೇವ ಕ್ರಿಯತೇ ಅತಃ ಸ್ವಶಾಂತ್ಯರ್ಥಮೇವ ಪುನಃ ಪುನಃ ಶಸ್ಯತೇ । ತೇನ ಸ ನ ಇತ್ಯಾದೇಃ ಪುನಃ ಪುನಃ ಶಂಸನೇನ ತಸ್ಮಾತ್ಸರ್ವಸ್ಮಾನ್ನಿಷಿದ್ಧಾಚರಣಪಾಪಾದೇನಾನೃತ್ವಿಗ್ಯಜಮಾನಾನ್ ಪ್ರಮೋಚಯತಿ । ತಸ್ಯ ಪಾದಸ್ಯಾಯಮರ್ಥಃ— ಯಸ್ಯಾಗ್ನಯೇ ಸ್ತುತಿರೂಪಾ ವಾಗೀರ್ಯತೇ ಸೋಽಗ್ನಿಃ ಪಾಪರೂಪಾನ್ ಶತ್ರೂನತಿಕ್ರಮ್ಯ ನೋಽಸ್ಮಾನ್ಪರ್ಷದ್ವಿಘ್ನ ಪರಿಹಾರೇಣ ಕರ್ಮಪಾರಂ ನಯತ್ವಿತಿ ॥

ಈ ಸೂಕ್ತದ ಪ್ರತಿಋಕ್ಕಿನ ಕೊನೆಯಲ್ಲಿಯೂ **ಸ ನಃ ಪರ್ಷದತಿ ದ್ವಿಷಃ** ಎಂದಿರುವ ವಿಷಯವನ್ನು ಪ್ರಶಂಸೆ ಮಾಡುವರು. ಈ ದ್ವಾದಶಾಹದ ನವರಾತ್ರ ಎಂದರೆ ಒಂಭತ್ತು ದಿನಗಳನ್ನು ಮೂರು ದಿನಗಳಿಗೆ ಒಂದರಂತೆ ಮೂರು ಗುಂಪುಗಳನ್ನಾಗಿ ವಿಭಾಗಿಸಿ ಅದರಂತೆ ಮಂತ್ರಾದಿಗಳನ್ನು ಪಠಿಸಿದ್ದನ್ನೇ ಪುನಃ ಪುನಃ ಪಠಿಸಬೇಕಾಗುವುದು. ಈ ಕಾರಣದಿಂದ ಮಂತ್ರ ಪಠನಕಾರ್ಯದಲ್ಲಿ ಅನೇಕ ಲೋಪದೋಷಗಳೂ ತಪ್ಪುಗಳೂ ಉಂಟಾಗುವ ಸಂಭವವಿರುವುದು. ಇವುಗಳ (ತಪ್ಪು ಅಥವಾ ಪಾಪಗಳ) ಪರಿಹಾರಕ್ಕಾಗಿ ಇಲ್ಲಿ ಅಗ್ನಿಯನ್ನು ಅನೇಕಾವರ್ತಿ **ಸ ನಃ ಪರ್ಷದತಿ ದ್ವಿಷಃ** ಪಾಪರೂಪವಾದ ನಮ್ಮ ಶತ್ರುಗಳನ್ನು ಪರಿಹಾರಮಾಡು ಎಂದು ಅಗ್ನಿಯನ್ನು ಪುನಃಪುನಃ ಪ್ರಾರ್ಥಿಸುವುದು ಈ ಕಾರಣಕ್ಕಾಗಿಯೇ ಆಗಿರುವುದು.

ತಾನ್ಯು ಗಾಯತ್ರಾಣಿ ಗಾಯತ್ರತೃತೀಯಸವನ ಏಷ ತ್ರ್ಯಹಃ ॥

ಏತಚ್ಛಸ್ತ್ರಗತಸೂಕ್ತೇಷು ಚ್ಛಂದಃ ಪ್ರಶಂಸತಿ—

ಈ ಸೂಕ್ತದ ಋಕ್ಕುಗಳು ಗಾಯತ್ರೀಛಂದಸ್ಸವು ಮತ್ತು ಈ ಕೊನೆಯ ತ್ರ್ಯಹದ (ಮೂರು ದಿನಗಳ ಎಂದರೆ ಏಳು, ಎಂಟು, ಒಂಭತ್ತನೇ ದಿನಗಳ ಗುಂಪು) ಕಾರ್ಯಕಲಾಪಗಳನ್ನು ನಿರ್ವಹಿಸುವವು. ಆದ್ದರಿಂದ ಈ ತ್ರ್ಯಹದ ಕಾರ್ಯನಿರ್ವಾಹಕ್ಕಾಗಿ ಗಾಯತ್ರೀಛಂದಸ್ಸಿನ ಸೂಕ್ತವನ್ನು ಇಲ್ಲಿ ಪಠಿಸುವುದು ನ್ಯಾಯವಾಗಿದೆ.

*English Translation*

**The remainder of the Nishkevalya Shastra.**

**The Shastras of the evening libation.**

There are five other pair-hymns enumerated, the four first are in the Trishtubh, the fifth in the Jagati metre. These are sam cha tve jagnur (6, 34,) which contains the word "gone" kada bhuvan (6, 35) which contains the word "kshi" to reside in kshayani, which is an autarupa, "he resides, as it were, gone to an end having gained his object, a satyo yatu (4, 16) which contains satya truth, tat ta indriyam paraman (1, 103), which contains an anta in the word

"paramam" i.e. highest. Aham bhuvam (10, 48, 1) which contains an anta in jayami, I conquer.

The commencement and sequel of the Vaisvadeva Shastra is, tat savitur vrinimahe, and adya no deva Savitar. The Nivid hymn for Savitar is dosho agat? The Nivid hymn for Dyavaprithivi is, pravam mahi dyavi abhi (4, 56, 5-7).

Indra ishe dadatu nah (8, 82, 34), te no ratnani (1, 20, 7-8) from the Nivid hymn for the Ribhus, the words trir a saptani (1, 20, 7) contain the characteristic "Three". Babhrur eko vishunah (8, 29) is the Dvipada. By repeating a Dvipada the Hotar puts the two-legged sacrificer among the four-legged animals. Ye trimsati trayas para (8, 28) is the Nivid hymn for the visvedevah, because it contains the term "three" Vaisvanaro na utaye (asv Sr. S. 8-11) is the Pratipad of the Agnimaruta Shastra; it contains the term paravatah, which is an anta.

Maruto yasya hi kshaya (1, 86) is the Nivid hymn for the Marutas. It contains the term kshi to reside, which is an antarupam; for one resides, as it were, after having gone to a certain object.

The Nivid hymn for Jatavedas is, pragnaye vacham traya (10, 187) (each verse of which ends with) sa nah parshad ati dvishah, i.e. may he (Agni) overcome our enemies, and bring safely our ceremonies to a conclusion. He repeats this refrain twice. For in this Navaratra sacrifice which is lasting for nine days, there are so many ceremonies, that the committal of a mistake is unavoidable. In order to make good any such mistake, the pada mentioned must be repeated twice. By doing so, the Hotar makes them (the priests and sacrifices) free from all guilt. These verses are in the Gayatri metre; for the Gayatri is the leading metre at the evening libation during the three last days.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಚತುರ್ವಿಂಶಾಧ್ಯಾಯಸ್ಯ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವಾದುದು.



## ಅಥ ಚತುರ್ವಿಂಶಾಧ್ಯಾಯೇ ತೃತೀಯಃ ಖಂಡಃ

### ಇಪ್ಪತ್ತನಾಲ್ಕನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ ದ್ವಾದಶಾಹದ ನಾನಾಭಾಗಗಳನ್ನು ಯಾವುದಕ್ಕೆ ಹೋಲಿಸಬಹುದು ? ಹತ್ತನೇ ದಿನದ ಕಾರ್ಯಕಲಾಪಗಳು.]



**ಪೃಷ್ಠ್ಯಂ ಷಳಹಮುಪಯಂತಿ ಯಥಾ ವೈ ಮುಖಮೇವಂ ಪೃಷ್ಠ್ಯಃ ಷಳಹಸ್ತದ್ಯಥಾಽನ್ತರಂ ಮುಖಸ್ಯ ಜಿಹ್ವಾ ತಾಲು ದಂತಾ ಏವಂ ಛಂದೋಮಾ ಅಥ ಯೇನೈವ ವಾಚಂ ವ್ಯಾಕರೋತಿ ಯೇನ ಸ್ವಾದು ಚಾಸ್ವಾದು ಚ ವಿಜಾನಾತಿ ತದ್ದಶಮಮಹಃ ॥**

ದ್ವಾದಶಾಹೇ ಪ್ರಾಯಣೀಯೋದಯನೀಯರೂಪಮಾ (ಹೇ ಅ) ದ್ಯಂತೇ ಯೇ ಅಹನೀ ತಯೋರ್ಮಧ್ಯೇ ದಶರಾತ್ರೋಽಸ್ತಿ ತಸ್ಮಿಂಶ್ಚ ತ್ರಯೋಭಾಗಾಃ ಪೃಷ್ಠ್ಯಃ ಷಡಹ ಏಕೋ ಭಾಗಃ । ಛಂದೋಮನಾಮಕಾಸ್ತ್ರಯೋಽಹರ್ವಿಶೇಷಾ ದ್ವಿತೀಯೋ ಭಾಗಃ । ದಶಮ-ಮಹಸ್ತೃತೀಯೋ ಭಾಗಸ್ತಸ್ಯ ಭಾಗಸ್ಯ ವಿಧೇಯತಯಾ ಪ್ರಶಂಸಾ ಕರ್ತವ್ಯಾ । ಇತರಭಾಗ-ಯೋರಪ್ಯತ್ರ ಯಾ ಪ್ರಶಂಸಾ ಪ್ರತೀಯತೇ ಸಾಽಪಿ ವಿಧೇಯಸ್ಯ ದಶಮಸ್ಯಾಹ್ನಃ ಪ್ರಶಂಸಾ-ರ್ಥಮೇವ ತಸ್ಮಿನ್ನಹನಿ ಪ್ರಶಂಸಾತಿಶಯಸ್ಯ ಗಮ್ಯಮಾನತ್ವಾತ್ । ತತ್ರ ಚತ್ವಾರೋ ದೃಷ್ಟಾಂತಾ ವಿವಕ್ಷಿತಾಃ । ತೇಷಾಂ ಮಧ್ಯೇ ಪ್ರಥಮೇನ ದೃಷ್ಟಾಂತೇನ ಪ್ರಶಂಸತಿ— ಯಾಜ್ಞಿಕಾ ದಶರಾತ್ರೇ ಪೃಷ್ಠ್ಯಂ ಷಡಹಮನುತಿಷ್ಠಂತಿ ಸ ಮುಖಸ್ಥಾನೀಯೋ ಮುಖಸ್ಯಾಂಭ್ಯಂತರೇ ಜಿಹ್ವಾ ತಾಲು ದಂತಾಶ್ಚೇತಿ ತ್ರಯೋಽವಯವಾಸ್ತಿಷ್ಠಂತಿ ತತ್ಸ್ಥಾನೀಯಾಸ್ತ್ರಯಶ್ಛಂದೋಮಾಃ । ಅಥ ತದ್ಯೇನ ವಿಲಕ್ಷಣೇನ ಯೇನೈವ ವಾಗಿಂದ್ರಿಯೇಣ ವಾಚಂ ವ್ಯಾಕರೋತಿ ಶಬ್ದಮುಚ್ಚಾರಯತಿ ಯೇನ ಚ ರಸನೇಂದ್ರಿಯೇಣ ಸ್ವಾದ್ವಸ್ವಾದುವಿಭಾಗಂ ಜಾನಾತಿ ತದಿಂದ್ರಿಯದ್ವಯಸ್ಥಾನೀ-ಯ ಮೇತದ್ದಶಮಮಹಃ ॥

ದ್ವಾದಶಾಹವೆಂಬ ಸತ್ರಯಾಗದಲ್ಲಿ ಪ್ರಾಯಣೀಯ ಮತ್ತು ಉದಯನೀಯ ಎಂಬ ಇಷ್ಟಿಗಳನ್ನು ಮಾಡುವ ದಿನಗಳು ಪ್ರಾರಂಭದ ಮತ್ತು ಕೊನೆಯ ದಿನಗಳು ಈ ಮೊದಲ ಮತ್ತು ಕೊನೆಯ ದಿನಗಳ ಮಧ್ಯದಲ್ಲಿ ದಶರಾತ್ರ ಎಂದರೆ ಹತ್ತುದಿನಗಳ ಅವಧಿ ಇರುವುದು. ಈ ಅವಧಿಯನ್ನು ಮೂರು ಭಾಗವಾಗಿ ವಿಂಗಡಿಸಿರುವರು. ಈ ಮೂರು ಭಾಗಗಳಲ್ಲಿ **ಪೃಷ್ಠ್ಯಃ ಷಡಹ** ಎಂಬುದು ಒಂದುಭಾಗವು. ಛಂದೋಮ ಎಂಬ ಹೆಸರಿನಿಂದ ಕರೆಯಲ್ಪಡುವ ಮೂರು ದಿನಗಳ ಅವಧಿಗೆ (ಮೂರು ದಿನಗಳ ಗುಂಪಿಗೆ) ಎರಡನೇ ಭಾಗವೆಂದು ಹೆಸರು. ಹತ್ತನೇ ದಿವಸವು (ದಶಮಮಹ) ಮೂರನೆಯ ಭಾಗವು. ಈ ಮೂರು ಭಾಗಗಳಲ್ಲಿ ಮೊದಲನೆಯ **ಪೃಷ್ಠ್ಯಷಡಹ**ವೆಂಬ ಭಾಗದಲ್ಲಿ ಆರುದಿನಗಳೂ, **ಛಂದೋಮ** ಎಂಬ ಭಾಗದಲ್ಲಿ ಮೂರು ದಿನಗಳೂ,

**ದಶಮಮಹಃ** ಎಂಬ ಭಾಗದಲ್ಲಿ ಒಂದು ದಿನವೂ ಇರುವವು. ಇದುವರೆಗೆ ಹೇಳಿದ ಮೊದಲ ಎರಡು ಭಾಗಗಳಿಗೆ (೯ ದಿನಗಳಿಗೆ) ಯಾವ ವಿವರಣೆಯನ್ನು ನೀಡಲಾಯಿತೋ ಅದೇ ವಿಧವಾದ ವಿವರಣೆಯನ್ನು ಕೊನೆಯದಾದ **ದಶಮಮಹಃ** ಎಂಬ ಭಾಗಕ್ಕೂ ನೀಡುವುದು ಯುಕ್ತವು.. ಈ ವಿಷಯದಲ್ಲಿ ನಾಲ್ಕು ದೃಷ್ಟಾಂತಗಳಿರುವವು. ಅವುಗಳಲ್ಲಿ ಈ ಕೆಳಗೆ ಹೇಳಿರುವುದು ಮೊದಲನೆಯದು.

ಯಜ್ಞಾನುಷ್ಠಾನಕುಶಲರಾದವರು ಈ ದ್ವಾದಶಾಹದ ದಶರಾತ್ರಿಗಳಲ್ಲಿ ಪೃಷ್ಠ್ಯಷಡಹವೆಂಬ ಭಾಗವನ್ನು ಮೊದಲ ಆರು ದಿನಗಳಲ್ಲಿ ಮಾಡುವರು. ಏಕೆಂದರೆ ಇದು ಮುಖಸ್ಥಾನೀಯು. ಮುಖದ ಒಳಭಾಗದಲ್ಲಿ ನಾಲಗೆ, ತಾಲು, ಹಲ್ಲುಗಳು ಎಂಬ ಮೂರು ಮುಖ್ಯಾವಯವಗಳಿರುವವು. ಇವುಗಳ ಪ್ರತೀಕವೇ ಛಂದೋಮಾ ಎಂಬುವುದು. ಏಕೆಂದರೆ ವಾಗಿಂದ್ರಿಯದಿಂದ ಶಬ್ದೋಚ್ಚಾರಣೆ ಮಾಡುವುದೂ, ರಸನೇಂದ್ರಿಯ (ಜಿಹ್ವಾ) ದಿಂದ ತಿನ್ನುವ ಆಹಾರಾದಿಗಳ ಕಹಿ, ಸಿಹಿ ಮೊದಲಾದ ಪ್ರಭೇದ ಗಳನ್ನು ತಿಳಿಯುವುದು ಮೊದಲಾದ ವ್ಯಾಪಾರಗಳು ನಡೆಯುವುವವು. ಈ ವಿಧವಾದ ವ್ಯಾಪಾರಾದಿಗಳು ನಡೆಯುವ ಅವಧಿ ಅಥವಾ ದಿನಕ್ಕೆ **ದಶಮಮಹಃ** ಹತ್ತನೆಯ ದಿವಸವೆಂದು ಹೆಸರು. ಇದು ಮೊದಲನೆಯ ದೃಷ್ಟಾಂತವು.

**ಯಥಾ ವೈ ನಾಸಿಕೇ ಏವಂ ಪೃಷ್ಠ್ಯಃ ಷಳಹಸ್ತದ್ಯಥಾಽನ್ತರಂ ನಾಸಿಕ-ಯೋರೇವಂ ಛಂದೋಮಾ ಅಥ ಯೇನೈವ ಗಂಧಾನ್ವಿಜಾನಾತಿ ತದ್ದಶಮಮಹಃ ॥**

**ದ್ವಿತೀಯೇನ ದೃಷ್ಟಾಂತೇನ ಪ್ರಶಂಸತಿ– ಛಿದ್ರದ್ವಯಯುಕ್ತತ್ವೇನ ಭಾಗದ್ವಯವಿವ-ಕ್ಷಯಾ ನಾಸಿಕೇ ಇತಿ ದ್ವಿವಚನಂ । ತಯೋರಂತರಂ ಮಧ್ಯವರ್ತಿ ಚ್ಛಿದ್ರಂ ಗಂಧಗ್ರಾಹಕಘ್ರಾ-ಣೇಂದ್ರಿಯಸ್ಥಾನೀಯಂ ದಶಮಮಹಃ ॥**

ಈಗ ಎರಡನೇ ದೃಷ್ಟಾಂತವನ್ನು ತಿಳಿಸುವರು ಮುಖದಲ್ಲಿರುವ ಎರಡು ನಾಸಿಕಾರಂಧ್ರಗಳಿಗೆ ಪೃಷ್ಠಷಳಹವನ್ನು ಹೋಲಿಸಬಹುದು. ಎರಡು ನಾಸಿಕಾರಂಧ್ರಗಳ ಮಧ್ಯದಲ್ಲಿರುವ ಭಾಗಕ್ಕೆ ಛಂದೋಮಾ ಎಂಬ ಭಾಗವನ್ನು ಹೋಲಿಸಬಹುದು ಅಥವಾ ಗಂದಾದಿ (ವಾಸನೆ) ಗಳನ್ನು ತಿಳಿಯುವ ನಾಸಿಕಾಭಾಗಕ್ಕೆ **ದಶಮಮಹಃ** ಹತ್ತನೆಯ ದಿನವನ್ನು ಹೋಲಿಸಬಹುದು.

**ಯಥಾ ವಾ ಅಕ್ಷ್ಯೈವಂ ಪೃಷ್ಠ್ಯಃ ಷಳಹಸ್ತದ್ಯಥಾಽನ್ತರಮಕ್ಷ್ಣಃ ಕೃಷ್ಣ-ಮೇವಂ ಛಂದೋಮಾ ಅಥ ಯೈವ ಕನೀನಿಕಾ ಯೇನ ಪಶ್ಯಂತಿ ತದ್ದಶಮಮಹಃ ॥**

**ತೃತೀಯೇನ ದೃಷ್ಟಾಂತೇನ ಪ್ರಶಂಸತಿ— ಅಕ್ಷಿಶಬ್ದೇನ ಶುಕ್ಲಮಂಡಲಸಹಿತಂ ಸರ್ವಂ ಗೋಲಕಂ ವಿವಕ್ಷಿತಂ ತತ್ರ ಭಾಗತ್ರಯಮಾರಣ್ಯಕಾಂಡೇ ವಕ್ಷ್ಯತೇ—'ತ್ರಿವೃದಿವ ವೈ ಚಕ್ಷುಃ ಶುಕ್ಲಂ ಕೃಷ್ಣಂ ಕನೀನಿಕಾ' ಇತಿ । ಶುಕ್ಲಮಂಡಲಮಧ್ಯೇ ಕೃಷ್ಣಮಂಡಲಂ ತಸ್ಯ ಮಧ್ಯೇ ಸ್ವಲ್ಪಾ ವರ್ತುಲಾಕಾರಾ ಕನೀನಿಕಾ ತತ್ರಾವಸ್ಥಿತೇನ ಚಕ್ಷುರಿಂದ್ರಿಯೇಣ ಜನೋ ರೂಪಂ ಪಶ್ಯತಿ । ತತ್ರ ಶುಕ್ಲಮಂಡಲರೂಪಗೋಲಕಸ್ಥಾನೀಯಃ ಪೃಷ್ಠ್ಯಃ ಷಡಹಃ ಕೃಷ್ಣಮಂಡಲ ಸ್ಥಾನೀಯಾಶ್ಛಂದೋಮಾಃ ಕನೀನಿಕಾಗತೇಂದ್ರಿಯಸ್ಥಾನೀಯಂ ದಶಮಮಹಃ ॥**

ಮೂರನೇ ದೃಷ್ಟಾಂತವನ್ನು ವಿವರಿಸುವರು. ಇಲ್ಲಿ ಅಕ್ಷಿಶಬ್ದಕ್ಕೆ ಕಣ್ಣು (ಚಕ್ಷುರಿಂದ್ರಿಯವು). ಗುಂಡಗಿರುವ ಚಕ್ಷುರಿಂದ್ರಿಯದಲ್ಲಿ ಮೂರು ವಿಭಾಗಗಳಿರುವವು. ಐತರೇಯಾರಣ್ಯದಲ್ಲಿಯೂ--**ತ್ರಿವೃದಿವ ವೈ ಚಕ್ಷುಃ ಶುಕ್ಲಂ ಕೃಷ್ಣಂ ಕನೀನೀಕಾ** ಇತಿ ವರ್ತುಲಾಕಾರದಲ್ಲಿರುವ ಕಣ್ಣಿನ ಹೊರವಲಯವೆಲ್ಲವೂ ಬೆಳ್ಳಗಿರುವುದು. ಅದರ ಮಧ್ಯದಲ್ಲಿ ಕಪ್ಪಗಿರುವ ಕಣ್ಣುಗುಡ್ಡೆ ಇರುವುದು. ಅದರ ಮಧ್ಯದಲ್ಲಿ ನೋಡುವ ಶಕ್ತಿಸಾಮರ್ಥ್ಯವುಳ್ಳ ಕನೀನಿಕಾ ಎಂಬ ದುಂಡಗಿರುವ ಭಾಗವಿರುವುದು. ಈ ವಿಧವಾದ ಚಕ್ಷುರಿಂದ್ರಿಯದ ಮೂಲಕ ಜನರು ಬಾಹ್ಯಪ್ರಪಂಚದಲ್ಲಿರುವ ವಸ್ತುಗಳನ್ನು ನೋಡಲು ಶಕ್ತಿಯುಳ್ಳವರಾಗಿರುವರು. ಇಲ್ಲಿ ಎಂದರೆ ಚಕ್ಷುರಿಂದ್ರಿಯದಲ್ಲಿ ಬೆಳ್ಳಗಿರುವ ಭಾಗವನ್ನು ಪೃಷ್ಠಷಡಹಕ್ಕೂ ಕಪ್ಪಗಿರುವ ಕಣ್ಣುಗುಡ್ಡೆಯನ್ನು ಛಂದೋಮಾ ಎಂಬ ವಿಭಾಗಕ್ಕೂ, ಕನೀನಿಕಾ (ನೋಡಲು ಶಕ್ತಿಯುಳ್ಳ) ಎಂಬ ಭಾಗವನ್ನು **ದಶಮಮಹಃ** (ಹತ್ತನೆಯ ದಿವಸಕ್ಕೂ) ಹೋಲಿಸಬಹುದು.

## ಯಥಾ ವೈ ಕರ್ಣ ಏವಂ ಪೃಷ್ಠ್ಯಃ ಷಳಹಸ್ತದ್ಯಥಾಽನ್ತರಂ ಕರ್ಣಸ್ಯೈವಂ ಛಂದೋಮಾ ಅಥ ಯೇನೈವ ಶೃಣೋತಿ ತದ್ದಶಮಮಹಃ ॥

**ಚತುರ್ಥದೃಷ್ಟಾಂತೇನ ಪ್ರಶಂಸತಿ—ಕರ್ಣಶಬ್ದೇನ ಶಷ್ಕುಲ್ಯಾಕಾರಂ ಗೋಲಕಮುಚ್ಯತೇ । ತತ್ಸ್ಥಾನೀಯಃ ಪೃಷ್ಠ್ಯಃ ಷಡಹಃ । ತಸ್ಯ ಕರ್ಣಸ್ಯಾಂತರಂ ಯನ್ಮಧ್ಯವರ್ತಿ ಚ್ಛಿದ್ರಂ ತತ್ಸ್ಥಾನೀಯಾಶ್ಛಂದೋಮಾಃ । ತಚ್ಛಿದ್ರಾವಸ್ಥಿತೇನೇಂದ್ರಿಯೇಣ ಜನಃ ಶಬ್ದಂ ಶೃಣೋತಿ ತದಿಂದ್ರಿಯಸ್ಥಾನೀಯಂ ದಶಮಮಹಃ ॥**

ಈಗ ನಾಲ್ಕನೆಯ ದೃಷ್ಟಾಂತವನ್ನು ತಿಳಿಸುವರು. ಇಲ್ಲಿ ಕರ್ಣ ಎಂದರೆ ಕಿವಿ ಅಥವಾ ಶ್ರವಣೇಂದ್ರಿಯವು. ಹೊರಗೆ ಶಿರಸ್ಸಿನ ಎರಡು ಪಕ್ಕಗಳಯೂ ಎದ್ದು ಎದ್ದುಕಾಣುತ್ತಿರುವ ಭಾಗವು. ಶ್ರವಣೇಂದ್ರಿಯವು (ಕಿವಿ) ಇದನ್ನು ಪೃಷ್ಠ್ಯಷಳಹಕ್ಕೆ ಹೋಲಿಸಬಹುದು. ಈ ಶ್ರವಣೇಂದ್ರಿಯದ ಮಧ್ಯದಲ್ಲಿ ಮೆದುಳಿಗೆ ಮುಟ್ಟುವಂತೆ ಅನುಕೂಲವಾದ ರಂಧ್ರವಿರುವುದು ಇದನ್ನು ಛಂದೋಮಕ್ಕೆ ಹೋಲಿಸಬಹುದು. ಮತ್ತು ಈ ಶ್ರವಣೇಂದ್ರಿಯದಲ್ಲಿ ಶಬ್ದಗಳನ್ನು ಕೇಳುವ ಸಾಮರ್ಥ್ಯವುಳ್ಳ ಒಂದು ಮುಖ್ಯವಾದ ಭಾಗವಿರುವುದು. ಇದನ್ನು **ದಶಮಮಹಃ** (ಹತ್ತನೆಯ ದಿವಸಕ್ಕೆ) ಹೋಲಿಸಬಹುದು.

## ಶ್ರೀರ್ವೈ ದಶಮಃ ಶ್ರಿಯಂ ವಾ ಏತ ಆಗಚ್ಛಂತಿ ಯೇ ದಶಮಮಹರಾಗಚ್ಛಂತಿ ತಸ್ಮಾದ್ದಶಮಮಹರವಿವಾಕ್ಯಂ ಭವತಿ ಮಾ ಶ್ರಿಯೋಽವವಾದಿಷ್ಮೇತಿ ದುರವವದಂ ಹಿ ಶ್ರೇಯಸಃ ॥

**ಅಥ ತಸ್ಮಿನ್ದಶಮೇಽಹನಿ ಕಂಚಿನ್ನಿಯಮಂ ವಿಧತ್ತೇ—ಯದೇತದ್ದಶಮಮಹಃ ಸಾ ಶ್ರೀರ್ವೈ ಭೋಗ್ಯವಸ್ತುಸಮೃದ್ಧಿಸ್ವರೂಪಮೇವ ಖಲ್ವಹ್ನೋತಿ 'ಯೋ ದ್ವಾದಶಾಹೇನ ಯಜತೇ' ಇತಿ ಶ್ರುತ್ಯಂತರಾತ್ । ಅತೋ ಯೇ ದಶಮಮಹರಾಗಚ್ಛಂತ್ಯನುತಿಷ್ಠಂತಿ ತೇ ಶ್ರಿಯಮೇವ ಪ್ರಾಪ್ನುವಂತಿ । ಯಸ್ಮಾಚ್ಛ್ರೀರೂಪಮೇತದಹಸ್ತಸ್ಮಾದ್ವಿವಾಕ್ಯರಹಿತಂ ಭವತಿ । ಯದಿ ಪ್ರಮಾದಾನ್ಮಂತ್ರೇ ತತ್ರ ವಾ ಕಶ್ಚಿತ್ಕಿಂಚಿದ್ವಿರುದ್ಧಮಾಚರೇತ್ತದಾನೀಂ ತದ್ವಿರುದ್ಧಮನ್ಯೇನ ವಾಚ್ಯಂ ವಕ್ತವ್ಯಂ । ಅತ್ರ ತ್ವಯಾ ವಿರುದ್ಧಮನುಷ್ಠಿತಂ ತದೇವಂ ಸಮ್ಯಗನುತಿಷ್ಠೇತ್ಯಭಿಜ್ಞೇನ**

ಕರ್ಮಾಂತರೇ ವಕ್ತವ್ಯಂ । ಇಹ ತು ತಸ್ಯ ವಿರುಧ್ಯಮಾನವಚನಸ್ಯ ನಿಷಿದ್ಧತ್ವಾದಿದಮುಹರವಿ-ವಾಕ್ಯಂ । ತಥಾ ಚಾಶ್ವಲಾಯನ ಆಹ—'ನಾಸ್ಮಿನ್ನಹನಿ ಕೇನಚಿತ್ಕಸ್ಯಚಿದ್ವಿವಾಚ್ಯಮವಿವಾಕ್ಯ-ಮಿತ್ಯೇತದಾಚಕ್ಷತೇ ಸಂಶಯೇ ಬಹಿರ್ವೇದಿ ಸ್ವಾಧ್ಯಾಯಪ್ರಯೋಗೋಽಂತರ್ವೇದೀತ್ಯೇಕೇ' ಇತಿ । ಪರೇಣ ಪ್ರಯುಜ್ಯಮಾನಂ ವಿರುದ್ಧಂ ದೃಷ್ಟ್ವಾಽಪಿ ತನ್ನ ಬ್ರೂಯಾದಿತಿ ನಿಯಮಸ್ಯೋ-ಪಪತ್ತಿರುಚ್ಯತೇ । ಶ್ರಿಯೋ ವಾಽವವಾದಿಷ್ಮೇತಿ ದಶಮಸ್ಯಾಹ್ನಃ ಶ್ರೀರೂಪತ್ವಾತ್ತಸ್ಯ ಯದವ-ವದನಂ ತಚ್ಛ್ರಿಯಾ ಏವ ಭವತಿ । ಅವಮತಸ್ಯ ವಿರುದ್ಧಸ್ಯ ವದನಮವವದನಂ ನಿಂದಾ । ಯದಿ ದಶಮಮಹರವವಾದಿಷ್ಮ ನಿಂದಾಂ ಕುರ್ಮಸ್ತರ್ಹಿ ಶ್ರಿಯಾ ಏವ ನಿಂದಾ ಸಂಪದ್ಯತೇ । ಅತೋ ವಯಂ ಶ್ರಿಯೋ ಮಾಽವವಾದಿಷ್ಮ ನಿಂದಾಂ ಮಾ ಕುರ್ಮ ಇತಿ ವಿವಾಚ್ಯಂ ಪರಿತ್ಯಜತಾಮಿತ್ಯ-ಭಿಪ್ರಾಯಃ । ಲೋಕೇಽಪಿ ಶ್ರೇಯಸೋ ವಿದ್ಯೈಶ್ವರ್ಯಾದಿನಾಽಧಿಕಸ್ಯ ಪುರುಷಸ್ಯಾಚರಣಂ ದುರವವದಂ ಹ್ಯವವಾದೇನ ನಿಂದಯಾ ರಹಿತಂ । ಅತ ಏವ ಪಿತ್ರಾಚಾರ್ಯಾದೀನಾಂ ನಿಂದಾಂ ನ ಕುರ್ವಂತಿ ದ್ವೇಷಿಭಿಃ ಕ್ರಿಯಮಾಣಮಪಿ ನ ಶೃಣ್ವಂತಿ । ತದೇವಮವಿವಾಚ್ಯತ್ವ ಧರ್ಮೋಽತ್ರ ವಿಹಿತಃ । ಯದ್ವಾ ವಾಕ್ಯದ್ವಯಮಿದಂ ಪಶಮಮಹರಾಗಚ್ಛಂತೀತ್ಯಂತೋ ದಶಮಸ್ಯಾಹ್ನೋ ವಿಧಿಸ್ತಸ್ಮಾದಿತ್ಯಾದಿರವಿವಾಕ್ಯತ್ವನಿಯಮವಿಧಿಃ । ಸೋಽಪಿ ಶಾಖಾಂತರೇಽಪ್ಯೇವಮಾಮ್ನಾ-ಯತೇ—'ತಸ್ಮಾದ್ದಶಮೇಽಹನ್ಯವಿವಾಕ್ಯ ಉಪಹತಾಯ ನ ಚ್ಯುತಂ' ಇತಿ ॥

ಹತ್ತನೇ ದಿನದಲ್ಲಿ ಆಚರಿಸಬೇಕಾದ ಒಂದು ವಿಶೇಷನಿಯಮವನ್ನು ತಿಳಿಸುವರು. ಈ ದ್ವಾದಶಾಹದ ಹತ್ತನೆಯ ದಿನಕ್ಕೆ (ಶ್ರೀರ್ವೈ) ಸಂಪತ್ತಿನ ದಿನವೆಂದು ಹೇಳಲ್ಪಡುವುದು. ಈ ದಿನವನ್ನಾಚರಿಸುವವನು ಸಂಪತ್ತನ್ನೂ ವಸ್ತುಸಮೃದ್ಧಿಯನ್ನೂ ಪಡೆಯುವನು. ಯೋ ದ್ವಾದಶಾಹೇನ ಯಜತೇ ಎಂದು ಶ್ರುತಿವಾಕ್ಯವಿರುವುದು. ಆದ್ದರಿಂದ ಯಾವ ಯಜಮಾನನು ಈ ದಶಮರಾತ್ರಿ ಎಂಬ ಹತ್ತನೆಯ ದಿವಸದ ಕಾರ್ಯಕಲಾಪಗಳನ್ನು ಆಚರಿಸುವನೋ ಅವನು ಸಂಪತ್ಸಮೃದ್ಧಿಯನ್ನು ಹೊಂದುವನು. ಈ ಹತ್ತನೆಯ ದಿನಕ್ಕೆ ಸಂಪತ್ತಿನ ದಿನವೆಂದು ಹೇಳಲ್ಪಡುವುದರಿಂದ ಆ ದಿನದ ಕಾರ್ಯಕಲಾಪಗಳಿಗೆ ವಿರುದ್ಧವಾಗಿ ಏನನ್ನೂ ಹೇಳಬಾರದು. ಒಂದುವೇಳೆ ಪ್ರಮಾದದಿಂದ ವಿರುದ್ಧವಾದ ಮಂತ್ರವನ್ನಾಗಲಿ, ಕಾರ್ಯವನ್ನಾಗಲಿ ಮಾಡಿದರೆ ತಿಳಿದ ಪುರುಷನು ಆಗ ಏನನ್ನೂ ವಿರುದ್ಧವಾಗಿ ಹೇಳದೆ ಆಮೇಲೆ ಬೇರೆ ಸಂದರ್ಭದಲ್ಲಿ ತಪ್ಪುಮಾಡಿದ ಪುರುಷನಿಗೆ ತಪ್ಪನ್ನು ತೋರಿಸಿ ಕೊಟ್ಟು, ನೀನು ಮಾಡಿದ್ದು ಸರಿಯಲ್ಲ ಮುಂದೆ ಆರೀತಿ ಮಾಡಬೇಡ ಎಂದು ತಪ್ಪನ್ನು ತೋರಿಸಿಕೊಟ್ಟು ವಿವೇಕವನ್ನು ಹೇಳಬೇಕು. ಕರ್ಮಮಾಡುವ ಕಾಲದಲ್ಲಿ ತಪ್ಪನ್ನು ಎತ್ತಿ ತೋರಿಸಿ ವಿರುದ್ಧವನ್ನು ಹೇಳಬಾರದು. ಆದ್ದರಿಂದಲೇ ಈ ದಿನಕ್ಕೆ ಅವಿವಾಕ್ಯವೆಂದು ಹೆಸರು. ಈ ವಿಷಯದಲ್ಲಿ ಆಶ್ವಲಾಯನಮಹರ್ಷಿಗಳು ಹೀಗೆ ಹೇಳಿರುವರು— **ನಾಸ್ಮಿನ್ನಹನಿ ಕೇನಚಿತ್ಕಸ್ಯ-ಚಿದ್ವಿವಾಚ್ಯಮವಿವಾಕ್ಯಮಿತ್ಯೇತದಾಚಕ್ಷತೇ ಸಂಶಯೇ ಬಹಿರ್ವೇದಿ ಸ್ವಾಧ್ಯಾಯಪ್ರಯೋಗೋಽನ್ತರ್ವೇ-ದೀತ್ಯೇಕೇ** ಎಂದು ಹೇಳಿರುವರು. ಎಂದರೆ ಈ ಹತ್ತನೇ ದಿವಸ ಯಾವ ಪುರೋಹಿತ ಮೊದಲಾದ ಪುರುಷನು ಮಂತ್ರಾದಿಗಳಲ್ಲಿ ತಪ್ಪನ್ನು ಪಠಿಸಿದರೆ ಆಗ ಏನನ್ನೂ ಹೇಳಬಾರದು. ಹೊರಗೆ ಹೋಗಿ ತನ್ನ ಸಂಶಯವನ್ನು ವ್ಯಕ್ತಪಡಿಸಬೇಕು. ಕೆಲವರು ಅಲ್ಲಿಯೇ ಹೇಳಬೇಕೆಂದು ತಿಳಿಸುವರು ಎಂದು ಅಂತರ್ವೇದಿಯಲ್ಲಿ (ಯಜ್ಞಶಾಲೆಯಲ್ಲಿ) ಯಾವನಾದರೂ ಋತ್ವಿಜನು ಮಂತ್ರಾದಿಗಳಲ್ಲಿ ತಪ್ಪಾಗಿ ಪಠಿಸಿದಾಗ್ಯೂ ಅದನ್ನು ಅಲ್ಲಿಯೇ ಎತ್ತಿ ತೋರಿಸಬಾರದು. ಇದು ನಿಯಮವು. ದಶಮದಿನವು, ಶ್ರೀರೂಪವು, ಇದಕ್ಕೆ ವಿರುದ್ಧವನ್ನಾಡಿದರೆ ಶ್ರೀಗೆ ಅವಮಾನಮಾಡಿದಂತಾಗುವುದು, ನಿಂದೆಮಾಡಿದಂತಾಗುವುದು. ಎಂದರೆ ಆ ದಿವಸದ ಕಾರ್ಯಕಲಾಪಗಳನ್ನು ಅಥವಾ ಮಂತ್ರಾದಿಗಳನ್ನೂ ವಿರುದ್ಧವಾಗಿ ಮಾತನಾಡಿದರೆ ಶ್ರೀದೇವತೆಯನ್ನೆ ನಿಂದಿಸಿದಂತಾಗುವುದು. ಆದ್ದರಿಂದ ತಪ್ಪನ್ನು ಕಂಡರೂ ಆಗ ವಿರುದ್ಧಭಾಷೆಯನ್ನಾಡಬಾರದು. ಲೋಕವ್ಯವಹಾರದಲ್ಲಿಯೂ ಸಂಪದ್ಯುಕ್ತನಾದ (ಧನವಂತ

ನಾದ, ಐಶ್ವರ್ಯವಂತನಾದ) ಪುರುಷನು ಏನಾದರೂ ತಪ್ಪುಮಾಡಿದರೆ ಅಲ್ಲಿರುವ ಜನರು ಅವನನ್ನು ದೂಷಣೆಮಾಡುವುದಿಲ್ಲ. ಹಾಗೆ ಮಾಡಲು ಧೈರ್ಯವೂ ಇರುವುದಿಲ್ಲ. ಎಲ್ಲವನ್ನೂ ಸುಮ್ಮನೆ ಸಹಿಸಿಕೊಂಡೇ ಇರುವರು. ಆದ್ದರಿಂದ ವಿಚಾರವಂತರಾದ ವಿವೇಕಿಗಳು ಇಂತಹ ಸಂದರ್ಭಗಳಲ್ಲಿ ನಿಂದೆಯನ್ನು ಮಾಡುವುದಿಲ್ಲ. ಇತರರು ಮಾಡಿದರೆ ಕೇಳುವುದೂ ಇಲ್ಲ. ಕಿವಿಯನ್ನು ಮುಚ್ಚಿಕೊಳ್ಳುವರು. ಈ ಕಾರಣದಿಂದ ಈ ದಶಮದಿನಕ್ಕೆ ಅವಿವಾಕ್ಯನಿಯಮವಿರುವುದು. ಎಂದರೆ ಆ ದಿನಕ್ಕೆ ವಿರುದ್ಧವಾಗಿ ಏನನ್ನೂ ಹೇಳಕೂಡದು. ಈ ವಿಷಯವು ಶಾಖಾಂತರದಲ್ಲಿ—ತಸ್ಮಾದ್ದಶಮೇಽಹನ್ಯವಿವಾಕ್ಯ **ಉಪಹತಾಯ ನ ವ್ಯುಚ್ಯಂ** ಎಂದು ಹೇಳಲಾಗಿದೆ.

## ತೇ ತತಃ ಸರ್ಪಂತಿ ॥

**ಅಥೈತಸ್ಮಿನ್ದಶಮೇಽಹನಿ ಮಾನಸಗ್ರಹಾಯ ಪ್ರಸರ್ಪಣಂ ವಿಧತ್ತೇ—ತೇಽನುಷ್ಠಾತಾರಸ್ತತಃ ಪತ್ನೀಸಂಯಾಜಾಂತಾನುಷ್ಠಾನಾದೂರ್ಧ್ವಂ ಪ್ರಾಂಚ ಉದೇತ್ಯ ಮಾನಸಾಯ ಪ್ರಸರ್ಪೇಯುಃ । ಪ್ರಸರ್ಪಣಂ ನಾಮ ತದರ್ಥಃ ಪ್ರಯತ್ನಃ । ಸರ್ವೇಷ್ವಹರ್ಗಣೇಷು ಕರ್ಮಣಸ್ಸಂತಿಮಾದಹ್ನ ಇತರಾಣ್ಯಹಾನಿ ಪತ್ನೀಸಂಯಾಜಾಂತಾನ್ಯಂತಿಮಂ ತ್ವೇಕಮೇವೋದವಸಾನೀಯಾಂತಂ । ತಥಾ ಚಾಶ್ವಲಾಯನ ಆಹ—'ಪ್ರಾತರನುವಾಕಾದ್ಯುದವಸಾನೀಯಾಂತಾನ್ಯಂತ್ಯಾನಿ ಪತ್ನೀಸಂಯಾಜಾಂತಾನೀತರಾಣಿ' ಇತಿ । ತಥಾ ಸತ್ಯಪಿ ವಾಲ (?) ಸ್ಯೇತರತ್ವನ್ಯಾಯೇನ ಪತ್ನೀಸಂಯಾಜಾಂತತ್ವೇ ಪ್ರಾಪ್ತೇ ವಚನೇನ ತತ ಊರ್ಧ್ವಂ ಮಾನಸಗ್ರಹೋ(ಹಂ) ವಿಧತ್ತೇ । ತದರ್ಥಂ ಪ್ರಸರ್ಪಂತಿ ಸದಸೋ ನಿರ್ಗತ್ಯ ಯಥಾಯಥಂ ಮಾರ್ಗೇಣ ಗಚ್ಛೇಯುಃ ॥**

ಈ ಹತ್ತನೆಯ ದಿನದಲ್ಲಿ ಯಜ್ಞದಲ್ಲಿ ಭಾಗವಹಿಸುವ ಸದಸ್ಯರು ತಮ್ಮ ಇಷ್ಟಬಂದಂತೆ ಹೊರಟುಹೋಗುವರು. ಯಜ್ಞಕರ್ತರಾದವರು (ಋತ್ವಿಕ್ ಮೊದಲಾದವರು) ಪತ್ನೀಸಂಯಾಜವೆಂಬ ಹೋಮಾನಂತರ ಪೂರ್ವಾಭಿಮುಖವಾಗಿ ಹೊರಡುವರು. ಈ ಎಲ್ಲಾ ಹತ್ತು ದಿನಗಳಲ್ಲಿ ಆಚರಿಸಲ್ಪಡುವ ವಿವಿಧ ಕರ್ಮಗಳಿಗೆ ಪತ್ನೀಸಂಯಾಜವೇ ಕೊನೆಯದು. ಈ ವಿಷಯದಲ್ಲಿ ಆಶ್ವಲಾಯನಮಹರ್ಷಿಯು—**ಪ್ರಾತರನುವಾಕಾದ್ಯುದವಸಾನೀಯಾಂತಾನ್ಯಂತ್ಯಾನಿ ಪತ್ನೀಸಂಯಾಜಾಂತಾನೀತರಾಣಿ** ಎಂದು ಹೇಳಿರುವರು. ಆದ್ದರಿಂದ ಪತ್ನೀಸಂಯಾಜದವರೆಗೂ ಕರ್ಮಮುಗಿದಮೇಲೆ ಸದಸ್ಯರು ಹೊರಟುಹೋಗುವರು.

## ತೇ ಮಾರ್ಜಯಂತೇ ॥

**ಗತಾನಾಂ ತೇಷಾಂ ತೀರ್ಥದೇಶೇ ಮಾರ್ಜನಂ ವಿಧತ್ತೇ—**

ಹೊರಕ್ಕೆ ಹೋದನಂತರ ಅವರು ಮಾರ್ಜನ (ಸ್ನಾನ) ಮಾಡುವರು.

## ತೇ ಪತ್ನೀಶಾಲಾಂ ಸಂಪ್ರಪದ್ಯಂತೇ ॥

**ಮಾರ್ಜನಾದೂರ್ಧ್ವಂ ಹೋಮಾರ್ಥಂ ಸ್ಥಾನವಿಶೇಷಪ್ರಾಪ್ತಿಂ ವಿಧತ್ತೇ—**

ಮಾರ್ಜನಾನಂತರ (ಸ್ನಾನಾನಂತರ) ಹೋಮಾರ್ಥವಾಗಿ ಗಾರ್ಹಪತ್ಯದ ಸಮೀಪದಲ್ಲಿರುವ ಪತ್ನೀಶಾಲೆಯ ಸಮೀಪಕ್ಕೆ ಹೋಗುವರು.

**ತೇಷಾಂ ಯ ಏತಾಮಾಹುತಿಂ ವಿದ್ಯಾತ್ಸ ಬ್ರೂಯಾತ್ಸಮನ್ವಾರಭಧ್ವ-ಮಿತಿ ಸ ಜುಹುಯಾತ್ ॥**

ಪತ್ನೀ ಹಿ ಗಾರ್ಹಪತ್ಯಸ್ಯ ಸಮೀಪೇಽವತಿಷ್ಠತ ಇತಿ ಸೈವ ಪತ್ನೀಶಾಲಾ ತತ್ರ ಗಚ್ಛೇಯುಃ । ಗತಾನಾಂ ತೇಷಾಂ ಹೋಮಂ ವಿಧತ್ತೇ--ತೇಷಾಂ ಹೋಮಾರ್ಥಂ ಗಾರ್ಹಪತ್ಯಸಮೀಪಂ ಗತಾನಾಂ ಮಧ್ಯೇ ಯಃ ಪುಮಾನೇತಾಂ ವಕ್ಷ್ಯಮಾಣಾಮಾಹುತಿಂ ಜಾನಾತಿ ಸ ಪುಮಾನಿತರಾನ್ಪ್ರತಿ ಸಮನ್ವಾರಭಧ್ವಂ ಯೂಯಂ ಸರ್ವೇಽಪಿ ಮಾಂ ಸ್ಪೃಶತೇತಿ ಬ್ರೂಯಾತ್ । ತೈಃ ಸಮನ್ವಾರಬ್ಧಃ ಸ ಪುಮಾನಾಹುತಿಂ ಜುಹುಯಾತ್ ॥

ಪತ್ನೀಶಾಲೆಯಬಳಿಗೆ ಹೋದ ಸದಸ್ಯರಲ್ಲಿ ಪತ್ನೀಸಂಯಾಜ ಹೋಮವಿಧಾನವನ್ನು ತಿಳಿದಿರುವ ಪುರುಷನು ಆ ಹೋಮವನ್ನು ಮಾಡಬೇಕು. ಈ ಕಾರ್ಯಕ್ಕಾಗಿ ಆ ಪುರುಷನು ಅಲ್ಲಿರುವ ಇತರರನ್ನು ಕರೆದು ಒಬ್ಬರನ್ನೊಬ್ಬರು (ಪರಸ್ಪರ) ಕೈಗಳಿಂದ ತನ್ನನ್ನು ಸ್ಪರ್ಶಮಾಡುತ್ತಿರಬೇಕೆಂದು ಹೇಳುವನು. ಆದರಂತೆ ಎಲ್ಲರೂ ಪರಸ್ಪರ ಒಬ್ಬರನ್ನೊರು ಮುಟ್ಟುತ್ತಿರುವಾಗ ಆ ಪುರುಷನು ಆಹುತಿಯನ್ನು ಹೋಮಮಾಡಬೇಕು.

**ಇಹ ರಮೇಹ ರಮಧ್ವಮಿಹ ಧೃತಿರಿಹ ಸ್ವಧೃತಿರಗ್ನೇಽವಾಟ್ಸ್ವಾಹಾಽವಾಳಿತಿ ॥**

ತಂ ಮಂತ್ರಂ ದರ್ಶಯತಿ-- ಹೇ ಯಜಮಾನಾ ಇಹಾಸ್ಮಿನ್‌ಲೋಕೇ ರಮ ರಮಣಂ ಕುರುತ । ಹೇ ಪುತ್ರಪೌತ್ರಾದಿಕಾಃ ಪ್ರಜಾ ಇಹೈತೇಷು ಯಜಮಾನೇಷು ರಮಧ್ವಂ ಕ್ರೀಡತ । ಇಹ ಯಜಮಾನೇಷು ಧೃತಿರಪತ್ಯಾನಾಂ ಪ್ರಜಾನಾಂ ಧಾರಣಮಸ್ತು । ಇಹ ಯಜಮಾನೇಷು ಸ್ವಧೃತಿರ್ವೇದಶಾಸ್ತ್ರಾದಿರೂಪಾಯಾ ವಾಚಃ ಸ್ವಾಧೀನತ್ವೇನ ಧಾರಣಮಸ್ತು । ಹೇಽಗ್ನೇಽವಾಡ್ರಥಂತರರೂಪೇಣ ಯಜ್ಞಸ್ಯ ವಹನಂ ಕುರು । ಹೇ ಸ್ವಾಹಾ ದೇವ್ಯಗ್ನಿಜಾಯೇಽವಾಡ್ಬೃಹತ್ಸಾಮರೂಪೇಣ ಯಜ್ಞಸ್ಯ ವಹನಂ ಕುರು । ಇತಿಶಬ್ದೋ ಮಂತ್ರಸಮಾಪ್ತ್ಯರ್ಥಃ ॥

ಹೋಮಮಾಡುವ ಮಂತ್ರವನ್ನು ತಿಳಿಸುವರು. ಮೇಲೆ ಹೇಳಿದ ಇಹ ರಮೇಹ ಎಂಬುದೇ ಆ ಮಂತ್ರವು. ಇದರ ಅರ್ಥವು--ಎಲೈ ಯಜ್ಞಮಾಡುವ ಯಜಮಾನರೇ, ಇಹ-ಈ ಲೋಕದಲ್ಲಿ ರಮ-ವಿಹರಿಸಿ । ಎಲೈ ಯಜಮಾನನ ಪುತ್ರ ಪೌತ್ರಾದಿಗಳೇ, ಇಹ-ಈ ಯಜಮಾನರಲ್ಲಿ (ಯಜಮಾನರೊಡನೆ ಕೂಡಿ) ರಮಧ್ವಂ-ಕ್ರೀಡಿಸಿ । ಇಹ-ಈ ಯಜಮಾನರಲ್ಲಿ ಧೃತಿಃ-ಪ್ರಜಾಸಂತತಿಯು । ಅಸ್ತು-ಉಂಟಾಗಲಿ । ಇಹ-ಈ ಯಜಮಾನರಲ್ಲಿ ಸ್ವಧೃತಿಃ-ವೇದಶಾಸ್ತ್ರಾದಿರೂಪವಾದ ವಾಕ್ಯಗಳು (ವಿದ್ಯೆಯು) ಅಸ್ತು-ಉಂಟಾಗಲಿ । ಹೇಅಗ್ನೇ-ಎಲೈ ಅಗ್ನಿಯೇ ಅವಾಟ್-ರಥಂತರರೂಪದಿಂದ ಯಜ್ಞವನ್ನು ನಿರ್ವಹಿಸು । ಹೇ ಸ್ವಾಹಾ ದೇವಿ-ಅಗ್ನಿಪತ್ನಿಯಾದ ಎಲೈ ಸ್ವಾಹಾದೇವಿಯೇ । ಅವಾಟ್-ಬೃಹತ್ಸಾಮರೂಪದಿಂದ ಯಜ್ಞವನ್ನು ನಿರ್ವಹಿಸು । ಇದು ಮಂತ್ರದ ಅರ್ಥವು.

**ಸ ಯದಿಹ ರಮೇತ್ಯಾಹಾಸ್ಮಿನ್ನೇವೈನಾಂಸ್ತಲ್ಲೋಕೇ ರಮಯತೀಹ ರಮಧ್ವಮಿತಿ ಯದಾಹ ಪ್ರಜಾಮೇವೇಷು ತದ್ರಮಯತೀಹ**

**ಧೃತಿರಿಹ ಸ್ವಧೃತಿರಿತಿ ಯದಾಹ ಪ್ರಜಾಂ ಚೈವ ತದ್ವಾಚಂ ಚ ಯಜಮಾನೇಷು ದಧಾತ್ಯಗ್ನೇಽವಾಳಿತಿ ರಥಂತರಂ ಸ್ವಾಹಾವಾಳಿತಿ ಬೃಹತ್ ॥**

**ಯಥೋಕ್ತಂ ಮಂತ್ರಾರ್ಥಮಭಿಪ್ರೇತ್ಯ ಕ್ರಮೇಣ ಮಂತ್ರಾವಯವಾನಾಂ ಸರ್ವೇಷಾಂ ತಾತ್ಪರ್ಯಂ ದರ್ಶಯತಿ—ಸ ಮಂತ್ರ ಇಹ ರಮೇತಿ ಭಾಗಮಾಹೇತಿ ಯದಸ್ತಿ ತೇನಾಸ್ಮಿನ್ನೇವ ಲೋಕ ಏನಾನ್ಯಜಮಾನಾನ್ರಮಯತಿ । ಏವಮುತ್ತರಭಾಗಾ ಅಪಿ ಯೋಜ್ಯಾಃ ॥**

ಮೇಲಿನ ಮಂತ್ರದಲ್ಲಿ ಹೇಳಿರುವ ವಿವರಗಳನ್ನು ಬಿಡಿಸಿ ಸ್ಪಷ್ಟವಾಗಿ ಹೇಳುವರು—**ಸ ಯದಿಹ ರಮೇತ್ಯಾಹಾಸ್ಮಿನ್ನೇವೈನಾಂಸ್ತಲ್ಲೋಕೇ ರಮಯತಿ** ಅಧ್ವರ್ಯುವು ಅಥವಾ ಹೋಮಮಾಡುವ ಕಾಲದಲ್ಲಿ **ಸ ಯದಿಹರಮಯತಿ** ಎಂಬ ಮಂತ್ರವನ್ನು ಉಚ್ಚರಿಸಿ ಅಗ್ನಿಯಲ್ಲಿ ಹೋಮಮಾಡುವುದರಿಂದ ಯಜಮಾನನು ಈ ಲೋಕದಲ್ಲಿ ಅನೇಕ ಭೋಗಗಳನ್ನು ಅನುಭವಿಸುವನು । **ಇಹ ರಮಧ್ವಮಿತಿ ಯದಾಹ ಪ್ರಜಾಮೇವೇಷು ತದ್ರಮಯತಿ** ಈ ಮಂತ್ರವನ್ನು ಉಚ್ಚರಿಸಿ ಹೋಮಮಾಡುವುದರಿಂದ ಯಜಮಾನನು ಪುತ್ರಾದಿಸಂತತಿಯನ್ನು ಪಡೆದು ಅವರೊಡನೆ ಕೂಡಿ ಸುಖಸಂತೋಷದಿಂದ ಕ್ರೀಡಿಸುತ್ತಿರುವನು । **ಇಹ ಸ್ವಧೃತಿರಿತಿ ಯದಾಹ ಪ್ರಜಾಂ ಚೈವ ತದ್ವಾಚಂ ಚ ಯಜಮಾನೇಷು ದಧಾತಿ** ಈ ಮಂತ್ರವನ್ನುಚ್ಚರಿಸಿ ಹೋಮಮಾಡುವುದರಿಂದ ಯಜಮಾನನ ಪುತ್ರಾದಿಸಂತಾನವೂ ವಿದ್ಯಾದಿ ವಾಗ್ವೈಖರಿಯೂ ಅಭಿವೃದ್ಧಿಯನ್ನು ಹೊಂದಿ ಸುಖಿಸುವನು । **ಅಗ್ನೇಽವಾಳಿತಿ ರಥಂತರಂ** ಈ ಮಂತ್ರವನ್ನುಚ್ಚರಿಸಿ ಹೋಮ ಮಾಡುವುದರಿಂದ ಎಲೈ ಅಗ್ನಿಯೇ ನೀನು ರಥಂತರ ಸಾಮದಿಂದ ಈ ಯಜ್ಞವನ್ನು ನಿರ್ವಹಿಸು ಎಂದು ಅಗ್ನಿಯನ್ನು ಪ್ರಾರ್ಥಿಸುವನು । **ಸ್ವಾಹಾಽವಾಳಿತಿ ಬೃಹತ್** ಈ ಮಂತ್ರವನ್ನುಚ್ಚರಿಸಿ ಹೋಮಮಾಡುವುದರಿಂದ ಅಗ್ನಿಪತ್ನಿಯಾದ ಎಲೈ ಸ್ವಾಹಾ ದೇವೀಯೇ, ನೀನು ಬೃಹತ್ಸಾಮದಿಂದ ಈ ಯಜ್ಞವನ್ನು ನಿರ್ವಹಿಸಿ ಸಮಾಪ್ತಿಗೊಳಿಸು ಎಂದು ಸ್ವಾಹಾದೇವಿಯನ್ನು ಪ್ರಾರ್ಥಿಸುವನು.

**ದೇವಾನಾಂ ವಾ ಏತನ್ಮಿಥುನಂ ಬೃಹದ್ರಥಂತರೇ ದೇವಾನಾಮೇವ ತನ್ಮಿಥುನೇನ ಮಿಥುನಮವರುಂಧತೇ ದೇವಾನಾಂ ಮಿಥುನೇನ ಮಿಥುನಂ ಪ್ರಜಾಯಂತೇ ॥ ಪ್ರಜಾತ್ಯೈ ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥**

**ಬೃಹದ್ರಥಂತರರೂಪಂ ಭಾಗದ್ವಯಂ ವಿಶೇಷೇಣ ಪ್ರಶಂಸತಿ—ಯದೇತದಂತ್ಯಮಂತ್ರದ್ವಯಂ ಬೃಹದ್ರಥಂತರರೂಪಮುಕ್ತಂ ತದೇತದ್ದೇವಾನಾಂ ಸಂಬಂಧಿ ಮಿಥುನಂ । ಅತಸ್ತದ್ಭಾಗದ್ವಯಪಾಠೇನ ದೇವಸಂಬದ್ಧೇನೈವ ಮಿಥುನೇನ ಮಾನುಷಂ ಮಿಥುನಂ ಪ್ರಾಪ್ನುವಂತಿ। ತತೋ ದೇವಸಂಬಂಧಿಮಿಥುನಾನುಗ್ರಹೇಣ ಮಾನುಷಮಿಥುನಮುತ್ಪಾದಯಂತಿ । ತತಃ ಸೋಽಯಂ ಮಂತ್ರೋ ಯಜಮಾನಸ್ಯ ಪ್ರಜೋತ್ಪಾದನಾಯ ಸಂಪದ್ಯತೇ ॥ ವೇದನಂ ಪ್ರಶಂಸತಿ—**

ಮೇಲೆ ಹೇಳಿದ ಮಂತ್ರದಲ್ಲಿರುವ ಬೃಹತ್ ಮತ್ತು ರಥಂತರಗಳೆಂಬ ಎರಡು ಸಾಮಗಳನ್ನು ಪ್ರಶಂಸೆಮಾಡುವರು. ಈ ಬೃಹತ್ ಮತ್ತು ರಥಂತರಂ ಎಂಬ ಎರಡು ಸಾಮ (ಮಂತ್ರ) ಗಳೂ ಸೇರಿದರೆ ದೇವತೆಗಳ ಮಿಥುನವೆಂದು ಹೇಳಲ್ಪಡುವುದು ದೇವಸಂಬಂಧವಾದ ಈ ಮಿಥುನವನ್ನು ಪಠಿಸುವುದರಿಂದ ಮನುಷ್ಯಸಂಬಂಧವಾದ ಮಿಥುನವುಂಟಾಗುವುದು. ಎಂದರೆ ದೇವ ಸಂಬಂಧವಾದ ಮಿಥುನ (ಮಂತ್ರ) ಸಾಮಗಳ ಉಚ್ಚಾರಣೆಯ ಅನುಗ್ರಹದಿಂದ ಮನುಷ್ಯರ ಮಿಥುನವು ಎಂದರೆ ಪ್ರಜೋತ್ಪಾದ ನೆಯು ಉಂಟಾಗುವುದು. ಆದ್ದರಿಂದ ಈ ಮಂತ್ರವು ಎಂದರೆ ಮಂತ್ರಪಠನವು ಯಜಮಾನನ ಪ್ರಜೋತ್ಪತ್ತಿಗೆ ಕಾರಣವಾಗಿರು ವುದು. ಈ ವಿಷಯವನ್ನು ತಿಳಿದಿರುವ ಪುರುಷನು ಪ್ರಜಾಸಂತತಿಯನ್ನೂ ಪಶುಸಂಪತ್ತನ್ನೂ ಪಡೆದು ಸುಖಿಸುವನು.

**ತೇ ತತಃ ಸರ್ಪಂತಿ ತೇ ಮಾರ್ಜಯಂತೇ ತ ಆಗ್ನಿಧ್ರಂ ಸಂಪ್ರಪದ್ಯಂತೇ ತೇಷಾಂ ಯ ಏತಾಮಾಹುತಿಂ ವಿದ್ಯಾತ್ಸ ಬ್ರೂಯಾತ್ಸಮನ್ವಾರಭಧ್ವಮಿತಿ ಸ ಜುಹುಯಾತ್ ॥**

**ಗಾರ್ಹಪತ್ಯೇ ಯಥಾ ಹೋಮೋ ವಿಹಿತಸ್ತಥೈವಾಽಽಗ್ನೀಧ್ರೀಯೇ ಕಂಚಿದ್ಧೋಮಂ ವಿಧತ್ತೇ—ಗಾರ್ಹಪತ್ಯಸ್ಥಾನಾದ್ಬಹಿರ್ನಿಗತ್ಯ ಮಾರ್ಜನಂ ಕೃತ್ವಾಽಽಗ್ನೀಧ್ರೀಯಂ ಪ್ರಾಪ್ಯ ತತ್ರ ಪೂರ್ವವಜ್ಜುಹುಯಾತ್ ॥**

ಮೇಲೆ ಹೇಳಿದಂತೆ ಗಾರ್ಹಪತ್ಯಾಗ್ನಿಯಲ್ಲಿ ಹೋಮವನ್ನು ಮಾಡಿ ಮುಗಿಸಿದಮೇಲೆ ಆ ಸದಸ್ಯರೆಲ್ಲರೂ ಆಗ್ನೀಧ್ರನ ಹೋಮಕುಂಡದ ಸಮೀಪಕ್ಕೆ ಬರುವರು. ಹೀಗೆ ಹೊರಟುಬರುವಾಗ ಹಿಂದಿನಂತೆ ಮಾರ್ಜನ (ಸ್ನಾನ) ಮಾಡಿ ಆಗ್ನೀಧ್ರನ ಹೋಮಕುಂಡದ ಬಳಿಗೆ ಬಂದು ಹಿಂದೆ ಹೇಳಿದಂತೆ ಹೋಮಮಾಡಬೇಕು.

**ಉಪಸೃಜನ್ಧರುಣಂ ಮಾತರಂ ಧರುಣೋ ಧಯನ್ । ರಾಯಸ್ಪೋಷಮಿಷಮೂರ್ಜಮಸ್ಮಾಸು ದೀಧರತ್ಸ್ವಾಹೇತಿ ॥**

**ತಸ್ಮಿನ್ ಹೋಮೇ ಮಂತ್ರಮಾಹ—ಅತ್ರ ದೇವತಾಯಾ ಅಸ್ಪಷ್ಟತ್ವಾದನಿರುಕ್ತಃ ಪ್ರಜಾಪತಿರ್ದೇವತೇತಿ ಶ್ರುತ್ಯಂತರೇಣ ಪ್ರಜಾಪತಿರ್ದೇವತಾ । ತಸ್ಯ ಮಂತ್ರಸ್ಯಾಯಮರ್ಥಃ । ಧರುಣಃ ಸರ್ವಸ್ಯ ಜಗತೋ ಧಾರಯಿತಾ ಪ್ರಜಾಪತಿರ್ಧರುಣಮಸ್ಮಾಕಂ ಧರ್ತಾರಂ ಪಿತರಂ ಮಾತರಂ ಚೋಪಸೃಜನ್ನಸ್ಮಾಭಿಃ ಸಂಯೋಜಯನ್ನನಿಷ್ಟಾದ್ವಾ ವಿಯೋಜಯನ್ನಸ್ಮಾಭಿರ್ಹುತಮಾಜ್ಯಂ ಧಯನ್ಪಿಬನ್ರಾಯಸ್ಪೋಷಂ ಧನಪುಷ್ಟಿಮಿಷನ್ನಮೂರ್ಜಂ ಕ್ಷೀರಾದಿರಸಂ ಚಾಸ್ಮಾಸು ದೀಧರದ್ಧಾರಯತು ಸಂಪಾದಯತು । ತಸ್ಯ ಪ್ರಜಾಪತೇರಿದಂ ಸ್ವಾಹುತಮಸ್ತು । ಇತಿಶಬ್ದೋ ಮಂತ್ರಸಮಾಪ್ತ್ಯರ್ಥಃ ॥**

ಮೇಲೆ ಹೇಳಿದಂತೆ ಆಗ್ನೀಧ್ರಕುಂಡದಲ್ಲಿ ಹೋಮಮಾಡಬೇಕಾದ ಮಂತ್ರವನ್ನು ತಿಳಿಸುವರು. ಗಾರ್ಹಪತ್ಯಾಗ್ನಿಯಲ್ಲಿ ಮಾಡಬೇಕಾದ ಹೋಮಮಂತ್ರವನ್ನು ತಿಳಿಸುವರು—**ಉಪಸೃಜನ್ಧರುಣಂ ಮಾತರಂ ಧರುಣೋ ಧಯನ್ । ರಾಯಸ್ಪೋಷಮಿಷಮೂರ್ಜಮಸ್ಮಾಸು ದೀಧರತ್ಸ್ವಾಹೇತಿ ॥** ಇದೇ ಆ ಮಂತ್ರವು. ಈ ಮಂತ್ರಕ್ಕೆ ದೇವತೆಯು ಯಾರೆಂದು ನಿರ್ದಿಷ್ಟವಾಗಿ ಹೇಳಿಲ್ಲವಾದ್ದರಿಂದ ಇವಕ್ಕೆ ಪ್ರಜಾಪತಿಯೇ ದೇವತೆಯೆಂದು ಭಾವಿಸಬೇಕು. ಇದರ ಅರ್ಥವು

ಈರೀತಿ ಇರುವುದು — **ಧರುಣಃ**-ಸಮಸ್ತ ಜಗತ್ತನ್ನೂ ಧರಿಸಿ ಪೋಷಿಸತಕ್ಕ ಪ್ರಜಾಪತಿಯು । **ಧರುಣಂ**-ನಮ್ಮನ್ನು ಧರಿಸಿ ಪೋಷಿಸುವ ತಂದೆಯನ್ನೂ । **ಮಾತರಂ**-ತಾಯಿಯನ್ನೂ **ಉಪಸೃಜನ್**-ನಮ್ಮನ್ನು ಬಿಟ್ಟುಹೋಗದೆ ನಮ್ಮೊಡನೆಯೇ ಇರುವಂತೆ ಮಾಡಿ । **ಧಯನ್**-ನಾವು ಹೋಮಮಾಡುವ ಆಜ್ಯವನ್ನು ಪಾನಮಾಡುತ್ತ । **ರಾಯಸ್ಪೋಷಂ**-ಧನ ಮತ್ತು ಪುಷ್ಟಿಯನ್ನೂ । **ಇಷಂ**-ಅನ್ನ (ಆಹಾರವನ್ನೂ) । **ಊರ್ಜಂ**-ಕ್ಷೀರಾದಿ ರಸವನ್ನೂ । **ಅಸ್ಮಾಸು**-ನಮ್ಮಲ್ಲಿ (ನಮಗೆ) । **ದೀಧರತ್**-ಉಂಟುಮಾಡಲಿ । ಇಂತಹ ಪ್ರಜಾಪತಿಯನ್ನುದ್ದೇಶಿಸಿ ನಾವು ಈ ಆಹುತಿಯನ್ನು । **ಸ್ವಾಹಾ**-ಅರ್ಪಿಸುವಂತಾಗಲಿ ॥

**ರಾಯಸ್ಪೋಷಮಿಷಮೂರ್ಜಮವರುಂಧ ಆತ್ಮನೇ ಚ ಯಜಮಾನೇ-
ಭ್ಯಶ್ಚ ಯತ್ರೈವಂ ವಿದ್ವಾನೇತಾಮಾಹುತಿಂ ಜುಹೋತಿ ॥**

**ಆಹುತಿಂ ಪ್ರಶಂಸತಿ—ಆತ್ಮನೇ ಹೋತ್ರೇ ॥**

ಮೇಲೆ ಹೇಳಿದ ಆಹುತಿಯನ್ನು ಪ್ರಶಂಸೆಮಾಡುವರು. ವಿದ್ವಾಂಸನೂ, ತಿಳುವಳಿಕೆಯುಳ್ಳವನೂ ಆದ ಯಾವ ಪುರುಷನು ಮೇಲೆ ಹೇಳಿದಂತೆ ಗಾರ್ಹಪತ್ಯಾಗ್ನಿಯಲ್ಲಿ **ಉಪಸೃಜನ್** ಎಂಬ ಮಂತ್ರಪುರಸ್ಸರವಾಗಿ ಹೋಮಮಾಡುವನೋ ಆ ಪುರುಷನು ತನಗೂ, ಯಜ್ಞಮಾಡುವ ಯಜಮಾನರಿಗೂ ಸಹ, ಧನ, ಪುಷ್ಟಿ, ಅನ್ನಾದ್ಯಾಹಾರ, ಕ್ಷೀರಾದಿರಸ ಇವುಗಳೆಲ್ಲವನ್ನೂ ಪಡೆಯುವನು.



*English Translation*

**(To what the different parts of the Dvadasaha are to be likened. The tenth day).**

The six Prishtha days (the six first in the Dvadasaha) represent the mouth; the Chandomah days, from the seventh to the ninth, are then what is in the mouth, as tongue, palate and teeth; but that by which one produces articulate sounds of speech, or by which one distinguishes the sweet and not sweet, this is the tenth day. Or the six Prishtha days are comparable to the eye; the Chandomah are then the black in the eye; and the tenth day then is the pupil of the eye, by which one sees. Or the six Prishtha days are comparable to the ear; while the Chandomah represent what is in the ear; but by what one hears, that is the tenth day.

The tenth day is happiness; those who enter on the tenth day, enter on happiness, therefore silence must be kept during the tenth day; for " we shall not be speak the goodess of fortune, because a happy thing is not to be spoken to.

Now the priests walk, elean themselves and proceed to the place of the sacrificer's wife (patnisala). That one of the priesta, who should know this invocation offering (ahuti), shall say:

"Hold one another; then he shall offer the oblation by repeating the mantra " here be thou happy, here be ye happy, here may be a hold, here may be a hold for all that is yours; may Agni carry it (the sacrifice) up! Svaha! may he take it up!"

When he says, "be happy here," then he makes happy joyful all those sacrificers who are in this world. When he says, "enjoy yourselves, " then he makes joyful their offspring in these worlds. When he says, " here may be a hold, a hold for all that is yonrs," then he provides the sacrificers with children, and speech (the power of speech). By the words " may Agni carry it up " (vat) the Rathantaram Saman is to be understood, and by " Svaha! may he carry it up!" the Brihat Saman is meant. For the Rathantaram and Brihat Saman are the cohabitation of the gods; by means of this cohabitation of the gods one obtains generation; by means of this cohabitation of the gods generation is produced. This is done for production. He who has this knowledge obtains children ꝛnd cattle.

Now they all go and make ablution and proceed to the place of the Agnidhra. That one who knows the invocation offering (ahuti) shall say, " hold now one another," then he should bring the offering and recite, " he who produced besides us this ground our mother, be, the preserver who feeds us, may preserve in us wealth, vigour, health, and strength, Svaha!" Who knowing this, recites this formula, gains for himself, as well as for the sacrificers, wealth, vigour, health, and strength.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಚತುರ್ವಿಂಶಾಧ್ಯಾಯಸ್ಯ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವಾದುದು.



# ಅಥ ಚತುರ್ವಿಂಶಾಧ್ಯಾಯೇ ಚತುರ್ಥಃ ಖಂಡಃ

## ಇಪ್ಪತ್ತನಾಲ್ಕನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ಸಾರ್ಪರಾಜ್ಞೀ ಋಕ್ಕುಗಳ ಪಠನವು ; ಚತುರ್ಹೋತ ಮಂತ್ರಪಠನ ; ಇವುಗಳ ಫಲಿಂತಾಂಶ. ಇವುಗಳನ್ನು ಯಾರು ಪಠಿಸಬೇಕು ? ]



**ತೇ ತತಃ ಸರ್ಪಂತಿ ತೇ ಸದಃ ಸಂಪ್ರಸದ್ಯಂತೇ ಯಥಾಯಥಮನ್ಯ ಋತ್ವಿಜೋ ವ್ಯುತ್ಸರ್ಪಂತಿ ಸಂಸರ್ಪಂತ್ಯುದ್ಗಾತಾರಸ್ತೇ ಸರ್ಪ-ರಾಜ್ಞ್ಯಾ ಋಕ್ಷು ಸ್ತುವತೇ ॥**

ಆಗ್ನೀಧ್ರೀಯೇ ಹೋಮಾದೂರ್ಧ್ವಂ ಕರ್ತವ್ಯಾನಿ ತಾನಿ ದರ್ಶಯತಿ—ತೇ ಕೃತ-ಹೋಮಾಃ ಸರ್ವೇ ತತ ಆಗ್ನೀಧ್ರೀಯಾದಗ್ನೇಃ ಸರ್ಪಂತಿ ನಿರ್ಗಚ್ಛಂತಿ । ನಿರ್ಗತಾಸ್ತೇ ಸದಃ ಪ್ರವಿಶೇಯುಃ । ಪ್ರವೇಶವೇಲಾಯಾಮುದ್ಗಾತೃಭ್ಯೋಽನ್ಯ ಋತ್ವಿಜೋ ಯಥಾಯಥಂ ಸ್ವಮಾರ್ಗಮನತಿಕ್ರಮ್ಯ ವ್ಯುತ್ಸರ್ಪಂತಿ ವಿವಿಧಂ ಗಚ್ಛಂತಿ । ಉದ್ಗಾತಾರಸ್ತು ಸಂಸರ್ಪಂತಿ ಸಂಭೂಯ ಗಚ್ಛೇಯುಃ । ಗತಾಸ್ತೇ ಸಾಮಗಾಃ ಸರ್ಪರಾಜ್ಞ್ಯಾಃ ಸಂಬಂಧಿನೀಷ್ವೃಕ್ಷ್ವಾಽಯಂ ಗೌರಿತ್ಯಾದಿಷು ಸ್ತೋತ್ರಂ ಕುರ್ಯುಃ । ಸರ್ಪರಾಜ್ಞೀತಿ ಭೂಮೇರವತಾರಸ್ವರೂಪಾ ಕಾಚಿ-ದ್ದೇವತಾ ತಯಾ ದೃಷ್ಟಾ ಮಂತ್ರಾ ಅಪಿ ಸರ್ಪರಾಜ್ಞೀಶಬ್ದೇನೋಚ್ಯಂತೇ ಅತ್ರ ತು ಋಕ್ಷ್ವಿತಿ ಪೃಥಗುಪಾದಾನಾತ್ಸರ್ಪರಾಜ್ಞ್ಯಾ ಇತಿ ಪೃಷ್ಠ್ಯಂತತ್ವಾಚ್ಚ ದೇವತಾವಾಚ್ಯೇವಾಯಂ ಶಬ್ದಃ ॥

ಆಗ್ನೀಧ್ರಕುಂಡದಲ್ಲಿ ಹೋಮಮಾಡಿದನಂತರ ಮುಂದೆ ಮಾಡಬೇಕಾದ ಕರ್ತವ್ಯವನ್ನು ತಿಳಿಸುವರು. ಅನಂತರ ಎಂದರೆ ಆಗ್ನೀಧ್ರಕುಂಡದಲ್ಲಿ (ಗಾರ್ಹಪತ್ಯಾಗ್ನಿಯಲ್ಲಿ) ಮೇಲೆ ಹೇಳಿದ **ಉಪಸೃಜನ್** ಎಂಬ ಹೋಮವನ್ನು ಮಾಡಿದನಂತರ ಋತ್ವಿಜರೆಲ್ಲರೂ (ಉದ್ಗಾತೃಗಳನ್ನು ಬಿಟ್ಟು) ಅಗ್ನಿಧ್ರಾಗ್ನಿಯನ್ನು ಬಿಟ್ಟು ಹೊರಕ್ಕೆ ಹೋಗುವರು, ಹೊರಟು ಸದಸ್ಸನ್ನು (ಯಜ್ಞ ವೇದಿಯ ಪೂರ್ವ ದಕ್ಷಿಣಭಾಗ) ಪ್ರವೇಶಿಸುವರು. ಈ ಶಾಲೆಯನ್ನು ಪ್ರವೇಶಮಾಡುವಾಗ ಋತ್ವಿಜರೆಲ್ಲರೂ ಅವರವರ ಇಷ್ಟದಂತೆ ಬೇರೆಬೇರೆ ಮಾರ್ಗಗಳಿಂದ ಹೊರಟು ಅಲ್ಲಿಗೆ ಬಂದು ಸೇರುವರು. ಆದರೆ ಉದ್ಗಾತೃಗಳು ಎಲ್ಲರೂ ಒಟ್ಟಿಗೆ ಸೇರಿಯೇ ಒಂದೇ ಮಾರ್ಗದಿಂದ ಬರುವರು. ಈ ಉದ್ಗಾತೃಗಳು ಅಥವಾ ಸಾಮಗಾಯಕರು ಸರ್ಪರಾಜ್ಞಋಷಿಯಿಂದ ದೃಷ್ಟವಾದ ಸಾರ್ಪರಾಜ್ಞೀಯವೆಂಬ ಸೂಕ್ತವನ್ನು ಸ್ತೋತ್ರರೂಪವಾಗಿ ಗಾನಮಾಡುವರು **ಆಯಂ ಗೌಃ ಪೃಶ್ನಿರಕ್ರಮೀ** (ಋ. ಸಂ. ೧೦-೧೮೯-೧) ಎಂಬುದೇ ಆ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭೂಮಿಯು ಅವತಾರಸ್ವರೂಪಳಾದ ಸರ್ಪ

ರಾಜ್ಞೀ ಎಂಬ ಓರ್ವ ದೇವತೆಯೇ ದ್ರಷ್ಟ್ರುವು. ಇದಕ್ಕೆ ಸಾರ್ಪರಾಜ್ಞಿ ಸೂಕ್ತವೆಂದು ಹೆಸರು. **ದಶಮೇಽಹನ್ಸರ್ಪರಾಜ್ಞಿಯಾ ಋಗ್ಭಿಃಸ್ತುವಂತಿ । ಯಜ್ಞಸ್ಯೈವಾಂತಂ ಗತ್ವಾ ।** ಎಂದು ತೈತ್ತಿರೀಯಬ್ರಾಹ್ಮಣವಾಕ್ಯವಿರುವುದು. ಈ ಸೂಕ್ತವನ್ನು ಯಜ್ಞದ ಅಂತ್ಯವಾದ ಹತ್ತನೇ ದಿನ ಪಠಿಸಬೇಕು.

ಇಯಂ ವೈ ಸರ್ಪರಾಜ್ಞೀಯಂ ಹಿ ಸರ್ಪತೋ ರಾಜ್ಞೀಯಂ ವಾ ಅಲೋಮಿಕೇವಾಗ್ರ ಆಸೀತ್ಸೈತಂ ಮಂತ್ರಮಪಶ್ಯದಾಽದಾಯಂ ಗೌಃ ಪೃಶ್ನಿರಕ್ರಮೀದಿತಿ ತಾಮಯಂ ಪೃಶ್ನಿರ್ವರ್ಣ ಆವಿಶನ್ನಾನಾರೂಪೋ ಯಂ ಯಂ ಕಾಮಮಕಾಮಯತ ಯದಿದಂ ಕಿಂಚೌಷಧಯೋ ವನಸ್ಪತಯಃ ಸರ್ವಾಣಿ ರೂಪಾಣಿ ॥

**ಏತದೇವಾಭಿಪ್ರೇತ್ಯ ತತ್ಸಂಬದ್ಧಾ ಋಚಸ್ತಾಂ ಚ ದೇವತಾಂ ಪ್ರಶಂಸತಿ--ಯಾ ಭೂಮಿರಸ್ತಿ ಸೇಯಮೇವ ದೇವತಾಶರೀರಂ ಧೃತ್ವಾ ಬ್ರಹ್ಮವಾದಿನೀ ಭೂತ್ವಾ ಸರ್ಪರಾಜ್ಞೀಶಬ್ದೇನೋಚ್ಯತೇ । ಯಸ್ಮಾದಿಯಂ ಪೃಥಿವೀ ಸರ್ಪತಃ ಸಂಚರತೋ ಜಂಗಮಸ್ಯ ಮನುಷ್ಯಾದೇ ರಾಜ್ಞೀ ಸ್ವಾಮಿನೀ ಸರ್ವೇಷಾಂ ಮನುಷ್ಯಾದೀನಾಂ ತದಾಶ್ರಯೇಣಾವಸ್ಥಾನಾತ್ । ಅತಃ ಸರ್ಪರಾಜ್ಞೀತ್ಯುಚ್ಯತೇ । ಇಯಮೇವಾಗ್ರೇ ವೃಕ್ಷಾದ್ಯುತ್ಪತ್ತೇಃ ಪೂರ್ವಮೇವಾಲೋಮಿಕೇವ ರೋಮರಹಿತೇವಾಽಽಸೀತ್ । ತತೋ ರೋಮೋತ್ಪತ್ತ್ಯರ್ಥಂ ಸಾ ಭೂಮಿಃ ಸಾಧನಭೂತಮಾಽಯಂ ಗೌರಿತಿ ಮಂತ್ರಮಪಶ್ಯತ್ । ತನ್ಮಂತ್ರಪ್ರಸಾದೇನ ತಾಂ ಭೂಮಿಮಯಂ ದೃಶ್ಯಮಾನಃ ಪೃಶ್ನಿರ್ವರ್ಣ ಆವಿಶತ್ । ಪೃಶ್ನಿಶಬ್ದಸ್ಯ ವ್ಯಾಖ್ಯಾನಂ ನಾನಾರೂಪ ಇತಿ ನೀಲಪೀತಾದಿರಿತ್ಯರ್ಥಃ । ಕಿಂಚ ಲೋಕ ಓಷಧಯೋ ವನಸ್ಪತಯಃ ಸರ್ವಾಣ್ಯನ್ಯಾನಿ ರೂಪಾಣಿ ತೃಣಾದೀನಿ ಯದಿದಂ ಕಿಂಚಿತ್ಸ್ಥಾವರರೂಪಮಸ್ತಿ ತನ್ಮಧ್ಯೇ ಯಂ ಯಂ ಕಾಮಮಸೌ ಭೂಮಿರಕಾಮಯತ ಸ ಸರ್ವೋಽಪ್ಯೇನಾಂ ಪ್ರಾವಿಶತ್ ॥**

ಈ ವಿಷಯದಲ್ಲಿ ಈ ಸೂಕ್ತದ ಋಕ್ಕುಗಳನ್ನೂ, ದೇವತೆಯನ್ನೂ ಪ್ರಶಂಸೆಮಾಡುವರು. ಬ್ರಹ್ಮವಾದಿನಿಯೆಂದು ಪ್ರಸಿದ್ಧಿಯಾದ ಈ ಭೂದೇವತೆಯು ದೇವತಾಶರೀರವನ್ನು ಧರಿಸಿ ಸರ್ಪರಾಜ್ಞೀ ಎಂಬ ಹೆಸರಿನಿಂದ ಪ್ರಸಿದ್ಧಳಾದಳು. ಈ ಭೂದೇವತೆಯೇ ಭೂಮಿಯಲ್ಲಿ ಉತ್ಪನ್ನರಾದ (ರಾಗುವ) ಸಮಸ್ತ ಸಂಚರಿಸುವ ಪ್ರಾಣಿಗಳಿಗೂ ಸ್ವಾಮಿನಿಯಾದಳು. ಏಕೆಂದರೆ ಸಮಸ್ತ ಮನುಷ್ಯಾದಿ ಪ್ರಾಣಿಗಳೂ ವಾಸಸ್ಥಾನಕ್ಕಾಗಿ ಈ ಭೂಮಿಯನ್ನೇ ಆಶ್ರಯಿಸುವವು. ಆದ್ದರಿಂದಲೇ ಈ ದೇವತೆಗೆ ಸರ್ಪರಾಜ್ಞೀ ಎಂದು ಹೆಸರು ಬಂದಿರುವುದು. ಪೂರ್ವದಲ್ಲಿ ಎಂದರೆ ಈ ಭೂಮಿಯಮೇಲೆ ವೃಕ್ಷಾದಿವನಸ್ಪತಿಸಸ್ಯವರ್ಗಾದಿಗಳ ಹುಟ್ಟುವುದಕ್ಕಿಂತ ಮುಂಚೆ ಈ ಭೂಮಿಯು ನುಣ್ಣಗೆ ರೋಮರಹಿತವಾಗಿ ಇದ್ದಿತು. ತನ್ನ ಶರೀರವಾದ ಈ ಭೂಮಿಯಮೇಲೆ ರೋಮಾದಿಗಳು ಉತ್ಪನ್ನವಾಗಬೇಕೆಂದು ಬಯಸಿ ಈ ದೇವತೆಯು **ಆಯಂ ಗೌಃ ಪೃಶ್ನಿರಕ್ರಮೀತ್** ಎಂಬ ಸೂಕ್ತವನ್ನು ಸಾಕ್ಷಾತ್ಕರಿಸಿದಳು. ಅದರಿಂದ ಪೃಶ್ನಿಯು (ನಾನಾವರ್ಣವು) ಈ ಭೂಮಿಯನ್ನು ಪ್ರವೇಶಿಸಿ ಇದರಲ್ಲಿ ಸೇರಿದವು. ಈ ಕಾರಣದಿಂದ ಭೂಮಿಯಮೇಲೆ (ಭೂದೇವತೆಯು ಅಪೇಕ್ಷೆಯಂತೆ) ನಾನಾವಿಧ (ನಾನಾವರ್ಣದ) ವೃಕ್ಷಗಳೂ, ವನಸ್ಪತಿ ಮೊದಲಾದ ಸಸ್ಯವರ್ಗವೂ ಸಮಸ್ತವೂ ಉತ್ಪನ್ನವಾದವು.

**ಪೃಶ್ನಿರೇನಂ ವರ್ಣ ಆವಿಶತಿ ನಾನಾರೂಪೋ ಯಂ ಯಂ ಕಾಮಂ ಕಾಮಯತೇ ಯ ಏವಂ ವೇದ ॥**

ವೇದನಂ ಪ್ರಶಂಸತಿ— ವರ್ಣಶಬ್ದೇನ ನೀಲಪೀತಾದಿವಾಚಿನಾ ಸರ್ವಮಪಿ ಭೋಗ್ಯ-ಜಾತಮುಪಲಕ್ಷ್ಯತೇ ॥

ಇಲ್ಲಿ ಪೃಶ್ನಿ ಎಂದರೆ ಕೆಂಪು, ನೀಲಿ, ಹಸರು, ಹಳದಿ ಇತ್ಯಾದಿ ವರ್ಣಗಳು. ಈ ವಿಷಯವನ್ನು ತಿಳಿದಿರುವ ಪುರುಷನು ತಾನು ಏನೇನನ್ನು ಅಪೇಕ್ಷಿಸುವನೋ ಅವೆಲ್ಲವನ್ನೂ ಪಡೆಯುವನು.

**ಮನಸಾ ಪ್ರಸ್ತೌತಿ ಮನಸೋದ್ಗಾಯತಿ ಮನಸಾ ಪ್ರತಿಹರತಿ ವಾಚಾ ಶಂಸತಿ ॥**

ಸ್ತೋತ್ರಶಬ್ದಯೋಃ ಪ್ರಕಾರವಿಶೇಷಂ ವಿಧತ್ತೇ—ಉದ್ಗಾತೃಣಾಂ ಮಧ್ಯೇ ಪ್ರಸ್ತೋತುಃ ಪ್ರಸ್ತಾವಭಾಗ ಉದ್ಗಾತುರುದ್ಗೀಥಭಾಗಃ ಪ್ರತಿಹರ್ತುಃ ಪ್ರತಿಹಾರಭಾಗಸ್ತಾನ್ಸಾಗಾನ್ಮನಸೈವ ತೇಽನುತಿಷ್ಠೇಯುಃ । ಹೋತಾ ತು ವಾಚಾ ಶಂಸೇತ್ ।

ಮೇಲಿನ ಮಂತ್ರವನ್ನು ಪಠಿಸುವಾಗ ಉದ್ಗಾತೃಗಳೆಂಬ ಸಾಮಗಾಯಕರಲ್ಲಿ ಪ್ರಸ್ತೋತೃವು ಪ್ರಸ್ತಾವಭಾಗವನ್ನು ಪಠಿಸುವನು, ಉದ್ಗಾತೃವು ಗಾನಮಾಡುವ ಭಾಗವನ್ನು ಗಾನಮಾಡುವನು. ಪ್ರತಿಹರ್ತೃವು ಪ್ರತಿಹಾರ (ಪ್ರತ್ಯುತ್ತರ) ಭಾಗವನ್ನು ಹೇಳುವನು. ಹೋತೃವು ಕೇವಲ ವಾಕ್ಯಗಳಿಂದ ಸೂಕ್ತವನ್ನು ಪಠಿಸುವನು.

**ವಾಕ್ಚ ವೈ ಮನಶ್ಚ ದೇವಾನಾಂ ಮಿಥುನಂ ದೇವಾನಾಮೇವ ತನ್ಮಿಥುನೇನ ಮಿಥುನಮವರುಂಧತೇ ದೇವಾನಾಂ ಮಿಥುನೇನ ಮಿಥುನಂ ಪ್ರಜಾಯಂತೇ ಪ್ರಜಾತ್ಯೈ ಪ್ರಜಾಯತೇ ಪ್ರಜಯಾ ಪಶು-ಭಿರ್ಯ ಏವಂ ವೇದ ॥**

ದ್ವಿವಿಧಮಪಿ ವಿಧಿಂ ಪ್ರಶಂಸತಿ— ಬೃಹದ್ರಥಂತರಮಿಥುನವದ್ವ್ಯಾಖ್ಯೇಯಂ ॥

ಮೇಲಿನ ಸೂಕ್ತವನ್ನು ಪಠಿಸುವಾಗ ವಿಶೇಷವಿಷಯವನ್ನು ತಿಳಿಸುವರು. ಒಂದುಸೂಕ್ತ ಅಥವಾ ಮಂತ್ರವನ್ನು ಪಠಿಸುವಾಗ ವಾಕ್ಕು (ವಾಕ್ಯ) ಮತ್ತು ಮನಸ್ಸು ಇವೆರಡರ ಉಪಯೋಗವೂ ಇರುವುದು. ವಾಕ್ಕು ಮತ್ತು ಮನಸ್ಸು ಎಂಬ ಅಂಗಗಳು ಸೇರಿದರೆ ಮಿಥುನವುಂಟಾಗುವುದು. ದೇವತೆಗಳ ವಿಷಯವಾದ ಸೂಕ್ತಾದಿಗಳನ್ನು ಪಠಿಸುವಾಗ ಉಪಯೋಗಿಸಲ್ಪಡುವ ವಾಕ್ಕು ಮತ್ತು ಮನಸ್ಸು ಸೇರಿ ಉಂಟಾಗುವ ದೇವತೆಗಳ ಮಿಥುನದಿಂದ ಯಜಮಾನನಿಗೆ ಪ್ರಜಾಸಂತತಿಯು ಉಂಟಾಗುವುದು. ಈ ವಿಷಯವನ್ನು ಚೆನ್ನಾಗಿ ತಿಳಿದಿರುವ ಪುರುಷನೂ ಸಹ ಪ್ರಜಾಸಂತತಿಯನ್ನು ಪಡೆಯುವನು.

**ಅಥ ಚತುರ್ಹೋತ್ರೂನ್ ಹೋತಾ ವ್ಯಾಚಷ್ಟೇ ತದೇವ ತತ್ಸ್ನತಮನು-ಶಂಸತಿ ॥**

ಹೋತುಃ ಸರ್ಪರಾಜ್ಞ್ಯಾಃ ಶಂಸನಾದೂರ್ಧ್ವಂ ಚತುರ್ಹೋತೃಮಂತ್ರಾನ್ನಿಧತ್ತೇ—ಚತುರ್ಹೋತೃಮಂತ್ರಾಸ್ತದ್ವ್ಯಾಖ್ಯಾನಪ್ರಕಾರಶ್ಚೋಪರಿಷ್ಟಾದಭಿಧಾಸ್ಯತೇ । ತೇನ ವ್ಯಾಖ್ಯಾನೇನ ಯದುದ್ಗಾತೃಭಿಃ ಸ್ತುತಂ ತದೇವ ಸರ್ವಮನುಶಸ್ತ್ರಂ ಭವತಿ ॥

ಹೋತೃವು ಸರ್ಪರಾಜ್ಞೀಸೂಕ್ತವನ್ನು ಪಠಿಸಿದಮೇಲೆ ಚತುರ್ಹೋತೃಮಂತ್ರವನ್ನು ಪಠಿಸಬೇಕು. ಈ ಚತುರ್ಹೋತೃ ಮಂತ್ರವನ್ನೂ ಅದರ ಅರ್ಥಾನುವಾದವನ್ನೂ ಮುಂದೆ ಹೇಳಲಾಗುವುದು. ಉದ್ಗಾತೃವಿನಿಂದ ಸ್ತುತಿಸಲ್ಪಡುವ ಈ ಚತುರ್ಹೋತೃಮಂತ್ರವು ಅನುಶಸ್ತವೆಂದು ಹೇಳಲ್ಪಡುವುದು. ಇದನ್ನು ಮುಂದೆ ಹೇಳಲಾಗುವುದು.

ದೇವಾನಾಂ ವಾ ಏತದ್ಯಜ್ಞಿಯಂ ಗುಹ್ಯ ನಾಮ ಯಚ್ಚತುರ್ಹೋತಾರಸ್ತದ್ಯಚ್ಚತುರ್ಹೋತೄನ್ಹೋತಾ ವ್ಯಾಚಷ್ಟೇ ದೇವಾನಾಮೇವ ತದ್ಯಜ್ಞಿಯಂ ಗುಹ್ಯಂ ನಾಮ ಪ್ರಕಾಶಂ ಗಮಯತಿ ॥ ತದೇನಂ ಪ್ರಕಾಶಂ ಗತಂ ಪ್ರಕಾಶಂ ಗಮಯತಿ ಗಚ್ಛತಿ ಪ್ರಕಾಶಂ ಯ ಏವಂ ವೇದ ॥

ತಮೇತಂ ಮಂತ್ರಸಮೂಹಂ ಪ್ರಶಂಸತಿ—ಯ ಏತೇ ಚತುರ್ಹೋತೃಮಂತ್ರಾಃ ಸಂತಿ ತದೇತನ್ಮಂತ್ರಸ್ವರೂಪಂ ದೇವಾನಾಂ ಸಂಬಂಧಿ ಯಜ್ಞಯೋಗ್ಯಂ ನಾಮ ತತೋ ಹೋತೃವ್ಯಾಖ್ಯಾನೇ ದೇವಸಂಬಂಧಿ ಯೋಗ್ಯಂ ನಾಮ ಪ್ರಕಾಶಿತಂ ಕರೋತಿ ॥ ವೇದನಂ ಶಂಸತಿ—ಯದುಕ್ತಾರ್ಥವೇದಿನಾ ಹೋತ್ರೈನಂ ಹೋತಾರಂ ತದ್ದೇವಾನಾಂ ಗುಹ್ಯಂ ನಾಮ ಸ್ವಯಂ ಪ್ರಕಾಶಂ ಗತಂ ಸತ್ಪಶ್ಚಾತ್ಪ್ರಕಾಶಂ ಗಮಯತಿ । ತತೋ ವೇದಿತಾ ಪ್ರಕಾಶಂ ಗಚ್ಛತಿ । ತೇನ ನಾಮ್ನಾಽನುಗೃಹೀತಃ ಪ್ರಖ್ಯಾತೋ ಭವತೀತ್ಯರ್ಥಃ । ಯದ್ವಾ ತದೇನಮಿತ್ಯಾದಿ ಪೂರ್ವಶೇಷಃ । ತದ್ದೇವಾನಾಂ ಗುಹ್ಯಂ ನಾಮ ಸ್ವಯಂ ಪ್ರಕಾಶಂ ಗತಂ ಸತ್ಪಶ್ಚಾದೇನಂ ಹೋತಾರಂ ಪ್ರಕಾಶಂ ಗಮಯತಿ । ಗಚ್ಛತೀತ್ಯಾದಿಕೈವ ವಿದ್ವತ್ಪ್ರಶಂಸಾ ॥

ಈ ಚತುರ್ಹೋತೃವೆಂಬ ಮಂತ್ರವು ದೇವತೆಗಳ ಸಂಬಂಧವಾಗಿರುವುದು ಮತ್ತು ಇದನ್ನು ಯಜ್ಞದಲ್ಲಿ ಉಪಯೋಗಿಸಬೇಕಾಗಿರುವುದು. ಇದು ಗೂಢವಾಗಿರುವುದು. ಇತರರಿಗೆ ತಿಳಿಯುವಂತಿಲ್ಲ. ಗೂಢವಾಗಿರುವ ಈ ಮಂತ್ರವನ್ನು ಉದ್ಗಾತೃ ಮೊದಲಾದವರು ಸುತ್ತ ಇರುವ ಜನರಿಗೆ ಕೇಳಿಸದಂತೆ ಮೆತ್ತಗೆ ಮನಸ್ಸಿನಲ್ಲಿಯೇ ಪಠಿಸುವರು. ಹೋತೃವು ಮಾತ್ರ ಒಬ್ಬನೇ ಇತರರಿಗೆ ಕೇಳಿಸುವಂತೆ ಯಜ್ಞಸಂಬಂಧವಾದ ಈ ಮಂತ್ರವನ್ನು ಘಟ್ಟಿಯಾಗಿ ಪಠಿಸುವನು. ಈ ರಹಸ್ಯವನ್ನು ತಿಳಿದಿರುವ ಪುರುಷನು ಎಲ್ಲವನ್ನೂ ತಿಳಿಯಲು ಸಮರ್ಥನಾಗುವನು.

ದೇವತೆಗಳ ಸಂಬಧವಾದುದೂ, ಗೂಢವಾದುದೂ ಯಜ್ಞದಲ್ಲಿ ಉಪಯೋಗಿಸಲ್ಪಡುವುದೂ ಆದ ಈ ಚತುರ್ಹೋತೃ ಮಂತ್ರವನ್ನು ಹೋತೃವು ಎಲ್ಲರಿಗೂ ಕೇಳಿಸುವಂತೆ ಪಠಿಸಿದಮೇಲೆ ಇತರರಿಗೂ ಕೇಳಿಸುವುದು. ಅದುವರೆಗೂ ಇತರರಿಗೆ ತಿಳಿಯಲು ಅವಕಾಶವಿರಲಿಲ್ಲ. ಹೋತೃವು ಪಠಿಸುವುದಕ್ಕೆ ಮುಂಚೆ ಈ ಮಂತ್ರವು ರಹಸ್ಯವಾಗಿದ್ದು ತಾನೇ ಎಲ್ಲರಿಗೂ ತಿಳಿಯುವಂತೆ ಪ್ರಕಾಶವಾಯಿತು. ಸ್ವಯಂಪ್ರಕಾಶವಾದನಂತರ ಹೋತೃವು ಎಲ್ಲರಿಗೂ ಕೇಳಿಸುವಂತೆ ಪಠಿಸಿದನು ಎಂದಭಿಪ್ರಾಯವು. ಈ ವಿಷಯದಲ್ಲಿ ತೈತ್ತಿರೀಯಬ್ರಾಹ್ಮಣವು ಈರೀತಿ ಇರುವುದು.

ಅಂತೋ ವಾ ಏಷ ಯಜ್ಞಸ್ಯ । ಯದ್ದಶಮಮಹಃ । ದಶಮೇಽಹನ್ತ್ಸರ್ಪರಾಜ್ಞಿಯಾ ಋಗ್ಭಿಸ್ತುವಂತಿ । ಯಜ್ಞಸ್ಯೈವಾಂತಂ ಗತ್ವಾ । ಅನ್ನಾದ್ಯಮವರುಂಧತೇ । ತಿಸೃಭಿಃ ಸ್ತುವಂತಿ । ತ್ರಯ ಇಮೇ ಲೋಕಾಃ । ಏಭ್ಯ ಏವ ಲೋಕೇಭ್ಯೋಽನ್ನಾದ್ಯಮವರುಂಧತೇ । ಪೃಶ್ನಿವತೀರ್ಭವಂತಿ । ಅನ್ನಂ ವೈ ಪೃಶ್ನಿ । ಅನ್ನಮೇವಾವರುಂಧತೇ । ಮನಸಾ ಪ್ರಸ್ತೌತಿ । ಮನಸೋದ್ಗಾಯತಿ । ಮನಸಾ ಪ್ರತಿ ಹರತಿ । ಮನ ಇವ ಹಿ ಪ್ರಜಾಪತಿಃ । ಪ್ರಜಾಪತೇರಾಪ್ತ್ಯೈ । ದೇವಾ ವೈ ಸರ್ಪಾಃ । ತೇಷಾಮಿಯಗ್ಂ ರಾಜ್ಞೀ । ಯತ್ಸರ್ಪರಾಜ್ಞಿಯಾ ಋಗ್ಭಿಃ ಸ್ತುವಂತಿ । ಅಸ್ಯಾಮೇವ ಪ್ರತಿತಿಷ್ಠಂತಿ । ಚತುರ್ಹೋತ್ರ್ಯಾನ್ ಹೋತಾ ವ್ಯಾಚಷ್ಟೇ । ಸ್ತುತಮನುಶಗ್ಂಸತಿ ಶಾಂತ್ಯೈ । ಅಂತೋ ವಾ ಏಷ ಯಜ್ಞಸ್ಯ । ಯದ್ದಶಮಮಹಃ । ಏತತ್ಖಲು ವೈ ದೇವಾನಾಂ ಪರಮಂ ಗುಹ್ಯಂ ಬ್ರಹ್ಮ । ಯಚ್ಚತುರ್ಹೋತಾರಃ । ದಶಮೇಽಹಗ್‌ಶ್ಚತುರ್ಹೋತ್ರ್ಯಾನ್ವ್ಯಾಚಷ್ಟೇ । ಯಜ್ಞಸ್ಯೈವಾಂತಂ ಗತ್ವಾ । ಪರಮಂ ದೇವಾನಾ ಗುಹ್ಯಂ ಬ್ರಹ್ಮಾವರುಂಧೇ । ತದೇವ ಪ್ರಕಾಶಂ ಗಮಯತಿ । ವಾಚಂ ಯಚ್ಛತಿ । ಯಜ್ಞಸ್ಯ ಧೃತ್ಯೈ ।

(ತೈ. ಬ್ರಾ. ೨-೨-೬)

ಇದರ ಅರ್ಥವು—ದ್ವಾದಶಾಹವೆಂಬ ಸತ್ರಯಾಗದಲ್ಲಿ ಹತ್ತನೇ ದಿನವೇ ಯಜ್ಞದ ಕೊನೆಯ ದಿನವು. ಈ ಹತ್ತನೇ ದಿನದಲ್ಲಿಯೇ **ಆಯಂ ಗೌಃ ಪೃಶ್ನಿರಕ್ರಮೀತ್** (ಋ. ಸಂ. ೧೦-೧೮೯-೧) ಎಂಬ ಸೂಕ್ತವನ್ನು ಪಠಿಸುವರು. ಇದಕ್ಕೆ ಸಾರ್ಪರಾಜ್ಞಿ(ಯಸೂಕ್ತವೆಂದು ಹೆಸರು. ಈ ಸೂಕ್ತದಲ್ಲಿ ಮೂರು ಋಕ್ಕುಗಳಿರುವವು. ಈ ಸೂಕ್ತಪಠನದಿಂದ ಯಜಮಾನರು ಮಾಡುವ ಯಜಮಾನ ಮುಂತಾದವರಿಗೆ ಅನ್ನಾದ್ಯಾಹಾರಗಳು ಲಭಿಸುವವು. ಈ ಸೂಕ್ತದಲ್ಲಿರುವ ಮೂರು ಋಕ್ಕುಗಳಿಂದ ಸ್ತುತಿಸುವರು. ಏಕೆಂದರೆ ಪೃಥಿವ್ಯಂತರಿಕ್ಷಸ್ವರ್ಗಗಳೆಂಬ ಮೂರು ಲೋಕಗಳಲ್ಲಿಯೂ ಯಜಮಾನಾದಿಗಳಿಗೆ ಅನ್ನಾದ್ಯಾಹಾರವು ಲಭಿಸುವುದು. ಈ ಅನ್ನಾದ್ಯಾಹಾರವು ನಾನಾವರ್ಣದ್ದಾಗಿರುವುದು. ಏಕೆಂದರೆ ಈ ಆಹಾರವು ಪೃಶ್ನಿ ಎಂದರೆ ಭೂಮಿಯಿಂದ ಲಭಿಸುವುದು. ಭೂಮಿಯೂ ನಾನಾವರ್ಣಗಳ ವಸ್ತುಗಳಿಂದ ಕೂಡಿರುವುದು. ಆದ್ದರಿಂದಲೇ ಕ್ಷೀರ ಫಲ ಮೊದಲಾದ ಆಹಾರಗಳು ನಾನಾವರ್ಣವುಳ್ಳದ್ದಾಗಿರುವುದು. ಈ **ಆಯಂ ಗೌಃ** ಎಂಬ ಸರ್ಪರಾಜ್ಞೀಯ ಸೂಕ್ತವನ್ನು ಪಠಿಸುವಾಗ ಹೋತೃವೆಂಬ ಋತ್ವಿಜನು ಮಾತ್ರವೇ ಮಂತ್ರವನ್ನು ಘಟ್ಟಿಯಾಗಿ ಉಚ್ಚರಿಸುವನು. ಉಳಿದ ಸಾಮಗಾಯಕರು ಮಂತ್ರವನ್ನು ಮನಸ್ಸಿನಲ್ಲಿಯೇ ಮೆಲ್ಲಗೆ (ಯಾರಿಗೂ ಕೇಳಿಸದಂತೆ) ಉಚ್ಚರಿಸುವರು. ಹೇಗೆಂದರೆ ಪ್ರಸ್ತೋತೃವೆಂಬ ಋತ್ವಿಜನು ಮಂತ್ರದ ಪ್ರಾರಂಭವನ್ನು ಮನಸ್ಸಿನಲ್ಲಿಯೇ ಮಾಡುವನು. ಉದ್ಗಾತೃವೆಂಬ ಸಾಮಗಾಯಕನು ಮಂತ್ರವನ್ನು ಮನಸ್ಸಿನಲ್ಲಿಯೇ ಗಾನ ಮಾಡುವನು. ಪ್ರತಿಹರ್ತೃವೆಂಬ ಋತ್ವಿಜನು ಪ್ರತಿಹರವೆಂಬ ಮಂತ್ರದ ಪ್ರತ್ಯುತ್ತರವನ್ನು ಮನಸ್ಸಿನಲ್ಲಿಯೇ ಮಾಡುವನು. ಯಾರೂ ಘಟ್ಟಿಯಾಗಿ ಹೇಳುವುದಿಲ್ಲ. ಏಕೆಂದರೆ ಪ್ರಜಾಪತಿಯೇ ಮನಸ್ಸ್ವರೂಪವಾಗಿರುವನು. ಆ ಪ್ರಜಾಪತಿಯಲ್ಲಿ ತಾದಾತ್ಮ್ಯವನ್ನು ಹೊಂದುವುದಕ್ಕಾಗಿ ಋತ್ವಿಜರು (ಅಥವಾ ದೇವತೆಗಳು) ಈ ಚತುರ್ಹೋತೃವೆಂಬ ಪ್ರಜಾಪತಿದೇವತಾಕವಾದ ಮಂತ್ರವನ್ನು ಮನಸ್ಸಿನಲ್ಲಿಯೇ ಉಚ್ಚರಿಸುವರು. ದೇವತೆಗಳು ಅಥವಾ ಋತ್ವಿಜರು ಈ ಸರ್ಪರಾಜ್ಞೀಯ ಮಂತ್ರವನ್ನು ಪಠಿಸುವಾಗ ತಮ್ಮ ಸ್ವಸ್ಥಾನವಾದ ಆಗ್ನೀಧ್ರಕುಂಡದಿಂದ ಹೊರಗೆ ಬಂದು ಈ ಸರ್ಪರಾಜ್ಞೀಯ ಸೂಕ್ತವನ್ನು ಪಠಿಸುವರು. ಇದನ್ನು ಪಠಿಸುವುದರಿಂದ ಇವರು ಜನರಲ್ಲಿ ಗಣ್ಯತೆ ಅಥವಾ ಪ್ರಾಧಾನ್ಯತೆಯನ್ನು ಪಡೆಯುವರು. ಸರ್ಪರಾಜ್ಞೀಸೂಕ್ತವನ್ನು ಪಠಿಸಿದಮೇಲೆ ಹೋತೃವು ಚತುರ್ಹೋತೃವೆಂಬ ಮಂತ್ರವನ್ನು ಪಠಿಸುವನು. ಇದರಿಂದ ಶಾಂತಿಯು ಲಭಿಸುವುದು. ಹತ್ತನೇ ದಿವಸವಾದ ಇದೇ ಸಮಾಪ್ತಿಯು. ಈ ಚತುರ್ಹೋತೃವೆಂಬ ಮಂತ್ರವು ದೇವತೆಗಳ ಸಂಬಂಧವೂ ಯಜ್ಞದಲ್ಲಿ ಉಪಯೋಗಿಸ

ಲ್ಪಡುವುದೂ ಆಗಿರುವುದು. ಇದು ಬಹಳ ರಹಸ್ಯವಾಗಿರುವುದು. ಬ್ರಹ್ಮಸ್ವರೂಪವಾದ ಈ ಚತುರ್ಹೋತೃವೆಂಬ ರಹಸ್ಯ ಮಂತ್ರವನ್ನು ಹೋತೃವು ಹತ್ತನೇದಿನ ಪಠಿಸುವುದಕ್ಕೆ ಮೊದಲು ಯಾರಿಗೂ ತಿಳಿಯದೆ ರಹಸ್ಯವಾಗಿರುವುದು. ಆದ್ದರಿಂದ ಯಜ್ಞದ ಹತ್ತನೇದಿನ (ಕೊನೆಯದಿನ) ಹೋತೃವು ಇದನ್ನು ಘಟ್ಟಿಯಾಗಿ ಎಲ್ಲರೂ ಕೇಳುವಂತೆ ಪಠಿಸಿ ಪ್ರಕಾಶಪಡಿಸುವನು. ಅನಂತರವೇ ಎಲ್ಲರಿಗೂ ಈ ರಹಸ್ಯ ಮಂತ್ರವು ತಿಳಿಯುವುದು. ಎಂದರೆ ಎಲ್ಲಾ ಪ್ರಜೆಗಳಿಗೂ ಈ ರಹಸ್ಯವು ತಿಳಿಯುವುದು ಮತ್ತು ಯಜ್ಞವು ನಿರ್ವಿಘ್ನವಾಗಿ ನೆರವೇರುವುದು ಎಂದು

**ಯಂ ಬ್ರಾಹ್ಮಣಮನೂಚಾನಂ ಯಶೋ ನರ್ಛೇದಿತಿ ಹ ಸ್ಮಾಽಽಹಾರಣ್ಯಂ ಪರೇತ್ಯ ದರ್ಭಸ್ತಂಭಾನುದ್ಗ್ರಥ್ಯ ದಕ್ಷಿಣತೋ ಬ್ರಹ್ಮಾಣಮುಪವೇಶ್ಯ ಚತುರ್ಹೋತೄನ್ವ್ಯಾಚಕ್ಷೀತ ॥**

ತದೇವಂ ಕೃತ್ಸ್ನಂಗೇನ ಚತುರ್ಹೋತೃವ್ಯಾಖ್ಯಾನಂ ವಿಧಾಯ ತತ್ಪ್ರಶಂಸಾಂ ಕರ್ತುಂ ಕ್ರತುನಿರಪೇಕ್ಷಲೌಕಿಕಕಾಮ್ಯಫಲಸಿದ್ಧ್ಯರ್ಥಂ ಚತುರ್ಹೋತೃವ್ಯಾಖ್ಯಾನಂ ವಿಧತ್ತೇ—ಸಾಂಗವೇದಾಧ್ಯಯನತದರ್ಥಾನುಷ್ಠಾನಶೀಲೋಽನೂಚಾನಸ್ತಾದೃಶಂ ಕಂಚಿದ್ಬ್ರಾಹ್ಮಣಂ ಸಭಾಮಧ್ಯೇ ವಾಗ್ಮಿತ್ವೇನ ರಹಿತಂ ಯದಿ ಯಶೋ ನರ್ಛೇದ್ವಿದ್ವಾಸಯಮಿತಿ ಕೀರ್ತಿರ್ನ ಪ್ರಾಪ್ನುಯಾತ್ತದಾನೀಮಯಂ ಬ್ರಾಹ್ಮಣೋ ಗ್ರಾಮಾನ್ನಿರ್ಗತ್ಯ ವಿಜನಮರಣ್ಯದೇಶಂ ಪ್ರಾಪ್ಯ ತತ್ರ ದರ್ಭಸ್ತಂಬಾನಾಮಗ್ರಮೂರ್ಧ್ವಮುಖತ್ವೇನ ಗ್ರಥಿತ್ವಾ ಸ್ವಸ್ಯ ದಕ್ಷಿಣಪಾರ್ಶ್ವೇ ಕಂಚಿದ್ವೇದವಿದಂ ವಿಪ್ರಮುಪವೇಶ್ಯ ತತ್ಸಂನಿಧೌ ಚತುರ್ಹೋತೃನಾಮಕಾನ್ಮಂತ್ರಾನ್ವ್ಯಾಚಕ್ಷೀತ । ಉಚ್ಚೈರುಚ್ಚಾರಣಂ ವ್ಯಾಖ್ಯಾನಮ್ । ಇತ್ಯೇತತ್ಪ್ರಯೋಗಂ ಕಶ್ಚಿದ್ಬ್ರಹ್ಮವಾದ್ಯಾಹ ಸ್ಮೇತ್ಯನ್ವಯಃ ॥

ಮೇಲೆ ಹೇಳಿದ ಚತುರ್ಹೋತೃವೆಂಬ ಮಂತ್ರದ ಯಜ್ಞಸಂಬಂಧವಾದ ವ್ಯಾಖ್ಯಾನವನ್ನು ತಿಳಿಸಿ ಲೌಕಿಕಕಾಮ್ಯಫಲ ಸಿದ್ಧಿಯನ್ನುಂಟುಮಾಡುವ ಈ ಮಂತ್ರವನ್ನು ವಿವರಿಸುವರು. ಸಾಂಗವಾಗಿ ವೇದಾಧ್ಯಯನವನ್ನು ಮಾಡಿದ್ದರೂ ಕೀರ್ತಿಯನ್ನೂ ಪ್ರಾಶಸ್ತ್ಯವನ್ನೂ ಪಡೆಯದಿರುವ ಪುರುಷನು ಕೀರ್ತಿಯನ್ನು ಬಯಸುವುದಾದರೆ ಆ ಪುರುಷನು ಮುಂದೆ ಹೇಳುವ ರೀತಿಯಲ್ಲಿ ಮಾಡಬೇಕು. ಈ ಪುರುಷನು ಗ್ರಾಮವನ್ನು ಬಿಟ್ಟು ನಿರ್ಜನವಾದ ಅರಣ್ಯಪ್ರದೇಶಕ್ಕೆ ಹೋಗಿ ಅಲ್ಲಿ ದರ್ಭೆಯ ಕಂತೆಯನ್ನು ಊರ್ಧ್ವಮುಖವಾಗಿ ಅಗ್ರವಿರುವಂತೆ ಕಂತೆಯನ್ನು ಕಟ್ಟಿ ಇಟ್ಟು ತನ್ನ ದಕ್ಷಿಣಭಾಗದಲ್ಲಿ ವೇದಾಧ್ಯಯನಮಾಡಿದ ಒಬ್ಬ ಪುರುಷನನ್ನು ಕೂಡಿಸಿ ಆ ಪುರುಷನ ಸನ್ನಿಧಿ (ಸಮೀಪ) ದಲ್ಲಿ ಮೇಲೆ ಹೇಳಿದ ಚತುರ್ಹೋತೃವೆಂಬ ಮಂತ್ರವನ್ನು ಘಟ್ಟಿಯಾದ ಧ್ವನಿಯಿಂದ ಪಠಿಸಬೇಕು. ಹೀಗೆ ಮಾಡಿದರೆ ಕೀರ್ತಿಶಾಲಿಯಾಗುವನೆಂಬ ಓರ್ವ ಬ್ರಹ್ಮವಾದಿಯು ಹೇಳಿರುವನು.

**ದೇವಾನಾಂ ವಾ ಏತದ್ಯಜ್ಞಿಯಂ ಗುಹ್ಯಂ ನಾಮ ಯಚ್ಚತುರ್ಹೋತಾರಸ್ತದ್ಯಚ್ಚತುರ್ಹೋತೄನ್ವ್ಯಾಚಕ್ಷೀತ ದೇವಾನಾಮೇವ ತದ್ಯಜ್ಞಿಯಂ ಗುಹ್ಯಂ ನಾಮ ಪ್ರಕಾಶಂ ಗಮಯತಿ ತದೇನಂ ಪ್ರಕಾಶಂ ಗತಂ ಪ್ರಕಾಶಂ ಗಮಯತಿ ಗಚ್ಛತಿ ಪ್ರಕಾಶಂ ಯ ಏವಂ ವೇದ ॥**

**ತಮಿಮಂ ಯಜ್ಞಸಂಯುಕ್ತಂ ಪ್ರಯೋಗಂ ಪೂರ್ವವತ್ಪ್ರಶಂಸತಿ ಪೂರ್ವವದ್ವ್ಯಾಖ್ಯೇಯಮ್ ॥**

ಈ ಚತುರ್ಹೋತೃವೆಂಬ ಮಂತ್ರವನ್ನು ಹಿಂದೆಯೇ ವಿವರಿಸಲಾಗಿದೆ. ಈ ಮಂತ್ರವನ್ನು ದೇವಸಂಬಂಧಿಯಾದುದು, ಯಜ್ಞಸಂಬಂಧವಾದುದು ಮತ್ತು ಅತಿರಹಸ್ಯವಾದುದು. ಇಂತಹ ಚತುರ್ಹೋತೃವೆಂಬ ಮಂತ್ರವನ್ನು ಹೋತೃವು ಪಠಿಸಬೇಕು. ಹೋತೃವು (ಅಥವಾ ಕೀರ್ತಿಯನ್ನಪೇಕ್ಷಿಸುವ ಪುರುಷನು) ದೇವಸಂಬಂಧವಾದುದೂ, ಯಜ್ಞಸಂಬಂಧವಾದುದೂ, ಅತಿರಹಸ್ಯವಾದುದೂ ಆದ ಈ ಮಂತ್ರವನ್ನು ಪಠಿಸುವುದರಿಂದ ರಹಸ್ಯವಾದ ಈ ಮಂತ್ರದ ಅರ್ಥವು ಎಲ್ಲರಿಗೂ ಪ್ರಕಾಶಪಡಿಸಲ್ಪಟ್ಟು (ತಿಳಿದಂತಾಗಿ) ಇದನ್ನು ಪಠಿಸಿದ ಪುರುಷನು ಸಮಸ್ತ ರಹಸ್ಯವನ್ನೂ, ಕೀರ್ತಿಯನ್ನೂ ಪಡೆಯುತ್ತಾನೆ.

*English Translation*

**(The chanting and repeating of the Serpent mantra. The Chaturhotri mantra. Its effect. Who ought to repeat it.)**

All the other priests (except the Udgatris) go from thence the Agnidhriya fire and proceed to the Sadas (a place in the south-east of the Uttaravedi) all walking each in his own way, in this or that direction. But the Udgatris walk together. The chant the verses seen by the Queen of the Serpents (Sarpa-rajni; because the earth (iyam) is the Queen of the Serpents, for she is the queen of all that moves (sarpat). She was in the beginning without hair, as it were without trees, bushes &c. She then saw this Mantra which commences, ayam gauh prisnir akramit (10, 189). In consequence of it, she obtained a motely appearance, she became variegated being able to produce any form she might like such as herbs, trees, and all other forms. Therefore the man who has such a knowledge obtains the faculty of assuming any form he might choose.

The three Udgatris, Prastotar, Udgatar, and Pratihartar, repeat their respective parts in their mind (i.e. they do not utter words) but the Hotar repeats aloud with his voice; for Vach (speech) and Manas (mind) are the cohabitation of the gods. By means of this cohabitation of the gods, he who has such a knowledge obtains children and cattle.

The Hotar now sets forth the Chaturhotri mantras; he repeats them as the Shastra accompanying the Stotram (the chanting of the verses just mentioned) by the Udgatris. The sacrificial name of the deities in the Chaturhotris was concealed. Therefore the Hotar now sets forth these names and makes public the appropriate sacrificial name of the deities and brings what has become public to the public. He who has this knowledge, becomes public (i.e. celebrated).

A Brahman, who, after having completed his Vedic studies, should not attain to any fame, should go to a forest, string together the stalks of Dharba grass, with their ends standing upwards and sitting on the right side of another Brahman, repeat with a loud voice, the Chaturhotri mantras. Should he do so, he would attain to fame.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಚತುರ್ವಿಂಶಾಧ್ಯಾಯೇ ಚತುರ್ಥಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವಾದುದು.



## ಅಥ ಚತುರ್ವಿಂಶಾಧ್ಯಾಯೇ ಪಂಚಮಃ ಖಂಡಃ

### ಇಪ್ಪತ್ತನಾಲ್ಕನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ದ್ವಾದಶಾಹಸತ್ರದ ಹತ್ತನೆಯ ದಿನ ಋತ್ವಿಜರು ಯಾವಾಗ ಮತ್ತು ಹೇಗೆ ತಮ್ಮ ಮೌನವನ್ನು ಸಮಾಪ್ತಗೊಳಿಸುವರು.]



### ಅಥೌದುಂಬರೀಂ ಸಮನ್ವಾರಭಂತೇ ॥

ಅಥ ಚತುರ್ಹೋತೃವ್ಯಾಖ್ಯಾನಸ್ಯ ಪ್ರಕಾರಂ ಯಜ್ಞಾಂಗಸಾಕಲ್ಯೇನಾಭಿಧಾತುಮುಪಕ್ರಮತೇ—ಚತುರ್ಹೋತೃವ್ಯಾಖ್ಯಾನೋದ್ಯೋಗಾನಂತರಂ ಯೇಯಮೌದುಂಬರೀ ಶಾಖಾ ಸದಸ್ಯಂತರ್ನಿಹಿತಾ ತಾಂ ಶಾಖಾಂ ಸರ್ವೇ ಸಂಭೂಯೋಪಸ್ಪೃಶೇಯುಃ ॥

ಹೋತೃವು (ಮತ್ತು ಸಾಮಗಾಯಕರು) ಚತುರ್ಹೋತೃವೆಂಬ ಮಂತ್ರವನ್ನು ಪಠಿಸಿದಮೇಲೆ ಎಲ್ಲಾ ಋತ್ವಿಜರೂ ಒಟ್ಟಾಗಿ ಸೇರಿ ಯಜ್ಞಶಾಲೆಯಲ್ಲಿ ನೆಟ್ಟಿರುವ ಉದುಂಬರವೃಕ್ಷದ ಶಾಖೆಯನ್ನು ಸ್ಪರ್ಶನಮಾಡುವರು (ಮುಟ್ಟುವರು).

### ಇಷಮೂರ್ಜಮನ್ವಾರಭ ಇತಿ ॥

ತತ್ರ ಮಂತ್ರಂ ದರ್ಶಯತಿ—ಅನ್ನರೂಪಾಂ ರಸರೂಪಾಂ ವೈತಾಮೌದುಂಬರೀಮನ್ವಾರಭ ಇತಿ ಹಸ್ತೇನ ಸ್ಪೃಶಾಮಿ । ಇತಿಶಬ್ದೋ ಮಂತ್ರಸಮಾಪ್ತ್ಯರ್ಥಃ ॥

ಉದುಂಬರಶಾಖೆಯನ್ನು ಸ್ಪರ್ಶಮಾಡುವಾಗ ಪಠಿಸಬೇಕಾದ ಮಂತ್ರವನ್ನು ನಿರ್ದೇಶಿಸುವರು. ಋತ್ವಿಜರೆಲ್ಲರೂ ಸೇರಿ ಯಜ್ಞಶಾಲೆಯಲ್ಲಿರುವ ಉದುಂಬರವೃಕ್ಷದ ಶಾಖೆಯನ್ನು ಇಷಮೂರ್ಜಮನ್ವಾರಭೇ ಎಂಬ ಮಂತ್ರವನ್ನು ಉಚ್ಚರಿಸುತ್ತಾ ತಮ್ಮ ಹಸ್ತಗಳಿಂದ ಸ್ಪರ್ಶಮಾಡುವರು.

**ಊಗ್ವಾರ್ ಅನ್ನಾದ್ಯಮುದುಂಬರಃ ॥**

**ಮಂತ್ರಾರ್ಥಮೌದುಂಬರ್ಯಾಂ ದರ್ಶಯತಿ—ಯೋಽಯಮುದುಂಬರವೃಕ್ಷಃ ಸೋಽಯಂ ರಸರೂಪೋಽನ್ನರೂಪಶ್ಚ ॥**

ಮಂತ್ರಾರ್ಥವನ್ನು ತಿಳಿಸುವರು. ಈ ಉದುಂಬರವೃಕ್ಷವು ಅನ್ನಾದ್ಯಾಹಾರವನ್ನೂ, ರಸವನ್ನೂ ಉಂಟುಮಾಡುವುದು. ಆದ್ದರಿಂದ ಇದು ಅನ್ನಾದ್ಯಾಹಾರಗಳ ಸಂಕೇತವು.

**ಯದ್ವೈತದ್ದೇವಾ ಇಷಮೂರ್ಜಂ ವ್ಯಭಜಂತ ತತ ಉದುಂಬರಃ ಸಮ-ಭವತ್ತಸ್ಮಾತ್ಸ ತ್ರಿಃ ಸಂವತ್ಸರಸ್ಯ ಪಚ್ಯತೇ ।**

**ತಮೇತಮರ್ಥಮುಪಪಾದಯತಿ—ದೇವಾಃ ಪುರಾ ಯದೇತದನ್ನರಸರೂಪಂ ವಸ್ತು ಕ್ವಚಿದ್ಭೂಮಾವುಪವಿಶ್ಯ ವ್ಯಭಜಂತೈತಾವದಸ್ಯೈತಾವದಸ್ಯೇತಿ ವಿಭಾಗಂ ಕೃತವಂತಃ । ತದಾನೀಂ ತಸ್ಮಾದ್ಭೂಮೌ ಪತಿತಾದನ್ನರಸಭೇದಾದ್ಬೀಜ ಭೂತಾದಯಮೌದುಂಬರವೃಕ್ಷಃ ಸಮುತ್ಪನ್ನಸ್ತ-ಸ್ಮಾತ್ಸಂವತ್ಸರಸ್ಯಮಧ್ಯೇ ಭೋಕ್ತ್ರೄಣಾಮನ್ನಸಿದ್ಧ್ಯರ್ಥಂ ಸ ವೃಕ್ಷಸ್ತ್ರಿಃ ಪಚ್ಯತೇ । ತ್ರಿರಿತ್ಯುಪ-ಲಕ್ಷಣಂ । ಬಹುಕೃತ್ವಃ ಫಲಂ ಗೃಹ್ಣಾತಿ ॥**

ಅದರ ಅರ್ಥವನ್ನು ತಿಳಿಸುವರು. ಪೂರ್ವದಲ್ಲಿ ದೇವತೆಗಳು ಭೂಮಿಯಮೇಲೆ ಕುಳಿತುಕೊಂಡು ತಮ್ಮ ಆಹಾರಾದಿಗಳನ್ನು ವಿಭಾಗಮಾಡಿಕೊಳ್ಳುತ್ತಿರುವಾಗ ಎಂದರೆ ಈ ಭಾಗವು ನಿನ್ನದು, ಆ ಭಾಗವು ಮತ್ತೊಬ್ಬನದು ಎಂದು ಹಂಚಿಕೊಳ್ಳುತ್ತಿರುವಾಗ ಅನ್ನರಸರೂಪವಾದ ಕೆಲವು ಚೂರುಗಳು ಭೂಮಿಯಮೇಲೆ ಬಿದ್ದವು. ಆ ಚೂರುಗಳು ಬೀಜರೂಪಗಳಾಗಿ ಔದುಂಬರ ವೃಕ್ಷಗಳಾದವು. ಈ ಔದುಂಬರವೃಕ್ಷವು ರುಚಿಕರವಾದ ಅನೇಕ ಫಲಗಳನ್ನು ವರ್ಷದಲ್ಲಿ ಮೂರಾವರ್ತಿ ಫಲಿಸುವುದು (ಫಲವನ್ನು ಬಿಡುವುದು).

**ತದ್ಯದೌದುಂಬರೀಂ ಸಮನ್ವಾರಭಂತ ಇಷಮೇವ ತದೂರ್ಜ ಮನ್ನಾದ್ಯಂ ಸಮನ್ವಾರಭಂತೇ ॥**

**ಔದುಂಬರೀಸ್ಪರ್ಶಮುಪಸಂಹರತಿ—**

ಇಂತಹ ಔದುಂಬರೀಶಾಖೆಯನ್ನು ಸ್ಪರ್ಶಮಾಡುವುದರಿಂದ ಋತ್ವಿಜರೆಲ್ಲರೂ ಅನ್ನಾದ್ಯಾಹಾರವನ್ನೂ ಕ್ಷೀರಾದಿರಸವನ್ನೂ ಪಡೆದು ಸುಖದಿಂದಿರುವರು.

**ವಾಚಂ ಯಚ್ಛಂತಿ ವಾಗ್ವೈ ಯಜ್ಞೋ ಯಜ್ಞಮೇವ ತದ್ಯಚ್ಛಂತಿ ॥**

ಔದುಂಬರೀಸ್ಪರ್ಶಾದೂರ್ಧ್ವಂ ಮೌನಂ ವಿಧತ್ತೇ—ಯಜ್ಞಸ್ಯೋಚ್ಚಾರ್ಯಮಾಣ ಮಂತ್ರಸಾಧ್ಯತ್ವಾದ್ವಾಗ್ರೂಪತ್ವಮ್ । ಅತೋ ವಾಙ್ನಿಯಮೇನ ಯಜ್ಞಸ್ಯೈವ ನಿಯಮೋ ಭವತಿ ॥

ಔದುಂಬರೀಶಾಖೆಯ ಸ್ಪರ್ಶನಾನಂತರ ಎಲ್ಲರೂ ಮಾತನಾಡುವುದನ್ನು ಬಿಟ್ಟು ಮೌನದಿಂದಿರುವರು. ಏಕೆಂದರೆ ಯಜ್ಞವು ವಾಗ್ರೂಪವು ವಾಕ್ಕನ್ನು ನಿಲ್ಲಿಸುವುದರಿಂದ ಯಜ್ಞವನ್ನು ಸಮಾಪ್ತಿಗೊಳಿಸಿದಂತಾಯಿತು. ಎಂದರೆ ವಾಙ್ನಿಯಮವೂ ಯಜ್ಞದ ನಿಯಮವೇ ಆಗಿರುವುದು.

**ಅಹರ್ನಿಯಚ್ಛಂತ್ಯಹರ್ವೈ ಸ್ವರ್ಗೋ ಲೋಕಃ ಸ್ವರ್ಗಮೇವ ತಂ ಲೋಕಂ ನಿಯಚ್ಛಂತಿ ॥**

ಮೌನಸ್ಯ ಕಾಲವಿಶೇಷಂ ವಿಧತ್ತೇ—ಸೂರ್ಯಾಸ್ತಮಯಾದರ್ವಾಕ್ಸ್ವರ್ಗವತ್ಪ್ರಕಾಶ-ಸದ್ಭಾವೇನಾಹ್ನಃ ಸ್ವರ್ಗತ್ವಮ್ । ತಸ್ಮಿನ್ನಹನಿ ವಾಙ್ನಿಯಮೇನ ಸ್ವರ್ಗ ಏವ ನಿಯತಃ ಸ್ವಾಧೀನೋ ಭವತಿ ॥

ಮೌನವನ್ನಾಚರಿಸುವ ಕಾಲವಿಶೇಷವನ್ನು ತಿಳಿಸುವರು. ಹಗಲಿನಲ್ಲಿ ಸೂರ್ಯಾಸ್ತಮಯವಾಗುವವರೆಗೆ ಹಗಲು ಬಹಳ ಪ್ರಕಾಶಯುಕ್ತವಾಗಿರುವುದು ಎಂದರೆ ಸ್ವರ್ಗದಂತೆ ಬೆಳಗುತ್ತಿರುವುದು. ಇಂತಹ ಪ್ರಕಾಶಮಾನವಾದ ಹಗಲಿನಲ್ಲಿ ವಾಙ್ನಿಯಮವನ್ನು ಆಚರಿಸುವುದರಿಂದ ಸ್ವಗಲೋಕವೇ ಸ್ವಾಧೀನವಾಗಿರುವುದು.

**ನ ದಿವಾ ವಾಚಂ ವಿಸೃಜೇರನ್ಯದ್ದಿವಾ ವಾಚಂ ವಿಸೃಜೇರನ್ನಹರ್ಭ್ರಾತೃ-ವ್ಯಾಯ ಪರಿಶಿಂಷ್ಯುಃ ॥**

ವಿಧಿಸಿದ್ಧ್ಯರ್ಥಮಹನಿ ಕತಿಪಯೇಷು ಕ್ಷಣೇಷು ವಾಚಂ ನಿಯಮ್ಯ ಪಶ್ಚಾನ್ಮೌನ-ಪರಿತ್ಯಾಗಪ್ರಾಪ್ತೌ ನಿಷೇಧತಿ—ಅಹನಿ ವಾಗ್ವಿಸರ್ಗೇ ಸತಿ ಯಜಮಾನಾಃ ಸರ್ವೇಽಪ್ಯಹಃ ಸಂಬಂಧಂ ಪರಿತ್ಯಜ್ಯ ಶತ್ರವೇ ತದಹಃ ಪರಿಶಿಂಷ್ಯುರ್ದದ್ಯುರಿತ್ಯರ್ಥಃ ॥

ವಾಗ್ವಿಸರ್ಜನೆಯನ್ನು ಮಾಡಬೇಕಾದರೆ (ಮೌನವನ್ನು ತಾಳಬೇಕಾದರೆ) ಯಜ್ಞಮಾಡುವ ಯಜಮಾನರು ಹಗಲಿನಲ್ಲಿ ಮಾಡಬಾರದು. ಹಗಲಿನಲ್ಲಿ ವಿಸರ್ಜನೆಮಾಡದೆ ರಾತ್ರಿಕಾಲದಲ್ಲಿ ಮಾಡಬೇಕು. ರಾತ್ರಿಕಾಲದಲ್ಲಿ ವಾಗ್ವಿಸರ್ಜನೆಮಾಡುವುದರಿಂದ ರಾತ್ರಿಕಾಲವನ್ನು ಶತ್ರುಗಳ ವಶಮಾಡಿದಂತಾಗುವುದು.

**ನ ನಕ್ತಂ ವಾಚಂ ವಿಸೃಜೇರನ್ಯನ್ನಕ್ತಂ ವಾಚಂ ವಿಸೃಜೇರನ್ರಾತ್ರೀಂ ಭ್ರಾತೃವ್ಯಾಯ ಪರಿಶಿಂಷ್ಯುಃ ॥**

ಅಹನಿ ನಿಷಿದ್ಧಸ್ಯ ವಾಗ್ವಿಸರ್ಗಸ್ಯ ರಾತ್ರೌ ಪ್ರಾಪ್ತೌ ಸತ್ಯಾಂ ತದಪಿ ನಿಷೇಧತಿ—ಪೂರ್ವ-ವದ್ವ್ಯಾಖ್ಯೇಯಮ್ ॥

ಮತ್ತು ಯಜಮಾನರು ವಾಗ್ವಿಸರ್ಜನೆಯನ್ನು ಹಗಲು ಮಾಡಕೂಡದೆಂದು ಹಿಂದೆ ಹೇಳಿದೆಯಷ್ಟೆ. ಆದರಂತೆ ರಾತ್ರಿ ಕಾಲದಲ್ಲಿಯೂ ಕೂಡ ಶತ್ರುಗಳಿಗೆ ಅನುಕೂಲವಾಗುವಂತೆ ವಾಗ್ವಿಸರ್ಜನೆಮಾಡಕೂಡದು. ಇದರಿಂದ ರಾತ್ರಿಯಲ್ಲಿಯೂ ಶತ್ರುಗಳಿಗೆ ಅನುಕೂಲವಾಗುವುದಿಲ್ಲ.

**ಸಮುಯಾವಿಷಿತಃ ಸೂರ್ಯಃ ಸ್ಯಾದಥ ವಾಚಂ ವಿಸೃಜೇರಂಸ್ತಾವಂತ-
ಮೇವ ತದ್ದ್ವಿಷತೇ ಲೋಕಂ ಪರಿಶಿಂಷಂತಿ ॥**

ಯದ್ಯಹನಿ ರಾತ್ರೌ ಚ ನಿಷೇಧಃ ಕದಾ ತರ್ಹಿ ವಾಗ್ವಿಸರ್ಗ ಇತ್ಯಾಶಂಕ್ಯಾಽಽಹ— ಯದಾ ಸೂರ್ಯಃ ಸಮುಯಾವಿಷಿತೋಽಸ್ತಮಯಸಮಯಂ ಪ್ರಾಪ್ತೋಽರ್ಧಾಸ್ತಮಿತಃ ಸ್ಯಾತ್ತದಾನೀಂ ವಾಗ್ವಿಸರ್ಗಃ । ತಥಾ ಸತಿ ಸಂಪೂರ್ಣಾಸ್ತಮಯಪರ್ಯಂತಮಲ್ಪಮೇವ ಕಾಲಂ ದ್ವಿಷತೇ ಲೋಕಂ ಶತ್ರೋಃ ಸ್ಥಾನಂ ಪರಿಶಿಂಷಂತಿ ಪ್ರಯಚ್ಛಂತಿ । ಅಹೋ ರಾತ್ರಿಶ್ಚೇತಿ ಕಾಲ-ದ್ವಯಂ ಸ್ವಾರ್ಥಮೇವ ಭವತಿ ॥

ಹಿಂದೆ ಹೇಳಿದಂತೆ ಹಗಲಿನಲ್ಲಿಯೂ ರಾತ್ರಿಕಾಲದಲ್ಲಿಯೂ ಸಹ ವಾಙ್ನಿಯಮವನ್ನು ಆಚರಿಸಬೇಕೆಂದು ಹೇಳಲಾಗಿದೆಯಷ್ಟೆ. ಹಾಗಾದರೆ ಯಾವ ಕಾಲದಲ್ಲಿ ವಾಗ್ವಿಸರ್ಜನೆಯನ್ನು ಮಾಡಬೇಕು? ಎಂದರೆ ಸೂರ್ಯನು ಸಾಯಂಕಾಲ ಸಮಯದಲ್ಲಿ ಅಸ್ತಂಗತನಾಗುತ್ತಿರುವಾಗ (ಮುಳುಗುತ್ತಿರುವಾಗ) ಅರ್ಧಮಟ್ಟಿಗೆ ಮುಳುಗಿದ ಕೂಡಲೇ ವಾಗ್ವಿಸರ್ಜನೆಯನ್ನು ಮಾಡಬೇಕು. ಹೀಗೆ ಮಾಡುವುದಾದರೆ ಅಸ್ತಮಯಕಾಲದಲ್ಲಿ ಉಳಿದಿರುವ ಅರ್ಧಭಾಗವನ್ನು ಮಾತ್ರ ಶತ್ರುವಿಗೆ ಉಳಿದಂತಾಯಿತು. ಏಕೆಂದರೆ ಪೂರ್ತಿ ಸೂರ್ಯಾಸ್ತಮಯವಾದನಂತರ ಯಜಮಾನನೇ ಮತ್ತೆ ವಾಙ್ನಿಯಮವನ್ನು ಕೈಗೊಳ್ಳುವನು. ಎಂದರೆ ಹಗಲು ಮತ್ತು ರಾತ್ರಿಕಾಲಗಳೆರಡರಲ್ಲಿ ಸೂರ್ಯಾಸ್ತಮಯಸಮಯದಲ್ಲಿ ಅರ್ಧಕಾಲಮಾತ್ರವೇ ಶತ್ರುವಿನ ವಶವಾಗುವುದು. ಇದರಿಂದ ಶತ್ರುವಿಗೆ ಅತ್ಯಲ್ಪಕಾಲವು ದೊರೆತಂತಾಗುವುದು. ಉಳಿದ ಹೆಚ್ಚಾದ ಕಾಲವೆಲ್ಲವೂ ಯಜಮಾನನಿಗೇ ದೊರೆಯುವುದು.

**ಅಥೋ ಖಲ್ವಸ್ತಮಿತ ಏವ ವಾಚಂ ವಿಸೃಜೇರಂಸ್ತಮೋಭಾಜಮೇವ
ತದ್ದ್ವಿಷಂತಂ ಭ್ರಾತೃವ್ಯಂ ಕುರ್ವಂತಿ ॥**

ಪಕ್ಷಾಂತರಂ ವಿಧತ್ತೇ— ಅಥೋ ಖಲ್ವಥವೇತ್ಯರ್ಥಃ । ಸೂರ್ಯೇ ಸಾಕಲ್ಯೇನಾಸ್ತ-ಮಿತೇ ಸತ್ಯೇವ ಪಶ್ಚಾದ್ವಾಗ್ವಿಸರ್ಗೇಣ ಶತ್ರುಂ ತಮೋಭಾಜಮಂಧಕಾರಮಗ್ನಂ ಕುರ್ವಂತಿ ।

ಪ್ರಕಾರಾಂತರವನ್ನು ತಿಳಿಸುವರು. ಅಥವಾ ಸೂರ್ಯಾಸಮಯಾನಂತರ ವಾಗ್ವಿಸರ್ಜನೆಯನ್ನು ಮಾಡಿದಲ್ಲಿ ಕೇವಲ ಅಂಧಕಾರಯುಕ್ತವಾದ ರಾತ್ರಿಯೇ ಶತ್ರುವಿಗೆ ಉಳಿದಂತಾಗುವುದು.

**ಆಹವನೀಯಂ ಪರೀತ್ಯ ವಾಚಂ ವಿಸೃಜೇರನ್ಯಜ್ಞೋ ವಾ ಆಹವನೀಯಃ
ಸ್ವರ್ಗೋ ಲೋಕ ಆಹವನೀಯೋ ಯಜ್ಞೇನೈವ ತತ್ಸ್ವರ್ಗೇಣ
ಲೋಕೇನ ಸ್ವರ್ಗಂ ಲೋಕಂ ಯಂತಿ ॥**

ವಾಗ್ವಿಸರ್ಗಸ್ಯ ದೇಶವಿಶೇಷಂ ವಿಧತ್ತೇ—ಸದಸೋ ನಿರ್ಗತ್ಯಾಽಽಹವನೀಯಂ ಪರಿತಃ ಪ್ರದಕ್ಷಿಣೀಕೃತ್ಯ ತತ್ರ ವಾಗ್ವಿಸರ್ಗಃ ಕರ್ತವ್ಯಃ । ಆಹವನೀಯಸ್ಯ ಯಜ್ಞನಿಷ್ಪಾದಕತ್ವದ್ವಾರಾ ಸ್ವರ್ಗಹೇತುತ್ವೇನ ತದುಭಯಾತ್ಮಕತ್ವೇ ಸತಿ ಯಜ್ಞಸ್ವರ್ಗಾತ್ಮಕೇನೈವಾಽಽಹವನೀಯೇನ ಯಜಮಾನಾಃ ಸ್ವರ್ಗಂ ಪ್ರಾಪ್ನುವಂತಿ ॥

ವಾಗ್ವಿಸರ್ಜನೆಯ ಪ್ರದೇಶವನ್ನು ತಿಳಿಸುವರು. ಸದಸ್ಯರಾದ ಋತ್ವಿಜರು ಯಜ್ಞಶಾಲೆಯಿಂದ ಹೊರಟು ಆಹವನೀಯಾಗ್ನಿಯನ್ನು ಸುತ್ತಲೂ ಪ್ರದಕ್ಷಿಣೆಮಾಡಿ ಅನಂತರ ವಾಗ್ವಿಸರ್ಜನೆಯನ್ನು ಮಾಡಬೇಕು. ಆಹವನೀಯಾಗ್ನಿಯು ಸ್ವರ್ಗವನ್ನು ದೊರಕಿಸಿಕೊಡುವುದು. ಏಕೆಂದರೆ ಆಹವನೀಯವೇ ಸ್ವರ್ಗಸಾಧನವಾದ್ದರಿಂದ ಯಜ್ಞಸ್ವರೂಪವು. ಆದ್ದರಿಂದ ಯಜಮಾನಾದಿಗಳು ಆಹವನೀಯ (ಯಜ್ಞ)ದ ಮೂಲಕವಾಗಿಯೇ ಸ್ವರ್ಗಲೋಕಕ್ಕೆ ಹೋಗಿ ಸೇರುವರು.

**ಯದಿಹೋನಮಕರ್ಮ ಯದತ್ಯರೀರಿಚಾಮ ಪ್ರಜಾಪತಿಂ ತತ್ಪಿತರಮ-ಪ್ಯೇತ್ವಿತಿ ವಾಚಂ ವಿಸೃಜಂತೇ ॥**

ವಾಗ್ವಿಸರ್ಗೇ ಮಂತ್ರವಿಶೇಷಂ ವಿಧತ್ತೇ—ಇಹ ಕ್ರತೌ ಯದಂಗಮೂನಮಸಂಪೂರ್ಣಂ ಯದಸ್ಯಕರ್ಮ ಸ್ವರೂಪೇಣೈವ ತದಂಗಂ ನ ಕೃತಂ ಯದಸ್ಯಂಗಮತ್ಯರೀರಿಚಾಮಾತಿರಿಕ್ತಂ ದ್ವಿವಾರಂ ತ್ರಿವಾರಂ ವಾ ವಯಮನುಷ್ಠಿತವಂತಸ್ತತ್ಸರ್ವಂ ದೋಷಕರಮಂಗಜಾತಂ ಪಿತರಮ-ಸ್ಮಾಕಂ ಪಾಲಕಂ ಪ್ರಜಾಪತಿಮಪ್ಯೇತು ಪ್ರಾಪ್ನೋತು । ಇತ್ಯನೇನ ಮಂತ್ರೇಣ ವಾಗ್ವಿಸರ್ಗಃ ಕರ್ತವ್ಯಃ ॥

ವಾಗ್ವಿಸರ್ಜನೆಮಾಡುವಾಗ ಪಠಿಸಬೇಕಾದ ಮಂತ್ರವಿಶೇಷವನ್ನು ತಿಳಿಸುವರು. ಮೇಲಿನ ಮಂತ್ರವು ವಿಸರ್ಜನ ಮಂತ್ರವು. ಇದರ ಅರ್ಥವು—ಈ ಯಜ್ಞದಲ್ಲಿ ಯಾವುದಾದರೂ ಭಾಗವು ಊನವಾಗಿ ಅಸಂಪೂರ್ಣವಾದರೂ ಅಥವಾ ಮಾಡಬೇಕಾದ ಯಾವುದಾದರೂ ಭಾಗವು ಮಾಡದೆ ಬಿಟ್ಟುಹೋದರೂ ಅಥವಾ ಮಾಡಬೇಕಾದ ಕರ್ಮಗಳನ್ನು ಪ್ರಮಾದದಿಂದ ಎರಡು ಮೂರಾವರ್ತಿ ಮಾಡಲಾಗಿದ್ದರೂ ಈ ನ್ಯೂನಾತಿರಿಕ್ತದೋಷಗಳೆಲ್ಲವೂ ನಮ್ಮ ಪಾಲಕನಾದ ಪ್ರಜಾಪತಿಯನ್ನು ಹೋಗಿ ಸೇರಿ ಸಂಪೂರ್ಣವೂ ದೋಷರಹಿತವೂ ಆಗಲಿ ಇದೇ ಆ ಮಂತ್ರದ ಅರ್ಥವು. ಈ ಮಂತ್ರದಿಂದ ವಾಗ್ವಿಸರ್ಜನೆಯನ್ನು ಮಾಡಬೇಕು.

**ಪ್ರಜಾಪತಿಂ ವೈ ಪ್ರಜಾ ಅನು ಪ್ರಜಾಯಂತೇ ಪ್ರಜಾಪತಿರೂನಾತಿರಿ-ಕ್ತಯೋಃ ಪ್ರತಿಷ್ಠಾ ನೈನಾನೂನಂ ನಾತಿರಿಕ್ತಂ ಹಿನಸ್ತಿ ॥**

ಉಕ್ತಮಂತ್ರಂ ಪ್ರಶಂಸತಿ—ಸರ್ವಾಃ ಪ್ರಜಾಃ ಪ್ರಜಾಪತಿಮೇವಾನು ಪ್ರಜಾಯಂತೇ ತಸ್ಯ ಸ್ರಷ್ಟೃತ್ವಾತ್ತದನುರೂಪೈವ ಸರ್ವೋತ್ಪತ್ತಿಃ । ಅತಃ ಸ್ರಷ್ಟಾ ಪ್ರಜಾಪತಿರೇವ ನ್ಯೂನಾತಿರಿಕ್ತದೋಷಯೋಃ ಪ್ರತಿಷ್ಠಾಶ್ರಯಃ ಸಮಾಧಾನಹೇತುಃ । ತಸ್ಮಾದೇತನ್ಮಂತ್ರಪಾಠೇನೈನಾನ್ಯ-ಜಮಾನಾನೂನಾತಿರಿಕ್ತದ್ವಯದೋಷೋ ನ ಬಾಧತೇ ॥

ಮೇಲೆ ಹೇಳಿದ ಮಂತ್ರವನ್ನು ಪ್ರಶಂಸೆಮಾಡುವರು. ಸಮಸ್ತ ಪ್ರಜೆಗಳೂ ಪ್ರಜಾಪತಿಯನ್ನೇ ಅನುಸರಿಸಿ ಉತ್ಪನ್ನವಾಗುವವು. ಏಕೆಂದರೆ ಪ್ರಜಾಪತಿಯೇ ಇವುಗಳನ್ನು ಸೃಷ್ಟಿಮಾಡಿರುವನು. ಆದ್ದರಿಂದ ಸಮಸ್ತ ನ್ಯೂನಾತಿರಿಕ್ತದೋಷಗಳೂ

ಪ್ರಜಾಪತಿಯನ್ನೇ ಆಶ್ರಯಿಸಿ ಸಂಪೂರ್ಣವಾಗುತ್ತವೆ. ಈ ಕಾರಣದಿಂದ ಈ ಮಂತ್ರಪಾಠದಿಂದ ಸಂಭವಿಸಬಹುದಾದ ಯಾವ ನ್ಯೂನಾತಿರಿಕ್ತದೋಷಗಳೂ ಯಜಮಾನರಿಗೆ ತಟ್ಟುವುದಿಲ್ಲ.

**ಪ್ರಜಾಪತಿಮೇವೋನಾತಿರಿಕ್ತಾನ್ಯಭ್ಯೇತ್ಯರ್ಜಂತಿ ಯ ಏವಂ ವಿದ್ವಾಂಸ ಏತೇನ ವಾಚಂ ವಿಸೃಜಂತೇ ॥**

**ವೇದನಪೂರ್ವಕಮನುಷ್ಠಾನಂ ಪ್ರಶಂಸತಿ—ಮಂತ್ರೇಣ ವಾಗ್ವಿಸರ್ಗಂ ಕುರ್ವಾಣಾ ಯಜಮಾನಾ ಊನಾತಿರಿಕ್ತಾಂಗಕೃತಂ ದೋಷಮಭಿಲಕ್ಷ್ಯ ಪ್ರಜಾಪತಿಮೇವಾಭ್ಯೇತ್ಯರ್ಜಂತಿ । ಅತಿಶಯೇನ ಪ್ರಾಪ್ನುವಂತಿ । ಸ ಏವ ಸಮಾದಧಾತೀತ್ಯರ್ಥಃ ॥**

ಮಂತ್ರಪೂರ್ವಕವಾಗಿ ವಾಗ್ವಿಸರ್ಜನೆ ಮಾಡುವ ಯಜಮಾನರು ನ್ಯೂನಾತಿರಿಕ್ತದೋಷಗಳನ್ನು ಲಕ್ಷಿಸಿ ಎಲ್ಲವನ್ನೂ ಪ್ರಜಾಪತಿಯನ್ನೇ ಉದ್ದೇಶಿಸಿ ಅವನಲ್ಲಿಯೇ ಅರ್ಪಿಸುವರು. ಆದ್ದರಿಂದ ಪ್ರಜಾಪತಿಯೇ ಈ ನ್ಯೂನಾತಿರಿಕ್ತ ದೋಷಗಳನ್ನೆಲ್ಲಾ ಪರಿಹಾರಮಾಡಿ ಯಜ್ಞವನ್ನು ನಿರ್ವಿಘ್ನವಾಗಿ ಸಮಾಪ್ತಿಗೊಳಿಸುವನು.

**ತಸ್ಮಾದೇವಂ ವಿದ್ವಾಂಸ ಏತೇನೈವ ವಾಚಂ ವಿಸೃಜೇತ್ ॥**

**ಮಂತ್ರೇಣ ವಾಗ್ವಿಸರ್ಗಮುಪಸಂಹರತಿ –**

ಈ ವಾಗ್ವಿಸರ್ಜನೆಯನ್ನು ಉಪಸಂಹಾರ (ಸಮಾಪ್ತಿ) ಮಾಡುವರು. ಆದ್ದರಿಂದ ವಿದ್ವಾಂಸರಾದ ಎಂದರೆ ಎಲ್ಲವನ್ನೂ ತಿಳಿದಿರುವ ಯಜ್ಞಕರ್ತರಾದ ಯಜಮಾನರು ಮೇಲೆ ಹೇಳಿದ ಮಂತ್ರದಿಂದಲೇ ವಾಗ್ವಿಸರ್ಜನೆ (ಪುನಃ ಮಾತನಾಡುವ ಕ್ರಮವನ್ನು) ಮಾಡಬೇಕು.

*English Translation*

### When and how the priests break their silence on the tenth day

All touch now the branch of an Udumbara tree (which is at the sacrificial compound behind the seat of the Udgatar) with their hands, thinking, "I touch food and juice;" for the Udumbara tree represents juice and food. At the time that the gods distributed for the earth food and juice, the Udumbara tree grew up; therefore it brings forth every year three times ripe fruits. If they take the Udumbara branches in their hands, they then take food and juice. They suppress speech, for the sacrifice is speech; in suppressing the sacrifice by abstaining from it, they suppress the day; for the day is the heaven-world, and consequently they subdue the heaven-world. No speech is allowed during the day; if they would speak during the day, they would hand over the day to the enemy; if they would speak during the night, they would hand over the night to the enemy. Only at the time when the sun has half set, they should speak; for then they leave but this much space as is between the conjuction of day and

night to the enemy. Or they should speak only after the snn has completely set. By doing so, they make their enemy and adversary share in the darkness. Walking round the Ahavaniya fire, they then speak; for the Ahavaniya fire is the sacrifice, and the heaven-world; for by means of the sacrifice, which is the gate of the heaven-world. By the words, "if we have failed, by omission, or improper application, or by excess, of what is required, all that may go be taken away to our father, who is Prajapati," they recommence speaking. For all creatures are born after Prajapati he being their creator. Prajapati, therefore, is the shelter from the evil consequences of what is deficient, or in excess in his creatures; and thence these two faults do no harm to the sacrificers. Therefore all that is deficient or in excess with them who have this knowledge, enters Prajapati. Thence they should commence speaking by repeating this mantra.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಚತುರ್ವಿಂಶಾಧ್ಯಾಯೇ ಪಂಚಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯದಲ್ಲಿ ಐದನೆಯ ಖಂಡವು ಸಮಾಪ್ತವಾದುದು.



## ಅಥ ಚತುರ್ವಿಂಶಾಧ್ಯಾಯೇ ಷಷ್ಠಃ ಖಂಡಃ

### ಇಪ್ಪತ್ತನಾಲ್ಕನೆಯ ಅಧ್ಯಾಯದಲ್ಲಿ ಆರನೆಯ ಖಂಡವು



[ಚಾತುರ್ಹೋತೃಮಂತ್ರಗಳು; ಪ್ರಜಾಪತಿಯ ಶರೀರಗಳು; ಬ್ರಹ್ಮೋದ್ಯವು. ಯಜ್ಞಕರ್ತರಾದ ಯಜಮಾನರು ಸ್ವರ್ಗದಲ್ಲಿ ತಮ್ಮ ಸ್ಥಾನಕ್ಕೆ ಹೋಗಿ ಸೇರುವರು.]



ಅಧ್ವರ್ಯೋ ಇ(ರ್ಯವಿ) ತ್ಯಾಹ್ವಯತೇ ಚತುರ್ಹೋತೃಷು ವ್ಯದಿಷ್ಯಮಾಣಸ್ತದಾಹಾವಸ್ಯ ರೂಪಂ ॥

ಚತುರ್ಹೋತೃಮಂತ್ರವ್ಯಾಖ್ಯಾನಾರ್ಥಮಾಹಾವಂ ವಿಧತ್ತೇ—ಚತುರ್ಹೋತೃನಾಮಕೇಷು ಮಂತ್ರೇಷೂಚ್ಚೈರುಚ್ಚಾರಣಂ ಕರ್ತುಮುದ್ಯುಕ್ತೋ ಹೋತಾ ಹೇಽಧ್ವರ್ಯೋ

ಇ(ರ್ಯವಿ) ತ್ಯಾಹ್ವಾನಂ ಕುರ್ಯಾತ್ । ಯಥಾಶಸ್ತ್ರಾದೌ ಶೋಂಸಾವೋಮಿತ್ಯಾಹ್ವಾನಂ ಕರೋತಿ ತದ್ವದತ್ರಾಪಿ ಸಂಬೋಧನಮೇವಾಽಽಹಾವಸ್ಯ ಸ್ವರೂಪಮ್ ॥

ಚತುರ್ಹೋತೃಮಂತ್ರವಿವರಣೆ ಮಾಡುವುದಕ್ಕಾಗಿ ಹೋತೃವು ಅಧ್ವರ್ಯುವನ್ನುದ್ದೇಶಿಸಿ ಆಹಾವ (ಆಹ್ವಾನ) ವನ್ನು ಪಠಿಸುವನು. ಅದನ್ನು ಇಲ್ಲಿ ತಿಳಿಸುವರು. ಚತುರ್ಹೋತೃವೆಂಬ ಮಂತ್ರಗಳನ್ನು ಘಟ್ಟಿಯಾಗಿ ಉಚ್ಚರಿಸಿ ಪಠಿಸುವುದಕ್ಕೆ ಮೊದಲು ಹೋತೃವು ಎದುರಿಗಿರುವ ಅಧ್ವರ್ಯುವನ್ನು ಉದ್ದೇಶಿಸಿ—ಎಲೈ ಅಧ್ವರ್ಯುವೇ ಚತುರ್ಹೋತೃ ಮಂತ್ರಪಠನಕ್ಕಾಗಿ ನಾನು ಈಗ **ಶಂಸಾವೋಂ** ಎಂದು ಆಹಾವಮಂತ್ರವನ್ನು (ನಿನ್ನನ್ನುದ್ದೇಶಿಸಿ ಆಹ್ವಾನವನ್ನು) ಉಚ್ಚರಿಸುವೆನು ಎಂದು ಸಂಬೋಧನೆಮಾಡುವನು.

## ಓಂ ಹೋತಸ್ತಥಾ ಹೋತರಿತ್ಯಧ್ವರ್ಯುಃ ಪ್ರತಿಗೃಣಾತ್ಯವಸಿತೇಽವಸಿತೇ ದಶಸು ಪದೇಸು ॥

ಚತುರ್ಹೋತೃವ್ಯಾಖ್ಯಾನಕಾಲೇಽಧ್ವರ್ಯೋಃ ಪ್ರತಿಗರವಿಶೇಷಂ ವಿಧತ್ತೇ—ಹೇ ಹೋತರೋಂ ತ್ವದಭಿಲಷಿತಮಸ್ತು । ಹೇ ಹೋತಸ್ತಥಾ ಕ್ರಿಯತಾಮಿತ್ಯಧ್ಯಾಹಾರಃ । ಅನೇನ ಮಂತ್ರೇಣಾಧ್ವರ್ಯುಃ ಪ್ರತಿಗರಂ ಬ್ರೂಯಾತ್ । ಹೋತುರುತ್ಸಾಹಜನಕಂ ಪ್ರತಿವಚನಂ ಪ್ರತಿಗರಃ । ವಕ್ಷ್ಯಮಾಣೇಷು ಹೋತ್ರಾ ಪ್ರಯೋಜ್ಯೇಷು ದಶಸಂಖ್ಯಾಕೇಷು ಪದೇಷು ಮಧ್ಯೇ ಏಕೈಕಸ್ಮಿನ್ಪದೇಽವಸಿತೇ ಸಮಾಪ್ತೇ ಸತಿ ತದಾ ತದಾ ಪುನಃ ಪುನರಧ್ವರ್ಯುರೋಂ ಹೋತರಿತ್ಯಾದಿಮಂತ್ರೇಣ ಪ್ರತಿಗರಂ ಬ್ರೂಯಾತ್ ಅವಸಿತಶಬ್ದಸ್ಯ ವೀಪ್ಸಾ ಪ್ರತಿಪದಂ ಪ್ರತಿಗರಪ್ರಯೋಗಾರ್ಥಮ್ ॥

ಚತುರ್ಹೋತೃಮಂತ್ರವ್ಯಾಖ್ಯಾನಕಾಲದಲ್ಲಿ ಹೋತೃವಿನ ಆಹಾವಕ್ಕೆ ಅಧ್ವರ್ಯುವು ಹೇಳುವ ಪ್ರತಿಗರ (**ಪ್ರತ್ಯುತ್ತರ**) ವನ್ನು ತಿಳಿಸುವರು. ಹೋತೃವು ಹೇಳುವ ಆಹಾವಕ್ಕೆ (ಆಹ್ವಾನಕ್ಕೆ) ಪ್ರತ್ಯುತ್ತರವಾಗಿ (ಪ್ರತಿಗರ) ಅಧ್ವರ್ಯುವು—**ಓಂ ಹೋತಃ** ಎಲೈ ಹೋತೃವೇ ನೀನು ಹೇಳಿದಂತೆಯೇ ನಡೆಯಲಿ ಎಂದು ಹೇಳುವನು. ಓಂ **ಹೋತಃ** ಎಂದು ಅಧ್ವರ್ಯುವು ಹೇಳುವುದೇ ಪ್ರತಿಗರ ಮಂತ್ರವು. ಪ್ರತಿಗರವೆಂದರೆ ಹೋತೃವು ಕೇಳುವ ಪ್ರಶ್ನೆಗೆ ಅಧ್ವರ್ಯುವು ಹೇಳುವ ಉತ್ಸಾಹಜನಕವಾದ ಪ್ರತ್ಯುತ್ತರವೇ ಪ್ರತಿಗರವು. ಮುಂದೆ ಹೋತೃವು ಹೇಳುವ ಚತುರ್ಹೋತ್ರದ ಹತ್ತು ಪದಗಳಲ್ಲಿ ಪ್ರತಿಪದವನ್ನು ಹೋತೃವು ಉಚ್ಚರಿಸುವ ಓಂ ತಥಾ ಎಂದು ಪ್ರತಿಗರವನ್ನು ಹೇಳಬೇಕು. ಇದನ್ನು ವಿವರಿಸುವುದಕ್ಕಾಗಿಯೇ ಇಲ್ಲಿ ಅವಸಿತೇ (ಸಮಾಪ್ತೆ) ಎಂದು ಎರಡಾವರ್ತಿ ಹೇಳಲಾಗಿದೆ.

## ತೇಷಾಂ ಚಿತ್ತಿಃ ಸ್ರುಗಾಸೀಕ್ಷಿತ್ ॥

ತತ್ರ ಪ್ರಥಮಂ ಪದಂ ದರ್ಶಯತಿ—ದೇವಕರ್ತೃಕೇ ಸತ್ರೇ ಪ್ರಜಾಪತಿರನ್ಯೇ ದೇವಾ ಯಜಮಾನಾಸ್ತೇ ಚ ಮಂತ್ರಾಂತರೇ ವಕ್ಷ್ಯಂತೇ । ತ ಏವಾತ್ರ ತೇಷಾಮಿತಿ ತಚ್ಛಬ್ದೇನ ಪರಾಮೃಶ್ಯಂತೇ । ತೇಷಾಂ ಪ್ರಜಾಪತಿರೂಪಗೃಹಪತಿಯುಕ್ತಾನಾಂ ದೇವತಾತ್ಮನಾಂ ಯಜಮಾನಾನಾಂ ಮಾನಸೇ ಕರ್ಮಣಿ ಚಿತ್ತಿಃ ಸ್ರುಗಾಸೀತ್ । ಚಿತೀ ಸಂಜ್ಞಾನ ಇತಿ ಧಾತೋಶ್ಚಿತ್ತಿಶಬ್ದನಿಷ್ಪತ್ತಿಃ । ಇದಂ ವಸ್ತ್ವಿತ್ಥಮೇವ ನ ತ್ವನ್ಯಥೇತಿ ಯಾ ಸಮ್ಯಗ್ಜ್ಞಾನರೂಪಾ ಮನೋ-

ವೃತ್ತಿಃ ಸಾ ಚಿತ್ತಿಃ । ಸೈವೈತೇಷಾಂ ಹೋಮಸಾಧನಭೂತಜುಹೂಸ್ಥಾನೀಯಾಸೀತ್ । ಅಮೂರ್ತಾಯಾಶ್ಚಿತ್ತೇರ್ಜುಹೂರೂಪತ್ವಮಾಶ್ಚರ್ಯಮಿತಿ ದ್ಯೋತಯಿತುಂ ಪ್ಲುತಿಃ । ಏವಮುತ್ತರತ್ರಾಪಿ ದ್ರಷ್ಟವ್ಯಂ ॥

ಈ ಚತುರ್ಹೋತೃಮಂತ್ರದಲ್ಲಿ ಪ್ರಥಮಪಾದವನ್ನು ತಿಳಿಸುವರು. ಪೂರ್ವದಲ್ಲಿ ಪ್ರಜಾಪತಿಯೂ, ದೇವತೆಗಳೂ ಸೇರಿ ಯಜ್ಞಮಾಡಿದಾಗ ಪ್ರಜಾಪತಿಯು ಗೃಹಪತಿಯ ಭಾಗವನ್ನೂ ದೇವತೆಗಳು ಯಜ್ಞಮಾಡುವ ಯಜಮಾನರ ಭಾಗವನ್ನೂ ವಹಿಸಿದ್ದರು. ಆದ್ದರಿಂದಲೇ ಇಲ್ಲಿ ದೇವತೆಗಳನ್ನುದ್ದೇಶಿಸಿ ತೇಷಾಂ ಎಂದು ಹೇಳಲಾಗಿದೆ. ಪ್ರಜಾಪತಿರೂಪ ಗೃಹಪತಿಯುಕ್ತರಾದ ದೇವತೆಗಳು ಮಾಡಿದ ಮಾನಸಯಜ್ಞದಲ್ಲಿ ಚಿತ್ತಿಯು ಹೋಮಮಾಡುವ ಸ್ರುಕ್ ಅಥವಾ (ಮರದ) ಸೌಟಾಗಿದ್ದಿತು. ಸಂಜ್ಞಾನವೆಂಬ ಅರ್ಥವುಳ್ಳ ಚಿತೀ ಎಂಬ ಶಬ್ದವು ನಿಷ್ಪನ್ನವಾಗಿದೆ. ಚಿತ್ತಿ ಎಂದರೆ--ಈ ವಿಷಯವು ಹೀಗೆಯೇ ಸರಿ ಬೇರೆ ವಿಧವಾಗಿ ಅಲ್ಲ ಎಂಬ ನಿಶ್ಚಯಜ್ಞಾನ (ದೃಢಬುದ್ಧಿಯೇ) ವೇ ಚಿತ್ತಿ ಎಂದು ಮನೋವೃತ್ತಿಯು. ಇಂತಹ ಮನೋವೃತ್ತಿಯೇ ಈ ದೇವತೆಗಳು ಮಾಡಿದ ಯಜ್ಞದಲ್ಲಿ ಸ್ರುಕ್ ಎಂದರೆ ಹೋಮಮಾಡುವ ಜುಹೂ ಎಂಬ ಮರದ ಸೌಟಾಗಿದ್ದಿತು. ಎಂದಭಿಪ್ರಾಯವು. ಯಾವ ಆಕಾರವೂ ಇಲ್ಲದ (ಭಾವನಾರೂಪವಾದ) ಚಿತ್ತಿ ಎಂಬ ಮನಸ್ಸಿನ ಪರಿಸ್ಥಿತಿಯೇ ಇಲ್ಲಿ ಜುಹೂರೂಪದಿಂದಿರುವುದೆಂದು ತೋರಿಸುವುದಕ್ಕಾಗಿ ಇಲ್ಲಿ ೩ ಎಂಬ ಪ್ಲುತವನ್ನು (ಆಶ್ಚರ್ಯವಾಚಕವನ್ನು) ಇಲ್ಲಿ ಉಪಯೋಗಿಸಲಾಗಿದೆ.

## ಚಿತ್ತಮಾಜ್ಯಮಾಸೀ೩ತ್

ದ್ವಿತೀಯಂ ಪದಂ ದರ್ಶಯತಿ—ಪೂರ್ವೋಕ್ತಾಯಾಶ್ಚಿತ್ತಿರೂಪಾಯಾ ವೃತ್ತೇರಾಧಾರಭೂತಂ ಯದಂತಃಕರಣಂ ತಚ್ಚಿತ್ತಂ । ತದೇವಾತ್ರಾಽಽಜ್ಯಸ್ಥಾನೀಯಮಾಸೀತ್ ॥

ಎರಡನೇ ಪಾದವನ್ನು ತಿಳಿಸುವರು. ಮೇಲೆ ಹೇಳಿದ ಚಿತ್ತಿ (ಮನಸ್ಸಿನ ಪರಿಸ್ಥಿತಿ)ಗೆ ಚಿತ್ತವು (ಮನಸ್ಸು) ಆಧಾರಭೂತವು. ಇದೇ (ಚಿತ್ತವೇ) ಇಲ್ಲಿ ಆಜ್ಯವು (ಆಜ್ಯಸ್ಥಾನೀಯವು).

## ವಾಗ್ವೇದಿರಾಸೀ೩ತ್ ॥

ತೃತೀಯಂ ಪದಂ ದರ್ಶಯತಿ—ಯದ್ವಾಗಿಂದ್ರಿಯಂ ತದ್ವೇದಿಸ್ಥಾನೀಯಮಾಸೀತ್ ॥

ಮೂರನೇ ಪಾದವನ್ನು ತಿಳಿಸುವರು. ವಾಗಿಂದ್ರಿಯವೇ ಇಲ್ಲಿ ಯಜ್ಞವೇದಿಯಾಗಿದ್ದಿತು.

## ಆಧೀತಂ ಬರ್ಹಿರಾಸೀ೩ತ್ ॥

ಚತುರ್ಥಂ ಪದಂ ದರ್ಶಯತಿ—ಆ ಸಮಂತಾದ್ಧೀತಂ ಮನಸಾಧ್ಯಾತಂ ಯದ್ವಸ್ತು ತದೇವ ಬರ್ಹಿಸ್ಥಾನೀಯಮಾಸೀದಿತಿ ॥

ನಾಲ್ಕನೇ ಪಾದವನ್ನು ತಿಳಿಸುವರು. ಋತ್ವಿಜರು ಮನಸ್ಸಿನಲ್ಲಿ ಏನನ್ನು ಧ್ಯಾನಮಾಡುವರೋ ಅದೇ ಇಲ್ಲಿ ಬರ್ಹಿ (ದರ್ಭೆ)ಸ್ಥಾನೀಯವು.

## ಕೇತೋ ಅಗ್ನಿರಾಸೀ೩ತ್ ॥

**ಪಂಚಮಂ ಪದಂ ದರ್ಶಯತಿ—ಕಿತ ಜ್ಞಾನ ಇತಿ ಧಾತುಃ। ಚಿತ್ತಿಃ ಸಮ್ಯಗ್ಜ್ಞಾನಂ। ಕೇತುರ್ಜ್ಞಾನಮಾತ್ರಮಿತಿವಿಶೇಷಃ। ಸ ಚ ಕೇತೋಽಗ್ನಿಸ್ಥಾನೀಯಮಾಸೀದಿತಿ ॥**

ಐದನೆಯ ಪಾದವನ್ನು ತಿಳಿಸುವರು. ಕಿತ ಎಂಬ ಧಾತುವಿಗೆ ಜ್ಞಾನವೆಂದರ್ಥವು. ಚಿತಿಃ ಎಂದರೆ ಸಮ್ಯಗ್ಜ್ಞಾನವು ಕೇತುಃ ಎಂದರೆ ಸಾಮಾನ್ಯಜ್ಞಾನವು. ಇದೇ ಇಲ್ಲಿ ಅಗ್ನಿಸ್ಥಾನೀಯವು.

## ವಿಜ್ಞಾತಮಗ್ನೀದಾಸೀಕ್ಷೀತ್ ॥

**ಷಷ್ಠಪದಂ ದರ್ಶಯತಿ—ಮನಸಾ ವಿಜ್ಞಾನಂ ವಿಶೇಷೇಣ ನಿಶ್ಚಿತಂ ಋದ್ವಸ್ತು ತದಗ್ನೀತ್। ಆಗ್ನೀಧ್ರನಾಮಕ ಋತ್ವಿಗಾಸೀತ್ ॥**

ವಿಜ್ಞಾನವೆಂದರೆ ಮನಸ್ಸಿನಲ್ಲಿ ವಿಶೇಷವಾಗಿ ನಿಶ್ಚಯಿಸಿ ನಿರ್ಧರಿಸುವುದು. ಇಂತಹ ವಿಜ್ಞಾನವೇ ಇಲ್ಲಿ ಆಗ್ನಿಧ್ರನೆಂಬ ಋತ್ವಿಜನು.

## ಪ್ರಾಣೋ ಹವಿರಾಸೀಕ್ಷಿತ್ ॥

**ಸಪ್ತಮಂ ಪದಂ ದರ್ಶಯತಿ—ಯೋಽಯಂ ಪ್ರಾಣವಾಯುಃ ಸ ಹವಿಸ್ಥಾನೀಯ ಆಸೀತ್ ॥**

ಏಳನೆಯ ಪಾದವನ್ನು ತಿಳಿಸುವರು. ಈ ಮಾನಸಯಜ್ಞದಲ್ಲಿ ಪ್ರಾಣವಾಯುವೇ ಹವಿಃಸ್ಥಾನೀಯವು.

## ಸಾಮಾಧ್ವರ್ಯುರಾಸೀಕ್ಷಿತ್ ॥

**ಅಷ್ಟಮಂ ಪದಂ ದರ್ಶಯತಿ—ಯದ್ಗೀಯಮಾನಂ ಸಾಮ ತದಧ್ವರ್ಯುಸ್ಥಾನೀಯಮಾಸೀದಿತಿ ॥**

ಎಂಟನೆಯ ಪಾದವನ್ನು ತಿಳಿಸುವರು. ಇಲ್ಲಿ ಗಾನಮಾಡಲ್ಪಡುವ ಸಾಮಮಂತ್ರವೇ ಅಧ್ವರ್ಯುವು.

## ವಾಚಸ್ಪತಿರ್ಹೋತಾಸೀತ್ ॥

**ನವಮಂ ಪದಂ ದರ್ಶಯತಿ—ಯೋಽಯಂ ವಾಚಸ್ಪತಿ ಬೃಹಸ್ಪತಿಃ ಸೋಽಯಂ ಹೋತೃಸ್ಥಾನೀಯ ಏವಾಽಸೀತ್ ॥**

ಒಂಭತ್ತನೇ ಪಾದವನ್ನು ತಿಳಿಸುವರು. ಈ ಮಾನಸಯಜ್ಞದಲ್ಲಿ ವಾಚಸ್ಪತಿ ಅಥವಾ ಬೃಹಸ್ಪತಿಯು ಹೋತೃವೆಂಬ ಋತ್ವಿಜನು.

## ಮನ ಉಪವಕ್ತಾಽಽಸೀತ್ ॥

**ದಶಮಂ ಪದಂ ದರ್ಶಯತಿ—ಯದ್ಯಪ್ಯೇಕಮೇವಾಂತಃ ಕರಣಂ ಚಿತ್ತಶಬ್ದೇನ ಮನಃ ಶಬ್ದೇನ ಚಾಭಿಧೀಯತೇ ತಥಾಪ್ಯವಸ್ಥಾವಿಶೇಷೋ ದ್ರಷ್ಟವ್ಯಃ। ಚಿತ್ತಿಕೇತ್ವಾದಿವೃತ್ತಿಜನಕತ್ವಾ-**

ಕಾರೇಣ ಚಿತ್ತಂ । ವೃತ್ತಿರಹಿತಸ್ವರೂಪಾವಸ್ಥಾನಕಾರೇಣ ಮನಃ । ತಚ್ಚಾತ್ರೋಪವಕ್ತಾ ಹೋತುಃ ಸಮೀಪಸ್ಥೋ ವಕ್ತಾ ಮೈತ್ರಾವರುಣ ಆಸೀತ್ । ಏತೇಷಾಂ ದಶಾನಾಂ ಪದಾನಾಮೇಕೈಕಸ್ಮಿನ್ಪದೇಽವಸಿತೇ ಸತ್ಯಧ್ವರ್ಯುರ್ಓಂ ಹೋತಸ್ತಥಾ ಹೋತರಿತಿ ಪ್ರತಿಗರಂ ಬ್ರೂಯಾತ್ । ಸೋಽಯಂ ದಶಪದಾತ್ಮಕಶ್ಚತುರ್ಹೋತೃಸಂಜ್ಞಕೋ ಮಂತ್ರಸಂಘಾತಃ ॥

ಹತ್ತನೇ ಪಾದವನ್ನು ತಿಳಿಸುವರು. ಅಂತಃಕರಣದ ಅವಸ್ಥಾವಿಶೇಷಗಳು ಮನಸ್ಸು, ಚಿತ್ತ ಮೊದಲಾದ ಶಬ್ದಗಳಿಂದ ತಿಳಿಯಲ್ಪಡುತ್ತವೆ. ಚಿತ್ತಿ ಎಂದರೆ ಮನಸ್ಸಿನ ಮೊದಲನೇ ಅವಸ್ಥಾವಿಶೇಷವು; ಯಾವ ವೃತ್ತಿಯೂ (ವಿಕಾರವೂ) ಇಲ್ಲದ ಅವಸ್ಥಾವಿಶೇಷಕ್ಕೆ ಮನಸ್ಸೆಂದು ಹೆಸರು. ಇಲ್ಲಿ ಉಪವಕ್ತಾ ಎಂದರೆ ಹೋತೃವಿನ ಸಮೀಪದಲ್ಲಿರುವ ಮೈತ್ರಾವರುಣನೆಂಬ ಋತ್ವಿಜನು. ಈ ಮೈತ್ರಾವರಣನೆಂಬ ಋತ್ವಿಜನೇ ಇಲ್ಲಿ ಮನಃಸ್ಥಾನೀಯನೆಂಬ ಋತ್ವಿಜನು ಈ ಹತ್ತುಪಾದ (ಪದ)ಗಳನ್ನು ಹೋತೃವು ಒಂದೊಂದಾಗಿ ಪಠಿಸಿದಕೂಡಲೇ ಅಧ್ವರ್ಯು ಅದಕ್ಕೆ ಪ್ರತ್ಯುತ್ತರವಾಗಿ (ಸಮ್ಮತಿಸೂಚಕವಾಗಿ) ಓಂ ತಥಾ ಎಂಬ ಪ್ರತಿಗರವನ್ನು ಹೇಳಬೇಕು. ಈ ಹತ್ತುಪಾದಗಳಿಂದ ಸಹಿತವಾದ ಮಂತ್ರವೇ ಚತುರ್ಹೋತೃವೆಂಬ ಮಂತ್ರವು.

ತೇ ವಾ ಏತಂ ಗ್ರಹಮಗೃಹ್ಣತ । ವಾಚಸ್ಪತೇ ವಿಧೇ ನಾಮನ್ । ವಿಧೇಮ ತೇ ನಾಮ । ವಿಧೇಸ್ತ್ವಮಸ್ಮಾಕಂ ನಾಮ್ನಾ ದ್ಯಾಂ ಗಚ್ಛ । ಯಾಂ ದೇವಾಃ ಪ್ರಜಾಪತಿಗೃಹಪತಯ ಋದ್ಧಿಮರಾಧ್ನುವಂಸ್ತಾಮೃದ್ಧಿಂ ರಾತ್ಸ್ಯಾಮಃ ॥

ಅವಗ್ರಹಸಂಜ್ಞಕಂ ಮಂತ್ರಂ ದರ್ಶಯತಿ — ತೇಷಾಮಿತಿ ಪದೇನೋಕ್ತಾಃ ಪ್ರಜಾಪತಿಗೃಹಪತಿಯುಕ್ತಾ ದೇವರೂಪಾ ಯೇ ಯಜಮಾನಾಃ ಸಂತಿ ತ ಏವೈತಂ ಮಾನಸಂ ಗ್ರಹಮಗೃಹ್ಣತ । ಗ್ರಹಣಕಾಲೇ ವಾಚಸ್ಪತಿಂ ಸಂಬೋಧ್ಯ ಬ್ರುವತೇ । ಹೇ ವಾಚಸ್ಪತೇ ಬೃಹಸ್ಪತೇ ಹೇ ವಿಧೇ ಜಗತೋ ವಿಧಾತರ್ಹೇ ನಾಮನ್ । ಸರ್ವಸ್ಯ ನಮಯಿತಃ ಸರ್ವವಶೀಕಾರಯುಕ್ತೇತ್ಯರ್ಥಃ । ತಾದೃಶಸ್ಯ ತೇ ನಾಮ ವಿಧೇಮ ಖ್ಯಾತಿಂ ಕರವಾಮ । ಯದ್ವಾ ನಾಮಾನ್ನಂ ಹವಿರ್ಲಕ್ಷಣಂ ವಿಧೇಮ ಸಂಪಾದಯಾಮಃ । ತ್ವಮಪ್ಯಸ್ಮಾಕಂ ಪ್ರಜಾಪತಿಯುಕ್ತಾನಾಂ ದೇವಾನಾಂ ವಿಧಿಃ ಕೀರ್ತಿಮನ್ನಂ ಚ ಸಂಪಾದಯ । ತೇನಾಸ್ಮದ್ದತ್ತೇನ ನಾಮ್ನಾ ಹವಿರ್ಲಕ್ಷಣೇನಾನ್ನೇನ ಕೀರ್ತ್ಯಾ ವಾ ಯುಕ್ತೋ ದ್ಯಾಂ ಸ್ವರ್ಗಂ ಗಚ್ಛ । ಪ್ರಜಾಪತಿರ್ಗೃಹಪತಿರ್ಯೇಷಾಂ ದೇವಾನಾಂ ತೇ ಪ್ರಜಾಪತಿಗೃಹಪತಯಸ್ತಾದೃಶಾ ದೇವಾ ಯಾಮೃದ್ಧಿಮೈಶ್ವರ್ಯಮರಾಧ್ನುವಂಸ್ತಾಮೃದ್ಧಿಂ ತಾದೃಶಮೈಶ್ವರ್ಯಂ ವಯಮಪಿ ಯಜಮಾನಾ ರಾತ್ಸ್ಯಾಮ ಇತ್ಯೇಷ ಗ್ರಹಮಂತ್ರಸ್ತಮಪಿ ಹೋತಾ ಪಠೇತ್ ॥

ಈಗ ಅವಗ್ರಹಸಂಜ್ಞಕವಾದ ಮಂತ್ರವನ್ನು ತಿಳಿಸುವರು. ಮೇಲೆ ಹೇಳಿರುವುದೇ ಅವಗ್ರಹಸಂಜ್ಞಕಮಂತ್ರವು. ಪ್ರಜಾಪತಿಗೃಹಪತಿಯುಕ್ತರಾದ ದೇವತೆಗಳು ಮಾನಸರೂಪವಾದ ಗ್ರಹವನ್ನು ಸ್ವೀಕರಿಸಿದರು. ಸ್ವೀಕಾರಮಾಡುವಾಗ ವಾಚಸ್ಪತಿ (ಬೃಹಸ್ಪತಿ) ಯನ್ನು ಸಂಬೋಧಿಸಿ ಈರೀತಿ ಹೇಳಿದರು. ಎಲೈವಾಚಸ್ಪತಿಯೇ (ಬೃಹಸ್ಪತಿಯೇ), ಎಲೈ ವಿಧಾತನೇ (ಸೃಷ್ಟಿಕರ್ತನೇ) ಸರ್ವರಿಂದಲೂ ನಮಸ್ಕರಿಸಲ್ಪಡುವವನೇ ನಿನ್ನ ಹೆಸರನ್ನು ನಾವು ಪ್ರಸಿದ್ಧಿಪಡಿಸುತ್ತೇವೆ, ಕೀರ್ತಿವಂತನನ್ನಾಗಿ

ಮಾಡುತ್ತೇವೆ. ಅಥವಾ ನಾಮ ಎಂಬಪದಕ್ಕೆ ಇಲ್ಲಿ ಅನ್ನವೆಂದೂ ಅರ್ಥವಾಗುವುದು. ನಿನ್ನ ಅನುಗ್ರಹದಿಂದ ನಾವು ಹವಿರ್ಲಕ್ಷಣ ಯುಕ್ತವಾದ ಅನ್ನವನ್ನು ಸಂಪಾದಿಸುವೆವು. ಆದ್ದರಿಂದ ಎಲೈ ವಾಚಸ್ಪತಿಯೇ, ನೀನು ಪ್ರಜಾಪತಿಯುಕ್ತರೂ ದೇವತೆಗಳೂ ಆದ ನಮಗೆ ಕೀರ್ತಿಯನ್ನೂ, ಅನ್ನವನ್ನೂ ಸಂಪಾದಿಸಿಕೊಡು. ಈರೀತಿ ನಮಗೆ ಈರೀತಿ ನಮಗೆ ಗಳಿಸಿಕೊಟ್ಟ ಕೀರ್ತಿ ಮತ್ತು ಅನ್ನದಿಂದ ಯುಕ್ತನಾಗಿ ಸ್ವರ್ಗಕ್ಕೆ ಹೋಗು. ಪ್ರಜಾಪತಿಗೃಹಪತಿಯುಕ್ತರಾದ ದೇವತೆಗಳು ಯಾವವಿಧವಾದ ಸಂಪದಾದ್ಯೈಶ್ವರ್ಯಗಳನ್ನು ಪಡೆದರೋ ನಾವೂ ಸಹ ಅದೇವಿಧವಾದ ಸಂಪದಾದ್ಯೈಶ್ವರ್ಯವನ್ನು ಪಡೆಯುವಂತಾಗಲಿ. ಇದೇ ಮೇಲಿನ ಮಂತ್ರದ ಅರ್ಥವು.

ಮೇಲೆ ಚತುರ್ಗೃಹೀತ ಮಂತ್ರವನ್ನು ವಿವರಿಸಲಾಗಿದೆಯಷ್ಟೆ. ಈ ಮಂತ್ರವು ಶಾಖಾಂತರದಲ್ಲಿ ಎಂದರೆ ತೈತ್ತಿರೀಯ ಆರಣ್ಯಕದ ಮೂರನೇ ಅಧ್ಯಾಯದ ಪ್ರಥಮಾನುವಾಕದಲ್ಲಿ ವಿವರಿಸಲಾಗಿದೆ. ಅದನ್ನೇ ಇಲ್ಲಿ ಕೊಡಲಾಗಿದೆ—

ಓಂ ಚಿತ್ತಿಃಸ್ರುಕ್ । ಚಿತ್ತಮಾಜ್ಯಂ । ವಾಗ್ವೇದಿಃ । ಆಧೀತಂ ಬರ್ಹಿಃ ।
ಕೇತೋ ಅಗ್ನಿಃ । ವಿಜ್ಞಾತಮಗ್ನಿಃ । ವಾಚಸ್ಪತಿರ್ಹೋತಾ । ಮನ ಉಪವಕ್ತಾ ।
ಪ್ರಾಣೋ ಹವಿಃ । ಸಾಮಾಧ್ವರ್ಯುಃ ॥

ಆದೌ ಸಿಸೃಕ್ಷುಃ ಪ್ರಜಾಪತಿಃ ಸೃಷ್ಟ್ಯರ್ಥಂ ಕೇನಚಿದ್ಯಾಗೇನಾಽಽಧ್ಯಾತ್ಮಿಕೇನೇಷ್ಟ-ವಾನ್ । ತದ್ಯಾಗವರ್ತಿನಃ ಸ್ರುಗಾದಯ ಏತೇಷು ಮಂತ್ರೇಷು ಪ್ರತಿಪಾದ್ಯಂತೇ । ಅತ್ರ ಚಿತ್ತಿಚಿತ್ತಶಬ್ದಾಭ್ಯಾಂ ನಿರ್ವಿಕಲ್ಪಕಸವಿಕಲ್ಪಕಭೇದಜನಕಾವಂತಃಕರಣವೃತ್ತಿಭೇದೌ ವಿವಕ್ಷಿತೌ । ವಾಕ್ ಪ್ರಸಿದ್ಧಾ । ಆಧೀತಮುಚ್ಚಾರ್ಯಮಾಣಂ । ಕೇತವಿಜ್ಞಾತಶಬ್ದಾಭ್ಯಾಂ ನಿರ್ವಿಕಲ್ಪಕ-ಸವಿಕಲ್ಪಕಜ್ಞಾನವಿಷಯಾವಭಿಧೀಯೇತೇ । ಮನಃಪ್ರಾಣೌ ಪ್ರಸಿದ್ಧೌ । ಸಾಮಶಬ್ದೇನಾ-ಧ್ಯೇತುರ್ವರ್ಣೋಚ್ಚಾರಣಶಕ್ತಿರುಚ್ಯತೇ । ಏವಂ ಚಿತ್ತ್ಯಾದಯೋ ದಶ ಶರೀರಗತಾಃ ಪದಾರ್ಥ-ವಿಶೇಷಾ ಸ್ರುಗಾದಯೋ ದಶ ಪದಾರ್ಥಾ ಹೋಮನಿಷ್ಪಾದಕಾಃ । ಅಗ್ನಿಶಬ್ದದ್ವಯೇನ ಚಾಹವನೀಯಗಾರ್ಹಪತ್ಯೌ ವಿವಕ್ಷಿತೌ । ಉಪವಕ್ತೃಶಬ್ದೇನಾನುವಚನಕರ್ತುರ್ಹೋತುಃ ಪುರಾ ಪ್ರೈಷವಕ್ತಾ ಮೈತ್ರಾವರುಣೋ ವಿವಕ್ಷಿತಃ । ಯದ್ವಾ ಪ್ರೋಕ್ಷಣಾದಿಷ್ವನುಜ್ಞಾಯಾಂ ಪೃಷ್ಟಾಯಾಂ ಬ್ರಹ್ಮಾ ಸಮೀಪೇ ಸ್ಥಿತ ಓಂ ಪ್ರೋಕ್ಷೇತ್ಯಾದಿನಾ ತದನುಜ್ಞಾಂ ವಕ್ತಿ ತಸ್ಮಾ-ದಯಮುಪವಕ್ತಾ । ಚಿತ್ತ್ಯಾದಯಃ ಶರೀರಗತಪದಾರ್ಥಾಃ ಸ್ರುಗಾದಿರೂಪಾ ಇತಿ ವಾಕ್ಯಾರ್ಥಃ । ಅಸ್ಮಿನ್ಮಂತ್ರೇ ಸ್ರುಗಾದೀನಾಂ ಹೋಮಸಾಧನಾನಾಂ ದಶಾನಾಮಭಿಹಿತ-ತ್ವಾದಯಂ ಮಂತ್ರೋ ದಶಹೋತ್ರೇತ್ಯುಚ್ಯತೇ । ಸೋಽಯಂ ಮಂತ್ರಸ್ಯ ಪೂರ್ವಭಾಗಃ । ತಸ್ಯ ಚಾವಯವಾಃ ಪೃಥಗಿಷ್ಟಕಾ ಮಂತ್ರಾಃ । ತತ್ರ ಚಿತ್ತಿಃ ಸ್ರುಕ್ತಯಾ ದೇವತಯಾಽಙ್ಗಿರಸ್ವ-ದ್ಧ್ರುವಾ ಸೀದೇತ್ಯೇವಮುಪಧಾನಪ್ರಕಾರೋ ದ್ರಷ್ಟವ್ಯಃ ಏವಮೇತಾ ದಶೇಷ್ಟಕಾ ಉಪಧೇಯಾಃ ॥

ಮೇಲಿನ ಮಂತ್ರದ ಅರ್ಥಾನುವಾದವು—ಪೂರ್ವದಲ್ಲಿ ಪ್ರಜಾಪತಿಯು, ಜಗದಾದಿಸಮಸ್ತ ವಿಶ್ವವನ್ನೂ ಸೃಷ್ಟಿಮಾಡಬೇಕೆಂದು ಬಯಸಿ ಆಧ್ಯಾತ್ಮಿಕವಾದ (ಮನಸ್ಸಿನಿಂದ) ಒಂದು ಯಾಗವನ್ನು ಮಾಡಿದನು. ಈ ಯಾಗದಲ್ಲಿ ಕರ್ಮಸಾಧನಭೂತ

ಗಳಾದ ಸ್ರುಕ್ ಮೊದಲಾದ ಉಪಕರಣಗಳೇ ಮೊದಲಾದವನ್ನು ಈ ಮಂತ್ರಗಳಲ್ಲಿ ಹೇಳಲಾಗಿದೆ. ಇಲ್ಲಿ **ಚಿತ್ತಿ ಚಿತ್ತ** ಎಂಬ ಶಬ್ದಗಳು ಮನಸ್ಸಿನ (ಅಂತಃಕರಣಪ್ರವೃತ್ತಿ) ಸ್ಥಿತಿಯನ್ನು ಸೂಚಿಸುವ ನಿರ್ವಿಕಲ್ಪಕ ಮತ್ತು ಸವಿಕಲ್ಪಕ ಭೇದಗಳು. **ವಾಕ್** ಎಂದರೆ ವಾಕ್ಯವು. ಇದು ಎಲ್ಲರಿಗೂ ತಿಳಿದಿರುವ ಶಬ್ದವು. **ಆಧೀತಂ** ಎಂದರೆ ಬಾಯಿಂದ ಉಚ್ಚರಿಸಲ್ಪಡುವ ಎಂದರ್ಥವು. **ಕೇತ** ಮತ್ತು **ವಿಜ್ಞಾತ** ಶಬ್ದಗಳು ನಿರ್ವಿಕಲ್ಪಕ ಸವಿಕಲ್ಪಕಜ್ಞಾನಗಳನ್ನು ತಿಳಿಸುತ್ತವೆ. **ವಾಕ್ಪತಿ** ಎಂದರೆ ಕಂಠದಲ್ಲಿದ್ದು ವಾಕ್ಯವನ್ನು ಪ್ರವರ್ತಿಸುವ ವಾಯುವು. **ಮನಸ್ಸು** ಮತ್ತು **ಪ್ರಾಣ** ಎಂಬ ಶಬ್ದಗಳು ಪ್ರಸಿದ್ಧವು. **ಸಾಮವೆಂದರೆ** ಅಧ್ಯಯನ ಮಾಡುವವನು ಉಚ್ಚರಿಸುವ ಶಕ್ತಿಯು. ಈ ಚಿತ್ತ್ಯಾದಿಪತ್ತು ಸಾಧನಗಳು ಸ್ರುಗಾದಿಗಳು ಶರೀರದಲ್ಲಿ ನೆಲೆಸಿರುವ ಹೋಮಸಾಧನ ದ್ರವ್ಯಗಳು. ಇಲ್ಲಿ ಇರುವ ಎರಡಾವರ್ತಿ ಅಗ್ನಿಶಬ್ದಗಳು ಆಹವನೀಯ ಮತ್ತು ಗಾರ್ಹಪತ್ಯ ಎಂಬ ಎರಡು ಅಗ್ನಿಗಳನ್ನು ಸೂಚಿಸುವವು. **ಉಪವಕ್ತೃವೆಂದರೆ** ಹೋತೃವು ಮಂತ್ರವನ್ನು ಪಠಿಸುವ ಪೂರ್ವದಲ್ಲಿ ಪ್ರೈಷಮಂತ್ರದಿಂದ ನಿರ್ದೇಶಿಸುವ ಮೈತ್ರಾವರಣನೆಂಬ ಋತ್ವಿಜನು. ಅಥವಾ ಪ್ರೋಕ್ಷಣಮಾಡುವಾಗ ಸಮೀಪದಲ್ಲಿದ್ದು ಓಂ ತಥಾ ಎಂದು ಅನುಜ್ಞೆಯನ್ನೀಯುವ ಬ್ರಹ್ಮನಿಗೇ ಉಪವಕ್ತಾ ಎಂದೂ ಹೆಸರು ಚಿತ್ತಿ ಮೊದಲಾದ ಪದಾರ್ಥಗಳು ಶರೀರದಲ್ಲಿ ಅಂತರ್ಗತವಾಗಿರುವವು. ಇವುಗಳು ಸ್ರುಗಾದಿ ಸಾಧನರೂಪವಾಗಿರುವವೆಂದು ಭಾವಿಸಬೇಕು. ಈ ಮಂತ್ರಕ್ಕೆ ಚತುರ್ಹೋತೃವೆಂದು ಹೆಸರಿದ್ದರೂ (ಇಲ್ಲಿ ನಾಲ್ಕುಮಂದಿ ಋತ್ವಿಜರಿರುವರು) ಸ್ರುಗಾದಿ ಯಜ್ಞಸಾಧನಗಳು ಹತ್ತು ಇರುವುದರಿಂದ ಈ ಮಂತ್ರಕೆ ದಶಹೋತಾ ಎಂದೂ ಹೆಸರು. ಇದು ಈ ಮಂತ್ರದ ಪೂರ್ವಭಾಗವು. ಇದರ ಉತ್ತರಭಾಗವು ಮುಂದೆ ಹೇಳಲ್ಪಡುವುದು.

**ವಾಚಸ್ಪತೇ ವಿಧೇ ನಾಮನ್ । ವಿಧೇಮ ತೇ ನಾಮ । ವಿಧೇಸ್ತ್ವಮಸ್ಮಾಕಂ**
**ನಾಮ । ವಾಚಸ್ಪತಿಃ ಸೋಮಂ ಪಿಬತು । ಆಸ್ಮಾಸು ನೃಮ್ಣಂ ಧಾತ್ಸ್ವಾಹಾ ॥**

**ಮಂತ್ರಸ್ಯ ಸೋಽಯಮುತ್ತರೋ ಭಾಗೋ ಗ್ರಹಾಖ್ಯಸ್ತೇನ ಗ್ರಹೇಷ್ಟಕಾಮುಪದಧ್ಯಾತ್ । ತಥಾ ಚ ಬ್ರಾಹ್ಮಣಮಾಮ್ನಾತಂ-- ಯಥಾವಕಾಶಂ ಗ್ರಹಾನಿತಿ ತಂ ಚ ಗ್ರಹಭಾಗಮಾಹ । ಹೇ ವಾಚಸ್ಪತೇ ವಾಚಃ ಪಾಲಕ ಹೇ ವಿಧೇ ಜಗದ್ವಿಧಾತಃ ಹೇ ನಾಮನ್ ಸರ್ವಸ್ಯ ವಶೀಕರ್ತಃ ತೇ ತವ ನಾಮ ವಿಧೇಮ । ಅಸ್ಮದನುಗ್ರಹಕಾರೀ ದೇವೋಽಯಮಿತ್ಯೇವಂ ಪ್ರಸಿದ್ಧಿಂ ಕುರ್ಮಃ ಯದ್ವಾ ನಮನಂ ಪ್ರಹ್ವೀಭಾವಂ ಸಂಪಾದಯಾಮಃ । ತ್ವಮಪ್ಯಸ್ಮಾಕಂ ನಾಮ ವಿಧೇಃ, ದೇವೇಷು ಮಧ್ಯೇ ಯಜಮಾನೋಽಯಂ ಯಥಾಶಾಸ್ತ್ರಂ ಹುತವಾನಿತಿ ಪ್ರಸಿದ್ಧಿಂ ಕುರು । ಅಯಂ ವಾಚಸ್ಪತಿರ್ಮದೀಯೇಷು ಯಾಗೇಷು ಸೋಮಂ ಸೋಮಸದೃಶಮಾಜ್ಯಂ ಪಿಬತು । ಅಸ್ಮಾಸು ಹೋಮಕರ್ತೃಷು ನೃಮ್ಣಮಪೇಕ್ಷಿತಂ ಧನಮಾಧಾತ್ಸಂಪಾದಯತು । ಇಮಂ ವೃತ್ತಾಂತಮುದ್ದಿಶ್ಯ ಜುಹುಧೀತಿ ಸ್ವಕೀಯಾ ವಾಗಾಹ । ಅತ್ರ ವಾಚಸ್ಪತ ಇತ್ಯಾದಿ ನೃಮ್ಣಂ ಧಾದಿತ್ಯಂತೋ ಗ್ರಹಭಾಗಃ । ಏತೇಷಾಂ ಮಂತ್ರಾಣಾಮುಪಧಾನೇ ವಿನಿಯೋಗಃ ಪ್ರಕರಣಸಿದ್ಧಃ ಚಾತುರ್ಹೋತ್ರಬ್ರಾಹ್ಮಣೇ ವಾಚನಿಕಶ್ಚ । ಇತರೇ ತು ವಿನಿಯೋಗಾಸ್ತತ್ರ ವಾಚನಿಕಾಃ । ತೇ ಚ ಬ್ರಾಹ್ಮಣೇ ದ್ವಿತೀಯಕಾಂಡೇ ದ್ವಿತೀಯತೃತೀಯಪ್ರಪಾಠಕಯೋಃ ಪ್ರಪಂಚಿತಾಃ । ತೇಷು ಹೋಮಾಹೋಮವಿಷಯಭೇದೇನ ಕಶ್ಚಿದ್ವಿಷಯ ಆಪಸ್ತಂಬೇನ ದರ್ಶಿತಃ— ಯತ್ರ ಹೋಮಾರ್ಥಾಃ ಸಗ್ರಹಾಃ ಅಸ್ವಾಹಾಕಾರಾಃ ಇತಿ । ಸೋಽಯಂ ನ್ಯಾಯ ಉತ್ತರೇಷ್ವಪಿ ಮಂತ್ರೇಷ್ವನುಸಂಧೇಯಃ । ತದೇವಮಸ್ಮಿನ್ನನುವಾಕೇ ದಶಹೋತೃಮಂತ್ರೋಽಭಿಹಿತಃ ॥**

ಅರ್ಥಾನುವಾದವು—ಇದು (ಮೇಲಿನ ಮಂತ್ರವು) ಚತುರ್ಹೋತೃಮಂತ್ರದ ಉತ್ತರಭಾಗವು. ಇದನ್ನು ಬ್ರಾಹ್ಮಣ ಗ್ರಂಥದಲ್ಲಿ ಹೇಳಲಾಗಿದೆ. **ಹೇ ವಾಚಸ್ಪತೇ**-ಎಲೈ ವಾಕ್ಯಗಳ ಪಾಲಕನೇ, **ಹೇ ವಿಧೇ**-ಜಗದ್ವಿಧಾತನೇ, **ಹೇ ನಾಮನ್**-ಸರ್ವರನ್ನೂ ವಶದಲ್ಲಿ (ಅಧೀನದಲ್ಲಿ)ಟ್ಟುಕೊಂಡಿರುವವನೇ, ತೇ-ನಿನ್ನ, ನಾಮ-ಹೆಸರನ್ನು, **ವಿಧೇಮ**-ಈ ದೇವನು ನಮಗೆ ಅನುಗ್ರಹವನ್ನು ಮಾಡಿರುವನು ಎಂದು ಪ್ರಸಿದ್ಧಿಯನ್ನುಂಟುಮಾಡುವೆವು. ಅಥವಾ **ನಾಮ**-(ನಮನಂ) ನಮಸ್ಕಾರವನ್ನು, **ವಿಧೇಮ-ಮಾಡುವೆವು. (ತ್ವಂ)**-ನೀನು, ಅಸ್ಮಾಕಂ-ನಮಗೆ, ನಾಮ ವಿಧೇಃ-ದೇವತೆಗಳ ಮಧ್ಯದಲ್ಲಿ ಈ ಯಜಮಾನನು ಶಾಸ್ತ್ರೋಕ್ತವಾಗಿ ಹೋಮಮಾಡಿರುವನು ಎಂದು ಪ್ರಸಿದ್ಧಿಯನ್ನುಂಟುಮಾಡು. **(ಅಯಂ) ವಾಚಸ್ಪತಿಃ**-ಈ ಬ್ರಹ್ಮನು ನಾವು ಮಾಡುತ್ತಿರುವ ಈ ಯಾಗದಲ್ಲಿ, **ಸೋಮಂ**-ಸೋಮಸದೃಶವಾದ ಆಜ್ಯವನ್ನು **ಪಿಬತು**-ಪಾನಮಾಡಲಿ । **ಅಸ್ಮಾಸು**-ಹೋಮಕರ್ತೃಗಳಾದ ನಮ್ಮಲ್ಲಿ, **ನೃಮ್ಣಂ**-ನಾವು ಅಪೇಕ್ಷಿಸುವ ಧನವನ್ನು ಹೊಂದಿಸಿ ಕೊಡಲಿ. ಈ ವಿಷಯವನ್ನೆ ಉದ್ದೇಶಿಸಿ ಹೋಮಮಾಡು ಎಂದು ದೇವನನ್ನು ಪ್ರಾರ್ಥಿಸಲಾಗಿದೆ. ಇಲ್ಲಿ ವಾಚಸ್ಪತ ಎಂದು ಪ್ರಾರಂಭಮಾಡಿ ನೃಮ್ಣಂಧಾತ್ ಎನ್ನುವವರೆಗೆ ಗ್ರಹಭಾಗವು. ಈ ಮಂತ್ರಗಳ ಮತ್ತು ಇತರ ಮಂತ್ರಗಳ ವಿನಿಯೋಗವು ಚಾತುರ್ಹೋತ್ರಬ್ರಾಹ್ಮಣಗ್ರಂಥದಲ್ಲಿ ಅಲ್ಲಲ್ಲಿ ವಿವರಿಸ ಲಾಗಿದೆ. ಎಂದರೆ ತೈತ್ತಿರೀಯಬ್ರಾಹ್ಮಣದ ಎರಡನೇಕಾಂಡದ ಎರಡನೇ ಮತ್ತು ಮೂರನೇ ಪ್ರಪಾಠಕ (ಅಧ್ಯಾಯ) ಗಳಲ್ಲಿ ವಿವರಿಸಲಾಗಿದೆ. ಈ ಮಂತ್ರಗಳಲ್ಲಿ ಯಾವುದನ್ನು ಹೋಮಮಾಡಬೇಕು ಯಾವುದನ್ನು ಮಾಡಬಾರದು ಎಂಬ ವಿವರವನ್ನು ಆಪಸ್ತಂಬಮಹರ್ಷಿಗಳು—**ಯತ್ರ ಹೋಮಾರ್ಥಾಃ ಸಗ್ರಹಾಃ ಸಸ್ವಾಹಾಕಾರಾಃ ಯತ್ರಾಹೋಮಾರ್ಥಾ ಅಗ್ರಹಾ ಅಸ್ವಾಹಾಕಾರಾಃ** ಎಂದರೆ ಯಾವಮಂತ್ರಗಳನ್ನು ಹೋಮಮಾಡಬೇಕು ಎಂದು ತಿಳಿಸುವುದಕ್ಕಾಗಿ ಆ ಮಂತ್ರ ಗಳನ್ನು ಸ್ವಾಹಾಕಾರಸಹಿತವಾಗಿಯೂ ಹೋಮಮಾಡಬಾರದ ಮಂತ್ರಗಳನ್ನು ಸ್ವಾಹಾಕಾರರಹಿತವಾಗಿಯೂ ಹೇಳಿದಾರೆ. ಈ ಕ್ರಮವನ್ನು ಮುಂದೆ ವಿವರಿಸುವ ಮಂತ್ರಗಳಲ್ಲಿಯೂ ಅನುಸರಿಸಲಾಗಿದೆ.

## ಅಥ ಪ್ರಜಾಪತೇಸ್ತನೂರನುದ್ರವತಿ ಬ್ರಹ್ಮೋದ್ಯಂ ಚ ॥

ಮಂತ್ರಾಂತರಾಣಿ ವಿಧತ್ತೇ—ಚತುರ್ಹೋತೃಗೃಹಮಂತ್ರಪಾಠಾನಂತರಂ ಹೋತಾ ಪ್ರಜಾಪತಿತನೂಸಂಜ್ಞಕಾನ್ಮಂತ್ರಾನ್ ಬ್ರಹ್ಮೋದ್ಯಸಂಜ್ಞಕಂ ಮಂತ್ರಮನುದ್ರವತಿ । ಅನು-ಕ್ರಮೇಣ ಬ್ರೂಯಾತ್ । ದ್ವಾದಶಸಂಖ್ಯಾಕಾಃ ಪ್ರಜಾಪತಿತನೂಸಂಜ್ಞಕಾ ಅನ್ನದಾ ಚೇತಿ ಚಶಬ್ದಾಂತಾನಿ ದ್ವಾದಶಪದಾನಿ ಪ್ರಜಾಪತೇಸ್ತನ್ವಃ । ತತ್ರ ದ್ವೇ ದ್ವೇ ಪದೇ ಉಪಾದಾಯ ಕ್ರಮೇಣ ಪ್ರಶಸ್ಯೇತೇ ॥

ಮುಂದಿನ ಬೇರೆ ಮಂತ್ರಗಳನ್ನು ತಿಳಿಸುವರು. ಹೋತೃವು ಚತುರ್ಹೋತೃ ಗ್ರಹಮಂತ್ರವನ್ನು ಪಠಿಸಿದನಂತರ ಪ್ರಜಾಪತಿತನೂ ಸಂಜ್ಞಕಮಂತ್ರಗಳನ್ನೂ ಬ್ರಹ್ಮೋದ್ಯಸಂಜ್ಞಕಮಂತ್ರವನ್ನೂ ಪಠಿಸುವನು. ಈ ಮಂತ್ರಗಳನ್ನು ಒಂದಾದ ಮೇಲೊಂದನ್ನು ಕ್ರಮವಾಗಿ ಪಠಿಸಬೇಕು. ಪ್ರಜಾಪತಿತನೂ ಸಂಜ್ಞಕಮಂತ್ರಗಳು ಹನ್ನೆರಡು ಇರುವವು. ಇವು **ಅನ್ನಾದಾ ಚ** ಎಂದು ಚಶಬ್ದಾಂತವಾಗಿರುವವು. ಈ ಹನ್ನೆರಡು ಪದಗಳೂ ಪ್ರಜಾಪತಿಗೆ ತನು (ಶರೀರ) ರೂಪವಾಗಿರುವವು. ಈ ಹನ್ನೆರಡು ಪದಗಳಲ್ಲಿ ಒಂದೊಂದುಸಲ ಎರಡೆರಡು ಪದಗಳನ್ನು ತೆಗೆದುಕೊಂಡು ಪ್ರಶಂಸೆ ಮಾಡಲಾಗುವುದು.

## ಅನ್ನಾದಾ ಚಾನ್ನಪತ್ನೀ ಚಾನ್ನಾದಾ ತದಗ್ನಿರನ್ನಪತ್ನೀ ತದಾದಿತ್ಯಃ ॥

ತತ್ರ ಪ್ರಥಮಂ ಪದಯುಗ್ಮಮಾಹ—ಅನ್ನಾದಾದಯಃ ಪ್ರಜಾಪತೇರ್ಮೂರ್ತಿವಿಶೇಷಸ್ಯ ವಾಚಕಾಃ ಶಬ್ದಾಃ । ಅನ್ನಾದೇತಿ ಯದಸ್ತಿ ತದಯಮಗ್ನಿರನ್ನಪತ್ನೀತಿ ಯದಸ್ತಿ ತದಸಾವಾದಿತ್ಯ ಏತದುಭಯಂ ಪ್ರಜಾಪತಿತನುರೂಪಂ ॥

ಈಗ ಮೊದಲು ಎರಡು ಪದಗಳನ್ನು ಹೇಳುವರು. ಅನ್ನಾದಾ ಮತ್ತು ಅನ್ನಪತ್ನೀ ಎಂಬಿವು ಮೊದಲ ಎರಡು ಪದಗಳು. ಅನ್ನಾದಾ ಎಂದರೆ ಅಗ್ನಿಯು, ಅನ್ನಪತ್ನೀ ಎಂದರೆ ಈ ಆದಿತ್ಯನು. ಇವೆರಡೂ ಪ್ರಜಾಪತಿಯ ತನೂ (ಶರೀರ) ರೂಪಗಳು.

ಭದ್ರಾ ಚ ಕಲ್ಯಾಣೀ ಚ ಭದ್ರಾ ತತ್ಸೋಮಃ ಕಲ್ಯಾಣೀ ತತ್ಪಶವಃ ॥

ದ್ವಿತೀಯಂ ಯುಗ್ಮಮಾಹ—ಪೂರ್ವವದ್ವ್ಯಾಖ್ಯೇಯಂ ॥

ಈಗ ಎರಡನೇ ಯುಗ್ಮವನ್ನು (ಎರಡು ಪದಗಳನ್ನು) ಹೇಳುವರು. ಭದ್ರಾ-ಮತ್ತು ಕಲ್ಯಾಣೀ ಎಂಬಿವು ಎರಡನೇ ಯುಗ್ಮವು (ಮೂರು ಮತ್ತು ನಾಲ್ಕನೇ ಪದಗಳು) ಭದ್ರಾ ಎಂದರೆ ಸೋಮವು. ಕಲ್ಯಾಣೀ ಎಂದರೆ ಪಶುಗಳು.

ಅನಿಲಯಾ ಚಾಪಭಯಾ ಚಾನಿಲ್ಯಾ ತದ್ವಾಯುರ್ನ ಹ್ಯೇಷ ಕದಾ ಚ
ನೇಲಯತ್ಯಪಭಯಾ ತನ್ಮೃತ್ಯುಃ ಸರ್ವಂ ಹ್ಯೇತಸ್ಮಾದ್ಬಿಭಾಯ ॥

ತೃತೀಯಂ ಯುಗ್ಮಮಾಹ—ಏಷ ವಾಯುಃ ಕದಾಚಿದಪಿ ನೇಲಯತಿ ನಹಿ । ಇಲಯತಿರ್ಗತಿಕರ್ಮಾ । ನೇಲಯತಿ ನ ಗಚ್ಛತೀತಿ ನಹಿ ಕಿಂತು ಸದಾ ಗಚ್ಛತ್ಯೇವ । ಅಮುಮರ್ಥಂ ನಿಲಯೇತಿ ಶಬ್ದೋ ಬ್ರೂತೇ । ನಿಲಯೋ ನಿವಾಸಃ ಸ ನಾಸ್ತಿ ಯಸ್ಯಾ ವಾಯುಮೂರ್ತೇಃ ಸೇಯಮನಿಲಯಾ । ಅಪಗತಂ ಭಯಂ ಯಸ್ಯಾ ಮೃತ್ಯುಮೂರ್ತೇಃ ಸೇಯಮಪಭಯಾ । ಸರ್ವಮಪಿ ಜಗದೇತಸ್ಮಾನ್ಮೃತ್ಯೋರ್ಬಿಭಾಯ ಭೀತಿಂ ಪ್ರಾಪ್ನೋತಿ । ತಾದೃಶೋ ಮೃತ್ಯುಃ ಕಸ್ಮಾದಸ್ಮಾದನ್ಯಸ್ಮಾದ್ಭೀತಿಂ ಪ್ರಾಪ್ನುಯಾತ್ । ಅನೇನ ನ್ಯಾಯೇನ ಪೂರ್ವೋಕ್ತಾನಾಮಪಿ ಮೂರ್ತೀನಾಂ ನಿರುಕ್ತಯೋ ದ್ರಷ್ಟವ್ಯಾಃ । ಅನ್ನಪತ್ನೀತ್ಯತ್ರಾನ್ನಾದಾಽಗ್ನಿಮೂರ್ತಿಃ । ಅನ್ನಸ್ಯ ಪತ್ನೀ ಪಾಲಯಿತ್ರೀ ಸೂರ್ಯಮೂರ್ತಿಃ । ಆದಿತ್ಯಾಜ್ಜಾಯತೇ ವೃಷ್ಟಿರಿತಿ ನ್ಯಾಯೇನ ಪಾಲಯಿತೃತ್ವಂ । ಸೋಮಮೂರ್ತೇಃ ಶೈತ್ಯಹೇತುತ್ವಾದ್ವೃಷ್ಟಿಪ್ರಿಯತ್ವಾಚ್ಚ ಭದ್ರತ್ವಂ । ಪಶುಮೂರ್ತೇಃ ಕ್ಷೀರಾದಿಪ್ರದಾನೇನ ಕಲ್ಯಾಣತ್ವಮಿತಿ ತಾಸಾಂ ನಿರುಕ್ತಯಃ ॥

ಮೂರನೇ ಯುಗ್ಮವನ್ನು ತಿಳಿಸುವರು. ನಿಲಯ ಎಂದರೆ ಒಂದು ನಿರ್ದಿಷ್ಟವಾದ ಸ್ಥಾನವು. ಅನಿಲಯ ಎಂದರೆ ಅಂತಹ ನಿರ್ದಿಷ್ಟಸ್ಥಾನವಿಲ್ಲದಿರುವುದು ವಾಯುವು ಯಾವಾಗಲೂ ಒಂದು ನಿರ್ದಿಷ್ಟಸ್ಥಾನದಲ್ಲಿ ನೆಲಸಿರುವುದಿಲ್ಲ. ಸದಾಕಾಲವೂ ಚಲಿಸುತ್ತಲೇ ಇರುವುದು. ಆದ್ದರಿಂದ ಅನಿಲಯಾ ಎಂದರೆ ವಾಯುಮೂರ್ತಿಯು; ಸಮಸ್ತವೂ ಮೃತ್ಯುವಿಗೆ ಭಯಪಡುವುದು. ಮೃತ್ಯುವಿಗೆ ಯಾವವಿಧವಾದ ಭಯವೂ ಇರುವುದಿಲ್ಲ. ಆದ್ದರಿಂದ ವಾಯು ಮತ್ತು ಮೃತ್ಯುಮೂರ್ತಿಗಳು ಪ್ರಜಾಪತಿಯ ತನೂ ರೂಪಗಳು. ಹಿಂದೆ ಹೇಳಿದ ಅನ್ನಾದಾ ಎಂಬ ಶಬ್ದಕ್ಕೆ ಅನ್ನವನ್ನು ಕೊಡುವ ಸಾಮರ್ಥ್ಯವುಳ್ಳ ಅಗ್ನಿಯೆಂದು ಅರ್ಥವು. ಸೂರ್ಯನಿಗೆ ಅನ್ನಪತ್ನೀ ಎಂದು ಹೆಸರು. ಏಕೆಂದರೆ ಆದಿತ್ಯಾಜ್ಜಾಯತೇ ವೃಷ್ಟಿಃ ಎಂಬ ವಚನಪ್ರಕಾರ ಆದಿತ್ಯನಿಂದ

ವೃಷ್ಟಿಯೂ (ಮಳೆಯೂ) ವೃಷ್ಟಿಯಿಂದ ಸಸ್ಯಾದಿಗಳೂ, ಸಸ್ಯಾದಿಗಳಿಂದ ಅನ್ನವೂ (ಆಹಾರವೂ) ದೊರೆಯುವುದು. ಆದ್ದರಿಂದ ಸೂರ್ಯನನ್ನು ಅನ್ನಪಕ್ಷೀ ಎಂದು ಕರೆಯುವುದು ನ್ಯಾಯವು. ಹಾಗೆಯೇ ಸೋಮವು ಶೈತ್ಯವನ್ನೂ ವೃಷ್ಟಿಯನ್ನೂ ಉಂಟು ಮಾಡುವುದರಿಂದ ಇದಕ್ಕೆ ಭದ್ರಾ ಎಂದರು. ಪಶುಗಳೂ ಕ್ಷೀರಾದಿ ಆಹಾರವನ್ನು ಒದಗಿಸಿಕೊಡುವುದರಿಂದ ಇವುಗಳನ್ನು ಕಲ್ಯಾಣೀ ಎಂದು ಕರೆಯುವುದೂ ನ್ಯಾಯವಾಗಿದೆ.

**ಅನಾಪ್ತಾ ಚಾನಾಪ್ಯಾ ಚಾನಾಪ್ತಾ ತತ್ಪೃಥಿವ್ಯನಾಪ್ಯಾ ತದ್ದ್ಯೌಃ ॥**

ಚತುರ್ಥಪದಯುಗ್ಮಮಾಹ—ದೂರಸ್ಥಸ್ಯ ಗ್ರಾಮಾದೇಃ ಸಂಯೋಗೇ ಸತಿ ಪ್ರಾಪ್ತಿರಿ-ತ್ಯುಚ್ಯತೇ । ಪೃಥಿವ್ಯಾಮೇವೋತ್ಪನ್ನಸ್ಯ ಮನುಷ್ಯಾದೇರ್ದೂರವರ್ತಿತ್ವಪೂರ್ವಕಃ ಪೃಥಿವೀಸಂ-ಯೋಗೋ ನಾಸ್ತಿ । ತಸ್ಮಾದಸಂಯೋಗಪೂರ್ವಸ್ಯ ಸಂಯೋಗಸ್ಯ ಪ್ರಾಪ್ತಿಶಬ್ದಾರ್ಥಸ್ಯಾಭಾವಾ-ದನಾಪ್ತಾ ಭೂಮಿಃ । ಉಪರಿ ದೂರದೇಶವರ್ತಿತ್ವೇನ ಪ್ರಾಪ್ತುಮಯೋಗ್ಯತ್ವಾದ್ದ್ಯೌರನಾಪ್ಯಾ॥

ನಾಲ್ಕನೇ ಯುಗ್ಮವನ್ನು ತಿಳಿಸುವರು. ದೂರದಲ್ಲಿರುವ ಗ್ರಾಮಾದಿಗಳನ್ನು ಹೋಗಿ ಸೇರುವುದಕ್ಕೆ ಸಂಯೋಗ ಅಥವಾ ಪ್ರಾಪ್ತಿಯೆಂದು ಹೆಸರು. ಒಂದನ್ನೊಂದು ಸೇರುವ ಮತ್ತು ಸೇರಬೇಕಾದ ವಸ್ತುಗಳೆರಡೂ ಭೂಮಿಯಮೇಲೆ ಇರುವುದರಿಂದ ಇದಕ್ಕೆ ಪ್ರಾಪ್ತಿಯೆಂದು ಹೆಸರು. ಈ ಪ್ರಾಪ್ತಿಯೇ ಭೂಮಿಯು. ಈ ಭೂಮಿಯಮೇಲೆ ಇಲ್ಲದೆ ಬೇರೆಕಡೆ ಇದ್ದು ಅದನ್ನು ಹೋಗಿ ಸೇರಬೇಕೆಂದು ಬಯಸುವ ದೇಶವೇ ಅನಾಪ್ಯಾ ಎಂದಿರುವುದು. ಇದೇ ಸ್ವರ್ಗವು ಏಕೆಂದರೆ, ಸ್ವರ್ಗವು ಭೂಮಿಯ ಮೇಲಿರುವುದಿಲ್ಲ. ಆದರೂ ಜನರು ಅದನ್ನು ಹೋಗಿ ಸೇರಲು ಅಪೇಕ್ಷಿಸುತ್ತಾರೆ. ಆದ್ದರಿಂದ ಭೂಮಿ ಮತ್ತು ಸ್ವರ್ಗಗಳೆಂಬ ಪ್ರದೇಶಗಳು ಪ್ರಜಾಪತಿಯ ಶರೀರವು.

**ಅನಾಧೃಷ್ಯಾ ಚಾಪ್ರತಿಧೃಷ್ಯಾ ಚಾನಾಧೃಷ್ಯಾ ತದಗ್ನಿರಪ್ರತಿಧೃಷ್ಯಾ ತದಾದಿತ್ಯಃ ॥**

ಪಂಚಮಂ ಯುಗ್ಮಮಾಹ - ಆಗತ್ಯ ಸಮೀಪಂ ಪ್ರಾಪ್ಯ ಹಸ್ತಸ್ಪರ್ಶೇನ ಧರ್ಷಿತುಮ-ಭಿಭವಿತುಮಶಕ್ಯೋಽಗ್ನಿಃ । ಆದಿತ್ಯೋ ಯಥಾ ನ ಪ್ರಕಾಶತೇ ತಥಾ ಕಂಚಿತ್ಪ್ರತಿಬಂಧಂ ಕೃತ್ವಾ ಧರ್ಷಿತುಮಭಿಭವಿತುಮಶಕ್ಯ ಆದಿತ್ಯಃ ॥

ಐದನೆಯ ಯುಗ್ಮವನ್ನು ತಿಳಿಸುವರು. ಸಮೀಪದಲ್ಲಿದ್ದರೂ ಅದನ್ನು ಕೈಯಿಂದ ಮುಟ್ಟುವುದಕ್ಕೆ ಸಾಧ್ಯವಿಲ್ಲದವಸ್ತು ವೆಂದರೆ ಅಗ್ನಿಯು ; ಕಣ್ಣಿಗೆ ಕಾಣಿಸುತ್ತಿದ್ದರೂ ಅದನ್ನು ಹಿಡಿದು ನಿಲ್ಲಿಸುವುದಕ್ಕೆ ಸಾಧ್ಯವಿಲ್ಲದಿರುವುದು ಆದಿತ್ಯನು (ಸೂರ್ಯನು) ಆದ್ದರಿಂದ ಅಗ್ನಿ ಮತ್ತು ಆದಿತ್ಯನು ಪ್ರಜಾಪತಿಯ ತನೂ ಎಂದರೆ ಶರೀರಗಳು.

**ಅಪೂರ್ವಾ ಚಾಭ್ರಾತೃವ್ಯಾ ಚಾಪೂರ್ವಾ ತನ್ಮನೋಽಭ್ರಾತೃವ್ಯಾ ತತ್ಸಂ-ವತ್ಸರಃ ॥**

ಷಷ್ಠಂ ಯುಗ್ಮಮಾಹ—ನ ವಿದ್ಯತೇ ಪೂರ್ವಂ ಪ್ರಥಮಪ್ರವೃತ್ತಮಿಂದ್ರಿಯಂ ಯಸ್ಯಾ ಮನೋಮೂರ್ತೇಃ ಸೇಯಮಪೂರ್ವಾ । ಸರ್ವಮಪೀಂದ್ರಿಯಜಾತಂ ಮನಸಾ ಸಂಕಲ್ಪಿತೇ

ವಿಷಯೋ ಪಶ್ಚಾತ್ಪ್ರವರ್ತತೇ । ಅತೋ ನಾನ್ಯಸ್ಯ ಪೂರ್ವಪ್ರವೃತ್ತಿಃ । ಸಂವತ್ಸರಃ ಕಾಲಾತ್ಮಾ ಸರ್ವಂ ಜಗಜ್ಜರಯತಿ । ನ ಚ ತಂ ಕಾಲಂ ಜರಯಿತುಂ ಸಮರ್ಥಃ ಕಶ್ಚಿದನ್ಯೋಽಸ್ತಿ । ತಸ್ಮಾತ್ಸಂವತ್ಸರಮೂರ್ತಿರಭ್ರಾತೃವ್ಯರಹಿತಾ ॥

ಆರನೇ ಯುಗ್ಮವನ್ನು ತಿಳಿಸುವರು. ಯಾವ ವಿಷಯವೇ ಆಗಲಿ ಅದು ಮೊದಲು ಇರುವುದಿಲ್ಲ. ಅದು ಮನಸ್ಸಿನ ಸಂಕಲ್ಪದಿಂದ ಹುಟ್ಟುವುದು. ಹಾಗೆಯೇ ಅದು ಮನಸ್ಸಿನಿಂದಲೇ ನಾಶವಾಗುವುದು. ಮನಸ್ಸಿನಲ್ಲಿಯೇ ಹುಟ್ಟಿ ಅಲ್ಲಿಯೇ ನಾಶವಾಗುವುದರಿಂದ, ಇದಕ್ಕೆ ಅಪೂರ್ವಾ ಎಂದು ಹೆಸರು. ಅಪೂರ್ವಾ ಎಂದರೆ ಪೂರ್ವದಲ್ಲಿ ಇರಲಿಲ್ಲ ಎಂದರ್ಥವು. ಯಾವುದು ಮುಂಚೆ ಇಲ್ಲದೆ ಈಚೆಗೆ ಉತ್ಪನ್ನವಾಯಿತೋ ಅದು ನಾಶವಾಗಲೇಬೇಕು. ಆದ್ದರಿಂದ ಅಪೂರ್ವಾ ಎಂಬ ವಿಷಯವು (ಮನಸ್ಸಂಕಲ್ಪವು) ನಾಶವನ್ನು ಹೊಂದತಕ್ಕದು; ಆದರೆ ಸಂವತ್ಸರವು ಹಾಗಲ್ಲ. ಸಂವತ್ಸರವೆಂದರೆ ಕಾಲವು. ಅದು ಮೊದಲಿನಿಂದಲೂ ಇರುವುದು ಮುಂದೆಯೂ ಇರುವುದು ಕಾಲಕ್ಕೆ ಯಾವಾಗಲೂ ನಾಶವಿಲ್ಲ. ಆದ್ದರಿಂದ ಅಪೂರ್ವಾ ಮತ್ತು ಕಾಲ ಎಂಬಿವು ಪ್ರಜಾಪತಿಯ ಶರೀರಗಳು.

ಏತಾ ವಾವ ದ್ವಾದಶ ಪ್ರಜಾಪತೇಸ್ತನ್ವ ಏಷ ಕೃತ್ಸ್ನಃ ಪ್ರಜಾಪತಿಸ್ತತ್ಕೃತ್ಸ್ನಂ ಪ್ರಜಾಪತಿಮಾಪ್ನೋತಿ ದಶಮಮಹಃ ॥

ದ್ವಾದಶಪದರೂಪಾ ಪ್ರಜಾಪತಿತನೂರುಪಸಂಹರತಿ— ಅನ್ನಾದೇತ್ಯಾರಭ್ಯಾಭ್ರಾತೃವ್ಯೇತ್ಯಂತಾ ದ್ವಾದಶಸಂಖ್ಯಾಕಾ ಮೂರ್ತಯೋ ಯಾಃ ಪ್ರೋಕ್ತಾ ಏತಾ ಏವ ಪ್ರಜಾಪತೇರ್ಜಗನ್ನಿರ್ವಾಹ(ಹಿ) ಕಾಸ್ತನ್ವ ಏಷ ದ್ವಾದಶಭಿಸ್ತನೂಭಿರ್ಯುಕ್ತಃ ಪ್ರಜಾಪತಿಃ ಕೃತ್ಸ್ನಃ ಸಂಪೂರ್ಣಃ । ತಥಾ ಸತ್ಯೇತತ್ಪದಪಾಠೇನ ಕೃತ್ಸ್ನಂ ಪ್ರಜಾಪತಿರೂಪಂ ದಶಮಮಹಃ ಪ್ರಾಪ್ನೋತಿ ॥

ಇದುವರೆಗೂ ಹೇಳಿದ (ಅನಾಪ್ತಾ ಎಂದು ಮೊದಲುಮಾಡಿ ಅಭ್ರಾತೃವ್ಯಾ ಎನ್ನುವವರೆಗೆ) ಹನ್ನೆರಡು ಮೂರ್ತಿಗಳೂ ಪ್ರಜಾಪತಿಯ ರೂಪಗಳು. ಇವು ಜಗತ್ತನ್ನು ನಿರ್ವಹಿಸುವ ಶಕ್ತಿಗಳು ಅಥವಾ ಪ್ರಜಾಪತಿಯ ಶರೀರಗಳು ಇವೆಲ್ಲವೂ ಸೇರಿ ಪ್ರಜಾಪತಿಯ ಪೂರ್ಣ ಶರೀರವಾಗುವುದು. ಆದ್ದರಿಂದ ಇದೆಲ್ಲವನ್ನೂ ತಿಳಿದ ಪುರುಷನು ಯಜ್ಞದ ಹತ್ತನೇ (ಕೊನೆಯ) ದಿನದಲ್ಲಿ ಪ್ರಜಾಪತಿಯ ಸ್ವರೂಪವನ್ನು ತಿಳಿದು ಅದರಲ್ಲಿಯೇ ಐಕ್ಯನಾಗುವನು.

ಅಥ ಬ್ರಹ್ಮೋದ್ಯಂ ವದಂತ್ಯಗಿರ್ಗೃಹಪತಿರಿತಿ ಹೈಕ ಆಹುಃ ಸೋಽಸ್ಯ ಲೋಕಸ್ಯ ಗೃಹಪತಿರ್ವಾಯುರ್ಗೃಹಪತಿರಿತಿ ಹೈಕ ಆಹುಃ ಸೋಽನ್ತರಿಕ್ಷಲೋಕಸ್ಯ ಗೃಹಪತಿರಸೌ ವೈ ಗೃಹಪತಿರ್ಯೋಽಸೌ ತಪತ್ಯೇಷ ಪತಿರೃತವೋ ಗೃಹಾಃ । ಯೇಷಾಂ ವೈ ಗೃಹಪತಿಂ ದೇವಂ ವಿದ್ವಾನ್ಗೃಹಪತಿರ್ಭವತಿ ರಾಧ್ನೋತಿ ಸ ಗೃಹಪತೀ ರಾಧ್ನುವಂತಿ ತೇ ಯಜಮಾನಾಃ । ಯೇಷಾಂ ವಾ ಅಪಹತಪಾಪ್ಮಾನಂ ದೇವಂ ವಿದ್ವಾನ್ಗೃಹಪತಿರ್ಭವತ್ಯಪ ಸ ಗೃಹಪತಿಃ

**ಪಾಪ್ಮಾನಂ ಹತೇಽಪ ತೇ ಯಜಮಾನಾಃ ಪಾಪ್ಮಾನಂ ಘ್ನತೇಽ-ರ್ಧ್ವಯೋರ್ಃ ಅರಾತ್ಸ್ಮರಾತ್ಸ್ಮ ॥**

ಬ್ರಹ್ಮೋದ್ಯಮಂತ್ರವಿಧಿಮನೂದ್ಯ ತನ್ಮಂತ್ರಸ್ವರೂಪಂ ದರ್ಶಯತಿ—ಅಥ ದ್ವಾದಶಪದಾನುದ್ರವಣಾದನಂತರಂ ಬ್ರಹ್ಮೋದ್ಯನಾಮಕಂ ಮಂತ್ರಂ ವದೇಯುಃ । ಬ್ರಾಹ್ಮಣಾನಾಮುದ್ಯಂ ಸಂವಾದೋ ಬ್ರಹ್ಮೋದ್ಯಂ । ಅಗ್ನಿರಿತ್ಯಾದಿಕಸ್ತನ್ಮಂತ್ರಃ । ಏಕೇ ಬ್ರಾಹ್ಮಣಾ ಅಗ್ನಿರ್ಗೃಹಪತಿಃ ಸ್ವಾಮೀತ್ಯಾಹುಃ ಸೋಽಸ್ಯೇತ್ಯಾದಿನಾ ತನ್ಮತಮನ್ಯೈರ್ಬ್ರಾಹ್ಮಣೈರ್ದೂಷ್ಯತೇ । ಸೋಽಗ್ನಿರಸ್ಯ ಲೋಕಸ್ಯ ಭೂಲೋಕಮಾತ್ರಸ್ಯ ಗೃಹಪತಿರ್ನ ತು ಸರ್ವಲೋಕಸ್ಯೇತಿ ದೂಷಣವಾದಿನಾಮುಪರಿತೋಷಃ । ತಚ್ಛ್ರುತ್ವಾ ಪರೇ ಬ್ರಾಹ್ಮಣಾ ವಾಯುರ್ಗೃಹಪತಿರಿತ್ಯಾಹುಸ್ತದಪಿ ಮತಮನ್ಯೈರ್ಬ್ರಾಹ್ಮಣೈರ್ದೂಷ್ಯತೇ । ಸ ವಾಯುರಂತರಿಕ್ಷಲೋಕಮಾತ್ರಸ್ಯ ಗೃಹಪತಿರ್ನತು ಸರ್ವಸ್ಯ । ಯೋಽಸಾವಾದಿತ್ಯಸ್ತಪತಿ ಸೋಽಸಾವೇವ ಗೃಹಪತಿರಿತಿ ಸರ್ವೈರಂಗೀಕಾರ್ಯಂ ಮತಂ । ಕಥಂ ಗೃಹಪತಿತ್ವಮಿತಿ ತದುಚ್ಯತೇ । ಏಷ ಪ್ರಕಾಶಮಾನ ಆದಿತ್ಯಃ ಪತಿಸ್ತೇನ ನಿಷ್ಪಾದ್ಯಾ ವಸಂತಾದ್ಯೃತವೋ ಗೃಹಾಃ । ತಸ್ಮಾದೃತುಲಕ್ಷಣಾನಾಂ ಗೃಹಾಣಾಂ ಪತಿರಿತ್ಯಯಮರ್ಥೋ ನಾಗ್ನಿವಾಯ್ವೋರಸ್ತಿ । ಆದಿತ್ಯೇ ತು ವಿದ್ಯತೇ ತತ್ಸಂಚಾರಾದೃತುನಿಷತ್ತೇಃ । ಕಿಂಚ ಯೋಽಷಾಮೃತತನಾಂ ಗೃಹರೂಪಾಣಾಂ ಸ್ವಾಮಿನಮಾದಿತ್ಯಂ ದೇವಂ ಗೃಹಪತಿತ್ವೇನ ವಿದ್ವಾನ್ಪುರುಷಃ ಸ್ವಯಮಪಿ ಗೃಹಪತಿರ್ಭವತಿ । ಸ ಚ ಗೃಹಪತೀ ರಾಧ್ನೋತಿ ಸರ್ವೈರ್ಭೋಗೈಃ ಸಮೃದ್ಧೋ ಭವತಿ । ತಾದೃಶೇನ ಗೃಹಪತಿನಾ ಯುಕ್ತಾಸ್ತೇ ಯಜಮಾನಾಃ ಸರ್ವೇಽಪಿ ರಾಧ್ನುವಂತಿ ಸಮೃದ್ಧಿಂ ಪ್ರಾಪ್ನುವಂತಿ । ಯೋಽಷಾಮೃತುಗೃಹಾಣಾಂ ಸ್ವಾಮಿತ್ವಾದಾದಿತ್ಯಸ್ಯ ಗೃಹಪತಿತ್ವಂ ಯುಕ್ತಮಿತ್ಯರ್ಥಃ । ಸತ್ರೇ ದೀಕ್ಷಿತಾಃ ಸರ್ವೇಽಪಿ ಯಜಮಾನಾಸ್ತೇಷು ಮುಖ್ಯೋ ಗೃಹಪತಿರಿತಿ ವಿವೇಕಃ । ಕಿಂಚ ಯೋಽಷಾಮೃತೂನಾಂ ಸ್ವಾಮಿನಮಾದಿತ್ಯದೇವಮುಸಹತಪಾಪ್ಮಾನಂ ಸರ್ವಪಾಪರಹಿತಂ ವಿದ್ವಾನ್ಪುರುಷಃ ಸ್ವಯಂ ಗೃಹಪತಿರ್ಭವತಿ । ಸ ಗೃಹಪತಿಃ ಪಾಪ್ಮಾನಮುಪಹತೇ ಯೇ ತ್ವನ್ಯೇ ಯಜಮಾನಾಸ್ತೇಽಪಿ ಪಾಪ್ಮಾನಮುಪಘ್ನತೇ । ತಾದೃಶಾಮೃತೂನಾಂ ಸ್ವಾಮಿನೋ ಗೃಹಪತಿತ್ವಂ ಯುಕ್ತಂ । ಹೇಽಧ್ವರ್ಯೋ ವಯಮರಾತ್ಸ್ಮ ಸಮೃದ್ಧಾ ಅಭೂಮ । ಅಭ್ಯಾಸೋಽಧ್ಯಾಯಪರಿಸಮಾಪ್ತ್ಯರ್ಥಃ ॥

ಬ್ರಹ್ಮೋದ್ಯ ಎಂದರೆ ಬ್ರಹ್ಮ, ಪರಬ್ರಹ್ಮ ಅಥವಾ ಪ್ರಜಾಪತಿಯ ಸ್ವರೂಪ ವಿಷಯವಾದ ಸಂವಾದವು. ಇದನ್ನು ಸಾಧಾರಣವಾಗಿ ಯಜ್ಞದಲ್ಲಿ ಪಾತ್ರವಹಿಸುವ ಋತ್ವಿಜರು, ಮುಖ್ಯವಾಗಿ ಹೋತೃವು ಮತ್ತು ಬ್ರಹ್ಮನೂ ಸೇರಿ ಯಜ್ಞಾಂತ್ಯದಲ್ಲಿ ನಡೆಸುವರು. ಆ ಮಂತ್ರಸ್ವರೂಪವನ್ನು ಇಲ್ಲಿ ತಿಳಿಸುವರು. ಮೇಲೆ ಹೇಳಿದ ಹನ್ನೆರಡು ಪದಗಳಿಂದ ವಿವರಿಸಿರುವ ಪ್ರಜಾಪತಿಯ ಶರೀರವು (ತನೂ) ಪ್ರಜಾಪತಿಯ ಸ್ವರೂಪವನ್ನೇ ತಿಳಿಸುವುದು. ಇದಕ್ಕೆ ಬ್ರಹ್ಮೋದ್ಯವೆಂದು ಹೆಸರು. ಬ್ರಹ್ಮೋದ್ಯವೆಂದರೆ (ಪರ) ಬ್ರಹ್ಮನ ವಿಷಯವಾಗಿ ಬ್ರಾಹ್ಮಣರು ನಡೆಸುವ ಸಂವಾದವು. ಆ ಮಂತ್ರಗಳನ್ನೇ ಇಲ್ಲಿ ವಿವರಿಸುವರು. ಅಗ್ನಿಯನ್ನು ಪ್ರತಿಪಾದಿಸುವ ಮಂತ್ರಗಳೇ ಬ್ರಹ್ಮೋದ್ಯಮಂತ್ರಗಳೆಂದು ಕೆಲವರು ಹೇಳುವರು. ಈ ಅಗ್ನಿಯು ಗೃಹಪತಿಯೆಂದು ಅವರ ಮಂತ್ರವು. ಈ ಅಗ್ನಿಯು ಈ ಭೂಲೋಕದಲ್ಲಿರುವ ಗೃಹಗಳಿಗೆ ಅಥವಾ ಜನರಿಗೆ ಮಾತ್ರ ಸ್ವಾಮಿಯು. ಇತರರಿಗೆ ಅಲ್ಲ ಎಂದು ಇನ್ನು ಕೆಲವರು ಇದನ್ನು ನಿರಾಕರಿಸಿ ಮೇಲಿನ ಮತವನ್ನು ದೂಷಣೆಮಾಡುವರು. ಇದನ್ನು ಕೇಳಿದ ಇತರ

ಬ್ರಾಹ್ಮಣರು ವಾಯುವೇ ಗೃಹಪತಿಯೆಂದು ಹೇಳುವರು. ಆದರೆ ಇದನ್ನೂ ಕೆಲವರು ಒಪ್ಪುವುದಿಲ್ಲ. ವಾಯುವು ಅಂತರಿಕ್ಷದಲ್ಲಿ ಮಾತ್ರ ಬೀಸುವುದರಿಂದ ಅಂತರಿಕ್ಷಲೋಕಕ್ಕೆ ಮಾತ್ರ ಅವನು ಪ್ರಭುವು. ಸಕಲವಿಶ್ವಕ್ಕೂ ಅಲ್ಲ ಎಂದು ಮತ್ತೆ ಕೆಲವರು. ಈ ಮತವನ್ನು ತಿರಸ್ಕರಿಸುವರು. ಆದರೆ ಮೇಲೆ ಸ್ವರ್ಗದಲ್ಲಿ ಎಲ್ಲರಿಗೂ ಕಾಣುವಂತೆ ಪ್ರಕಾಶಮಾನವಾಗಿ ಬೆಳಗುತ್ತಿರುವ ಆದಿತ್ಯನೇ ಗೃಹಪತಿಯೆಂದು (ಇಲ್ಲಿ ಗೃಹಪತಿಯೆಂದರೆ ಸಮಸ್ತ ವಿಶ್ವಕ್ಕೂ ಅಧಿಪತಿ, ಪ್ರಭು ಎಂದರ್ಥವು) ಸರ್ವರೂ ಅಂಗೀಕರಿಸಿರುವರು. ಹೇಗೆಂದರೆ, ಪ್ರಕಾಶಮಾನನಾದ ಆದಿತ್ಯನು ವಸಂತಾದಿ ಋತುಗಳಿಗೆ ಅಧಿಪತಿಯಾಗಿ ಬೆಳಗುತ್ತಿರುವನು. ವಸಂತಾದಿ ಋತುಗಳೇ ಗೃಹಗಳು. ಇವುಗಳಿಗೆ ಪತಿಯೆಂದರೆ ಗೃಹಪತಿ, ಋತುಗಳಿಗೆ ಪಾಲಕನು. ಈ ವಿಧವಾದ ಅರ್ಥವು ಅಗ್ನಿವಾಯುಗಳಿಗೆ ಹೊಂದುವುದಿಲ್ಲ. ಆದಿತ್ಯನಿಗೆ ಮಾತ್ರ ಹೊಂದುವುದು. ಆದಿತ್ಯನ ಸಂಚಾರದಿಂದಲೇ ಋತುಗಳು ಒಂದಾಗುತ್ತಲೊಂದು ಆವಿರ್ಭವಿಸುವವು. ಈ ಕಾರಣದಿಂದ ಯಾವ ಪುರುಷನು ಆದಿತ್ಯನೇ ಗೃಹಪತಿಯೆಂದು ವಾದಿಸುವನೋ ಅವನೇ ಈ ಲೋಕದಲ್ಲಿ ತನ್ನ ಗೃಹಕ್ಕೆ ಗೃಹಪತಿ (ಸ್ವಾಮಿ) ಯಾಗಿರುವನು. ಸಮಸ್ತ ಭೋಗಗಳನ್ನೂ ಅನುಭವಿಸುವನು. ಇಂತಹ ತಿಳುವಳಿಕೆಯುಳ್ಳ ಋತ್ವಿಜರಿಂದ ಕೂಡಿದ ಯಜಮಾನರೂ ಸಹ ಸಂಪತ್ಸಮೃದ್ಧಿಯನ್ನು ಪಡೆಯುವರು. ಆದ್ದರಿಂದ ಋತುಗಳೆಂಬ ಗೃಹಗಳಿಗೆ ಪಾಲಕನಾದ ಆದಿತ್ಯನೇ ನಿಜವಾದ ಗೃಹಪತಿಯೆನ್ನುವುದು ಯುಕ್ತವು. ಇದಲ್ಲದೆ ಯಜ್ಞದಲ್ಲಿ ದೀಕ್ಷಿತರಾದವರೂ, ಯಜಮಾನರೂ ಇತರ ಮುಖಂಡರೂ ಇವರೆಲ್ಲರೂ ಗೃಹಪತಿಗಳೇ ಆಗಿರುವರು. ಆದರೆ ಆದಿತ್ಯನು ಮಾತ್ರವೇ ಗೃಹ ಎಂಬ ಋತುಗಳಿಗೆ ಮುಖ್ಯವಾಗಿ ಪತಿಯಾಗಿರುವನು ಮತ್ತು ಜನರು ಮಾಡುವ ಪಾಪಾದಿಗಳನ್ನು ಪರಿಹರಿಸುವನು. ಆದ್ದರಿಂದ ಇವನೊಬ್ಬನೇ ಗೃಹಪತಿಯೆಂದು ಕರೆಯಲ್ಪಡಲು ಅರ್ಹನು. ಇತರರು ಗೃಹಪತಿಯೆಂದು ಕರೆಯಲ್ಪಟ್ಟರೂ ಅವರಿಗೆ ಜನರ ಪಾಪಾದಿಗಳನ್ನು ಪರಿಹರಿಸುವ ಶಕ್ತಿಯಿರುವುದಿಲ್ಲ. ಈ ವಿಧವಾದ ಶಕ್ತಿಸಾಮರ್ಥ್ಯವು ಆದಿತ್ಯನೊಬ್ಬನಿಗೆ ಇರುವುದು. ಆದ್ದರಿಂದ ಆದಿತ್ಯನೇ ಗೃಹಪತಿಯೆಂದು ಕರೆಯಲ್ಪಡಲು ಯೋಗ್ಯನು. ಆದ್ದರಿಂದ ಎಲೈ ಅಧ್ವರ್ಯುವೇ ನಾವು ಸಮಸ್ತ ವಿಷಯಗಳಲ್ಲಿಯೂ ಸಮೃದ್ಧರಾಗಿ ಇರೋಣ.

## *English Translation*

### The Chaturhotri mantras. The bodies of Prajapati. The Brahmodyam. The sacrificers take their seats in heaven.

When the Hotar is about to repeat the Chaturhotri mantra, he cries, "Adhvaryu!" This is the proper form of the ahava at this occasion, and not somsavom. The Adhvaryu then responds "Om, Hotar! tatha Hotar!" The Hotar thereupon repeats the Chaturhotri mantras, stopping at each of the ten padas!

1) Their sacrificial spoon was intelligence!
2) Taeir offeriug was endowed with intellect!
3) Their altar was speech!
4) Their Barhis seat was thought!
5) Their Agni was understanding!
6) Their Agnidhra was reasoning!
7) Their offering (havis) was breath!
8) Their Adhvaryu was the Saman!
9) Their Hotar was Vachaspati!

10) Their Maitravaruna (upa-vakta) was the mind!
11) They (sacrificers) took with their mind, the Graha!
12) O ruler Vachaspati, O giver, O name!
13) Let us put down thy name!
14) May's thou put down our names; with our names go to heaven (announce our arrival in heaven)!
15) What success the gods who have Prajapati for their master, gained, the same we shall gain!

The Hotar now reads the Prajapati tanu (bodies) mantras, and the Brahmodyam.

(1 & 2) Eater of food, and mistress of food. The eater of food is Agni; the mistress of food is Aditya.

(3 & 4) The happy and fortunate. By "happy" Soma, and by "fortunate" cattle are meant.

(5 & 6) The houseless and the dauntless. "Houseless" is Vayu, who never lives in a house, and "fearless" is Death, for all fear him.

(7 & 8) The not reached, and not to be reached. "The not reached" is earth, and "the not to be reached" is Heaven.

(9 & 10) The unconquerable, and the not to be stopped. "The unconquerable" is Agni, and "the not to be stopped" is Aditya (sun).

(11 & 12) Who has no first material cause apurva, nor is liable to destruction. "Who has no first material cause" is the mind (manas), and what is not liable to destruction is the year.

The twelve bodies of Prajapati make up the whole Prajapati. On the tenth day one reaches the whole Prajapati.

They now repeat the Brahmodyam. "Agni is the house-father; thus say some, for he is the master (house-father) of the world (earth). Vayu is the house-father, thus say others; for he is the ruler of the airy region. That one Aditya, the sun is the house-father; for he horns with his rays. The Ritus are the houses. He who knows what god is their (the Ritus) house-father, becomes their house-father, and succeeds. Such sacrificers are successful (they become masters themselves). House-father (master) becomes he who knows the god who destroys the evil consequences of sin (Aditya, the sun). This house-father destroys the evil consequences of sin and becomes sole master. These sacrificers destroy the evil consequences of their sin and say, O Adhvaryu! we have succeeded, we have succeeded!"

ಮೇಲಿನ ಖಂಡದ ಕೊನೆಯಲ್ಲಿ ಬ್ರಹ್ಮೋದ್ಯವೆಂಬ ವಿಷಯವನ್ನು ಪ್ರಸ್ತಾಪಮಾಡಲಾಗಿದೆ. ಬ್ರಹ್ಮೋದ್ಯವೆಂದರೆ ಯಜ್ಞಾಂತ್ಯದಲ್ಲಿ ಹೋತೃ ಮೊದಲಾದ ಋತ್ವಿಜರೂ, ಬ್ರಹ್ಮನೂ ಯಜ್ಞವೇದಿಯಲ್ಲಿ ಕುಳಿತು ಪರಬ್ರಹ್ಮನ ವಿಚಾರವಾಗಿ ಮಾಡುವ ತತ್ವವಿಮರ್ಶೆಯು. ಕೆಲವರು ಅಗ್ನಿಯನ್ನೇ ಪರಬ್ರಹ್ಮನೆಂದು ಹೇಳುವರು. ಕೆಲವರು ವಾಯುವನ್ನೇ ಬ್ರಹ್ಮನೆಂದು ಹೇಳುವರು. ಆದರೆ ಇದನ್ನು ಯಾರೂ ಒಪ್ಪುವುದಿಲ್ಲ. ಅಂತರಿಕ್ಷದಲ್ಲಿ ಪ್ರಕಾಶಮಾನವಾಗಿ ಬೆಳಗುತ್ತಿರುವ, ಸಮಸ್ತ ಚರಾಚರ ಪ್ರಪಂಚಕ್ಕೂ (ವಿಶ್ವಕ್ಕೂ) ಬೆಳಕನ್ನೂ ಶಕ್ತಿಸಾಮರ್ಥ್ಯವನ್ನೂ (Energy) ನೀಡುವ ಆದಿತ್ಯನೇ ಪರಬ್ರಹ್ಮನೆಂದು ಎಲ್ಲರೂ ಒಪ್ಪುವರು. ಈ ವಿಷಯದಲ್ಲಿ ಭಿನ್ನಾಭಿಪ್ರಾಯವಿಲ್ಲ ಆದಿತ್ಯನು ಪರಬ್ರಹ್ಮನ ಅಂಶವು. ಈ ವಿಷಯವು ಋಗ್ವೇದದ ಅನೇಕ ಋಕ್ಕುಗಳಲ್ಲಿ ವಿಸ್ತಾರವಾಗಿ ಪ್ರತಿಪಾದಿಸಲ್ಪಟ್ಟಿರುವುದು. ಅವೆಲ್ಲವನ್ನೂ ಇಲ್ಲಿ ವಿವರಿಸುವುದು ಸಾಧ್ಯವಿಲ್ಲದಿದ್ದರೂ ಸ್ವಲ್ಪಭಾಗ ವನ್ನು ಮಾತ್ರ ಇಲ್ಲಿ ವಿವರಿಸುತ್ತೇವೆ.

**ಅಸ್ಯ ವಾಮಸ್ಯ ಪಲಿತಸ್ಯ ಹೋತುಸ್ತಸ್ಯ ಭ್ರಾತಾ ಮಧ್ಯಮೋ**
**ಅಸ್ತ್ಯಶ್ನಃ। ತೃತಿಯೋ ಭ್ರಾತಾ ಘೃತಪೃಷ್ಠೋ ಅಸ್ಯಾತ್ರಾಪಶ್ಯಂ**
**ವಿಶ್ಪತಿಂ ಸಪ್ತಪುತ್ರಂ ॥೧॥**

ಸಕಲರಿಂದಲೂ ಸೇವಿಸಲ್ಪಡುವನೂ, ವಿಶ್ವದ ಪಾಲಕನೂ, ಆಹ್ವಾನಾರ್ಹನಾದವನೂ ಆದ ಯಾವ ಈ ಆದಿತ್ಯನುಂಟೋ ಅವನಿಗೆ ಮಧ್ಯಮಸ್ಥಾನೀಯನಾದವನೂ, ಸಕಲವನ್ನೂ ವ್ಯಾಪಿಸಿರುನವನೂ ಆದ ವಾಯುವು ಭ್ರಾತೃಸ್ಥಾನದಲ್ಲಿದ್ದಾನೆ ಮತ್ತು ಮತ್ತು ಆಹುತಿರೂಪವಾದ ಘೃತದಿಂದ ವ್ಯಾಪ್ತವಾದ ದೇಹವುಳ್ಳ ಮೂರನೆಯ ಭ್ರಾತೃವೂ ಇದ್ದಾನೆ, ಇವರುಗಳ ನಡುವೆ ಮಾನವರಿಗೆ ಒಡೆಯನಾದವನೂ ರಶ್ಮಿರೂಪವಾದ ಸಪ್ತಪುತ್ರರಿಂದೊಡಗೂಡಿದವನೂ ಆದ ಈ ಆದಿತ್ಯನು ನನ್ನ ಎದುರಿಗೆ ಗೋಚರವಾಗಿದ್ದಾನೆ.

ಸೂಕ್ತಂ ಯದಸ್ಯ ವಾಮೀಯಂ ವೈಶ್ವದೇವಂ ತದುಚ್ಯತೇ ।
ಪ್ರವಾದಾ ವಿವಿಧಾಸ್ತಾತ್ರ ದೇವಾನಾಂ ಚಾತ್ರ ಕೀರ್ತನಂ ॥
ಸೂಕ್ತೇಽಸ್ಮಿರ್ಚಿ ಪರೋಕ್ಷೋಕ್ತಾ ವಕ್ಷ್ಯಾಮಿ ಭ್ರಾತರಸ್ತ್ರಯಃ ।
ಅಗ್ನಿಸ್ತು ವಾಮಃ ಪಲಿತೋ ವಾಯುರ್ಭ್ರಾತಾ ತು ಮಧ್ಯಮಃ ।
ಘೃತಪೃಷ್ಠಸ್ತೃತೀಯೋಽತ್ರ ಸಪ್ತ ವೈ ರಶ್ಮಯಸ್ಸುತಾಃ ॥

(ಬೃಹದ್ದೇವತಾ. ೪-೩೧ ರಿಂದ ೩೩)

ಅಸ್ಯ ವಾಮಸ್ಯ ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವು ವಿಶ್ವೇದೇವರನ್ನುದ್ದೇಶಿಸಿದೆ. ಇದರಲ್ಲಿ ನಾನಾ ವಿಧವಾದ ತತ್ತ್ವಾರ್ಥಗಳೂ ಅಡಗಿವೆ. ದೇವತೆಗಳನ್ನು ಆಯಾ ಸಂದರ್ಭಕ್ಕನುಸಾರವಾಗಿ ಉದ್ದೇಶಿಸಿದೆ. ಪ್ರಕೃತವಾದ ಈ ಋಕ್ಕಿನಲ್ಲಿ (೧-೧೬೪-೧) ಮೂರು ಭಾತೃಗಳು ಪ್ರಣಮಪುರುಷದಲ್ಲಿ ನಿರ್ದೇಶಿಸಲ್ಪಟ್ಟಿದ್ದಾರೆ. ಅವರಾರೆಂದರೆ, ಲೋಕೋಪ ಕಾರಕನಾದ ಅಗ್ನಿಯೂ, ವಾಯುವೂ, ಆದಿತ್ಯನೂ ಅಗಿದ್ದಾರೆ. ಮತ್ತು ಆದಿತ್ಯನ ಸಪ್ತರಶ್ಮಿಗಳೂ ಸ್ತುತಿಸಲ್ಪಟ್ಟಿವೆ.

ಈ ಋಕ್ಕಿಗೆ ಆದಿತ್ಯಪರವಾದ ಒಂದರ್ಥವನ್ನೂ ಪರಬ್ರಹ್ಮನಪರವಾದ ಇನ್ನೊಂದರ್ಥವನ್ನೂ ಮಾಡಿದೆ. ಇದಕ್ಕೆ ನಿರುಕ್ತಕಾರರ ನಿರ್ವಚನವು ಈ ರೀತಿಯಲ್ಲಿದೆ. ಅದು ಆದಿತ್ಯಪರವಾಗಿದೆ. (ನಿ. ೪-೨೬)

**ತಸ್ಯ ಭ್ರಾತಾ ಮಧ್ಯಮೋ ಅಸ್ತ್ಯಶನಃ**—ಸರ್ವವ್ಯಾಪಿಯಾದ ವಾಯುವು ಈ ಆದಿತ್ಯನಿಗೆ ಮಧ್ಯಸ್ಥಾನದ ಭ್ರಾತೃವು.

**ಅಥಾತೋ ಮಧ್ಯಸ್ಥಾನಾ ದೇವತಾಃ । ತಾಸಾಂ ವಾಯುಃ ಪ್ರಥಮಾಗಾಮೀ ಭವತಿ ॥**

(ನಿ· ೧೦–೧)

ಎಂದು ಮಧ್ಯಸ್ಥಾನದಲ್ಲಿರುವ ವಾಯುವು ಆದಿತ್ಯನಿಗೆ ಭ್ರಾತೃವೆಂದು ಹೇಳಿದೆ. ವಾಯುವಿಗೆ ಇಲ್ಲಿ **ಅಶ್ನಃ-ಅಶನಃ** ಎಂಬ ವಿಶೇಷಣವಿದೆ. ಎಲ್ಲಾ ಕಡೆಗಳಲ್ಲಿಯೂ ವ್ಯಾಪಿಸುವನೆಂದರ್ಥ. ಆದಿತ್ಯನಿಗೆ **ವಾಮಸ್ಯ, ಪಲಿತಸ್ಯ** ಎಂಬ ಎರಡು ವಿಶೇಷಣಗಳಿವೆ.

**ವಾಮಸ್ಯ—ವನನೀಯಸ್ಯ**—ಸರ್ವರಿಂದಲೂ ಅಪೇಕ್ಷಿತನಾಗಿ ಸೇವಿಸಲ್ಪಡುವನೆಂದೂ; **ಪಲಿತಸ್ಯ** ಎಂಬುದಕ್ಕೆ **ಪಾಲಯಿತುಃ । ವೃಷ್ಟ್ಯಾದಿಪ್ರದಾನೇನ ಪಾಲಕಸ್ಯ ।** ವೃಷ್ಟ್ಯಾದಿಗಳನ್ನು ಸುರಿಸುವುದರಿಂದ **ಲೋಕಪಾಲಕನು** ಎಂದೂ ಅರ್ಥವಾಗುತ್ತದೆ. ಇಂಥಹ ಆದಿತ್ಯನೊಂದಿಗೆ ವಾಯುವಿಗೆ ಭ್ರಾತೃತ್ವವು ಹೇಗೆ ಪ್ರಾಪ್ತವಾಯಿತೆಂದರೆ ;

**ಭ್ರಾತಾ—ಭರತೇರ್ಹರತಿಕರ್ಮಣೋ ಹರತೇ ಭಾಗಂ ಭರ್ತವ್ಯೋ ಭವತೀತಿ ವಾ । ಪ್ರಿತ್ರ್ಯಾರ್ಜಿತ**ವಾದ ಆಸ್ತಿಯಲ್ಲಿ ಭಾಗವನ್ನು ವಹಿಸುತ್ತಾನೆಂಬುದರಿಂದಾಗಲಿ ಅಥವಾ ಆದರಿಂದ ಪೋಷಿಸಲ್ಪಡುತ್ತಾನೆ ಎಂಬುದರಿಂದಾಗಲಿ ಈ ಹೆಸರೆಂದು ವಿವರಿಸಿದೆ. ಆದರೆ ಇಲ್ಲಿ ವಾಯುವು ಆದಿತ್ಯನಿಗೆ ಸಂಬಂಧಿಸಿದ ಸ್ವತ್ತಿನಲ್ಲಿ ಯಾವ ರೀತಿಯಲ್ಲಿ ಭಾಗವನ್ನು ವಹಿಸುತ್ತಾನೆಂಬುದನ್ನು ಸಾಯಣರು ಈರೀತಿ ವಿವರಿಸಿದ್ದಾರೆ.

**ವೃಷ್ಟ್ಯರ್ಥಂ ರಶ್ಮಿಭಿರಾಹೃತಾನಾಂ ಭೌಮಾನಾಂ ರಸಾನಾಂ ಹರಣಾದ್ವಾ ಭ್ರಾತೇತ್ಯುಚ್ಯತೇ । ಪ್ರಿತ್ರ್ಯೇಣ ಧನೇನ ಸ್ವಾರ್ಜಿತೇನ ವಾ ಭರ್ತವ್ಯಃ ಭವತೀತಿ ಭ್ರಾತಾ । ಮಧ್ಯಮೋ ವಾಯುಃ ಅಪಿ ವೃಷ್ಟ್ಯರ್ಥಂ ರಸೈಃ ಭರ್ತವ್ಯಃ ಭವತಿ ।**

ವೃಷ್ಟ್ಯರ್ಥವಾಗಿ ರಶ್ಮಿಗಳಿಂದ ಹೀರಲ್ಪಟ್ಟ ರಸದ ಭಾಗವನ್ನು ತಾನೂ ಹರಿಸಿ ಅದರಲ್ಲಿ ಭಾಗವಹಿಸುವುದರಿಂದ ಸೂರ್ಯನ ಭ್ರಾತೃವಾಗಬಹುದು. ಅಥವಾ ವೃಷ್ಟ್ಯರ್ಥವಾಗಿ ರಸದಿಂದ ಮಧ್ಯಮಸ್ಥಾನದ ವಾಯುವು ಪೋಷಿಸಲ್ಪಡಬೇಕಾದುದರಿಂದಲೂ ಆ ಕೆಲಸವನ್ನು ಆದಿತ್ಯನೇ ಮಾಡಬೇಕಾಗಿರುವುದರಿಂದಲೂ ಸಹ ಆದಿತ್ಯನಿಗೆ ವಾಯುವು ಭ್ರಾತೃವಾಗುತ್ತಾನೆ.

**ತೃತೀಯೋ ಭ್ರಾತಾ ಅಸ್ಯಾಯಮಗ್ನಿಃ**—ಆದಿತ್ಯನಿಗೆ ಅಗ್ನಿಯು ತೃತೀಯಭ್ರಾತೃವು ಹೇಗೆ ಆಗುತ್ತಾನೆಂದರೆ,

**ರಾತ್ರೌ ಸವಿತುಸ್ತೇಜೋಭಾಗಸ್ಯ ಹರಣಾತ್ । ದಿವಾ ಸ್ವಕೀಯತೇಜೋಭಾಗಸ್ಯ ತದರ್ಥಮೇವ ಭರ್ತವ್ಯತ್ವಾತ್ ವಾ ಭ್ರಾತೃತ್ವಂ ।**

ರಾತ್ರಿಯಲ್ಲಿ ಅಗ್ನಿಯು ಆದಿತ್ಯನ ತೇಜಸ್ಸಿನ ಭಾಗವನ್ನು ವಹಿಸುವುದರಿಂದಲೂ, ಹಗಲಿನಲ್ಲಿ ತನ್ನ ತೇಜಸ್ಸನ್ನು ಸೂರ್ಯನಿಗೆ ಹಂಚಿಕೊಡುವುದರಿಂದಲೂ ಇಬ್ಬರೂ ಭ್ರಾತೃಗಳಾದರು.

**ಘೃತಪೃಷ್ಠಃ—ಘೃತಂ ಆಹುತಿಲಕ್ಷಣಂ ಪೃಷ್ಠೇ ಯಸ್ಯ ತಾದೃಶಃ ।** ಆಹುತಿರೂಪವಾದ **ಘೃತವನ್ನು** ಬೆನ್ನಿನಲ್ಲಿ ಹೊತ್ತುಕೊಂಡಿರುವ ಎಂದರ್ಥ. ಅಗ್ನಿಗೆ ಈ ವಿಶೇಷಣವು ಬಹಳ ಸಾಮಾನ್ಯವಾಗಿ, ಅನೇಕ ಕಡೆಗಳಲ್ಲಿ ಹೇಳಿದೆ. **ಆಜ್ಯಸ್ಪೃಷ್ಟಃ**—ಆಜ್ಯದಿಂದ ಸ್ಪೃಷ್ಟನಾದವನು ಎಂದೂ ಅರ್ಥವಾಗಬಹುದು.

**ಸಪ್ತಪುತ್ರಂ—ಸಪ್ತಮಪುತ್ರಂ ಸರ್ಪಣಪುತ್ರಮಿತಿ ವಾ ಸಪ್ತ ಸೃಪ್ತಾ ಸಂಖ್ಯಾ ಸಪ್ತಾದಿತ್ಯ ರಶ್ಮಯ ಇತಿ ವದಂತಿ ।** ಏಳನೆಯ ಪುತ್ರನೆಂದಾಗಲಿ, ಅಥವಾ ಸುತ್ತಲೂ ಪರಿಭ್ರಮಣವನ್ನು ಹೊಂದತಕ್ಕ ಪುತ್ರನೆಂದಾಗಲಿ ಅಥವಾ ಸಪ್ತಸಂಖ್ಯಾಕವಾದ ಆದಿತ್ಯರಶ್ಮಿಗಳೆಂದಾಗಲಿ ಅರ್ಥವಾಗುತ್ತದೆ. ಇಲ್ಲಿ ಸಪ್ತಮಪುತ್ರನೆಂಬುದಕ್ಕೆ ಸಾಯಣರು ಒಂದು ಐತಿಹಾಸಿಕವಾದ ಕಥೆಯನ್ನು ಉದಹರಿಸಿದ್ದಾರೆ.

> **ಅದಿತಿಃ ಪುತ್ರಕಾಮಾ । ಸಾಧ್ಯೇಭ್ಯೋ ದೇವೇಭ್ಯೋ ಬ್ರಹೌದನಮುಪಚತ್ । ತಸ್ಯಾ ಉಚ್ಛೇಷಣಮುದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯೈ ಧಾತಾ ಚಾರ್ಯಮಾ ಚಾ-ಚಾಯೇತಾಂ । ಸಾ ದ್ವಿತೀಯಮುಪಚತ್ ॥ ತಸ್ಯಾ ಉಚ್ಛೇಷಣಮುದದುಃ । ತತ್ಪ್ರಾಶ್ನಾತ್ । ಸಾ ರೇತೋಽಧತ್ತ । ತಸ್ಯೈ ಮಿತ್ರಶ್ಚ ವರುಣಶ್ಚಾ ಜಾಯೇತಾಂ । ಸಾ ತೃತೀಯಮುಪಚತ್ ತಸ್ಯಾ ಉಚ್ಛೇಷಣಮುದದುಃ । ತತ್ಪ್ರಾಶ್ನಾತ್...................ಸಾ ರೇತೋಽಧತ್ತ । ತಸ್ಯಾ ಇಂದ್ರಶ್ಚ ವಿವಸ್ವಾಗ್ಂಶ್ಚಾ ಜಾಯೇತಾಂ ।** (ತೈ. ಬ್ರಾ. ೧-೧-೯-೧, ೩)

ಅದಿತಿಯು ಪುತ್ರನನ್ನು ಪಡೆಯಬೇಕೆಂಬ ಇಚ್ಛೆಯಿಂದ ಸಾಧ್ಯರನ್ನುದ್ದೇಶಿಸಿ ಬ್ರಹ್ಮೌದನವನ್ನು ಪಕ್ವಮಾಡಿದಳು. ಅವರು ತಿಂದು ಉಳಿದುದನ್ನು ಇವಳು ಉಪಭೋಗಿಸಿದನಂತರ ಇವಳು ಗರ್ಭವತಿಯಾಗಿ ಇವಳಿಂದ **ಅರ್ಯಮನು** ಉತ್ಪನ್ನನಾದನು. ಎರಡನೆಯ ಸಲವೂ ಹೀಗೆ ಮಾಡಲು **ಮಿತ್ರಾವರುಣರು** ಹುಟ್ಟಿದರು. ಮೂರನೆಯ ಸಲಕ್ಕೆ **ಅಂಶ** ಮತ್ತು **ಭಗ** ಇವರೂ, ಇನ್ನೊಂದು ಸಲಕ್ಕೆ **ಇಂದ್ರನೂ ಆದಿತ್ಯನೂ** ಉತ್ಪನ್ನರಾದರು. ಇವರಲ್ಲಿ **ಆದಿತ್ಯನು** ಸಪ್ತಮನು. ಆದುದರಿಂದ ನಿರುಕ್ತಕಾರರು ಹೇಳಿರುವ ಅರ್ಥಗಳಲ್ಲಿ ಇದೂ ಒಂದಾಗಿದೆ. ಅಥವಾ ಪ್ರವಾಹದಂತೆ ಸರಿಯತಕ್ಕ ರಶ್ಮಿಗಳೆಂದರ್ಥವಾಗಬಹುದು.

**ಅಧ್ಯಾತ್ಮಪಕ್ಷೇ :—**

**ವಾಮಸ್ಯ—ವಿಶ್ವಸ್ಯ ಉದ್ಗರಿತುಃ ಸ್ರಷ್ಟುಃ ಇತ್ಯರ್ಥಃ ।** ಬ್ರಹ್ಮಾಂಡರೂಪದಲ್ಲಿ ವಿಶ್ವವನ್ನೆಲ್ಲಾ ಪ್ರಕಾಶಪಡಿಸಿ ಸೃಷ್ಟಿಸಿದ ಎಂದರ್ಥ.

**ಪಲಿತಸ್ಯ ಪಾಲಯಿತುಃ—ಸ್ವಸೃಷ್ಟಜಗತ್ಪಾಲನಶೀಲಸ್ಯ ।** ತಾನು ಸೃಷ್ಟಿಸಿದ ಜಗತ್ತನ್ನು ತಾನೇ ಪಾಲಿಸಲು ಸಮರ್ಥನಾದ ಮತ್ತು,

**ಹೋತುಃ—ಆದಾತುಃ । ಸ್ವಸ್ಮಿನ್ ಸಂಹರ್ತುಃ । ವಾಮಸ್ಯ, ಪಲಿತಸ್ಯ, ಹೋತುಃ** ಎಂಬ ಪದಗಳಿಗೆ ಸೃಷ್ಟಿ, ಸ್ಥಿತಿ (ಪಾಲನ) ಮತ್ತು ಪುನಃ ಪ್ರಳಯ ಎಂಬ ಮೂರು ಅರ್ಥಗಳನ್ನೂ ಮಾಡುತ್ತಾ **ಹೋತುಃ** ಎಂಬ ಪದಕ್ಕೆ **ಸ್ವಸ್ಮಿನ್ ಸಂಹರ್ತುಃ** ತನ್ನಲ್ಲೇ ಎಲ್ಲವನ್ನೂ ಲಯಮಾಡಿಕೊಳ್ಳತಕ್ಕ ಎಂದರ್ಥಮಾಡಿದ್ದಾರೆ. ಇದಕ್ಕೂ ಶ್ರುತಿಯ ಆಧಾರವಿದೆ.

> **ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಂ ಸರ್ವಸ್ಯೈತಸ್ಯಾತ್ತಾ ಭವತಿ ಸರ್ವಮಸ್ಯಾನ್ನಂ ಭವತಿ ಯ ಏವಮೇತದದಿತೇರದಿತಿತ್ವಂ ವೇದ ॥**
> (ಬೃ. ಉ. ೧-೨-೫)

ಪ್ರಜಾಪತಿಯು ತಾನು ಸೃಷ್ಟಿಸಿದುದನ್ನೆಲ್ಲಾ ಪುನಃ ಅನ್ನರೂಪದಲ್ಲಿ ಭಕ್ಷಿಸತೊಡಗಿದನು. ಅದೇ ಅವನ **ಅದಿತಿ** (ಅನಂತ) ಸ್ವರೂಪವು. ವಿಶ್ವವೆಲ್ಲವೂ ಅವನ ಅನ್ನವಾಗಿದೆ. ಇತ್ಯಾದಿ ವಾಕ್ಯಗಳಲ್ಲಿ ವರ್ಣಿತವಾಗಿರುವಂತೆ ಲಯಕರ್ತನಾದ ಈಶ್ವರನೇ ವಿಶ್ವವನ್ನೆಲ್ಲಾ ಪುನಃ ತನ್ನಲ್ಲೇ ಲಯಮಾಡಿಕೊಳ್ಳುವುದರಿಂದ ಈ **ಹೋತುಃ** ಎಂಬ ವಿಶೇಷಣವಿದೆ.

**ಮಧ್ಯಮೋ ಭ್ರಾತಾ ತದಂಶಭೂತಃ ಸೂತ್ರಾತ್ಮಾ ಮಧ್ಯಮಃ ಸರ್ವತ್ರ ಮಧ್ಯೇ ವರ್ತಮಾನೋಽಸ್ತಿ ಜಗದ್ಧಾರಕತ್ವೇನ ವರ್ತತೇ ।** ಜಗತ್ತಿನ ಸಕಲ ವಸ್ತುಗಳ ಮಧ್ಯೆಯೂ ಸೂತ್ರಪ್ರಾಯನೂ ಬ್ರಹ್ಮಾಂಶಭೂತನೂ ಆದ ವಾಯುವು ಎಂದರ್ಥ. ಇದೇ ವಾಯುವು **ಅಶ್ನಃ ವ್ಯಾಪನಶೀಲಃ ।** ಸರ್ವವ್ಯಾಪ್ತಿಯಾಗಿದ್ದಾನೆ.

**ವಾಯುನಾ ವೈ ಗೌತಮ ಸೂತ್ರೇಣಾಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ಸಂದೃಬ್ಧಾನಿ ॥** (ಬೃ. ಉ. ೩-೭-೨)

ಈ ಲೋಕವೂ, ಪರಲೋಕವೂ ಸಮಸ್ತಭೂತಗಳೂ ಸಹ ವಾಯುವೆಂಬ ಸೂತ್ರದಿಂದಲೇ ಪರಸ್ಪರವಾದ ಸಂಬಂಧವನ್ನು ಹೊಂದಿದೆ ಮತ್ತು ಒಂದೇ ತತ್ವದಲ್ಲಡಗಿವೆ.

**ಘೃತಪೃಷ್ಠಃ**— **ಘೃತಮಿತ್ಯುದಕನಾಮ । ತೇನ ತತ್ಕಾರ್ಯಂ ಶರೀರಮುಚ್ಯತೇ । ತದೇವ ಪೃಷ್ಠಂ ಸ್ಪರ್ಶಕಂ ।** ಸ್ವಸೃಷ್ಟವಾದುದರಿಂದ ಉದಕವೇ ತನ್ನ ಶರೀರರೂಪವಾಯಿತು. ಈ ಉದಕರೂಪದ ಶರೀರವು ತನ್ನ ಆವಿರ್ಭಾವದಲ್ಲಿ ಮೂರನೆಯ ರೂಪವನ್ನು ಹೊಂದಿ ತನ್ನ ಅಂಶವನ್ನೇ ಹೊಂದಿರುವವುದರಿಂದ ಇದಕ್ಕೆ **ತೃತೀಯೋ ಭ್ರಾತಾ** ಎಂದು ಹೇಳಬಹುದು. ಅಥವಾ **ಘೃತ** ಶಬ್ದಕ್ಕೆ **ಪ್ರದೀಪ್ತ**ವೆಂಬ ಅರ್ಥವನ್ನು ಮಾಡಿದರೆ ಆಗ **ಪ್ರಕಾಶಿತ ಶರೀರಾಭಿಮಾನೀ** ಸೂತ್ರಾತ್ಮನಾದ ವಾಯುವಿನಂತೆ ಸೂಕ್ಷ್ಮಶರೀರಿಯಲ್ಲದೆ ಸ್ವರ್ಗಕ್ಕೆ ವಿಷಯನಾಗುತ್ತಾನೆಂದಭಿಪ್ರಾಯವು.

**ವಿಶ್ಪತಿಂ—ವಿಶಾಂ ಪ್ರಜಾನಾಂ ಪತಿಂ । ಉಪಲಕ್ಷಣಮೇತತ್ । ಸರ್ವಸ್ಯ ಪತಿಮಿತ್ಯರ್ಥಃ । ಕೇವಲ** ಮಾನವರೂಪವಾದ ಪ್ರಜೆಗಳಿಗೆ ಮಾತ್ರ ಪತಿಯೆಂದಲ್ಲ. ಆದರೆ ಸಕಲವಿಶ್ವಕ್ಕೂ ಪತಿಯೆಂದರ್ಥವೆಂದು ಈ ಪದಕ್ಕೆ ಅರ್ಥವಿಸ್ತೃತಿಯನ್ನು ತೋರಿಸಿದೆ.

**ಸರ್ವಸ್ಯ ಪತಿಃ ಸರ್ವಸ್ಯ ಈಶಾನಃ** (ಸಾಯಣ) ಎಂದು ವಿಶ್ವಾತ್ಮನ ಪತಿತ್ವವನ್ನು ಸ್ತುತಿಸಿರುವುದರಿಂದ ಇಲ್ಲಿಯೂ ವಿಶ್ವಕ್ಕೇ ಪ್ರಭುವೆಂದರ್ಥ. ಈ ಅಂಶವನ್ನೇ ಎಲ್ಲಾ ಶ್ರುತಿವಾಕ್ಯಗಳೂ ಪ್ರತಿಪಾದಿಸುತ್ತವೆ.

**ಯದ್ಯೈತಮನುಪಶ್ಯತ್ಯಾತ್ಮಾನಂ ದೇವಮಂಜಸಾ ।**
**ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ ।** (ಬೃ. ಉ. ೪-೪-೧೫)

ವಿಶ್ವಕ್ಕೆಲ್ಲಾ ಪ್ರಭುವೆಂದೂ, ವಿಶ್ವಾತ್ಮನೆಂದೂ, ದೇವನೆಂದೂ ಇವನ ಸಾಕ್ಷಾತ್ಕಾರವನ್ನು ಪಡೆದರೆ ಆಗ ಅವನ ಸಾನ್ನಿಧ್ಯವು ಶಾಶ್ವತವಾಗಿ ಲಭಿಸುತ್ತದೆಯೆಂದು ಸಿದ್ಧವು.

**ಸ ವಾ ಏಷ ಮಹಾನಜ ಆತ್ಮಾ ಯೋಽಯಂ ವಿಜ್ಞಾನಮಯಃ ಪ್ರಾಣೇಷು ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿಞ್ಛೇತೇ ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ............ಸರ್ವೇಶ್ವರ ಏಷ ಭೂತಾಧಿಪತಿರೇಷ ಭೂತಪಾಲಃ...........।** (ಬೃ. ಉ. ೪-೪-೨೨)

ಮಹತ್ತಾದ ಸ್ವರೂಪವುಳ್ಳವನೂ, ಅಜನೂ, ವಿಜ್ಞಾನಮಯನೂ ಆದ ಈ ಪರಮಾತ್ಮನು ಸರ್ವಕ್ಕೂ ಪ್ರಭುವಾಗಿಯೂ ನಿಯಂತೃವಾಗಿಯೂ ಸಕಲರ ಹೃದಯಾಕಾಶದಲ್ಲೂ ವ್ಯಾಪ್ತನಾಗಿದ್ದಾನೆ. ಇತ್ಯಾದಿಯಾಗಿ ಅನೇಕಕಡೆಗಳಲ್ಲಿ ಈಶ್ವರನ ವಿಶ್ವತತ್ತ್ವವನ್ನು ಸ್ತುತಿಸಿದೆ. ಕಠೋಪನಿಷತ್ತಿನಲ್ಲಿಯೂ ಸಹ ಈ ಅಂಶವನ್ನು ವರ್ಣಿಸುತ್ತಾ,

ಯ ಇಮಂ ಮಧ್ವದಂ ವೇದ ಆತ್ಮಾನಾಂ ಜೀವಮಂತಿಕಾತ್ ।
ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ । (ಕಠ. ೪-೫)

ಎಂಬುದಾಗಿ ಭೂತಭವ್ಯಗಳಿಗೆ ಈಶಾನನೆಂದು ವರ್ಣಿಸಿರುವುದನ್ನು ಪ್ರಕೃತವಾದ ಋಕ್ಕಿನಲ್ಲಿ ವಿಶ್ಪತಿಯೆಂಬ ವಿಶೇಷಣ ದಿಂದ ಹೇಳಿದೆಯೆಂದು ಸಾಯಣರು ವಿವರಿಸಿದ್ದಾರೆ.

**ಸಪ್ತಪುತ್ರಂ—ಸಪ್ತಪುತ್ರಂ ಸಪ್ತಲೋಕಾಃ ಪುತ್ರಾ ಯಸ್ಯ ತಾದೃಶಂ ।** ಭೂರಾದಿಸಪ್ತಲೋಕಗಳನ್ನೂ ತಾನೇ ಸೃಷ್ಟಿಸಿದುದರಿಂದ ಸಪ್ತಪುತ್ರರನ್ನು ಪಡೆದಿರತಕ್ಕ ವಿಶ್ವಪಿತಾ ಎಂಬರ್ಥವನ್ನು ಕೊಡುತ್ತದೆ. ಅದನ್ನೇ **ಸ್ವಮಾಯಯಾ ಸೃಷ್ಟಸರ್ವಲೋಕಮಿತ್ಯರ್ಥಃ** ಎಂದು ಸಾಯಣರು ವ್ಯಾಖ್ಯಾನದಲ್ಲಿ ವಿವರಿಸಿದ್ದಾರೆ. ಸಪ್ತಪದಕ್ಕೆ ಅರ್ಥಾಂತರಗಳಿದ್ದು ಈಶ್ವರತತ್ತ್ವವನ್ನು ಈ ವಿಶೇಷಣವು ಬೇರೆಬೇರೆ ಗುಣಗಳನ್ನು ತೋರಿಸಿ ವರ್ಣಿಸುತ್ತದೆ.

**ಸಪ್ತಪ್ರಾಣಾಃ ಪ್ರಭವಂತಿ ತಸ್ಮಾತ್ ಸಪ್ತಾರ್ಚಿಷಃ ಸಮಿಧಃ ಸಪ್ತ ಜಿಹ್ವಾಃ ।**
**ಸಪ್ತ ಇಮೇ ಲೋಕಾಃ ಯೇಷು ಚರಂತಿ ಪ್ರಾಣಾ ಗುಹಾಶಯಾಂ ನಿಹಿತಾಃ ಸಪ್ತ ಸಪ್ತ ॥**
(ತೈ. ಉ. ೪-೧೨-)

ಈ ಪರಮಪುರುಷನಿಂದಲೇ ಸಪ್ತಪ್ರಾಣಿಗಳೂ ಹುಟ್ಟುತ್ತವೆ. ಸಪಾರ್ಚಿಗಳೂ, ಸಪ್ತಾಹುತಿಗಳೂ ಗುಹಾಶಯಗಳಾದ ಪ್ರಾಣಗಳು ಸಂಚರಿಸತಕ್ಕ ಸಪ್ತಲೋಕಗಳೂ ಎಲ್ಲವೂ ಇವನಿಂದ ಉತ್ಪನ್ನವಾದವುಗಳಾಗಿವೆ. ಇತ್ಯಾದಿ ವಾಕ್ಯಗಳಿಂದ ಸಪ್ತರೂಪ ವಾದ ಸೃಷ್ಟಿಗೆ ಕಾರಣನಾದುದರಿಂದ ಪರಮಪುರುಷನಿಗೆ **ಸಪ್ತಪುತ್ರ**ನೆಂದು ಕೀರ್ತಿಯಿದೆ. **ಸ್ವಮಯಾಯಾ ಸೃಷ್ಟಸರ್ವ ಲೋಕಂ** ತನ್ನ ದಿವ್ಯಶಕ್ತಿಯಿಂದ ಸರ್ವಲೋಕವನ್ನೂ ಸೃಷ್ಟಿಸಿದ ಪರಮಾತ್ಮನನ್ನು,

**ಅಪಶ್ಯಂ—ಪಶ್ಯೇಯಂ ಸಾಕ್ಷಾತ್ಕರೋಮೀತ್ಯರ್ಥಃ ।** ಕೇವಲ ಭೌತಿಕವಾದ ದೃಷ್ಟಿಯಿಂದ ನೋಡುವು ದಲ್ಲದೇ ಅಂತಶ್ಚಕ್ಷುಸ್ಸಿನಿಂದಲೂ ಧ್ಯಾನಪೂರ್ವಕವಾಗಿ ಸಾಕ್ಷಾತ್ಕಾರಮಾಡಿಕೊಳ್ಳುತ್ತೇನೆಂದರ್ಥವು. ಇದನ್ನೇ ಇನ್ನೂ ವಿಸ್ತಾರ ವಾಗಿ ವಿವರಿಸುತ್ತಾ,

**ಅಯಮರ್ಥಃ । ಸ್ವಾಧೀನಮಾಯೋ ಜಗತ್ಕಾರಣಭೂತಃ ಪರಮೇಶ್ವರ ಏಕ ಏವ । ತತ ಉತ್ಪನ್ನೌ ಸ್ಥೂಲಸೂಕ್ಷ್ಮಶರೀರಾಭಿಮಾನಿನೌ ದ್ವೌ ವಿರಾಟ್ಸೂತ್ರಾತ್ಮಾನೌ । ತೇಷು ಮಧ್ಯೇ ದ್ವಯೋಃ ಸಾಕ್ಷಾತ್ಕಾರೇಣ ಮೋಕ್ಷಾಭಾವಾತ್ ಸೃಷ್ಟ್ಯಾದಿಕಾರಣಂ ಪರಮೇಶ್ವರಂ ಜ್ಞೇಯ-ತ್ವೇನ ಪ್ರಸಿದ್ಧಂ ಶ್ರವಣಮನನಾದಿಸಾಧನೇನ ಸಾಕ್ಷಾತ್ಕರೋಮಿತ್ಯರ್ಥಃ ॥**

ಇಷ್ಟು ವಿವರಣೆಗೂ ಮುಖ್ಯತಾತ್ಪರ್ಯವಿಷ್ಟೇ. ಸೃಷ್ಟಿಸ್ಥಿಲಯಗಳಿಗೆ ಕಾರಣನೂ, ಅನಿರ್ವಚನೀಯವಾದ ಶಕ್ತಿಯನ್ನೂ ಪಡೆದಿರತಕ್ಕವನ್ನೂ ಆದ ಈಶ್ವರನೊಬ್ಬನೇ. ಅವನಿಂದ **ವಿರಾಟ್ಸೂತ್ರಾತ್ಮ**ರೂ ಸ್ಥೂಲಸೂಕ್ಷ್ಮರೂಪವುಳ್ಳವರೂ, ಮೇಲೆ ವಿವರಿಸಲ್ಪಟ್ಟ ಆಕಾರವುಳ್ಳವರೂ ಆದ ಎರಡು ಮೂಲತತ್ತ್ವಗಳು ಉತ್ಪನ್ನರಾದರು. ಆದರೆ ಆ ಮೂಲತತ್ತ್ವಗಳೂ ಕಾರ್ಯ ಪ್ರಪಂಚಕ್ಕೆ ಸೇರಿದುದರಿಂದ ಅವರ ಸಾಕ್ಷಾತ್ಕಾರದಿಂದ ನಿಜವಾದ ಮುಕ್ತಿಯು ಸಾಧ್ಯವಿಲ್ಲದುದಾಗಿ ಎಲ್ಲಕ್ಕೂ ಆದಿಕಾರಣನಾದ ಪರಮೇಶ್ವರನನ್ನು ಶ್ರವಣ, ಮನನ ಮತ್ತು ನಿದಿಧ್ಯಾಸನಗಳಿಂದ ಸಾಕ್ಷಾತ್ಕಾರ ಮಾಡಿಕೊಳ್ಳುತ್ತೇನೆಂಬಭಿಪ್ರಾಯವು ಎಂದು ವಿವರಿಸಿದೆ.

ಹೀಗೆಯೇ ಈ ಸೂಕ್ತದ ಎಲ್ಲಾ ಋಕ್ಕುಗಳಿಗೂ ಸಹ ಆಯಾ ಋಕ್ಕಿನಲ್ಲಿ ಸ್ತುತ್ಯನಾದ, ವೈಯಕ್ತಿಕವಾದ ದೇವತಾ ಪರವಾಗಿ ಒಂದರ್ಥವನ್ನೂ, ಆದಿಕಾರಣನಾದ ಈಶ್ವರನ ಪರವಾಗಿ ಇನ್ನೊಂದರ್ಥವನ್ನೂ ಮಾಡಲು ಸಾಧ್ಯವಿದ್ದರೂ ಸಹ, **ಸ್ವರಸತ್ವಾಭಾವಾತ್ ಗ್ರಂಥವಿಸ್ತರಭಯಾಚ್ಚ ನ ಲಿಖ್ಯತೇ**-ಅನೇಕ ಕಡೆಗಳಲ್ಲಿ ಆಧ್ಯಾತ್ಮಿಕವಾದ ಅರ್ಥವು ಸಹಜವಾಗಿ ಹೊಂದಿಕೊಳ್ಳುವುದಿಲ್ಲವಾದುದರಿಂದಲೂ, ಹೊಂದಿಕೊಳ್ಳುವ ಕಡೆಗಳಲ್ಲಿ ವಿವರಿಸಲು ಗ್ರಂಥವು ಬಹಳವಾಗಿ ವಿಸ್ತರಿಸುವುದೆಂಬ ಭೀತಿಯಿಂದಲೂ ಆ ಕಾರ್ಯವನ್ನು ಪ್ರಯತ್ನಿಸಿಲ್ಲ. ಆದರೆ, **ಯತ್ರ ದ್ವಾ ಸುಪರ್ಣಾವಿತ್ಯಾದೌ ಸ್ಫುಟಂ ಆಧ್ಯಾತ್ಮಿಕೋ ಹ್ಯರ್ಥಃ ಪ್ರತೀಯತೇ ತತ್ರ ತತ್ರ ಪ್ರತಿಪಾದಯಾಮಃ ।** ಎಲ್ಲೆಲ್ಲಿ "ದ್ವಾ ಸುಪರ್ಣಾ" ಇತ್ಯಾದಿಯಾಗಿ ಉಪನಿಷದ್ವಾಕ್ಯಗಳಲ್ಲಿ ತೋರುವ ಅರ್ಥಗಳು ಸ್ಪಷ್ಟವಾಗಿ ಆಧ್ಯಾತ್ಮಿಕವಾಗಿ ಇರುವುವೋ ಅಲ್ಲೆಲ್ಲಾ ಎರಡು ಅರ್ಥಗಳನ್ನೂ ವಿವರಿಸಲಾಗುತ್ತದೆ. ಉಳಿದೆಡೆಗಳಲ್ಲಿ ವೈಯಕ್ತಿಕವಾದ ದೇವತಾಪರವಾದ ಅರ್ಥವನ್ನು ಮಾತ್ರ ತಿಳಿಸಲಾಗುತ್ತದೆ.



**ಸಪ್ತ ಯುಂಜಂತಿ ರಥಮೇಕಚಕ್ರಮೇಕೋ ಅಶ್ವೋ ವಹತಿ ಸಪ್ತನಾಮಾ ।**
**ತ್ರಿನಾಭಿ ಚಕ್ರಮಜರಮನರ್ವಂ ಯತ್ರೇಮಾ ವಿಶ್ವಾ ಭುವನಾಧಿ ತಸ್ಥುಃ ॥ ೨ ॥**

ಒಂದೇ ಚಕ್ರವುಳ್ಳ ರಥಕ್ಕೆ ಏಳು ಅಶ್ವಗಳನ್ನು ಸೇರಿಸುತ್ತಾರೆ. ಏಳು ವಿಧಗಳಾದ ಕರೆಯಲ್ಪಡುವ ಒಂದೇ ಒಂದು ಅಶ್ವವು ಈ ರಥವನ್ನು ವಹಿಸುತ್ತದೆ. ಯಾವ ಚಕ್ರದಲ್ಲಿ ಸಮಸ್ತವಾದ ಈ ಲೋಕಗಳೆಲ್ಲವೂ ಆಶ್ರಯಿಸಿ ನಿಂತಿವೆಯೋ ಅಂತಹ ನಾಭಿತ್ರಯವುಳ್ಳ ಈ ಚಕ್ರವು ಮರಣರಹಿತವಾದುದೂ ಅಶಿಥಿಲವಾದುದೂ ಆಗಿದೆ.

ಸಪ್ತ **ಯುಂಜಂತಿ ರಥಮೇಕ ಚಕ್ರಂ ಏಕಚಾರಿಣಂ ಚಕ್ರಂ ಚಕತೇರ್ವಾ.** ಪ್ರತಿಘಾತಾರ್ಥಕವಾದ **ಚರ್** ಅಥವಾ **ಕ್ರಮು** ಧಾತುವಿನಿಂದ **ಚಕ್ರ** ಶಬ್ದವು ನಿಷ್ಪನ್ನವಾಗಿದೆ. **ಏಕಚಕ್ರ**–**ಏಕಚಾರಿಣಂ** ಒಂದೇಚಕ್ರದ ಆಧಾರದ ಮೇಲೆ ಸಂಚರಿಸತಕ್ಕ ರಥವು. ಈ ರಥವನ್ನು ಸಪ್ತರಶ್ಮಿಗಳು ವಹಿಸುತ್ತವೆಯೆಂದು ಹೇಳಿ ಇದು ಸೂರ್ಯರೂಪವಾದ ರಥವೆಂದು ತಿಳಿಸಿದ್ದಾರೆ. ಇಲ್ಲಿ **ಸಪ್ತ**ಶಬ್ದಕ್ಕೆ **ಸಪ್ತಾಸ್ಮೈ ರಶ್ಮಯೋ ರಸಾನಭಿಸನ್ನಾಮಯಂತಿ** ಇವನಿಗಾಗಿ ಸಪ್ತರಶ್ಮಿಗಳೂ ರಸಗಳನ್ನು ಹೀರುತ್ತವೆ ಎಂದಾಗಲಿ ಅಥವಾ **ಸಪ್ತೈನಮೃಷಯಃ ಸ್ತುವಂತೀತಿ ವಾ** ಸಪ್ತರ್ಷಿಗಳು ಇವನನ್ನು ಸ್ತುತಿಸುತ್ತಾರೆಂದಾಗಲಿ ಅರ್ಥವಾಗುತ್ತದೆ. ನಿರುಕ್ತಕಾರರ ಅರ್ಥವು ಸೂರ್ಯಪರವಾಗಿದೆ. ಇದನ್ನು ದುರ್ಗಾಚಾರ್ಯರು ವಿವರಿಸುತ್ತಾ, **ರಥ–ರಂಹಣಮಾದಿತ್ಯಂ, ಉದ್ಯನ್ನೇವ ಹ್ಯಸಾವಾದಿತ್ಯೋ ರಶ್ಮಿಭಿಃ ಯುಜ್ಯತೇ, ರಂಹಣಶ್ಚಾಸೌ ಮುಹೂರ್ತ-ಮಪ್ಯನವಸ್ಥಾಯಿತ್ವಾತ್ । ಏಕಚಕ್ರಂ–ಏಕ ಏವ ಹ್ಯಸಾವಂತರಿಕ್ಷೇ ಚರತಿ, ಏಕೋಽಶ್ವಃ–ಅಶನೋ ವ್ಯಾಪನಃ ಸರ್ವ ಭೂತಾನಾಂ ।** ಸರ್ವದಾ ಪರಿಭ್ರಮಣವನ್ನು ಮಾಡುತ್ತಿರುವ ಆದಿತ್ಯನು ಉದಯಿಸಿದೊಡನೆಯೇ ಸಪ್ತರಶ್ಮಿಗಳಿಂದ ಕೂಡಿಕೊಳ್ಳುತ್ತಾನೆ. ಒಂದು ಮುಹೂರ್ತವೂ ವಿಶ್ರಾಂತಿಯಿಲ್ಲದೇ ಸಂಚರಿಸುವವನಾದುದರಿಂದ ಆದಿತ್ಯನಿಗೆ **ರಥ**ವೆಂಬ ಹೆಸರು ಇಲ್ಲಿ ಅವನ ಸ್ವರೂಪವನ್ನು ತಿಳಿಸುತ್ತದೆ. ಇಂತಹ ವಿಶ್ವಸಂಚಾರಿಯಾದ ಆದಿತ್ಯನು ವಿಶ್ವವನ್ನೆಲ್ಲಾ ತಾನೊಬ್ಬನೇ ವ್ಯಾಪಿಸುತ್ತಾ ಸಪ್ತರಶ್ಮಿಗಳೊಂದಿಗೆ ಸೇರಿಕೊಳ್ಳುತ್ತಾನೆ ಎಂದು ವಿವರಿಸಿದೆ.

ಸಾಯಣರು ಈ ಪೂರ್ವಾರ್ಧಕ್ಕೆ ಸೂರ್ಯನ ರಥಪರವಾದ ಅರ್ಥವನ್ನು ಮಾಡಿದ್ದಾರೆ.

ಏಕಚಕ್ರಂ— ಏಕರಥಾಂಗೋಪೇತಂ । ಯದ್ಯಪಿ ತ್ರೀಣಿ ಚಕ್ರಾಣಿ ತಥಾಪಿ ತೇಷಾಮೇಕರೂಪತ್ವಾತ್ ಏಕಚಕ್ರಮಿತ್ಯುಚ್ಯತೇ ರಥಂ ರಂಹಣಸ್ವಭಾವಂ ಸೂರ್ಯಸ್ಯ ಸಂಬಂಧಿನಂ । ಸೂರ್ಯನ ರಥಕ್ಕೆ ಮೂರು ಚಕ್ರಗಳಿರುವುದು ಪ್ರಸಿದ್ಧವಾದರೂ ಸಹ ಅವುಗಳ ರೂಪವು ಒಂದೇ ಆದುದರಿಂದ ಇಲ್ಲಿ ಏಕಚಕ್ರವೆಂದು ಹೇಳಿದೆ.

ನಿರುಕ್ತಕಾರರು ರಥಶಬ್ದಕ್ಕೆ ಹೇಳಿರುವ ನಿರ್ವಚನದ ಪ್ರಕಾರ ಇಲ್ಲಿ ಆದಿತ್ಯಪರ್ಯಾಯವಾಗಿಯಾಗಲಿ ಅಥವಾ ಆದಿತ್ಯನ ರಥದ ಪರ್ಯಾಯವಾಗಿಯಾಗಲಿ ಈ ಪದದ ಅರ್ಥವನ್ನು ಹೇಳಬಹುದು.

**ರಥಃ ರಂಹತೇರ್ಗತಿಕರ್ಮಣಃ । ಸ್ಥಿರತೇರ್ವಾ ಸ್ಯಾದ್ವಿಪರೀತಸ್ಯ । ರಮಮಾಣೋಽಸ್ಮಿಂಸ್ತಿಷ್ಠತೀತಿ ವಾ । ರಪತೇರ್ವಾ ರಸತೇರ್ವಾ ।** (ನಿ. ೯-೧೧)

ಗತಿ ಅಥವಾ ವೇಗವೆಂದು ಅರ್ಥವನ್ನು ಕೊಡುವ **ರಂಹ್** ಧಾತುವಿನಿಂದಾಗಲಿ ಅಥವಾ ವರ್ಣವ್ಯತ್ಯಯವಾಗಿ **ಸ್ಥಿರ** ಎಂಬುದರಿಂದಾಗಲಿ, ಇದರಲ್ಲಿ ಕುಳಿತು ಹರ್ಷಪಡು ಎಂಬರ್ಥವನ್ನು ಕೊಡುವ **ರಮ್** ಧಾತುವಿನಿಂದಾಗಲಿ ಅಥವಾ ಶಬ್ದಮಾಡು ಎಂಬರ್ಥವುಳ್ಳ **ರಪ್** ಅಥವಾ **ರಸ್** ಧಾತುವಿನಿಂದಾಗಲಿ ನಿಷ್ಪನ್ನವಾಗಿದೆಯೆಂದು ನಿರುಕ್ತಕಾರರು,

**ವನಸ್ಪತೇ ವೀಡ್ವಂಗೋ ಹಿ ಭೂಯಾ ಅಸ್ಮತ್ಸಖಾ ಪ್ರತರಣಃ ಸುವೀರಃ ।**
**ಗೋಭಿಃ ಸನ್ನದ್ಧೋ ಅಸಿ ವೀಳಯಸ್ವಾಸ್ಥಾತಾ ತೇ ಜಯತು ಜೇತ್ವಾನಿ ॥** (ಋ. ಸಂ. ೬-೪೭-೨೬)

ಎಂಬ ಋಕ್ಕನ್ನುದಹರಿಸಿ ರಥದ ನಿರ್ವಚನವನ್ನು ಹೇಳಿದ್ದಾರೆ. [ಕೆಲವೆಡೆಗಳಲ್ಲಿ ರಥಗಳಲ್ಲಿ ಓಡಾಡತಕ್ಕ ಪುತ್ರಾದಿಗಳಿಗೂ ಈ ಪದದಿಂದಲೇ ನಿರ್ದೇಶಮಾಡಿದೆ]. ಪ್ರಕೃತವಾದ ಋಕ್ಕಿನಲ್ಲಿ **ಏಕಚಾರಿಣಂ ರಥಂ** ಒಬ್ಬನೇ ಪರಿಭ್ರಮಣವನ್ನು ಮಾಡುತ್ತಿರುವ ಸೂರ್ಯನೆಂದರ್ಥವು. ದುರ್ಗಾಚಾರ್ಯರು ಈ ವಾಕ್ಯವನ್ನು ವಿವರಿಸುತ್ತಾ ರಥಂ ರಂಹಣಮಾದಿತ್ಯಂ **ರಂಹಣಶ್ಚಾಸೌ ಮುಹೂರ್ತಮಪ್ಯನವಸ್ಥಾಯಿತ್ವಾತ್ ।** ಒಂದು ಕ್ಷಣವೂ ವಿಶ್ರಾಂತಿಯಿಲ್ಲದೆ ಸಂಚರಿಸುತ್ತಿರುವುದರಿಂದ ಆದಿತ್ಯನಿಗೆ ಈ ಹೆಸರೆಂದು ತಿಳಿಸಿದ್ದಾರೆ.

ಹೀಗೆರಥಶಬ್ದಕ್ಕೆ ಸೂರ್ಯನೆಂದರ್ಥಮಾಡಿದರೆ ಆಗ ಸಪ್ತಶಬ್ದಕ್ಕೆ ರಶ್ಮಿಗಳೆಂದೂ, ರೂಢವಾದ ಸೂರ್ಯನ ರಥವೆಂದರ್ಥಮಾಡಿದರೆ ಆಗ ಸಪ್ತಾಶ್ವಗಳೆಂದೂ ತಿಳಿಯಬೇಕಾಗುತ್ತದೆ. **ಸಪ್ತ ಸಂಖ್ಯಾಕಾಃ ಅಶ್ವಾಃ** ಎಂದು ಸಾಯಣರು ತಿಳಿಸುತ್ತಾರೆ.

**ಏಕೋ ಅಶ್ವೋ ವಹತಿ ಸಪ್ತನಾಮಾ-ಕಿಂ ವಸ್ತುತಃ ಸಪ್ತ ನೇತ್ಯಾಹ । ಏಕ ಏವ ಸಪ್ತಾಭಿಧಾನಃ । ಸಪ್ತಧಾ ನಮನಪ್ರಕಾರೋ ವಾ ।** ವಾಯುರೂಪವಾದ ಒಂದೇ ತತ್ತ್ವವು ಏಳುರೂಪಗಳನ್ನೂ ಧರಿಸಿ ಅಂತರಿಕ್ಷದ ಸಂಚಾರಕ್ಕೆ ಅನುಕೂಲಮಾಡಿಕೊಡುವುದರಿಂದ ಇಲ್ಲಿ ವಾಯುವಿಗೆ ಸಪ್ತನಾಮಾ ಎಂಬ ಪರ್ಯಾಯನಾಮವಿದೆ ಎಂದು ವಿವರಿಸಿದೆ. “ **ವಾಯ್ವಧೀನತ್ವಾತ್ ಅಂತರಿಕ್ಷಸಂಚಾರಾಯ** ” ಎಂಬ ಸಾಯಣರ ವ್ಯಾಖ್ಯಾನಕ್ಕೆ ಆಧಾರವಾಗಿ,

**ನಮೋ ವಾಯವೇಽಂತರಿಕ್ಷಕ್ಷಿತೇ ಲೋಕಕ್ಷಿತೇ ।** (ಛಾ. ಉ. ೨-೨೪-೯)

**ಪ್ರಜಾಪತಿರ್ಲೋಕಾನಭ್ಯತಪತ್ತೇಷಾಂ ತಪ್ಯಮಾನಾನಾಂ ರಸಾನ್ಪ್ರಾವೃಹದಗ್ನಿಂ ಪೃಥಿವ್ಯಾ ವಾಯುಮಂತರಿಕ್ಷಾದಾದಿತ್ಯಂ ದಿವಃ ।** (ಛಾ. ಉ. ೪-೧೭-೧)

ಇತ್ಯಾದ್ಯುಪನಿಷದ್ವಾಕ್ಯಗಳಲ್ಲಿ ವಾಯುವು ಅಂತರಿಕ್ಷವ್ಯಾಪಿಯಾಗಿ ಅಲ್ಲಿ ನಡೆಯತಕ್ಕ ವ್ಯವಹಾರಗಳಿಗೆಲ್ಲಾ ಆಧಾರವಾಗಿರುವುದರಿಂದ **ವಾಯುಃ ಏಕ ಏವ** ಎಂಬ ಅರ್ಥವು ಸಮಂಜಸವಾಗಿದೆ. ಜ್ಯೋತಿರೂಪವಾದ ರಶ್ಮಿಗೆ ಸಪ್ತನಾಮಾ ಎಂಬ ವಿಶೇಷಣವು ಉಚಿತವಾಗಿರುವಂತೆ ವಾಯುವಿಗೆ ಸಪ್ತನಾಮಾ ಎಂಬ ವಿಶೇಷಣವು ಹೇಗೆ ಒಪ್ಪುತ್ತದೆ ಎಂದರೆ,

**ಅಥ ವಿಶ್ವಜ್ಯೋತಿಷಮುಪದಧಾತಿ । ವಾಯುರ್ವೈ ಮಧ್ಯಮಾ ವಿಶ್ವಜ್ಯೋತಿರ್ವಾಯುರ್ಹ್ಯೇವಾಂತರಿಕ್ಷಲೋಕೇ ವಿಶ್ವಂ ಜ್ಯೋತಿರ್ವಾಯುಮೇವೈತದುಪದಧಾತಿ ತಾಮುಸಂತರ್ಹಿತಾಂ ದಿಶ್ಯಾಭ್ಯ ಉಪದಧಾತಿ ದಿಕ್ಷು ತದ್ವಾಯುಂ ದಧಾತಿ ತಸ್ಮಾತ್ಸರ್ವಾಸು ದಿಕ್ಷು ವಾಯುಃ ॥** (ಶ. ಬ್ರಾ. ೮-೩-೨-೧)

ಇತ್ಯಾದಿವಾಕ್ಯಗಳಲ್ಲಿ ವಾಯುವಿಗೂ ವಿಶ್ವಜ್ಯೋತಿಗೂ ತಾದಾತ್ಮ್ಯವನ್ನು ಹೇಳಿ ಸಕಲದಿಕ್ಕುಗಳಲ್ಲಿಯೂ ವಾಯುರೂಪವಾದ ತೇಜಸ್ಸೇವ್ಯಾಪ್ತವಾಗಿರುವುದೆಂದು ಹೇಳಿರುವುದರಿರದಲೂ ವಾಯುರೂಪವಾದ ತೇಜಸ್ಸೇ ಸಪ್ತರೂಪವಾಗಿರುವುದೆಂದು ಹೇಳುವುದರಿಂದಲೂ ಸಹ ಈ ಅರ್ಥವು ಸರಿಹೋಗುತ್ತದೆ. ನಿರುಕ್ತಕಾರರು—

**ಸಪ್ತನಾಮಾದಿತ್ಯಃ ಅಸ್ಮೈ ರಶ್ಮಯೋ ರಸಾನಭಿಸನ್ನಾಮಯಂತಿ ಸಪ್ತೈನಮೃಷಯಃ ಸ್ತುವಂತೀತಿ ವಾ ।** (ನಿ. ೪-೨೭)

ಸಪ್ತರಶ್ಮಿಗಳು ಆದಿತ್ಯನಿಗಾಗಿ ರಸವನ್ನು ಹೀರುವವೆಯೆಂದಾಗಲಿ ಅಥವಾ ಸಪ್ತರ್ಷಿಗಳು ಸ್ತುತಿಸುತ್ತಾರೆಂದಾಗಲಿ ಅರ್ಥಮಾಡಿದ್ದಾರೆ. ಸಂಕ್ಷೇಪವಾಗಿ ಹೇಳುವುದಾದರೆ, ಒಟ್ಟದಲ್ಲಿ ಪೂರ್ವಾರ್ಧಕ್ಕೆ ಸಾಯಣರ ವಿವರಣೆಯಂತೆ ಆದಿತ್ಯನ ರಥವು ಏಕಚಕ್ರವುಳ್ಳದ್ದು. ಅದನ್ನು ಸಪ್ತಾಶ್ವಗಳು ವಹಿಸುತ್ತವೆ. ಆದರೆ ಈ ಅಶ್ವಗಳು ಏಳು ಭಿನ್ನರೂಪವಾದವುಗಳಲ್ಲ. ವಾಯುರೂಪವಾದ ಒಂದೇ ಅಶ್ವಕ್ಕೆ ಏಳುಪರ್ಯಾಯನಾಮಗಳು ಎಂದೂ; ನಿರುಕ್ತಕಾರರ ವಿವರಣೆಯಂತೆ ಏಕಾಂಗಿಯಾಗಿ ಭ್ರಮಣವನ್ನು ಮಾಡುತ್ತಿರುವ ಈ ಆದಿತ್ಯನು ಉದಯಿಸಿದೊಡನೆಯೇ ಅವನನ್ನು ಸಪ್ತರಶ್ಮಿಗಳೂ ಸೇರಿಕೊಳ್ಳುತ್ತವೆ. ಏಳುವಿಧವಾದ ರಶ್ಮಿಗಳೂ ಆದಿತ್ಯನಿಗಾಗಿ ರಸವನ್ನು ಹೀರುತ್ತಾ ಆವನನ್ನು ಸೇವಿಸ್ಮತ್ತವೆಯೆಂದೂ ಮತ್ತು ಆದಿತ್ಯನು ಏಕಮಾತ್ರಪ್ರಭುವಾಗಿ ಅಂತರಿಕ್ಷದಲ್ಲಿ ಸಂಚರಿಸುತ್ತಾನೆಂದೂ ತಾತ್ಪರ್ಯವು.

ನಿರುಕ್ತಕಾರರು ಉತ್ತರಾರ್ಧವನ್ನು ವಿವರಿಸುತ್ತಾ,

**ಸಂವತ್ಸರಪ್ರಧಾನ ಉತ್ತರೋಽರ್ಧರ್ಚಸ್ತ್ರಿನಾಭಿ ಚಕ್ರಂ ತ್ರ್ಯೃತುಃಸಂವತ್ಸರೋ ಗ್ರೀಷ್ಮೋ ವರ್ಷಾ ಹೇಮಂತ ಇತಿ ।** (ನಿ. ೪-೨೬)

ಪ್ರಕೃತವಾದ ಋಕ್ಕಿನ ಉತ್ತರಾರ್ಧವು ಮುಖ್ಯವಾಗಿ ಸಂವತ್ಸರವನ್ನು ವರ್ಣಿಸುತ್ತದೆ. ಈ ಸಂವತ್ಸರವು ನಾಭಿತ್ರಯಾತ್ಮಕವಾದುದು. ಗ್ರೀಷ್ಮರ್ತು, ವರ್ಷರ್ತು ಮತ್ತು ಹೇಮಂತಋತು ಇವುಗಳೇ ನಾಭಿಗಳು. ಋತುತ್ರಯಾತ್ಮಕವಾದ ಈ ಸಂವತ್ಸರವನ್ನು **ತ್ರಿನಾಭಿಚಕ್ರಂ** ಎಂದು ವರ್ಣಿಸಿದೆ ಮತ್ತು ಸಕಲಭುವನಗಳೂ ಈ ಚಕ್ರದಲ್ಲಿ ಅಂತರ್ಗತವಾಗಿವೆ; ಸಂವತ್ಸರರೂಪವಾದ ಈ ಚಕ್ರವು ಅನಾದಿಯಾದುದು, ಕ್ಷಯರಹಿತವಾದುದು ಮತ್ತು ಅಶಿಥಿಲವಾದುದು, ಎಂದು ವಿವರಿಸಿದ್ದಾರೆ.

ಸಾಯಣರು ಪೂರ್ವಾರ್ಧದ ಅರ್ಥವನ್ನೇ ಉತ್ತರಕೂ ಅನ್ವಯಿಸುತ್ತಾ ಉತ್ತರಾರ್ಧದ **ಚಕ್ರ** ಶಬ್ದಕ್ಕೆ ವಾಯುಪರವಾಗಿಯೇ ಅರ್ಥಮಾಡಿ ವಾಯುರೂಪವಾದ ಆ ಚಕ್ರವು ಅಜರವೂ ಅನರ್ವವೂ ಆಗಿ ಅದನ್ನು ಆಶ್ರಯಿಸಿ, ಸಕಲಲೋಕಗಳೂ ನೆಲೆಸಿವೆಯೆಂದು ವಿವರಿಸಿದ್ದಾರೆ.

ಪುನಃ ಎರಡನೆಯ ಅರ್ಥವನ್ನು ಹೇಳುತ್ತಾ, **ಯದ್ವಾ ಏಕಚಕ್ರಂ ಏಕಚಾರಿಣಂ ಅಸಾಹಾಯ್ಯೇನ-ಸಂಚರಂತಂ ರಥಂ ಆದಿತ್ಯಮಂಡಲಂ ಸಪ್ತ ಯುಂಜಂತಿ** ಇತ್ಯಾದಿಯಾಗಿ ನಿರುಕ್ತಕಾರರ ಅರ್ಥವನ್ನೇ ಹೇಳಿದ್ದಾರೆ. ಆದರೆ **ತ್ರಿನಾಭಿಚಕ್ರಂ** ಎಂಬ ವಿಶೇಷಣವಿಶೇಷ್ಯಗಳಿಗೆ ಅರ್ಥಹೇಳುವುದರಲ್ಲಿ ಕೊಂಚ ಕ್ಲೇಶವನ್ನೂ ತೋರಿಸಿದ್ದಾರೆ. ಮತ್ತು ಸಪ್ತನಾಮಾ ಇತ್ಯಾದಿಪದಗಳೊಂದಿಗೆ ಅನ್ವಯವನ್ನು ಮಾಡುವುದೂ ಕಠಿಣವಾಗಿದೆ. **ಸಪ್ತ** ಮತ್ತು **ಸಪ್ತನಾಮಾ** ಎಂಬ ಎರಡು ಪದಗಳನ್ನೂ ವಿವರಿಸುತ್ತಾ, **ಸಪ್ತ** ಶಬ್ದಕ್ಕೆ **ಸರ್ಪಣಸ್ವಭಾವಾಃ ಸಪ್ತಸಂಖ್ಯಾಃ ವಾ ರಶ್ಮಯಃ ಸಪ್ತಕಾರ-ಕಾರ್ಯಾಃ ಅಸಾಧಾರಣಾಃ ಪರಸ್ಪರವಿಲಕ್ಷಣಾಃ ಷಡೃತವಃ । ಮಾಸದ್ವಯಾತ್ಮಕಾಃ ಷಟ್ ಅಪರಃ ಅಧಿಕ್ಕಮಾಸಾತ್ಮಕಃ ಇತ್ಯೇವಂ ಸಪ್ತರ್ತವೋ ಯುಂಜಂತಿ । ಏತಸ್ಯ ಕಾರ್ಯಂ ನಿರ್ವಹಂತಿ ॥** ಮಾಸದ್ವಯಾತ್ಮಕಗಳಾದ ಆರು ಋತುಗಳೂ ಇನ್ನೊಂದು ಅಧಿಕಮಾಸರೂಪವಾದ ಋತುವೂ ಸೇರಿ ಏಳು ಋತುಗಳಾದುವು. ಇವು ಸಂವತ್ಸರದ ಕಾರ್ಯವನ್ನು ಸಾಂಗವಾಗಿ ನಿರ್ವಹಿಸುತ್ತವೆ.

**ತ್ರಿನಾಭಿ**ಯೆಂದರೆ, ನಾಭಿಸ್ಥಾನೀಯಗಳಾದ ಸಂಧ್ಯಾತ್ರಯಗಳಾಗಬಹುದು, ಅಥವಾ ನಿರುಕ್ತಕಾರರ ಮತದಂತೆ ಗ್ರೀಷ್ಮ, ವರ್ಷ ಮತ್ತು ಹೇಮಂತ ಋತುಗಳಾಗಬಹುದು ಅಥವಾ ಭೂತಭವಿಷ್ಯದ್ವರ್ತಮಾನಕಾಲಗಳಾಗಬಹುದು. ಈ ಅವಯವಗಳಿಂದ ಕೂಡಿದುದೂ, ಚಕ್ರದಂತೆ ಪುನಃಪುನಃ ಪರಿಭ್ರಮಣವನ್ನು ಹೊಂದತಕ್ಕದ್ದೂ ಅಜರವೂ ಅನರ್ವವೂ ಆದದ್ದೂ ಆದ ಸಂವತ್ಸರ ಚಕ್ರವನ್ನು ಆದಿತ್ಯನು ಆವೃತ್ತಿರೂಪದಿಂದ ತಿರುಗಿಸುತ್ತಾನೆ ಎಂದರ್ಥವೆಂದು ತಿಳಿಸಿದ್ದಾರೆ ಮತ್ತು ಸಕಲವಿಶ್ವಗಳೂ ವಿಶ್ವವ್ಯವಹಾರಗಳೂ ಸಹ ಸಂವತ್ಸರರೂಪವಾದ ಈ ಕಾಲಚಕ್ರದ ಅಧೀನದಲ್ಲಿವೆಯಾದ್ದರಿಂದ **"ಯತ್ರೇಮಾ ವಿಶ್ವಾ ಭುವನಾನಿ ತಸ್ಥುಃ"** ಎಂದೂ ತಿಳಿಸಿದೆಯೆಂದು ಸಾಯಣರ ಮತವಾಗಿದೆ ಮತ್ತು ಸಂವತ್ಸರರೂಪವಾದ ಈ ಕಾಲಚಕ್ರವು **ಅಜರವೂ ಅನರ್ವವೂ** ಆಗಿದೆ. **"ಅನಾದಿನಿಧನಃ ಕಾಲಃ"** ಕಾಲವು ಆದ್ಯಂತರಹಿತವಾದುದು ಎಂಬ ಸ್ಮೃತಿವಾಕವನ್ನು ದಹರಿಸಿ ಮೇಲಿನ ವಿಶೇಷಣಗಳ ಔಚಿತ್ಯವನ್ನು ತಿಳಿಸಿದ್ದಾರೆ. ಈ ಎರಡು ಅಭಿಪ್ರಾಯಗಳನ್ನೂ ಒಟ್ಟಿಗೆ ಸೇರಿಸಿ,

**"ಸ ಏಷ ಸಂವತ್ಸರಃ ಪ್ರಜಾಪತಿಃ ಷೋಡಶಕಲಸ್ತಸ್ಯ ರಾತ್ರಯ ಏವ..............**
**ಸರ್ವಮಿದಂ ಪ್ರಾಣಭೃದನುಪ್ರವಿಶ್ಯ ತತಃ ಪ್ರಾತರ್ಜಾಯತೇ"** (ಬೃ. ಉ. ೧-೫-೧೪)

ಇತ್ಯಾದಿ ವಾಕ್ಯಗಳಲ್ಲಿ ಸಂವತ್ಸರಕ್ಕೂ ಪ್ರಜಾಪತಿಗೂ ತಾದಾತ್ಮ್ಯವನ್ನು ಹೇಳಿ ಸಕಲವಿಶ್ವದ ವ್ಯವಹಾರಗಳೂ ಅವಿಚ್ಛಿನ್ನವಾಗಿ ನಡೆಯುವುದಕ್ಕೂ ಸಕಲವೂ ಆಶ್ರಯವನ್ನು ಹೊಂದಿರುವುದಕ್ಕೂ ಸಹ ಪ್ರಜಾಪತಿರೂಪವಾದ ಸಂವತ್ಸರವೇ ಹೇತುವೆಂದು ಹೇಳಿದೆ.

**ಸಂವತ್ಸರಃ ಸಂವಸಂತೇಽಸ್ಮಿನ್ ಭೂತಾನಿ ।** ಸಕಲ ಭೂತಗಳೂ ಒಟ್ಟಿಗೆ ಸೇರಿ ಬದಕುತ್ತವೆಯಾದ್ದರಿಂದ ಸಂವತ್ಸರವೆಂಬ ಹೆಸರು ಎಂದು ನಿರುಕ್ತಕಾರರ ನಿರ್ವಚನವಿದೆ. ಸಕಲವೂ ಕಾಲಾತ್ಮವೂ ಕಾಲಾಧೀನವೂ ಆಗಿದೆಯೆಂದು ಈ ಮಂತ್ರವು ತೋರಿಸುತ್ತದೆಯೆಂದೂ, ಆದಿತ್ಯನು ಈ ಕಾಲದ ನಿಯಂತೃವೆಂದೂ, ಈ ಮಂತ್ರವು ತೋರಿಸುತ್ತದೆಂದಭಿಪ್ರಾಯವು. **"ಈದೃಶಸ್ಯ ಕಾಲಸ್ಯ ಕಾರಣಭೂತಪರಮೇಶ್ವರಪರಿಜ್ಞಾನೇನ ಮೋಕ್ಷಸದ್ಭಾವಾತ್"** ಇಂತಹ ಜಗನ್ನಿಯಾಮಕವಾದ ಕಾಲಕ್ಕೂ ಸಹ ಕಾರಣಭೂತನಾದ ಪರಮೇಶ್ವರನ ಸಾಕ್ಷಾತ್ಕಾರದಿಂದ ಮುಕ್ತಿಯೆಂದು ಸಾಯಣರು ವಿವರಿಸಿದ್ದಾರೆ.



**ಇಮಂ ರಥಮಧಿ ಯೇ ಸಪ್ತ ತಸ್ಥುಃ ಸಪ್ತಚಕ್ರಂ ಸಪ್ತ ವಹಂತ್ಯಶ್ವಾಃ । ಸಪ್ತ ಸ್ವಸಾರೋ ಅಭಿ ಸಂ ನವಂತೇ ಯತ್ರ ಗವಾಂ ನಿಹಿತಾ ಸಪ್ತ ನಾಮ ॥ ३ ॥**

(೧) ಯಾವ ಏಳು ರಶ್ಮಿಗಳು ಭ್ರಮಣಾತ್ಮಕವಾದ ಆದಿತ್ಯನನ್ನು ಬೆರೆತಿವೆಯೋ, ವ್ಯಾಪನಶೀಲಗಳಾದ ಅದೇ ಏಳು ರಶ್ಮಿಗಳು ಸಪ್ತಚಕ್ರಾತ್ಮಕವಾದುದೂ ಆದಿತ್ಯರೂಪವಾದುದೂ ಆದ ರಥವನ್ನು ವಹಿಸುತ್ತವೆ. ಯಾವ ಈ ರಥದಲ್ಲಿ ಸ್ತುತಿರೂಪವಾದ ವಾಕ್ಕುಗಳ ಸಪ್ತಸ್ವರಗಳು ಸ್ಥಾಪಿಸಲ್ಪಟ್ಟಿವೆಯೋ ಅಂತಹ ಆದಿತ್ಯರೂಪವಾದ ರಥದೊಡನೆ ಏಳುರಶ್ಮಿಗಳು ಸುತ್ತಲೂ ತಾದಾತ್ಮ್ಯಭಾವದಿಂದ ಸೇರಿಕೊಳ್ಳುತ್ತವೆ.

(೨) ಯಾವ ಅಯನಾದ್ಯವಯವಗಳು ಭ್ರಮಣಾತ್ಮಕವಾದ ಈ ಸಂವತ್ಸರವನ್ನು ಬೆರೆತಿವೆಯೋ, ಅದೇ ಏಳು ಅವಯವಗಳು ಸಂವತ್ಸರರೂಪವಾದ ಈ ರಥವನ್ನು ವಹಿಸುತ್ತವೆ. ಯಾವ ಈ ರಥದಲ್ಲಿ ಸ್ತುತಿರೂಪವಾದ ವಾಕ್ಕುಗಳ ಸಪ್ತಸ್ವರಗಳು ಸ್ಥಾಪಿಸಲ್ಪಟ್ಟಿವೆಯೋ ಅಂತಹ ಸಂವತ್ಸರರೂಪವಾದ ಈ ರಥದ ಸುತ್ತಲೂ ಋತ್ವಾದಿಗಳು ತಾದಾತ್ಮ್ಯಭಾವದಿಂದ ಸೇರಿಕೊಳ್ಳುತ್ತವೆ. (ಪರಿಭ್ರಮಣಮಾಡುತ್ತವೆ)

ಈ ಋಕ್ಕಿನ ತಾತ್ಪರ್ಯವನ್ನು ಆದಿತ್ಯನ ಪರವಾಗಿ ಒಂದು ರೀತಿಯಾಗಿಯೂ, ಸಂವತ್ಸರದ ಪರವಾಗಿ ಇನ್ನೊಂದು ರೀತಿಯಾಗಿಯೂ ಹೇಳಬಹುದು.

**ಇಮಂ ರಥಂ ಅಧಿ ಯೇ ಸಪ್ತ ತಸ್ಥುಃ**--ಇಲ್ಲಿ ಸಪ್ತ ಎಂಬುವುದಕ್ಕೆ ಆದಿತ್ಯಪರವಾದರೆ ಏಳುರಶ್ಮಿಗಳೆಂದೂ; **ಸಂವಸ್ಸರಪಕ್ಷೇ ಅಯನರ್ತುಮಾಸಪಕ್ಷದಿವಸರಾತ್ರಿಮುಹೂರ್ತಾಖ್ಯಾಃ ಸಪ್ತಅವಯವಾಃ ।** ಸಂವತ್ಸರ ಪರವಾದರೆ, ಅಯನ, ಋತು, ಮಾಸ, ಪಕ್ಷ, ದಿವಸ, ರಾತ್ರಿ ಮತ್ತು ಮುಹೂರ್ತರೂಪಗಳಾದ ಏಳು ಅವಯವಗಳೆಂದೂ ಅರ್ಥವಾಗುತ್ತದೆ. ಇಲ್ಲಿ **ಸಪ್ತ**ಶಬ್ದವನ್ನು ಐದುಕಡೆಗಳಲ್ಲಿ ಉಪಯೋಗಿಸಿದೆ. ಅದರಲ್ಲಿ ಪೂರ್ವಾರ್ಧದ ಮೂರುಕಡೆಗಳಲ್ಲಿಯೂ ಸಹ ಆದಿತ್ಯಪರವಾದರೆ ರಶ್ಮಿಗಳೆಂದೂ, ಸಂವತ್ಸರಪರವಾದರೆ ಅಯನಾದ್ಯವಯವಗಳೆಂದೂ ಅರ್ಥ. ಉತ್ತರಾರ್ಧದಲ್ಲಿ **ಸ್ವಸಾರಃ** ಎಂಬುದಕ್ಕೆ ವಿಶೇಷಣವಾಗಿ ಒಂದು ಕಡೆಯೂ, **ಗವಾಂ ಸಪ್ತನಾಮ** ಎಂದು ವಾಕ್ಯಗಳ ಸ್ವರೂಪಸಂಖ್ಯೆಯನ್ನು ಹೇಳುವುದಕ್ಕೆ ಇನ್ನೊಂದುಕಡೆಯೂ ಉಪಯೋಗಿಸಲ್ಪಟ್ಟಿದೆ.

ಸಪ್ತಚಕ್ರವೆಂಬುದು ಆದಿತ್ಯನಿಗೂ ಸಂವತ್ಸರಕ್ಕೂ ಸಮಾನವಾದ ಲಕ್ಷಣವನ್ನು ತೋರಿಸತಕ್ಕ ರೂಪಕಕ್ಕೆ ಆದಿತ್ಯ ಮತ್ತು ಸಂವತ್ಸರಗಳಿಗಿರತಕ್ಕ ತಾತ್ತ್ವಿಕಸಂಬಂಧವೂ ಲೋಕವ್ಯವಹಾರಗಳಿಗೆ ಸಮಾನವಾದ ಹೇತುತ್ವವೂ ಕಾರಣವಾಗಿದೆ. ಆದಿತ್ಯನೇ ಸಂವತ್ಸರವೆಂದೂ, ಸಂವತ್ಸರದ ಅವಯವಗಳೇ ಆದಿತ್ಯನ ಅವಯವಗಳೆಂದೂ ಹೇಳತಕ್ಕ ವಾಕ್ಯಗಳೇ ಈ ರೂಪಕದ ಸ್ವಾರಸ್ಯವನ್ನು ತಿಳಿಸುತ್ತವೆ.

**ಸಂವತ್ಸರೋವೈ ಪ್ರಜಾಪತಿಃ । ................ ಸ ಯಃ ಸ ಸಂವತ್ಸರೋಽಸೌ ಸ ಆದಿತ್ಯಃ ।**

(ಶ. ಬ್ರಾ. ೧೦--೨-೪-೩)

ಸಂವತ್ಸರವೇ ಪ್ರಜಾಪತಿಯು; ಸಂವತ್ಸರವೇ ಆದಿತ್ಯನು.

**ತ್ರಯೋದಶ ಸಂಪಾದಯತಿ । ತ್ರಯೋದಶ ವೈ ಮಾಸಾಃ ಸಂವತ್ಸರಸ್ಯ ಸಂವತ್ಸರ ಏಷ ಯ ಏಷ ತಪತ್ಯೇಷ ಉ ಪ್ರವರ್ಗ್ಯಃ ।**

(ಶ. ಬ್ರಾ. ೧೪-೧-೩-೨೮)

ತ್ರಯೋದಶಮಾಸಾತ್ಮಕವಾದ ಸಂವತ್ಸರವು ಅಂತರಿಕ್ಷದಲ್ಲಿ ಪ್ರಕಾಶಿಸುತ್ತಿರುವ ಆದಿತ್ಯನಲ್ಲದೇ ಬೇರೆಯಲ್ಲ. ಇತ್ಯಾದಿಯಾಗಿ ಅನೇಕ ವಾಕ್ಯಗಳು ಆದಿತ್ಯನಿಗೂ ಸಂವತ್ಸರಕ್ಕೂ ತಾದಾತ್ಮ್ಯವನ್ನು ಹೇಳುತ್ತವೆ. ಸಂವತ್ಸರಕ್ಕೆ ಸಪ್ತಋತುಗಳು ಅವಯವಗಳಾಗಿರುವಾಗ ಆದಿತ್ಯನಿಗೂ ಆ ಸಪ್ತಋತುಗಳೇ ಅವಯವಗಳೇ ಎಂಬ ಪ್ರಶ್ನೆಯು ಸಂಭವಿಸಿದರೆ ಅದಕ್ಕೂ ಉತ್ತರವಾಗಿ,

**ಆದಿತ್ಯಸ್ತ್ವೇವ ಸರ್ವ ಋತವಃ। ಯದೈವೋದೇತ್ಯಥ ವಸಂತೋ ಯದಾ ಸಂಗವೋಽಥ ಗ್ರೀಷ್ಮೋ ಯದಾ ಮಧ್ಯಂದಿನೋಽಥ ವರ್ಷಾ ಯದಪರಾಹ್ಣೋಽಥ ಶರದ್ಯದೈವಾ ಸ್ತಮೇತ್ಯಥ ಹೇಮಂತಸ್ತಸ್ಮಾದು ಮಧ್ಯಂದಿನ ಏವಾದಧೀತ .... .... .... .... ॥** (ಶ. ಬ್ರಾ. ೨-೨-೩-೯)

ಆದಿತ್ಯನೇ ಎಲ್ಲಾ ಋತ್ವಾತ್ಮಕನು ಅಥವಾ ಋತುಗಳಿಗೆ ಕಾರಣನು. ಅವನು ಉದಯಿಸಿದಾಗ ವಸಂತವು. ಪಶುಗಳನ್ನು ಕರೆಯತಕ್ಕ ಕಾಲವು ಪ್ರಾಪ್ತವಾದರೆ ಗ್ರೀಷ್ಮವು. ಮಧ್ಯಾಹ್ನಕಾಲವೇ ವರ್ಷರ್ತುವು. ಅಪರಾಹ್ನವು ಪ್ರಾಪ್ತವಾದರೆ ಶರತ್ಕಾಲವು. ಅಸ್ತಮಯಕಾಲವು ಪ್ರಾಪ್ತವಾದಾಗ ಹೇಮಂತವು. ಇತ್ಯಾದಿಯಾಗಿ ಋತುಗಳಿಗೆ ಕಾರಣನಾದ ಆದಿತ್ಯನಿಗೂ ಋತುಗಳಿಗೂ ತಾದಾತ್ಮ್ಯವನ್ನು ಹೇಳಿದೆ. ಅಲ್ಲದೆ—

**ಅತ್ರ ಹ ವಾ ಅಸಾವಗ್ರ ಆದಿತ್ಯ ಆಸ ತಮೃತವಃ ಪರಿಗೃಹ್ಯೈವಾತ ಊರ್ಧ್ವಾಃ ಸ್ವರ್ಗಂ ಲೋಕ ಮುಪೋದಕ್ರಾಮನ್ತ್ಸ ಏಷ ಋತುಷು ಪ್ರತಿಷ್ಠಿತಸ್ತಪತಿ।** (ಶ. ಬ್ರಾ. ೪-೨-೫-೯)

ಪೂರ್ವದಲ್ಲಿ ಆದಿತ್ಯನು ಈ ಪೃಥ್ವಿಯನ್ನಾಕ್ರಮಿಸಿದ್ದನು. ಋತುಗಳು ಅವನನ್ನು ಪರಿಗ್ರಹಿಸಿದಾಗ ಅವುಗಳೊಂದಿಗೆ ಆದಿತ್ಯನು ಅಂತರಿಕ್ಷಕ್ಕೆ ಹಾರಿದನು ಅನಂತರ ಋತುಗಳಲ್ಲಿ ದೃಢವಾಗಿ ಪ್ರತಿಷ್ಠಿತನಾಗಿ ಈಗ ಅಂತರಿಕ್ಷದಲ್ಲಿ ಪ್ರಕಾಶಿಸುತ್ತಿದ್ದಾನೆ. ಈ ಋತುಗಳೇ ಸಂವತ್ಸರದ ಅವಯವಗಳು. ಮತ್ತು ಸಂವತ್ಸರದ ಸ್ವರೂಪವನ್ನು ಅರ್ಥಮಾಡಿಕೊಳ್ಳತಕ್ಕ ಮುಖ್ಯಸಾಧನಗಳು. ಈ ಸಾಧನಗಳ ಜ್ಞಾನವಿಲ್ಲದಿದ್ದರೆ ಸಂವತ್ಸರದ ಸ್ವರೂಪವು ತಿಳಿಯುವುದಿಲ್ಲ.

**ಸಂವತ್ಸರಗ್‌ಂಹ ವೈ ಪ್ರಯಾಜೈರ್ಜಯಜ್ಜಯತಿ। ಸ ಹ ಸ್ವೇವೈನಂ ಜಯತಿ ಯೋಽಸ್ಯ ದ್ವಾರಾಣಿ ವೇದ ತಗ್‌ಂ ಹಿ ಸ ತೈರ್ಗೃಹೈಃ ಕುರ್ಯಾದ್ಯಾನಂತರತೋ ನ ವ್ಯವವಿದ್ಯಾದ್ಯ-ಥಾಸ್ಯ ತೇ ಭವಂತಿ ತಸ್ಯ ವಸಂತ ಏವ ದ್ವಾರಗ್‌ಂ ಹೇಮಂತೋ ದ್ವಾರಂ ತಂ ವಾ ಏತಗ್‌ಂ ಸಂವತ್ಸರಗ್‌ಂ ಸ್ವರ್ಗಂ ಲೋಕಂ ಪ್ರಪದ್ಯತೇ ಸರ್ವಂ ವೈ ಸಂವತ್ಸರಃ ಸರ್ವಂ ವಾ ಅಕ್ಷಯ್ಯ-ಮೇತೇನ ಹಾಸ್ಯಾಕ್ಷಯ್ಯಗ್‌ಂ ಸುಕೃತಂ ಭವತ್ಯಕ್ಷಯ್ಯೋ ಲೋಕಃ॥** (ಶ. ಬ್ರಾ. ೧-೬-೧-೧೯)

ಪ್ರಯಾಜಗಳಿಂದ ಉತ್ತಮಸ್ಥಿತಿಯನ್ನು ಪಡೆದು ಯಜಮಾನನು ಸಂವತ್ಸರದ ಸ್ವರೂಪವನ್ನು ತಿಳಿಯುತ್ತಾನೆ. ಆದರೆ ಸಂವತ್ಸರದ ದ್ವಾರಗಳ ಪರಿಚಯವನ್ನು ಹೊಂದಿದವನಿಗೆ ಮಾತ್ರ ಸಂವತ್ಸರದ ಜ್ಞಾನವು ಲಭಿಸುತ್ತದೆ. ಗೃಹದ ಒಳಗೆ ಪ್ರವೇಶಿಸಲು ಅನುಕೂಲವಾದ ದ್ವಾರವನ್ನು ತಿಳಿಯದೇ ಮನುಷ್ಯನಿಗೆ ಗೃಹದ ಪರಿಚಯವು ಪ್ರಯೋಜನವಿಲ್ಲದಿರುವಂತೆ ಸಂವತ್ಸರದ ದ್ವಾರಗಳಾದ ಋತುಗಳ ಪರಿಚಯವಿಲ್ಲದೆ ಸಂವತ್ಸರದ ಜ್ಞಾನವು ಲಭಿಸಲಾರದು. ಈ ಸಂವತ್ಸರಕ್ಕೆ ವಸಂತವೂ ಹೇಮಂತವೂ ದ್ವಾರಗಳು. ಸಂವತ್ಸರವೇ ಅಂತರಿಕ್ಷವು. ಮತ್ತು ಸಂವತ್ಸರವೇ ಸಮಸ್ತವೂ ಆಗಿದೆ. ಆದುದರಿಂದ ಸಂವತ್ಸರದ ಜ್ಞಾನವನ್ನು ಪಡೆದವನಿಗೆ ಶಾಶ್ವತವಾದ ಸ್ಥಿತಿಯು ಲಭಿಸುತ್ತದೆ.

**ದ್ವೇ ವಾವ ಬ್ರಹ್ಮಣೋ ರೂಪೇ ಕಾಲಶ್ಚಾಕಾಲಶ್ಚ। ಯ ಆದಿತ್ಯಾದ್ಯಃ ಸ ಕಾಲಃ।**
**ತಸ್ಮಾತ್ಸಂವತ್ಸರೋ ವೈ ಕಾಲಃ॥** (ಮೈತ್ರಾಯಣ ಬ್ರಾಹ್ಮಣೋಪನಿಷತ್. ೬-೧೫)

ಕಾಲ ಮತ್ತು ಅಕಾಲವೆಂಬುದು ಬ್ರಹ್ಮನ ರೂಪದ್ವಯವು. ಆದಿತ್ಯನಿಂದ ಉತ್ಪನ್ನವಾದ ಕಾಲವೇ ಸಂವತ್ಸರವು. ಇತ್ಯಾದಿಯಾಗಿ ಕೆಲವೆಡೆಗಳಲ್ಲಿ ಆದಿತ್ಯನಿಗೂ ಸಂವತ್ಸರಕ್ಕೂ ತಾದಾತ್ಮ್ಯವನ್ನು ಹೇಳುವಾಗ ಸಂವತ್ಸರದ ಅವಯವಗಳಾದ ಋತುಗಳು ಆದಿತ್ಯನ ಅವಯವಗಳೆಂದೂ, ಇನ್ನೂ ಕೆಲವೆಡೆಗಳಲ್ಲಿ ಸೂರ್ಯನಿಂದ ಸಂವತ್ಸರವು ಉತ್ಪನ್ನವಾಯಿತೆಂದು ಹೇಳುವಾಗ ಋತುಗಳೂ ಅವನಿಂದಲೇ ಉತ್ಪನ್ನವಾದವೆಂದೂ ಸಹ ತಿಳಿಸಿದೆ.

**ಯೇ ಸಪ್ತ ಅಧಿ ತಸ್ಥುಃ**—ಇಲ್ಲಿ ಸಪ್ತಶಬ್ದಕ್ಕೆ ಸಂವತ್ಸರದ ಪರವಾದರೆ ಅಯನ, ಋತು, ಮಾಸ, ಪಕ್ಷ, ದಿವಸ, ರಾತ್ರಿ, ಮುಹೂರ್ತ ಎಂಬ ಅವಯವಗಳೆಂದೂ, ಆದಿತ್ಯನ ಪರವಾದರೆ ಸಪ್ತರಶ್ಮಿಗಳೆಂದೂ ಅರ್ಥವು.

**ಸಪ್ತಚಕ್ರಂ—ಚಕ್ರಂ ಚಕತೇರ್ವಾ ಕ್ರಾಮತೇರ್ವಾ।** ಪ್ರತಿಘಾತಾತ್ಮಕವಾಗಿಯೂ, ಸಂಚರಿಸತಕ್ಕದ್ದಾಗಿಯೂ, ಅವಿಚ್ಛಿನ್ನವಾಗಿ ಪ್ರಸರಿಸತಕ್ಕದ್ದಾಗಿಯೂ ಇರುವುದರಿಂದ ರಶ್ಮಿಗೂ ಚಕ್ರವೆಂದು ಹೆಸರು. ಮತ್ತು ಇದೇ ಗುಣಗಳಿರುವುದರಿಂದ ಋತ್ವಾದ್ಯವಯಗಳಿಗೂ ಈ ಹೆಸರು. (ನಿ. ೪ ೨೬) ಚಕ್ರದಂತೆ ಪುನಃ ಪುನಃ ಆವೃತ್ತಿರೂಪವಾದ ಪರಿಭ್ರಮಣವನ್ನು ಹೊಂದತಕ್ಕದ್ದೆಂದರ್ಥ.

**ಸಪ್ತ ಅಶ್ವಾಃ ವಹಂತಿ**—ಆದಿತ್ಯನ ಪರವಾದರೆ ಏಳು ಅಶ್ವಗಳೆಂದರ್ಥ.

**ಅಯುಕ್ತ ಸಪ್ತ ಹರಿತಃ ಸಧಸ್ಥಾದ್ಯಾ ಈಂ ವಹಂತಿ ಸೂರ್ಯಂ ಘೃತಾಚೀಃ।**
**ಧಾಮಾನಿ ಮಿತ್ರಾವರುಣಾ ಯುವಾಕುಃ ಸಂ ಯೋ ಯೂಥೇವ ಜನಿಮಾನಿ ಚಷ್ಟೇ॥**
(ಋ. ಸಂ. ೭-೬೦-೩)

ಇತ್ಯಾದಿ ಋಕ್ಕುಗಳಲ್ಲಿ ಸಪ್ತಾಶ್ವಗಳನ್ನು ರಥಕ್ಕೆ ಯೋಜಿಸಿ ಸೂರ್ಯನನ್ನು ವಹಿಸುತ್ತವೆಯೆಂದು ಪ್ರಸಿದ್ಧವಾಗಿದೆ. ಮತ್ತು **ಸಪ್ತ ಹಶ್ವಾಃ** ಎಂಬುದು ಸಂವತ್ಸರದ ಪರವಾದರೆ, ವ್ಯಾಪನಶೀಲಗಳಾದ ಷಡೃತುಗಳೂ ಮತ್ತು ಅಧಿಕಮಾಸವೂ ಸೇರಿ ಸಂವತ್ಸರದ ಭಾಗಗಳು ಇವುಗಳಿಗೆ ಅಶ್ವವೆಂಬ ಪದವು ಜಗತ್ತನ್ನೆಲ್ಲಾ ವ್ಯಾಪಿಸುವುದರ ಲಕ್ಷಣವನ್ನು ತೋರಿಸುತ್ತದೆ. ಅಶ್ವವೆಂಬ ಪದವು ರೂಢವಾದ ವಾಹನಸಾಧನವಾದ ಪ್ರಾಣಿಯೆಂಬರ್ಥವನ್ನು ಕೊಡುವಾಗಲೂ ಸಹ ಅಶ್ವದ ಈ ಗುಣವನ್ನೇ ತೋರಿಸುತ್ತದೆ.

**ಅಶ್ವಃ ಕಸ್ಮಾದಶ್ನುತೇಽಧ್ವಾನಂ। ಮಹಾಶನೋ ಭವತೀತಿ ವಾ।** (ನಿ. ೨-೨೭)

ಮಾರ್ಗವನ್ನು ಅತ್ಯಂತ ವೇಗವಾಗಿ ವ್ಯಾಪಿಸುವುದರಿಂದಾಗಲಿ ಅಥವಾ ಪ್ರಭೂತವಾಗಿ ಅನ್ನವನ್ನು ಭಕ್ಷಿಸುವುದರಿಂದಾಗಲಿ ಈ ಹೆಸರೆಂದು ನಿರುಕ್ತಕಾರರ ನಿರ್ವಚನವು ಈ ಪದದ ನಿಷ್ಪತ್ತಿಯನ್ನು ತೋರಿಸುತ್ತದೆ. ಅದೇ ಅರ್ಥವು ಇಲ್ಲಿಯೂ ಸಾಧ್ಯವಾಗುತ್ತದೆ. ಸಂವತ್ಸರದ ಪರವಾಗಿ ಅಧಿಕಮಾಸದೊಡನೆ ಆರು ಋತುಗಳು ಸೇರಿ ಸಪ್ತಾಶ್ವಗಳೆಂದು ಮೇಲೆ ಹೇಳಿದೆ. ಅದನ್ನೇ ಶತಪಥದಲ್ಲಿ,

**ಸಪ್ತರ್ತವಃ ಸಂವತ್ಸರಸ್ಯ............ತ್ರಯೋದಶ ವೈ ಮಾಸಾಃ ಸಂವತ್ಸರಸ್ಯ।** (ಶ. ಬ್ರಾ. ೧೨-೩-೨-೧)

ಇತ್ಯಾದಿವಾಕ್ಯಗಳಲ್ಲಿ ಹೇಳಿದೆ. ಇಂತಹ ಸಪ್ತಾಶ್ವಗಳನ್ನೊಳಗೊಂಡ ಸಪ್ತಚಕ್ರದಿಂದಲೇ ಸಮಸ್ತ ಲೋಕವ್ಯವಹಾರವೆಲ್ಲವೂ ನಡೆಯುವುದರಿಂದ **ಸಪ್ತಚಕ್ರಂ ಸಪ್ತಾಶ್ವಾಃ ವಹಂತಿ** ಎಂದು ವರ್ಣಿಸಿದೆ.

**ಕಾಲಾತ್ಸ್ರವಂತಿ ಭೂತಾನಿ ಕಾಲಾದ್ವೃದ್ಧಿಂ ಪ್ರಯಾಂತಿ ಚ । ಕಾಲೇ ಚಾಸ್ತಂ ನಿಯಚ್ಛಂತಿ ಕಾಲೋ ಮೂರ್ತಿರಮೂರ್ತಿಮಾನ್ ॥** (ಮೈ. ಉ. ೬-೧೪)

ಆದಿತ್ಯರೂಪವಾದ ಅಥವಾ ಸಂವತ್ಸರರೂಪವಾದ ಕಾಲದಿಂದಲೇ ಸಕಲಭೂತಗಳೂ ಸಂಚರಿಸುತ್ತವೆ. ವೃದ್ಧಿಯನ್ನು ಹೊಂದುತ್ತವೆ. ಮತ್ತು ಅಸ್ತವನ್ನು ಪಡೆಯುತ್ತವೆ ಎಂಬ ಅಂಶವನ್ನು ಇಲ್ಲಿಯೂ ತಿಳಿಸಿದೆ.

**ಸಪ್ತ ಸ್ವಸಾರಃ—ಸ್ವಃ ಆದಿತ್ಯಃ । ತೇನ ಸಾರಿತಾಃ ಪರಸ್ಪರಂ ಸ್ವಸೃಭೂತಾ ವಾ ಸಪ್ತಸಂಖ್ಯಾಕ ರಶ್ಮಯಃ ಋತುವಶ್ಚ ।** ಆದಿತ್ಯನಿಂದ ಚಲಿಸುವಂತೆ ಮಾಡಲ್ಪಡುವವೂ, ಸಹೋದರಿಯ ರೂಪದಲ್ಲಿರುವುವೂ ಆದ ರಶ್ಮಿಗಳೆಂದಾಗಲಿ ಅಥವಾ ಸಪ್ತಋತುಗಳೆಂದಾಗಲಿ ಅರ್ಥವಾಗಬಹುದು. ಅಥವಾ **ಪರಸ್ಪರಸ್ವಸೃಭೂತಾಃ ದೇವನದ್ಯಃ ಅಭಿಸಂನವಂತೇ ।** ಸಪ್ತಸಂಖ್ಯಾಕವಾದ ದೇವನದಿಗಳೆಂದೂ ಅರ್ಥಮಾಡಿದೆ.

**ಅವರ್ಧಯನ್ತ್ಸುಭಗಂ ಸಪ್ತ ಯಹ್ವೀಃ ಶ್ವೇತಂ ಜಜ್ಞಾನಮರುಷಂ ಮಹಿತ್ವಾ ।**
**ಶಿಶುಂ ನ ಜಾತಮಭ್ಯಾರುರಶ್ವಾ ದೇವಾಸೋ ಅಗ್ನಿಂ ಜನಿಮನ್ವಪುಷ್ಯನ್ ॥** (ಋ. ಸಂ. ೩-೧-೪)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿತವಾಗಿರುವಂತೆಯೂ ಮತ್ತು,

**ಯಾಃ ಸಪ್ತ ಪ್ರಾಚ್ಯಃ ಸ್ರವಂತಿ ತಾಃ ಸ ಸ ಸಪ್ತಕಪಾಲೋ ಭವತಿ ಸಪ್ತ ಹಿ ತಾ ಯಾಃ ಪ್ರಾಚ್ಯಃ ಸ್ರವಂತಿ ॥** (ಶ. ಬ್ರಾ. ೯-೩-೧-೧೮)

ಇತ್ಯಾದಿ ವಾಕ್ಯಗಳಲ್ಲಿ ವರ್ಣಿತವಾಗಿರುವಂತೆಯೂ ಸಹ ಏಳು ದೇವನದಿಗಳೆಂದರ್ಥವಾಗಬಹುದೆಂದು ಸಾಯಣರು ವಿವರಿಸಿದ್ದಾರೆ.

**ಗವಾಂ ಸಪ್ತನಾಮ**—ಗೋಶಬ್ದಕ್ಕೆ ಇಲ್ಲಿ ಸ್ತುತಿರೂಪವಾದ ವಾಕ್ಯೆಂದರ್ಥ. **ಸಪ್ತಸ್ವರೋಪೇತೈಃ ಸಾಮಭಿಃ** ಸಪ್ತಸ್ವರಗಳಿಂದ ಕೂಡಿದ ಸಾಮವೆಂದರ್ಥ.

**ಪರಿ ಕೋಶಂ ಮಧುಶ್ಚುತಮವ್ಯಯೇ ವಾರೇ ಅರ್ಷತಿ । ಅಭಿ ವಾಣೀರ್ಋಷೀಣಾಂ ಸಪ್ತ ನೂಷತ ॥** (ಋ. ಸಂ. ೯-೧೦೩-೩)

ಇತ್ಯಾದಿಕಡೆಗಳಲ್ಲಿ **ಋಷೀನಾಂ ಸಪ್ತ ವಾಣೀಃ ಸಪ್ತಚ್ಛಂದಾಂಸಿ** ಎಂದು ಸಪ್ತಛಂದಸ್ಸುಗಳಿಂದ ಎಂದಾದರೂ ಆಗಬಹುದು ಅಥವಾ ಸಪ್ತಸ್ವರಾತ್ಮಕವಾದ ಸಾಮುಗಾನಗಳಿಂದ ಎಂದರ್ಥವಾಗಬಹುದು. ಲೋಕವ್ಯವಹಾರಕ್ಕೆ ಕಾರಣವಾದ ಆದಿತ್ಯನನ್ನು ಸ್ತುತಿಮಾಡತಕ್ಕ ಸಾಮುಗಾನವೆಂದರ್ಥ.



## ಕೋ ದದರ್ಶ ಪ್ರಥಮಂ ಜಾಯಮಾನಮಸ್ಥನ್ವಂತಂ ಯದನಸ್ಥಾ ಬಿಭರ್ತಿ । ಭೂಮ್ಯಾ ಅಸುರಸೃಗಾತ್ಮಾ ಕ್ವ ಸ್ವಿತ್ಕೋ ವಿದ್ವಾಂಸಮುಪ ಗಾತ್ಪ್ರಷ್ಟುಮೇತತ್ ॥ ೪ ॥

ಯಾವ ಪ್ರಾಪಂಚಿಕವ್ಯವಹಾರ ಕಾರಣದಿಂದ ಜಗತ್ತನ್ನೇ ತನ್ನ ಶರೀರವನ್ನಾಗಿ ಮಾಡಿಕೊಂಡಿರುವ ಈಶ್ವರನನ್ನು ಶರೀರರಹಿತಳಾದ ಮಾಯೆಯು ಅಥವಾ ಪ್ರಕೃತಿಯು ಧರಿಸಿದ್ದಾಳೆಯೋ, ಅಂತಹ ಅವ್ಯಾಕೃತನಾದ ಈಶ್ವರನನ್ನು ವಿಶ್ವಸೃಷ್ಟಿಗಿಂತಲೂ ಮೊದಲು ಯಾರುತಾನೇ ತಿಳಿದಿದ್ದಾರೆ? ಪ್ರಾಣದಿಂದ ಉಪಲಕ್ಷಿತವಾದ ಸೂಕ್ಷ್ಮಶರೀರವೂ, ರಕ್ತಮಾಂಸಾದಿಗಳಿಂದ ಉಪಲಕ್ಷಿತವಾದ ಸ್ಥೂಲಶರೀರವೂ ಪಾರ್ಥಿವವಾದವು. ಅವುಗಳೊಡನೆ ಸೇರಿಕೊಂಡಿರುವ ಚೇತನವು ಎಲ್ಲಿರುತ್ತದೆ? ಮತ್ತು ಅದರ ಸ್ವರೂಪವನ್ನು ತಿಳಿಯಲು ಯಾವ ಶಿಷ್ಯನು ತಾನೇ ಗುರುವನ್ನು ಸಮೀಪಿಸುತ್ತಾನೆ?

ಈ ಋಕ್ಕಿನಲ್ಲಿ ಪ್ರಕೃತಿಗೂ ಈಶ್ವರನಿಗೂ ಇರತಕ್ಕ ಸಂಬಂಧವನ್ನೂ ವ್ಯತ್ಯಾಸವನ್ನೂ ಹೇಳಿದೆ. ಈಶ್ವರನ ಅವ್ಯಾಕೃತವಾದ ಶರೀರವು ಅಗ್ರಾಹ್ಯವೂ ಅನಿರ್ವಚನೀಯವಾದುದೂ ಆಗಿರುವುದೆಂದೂ, ವ್ಯಾಕೃತವಾದ ಪ್ರಪಂಚವನ್ನು ತಿಳಿಯುವುದರ ಮೂಲಕ ಅವನ ಸ್ವರೂಪವನ್ನು ಕೊಂಚಮಟ್ಟಿಗೆ ಮಾತ್ರ ತಿಳಿಯಬಹುದೆಂದೂ ವಿವರಿಸಿದೆ. ಮತ್ತು ಚೇತನರೂಪಿಯಾದ ಆತ್ಮಕ್ಕೂ ಅಚೇತನರೂಪಿಯಾದ ದೇಹಕ್ಕೂ ಇರತಕ್ಕ ಸಂಬಂಧವೂ ಸಹ ಆಶ್ಚರ್ಯಕರವಾದುದು. ದೇಹರಹಿತವಾದ ಚೇತನವಾವುದು ಅದರ ಸ್ವರೂಪವೇನು ಎಂದು ತಿಳಿಸುವವರಾರು ಅಥವಾ ಅದನ್ನು ತಿಳಿಯತಕ್ಕ ಕುತೂಹಲವಾರಿಗಿದೆ ಎಂದು ಪ್ರಶ್ನಿಸಿದೆ. ದಾರ್ಶನಿಕವಾದ ಮತಭೇದಗಳನ್ನನುಸರಿಸಿ ಆಯಾ ಮತಗಳಿಗನುಸಾರವಾಗಿ ಈ ಸೂಕ್ತದಲ್ಲಿ ಅನೇಕ ಋಕ್ಕುಗಳಿಗೆ ಅರ್ಥಭೇಧಗಳನ್ನು ತೋರಿಸಬಹುದಾದರೂ ಸಹ ಇಲ್ಲಿ ಕೇವಲ ಸಾಯಣರ ವಿವರಣೆಯಲ್ಲಿ ಹೇಳಿರುವ ಮತವನ್ನು ಮಾತ್ರ ಅನುಸರಿಸಿ ವಿವರಿಸಲು ಪ್ರಯತ್ನಿಸಿದೆ.

**ಅನಸ್ಥಾ— ಅಸ್ಥಿರಹಿತಾ ಅಶರೀರಾ ಸಾಂಖ್ಯಪ್ರಸಿದ್ಧಾ ಪ್ರಕೃತಿಃ ವೇದಾಂತಪ್ರಸಿದ್ಧಾ ಈಶ್ವರಾಯತ್ತಾ ಮಾಯಾ ।**—ಸಾಂಖ್ಯಮತದಲ್ಲಿ ಪ್ರತಿಪಾದಿಸತಕ್ಕ ಮೂಲಪ್ರಕೃತಿಯೆಂದಾಗಲಿ ಅಥವಾ ವೇದಾಂತಿಗಳು ಪ್ರತಿಪಾದಿಸತಕ್ಕ ಮಾಯಾ ಎಂದಾಗಲಿ ಅರ್ಥವಾಗುತ್ತದೆ. ಪ್ರಕೃತಿಯಲ್ಲಿಯೂ ಅವ್ಯಾಕೃತವಾದ ಪ್ರಕೃತಿ ಮತ್ತು ವ್ಯಾಕೃತವಾದ ಪ್ರಕೃತಿಯೆಂದು ಎರಡ ವಿಧವಿದೆ. ಕೇವಲ ಸತ್ವರಜಸ್ತಮೋಗುಣಾತ್ಮಕವಾದುದೂ ಶರೀರರಹಿತವಾದುದೂ ಆದ ಪ್ರಕೃತಿಯಾಗಲಿ, ಅಶರೀರಿಯಾದ ಮಾಯೆಯಾಗಲಿ ಕಾರ್ಯಾವಸ್ಥೆಯಲ್ಲಿರತಕ್ಕ ಈಶ್ವರನಿಗೆ ಕಾರ್ಯರೂಪದ ಜಗದ್ವ್ಯವಹಾರಗಳಿಗೆ ಸಹಾಯಮಾಡುತ್ತದೆಯೆಂದರ್ಥ. [ಅಸ್ಥಿರಹಿತವಾದುದು ಅನಸ್ಥವು. ಋ. ಸಂ. ೮-೧-೩೪].

**ಅಸ್ಥನ್ವಂತಂ— ಅಸ್ಥಿಮಂತಂ ಸಶರೀರಂ ।** ಅಸ್ಥಿಯಿಂದ ಕೂಡಿದ ಶರೀರವುಳ್ಳ ಈಶ್ವರನನ್ನು ಎಂದರ್ಥ. ಅಸ್ಥಿಯಿಂದ ಕೂಡಿದ ಶರೀರವು ಈಶ್ವರನಿಗೆಲ್ಲಿಂದ ಬಂದಿತು ಎಂದು ಇಲ್ಲಿ ವಿರೋಧಾಭಾಸವನ್ನು ತೋರಿಸಿದರೆ ಅದಕ್ಕೆ ಉತ್ತರವಾಗಿ ಸಾಯಣರು **ಉಪಲಕ್ಷಣಮೇತತ್** ಇದು ಕೇವಲ ರೂಪಕವೂ ಔಪಚಾರಿಕವೂ ಆದ ವರ್ಣನೆಯಾಗಿದೆ. **ಕಾರ್ಯಭಾವಮಾಪನ್ನ ಮಿತ್ಯರ್ಥಃ**— ಕಾರ್ಯರೂಪವಾದ ಪ್ರಪಂಚ ರೂಪವನ್ನು ಧರಿಸಿದ ಎಂದರ್ಥವೆಂದು ವಿವರಿಸಿದ್ದಾರೆ. ಸೃಷ್ಟಿಗೆ ಪೂರ್ವದಲ್ಲಿ ಪ್ರಪಂಚವೂ ಈಶ್ವರನಲ್ಲೇ ಲೀನವಾಗಿ ಚಿತ್ತು, ಅಚಿತ್ತು ಎಂಬ ಭೇಧಗಳಾವುದೂ ಇಲ್ಲದೇ ಅವ್ಯಾಕೃತನಾದ ಈಶ್ವರನೊಬ್ಬನು ಮಾತ್ರವಿದ್ದುದರಿಂದ ಅಂತಹ ಅನಿರ್ವಚನೀಯವಾದ ಈಶ್ವರನ ತತ್ತ್ವವನ್ನು ತಿಳಿದವನಾರು ಎಂದು ಪ್ರಶ್ನಿಸುತ್ತಾ,

**ಕೋ ದದರ್ಶ ಪ್ರಥಮಂ ಜಾಯಮಾನಂ**—ಪ್ರಥಮದಲ್ಲಿ ಉತ್ಪನ್ನನಾದ ಈಶ್ವರನ ಸ್ವರೂಪವನ್ನು ನೋಡಿದವನಾರು ಎಂದು ಮಾನವನ ಅಲ್ಪಮತಿಯನ್ನೂ ಈಶ್ವರನ ಅಗ್ರಾಹ್ಯವಾದ ಸ್ವರೂಪವನ್ನೂ ತಿಳಿಸಿದೆ. ಸೃಷ್ಟಿಗೆ ಪೂರ್ವದಲ್ಲೂ, ಸೃಷ್ಟಿಕಾಲದಲ್ಲೂ ವಿಶ್ವತತ್ತ್ವವು ಹೇಗಿದ್ದಿತೆಂಬುದನ್ನು ಋಕ್ಸಂಹಿತೆಯಲ್ಲಿ ಈರೀತಿ ವರ್ಣಿಸಿದೆ. ಇಲ್ಲಿರುವಂತೆಯೇ ಆ ವರ್ಣನೆಯೂ ಜಿಜ್ಞಾಸಾರೂಪವಾದುದೂ, ಪ್ರಶ್ನಾತ್ಮಕವಾದುದೂ ಆಗಿದೆ.

ನಾಸದಾಸೀನ್ನೋಸದಾಸೀತ್ತದಾನೀಂ ನಾಸಿದ್ರಜೋ ನೋ ವ್ಯೋಮಾ ಪರೋಯತ್ ।
ಕಿಮಾವರೀವಃ ಕುಹ ಕಸ್ಯ ಶರ್ಮನ್ನಂಭಃ ಕಿಮಾಸೀದ್ಗಹನಂ ಗಭೀರಂ ॥ (ಋ. ಸಂ. ೧೦-೧೨೯-೧)

ಸೃಷ್ಟಿಗಿಂತಲೂ ಪೂರ್ವದಲ್ಲಿ ಸತ್ತಾಗಲಿ ಅಸತ್ತಾಗಲಿ ಇರಲಿಲ್ಲ. (ವ್ಯಕ್ತ, ಅವ್ಯಕ್ತ) ಪ್ರಕಾಶಮಾನವಾದ ಅಂತರಿಕ್ಷ ವಿರಲಿಲ್ಲ. ವಿಶ್ವವನ್ನೆಲ್ಲಾ ಯಾವುದು ವ್ಯಾಪಿಸಿತ್ತು, ಆ ಗಭೀರವಾದ ತತ್ತ್ವವಾವುದು ಎಂಬುದು ಯಾರಿಗೆ ಗೊತ್ತು ? ಆ ತತ್ತ್ವವು ಗಭೀರವಾದ ಅಪ್ಪಾಗಿರಬಹುದೇ ? (ನೀರಾಗಿರಬಹುದೇ ?)

ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ಪ್ರಕೇತಃ ।
ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂ ಚನಾಸ ॥ (ಋ. ಸಂ. ೧೦-೧೨೯-೨)

ಆ ಕಾಲದಲ್ಲಿ ಮೃತ್ಯುವಾಗಲಿ, ಅಮೃತವಾದುದಾಗಲಿ, (ಮರಣ ಅಥವಾ ಮರಣವಿಲ್ಲದಿರುವ ವಸ್ತುಗಳು) ಅಹೋರಾತ್ರಗಳ ಪರಿಜ್ಞಾನವನ್ನುಂಟುಮಾಡುವ ಸಾಧನವಾಗಲಿ ಇರಲಿಲ್ಲ. ಕೇವಲವೂ ಅದ್ವಿತೀಯವೂ ಆದ ತತ್ತ್ವವೊಂದು ಮಾತ್ರವಿದ್ದು ಅದಕ್ಕಿಂತ ಬೇರೆ ಇನ್ನಾವುದೂ ಇರಲಿಲ್ಲ.

ತಮ ಆಸೀತ್ತಮಸಾ ಗೂಳ್ಹಮಗ್ರೇಽಪ್ರಕೇತಂ ಸಲಿಲಂ ಸರ್ವಮಾ ಇದಂ । ತುಚ್ಛ್ಯೇ-
ನಾಭ್ವಪಿಹಿತಂ ಯದಾಸೀತ್ತಪಸಸ್ತನ್ಮಹಿನಾಜಾಯತೈಕಂ ॥ (ಋ. ಸಂ. ೧೦-೧೨೯-೩)

ಪ್ರಥಮದಲ್ಲಿ ಪ್ರಕಾಶವಿಲ್ಲದುದೂ ಸಾಗರದಂತೆ ಗಭೀರವಾದುದೂ ಆದ ಕೇವಲ ತಮೋರಾಶಿ ಮಾತ್ರವಿದ್ದಿತು. ಮತ್ತು ಆ ತಮಸ್ಸಿನಿಂದ ಆವೃತವಾದ ತತ್ತ್ವವು ಸದಸದ್ವಿಲಕ್ಷಣವಾದುದೂ, ಲೌಕಿಕ ಜ್ಞಾನಾತೀತವಾದುದೂ ಆಗಿದ್ದಿತು. ಮತ್ತು ಅದರ ತಪಸ್ಸಿನ ಫಲದಿಂದಲೂ ಮಾಹಾತ್ಮ್ಯದಿಂದಲೂ ಸಹ ಅದ್ವಿತೀಯವಾದ ತತ್ತ್ವದ ಆವಿರ್ಭಾವವಾಯಿತು.

ಇತ್ಯಾದಿಯಾಗಿ ಸೃಷ್ಟಿಗೆ ಪೂರ್ವಸ್ಥಿತಿಯ ವರ್ಣನೆಗಳಿರುವುದರಿಂದಲೂ ಸಾಧ್ಯವಿಲ್ಲದುದರಿಂದಲೂ ಸಹ **ಕೋ ದದರ್ಶ ಪ್ರಥಮಂ ಜಾಯಮಾನಂ** ಎಂದು ಪ್ರಶ್ನಿಸಿದೆ. ಸಾಯಣರು ಇದನ್ನು ವಿವರಿಸುತ್ತಾ **ಯದಾ ಕೇವಲಃ ಪರಮೇಶ್ವರೋ ಮಾಶಬಲಿತಃ ಸನ್ನಿದಂ ಜಗನ್ನಿರ್ಮಿತವಾನ್ ಉತ್ಪತ್ತಿಸಮಯೇ ದೇಹಾದಿಸಹಿತಸ್ಯ ಕಸ್ಯಚಿದಭಾವಾತ್ ।** ಮಾಯಾಶಕ್ತಿಯಿಂದ ವೈವಿಧ್ಯವನ್ನು ಹೊಂದಿರುವಂತೆ ಆವಿರ್ಭಸುವುದಕ್ಕೆ ಪೂರ್ವದಲ್ಲಿ ಅವನನ್ನುಳಿದು ಇನ್ನಾರೂ ಇರಲಿಲ್ಲವಾದುದುದರಿಂದ ಹೀಗೆ ಹೇಳಿದೆಯೆಂದು ತಿಳಿಸಿದ್ದಾರೆ ಹೀಗೆ ಕೇವಲ ಪರಬ್ರಹ್ಮನು ಮಾತ್ರ ಇದ್ದು ವ್ಯವಹಾರ ಪ್ರಪಂಚದ ಅಭಾವದ ಕಾಲದಲ್ಲಿ ಈಶ್ವರನ ಸ್ಥಿತಿಯನ್ನು ಉಪನಿಷದಾದಿಗಳಲ್ಲಿ ಈ ರೀತಿ ವರ್ಣಿಸಿದೆ—

ಸದೇವಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಂ । ತದ್ಧೈಕ ಅಹುರಸದೇವೇ-
ದಮಗ್ರ ಆಸೀದೇಕಮೇವಾದ್ವಿತೀಯಂ ತಸ್ಮಾದಸತಃ ಸಜ್ಜಾಯತ । (ಛಾ. ಉ. ೬ ೨-೧)

ಬ್ರಹ್ಮ ವಾ ಇದಮಗ್ರ ಆಸೀದೇಕಮೇವ ತದೇಕಂ ಸನ್ನ ವ್ಯಭವತ್ । (ಬೃ. ಉ ೧-೪-೧೧)

ಸದ್ರೂಪವಾದ (ವ್ಯಕ್ತವಾದ) ಪ್ರಪಂಚದ ಸೃಷ್ಟಿಗೆ ಪೂರ್ವದಲ್ಲಿ ಅಸದ್ರೂಪವಾದ (ಅವ್ಯಕ್ತವಾದ) ಒಂದೇ ಒಂದು ತತ್ತ್ವ ವಿದ್ದಿತು. ಅದನ್ನು ಬಿಟ್ಟು ಉಳಿದುದಾವುದೂ ಇರಲಿಲ್ಲವೆಂದು ಛಾಂದೋಗ್ಯದಲ್ಲಿಯೂ, ಈ ಏಕತತ್ತ್ವವೇ ಬ್ರಹ್ಮವೆಂಬುದಾಗಿ ಬೃಹದಾರಣ್ಯಕದಲ್ಲಿಯೂ ವರ್ಣಿಸಿ ಈ ಬ್ರಹ್ಮತತ್ತ್ವದ ಸ್ವರೂಪವು ಏನೆಂಬುದನ್ನು ಪ್ರಾಕೃತ ಪ್ರಪಂಚದಲ್ಲಿರತಕ್ಕ ಯಾರೂ ತಿಳಿಯ ಲಾರರೆಂದು ತಿಳಿಸಿದೆ.

**ಭೂಮ್ಯಾಃ ಅಸುರಸೃಕ್** ಎಂಬುದರಿಂದ ಪಾರ್ಥಿವವಾದ ಸ್ಥೂಲಶರೀರವನ್ನು ವರ್ಣಿಸಿದೆ. ಇಲ್ಲಿ **ಅಸುಃ** ಎಂದರೆ ಪ್ರಾಣವೆಂದರ್ಥ. ಪ್ರಾಣವು ಚೈತನ್ಯರೂಪವಾದರೂ ಸಹ ಪಾರ್ಥಿವವೆಂದೇ ತಿಳಿಯಬೇಕು. ಭೌತಿಕಶರೀರದಲ್ಲಿ ಸ್ಥೂಲ, ಸೂಕ್ಷ್ಮ ಎಂಬ ಎರಡು ಭೇದಗಳನ್ನು ಮಾಡಿ ಪ್ರಾಣವು ಸೂಕ್ಷ್ಮಶರೀರವೆಂದೂ ಅಸೃಗಾದಿಗಳು ಸ್ಥೂಲಶರೀರವೆಂದೂ ವಿಭಾಗಿಸಲ್ಪಟ್ಟಿದೆ. ಮತ್ತು ಪ್ರಾಣರೂಪವಾದ ಚೇತನಕ್ಕೂ ಆತ್ಮರೂಪವಾದ ಚೇತನಕೂ ಸಾಯಣರು ವ್ಯತ್ಯಾಸವನ್ನು ತೋರಿಸುತ್ತಾ,

**ಆತ್ಮಾ ವಾ ಇದಮೇಕ ಏವಾಗ್ರ ಆಸೀನ್ನಾನ್ಯತ್ಕಿಂಚನ ಮಿಷತ್ ।** (ಐ. ಆ. ೨-೪-೧)

ಎಂಬ ಐತರೇಯಾಣ್ಯಕದ (ಇದು ಐತರೆಯೋಪನಿಷತ್ತಿನ ಮೊದಲನೆಯ ವಾಕ್ಯವು) ವಾಕ್ಯವನ್ನುದಹರಿಸಿ ಇಲ್ಲಿ ಭೌತಿಕ ಪ್ರಾಣಕ್ಕೂ ಶುದ್ಧಚೇತನಕ್ಕೂ ಹೇಳಿರತಕ್ಕ ವ್ಯತ್ಯಾಸವನ್ನು ತೋರಿಸಿದ್ದಾರೆ. ಆದರೆ ಐತರೇಯಾರಣ್ಯಕದಲ್ಲಿ ಎರಡನೇ ಆರಣ್ಯಕದಲ್ಲಿ ಪ್ರಾರಂಭದಿಂದ ನಾಲ್ಕನೇ ಅಧ್ಯಾಯದವರೆಗೂ **ಪ್ರಾಣದ** ಮಹಿಮೆಯನ್ನು ತಿಳಿಸುತ್ತಾ **ಪ್ರಾಣವೇ** ಪರಬ್ರಹ್ಮವೆಂದು ತಿಳಿಸಿ ಒಡನೆಯೇ ನಾಲ್ಕನೆಯ ಅಧ್ಯಾಯದಲ್ಲಿ ಪ್ರಾಣಕ್ಕೂ ಆತ್ಮನಿಗೂ ಇರುವ ವ್ಯತ್ಯಾಸವನ್ನು ಹೇಳಿದೆ. ಸಾಂಖ್ಯತತ್ತ್ವದ ಪ್ರಕಾರ **ಪ್ರಾಣ, ಪುರುಷ** ಇವುಗಳ ಅರ್ಥವನ್ನು ತಿಳಿದರೆ ಶಾಸ್ತ್ರೀಯವಾದ ಜ್ಞಾನಕ್ಕೆ ಸಾಧನವಾದುದರಿಂದಲೂ ಮುಂದೆ ಸಾಂಖ್ಯತತ್ತ್ವದ ವಿಮರ್ಶೆಯು ಬರುವುದರಿಂದಲೂ ಆಗ ಈ ಚೇತನದ್ವಯಗಳಿಗಿರುವ ವ್ಯತ್ಯಾಸವನ್ನು ತಿಳಿಸಲಾಗುತ್ತದೆ.

**ಕಃ ವಿದ್ವಾಂಸಮುಪಗಾತ್ಪ್ರಷ್ಟುಮೇತತ್**—ಸೃಷ್ಟಿಗಿಂತಲೂ ಪೂರ್ವದಲ್ಲಿ ಏಕಮಾತ್ರವಿದ್ದುದರಿಂದ **ವಕ್ತಾ ಶ್ರೋತಾ** ಎಂಬ ವ್ಯತ್ಯಾಸವನ್ನು ತೋರಿಸುವ ನಾನಾತ್ವವಿಲ್ಲದುದರಿಂದ ಕೇಳುವವನು, ಹೇಳುವವನು ಎಂಬ ಭೇದವಿರುವುದಕ್ಕೇ ಕಾರಣವಿಲ್ಲವೆಂದರ್ಥವು.



**ಪಾಕಃ ಪೃಚ್ಛಾಮಿ ಮನಸಾ ವಿಜಾನನ್ದೇವಾನಾಮೇನಾ ನಿಹಿತಾ ಪದಾನಿ ।**
**ವತ್ಸೇ ಬಷ್ಕಯೇऽಧಿ ಸಪ್ತ ತಂತೂನ್ವಿ ತತ್ನಿರೇ ಕವಯ ಓತವಾ ಉ ॥ ೫ ॥**

ಪರಮಾರ್ಥತತ್ತ್ವವು ದೇವತೆಗಳ ಗೋಚರಕ್ಕೂ ಮೀರಿದೆ. ಆದುದರಿಂದ ಅಲ್ಪಮತಿಯುಳ್ಳವನೂ ಪರಿಪಕ್ವವಾಗಿಲ್ಲದ ಮನಸ್ಸುಳ್ಳವನೂ, ಆ ತತ್ತ್ವಾರ್ಥವನ್ನು ತಿಳಿಯಲಶಕ್ತನಾದವನೂ ಆದ ನಾನು ಅದನ್ನು ತಿಳಿಯಬೇಕೆಂದು ಪ್ರಶ್ನಿಸುತ್ತೇನೆ ಸಕಲಜಗತ್ತಿಗೂ ಆಶ್ರಯಭೂತವಾದ ಆದಿತ್ಯನಲ್ಲಿ ಮೇಧಾವಿಗಳು ಜಗದ್ರೂಪವಾದ ಹಾಸುಹೊಕ್ಕನ್ನು ರಚಿಸುವುದಕ್ಕಾಗಿ ಸಪ್ತ ಸಂಖ್ಯಾಕವಾದ ತಂತುಗಳನ್ನು ಹರಡಿದ್ದಾರೆ. ಅವು ಯಾವುವು?

**ಪಾಕಃ—ಪಕ್ತವ್ಯೋ ಭವತಿ, ವಿಪಕ್ವಪ್ರಜ್ಞಃ ।** ಪರಿಪಕ್ವವಿಲ್ಲದ ಬುದ್ಧಿಯುಳ್ಳವನು ಎಂದರೆ ತತ್ತ್ವವನ್ನು ತಿಳಿಯುವುದರಲ್ಲಿ ಕೊಂಚವೂ ಪರಿಶ್ರಮವಿಲ್ಲದೆ ಆ ವಿಷಯದಲ್ಲಿ ಗುರುಗಳಿಂದ ಶಿಕ್ಷೆಯನ್ನು ಪಡೆಯಲು ಅರ್ಹವಾದ ಬುದ್ಧಿಯುಳ್ಳವನು ಎಂದರ್ಥ. (ನಿ. ೩-೧೨) ನಿರುಕ್ತಕಾರರು, ಇದೇ ಸೂಕ್ತದ,

**ಯತ್ರಾ ಸುಪರ್ಣಾ ಅಮೃತಸ್ಯ ಭಾಗಮನಿಮೇಷಂ ವಿದಥಾಭಿಸ್ವರಂತಿ ।**
**ಇನೋ ವಿಶ್ವಸ್ಯ ಭುವನಸ್ಯ ಗೋಪಾಃ ಸ ಮಾ ಧೀರಃ ಪಾಕಮತ್ರಾ ವಿವೇಶ ॥**
(ಋ. ಸಂ. ೧-೧೬೪-೨೧)

ಎಂಬ ಋಕ್ಕನ್ನುದಹರಿಸಿ ಅಲ್ಲಿ ಧೀರನಿಗೂ ಪಾಕನಿಗೂ ವ್ಯತ್ಯಾಸವನ್ನು ತೋರಿಸುತ್ತಾ ಧೀರಃ ಎಂದರೆ ಧೀವರ್ಾ ಎಂದೂ ಪಾಕಃ ಎಂದರೆ ವಿಪಕ್ವಪ್ರಜ್ಞಃ ಎಂದೂ ವಿವರಿಸಿದ್ದಾರೆ.

ಇಲ್ಲಿ ಪರಿಪಕ್ವವಾಗಿಲ್ಲದ ಬುದ್ಧಿಯುಳ್ಳವನೂ ಆದರೆ ಜ್ಞಾನೇಚ್ಛುವೂ ಆದ ಶಿಷ್ಯನು ಈಶ್ವರತತ್ತ್ವವನ್ನು ತಿಳಿಯುವ ಉತ್ಕಟವಾದ ಆಸೆಯಿಂದ ಪ್ರಶ್ನಿಸುತ್ತಾನೆ. ಆದರೆ ಆ ತತ್ತ್ವವು ಸಾಧಾರಣವಾದ ಜ್ಞಾನಕ್ಕೆ ನಿಲುಕುವಂತುಹುದಲ್ಲ.

ಇಲ್ಲಿ ಪಾಕಶಬ್ದಕ್ಕೆ ಅರ್ಥವನ್ನು ಹೇಳುವಾಗ ಒಂದಂಶವನ್ನು ಗಮನಿಸಬೇಕು. ಇಲ್ಲಿ ಪ್ರಶ್ನಿಸುವವನು ಜಿಜ್ಞಾಸುವು ಎಂದರೆ ಜ್ಞಾನಿಯಾಗಲು ಉತ್ಕಟವಾದ ಇಚ್ಛೆಯುಳ್ಳವನು. ಇವನು ಕೇವಲ ಅಲ್ಪಮತಿಯಾದರೆ ಇವನಿಗೆ ಬ್ರಹ್ಮತತ್ತ್ವವನ್ನು ತಿಳಿಯುವ ಅಧಿಕಾರವಿರುವುದಿಲ್ಲ. ಆದುದರಿಂದ ಜ್ಞಾನವನ್ನು ತಿಳಿಯುವ ಅಧಿಕಾರಿಯೆಂದು ತಿಳಿಯಬೇಕು. ತತ್ತ್ವವನ್ನು ಗ್ರಹಿಸುವುದಕ್ಕೆ ಬೇಕಾದ ಶ್ರದ್ಧೆಯೂ ಸಂಶಯವೂ ಇರಬೇಕಾದುದು ಅಗತ್ಯವಾಗಿರುತ್ತದೆ.

ಇದರಂತೆಯೇ ಬಾಲಶಬ್ದವನ್ನೂ ಉಪಯೋಗಿಸಿ ಅನ್ನಂಭಟ್ಟರು ತರ್ಕಸಂಗ್ರಹದಲ್ಲಿ ಬಾಲಾನಾಂ ಸುಖಬೋಧಾಯ ಕ್ರಿಯತೇ ತರ್ಕಸಂಗ್ರಹಃ ಎನ್ನುವಾಗ ಬಾಲಶಬ್ದಕ್ಕೆ ಗ್ರಹಣಧಾರಣಪಟುಃ ನ ತು ಸ್ತನಂಧಯಃ। ಬಾಲಶಬ್ದಕ್ಕೆ ಸ್ತನ್ಯಪಾನವನ್ನು ಮಾಡತಕ್ಕ ಮಗುವಲ್ಲ. ಆದರೆ ತತ್ತ್ವಾರ್ಥವನ್ನು ವಿವರಿಸಿದರೆ ಗ್ರಹಣಮಾಡಲು ಶಕ್ತಿಯುಳ್ಳವನೆಂದು ಅರ್ಥಮಾಡಿದ್ದಾರೆ.

ಪಾಕಶಬ್ದಕ್ಕೆ ಸರಿಯಾದ ಅರ್ಥವಾಗಬೇಕಾದರೆ ಉಪನಿಷತ್ತುಗಳಲ್ಲಿ ಕೆಲವು ಉದಾಹರಣೆಗಳನ್ನು ತೆಗೆದುಕೊಂಡು ವಿವರಿಸಬಹುದು. ಅನೇಕ ವಿಧವಾದ ಜ್ಞಾನವನ್ನು ಸಂಪಾದಿಸಿ ಪರಮಾರ್ಥತತ್ತ್ವವನ್ನರಿಯದ ಮತಿಯನ್ನು ಪಾಕಮತಿಯೆಂದು ಕರೆಯಬಹುದೆಂದು ಛಾಂದೋಗ್ಯದಲ್ಲಿ ನಾರದರ ಉದಾಹರಣೆಯಿಂದ ತಿಳಿಯಬಹುದು.

**ಅಧೀಹಿ ಭಗವ ಇತಿ ಹೋಪಸಸಾದ ಸನತ್ಕುಮಾರಂ ನಾರದಸ್ತಂ ಹೋವಾಚ ಯದ್ವೇತ್ಥ ತೇನ ಮೋಪಸೀದ ತತಸ್ತ ಊರ್ಧ್ವಂ ವಕ್ಷ್ಯಾಮೀತಿ ಸ ಹೋವಾಚ ॥**

**ಋಗ್ವೇದಂ ಭಗವೋಽಧ್ಯೇಮಿ ಯಜುರ್ವೇದಂ ಸಾಮವೇದಮಾಥರ್ವಣಂ ಚತುರ್ಥಮಿತಿಹಾಸಪುರಾಣಂ ಪಂಚಮಂ ವೇದಾನಾಂ ವೇದಂ ಪಿತ್ರ್ಯಂ ರಾಶಿಂ ದೈವಂ ನಿಧಿಂ ವಾಕೋವಾಕ್ಯಮೇಕಾಯನಂ ದೇವವಿದ್ಯಾಂ ಬ್ರಹ್ಮವಿದ್ಯಾಂ ಭೂತವಿದ್ಯಾಂ ಕ್ಷತ್ರವಿದ್ಯಾಂ ನಕ್ಷತ್ರವಿದ್ಯಾಂ ಸರ್ಪದೇವಜನವಿದ್ಯಾಮೇತದ್ಭಗವೋಽಧ್ಯೇಮಿ ॥**

**ಸೋಽಹಂ ಭಗವೋ ಮಂತ್ರವಿದೇವಾಸ್ಮಿ ನಾತ್ಮವಿಚ್ಛ್ರುತಂ ಹ್ಯೇವ ಮೇ ಭಗವದ್ದೃಶೇಭ್ಯಃ ತರತಿ ಶೋಕಮಾತ್ಮವಿತ್ ಸೋಽಹಂ ಭಗವಃ ಶೋಚಾಮಿ ತಂ ಮಾ ಭಗವಾಞ್ಛೋಕಸ್ಯ ಪಾರಂ ತಾರಯತ್ವಿತಿ ॥**

ನಾರದನು ಸನತ್ಕುಮಾರನನ್ನು ಸಮೀಪಿಸಿ ತನಗೆ ತತ್ತ್ವೋಪದೇಶವನ್ನು ಮಾಡಬೇಕೆಂದು ಪ್ರಾರ್ಥಿಸಿದಾಗ ಸನತ್ಕುಮಾರನು "ನಿನಗೆ ಏನೇನು ಗೊತ್ತಿದೆ ಹೇಳು. ಅನಂತರ ಆ ಜ್ಞಾನಕ್ಕಿಂತಲೂ ಮೀರಿದ ಜ್ಞಾನವೇನೆಂದು ನಿನಗೆ ಹೇಳುತ್ತೇನೆ" ಎಂದು ಹೇಳಿದಾಗ ನಾರದನು "ನಾನು ಋಗ್ವೇದವನ್ನೂ, ಯಜುರ್ವೇದವನ್ನೂ, ಸಾಮವೇದವನ್ನೂ, ಅಥರ್ವವೇದವನ್ನೂ, ಇತಿಹಾಸಪುರಾಣಾದಿಗಳನ್ನೂ, ವ್ಯಾಕರಣಾದಿಗಳನ್ನೂ ಹಾಗೆಯೇ ನ್ಯಾಯಶಾಸ್ತ್ರ, ನೀತಿಶಾಸ್ತ್ರ, ಜ್ಯೋತಿಷ, ಕಲ್ಪ,

ಭೂತವಿದ್ಯಾ, ಕ್ಷತ್ರವಿದ್ಯಾ, ನಕ್ಷತ್ರವಿದ್ಯಾ, ಸರ್ಪವಿದ್ಯಾ, ನರ್ತನವಿದ್ಯಾ ಇತ್ಯಾದಿ ನಾನಾವಿದ್ಯೆಗಳನ್ನು ಅಭ್ಯಾಸಮಾಡಿದ್ದೇನೆ. ಆದರೆ ನಾನು ಆಯಾ ಶಾಸ್ತ್ರಗಳ ಮಂತ್ರೋಚ್ಚಾರಣೆಯನ್ನು ಮಾತ್ರ ತಿಳಿದಿದ್ದೇನೆ. ನನಗೆ ಆತ್ಮತತ್ತ್ವದ ಜ್ಞಾನವೇ ಇಲ್ಲ. ಆತ್ಮತತ್ತ್ವದ ಜ್ಞಾನವಿಲ್ಲದೆ ಸಂಸಾರದುಃಖದಿಂದ ಮುಕ್ತಿಯಿಲ್ಲವೆಂದು ನಿನ್ನಂತಹ ಜ್ಞಾನಿಗಳಿಂದ ತಿಳಿದಿದ್ದೇನೆ. ನೀನು ನನಗೆ ಆತ್ಮತತ್ತ್ವವನ್ನುಪದೇಶಿಸಿ ನನ್ನನ್ನು ದುಃಖದಿಂದ ಮುಕ್ತನನ್ನಾಗಿ ಮಾಡು" ಎಂದು ಪ್ರಾರ್ಥಿಸಿದನು. ನಾರದನು ಸಕಲಶಾಸ್ತ್ರಗಳನ್ನರಿತ್ತಿದ್ದರೂ ಸಹ ಆತ್ಮವಿದ್ಯೆಯನ್ನರಿಯದಿದ್ದುದರಿಂದಲೂ ಆದರೂ ಸಹ ಅವನಲ್ಲಿ ಉತ್ಕಟವಾದ ಜಿಜ್ಞಾಸೆಯೂ ಎಂದರೆ ತಿಳಿಯುವ ಆಸೆಯೂ ಇದ್ದುದರಿಂದ ಅವನನ್ನು ಪಾಕನೆಂದು ಹೇಳಿದರೆ ತಪ್ಪಾಗಲಾರದು. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಪಾಕ ಶಬ್ದಕ್ಕೆ ಅದೇ ಅರ್ಥವನ್ನು ಮಾಡಬೇಕು.

ಋಗ್ವೇದಾದಿಸಕಲಶಾಸ್ತ್ರಗಳನ್ನೂ ತಿಳಿದಿದ್ದರೂ ಸಹ ಅವುಗಳಲ್ಲೇ ಪ್ರತಿಪಾದಿತವಾಗಿರುವ ಆತ್ಮತತ್ತ್ವವು ಅರ್ಥವಾಗದಿರಲು ಕಾರಣವೇನೆಂದರೆ ಮಂತ್ರೋಚ್ಚಾರಣೆಯ ಕ್ರಮವು ಬೇರೆ, ತತ್ತ್ವಜ್ಞಾನವನ್ನು ತಿಳಿಯುವ ಆತ್ಮಪ್ರಶಾಂತಿಯು ಬೇರೆ ಎಂಬುದನ್ನು ಮೇಲಿನ ಉದಾಹರಣೆಯು ವಿವರಿಸುತ್ತದೆ. ಈ ಆಧ್ಯಾತ್ಮಿಕತತ್ತ್ವವು ದೇವತೆಗಳ ಗೋಚರಕ್ಕಿಂತಲೂ ಮೀರಿದೆಯೆಂದು, **ದೇವಾನಾಮೇನಾ ನಿಹಿತಾ ಪದಾನಿ** ಎಂಬ ವಾಕ್ಯದಿಂದ ಪ್ರಕೃತವಾದ ಋಕ್ಕಿನಲ್ಲಿ ವರ್ಣಿಸಿದೆ. ಇದನ್ನೇ ಕಠೋಪನಿಷತ್ತಿನಲ್ಲಿ,

**ನ ತತ್ರ ಸೂರ್ಯೋ ಭಾತಿ ನ ಚಂಪ್ರತಾರಕಂ ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ । ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ॥**

(ಕಠ. ೫-೧೫)

ಈ ಪರತತ್ತ್ವದ ಮುಂದೆ ಸೂರ್ಯನಾಗಲಿ, ಚಂದ್ರನಾಗಲಿ, ನಕ್ಷತ್ರಗಳಾಗಲಿ, ವಿದ್ಯುತ್ತಾಗಲಿ, ತಮ್ಮ ಪ್ರಕಾಶವನ್ನು ಬೀರಲಾಗುವುದಿಲ್ಲ. ಪಾರ್ಥಿವವಾದ ಅಗ್ನಿಯ ಪ್ರಕಾಶವಂತೂ ಎಲ್ಲಕ್ಕಿಂತಲೂ ಅಲ್ಪವಾಗುತ್ತದೆ. ಆ ತತ್ತ್ವದ ಪ್ರಕಾಶದಿಂದಲೇ ಸಕಲವೂ ಬೆಳಗುತ್ತದೆ. ಈ ಸಕಲವಿಶ್ವವೂ ಅವನ ತೇಜಸ್ಸಿನಿಂದಲೇ ಪ್ರಕಾಶವಾಗಿರುತ್ತದೆ. ಆದರೆ,

**ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಸಾ ಪಶ್ಯತಿ ಕಶ್ಚನೈನಂ ।** (ಕಠ. ೬-೯)

ಅದರ ರೂಪವನ್ನು ಭೌತಿಕವಾದ ಚಕ್ಷುಸ್ಸು ಗ್ರಹಿಸಲಾರದು. ಕೇವಲ ಭೌತಿಕವಾದ ಚಕ್ಷುಸ್ಸು ಮಾತ್ರವಿದ್ದರೆ ಯಾರೂ ಅದನ್ನು ತಿಳಿಯಲಾರರು. ಈ ಪರತತ್ತ್ವವು ದೇವತೆಗಳ ಶಕ್ತಿಗಿಂತಲೂ ಮೀರಿದುದು ಎಂಬುದಕ್ಕೆ ಕೇನೋಪನಿಷತ್ತಿನಲ್ಲಿ ಒಂದು ಕಥೆಯಿದೆ.

**ಬ್ರಹ್ಮ ಹ ದೇವೇಭ್ಯೋ ವಿಜಿಗ್ಯೇ ತಸ್ಯ ಹ ಬ್ರಹ್ಮಣೋ ವಿಜಯೇ ದೇವಾ ಅಮಹೀಯಂತ ।**
**ತ ಐಕ್ಷಂತಾಸ್ಮಾಕಮೇವಾಯಂ ವಿಜಯೋಽಸ್ಮಾಕಮೇವಾಯಂ ಮಹಿಮೇತಿ ।** (ಕೇನ. ೩-೧)

ಈ ಪರಬ್ರಹ್ಮವು ದೇವತೆಗಳಿಗಾಗಿ ವಿಜಯವನ್ನು ಗಳಿಸಿತು. ಪರಬ್ರಹ್ಮಮೂಲವಾದ ಈ ಜಯಕ್ಕಾಗಿ ದೇವತೆಗಳು ತಾವೇ ಜಯವನ್ನು ಪಡೆದರೆಂದೂ, ತಮ್ಮದೇ ಪೂರ್ಣವಾದ ಮಹಿಮೆಯೆಂದೂ ಸಹ ಅಭಿಮಾನವನ್ನು ಪಟ್ಟರು. ಈ ಬ್ರಹ್ಮತತ್ತ್ವವು ದೇವತೆಗಳ ಆಧಾರವಿಲ್ಲದ ಆ ಅಭಿಮಾನಕ್ಕಾಗಿ ಅವನಿಗೆ ವಿವೇಕವನ್ನು ಕಲಿಸಬೇಕೆಂದು,

**ತದ್ಧೈಷಾಂ ವಿಜಜ್ಞೌ ತೇಭ್ಯೋ ಹ ಪ್ರಾದುರ್ಬಭೂವ ತನ್ನ ವ್ಯಜಾನತ ಕಿಮಿದಂ ಯಕ್ಷಮಿತಿ ।**

(ಕೇನ. ೩-೨)

ಅವರ ಮುಂದೆ ಪ್ರತ್ಯಕ್ಷವಾದರೂ ಸಹ ಈ ತತ್ವದ ಸ್ವರೂಪವೇನೆಂಬುದನ್ನು ಅರಿಯದೆ ಅವರು ಚಕಿತರಾದರು.

**ತೇಽಗ್ನಿಮಬ್ರುವಞ್ಜಾತವೇದ ಏತದ್ವಿಜಾನೀಹಿ ಕಿಮೇತ್ಯದ್ಯಕ್ಷಮಿತಿ ತಥೇತಿ ॥ ತದಭ್ಯ-ದ್ರವತ್ತಮಭ್ಯವದತ್ಕೋಽಸೀತ್ಯಗ್ನಿರ್ವಾ ಅಹಮಸ್ಮೀತ್ಯಬ್ರವೀಜ್ಜಾತವೇದಾ ವಾ ಅಹಮಸ್ಮೀತಿ । ತಸ್ಮಿಗ್‌ಸ್ತ್ವಯಿ ಕಿಂ ವೀರ್ಯಮಿತ್ಯಪೀದಗ್ಂ ಸರ್ವಂ ದಹೇಯಂ ಯದಿದಂ ಪೃಥಿವ್ಯಾಮಿತಿ । ತಸ್ಮೈ ತೃಣಂ ನಿದಧಾವೇತದ್ದಹೇತಿ ತದುಪಪ್ರೇಯಾಯ ಸರ್ವಜವೇನ ತನ್ನ ಶಶಾಕ ದಗ್ಧುಂ ಸ ತತ ಏವ ನಿವವೃತೇ ನೈತದಶಕಂ ವಿಜ್ಞಾತುಂ ತದೇತದ್ಯಕ್ಷಮಿತಿ ।** (ಕೇನ. ೩-೩ ರಿಂದ ೬)

ಆಗ ದೇವತೆಗಳು ಅಗ್ನಿಯನ್ನು ಕುರಿತು ಎಲೈ ಜಾತವೇದಸ್ಸೇ (ಸಕಲವನ್ನೂ ತಿಳಿದವನೇ) ಈ ಅಪ್ರಾಕೃತವಾದ ತತ್ತ್ವವಾವುದೆಂಬುದನ್ನು ತಿಳಿದುಕೊ ಎಂದಾಗ ಅಗ್ನಿಯು ಒಪ್ಪಿಕೊಂಡು ಆ ಯಕ್ಷವಿದ್ದಕಡೆಗೆ ಓಡಿದನು. ಆಗ ಆ ಯಕ್ಷವು ಅಗ್ನಿಯನ್ನು ನಿನಾರೆಂದು ಕೇಳಿತು. ಅದಕ್ಕೆ ಅಗ್ನಿಯು ನಾನು ಅಗ್ನಿಯು, ನಾನು ಜಾತವೇದಸ್ಸು ಎಂದು ಉತ್ತರವನ್ನು ಕೊಟ್ಟನು. ನಿನ್ನ ಶಕ್ತಿಯೆನು ಎಂಬ ಪ್ರಶ್ನೆಗ "ನಾನು ಈ ಲೋಕದಲ್ಲಿರುವ ಸಮಸ್ತವನ್ನೂ ದಹಿಸಬಲ್ಲೆನು" ಎಂದನು. ಆಗ ಆ ಯಕ್ಷವು ಅಗ್ನಿಯಮುಂದೆ ಒಂದು ಹುಲ್ಲಿನಕಡ್ಡಿಯನ್ನಿಟ್ಟು ಇದನ್ನು ಸುಡು ಎಂದಿತು. ಅಗ್ನಿಯು ತನ್ನ ಸರ್ವಶಕ್ತಿಯನ್ನುಪಯೋಗಿಸಿದರೂ ಸಹ ಅದನ್ನು ಸುಡಲಾಗಲಿಲ್ಲ. ಆಗ ಅಗ್ನಿಯು ಹಿಂತಿರುಗಿ "ಈ ಯಕ್ಷದ ಸ್ವರೂಪವೇನೆಂಬುದನ್ನು ತಿಳಿಯಲು ನನ್ನಿಂದಾಗಲಿಲ್ಲ" ಎಂದು ಒಪ್ಪಿಕೊಂಡನು.

**ಅಥ ವಾಯುಮಬ್ರುವನ್ವಾಯವೇತದ್ವಿಜಾನೀಹೀ ಕಿಮೇತದ್ಯಕ್ಷಮಿತಿ ತಥೇತಿ । ತದ-ಭ್ಯದ್ರವತ್ತಮಭ್ಯವದತ್ಕೋಽಸೀತಿ ವಾಯುರ್ವಾ ಅಹ ಮಸ್ಮೀತ್ಯಬ್ರವೀನ್ಮಾತರಿಶ್ವಾ ವಾ ಅಹ-ಮಸ್ಮೀತಿ ॥ ತಸ್ಮಿಗ್‌ಸ್ತ್ವಯಿ ಕಿಂ ವೀರ್ಯಮಿತ್ಯಪೀದಗ್ಂ ಸರ್ವಮಾದದೀಯ ಯದಿದಂ ಪೃಥಿ-ವ್ಯಾಮಿತಿ ॥ ತಸ್ಮೈ ತೃಣಂ ನಿದಧಾವೇತದಾದತ್ಸ್ವೇತಿ ತದುಪಪ್ರೇಯಾಯ ಸರ್ವಜವೇನ ತನ್ನ ಶಶಾಕದಾತುಂ ಸ ತತ ಏವ ನಿವವೃತೇ ನೈತದಶಕಂ ವಿಜ್ಞಾತುಂ ಯದೇತದ್ಯಕ್ಷಮಿತಿ ॥**

(ಕೇನ. ೩-೭ ರಿಂದ ೧೦)

ಅನಂತರ ದೇವತೆಗಳು ವಾಯುವನ್ನು ಕುರಿತು "ಎಲೈ ವಾಯುವೇ, ಆ ಯಕ್ಷದ ಸ್ವರೂಪವನ್ನು ತಿಳಿದುಕೊಂಡು ಬಾ" ಎಂದಾಗ ವಾಯುವು ಒಪ್ಪಿಕೊಂಡು ಅದರ ಬಳಿಗೆ ಓಡಿದನು. ಅದು "ನೀನಾರು" ಎಂದಾಗ "ನಾನು ವಾಯುವು ನಾನೇ ಮಾತರಿಶ್ವ"ನೆಂದನು. "ನಿನ್ನಲ್ಲಿರುವ ವೀರ್ಯವೇನು?" ಎಂದು ಪ್ರಶ್ನಿಸಿದಾಗ ಈ "ಪೃಥ್ವಿಯಲ್ಲಿರತಕ್ಕ ಸಕಲವನ್ನೂ ವಹಿಸಬಲ್ಲೆನು" ಎಂದು ಉತ್ತರವನ್ನು ಕೊಟ್ಟನು. ಆಗ ಯಕ್ಷವು "ಇದನ್ನು ಎತ್ತು" ಎಂದು ಅವನಮುಂದೆ ಒಂದು ಹುಲ್ಲುಕಡ್ಡಿಯನ್ನಿಟ್ಟಾಗ ವಾಯುವು ತನ್ನ ಎಲ್ಲಾ ವೇಗವನ್ನೂ ಉಪಯೋಗಿಸಿ ಪ್ರಯತ್ನಪಟ್ಟನು. ಆದರೆ ಅದನ್ನು ಎತ್ತಿಕೊಳ್ಳಲಾಗಲಿಲ್ಲ. ಅವನೂ ಸಹ ಆ ಯಕ್ಷದ ಸ್ವರೂಪವನ್ನರಿಯಲಾಗದೇ ಅಲ್ಲಿಂದ ಹಿಂತಿರುಗಿದನು.

**ಅಥೇಂದ್ರಮಬ್ರುವನ್ ಮಘವನ್ನೇತದ್ವಿಜಾನೀಹಿ ಕ್ಷಿಮೇತದ್ಯಕ್ಷಮಿತಿ ತಥೇತಿ ತದಭ್ಯದ್ರವತ್ತಸ್ಮಾತ್ತಿರೋದಧೇ ॥ ಸ ತಸ್ಮಿನ್ನೇವಾಕಾಶೇ ಸ್ತ್ರಿಯಮಾಜಗಾಮ ಬಹುಶೋಭಮಾನಾಮು-ಮಾಗ್ಂ ಹೈಮವತೀಂ ತಾಗ್ಂ ಹೋವಾಚ ಕ್ಷಿಮೇದ್ಯಕ್ಷಮಿತಿ ॥** (ಕೇನ. ೩-೧೦-೧೨)

ಅನಂತರ ದೇವತೆಗಳು ಈ ಯಕ್ಷದ ಸ್ವರೂಪವನ್ನು ತಿಳಿಯುವುದಕ್ಕಾಗಿ ಇಂದ್ರನನ್ನು ಕಳುಹಲು ಅವನು ಒಪ್ಪಿಕೊಂಡು ಅದರಬಳಿ ಓಡಿದನು. ಆಗ ಅದು ಅವನಿಂದ ಮರೆಯಾಯಿತು. ಅನಂತರ ಅದೇ ಆಕಾಶದಲ್ಲಿ ಅತ್ಯಂತ ಆಕರ್ಷಕವಾಗಿ ಪ್ರಕಾಶಿಸುತ್ತಿದ್ದ ಒಬ್ಬ ಸ್ತ್ರೀವ್ಯಕ್ತಿಯನ್ನು ಸಮೀಪಿಸಿ ಆಕೆಯನ್ನು "ಈ ಯಕ್ಷವು ಯಾವುದು?" ಎಂದಾಗ ಆಕೆಯು,

**ಸಾ ಬ್ರಹ್ಮೇತಿ ಹೋವಾಚ ಬ್ರಹ್ಮಣೋ ವಾ ಏತದ್ವಿಜಯೇ ಮಹೀಯಧ್ವಮಿನಿ ತತೋ ಹೈವ ವಿದಾಂಚಕಾರ ಬ್ರಹ್ಮೇತಿ ॥** (ಕೇನ. ೪-೧)

ಇದೇ ಪರಬ್ರಹ್ಮವು. ಇದರ ಜಯದಿಂದಲೇ ದೇವತೆಗಳ ಜಯವು. ಇದರ ಶಕ್ತಿಯಿಂದಲೇ ನಿಮ್ಮ ಮಹಿಮೆಯು ಎಂದು ತಿಳಿಸಿದನಂತರ ಅವನು ಅದನ್ನೇ ಬ್ರಹ್ಮವೆಂದರಿತುಕೊಂಡನೆಂದು ಕಥೆಯು, ಋಕ್ಸಂಹಿತೆಯ ಪ್ರಕೃತವಾದ ಋಕ್ಕಿನಲ್ಲಿ **ದೇವಾನಾಮೇನಾ ನಿಹಿತಾ ಪದಾನಿ** ಎಂಬ ವಾಕ್ಯಕ್ಕೂ, ಸಾಯಣರು ಇದೇ ವಾಕ್ಯಕ್ಕೆ **ದೇವಾನಾಪಿ ಗೂಢಾನಿ** ಎಂದು ವಿವರಿಸಿರುವುದಕ್ಕೂ ತಕ್ಕ ಉದಾಹರಣೆಯಾಗಿದೆ.

**ಸಪ್ತತಂತೂನ್**—ಸಪ್ತತಂತುವೆಂದರೆ ಯಜ್ಞವಾಗಬಹುದು ಅಥವಾ ಸಪ್ತಚ್ಛಂದಸ್ಸುಗಳು ಅಥವಾ ಸ್ತೋತ್ರವಾಗಬಹುದು ಸಾಯಣರು,

**ಇಮಂ ನೋ ಅಗ್ನ ಉಪ ಯಜ್ಞಮೇಹಿ ಪಂಚಯಾಮಂ ತ್ರಿವೃತಂ ಸಪ್ತತಂತುಂ ।**
**ಅಸೋ ಹವ್ಯವಾಳುತ ನಃ ಪುರೋಗಾ ಜ್ಯೋಗೇವ ದೀರ್ಘಂ ತಮ ಆಶಯಿಷ್ಠಾಃ ॥**
(ಋ. ಸಂ. ೧೦-೧೨೪-೧)

ಎಂಬ ಋಕ್ಕಿನಲ್ಲಿ **ಸಪ್ತತಂತು**ವೆಂಬ ಪದದ ಅರ್ಥವನ್ನು ವಿವರಿಸುತ್ತಾ, **ಸಪ್ತತಂತವಸ್ತನಿತಾರಃ ಕರ್ಮಣಾಂ ವಿಸ್ತಾರಯಿತಾರೋಹೋತ್ರಾದ್ಯಾಃ ಸಪ್ತವಷಟ್ಕರ್ತಾರೋ ಯಸ್ಯ**—ಹೋತೃವೇ ಮುಂತಾದ ಏಳು ವಷಟ್ಕರ್ತೃಗಳು ಭಾಗವಹಿಸಿ ನಿರ್ವಹಿಸತಕ್ಕ ಯಜ್ಞವೆಂದಾಗಲಿ ಅಥವಾ **ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶೀ, ವಾಜಪೇಯ, ಅತಿರಾತ್ರ** ಮತ್ತು **ಅಪ್ತೋರ್ಯಾಮ** ಎಂಬ ಏಳು (ಕರ್ಮಗಳುಳ್ಳ) ಯಜ್ಞವೆಂದಾಗಲಿ ವಿವರಿಸಿದ್ದಾರೆ ಮತ್ತು,

**ಮಾಂ ದೇವಾ ದಧಿರೇ ಹವ್ಯವಾಹಮಪಮ್ಲುಕ್ತಂ ಬಹು ಕೃಚ್ಛ್ರಾ ಚರಂತಂ ।**
**ಅಗ್ನಿರ್ವಿದ್ವಾನ್ಯಜ್ಞಂ ನಃ ಕಲ್ಪಯಾತಿ ಪಂಚಯಾಮಂ ತ್ರಿವೃತಂ ಸಪ್ತತಂತುಂ ॥**
(ಋ. ಸಂ. ೧೦-೫೨-೪)

ಎಂಬ ಋಕ್ಕಿನಲ್ಲಿ **ಸಪ್ತಭಿಶ್ಛಂದೋಮಯೈಃ ಸ್ತುತಿಭಿಃ ವಿಸ್ತೃತಂ ಯಜ್ಞಂ** ಎಂದು ವಿವರಿಸಿದ್ದಾರೆ. ಎರಡು ಡೆಗಳಲ್ಲಿಯೂ **ಸಪ್ತತಂತು**ವೆಂದರೆ ಯಜ್ಞವೆಂದರ್ಥವಾಗುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಯಜ್ಞವೆಂದರ್ಥವಾಗುತ್ತದೆ

**ಬಷ್ಕಯೇ—ಬಡಿತಿ ಸತ್ಯನಾಮ । ತತ್ಕಷತಿ ಇತಿ ಬಷ್ಕಯಃ । ಆದಿತ್ಯಃ ಯದ್ವಾ ಬಷ್ಕಯೋ ನಾಮ. ಏಕಹಾಯನೋ ವತ್ಸಃ ।** ಈ ಪದಕ್ಕೆ ಆದಿತ್ಯನೆಂದಾಗಲಿ ಅಥವಾ ಒಂದು ವರ್ಷದ ಕರುವೆಂದಾಗಲಿ ಅರ್ಥವಾಗುತ್ತದೆ. ಆದರೆ, ಇಲ್ಲಿ **ಪುನರಪಿ ವತ್ಸಶಬ್ದಸ್ಯ ಪೃಥಙ್ನಿರ್ದೇಶಾತ್ ಬಷ್ಕಯಶಬ್ದೇನ ತತ್ಕಾಲಮಾತ್ರಂ ಲಕ್ಷ್ಯತೇ । ತಸ್ಮಿನ್ನಾದಿತ್ಯೇ ।** ವತ್ಸಶಬ್ದವು ಪುನಃ ಪಠಿತವಾಗಿರುವುದರಿಂದ ಬಷ್ಕಯ ಶಬ್ದದಿಂದ ಕಾಲದ ಅವಧಿಯು ಮಾತ್ರ ಸೂಚಿತವಾಗುತ್ತದೆ. ಅಂತಹ ಆದಿತ್ಯನಲ್ಲಿ ಎಂದೇ ಅರ್ಥವು. **ತಸ್ಮಿನ್ನಾದಿತ್ಯೇ ಸಪ್ತತಂತೂನ್ವಿತತ್ನಿರೇ** ಎಂದು ಅನ್ವಯವನ್ನು

ಮಾಡಿದೆ. ಅದರ ಉದ್ದಿಶ್ಯವನ್ನು ವಿವರಿಸುತ್ತಾ, ಓತವೈ—ಸಪ್ತಸ್ತೋಮಸಂಸ್ಥಾರೂಪತಿರ್ಯಕ್ತಂತುಸಂತಾನಾಯ ಯಜ್ಞನಿರ್ಮಾಣಾಯ ಇತ್ಯರ್ಥಃ । ಯಜ್ಞಾನಾಂ ಸ್ಥಿತೇಃ ಸೂರ್ಯಾಧೀನತ್ವಾದಿತಿ ಭಾವಃ । ಯಜ್ಞಯಾಗಾದಿಗಳೆಲ್ಲವೂ ಸೂರ್ಯನ ಅಧೀನವಾಗಿರುವುದರಿಂದ ಅಂತಹ ಸೂರ್ಯನನ್ನುದ್ದೇಶಿಸಿ ಯಜ್ಞಕರ್ಮಗಳನ್ನು ನೆರವೇರಿಸುತ್ತಾರೆಂದರ್ಥವು.

ಅನಂತರ ಪೂರ್ವಾರ್ಧದಲ್ಲಿ ಹೇಳಿರುವ ಜಿಜ್ಞಾಸೆಗೂ, ಉತ್ತರಾರ್ಧದಲ್ಲಿ ಹೇಳಿರುವ ಕರ್ಮಕ್ಕೂ ಸಂಬಂಧವನ್ನು ತೋರಿಸುತ್ತಾ ಈದೃಶಂ ತತ್ತ್ವಂ ಪೃಚ್ಛಾಮೀತ್ಯರ್ಥಃ ಇಂತಹ ತತ್ತ್ವವನ್ನು ತಿಳಿಯಬೇಕೆಂದು ಅಪೇಕ್ಷಿಸುತ್ತೇನೆ ಎಂಬುದರಲ್ಲಿ ತಾತ್ಪರ್ಯವೆಂದು ವಿವರಿಸಿದ್ದಾರೆ. ಇದೇ ಸಂಬಂಧವನ್ನು ಛಾಂದೋಗ್ಯದಲ್ಲಿಯೂ ತೋರಿಸುತ್ತಾ,

**ಅಥ ಹೈನಂ ಗಾರ್ಹಪತ್ಯೋಽನುಶಶಾಸ ಪೃಥಿವ್ಯಗ್ನಿರನ್ನಮಾದಿತ್ಯ ಇತಿ ಯ ಏಷ ಆದಿತ್ಯೇ ಪುರುಷೋ ದೃಶ್ಯತೇ ಸೋಽಹಮಸ್ಮಿ ಸ ಏವಾಹಮಸ್ಮೀತಿ ।** (ಛಾಂ. ಉ. ೪-೧೧-೧)

ಗಾರ್ಹಪತ್ಯಾಗ್ನಿಯೇ ಆದಿತ್ಯನೆಂದೂ, ಆದಿತ್ಯನಲ್ಲಿ ಕಾಣಿಸಿಕೊಳ್ಳುವ ಪುರುಷನು ಗಾರ್ಹಪತ್ಯಾಗ್ನಿಯ ರೂಪವೆಂದೂ ಯಜ್ಞಾಗ್ನಿಗೂ ಆದಿತ್ಯನಿಗೂ ತಾದಾತ್ಮ್ಯವನ್ನು ಹೇಳಿದೆ

**ಸ ಯ ಏತಮೇವಂ ವಿದ್ವಾನಾದಿತ್ಯಂ ಬ್ರಹ್ಮೇತ್ಯುಪಾಸ್ತೇಽಭ್ಯಾಶೋ ಹ ಯದೇನಂ ಸಾಧವೋ ಘೋಷಾ ಆ ಚ ಗಚ್ಛೇಯುರುಪ ಚ ನಿಮ್ರೇಡೇರನ್ನಿಮ್ರೇಡೇರನ್ ॥**

(ಛಾ. ಉ. ೩-೧೯-೪)

ಈ ಜಗತ್ತಿನ ಸಕಲವ್ಯಾಪಾರಗಳಿಗೂ ಕಾರಣನಾಗಿರುವ ಆದಿತ್ಯನನ್ನೇ **ಅಸಾವಾದಿತ್ಯೋಬ್ರಹ್ಮೇತಿ** (ತೈ. ಆ. ೨-೧) ಬ್ರಹ್ಮನೆಂದು ಉಪಾಸನೆಮಾಡಿದರೆ ಆಗ ಆಪ್ಯಾಯಮಾನವಾದ ಘೋಷಗಳು ಪುರುಷನನ್ನು ಹರ್ಷಗೊಳಿಸುತ್ತವೆ. ತೃಪ್ತಿಗೊಳಿಸುತ್ತವೆಯೆಂದು ಶ್ರುತಿಯಿರುವುದರಿಂದ ಇಂತಹ ಆದಿತ್ಯರೂಪದ ಬ್ರಹ್ಮನನ್ನು ಯಾಗಾದಿಗಳಿಂದ ಮೇಧಾವಿಗಳು ಆರಾಧಿಸಿದರು. ನಾನೂ ಸಹ ಅವನ ಸ್ವರೂಪವನ್ನು ತಿಳಿಯಲಪೇಕ್ಷಿಸುತ್ತೇನೆ ಎಂದು ಜ್ಞಾನೇಚ್ಛೆಯನ್ನು ತಿಳಿಸಿದೆ.



**ಅಚಿಕಿತ್ವಾಞ್ಚಿಕಿತುಷಶ್ಚಿದತ್ರ ಕವೀನ್ಪೃಚ್ಛಾಮಿ ವಿದ್ಮನೇ ನ ವಿದ್ವಾನ್ ।**
**ವಿ ಯಸ್ತಸ್ತಂಭ ಷಳಿಮಾ ರಜಾಂಸ್ಯಜಸ್ಯ ರೂಪೇ ಕಿಮಪಿ ಸ್ವಿದೇಕಂ ॥ ೬ ॥**

ದೇವತಾತತ್ತ್ವವನ್ನರಿಯದೆ ಈ ತತ್ತ್ವಾರ್ಥದ ವಿಷಯದಲ್ಲಿ ಜ್ಞಾನವನ್ನು ಪಡೆಯುವುದಕ್ಕಾಗಿ ಇದನ್ನು ತಿಳಿದಿರುವ ಪ್ರಾಜ್ಞರನ್ನು ಪ್ರಶ್ನಿಸುತ್ತೇನೆಯೇ ವಿನಹ, ನಾನು ತಿಳಿದವನಾಗಿ ಅವರನ್ನು ಪರೀಕ್ಷಿಸುವ ಉದ್ದೇಶದಿಂದ ಕೇಳುತ್ತಿಲ್ಲ. ಯಾವ ಪರಮಪುರುಷನು ಈ ಆರು ಲೋಕಗಳನ್ನೂ ವಿಶೇಷರೀತಿಯಿಂದ ಧರಿಸಿಯೂ ನಿಯಮಿಸಿಯೂ ಇದ್ದಾನೆಯೋ ಅಂತಹ ಜನ್ಮರಹಿತನಾದ ಪರಮಪುರುಷನ ಸ್ವರೂಪದಲ್ಲಿ ಅದ್ವೈತವಾಗಿರತಕ್ಕ ತತ್ತ್ವವಾವುದು ? ಅದರ ಸ್ವರೂಪವೇನು ?

ಈ ಋಕ್ಕಿನ ಪೂರ್ವಾರ್ಧದಲ್ಲಿ ಪ್ರಷ್ಟೃವು ತನ್ನ ವಿನಯವನ್ನು ವ್ಯಕ್ತಪಡಿಸುತ್ತಾನೆ. ವಿನಯವಿಲ್ಲದೆ ಜ್ಞಾನಾಧಿಗಮವು ಸಾಧ್ಯವಿಲ್ಲವೆಂಬುದು ಸಿದ್ಧವು. ವಿಶ್ವತತ್ತ್ವದಲ್ಲಿ ಸಮ್ಯಗ್‌ಜ್ಞಾನವಿಲ್ಲದೇ ಕೇವಲ ಕೆಲವು ಭಿನ್ನರೂಪವಾದ ಅಂಶಗಳನ್ನು ಮಾತ್ರ

ವರಿತು ತಾನೇ ತತ್ತ್ವಜ್ಞನೆಂದು ಅಭಿಮಾನವನ್ನು ಹೊಂದಿದ್ದವರೆಲ್ಲರೂ ಕೊನೆಗೆ ನಮ್ರತೆಯನ್ನೇ ಆಶ್ರಯಿಸಿ ಗುರುವಿನಿಂದ ಕ್ರಮವಾದ ಉಪದೇಶವನ್ನು ಪಡೆಯಬೇಕಾಯಿತು. ಬೃಹದಾರಣ್ಯಕದಲ್ಲಿ ದೃಪ್ತಬಾಲಾಕಿಯ ಕಥೆಯೂ, ಛಾಂದೋಗ್ಯದಲ್ಲಿ ಶ್ವೇತಕೇತು ಆರುಣಿಯ ಕಥೆಯೂ ಇದಕ್ಕೆ ಉದಾಹರಣೆಗಳು.

**ದಪ್ತಬಾಲಾಕಿರ್ಹಾನೂಚಾನೋ ಗಾರ್ಗ್ಯ ಆಸ ಸ ಹೋವಾಚಾಜಾತಶತ್ರುಂ ಕಾಶ್ಯಂ ಬ್ರಹ್ಮ ತೇ ಬ್ರವಾಣೀತಿ ॥** (ಬೃ. ಉ. ೨-೧-೧)

ಬ್ರಹ್ಮವಿಷಯದಲ್ಲಿ ಸಮ್ಯಗ್ಜ್ಞಾನವಿಲ್ಲದೇ ಕೇವಲ ದುರಭಿಮಾನದಿಂದ ಕೂಡಿದ ಬಾಲಾಕಿಯು ಕಾಶಿರಾಜನಾದ ಅಜಾತ ಶತ್ರುವನ್ನು ಸಮೀಪಿಸಿ ತಾನು ತತ್ತ್ವಜ್ಞನೆಂದೂ ಅವನಿಗೆ ಬ್ರಹ್ಮನ ವಿಷಯದಲ್ಲಿ ಉಪದೇಶವನ್ನು ಕೊಡುವುದಾಗಿಯೂ ಹೇಳಿದ ನಂತರ ಅಜಾತಶತ್ರುವು ಇವನಿಗೆ ಮರ್ಯಾದೆಯನ್ನು ಮಾಡುವುದಾಗಿ ಹೇಳಿ ಬ್ರಹ್ಮನ ವಿಷಯದಲ್ಲಿ ಅನೇಕ ಪ್ರಶ್ನೆಗಳನ್ನು ಕೇಳಿದನು. ಅವೆಲ್ಲಕ್ಕೂ ಬಾಲಾಕಿಯು ಬ್ರಹ್ಮನ ಕೆಲವಂಶಗಳನ್ನು ಮಾತ್ರ ವರ್ಣಿಸತಕ್ಕ ಉತ್ತರಗಳನ್ನು ಹೇಳಿದನೇ ಹೊರತು ಪರಿಪೂರ್ಣನಾದ ಬ್ರಹ್ಮನ ಸ್ವರೂಪವನ್ನು ಹೇಳಲಾಗಲಿಲ್ಲ. ಅನಂತರ ಅಜಾತಶತ್ರುವು ಅವನಿಗೆ ಪರಿಪೂರ್ಣವಾದ ಜ್ಞಾನವಿಲ್ಲವೆಂದು ತೋರಿಸಿ ಕೊಟ್ಟಾಗ ಬಾಲಾಕಿಯು ನಮ್ರತೆಯಿಂದ—

**ಸ ಹೋವಾಚ ಗಾರ್ಗ್ಯ ಉಪ ತ್ವಾ ಯಾನೀತಿ ।** (ಬೃ. ಉ. ೨-೧-೧೪)

ನಾನು ನಿನ್ನಲ್ಲಿ ಶಿಷ್ಯವೃತ್ತಿಯನ್ನು ಮಾಡಿ ನಿನ್ನಿಂದ ಉಪದೇಶವನ್ನು ತೆಗೆದುಕೊಳ್ಳುತ್ತೇನೆಂದನು. ಇಲ್ಲಿ ಪೂರ್ವ ಜ್ಞಾನಿಯು ಯಾರಾದರೂ ಆಗಿರಬಹುದು. ತತ್ತ್ವವನ್ನು ತಿಳಿಯಬೇಕಾದವನು ಅವನಲ್ಲಿ ಶಿಷ್ಯವೃತ್ತಿಯನ್ನು ಮಾಡಲೇಬೇಕೆಂದು ನಿಯಮವು. ಅದನ್ನೇ ಪ್ರಕೃತವಾದ ಋಕ್ಕಿನಲ್ಲಿ **ಅಚಿಕಿತ್ವಾನ್ ಚಿಕಿತುಷಃ ಕವೀನ್** । ಅಜ್ಞಾನಿಯಾದ ನಾನು ಜ್ಞಾನಿಗಳಾದ ಕವಿಗಳನ್ನು ಸಮೀಪಿಸುತ್ತೇನೆ ಎಂದಿದೆ. ಬಾಲಾಕಿಯು ಬ್ರಾಹ್ಮಣನು. ಅಜಾತಶತ್ರುವು ಕ್ಷತ್ರಿಯನು.

**ಸ ಹೋವಾಚಾಜಾತಶತ್ರುಃ ಪ್ರತಿಲೋಮಂ ಚೈತದ್ಯದ್ಬ್ರಾಹ್ಮಣಃ ಕ್ಷತ್ರಿಯಮುಪೇಯಾತ್ ।** (ಬೃ. ಉ ೨-೧-೧೫)

ಬ್ರಾಹ್ಮಣನು ಕ್ಷತ್ರಿಯನಲ್ಲಿ ವಿದ್ಯೆಯನ್ನು ಕಲಿಯುವುದು ಸಂಪ್ರದಾಯವಲ್ಲ ಎಂದು ಅಜಾತಶತ್ರುವು ಹೇಳಿದರೂ ಸಹ ಅವನು ಜ್ಞಾನಿಯಾದುದರಿಂದ ಅವನ ವರ್ಣವನ್ನು ಪರಿಶೀಲಿಸಬೇಕಾಗಿಲ್ಲ ಎಂದು ಬಾಲಾಕಿಯು ತೀರ್ಮಾನಿಸಿದನು.

**ವಿದ್ಮನೇ ನ ವಿದ್ವಾನ್**—ಎಂಬುದಾಗಿ ತನ್ನ ವಿನಯವನ್ನೂ ಪ್ರಷ್ಟೃವು ತೋರಿಸಿದ್ದಾನೆ. ಇದಕ್ಕೆ ಬಾಲಾಕಿಯು ಉದಾಹರಣೆಯಿಂದ ಜಿಜ್ಞಾಸುವಿಗೆ ಯಾವ ವಿಧವಾದ ನಮ್ರತೆಯು ಅವಶ್ಯವಾಗಿರುವುದೆಂದು ತಿಳಿಯುತ್ತದೆ. ಇದಕ್ಕೆ ಶ್ವೇತ ಕೇತುವಿನ ಕಥೆಯೂ ಒಂದು ಉದಾಹರಣೆಯಾಗಿರುತ್ತದೆ.

**ಶ್ವೇತಕೇತುರ್ಹಾರುಣೇಯ ಆಸಂ ತಂ ಹ ಪಿತೋವಾಚ ಶ್ವೇತಕೇತೋ ವಸ ಬ್ರಹ್ಮ-ಚರ್ಯಂ ನ ವೈ ಸೋಮ್ಯಾಸ್ಮತ್ಕುಲೀನೋಽನನೂಚ್ಯ ಬ್ರಹ್ಮಬಂಧುರಿವ ಭವತೀತಿ ॥ ಸ ಹ ದ್ವಾದ-ಶವರ್ಷಮುಪೇತ್ಯ ಚತುರ್ವಿಂಶತಿವರ್ಷಃ ಸರ್ವಾನ್ ವೇದಾನಧೀತ್ಯ ಮಹಾಮನಾ ಅನೂಚಾ-ನಮಾನೀ ಸ್ತಬ್ಧ ಏವಾಯ ತಂ ಹ ಪಿತೋವಾಚ ॥ ಶ್ವೇತಕೇತೋ ಯನ್ನು ಸೋಮ್ಯೇದಂ ಮಹಾಮನಾ ಅನೂಚಾನಮಾನೀ ಸ್ತಬ್ಧೋಽಸ್ಯುತ ತಮಾದೇಶಮಪ್ರಾಕ್ಷ್ಯಃ ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಮಿತಿ................॥** (ಛಾ. ಉ. ೬-೧-೧ ರಿಂದ ೩)

ಉದ್ದಾಲಕ ಅರುಣನು ಪೌತ್ರನಾದ ಶ್ವೇತಕೇತುವನ್ನು ಅವನ ತಂದೆಯು ಬ್ರಹ್ಮಚರ್ಯದ ಪಾಲನೆಯಿಂದ ವಿದ್ಯಾಭ್ಯಾಸವನ್ನು ಮಾಡ ಬೇಕೆಂದು ಹೇಳಿದನು. ಹನ್ನೆರಡು ವರ್ಷದ ಬಾಲಕನಾಗಿದ್ದಾಗಲೇ ಶ್ವೇತಕೇತುವು ವಿದ್ಯಾಭ್ಯಾಸವನ್ನು ಪ್ರಾರಂಭಿಸಿ ಇಪ್ಪತ್ತು ನಾಲ್ಕು ವರ್ಷಗಳ ಕಾಲ ವಿದ್ಯಾಭ್ಯಾಸವನ್ನು ನಡೆಸಿ ಅನಂತರ ತಂದೆಯಲ್ಲಿಗೆ ಬಂದು ತಾನೇ ಸರ್ವಜ್ಞನೆಂಬ ಗರ್ವದಿಂದಲೂ, ವಿನಯರಹಿತವಾದ ವ್ಯವಹಾರಗಳಿಂದಲೂ ವರ್ತಿಸಿದಾಗ, " ಶ್ವೇತಕೇತುವೇ, ನೀನು ಇಷ್ಟು ಪ್ರಾಜ್ಞನಾಗಿಯೂ ದುರಭಿಮಾನ ದಿಂದ ಕೂಡಿದವನಾಗಿಯೂ ಇರುವುದರಿಂದ ನಿನಗೆ ಸಮ್ಯಗ್ಜ್ಞಾನವಿಲ್ಲವೆಂದು ತೋರುತ್ತದೆ. ಆ ಜ್ಞಾನವನ್ನು ಪಡೆಯುವ ಪ್ರಯತ್ನವನ್ನು ಮಾಡಿದೆಯಾ, ಚಕ್ಷುರಾದಿ ಇಂದ್ರಿಯಗಳಿಗೂ ಬುದ್ಧಿಗೂ ಗೋಚರವಾಗದ ಏಕತತ್ತ್ವವನ್ನು ತಿಳಿದಿರುವೆಯಾ" ಎಂದಾಗ ಶ್ವೇತಕೇತುವು ನಮ್ರತೆಯನ್ನನುಸರಿಸಿ ತನಗೆ ಆ ತತ್ತ್ವವನ್ನು ತಿಳಿದಿರುವೆಯಾ" ಎಂದಾಗ ಶ್ವೇತಕೇತುವು ನಮ್ರತೆಯನ್ನನುಸರಿಸಿ ತನಗೆ ಆ ತತ್ತ್ವವನ್ನುಪದೇಶಿಸಬೇಕೆಂದು ತಂದೆಯನ್ನು ಕೇಳಿಕೊಂಡನು. ಈರೀತಿ ನಮ್ರತೆಯ ಅವಶ್ಯಕತೆಯನ್ನು ಪ್ರಕೃತವಾದ ಋಕ್ಕಿನ ವಾಕ್ಯವು ತಿಳಿಸುತ್ತದೆ.

**ಚಿಕಿತುಷಃ ಕವೀನ್**—ಎಂಬುದರಿಂದ ಪೂರ್ಣಜ್ಞಾನವನ್ನು ಪಡೆದಿರುವ ಯಾವ ಕವಿ (ಋಷಿ)ಯಾದರೂ ಆಗ ಬಹುದೆಂದೂ, **ವಿದ್ಮನೇ ನ ವಿದ್ವಾನ್** ಎಂಬುದರಿಂದ ವಿನಯದಿಂದ ಅಂತಹ ಗುರುವನ್ನು ಉಪದೇಶಕ್ಕಾಗಿ ಸಮೀಪಿಸ ಬೇಕೆಂದೂ ತಿಳಿಸುತ್ತದೆ. ಈಶ್ವರನ ಸ್ವರೂಪವನ್ನು ಕಾರ್ಯರೂಪದ ಪ್ರಪಂಚದಿಂದ ಕೊಂಚಮಟ್ಟಿಗೆ ಊಹಿಸಿಕೊಳ್ಳಬಹುದೇ ಹೊರತು ಅವನ ಗೂಢವಾದುದೂ, ಅಮರವಾದುದೂ ಆದ ತತ್ತ್ವವು ಉಪದೇಶದ ವಿನಹ ಸಾಧ್ಯವಿಲ್ಲವೆಂದೂ ತಿಳಸುತ್ತಾ **ಯಃ ಷಡಿಮಾ ರಜಾಂಸಿ ತಸ್ತಂಭ** ಯಾವ ಈಶ್ವರನು ಈ ಕಾರ್ಯರೂಪದ್ದೂ ಪುನರಾವೃತ್ತಿಯನ್ನು ಪಡೆಯತಕ್ಕದ್ದೂ ಆದ ಆರು ಲೋಕಗಳನ್ನೂ ಧರಿಸಿದ್ದಾನೆಯೋ ಎಂದು ಬಾಹ್ಯೇಂದ್ರಿಯಕ್ಕೆ ಗೋಚರವಾಗತಕ್ಕ ತತ್ತ್ವವನ್ನು ಮಾತ್ರ ಮೊದಲು ತಿಳಿಸಿದೆ. ಸಾಯಣರು " ಲೋಕಾ ರಜಾಂಸ್ಯುಚ್ಯಂತೇ " (ನಿ. ೪-೧೯) ಎಂಬ ನಿರುಕ್ತಕಾರರ ವಾಕ್ಯವನ್ನುದಹರಿಸಿ ರಜಸ್‌ಶಬ್ದಕ್ಕೆ ಲೋಕಗಳೆಂದರ್ಥಮಾಡಿದ್ದಾರೆ.

**ರಜೋ ರಜತೇ ಜ್ಯೋತೀ ರಜ ಉಚ್ಯತೇ; ಉದಕಂ ರಜ ಉಚ್ಯತೇ, ಲೋಕಾ ರಜಾಂಸ್ಯುಚ್ಯಂತೇ** (ನಿ. ೪-೧೯) ಬೆಳಗು ಎಂಬರ್ಥವನ್ನು ಕೊಡುವ **ರಂಜ್** ಧಾತುವಿನಿಂದ ನಿಷ್ಪನ್ನವಾಗಿ **ರಜಸ್** ಶಬ್ದಕ್ಕೆ ಜ್ಯೋತಿಯೆಂದೂ, ಉದಕವೆಂದೂ, ಲೋಕಗಳೆಂದೂ ಅರ್ಥವಾಗುತ್ತದೆ. [ಅಲ್ಲದೇ **ಅಸೃಗಹನೀ ರಜಸೀ ಉಚ್ಯೇತೇ ।** ರಕ್ತ, ಅಹಸ್ಸು ಇವುಗಳಿಗೂ ಇದು ಪರ್ಯಾಯವಾಗಿದೆ.] ನಿರುಕ್ತಕಾರರು (ಈ ಪದಕ್ಕೆ ಅನೇಕಾರ್ಥಗಳನ್ನು ತೋರಿಸುವುದಕ್ಕಾಗಿ ಋಕ್ಸಂಹಿತೆಯ ಉದಾಹರಣೆಗಳನ್ನು ಕೊಟ್ಟು ವಿವರಿಸಿರುವುದನ್ನು ಹಿಂದೆ ತಿಳಿಸಿದೆ (ಋಗ್ವೇದ ಸಂಹಿತಾ. ಭಾಗ ೧೧. ಪೇಜು 58).

ಪ್ರಕೃತವಾದ ಋಕ್ಕಿನಲ್ಲಿ **ಷಟ್** ರಜಾಂಸಿ ಎಂಬ ವರ್ಣನೆಯಲ್ಲಿ ಕೊಂಚ ಸಂದೇಹವು ತೋರಿ ಅದಕ್ಕೆ ಸಾಯಣರು ಸಾಯಣರು ಸಮಾಧಾನವನ್ನೂ ಹೇಳಿದ್ದಾರೆ. **ಯದ್ಯಪಿ ಲೋಕಾಃ ಸಪ್ತ ತಥಾಪಿ ಸತ್ಯಲೋಕಸ್ಯ ಕರ್ಮಿಣಾಂ ಸರ್ವೇಷಾಂ ಸಾಧಾರಣತ್ವಾಭಾವಾತ್ ಷಡಿತ್ಯುಕ್ತಂ ।** ಲೋಕಗಳು ಸಪ್ತಸಂಖ್ಯಾಕವಾದರೂ ಸಹ ಜ್ಞಾನರಹಿತರಾಗಿ ಎಷ್ಟು ಕರ್ಮಗಳನ್ನು ನೆರವೇರಿಸಿದರೂ ಸಹ, ಎಲ್ಲಾ ಕರ್ಮಿಗಳಿಗೂ ಈ ಲೋಕದ ಪ್ರವೇಶವು ಸಾಧ್ಯವಿಲ್ಲವಾದುದರಿಂದಲೂ, ಕರ್ಮನಿಷ್ಠರಿಗೆ ಈ ಆರು ಲೋಕಗಳ ಪ್ರವೇಶವೂ ಸಾಧ್ಯವಾದುದರಿಂದಲೂ ಇಲ್ಲಿ ಲೋಕಗಳ ಸಂಖ್ಯೆಯನ್ನು ಆರೆಂದು ಮಾತ್ರ ಹೇಳಿದೆ. ಆದರೆ ಇವೆಲ್ಲಕ್ಕಿಂತಲೂ ಮಿಗಿಲಾದ ಲೋಕವು ಸತ್ಯಲೋಕವು. ಪರಮಾತ್ಮನು ಈ ಆರು ಲೋಕಗಳನ್ನೂ ತನ್ನ ಶಕ್ತಿಯಿಂದ ನಿಯಮಿಸಿದ್ದಾನೆ.

**ಅಥ ಯ ಆತ್ಮಾಸ ಸೇತುರ್ವಿಧೃತಿರೇಷಾಂ ಲೋಕಾನಾಮಸಂಭೇದಾಯ ।** (ಛಾ. ಉ ೮-೪-೧)

ಕರ್ಮಫಲಗಳಿಗನುಗುಣವಾಗಿ ನಿರ್ಮಿತವಾದ ಭೂರಾದಿಲೋಕಗಳನ್ನು ಅವುಗಳ ವೈಯಕ್ತಿಕವಾದ ಶಕ್ತಿಯಿಂದ ಕೂಡಿ ಪ್ರತ್ಯೇಕವಾಗಿಡಲು ಆತ್ಮರೂಪದ ಸೇತುವು ಕಟ್ಟಲ್ಪಟ್ಟಿದೆ ಎಂಬ ವಾಕ್ಯವನ್ನು ಸಾಯಣರು ಉದಹರಿಸಿ **ಯಃ ತಸ್ತಂಭ** ಎಂಬ ವಾಕ್ಯವನ್ನು ವಿವರಿಸಿದ್ದಾರೆ.

**ಅಜಸ್ಯ ರೂಪೇ ಕಿಮಪಿ ಸ್ವಿದೇಕಂ** ಎಂಬುದು ಸತ್ಯಲೋಕದ ವರ್ಣನೆಯು. ಕೇವಲ ಉಪಾಸಕರು ಮಾತ್ರ ಅರ್ಚಿರಾದಿಮಾರ್ಗದಿಂದ ಈ ಲೋಕವನ್ನು ಪ್ರವೇಶಿಸಿ ಅಲ್ಲಿ ಶಾಶ್ವತವಾದ ಸ್ಥಾನವನ್ನು ಪಡೆಯಬಹುದೆಂದು ತಿಳಿಸಿದೆ. ಹೀಗೆ, **ರಜಸ್** ಶಬ್ದಕ್ಕೆ ಲೋಕಪರ್ಯಾಯವಾದ ಅರ್ಥವನ್ನು ಮಾಡಿ ಅನಂತರ ಇನ್ನೊಂದು ವಿಧವಾಗಿ ಸಾಯಣರು ಅರ್ಥಮಾಡಿದ್ದಾರೆ.

**ಯದ್ವಾ, ಷಡ್ರಜಾಂಸಿ ವಿಲಕ್ಷಣಾಃ ಷಡೃತವಃ ತಾನ್ಯಸ್ತಂಭಯತ್** ಎಂದು **ಯಃ** ಎನ್ನುವುದಕೆ ಆದಿತ್ಯಪರವಾಗಿ ಅರ್ಥಮಾಡಿ ಈ ಆದಿತ್ಯನು ಆರು ಋತುಗಳನ್ನೂ ಆಯಾಯ ಕಾಲಾನುಗುಣವಾಗಿ ನಿಯಮಿಸಿದ್ದಾನೆಂದೂ ಅದೇ ಆದಿತ್ಯನ ಮಂಡಲದಲ್ಲಿ ಏಳನೆಯದೂ ಶಾಶ್ವತವಾದದ್ದೂ ಆದ ಸ್ಥಿತಿಯಿದೆಯೆಂದೂ ವಿವರಿಸಿದ್ದಾರೆ. ಆರು ಋತುಗಳೂ ಸಹ ಪುನರಾವೃತ್ತಿಯುಳ್ಳವಾದುದರಿಂದ ಅಶಾಶ್ವತವಾದುವು. ಈ ಕಾಲನಿಯಮಗಳಿಗೆ ಮೀರಿ ಶಾಶ್ವತವಾದ ಸ್ಥಿತಿಯಲ್ಲಿರತಕ್ಕ ಆದಿತ್ಯಮಂಡಲದಲ್ಲಿರುವ ಪುರುಷನನ್ನು ಈರೀತಿ ವರ್ಣಿಸಿದೆ.

**ಅಥ ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ॥**
(ಛಾ. ಉ. ೧-೬-೬)

ಎಂಬ ಈ ವಾಕ್ಯವನ್ನುದಹರಿಸಿ ಸಾಯಣರು **ಕಿಮಪಿ ಸ್ವಿದೇಕಂ** ಎಂಬ ಏಕಶಬ್ದದಿಂದ ಪ್ರತಿಪಾದಿತವಾಗಿರುವ ತತ್ತ್ವದ ಸ್ವರೂಪವನ್ನು ವಿವರಿಸಿದ್ದಾರೆ.

**ತಿಸ್ರೋ ಭೂಮೀರ್ಧಾರಯನ್ ತ್ರೀರುತ ದ್ಯೂನ್ ತ್ರೀಣಿ ವ್ರತಾ ವಿದಥೇ ಅಂತರೇಷಾಂ ।**
**ಋತೇನಾದಿತ್ಯಾ ಮಹಿ ವೋ ಮಹಿತ್ವಂ ತದರ್ಯಮನ್ವರುಣ ಮಿತ್ರ ಚಾರು ॥**
(ಋ. ಸಂ. ೧-೨೭-೮)

ಎಂಬ ಋಕ್ಕಿನಲ್ಲಿ ಹೇಳಿರುವಂತೆ ತ್ರಿವಿಧಾತ್ಮಕವಾದ ಭೂರಾದಿಲೋಕಗಳನ್ನು ನಿಯಮಿಸಿದನು ಎಂದು ಒಂದರ್ಥವಾಗಬಹುದೆಂದು ಸಾಯಣರ ಮತವಾಗಿದೆ. ಹೀಗೆ ನಾನಾ ವಿಕಾರವ್ಯತ್ಯಾಸಗಳಿಗೆ ಒಳಗಾಗತಕ್ಕ ಈ ಷಡ್ರಜಸ್ಸುಗಳನ್ನೂ ಮೀರಿ ಪರಮಪುರುಷನಲ್ಲಿ ಅದ್ವಿತೀಯವಾದುದೂ ಜರಾಮರಣಾದಿರಹಿತವಾದುದೂ ಆದ ಸತ್ಯವಿದೆಯೆಂಬುದರಲ್ಲಿಯೂ ಆ ಸತ್ಯಜ್ಞಾನವು ಅತ್ಯವಶ್ಯವಾದುದೆಂದೂ ತಾತ್ಪರ್ಯವು.

**ಅಯಂ ಲೋಕೋ ನಾಸ್ತಿ ಪರ ಇತಿ ಮಾನೀ ಪುನಃ ಪುನರ್ವಶಮಾಪದ್ಯತೇ ಮೇ ।** (ಕಠ. ೧-೨-೬)
ನಮ್ಮ ಕಣ್ಣಿಗೆ ಕಾಣತಕ್ಕ ಈ ಲೋಕವೇ ಸತ್ಯವು. ಬೇರೆಯಿಲ್ಲ ಎಂದು ತಿಳಿದಿರುವವನು ಜನ್ಮಮೃತ್ಯುಗಳಿಗೆ ಈಡಾಗಿ ಪದೇಪದೇ ಕ್ಲೇಶಕ್ಕೆ ಭಾಗಿಯಾಗುವವನಾದುದರಿಂದ,

**ಅಸ್ತೀತ್ಯೇವೋಪಲಬ್ಧವ್ಯಸ್ತತ್ತ್ವಭಾವೇನ ಚೋಭಯೋಃ ।**
**ಅಸ್ತೀತ್ಯೇವೋಪಲಬ್ಧಸ್ಯ ತತ್ತ್ವಭಾವಃ ಪ್ರಸೀದತಿ ॥** (ಕಠ. ೨-೩-೧೩)

ಎಂಬ ವಾಕ್ಯದಲ್ಲಿ ಪ್ರತಿಪಾದಿಸಿರುವಂತೆ ಆ ಪರತತ್ತ್ವದ ಅಸ್ತಿತ್ವವನ್ನರಿತು ಅದರ ಸಾಕ್ಷಾತ್ಕಾರಕ್ಕೆ ಪ್ರಯತ್ನಿಸಲೇಬೇಕೆಂಬ ಆವಶ್ಯಕತೆಯನ್ನು ಪ್ರಕೃತವಾದ ಋಕ್ಕು ತಿಳಿಸುತ್ತದೆಯೆಂದು ಸಾಯಣರು ಉದಾಹೃತವಾದ (ಕಠ. ೨-೬-೧೩) ಶ್ರುತಿವಾಕ್ಯವನ್ನು ತಮ್ಮ ಭಾಷ್ಯದಲ್ಲುದಹರಿಸಿ ವ್ಯಾಖ್ಯಾನಮಾಡಿದ್ದಾರೆ.



**ಇಹ ಬ್ರವೀತು ಯ ಈಮಂಗ ವೇದಾಸ್ಯ ವಾಮಸ್ಯ ನಿಹಿತಂ ಪದಂ ವೇಃ**
**ಶೀರ್ಷ್ಣಃ ಕ್ಷೀರಃ ದುಹ್ರತೇ ಗಾವೋ ಅಸ್ಯ ವವ್ರಿಂ ವಸಾನಾ**
**ಉದಕಂ ಪದಾಪುಃ ॥ ೭ ॥**

ಪ್ರಕೃತದಲ್ಲಿ ಈ ಮುಖ್ಯತತ್ತ್ವವನ್ನು ಯಾವ ಪ್ರಾಜ್ಞನು ತಿಳಿದಿದ್ದಾನೆಯೋ ಅವನು ಇದನ್ನು ಬೇಗನೆ ವಿವರಿಸಲಿ ರಮ್ಯಾಕೃತಿಯುಳ್ಳವನೂ, ಸಂಚಾರಶೀಲನೂ ಆದ ಈ ಆದಿತ್ಯನ ಸತ್ಯಸ್ವರೂಪವಾದ ಸ್ಥಾನವು ಗೂಢವಾಗಿರುತ್ತದೆ. ಅವನ ಅತ್ಯುತ್ಕೃಷ್ಟವಾದ ಸ್ಥಾನದಿಂದ ಕಿರಣಗಳು ಇವನ ರೂಪವನ್ನು ತೇಜಸ್ಸಿನಿಂದ ಆಚ್ಛಾದನಮಾಡುತ್ತಾ ಉದಕವನ್ನು ಸುರಿಸುತ್ತವೆ. ಇದೇ ಆದಿತ್ಯನ ರಶ್ಮಿಗಳು ತಮ್ಮಿಂದಲೇ ಸುರಿಸಲ್ಪಟ್ಟ ಉದಕವನ್ನು ತಾವು ಸುರಿಸಿದ ಮಾರ್ಗದಿಂದಲೇ ಹೀರುತ್ತವೆ.

"ವತ್ಸೇ ಬಷ್ಕಯೋಽಧಿ ಸಪ್ತ ತಂತೂನ್ವಿತತ್ನಿರೇ ಕವಯ ಓತವಾ ಉ" ಎಂಬ ಇದೇ ಸೂಕ್ತದ ಐದನೆಯ ಋಕ್ಕಿನಲ್ಲಿ ಯಜ್ಞಾದಿಕರ್ಮಗಳಿಗೂ ಆದಿತ್ಯನಿಗೂ ಇರತಕ್ಕ ಆತ್ಯಂತಿಕವಾದ ಸಂಬಂಧವನ್ನು ತಿಳಿಸಿದೆ. ಜಗದ್ರೂಪದ ಓತಪ್ರೋತಗಳ ನಿರ್ವಹಣೆಗಾಗಿಯೂ ಅದಕ್ಕೆ ಸಾಧನವಾದ ಕರ್ಮಗಳ ಅನುಕೂಲಕ್ಕಾಗಿಯೂ ಸಹ ಆದಿತ್ಯನ ರಕ್ಷಣೆಯು ಅತ್ಯವಶ್ಯವಾಗಿರುವುದರಿಂದ ಅಂತಹ ಆದಿತ್ಯನನ್ನು ಸಪ್ತತಂತುಗಳಿಂದ ಕವಿಗಳು ಆರಾಧಿಸುತ್ತಾರೆ ಎಂದು ಆದಿತ್ಯನ ಪ್ರಶಂಸೆಯಿದೆ. ಅದರ ಮುಂದಿನ ಋಕ್ಕಿನಲ್ಲಿ ಆದಿತ್ಯನು ಆರು ಲೋಕಗಳನ್ನೂ ಧರಿಸುತ್ತಲೂ ನಿಯಮಿಸುತ್ತಲೂ ಇರುವ ವಿಷಯವನ್ನು ತಿಳಿಸಿ ಪ್ರಕೃತವಾದ ಋಕ್ಕಿನಲ್ಲಿ,

**ಶೀರ್ಷ್ಣಃ ಗಾವಃ ಕ್ಷೀರಂ ದುಹ್ರತೇ; ಉದಕಂ ಪದಾಪುಃ** । ಆದಿತ್ಯನ ಉತ್ತಮವಾದ ಸ್ಥಾನದಿಂದ ಹೊರಡುವ ಆದಿತ್ಯನ ರಶ್ಮಿಗಳು ಲೋಕವನ್ನೆಲ್ಲಾ ನಾನಾಕಡೆಗಳಿಂದಲೂ ಉದಕವನ್ನು ಹರಡಿ ಪುನಃ ಆ ಉದಕವನ್ನು ಅದೇ ಮಾರ್ಗಗಳಿಂದಲೇ ಹೀರುವ ಕ್ರಮವನ್ನೂ ವರ್ಣಿಸಿದೆ. ಹೀಗೆ ಕ್ರಮವಾಗಿ ಎಲ್ಲಾ ಮಂತ್ರಗಳಲ್ಲೂ ಸಹ ವ್ಯವಹಾರಾತ್ಮಕವಾದ ಪ್ರಪಂಚದ ನಿರ್ವಹಣೆಗಾಗಿ ಆದಿತ್ಯನೂ ಆದಿತ್ಯನ ರಶ್ಮಿಗಳೂ ಸಾಧನವಾಗಿರುವುದನ್ನು ತಿಳಿಸಿ ಇಂತಹ ಜಗತ್ತಿಗಿಂತಲೂ ಅತೀತವಾದುದೂ, ಚಕ್ಷುರಾದೀಂದ್ರಿಯಗಳಿಗೆ ಅತೀತವಾದುದೂ ಆದಿತ್ಯಮಂಡಲದಲ್ಲಿ ನಿತ್ಯವಾಗಿ ಪ್ರಕಾಶಿಸುತ್ತಿರುವುದೂ ಆದ ವಿಶ್ವತತ್ತ್ವವನ್ನು "**ದೇವಾನಾಮೇನಾ ನಿಹಿತಾ ಪದಾನಿ**" (೫) "**ಅಜಸ್ಯ ರೂಪೇ ಕಿಮಪಿ ಸ್ವಿದೇಕಂ**" "**ಅಸ್ಯ ವಾಮಸ್ಯ ನಿಹಿತಂ ಪದಂ ವೇಃ**" (೭) ಇತ್ಯಾದಿ ವಾಕ್ಯಗಳಿಂದ ವರ್ಣಿಸಿದೆ. ಪ್ರತಿಯೊಂದು ಋಕ್ಕಿನಲ್ಲಿಯೂ ಸಹ ಲೌಕಿಕ ಪ್ರತ್ಯಕ್ಷಕ್ಕೆ ಗೋಚರನಾದ ಆದಿತ್ಯನ ಮಹಿಮೆಯನ್ನು ಒಂದುಕಡೆಯೂ, ಇದಕ್ಕೆ ಅತೀತವಾದ ತತ್ತ್ವದ ಮಹಿಮೆಯನ್ನು ಇನ್ನೊಂದುಕಡೆಯೂ, ಒಟ್ಟಿಗೆ ವರ್ಣಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಮೊದಲು "**ನಿಹಿತಂ ಪದಂ**" ಎಂದು ಗೂಢವಾದ ತತ್ತ್ವವನ್ನು ಸೂಚಿಸಿ ಅನಂತರ,

**ಶೀರ್ಷ್ಣಃ ಕ್ಷೀರಂ ದುಹ್ರತೇ ಗಾವೋ ಅಸ್ಯ ವಪ್ರಾ ವಸಾನಾ ಉದಕಂ ಪದಾಪುಃ ।** ಆದಿತ್ಯನ ಉತ್ತಮವಾದ ಸ್ಥಾನದಿಂದ ಹೊರಡುವ ಆದಿತ್ಯರಶ್ಮಿಗಳು ಲೋಕಕ್ಕೆಲ್ಲಾ ಉದಕವನ್ನು ನಾನಾಕಡೆಗಳಲ್ಲಿಯೂ ಹರಡಿ ಪುನಃ ಅದೇ ದಿಕ್ಕುಗಳಿಂದ ಅವುಗಳನ್ನುಗ್ರಹಣಮಾಡುತ್ತವೆಯೆಂದು ವ್ಯವಹಾರಪ್ರಪಂಚದ ನಿರ್ವಹಣೆಗಾಗಿ ಆದಿತ್ಯನು ಆಧಾರವಾಗಿರುವುದನ್ನೂ ಸಾಧನವಾಗಿರುವುದನ್ನೂ ತಿಳಿಸಿದೆ. ಹೀಗೆ ತನ್ನ ರಶ್ಮಿಗಳಿಂದ ದ್ಯಾವಾಪೃಥಿವಿಗಳನ್ನೆಲ್ಲಾ ವ್ಯಾಪಿಸಿ ಸ್ಥಿತಿಗಳಿಗೆ ಕಾರಣವಾದ ಯಜ್ಞಕ್ಕೂ ತದಂಗವಾದ ಕಲಾಪಗಳಿಗೂ ವ್ಯತ್ಯಸ್ತವಾಗತಕ್ಕ ಕಾರ್ಯರೂಪದಿಂದಲೂ ನಿತ್ಯವಾಗಿರತಕ್ಕ ಕಾರಣರೂಪದಿಂದಲೂ ಹೇತುವಾಗಿರುವುದನ್ನು ಛಾಂದೋಗ್ಯಾದಿಗಳಲ್ಲಿ ಈ ಮೂರು ಋಕ್ಕುಗಳ ಅಭಿಪ್ರಾಯಗಳನ್ನೂ ಒಟ್ಟಿಗೆ ಸೇರಿಸಿ ಈರೀತಿ ವರ್ಣಿಸಿದೆ,

**ಅಸಾ ವಾದಿತ್ಯೋ ದೇವಮಧು ತಸ್ಯ ದ್ಯೌರೇವ ತಿರಶ್ಚೀನವಂಶೋಽಂತರಿಕ್ಷಮಪೂಪೋ ಮರೀಚಯಃ ಪುತ್ರಾಃ ॥**

**ತಸ್ಯ ಯೇ ಪ್ರಾಂಚೋ ರಶ್ಮಯಸ್ತಾ ಏವಾಸ್ಯ ಪ್ರಾಚ್ಯೋ ಮಧುನಾಡ್ಯಃ । ಋಚ ಏವ ಮಧುಕೃತ ಋಗ್ವೇದ ಏವ ಪುಷ್ಪಂ ತಾ ಅಮೃತಾ ಆಪಸ್ತಾವಾ ಏತಾ ಋಚಃ ಏತಮೃಗ್ವೇದಮಭ್ಯತಪಗ್ಂಸ್ತಸ್ಯಾಭಿತಪ್ತಸ್ಯ ಯಶಸ್ತೇಜ ಇಂದ್ರಿಯ ವೀರ್ಯಮನ್ನಾದ್ಯಂ ರಸೋಽಜಾಯತ ॥ ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತದಾದಿತ್ಯಸ್ಯ ರೋಹಿತಂ ರೂಪಂ ।** (ಛಾ. ಉ. ೩-೧)

ಈ ಆದಿತ್ಯನೇ ದೇವಮಧುವು ದ್ಯುಲೋಕವೇ ಇದಕ್ಕೆ ಆಸರೆಯಾದ ವಂಶವೃಕ್ಷವಾಗಿಯೂ, ಅಂತರಿಕ್ಷವೇ ಗೂಡಾಗಿಯೂ ರಶ್ಮಿಗಳೇ ಪುತ್ರರೂಪಗಳಾಗಿಯದ ಇವೆ. ಪೂರ್ವದಿಕ್ಕಿಗೆ ಪ್ರಸರಿಸುವ ರಶ್ಮಿಗಳು ಪೂರ್ವದಿಕ್ಕಿನ ಮಧುನಾಡಿಗಳು. ಋಕ್ಕುಗಳೇ ಭ್ರಮರಗಳು. ಋಗ್ವೇದವೇಪುಷ್ಪವು, ಯಜ್ಞದಲ್ಲಿ ಅರ್ಪಿತವಾದ ಆಜ್ಯಪಯೋರೂಪಗಳಾದ ಆಹುತಿಗಳೇ ಆಹುತಿಗಳೇ ಅಮೃತಬಿಂದುಗಳು. ಋಙ್ಮಂತ್ರಗಳು ಪಕ್ವವಾದನಂತರ ಯಶಸ್ಸೂ, ತೇಜಸ್ಸೂ, ಇಂದ್ರಿಯವೂ ವೀರ್ಯವೂ, ಶಕ್ತಿಯೂ, ರಸವೂ ಯಾಗಾದಿ ಕರ್ಮಗಳಿಂದ ಉತ್ಪನ್ನವಾದವು. ಅನಂತರ ಈ ಫಲರೂಪವಾದ ರಸಾದಿಗಳೆಲ್ಲವೂ ಆದಿತ್ಯನ ಅಭಿಮುಖವಾಗಿ ಪ್ರಸರಿಸಿ ಆವನನ್ನೇ ಸೇರಿದವು. ಇವೇ ಉದಯಿಸುತ್ತಿರುವ ಆದಿತ್ಯನ ರಕ್ತಬಿಂಬದ ರಮ್ಯವಾದ ರೂಪಕ್ಕೆ ಹೇತುಗಳು.

**ಅಥ ಯೇಽಸ್ಯ ದಕ್ಷಿಣಾ ರಶ್ಮಯೆಸ್ತಾ ಏವಾಸ್ಯ ದಕ್ಷಿಣಾ ಮಧುನಾಡ್ಯೋ ಯಜೂಗ್ಂಷ್ಯೇವ ಮಧುಕೃತೋ ಯಜುರ್ವೇದ ಏವ ಪುಷ್ಪಂ ತಾ ಅಮೃತಾ ಆಪಃ । ತಾನಿ ವಾ ಏತಾನಿ ಯಜೂಗ್ಂ ಷ್ಯೇತಂ ಯಜುರ್ವೇದಮಭ್ಯತಪಗ್ಂಸ್ತಸ್ಯಾಭಿತಪ್ತಸ್ಯ ಯಶಸ್ತೇಜ ಇಂದ್ರಿಯಂ ವೀರ್ಯಮನ್ನಾದ್ಯಂ ರಸೋಽಜಾಯತ ॥ ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತದಾದಿತ್ಯಸ್ಯ ಶುಕ್ಲಂ ರೂಪಂ ॥** (ಛಾ. ಉ. ೩-೨)

ದಕ್ಷಿಣದಿಕ್ಕಿಗೆ ಪ್ರಸರಿಸುವ ರಶ್ಮಿಗಳು ದಕ್ಷಿಣದ ಮಧುನಾಡಿಗಳು. ಯಜುರ್ಮಂತ್ರಗಳೇ ಭ್ರಮರಗಳು. ಯಜುರ್ವೇದವೇ ಪುಷ್ಪವು, ಯಜ್ಞಾಹುತಿಗಳಾದ ಆಜ್ಯಪಯಸ್ಸುಗಳೇ ಅಮೃತ ಬಿಂದುಗಳು. ಇದರಿಂದ ರಸಾದಿಗಳು ಉತ್ಪನ್ನವಾಗಿ ಪುನಃ ಆದಿತ್ಯನ ಅಭಿಮುಖವಾಗಿ ಪ್ರಸರಿಸಿ ಆದಿತ್ಯನನ್ನೇ ಸೇರುತ್ತವೆ. ಇವೇ ಆದಿತ್ಯನ ಶುಕ್ಲರೂಪದ ಹೇತುಗಳು.

**ಅಥ ಯೇಽಸ್ಯ ಪ್ರತ್ಯಂಚೋ ರಶ್ಮಯಃ .... .... .... ಸಾಮಾನ್ಯೇವ ಮಧುಕೃತಸ್ಸಾಮವೇದ ಏವ ಪುಷ್ಪಂ .... .... .... ಏತದಾದಿತ್ಯಸ್ಯ ಕೃಷ್ಣಂ ರೂಪಂ ॥** (ಛಾ. ಉ. ೩-೩)

**ಅಥ ಯೇಽಸ್ಯೋದಂಚೋ ರಶ್ಮಯಃ .... .... .... ಅಥರ್ವಾಂಗಿರಸ ಏವ ಮಧುಕೃತ ಇತಿಹಾಸಪುರಾಣಂ ಪುಷ್ಪಂ .... .... .... ಏತದಾದಿತ್ಯಸ್ಯ ಪರಂ ಕೃಷ್ಣಂ ರೂಪಂ ||**

ಸಾಮವೇದರೂಪವಾದ ಪುಷ್ಪದಲ್ಲಿ ಸಾಮರೂಪವಾದ ಭ್ರಮರಗಳು ಆಹುತಿರೂಪವಾದ ಅಮೃತಬಿಂದುಗಳನ್ನು ಸೃಷ್ಟಿಸಿ ಸೂರ್ಯನನ್ನು ಸೇರಿಸಿದವು. ಅದೇ ಆದಿತ್ಯನ ಕೃಷ್ಣಕ್ಕೆ ಹೇತುರೂಪವು.

ಅನಂತರ ಇತಿಹಾಸಪುರಾಣರೂಪವಾದ ಪುಷ್ಪದಿಂದ ಅಥರ್ವರೂಪವಾದ ಭ್ರಮರವು ರಸಾದಿರೂಪವಾದ ಅಮೃತ ಬಿಂದುವನ್ನು ಸೃಷ್ಟಿಸಿದವು. ಇವು ಆದಿತ್ಯನನ್ನು ಸೇರಿದವು. ಇದೇ ಆದಿತ್ಯನ ಗಾಢವಾದ ಕೃಷ್ಣರೂಪದ ಹೇತುಗಳು.

**ತೇ ವಾ ಏತೇ ರಸಾನಾಂ ರಸಾ ವೇದಾ ಹಿ ರಸಾಸ್ತೇಷಾಮೇತೇ ರಸಾಸ್ತಾನಿ ವಾ ಏತಾನ್ಯಮೃತಾನಾಮಮೃತಾನಿ ವೇದಾ ಹ್ಯಮೃತಾಸ್ತೇಷಾಮೇತಾನ್ಯಮೃತಾನಿ ||**

(ಛಾ. ಉ. ೩-೫)

ಆದಿತ್ಯನ ಈ ವಿಧವಿಧವಾದ ವರ್ಣಗಳೇ ರಸಗಳ ಸಾರಗಳು. ಯಾವ ರಸಗಳ ಸಾರಗಳು ಎಂದರೆ – ಪೃಥ್ವಿಯಲ್ಲಿರತಕ್ಕ ಉತ್ತಮವಾದ ವಸ್ತುಗಳ ಸಾರವೇ ವೇದಗಳು. ಅವುಗಳು ಯಜ್ಞರೂಪಕ್ಕೆ ಪರಿಣಾಮವನ್ನು ಹೊಂದಿದನಂತರ ಅದರ ರಸದ ಫಲವಾಗಿ ಉತ್ಪನ್ನವಾದ ಸೂರ್ಯನ ವರ್ಣಗಳು ಯಜ್ಞಾದಿಗಳ ಸಾರವು. ಅಮೃತಾತ್ಮಕವಾದ ವೇದಾದಿಗಳಿಂದ ದೀಪ್ತವಾದ ಆದಿತ್ಯನ ಈ ನಾನಾವರ್ಣಾತ್ಮಕವಾದ ತೇಜಸ್ಸು ಎಲ್ಲಾ ಅಮೃತಕ್ಕೂ ಅಮೃತಪ್ರಾಯವಾಗಿದೆ.

**ಯದ್ಯತ್ಪ್ರಥಮಮಮೃತಂ ತದ್ವಸವ ಉಪಜೀವಂತ್ಯಗ್ನಿನಾ ಮುಖೇನ ನೈ ದೇವಾ ಅಶ್ನಂತಿ ನ ಪಿಬಂತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯಂತಿ ||**

**...... ...... ...... ...... ಅಥ ಯದ್ದ್ವಿತೀಯಮಮೃತಂ ತದ್ರುದ್ರಾ ಉಪಜೀವಂತಿ ...... ...... ...... ......**
**...... ...... ...... ...... ಅಥ ಯತ್ತೃತೀಯಮಮೃತಂ ತದಾದಿತ್ಯಾ ಉಪಜೀವಂತಿ ...... ...... ...... ......**
**...... ...... ...... ...... ಅಥ ಯಚ್ಚತುರ್ಥಮಮೃತಂ ತನ್ಮರುತ ಉಪಜೀವಂತಿ ...... ...... ...... ......**
**...... ...... ...... ...... ಅಥ ಯತ್ಪಂಚಮಮಮೃತಂ ತತ್ಸಾಧ್ಯಾ ಉಪಜೀವಂತಿ ...... ...... ...... ......**

(ಛಾ. ಉ. ೩-೬ ರಿಂದ ೧೦)

ಈ ಐದುವಿಧವಾದುದೂ ಅಮೃತಮಯವಾದುದೂ ಆದ ಆದಿತ್ಯನ ರಸಾತ್ಮಕವಾದ ರೂಪಗಳಲ್ಲಿ ವಸುಗಳೂ, ರುದ್ರರೂ, ಆದಿತ್ಯರೂ, ಮರುತ್ತುಗಳೂ, ಸಾಧ್ಯರೂ ವಾಸಿಸುತ್ತಾರೆ. ಅವರೇ ಈ ರೋಹಿತಾದಿವರ್ಣಗಳನ್ನೂ ಪ್ರವೇಶಿಸುತ್ತಾರೆ. ಈ ಅಮೃತಗಳ ಸಾರಗಳನ್ನು ತಿಳಿದವನು ವಸುರುದ್ರಾದಿಗಳಲ್ಲಿ ಸ್ಥಾನವನ್ನು ಪಡೆಯುತ್ತಾನೆ. ತಾನೂ ಆ ಆದಿತ್ಯನ ವರ್ಣಗಳಲ್ಲಿ ಬೆರೆತು ಪುನಃ ಆ ವರ್ಣಗಳಿಂದಲೇ ಉತ್ಪನ್ನನಾಗುತ್ತಾನೆ. (**ತ ಏತದೇವ ರೂಪಮಭಿಸಂವಿಶಂತ್ಯೇತಸ್ಮಾದ್ರೂಪಾದುದ್ಯಂತಿ**) ಆದಿತ್ಯನೂ ಸಹ ಈ ವಸುರುದ್ರಾದಿತ್ಯಾದಿಗಳ ಲೋಕಗಳಲ್ಲಿ ಸಂಚರಿಸುತ್ತಲೂ ಅವರ ಸ್ವಾರಾಜ್ಯಮಹಿಮೆಯನ್ನು ವೀಕ್ಷಿಸುತ್ತಲೂ ಸಂಚರಿಸುತ್ತಾನೆ.

**ಅಥ ತತ ಊರ್ಧ್ವಂ ಉದೇತ್ಯ ನೈವೋದೇತಾ ನಾಸ್ತಮೇತೈಕಲ ಏವ ಮಧ್ಯೇ ಸ್ಥಾತಾ ತದೇಶ ಶ್ಲೋಕಃ ||**

**ನ ವೈ ತತ್ರ ನ ನಿಮ್ಲೋಚ ನೋದಿಯಾಯ ಕದಾಚನ ।**
**ದೇವಾಸ್ತೇನಾಹಂ ಸತ್ಯೇನ ಮಾ ವಿರಾಧಿಷಿ ಬ್ರಹ್ಮಣೇತಿ ॥**

**ನ ಹ ವಾ ಅಸ್ಮಾ ಉದೇತಿ ನ ನಿಮ್ಲೋಚತಿ ಸಕೃದ್ದಿವಾ ಹೈವಾಸ್ಮೈ ಭವತಿ ಯ ಏತಾಮೇವಂ ಬ್ರಹ್ಮೋಪನಿಷದಂ ವೇದ ॥** ಛಾ. ಉ. ೩-೧೧ ; ೧-೩)

ಇಲ್ಲಿ ಅಥ ಶಬ್ದಕ್ಕೆ ಶಂಕರಾಚಾರ್ಯರು **ಕೃತ್ವೈವಮುದಯಾಸ್ತಮನೇನ ಪ್ರಾಣಿನಾಂ ಸ್ವಕರ್ಮಫಲಭೋಗ-ನಿಮಿತ್ತಮನುಗ್ರಹಂ ।** ಸಕಲಪ್ರಾಣಿಗಳಿಗೂ ಅವುಗಳ ಕರ್ಮಾನುಗುಣವಾಗಿ ಫಲಗಳನ್ನು ಕೊಡುವುದಕ್ಕಾಗಿ ಉದಯಾಸ್ತಮಯರೂಪವಾದ ಸಂಚಾರಗಳನ್ನು ವಸುರುದ್ರಾದಿ ಲೋಕಗಳಲ್ಲಿಟ್ಟುಕೊಂಡು, ಅನಂತರ ಎಂದು ಇಷ್ಟು ಅರ್ಥವನ್ನೂ ಹೇಳಿದ್ದಾರೆ. ಪ್ರಕೃತವಾದ ಸೂಕ್ತದಲ್ಲಿಯೂ ಆದಿತ್ಯನ ಉದಯಾಸ್ತಮಯವಾದ ಸಂಚಾರಗಳಿಂದ ಲೋಕನಿರ್ವಹಣವನ್ನು ಮಾಡುವುದೂ, ನಿತ್ಯವಾದ ಸ್ಥಿತಿಯಲ್ಲಿ ಪರಮಾತ್ಮರೂಪದಲ್ಲಿರುವುದೂ ವರ್ಣಿತವಾಗಿರುವುದರಿಂದ ಇಲ್ಲಿಯವರಿಗಿನ ಉಪನಿಷದ್ವಾಕ್ಯಗಳು ಆದಿತ್ಯನ ಜಗನ್ನಿಯಾಮಕವಾದ ವ್ಯವಹಾರವನ್ನು ಮಾತ್ರ ವರ್ಣಿಸಿದೆ. ಇನ್ನು ಮುಂದೆ ಆದಿತ್ಯನ ಪರಮಾತ್ಮಸ್ವರೂಪವನ್ನು ವರ್ಣಿಸುತ್ತವೆ.

ಆದಿತ್ಯನು ವಸುರುದ್ರಾದಿತ್ಯಾದಿಗಳ ಲೋಕಗಳಲ್ಲೆಲ್ಲಾ ಬೆಳಗಿ ಅನಂತರ ಅವಕ್ಕಿಂತಲೂ ಊರ್ಧ್ವಭಾಗದಲ್ಲಿರುವ ಲೋಕವನ್ನು ಸೇರಿ ಅಲ್ಲಿ ನಿತ್ಯವಾದ ಸ್ಥಿತಿಯಲ್ಲಿರುತ್ತಾನೆ. ಆ ಲೋಕದಲ್ಲಿ ಆದಿತ್ಯನಿಗೆ ಉದಯವೂ ಇಲ್ಲ. ಅಸ್ತಮಯವೂ ಇಲ್ಲ. ಮಧ್ಯಭಾಗದಲ್ಲಿ ವಿರಾಜಿಸುತ್ತಲೂ ಅದ್ವಿತೀಯನಾಗಿಯೂ ಇರುತ್ತಾನೆ. **ನ ವೈ ತತ್ರ ನ ನಿಮ್ಲೋಚ** ಎಂಬ ಶ್ಲೋಕದಲ್ಲಿ ಆದಿತ್ಯನ ಈ ಪರಮಪದದ ಸ್ಥಿತಿಯನ್ನು ವರ್ಣಿಸಿದೆ. ಉಪನಿಷದ್ವಾಕ್ಯದಲ್ಲಿ ವರ್ಣಿತವಾದ ಈ ತತ್ತ್ವವನ್ನು ತಿಳಿದವನು ಆ ಲೋಕವನ್ನು ಸೇರುತ್ತಾನೆ. ಅವನಿಗೂ ಸಹ ಸೂರ್ಯನ ಉದಯಾಸ್ತಮಯಗಳಿರುವುದಿಲ್ಲ. ಅವನಿಗೆ ಯಾವಾಗಲೂ ಶಾಶ್ವತವಾದ ಹಗಲೇ ಇರುತ್ತದೆ. ಇದನ್ನೇ,

**ತಸ್ಮಾದ್ವಾ ಏತಂ ಸೇತುಂ ತೀರ್ತ್ವಾಪಿ ನಕ್ತಮಹರೇವಾಭಿನಿಷ್ಪದ್ಯತೇ ಸಕೃದ್ವಿಭಾತೋ ಹ್ಯೇವೈಷ ಬ್ರಹ್ಮಲೋಕಃ ॥**

(ಛಾ. ಉ. ೮-೪-೨)

ಅನಿತ್ಯಾತ್ಮಕಗಳಾದ ಜಗತ್ತುಗಳಿಂದ ಬ್ರಹ್ಮಲೋಕಕ್ಕೆ ಹೋಗಿ ಸೇರತಕ್ಕ ಸೇತುವೆಯನ್ನು ದಾಟಿದನಂತರ ಬ್ರಹ್ಮಲೋಕವನ್ನು ಸೇರಿ ಯಾವ ವಿಧವಾದ ತಮಸ್ಸನ್ನೂ ಕಾಣದೆ ಶಾಶ್ವತವಾದ ಪ್ರಕಾಶವನ್ನನುಭವಿಸುವನು ಎಂದು ವರ್ಣಿಸಿದೆ.

ಇದೇ ವಿಧವಾಗಿ ಪ್ರಕೃತವಾದ ಸೂಕ್ತದಲ್ಲಿ ೫, ೬ ಮತ್ತು ೭ ನೇ ಋಕ್ಕುಗಳಲ್ಲಿ ವರ್ಣಿತವಾದ ಆದಿತ್ಯನ ಸ್ವರೂಪವು ಆದಿತ್ಯನ ಈ ಎರಡು ವಿಧವಾದ ಸ್ವರೂಪವನ್ನೂ ತಿಳಿಸುತ್ತದೆ. ೭ನೇ ಋಕ್ಕಿನಲ್ಲಿ ಉತ್ತರಾರ್ಧವು ಆದಿತ್ಯನ ಲೋಕನಿರ್ವಹಣದ ಕಾರ್ಯವನ್ನೂ ಪೂರ್ವಾರ್ಧವು ಅವನ ಶಾಶ್ವತವಾದುದೂ ಲೌಕಿಕಪ್ರತ್ಯಕ್ಷಕ್ಕೆ ಅತೀತವಾದುದೂ ಆದ ಗೂಢವಾದ ಸ್ವರೂಪವನ್ನೂ ವರ್ಣಿಸುತ್ತವೆ.

**ಈಂ**—ಸಾಧಾರಣವಾಗಿ ಈ ಶಬ್ದಕ್ಕೆ ಅರ್ಥವಿರುವುದಿಲ್ಲ. **ಅಥ ಯೇ ಪ್ರವೃತ್ತೇಽರ್ಥೇಽಮಿತಾಕ್ಷರೇಷು ಗ್ರಂಥೇಷು ವಾಕ್ಯಪೂರಣಾ ಆಗಚ್ಛಂತಿ ಪದಪೂರಣಾಸ್ತೇ ಮಿತಾಕ್ಷರೇಷ್ವನರ್ಥಕಾಃ ಕಮೀಮಿದ್ವಿತಿ ।** (ನಿ. ೧-೯), ಎಂದರೆ ಈಂ ಎಂಬ ಪದವು ಪ್ರತ್ಯೇಕವಾದ ಅರ್ಥವುಳ್ಳದ್ದಾಗಿರುವುದಿಲ್ಲ. ಈ ಪದವು ಅನೇಕ ಕಡೆಗಳಲ್ಲಿ ಕೇವಲ

ವಾಕ್ಯಪೂರಣಕ್ಕಾಗಿ ಉಪಯೋಗಿಸಲ್ಪಡುತ್ತದೆ. ಎಂದು ನಿರುಕ್ತದ ವಿವರಣೆಯಿದ್ದರೂ ಸಹ ಪ್ರಕೃತವಾದ ಋಕ್ಕಿನಲ್ಲಿ ಏತದ್ವಕ್ಷ್ಯಮಾಣಂ ತತ್ತ್ವಂ ಎಂದು ಒಂದು ನಿರ್ದಿಷ್ಟವಾದ ಸಂಕೇತವನ್ನು ತೋರಿಸುವುದಕ್ಕಾಗಿ ಉಪಯೋಗಿಸಲ್ಪಟ್ಟಿದೆ.

ವಾಮುಸ್ಯ—ವನನೀಯಸ್ಯ ಎಂಬ ಪದದಿಂದ ಆದಿತ್ಯನ ಆಕರ್ಷಕವಾದ ರೂಪವು ವರ್ಣಿತವಾಗಿದೆ. ಇದು ಆದಿತ್ಯನ ಬಾಹ್ಯರೂಪವು. ಇಂತಹ ಬಾಹ್ಯವಾದ ಮಂಡಲದ ಒಳಗೆ ಯಾರಿಗೂ ಗೋಚರವಲ್ಲದ ಪರಮಾತ್ಮನ ಪರಮಪದವಿದೆ.



**ಮಾತಾ ಪಿತರಮೃತ ಆ ಬಭಾಜ ಧೀತ್ಯಗ್ರೇ ಮನಸಾ ಸಂ ಹಿ ಜಗ್ಮೇ ।**
**ಸಾ ಬೀಭತ್ಸುರ್ಗರ್ಭರಸಾ ನಿವಿದ್ಧಾ ನಮಸ್ವಂತ ಇದುಪವಾಕಮೀಯುಃ ॥ ೮ ॥**

ಜಗನ್ನಿರ್ಮಾತ್ರಿಯಾದ ಪೃಥ್ವಿಯು ಉದಕಕ್ಕಾಗಿ ಯಾಗಾದಿರೂಪವಾದ ಕರ್ಮದಿಂದ ದ್ಯುಲೋಕಸ್ಥನಾದ ಆದಿತ್ಯನನ್ನು ಸೇವಿಸಿದಳು. ಆದಿತ್ಯನು ಅದಕ್ಕಿಂತಲೂ ಪೂರ್ವಭಾವಿಯಾಗಿಯೇ ಪೃಥ್ವಿಯ ಅಭೀಷ್ಟವನ್ನು ತಿಳಿದ ಮನಸ್ಸಿನಿಂದ ವೃಷ್ಟಿಯನ್ನು ಸುರಿಸಿದನು. ಪೃಥ್ವಿಯು ಗರ್ಭಧಾರಣೆಯ ಇಚ್ಛೆಯಿಂದಲೂ, ಗರ್ಭೋತ್ಪತ್ತಿಗೆ ಸಾಧನವಾದ ರಸದಿಂದಲೂ ಸಂಯುಕ್ತಳಾದಳು. ಒಡನೆಯೇ ಮುಂದೆ ಖಂಡಿತವಾಗಿಯೂ ಬೆಳೆಯತಕ್ಕ ವ್ರೀಹ್ಯಾದ್ಯನ್ನವನ್ನು ನಿರೀಕ್ಷಿಸಿದ ಯಜಮಾನರೆಲ್ಲರೂ ಪರಸ್ಪರ ಅಭಿನಂದನ ವಾಕ್ಯಗಳನ್ನು ವಿನಿಮಯಮಾಡಿಕೊಂಡರು.

ಈ ಋಕ್ಕಿನಲ್ಲಿ ಪೃಥಿವಿಗೂ ಆದಿತ್ಯನಿಗೂ ದಾಂಪತ್ಯಸಂಬಂಧವನ್ನು ಹೇಳಿ ಆ ದಾಂಪತ್ಯದ ಪ್ರೇಮದ ರೀತಿಯನ್ನೂ, ಆ ಪ್ರೇಮಫಲದ ಸ್ವರೂಪವನ್ನೂ ತಿಳಿಸಿದೆ. ಅದನ್ನೇ ಸಾಯಣರು ಭಾಷ್ಯದಲ್ಲಿ **“ಯಥಾ ಕಾಚನ ಯೋಷಿದಪತ್ಯಾರ್ಥಂ ಸ್ವಪತಿಂ ಯುವಾನಾಂ ಯೌತಿ ಸ ಚ ತಸ್ಯಾಮನುರಾಗಯುಕ್ತಃ ಸಂಗತೋ ಭವತಿ ಸಾ ಚಾಂತರ್ವತ್ನೀ ಸತೀ ಪುತ್ರಾನ್ ಜನಯತೀತಿ ತದದ್ವದತ್ರಾಪಿ”** ಪತಿಪ್ರೇಮವನ್ನು ಬಯಸಿದ ಸ್ತ್ರೀಯು ಪುತ್ರಾರ್ಥವಾಗಿ ಪತಿಯ ಸಂಗಮವನ್ನು ಬಯಸಿದಾಗ ಪತಿಯೂ ಸಹ ಅವಳಲ್ಲಿ ಅತ್ಯಂತ ಅನುರಾಗವುಳ್ಳವನಾಗಿ ಅವಳ ಬಯಕೆಯನ್ನೀಡೇರಿಸಿದರೆ ಆಗ ಅವಳು ಗರ್ಭವತಿಯಾಗಿ ಪುತ್ರನನ್ನು ಪಡೆಯುವಂತೆ ಪೃಥ್ವೀರೂಪಳಾದ ಸ್ತ್ರೀಯು ಆದಿತ್ಯರೂಪನಾದ ಪತಿಯಲ್ಲಿ ಪ್ರೇಮವನ್ನು ತೋರಿ ಅದಕ್ಕೆ ಪ್ರತಿಯಾದ ಅವನ ಪ್ರೇಮವನ್ನೂ ಪಡೆದುದರ ಫಲವಾಗಿ ಅನ್ನರೂಪವಾದ ಫಲವನ್ನು ಪಡೆದಳೆಂದು ವಿವರಿಸಿದೆ.

**ಮಾತಾ—ಸರ್ವಸ್ಯ ನಿರ್ಮಾತ್ರೀ ಪೃಥಿವೀ ।** ಸಕಲವನ್ನೂ ನಿರ್ಮಿಸತಕ್ಕ ಪೃಥಿವಿಯೆಂದರ್ಥ.

**ತದ್ಯದುಪಯಾಮೇನ ಗ್ರಹಾ ಗೃಹಾ ಗೃಹ್ಯಂತೇ ಅನಯೈವ ತದ್ಗೃಹ್ಯಂತೇಽಥ ಯದ್ಯೋನೌ ಸಾದಯತೀಯಂ ವಾ ಅಸ್ಯ ಸರ್ವಸ್ಯ ಯೋನಿರಸ್ಯೈ ವಾ ಇಮಾಃ ಪ್ರಜಾಃ ಪ್ರಜಾತಾಃ ॥ ತಂ ವಾ ಏತಗ್ಂ ರೇತೋ ಭೂತಗ್ಂ ಸೋಮಮೃತ್ವಿಜೋ ಬಿಭ್ರತಿ ಯದ್ವಾ ಅಯೋನೌ ರೇತಃ ಸಿಚ್ಯತೇ ಪ್ರ ವೈ ತನ್ಮೀಯತೇಽಥ ಯದ್ಯೋನೌ ಸಾದಯತ್ಯಸ್ಯಾಮೇವ ತತ್ಸಾದಯತಿ ॥** (ಶ. ಬ್ರಾ. ೪-೧-೨-೯ ರಿಂದ ೧೦)

ಉಪಯಾಮುಗ್ರಹವು ಈ ಪೃಥ್ವಿಯ ಸಹಾಯದಿಂದ ಗ್ರಹಿಸಲ್ಪಡುತ್ತದೆ. ಮತ್ತು ಈ ಪೃಥ್ವಿಯೇ ಸಕಲ ಪ್ರಜೆಗಳ ಉತ್ಪತ್ತಿಗೂ ಯೋಗಿಯಾಗಿದ್ದು ಮಾತೃವಾಗಿರುವುದರಿಂದ **ಉಪಯಾಮುಗ್ರಹವನ್ನೂ ಯೋನಿಯಲ್ಲೇ ಸ್ಥಾಪಿಸುತ್ತಾನೆ.** ಯೋನಿಯಲ್ಲಿ ಸ್ಥಾಪಿತವಾದುದೆಲ್ಲಾ ಪೃಥ್ವಿಯಲ್ಲಿ ಸ್ಥಾಪಿತವಾದಂತೆಯೇ ಸರಿ ಎಂದು ಸಕಲ ಭೂತಗಳಿಗೂ ಪೃಥ್ವಿಯೂ ಮಾತೆ ಯೆಂಬಂಶವನ್ನು ವರ್ಣಿಸಿದೆ. ಪೃಥ್ವಿಯು ಮಾತೆಯಾದರೆ ದ್ಯುಲೋಕವು ಪಿತೃವೆಂದು ದ್ಯಾವಾಪೃಥಿವಿಗಳ ದಾಂಪತ್ಯಸಂಬಂಧ ವನ್ನು ತಿಳಿಸಿದೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಆದಿತ್ಯನಿಗೂ ಪೃಥ್ವಿಗೂ ಇರತಕ್ಕ ಸಂಬಂಧವನ್ನು ಹೇಳಿರುವುದರಿಂದ ದ್ಯುಲೋಕಕ್ಕೂ ಪೃಥ್ವಿಗೂ ಇರತಕ್ಕ ಸಂಬಂಧಕ್ಕೂ ಆದಿತ್ಯನಿಗೂ ಪೃಥ್ವಿಗೂ ಇರತಕ್ಕ ಸಂಬಂಧಕ್ಕೂ ವ್ಯತ್ಯಾಸವಿದೆಯೆಂದು ತಿಳಿಯಬೇಕಾಗಿಲ್ಲ.

**ಉದ್ವಯಂ ತಮಸಸ್ಪರೀತಿ ಪಾಪ್ಮಾ ವೈ ತಮಃ ಪಾಪ್ಮಾನಮೇವ ತಮೋಽಪಹತೇ ಸ್ವಃ ಪಶ್ಯಂತ ಉತ್ತರಮಿತ್ಯಯಂ ವೈ ಲೋಕೋಽದ್ಭ್ಯ ಉತ್ತರೋಽಸ್ಮಿನ್ನೇವ ಲೋಕೇ ಪ್ರತಿ-ತಿಷ್ಠತಿ ದೇವಂ ದೇವತ್ರಾ ಸೂರ್ಯಮಗನ್ಮಜ್ಯೋತಿರುತ್ತಮಮಿತಿ ಸ್ವರ್ಗೋ ವೈ ಲೋಕಃ ಸೂರ್ಯೋ ಜ್ಯೋತಿರುತ್ತಮಗ್ಂ ಸ್ವರ್ಗ ಏವ ಲೋಕೇಽಂತತಃ ಪ್ರತಿತಿಷ್ಠತಿ ॥**

(ಶ. ಬ್ರಾ. ೧೪-೩-೧-೨೮)

ಪ್ರಕಾಶಮಾನರಾದ ಸಕಲದೇವತೆಗಳಿಗಿಂತಲೂ ಅತ್ಯಂತ ಪ್ರಕಾಶಮಾನನಾದ **ಸೂರ್ಯನೇ** ಅಂತರಿಕ್ಷಲೋಕವಾಗಿದ್ದಾನೆ. ಅಂತರಿಕ್ಷದಲ್ಲಿಯೇ ಅವನು ಶಾಶ್ವತವಾಗಿ ಪ್ರತಿಷ್ಠಾಪಿತನಾದುದರಿಂದ ಅವನಿಗೂ ಆ ಲೋಕಕ್ಕೂ ಪೂರ್ಣವಾದ ವಾಕ್ಯವೇ ಇರುತ್ತದೆ. ಇತ್ಯಾದಿಯಾಗಿ ತಾದಾತ್ಮ್ಯವನ್ನು ಹೇಳಿರುವುದರಿಂದ ಆದಿತ್ಯನಿಗೂ ಪೃಥ್ವಿಗೂ ದಾಂಪತ್ಯಸಂಬಂಧವನ್ನು ಹೇಳಿದರೆ ಯಾವ ಅರ್ಥವಿದೆಯೋ ಪೃಥ್ವಿಗೂ ಅಂತರಿಕ್ಷಕ್ಕೂ ದಾಂಪತ್ಯಸಂಬಂಧವನ್ನು ಹೇಳುವುದರಲ್ಲಿಯೂ ಅದೇ ಅರ್ಥವಿದೆ. ಆದುದರಿಂದಲೇ,

**ಅಥ ಯತ್ರಾಹೋಪಹೂತೇ ದ್ಯಾವಾಪೃಥಿವೀ ಇತಿ । ತದಗ್ನೀಧ ಆದಧಾತಿ ತದಗ್ನೀ-ತ್ಪ್ರಾಶ್ನಾತ್ಯುಪಹೂತಾ ಪೃಥಿವೀ ಮಾತೋಪ ಮಾಂ ಪೃಥಿವೀ ಮಾತಾ ಹ್ವಯತಾಮಗ್ನಿರಾ-ಗ್ನೀಧ್ರಾಹೋಪಹೂತೋ ದ್ಯೌಷ್ಪಿತೋಪ ಮಾಂ ದ್ಯೌಷ್ಪಿತಾ ಹ್ವಯತಾಮಗ್ನಿರ್ಗ್ನೀಧ್ರಾತ್ಸ್ವಾ-ಹೇತಿ ದ್ಯಾವಾ ಪೃಥಿವ್ಯೋ ವಾಽಏಷ ಯದಾಗ್ನೀಧ್ರಃ ॥** (ಶ. ಬ್ರಾ. ೧-೮-೧-೪೧)

"ದ್ಯಾವಾಪೃಥಿವಿಗಳು ಇಲ್ಲಿಗೆ ಆಹೂತರಾಗಿದ್ದಾರೆ" ಎಂದು ಹೋತೃವು ಪಠಿಸಿ ಆಗ್ನೀಧ್ರನಿಗೆ ಒಪ್ಪಿಸಿದಾಗ ಆಗ್ನೀಧ್ರನು "ಮಾತೆಯಾದ ಪೃಥ್ವಿಯು ಇಲ್ಲಿಗೆ ಆಹೂತಳಾಗಿದ್ದಾಳೆ. ಅದರಂತೆಯೇ ಅವಳು ನನ್ನನ್ನೂ ಆಹ್ವಾನಿಸಲಿ ನಾನು ಆಗ್ನೀಧ್ರ ಸ್ಥಾನವನ್ನು ಆಕ್ರಮಿಸಿರುವುದರಿಂದ ಅಗ್ನಿಯೇ ಆಗಿದ್ದೇನೆ. ಅದರಂತೆಯೇ ಪಿತೃವಾದ ದ್ಯುಲೋಕಾದಿ ದೇವತೆಯು ಆಹ್ವಾನಿ ಸಲ್ಪಟ್ಟಿದ್ದಾನೆ" ಇತ್ಯಾದಿಯಾಗಿ ದ್ಯಾವಾಪೃಥಿವಿಗಳನ್ನು ತಂದೆತಾಯಿಗಳೆಂದು ಅನೇಕಕಡೆಗಳಲ್ಲಿ ನಿರ್ದೇಶಿಸಿದೆ. ಇಂತಹ ಸಂದರ್ಭ ಗಳಲ್ಲಿ ಪಿತೃವೆಂದರೆ ದ್ಯುಲೋಕವಾಗಬಹುದು ಅಥವಾ ದ್ಯುಲೋಕಸ್ಥನಾದ ಆದಿತ್ಯನಾಗಬಹುದು. ಉದಾಹರಣೆಗೆ—

**ಪಿತಾ ನೋಽಸಿ ಪಿತಾ ನೋ ಬೋಧೀತಿ । ಏಷ ವೈ ಪಿತಾ ಯ । ಏಷ ತಪತ್ಯೇಷ ಉ ಪ್ರವರ್ಗ್ಯಃ ।** (ಶ. ಬ್ರಾ. ೧೪-೧-೪-೧೫)

ನೀನೇ ನಮ್ಮ ಪಿತೃವು. ನಮ್ಮ ಪಿತೃವಾಗಿಯೇ ವರ್ತಿಸು. ಅದೋ ಅಂತರಿಕ್ಷದಲ್ಲಿ ಬೆಳಗುತ್ತಿರುವ ಆದಿತ್ಯನೇ ನಮ್ಮ ಪಿತೃವು ಮತ್ತು ಪ್ರವರ್ಗ್ಯವೇ ಆದಿತ್ಯನು ಇತ್ಯಾದಿಯಾಗಿ ಅಂತರಿಕ್ಷಸ್ಥನಾದ ಆದಿತ್ಯನನ್ನು ಪಿತೃವೆಂದು ನಿರ್ದೇಶಿಸಿದೆ. ಈರೀತಿ

ಯಾಗಿ ಜಗತ್ತಿನ ಪ್ರಜೆಗಳಿಗೆ ಮಾತಾಪಿತೃಗಳಾಗಿರುವ ಪೂರ್ವಭಾವಿಯಾದ ದಾಂಪತ್ಯಪ್ರೇಮವನ್ನು ಪ್ರಕೃತವಾದ ಋಕ್ಕಿನಲ್ಲಿ ವರ್ಣಿಸಿವೆ. ಅನೇಕಸಂದರ್ಭಗಳಲ್ಲಿ ಲೌಕಿಕವಾದ ದಂಪತಿಗಳೂ ಸಹ ತಮ್ಮನ್ನು ದ್ಯಾವಾಪೃಥಿವಿಗಳೆಂದೇ ಹೋಲಿಸಿಕೊಂಡು ತಮ್ಮ ಆತ್ಯಂತಿಕವಾದ ಸಂಬಂಧವನ್ನು ವರ್ಣಿಸುವುದೂ ವಾಡಿಕೆಯಾಗಿದೆ. ಉದಾಹರಣೆಗೆ -

**ದ್ಯೌರಹಂ ಪೃಥಿವೀ ತ್ವಂ ತಾವೇಹಿ ಸಂರಂಭಾವಹೈ ।** (ಬೃ. ಉ. ೬-೪-೨೦)

**ದ್ಯೌರಹಂ ಪೃಥಿವೀ ತ್ವಗ್‌ಂ ರೇತೋಭೃತ್ತ್ವಂ..........।** (ತೈ. ಏಕಾಗ್ನಿಕಾಂಡ. ೧-೩)

ನಾವಿಬ್ಬರೂ ದ್ಯಾವಾಪೃಥಿವಿಗಳು. ನಾವಿಬ್ಬರೂ ಸಂತಾನೋತ್ಪತ್ತಿಗಾಗಿ ಒಟ್ಟಿಗೆ ಸೇರಿ ಪ್ರಯತ್ನಪಡೋಣ ಎಂದು ಪತಿಯು ಪತ್ನಿಯನ್ನುದ್ದೇಶಿಸಿ ಹೇಳುತ್ತಾನೆ. ಈರೀತಿಯಾಗಿ ಅನೇಕಕಡೆಗಳಲ್ಲಿ ಆದಿತ್ಯಲೋಕಕ್ಕೂ ಪೃಥ್ವಿಗೂ ದಾಂಪತ್ಯ ಸಂಬಂಧವು ವರ್ಣಿತವಾಗಿದೆ. ಆದಿದಂಪತಿಗಳಾದ ಇವರು ಲೋಕಕ್ಕೆ ತಂದೆತಾಯಿಗಳಾಗಿದ್ದಾರೆ. ಆದರಲ್ಲಿ ಮಾತೆಯು **ಧೀತಿ** ಯಿಂದ **ಪಿತೃ**ವನ್ನು ಸೇವಿಸಿದಳೆಂದಿದೆ.

**ಧೀತ್ಯಾ**— **ಯಾಗಾದಿರೂಪೇಣ ಕರ್ಮಣಾ ।** ಯಾಗಾದಿರೂಪವಾದ ಕರ್ಮಗಳಿಂದ ಎಂದರ್ಥ. **ಧೀತಿ** ಶಬ್ದಕ್ಕೆ **ಕರ್ಮ, ಪ್ರಜ್ಞಾ** ಎಂಬ ಎರಡು ಅರ್ಥವೂ ಉಂಟು. [ನಿರುಕ್ತದಲ್ಲಿ (ನಿ. ೩-೮) ಅಂಗುಳಿನಾಮಗಳಲ್ಲೂ ಈ ಪದವು ಪಠಿತ ವಾಗಿದೆ] ನಿರುಕ್ತಕಾರರು **ಕರ್ಮ, ಪ್ರಜ್ಞಾ** ಎಂಬ ಎರಡು ಅರ್ಥಗಳೂ ಇರತಕ್ಕ ಎರಡು ಋಕ್ಕುಗಳನ್ನು ಉದಹರಿಸಿದ್ದಾರೆ.

**ಪಾರಾವತಘ್ನೀಮವಸೇ ಸುವೃಕ್ತಿಭಿಃ ಸರಸ್ವತೀಮಾ ವಿವಸೇಮ ಧೀತಿಭಿಃ ।** (ಋ. ಸಂ. ೬-೬೧-೨)

ಎಂಬ ಋಕ್ಕಿನಲ್ಲಿ **ಧೀತಿಭಿಃ** ಎಂದರೆ **ಕರ್ಮಭಿಃ** ಎಂದೂ,

**ಋತಸ್ಯ ಹಿ ಶುರುಧಃ ಸಂತಿ ಪೂರ್ವೀರ್ಋತಸ್ಯ ಧೀತಿರ್ವೃಜಿನಾನಿ ಹಂತಿ ॥** (ಋ. ಸಂ. 4-೨೩-೮)

ಎಂಬಲ್ಲಿ **ಪ್ರಜ್ಞಾ** ಎಂದೂ ಅರ್ಥ ಮಾಡಿದ್ದಾರೆ. ಸ್ತುತಿಯೆಂಬ ಅರ್ಥದಲ್ಲೂ ಕೆಲವೆಡೆಗಳಲ್ಲಿ ಈ ಪದದ ಪ್ರಯೋಗವಿದೆ ಪ್ರಕೃತವಾದ ಋಕ್ಕಿನಲ್ಲಿ ಯಾಗರೂಪವಾದ ಕರ್ಮವೆಂದರ್ಥ.

**ಗರ್ಭರಸಾ**—**ಗರ್ಭೋತ್ಪತ್ತಿನಿಮಿತ್ತೇನ ರಸೇನ ನಿವಿದ್ಧಾ ನಿತರಾಂ ವಿದ್ಧಾ ಆಸೀತ್ ।** ಗರ್ಭೋತ್ಪತ್ತಿಗೆ ಸಾಧನವಾದ ರಸದಿಂದ ಪೂರ್ಣವಾಗಿ ಸಂಯುಕ್ತಳಾದಳು ಎಂಬುದನ್ನು ಸಾಯಣರು ವಿವರಿಸುತ್ತಾ, **ಗರ್ಭೇ ರಸಃ ಓಷಧ್ಯಾದ್ಯುತ್ಪಾದನಸಮರ್ಥಮುದಕಂ ಯಸ್ಯಾಃ ಸಾ ತಾದೃಶೀ ಉದಕೇನ ಅತ್ಯಂತಂ ಕ್ಲಿನ್ನಾ ನಿವಿದ್ಧಾ ಕೃಷೀವಲೈರ್ಹಲಮುಖೇನ ನಿತರಾಂ ವಿದಾರಿತಾ ಭವತಿ ।** ಸಸ್ಯಮೂಲಿಕಾದಿಗಳ ಉತ್ಪತ್ತಿಗೆ ಸಾಧನವಾದ ಉದಕವನ್ನು ಗರ್ಭದಲ್ಲಿ ಧರಿಸಿ ಎಂದರೆ ಪೃಥ್ವಿಯೆಲ್ಲಾ ಆ ಉದಕದಿಂದ ತೋಯಲ್ಪಟ್ಟನಂತರ ವ್ಯವಸಾಯಗಾರರಿಂದ ಉಳಲ್ಪಟ್ಟು ಸಸ್ಯಸಂಪದ್ರೂಪವಾದ ಸಂತಾನೋತ್ಪತ್ತಿಗೆ ಅಣಿಮಾಡಲ್ಪಡುವುದೆಂದು ತಿಳಿಸಿದ್ದಾರೆ.

**ಉಪವಾಕಂ**—ಈ ಪದಕ್ಕೆ ಎರಡು ವಿಧವಾಗಿ ಅರ್ಥಮಾಡಿದ್ದಾರೆ. ಮೊದಲನೆಯದಾಗಿ, **ಉಪೇತ್ಯ ವಚನಂ ಪರಸ್ಪರಂ ಸಮ್ಯಗಭಿವೃದ್ಧಾನಿ ಸಸ್ಯಾನೀತಿ ವಚನಂ ।** ಬಂಧುಗಳಲ್ಲಿ ಅಥವಾ ಸುಹೃತ್ತುಗಳಲ್ಲಿ ಒಬ್ಬರಿಗೊಬ್ಬರು ಕಲೆತಾಗ ಸಕಲಪ್ರಜೆಗಳೂ ಸಹ ಸಸ್ಯಾಭಿವೃದ್ಧಿಯ ವಿಷಯದಲ್ಲೂ ಫಲಸಂಪತ್ತಿನ ವೃದ್ಧಿಯ ವಿಷಯದಲ್ಲಿಯೂ ತಮ್ಮ ತಮ್ಮ ಸಂತೋಷ ವನ್ನು ವ್ಯಕ್ತಪಡಿಸುವುದಲ್ಲದೇ ಅಭಿನಂದನವಾಕ್ಯಗಳನ್ನು ಆಡುವರು. ಇದು ಸಾಧಾರಣವಾಗಿ ಲೌಕಿಕವಾದ ಉಪವಚನರೂಪದ ಸಂತೋಷಾಭಿವ್ಯಕ್ತಿಯಾಗುತ್ತದೆ.

**ಉದೂ ಅಯಾಂ ಉಪವಕ್ತೇವ ಬಾಹೂ ಹಿರಣ್ಯಯಾ ಸವಿತಾ ಸುಪ್ರತೀಕಾ ।**
**ದಿವೋ ರೋಹಾಂಸ್ಯರುಹತ್ಪೃಥಿವ್ಯಾ ಅರೀರಮತ್ಪತಯತ್ಕಚ್ಚಿದಭ್ವಂ ॥**

(ಋ. ಸಂ. ೬-೭೧-೫)

ಎಂಬಲ್ಲಿ ಸವಿತೃವಿನ ಆಕರ್ಷಕವಾದ ರಶ್ಮಿಪ್ರಸರಣದ ಪ್ರಕಾರವನ್ನು ಲೌಕಿಕವಾದ ಸಂತೋಷಾಭಿವ್ಯಕ್ತಿಗೆ ಹೋಲಿಸಿ ಸುಹೃತ್ತಾದವನು ಮಿತ್ರನ ಅಭ್ಯುದಯದಲ್ಲಿ ತನ್ನ ತೃಪ್ತಿಯನ್ನು ಸೂಚಿಸಲು ಕೈಗಳನ್ನೆತ್ತಿ ಅಭಿನಂದನಮಾಡುವಂತೆ ತಾನೂ ರಶ್ಮಿಪ್ರಸರಣದೊಡನೆ ಉದಯಿಸಲಿ ಎಂದು ವರ್ಣಿಸಿದೆ. ಇದು ಲೌಕಿಕವಾದ **ಉಪವಾಕದ** ಸ್ವರೂಪವನ್ನು ಹೇಳಿದಂತಾಯಿತು.

ಇದಲ್ಲದೇ, **ಉಪವಚನ**ವೆಂಬ ಕರ್ಮಾಂಗವಾದ ಮಂತ್ರಪಠಣವೂ ಇರುತ್ತದೆ. ಈ ಅರ್ಥವೂ ಇಲ್ಲಿ ಸಾಧ್ಯವಾಗುತ್ತದೆಂದು ಸಾಯಣರು **ಹವಿರ್ಲಕ್ಷಣಾನ್ನವಂತಃ ಉಪೇತ್ಯ ವಚನಂ ಪ್ರೈಷಾದಿರೂಪಮೀಯುಃ । ವೃಷ್ಟ್ಯಾ ಸತ್ಯಾಂ ಸಸ್ಯಾದಿದ್ವಾರಾ ಯಾಗಮನುತಿಷ್ಠೇಯುರಿತ್ಯರ್ಥಃ ॥** ವೃಷ್ಟಿಪತನವಾದನಂತರ ಸಸ್ಯಾದಿಗಳು ಬೆಳೆದು ಅವುಗಳು ಫಲಕಾಲವನ್ನು ಸಮೀಪಿಸಿದಾಗ ಹವಿಸ್ಸಿನರೂಪದ ಅನ್ನವನ್ನು ಹೊಂದಿ ಯಾಗವನ್ನು ನೆರವೇರಿಸುವಾಗ **ಪ್ರೈಷವೇ** ಮುಂತಾದ ಮಂತ್ರಗಳನ್ನು ಪಠಿಸಿದರು ಎಂದು ವಿವರಿಸಿದ್ದಾರೆ. ಈ ಪ್ರೈಷಮಂತ್ರವನ್ನು ಋತ್ವಿಕ್ಕುಗಳಲ್ಲಿ ಒಬ್ಬರು ಪಠಿಸಬೇಕು. ಅವರಲ್ಲಿ ಯಾರೆಂಬುದು ನಿಷ್ಕೃಷ್ಟವಾಗಿ ಹೇಳುವಂತಿಲ್ಲ. ಏತಕ್ಕೆಂದರೆ,

**ವೇಷಿ ಹ್ಯಧ್ವರೀಯತಾಮುಪವಕ್ತಾ ಜನಾನಾಂ । ಹವ್ಯಾ ಚ ಮಾನುಷಾಣಾಂ ।**

(ಋ. ಸಂ. ೪-೯-೫)

ಎಂಬ ಋಕ್ಕಿನಲ್ಲಿ **ಉಪವಕ್ತಾ** ಎಂಬ ಪದವನ್ನು ವಿವರಿಸುವಾಗ ಸಾಯಣರು **ಉಪವಕ್ತಾ, ಅಧ್ವರ್ಯುಪ್ರಭೃತೀನಾಂ ಸರ್ವೇಷಾಂ ಕರ್ಮಣಾಮನುಜ್ಞಾರ್ಥಂ "ಮಾಂ ಪ್ರಣಯ" ಇತ್ಯಾದಿ ರೂಪಸ್ಯ ವಾಕ್ಯಸ್ಯ ವಕ್ತಾ ಸನ್ ಬ್ರಹ್ಮಾ ಚಾಸಿ ॥ "ಮಾಂ ಪ್ರಣಯ"** ಇತ್ಯಾದಿ ವಾಕ್ಯಗಳನ್ನುಚ್ಚರಿಸುತ್ತಾ ಅಧ್ವರ್ಯುವೇ ಮೊದಲಾದ ಎಲ್ಲಾ ಋತ್ವಿಕ್ಕುಗಳ ಕರ್ಮಗಳಿಗೂ ಅನುಜ್ಞೆಯನ್ನು ಕೊಡತಕ್ಕ ಬ್ರಹ್ಮನೆಂದರ್ಥ. ಆದುದರಿಂದ ಉಪವಚನವನ್ನು ಹೇಳತಕ್ಕವನು ಬ್ರಹ್ಮನೆಂದು ಇದರಿಂದ ತಿಳಿಯುತ್ತದೆ. ಅಥವಾ,

**ಉಪವಕ್ತಾ ಸರ್ವೇಷಾಂ ಕರ್ಮಣಾಮವೈಕಲ್ಯಾರ್ಥಮುಪದ್ರಷ್ಟಾ ವಾ ಸದಸ್ಯೋಽಸಿ ।**
**"ಸ ಹಿ ಸಪ್ತದಶಃ ಕರ್ಮಣಾಮುಪದ್ರಷ್ಟಾ ಭವತಿ" ॥ ಇತ್ಯಾಪಸ್ತಂಬೇನೋಕ್ತತ್ವಾತ್ ॥**

ಸಕಲಕರ್ಮಗಳನ್ನೂ ನ್ಯೂನತೆಯಿಲ್ಲವೇ ನಿರ್ವಿಘ್ನವಾಗಿ ನೆರವೇರುವಂತೆ ನೋಡಿಕೊಳ್ಳತಕ್ಕ ಹದಿನೇಳನೆಯ ಸದಸ್ಯನು ಉಪದ್ರಷ್ಟೃವಾಗಿರುವನು. ಆಪಸ್ತಂಬರು "**ಸಪ್ತದಶಃ ಕರ್ಮಣಾಮುಪದ್ರಷ್ಟಾ ಭವತಿ**" ಎಂದು ಇವನ ಲಕ್ಷಣವನ್ನು ತಿಳಿಸಿದ್ದಾರೆ. ಈ ಉಪದ್ರಷ್ಟೃವಿನ ಸ್ವರೂಪವನ್ನು ತಿಳಿಸುತ್ತಾ ತೈತ್ತಿರೀಯಬ್ರಾಹ್ಮಣದಲ್ಲಿ ಈರೀತಿ ಹೇಳಿದೆ.

**ಬ್ರಾಹ್ಮಣೋ ದಕ್ಷಿಣತ ಉಪಾಸ್ತೇ । ಬ್ರಾಹ್ಮಣೋ ವೈ ಪ್ರಜಾನಾಮುಪದ್ರಷ್ಟಾ ।**
**ಉಪದ್ರಷ್ಟುಮತ್ಯೇವ ಪ್ರಜಾಯತೇ ॥**

(ತೈ. ಬ್ರಾ. ೨-೨-೧-೩)

ಎಂಬ ವಾಕ್ಯದಲ್ಲಿ **ಉಪದ್ರಷ್ಟೃ** ಶಬ್ದವನ್ನು ವಿವರಿಸುತ್ತಾ ಸಾಯಣರು, **ಉಪದ್ರಷ್ಟಾ ಹಿತಾಹಿತಸ್ಯ ಪ್ರಜಾನಾಮುಪದೇಷ್ಟಾ ।** ಕರ್ಮಗಳಲ್ಲಿ ನ್ಯೂನತೆಯಿಲ್ಲದಂತೆ ನೋಡಿಕೊಂಡು ಎಲ್ಲರಿಗೂ ಹಿತವಾವುದು ಎಂಬುದನ್ನು ತಿಳಿಸತಕ್ಕ ಸದಸ್ಯನೆಂದು

ತಿಳಿಸಿದ್ದಾರೆ. ಇಲ್ಲಿ ಉದಾಹೃತವಾದ (ಋ. ಸಂ. ೪-೯-೫) ಋಕ್ಕಿನ ವಿವರಣೆಯಲ್ಲಿ **ಉಪವಕ್ತೃವಿಗೂ ಉಪದ್ರಷ್ಟೃವಿಗೂ** ತಾದಾತ್ಮ್ಯವನ್ನು ಹೇಳಿದೆ. ಪುನಃ ತೈತ್ತಿರೀಯಬ್ರಾಹ್ಮಣದಲ್ಲಿ ಉಕ್ತವಾಗಿರುವ,

**ಪ್ರಜಾಪತಿರಕಾಮಯತ ಪ್ರಜಾಃ ಸೃಜೇಯೇತಿ । ಸ ಏತಂ ದಶಹೋತಾರಮಪಶ್ಯತ್ ॥**

(ತೈ. ಬ್ರಾ. ೨-೨.೧-೧)

ಎಂಬಲ್ಲಿ ಸಾಯಣರು ದಶಹೋತೃಗಳನ್ನು ತಿಳಿಸುವಾಗ,

**ಚಿತ್ತಿಃ ಸ್ರುಕ್, ಚಿತ್ತಮಾಜ್ಯಂ, ವಾಗ್ವೇದಿಃ ಆಧೀತಂ ಬರ್ಹಿಃ, ಕೇತೋ ಅಗ್ನಿಃ, ವಿಜ್ಞಾತಮಗ್ನಿಃ ವಾಕ್ಪತಿರ್ಹೋತಾ, ಮನ ಉಪವಕ್ತಾ .... .... .... .... ॥**

ಎಂಬ ತೈತ್ತಿರೀಯಾರಣ್ಯಕದ ಮಂತ್ರವನ್ನು ದಹರಿಸಿ **ಉಪವಕ್ತೃಶಬ್ದೇನಾನುವಚನಕರ್ತುರ್ಹೋತುಃ ಪುರಾ ಪ್ರೈಷವಕ್ತಾ ಮೈತ್ರಾವರುಣೋ ವಿವಕ್ಷಿತಃ** । ಹೋತೃವಿನ ಮುಂಭಾಗದಲ್ಲಿ ಅವನ ಸಹಾಯಕನಾದ ಮೈತ್ರಾವರುಣನು ಉಪವಚನವನ್ನು ಪಠಿಸುತ್ತಾನೆಂದು ವಿವರಿಸಿದ್ದಾರೆ. ಈರೀತಿ ಪ್ರಕೃತವಾದ ಋಕ್ಕಿನಲ್ಲಿ ಕರ್ಮಾಂಗವಾದ ಮಂತ್ರ ಪಠನವಾದರೆ **ಬ್ರಹ್ಮನೋ, ಉಪದ್ರಷ್ಟೃವೋ** ಅಥವಾ **ಮೈತ್ರಾವರುಣನೋ,** ಪಠಿಸತಕ್ಕ ಉಪವಚನರೂಪವಾದ ಮಂತ್ರವೆಂದಾ**ಗುತ್ತ**ದೆ. ಅಥವಾ ಅಭಿನಂದನವಾಕ್ಯವೆಂದಾಗುತ್ತದೆ.



**ಯುಕ್ತಾ ಮಾತಾಸೀದ್ಧುರಿ ದಕ್ಷಿಣಾಯಾ ಅತಿಷ್ಠದ್ಗರ್ಭೋ ವೃಜನೀಷ್ವಂತಃ । ಅಮಿಮೇದ್ವತ್ಸೋ ಅನು ಗಾಮಪಶ್ಯದ್ವಿಶ್ವರೂಪ್ಯಂ ತ್ರಿಷು ಯೋಜನೇಷು ॥ ೯ ॥**

ಸಕಲಕ್ಕೂ ಮಾತೆಯಾದ ದ್ಯುಲೋಕವು ಇಷ್ಟಾರ್ಥಗಳನ್ನೂ ನೆರವೇರಿಸಲು ಸಮರ್ಥಳಾದ ಪೃಥಿವಿಯ ರಕ್ಷಣಾರೂಪವಾದ ಕರ್ತವ್ಯನಿರ್ವಹಣೆಯಲ್ಲಿ ನಿಯುಕ್ತಳಾಗಿದ್ದಾಳೆ. ಗರ್ಭಸ್ಥಾನದಲ್ಲಿರುವ ಉದಕಸಂಘವು ಉದಕಗಳಿಂದ ತುಂಬಿದ ಮೇಘಪಂಕ್ತಿಗಳ ಮಧ್ಯಭಾಗದಲ್ಲಿ ನೆಲೆಸಿದೆ. ಪುತ್ರಸ್ಥಾನದಲ್ಲಿರುವ ಉದಕಸಂಘವೂ ಮೇಘವೂ ವಾಯುವೂ, ಮತ್ತು ರಶ್ಮಿಯೂ ಸಂಯುಕ್ತವಾಗಿದ್ದಾಗ ಗುಡುಗು ಶಬ್ದವನ್ನುಂಟುಮಾಡುತ್ತದೆ. ಅನಂತರ ನಾನಾ ರೂಪವುಳ್ಳ ಪೃಥ್ವಿಗೆ ಮಳೆಯನ್ನು ಸುರಿಸುತ್ತದೆ.

ಹಿಂದಿನ ಋಕ್ಕಿನಲ್ಲಿ ಪೃಥಿವಿಯನ್ನು ಮಾತೆಯೆಂದೂ ಅಂತರಿಕ್ಷಸ್ಥನಾದ ಆದಿತ್ಯನನ್ನು ಪಿತೃವೆಂದೂ ನಿರ್ದೇಶಿಸಿದೆ. ಇಲ್ಲಿ ಅಂತರಿಕ್ಷವನ್ನು ಮಾತೆಯೆಂದು ಕರೆದಿದೆ. ಭೂತಗಳ ನಿರ್ಮಾಣದ ಕಾರ್ಯದಲ್ಲಿ ಪೃಥಿವ್ಯಂತರಿಕ್ಷಗಳೆರಡಕ್ಕೂ ಸಹ ವಿಶೇಷ ರೀತಿಯ ಶಕ್ತಿಯಿದೆಯೆಂದು ಇದರಿಂದ ತಿಳಿಸಿದೆ. ನಿರ್ಮಾಣಕಾರ್ಯವೊಂದರಲ್ಲೇ ಅಲ್ಲದೆ ಧಾರಣ ಮತ್ತು ರಕ್ಷಣಾಕಾರ್ಯಗಳನ್ನೂ ಪೃಥಿವಿಯು ವಹಿಸುವುದು ಎಂದು ತಿಳಿಸಲು **ದಕ್ಷಿಣಾಯಾಃ** ಎಂದು ಪೃಥಿವೀಪರ್ಯಾಯವಾದ ಪದವನ್ನು ಪಯೋಗಿಸಿದೆ. ಈ ಪದಕ್ಕೆ ಸಾಯಣರು ಅಭಿಮತಪೂರಣಸಮರ್ಥಾಯಾಃ **ಪೃಥಿವ್ಯಾಃ**—ಇಷ್ಟಾರ್ಥಗಳನ್ನು ಪೂರೈಸುವ ಸಾಮರ್ಥ್ಯವುಳ್ಳ ಪೃಥಿವಿಯು ಎಂದರ್ಥಮಾಡಿದ್ದಾರೆ. ಪೃಥ್ವಿಯು ಸಕಲ ಸಂಪತ್ತುಗಳನ್ನೂ ಪಡೆದಿರುವುದರ ಜೊತೆಗೆ ಧಾರಣಶಕ್ತಿಯನ್ನೂ ಪಡೆದಿದೆ. ಅಭಿಮತಗಳನ್ನು ಒದಗಿಸಿಕೊಡಲು ಈ ಎರಡು ಶಕ್ತಿಗಳೂ ಅತ್ಯಾವಶ್ಯವಾಗಿರುತ್ತವೆ.

**ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ ।** (ಮು. ಉ. ೨-೧-೩)

ಇತ್ಯಾದಿ ವಾಕ್ಯಗಳಲ್ಲಿ ಪೃಥಿವಿಯನ್ನು ವಿಶ್ವಧಾರಿಣಿಯೆಂದೇ ವರ್ಣಿಸಿದೆ. ಅಲ್ಲದೇ,

**ಏಷಾಂ ಭೂತಾನಾಂ ಪೃಥಿವೀ ರಸಃ;** (ಛಾ. ಉ. ೧-೧-೨)

**ಪೃಥಿವೀ ವಾ ಅನ್ನಂ।** (ತೈ. ಉ. ೩-೯-೧)

ಇತ್ಯಾದಿವಾಕ್ಯಗಳಲ್ಲಿ ಭೂತಗಳ ಸ್ಥಿತಿಗೂ, ಪೋಷಣೆಗೂ ಅತ್ಯವಶ್ಯವಾಗಿರುವ ಶಕ್ತಿಯೆಲ್ಲವೂ ಪೃಥಿವಿಯಿಂದಲೇ ಲಭಿಸತಕ್ಕದ್ದೆಂದೂ ಹೇಳಿರುವಂತೆ ಎಲ್ಲಾ ವಿಧವಾದ ಶಕ್ತಿಯನ್ನೂ ಪಡೆದಿರುವುದರಿಂದ ಪೃಥಿವಿಗೆ ಧಾರಿಣಿಯೆಂದು ವಿಶೇಷಣವಿದೆ. ನಿರುಕ್ತಕಾರರೂ ಸಹ **ದಕ್ಷಿಣಾ** ಎಂಬ ಶಬ್ದದ ನಿರ್ವಚನವನ್ನು ಹೇಳುವಾಗ ಈ ಅರ್ಥವನ್ನೇ ತೋರಿಸುತ್ತಾ,

**ದಕ್ಷಿಣಾ ದಕ್ಷತೇಃ ಸಮರ್ಧಯತಿ ಕರ್ಮಣೋ ವ್ಯೃದ್ಧಂ ಸಮರ್ಧಯತೀತಿ ।** (ನಿ. ೧-೭)

ಪೂರ್ಣವಾದ ಅಭಿವೃದ್ಧಿಯನ್ನುಂಟುಮಾಡುವುದು ಎಂಬರ್ಥವನ್ನು ಕೊಡುವ **ದಕ್ಷ್** ಧಾತುವಿನಿಂದ ನಿಷ್ಪನ್ನವಾಗಿದೆ. ನ್ಯೂನವಾದುದನ್ನು ಪೂರ್ಣವಾಗಿ ಮಾಡುತ್ತದೆ ಎಂಬರ್ಥವೂ ಸಾಧ್ಯವಾಗುತ್ತದೆಂದು ವಿವರಿಸಿದ್ದಾರೆ. **ಪೃಥ್ವಿಗೆ** ಈ ಎಲ್ಲಾ ಶಕ್ತಿಗಳೂ ಇರುವುದರಿಂದ ಈ ವಿಶೇಷಣವು ಅದರ ಶಕ್ತಿಯನ್ನು ತೋರಿಸುತ್ತದೆ.

**ವೃಜನೀಷು— ಉದಕವತ್ಸು ಮೇಘಪಂಕ್ತಿಷು ।** ಪ್ರಭೂತವಾಗಿ ಹೊಂದಿರತಕ್ಕ ಮೇಘಪಂಕ್ತಿಗಳಲ್ಲಿ ಎಂದು ಸಾಯಣರು ಅರ್ಥಮಾಡಿದ್ದಾರೆ. ಈ ಕಾರಾಂತವಾದ **ವೃಜನೀ** ಎಂಬ ಪದಕ್ಕೆ Monier Williams ಎಂಬ ಪಂಡಿತನು ತನ್ನ Sanskrit—English Dictionary ಯಲ್ಲಿ an enclosure ; fold (ಆವರಣ) ಎಂಬರ್ಥವನ್ನು ಮೊದಲು ಹೇಳಿ ಅನಂತರ ಸಾಯಣರ ಮತದಲ್ಲಿ **ಮೇಘವೆಂಬರ್ಥವೂ**ಆಗುತ್ತದೆಂದು ತೋರಿಸಿದ್ದಾನೆ. ಇದಲ್ಲದೇ ಅಥರ್ವವೇದದ ೭-೩೦-೭ನೇ ವಾಕ್ಯದಲ್ಲಿ ಈ ಪದವು **ಮೋಸ,** ಒಳಸಂಚು ಎಂಬರ್ಥವನ್ನು ಕೊಡುವುದೆಂದು ತಿಳಿಸಿದ್ದಾನೆ.

**ತ್ರಿಷು ಯೋಜನೇಷು—ಮೇಘರಶ್ಮಿವಾಯುಷು ಸಂಯುಕ್ತೇಷು ಸತ್ಸು ।**

ಮೇಘವೂ ಸೂರ್ಯರಶ್ಮಿಯೂ ವಾಯುವೂ ಒಟ್ಟಿಗೆ ಯೋಜಿತವಾಗಲು ಗುಡುಗಿನ ಶಬ್ದವಾಯಿತೆಂದು ತಿಳಿಸಲು **ಅಮೀಮೇತ್ ವರ್ಷಣಸಮಯೇ ಶಬ್ದಯತಿ**—ವೃಷ್ಟಿಪತನದ ವೇಳೆಯಲ್ಲಿ ಶಬ್ದಮಾಡಿತು ಎಂದು ವರ್ಣಿಸಿದೆ.

**ವಿಶ್ವರೂಪ್ಯಂ ಅಪಶ್ಯತ್**—ಎನ್ನುವುದಕ್ಕೆ ಎರಡುವಿಧವಾದ ಅರ್ಥವನ್ನು ಮಾಡಿದೆ. ಮೊದಲನೆಯದಾಗಿ **ವಿಶ್ವರೂಪವತೀಂ ಗಾಂ ಅನುಕ್ರಮೇಣ ಪಶ್ಯತಿ ।** ವತ್ಸರೂಪವಾದ ಉದಕವು ನಾನಾರೂಪವುಳ್ಳ ಪೃಥ್ವಿಯನ್ನು ಅನುಕ್ರಮವಾಗಿ ನೋಡುತ್ತದೆ ಎಂದರೆ ವೃಷ್ಟಿಯು ಅನುಕ್ರಮವಾಗಿ ಸುರಿದು ಪೃಥ್ವಿಯನ್ನು ಸೇರುತ್ತದೆಂದೂ, ಎರಡನೆಯದಾಗಿ **ತ್ರಿಷು ಯೋಜನೇಷು ಸತ್ಸು ವತ್ಸೋ ಮೇಘೋ ವರ್ಷಣಾಯ ಗಾಂ ಭೂಮಿಂ ಪ್ರತಿ ಅಮೀಮೇತ್ । ಜನಃ ಕ್ರಮೇಣ ವಿಶ್ವರೂಪ್ಯಂ ಸಸ್ಯಾದಿಭಿರ್ನಾನಾರೂಪವತೀಂ ಭೂಮಿಮಪಶ್ಯತ್ ಪಶ್ಯತಿ ।** ಮೇಘವೂ, ವಾಯುವೂ ಸೂರ್ಯರಶ್ಮಿಯೂ ಒಟ್ಟಿಗೆ ಸಂಯೋಜಿತವಾದನಂತರ ವತ್ಸರೂಪವಾದ ಮೇಘವು ವೃಷ್ಟಿಪತನಕ್ಕೆ ಪೂರ್ವಭಾವಿಯಾದ ಗುಡುಗಿನ ಶಬ್ದವನ್ನು ಮಾಡಿತು. ಒಡನೆಯೇ ವೃಷ್ಟಿಪತನವಾಗಿ ಜನರೆಲ್ಲರೂ ನಾನಾ ಬಗೆಯ ಸಸ್ಯಾದಿಗಳಿಂದಲೂ ವಿಧವಿಧವಾದ ಆ ಸಸ್ಯಾದಿಗಳ ವರ್ಣಗಳಿಂದಲೂ ಕಂಗೊಳಿಸುವ ಭೂಮಿಯನ್ನೂ ನೋಡಿ ಹರ್ಷಪಡುತ್ತಾರೆಂದು ಇನ್ನೊಂದು ವಿಧವಾಗಿಯೂ ವರ್ಣಿಸಿದೆ.

ಒಟ್ಟಿನಲ್ಲಿ ದ್ಯಾವಾಪೃಥಿವಿಗಳು ಸಕಲ ಭೂತಗಳಿಗೂ ಮಾತಪಿತೃಗಳೆಂದು ಅವರ ಮೂಲರೂಪವಾದ ಸ್ವರೂಪವನ್ನು ಹಿಂದೆ ತಿಳಿಸಿ, ಉತ್ಪನ್ನವಾದ ಜಗತ್ತಿಗೆ ಅನ್ನರೂಪವಾದ ಸಂಪತ್ತನ್ನೊದಗಿಸಿ ಪೋಷಿಸುತ್ತಾರೆಂಬ ಅಂಶವನ್ನು ಈ ಋಕ್ಕಿನಲ್ಲಿ ವಿವರಿಸಿದೆ. ವಿಶ್ವದ ಉತ್ಪತ್ತಿಗೂ, ಧಾರಣೆಗೂ, ಪೋಷಣೆಗೂ ಸಕಲಕ್ಕೂ ಸಹ ದ್ಯಾವಾಪೃಥಿವಿಗಳ ಸಂಯೋಗವು ಒಂದಲ್ಲ ಒಂದು ವಿಧದಲ್ಲಿರುತ್ತದೆಂಬ ವಿಷಯವು ವಿಶದವಾಗಿ ಹೇಳಲ್ಪಟ್ಟಿದೆ.



**ತಿಸ್ರೋ ಮಾತೄಸ್ತ್ರೀನ್ಪಿತೄನ್ಬಿಭ್ರದೇಕ ಊರ್ಧ್ವಸ್ತಸ್ಥೌ ನೇಮವ ಗ್ಲಾಪಯಂತಿ । ಮಂತ್ರಯಂತೇ ದಿವೋ ಅಮುಷ್ಯ ಪೃಷ್ಠೇ ವಿಶ್ವವಿದಂ ವಾಚಮವಿಶ್ವಮಿನ್ವಾಂ ॥ ೧೦ ॥**

ಸಕಲಕ್ಕೂ ಪ್ರಧಾನಭೂತನಾದ ಆದಿತ್ಯನು ಸಸ್ಯವೃಷ್ಟ್ಯಾದಿಗಳಿಗೆಲ್ಲಾ ಉತ್ಪಾದಕರಾಗಿರತಕ್ಕ ಕ್ಷಿತ್ಯಾದಿ ಲೋಕತ್ರಯವನ್ನೂ, ಜಗತ್ಪಾಲಕರೂ ಮತ್ತು ಲೋಕತ್ರಯಾಭಿಮಾನ ದೇವತೆಗಳೂ ಆದ ಅಗ್ನಿ, ವಾಯು ಮತ್ತು ಸೂರ್ಯರನ್ನೂ ಸಹ ಧರಿಸಿ ಎಲ್ಲಕ್ಕಿಂತಲೂ ಉನ್ನತವಾದ ಪ್ರದೇಶದಲ್ಲಿದ್ದಾನೆ. ಈ ಆದಿತ್ಯನನ್ನು ಯಾರೂ ಕ್ಷಯಿಸುವಂತೆ ಮಾಡಲಾರರು. ದ್ಯುಲೋಕದ ಮೇಲ್ಭಾಗದಲ್ಲಿ ಈ ಆದಿತ್ಯನನ್ನುದ್ದೇಶಿಸಿದುದೂ, ಎಲ್ಲರಿಗೂ ತಿಳಿಯುವಂತಹುದೂ ಆದರೆ ಎಲ್ಲರಿಗೂ ಅನ್ವಯಿಸದುದೇ ಇರತಕ್ಕದ್ದೂ ಆದ ಸ್ತುತಿರೂಪವಾದ ಘೋಷಣೆಯನ್ನು ದೇವತೆಗಳು ಪಠಿಸುತ್ತಾರೆ. [ಹೀಗೆಯೇ ಕಾಲಪರವಾದ ತಾತ್ಪರ್ಯವನ್ನೂ ಹೇಳಬೇಕು].

ಈ ಋಕ್ಕಿಗೆ ಆದಿತ್ಯಪರವಾಗಿಯಾಗಲಿ ಅಥವಾ ಸಂವತ್ಸರರೂಪವಾದ ಕಾಲಪರವಾಗಿಯಾಗಲಿ ಅರ್ಥಮಾಡಬಹುದು ಅಥವಾ ಇಂತಹ ಸಂದರ್ಭಗಳಲ್ಲಿ ಆದಿತ್ಯನಿಗೂ ವತ್ಸರರೂಪವಾದ ಕಾಲಕ್ಕೂ ಸಹ ತಾದಾತ್ಮ್ಯವನ್ನು ತೋರಿಸಿ ಅವೆರಡರ ಸ್ಥಾನವೂ, ಸ್ವರೂಪವೂ ಮತ್ತು ಶಕ್ತಿಯೂ ಒಂದೇ ಎಂದು ಸಹ ತೋರಿಸಬಹುದು. ಅನೇಕ ಸಂದರ್ಭಗಳಲ್ಲಿ ಆದಿತ್ಯನಿಗೂ ಸಂವತ್ಸರ ರೂಪವಾದ ಕಾಲಕ್ಕೂ ಐಕ್ಯವನ್ನು ತೋರಿಸಿದೆ. ಕೆಲವೆಡೆಗಳಲ್ಲಿ ಆದಿತ್ಯನೇ ಕಾಲಕ್ಕೆ ಕಾರಣನೆಂದೂ ಇನ್ನು ಕೆಲವೆಡೆಗಳಲ್ಲಿ ಕಾಲಿಕವಾದ ನಿಯಮದಿಂದಲೇ ಆದಿತ್ಯಸಂಚಾರವಿರುವುದರಿಂದ ಕಾಲವೇ ಆದಿತ್ಯನಿಗೆ ಕಾರಣವೆಂದು ಸಹ ಹೇಳಿದೆ. ಮೈತ್ರಾಯಣ ಬ್ರಾಹ್ಮಣೋಪನಿಷತ್ತಿನಲ್ಲಿ ಆದಿತ್ಯನಿಗೂ ವತ್ಸರಾಖ್ಯವಾದ ಕಾಲಕ್ಕೂ ಇರತಕ್ಕ ಸಂಬಧವನ್ನು ಈರೀತಿಯಲ್ಲಿ ತಿಳಿಸಿದೆ.

**ಅನ್ನಂ ಸರ್ವಸ್ಯ ಯೋನಿಃ ಕಾಲಶ್ಚಾನ್ನಸ್ಯ ಯೋನಿಃ ಕಾಲಸ್ಯ............ಕಾಲಾತ್ಸ್ರವಂತಿ ಭೂತಾನಿ ಕಾಲಾದ್ವೃದ್ಧಿಂ ಪ್ರಯಾಂತಿ ಚ । ದ್ವೇವಾವ ಬ್ರಹ್ಮಣೋ ರೂಪೇ ಕಾಲಶ್ಚಾಕಾಲಶ್ಚ । ಯ ಆದಿತ್ಯಾದ್ಯಃ ಸ ಕಾಲಃ............ತಸ್ಮಾತ್ಸಂವತ್ಸರೋ ವೈ ಕಾಲಃ । ಪಚತಿ ಭೂತಾನಿ............ ಮಹಾತ್ಮನಿ ॥** (ಮೈತ್ರಾಯಣಿ. ಉ. ೬-೧೪ ರಿಂದ ೧೬)

ಸಕಲಭೂತಗಳ ಸ್ಥಿತಿಗತಿಗಳಿಗೂ ಅನ್ನವೇ ಕಾರಣವು. ಅನ್ನಕ್ಕೆ ಕಾಲವೂ, ಕಾಲಕ್ಕೆ ಸೂರ್ಯನೂ ಕಾರಣವು. ಗೋಚರಕ್ಕೆ ವಿಷಯವಾಗಿರತಕ್ಕ ವತ್ಸರವು ಕಾಲದ ರೂಪವಾಗಿದೆ. ಕಾಲದ ಅವಯವಗಳ ಮೂಲಕ ಸೂರ್ಯನ ಸಂಚಾರವಿರುತ್ತದೆ.

ಈ ಕಾಲದಿಂದಲೇ ಸಕಲಭೂತಗಳೂ ಪ್ರಾದುರ್ಭವಿಸಿ ಅದರಿಂದಲೇ ಎಲ್ಲವೂ ವೃದ್ಧಿಯಾಗುತ್ತವೆ. ಕಣ್ಣಿಗೆ ಕಾಣತಕ್ಕ ಆದಿತ್ಯನೂ, ಕಾಣದಿರುವ ಮುಹೂರ್ತಾದಿಗಳೂ, ಕಾಲದ ಸ್ವರೂಪಗಳಾಗಿವೆ. ಬ್ರಹ್ಮನಿಗೆ ಕಾಲ ಮತ್ತು ಅಕಾಲಗಳೆಂಬ ಎರಡು

ಅವಯವಗಳು, ಆದಿತ್ಯನಿಗಿಂತಲೂ ಪೂರ್ವಭಾವಿಯಾದ ಕಾಲವು ಅಪರಿಚ್ಛಿನ್ನವಾದುದು ಮತ್ತು ನಿರವಯವಗಳುಳ್ಳದ್ದು. ವತ್ಸರವೇ ಈ ಅವಯವದ ರೂಪವು. ಸಂವತ್ಸರದಿಂದಲೇ ಸಕಲಭೂತಗಳೂ ಉತ್ಪನ್ನವಾಗುತ್ತವೆ, ವೃದ್ಧಿಯಾಗುತ್ತವೆ ಮತ್ತು ಲಯವಾಗುತ್ತವೆ. ಆದುದರಿಂದ ಸಂವತ್ಸರವೇ ಪ್ರಜಾಪತಿಯು, ಸಂವತ್ಸರವೇ ಅನ್ನವು, ಬ್ರಹ್ಮವು ಮತ್ತು ಪರಮಾತ್ಮನು.

ಇಂತಹ ಕಾಲಾತ್ಮನಾದ ಆದಿತ್ಯನು ಸಕಲಲೋಕಗಳಿಗೂ ಪ್ರಭುವಾಗಿ ವಿರಾಜಿಸುತ್ತಿದ್ದಾನೆ ಎಂಬುದನ್ನು ತಿಳಿಸಲು **ಏಕಃ ತಸ್ಥೌ** ಎಂದು ವರ್ಣಿಸಿದೆ. ಇದನ್ನೇ ಛಾಂದೋಗ್ಯಾದಿಗಳಲ್ಲಿ ವರ್ಣಿಸುತ್ತಾ,

**ಆದಿತ್ಯೋ ಬ್ರಹ್ಮೇತ್ಯಾದೇಶಃ** (ಛಾ. ಉ. ೩-೧೯-೧) **ಅಸಾವಾದಿತ್ಯೋ ಬ್ರಹ್ಮೇತಿ** (ತೈ. ಆ. ೨-೧) ಆದಿತ್ಯನೇ ಪರಬ್ರಹ್ಮನೆಂದು ತಿಳಿಸಿದೆ. ಈ ಆದಿತ್ಯನಿಗೂ ಸಂವತ್ಸರಕ್ಕೂ ಐಕ್ಯವನ್ನು ತೋರಿಸಿ ಪೃಥಿವ್ಯಾದಿ ಲೋಕತ್ರಯವನ್ನೂ ವ್ಯಾಪಿಸಿರುವ ಆದಿತ್ಯನ ಪ್ರಭಾವವನ್ನು ವರ್ಣಿಸುತ್ತಾ ಐತರೇಯಾರಣ್ಯಕದಲ್ಲಿ ಈರೀತಿ ತಿಳಿಸಿದೆ. ಅದರ ವರ್ಣನೆಯ ಪ್ರಕಾರ ಆದಿತ್ಯನು ಏಕಕಾಲದಲ್ಲಿ ಜಗದ್ವ್ಯಾಪಿಯೂ ಅತ್ಯುತ್ತಮವಾದ ದ್ಯುಲೋಕವನ್ನು ಆಕ್ರಮಿಸಿರುವವನೂ ಆಗಿದ್ದಾನೆ.

**ಮಹಾಪುರುಷ ಇತಿ ಯಮವೋಚಾಮ ಸಂವತ್ಸರ ಏವ ಪ್ರಧ್ವಂಸಯನ್ನನ್ಯಾನಿ ಭೂತಾನ್ಯೈಕ್ಯಾ ಭಾವಯನ್ನನ್ಯಾನಿ ತಸ್ಯೈತಸ್ಯಾಸಾವಾದಿತ್ಯೋ ರಸಃ ॥**

**ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ ಯಶ್ಚಾಸಾವಾದಿತ್ಯ ಏಕಮೇತದಿತಿ ವಿದ್ಯಾತ್ । ತಸ್ಮಾತ್ಪುರುಷಂ ಪುರುಷಂ ಪ್ರತ್ಯಾದಿತ್ಯೋ ಭವತಿ । ತದಪ್ಯೇತದೃಷಿಣೋಕ್ತಂ । ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ। ಆ ಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚೇತಿ ॥** (ಐ. ಆರಣ್ಯಕಂ. ೩-೨-೩)

ಮಹಾಪುರುಷನೆಂದು ಯಾವ ತತ್ತ್ವವನ್ನು ನಿರ್ದೇಶಿಸಿದೆಯೋ ಆ ಮಹಾಪುರುಷನೇ ಸಂವತ್ಸರವು. ಆ ಸಂವತ್ಸರದ ರಸವೇ ಆದಿತ್ಯನು. ಅಶರೀರಿಯಾದ ಪ್ರಜ್ಞಾತ್ಮನೂ ಆದಿತ್ಯನೂ ಒಂದೇ ತತ್ತ್ವವು ಎಂದು ತಿಳಿಯಬೇಕು. ಇದನ್ನೇ **ಕುತ್ಸ ಋಷಿಯು** ಋಕ್ಸಂಹಿತೆಯಲ್ಲಿ (ಋ. ಸಂ. ೧-೧೧೫-೧) "ಮಿತ್ರ, ವರುಣ ಮತ್ತು ಅಗ್ನಿಗಳ ಚಕ್ಷುಸ್ಸೂ, ದೇವತೆಗಳ ಮುಖರೂಪವೂ ಆದ ತೇಜಸ್ಸು ಉದಯಿಸಿ ಪೃಥಿವ್ಯಂತರಿಕ್ಷಗಳನ್ನೂ ದ್ಯುಲೋಕವನ್ನೂ ವ್ಯಾಪಿಗೆದೆ. ಸ್ಥಾವರಜಂಗಮಾತ್ಮಕವಾದ ಸಕಲಲೋಕಗಳಿಗೂ ಇದೇ ಆತ್ಮವು" ಎಂದು ವರ್ಣಿಸಿದ್ದಾನೆ. ಇದೇ ಆದಿತ್ಯನು **ತಿಸ್ರೋ ಮಾತೄಃಬಿಭ್ರತ್** ಎಂಬ ಅಂಶವನ್ನು ಋಕ್ಸಂಹಿತೆಯಲ್ಲಿ ಈರೀತಿಯಲ್ಲಿ ವರ್ಣಿಸಿದೆ.

**ದಿವೋ ಧರ್ತಾ ಭುವನಸ್ಯ ಪ್ರಜಾಪತಿಃ ಪಿಶಂಗಂ ದ್ರಾಪಿಂ ಪ್ರತಿ ಮುಂಚತೇ ಕವಿಃ ।**
**ವಿಚಕ್ಷಣಃ ಪ್ರಥಯನ್ನಾಪೃಣನ್ನುರ್ವಜೀಜನತ್ಸವಿತಾ ಸುಮ್ನಮುಕ್ಥ್ಯಮ್ ॥**
(ಋ. ಸಂ. ೪-೫೩-೨)

**ನ ಪ್ರಮಿಯೇ ಸವಿತುರ್ದೈವ್ಯಸ್ಯ ತದ್ಯಥಾ ವಿಶ್ವಂ ಭುವನಂ ಧಾರಯಿಷ್ಯತಿ ।**
**ಯತ್ಪೃಥಿವ್ಯಾ ವರಿಮನ್ನಾ ಸ್ವಂಗುರಿರ್ವರ್ಷ್ಮನ್ದಿವಃ ಸುವತಿ ಸತ್ಯಮಸ್ಯ ತತ್ ॥**
(ಋ. ಸಂ. ೪-೫೪-೪)

ಸವಿತೃರೂಪನಾದ ಆದಿತ್ಯನು ದ್ಯುಲೋಕಕ್ಕೂ ಭೂಲೋಕಕ್ಕೂ ಧಾರಕನಾಗಿದ್ದಾನೆ. ಪೃಥಿವ್ಯಂತರಿಕ್ಷಗಳಿಗೆಲಾ ವೃಷ್ಟಿಯನ್ನು ಸುರಿಸಿ ಎಲ್ಲಾ ವಿಧವಾದ ಸುಖಗಳನ್ನೂ ಕೊಡುತ್ತಾನೆ. "ವಿಶ್ವಭುವನಕ್ಕೂ" ಧಾರಕನಾದ ಈ ಆದಿತ್ಯನ ಕರ್ಮವನ್ನು ಯಾರೂ ಹಿಂಸಿಸಲಾರರು, ಇತ್ಯಾದಿಯಾಗಿ ಅವನ ಮಹತ್ವವನ್ನು ಸ್ತುತಿಸಿದೆ. ಇದರಂತೆಯೇ **ತ್ರೀನ್ ಪಿತ್ರ್ನ್ (ಅಪಿ) ಬಿಭ್ರತ್ ।** ಎಂದಿರುವಲ್ಲಿ **ಪಿತ್ರ್ನ್** ಎಂಬ ಪದಕ್ಕೆ **ಜಗತಾಂ ಪಾಲಯಿತ್ರ್ನ್ ಲೋಕತ್ರಯಾಭಿಮಾನಿನಃ ಅಗ್ನಿವಾಯುಸೂರ್ಯಾಖ್ಯಾನ್**—ಪೃಥಿವಿಯ ಅಭಿಮಾನದೇವತೆಯಾದ ಅಗ್ನಿಯನ್ನೂ, ಅಂತರಿಕ್ಷಕ್ಕೆ ಅಭಿಮಾನಿದೇವತೆಯಾದ ವಾಯುವನ್ನೂ ಮತ್ತು ದ್ಯುಲೋಕಾಧಿದೇವತೆಯಾದ ಸೂರ್ಯನೂ (ಧರಿಸಿದ್ದಾನೆ) ಎಂದರ್ಥ.

**ತಿಸ್ರ ಏವ ದೇವತಾ ಇತಿ ನೈರುಕ್ತಾಃ । ಅಗ್ನಿಃ ಪೃಥಿವೀಸ್ಥಾನೋ ವಾಯುರ್ವೇಂದ್ರೋ ವಾಂತರಿಕ್ಷಸ್ಥಾನಃ ಸೂರ್ಯೋ ದ್ಯುಸ್ಥಾನಃ ॥** (ನಿ. ೭-೫)

**ಬ್ರಹ್ಮ ವಾ ಇದಮಗ್ರ ಆಸೀತ್ । ತದ್ದೇವಾನಸೃಜತ । ತದ್ದೇವಾನ್ ಸೃಷ್ಟ್ವೈಷು ಲೋಕೇಷು ವ್ಯಾರೋಹಯದಸ್ಮಿನ್ನೇವ ಲೋಕೇಽಗ್ನಿಂ ವಾಯುಮಂತರಿಕ್ಷೇ ದಿವ್ಯೇವ ಸೂರ್ಯಂ ॥** (ಶ. ಬ್ರಾ. ೧೧-೨-೩-೧)

ಪೂರ್ವದಲ್ಲಿ ಬ್ರಹ್ಮನು ಏಕಮಾತ್ರನಾಗಿದ್ದು ಅನಂತರ ದೇವತೆಗಳನ್ನು ಸೃಷ್ಟಿಸಿ ಅಗ್ನಿಯನ್ನು ಪೃಥ್ವಿಯಲ್ಲೂ, ವಾಯುವನ್ನು ಅಂತರಿಕ್ಷದಲ್ಲೂ, ಸೂರ್ಯನನ್ನು ದ್ಯುಲೋಕದಲ್ಲೂ ಸ್ಥಾಪಿಸಿದನು ಎಂದು ಶತಪಥಬ್ರಾಹ್ಮಣದಲ್ಲಿ ಉಕ್ತವಾಗಿರುವಂತೆಯೂ ನಿರುಕ್ತದ ಉಕ್ತಿಯಂತೆಯೂ **ತ್ರೀನ್ ಪಿತ್ರ್ನ್** ಎಂಬುದಕ್ಕೆ ಅರ್ಥಮಾಡಬೇಕು.

ತ್ರಿಲೋಕಕ್ಕೂ ಪಾಲಕರಾದ ಅಗ್ನಿ, ವಾಯು ಮತ್ತು ಸೂರ್ಯ ಇವರುಗಳನ್ನೆಲ್ಲಾ ಧರಿಸಿ ತಾನು ಏಕಮಾತ್ರ ಪ್ರಭುವಾಗಿ ಪ್ರಕಾಶಿಸುತ್ತಿದ್ದಾನೆಂದರ್ಥ.

**ನೇಮುವ ಗ್ಲಾಪಯಂತಿ—ನ ಹಿ ಕಾಲಃ ಆದಿತ್ಯೋ ವಾ ಅನ್ಯೇನ ಪರಾಭೂತಯೇ**—ಕಾಲವಾಗಲಿ ಆದಿತ್ಯನಾಗಲಿ ಇತರರ ಅಧಿಕಾರಕ್ಕೆ ಒಳಪಡುವುದಿಲ್ಲ. ಈ ಅಂಶವನ್ನು,

**ನ ಯಸ್ಯೇಂದ್ರೋ ವರುಣೋ ನ ಮಿತ್ರೋ ವ್ರತಮರ್ಯಮಾ ನ ಮಿನಂತಿ ರುದ್ರಃ ।**
**ನಾರಾತಯಸ್ತಮಿದಂ ಸ್ವಸ್ತಿ ಹುವೇ ದೇವಂ ಸವಿತಾರಂ ನಮೋಭಿಃ ॥**

(ಋ. ಸಂ. ೨-೩೮-೯)

ಸವಿತೃರೂಪದ ಈ ಆದಿತ್ಯನ ವಿಶ್ವನಿಯಮನರೂಪವಾದ ಕರ್ಮವನ್ನು ಇಂದ್ರನಾಗಲಿ, ವರುಣನಾಗಲಿ, ಮಿತ್ರನಾಗಲಿ, ಅರ್ಯಮನಾಗಲಿ, ಪ್ರತಿಭಟಿಸಲಾರರು. ಮತ್ತು

**ಅಸ್ಯ ಹಿ ಸ್ವಯಶಸ್ತರಂ ಸವಿತುಃ ಕಚ್ಚನ ಪ್ರಿಯಂ । ನ ಮಿನಂತಿ ಸ್ವರಾಜ್ಯಂ ॥**

(ಋ. ಸಂ. ೫-೮೨-೨)

ಈ ಆದಿತ್ಯನ ಯಶಸ್ಸು ಅತ್ಯಸಾಧಾರಣವಾಗಿದೆ. ಸಕಲರಿಗೂ ಪ್ರಿಯವಾಗಿರತಕ್ಕ ಈ ಆದಿತ್ಯನ ಸಾರ್ವಭೌಮತ್ವವನ್ನು ಅಸುರರಾಗಲಿ ದೇವತೆಗಳಾಗಲಿ ಹಿಂಸಿಸಲಾರರು ಇತ್ಯಾದಿಯಾಗಿ ಅನೇಕ ಕಡೆಗಳಲ್ಲಿ ವರ್ಣಿತವಾಗಿರುವ ಈ ವಿಶ್ವ

ನಿಯಂತೃವಾದ ಆದಿತ್ಯನ ಮಹತ್ತ್ವವನ್ನು ಸ್ತುತಿಸಿದೆ. ಅಥವಾ ಇದನ್ನೇ **ಕಾಲಕ್ಕೂ** ಅನ್ವಯಿಸಿ ಅದರ ಪರವಾಗಿಯೂ ಅರ್ಥಮಾಡಬಹುದು.

**ಅಮುಷ್ಯ ಮಂತ್ರಯಂತೇ—ಆದಿತ್ಯಸಂಬಂಧಿನೀಂ ಗರ್ಜಿತಲಕ್ಷಣಾಂ ವಾಚಂ ಮಂತ್ರಯಂತೇ ಇತ್ಯರ್ಥಃ।** ಆದಿತ್ಯನನ್ನು ಪ್ರಶಂಸಿಸತಕ್ಕದ್ದೂ ಘೋಷರೂಪವಾದದ್ದೂ ಆದ ಸ್ತುತಿಪಠನವನ್ನು ಮಾಡುತ್ತಾರೆ ಎಂದರ್ಥ. ಈ ಘೋಷರೂಪವಾದ ಮಂತ್ರರೂಪವಾದ ಮಂತ್ರಪಠನವನ್ನು ಛಾಂದೋಗ್ಯದಲ್ಲಿ ಈ ರೀತಿ ವರ್ಣಿಸಿದೆ.

> **ಅಥ ಯತ್ತದಜಾಯತ ಸೋಽಸಾವಾದಿತ್ಯಸ್ತಂ ಜಾಯಮಾನಂ ಘೋಷಾ ಉಲೂಲವೋಽನೂದತಿಷ್ಠನ್ತ್ಸರ್ವಾಣಿ ಚ ಭೂತಾನಿ ಸರ್ವೇ ಚ ಕಾಮಾಸ್ತಸ್ಮಾತ್ತಸ್ಯೋದಯಂ ಪ್ರತಿ ಪ್ರತ್ಯಾಯನಂ ಪ್ರತಿ ಘೋಷಾ ಉಲೂಲವೋಽನೂತ್ತಿಷ್ಠಂತಿ ಸರ್ವಾಣಿ ಚ ಭೂತಾನಿ ಸರ್ವೇ ಚ ಕಾಮಾಃ।**
>
> **ಸ ಯ ಏತಮೇವಂ ವಿದ್ವಾನಾದಿತ್ಯಂ ಬ್ರಹ್ಮೇತ್ಯುಪಾಸ್ತೇಽಭ್ಯಾಶೋ ಹ ಯದೇನಂ ಸಾಧವೋ ಘೋಷಾ ಆ ಚ ಗಚ್ಛೇಯುರುಪ ಚ ನಿಮ್ರೇಡೇರನ್ನಿಮ್ರೇಡೇರನ್। ಇತಿ॥**
>
> (ಛಾ. ಉ. ೩-೧೯-೩, ೪)

ಈ ಆದಿತ್ಯನ ಆವಿರ್ಭಾವವಾದನಂತರವೇ ಸಕಲಭೂತಗಳೂ ತಮ್ಮ ಆನಂದವನ್ನು ಘೋಷಿಸಿದವು ಮತ್ತು ಸಕಲ ಪ್ರಾಣಿಗಳೂ ಎಚ್ಚರಗೊಂಡು ತಮ್ಮ ಇಷ್ಟಾರ್ಥಗಳನ್ನು ಪಡೆದುಕೊಂಡವು. ಆದುದರಿಂದಲೇ ಸೂರ್ಯೋದಯಕಾಲಗಳಲ್ಲೆಲ್ಲಾ ಈ ವಿಧವಾದ ಘೋಷವು ಆದಿತ್ಯನನ್ನು ಆಹ್ವಾನಿಸುತ್ತದೆ. ಈ ತತ್ತ್ವವನ್ನು ತಿಳಿದು ಆದಿತ್ಯನನ್ನೇ ಪರಬ್ರಹ್ಮನೆಂದು ಉಪಾಸನೆ ಮಾಡಿದರೆ ಅವನಿಗೂ ಸಹ ಈ ಘೋಷವೂ ಇದರ ಆನಂದವೂ ಅವಿಚ್ಛಿನ್ನವಾಗಿ ಆನಂದವನ್ನುಂಟುಮಾಡತಕ್ಕದ್ದಾಗಿರುತ್ತದೆ.

> **ಆದಿತ್ಯ ಇತಿ ಹೋವಾಚ ಸರ್ವಾಣಿ ಹ ವಾ ಇಮಾನಿ ಭೂತಾನ್ಯಾದಿತ್ಯಮುಚ್ಚೈಃ ಸಂತಂ ಗಾಯಂತಿ ಸೈಷಾ ದೇವತೋದ್ಗೀಥಮನ್ವಾಯತ್ತಾ॥** (ಛಾ. ಉ. ೩-೧೧-೭)

ಆದಿತ್ಯನು ಅತ್ಯುನ್ನತವಾದ ಪ್ರದೇಶದಲ್ಲಿ ವಿರಾಜಿಸುತ್ತಿರುವಾಗ ಸಕಲಭೂತಗಳೂ ಸೇರಿಕೊಂಡು ಉಚ್ಚಸ್ವರದಿಂದ ಆದಿತ್ಯನನ್ನು ಸ್ತುತಿಸುತ್ತವೆ. ಆದಿತ್ಯನು ಉದ್ಗೀಥಸಂಬಂಧಿಯಾದ ದೇವತೆಯು ಇತ್ಯಾದಿಯಾಗಿ ಆದಿತ್ಯನಿಂದ **ಲೋಪಕಾರ** ವಾಗುವುದರಿಂದ ಅವನನ್ನು ಕಂಡೊಡನೇ ಸಕಲ ಭೂತಗಳೂ ತಮ್ಮ ಸಂತೋಷವನ್ನೂ ಕೃತಜ್ಞತೆಯನ್ನೂ ಸೂಚಿಸತಕ್ಕ ಪ್ರಶಂಸಾವಾಕ್ಯಗಳನ್ನು ಪಠಿಸುತ್ತವೆ ಎಂಬ ವಿಷಯವನ್ನು **ಅಮುಷ್ಯ ಮಂತ್ರಯಂತೇ** ಎಂಬುದರಿಂದ ಪ್ರಕೃತವಾದ ಋಕ್ಕಿನಲ್ಲಿ ತಿಳಿಸಿದೆ.

**ವಿಶ್ವವಿದಂ**—ಇದು **ವಾಚಂ** ಎಂಬುದಕ್ಕೆ ವಿಶೇಷಣವಾಗಿದೆ. ಸಕಲರಿಗೂ ತಿಳಿಯುವಂತಹದು ಅಥವಾ ಸಕಲ ರಿಂದಲೂ ತಿಳಿಯಲ್ಪಡತಕ್ಕದ್ದು ಎಂದು ಎರಡುವಿಧವಾಗಿಯೂ ಆಗಬಹುದು.

**ಅವಿಶ್ವಮಿನ್ವಾಂ**—ಇನ್ವತಿಯೆಂಬ ಪದವು **ವ್ಯಾಪ್ತಿ**ಕರ್ಮನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೦) **ವಿಶ್ವಮಿನ್ವಾಂ** ಎಂದರೆ ಸರ್ವತ್ರ ವ್ಯಾಪಿಸತಕ್ಕದ್ದೆಂದಾಗುತ್ತದೆ. ಆದರೆ ಈ ಘೋಷರೂಪವಾದ ಸ್ತುತಿಪಠನವು ಆದಿತ್ಯನಿಗೆ ಮಾತ್ರ ಅನ್ವಯಿಸ ತಕ್ಕದ್ದು. ಉಳಿದ ಯಾವ ದೇವತೆಗಳಿಗಾಗಲಿ ಇತರರಿಗಾಗಲಿ ಈ ಸ್ತುತಿಯು ಅನ್ವಯಿಸಲಾರದು ಎಂದು ಸೂಚಿಸಲು **ಅವಿಶ್ವ**-

**ಮಿನ್ವಾಂ** ಎಂಬ ವಿಶೇಷಣವು ಉಪಯೋಗಿಸಲ್ಪಟ್ಟಿದೆಯೆಂದು ವಿವರಿಸಿದರೆ ತಪ್ಪಾಗಲಾರದು. ಸಾಯಣರೂ ಸಹ **ಅಸರ್ವವ್ಯಾಪಿನೀಂ** ಎಂದು ಅರ್ಥಮಾಡಿ **ವಾಚಂ** ಎಂಬುದಕ್ಕೆ ವಿಶೇಷಣವೆಂದು ತೋರಿಸಿದ್ದಾರೆ.

**ವಾಚಂ** ಎಂಬ ಪದಕ್ಕೆ ಸಾಯಣರು **ಗರ್ಜಿತಲಕ್ಷಣಾಂ** ಎಂದು ವ್ಯಾಖ್ಯಾನವನ್ನು ಮಾಡಿರುವುದರಿಂದ ಇಲ್ಲಿ ಗುಡುಗಿನ ಶಬ್ದವೆಂದಾದರೂ ಅರ್ಥವಾಗಬಹುದು. ಆಗ **ವಿಶ್ವವಿದಂ** ಎಂದರೆ ಜಗತ್ತಿಗೆಲ್ಲಾ ಈ ಶಬ್ದವು ಕೇಳಿಸುವುದರಿಂದ ಎಲ್ಲರಿಂದಲೂ ತಿಳಿಯಲ್ಪಡತಕ್ಕ ಎಂದೂ, ಆದರೆ ಕೇವಲ ಕೊಂಚಭಾಗ ಮಾತ್ರ ಈ ಶಬ್ದವು ವ್ಯಾಪಿಸುವುದರಿಂದ **ಅವಿಶ್ವಮಿನ್ವಾಂ** ಸರ್ವತ್ರ ವ್ಯಾಪಿಸದಿರತಕ್ಕ ಎಂದೂ ಈ ಗರ್ಜಿತದ ಸ್ವರೂಪವನ್ನು ವರ್ಣಿಸಿದೆಯೆಂದು ಹೇಳಬಹುದು.



**ದ್ವಾದಶಾರಂ ನಹಿ ತಜ್ಜರಾಯ ವರ್ವರ್ತಿ ಚಕ್ರಂ ಪರಿ ದ್ಯಾಮೃತಸ್ಯ ।**
**ಆ ಪುತ್ರಾ ಅಗ್ನೇ ಮಿಥುನಾಸೋ ಅತ್ರ ಸಪ್ತ ಶತಾನಿ ವಿಂಶತಿಶ್ಚ ತಸ್ಥುಃ ॥ ೧೧ ॥**

ಹನ್ನೆರಡು ರಾಶಿರೂಪಗಳಾದ ಅಥವಾ ಹನ್ನೆರಡು ಮಾಸರೂಪಗಳಾದ ಅರಗಳಿಂದ ಕೂಡಿದುದೂ, ಮಂಡಲಾತ್ಮಕವೂ ಆದ ಆದಿತ್ಯನ ಚಕ್ರವು ಅಂತರಿಕ್ಷದ ಸುತ್ತಲೂ ಪುನಃಪುನಃ ಸ್ತುತಿಸುತ್ತಿದೆ. ಆ ಚಕ್ರವು ಕ್ಷಯಿಸತಕ್ಕದ್ದೇ ಅಲ್ಲ. ಅಗ್ನ್ಯಾತ್ಮಕನಾದ ಎಲೈ ಆದಿತ್ಯನೇ, ಈ ಚಕ್ರದಲ್ಲಿ ಪರಸ್ಪರ ಒಟ್ಟಿಗೆ ಸೇರಿಕೊಂಡಿರುವುವೂ, ಏಳನೂರ ಇಪ್ಪತ್ತು ಸಂಖ್ಯಾಕಗಳಾಗಿರುವುವೂ ಪುತ್ರಾತ್ಮಕಗಳಾಗಿರುವುವೂ ಆದ ಅಹೋರಾತ್ರಗಳು ಬಳಸಿಕೊಂಡಿವೆ.

ಅಂತರಿಕ್ಷದಲ್ಲಿ ಆವೃತ್ತಿರೂಪವಾದ ಪರಿಭ್ರಮಣವನ್ನು ಶಾಶ್ವತವಾಗಿ ಹೊಂದಿದ್ದರೂ ಸಹ ಕ್ಷಯಿಸದೆ ನಿತ್ಯತಾರುಣ್ಯವನ್ನು ಹೊಂದಿರತಕ್ಕ ಆದಿತ್ಯನ ವರ್ಣನೆಯು ಈ ಋಕ್ಕಿನಲ್ಲಿಯೂ ಇದರ ಮುಂದಿನ ಎರಡು ಋಕ್ಕುಗಳಲ್ಲಿಯೂ ಹೇಳಲ್ಪಟ್ಟಿದೆ. ಮಿಥುನರೂಪದಲ್ಲಿರುವುದೂ, ಏಳನೂರಇಪ್ಪತ್ತು ಸಂಖ್ಯೆಗಳುಳ್ಳದ್ದೂ, ಆದಿತ್ಯನಿಗೆ ಪುತ್ರರೂಪದ್ದೂ ಆದ ಅಹೋರಾತ್ರಗಳ ದ್ವಯವು ಈ ಕಾಲಚಕ್ರದಲ್ಲಿ ಅಂತರ್ಗತವಾಗಿದೆ. ಅಯನಾದ್ಯವಯವಗಳಿಂದ ಕೂಡಿದ ಈ ಕಾಲಚಕ್ರವು ಸತತವಾಗಿ ತನ್ನ ಭ್ರಮಣವನ್ನು ಮುಂದುವರಿಸುತ್ತದೆ. ಇದೇ ವಿಶ್ವತತ್ತ್ವವು. ಈ ತತ್ತ್ವವು ಸೃಷ್ಟಿಕರ್ತನಾದ ಪ್ರಜಾಪತಿಯಲ್ಲಿ ಅಂತರ್ಗತವಾಗಿದೆಯೆಂದು ಕೆಲವುಕಡೆಗಳಲ್ಲಿಯೂ ವಿವರಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ವಿಶ್ವಾತ್ಮನಾದ ಆದಿತ್ಯನನ್ನು ಅಗ್ನಿಯೆಂದು ಸಂಬೋಧಿಸಿದೆ. ಈ ಕಾಲತತ್ವಕ್ಕೂ ಯಜ್ಞತತ್ವಕ್ಕೂ ತಾದಾತ್ಮ್ಯವನ್ನು ತೋರಿಸಿ ಈ ಎರಡು ತತ್ತ್ವಗಳಿಗೂ ಸಹ ಆದಿತ್ಯರೂಪನೂ ಅಥವಾ ಅಗ್ನಿರೂಪನೂ ಆದ ಪ್ರಜಾಪತಿಯು ಆಧಾರನೆಂದು ತೈತ್ತಿರೀಯಸಂಹಿತೆಯಲ್ಲಿ ವರ್ಣಿಸಲ್ಪಟ್ಟಿದೆ. ಈ ವರ್ಣನೆಯಲ್ಲಿ ಈ ಋಕ್ಕಿನ ಮತ್ತು ಮುಂದಿನ ಎರಡು ಋಕ್ಕುಗಳಲ್ಲಿ ಹೇಳಿರತಕ್ಕ ಅಂಶಗಳೂ ಅಡಕವಾಗಿವೆಯಾದ್ದರಿಂದ ಅದನ್ನು ಮುಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಲಾಗುತ್ತದೆ.

**ದ್ವಾದಶಾರಂ — ದ್ವಾದಶಸಂಖ್ಯಾಕಮೇಷಾದಿರಾಶ್ಯಾತ್ಮಕೈಃ ಮಾಸಾತ್ಮಕೈರ್ವಾ ಅರೈಃ ರಥಾಂಗಾವಯವೈರ್ಯುಕ್ತಂ ।** ದ್ವಾದಶಾರಂ ಎಂಬ ಪದವು ಚಕ್ರಶಬ್ದಕ್ಕೆ ವಿಶೇಷಣವಾಗಿದೆ. ಇಲ್ಲಿ ಆದಿತ್ಯಮಂಡಲವನ್ನು ರಥದ ಚಕ್ರಕ್ಕೂ ದ್ವಾದಶಮಾಸಗಳನ್ನು ಚಕ್ರದ ಅರಗಳಿಗೂ ಹೋಲಿಸಿದೆ. ಮೇಷ, ವೃಷಭ ಇತ್ಯಾದಿ ಹನ್ನೆರಡು ರಾಶಿಗಳುಳ್ಳ ಸೂರ್ಯಮಂಡಲವೆಂದಾಗಲಿ ಅಥವಾ ಹನ್ನೆರಡು ತಿಂಗಳುಗಳುಳ್ಳ ಸೂರ್ಯಮಂಡಲದ ಭ್ರಮಣವೆಂದಾಗಲಿ ಅರ್ಥವಾಗುತ್ತದೆ. ಅಹೋ

ರಾತ್ರಿಗಳ ಪರಿಗಣನೆಯಿರುವುದರಿಂದ ಇಲ್ಲಿ ಮಾಸಪರ್ಯಾಯವಾಗಿ ಅರ್ಥಮಾಡಿದರೆ ಹೆಚ್ಚು ಹೊಂದಿಕೊಳ್ಳುತ್ತದೆ. ದ್ವಾದಶಪದ ವನ್ನು ದ್ವಾದಶಮಾಸಗಳನ್ನು ಹೊಂದಿರುವ ಸಂವತ್ಸರಪರ್ಯಾಯವಾಗಿಯೇ ಉಪಯೋಗಿಸುವುದೂ ಉಂಟು. ಉದಾಹರಣೆಗೆ—

**ದೇವಹಿತಿಂ ಜುಗುಪುರ್ದ್ವಾದಶಸ್ಯ ಋತುಂ ನರೋ ನ ಪ್ರ ಮಿನಂತ್ಯೇತೇ ।**
**ಸಂವತ್ಸರೇ ಪ್ರಾವೃಷ್ಯಾಗತಾಯಾಂ ತಪ್ತಾ ಘರ್ಮಾ ಅಶ್ನುವತೇ ವಿಸರ್ಗಂ ॥**

(ಋ. ಸಂ. ೭-೧೦೩-೯)

ಇತ್ಯಾದಿ ಋಕ್ಕುಗಳಲ್ಲಿ **ದ್ವಾದಶಮಾಸಾತ್ಮಕಸ್ಯ ಸಂವತ್ಸರಸ್ಯ** ಎಂದೇ ಅರ್ಥವಾಗುತ್ತದೆ. ಪ್ರಕೃತವಾದ ಋಕ್ಕಿ ನಲ್ಲಿಯೂ ಅದೇರೀತಿ ಅರ್ಥಮಾಡಬೇಕು. ನಿರುಕ್ತಕಾರರೂ ಸಹ ಈ ಋಕ್ಕಿನ **ದ್ವಾದಶಾರಂ ನಹಿ ತಜ್ಜರಾಯ** ಎಂಬ ಪಾದವನ್ನೂ ಮತ್ತು **ದ್ವಾದಶ ಪ್ರಧಯಶ್ಚಕ್ರಮೇಕಂ ।** (ಋ. ಸಂ. ೧-೧೬೪-೪೮) ಎಂಬ ಪಾದವನ್ನೂ ಉದಹರಿಸಿ " **ಇತಿ ಮಾಸಾನಾಂ** " ಈ ದ್ವಾದಶಪದಗಳು **ಮಾಸಪರ್ಯಾಯವಾದವು** ಎಂದು ವಿವರಿಸಿದ್ದಾರೆ. (ನಿ. ೪-೨೭) ಇಂತಹ ಮಾಸಾತ್ಮಕ ಗಳಾದ ದ್ವಾದಶಾರವುಳ್ಳ **ಚಕ್ರವು ; ದ್ಯಾಂ ಪರಿ**-ಅಂತರಿಕ್ಷದ ಸುತ್ತಲೂ, **ವರ್ವರ್ತಿ**-ಪುನಃ ಪುನಃ ಆವೃತ್ತಿರೂಪದಿಂದ ಪರಿಭ್ರ ಮಣವನ್ನು ಹೊಂದುತ್ತದೆ ಎಂದು ವರ್ಣಿಸಿ ಇಂತಹ **ಚಕ್ರಾತ್ಮ**ನಾದ ಆದಿತ್ಯನನ್ನು **ಅಗ್ನೆ** ಎಂಬ ವಿಶೇಷಣದಿಂದ ಸಂಬೋಧಿಸಿದೆ.

**ಅಗ್ನೇ**—ಸಾಯಣರು ಈ ಪದಕ್ಕೆ ಎರಡುವಿಧವಾದ ಅರ್ಥವನ್ನು ಮಾಡಿದ್ದಾರೆ. ಮೊದಲನೆಯದಾಗಿ **ಸರ್ವದಾ ಗಮನಯುಕ್ತ ಆದಿತ್ಯ** ಯಾವಾಗಲೂ ಸಂಚರಿಸುವ ಸ್ವಭಾವವುಳ್ಳ ಆದಿತ್ಯನೇ ಎಂದು ಒಂದುವಿಧವಾಗಿಯೂ, ಎರಡನೆಯ ದಾಗಿ **ಯದ್ವಾ । ಅಗ್ನೇರೇವ ಸ್ಥಾನತ್ರಯೇ ತತ್ತದಾತ್ಮನಾ ವರ್ತಮಾನತ್ವಾತ್ ಅಸಾವಪ್ಯಗ್ನಿರಿತ್ಯುಚ್ಯತೇ** ಆದಿತ್ಯನಾಗಲಿ ಅಥವಾ ವಾಯ್ವಾದಿ ದೇವತೆಗಳಾಗಲಿ ಪೃಥಿವ್ಯಾದಿ ಸ್ಥಾನತ್ರಯದಲ್ಲಿಯೂ ಸಹ **ಅಗ್ನಿಯೇ** ಆಯಾ ರೂಪಗಳಲ್ಲಿರ ತಕ್ಕದ್ದರಿಂದ ಪ್ರಕೃತದಲ್ಲಿ ಆದಿತ್ಯನನ್ನು **ಅಗ್ನಿ**ಯೆಂದು ಸಂಬೋಧಿಸಿದೆಯೆಂದು ಇನ್ನೊಂದು ವಿಧವಾಗಿಯೂ ವಿವರಿಸಿದ್ದಾರೆ. ಎರಡನೆಯ ಅರ್ಥದಲ್ಲಿಯೇ ಮೊದಲನೆಯದೂ ಅಡಕವಾಗಿದೆಯೆಂದೂ ಹೇಳಬಹುದು. ಏಕೆಂದರೆ ಸ್ಥಾನತ್ರಯದಲ್ಲೂ ವ್ಯಾಪಿ ಸಿರುವ ಅಗ್ನಿಯೇ ಆದಿತ್ಯನೆಂದು ಸಾಯಣರು ಇಲ್ಲಿ ವಿವರಿಸಿರುವುದನ್ನೂ ಅಗ್ನಿಯ ಸ್ಥಾನತ್ರಯವ್ಯಾಪಕವಾದ ಸ್ವರೂಪವನ್ನೂ ಬೃಹದ್ದೇವತಾದಿಗಳಲ್ಲೂ ಸಹ ವರ್ಣಿಸಿದೆ. ಅಗ್ನಿಯ ಈ ಮೂರು ವಿಧವಾದ ಅಸ್ತಿತ್ವವೂ ಅದಕ್ಕೆ ಅನುಗುಣವಾದ ಮೂರು ವಿಧವಾದ ಆವಿರ್ಭಾವವೂ ಜಗತ್ತಿನ ಮೂಲತತ್ತ್ವವನ್ನೇ ಪ್ರತಿಬಿಂಬಿಸುತ್ತವೆ ಎಂಬುದು ಬೃಹದ್ದೇವತೆಯ ವರ್ಣನೆಯಿಂದ ತಿಳಿಯುತ್ತದೆ.

**ಭವದ್ಭೂತಸ್ಯ ಭವ್ಯಸ್ಯ ಜಂಗಮಸ್ಥಾವರಸ್ಯ ಚ ।**
**ಅಸ್ಯೈಕೇ ಸೂರ್ಯಮೇವೈಕಂ ಪ್ರಭವಂ ಪ್ರಲಯಂ ವಿದುಃ ॥**
**ಏತದ್ಭೂತೇಷು ಲೋಕೇಷು ಅಗ್ನಿಭೂತಂ ಸ್ಥಿತಂ ತ್ರಿಧಾ ।**
**ಋಷಯೋ ಗೀರ್ಭಿರರ್ಚಂತಿ ವ್ಯಂಜಿತಂ ನಾಮಭಿಸ್ತ್ರಿಭಿಃ ॥**

(ಬೃ. ದೇ. ೧--೬೧ ; ೧-೬೪)

ಸಕಲಭೂತಗಳಿಗೂ ಯೋನಿಯಾದ ಪ್ರಜಾಪತಿಯು ಭೂತಭವಿಷ್ಯದ್ವರ್ತಮಾನಗಳಲ್ಲಿರುವ ಸಕಲಚರಾಚರವಾದ ಭೂತಗಳಿಗೂ ಸೃಷ್ಟಿಪ್ರಳಯಗಳ ಮೂಲವಾಗಿ ಅಗ್ನಿರೂಪದಿಂದ ಮೂರುವಿಧವಾಗಿ ಮೂರುಸ್ಥಾನಗಳಲ್ಲಿ ತನ್ನ ಅಸ್ತಿತ್ವವನ್ನು ಪಡೆದಿರುತ್ತಾನೆ. ಈ ಮೂರುವಿಧವಾದ ಅಗ್ನಿಯ ಆವಿರ್ಭಾವವನ್ನೂ ಸಹ ಋಷಿಗಳು ಮೂರು ಹೆಸರುಗಳಿಂದ ಕೆಳಗೆ ಕಂಡಂತೆ ಹೇಳುತ್ತಾರೆ ಎಂದು ಬೃಹದ್ದೇವತಾಕಾರರು ಅಗ್ನಿಯ ಮಹತ್ತ್ವವನ್ನು ವರ್ಣಿಸುವ ಸಂದರ್ಭದಲ್ಲಿ ಅಗ್ನಿಯನ್ನು ಪ್ರಶಂಸಿಸುತ್ತಾ, ಈರೀತಿ ವರ್ಣಿಸಿದ್ದಾರೆ.

ತ್ರಿಸ್ಥಾನಂ ಚೈನಮರ್ಚಂತಿ ಹೋತ್ರಾಯಾಂ ವೃಕ್ತಬರ್ಹಿಷಃ ।
ಇಹೈವ ಪವಮಾನೋಽಗ್ನಿರ್ಮಧ್ಯಮೋಽಗ್ನಿರ್ವನಸ್ಪತಿಃ ॥
ಅಮುಷ್ಮಿನ್ನೇವ ವಿಪ್ರೈಸ್ತು ಲೋಕೇಽಗ್ನಿಃಶುಚಿರುಚ್ಯತೇ ।
ಇಹಾಗ್ನಿಭೂತಸ್ತ್ವೃಷಿಭಿರ್ಲೋಕೇ ಸ್ತುತಿಭಿರೀಳಿತಃ ॥
ಜಾತವೇದಾಃಸ್ತುತೋ ಮಧ್ಯೇ ಸ್ತುತೋ ವೈಶ್ವಾನರೋ ದಿವಿ ॥

(ಬೃ. ದೇ. ೧-೬೫ ರಿಂದ ೬೭)

ಈ ಮೂರು ವಿಧಗಳಲ್ಲಿ ಪೃಥ್ವಿಯಲ್ಲಿ ಆವಿರ್ಭವಿಸುವ ಅಗ್ನಿಗೆ **ಪವಮಾನಾಗ್ನಿ**ಯೆಂತಲೂ, ಮಧ್ಯಮಲೋಕವರ್ತಿಯಾದ ಅಗ್ನಿಗೆ **ವನಸ್ಪತಿ**ಯೆಂದೂ, ದ್ಯುಲೋಕಸ್ಥನಾದ ಅಗ್ನಿಗೆ **ಶುಚಿ**ಯೆಂದೂ ಪ್ರಸಿದ್ಧಿಯಿದೆ. ಈ ಮೂರು ಪ್ರಭೇದಗಳೂ **ತೈತ್ತಿರೀಯಸಂಹಿತೆ**ಯಲ್ಲಿ (೨-೨-೪) **ಪವಮಾನ ಶುಚಿ, ಪಾವಕ** ಎಂಬ ಹೆಸರಿನಿಂದ ಪಠಿತವಾಗಿದೆ. ನಿರುಕ್ತಕಾರರು **ಋಕ್ಸಂಹಿತೆಯ**—

ಸ್ತೋಮೇನ ಹಿ ದಿವಿ ದೇವಾಸೋ ಅಗ್ನಿಮಜೀಜನಞ್ಛಕ್ತಿಭೀ ರೋದಸಿಪ್ರಾಂ ।
ತಮೂ ಅಕೃಣ್ವನ್ ತ್ರೇಧಾ ಭುವೇ ಕಂ ಸ ಓಷಧೀಃ ಪಚತಿ ವಿಶ್ವರೂಪಾಃ ॥

(ಋ. ಸಂ. ೧೦-೮೮-೧೦)

ಎಂಬ ಋಕ್ಕನ್ನುದಹರಿಸಿ **ತಮಕುರ್ವಂಸ್ತ್ರೇಧಾಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ ।** ಶಾಕಪೂಣಿಯ ವಿವರಣೆಯನ್ನನುಸರಿಸಿ ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕಗಳೆಂಬ ಪ್ರಭೇದಗಳುಳ್ಳ ಈ ಮೂರು ಸ್ಥಾನಗಳಲ್ಲೂ **ಅಗ್ನಿಃ, ಜಾತವೇದಾಃ, ವೈಶ್ವಾನರ** ಎಂಬ ಮೂರು ರೂಪಗಳಲ್ಲಿ ಅಗ್ನಿಯು ಆವಿರ್ಭವಿಸಿದ್ದಾನೆ ಎಂದು ಈ ಮೂರು ಸ್ವರೂಪಗಳನ್ನು ಸಂಹಿತಾವಾಕ್ಯಗಳ ಉದಾಹರಣೆಯಿಂದ ವಿವರಿಸಿದ್ದಾರೆ. (ನಿ. ೭-೧೪ ರಿಂದ ೭-೨೫).

ಇದರಂತೆಯೇ ಇನ್ನೂ ಕೆಲವು ಋಕ್ಕುಗಳಲ್ಲಿಯೂ ಸಹ ಅಗ್ನಿಯ ಆವಿರ್ಭಾವವನ್ನು **ಸಮುದ್ರೇ, ದಿವಿ, ಅಪ್ಸು** ಎಂಬ ಹೆಸರುಗಳಿಂದಲೂ ವಿವರಿಸಿ ಸಮುದ್ರದಲ್ಲಿ ಬಡಬಾನಲರೂಪದಲ್ಲಿಯೂ, ದ್ಯುಲೋಕದಲ್ಲಿ ಆದಿತ್ಯರೂಪದಲ್ಲಿಯೂ, **ಅಪ್ಸು** ಎಂದರೆ ಅಂತರಿಕ್ಷದಲ್ಲಿ ಮಿಂಚಿನ ರೂಪದಲ್ಲಿಯೂ, ಗೋಚರಿಸುತ್ತಾನೆ ಎಂದು ವಿವರಿಸಿದೆ. ಅಗ್ನಿಯ ಈ ಮೂರು ವಿಧವಾದ ಆವಿರ್ಭಾವವನ್ನೂ, ಆದಿತ್ಯರೂಪದಲ್ಲಿ ದ್ಯುಲೋಕದಲ್ಲಿ ಬೆಳಗುವುದನ್ನೂ ಬೃಹದಾರಣ್ಯಕಾದಿಗಳಲ್ಲಿ ಈರೀತಿ ವರ್ಣಿಸಿದೆ.

ಆಪೋ ವಾ ಅರ್ಕಸ್ತದ್ಯದಪಾಂ ಶರ ಆಸೀತ್ತತ್ಸಮಹನ್ಯತ । ಸಾ ಪೃಥಿವ್ಯಭವತ್ತಸ್ಯಾಮಶ್ರಾಮ್ಯತ್ತಸ್ಯ ಶ್ರಾಂತಸ್ಯ ತಪ್ತಸ್ಯ ತೇಜೋರಸೋ ನಿರವರ್ತತಾಗ್ನಿಃ ।

ಸ ತ್ರೇಧಾತ್ಮಾನಂ ವ್ಯಕುರುತಾದಿತ್ಯಂ ತೃತೀಯಂ ವಾಯುಂ ತೃತೀಯಂ ಸ ಏಷ ಪ್ರಾಣಸ್ತ್ರೇಧಾ ವಿಹಿತಃ । (ಬೃ. ಉ. ೧-೨-೨-೩)

ಅರ್ಕರೂಪವಾದ ಅಪ್ಪಿನಿಂದ ಪೃಥಿವಿಯು ಉತ್ಪನ್ನವಾಗಿ, ಘನೀಭೂತವಾದ ಪೃಥಿವಿಯಿಂದ ಮಹತ್ತೇಜಸ್ಸಿನಿಂದ ಕೂಡಿದ ಅಗ್ನಿಯು ನಿಷ್ಪನ್ನನಾದನು. ಆ ಅಗ್ನಿಯು, ಪಾರ್ಥಿವಾಗ್ನಿ, ವಾಯು ಮತ್ತು ಆದಿತ್ಯರೂಪದಲ್ಲಿ ವಿಭಾಗಮಾಡಿಕೊಂಡು ಮೂರು ಸ್ಥಾನಗಳನ್ನು ಆಕ್ರಮಿಸಿದನು. ಮತ್ತು,

**ಸೋಽಕಾಮಯತ ದ್ವಿತೀಯೋ ಮ ಆತ್ಮಾ ಜಾಯೇತೇತಿ ಸ ಮನಸಾ ವಾಚಂ ಮಿಥುನಂ ಸಮಭವದಶನಾಯಾ ಮೃತ್ಯುಸ್ತದ್ಯದ್ರೇತ ಆಸೀತ್ಸ ಸಂವತ್ಸರೋಽಭವತ್ । ನ ಹ ಪುರಾ ತತಃ ಸಂವತ್ಸರ ಆಸ ತಮೇತಾವಂತಂ ಕಾಲಮಬಿಭಃ ।** (ಬೃ. ಉ. ೧-೨-೪)

ಅನಂತರ ಈ ಅಗ್ನಿರೂಪನಾದ ಪ್ರಜಾಪತಿಯು ಸದ್ವಿತೀಯನಾಗಬೇಕೆಂದಿಚ್ಛಿಸಿ ಮನಸ್ಸಿನಲ್ಲಿ ವಾಕ್ಕಿನೊಡನೆ ಸಂಯುಕ್ತನಾದನು. ಆಗ ಆ ರೇತಸ್ಸು ಸಂವತ್ಸರನಾಗಿ ಪರಿಣಮಿಸಿತು. ಅದಕ್ಕಿಂತಲೂ ಪೂರ್ವಭಾವಿಯಾಗಿ ಸಂವತ್ಸರವೇ ಇರಲಿಲ್ಲ, ಇತ್ಯಾದಿಯಾಗಿ ಅಗ್ನಿರೂಪನಾದ ಪ್ರಜಾಪತಿಗೂ, ಪ್ರಕೃತವಾದ ಋಕ್ಕಿನಲ್ಲಿ ವರ್ಣಿಸಿರುವ ಸಂವತ್ಸರಕ್ಕೂ ಇರತಕ್ಕ ಸಂಬಂಧವನ್ನು ತಿಳಿಸಿದೆ. ಈ ಸಂವತ್ಸರದ ಅವಯವಗಳನ್ನು ಐತರೇಯಾರಣ್ಯಕದಲ್ಲಿ ಈ ಋಕ್ಕಿನಲ್ಲಿ ವಿವರಿಸಿರುವಂತೆಯೇ,

**ತಾನಿ ಸಪ್ತವಿಂಶತಿಶತಾನಿ ಭವಂತಿ ಸಪ್ತ ಚ ವೈ ಶತಾನಿ ವಿಂಶತಿಶ್ಚ ಸಂವತ್ಸರಸ್ಯಾಹೋರಾತ್ರಾಃ । ಸ ಏಷೋಽಹಸ್ಸಮಾನಃ ॥** (ಐ. ಆ. ೩-೨-೧)

ಇವುಗಳ ಒಟ್ಟಿನ ಸಂಖ್ಯೆಯು ಏಳನೂರಇಪ್ಪತ್ತಾಗುತ್ತದೆ. ಏಳನೂರುಇಪ್ಪತ್ತು ಎಂಬ ಗಣನೆಯು ಸಂವತ್ಸರದಲ್ಲಿರುವ ಒಟ್ಟು ಅಹೋರಾತ್ರಗಳ ಸಂಖ್ಯೆಯು ಎಂದು ತಿಳಿಸಿದೆ. ಈ ಅಹೋರಾತ್ರಗಳನ್ನು ಪ್ರಕೃತವಾದ ಋಕ್ಕಿನಲ್ಲಿ ಪುತ್ರರೆಂದು ನಿರ್ದೇಶಿಸಿದೆ. ಇಲ್ಲಿ ಪುತ್ರಪದಕ್ಕೆ ಸಾಯಣರು **ಪುತ್ರವದುತ್ಪದ್ಯಮಾನಾಃ ಪ್ರಾಣಿನಾಂ ದುಃಖಾತ್ತ್ರಾತಾರೋ ವಾ ಅಹೋರಾತ್ರರೂಪಾಃ ।** ಪುತ್ರರಂತೆ ಜನಿಸತಕ್ಕವರೆಂದಾಗಲಿ ಅಥವಾ ಪ್ರಾಣಿಗಳನ್ನು ದುಃಖದಿಂದ ರಕ್ಷಿಸತಕ್ಕ ಸಾಮರ್ಥ್ಯವುಳ್ಳ ಅಹೋರಾತ್ರಗಳೆಂದಾಗಲಿ ಅರ್ಥವಾಗುತ್ತದೆಂದು ತಿಳಿಸಿದ್ದಾರೆ.



## ಪಂಚಪಾದಂ ಪಿತರಂ ದ್ವಾದಶಾಕೃತಿಂ ದಿವ ಆಹುಃ ಪರೇ ಅರ್ಧೇ ಪುರೀಷಿಣಂ । ಅಥೇಮೇ ಅನ್ಯ ಉಪರೇ ವಿಚಕ್ಷಣಂ ಸಪ್ತಚಕ್ರೇ ಷಳರ ಆಹುರರ್ಪಿತಂ ॥ ೧೨ ॥

ಋತುರೂಪಗಳಾದ ಐದುಪಾದಗಳುಳ್ಳವನೂ, ಪಿತೃರೂಪನಾದವನೂ, ದ್ವಾದಶಮಾಸಗಳ ಆಕೃತಿಗಳುಳ್ಳವನೂ ವೃಷ್ಟ್ಯುದಕದಿಂದ ತುಂಬಿದವನೂ ದೆದ ಆದಿತ್ಯನನ್ನು ದ್ಯುಲೋಕದ ಅತ್ಯುನ್ನತವಾದ ಸ್ಥಾನದಲ್ಲಿ ಇರುವವನನ್ನಾಗಿ ಕೆಲವು ತತ್ತ್ವಜ್ಞರು ಹೇಳುತ್ತಾರೆ. ವೇದವಾದಿಗಳಾದ ಇನ್ನು ಕೆಲವರು ಅಯನಾದಿಸಪ್ತಅವಯವಾತ್ಮಕವಾದುದೂ, ಋತ್ವಾತ್ಮಕವಾದ ಆರು ಅರಗಳುಳ್ಳದ್ದೂ ಆದ ಸಂವತ್ಸಸ್ಸರರೂಪ ಕಾಲದಲ್ಲಿ ವಿವಿಧವಾದ ದೃಶ್ಯಕ್ಕೆ ಹೇತುವಾದ ಆದಿತ್ಯನನ್ನು ಅರ್ಪಿಸಲ್ಪಟ್ಟಿರುವವನನ್ನಾಗಿ (ಸ್ಥಾಪಿಸಲ್ಪಟ್ಟಿರುವವನಾಗಿ) ಹೇಳುತ್ತಾರೆ.

ಈ ಋಕ್ಕಿನ ಒಟ್ಟು ತಾತ್ಪರ್ಯವನ್ನು ಸಾಯಣರು ಈರೀತಿಯಲ್ಲಿ ತಿಳಿಸಿದ್ದಾರೆ—**ಏತದುಕ್ತಂ ಭವತಿ ಆಮ್ನುಮಾದಿತ್ಯಂ ದಕ್ಷಿಣೋತ್ತರರೂಪಭಿನ್ನಗತೇಃ ತೀವ್ರಮಂದಾದಿಭಾವಸ್ಯ ಚ ಕಾಲಾಧೀನತ್ವಾತ್ತದಧೀನಮಾಹುಃ । ಅನ್ಯೇ ತು ಸಂವತ್ಸರಾದ್ಯಾತ್ಮಕಸ್ಯ ಕಾಲಸ್ಯ ಸೂರ್ಯಗಮನಾಗಮನಸಾಧ್ಯತ್ವಾತ್ ತದಾಯತ್ತತ್ವಮಾಹುಃ ಇತಿ ॥** ಆದಿತ್ಯನ ದಕ್ಷಿಣಾಯನ ಮತ್ತು ಉತ್ತರಾಯಣರೂಪವಾದ ಗತಿಗಳೂ, ಅವನ ತೀವ್ರತ್ವ ಅಥವಾ ಮಂದತ್ವವೂ ಸಹ

ಸಂವತ್ಸರರೂಪವಾದ ಕಾಲಾಧೀನವಾಗಿರುವುದೆಂದೂ ಆದುದರಿಂದ ಆದಿತ್ಯನು ಕಾಲಾಧೀನನೆಂದೂ ಒಂದು ಮತವು. ಅಥವಾ ಸಂವತ್ಸರರೂಪವಾದ ಕಾಲವು ಸೂರ್ಯನ ಗಮನಾಗಮನದ ಅಧೀನವಾಗಿರುವುದರಿಂದ ಸಂವತ್ಸರರೂಪವಾದ ಕಾಲವು ಸೂರ್ಯಾಯತ್ತವೆಂದು ಇನ್ನೊಂದು ಮತವೂ ಆಗಿದೆ. ಪ್ರಕೃತವಾದ ಋಕ್ಕಿನಲ್ಲಿ ಸಂವತ್ಸರರೂಪಿಯಾದ ಆದಿತ್ಯನ ವರ್ಣನವಿದೆ.

**ಪಂಚಪಾದಂ—ಪಂಚಸಂಖ್ಯಾಕಋತ್ವಾತ್ಮಕಪಾದೋಪೇತಂ ಏತತ್ ಹೇಮಂತ ಶಿಶಿರಯೋಃ ಏಕತ್ವಾಭಿಪ್ರಾಯಂ** । ಹೇಮಂತಋತು ಮತ್ತು ಶಿಶಿಋತು ಎರಡರಲ್ಲೂ ಒಂದೇಗುಣವಿರುವುದರಿಂದ ಅವೆರಡನ್ನೂ ಒಂದೇ ಋತುವೆಂದು ಭಾವಿಸಿದರೆ ಆಗ ಸಂವತ್ಸರಕ್ಕೆ ಐದುಋತುಗಳು ಮಾತ್ರ ಅವಯವಗಳಾಗುತ್ತವೆ. ಇಲ್ಲಿ **ಪಂಚಪಾದಂ** ಎಂದು ಸಂವತ್ಸರಕ್ಕೆ ವಿಶೇಷಣವಾಗಿದೆ. ಈ ಮಂತ್ರವು ಪ್ರಶ್ನೋಪನಿಷತ್ತಿನಲ್ಲಿಯೂ ಪಠಿತವಾಗಿದೆ. ಅಲ್ಲಿ ಶಂಕರಾಚಾರ್ಯರೂ ಈ ಪದಕ್ಕೆ **ಪಂಚರ್ತವಃ ಪಾದಾ ಇವಾಸ್ಯ ಸಂವತ್ಸರಾತ್ಮನ ಆದಿತ್ಯಸ್ಯ । ತೈರಸೌ ಪಾದೈರಿವರ್ತುಭಿರಾವರ್ತತೇ । ಹೇಮಂತಶಿಶಿರಾವೇಕೀಕೃತ್ಯೇಯಂ ಕಲ್ಪನಾ** । ಸಂವತ್ಸರಾತ್ಮನಾದ ಆದಿತ್ಯನ ಪಾದಗಳಂತಿರುವ ಪಂಚಋತುಗಳೆಂದು ಅರ್ಥಮಾಡಿದ್ದಾರೆ. (ಪ್ರ. ಉ. ೧-೧೧)

**ದ್ವಾದಶಾಕೃತಿಂ—ದ್ವಾದಶ ಮಾಸಾ ಏವ ಆಕೃತಯೋ ಯಸ್ಯ ತಾದೃಶಂ** । ದ್ವಾದಶಮಾಸಗಳೆಂಬ ಅವಯವಗಳುಳ್ಳ ಸಂವತ್ಸರಾತ್ಮನಾದ ಆದಿತ್ಯನನ್ನು ಎಂದರ್ಥ. ಒಟ್ಟು ಈ ಹದಿನೇಳು ಅವಯವಗಳಿಂದಲೂ ಕೂಡಿದ ಆದಿತ್ಯನ ಸ್ವರೂಪವನ್ನು ಶತಪಥಬ್ರಾಹ್ಮಣದಲ್ಲಿ,

> **ತಸ್ಯ ಸಪ್ತದಶ ಸಾಮಿಧೇನೀಃ । ಸಪ್ತದಶೋ ವೈ ಸಂವತ್ಸರೋ ದ್ವಾದಶಮಾಸಾಃ ಪಂಚರ್ತವಃ ಸಂವತ್ಸರಃ ಪ್ರಜಾಪತಿಃ ॥** (ಶ. ಬ್ರಾ. ೬-೨-೨-೮)

ಪ್ರಜಾಪತಿಯು ಹನ್ನೆರಡು ತಿಂಗಳಿಂದಲೂ ಐದು ಋತುಗಳಿಂದಲೂ ಕೂಡಿ ಹದಿನೇಳು ಅವಯವಗಳುಳ್ಳ ಸಂವತ್ಸರಾತ್ಮನಾಗಿದ್ದಾನೆ ಎಂದು ಯಜ್ಞಾಂಗವಾದ ಸಾಮಿಧೇನೀಮಂತ್ರಗಳಿಗೂ ಪ್ರಜಾಪತಿಗೂ ಇರುವ ಸಂಬಂಧವನ್ನು ತೋರಿಸಿದೆ. ಸಂವತ್ಸರದ ಅವಯವಗಳು ಹದಿನೇಳಾದುದರಿಂದ ಈ ಮಂತ್ರಗಳೂ ಸಪ್ತದಶಸಂಖ್ಯಾಕಗಳಾಗಿರಬೇಕೆಂದು ತಾತ್ಪರ್ಯ.

**ಪಿತರಂ—ಸರ್ವಸ್ಯ ಪ್ರೀಣಯಿತಾರಂ** । ಸಕಲಕ್ಕೂ ಪ್ರೀತಿಯನ್ನುಂಟುಮಾಡತಕ್ಕ ಎಂದು ಸಂವತ್ಸರ ಚಕ್ರಕ್ಕೆ ವಿಶೇಷಣವಾಗಿದೆ ಎಂದರೆ ಇಲ್ಲಿ ಸಂವತ್ಸರಚಕ್ರಕ್ಕೂ ಆದಿತ್ಯನಿಗೂ ತಾದಾತ್ಮ್ಯವನ್ನು ಹೇಳಿರುವುದರಿಂದ ಪಿತರಂ ಎಂಬ ಪದವು ಆದಿತ್ಯನಿಗೂ ವಿಶೇಷಣವಾಗಿದೆಯೆಂದು ತಿಳಿಯಬೇಕು. ಆದಿತ್ಯನಿಗೆ ವಿಶೇಷಣವಾದರೆ ರೂಢವಾದ ಪಿತೃವೆಂಬ ಅರ್ಥವನ್ನೇ ಹೇಳಿದರೂ ತಪ್ಪಾಗಲಾರದು. ಏತಕ್ಕೆಂದರೆ,

> **ಪಿತಾ ನೋಽಸಿ ಪಿತಾ ನೋ ಬೋಧೀತಿ । ಏಷ ವೈ ಪಿತಾ ಯ ಏಷ ತಪತ್ಯೇಷ ಉ ಪ್ರವರ್ಗ್ಯಸ್ತದೇತಮೇವೈತತ್ಪ್ರೀಣಾತಿ ತಸ್ಮಾದಾಹ ಪಿತಾ ನೋಽಸಿ ಪಿತಾ ನೋ ಬೋಧೀತಿ ನಮಸ್ತೇಽಸ್ತು ।** (ಶ. ಬ್ರಾ. ೧೪-೧.೪-೧೫)

ಅಂತರಿಕ್ಷದಲ್ಲಿ ಪ್ರಕಾಶಿಸುತ್ತಿರುವ ಆದಿತ್ಯನೇ ನಮ್ಮೆಲ್ಲರ ಪಿತೃವು, ಅವನೇ ನಮ್ಮೆಲ್ಲರಿಗೂ ಪ್ರೀತಿದಾಯಕನು ಮತ್ತು ತೃಪ್ತಿಯನ್ನುಂಟುಮಾಡತಕ್ಕವನು, ಅವನೇ ಪ್ರವರ್ಗ್ಯರೂಪನು ಇತ್ಯಾದಿಯಾಗಿ ಸಂಬೋಧಿಸಿರುವುದರಿಂದ ಇಲ್ಲಿಯೂ ಪಿತೃವೆಂದು ಹೇಳಬಹುದು. ಈ ಎರಡರ್ಥಗಳೂ ಈ ಪದದಲ್ಲಿ ಅಂತರ್ಗತವಾಗಿವೆ. ಸಂವತ್ಸರಪರವಾಗಿಯೂ ಸಹ ಈ ಅರ್ಥವನ್ನು ಹೇಳಬಹುದು. ಏತಕ್ಕೆಂದರೆ,

**ಅಥೋ ಪ್ರಜನನಮೇತತ್ಸಂವತ್ಸರೋ ವಾ ಋತವ್ಯಾಃ ಸಂವತ್ಸರಃ ಪ್ರಜನನಂ ಪ್ರಜನನಮೇವೈತದುಪದಧಾತಿ ॥** (ಶ. ಬ್ರಾ. ೮-೭-೧-೧)

ಇತ್ಯಾದಿ ವಾಕ್ಯಗಳಲ್ಲಿ ಉತ್ಪಾದನಶಕ್ತಿಯೇ ಸಂವತ್ಸರರೂಪವಾಗಿರುವುದೆಂದೂ ಸಕಲ ಭೂತಗಳೂ ಸಂವತ್ಸರದಿಂದ ಉತ್ಪನ್ನವಾದವೆಂದೂ ಹೇಳಿರುವುದರಿಂದ ಪಿತೃವೆಂಬ ರೂಢವಾದ ಅರ್ಥವನ್ನು ಹೇಳಬಹುದು. ಸಾಯಣರು ಕೇವಲ **ಪ್ರೀಣಯಿತಾರಂ**–ತೃಪ್ತಿದಾಯಕವಾದ ಅರ್ಥವನ್ನು ಮಾತ್ರ ಹೇಳಿದ್ದಾರೆ. ಪ್ರಶ್ನೋಪನಿಷತ್ತಿನಲ್ಲಿ ವ್ಯಾಖ್ಯಾನಮಾಡುವಾಗ ಶಂಕರಾಚಾರ್ಯರು ಈ ಪದಕ್ಕೆ **ಪಿತಂ—ಸರ್ವಸ್ಯ ಜನಯಿತೃತ್ವಾತ್ಪಿತೃತ್ವಂ ತಸ್ಯ (ಸಂವತ್ಸರಾತ್ಮನ ಆದಿತ್ಯಸ್ಯ)** ಸಂವತ್ಸರಾತ್ಮನಾದ ಆದಿತ್ಯನು ಎಲ್ಲಕ್ಕೂ ಜನಕನಾದುದರಿಂದ ಪಿತೃತ್ವವೆಂದು ಅರ್ಥಮಾಡಿದ್ದಾರೆ. (ಪ್ರ. ಉ. ೧-೧೧).

**ಪುರೀಷಿಣಂ— ಪುರೀಷಮಿತ್ಯುದಕನಾಮ |** ಈ ಪದವು ಉದಕನಾಮಗಳಲ್ಲಿ ಪಠಿತವಾಗಿದೆ. **ಸರ್ವ ಕಾಮಾನಾಂ ಪೂರಕಂ ಉದಕಂ |** ಎಲ್ಲಾ ಇಷ್ಟಾರ್ಥಗಳನ್ನೂ ಪೂರೈಸತಕ್ಕ ಉದಕದಿಂದ ಎಂದರ್ಥವಾಗುತ್ತದೆ. ಈ ಪದಕ್ಕೆ ನಿಷ್ಕೃಷ್ಟವಾದ ನಿರ್ವಚನವನ್ನು ಹೇಳತಕ್ಕ ಕಾಲದಲ್ಲಿ ನಿರುಕ್ತಕಾರರು,

**ದೇವಾನಾಂ ಮಾನೇ ಪ್ರಥಮಾ ಅತಿಷ್ಠನ್ ಕೃಂತತ್ರಾದೇಷಾಮುಪರಾ ಉದಾಯನ್ |**
**ತ್ರಯಸ್ತಪಂತಿ ಪೃಥಿವೀಮನೂಪಾ ದ್ವಾ ಬೃಬೂಕಂ ವಹತಃ ಪುರೀಷಂ ||**

(ಋ. ಸಂ. ೧೦-೨೭-೨೩)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಪುರೀಷಂ ಪ್ರೀಣಾತೇಃ ಪೂರಯತೇರ್ವಾ |** ತುಂಬು ಅಥವಾ ತೃಪ್ತಿಪಡಿಸು ಎಂಬರ್ಥವನ್ನು ಕೊಡತಕ್ಕ ಪೃಧಾತುವಿನಿಂದ ಈ ಪದವು ನಿಷ್ಪನ್ನವಾಗಿದೆಯೆಂದು ತೋರಿಸಿದ್ದಾರೆ. (ನಿ. ೨-೨೨) ಜಗತ್ತನ್ನು ತುಂಬತಕ್ಕ ಅಥವಾ ಜಗತ್ತಿಗೆ ತೃಪ್ತಿಯನ್ನುಂಟುಮಾಡತಕ್ಕ ಉದಕವನ್ನು ಹೊಂದಿರುವುದರಿಂದ ಅಥವಾ ಉದಕದಿಂದ ವ್ಯಾಪ್ತನಾಗಿರುವುದರಿಂದ ಆದಿತ್ಯನಿಗೆ **ಪುರೀಷೀ** ಎಂಬ ವಿಶೇಷಣವು ಪ್ರಸಿದ್ಧವಾಗಿದೆ. ಉದಕವು ಆದಿತ್ಯನಲ್ಲಿ ಅಂತರ್ಗತವಾಗಿಲ್ಲದೇ ಇದ್ದರೂ ಸಹ ಆದಿತ್ಯನು ಉದಕದ ಮಧ್ಯದಲ್ಲಿ ಪರಿಭ್ರಮಣವನ್ನು ಮಾಡುತ್ತಿರುವುದರಿಂದಲೂ ಅಥವಾ ಉದಕದ ಉತ್ಪಾದಕನಾಗಿರುವುದರಿಂದಲೂ ಈ ವಿಶೇಷಣವಿದೆಯೆಂದು ಶತಪಥಬ್ರಾಹ್ಮಣದ ಅನೇಕ ವಾಕ್ಯಗಳಿಂದ ತಿಳಿಯುತ್ತದೆ.

**ಅಪಾಂ ಗಂಭನ್ತ್ಸೀದೇತಿ | ಏತದ್ವಾಪಾಂ ಗಂಭಿಷ್ಠಂ ಯತ್ರೈಷ ಏತತ್ತಪತಿ |** (ಶ. ಬ್ರಾ. ೭-೫-೧-೮)
ಅಂತರಿಕ್ಷದಲ್ಲಿ ಗಭೀರವಾದ ಉದಕದ ಮಧ್ಯದಲ್ಲಿ ಆದಿತ್ಯನು ಪ್ರಕಾಶಿಸುತ್ತಿದ್ದಾನೆ.

**ಅಗ್ನೇ ದಿವೋಽರ್ಣಮಚ್ಛಾ ಜಿಗಾಸೀತಿ | ಆಪೋ ವಾ ಅಸ್ಯ ದಿವೋಽರ್ಣಸ್ತಾ............ ಯಾ ರೋಚನೇ ಪರಸ್ತಾತ್ಸೂರ್ಯಸ್ಯ ಯಾಶ್ಚಾವಸ್ತಾದುಪತಿಷ್ಠಂತ ಆಪ ಇತಿ ರೋಚನೋ ಹ ನಾಮೈಷ ಲೋಕೋ ಯತ್ರೈಷ ಏತತ್ತಪತಿ ತದ್ಯಾಶ್ಚೈತಂ ಪರೇಣಾಪೋ ಯಶ್ಚಾವರೇಣ ತಾ ಏತದಾಹ ||** (ಶ. ಬ್ರಾ. ೭-೧-೧-೨೪)

ಎಲೈ ಅಗ್ನಿಯೇ ದ್ಯುಲೋಕದಲ್ಲಿ ನಿನ್ನ ತೇಜಸ್ಸೆಲ್ಲವೂ ಆದಿತ್ಯರೂಪದಲ್ಲಿ ಪ್ರಕಾಶಿಸುತ್ತಿದೆ. ಅಂತರಿಕ್ಷಸ್ಥವಾದ ಪ್ರವಾಹದಲ್ಲಿ ನೀನು ಬೆಳಗುತ್ತಿದ್ದೀಯೆ. ಆ ಪ್ರವಾಹವು ಅಂತರಿಕ್ಷಸ್ಥವಾದ ಉದಕದಿಂದ ವ್ಯಾಪ್ತವಾಗಿದೆ. ಆ ಉದಕದ ಪ್ರವಾಹವು ಆದಿತ್ಯನ ತೇಜೋಮಂಡಲವನ್ನೂ ಮೀರಿಹೋಗಿದೆ. ಕೆಳಗೂ ಮೇಲೂ ಸುತ್ತಲೂ ವ್ಯಾಪಿಸಿರುವ ಪ್ರವಾಹದ ನಡುವೆ ಆದಿತ್ಯರೂಪದ ಅಗ್ನಿಯು ರಾರಾಜಿಸುತ್ತಿದ್ದಾನೆ, ಎಂದು ವರ್ಣಿತವಾಗಿದೆ. ಇದಲ್ಲದೆ,

**ಸರ್ವಾಣಿ ಹ ತ್ವೇವ ಭೂತಾನಿ । ಸರ್ವೇ ದೇವಾ ಏಷೋಽಗ್ನಿಶ್ಚಿತ ಆಪೋ ವೈ ಸರ್ವೇ ದೇವಾ ಸರ್ವಾಣಿ ಭೂತಾನಿ ತಾ ಹೈತಾ ಆಪ ಏವೈಷೋಽಗ್ನಿಶ್ಚಿತಸ್ತಸ್ಯ ನಾವ್ಯಾ ಏವ ಪರಿಶ್ರಿತಸ್ತಾಃ ಷಷ್ಟಿಶ್ಚ ತ್ರೀಣಿ ಚ ಶತಾನಿ ಭವಂತಿ ಷಷ್ಟಿಶ್ಚ ಹ ವೈ ತ್ರೀಣಿ ಚ ಶತಾನ್ಯಾದಿತ್ಯಂ ನಾವ್ಯಾ ಅಭಿರಕ್ಷಂತ್ಯಥ ಯದಂತರಾ ನಾವ್ಯೇ ತತ್ಸೂದದೋಹಾ ॥** (ಶ. ಬ್ರಾ. ೧೦-೫-೪-೧೪)

ಎಂಬಲ್ಲಿ ಅಗ್ನಿವೇದಿಗೂ ಆದಿತ್ಯಮಂಡಲಕ್ಕೂ ಸಾಮ್ಯವನ್ನು ಹೇಳುತ್ತಾ ಯಜ್ಞಾಗ್ನಿಯೇ ಸಕಲ ಭೂತಗಳೂ ಸಕಲ ದೇವತೆಗಳೂ ಆಗಿದೆಯೆಂದೂ, ಸಕಲಭೂತಗಳೂ ವಿಶ್ವವ್ಯಾಪಿಯಾದ ಅಪ್ಪಾಗಿದೆಯೆಂದೂ ತಿಳಿಸಿ, ಆದಿತ್ಯಮಂಡಲವನ್ನು ಸುತ್ತುಗಟ್ಟಿರುವ ಮುನ್ನೂರ ಅರವತ್ತು ಪ್ರವಾಹಗಳಿಗೆ ಅಗ್ನಿವೇದಿಯ ಪರಿಧಿಯಲ್ಲಿರುವ ಮುನ್ನೂರರವತ್ತು ಇಷ್ಟಿಕೆಗಳು ಸಮವೆಂದು ವರ್ಣಿಸಿದೆ. ಸೂರ್ಯನನ್ನು ಆವರಿಸಿ ಅವನ ಅಭಿಮುಖವಾಗಿ ಈ ಪ್ರವಾಹಗಳು ಹರಿಯುವುವೆಂದು ವಿವರಿಸಿದೆ. ಸೂರ್ಯರಶ್ಮಿಗಳು ಉದಕಪ್ರವಾಹ ಗಳಿಗೆ ಹೇತುಗಳಾದುದರಿಂದ ರಶ್ಮಿಗಳನ್ನೇ ಪ್ರವಾಹಗಳೆಂದು ರೂಪಕಮಾಡಿ ಹೇಳಿದೆಯೆಂದು ಸಾಯಣರು ವಿವರಿಸುತ್ತಾ **ಅರ್ಚಿಷೋ ಹ್ಯಾಪಸ್ಸೂರ್ಯಕಿರಣಾನಾಮೇವ ವೃಷ್ಟಿಕರ್ತೃಕತ್ವಾತ್ ಕಾರ್ಯಕಾರಣಯೋರಭೇದೇನ ಅರ್ಚಿರ್ವಾ ಅಪ ಇತ್ಯುಕ್ತಂ** ಎಂದಿದ್ದಾರೆ.

ಈರೀತಿಯಾಗಿ ಉದಕದಿಂದ ಆವೃತನಾಗಿಯೂ, ತನ್ನ ರಶ್ಮಿಗಳದ್ವಾರಾ ಉದಕದ ಪ್ರವಾಹಕ್ಕೆ ಹೇತುವಾಗಿಯೂ ಇರುವುದರಿಂದ ಆದಿತ್ಯನಿಗೆ **ಪುರೀಷ** ಎಂಬ ವಿಶೇಷಣವು ಆದಿತ್ಯನ ತತ್ತ್ವವನ್ನು ವಿವರಿಸುವುದಾಗಿದೆ. ಸಾಯಣರು **ಉದಕವಂತಂ** ಎಂದು ಮೊದಲು ಅರ್ಥಮಾಡಿ ಅನಂತರ **ಪ್ರೀಣಯಿತಾರಂ ವಾ** ಭೂತಗಳಿಗೆ ಹರ್ಷದಾಯಕವಾಗಿರುವ ಎಂದೂ ಸಹ ಎರಡನೆಯ ಅರ್ಥವನ್ನು ಹೇಳಿದ್ದಾರೆ. ಮೇಲೆ ಉದಹರಿಸಿಸುವ ನಿರುಕ್ತಕಾರರ ನಿರ್ವಚನದಂತೆ ಈ ಎರಡರ್ಥವೂ ಸಾಧ್ಯವಾಗುವುದರಿಂದಲೂ, ಆದಿತ್ಯನಿಂದಲೇ ಜಗಜ್ಜೀವನವೆಲ್ಲವೂ ಹರ್ಷಮಯವಾಗಿರುವುದರಿಂದಲೂ ಸಹ ಇಲ್ಲಿ ಯಾವ ಅರ್ಥವನ್ನಾದರೂ ಹೇಳಬಹುದು.

**ಉಪರೇ— ಉಪರಮಂತೇ ಅಸ್ಮಿನ್ ಉಪರತಾಃ ಪ್ರಾಣಿನಃ ಅತ್ರ ಇತಿ ವಾ ಉಪರಃ ಸಂವತ್ಸರಃ ।** ಪ್ರಾಣಿಗಳು ಇಲ್ಲಿ ಶಾಂತವಾಗಿ ನೆಲ್ಲುತ್ತವೆ ಎಂದರೆ ಚಲನವಿಲ್ಲದ ವ್ಯಾಕಿಯನ್ನು ಹೊಂದುತ್ತವೆ ಎಂಬರ್ಥವನ್ನು ಕೊಡತಕ್ಕದ್ದಾದುದರಿಂದ **ಉಪರ**ವೆಂದರೆ ಸಂವತ್ಸರವೆಂದರ್ಥವೆಂದು ಸಾಯಣರು ವಿವರಿಸಿದ್ದಾರೆ. **ಅತ್ರ ಉಪರಮಂತೇ** ಎಂಬುದಕ್ಕೆ ಉಪಗಮ್ಯ ರಮಂತೇ ಎಂದು ಅರ್ಥಮಾಡುವುದಕ್ಕೂ ಅವಕಾಶವಿದೆ. ಹೇಗೆಂದರೆ, ನಿರುಕ್ತಕಾರರು, **ಉಪರ**ಶಬ್ದದ ನಿರ್ವಚನವನ್ನು ತೋರಿಸುವಾಗ (ನಿ. ೨-೨೧) (ಇಲ್ಲಿ ಮೇಘಪರ್ಯಾಯವಾಗಿದೆ) **ಉಪರಮಂತೇಽಸ್ಮಿನ್ನಭ್ರಾಣಿ ॥ ಉಪ ರತಾ ಆಪ ಇತಿ ವಾ ।** ಎಂದು ಎರಡು ವಿಧವಾದ ವಿವರಣೆಯನ್ನು ಕೊಟ್ಟಿದ್ದಾರೆ. ಅದಕ್ಕೆ ದುರ್ಗಾಚಾರ್ಯರು ವ್ಯಾಖ್ಯಾನವನ್ನು ಮಾಡುತ್ತಾ **ಉಪಗಮ್ಯ ರಮಂತೇ ಅಸ್ಮಿನ್ನಭ್ರಾಣಿ ।** ಇಲ್ಲಿ ಮೇಘಗಳು ಸೇರಿಕೊಂಡು ಹರ್ಷವನ್ನು ಪ್ರಕಟಿಸುತ್ತೇವೆ ಎಂದು ಹೇಳಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಸಾಯಣರು **ಉಪರಮಂತೇ** ಎಂಬುದಕ್ಕೆ ಅನ್ನಸಮೃದ್ಧಿಯಿಂದ ಲಭಿಸಿದ ಸಂತೋಷವನ್ನನುಭವಿಸುತ್ತವೆ ಎಂದೂ, **ಉಪರತಾಃ** ಎಂಬುದಕ್ಕೆ ಶಾಂತವಾಗಿರುತ್ತವೆ ಎಂದರೆ ಚಲನರಹಿತವಾದ ಸ್ಥಿತಿಯನ್ನು ಹೊಂದುತ್ತವೆ (ವ್ಯಾಕಿಯನ್ನು ಪಡೆಯುತ್ತವೆ) ಎಂದೂ ಅರ್ಥಮಾಡಬಹುದು. ಸಂವತ್ಸರವು ಅನ್ನಸಮೃದ್ಧಿಯನ್ನುಂಟುಮಾಡಿ ಸಂತೃಪ್ತಿಗೆ ಕಾರಣವಾಗಿರುತ್ತದೆ. ಅದರಂತೆಯೇ ಅಹೋರಾತ್ರಪೂರಿತವಾದ ವರ್ಷಗಳು ಕಳೆಯುವುದರಿಂದ ಪ್ರಾಣಿಗಳ ವ್ಯಾಕಿಗೂ ಕಾರಣವಾಗಿರುತ್ತದೆ, ಈ ಎರಡು ಅಭಿಪ್ರಾಯಗಳನ್ನೂ ತೋರಿಸತಕ್ಕ ಶ್ರುತಿವಾಕ್ಯಗಳಿವೆ.

**ತ್ರೀಣಿ ವಾ ಇಮಾನಿ ಪಂಚವಿಧಾನಿ । ಸಂವತ್ಸರೋಽಗ್ನಿಃ ಪುರುಷಸ್ತೇಷಾಂ ಪಂಚವಿಧಾ ಅನ್ನಂ ಪಾನಗ್ಂ ಶ್ರೀರ್ಜ್ಯೋತಿರಮೃತಂ ಯದೇವ ಸಂವತ್ಸರೇಽನ್ನಂ ತದನ್ನಂ ಯಾ**

**ಅಪಸ್ತತ್ಪಾನಗ್ಂ ರಾತ್ರಿರೇವ ಶ್ರೀಃ ಶ್ರೀ ಯಾಗ್ಂ ಹ್ಯೇತದ್ರಾತ್ರ್ಯಾಗ್ಂ ಸರ್ವಾಣಿ ಭೂತಾನಿ ಸಂವಸಂತ್ಯಹರ್ಜ್ಯೋ ತಿರಾದಿತ್ಯೋಽಮೃತಮಿತ್ಯಧಿದೇವತಂ ॥** (ಶ. ಬ್ರಾ. ೧೦-೨-೬-೧೬)

ಐದು ವಿಧವಾದ ಸಂಪತ್ತನ್ನು ಪಡೆದಿರತಕ್ಕ ಪದಾರ್ಥಗಳು ಮೂರಿವೆ ಸಂವತ್ಸರ, ಅಗ್ನಿ ಮತ್ತು ಪುರುಷ. ಅನ್ನ, ಪಾನ, ಸಂಪತ್ತು (ಸೌಖ್ಯ), ತೇಜಸ್ಸು ಮತ್ತು ಅಮೃತತ್ವ ಈ ಐದೂ ಇವುಗಳ ರೂಪಾಂತರಗಳು. ಸಂವತ್ಸರದಲ್ಲಿ ಎಷ್ಟು ಅನ್ನವಿದೆಯೋ ಅಷ್ಟೇ ಅದರ ಆಹಾರ; ಉದಕವಿದ್ದಷ್ಟೇ ಪಾನವು, ಸಕಲ ಭೂತಗಳೂ ರಾತ್ರಿಯಲ್ಲಿಯೇ ಸೌಖ್ಯವನ್ನನುಭವಿಸುವುದರಿಂದ ರಾತ್ರಿಯೇ ಸುಖವು ಅಹಸ್ಸೇ ತೇಜಸ್ಸು ಮತ್ತು ಆದಿತ್ಯನೇ ಅಮೃತವು ಇತ್ಯಾದಿಯಾಗಿ ಸಂವತ್ಸರದ ಸಂಪತ್ಸಮೃದ್ಧಿಯನ್ನು ಪ್ರಶಂಸಿಸಿ,

**ಸೋಽಯಂ ಸಂವತ್ಸರಃ ಪ್ರಜಾಪತಿಃ..................ತಸ್ಮಾದಾಹುಸ್ಸಂವತ್ಸರಃ ಸರ್ವೇ ಕಾಮಾ ಇತಿ ನ ಹ ಸಂವತ್ಸರಾತ್ಕಶ್ಚನ ಬಹಿರ್ಧಾ ಕಾಮೋಽಸ್ತಿ ।** (ಶ. ಬ್ರಾ. ೧೦-೨-೪-೧)

ಪ್ರಜಾಪತಿಯೇ ಸಂವತ್ಸರವು ಮತ್ತು ಅಗ್ನಿಯೇ ಸಕಲವಿಧವಾದ ಇಷ್ಟಾರ್ಥದ ಪ್ರತಿಬಿಂಬವು. ಪ್ರಜಾಪತಿರೂಪಿಯಾದ ಸಂವತ್ಸರವು ತನ್ನ ಇಷ್ಟಾರ್ಥಗಳನ್ನು ಪೂರೈಸಿಕೊಳ್ಳಬೇಕೆಂಬ ಆಸೆಯಿಂದ ಪ್ರಯತ್ನಿಸಿ ತಾನೇ ಸಕಲವಿಧವಾದ ಇಷ್ಟಾರ್ಥಗಳನ್ನೂ ತುಂಬಿಕೊಂಡನು. ಆದುದರಿಂದ ಪ್ರಜಾಪತಿಯ ಪ್ರತಿಬಿಂಬವಾದ ಸಂವತ್ಸರವೂ ಇಷ್ಟಾರ್ಥಗಳಿಂದ ತುಂಬಿಕೊಂಡಿತು. ಸಂವತ್ಸರದಿಂದ ಬಹಿರ್ಭೂತವಾದ ಇಷ್ಟಾರ್ಥಗಳು ಯಾವುದೂ ಇಲ್ಲ ಎಂಬುದಾಗಿ ಸಂವತ್ಸರದ ಸ್ವರೂಪವನ್ನು ಪ್ರಶಂಸಿಸಿ ಸಂವತ್ಸರವು ಸಕಲವಿಧವಾದ ಇಷ್ಟಾರ್ಥಗಳಿಗೂ ಆಶ್ರಯವಾಗಿಯೂ ಇರುವುದರಿಂದ **ಸಂವತ್ಸರೇ ಉಪರಮಂತೇ ಪ್ರಾಣಿನಃ** ಎಂಬರ್ಥವನ್ನು ಮಾಡಬಹುದು. ಎರಡನೆಯದಾಗಿ,

**ಏಷ ವೈ ಮೃತ್ಯುರ್ಯತ್ಸಂವತ್ಸರಃ । ಏಷ ಹಿ ಮರ್ತ್ಯಾನಾಮಹೋರಾತ್ರಾಭ್ಯಾಮಾಯುಃ ಕ್ಷಿಣೋತ್ಯಥ ಮ್ರಿಯಂತೇ ತಸ್ಮಾದೇಷ ಏವ ಮೃತ್ಯುಃ ಸ ಯೋ ಹ್ಯೇತಂ ಮೃತ್ಯುಗ್ಂ ಸಂವತ್ಸರಂ ವೇದ ನ ಹಾಸ್ಯೈಷ ಪುರಾ ಜರಸೋಽಹೋರಾತ್ರಾಭ್ಯಾಮಾಯುಃ ಕ್ಷಿಣೋತಿ ಸರ್ವಗ್ಂಹೈವಾಯುರೇತಿ ॥** (ಶ. ಬ್ರಾ. ೧೦-೪-೩-೧)

ಸಂವತ್ಸರವು ಮೃತ್ಯುಪ್ರಾಯವು. ಕಾಲರೂಪನಾದ ಪ್ರಜಾಪತಿಯು ಅಹೋರಾತ್ರಗಳ ದ್ವಾರಾ ಮರ್ತ್ಯಲೋಕವನ್ನು ನಾಶಮಾಡುತ್ತಾನೆ. ಆದುದರಿಂದಲೇ ಸಂವತ್ಸರವು ಅಂತಕಪ್ರಾಯವಾಗಿದೆ ಈ ತತ್ತ್ವವನ್ನು ತಿಳಿದವನು ತನ್ನ ಆಯುಃಪರಿಮಿತಿಯ ಪೂರ್ಣವಾದ ಜೀವನವನ್ನು ನಡೆಸುತ್ತಾನೆ. ಇಲ್ಲದಿದ್ದರೆ ಅಕಾಲಮೃತ್ಯುವು ಪ್ರಾಪ್ತವಾಗುತ್ತದೆ. ಅಂತಹವರಿಗೆ—

**ಏಷ ಉ ಏವಾಂತಕಃ । ಏಷ ಹಿ ಮರ್ತ್ಯಾನಾಮಾಯುಷೋಽನ್ತಂ ಗಚ್ಛತಿ ।** ಶ. ಬ್ರಾ. ೧೦-೪-೩-೨)

ಸಂವತ್ಸರವೇ ಅಂತಕನು. ಕಾಲರೂಪನಾದ ಪ್ರಜಾಪತಿಯು ಅಹೋರಾತ್ರಗಳ ದ್ವಾರಾ ಎಲ್ಲಾ ಭೂತಗಳ ಆಯುಸ್ಸಿಗೂ ಅಂತಕನಾಗಿದ್ದಾನೆ; ಇತ್ಯಾದಿಯಾಗಿ ಉಕ್ತವಾಗಿರುವುದರಿಂದ **ಉಪರತಾಃ ಪ್ರಾಣಿನ ಅತ್ರಇತಿ ವಾ ಉಪರಃ ಸಂವತ್ಸರಃ ।** ಎಂದು ಸಾಯಣರು ಮಾಡಿರುವ ಎರಡನೆಯ ಅರ್ಥವು ಹೊಂದಿಕೊಳ್ಳುತ್ತದೆ.

**ಸಪ್ತಚಕ್ರೇ—ಸಪ್ತ ಆದಿತ್ಯರಶ್ಮಯಸ್ತದ್ದ್ವಾರೇಣ ಚಕ್ರಸ್ಥಾನೀಯಾ ಯಸ್ಯ ಸ ತಥೋಕ್ತಃ ।** ಸಪ್ತಸಂಖ್ಯಾಕವಾದ ಆದಿತ್ಯರಶ್ಮಿಗಳ ರೂಪದಲ್ಲಿ ಚಕ್ರಸ್ಥಾನೀಯನೆಂದು ಆದಿತ್ಯನ ಪರವಾಗಿಯೂ, **ಯದ್ವಾ । ಅಯನರ್ತುಮಾ-**

ಸಪಕ್ಷಾಹೋರಾತ್ರಮುಹೂರ್ತಾನಿ ಸಪ್ತ ಸಪ್ತ ಚಕ್ರಾಣಿ ಪುನಃಪುನಃ ಕ್ರಮಮಾಣಾನಿ ಯಸ್ಯ ತಾದೃಶೇ ಸಂವತ್ಸರರೂಪೇ ರಥೇ ॥ ಅಥವಾ, ಅಯನ, ಋತು, ಮಾಸ, ಪಕ್ಷ, ಅಹಸ್ಸು, ರಾತ್ರಿ ಮತ್ತು ಮುಹೂರ್ತ ಇವುಗಳು ಸಪ್ತಾವಯವಗಳು. ಇಂತಹ ಅವಯವಗಳಿಂದ ಕೂಡಿ ಪುನಃಪುನಃ ಚಕ್ರದಂತೆ ಪರಿಭ್ರಮಣವನ್ನು ಹೊಂದತಕ್ಕ ಸಂವತ್ಸರ ರೂಪವಾದ ರಥದಲ್ಲಿ ಎಂದು ಸಂವತ್ಸರಪರವಾಗಿಯೂ ಅರ್ಥಮಾಡಿದೆ.

ಈ ಋಕ್ಕಿನಲ್ಲಿ ಮೇಲಿನ ವರ್ಣನೆಗಳಿಂದ ಕಾಲಾತೀತನಾಗಿ ಅತ್ಯನ್ತವಾದ ದ್ಯುಲೋಕಕ್ಕಿಂತಲೂ ಮೇಲ್ಭಾಗದಲ್ಲಿರುವ ಆದಿತ್ಯನ ಸ್ವರೂಪವನ್ನು ಒಂದು ದೃಷ್ಟಿಯಿಂದಲೂ, ಎರಡನೆಯದಾಗಿ ಕಾಲಾಧೀನನಾಗಿರತಕ್ಕ ಆದಿತ್ಯನ ಚಲನವಲನಗಳನ್ನು ಇನ್ನೊಂದು ದೃಷ್ಟಿಯಿಂದಲೂ ವಿವರಿಸಿದೆಯೆನ್ನಬಹುದು. ಇದಲ್ಲದೆ ಹಿಂದಿನ ಕೆಲವು ಋಕ್ಕುಗಳಲ್ಲಿ ವರ್ಣಿಸಿರುವಂತೆ ಇನ್ನೊಂದು ದೃಷ್ಟಿಯಿಂದ ಅರ್ಥಮಾಡಿ ಪ್ರಕೃತವಾದ ಋಕ್ಕಿನಲ್ಲಿ ಪರಮಾತ್ಮನ ಸ್ವರೂಪನಾದ ಆದಿತ್ಯನನ್ನೂ ಸ್ತುತಿಸಿದೆಯೆಂದೂ ಹೇಳುವುದಾದರೆ ಆಗ ಸಪ್ತಚಕ್ರೇ ಎಂಬ ಪದಕ್ಕೆ ಇನ್ನೂ ವಿಸ್ತೃತವಾದ ಅರ್ಥವನ್ನು ಹೇಳಬೇಕಾಗುತ್ತದೆ.

> ಅಥ ವಾ ಏಕಶತವಿಧಃ । ಸಪ್ತವಿಧಮಭಿಸಂಪದ್ಯತ ಏಕಶತಧಾ ವಾಸಾವಾದಿತ್ಯೋ ವಿಹಿತಃ ಸಪ್ತಸು ದೇವಲೋಕೇಷು ಪ್ರತಿಷ್ಠಿತಃ ಸಪ್ತ ವೈ ದೇವಲೋಕಾಶ್ಚತಸ್ರೋ ದಿಶಸ್ತ್ರಯ ಇಮೇ ಲೋಕಾ ಏತೇ ವೈ ಸಪ್ತ ದೇವಲೋಕಾಸ್ತೇಷ್ವೇವ ಪ್ರತಿಷ್ಠಿತಃ ॥ (ಶ. ಬ್ರಾ. ೧೦-೨-೪-೪)

ಅಗ್ನಿರೂಪನಾದ ಆದಿತ್ಯನು ಏಕಶತವಿಧನಾಗಿದ್ದಾನೆ. (೧೦೧), ಅವನ ರಶ್ಮಿಗಳು ಶತವಿಧವಾಗಿವೆ. ಅವನ ಸ್ವರೂಪವನ್ನೂ ಸೇರಿಸಿದರೆ ಏಕಶತವಿಧವಾಗುತ್ತದೆ. ಆದರೆ ಈ ಏಕಶತವಿಧವನ್ನೂ ಸಪ್ತವಿಧವೆಂದು ಸಂಗ್ರಹಿಸಿ ಹೇಳಬಹುದು. ಏಳು ಮಡಿಯಾದ ಈ ವಿಶ್ವದಲ್ಲಿ ಆದಿತ್ಯನು ಸ್ಥಾಪಿತನಾಗಿದ್ದಾನೆ. ನಾಲ್ಕು ದಿಕ್ಕುಗಳೂ ಪೃಥಿವ್ಯಾದಿ ಮೂರು ಲೋಕಗಳೂ ಸೇರಿ ಏಳು ವಿಧವಾದ ದೇವಲೋಕಗಳಾಗುತ್ತವೆ. ಈ ಸಪ್ತವಿಧವಾದ ಲೋಕಗಳಲ್ಲಿ ಆದಿತ್ಯನು ಪ್ರತಿಷ್ಠಿತನಾಗಿದ್ದಾನೆ.

> ಯದ್ವೇವೈಕಶತವಿಧಃ । ಸಪ್ತವಿಧಮಭಿಸಂಪದ್ಯತ ಏಕಶತಧಾ ವಾ ಅಸಾವಾದಿತ್ಯೋ ವಿಹಿತಃ ಸಪ್ತಸ್ವೃತುಷು ಸಪ್ತಸು ಸ್ತೋಮೇಷು ಸಪ್ತಸು ಪೃಷ್ಠೇಷು ಸಪ್ತಸು ಛಂದಸ್ಸುಸಪ್ತಸು ಪ್ರಾಣೇಷು ಸಪ್ತಸು ದಿಕ್ಷು ಪ್ರತಿಷ್ಠಿತಃ ॥ (ಶ. ಬ್ರಾ. ೧೦-೨ ೪-೫)

ಏಕಶತವಿಧರೂಪನಾದ ಈ ಆದಿತ್ಯನು ವಿಶ್ವದಲ್ಲಿ ಸಪ್ತವಿಧನಾಗಿ ಪ್ರತಿಷ್ಠಿತನಾಗಿದ್ದಾನೆ. ಇವು ಏಳು ಋತುಗಳು [ಏಳು ಋತುಗಳು ಯಾವುವೆಂದು ಹಿಂದೆ ತಿಳಿಸಿದೆ] ಸಪ್ತಸ್ತೋಮಗಳು, ಸಪ್ತಪೃಷ್ಠಗಳು (ಸಾಮ), ಸಪ್ತಛಂದಸ್ಸುಗಳು, ಸಪ್ತಪ್ರಾಣಗಳು ಮತ್ತು ಸಪ್ತದಿಕ್ಕುಗಳು.

> ಯದ್ವೇವೈಕಶತವಿಧಃ । ಸಪ್ತವಿಧಮಭಿಸಂಪದ್ಯತ ಏಕಶತಧಾ ವಾ ಅಸಾವಾದಿತ್ಯೋ ವಿಹಿತಃ ಸಪ್ತಾಕ್ಷರೇ ಬ್ರಹ್ಮನ್ ಪ್ರತಿಷ್ಠಿತಃ ಸಪ್ತಾಕ್ಷರಂ ವೈ ಬ್ರಹ್ಮರ್ಗಿತ್ಯೇಕಮಕ್ಷರಂ ಯಜುರಿತಿ ದ್ವೇ ಸಾಮೇತಿ ದ್ವೇಽಥ ಯದತೋಽನ್ಯದ್ಬ್ರಹ್ಮೈವ ತದ್ದ್ವ್ಯಕ್ಷರಂ ವೈ ಬ್ರಹ್ಮ ತದೇತತ್ಸರ್ವ ಸಪ್ತಾಕ್ಷರಂ ಬ್ರಹ್ಮ ತಸ್ಮಿನ್ನೇಷ ಪ್ರತಿಷ್ಠಿತಃ ॥ ಶ. ಬ್ರಾ. ೧೦-೨-೪-೬)

ಏಕಶತವಿಧನಾದ ಆದಿತ್ಯನು ಸಪ್ತಾಕ್ಷರಗಳುಳ್ಳ ಬ್ರಹ್ಮನಲ್ಲಿ ಪ್ರತಿಷ್ಠಿತನಾಗಿದ್ದಾನೆ. ಬ್ರಹ್ಮನು ಸಪ್ತಾಕ್ಷರರೂಪನೇ ಆಗಿರುವನು. ಋಗ್ರೂಪವಾದುದು ಒಂದು, ಯಜೂರೂಪವಾದುದು ಎರಡು, ಸಾಮವೆರಡು ಮತ್ತು ಬ್ರಹ್ಮಾತ್ಮಕವಾದುದೇ ಎರಡು, ಒಟ್ಟು ಸಪ್ತಾಕ್ಷರಸ್ವರೂಪನಾದ ಬ್ರಹ್ಮನೇ ವಿಶ್ವವು. ಈ ವಿಶ್ವವ್ಯಾಪಿಯಾದ ಬ್ರಹ್ಮನಲ್ಲಿ ಆದಿತ್ಯನು ಪ್ರತಿಷ್ಠಿತನಾಗಿದ್ದಾನೆ.

ಎಂದು ಸಪ್ತವಿಧವಾದ ಆದಿತ್ಯನ ನಾನಾ ಸ್ವರೂಪಗಳನ್ನೂ ವರ್ಣಿಸಿದೆ. ಇಲ್ಲಿ ಉದಾಹೃತವಾದ ಶತಪಥಬ್ರಾಹ್ಮಣದ ಈ ಅಧ್ಯಾಯದ ನಾಲ್ಕನೇ ಬ್ರಾಹ್ಮಣದ ಸಾರಾಂಶವನ್ನು ಸಂಗ್ರಹಿಸಿದರೆ;

**ಸಂವತ್ಸರೋ ವೈ ಪ್ರಜಾಪತಿಃ । ಅಗ್ನಿರು ಸರ್ವೇ ಕಾಮಾಃ ಸೋಽಯಂ ಸಂವತ್ಸರಃ ।**
**.... .... .... ಸ ಯಃ ಸ ಸಂವತ್ಸರೋಽಸೌ ಸ ಆದಿತ್ಯಃ .... .... .... .... (ಸ) ಸಪ್ತವಿಧಮಭಿಸಂಪ-**
**ದ್ಯತೇ । .... .... .... .... ಸಪ್ತವಿಧೋ ವಾ ಅಗ್ರೇ ಪ್ರಜಾಪತಿರಸೃಜ್ಯತ ॥** (ಶ. ಬ್ರಾ. ೧೦-೨-೪)

ಸಂವತ್ಸರವೇ ಪ್ರಜಾಪತಿಯು; ಅಗ್ನಿಯೇ ಸಂವತ್ಸರವು; ಸಂವತ್ಸರವೇ ಆದಿತ್ಯನು. ಪ್ರಜಾಪತಿಯು ಆದಿಯಲ್ಲಿ ಸಪ್ತವಿಧವಾಗಿ ಸೃಷ್ಟನಾದುದರಿಂದ ಸಂವತ್ಸರರೂಪನಾದ ಆದಿತ್ಯನೂ ಸಹ ಸಪ್ತಸಂಖ್ಯಾಕವಾದ ಋತ್ವಾದಿಗಳಲ್ಲಿ ಸ್ಥಾಪಿತನಾಗಿ ವಿಶ್ವವ್ಯಾಪಿಯಾಗಿದ್ದಾನೆಂಬ ಅಂಶವನ್ನು **ಸಪ್ತಚಕ್ರೇ ಅರ್ಪಿತಂ ಆಹುಃ** ಎಂದು ತಿಳಿಸಿದೆಯೆಂದು ಹೇಳಬಹುದು.

**ವಿಚಕ್ಷಣಂ– ವಿವಿಧದರ್ಶನಕರಮಾದಿತ್ಯಂ ॥** ಬೇರೆ ಬೇರೆ ರೀತಿಯಲ್ಲಿ ತನ್ನ ರೂಪಾಂತರಗಳಿಂದ ಜಗತ್ತನ್ನು ವೀಕ್ಷಿಸುವನೆಂದು ಅರ್ಥಮಾಡಿದೆ. **ವಿಚಕ್ಷತೇಽಭಿವಿಪಶ್ಯಂತಿ** ಎಂದು ನಿರುಕ್ತಕಾರರು ಅರ್ಥಮಾಡಿದ್ದಾರೆ (ನಿ. ೧೨-೨೭). ನಿರುಕ್ತಕಾರರು,

**ತ್ರಯಃ ಕೇಶಿನ ಋತುಥಾ ವಿ ಚಕ್ಷತೇ ಸಂವತ್ಸರೇ ವಪತ ಏಕ ಏಷಾಂ ।**
**ವಿಶ್ವಮೇಕೋ ಅಭಿ ಚಷ್ಟೇ ಶಚೀಭಿರ್ಧ್ರಾಜಿರೇಕಸ್ಯ ದದೃಶೇ ನ ರೂಪಂ ॥**
(ಋ. ಸಂ. ೧-೧೬೪-೪೪)

ಎಂಬ ಋಕ್ಕನ್ನುದಹರಿಸಿ ಪಾರ್ಥಿವಾಗ್ನಿರೂಪದಲ್ಲಿಯೂ, ದ್ಯುಲೋಕಸ್ಥವಾದ ಆದಿತ್ಯರೂಪದಲ್ಲಿಯೂ, ಅಂತರಿಕ್ಷಸ್ಥನಾದ ವಾಯುವಿನ ರೂಪದಲ್ಲಿಯೂ ಸಹ ಸಂವತ್ಸರದ ಆಯಾ ಕಾಲಗಳಲ್ಲಿ ಪ್ರಕಾಶಿಸುತ್ತಾ ಲೋಕವನ್ನು ಅನುಗ್ರಹಾತ್ಮಕವಾದ ಬುದ್ಧಿಯಿಂದ ವೀಕ್ಷಿಸುತ್ತಾರೆಂದು ಅರ್ಥಮಾಡಿದ್ದಾರೆ. ಅದೇ ಅರ್ಥದಲ್ಲಿ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ವಿಚಕ್ಷಣಂ** ಎಂಬ ಪದವನ್ನು ಪ್ರಯೋಗಿಸಿದೆ. ಈ ಪದಕ್ಕೆ **ಪಂಡಿತ** ಎಂಬ ಅರ್ಥವೂ ಇದ್ದು ಪ್ರಾಜ್ಞ, ಸರ್ವಜ್ಞ ಎಂದು ಆದಿತ್ಯನ ಸ್ವರೂಪವನ್ನು ತಿಳಿಸಬಹುದು.

**ವೈಶ್ವಾನರ ತವ ಧಾಮಾನ್ಯಾ ಚಕೇ ಯೇಭಿಃ ಸ್ವರ್ವಿದಭವೋ ವಿಚಕ್ಷಣ ।**
(ಋ. ಸಂ. ೩-೩-೧೦)

**ಪ್ರ ತೇ ಬಭ್ರೂ ವಿಚಕ್ಷಣ ಶಂಸಾಮಿ ಗೋಷಣೋ ನಪಾತ್ ॥**
(ಋ. ಸಂ. ೪-೩೨-೨೨)

ಇತ್ಯಾದಿ ಋಕ್ಕುಗಳಲ್ಲಿ ಪ್ರಾಜ್ಞನೆಂಬರ್ಥವಾಗುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸರ್ವಜ್ಞನಾದ ಆದಿತ್ಯನನ್ನು ಎಂದರ್ಥವಾಗಬಹುದು. ಒಟ್ಟಿನಲ್ಲಿ ಜಗನ್ನಿಯಾಮಕವಾದ ಕಾಲವನ್ನೇ ತನ್ನ ಸ್ವಾಧೀನದಲ್ಲಿಟ್ಟುಕೊಂಡು ಲೋಕತ್ರಯಕ್ಕೂ ಪ್ರಭುವಾಗಿರುವ ಆದಿತ್ಯನ ದಿವ್ಯಸ್ವರೂಪವೂ, ಕಾಲಯುಕ್ತವಾದ ತನ್ನ ಚಲನವಲನಗಳನ್ನು ಪ್ರಕಟಿಸಿ ಕಾಲಾಧೀನವಾಗಿರುವುದೂ ಲೌಕಿಕವಾಗಿರುವುದೂ ಆದ ಇನ್ನೊಂದು ಸ್ವರೂಪವೂ, ಒಟ್ಟಿಗೆ ಈ ಋಕ್ಕಿನಲ್ಲಿ ವರ್ಣಿತವಾಗಿದೆ.



**ಪಂಚಾರೇ ಚಕ್ರೇ ಪರಿವರ್ತಮಾನೇ ತಸ್ಮಿನ್ನಾತಸ್ಥುರ್ಭುವನಾನಿ ವಿಶ್ವಾ ।**
**ತಸ್ಯ ನಾಕ್ಷಸ್ತಪ್ಯತೇ ಭೂರಿಭಾರಃ ಸನಾದೇವ ನ ಶೀರ್ಯತೇ ಸನಾಭಿಃ ॥ ೧೩ ॥**

ಋತುರೂಪವಾದ ಐದು ಅರಗಳಿಂದ ಯುಕ್ತವಾದ ಸಂವತ್ಸರರೂಪವಾದ ಚಕ್ರದಲ್ಲಿ, ಸಂವತ್ಸರ, ಪರಿವತ್ಸರ ಇತ್ಯಾದಿ ರೂಪಗಳಿಂದ ಪುನಃ ಪುನಃ ಪರಿಭ್ರಮಣವನ್ನು ಹೊಂದುತ್ತಿರುವ ಈ ಕಾಲಚಕ್ರದಲ್ಲಿ ಸಮಸ್ತಲೋಕಗಳೂ ನೆಲೆಸಿವೆ. ಈ ಕಾಲಚಕ್ರದ ನಡುವೆ ಇರುವುದೂ, ಪ್ರಭೂತವಾದ ಭಾರವನ್ನು ವಹಿಸಿರುವುದೂ ಆದ ರಥದ ಇರಚಿಯು ಕುಂಠಿತವಾಗುವುದೇ ಇಲ್ಲ. ಅತ್ಯಂತ ಪ್ರಾಚೀನವಾದರೂ ಸಹ ಇದರ ಏಕಮಾತ್ರವಾದ ನಾಭಿಯೂ ಸವೆಯುವುದಿಲ್ಲ.

ಅನಾದಿಯೂ ವಿಶ್ವಧಾರಕವೂ ಅಜರವೂ ಆದ ಕಾಲಚಕ್ರದ ಸ್ವರೂಪವನ್ನು ಈ ಋಕ್ಕಿನಲ್ಲಿ ವರ್ಣಿಸಿದೆ. **ಪಂಚಾರೇ ಚಕ್ರೇ ಪರಿವರ್ತಮಾನೇ ತಸ್ಮಿನ್** ಎಂಬ ಪಾದದಲ್ಲಿರುವ **ಪಂಚಾರೇ** ಎಂಬ ಪದಕ್ಕೆ **ಪಂಚಋತು ರೂಪೈಃ ಯುಕ್ತೇ** ಪಂಚಋತುಗಳ ರೂಪವಾದ ಅರಗಳಿಂದ ಕೂಡಿದ ಸಂವತ್ಸರಾತ್ಮಕವಾದ ಎಂದು ಕಾಲ ಚಕ್ರಕ್ಕೆ ವಿಶೇಷಣವಾಗಿದೆ. ಹೇಮಂತ ಮತ್ತು ಶಿಶಿರ ಋತುಗಳನ್ನು ಅವುಗಳ ಗುಣಸಾಮ್ಯದಿಂದ ಒಂದನ್ನಾಗಿ ಪರಿಗಣಿಸಿದರೆ ಋತುಗಳ ಸಂಖ್ಯೆಯು ಐದಾಗುವುದು ಎಂದು ಹಿಂದಿನ ಋಕ್ಕಿನಲ್ಲಿ ಸಾಯಣರು "**ಏಕತ್ ಹೇಮಂತ ಶಿಶಿರಯೋಃ ಏಕತ್ವಾಭಿಪ್ರಾಯಂ ।**" ಎಂಬ ವಾಕ್ಯದಿಂದ ವಿವರಿಸಿದ್ದಾರೆ. ಮತ್ತು ಈ ಅಭಿಪ್ರಾಯವನ್ನು ಶಂಕರಾದಿಗಳೂ ಹೇಳಿರುವುದನ್ನು ಪ್ರಶ್ನೋಪನಿಷದ್ವಾಕ್ಯವನ್ನು ದಹರಿಸಿ ಹಿಂದೆ ತಿಳಿಸಿದೆ.

ಇದಲ್ಲದೆ **ಪಂಚಾರೇ ಚಕ್ರೇ** ಎಂಬುದನ್ನು ಆಧ್ಯಾತ್ಮಿಕವಾದ ದೃಷ್ಟಿಯಿಂದಲೂ ಅರ್ಥಮಾಡಬಹುದು. ವಿಶ್ವವೆಲ್ಲವೂ ಪಾಂಕ್ತವಾಗಿರುವುದರಿಂದಲೂ, ಪಾಂಕ್ತವಾಗಿರುವ ವಿಶ್ವವು ಅನಾದಿಯಾದ ಕಾಲಚಕ್ರದಲ್ಲಿ ನೆಲೆಸಿರುವುದರಿಂದಲೂ, ಪಾಂಕ್ತವಾಗಿರುವ ವಿಶ್ವವು ಅನಾದಿಯಾದ ಕಾಲಚಕ್ರದಲ್ಲಿ ನೆಲೆಸಿರುವುದರಿಂದಲೂ ಈ ವರ್ಣನೆಯು ಆ ಅಂಶವನ್ನೂ ವಿವರಿಸಬಹುದು. ತೈತ್ತಿರೀಯೋಪನಿಷತ್ತಿನಲ್ಲಿ ಇದರ ವಿವರಣೆಯನ್ನು ಈ ರೀತಿಯಲ್ಲಿ ಹೇಳಿದೆ.

| | | | | |
|---|---|---|---|---|
| ಪೃಥಿವೀ | ಅಂತರಿಕ್ಷಂ | ದ್ಯೌಃ | ದಿಶಃ | ಅವಾಂತರದಿಶಾಃ |
| ಅಗ್ನಿಃ | ವಾಯುಃ | ಆದಿತ್ಯಃ | ಚಂದ್ರಮಾ | ನಕ್ಷತ್ರಾಣಿ |
| ಆಪ | ಓಷಧಯೋ | ವನಸ್ಪತಯ | ಆಕಾಶ | ಆತ್ಮಾ |

ಇತ್ಯಧಿಭೂತಂ ಇವೆಲ್ಲವೂ ಆಧಿಭೌತಿಕವಾದ ಪಾಂಕ್ತವು. **ಅಥಾಧ್ಯಾತ್ಮಂ**—ಇನ್ನು ಆಧ್ಯಾತ್ಮಿಕವಾದ ಪಾಂಕ್ತವನ್ನು ವಿವರಿಸಲಾಗುತ್ತದೆ—

| | | | | |
|---|---|---|---|---|
| ಪ್ರಾಣೋ | ವ್ಯಾನೋ | ಅಪಾನ | ಉದಾನಃ | ಸಮಾನಃ |
| ಚಕ್ಷುಃ | ಶ್ರೋತ್ರಂ | ಮನೋ | ವಾಕ್ | ತ್ವಕ್ |
| ಚರ್ಮ | ಮಾಂಸಂ | ಸ್ನಾವಾ | ಅಸ್ಥಿ | ಮಜ್ಜಾ |

ಇವೆಲ್ಲವೂ, ಪ್ರಾಣಾದಿ ವಾಯುವೂ, ಚಕ್ಷುರಾದೀಂದ್ರಿಯಪಾಂಕ್ತವೂ, ಚರ್ಮಾದಿ ಧಾತುಪಾಂಕ್ತವೂ ಆಗಿರುವುವು.

ಏತದಧಿವಿಧಾಯ ಋಷಿರವೋಚತ್ । ಪಾಂಕ್ತಂ ವಾ ಇದಗ್ಂ ಸರ್ವಂ । ಪಾಂಕ್ತೇನೈವ ಪಾಂಕ್ತಗ್ಂಸ್ಪೃಣೋತೀತಿ । (ತೈ. ಉ. ೧-೭)

ವಿಶ್ವದ ಆಧಿಭೌತಿಕ ಮತ್ತು ಆಧ್ಯಾತ್ಮಿಕವಾದ ಅಂಶಗಳೆಲ್ಲವೂ ಈರೀತಿ ಪಂಚವಿಧಗಳಾಗಿರುವುವೆಂದು ಋಷಿಯು ಮೇಲಿನ ವಾಕ್ಯದಲ್ಲಿ ಹೇಳಿದ್ದಾನೆ. ಈ ಎರಡು ಪಾಂಕ್ತಗಳ ಸಂಯೋಗದಿಂದಲೇ ವಿಶ್ವವ್ಯವಹಾರವು ಎಂದು ವಿವರಿಸುವುದರಿಂದ ಚಕ್ರಾತ್ಮಕವಾದ ಈ ಪಂಕ್ತವೂ ಕಾಲಚಕ್ರದಲ್ಲಿಯೇ ಅಂತರ್ಗತವಾಗಿದೆ. ಪಂಚಾರೇ ಚಕ್ರೇ ತಸ್ಮಿನ್ ಎಂಬುದಕ್ಕೆ ಈ ದೃಷ್ಟಿಯಿಂದಲೂ ಅರ್ಥಮಾಡಬಹುದು.

ಪರಿವರ್ತಮಾನೇ—ಸಂವತ್ಸರಪರಿವತ್ಸರಾದಿರೂಪೇಣ ಪುನಃ ಪುನಃ ಆವರ್ತಮಾನೇ ಸತಿ। ಸಂವತ್ಸರ, ಪರಿವತ್ಸರ ಇತ್ಯಾದಿರೂಪಗಳಿಂದ ಪುನಃ ಪುನಃ ಭ್ರಮಣವನ್ನು ಹೊಂದುತ್ತಿರುವ ಎಂದು ಕಾಲಚಕ್ರಕ್ಕೆ ವಿಶೇಷಣ ವಾಗಿದೆ. ಕಾಲಚಕ್ರವನ್ನು ಸಂವತ್ಸರ, ಪರಿವತ್ಸರ, ಇದಾವತ್ಸರ, ಇದ್ವತ್ಸರ ಮತ್ತು ವತ್ಸರ ಎಂದು ಐದು ಹೆಸರು ಗಳಿಂದ ಕರೆಯುವ ಪದ್ಧತಿಯಿದ್ದಿತು. ಈ ಹೆಸರುಗಳಲ್ಲಿಯೂ ಮತ್ತು ಇವುಗಳ ಪರಿಗಣನೆಯಲ್ಲಿಯೂ ಅಲ್ಲಲ್ಲೇ ಅಲ್ಪಸ್ವಲ್ಪ ವ್ಯತ್ಯಾಸಗಳೂ ಕಂಡುಬರುತ್ತವೆ ಉದಾಹರಣೆಗೆ ತೈತ್ತಿರೀಯಸಂಹಿತೆಯಲ್ಲಿ,

ಯತ್ತೇ ರುದ್ರ ಪುರೋ ಧನುಸ್ತದ್ವಾತೋ ಅನು ವಾತು ತೇ ತಸ್ಮೈ ತೇ ರುದ್ರ ಸಂವತ್ಸರೇಣ ನಮಸ್ಕರೋಮಿ

| | | | | | |
|---|---|---|---|---|---|
| ಯತ್ತೇ ರುದ್ರ ದಕ್ಷಿಣಾಧನುಃ | ,, | ,, | ,, | ಪರಿವತ್ಸರೇವ | ,, |
| ಯತ್ತೇ ರುದ್ರ ಪಶ್ಚಾದ್ಧನುಃ | ,, | ,, | ,, | ಇದಾವತ್ಸರೇಣ | ,, |
| ಯತ್ತೇ ರುದ್ರೋತ್ತರಾದ್ಧನುಃ | ,, | ,, | ,, | ಇದುವತ್ಸರೇಣ | ,, |
| ಯತ್ತೇ ರುದ್ರೋಪರಿ ಧನುಃ | ,, | ,, | ,, | ವತ್ಸರೇಣ | ,, |

(ತೈ. ಸಂ. ೫-೫-೭-೨, ೩, ೪)

ಎಂಬ ವಾಕ್ಯಗಳಲ್ಲಿ, ಸಂವತ್ಸರ, ಪರಿವತ್ಸರ, ಇದಾವತ್ಸರ, ಇದುವತ್ಸರ ಮತ್ತು ವತ್ಸರ ಎಂಬ ಪ್ರಭೇದಗಳಿವೆ. ವಾಜಸನೇಯ ಸಂಹಿತೆಯಲ್ಲಿಯೂ ಇದೇ ವಿಭಾಗವಿರುತ್ತದೆ. (ವಾ. ಸಂ. ೨೭-೪೫). ಆದರೆ ಅಲ್ಲಿ ಇದ್ವತ್ಸರ ಎಂದಿರುವುದಕ್ಕೆ ಬದಲಾಗಿ ತೈತ್ತಿರೀಯಸಂಹಿತೆಯಲ್ಲಿ ಇದುವತ್ಸರವೆಂದಿದೆ. ಉಳಿದುವು ಸಮಾನವಾಗಿರುತ್ತವೆ. ತೈತ್ತಿರೀಯ ಬ್ರಾಹ್ಮಣದಲ್ಲಿ,

ಸಂವತ್ಸರೋಽಸಿ ಪರಿವತ್ಸರೋಽಸಿ। ಇದಾವತ್ಸರೋಽಸೀದುವತ್ಸರೋಽಸಿ। ಇದ್ವತ್ಸ-ರೋಽಸಿ ವತ್ಸರೋಽಸಿ। ತಸ್ಯ ತೇ ವಸಂತಶ್ಶಿರಃ। ಗ್ರೀಷ್ಮೋದಕ್ಷಿಣಃ ಪಕ್ಷಃ............॥

(ತೈ. ಬ್ರಾ. ೩-೧೦-೪-೧)

ಸಂವತ್ಸರ, ಪರಿವತ್ಸರ, ಇದಾವತ್ಸರ, ಇದುವತ್ಸ, ಇದ್ವತ್ಸರ ಮತ್ತು ವತ್ಸರ ಎಂಬ ಆರು ಪ್ರಭೇದಗಳಿವೆ. ಆದರೆ ಇದೇ ತೈತ್ತಿರೀಯ ಬ್ರಾಹ್ಮಣದಲ್ಲಿ,

ಅಗ್ನಿರ್ವಾವ ಸಂವತ್ಸರಃ। ಆದಿತ್ಯಃ ಪರಿವತ್ಸರಃ। ಚಂದ್ರಮಾ ಇದಾವತ್ಸರಃ। ವಾಯುರನು ವತ್ಸರಃ। (ತೈ. ಬ್ರಾ. ೧೪-೧೦-೧)

ಎಂಬಲ್ಲಿ ಸಂವತ್ಸರ, ಪರಿವತ್ಸರ, ಇದಾವತ್ಸರ ಮತ್ತು ಅನುವತ್ಸರ ಎಂಬ ನಾಲ್ಕು ಪ್ರಭೇದಗಳು ಮಾತ್ರ ಹೇಳಲ್ಪಟ್ಟಿವೆ. ಇದಲ್ಲದೇ ತೈತ್ತಿರೀಯಸಂಹಿತೆಯ ಬೇರೊಂದು ಭಾಗದಲ್ಲಿ,

ಇದುವತ್ಸರಾಯ ಪರಿವತ್ಸರಾಯ ಸಂವತ್ಸರಾಯ ಕೃಣುತಾ ಬೃಹನ್ನಮಃ ॥

(ತೈ. ಸಂ. ೫-೭-೨-೪)

ಇದುವತ್ಸರ, ಪರಿವತ್ಸರ ಮತ್ತು ಸಂವತ್ಸರ ಎಂಬ ಮೂರು ಪ್ರಭೇದಗಳನ್ನು ಮಾತ್ರ ಹೇಳಿದೆ. ಈ ಎಲ್ಲಾ ವಾಕ್ಯಗಳಲ್ಲಿಯೂ ಸಂವತ್ಸರ ಮತ್ತು ಪರಿವತ್ಸರ ಈ ಎರಡು ಹೆಸರುಗಳು ಸಾಧಾರಣವಾಗಿವೆ. ಕಾಲಚಕ್ರವು ರೂಪಗಳಲ್ಲಿ ಅನಾದಿಯಿಂದಲೂ ಚಕ್ರದಂತೆ ಸುತ್ತುತ್ತಿದೆಯೆಂದು ವರ್ಣಿತವಾಗಿದೆ.

**ತಸ್ಮಿನ್ನಾತಸ್ಥುರ್ಭುವನಾನಿ ವಿಶ್ವಾ**—ಸಕಲಲೋಕಗಳೂ ಈ ಕಾಲಚಕ್ರದಲ್ಲಿ ನೆಲಸಿವೆಯೆಂದರ್ಥ. ಸಂವತ್ಸರ, ಪರಿವತ್ಸರ ಇತ್ಯಾದಿ ಹೆಸರುಗಳು ಈ ಮಹಾಕಾಲದ ಅವಯವಗಳು. ಈ ಮಹಾಕಾಲವೇ ಜಗತ್ತಿನ ಮತ್ತು ಜಗದ್ವ್ಯವಹಾರಗಳಿಗೆಲ್ಲಾ ಆಧಾರವಾಗಿದೆ. ಇದನ್ನೇ ಸ್ವಭಾವ, ನಿಯಮ, ಬ್ರಹ್ಮ ಇತ್ಯಾದಿ ನಾನಾ ಹೆಸರುಗಳಿಂದ ಕರೆಯುತ್ತಾನೆ.

**ಕಿಂ ಕಾರಣಂ, ಬ್ರಹ್ಮ? ಕುತಃ ಸ್ಮ ಜಾತಾ ಜೀವಾಮ ಕೇನ ಕ್ವ ಚ ಸಂಪ್ರತಿಷ್ಠಾಃ ।**
**ಅಧಿಷ್ಠಿತಾಃ ಕೇನ ಸುಖೇತರೇಷು ವರ್ತಾಮಹೇ ಬ್ರಹ್ಮವಿದೋ ವ್ಯವಸ್ಥಾ ॥** (ಶ್ವೇ. ಉ. ೧-೧)

ಜಗತ್ತಿನ ಮೂಲಕಾರಣವಾವುದು? ಅದು ಬ್ರಹ್ಮವೇ? ಅಥವಾ ಬ್ರಹ್ಮವೆಂಬುದು ಯಾವುದು? ಅದರ ಸ್ವರೂಪವೇನು? ನಮ್ಮ ಉತ್ಪತ್ತಿಯು ಎಲ್ಲಿಂದ? ಯಾವುದರ ಅವಲಂಬನದಿಂದ ನಾವು ಜೀವಿಸುತ್ತೇವೆ? ನಮ್ಮ ಸ್ಥಿತಿಗೆ ಆಧಾರವಾವುದು? ನಮ್ಮ ಸುಖದುಃಖಗಳು ಎಲ್ಲಿಂದ ಸಂಭವಿಸುತ್ತವೆ? ಎಂಬ ಪ್ರಶ್ನೆಗೆ ಈರೀತಿಯಾದ ಉತ್ತರವಿದೆ.

**ಕಾಲಃ ಸ್ವಭಾವೋ ನಿಯತಿರ್ಯದೃಚ್ಛಾ ಭೂತಾನಿ ಯೋನಿಃ ಪುರುಷ ಇತಿ ಚಿಂತ್ಯಾ ।**
(ಶ್ವೇ. ಉ. ೧-೨)

ಜಗತ್ತಿನ ಈ ಮಹಾಮೂಲವನ್ನು **ಕಾಲ**ವೆಂದೂ ಕೆಲವರೂ, **ನಿಯತಿ**ಯೆಂದು ಕೆಲವರೂ, **ಸ್ವಭಾವ**ವೆಂದು ಕೆಲವರೂ ಹೀಗೆಯೇ ಇನ್ನೂ ಕೆಲವು ಹೆಸರ ಗಳಿಂದ ಬೇರೆಬೇರೆ ತತ್ವಜ್ಞರೂ ಕರೆಯುತ್ತಾರೆ. ಆದರೆ,

**ಸ್ವಭಾವಮೇಕೇ ಕವಯೋ ವದಂತಿ ಕಾಲಂ ತಥಾನ್ಯೇ ಪರಿಮುಹ್ಯಮಾನಾಃ ।**
**ದೇವಸ್ಯೈಷ ಮಹಿಮಾ ತು ಲೋಕೇ ಯೇನೇದಂ ಭ್ರಾಮ್ಯತೇ ಬ್ರಹ್ಮಚಕ್ರಂ ॥** (ಶ್ವೇ. ಉ. ೬-೧)

ಈ ಮಹಾಮೂಲವನ್ನು ಕೆಲವು ಕವಿಗಳು **ಸ್ವಭಾವ**ವೆಂದೂ, ಇನ್ನು ಕೆಲವರು **ಕಾಲ**ವೆಂದೂ ಕರೆಯುವರು. ಇದರ ಸ್ವರೂಪವನ್ನು ಪೂರ್ಣವಾಗಿ ವರ್ಣಿಸಿದಂತಾಗುವುದಿಲ್ಲ. ಸಕಲಲೋಕವನ್ನೂ ತನ್ನ ಶಕ್ತಿಯಿಂದ ಸ್ಥಾಪಿಸಿ ಬ್ರಹ್ಮಚಕ್ರವನ್ನೂ ಸಹ ಸುತ್ತುವಂತೆ ಮಾಡುತ್ತಿರುವವನು ಪರಮಪುರುಷನಾದ ಈಶ್ವರನು. ಅವನಿಂದಲೇ ಜಗದ್ಧೇತುವಾದ ಬ್ರಹ್ಮಚಕ್ರವೂ ಭ್ರಮಣವನ್ನು ಹೊಂದುತ್ತಿದೆಯೆಂದು ವರ್ಣಿಸಿದೆ. ಪ್ರಕೃತವಾದ ವರ್ಣನೆಯಲ್ಲಿ **ಕಾಲಚಕ್ರ**ವೆಂದು ವರ್ಣಿಸಿರುವುದನ್ನು ಬೇರೆಬೇರೆ ಹೆಸರುಗಳಿಂದ ವರ್ಣಿತವಾಗಿರುವ ಆದಿತತ್ತ್ವವೆಂದು ತಿಳಿಯಬೇಕು. ಯಾವ ಋಷಿಯಾಗಲಿ, ಯಾವ ಹೆಸರಿನಿಂದ ಈ ಆದಿತತ್ತ್ವವನ್ನು ಕರೆದರೂ ಸಹ ಈ ಆದಿಕಾರಣವನ್ನು ರಥಚಕ್ರಕ್ಕೆ ಹೋಲಿಸದೆ ಇದಕ್ಕೆ ಬೇರೆ ಅನುರೂಪವಾದ ಸಾಮ್ಯವನ್ನು ಹೇಳಲಾಗುದಿವುದಿಲ್ಲ. ಆತ್ಮನೆಂದು ಕರೆಯಲಿ, ಬ್ರಹ್ಮನೆಂದು ಕರೆಯಲಿ, ನಿಯತಿಯೆಂದು ಕರೆಯಲಿ, ಇದಕ್ಕೂ ವ್ಯವಹಾರಜಗತ್ತಿಗೂ ಇರತಕ್ಕ ಸಂಬಂಧವನ್ನು ರಥಚಕ್ರಕ್ಕೂ ಆದರ ಅರಗಳಿಗೂ ಇರುವ ಸಂಬಂಧಕ್ಕೆ ಹೋಲಿಸಲೇಬೇಕಾಗಿದೆ. ಆ ಉಪಮಾನವನ್ನು ತೋರಿಸಿ ಆದಿತತ್ವವನ್ನು ವರ್ಣಿಸುವ ಕ್ರಮವನ್ನು ಸಾಧಾರಣವಾಗಿ ಎಲ್ಲಾ ಉಪನಿಷತ್ತುಗಳಲ್ಲಿಯೂ ನೋಡಬಹುದು. ಉದಾಹರಣೆಗೆ, ಬೃಹದಾರಣ್ಯಕೋಪನಿಷತ್ತಿನಲ್ಲಿ,

**ಸ ವಾ ಅಯಮಾತ್ಮಾ ಸರ್ವೇಷಾಂ ಭೂತಾನಾಮಧಿಪತಿಃ ಸರ್ವೇಷಾಂ ಭೂತಾನಾಂ ರಾಜಾ ತದ್ಯಥಾ ರಥನಾಭೌ ಚ ರಥನೇಮೌ ಚಾರಾಃ ಸರ್ವೇ ಸಮರ್ಪಿತಾ ಏವಮೇವಾಸ್ಮಿನ್ನಾ-**

ತ್ಮನಿ ಸರ್ವಾಣಿ ಭೂತಾನಿ ಸರ್ವೇ ದೇವಾಃ ಸರ್ವೇ ಲೋಕಾಃ ಸರ್ವೇ ಪ್ರಾಣಾಃ ಸರ್ವ ಏವಾ-
ತ್ಮನಃ ಸಮರ್ಪಿತಾಃ ॥ (ಬೃ. ಉ. ೨-೫-೧೫)

ಈ ಆತ್ಮನು ಸಕಲಭೂತಗಳಿಗೂ ಪ್ರಭುವು. ರಥಚಕ್ರದ ನಾಭಿಯಲ್ಲಿಯೂ ನೇಮಿಯಲ್ಲಿಯೂ ಅರಗಳೆಲ್ಲವೂ ಯಾವರೀತಿ ಅಂತರ್ಗತವಾಗಿಯೂ, ನಿಯತವಾದ ಸ್ಥಿತಿಗಳುಳ್ಳವಾಗಿಯೂ ಇರುತ್ತವೆಯೋ ಅದರಂತೆ ಸಕಲಭೂತಗಳೂ ಈ ಆತ್ಮನಲ್ಲಿ ಅಂತರ್ಗತ ವಾಗಿಯೂ, ಈ ಆತ್ಮನ ನಿಯಮನಕ್ಕೆ ಅಧೀನವಾದವಾಗಿಯೂ ಇವೆ. ಸಕಲ ಭೂತಗಳೂ, ಸಕಲ ದೇವತೆಗಳೂ, ಸಕಲ ಲೋಕಗಳೂ, ಸಲಕ ಪ್ರಾಣಗಳೂ ಸಮಸ್ತವೂ ಈ ಆತ್ಮನ ನಿಯಮನಕ್ಕೆ ಅರ್ಪಿತವಾಗಿ ತದಾಯತ್ತವಾಗಿವೆಯೆಂದು ಈ ಜಗದಾತ್ಮನಿಗೂ ರಥಚಕ್ರಕ್ಕೂ ಸಾಮ್ಯವನ್ನು ಹೇಳಿದೆ. ಇದರಂತೆಯೇ ಮುಂಡಕೋಪನಿಷತ್ತಿನಲ್ಲಿಯೂ ಮತ್ತು ಪ್ರಶ್ನೋಪನಿಷತ್ತಿನಲ್ಲಿಯೂ ಸಹ,

ಅರಾ ಇವ ರಥನಾಭೌ ಸಂಹತಾ ಯತ್ರ ನಾಡ್ಯಃ ಸ ಏಷೋಽಂತಶ್ಚರತೇ ಬಹುಧಾ
ಜಾಯಮಾನಃ । (ಮು. ೨-೨-೬)

ಅರಾ ಇವ ರಥನಾಭೌ ಪ್ರಾಣೇ ಸರ್ವಂ ಪ್ರತಿಷ್ಠಿತಂ ।
ಋಚೋ ಯಜೂಗ್ಂಷಿ ಸಾಮಾನಿ ಯಜ್ಞಃ ಕ್ಷತ್ರಂ ಬ್ರಹ್ಮ ಚ ॥ (ಪ್ರಶ್ನ. ೨-೬)
ಅರಾ ಇವ ರಥನಾಭೌ ಕಲಾ ಯಸ್ಮಿನ್ಪ್ರತಿಷ್ಠಿತಾಃ ।
ತಂ ವೇದ್ಯಂ ಪುರುಷಂ ವೇದ ಯಥಾ ಮಾ ವೋ ಮೃತ್ಯುಃ ಪರಿವ್ಯಥಾ ಇತಿ ॥ (ಪ್ರಶ್ನ. ೬-೬)

ಇತ್ಯಾದಿಯಾಗಿ ಜೀವಾತ್ಮನಿಗೂ ಜೀವದ ಸಕಲವಾದ ಅವಯವಗಳಿಗೂ ಇರುವ ಸಂಬಂಧವನ್ನೂ, ಪ್ರಾಣಕ್ಕೂ ಋಗಾದಿಗಳಿಗೂ ರುವ ಸಂಬಂಧವನ್ನೂ, ಆದಿಪುರುಷನಿಗೂ ಸಕಲಕಲೆಗಳಿಗೂ ಇರುವ ಸಂಬಂಧವನ್ನೂ, ರಥನಾಭಿಗೂ ಅರಗಳಿಗೂ ಇರುವ ಸಂಬಂಧಕ್ಕೆ ಹೋಲಿಸಿದೆ. ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿ ಈ ಮಹಾತತ್ತ್ವವನ್ನು ಕಾಲಚಕ್ರವೆಂದು ವರ್ಣಿಸಿದ್ದರೂ ಇತರ ಕಡೆಗಳಲ್ಲಿ ಬ್ರಹ್ಮ, ಆತ್ಮ ಇತ್ಯಾದಿ ಹೆಸರುಗಳಿಂದ ವರ್ಣಿತವಾಗಿರುವ ಆದಿತತ್ತ್ವವೇ ಎಂದು ತಿಳಿಯಬೇಕು.—ಆದುದರಿಂದಲೇ ಈ ಋಕ್ಕಿನ ಉತ್ತರಾರ್ಧದ ವರ್ಣನೆಯು ಇದರ ಅನಾದ್ಯನಂತತ್ವಗಳನ್ನೂ ಸಹ ವರ್ಣಿಸಿದೆ. ಇದರಂತೆಯೇ ಶ್ವೇತಾಶ್ವತರೋಪನಿಷತ್ತಿನಲ್ಲಿ ಈ ಏಕತತ್ತ್ವವನ್ನು ಚಕ್ರಕ್ಕೂ ಇದರ ಅವಯವಭೂತಗಳಾದ ವಿಶ್ವದ ನಾನಾ ಭಾಗಗಳನ್ನು ಚಕ್ರದ ಅವಯವಗಳಿಗೂ ಹೋಲಿಸಿದೆ.

ತಮೇಕನೇಮಿಂ ತ್ರಿವೃತಂ ಷೋಡಶಾಂತಂ ಶತರ್ಧಾರಂ ವಿಂಶತಿಪ್ರತ್ಯರಾಭಿಃ ।
ಅಷ್ಟಕೈಃ ಷಡ್ಭಿರ್ವಿಶ್ವರೂಪೈಕಪಾಶಂ ತ್ರಿಮಾರ್ಗಭೇದಂ ದ್ವಿನಿಮಿತ್ತೈಕಮೋಹಂ ॥ (ಶ್ವೇ. ಉ. ೧-೪)

ವಿಶ್ವಾತ್ಮನಾದ ಈ ಏಕತತ್ತ್ವಕ್ಕೆ ಒಂದೇ ನೇಮಿಯೂ, ತ್ರಿವೃತವೂ, ಷೋಡಶಾಂತವೂ, ಐವತ್ತು ಅರಗಳೂ, ಇಪ್ಪತ್ತು ಪ್ರತ್ಯರಗಳೂ, ಅಷ್ಟಾತ್ಮಕಗಳಾದ ಆರು ಗುಂಪುಗಳೂ, ವಿಶ್ವವನ್ನೆಲ್ಲಾ ಬಂಧಿಸತಕ್ಕ ಒಂದೇ ಪಾಶವೂ, ಮೂರು ಮಾರ್ಗಗಳೂ, ಮತ್ತು ನಿಮಿತ್ತದ್ವಯವುಳ್ಳ ಒಂದು ಮೋಹವೂ ಇದೆಯೆಂದು ವರ್ಣಿಸಿದೆ. ಇಲ್ಲಿ ವರ್ಣಿತವಾಗಿರುವ ತ್ರಿವೃತವು ಸತ್ತ್ವರಜಸ್ತಮಸ್ಸುಗಳೆಂಬ ಗುಣಗಳೂ, ಐದು ಬುದ್ಧೀಂದ್ರಿಯಗಳೂ, ಐದು ಕರ್ಮೇಂದ್ರಿಯಗಳೂ, ಮನಸ್ಸೂ ಸಹ ಪಂಚಭೂತಗಳೊಡನೆ ಸೇರಿ ಷೋಡಶಾಂತವಾಗುತ್ತವೆ. (೧೬)

ಏಷ ಪ್ರತ್ಯಯಸರ್ಗೋ ವಿಪರ್ಯಯಾಶಕ್ತಿತುಷ್ಟಿಸಿದ್ಧ್ಯಾಖ್ಯಃ ।
ಗುಣವೈಷಮ್ಯವಿಮರ್ದಾತ್ ತಸ್ಯ ಚ ಭೇದಾಸ್ತು ಪಂಚಾಶತ್ ॥ (ಸಾಂಖ್ಯಕಾರಿಕಾ ೪೬)

೭೦ಜ ಶ್ಲೋಕದಲ್ಲಿ ವಿವರಿಸಿರುವಂತೆ ಪ್ರತ್ಯಯಸರ್ಗ ಎಂದರೆ ಅಜ್ಞಾನ; **ಅಶಕ್ತಿ, ತುಷ್ಟಿ** ಮತ್ತು ಸಿದ್ಧಿ ಇವು ತಮ ರೂಪಾಂತರಗಳೊಡನೆ ಐವತ್ತು ವಿಧಗಳಾಗಿರುವುವು. ಇದನ್ನು **ಶತಾರ್ಧಾರಂ** $\frac{೧೦೦}{೨}$ ಐವತ್ತು ಅರಗಳಿಗೆ ಹೋಲಿಸಿದೆ. ಇವು ಗಳಿಗೆ ಹಾಸುಹೊಕ್ಕಿನಂತಿರುವ ಪ್ರತ್ಯರಗಳ ಸಾಮ್ಯವನ್ನು ಕೊಡುತ್ತಾ ಹೀಗೆಯೇ ಪಂಚಜ್ಞಾನೇಂದ್ರಿಯಗಳನ್ನೂ ಪಂಚಕರ್ಮೇಂದ್ರಿಯಗಳನ್ನೂ ಅವುಗಳಿಗೆ ಅನುರೂಪವಾದ ಹತ್ತು ವಿಷಯಗಳನ್ನೂ ಸೇರಿಸಿ ಇಪ್ಪತ್ತು ಪ್ರತ್ಯರಗಳಿಗೆ ಹೋಲಿಸಿದೆ. **ಅಷ್ಟಕೈಷ್ಷಡ್ಭಿಃ** ಎಂದರೆ ಅಷ್ಟಾತ್ಮಕಗಳಾದ ಆರು ಗುಂಪುಗಳು ಯಾವುವೆಂದರೆ,

೧) ಪಂಚಭೂತಗಳೂ, ಮನಸ್ಸೂ, ಬುದ್ಧಿಯೂ ಮತ್ತು ಅಹಂಕಾರವೂ ಈ ಎಂಟೂ ಸೇರಿ ಮೊದಲನೆಯ ಗುಂಪಾಗುತ್ತದೆ. ಇದರಂತೆಯೇ,

೨) ದೇಹದ ಅಷ್ಟಧಾತುಗಳು;

೩) ಅಷ್ಟಾತ್ಮಕಗಳಾದ ಅಪೌರುಷೇಯವಾದ ಶಕ್ತಿಗಳು.

೪) ಅಷ್ಟಭಾವಗಳು.

೫) ಅಷ್ಟದೇವತೆಗಳು

೬) ಅಷ್ಟಗುಣಗಳು.

ಇವುಗಳ ಸಮೂಹವನ್ನು ಅಷ್ಟಕೈಷ್ಷಡ್ಭಿಃ ಎಂದು ವರ್ಣಿಸಿದೆ ಮತ್ತು **ಕಾಮವನ್ನು** ಈ ರಥದ ಹಗ್ಗವೆಂದೂ ಧರ್ಮ, ಅಧರ್ಮ ಮತ್ತು ಜ್ಞಾನಗಳನ್ನು ರಥಚಕ್ರದ ಮೂರು ಮಾರ್ಗಗಳೆಂದೂ ಕರೆದಿದೆ. ಇದೇರೀತಿಯಲ್ಲಿ ವಿಶ್ವತತ್ತ್ವವನ್ನು ರಥದ ಚಕ್ರಕ್ಕೂ ವಿಶ್ವದ ನಾನಾ ಭಾಗಗಳನ್ನು ಚಕ್ರದ ಬೇರೆ ಬೇರೆ ಅವಯವಗಳಿಗೂ ಹೋಲಿಸುವುದು ಶ್ರುತಿವಾಕ್ಯಗಳಲ್ಲಿ ಒಂದು ಸಾಧಾರಣವಾದ ಅಂಶವಾಗಿದೆ. ಅದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ "**ಪಂಚಾರೇ ಚಕ್ರೇ ಪರಿವರ್ತಮಾನೇ ತಸ್ಮಿನ್ನಾತಸ್ಥುರ್ಭುವನಾನಿ ವಿಶ್ವಾ**" ಎಂದು ವರ್ಣಿಸಿದೆ. ಕಾಲರೂಪವಾದ ಈ ವಿಶ್ವಚಕ್ರದಲ್ಲಿ ವತ್ಸರ, ಪರಿವತ್ಸರ ಇತ್ಯಾದ್ಯವಯವಗಳು ಪುನಃ ಪುನಃ ಪರಿವರ್ತಿತವಾಗಿ ಜರಾಮರಣಗಳುಳ್ಳವಾದರೂ ಸಹ ಈ ಮೂಲತತ್ತ್ವವು ಮಾತ್ರ ಶಾಶ್ವತವಾದದಾಗಿರುತ್ತದೆ. ಆದುದರಿಂದಲೇ **ನಾಕ್ಷಸ್ತಪ್ಯತೇ ; ಸನಾದೇವ ಶೀರ್ಯತೇ ಸನಾಭಿಃ** ಎಂದು ಇದರ ಅಕ್ಷಯ್ಯವಾದ ಸ್ಥಿತಿಯನ್ನು ವರ್ಣಿಸಿದೆ. ವಿಶ್ವದ ಭಾರವನ್ನೆಲ್ಲಾ ವಹಿಸಿರುವುದರಿಂದ ಇದರ ಅಕ್ಷವು ಭೂರಿಭಾರವುಳ್ಳದ್ದಾಗಿರುತ್ತದೆ. ಆದರೂ ಸಹ ಅದು ಕುಂಠಿತವಾಗುವುದಿಲ್ಲ. ಈ ಕಾಲರೂಪವಾದ ವಿಶ್ವಚಕ್ರವನ್ನು ಕಠೋಪನಿಷತ್ತಿನಲ್ಲಿ ವರ್ಣಿಸಿರುವ ಅಗ್ನಿಗೂ, ವಾಯುವಿಗೂ ಸೂರ್ಯನಿಗೂ ಹೋಲಿಸಬಹುದು.

**ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ ರೂಪಂ ರೂಪಂ ಪ್ರತಿರೂಪೋ ಬಭೂವ ।**
**ಏಕಸ್ತಥಾ ಸರ್ವ ಭೂತಾಂತರಾತ್ಮಾ ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ॥**
**ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷುರ್ನ ಲಿಪ್ಯತೇ ಚಾಕ್ಷುಷೈರ್ಬಾಹ್ಯದೋಷೈಃ ।**
**ಏಕಸ್ತಥಾ ಸರ್ವಭೂತಾಂತರಾತ್ಮಾ ನ ಲಿಪ್ಯತೇ ಲೋಕದುಃಖೇನ ಬಾಹ್ಯಃ ॥**

(ಕಠ. ಉಪನಿಷತ್ ೫-೯-೧೧)

ಯಾವರೀತಿಯಲ್ಲಿ ಒಂದೇ ಆದ ತತ್ತ್ವವು ವಿಶ್ವದಲ್ಲಿ ಹರಡಿ ಪ್ರತಿಯೊಂದು ಪದಾರ್ಥದ ರೂಪವನ್ನೂ ಪಡೆಯುತ್ತದೆಯೋ ಅದರಂತೆಯೇ ಈ ಕಾಲತತ್ತ್ವವೂ ಸಹ ವಿಶ್ವವನ್ನು ವ್ಯಾಪಿಸಿ ಆಯಾ ವೈಯುಕ್ತಿಕವಾದ ಪರಿಣಾಮವನ್ನು ಪಡೆಯುತ್ತದೆ. ಅವರ

ಯಾವ ರೀತಿಯಲ್ಲಿ ಸರ್ವಜಗತ್ತಿಗೂ ಚಕ್ಷುಸ್ಸಾದ ಸೂರ್ಯನು ತನ್ನನ್ನು ವೀಕ್ಷಿಸುವ ಕಣ್ಣಿನ ಬಾಹ್ಯದೋಷಗಳಿಂದ ಲಿಪ್ತನಾಗುವುದಿಲ್ಲವೋ, ಅದೇ ರೀತಿಯಲ್ಲಿ ಈ ಕಾಲತತ್ತ್ವವು ವೈಯಕ್ತಿಕವಾದ ಜಗತ್ತಿನ ದೋಷಗಳಿಂದ ತಾನು ಲಿಪ್ತವಾಗುವುದಿಲ್ಲ. ಅದು ನಶ್ವರವೂ ಅಲ್ಲ. ಸನಾತನವೂ ಸ್ಥಿರವೂ ಆದುದಾಗಿದೆ.

**ಯಥಾ ಲೌಕಿಕರಥಾಕ್ಷಃ ಭಾರೇಣ ಭಗ್ನೋಭವತಿ ಅಕ್ಷಘಾತೇನ ಚ ನಾಭಿರ್ವಿನಷ್ಟಾ ಭವತಿ ತದ್ವದತ್ರಾಪಿ ನಾಸ್ತೀತ್ಯರ್ಥಃ ॥**

ಯಾವ ರೀತಿಯಲ್ಲಿ ಪ್ರಾಪಂಚಿಕವಾದ ರಥದ ಅಕ್ಷವು ತನ್ನ ಶಕ್ತಿಗೆ ಮೀರಿದ ಭಾರವನ್ನು ವಹಿಸುವುದರಿಂದ ಮುರಿಯುತ್ತದೆಯೋ ಅದರಿಂದ ಅದರ ನಾಭಿಯು ವಿಕೃತವಾಗಿ ಆಗುತ್ತದೆಯೋ ಅದರಂತೆ ವಿಶ್ವಭಾರವನ್ನು ವಹಿಸುವುದಾದರೂ ಸಹ ಈ ರಥಚಕ್ರದ ಅಕ್ಷವೂ ಮುರಿಯುವುದಿಲ್ಲ. ಇದರ ನಾಭಿಯೂ ವಿಕೃತವಾಗುವುದಿಲ್ಲವೆಂದು ಸಾಯಣರು ಉತ್ತರಾರ್ಧದ ತಾತ್ಪರ್ಯವನ್ನು ವಿವರಿಸಿದ್ದಾರೆ.



## ಸನೇಮಿ ಚಕ್ರಮಜರಂ ವಿ ವಾವೃತ ಉತ್ತಾನಾಯಾಂ ದಶ ಯುಕ್ತಾ ವಹಂತಿ । ಸೂರ್ಯಸ್ಯ ಚಕ್ಷೂ ರಜಸೈತ್ಯಾವೃತಂ ತಸ್ಮಿನ್ನಾರ್ಪಿತಾ ಭುವನಾನಿ ವಿಶ್ವಾ ॥ ೧೪ ॥

ಒಂದೇ ಸಮನಾದ ಬಹಿರ್ವಲಯವುಳ್ಳದ್ದೂ, ಅಕ್ಷಯ್ಯವೂ ಆದ ಈ ವಿಶ್ವಚಕ್ರವು ಪುನಃ ಪುನಃ ಸುತ್ತುತ್ತಿದೆ. ಇದರ ಊರ್ಧ್ವಭಾಗದಲ್ಲಿ ಇಂದ್ರಾದಿಪಂಚಲೋಕಪಾಲಕರೂ ಮತ್ತು ಪಂಚವರ್ಣದ ಮಾನವರೂ ತಮ್ಮ ತಮ್ಮ ನಿರ್ದಿಷ್ಟವಾದ ಕರ್ತವ್ಯದಲ್ಲಿ ಯುಕ್ತರಾಗಿ ಜಗತ್ತಿನ ಕಾರ್ಯವನ್ನು ನಿರ್ವಹಿಸುತ್ತಾರೆ. ಜಗಚ್ಚಕ್ಷುರೂಪವಾದ ಸೂರ್ಯನ ಮಂಡಲವು ಉದಕದಿಂದ ವ್ಯಾಪ್ತವಾಗಿ ಸಂಚರಿಸುತ್ತದೆ ವಿಶ್ವವ್ಯಾಪಿಯಾದ ಆ ಮಂಡಲದಲ್ಲಿ ಸಮಸ್ತಲೋಕವೂ ಅರ್ಪಿಸಲ್ಪಟ್ಟಿದೆ. (ಸ್ಥಾಪಿಸಲ್ಪಟ್ಟಿದೆ).

ಹಿಂದಿನ ಋಕ್ಕಿನ ಭಾವವನ್ನೇ ಈ ಋಕ್ಕಿನಲ್ಲೂ ಹೇಳಿದ್ದರೂ ಸಹ ಈ ವಿಶ್ವಚಕ್ರದ ನಿಯಮನಕ್ಕೆ ಅಧೀನವಾಗಿ ಜಗದ್ವ್ಯವಹಾರವು ಅನುಸ್ಯೂತವಾಗಿ ನಡೆಯುತ್ತಿದೆಯೆಂದು ವರ್ಣಿಸಿರುವುದು ಇದರ ವಿಶೇಷವಿಷಯವಾಗಿದೆ. ಈ ಸಂದರ್ಭದಲ್ಲಿ ಕಾಲಚಕ್ರಕ್ಕೂ ತಾದಾತ್ಮ್ಯವನ್ನು ತೋರಿಸಿದೆ. ಒಂದು ದೃಷ್ಟಿಯಿಂದ ಆದಿತ್ಯನ ಪರಿಭ್ರಮಣವು ಕಾಲಾಯತ್ತವೆಂದೂ, ಇನ್ನೊಂದು ದೃಷ್ಟಿಯಿಂದ ಕಾಲದ ಗಮನಾಗಮನಗಳು ಆದಿತ್ಯಾಯತ್ತವೆಂದೂ ಹಿಂದೆ ತಿಳಿಸಿದೆ. ಇಲ್ಲಿಯೂ ಹಿಂದಿನ ಋಕ್ಕಿನಲ್ಲಿಯೂ ಎರಡಕ್ಕೂ ಅಭೇದವನ್ನು ಸೂಚಿಸಿ ಇಂದ್ರಾದಿಲೋಕಪಾಲಕರ ವ್ಯವಹಾರವೂ ಕೂಡ ತದಧೀನವೆಂದು ಹೇಳಿದೆ. ಇದೇ ಭಾವವನ್ನು ಬೃಹದಾರಣ್ಯಕದಲ್ಲಿ ಈರೀತಿ ಹೇಳಿದೆ.

**ಯಸ್ಮಾದರ್ವಾಕ್ಸಂವತ್ಸರೋಽಹೋಭಿಃ ಪರಿವರ್ತತೇ । ತದ್ದೇವಾ ಜ್ಯೋತಿಷಾಂ ಜ್ಯೋತಿ-ರಾಯುರ್ಹೋಪಾಸತೇಽಮೃತಂ ॥** (ಬೃ. ಉ. ೪-೪-೧೬)

ಎಂಬ ವಾಕ್ಯದಲ್ಲಿ "ಸನೇಮಿ ಚಕ್ರಮಜರಂ ವಿ ವವೃತೇ," "ಸೂರ್ಯಸ್ಯ ಚಕ್ಷುರೇತಿ" ಎಂದು ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿರುವ ಅಂಶಗಳನ್ನು ಹೇಳಿದೆ. ಈ ವಾಕ್ಯಕ್ಕೆ ಶಂಕರಾಚಾರ್ಯರು ಈರೀತಿ ವ್ಯಾಖ್ಯಾನ ಮಾಡಿದ್ದಾರೆ.

**ಸಂವತ್ಸರಃ ಕಾಲಾತ್ಮಾ ಸರ್ವಸ್ಯ ಜನಿಮತಃ ಪರಿಚ್ಛೇತ್ತಾ ಯಮಪರಿಚ್ಛಿಂದನ್ನ-ರ್ವಾಗೇವ ವರ್ತತೇಽಹೋಭಿಃ ಸ್ವಾವಯವೈರಹೋರಾತ್ರೈರಿತ್ಯರ್ಥಃ । ತಜ್ಜ್ಯೋತಿಷಾಂ ಜ್ಯೋತಿಃ ॥**

ಈ ಮೂಲತತ್ತ್ವದ ಆಧಾರದಮೇಲೆ ಸಂವತ್ಸರಾದಿಗಳು ತಮ್ಮ ಆವೃತ್ತಿರೂಪವಾದ ಭ್ರಮಣವನ್ನಿಟ್ಟುಕೊಂಡು ಲೋಕ ವ್ಯವಹಾರವನ್ನು ನಡೆಸುತ್ತಿವೆ. ಇದು ಸಕಲತೇಜಸ್ಸುಗಳಿಗಿಂತಲೂ ಅಧಿಕವಾದ ತೇಜಸ್ಸುಳ್ಳದ್ದು ಎಂದು ವಿಶ್ವವ್ಯವಹಾರಕ್ಕೆ ಆಧಾರವಾದ ಮೂಲತತ್ತ್ವವನ್ನು ವಿವರಿಸಿ ಅನಂತರ,

**ಯಸ್ಮಿನ್ಪಂಚ ಪಂಚಜನಾ ಆಕಾಶಶ್ಚ ಪ್ರತಿಷ್ಠಿತಃ । ತಮೇವ ಮನ್ಯ ಆತ್ಮಾನಂ ವಿದ್ವಾನ್ಬ್ರಹ್ಮಾಮೃತೋಽಮೃತಂ ॥** (ಬೃ. ಉ. ೪-೪-೧೭)

ಎಂಬ ಶ್ಲೋಕದಲ್ಲಿ "**ಉತ್ತಾನಾಯಾಂ ದಶ ಯುಕ್ತಾ ವಹಂತಿ**" ಎಂದು ಪ್ರಕೃತವಾದ ಋಕ್ಕಿನಲ್ಲಿ ಹೇಳಿರುವ ವಿಷಯವನ್ನು ತಿಳಿಸಿದೆ. ಇದಕ್ಕೆ ಶಂಕರಾಚಾರ್ಯರು ವ್ಯಾಖ್ಯಾನವನ್ನು ಮಾಡುತ್ತಾ,

**ಕಿಂಚ ಯಸ್ಮಿನ್ಬ್ರಹ್ಮಣಿ** (ಈ ಮೂಲತತ್ತ್ವವನ್ನು ಕಾಲ, ಸ್ವಭಾವ, ನಿಯತಿ, ಬ್ರಹ್ಮ ಇತ್ಯಾದ್ಯನೇಕ ಹೆಸರುಗಳಿಂದ ಕರೆಯುವುದನ್ನು ಹಿಂದೆ ತಿಳಿಸಿದೆ). **ಪಂಚ ಪಂಚಜನಾ ಗಂಧರ್ವಾದಯಃ ಪಂಚೈವ ಸಂಖ್ಯಾಕಾ ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸಿ ನಿಷಾದಪಂಚಮಾ ವಾ ವರ್ಣಾ ಆಕಾಶಶ್ಚಾವ್ಯಾಕೃತಾಖ್ಯೋ ಯಸ್ಮಿನ್ಸೂತ್ರಮೋತಂ ಚ ಪ್ರೋತಂ ಚ ಯಸ್ಮಿನ್ಪ್ರತಿಷ್ಠಿತಃ ॥**

ಈ ಮೂಲತತ್ತ್ವದ ಆಧಾರದಮೇಲೆ ಗಂಧರ್ವಾದಿ ಪಂಚಸಂಖ್ಯಾಕವಾದ ದೇವತೆಗಳ ಸಮೂಹವೂ, ಪಂಚವರ್ಣಾತ್ಮಕವಾದ ಮಾನವಸಮೂಹವೂ ತಮ್ಮ ತಮ್ಮ ವ್ಯವಹಾರಗಳನ್ನು ನಡೆಸುತ್ತಿರುವರು. ಇದರಲ್ಲಿ ಸಕಲವಿಶ್ವವೂ ಓತ ಪ್ರೋತಗಳಂತೆ ಹೆಣೆದುಕೊಂಡಿರುವುವು. ಇದನ್ನೇ ಯಾಜ್ಞವಲ್ಕ್ಯರು ಗಾರ್ಗಿಗೆ ವಿವರಿಸುತ್ತಾ,

**ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ ವಿಧೃತೇ ತಿಷ್ಠತ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ನಿಮೇಷಾ ಮುಹೂರ್ತಾ ಅಹೋರಾತ್ರಾಣ್ಯರ್ಧಮಾಸಾ ಮಾಸಾ ಋತವಃ ಸಂವತ್ಸರಾ ಇತಿ ವಿಧೃತಾಸ್ತಿಷ್ಠಂತ್ಯೇತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋಽನ್ಯಾ ನದ್ಯಃ ಸ್ಯಂದಂತೇ ಶ್ವೇತೇಭ್ಯಃ ಪರ್ವತೇಭ್ಯಃ ಪ್ರತೀಚ್ಯೋಽನ್ಯಾ ಯಾಂ ಯಾಂ ಚ ದಿಶಮನ್ವೇತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದದತೋ ಮನುಷ್ಯಾಃ ಪ್ರಶಂಸಂತಿ ಯಜಮಾನಂ ದೇವಾ ದರ್ವೀಂ ಪಿತರೋಽನ್ವಾಯತ್ತಾಃ ॥** (ಬೃ. ಉ. ೩-೮-೯)

ಎಲೈಗಾರ್ಗಿಯೇ, ಈ ಅಕ್ಷರದ (ಅಜರವೆಂದು ಪ್ರಕೃತವಾದ ಋಕ್ಕಿನಲ್ಲಿ ವರ್ಣಿಸಿದೆ) ಪ್ರಶಾಸನದಿಂದಲೇ ಸೂರ್ಯನೂ ಚಂದ್ರನೂ ಅನವರತ ನಿಯತವಾದ ಸ್ಥಾನದಲ್ಲಿದ್ದಾರೆ. ದ್ಯಾವಾಪೃಥಿವಿಗಳೂ ಅವುಗಳ ಎಲ್ಲೆಯನ್ನು ಮೀರುವುದಿಲ್ಲ. ನಿಮೇಷಗಳೂ, ಮುಹೂರ್ತಗಳೂ, ಅಹೋರಾತ್ರಗಳೂ, ಅರ್ಧಮಾಸಗಳೂ, ಮಾಸಗಳೂ, ಋತುಗಳೂ, ಸಂವತ್ಸರಗಳೂ ತಮ್ಮ ಪರಿಮಿತಿಯಲ್ಲಿ ಆವಿರ್ಭವಿಸುತ್ತಲೂ ನಿವೃತ್ತರಾಗುತ್ತಲೂ ಇವೆ. ಈ ಅಕ್ಷರದ ಪ್ರಶಾಸನದಿಂದಲೇ ನದ್ಯಾದಿಗಳ ಪ್ರವಾಹಗಳೂ ಹರಿಯುತ್ತಿವೆ.

**ಏತಸ್ಮಿನ್ನು ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚೇತಿ ||** (ಬೃ. ಉ. ೩-೮-೧೧)

ಅಕ್ಷರದಲ್ಲೇ ಆಕಾಶಾದಿಜಗತ್ತೆಲ್ಲವೂ ಓತಪ್ರೋತಗಳಂತೇ ಸೇರಿಕೊಂಡಿವೆ. ಇದಲ್ಲದೆ,

**ಭೀಷಾಸ್ಮಾದ್ವಾತಃ ಪವತೇ । ಭೀಷೋದೇತಿ ಸೂರ್ಯಃ । ಭೀಷಾಸ್ಮಾದಗ್ನಿಶ್ಚೇಂದ್ರಶ್ಚ ।**

(ತೈ. ಉ. ೨-೮-೧)

ಈ ಮಹಾತತ್ತ್ವದ ಅನುಶಾಸನಕ್ಕೆ ವಿಧೇಯವಾಗಿಯೇ ವಾಯುವೂ, ಸೂರ್ಯನೂ, ಅಗ್ನಿಯೂ, ಇಂದ್ರನೂ ತಮ್ಮ ತಮ್ಮ ನಿಯತವಾದ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ, ಇತ್ಯಾದಿಯಾಗಿ ಈ ಅಕ್ಷರದ ಪ್ರಭಾವವನ್ನು ನಾನಾಶ್ರುತಿಗಳಲ್ಲಿ ಪ್ರಶಂಸಿಸಿ ಜಗದ್ವ್ಯವಹಾರವೆಲ್ಲವೂ ತದಾಯತ್ತವೆಂದು ತಿಳಿಸಿದೆ.

**ದಶ ಯುಕ್ತಾ ವಹಂತಿ**—ಈ ವಾಕ್ಯದ ಒಟ್ಟಿನ ಅರ್ಥವನ್ನು ಮೇಲೆ ವಿವರಿಸಿದೆ ಆದರೆ, ದಶಶಬ್ದಕ್ಕೆ ಅರ್ಥಾಂತರಗಳೂ ಸಾಧ್ಯವಾಗುವುದರಿಂದ ಪ್ರಕೃತವಾದ ಸಂದರ್ಭದಲ್ಲಿ ಶ್ರುತಿವಾಕ್ಯಗಳ ಆಧಾರದಮೇಲೆ ಈ ಪದಕ್ಕೆ ಯಾವ ಯಾವ ಅರ್ಥಗಳನ್ನು ಮಾಡಬಹುದೆಂದು ವಿಮರ್ಶಿಸಬೇಕು. ಸಾಯಣರು ಇದನ್ನು ವಿವರಿಸುತ್ತಾ,

**ಇಂದ್ರಾದಯಃ ಪಂಚ ಲೋಕಪಾಲಾಃ ನಿಷಾದಪಂಚಮಾಶ್ಚತ್ವಾರೋ ಬ್ರಾಹ್ಮಣಾದಯೋ ವರ್ಣಾಃ ದಶಸಂಖ್ಯಾಕಾಃ ||**

ಇಂದ್ರಾದಿ ಪಂಚಲೋಕಪಾಲಕರೂ ಪಂಚವರ್ಣಾತ್ಮಕರಾದ ಮಾನವರೂ ಎಂದರ್ಥಮಾಡಿದ್ದಾರೆ. ಇಂದ್ರ, ಯಮ, ವರುಣ, ಸೋಮ, ಬ್ರಹ್ಮ ಇವರೈವರೂ ಪಂಚಲೋಕಪಾಲಕರೆಂದು ಪ್ರಸಿದ್ಧರಾಗಿದ್ದಾರೆ. **ಪಂಚಜನಾಃ** ಎಂಬ ಪದವನ್ನು ವಿವರಿಸುತ್ತಾ ನಿರುಕ್ತಕಾರರು,

**ಪಂಚಜನಾ (ಮಮ ಹೋತ್ರಂ ಜುಷಧ್ವಂ) ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸೀತ್ಯೇಕೇ । ಚತ್ವಾರೋ ವರ್ಣಾ ನಿಷಾದಃ ಪಂಚಮ ಇತ್ಯೌಪಮನ್ಯವಃ ||**

ಗಂಧರ್ವರು, ಪಿತೃಗಳು, ದೇವತೆಗಳು, ಅಸುರರು, ರಾಕ್ಷಸರು ಎಂದು ಐದು ವಿಧವಾದ ಜನರೆಂದು ಕೆಲವರೂ, ಬ್ರಾಹ್ಮಣಾದಿ ನಾಲ್ಕುವರ್ಣದವರೊಂದಿಗೆ ನಿಷಾದರೆಂಬ ಐದನೆಯ ಗುಂಪೂ ಸೇರಿ **ಪಂಚಜನ**ರೆಂದು **ಉಪಮನ್ಯು**ವೇ ಮುಂತಾದವರೂ ಅಭಿಪ್ರಾಯಪಡುವರೆಂದು ತಿಳಿಸಿದ್ದಾರೆ. ಹಿಂದೆ ದೇವತೆಗಳೆಲ್ಲರೂ ಅಗ್ನಿಯನ್ನು ಕುರಿತು ತಮಗಾಗಿ ಯಜ್ಞದಲ್ಲಿ ಅರ್ಪಿತವಾದ ಹವಿಸ್ಸನ್ನು ಸ್ವೀಕರಿಸಿ ಎಲ್ಲರಿಗೂ ಹಂಚಬೇಕೆಂದು ಪ್ರಾರ್ಥಿಸುವಾಗ ಅಗ್ನಿಯು ಅದಕ್ಕೆ ಒಪ್ಪಿಕೊಂಡು,

**ತದದ್ಯ ವಾಚಃ ಪ್ರಥಮಂ ಮಸೀಯ ಯೇನಾಸುರಾँ ಅಭಿ ದೇವಾ ಅಸಾಮ ।**
**ಊರ್ಜಾದ ಉತ ಯಜ್ಞಿಯಾಸಃ ಪಂಚ ಜನಾ ಮಮ ಹೋತ್ರಂ ಜುಷಧ್ವಂ ||**

(ಋ. ಸಂ. ೧೦-೫೩-೪)

ಪಂಚಜನರೂ ಈ ಹವಿಸ್ಸನ್ನು ಭೋಗಿಸಲಿ ಎಂದು ಉತ್ತರವನ್ನು ಕೊಟ್ಟಿರುವ ಈ ವಾಕ್ಯವನ್ನು ಬೃಹದ್ದೇವತಾಕಾರರು ಉದಹರಿಸಿ ಪಂಚಜನರು ಯಾರು ಎಂಬ ಅಭಿಪ್ರಾಯಭೇದಗಳನ್ನು ತೋರಿಸಿ ಚರ್ಚಿಸಿದ್ದಾರೆ.

**ಪ್ರತ್ಯುವಾಚಾಥ ತಾನಗ್ನಿರ್ವಿಶ್ವೇದೇವಾ ಯದೂಚ ಮಾಂ। ತತ್ಕರಿಷ್ಯೇ ಜುಷಂತಾಂ ತು ಹೋತ್ರಂ ಪಂಚಜನಾ ಮಮ ॥** (ಬೃ. ದೇ. ೭-೯೬)

ಎಂಬ ಶ್ಲೋಕದಲ್ಲಿ ಅಗ್ನಿಯು ದೇವತೆಗಳಿಗೆ ಕೊಟ್ಟ ಉತ್ತರವನ್ನು ತಿಳಿಸಿ ಅನಂತರ **ಪಂಚಜನಶಬ್ದವನ್ನು** ವಿವರಿಸಿದ್ದಾರೆ.

**ಶಾಲಾಮುಖ್ಯಃ ಪ್ರಣೀತಶ್ಚ ಪುತ್ರೋ ಗೃಹಪತೇಶ್ಚ ಯಃ। ಉತ್ತರೋ ದಕ್ಷಿಣಶ್ಚಾಗ್ನಿರೇತೇ ಪಂಚಜನಾಃ ಸ್ಮೃತಾಃ ॥** (ಬೃ. ದೇ. ೭-೬೭)

ಎಂದರೆ, ಶಾಲೆಯ ಪ್ರವೇಶಭಾಗದಲ್ಲಿರುವ ಅಗ್ನಿಯೂ, ಪ್ರಣೀತವಾದ ಆವಹನೀಯಾಗ್ನಿಯೂ, ಯಜಮಾನನ ಪುತ್ರಭೂತವಾದ ಗಾರ್ಹಪತ್ಯಾಗ್ನಿಯೂ, ದಕ್ಷಿಣೋತ್ತರಾದಿಗಳೂ ಸೇರಿ ಈ ಐದುವಿಧವಾದ ಅಗ್ನಿಗಳೂ ಐದು ಬಗೆಯ ವರ್ಗಗಳೆಂದು ಸಾಂಪ್ರದಾಯಿಕವಾದ ವ್ಯಾಖ್ಯಾನ. ಈ ಮತವಲ್ಲದೆ, ಪುನಃ ಇದನ್ನೇ ವಿವರಿಸುತ್ತಾ,

**ಮನುಷ್ಯಾಃ ಪಿತರೋ ದೇವಾಃ ಗಂಧರ್ವೋರಗರಾಕ್ಷಸಾಃ। ಗಂಧರ್ವಾಃ ಪಿತರೋ ದೇವಾ ಅಸುರಾ ಯಕ್ಷರಾಕ್ಷಸಾಃ ॥** (ಬೃ. ದೇ. ೭-೬೮)

ಮೊದಲನೆಯ ಅಭಿಪ್ರಾಯದಂತೆ ಉರಗರಾಕ್ಷಸರು ಒಂದು ಗುಂಪು; ಎರಡನೆಯ ಅಭಿಪ್ರಾಯದಂತೆ **ಯಕ್ಷರಾಕ್ಷಸರು** ಇನ್ನೊಂದು ಗುಂಪು. ಮತ್ತು,

**ಯಾಸ್ಕೌಪಮನ್ಯವಾವೇತಾನಾಹತುಃ ಪಂಚ ವೈ ಜನಾನ್। ನಿಷಾದಪಂಚಮಾನ್ವರ್ಣಾನ್ ಮನ್ಯತೇ ಶಾಕಟಾಯನಃ ॥** (ಬೃ. ದೇ. ೭-೬೯)

ಯಾಸ್ಕರ ಮತವು ಮೊದಲನೆಯದೆಂದು ಬೃಹದ್ದೇವತಾಕಾರರು ಈ ವಾಕ್ಯದಲ್ಲಿ ಹೇಳಿರುವರು ಆದರೆ ನಿರುಕ್ತಕಾರರು **ಉಪಮನ್ಯುವೇ ಮುಂತಾದವರ** ಮತವನ್ನು ತಿಳಿಸಿದ್ದಾರೆಯೇ ವಿನಃ ತಮ್ಮ ಮತವನ್ನು ನಿಸ್ಪಷ್ಟವಾಗಿ ತಿಳಿಸಿಲ್ಲ. **ಪ್ರಾಯಃ ಆ ಮತವನ್ನೇ** ಅವರೂ ಅಂಗೀಕರಿಸಿರಬಹುದು.

**ಋತ್ವಿಜೋ ಯಜಮಾನಂ ಚ ಶಾಕಪೂಣಿಸ್ತು ಮನ್ಯತೇ।** (ಬೃ. ದೇ. ೭-೭೦)

**ಹೋತ್ರಾದಿ** ನಾಲ್ಕು ಋತ್ವಿಕ್ಕುಗಳೂ, ಯಜಮಾನನೂ ಸೇರಿ ಐದು ಗುಂಪೆಂದು ಶಾಕಪೂಣಿಯರ **ಮತವಾಗಿದೆಯೆಂದೂ** ಇನ್ನೊಂದು ಅಭಿಪ್ರಾಯವನ್ನು ಹೇಳಿದೆ. ಇದಲ್ಲದೇ,

**ಚಕ್ಷುಃ ಶ್ರೋತ್ರಂ ಮನೋ ವಾಕ್ ಚ ಪ್ರಾಣಶ್ಚೇತ್ಯಾತ್ಮವಾದಿನಃ। ಗಂಧರ್ವಾಪ್ಸರಸೋ ದೇವಾ ಮನುಷಾಃ ಪಿತರಸ್ತಥಾ ॥ ಸರ್ಪಾಶ್ಚ ಬ್ರಾಹ್ಮಣೇ ಚೈವ ಶ್ರೂಯಂತೇ ಹ್ಯೈತರೇಯಕೇ ॥** (ಬೃ. ದೇ. ೭-೭೧)

ಚಕ್ಷುಸ್ಸು, ಶ್ರೋತ್ರ, ಮನಸ್ಸು, ವಾಕ್ಕು ಮತ್ತು ಪ್ರಾಣ ಈ ಐದೂ **ಪಂಚಜನರೆಂದು** ಅಧ್ಯಾತ್ಮವಾದಿಗಳ **ಮತವು.** ಗಂಧರ್ವಾದಿಗಳೆಂದು ಐತರೇಯಬ್ರಾಹ್ಮಣದಲ್ಲಿ ಉಕ್ತವಾಗಿದೆ. (ಐ. ಬ್ರಾ. ೩-೩೧). ಇಂತಹ ಪಂಚಜನರೂ ಹವಿಸ್ಸನ್ನು ಭೋಗಿಸಲಿ ಎಂದು ಅಗ್ನಿಯು ದೇವತೆಗಳಿಗೆ ಉತ್ತರವನ್ನು ಕೊಟ್ಟಿದ್ದಾನೆ ಎಂದು ಬೃಹದ್ದೇವತೆಯ **ವಿವರಣೆಯಲ್ಲಿಯೂ**

ಅಭಿಪ್ರಾಯಭೇದಗಳು ಉದಹರಿಸಲ್ಪಟ್ಟಿವೆ. ಇಷ್ಟೇ ಅಲ್ಲದೆ ಛಾಂದೋಗ್ಯೋಪನಿಷದಾದಿಗಳಲ್ಲಿಯೂ ಪ್ರಕೃತವಾದ **ಋಕ್ಕಿನಲ್ಲಿ ಉಕ್ತವಾಗಿರುವಂತೆ** ದಶವಿಧವಾದ ಲೋಕಪಾಲಾದಿಗಳು ಜಗದ್ವ್ಯವಹಾರಕ್ಕೆ ಕಾರಣವಾಗಿಯೂ, ಈ ಮೂಲತತ್ತ್ವಕ್ಕೆ ಅಧೀನರಾಗಿಯೂ ಇದರ ಅನುಶಾಸನವನ್ನು ಪಾಲಿಸುತ್ತಲೂ ಇರುತ್ತಾರೆಂದು ವರ್ಣಿಸಿದೆ.

**ತಸ್ಮಾ ಉ ಹ ದದುಸ್ತೇ ವಾ ಏತೇ ಪಂಚಾನ್ಯೇ ದಶ ಸಂತಃ ।** (ಛಾ. ಉ. ೪-೩-೮)

ಎಂಬಲ್ಲಿ, ಮೊದಲನೇ ಪಂಚಶಬ್ದಕ್ಕೆ ವಾಯು, ಅಗ್ನಿ, ಸೂರ್ಯ, ಚಂದ್ರ ಮತ್ತು ಉದಕವೆಂದೂ, ಎರಡನೇ ಪಂಚಶಬ್ದಕ್ಕೆ ಪ್ರಾಣ, ವಾಕ್, ಚಕ್ಷುಸ್ಸು, ಶ್ರೋತ್ರ ಮತ್ತು ಮನಸ್ಸೆಂದೂ ಅರ್ಥವಾಗುತ್ತದೆ. ಅಲ್ಲದೆ, ಸಾಯಣರು **ಪಂಚಲೋಕಪಾಲಾಃ** ಎಂದು ಪ್ರಕೃತವಾದ ಋಕ್ಕಿನಲ್ಲಿ ವಿವರಿಸುವಂತೆಯೇ, ಛಾಂದೋಗ್ಯೋಪನಿಷತ್ತಿನಲ್ಲಿಯೂ ಸಹ,

**ತೇ ವಾ ಏತೇ ಪಂಚ ಬ್ರಹ್ಮಪುರುಷಾಃ ಸ್ವರ್ಗಸ್ಯ ಲೋಕಸ್ಯ ದ್ವಾರಪಾಃ ।** (ಛಾ. ಉ. ೩-೧೩-೬)

ಸ್ವರ್ಗದ ದ್ವಾರಪಾಲಕರಾದ **ಪಂಚಬ್ರಹ್ಮ ಪುರುಷರೆಂದು** ಹೇಳಿದೆ. ಹೀಗೆ ಅನೇಕ ಕಡೆಗಳಲ್ಲಿ "**ದಶ ಯುಕ್ತಾ ವಹಂತಿ**" ಎಂಬ ವರ್ಣನೆಯ ಅಂಶವು ಸೂಚಿತವಾಗಿದ್ದರೂ ಸಹ ಈ ಸಂದರ್ಭಗಳಲ್ಲೆಲ್ಲಾ **ದಶ, ಪಂಚ** ಈ ಪದಗಳಿಗೆ ಆಯಾ ಸನ್ನಿವೇಶಗಳಿಗನುಕೂಲವಾದಂತೆ ಅರ್ಥಮಾಡಿರುವುದರಿಂದ ಒಂದು ನಿಷ್ಕೃಷ್ಟವಾದ ಅರ್ಥವನ್ನು ಹೇಳಲಾಗುವುದಿಲ್ಲವೆಂದು ನಿರುಕ್ತಕಾರಾದಿಗಳೇ ಅಭಿಪ್ರಾಯಪಟ್ಟಿದ್ದಾರೆ. ಪ್ರಕೃತದಲ್ಲಿ ಸಾಯಣರು ವಿವರಿಸಿರುವಂತೆ **ಪಂಚಲೋಕಪಾಲಾಃ ಇಂದ್ರಾದಯಃ, ವರ್ಣಾತ್ಮಕಾಃ ಪಂಚಜನಾಃ** ಎಂಬ ಅರ್ಥವು ಹೊಂದಿಕೊಳ್ಳುವುದರಿಂದ ಬೇರೆ ರೀತಿಯಲ್ಲಿ ಅದಕ್ಕೆ ಅರ್ಥಮಾಡುವುದು ಅನುಚಿತವಾಗುವುದು. ಎಂದರೆ ದೇವಮಾನವಾದಿ ಸಕಲ ಭೂತಗಳೂ ಸಹ ಈ ವಿಶ್ವತತ್ತ್ವದ ಆಜ್ಞಾನುವರ್ತಿಗಳಾಗಿ ಲೋಕವ್ಯವಹಾರಗಳನ್ನು ನಿರ್ವಹಿಸುತ್ತಾರೆಂದರ್ಥ. ಅಮರವಾದ ಈ ಚಕ್ರದಲ್ಲಿ ಉನ್ನತ್ಯವನತಿಗಳು ಸಹಜವಾಗಿಯೇ ಇರುವುವು. ಮೂಲತತ್ತ್ವವು ಅಜರವಾದರೂ, ತದಧೀನವಾದ ಸಕಲಕ್ಕೂ ಆವಿರ್ಭಾವವೂ ತಿರೋಧಾನವೂ ಆವೃತ್ತಿಯ ರೂಪದಲ್ಲಿದ್ದೇ ಇರುವುದು. ಇದನ್ನೇ **ಬಾಧ್ವನೆಂಬ** ಋಷಿಯು ಐತರೇಯಾರಣ್ಯಕದಲ್ಲಿ,

**ಮಹಾಪುರುಷ ಇತಿ ಯಮಮವೋಚಾಮ ಸಂವತ್ಸರ ಏವ ಪ್ರಧ್ವಂಸಯನ್ನನ್ಯಾನಿ ಭೂತಾನ್ಯೈಕ್ಯಾ ಭಾವಯನ್ನನ್ಯಾನಿ ತಸ್ಯೈತಸ್ಯಾಸಾವಾದಿತ್ಯೋ ರಸಃ । ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ ಯಶ್ಚಾಸಾವಾದಿತ್ಯ ಏಕಮೇತದಿತಿ ವಿದ್ಯಾತ್ । ತಸ್ಮಾತ್ಪುರುಷಂ ಪುರುಷಂ ಪ್ರತ್ಯಾದಿತ್ಯೋ ಭವತಿ ॥** (ಐ. ಆ. ೩-೨-೩-೭ ರಿಂದ ೯)

ಯಾವನನ್ನು ನಾವು ಮಹಾಪುರುಷನೆನ್ನುತ್ತೇವೆಯೋ ಅವನೇ **ಸಂವತ್ಸರರೂಪನು**. ಆ ಸಂವತ್ಸರದ ಪರಿಭ್ರಮಣ ಕಾಲದಲ್ಲಿ ಸಕಲ ಭೂತಗಳಿಗೂ ಉನ್ನತ್ಯವನತಿಗಳು ಸಂಭವಿಸಲೇ ಬೇಕಾಗುತ್ತವೆ ಈ ಸಂವತ್ಸರದ ಸಾರವೇ ಆದಿತ್ಯನು. ಅಶರೀರಿಯೂ, ಪ್ರಜ್ಞಾತ್ಮನೂ ಆದ ಪುರುಷನೂ ಈ ಆದಿತ್ಯನೂ ಒಂದೇ ವಿನಹ ಬೇರೆಬೇರೆಯಲ್ಲ. ಆದುದರಿಂದ ಪ್ರತಿ ಜೀವಾತ್ಮರಲ್ಲೂ ಈ ಆದಿತ್ಯನ ಅಂಶವೇ ವ್ಯಾಪಿಸಿ ಎಲ್ಲರಲ್ಲಿಯೂ ಒಂದೇ ತತ್ತ್ವದ ಪ್ರತಿಬಿಂಬವನ್ನು ಹರಡಿರುತ್ತದೆ. ಬಾಧ್ವಋಷಿಯು ಇಲ್ಲಿ ಮಹಾಪುರುಷನಿಗೂ, ಸಂವತ್ಸರೂಕ್ಕೂ, ಆದಿತ್ಯನಿಗೂ ತಾದಾತ್ಮ್ಯವನ್ನು ಹೇಳುವಾಗ ತನ್ನ ಮಥಕ್ಕೆ ಸಮರ್ಥನೆಯನ್ನು ತೋರಿಸುವುದಕ್ಕಾಗಿ,

**ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ॥**
**ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥** (ಋ. ಸಂ. ೧-೧೧೫-೧)

ಮಿತ್ರ, ವರುಣ ಮತ್ತು ಅಗ್ನಿಗಳಿಗೆ ಚಕ್ಷುಸ್ಸ್ವರೂಪನಾದ ಆದಿತ್ಯನು ಉದಯಿಸಿದ್ದಾನೆ. ಅವನು ಪೃಥ್ವಿಯನ್ನೂ, ಅಂತರಿಕ್ಷವನ್ನೂ ಮತ್ತು ದ್ಯುಲೋಕವನ್ನೂ ಪೂರ್ಣವಾಗಿ ವ್ಯಾಪಿಸಿದ್ದಾನೆ. ಜಂಗಮಾತ್ಮಕವಾದ ಜಗತ್ತಿಗೂ, ಸ್ಥಾವರಾತ್ಮಕವಾದ ಜಗತ್ತಿಗೂ ಆದಿತ್ಯನೇ ಅಂತರಾತ್ಮನಾಗಿದ್ದಾನೆ. ಮತ್ತು ಜಗದ್ವ್ಯಾಪಿಯಾಗಿದ್ದಾನೆ ಎಂದು ಹೇಳಿರುವನು.

**ಸೂರ್ಯಸ್ಯ ಚಕ್ಷುಃ ರಜಸಾ ಆವೃತಂ ಏತಿ**—ಇಲ್ಲಿ **ರಜಸ್** ಎಂಬ ಪದಕ್ಕೆ ಉದಕವೆಂದರ್ಥಮಾಡಿದೆ. ಈ ಪದ ಕ್ಕಿರತಕ್ಕ ಇನ್ನೂ ಇತರ ಅರ್ಥಗಳನ್ನೂ ತೋರಿಸಿ, ನಿರುಕ್ತಕಾರರು,

**ರಜೋ ರಜತೇರ್ಜ್ಯೋತೀ ರಜ ಉಚ್ಯತೇ । ಉದಕಂ ರಜ ಉಚ್ಯತೇ ।**
**ಲೋಕಾ ರಜಾಂಸ್ಯುಚ್ಯಂತೇ । ಅಸೃಗಹನೀ ಉಚ್ಯೇತೇ ॥** (ನಿ. ೪-೧೯)

ಬೆಳಗು ಎಂಬರ್ಥವನ್ನು ಕೊಡುವ **ರಂಜ್** ಧಾತುವಿನಿಂದ ನಿಷ್ಪನ್ನವಾಗಿ **ರಜಸ್**ಶಬ್ದಕ್ಕೆ ಜ್ಯೋತಿಯೆಂದೂ, ಉದಕ ವೆಂದೂ, ಲೋಕಗಳೆಂದೂ ಅರ್ಥವಾಗುತ್ತದೆ. ರಕ್ತ ಮತ್ತು ಅಹಸ್ಸುಗಳಿಗೂ ಪರ್ಯಾಯನಾಮವಾಗಿದೆಯೆಂದು ವಿವರಿಸಿ ಈ ಅರ್ಥ ಗಳನ್ನು ಸಮರ್ಥಿಸಲು ನಿರುಕ್ತಕಾರರು ಋಕ್ಸಂಹಿತೆಯ ಉದಾಹರಣೆಗಳನ್ನು ಕೊಟ್ಟಿರುವುದನ್ನು ಇದರ ಹಿಂದಿನ ಭಾಗದ ಎಂದರೆ ಋಗ್ವೇದ ಸಂಹಿತೆಯ ೧೧ ನೇ ಭಾಗದ ೫೪ ನೇ ಪೇಜಿನಲ್ಲಿ ವಿವರಿಸಿದೆ.

**ಅಬ್ಜಾಮುಕ್ಥೈರಹಿಂ ಗೃಣೀಷೇ ಬುಧ್ನೇ ನದೀನಾಂ ರಜಃಸು ಷೀದನ್ ।**
**(ಋ. ಸಂ. ೭-೩೪-೧೬)**

ಎಂಬ ಋಕ್ಕನ್ನುದಹರಿಸಿ ಅಲ್ಲಿ ರಜಶ್ಶಬ್ದಕ್ಕೆ ಉದಕವೆಂದರ್ಥವಾಗುವುದೆಂದು ನಿರುಕ್ತಕಾರರು ಹೇಳಿರುವಂತೆ ಪ್ರಕೃತ ವಾದ ಋಕ್ಕಿನಲ್ಲಿಯೂ ಈ ಪದಕ್ಕೆ ಉದಕವೆಂದರ್ಥವು. **ರಜಸಾ ಆವೃತಂ ಏತಿ** ಎಂದರೆ ಉದಕದಿಂದ ಆವೃತವಾದ ಸೂರ್ಯ ಮಂಡಲವು ಅಂತರಿಕ್ಷದ ಸುತ್ತಲೂ ಸಂಚರಿಸುತ್ತದೆಯೆಂದರ್ಥಮಾಡಿದೆ.

**ಅಪಾಗ್ಂ ರಸಮುದ್ವಯಸಗ್ಂ ಸೂರ್ಯೇ ಸಂತಗ್ಂ ಸಮಾಹಿತಮಪಾಗ್ಂ ರಸಸ್ಯ ಯೋ ರಸಸ್ತಂ ವೋ ಗೃಹ್ಣಾಮ್ಯುತ್ತಮಂ ।** (ಶ. ಬ್ರಾ. ೫-೧-೨-೭)

ಚೈತನ್ಯದಾಯಿಯಾದ ಅಪ್ಪಿನ ಸಾರವು ಸೂರ್ಯನಲ್ಲಿ ಅಂತರ್ಗತವಾಗಿದೆ.

**ಏತಾ ವಾ ಆಪಃ ಸ್ವರಾಜೋ ಯನ್ಮರೀಚಯಸ್ತಾ ಯತ್ಸ್ಯಂದಂತೇ ।** (ಶ. ಬ್ರಾ. ೫-೩-೪-೨೧)

ಪ್ರವಾಹಾತ್ಮಕಗಳಾದ ಈ ಸೂರ್ಯರಶ್ಮಿಗಳೇ ಉದಕಗಳು ಮತ್ತು ಅಪ್ರತಿಹತವಾದ ಪ್ರಸರಗಳುಳ್ಳವು ಇತ್ಯಾದಿಯಾಗಿ ಉದಕದಿಂದ ವ್ಯಾಪ್ತವಾದ ಸೂರ್ಯಮಂಡಲವನ್ನು ವರ್ಣಿಸಿರುವ ಅಂಶವನ್ನು ಇಲ್ಲಿ ವರ್ಣಿಸಿದೆ. [ಈ ವಿಷಯವನ್ನು ಇದೇ ಸೂಕ್ತದ ೧೨ ನೇ ಋಕ್ಕಿನ ವಿಶೇಷವಿಷಯಗಳಲ್ಲಿ **ಪುರೀಷಿಣಂ** ಎಂಬ ಪದವನ್ನು ವಿವರಿಸುವಾಗ ವಿಶದವಾಗಿ ತಿಳಿಸಿದೆ].

**ಚಕ್ಷುಃ**—**ಖ್ಯಾತೇರ್ವಾ ಚಷ್ಟೇರ್ವಾ** । ಜ್ಞಾನಾರ್ಥಕವಾದ **ಖ್ಯಾ** ಧಾತುವಿನಿಂದಾಗಲೀ ಅಥವಾ ದರ್ಶನಾರ್ಥಕ ವಾದ **ಚಕ್ಷ್** ಧಾತುವಿನಿಂದಾಗಲಿ ಈ ಪದವು ನಿಷ್ಪನ್ನವಾಗಿದೆಯೆಂದು ನಿರುಕ್ತಕಾರರು ಈ ಪದದ ನಿರ್ವಚನವನ್ನು ಹೇಳಿದ್ದಾರೆ. (ನಿ. ೪-೩) ಅದರ ಆಧಾರವನ್ನು ತೋರಿಸುತ್ತಾ ಸಾಯಣರು **ಖ್ಯಾನಸ್ಯಭಾವಂ, ಸರ್ವಸ್ಯ ಚಕ್ಷುಃಸ್ಥಾನೀಯಂ ವಾ ।**

ಜ್ಞಾನಸ್ವರೂಪವಾದ ಸೂರ್ಯಮಂಡಲವೆಂದಾಗಲಿ ಅಥವಾ ಜಗಚ್ಚಕ್ಷುರೂಪವಾದ ಆದಿತ್ಯಮಂಡಲವೆಂದಾಗಲಿ ಅರ್ಥವಾಗುತ್ತದೆಂದು ಈ ಪದಕ್ಕೆ ಅರ್ಥವನ್ನು ಹೇಳಿದ್ದಾರೆ.

**ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷುಃ ।** (ಕಠ. ೫-೧೧)

ಇತ್ಯಾದಿ ವಾಕ್ಯಗಳಲ್ಲಿ ವರ್ಣಿಸಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ವರ್ಣಿಸಿದೆ. ಈ ಆದಿತ್ಯಮಂಡಲದಲ್ಲಿ **ವಿಶ್ವಾ ಭುವನಾನಿ ಅರ್ಪಿತಾ** ಎಂಬುದು ಭಾವವು.



## ಸಾಕಂಜಾನಾಂ ಸಪ್ತಥಮಾಹುರೇಕಜಂ ಷಳಿದ್ಯಮಾ ಋಷಯೋ ದೇವಜಾ ಇತಿ । ತೇಷಾಮಿಷ್ಟಾನಿ ವಿಹಿತಾನಿ ಧಾಮಶಃ ಸ್ಥಾತ್ರೇ ರೇಜಂತೇ ವಿಕೃತಾನಿ ರೂಪಶಃ ॥ ೧೫ ॥

ಆದಿತ್ಯನಿಂದ ಒಟ್ಟಿಗೆ ಉತ್ಪನ್ನಗಳಾದ ಏಳುಋತುಗಳ ನಡುವೆ ಏಳನೆಯದನ್ನು ಒಂಟಿಯಾಗಿ ಹುಟ್ಟಿದುದನ್ನಾಗಿ ತತ್ತ್ವಜ್ಞರು ಹೇಳಿದ್ದಾರೆ. ಆರು ಋತುಗಳನ್ನು ಮಾತ್ರವೇ ಮಾಸದ್ವಯಾತ್ಮಕಗಳಾಗಿ ಸಂಚರಿಸತಕ್ಕವನ್ನಾಗಿಯೂ, ದೇವೋತ್ಪನ್ನವೆಂಬುದಾಗಿಯೂ ಕರೆದಿದ್ದಾರೆ. ಸಕಲ ಲೋಕಗಳಿಗೂ ಅಭಿಮತವಾದವೂ, ಆಯಾ ನಿಯತವಾದ ಸ್ಥಾನದಲ್ಲಿ ಪ್ರತ್ಯೇಕವಾಗಿ ಸ್ಥಾಪಿತವಾದವೂ, ರೂಪಾಂತರಗಳಿಂದ ಯುಕ್ತವಾದವೂ ಆದ ಆ ಋತುಗಳ ಬೇರೆ ಬೇರೆ ಆವಿರ್ಭಾವಗಳು ಸ್ಥಿರವಾದ ಜಗತ್ತಿನ ಶ್ರೇಯಸ್ಸಿಗಾಗಿ ಭ್ರಮಣವನ್ನು ಹೊಂದುತ್ತಿವೆ.

ಆದಿತ್ಯೋತ್ಪನ್ನವಾದವೂ, ಆದಿತ್ಯಾಧೀನವಾದವೂ ಆದ ಸಪ್ತರ್ತುಗಳ ಸ್ವರೂಪವನ್ನು ವರ್ಣಿಸಿ ಜಗದ್ವ್ಯವಹಾರಕ್ಕಾಗಿ ನಡೆಯತಕ್ಕ ಅವುಗಳ ಆವೃತ್ತಿರೂಪವಾದ ಆವಿರ್ಭಾವ ಮತ್ತು ತಿರೋಧಾನಗಳನ್ನು ಈ ಋಕ್ಕಿನಲ್ಲಿ ವಿವರಿಸಿದೆ ಮತ್ತು ಏಕಜವಾದ ಋತುವಿಗೂ ಯಮಾತ್ಮಕಗಳಾದ ಋತುಗಳಿಗೂ ಇರುವ ವ್ಯತ್ಯಾಸವನ್ನೂ ತಿಳಿಸಿದೆ. ಸಾಯಣರು ಇದೇ ಮಂತ್ರಕ್ಕೆ ತೈತ್ತಿರೀಯಾರಣ್ಯಕದಲ್ಲಿ ಕೊಂಚ ವ್ಯತ್ಯಸ್ತವಾದ ಅರ್ಥವನ್ನು ಮಾಡಿದ್ದಾರೆ. ಮೊದಲು ಇಲ್ಲಿಯ ವಿವರಣೆಯನ್ನು ತಿಳಿದು ಅನಂತರ ಆರಣ್ಯಕದ ವ್ಯತ್ಯಾಸವನ್ನು ಪರಿಶೀಲಿಸಬಹುದಾದುದರಿಂದ ಸಾಯಣರ ವ್ಯಾಖ್ಯಾನದಂತೆ ಈ ಋಕ್ಕಿನ ತಾತ್ಪರ್ಯವನ್ನು ವಿವರಿಸಲಾಗುತ್ತದೆ.

**ಸಾಕಂಜಾನಾಂ ಸಪ್ತಥಂ ಏಕಜಂ ಆಹುಃ— ಏಕಸ್ಮಾದಾದಿತ್ಯಾತ್ ಸಹೋತ್ಪನ್ನಾನಾಂ ಸಪ್ತಾನಾಮೃತೂನಾಂ ಮಧ್ಯೇ ಸಪ್ತಮಂ ಋತುಂ ಏಕೇನ ಉತ್ಪನ್ನಂ ಆಹುಃ ।** ಆದಿತ್ಯನಿಂದ ಒಟ್ಟು ಏಳು ಋತುಗಳು ಉತ್ಪನ್ನವಾಗಿ ಅವುಗಳಲ್ಲಿ ಆರು ಋತುಗಳೂ ಸಹ ಯಮಾತ್ಮಕಗಳಾಗಿ (ಮಾಸದ್ವಯಗಳಿಂದ ಕೂಡಿದವಾಗಿ) ಯೂ, ದೇವಜಗಳಾಗಿಯೂ ಇದ್ದು ಏಳನೆಯ ಋತುವು ಮಾತ್ರ ಏಕಜವಾಗಿರುತ್ತದೆ. ಅದು ಹೇಗೆಂದರೆ, **ಚೈತ್ರಾದೀನಾಂ ದ್ವಾದಶಾನಾಂ ಮಾಸಾನಾಂ ದ್ವಯದ್ವಯಮೇಲನೇನ ವಸಂತಾದ್ಯಾಃ ಷಡೃತವಃ ಭವಂತಿ । ಅಧಿಕಮಾಸೇನ ಏಕಃ ಉತ್ಪದ್ಯತೇ ಸಪ್ತಮರ್ತುಃ ।** ಚೈತ್ರಾದಿದ್ವಾದಶಮಾಸಗಳಲ್ಲಿ ಎರಡೆರಡು ಸೇರಿ ವಸಂತಾದಿ ಆರು ಋತುಗಳಾಗುತ್ತವೆ. ಅಧಿಕಮಾಸವು ಒಂದೇ ಆಗಿ ಇದು ಏಕಮಾಸಾತ್ಮಕವಾದ ಋತುವಾಗಿರುತ್ತದೆ ಎಂದು ವಿವರಿಸಿ ಅನಂತರ, **ನ ಚ ತಾದೃಶೋ ಮಾಸ ಏವ**

**ನಾಸ್ತೀತಿ ಮಂತವ್ಯಂ** । ಅಂತಹ ಋತುಜನಕವಾದ ಮಾಸವೇ ಇಲ್ಲ ಎಂಬ ಆಕ್ಷೇಪಣೆಯೇನಾದರೂ ಇದ್ದರೆ ಅದು ಸರಿಯಾದುದಲ್ಲ, ಏತಕ್ಕೆಂದರೆ,

**ತಸ್ಮಾದಾದಿತ್ಯಃ ಷಣ್ಮಾಸೋ ದಕ್ಷಿಣೇನೈತಿ ಷಡುತ್ತರೇಣೋಪಯಾಮಗೃಹೀತೋಽಸಿ ಸಗ್‌ಂಸರ್ಪೋಽಸ್ಯಗ್‌ಂಹಸ್ಪತ್ಯಾಯತ್ವೇತ್ಯಾಹಾಸ್ತಿ ತ್ರಯೋದಶೋ ಮಾಸ ಇತ್ಯಾಹುಸ್ತಮೇವ ತತ್ಪ್ರೀಣಾತಿ ॥** (ತೈ. ಸಂ. ೬-೫-೩-೪)

ಆದಿತ್ಯನು ಆರುತಿಂಗಳು ದಕ್ಷಿಣದಿಕ್ಕಿಗೂ, ಇನ್ನಾರುತಿಂಗಳು ಉತ್ತರದಿಕ್ಕಿಗೂ ಚಲಿಸುತ್ತಾನೆ. "ನೀನು **ಸಂಸರ್ಪನು** (ಅಧಿಮಾಸಕ್ಕೆ ಈ ಹೆಸರು). ನೀನು ಸಾವಲಂಬನಾಗಿದ್ದೀಯೆ. ತ್ರಯೋದಶಮಾಸವಿರುತ್ತದೆಂದು ಕಾಲವಿತ್ತುಗಳು ಹೇಳುತ್ತಾರೆ." ಆದುದರಿಂದ ಇದರಲ್ಲಿ ಅವನು ತನ್ನ ತೃಪ್ತಿಯನ್ನು ಸೂಚಿಸುತ್ತಾನೆ; ಇತ್ಯಾದಿಯಾಗಿ ಶ್ರುತಿವಾಕ್ಯಗಳಿರುವುದರಿಂದ ಇಂತಹ ಆಕ್ಷೇಪಣೆಗಳಿಗೆ ಅವಕಾಶವಿಲ್ಲವೆಂದು ಶಂಕಾಪರಿಹಾರವನ್ನು ಮಾಡಿದ್ದಾರೆ. ಆದರೆ, ಉಳಿದ ಆರು ಋತುಗಳಿಗೆ **ದೇವಜಾಃ** ಎಂಬ ವಿಶೇಷಣವಿರುವುದರ ಸಂಕೇತವೇನು ಎಂಬುದನ್ನು ವಿವರಿಸುತ್ತಾ, **ಸಪ್ತಮಾಧಾರಸ್ಯ ತ್ರಯೋದಶಸ್ಯ ಮಾಸಸ್ಯ ದೇವಭಾವಃ । "ನಿಸ್ಸೂರ್ಯೋಽಧಿಕಮಾಸೋ ಮಂಡಲಂ ತಪತೇ ರವೇಃ"** ಅಧಿಕಮಾಸವು ನಿಸ್ಸೂರ್ಯವಾಗಿರುವುದೆಂದು ತಿಳಿಸಿರುವುದರಿಂದ ಅದು ದೇವಜವಲ್ಲವೆಂಬಭಿಪ್ರಾಯವು ಎಂದು ಹೇಳಿದ್ದಾರೆ. **ಋಷಯಃ** ಎಂಬುದಕ್ಕೆ **ಗಂತಾರಃ** । ಗಮನಾತ್ಮಕವಾದುವು, ಯಾವಾಗಲೂ ಸಂಚರಿಸುವ ಸ್ವಭಾವವುಳ್ಳವು ಎಂದರ್ಥ. ಇದೇ ಮಂತ್ರಕ್ಕೆ ಸಾಯಣರು ತೈತ್ತಿರೀಯಾರಣ್ಯಕದಲ್ಲಿ ವ್ಯಾಖ್ಯಾನವನ್ನು ಮಾಡುತ್ತಾ,

**ಸಾಕಂಜಾನಾನಾಂ ಸಹೋತ್ಪನ್ನಾನಾಮಾದಿತ್ಯರಶ್ಮೀನಾಂ ಮಧ್ಯೇ ಸಪ್ತಥಂ ಯಃ ಸ ಸಪ್ತಮೋ ರಶ್ಮಿಃ "ಸೂರ್ಯೋ ಮರೀಚಿಮಾದತ್ತೆ" ಇತಿ ಪೂರ್ವತ್ರೋಕ್ತಸ್ತಂ ಸಪ್ತಮಂ ರಶ್ಮಿಂ ಏಕಜಮಾಹುರಿತರರಶ್ಮಿಭ್ಯಃ ಪೂರ್ವಮೇಕ ಏವೋತ್ಪನ್ನ ಇತ್ಯಭಿಜ್ಞಾಃ ಕಥಯಂತಿ ।**

(ತೈ. ಆ. ಸಾ. ಭಾ. ೧-೩)

ಆದಿತ್ಯನಿಂದ ಒಟ್ಟಿಗೆ ಉತ್ಪನ್ನಗಳಾದ ರಶ್ಮಿಗಳ ನಡುವೆ ಏಳನೆಯದು ಎಲ್ಲಕ್ಕಿಂತಲೂ ಮೊದಲೇ ಉತ್ಪನ್ನವಾದುದೆಂದು ಅಭಿಜ್ಞರು ಹೇಳುತ್ತಾರೆ. ಇದೇ ಅಭಿಪ್ರಾಯವನ್ನು ಈ ಮಂತ್ರಕ್ಕೆ ವ್ಯಾಖ್ಯಾನವನ್ನು ಮಾಡುವಾಗ ಭಟ್ಟಭಾಸ್ಕರರೂ ತಿಳಿಸಿದ್ದಾರೆ. **ಏಕಜಂ** ಎಂಬ ಪದಕ್ಕೆ ಅರ್ಥವನ್ನು ಹೇಳುತ್ತಾ **ಏಕತ್ವೇನ ಪ್ರಧಾನತ್ವೇನ ಜಾತಂ ಸರ್ವಸಾರಭೂತಂ ಆಹುಃ ಮಂತ್ರದೃಶಃ** । ಉಳಿದ ಎಲ್ಲಾ ರಶ್ಮಿಗಳಿಗೂ ಸಾರಭೂತವಾದ ಈ ರಶ್ಮಿಯು ಎಲ್ಲಕ್ಕಿಂತಲೂ ಪ್ರಥಮದಲ್ಲಿಯೇ ಉತ್ಪನ್ನವಾದುದು ಎಂದು ವಿವರಿಸಿದ್ದಾರೆ. ಇಬ್ಬರು ವ್ಯಾಖ್ಯಾಕರ್ತರೂ ಸಹ ತಮ್ಮ ಈ ಅಭಿಪ್ರಾಯಗಳಿಗೆ ಸರಿಯಾದ ಆಧಾರವನ್ನು ತೋರಿಸುವುದಕ್ಕಾಗಿ ಈ ಮಂತ್ರದ ಹಿಂದಿನ ಅನುವಾಕದಲ್ಲಿರುವ,

**ಏತೈರಾದಿತ್ಯಮಂಡಲಂ । ಸರ್ವೈರೇವ ವಿಧಾಸ್ಯತೇ । ಸೂರ್ಯೋ ಮರೀಚಿಮಾದತ್ತೇ । ಸರ್ವಸ್ಮಾದ್ಭುವನಾದಧಿ । ತಸ್ಯಾಃ ಪಾಕವಿಶೇಣ । ಸ್ಮೃತಂ ಕಾಲವಿಶೇಷಣಂ । ನದೀವ ಪ್ರಭವಾತ್ಕಾಚಿತ್ । ಅಕ್ಷಯ್ಯಾತ್ಸ್ಯಂದತೇ ಯಥಾ ।** (ತೈ. ಆ. ೧-೨-೧)

ಸರ್ವಸಾರಭೂತವಾದ ಈ ಮರೀಚಿಯನ್ನು ಆದಿತ್ಯನು ಗ್ರಹಿಸಿ ಸಕಲ ಭೂತಜಾತಗಳಿಗೂ ಇದರಿಂದ ವೀರ್ಯಾದಿಗಳನ್ನನು ಗ್ರಹಿಸುತ್ತಾನೆ ಎಂಬ ವಾಕ್ಯವನ್ನುದಹರಿಸಿ ಪ್ರಕೃತವಾದ (ಆರಣ್ಯಕದ) ಮಂತ್ರದಲ್ಲಿ **ಏಕದಂ 'ಮರೀಚಿಯನ್ನು'** ನಿರ್ದೇಶಿಸುತ್ತದೆಯೆಂದು ಹೇಳಿದ್ದಾರೆ. ಅನಂತರ **ಷಡುದ್ಯಮಾ ಋಷಯೋ ದೇವಜಾ ಇತಿ** । (ಋಕ್ಸಂಹಿತೆಯಲ್ಲಿ **ಷಡಿದ್ಯಮಾ**

ಎಂಬ ಪಾಠವಿದೆ) ಎಂಬ ವಾಕ್ಯಕ್ಕೆ **ಷಡ್ರಶ್ಮಯಃ ಸಪ್ತಮಂ ರಶ್ಮೀರುಪಸರ್ಜನಭೂತಾಃ** ಉಳಿದ ಆರು ರಶ್ಮಿಗಳೂ ಪ್ರಧಾನಭೂತವಾದ ಈ ಸಪ್ತಮವಾದ ರಶ್ಮಿಗೆ ಸಹಾಯಕಗಳಾಗಿ ಅದರ ಕಾರ್ಯಕ್ಕೆ ನೆರವಾಗಿವೆಯೆಂದು ತಾತ್ಪರ್ಯವೆಂದು ತಿಳಿಸಿದೆ ಮತ್ತು **ತೇ ತು ಷಣ್ಣಾಂ ಋತೂನಾಂ ಪ್ರವರ್ತಕಾಃ ।** ಈ ಆರು ರಶ್ಮಿಗಳೇ ಆರು ಋತುಗಳಿಗೂ ಹೇತುಗಳು ಎಂದಿದೆ. ಪ್ರಕೃತವಾದ ಋಕ್ಕಿನಲ್ಲಿ **ಷಳಿದ್ಯಮಾ ದೇವಜಾಃ** ಎಂಬುದಕ್ಕೆ ಸಾಯಣರು ಅರ್ಥಮಾಡುತ್ತಾ **ಇಚ್ಛಬ್ದಃ ಏವಕಾರಾರ್ಥಃ । ಷಡೇವ ಋತುವಃ ಮಾಸದ್ವಯರೂಪಾಃ । ದೇವಾದಾದಿತ್ಯಾಜ್ಜಾತಾಃ ।** ಆದಿತ್ಯನಿಂದ ಉತ್ಪನ್ನಗಳಾದ ಈ ಆರು ಋತುಗಳು ಮಾತ್ರವೇ ಮಾಸದ್ವಯಾತ್ಮಕಗಳು, ಸಪ್ತಮವಾದ ಋತುವು ಅಲ್ಲ ಎಂದು ತಾತ್ಪರ್ಯವೆಂದು ತಿಳಿಸಿದ್ದಾರೆ. ಉತ್ತರಾರ್ಧಕ್ಕೆ ಎರಡುಕಡೆಗಳಲ್ಲಿಯೂ ಒಂದೇ ವಿಧವಾದ ಅರ್ಥವನ್ನು ಹೇಳಿದೆ. ಈ ಷಡ್ರಶ್ಮಿಗಳಿಂದ ಜನ್ಯವಾದ ಷಡೃತುಗಳು ತಮ್ಮ ನಿಯಮಿತವಾದ ಸ್ಥಾನಗಳಲ್ಲೂ ಅವಿರ್ಭವಿಸಿ ತಮ್ಮ ಅಧಿಷ್ಠಾತೃವಾದ ಆದಿತ್ಯನ ಅನುಶಾಸನದಂತೆ ಜಗದ್ವ್ಯವಹಾರಗಳಿಗೆ ಸಹಾಯಕಗಳಾಗುತ್ತವೆಯೆಂದು ತಾತ್ಪರ್ಯ.

**ರೂಪಶಃ ವಿಕೃತಾನಿ — ರೂಪಭೇದೇನ ವಿವಿಧಾಕೃತಿಯುಕ್ತಾನಿ ।** ಬೇರೆಬೇರೆ ರೂಪಗಳುಳ್ಳದ್ದೆಂದರ್ಥ. ಈ ರೂಪಭೇದಗಳಿರುವುದರಿಂದಲೇ ಆಯಾ ಋತುಗಳಿಗನುಗುಣವಾದ ದಾನಾದಿಗಳನ್ನು ಮಾಡಬೇಕೆಂದು ತೈತ್ತಿರೀಯಸಂಹಿತೆಯಲ್ಲಿ ಈರೀತಿಯಲ್ಲಿ ಉಕ್ತವಾಗಿದೆಯೆಂದು ಸಾಯಣರು ಆ ವಾಕ್ಯವನ್ನುದಹರಿಸಿದ್ದಾರೆ.

**ಸರಸಮುಹವಸಂತಾಯ ಪ್ರಾಯಚ್ಛದ್ಯವಂ ಗ್ರೀಷ್ಮಾಯ ।** (ತೈ. ಸಂ. ೭-೨-೧೦-೧, ೨)

ಎಂಬಲ್ಲಿ ಆಯಾ ಋತುಗಳಿಗೆ ಅನುರೂಪವಾದ ಧಾನ್ಯಾದಿಗಳ ದಾನವನ್ನು ನಿರ್ದೇಶಿಸಿ ಋತುಗಳ ವೈರೂಪ್ಯಗಳನ್ನು ತಿಳಿಸಿದೆ. ಇಂತಹ ನಾನಾರೂಪಾತ್ಮಕಗಳಾದ ಷಡೃತುಗಳೂ ಸಹ ತಮ್ಮ ಅಧಿಷ್ಠಾತೃವಿನ ನೆರವಿಗೆ ನಿಂತು ಜಗನ್ನಿಯಾಮಕನಾದ ಅವನ ಕರ್ತವ್ಯಗಳಲ್ಲಿ ತಮ್ಮ ತಮ್ಮ ಸ್ವರೂಪಕ್ಕೆ ಅನುಗುಣವಾದ ನೆರವನ್ನು ನೀಡುತ್ತವೆಯೆಂದು **ಸ್ಥಾತ್ರೇ ರೇಜಂತೇ** ಎಂಬ ವರ್ಣನೆಯಿಂದ ತಿಳಿಸಿದೆ.

**ರೇಜಂತೇ — ಚಲಂತಿ । ಜಗದ್ವ್ಯವಹಾರಾಯ ಪುನಃಪುನರಾವರ್ತಂತೇ ಇತ್ಯರ್ಥಃ.**

---

## ಸ್ತ್ರಿಯಃ ಸತೀಸ್ತಾ ಉ ಮೇ ಪುಂಸ ಆಹುಃ ಪಶ್ಯದಕ್ಷಣ್ವಾನ್ನ ವಿ ಚೇತದಂಧಃ । ಕವಿರ್ಯಃ ಪುತ್ರಃ ಸ ಈಮಾ ಚಿಕೇತ ಯಸ್ತಾ ವಿಜಾನಾತ್ಸ ಪಿತುಷ್ಪಿತಾಸತ್ ॥ ೧೬ ॥

ನನಗೆ ಸಂಬಂಧಿಸಿದ ಈ ರಶ್ಮಿಗಳು ಉದಕರೂಪವಾದ ಗರ್ಭಧಾರಣದಿಂದ ಸ್ತ್ರೀರೂಪದಲ್ಲಿದ್ದರೂ ಸಹ, ವೃಷ್ಟಿರೂಪವಾದ ಉದಕವನ್ನು ಸೇಚನಮಾಡುವುದರಿಂದ ಅವುಗಳನ್ನೇ ಪುರುಷರೆಂಬ ನಿರ್ದೇಶದಿಂದ ಕರೆಯುತ್ತಾರೆ. ಈ ಗೂಢವಾದ ರಹಸ್ಯವನ್ನು ಜ್ಞಾನದೃಷ್ಟಿಯಿಂದ ಕೂಡಿದ ಮಹಾತ್ಮನು ಮಾತ್ರ ತಿಳಿಯುತ್ತಾನೆ. ಆ ಜ್ಞಾನದೃಷ್ಟಿಯಿಲ್ಲದೆ ಅಂಧನಂತಿರುವವನು ತಿಳಿಯಲಾರನು. ಯಾವನು ಮೇಧಾವಿಯಾದ ಪುತ್ರನಾಗಿದ್ದಾನೆಯೋ ಅವನೇ ಈ ರಹಸ್ಯವನ್ನು ತಿಳಿಯುತ್ತಾನೆ. ಯಾವನು ಅವೆಲ್ಲವನ್ನೂ ಪ್ರತಿಯೊಂದು ವಸ್ತುವಿನ ವಿಶೇಷಜ್ಞಾನದೊಡನೆ ತಿಳಿಯುತ್ತಾನೆಯೋ ಅವನು ಜಗತ್ಪಾಲಕನಾದ ರಶ್ಮಿಗಳಿಗೂ ಪಿತೃವಾದ ಆದಿತ್ಯನೇ ಆಗಿರುತ್ತಾನೆ.

ಅಧಿದೈವತವೂ, ಅಧ್ಯಾತ್ಮಪರವಾದುದೂ ಆದ ಎರಡು ವಿಧವಾದ ಅರ್ಥಗಳೂ ಈ ಮಂತ್ರದಲ್ಲಿ ಅಂತರ್ಗತವಾಗಿರುವುದೆಂದು ಸಾಯಣರು ಇದಕ್ಕೆ ಎರಡು ವಿಧವಾದ ಅರ್ಥವನ್ನೂ ಮಾಡಿದ್ದಾರೆ. ಮೊದಲನೆಯದಾಗಿ ಲೌಕಿಕವಾದ ಅರ್ಥವನ್ನು ವಿವರಿಸುತ್ತಾ ರಶ್ಮಿಗಳ ಭೌತಿಕವಾದ ಸ್ವರೂಪವನ್ನು ವಿವರಿಸಿದ್ದಾರೆ.

**ಶೀರ್ಷ್ಣಃ ಕ್ಷೀರಂ ದುಹ್ರತೇ ಗಾವೋ ಅಸ್ಯ ವವ್ರಿಂ ವಸಾನಾ ಉದಕಂ ಪದಾಪುಃ ।**
(ಋ. ಸಂ. ೧-೧೬೪-೭)

ಇತ್ಯಾದಿಯಾಗಿ ಹಿಂದೆ ಆದಿತ್ಯರಶ್ಮಿಗಳು ಉದಕವನ್ನು ವರ್ಷಿಸುವುದನ್ನೂ ಅವೇ ಆದಿತ್ಯರಶ್ಮಿಗಳು ಪೃಥ್ವಿಯಿಂದ ಉದಕವನ್ನು ಹೀರಿ ಪುನಃ ತಮ್ಮಲ್ಲಿ ಧಾರಣಮಾಡುವುದೂ ವರ್ಣಿತವಾಗಿದೆ. ಆದುದರಿಂದ ಈ ರಶ್ಮಿಗಳಲ್ಲಿ ಸ್ತ್ರೀಪ್ರಕೃತಿಯೂ ಪುರುಷಪ್ರಕೃತಿಯೂ ಮಿಶ್ರಿತವಾಗಿವೆ. ಉದಕರೂಪವಾದ ಗರ್ಭವನ್ನು ಧರಿಸಿದಾಗ ಸ್ತ್ರೀರೂಪವೂ, ಅವೇ ವೃಷ್ಟಿಸೇಚನೆಯನ್ನು ಮಾಡುವಾಗ ಪುಂರೂಪವೂ ಪ್ರಕಟಿತವಾಗುತ್ತದೆ. ಇವು ಸ್ತ್ರೀರೂಪವನ್ನು ಪ್ರಕಟಿಸುವಾಗ ಅತ್ಯಂತ ಆಕರ್ಷಕವಾಗಿಯೂ, ಪುಂರೂಪವನ್ನು ಪ್ರಕಟಿಸುವಾಗ ಅತ್ಯಂತ ಶಕ್ತಿಯುತವಾಗಿಯೂ ಇರುತ್ತವೆ. ಇದರ ಸ್ವರೂಪವನ್ನು ಕೇವಲ ಭೌತಿಕವಾದ ಚಕ್ಷುಸ್ಸಿನಿಂದ ಗ್ರಹಿಸಲು ಸಾಧ್ಯವಿಲ್ಲ. ಇದಕ್ಕೆ ಅಲೌಕಿಕವಾದ ದೃಷ್ಟಿಯನ್ನು ಪಡೆಯುವ ಶಕ್ತಿಯು ಅತ್ಯವಶ್ಯವಾಗಿರುತ್ತದೆ. ಅದುದರಿಂದಲೇ **ಅಕ್ಷಣ್ವಾನ್ ಪಶ್ಯತ್** ಎಂದು ದರ್ಶನದ ಶಕ್ತಿಯನ್ನು ಹೇಳಿದೆ. ಈ ರಶ್ಮಿಗಳ ಸ್ವರೂಪವನ್ನು ವಿವರಿಸುವುದಾದರೆ, ಸಕಲವಿಧವಾದ ಸೃಷ್ಟಿಗೂ, ಸ್ಥಿತಿಗೂ ಕಾರಣವಾಗಿ ಸಕಲವನ್ನೂ ತಮ್ಮ ಸ್ವರೂಪದಿಂದಲೇ ವ್ಯಾಪಿಸುತ್ತವೆ.

**ಅಥಾದಿತ್ಯ ಉದಯನ್ಯತ್ಪ್ರಾಚೀಂ ದಿಶಂ ಪ್ರವಿಶತಿ ತೇನ ಪ್ರಾಚ್ಯಾನ್ಪ್ರಾಣಾನ್ರಶ್ಮಿಷು ಸಂನಿಧತ್ತೇ । ಯದ್ದಕ್ಷಿಣಾಂ ಯತ್ಪ್ರತೀಚೀಂ ಯದುದೀಚೀಂ ಯದಧೋ ಯದೂರ್ಧ್ವಂ ಯದಂತರಾ ದಿಶೋ ಯತ್ಸರ್ವಂ ಪ್ರಕಾಶಯತಿ ತೇನ ಸರ್ವಾನ್ ಪ್ರಾಣಾನ್ರಶ್ಮಿಷು ಸಂನಿಧತ್ತೇ ।**
(ಪ್ರಶ್ನ. ಉ. ೧-೬)

ಈ ಆದಿತ್ಯರಶ್ಮಿಗಳು ವಿಶ್ವದ ನಾನಾ ದಿಕ್ಕುಗಳಿಗೂ, ಅವಾಂತರ ದಿಕ್ಕುಗಳಿಗೂ ಪ್ರಸರಿಸಿ ಎಲ್ಲವನ್ನೂ ಬೆಳಗಿಸಿ ವಿಶ್ವದ ಎಲ್ಲಾ ವಸ್ತುಗಳನ್ನೂ ತಮ್ಮಲ್ಲೇ ಅಡಕಮಾಡಿಗೊಳ್ಳುತ್ತವೆ. ಸಮಸ್ತವನ್ನೂ ತನ್ನ ಗರ್ಭದಲ್ಲೇ ಅಡಗಿಸಿ ಆದಿತ್ಯನು ತಾನೇ ಎಲ್ಲಾ ರೂಪವುಳ್ಳವನೂ ಆಗಿರುವನು.

**ವಿಶ್ವರೂಪಂ ಹರಿಣಂ ಜಾತವೇದಸಂ ಪರಾಯಣಂ ಜ್ಯೋತಿರೇಕಂ ತಪಂತಂ ।**
**ಸಹಸ್ರರಶ್ಮಿಃ ಶತಧಾ ವರ್ತಮಾನಃ ಪ್ರಾಣಃ ಪ್ರಜಾನಾಮುದಯತ್ಯೇಷ ಸೂರ್ಯಃ ॥** (ಪ್ರಶ್ನ. ೧-೮)

ವಿಶ್ವರೂಪನೂ, ಸರ್ವಜ್ಞನೂ, ಪರಾಯಣನೂ, ಜಗತ್ತಿಗೆಲ್ಲಾ ಏಕಮಾತ್ರಜ್ಯೋತಿಯೂ, ಸಹಸ್ರಾರು ರಶ್ಮಿಯನ್ನು ಹೊಂದಿರುವವನೂ, ಆದ ಆದಿತ್ಯನು ಪ್ರಜೆಗಳೆಲ್ಲರಿಗೂ ಏಕಮಾತ್ರಪ್ರಾಣರೂಪನಾಗಿ ಉದಯಿಸುತ್ತಾನೆಂಬಿವೇ ಮುಂತಾದ ವರ್ಣನೆಗಳಲ್ಲಿ ಜಗತ್ತಿಗೆ ಅವನೇ ಪಿತೃವೂ, ಮಾತೃವೂ ಆಗಿ ಜಗತ್ತನ್ನು ಧರಿಸುವವನೂ, ಗರ್ಭದಲ್ಲಿರುವ ಜಗತ್ತನ್ನು ಸೃಷ್ಟಿಸುವವನೂ ಆಗಿದ್ದಾನೆ. ಇದನ್ನೇ ಆಧ್ಯಾತ್ಮಿಕದೃಷ್ಟಿಯಿಂದ ವಿವರಿಸುತ್ತಾ ಸಾಯಣರು,

**ಯಾಃ ಇದಾನೀಂ ಸ್ತ್ರಿಯಃ ಸತೀಃ ಸ್ತ್ರೀತ್ವಂ ಪ್ರಾಪ್ತಾ ಆಹುರ್ಲೌಕಿಕಾಃ ತಾನ್ ಉ ತಾನೇವ ಮೇ ಮಹ್ಯಂ ಪುಂಸಃ ಪುರುಷಾಃ ಪ್ರತಿಪಾದಯಂತಿ ತತ್ತ್ವಜ್ಞಾಃ ॥**

ಯಾವ ಈ ರಶ್ಮಿತತ್ತ್ವವನ್ನು ಸ್ತ್ರೀರೂಪಿಯೆಂದು ಲೌಕಿಕರು ಹೇಳುತ್ತಾರೆಯೋ ಅದನ್ನೇ ತತ್ತ್ವಜ್ಞರು ಪುರುಷರೂಪಿಯೆಂದು ಹೇಳುತ್ತಾರೆ ಎಂಬರ್ಥವೆಂದು ವಿವರಿಸಿದ್ದಾರೆ.

**ಕಥಮು ನ್ಯಸ್ಯ ಅನ್ಯಭಾವಃ ಉಚ್ಯತೇ । ಏಕಸ್ಯೈವ ನಿರಸ್ತಸಮಸ್ತೋಪಾಧಿಕಸ್ಯ ಆತ್ಮನಸ್ತದ್ದೇಹಾವಸ್ಥಾನಮಾತ್ರೇಣ ತತ್ತದ್ವ್ಯಪದೇಶೋಪಪತ್ತೇಃ ।** ಹಾಗಾದರೆ ಸ್ತ್ರೀರೂಪಿಯಾದ ತತ್ವಕ್ಕೆ ಪುಂರೂಪಿಯೆಂದು ಹೇಳುವುದೇ ಹೇಗೆ ಎಂಬ ಆಕ್ಷೇಪವು ಸಾಧ್ಯವಾಗುವುದಾದರೆ, ಸಮಸ್ತವಾದ ಉಪಾಧಿಗಳಿಂದಲೂ ರಹಿತವಾಗಿ ಸಮಸ್ತ ರೂಪವನ್ನೂ ತನ್ನ ಸಂಕಲ್ಪಮಾತ್ರದಿಂದಲೇ ವಹಿಸುವ ಶಕ್ತಿಯುಳ್ಳ ಈ ಆದಿತತ್ತ್ವದ ಮಹಿಮೆಯ ವಿಷಯದಲ್ಲಿ ಇಂತಹ ಆಕ್ಷೇಪಗಳಿಗೆ ಅವಕಾಶವು

ಇಲ್ಲವೆಂದು ಸಮಾಧಾನವನ್ನು ಹೇಳಿದ್ದಾರೆ. ಅದ್ವಿತೀಯನಾಗಿದ್ದು ಅನಂತರ ಸೃಷ್ಟಿಕಾಮನಾದಮೇಲೆ ತನ್ನ ಇಚ್ಛಾಮಾತ್ರದಿಂದಲೇ ಸ್ತ್ರೀರೂಪವನ್ನು ಧರಿಸಿ ತಾನೇ ಸ್ತ್ರೀಪುಂರೂಪಗಳೆರಡನ್ನೂ ವಹಿಸಿ ಜಗತ್ಸೃಷ್ಟಿಯನ್ನುಂಟುಮಾಡಿದ ವರ್ಣನೆಯು ಬೃಹದಾರಣ್ಯಕೋಪನಿಷತ್ತಿನಲ್ಲಿ ಈರೀತಿಯಲ್ಲಿ ವರ್ಣಿತವಾಗಿದೆ.

**ಆತ್ಮೈವೇದಮಗ್ರ ಆಸೀತ್ಪುರುಷವಿಧಃ ಸೋಽನುವೀಕ್ಷ್ಯ ನಾನ್ಯದಾತ್ಮನಃ । ಸ ವೈ ನೈವೇ ರೇಮೇ ತಸ್ಮಾದೇಕಾಕೀ ನ ರಮತೇ ಸ ದ್ವಿತೀಯಮೈಚ್ಛತ್ । ಸ ಹೈತಾವಾನಾಸ ಯಥಾ ಸ್ತ್ರೀಪುಮಾಂಸೌ ಸಂಪರಿಷ್ವಕ್ತೌ ಸ ಇಮಮೇವಾತ್ಮಾನಂ ದ್ವೇಧಾಪಾತಯತ್ತತಃ ಪತಿಶ್ಚ ಪತ್ನೀ ಚಾಭವತಾಂ ತಸ್ಮಾದಿದಮರ್ಧಬೃಗಲಮಿವ ಸ್ವ ಇತಿ ಹ ಸ್ಮಾಹ ಯಾಜ್ಞವಲ್ಕ್ಯಸ್ತಸ್ಮಾದಯ-ಮಾಕಾಶಃ ಸ್ತ್ರಿಯಾ ಪೂರ್ಯತ ಏವ ತಾಂ ಸಮಭವತ್ತತೋ ಮನುಷ್ಯಾ ಅಜಾಯಂತ ॥**

(ಬೃ. ಉ. ೧-೪-೧ ರಿಂದ ೩)

ಆದಿಯಲ್ಲಿ ಈ ವಿಶ್ವಾತ್ಮನು ಅದ್ವಿತೀಯನಾಗಿದ್ದು ತನ್ನನ್ನುಳಿದ ಇನ್ನಾವ ಎರಡನೆಯ ವಸ್ತುವನ್ನೂ ಕಾಣಲಿಲ್ಲ. ಅದರಿಂದ ತನಗೆ ಹರ್ಷವಿಲ್ಲದೇ ತನಗೆ ಹರ್ಷವನ್ನುಂಟುಮಾಡತಕ್ಕ ಎರಡನೆಯ ವಸ್ತುವೊಂದನ್ನು ಸೃಷ್ಟಿಸಬೇಕೆಂದಿಚ್ಛಿಸಿದನು. ಅನಂತರ ಸ್ತ್ರೀಪುರುಷರಿಬ್ಬರೂ ಒಟ್ಟಿಗೆ ಸೇರಿದರೆ ಎಷ್ಟು ವಿಸ್ತೃತವಾಗುವುದೋ ಅಷ್ಟು ವಿಸ್ತೃತವಾಗಿ ಬೆಳೆದನು. ಒಡನೆಯೇ ರೂಪದ್ವಯವನ್ನು ಹೊಂದಿ ಪತಿಪತ್ನೀರೂಪದಲ್ಲಿ ಪರಿಣಮಿಸಿದನು. "ಆದುದರಿಂದಲೇ ಈ ಆಕಾಶವೆಲ್ಲವೂ ಸ್ತ್ರೀರೂಪದಿಂದ ವ್ಯಾಪ್ತವಾಗಿದೆ. ವಿಶ್ವಾತ್ಮನು ಈ ಸ್ತ್ರೀರೂಪದೊಡನೆ ಸಂಗಮಿಸಲು ಮಾನವಾದಿಗಳ ಸೃಷ್ಟಿಯಾಯಿತು" ಎಂದು ಯಾಜ್ಞವಲ್ಕ್ಯರು ವರ್ಣಿಸಿದ್ದಾರೆ. ಹೀಗೆಯೇ ಇತರ ಜೀವಿಗಳ ಸೃಷ್ಟಿಯನ್ನೂ ವರ್ಣಿಸುತ್ತಾ, ಗೋವೃಷಭಾದಿರೂಪಗಳನ್ನೂ ಪಡೆದು ಗವಾದಿಗಳನ್ನು ಸೃಷ್ಟಿಸಿದ ವಿವರವನ್ನೂ ಹೇಳಿದ್ದಾರೆ. ಇದೇ ರೀತಿಯಲ್ಲಿ ಪ್ರಶ್ನೋಪನಿಷತ್ತಿನಲ್ಲಿಯೂ ಸಹ ವಿಶ್ವಾತ್ಮನು ಸ್ತ್ರೀಪುಂರೂಪಗಳೆರಡನ್ನೂ ಧರಿಸಿ ಜಗತ್ಸೃಷ್ಟಿಯನ್ನು ಮುಂದುವರಿಸಿದ ವಿವರವನ್ನು ಈರೀತಿ ಹೇಳಿದೆ.

**ಪ್ರಜಾಕಾಮೋ ವೈ ಪ್ರಜಾಪತಿಃ ಸ ತಪೋಽತಪ್ಯತ ಸ ತಪಸ್ತಪ್ತ್ವಾ ಸ ಮಿಥುನಮು-ತ್ಪಾದಯತೇ ರಯಿಂ ಚ ಪ್ರಾಣಂ ಚೇತ್ಯೇತೌ ಮೇ ಬಹುಧಾ ಪ್ರಜಾಃ ಕರಿಷ್ಯತ ಇತಿ ।** (ಪ್ರಶ್ನ ೧-೪)

ಪ್ರಜಾಪತಿಯು ಪ್ರಜಾಕಾಮನಾಗಿ ತಪಸ್ಸಿನ ಮಹಿಮೆಯಿಂದ ಸ್ತ್ರೀರೂಪಿಯಾದ ಪ್ರಕೃತಿಯನ್ನೂ (ರಯಿಂ) ಪುಂರೂಪಿಯಾದ, ಪ್ರಾಣವನ್ನೂ (ಪ್ರಾಣಂ) ಸೃಷ್ಟಿಸಿ, ಆ ಮಿಥುನದಿಂದ ಪ್ರಜಾವೃದ್ಧಿಯನ್ನುಂಟುಮಾಡಿದನು ಎಂದು ಪ್ರಾರಂಭಿಸಿ ಅನಂತರ ಆ ಮೂಲತತ್ತ್ವಗಳ ವಿಸ್ತೃತಿಯಿಂದ ವಿಶ್ವವೆಲ್ಲವೂ ಅದೇ ಅಯಿ ಮತ್ತು ಪ್ರಾಣರೂಪಗಳಲ್ಲಿ ಪರಿಣಮಿತವಾದವು ಎಂದು ವಿವರಿಸಿದೆ. ಆ ಸ್ವರೂಪವನ್ನೇ ವಿವರಿಸುತ್ತಾ ಪ್ರಶ್ನೋಪನಿಷತ್ತಿನಲ್ಲಿ,

**ಮಾಸೋ ವೈ ಪ್ರಜಾಪತಿಃ...............ಅನ್ನಂ ವೈ ಪ್ರಜಾಪತಿಸ್ತತೋ ಹ ವೈ ತದ್ರೇತ-ಸ್ತಸ್ಮಾದಿಮಾಃ ಪ್ರಜಾಃ ಪ್ರಜಾಯಂತ ಇತಿ । ತದ್ಯೇ ಹ ವೈ ತತ್ಪ್ರಜಾಪತಿವ್ರತಂ ಚರಂತಿ ತೇ ಮಿಥುನಮುತ್ಪಾದಯಂತೇ । ತೇಷಾಮೇವೈಷ ಬ್ರಹ್ಮ ಲೋಕೋ ಯೇಷಾಂ ತಪೋ ಬ್ರಹ್ಮಚರ್ಯಂ ಯೇಷು ಸತ್ಯಂ ಪ್ರತಿಷ್ಠಿತಂ ।** (ಪ್ರಶ್ನ. ೧-೧೨ ರಿಂದ ೧೫)

ಇತ್ಯಾದಿ ವಾಕ್ಯಗಳಿಂದ ಆದಿತತ್ತ್ವವು ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿರುವಂತೆ ಸ್ತ್ರೀರೂಪಿಯಾಗಿಯೂ ಪುಂರೂಪಿಯಾಗಿಯೂ ಆವಿರ್ಭವಿಸಿ ಲೋಕದ ಸೃಷ್ಟ್ಯಾದಿವ್ಯವಹಾರಗಳಿಗೆ ಹೇತುವಾಯಿತೆಂದು ವರ್ಣಿಸಿದೆ. ಪ್ರಜಾಪತಿ, ಆದಿತ್ಯ,

ಸಂವತ್ಸರ ಇವುಗಳೆಲ್ಲವೂ ಒಂದೇ ತತ್ತ್ವದ ಬೇರೆಬೇರೆ ಹೆಸರುಗಳೆಂದು ತಿಳಿಯಬೇಕು. ಆದುದರಿಂದಲೇ **ಸಂವತ್ಸರೋ ವೈ ಪ್ರಜಾಪತಿಃ ; ಮಾಸೋ ವೈ ಪ್ರಜಾಪತಿಃ । ; ಅಹೋರಾತ್ರೋ ವೈ ಪ್ರಜಾಪತಿ ; ಅನ್ನಂ ವೈ ಪ್ರಜಾಪತಿಃ** (ಪ್ರಶ್ನ. ೧) ಇತ್ಯಾದಿಯಾಗಿ ಜಗದ್ವ್ಯಾಪಿಯಾದ ಪ್ರಜಾಪತಿಯನ್ನು ವರ್ಣಿಸಿದೆ. ಈ ತತ್ತ್ವವನ್ನು ಶ್ವೇತಾಶ್ವತರೋಪನಿಷತ್ತಿನಲ್ಲಿ ವರ್ಣಿಸುತ್ತಾ,

**ತ್ವಂ ಸ್ತ್ರೀ ತ್ವಂ ಪುಮಾನಸಿ ತ್ವಂ ಕುಮಾರ ಉತ ವಾ ಕುಮಾರೀ ।**
**ತ್ವಂ ಜೀರ್ಣೋ ದಂಡೇನ ವಂಚಸಿ ತ್ವಂ ಜಾತೋ ಭವಸಿ ವಿಶ್ವತೋಮುಖಃ ॥**

(ಶ್ವೇ. ಉ. ೪-೩)

ವಿಶ್ವತೋಮುಖನಾದ ನೀನು ಸ್ತ್ರೀರೂಪನಾಗಿಯೂ ಪುರೂಪಿಯಾಗಿಯೂ ಇದೇ ರೀತಿಯಲ್ಲಿ ಕುಮಾರಕುಮಾರಿಯರ ರೂಪವುಳ್ಳವನಾಗಿಯೂ ಇದ್ದೀಯೆ ಎಂದು ಪ್ರಶಂಸಿಸಿದೆ.

**ಅಕ್ಷಣ್ವಾನ್ ಪಶ್ಯತ್**— **ಜ್ಞಾನದೃಷ್ಟ್ಯುಪೇತಃ ಕಶ್ಚಿನ್ಮಹಾನ್ ಪಶ್ಯತಿ ।** ಜ್ಞಾನದೃಷ್ಟಿಯಿಂದ ಕೂಡಿದ ಮಹಾತ್ಮನು ಮಾತ್ರ ನೋಡಬಲ್ಲನು. ಇತರರಿಂದ ಸಾಧ್ಯವಿಲ್ಲ ಎಂಬುದಕ್ಕೆ ಒಂದು ಉದಾಹರಣೆಯನ್ನು ತೋರಿಸಿ ಸ್ತ್ರೀರೂಪಿಯೂ ಪುಂರೂಪಿಯೂ ಆದ ಈ ತತ್ತ್ವವನ್ನು ಅರಿತ ಇಂದ್ರಾದಿಗಳನ್ನು ಪ್ರಶಂಸಿಸುವ ಸನ್ನಿವೇಶವು ಕೇನೋಪನಿಷತ್ತಿನಲ್ಲಿ ಈರೀತಿಯಲ್ಲಿ ಉಕ್ತವಾಗಿ ಸೌಂದರ್ಯಯುಕ್ತವಾದ ಈ ರಹಸ್ಯವನ್ನು ತಿಳಿಸಿದೆ.

**ಅಥೇಂದ್ರಮಬ್ರುವನ್ಮಘವನ್ನೇತದ್ವಿಜಾನೀಹಿ ಕಿಮೇತದ್ಯಕ್ಷಮಿತಿ ತಥೇತಿ ತದಭ್ಯದ್ರವ-ತ್ತಸ್ಮಾತ್ತಿರೋದಧೇ । ಸತಸ್ಮಿನ್ನೇವಾಕಾಶೇಸ್ತ್ರಿಯಮಾಜಗಾಮ ಬಹುಶೋಭಮಾನಾಮುಮಾ-ಗ್ಂ ಹೈಮವತೀಂ ತಾಗ್ಂ ಹೋವಾಚ ಕಿಮೇತದ್ಯಕ್ಷಮಿತಿ ।** (ಕೇನ. ೩-೧೧-೧೨)

ದೇವತೆಗಳೆಲ್ಲರೂ ಇಂದ್ರನಿಗೆ ಈ ಯಕ್ಷದ ಸ್ವರೂಪವನ್ನು ತಿಳಿಯಬೇಕೆಂದು ಹೇಳಲು ಇಂದ್ರನು ಅದರ ಸಮೀಪಕ್ಕೆ ಹೋದನು. [ಅಗ್ನ್ಯಾದಿಗಳು ಇದರ ಸ್ವರೂಪವನ್ನು ಪೂರ್ಣವಾಗಿ ಅರಿಯದೇ ಹೋದ ವಿಷಯವನ್ನೂ ಇದರ ರಹಸ್ಯವನ್ನು ತಿಳಿಯಿಸಲು ದೇವತೆಗಳಿಗೂ ಆಗದ ವಿಷಯವನ್ನೂ ತಿಳಿಸಲು ಈ ಸನ್ನಿವೇಶವನ್ನು ಹಿಂದೆ ಪ್ರಕೃತವಾದ ಸೂಕ್ತದಹ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ] ಆಗ ಇಂದ್ರನು ಅಂತರಿಕ್ಷದಲ್ಲಿ ಅತ್ಯಂತ ಆಕರ್ಷಕವಾದುದೂ ಮತ್ತು ಪ್ರಕಾಶಮಾನವಾದುದೂ ಆದ ಒಂದು ಸ್ತ್ರೀವ್ಯಕ್ತಿಯನ್ನು ನೋಡಿದನು. ಇದು ಯಾವುದೆಂದು ಪ್ರಶ್ನಿಸಲು,

**ಸಾ ಬ್ರಹ್ಮೇತಿ ಹೋವಾಚ ಬ್ರಹ್ಮಣೋ ವಾ ಏತದ್ವಿಜಯೇ ಮಹೀಯಧ್ವಮಿತಿ ।**

(ಕೇನ. ೪-೧)

ಆ ಸ್ತ್ರೀವ್ಯಕ್ತಿಯೇ ಬ್ರಹ್ಮನು. ಅದರ ಮಹಿಮೆಯಿಂದಲೇ ದೇವಾದಿಗಳ ಜಯವು ಎಂದು ತಿಳಿಸಿ ಅನಂತರ ಸುಂದರಾತ್ಮಕವಾದ ಆ ಬ್ರಹ್ಮತತ್ತ್ವವನ್ನು ತಿಳಿದ ಇಂದ್ರಾದಿಗಳ ಮಹತ್ತ್ವವನ್ನು ಪ್ರಶಂಸಿಸುತ್ತಲೂ ಇತರ ಸಾಧಾರಣವಾದ ವ್ಯಕ್ತಿಗಳಿಗೆ ಅದು ಸಾಧ್ಯವಿಲ್ಲವೆಂತಲೂ ತಿಳಿಸುತ್ತಲೂ ಸಹ,

**ತಸ್ಮಾದ್ವಾ ಏತೇ ದೇವಾ ಅತಿತರಾಮಿವಾನ್ಯಾನ್ದೇವಾನ್ಯದಗ್ನಿರ್ವಾಯುರಿಂದ್ರಸ್ತೇ ಹ್ಯೇನನ್ನೇದಿಷ್ಠಂ ಪಸ್ಪೃಶುಸ್ತೇ ಹ್ಯೇನತ್ಪ್ರಥಮೋ ವಿದಾಂಚಕಾರ ಬ್ರಹ್ಮೇತಿ ॥**

(ಪ್ರಶ್ನ. ೪-೨)

ಈ ಆದಿತತ್ತ್ವದ ಸ್ವರೂಪವನ್ನು ತಿಳಿಯಲು ಅದನ್ನು ಸಮೀಪಿಸಿ ಅದರ ಮಹಿಮೆಯನ್ನು ಉಳಿದವರಿಗಿಂತಲೂ ಮೊದಲು ತಿಳಿದುದರಿಂದ ಅಗ್ನಿ ಇಂದ್ರ, ವಾಯು ಈ ದೇವತೆಗಳು ಉಳಿದ ಇತರ ದೇವತೆಗಳಿಗಿಂತಲೂ ಶ್ರೇಷ್ಠರು. ಅಗ್ನಿ, ವಾಯು ಮತ್ತು ಇಂದ್ರರಲ್ಲೂ ಸಹ ಇಂದ್ರನು ಈ ಬ್ರಹ್ಮತತ್ತ್ವವನ್ನು ತಿಳಿದಿದ್ದುದರಿಂದ ಇಂದ್ರನೇ ಅಧಿಕನು ಎಂಬುದಾಗಿ ಇದರ ರಹಸ್ಯವನ್ನು ತಿಳಿಯುವ ಶಕ್ತಿಯನ್ನು ಬಹಳವಾಗಿ ಪ್ರಶಂಸಿಸಿ ಅಲೌಕಿಕವಾದ ಜ್ಞಾನದೃಷ್ಟಿಯುಳ್ಳವರಿಗೆ ಮಾತ್ರ ಇದು ಸಾಧ್ಯ ವೆಂದು ತಿಳಿಸಿದೆ. ಈ ಆತ್ಮಜ್ಞಾನವಿಲ್ಲದವನು ಕೇವಲ ಅಂಧನಾಗಿರುವನು.

**ಅಂಧಂ ತಮಃ ಪ್ರವಿಶಂತಿ ಯೋಽವಿದ್ಯಾಮುಪಾಸತೇ ।**
**ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾಂ ರತಾಃ ॥**

(ಬೃ. ಉ. ೪-೪-೧೦)

ಈ ಪರಮಾತ್ಮನ ಸ್ವರೂಪವನ್ನು ತಿಳಿಯಲಾಗದೇ ಕೇವಲ ಅವಿದ್ಯೆಯನ್ನೇ ಅವಲಂಬಿಸುವವರು ಅಂಧಕಾರದ ಗುಹೆ ಯನ್ನು ಪ್ರವೇಶಿಸುತ್ತಾರೆ.

**ಅನಂದಾ ನಾಮ ತೇ ಲೋಕಾ ಅಂಧೇನ ತಮಸಾ ವೃತಾಃ ।**
**ತಾಂಸ್ತೇ ಪ್ರೇತ್ಯಾಭಿಗಚ್ಛಂತ್ಯವಿದ್ವಾಂಸೋಽಬುಧೋ ಜನಾಃ ॥**

(ಬೃ. ಉ. ೪-೪-೧೧)

ಈ ಅಂಧಕಾರರೂಪವಾದ ಗುಹೆಯನ್ನು ಪ್ರವೇಶಿಸಿದವರಿಗೆ ಯಾವ ವಿಧವಾದ ಆನಂದವೂ ಇರುವುದಿಲ್ಲ. ಮೃತಿಯನ್ನು ಹೊಂದಿದನಂತರವೂ ಸಹ ಇವರಿಗೆ ಇದೇ ಗತಿಯು ಲಭಿಸುವುದು. ಇತ್ಯಾದಿಯಾಗಿ ಈ ವಿಶ್ವತತ್ತ್ವದ ರಹಸ್ಯವನ್ನು ತಿಳಿಯದ ಅಜ್ಞಾನಿಗಳಿಗೆ ಲಭಿಸತಕ್ಕ ಸ್ಥಾನವನ್ನು ವರ್ಣಿಸಿದೆ. ಅಂತಹವರನ್ನೇ ಅಂಧರೆಂದು ಪ್ರಕೃತವಾಗ ಋಕ್ಕಿನಲ್ಲಿಯೂ ವರ್ಣಿಸಿದೆ. ಸ್ತ್ರೀಪುಂರೂಪಿಯಾದ ಈ ತತ್ತ್ವವನ್ನು ತಿಳಿಯಲು ಜ್ಞಾನಚಕ್ಷುಸ್ಸಿನ ಆವಶ್ಯಕತೆಯನ್ನು ತಿಳಿಸುವುದಕ್ಕಾಗಿ ಈ ವರ್ಣನೆಯಿದೆ.

ಇಂತಹ ಮಹಾತತ್ತ್ವವನ್ನು ತಿಳಿದವನು ಎಲ್ಲರಿಗಿಂತಲೂ ಅಧಿಕನಾಗುತ್ತಾನೆ ಎಂದು ತಿಳಿಸಲು, **ಯಸ್ತಾ ವಿಜಾ- ನಾತ್ಸ ಪಿತುಷ್ಪಿತಾಸತ್** । ಅಂತಹ ಜ್ಞಾನಿಯು ಪಿತೃವಿಗಿಂತಲೂ ಅಧಿಕವಾದ ಪೂಜ್ಯತೆಯುಳ್ಳವನಾಗುತ್ತಾನೆಂದು ತಿಳಿಸಿದೆ. ಇದೇ ಅಂಶವನ್ನು ಪ್ರಶ್ನೋಪನಿಷತ್ತಿನಲ್ಲಿ ಸ್ತುತಿಸುತ್ತಾ,

**ತೇ ತಮರ್ಚಯಂತಸ್ತ್ವಂ ಹಿ ನಃ ಪಿತಾ ಯೋಽಸ್ಮಾಕಮವಿದ್ಯಾಯಾಃ ಪರಂ ಪಾರಂ- ತಾರಯಸೀತಿ । ನಮಃ ಪರಮ ಋಷಿಭ್ಯೋ ನಮಃ ಪರಮಋಷಿಭ್ಯಃ ॥**

(ಪ್ರಶ್ನ. ಉ. ೬-೮)

ಅನಂತರ **ಪಿಪ್ಪಲಾದ**ನಿಂದ ಉಪದೇಶವನ್ನು ಪಡೆದವರೆಲ್ಲರೂ ಸಹ ಅವನನ್ನು ಪೂಜಿಸುತ್ತಾ "ನೀನು ನಮ್ಮ ಪಿತೃವು. ನಮಗೆ ಜ್ಞಾನವನ್ನುಪದೇಶಿಸಿ ನಮ್ಮನ್ನು ಅಜ್ಞಾನದ ಸಾಗರದಿಂದ ದಾಟಿಸಿ ಜ್ಞಾನದ ಎಲ್ಲೆಗೆ ಸೇರಿಸಿದ್ದೀಯೆ. ಆದುದರಿಂದ ಪಿತೃವಿನಂತೆ ಪೂಜ್ಯನು" ಎಂಬುದಾಗಿ ತಮ್ಮ ಭಕ್ತಿಯನ್ನು ಸಲ್ಲಿಸುತ್ತಾರೆಂದು ತಿಳಿಸಿ ಜ್ಞಾನಿಗಳಾದ ಪರಮಋಷಿಗಳಿಗೆ ಪೂಜ್ಯತೆ ಯನ್ನು ಸಲ್ಲಿಸಿದೆ. ಋಷಿಯಾದವನು ಮಾತ್ರ ಜ್ಞಾನಿಯು; ಜ್ಞಾನಿಗಳೆಲ್ಲರೂ ಋಷಿಗಳು ಎಂದಭಿಪ್ರಾಯವು. ಅದನ್ನೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಕವಿರ್ಯಃ ಪುತ್ರಃ ಸ ಇಮಾ ಚಿಕೇತ** ಎಂಬ ವಾಕ್ಯದಿಂದ ತಿಳಿಸಿದೆ.

ಇಂತಹ ಜ್ಞಾನಿಯು ಪಿತೃಗಳಿಗೂ ಪಿತೃವಾಗಿರುವನು ಎಂದರೆ ಪೂಜ್ಯನಾಗಿರುವನು ಎಂದು ತಿಳಿಸಲು ಸಾಯಣರು **ತಾಂಡಕಬ್ರಾಹ್ಮಣ**ದಿಂದ ಒಂದು ಉದಾಹರಣೆಯನ್ನು ಕೊಟ್ಟಿರುತ್ತಾರೆ.

ಶಿಶುರ್ವಾ ಅಂಗಿರಸೋ ಮಂತ್ರಕೃತಾಂ ಮಂತ್ರಕೃದಾಸೀತ್ ಸ ಪಿತ್ರ್ನ್ ಪುತ್ರಕಾ ಇತ್ಯಾಮಂತ್ರಯತ । (ತಾಂ. ಬ್ರಾ. ೧೩-೩-೨೪)

ಅತ್ಯಂತ ಕಿರಿಯುವನಾಗಿದ್ದ ಆಂಗಿರಸ್ಸು ಮಂತ್ರಕೃತ್ತುಗಳಿಗಿಂತಲೂ ಅಧಿಕವಾದ ಮಂತ್ರಕೃತ್ತಾಗಿದ್ದನು. ಅವನು ಪಿತೃಗಳನ್ನೂ ಸಹ ಪುತ್ರರೆಂದೇ ಸಂಭೋಧಿಸುತ್ತಿದ್ದನು. ಆಗ,

ತೇ ದೇವಾನಪೃಚ್ಛಂತ ತೇ ದೇವಾ ಅಬ್ರುವನ್ನೇಷ ವಾವ ಪಿತಾ ಯೋ ಮಂತ್ರಕೃತ್ ॥

ಆ ಪಿತೃಗಳು ದೇವತೆಗಳನ್ನು ಸಮೀಪಿಸಿ ಇದು ಸರಿಯೇ ಎಂದು ಕೇಳಲು, ಆಗ ದೇವತೆಗಳು ಇವನು ನಿಜವಾದ ಮಂತ್ರಕೃತ್ತಾದುದರಿಂದ ಇವನೇ ಪಿತೃವಿನಂತೆ ಪೂಜ್ಯನು ಎಂದುತ್ತರಕೊಟ್ಟರೆಂಬ ಸನ್ನಿವೇಶವನ್ನು ಉದಾಹರಿಸಿದೆ. ಇದೇ ಮಂತ್ರಕ್ಕೆ ನಿರುಕ್ತದ ಪರಿಶಿಷ್ಟದಲ್ಲಿ ವ್ಯಾಖ್ಯಾನಮಾಡುತ್ತಾ,

ಸ್ತ್ರಿಯ ಏವೈತಾ ಶಬ್ದಸ್ಪರ್ಶರೂಪರಸಗಂಧಹಾರಿಣ್ಯಸ್ತಾ ಅಮುಂ ಪುಂಶಬ್ದೇನ ನಿರಾಹಾರಃ ಪ್ರಾಣ ಇತಿ ಪಶ್ಯನ್ ಕಷ್ಟಾನ್ನವಿಜಾನಾತ್ಯಂಧಃ ಕವಿರ್ಯಃ ಪುತ್ರಃ ಸ ಇಮಾ ಜಾನಾತಿ, ಯಃ ಸ ಇಮಾ ಜಾನಾತಿ ಸ ಪಿತುಷ್ಪಿತಾಸದಿತ್ಯಾತ್ಮಗತಿಮಾಚಷ್ಟೇ । (ನಿ. ೧೪-೨೦)

ಎಂದು ವಿವರಿಸಿದೆ. ಇದರ ಅರ್ಥವೂ ಮೇಲೆ ಹೇಳಿದಂತೆಯೇ ಇರುತ್ತದೆ.



**ಅವಃ ಪರೇಣ ಪರ ಏನಾವರೇಣ ಪದಾ ವತ್ಸಂ ಬಿಭ್ರತೀ ಗೌರುದಸ್ಥಾತ್ । ಸಾ ಕದ್ರೀಚೀ ಕಂ ಸ್ವಿದರ್ಧಂ ಪರಾಗಾತ್ಕ್ವ ಸ್ವಿತ್ಸೂತೇ ನಹಿ ಯೂಥೇ ಅಂತಃ ॥ ೧೭ ॥**

ಗೋರೂಪಿಯಾದ ಈ ಆಹುತಿಯು ವತ್ಸರೂಪನಾದ ಅಗ್ನಿಯನ್ನು ತನ್ನ ಅಧಃ ಪ್ರದೇಶದಲ್ಲಿ ತನ್ನ ಮುಂಭಾಗದ ಕಾಲುಗಳಿಂದಲೂ ಮತ್ತು ಮೇಲ್ಭಾಗದಲ್ಲಿ ತನ್ನ ಹಿಂಭಾಗದ ಕಾಲುಗಳಿಂದಲೂ ಹಿಡಿದುಕೊಂಡು ಸೂರ್ಯಾಭಿಮುಖವಾಗಿ ಹತ್ತುತ್ತದೆ. ಆಹುತಿರೂಪವಾದ ಆ ಗೋವು ಎಲ್ಲಿ ಹೋಯಿತು? ಯಾವ ಪುರುಷನನ್ನುದ್ದೇಶಿಸಿ ಅವನಿಗೆ ಸಂಪತ್ಪ್ರಸೂತಿಯನ್ನುಂಟುಮಾಡುವುದಕ್ಕಾಗಿ ಅರ್ಧಮಾರ್ಗದಿಂದಲೇ ಹಿಂತಿರುಗಿತು? ಯಾವ ಪ್ರದೇಶದಲ್ಲಿ ಫಲವನ್ನು ಪ್ರಸವಿಸುತ್ತದೆ? ಎಂಬುದನ್ನು ನಿಷ್ಕೃಷ್ಟವಾಗಿ ಹೇಳಲಾಗುವುದಿಲ್ಲ. ಆದರೆ ತನ್ನ ಗುಂಪಿನ ಪಶುಗಳ ನಡುವೆ ಖಂಡಿತವಾಗಿಯೂ ಸುರಿಸುವುದಿಲ್ಲ.

ಅಗ್ನಿಯಲ್ಲಿ ಅರ್ಪಿಸಿದ ಆಹುತಿಯನ್ನು ಇಲ್ಲಿ ಗೋರೂಪದಿಂದ ಸ್ತುತಿಸಿದೆ ಅಥವಾ **ಆದಿತ್ಯರಶ್ಮಿಸಮೂಹ ಏವ ಗೋರೂಪೇಣ ಸ್ತೂಯತೇ ।** ಆದಿತ್ಯನ ರಶ್ಮಿಸಮೂಹವೇ ಗೋರೂಪದಿಂದ ಸ್ತುತವಾಗಿದೆ ಎಂದು ಎರಡು ವಿಧವಾದ ತಾತ್ಪರ್ಯವನ್ನು ಸಾಯಣರು ಹೇಳಿದ್ದಾರೆ.

**ಗೌಃ**—ಈ ಪದಕ್ಕೆ **ಪೃಥಿವೀ,** ಪಶು ಇತ್ಯಾದ್ಯರ್ಥಗಳಾಗುವುದೆಂದೂ ಆ ಅರ್ಥಗಳಲ್ಲಿ ಈ ಶಬ್ದದ ನಿರ್ವಚನವನ್ನೂ ಹಿಂದೆ ತಿಳಿಸಿದೆ. ಪ್ರಕೃತದಲ್ಲಿ ಈ ಪದಕ್ಕೆ ಯಜ್ಞಾಹುತಿ ಅಥವಾ ಸೂರ್ಯರಶ್ಮಿ ಎಂಬರ್ಥವಾಗುವುದು ಸಹಜವಾಗಿದೆ. " **ಅಗ್ನೌ**

**ಪ್ರಾಸ್ತಾಹುತಿಸ್ಸಮ್ಯಗಾದಿತ್ಯಮುಪತಿಷ್ಠತೇ"** ಎಂಬ ಸ್ಮೃತಿವಚನವನ್ನು ಭಾಷ್ಯಕಾರರು ಉದಹರಿಸಿ ಅಗ್ನಿಯಲ್ಲಿ ಅರ್ಪಿಸಿದ ಆಹುತಿಯೂ ಆದಿತ್ಯನನ್ನೇ ಸೇರುವುದೆಂದು ಹೇಳಿದುದರಿಂದ ರಶ್ಮಿರೂಪದಲ್ಲಿಯೇ ಪರಿಣಮಿಸುತ್ತದೆಂದು ತಾತ್ಪರ್ಯವು.

**ಆದಿತ್ಯೋಽಪಿ ಗೌರುಚ್ಯತೇ । ಸರ್ವೇಽಪಿ ರಶ್ಮಯೋ ಗಾವ ಉಚ್ಯಂತೇ ॥** (ನಿ. ೨-೬)

ಎಂದು ನಿರುಕ್ತಕಾರರು ಈ ಪದದ ಅರ್ಥವನ್ನು ವಿವರಿಸುವುದಕ್ಕಾಗಿ,

**ತಾ ವಾಂ ವಾಸ್ತೂನ್ಯುಶ್ಮಸಿ ಗಮಧ್ಯೈ ಯತ್ರ ಗಾವೋ ಭೂರಿಶೃಂಗಾ ಅಯಾಸಃ ।**
**ಅತ್ರಾಹ ತದುರುಗಾಯಸ್ಯ ವೃಷ್ಣಃ ಪರಮಂ ಪದಮವ ಭಾತಿ ಭೂರಿ ॥**
(ಋ. ಸಂ. ೧-೧೫೪-೬)

ಎಂಬ ಋಕ್ಕನ್ನುದಹರಿಸಿ ಬಹುಶೃಂಗಗಳುಳ್ಳವೂ, ಅಯಾಸವೂ ಆದ ರಶ್ಮಿಗಳನ್ನು ವರ್ಣಿಸಿರುವುದನ್ನು ತೋರಿಸಿ ಆದಿತ್ಯರಶ್ಮಿಗಳ ಪರ್ಯಾಯಪದವೆಂದು ತಿಳಿಸಿದ್ದಾರೆ.

ಇಂತಹ ಆದಿತ್ಯರಶ್ಮಿಗೂ ಅಥವಾ ಆದಿತ್ಯರಶ್ಮಿಯೊಂದಿಗೆ ತಾದಾತ್ಮ್ಯವನ್ನು ಹೊಂದುವ ಯಜ್ಞಾಹುತಿಗೂ ಯಜ್ಞಕರ್ತನಾದ ಯಜಮಾನನಿಗೂ ಇರುವ ಸಂಬಂಧವನ್ನು ಇಲ್ಲಿ ತಿಳಿಸಿದೆ. ಆದಿತ್ಯರಶ್ಮಿಯನ್ನು ಗೋವಿಗೂ, ಯಜಮಾನನನ್ನು ವತ್ಸಕ್ಕೂ ಹೋಲಿಸಿದೆ. ಒಟ್ಟಿನಲ್ಲಿ ಆದಿತ್ಯನಿಗೂ ಯಜ್ಞಕರ್ತನಿಗೂ ಇರುವ ಸಂಬಂಧವನ್ನೂ ತಿಳಿಸಿದಂತಾಗುತ್ತದೆ.

ಇಲ್ಲಿ ಗೋಶಬ್ದಕ್ಕೆ ಯಜ್ಞಾಹುತಿಯ ಪರವಾಗಿ ಅರ್ಥಮಾಡಿದರೆ ಆಗ ಕ್ವ ಸ್ಮಿತ್ ಸೂತೇ ಇತ್ಯಾದಿ ವರ್ಣನೆಗಳಿಂದ ಯಜ್ಞಕರ್ತನಿಗೆ ಲಭಿಸಬಹುದಾದ ಅನ್ನಾದಿಸಂಪತ್ತುಗಳೇ ಲಕ್ಷ್ಯಗಳಾಗುತ್ತವೆ. ಅಥವಾ ಆದಿತ್ಯರಶ್ಮಿಯ ಪರವಾಗಿ ಅರ್ಥಮಾಡಿದರೆ ಆಗ ಯಜಮಾನನಿಗೆ ಲಭಿಸತಕ್ಕ ಉತ್ತಮವಾದ ದಿವ್ಯಲೋಕಪದವಿಯು ಲಕ್ಷ್ಯವಾಗುತ್ತದೆ. ಈ ಎರಡು ಅರ್ಥಗಳೂ ಶತಪಥಬ್ರಾಹ್ಮಣದಿಂದ ಉದಾಹೃತವಾಗಿರುವ ಕೆಳಗಿನ ವಾಕ್ಯದಲ್ಲಿ ನಿರ್ದಿಷ್ಟವಾಗಿವೆಯೆಂದು ಹೇಳಬಹುದು.

**ಸ ಉದೀಕ್ಷತೇ । ಸ್ವಯಂಭೂರಸಿ ಶ್ರೇಷ್ಠೋ ರಶ್ಮಿರಿತ್ಯೇಷ ವೈ ಶ್ರೇಷ್ಠೋ ರಶ್ಮಿರ್ಯತ್ಸೂರ್ಯಸ್ತಸ್ಮಾದಾಹ ಸ್ವಯಂಭೂರಸಿ ಶ್ರೇಷ್ಠೋ ರಶ್ಮಿರಿತಿ ವರ್ಚೋದಾ ಅಸಿ ವರ್ಚೋ ಮೇ ದೇಹೀತಿ ತ್ವೇವಾಹಂ ಬ್ರವೀಮೀತಿ ಹ ಸ್ಮಾಹ ಯಾಜ್ಞವಲ್ಕ್ಯಸ್ತದ್ಧ್ಯೇವ ಬ್ರಾಹ್ಮಣೇನೇಷ್ಟವ್ಯಂ ಯದ್ಬ್ರಹ್ಮವರ್ಚಸೀ ಸ್ಯಾದಿತ್ಯುತೋ ಹ ಸ್ಮಾಹೌಪೋದಿತೇಯ ಏಷ ವಾವ ಮಹ್ಯಂ ಗಾ ದಾಸ್ಯತಿ ಗೋದಾ ಗಾ ಮೇ ದೇಹೀತ್ಯೇವಂ ಯಂ ಕಾಮಂ ಕಾಮಯತೇ ಸೋಽಸ್ಮೈ ಕಾಮಃ ಸಮೃಧ್ಯತೇ ।** (ಶ. ಬ್ರಾ. ೧-೯-೩-೧೬)

ಆದಿತ್ಯನು ಅತ್ಯಂತ ಶ್ರೇಷ್ಠವಾದ ರಶ್ಮಿಯೂ ಸ್ವಯಂಭುವೂ, ವರ್ಚೋದನೂ ಆಗಿದ್ದಾನೆ. ಆದುದರಿಂದ "ನನಗೂ ವರ್ಚಸ್ಸನ್ನು ಕೊಡು" ಎಂದು ಪ್ರಾರ್ಥಿತನಾಗಿದ್ದಾನೆ. ಇಲ್ಲಿ ಎರಡು ವಿಧವಾದ ಪ್ರಾರ್ಥನೆಯಿದೆ. ಯಾಜ್ಞವಲ್ಕ್ಯನು "**ವರ್ಚೋದಾ ಅಸಿ ವರ್ಚೋಮೇ ದೇಹಿ**" "ನೀನು ವರ್ಚಸ್ವಿಯಾಗಿದ್ದೀಯೆ; ನನಗೂ ವರ್ಚಸ್ಸನ್ನು ಕೊಡು" ಎಂದು ಪ್ರಾರ್ಥಿಸಿದ್ದಾನೆ. ಔಪೋದಿತೇಯನು "**ಏಷ ವಾವ ಮಹ್ಯಂ ಗಾ ದಾಸ್ಯತಿ ಗೋದಾ ಗಾಮೇ ದೇಹೀತ್ಯೇವಂ**" ಈ ಆದಿತ್ಯನು **ಗೋವನ್ನು** ದಾನಮಾಡುವವನಾಗಿದ್ದಾನೆ ಆದುದರಿಂದ ಎಲೈ ಆದಿತ್ಯನೇ, ನನಗೂ **ಗೋವನ್ನು** ಕೊಡು ಎಂದು ಪ್ರಾರ್ಥಿಸಿದ್ದಾನೆ. ಆದುದರಿಂದ ಯಾವ ಯಾರು ಪ್ರಾರ್ಥನೆಯನ್ನು ಮಾಡಿಕೊಂಡರೂ ಆಯಾ ಪ್ರಾರ್ಥನೆಯನ್ನು ಆದಿತ್ಯನು ನೆರವೇರಿಸುತ್ತಾನೆ ಎಂದು ತಿಳಿಸಲು "**ಯಂ ಯಂ ಕಾಮಂ ಕಾಮಯತೇ ಸೋಽಸ್ಮೈ ಕಾಮಃ ಸಮೃ**

ಧ್ಯತೇ ” ಎಂದು ತಿಳಿಸಿದೆ. ಇಲ್ಲಿ ಹೇಳಿರುವ ಎರಡನೆಯ ಅರ್ಥವನ್ನು ವಿವರಿಸುವ ವಾಕ್ಯವು ತೈತ್ತಿರೀಯಸಂಹಿತೆಯಿಂದ ಶತಪಥದಲ್ಲಿ ಉದಾಹೃತವಾಗಿದೆಯೆಂದು ತೋರುತ್ತದೆ.

ಸಗ್ಂಶ್ರವಾ ಹ ಸೌವರ್ಚನಸಸ್ತುಮಿಂಜಮೌಪೋದಿತಿಮುವಾಚ ಯತ್ಸತ್ರಿಣಾಗ್ಂ ಹೋತಾ ಭೂಃ ಕಾಮಿಡಾಮುಪಾಹ್ವಥಾ ಇತಿ ತಾಮುಪಾಹ್ವ ಇತಿ ಹೋವಾಚ ಯಾ ಪ್ರಾಣೇನ ದೇವಾನ್ದಾಧಾರ ವ್ಯಾನೇನ ಮನುಷ್ಯಾನಪಾನೇನ ಪಿತೄನಿತಿ ಛಿನತ್ತಿ ಸಾ ನ ಛಿನತ್ತೀ೩ ಇತಿ ಛಿನತ್ತೀತಿ ಹೋವಾಚ ಶರೀರಂ ವಾ ಅಸ್ಯೈ ತದುಪಾಹ್ವಥಾ ಇತಿ ಹೋವಾಚ ಗೌರ್ವೈ ॥

(ತೈ. ಸಂ. ೧-೭-೨-೧)

ಎಂಬ ಸಂಹಿತಾವಾಕ್ಯದಲ್ಲಿ ಸಂಶ್ರವಸ್ಸಿಗೂ, ಔಪೋದಿತಿಗೂ ನಡೆದ ಸಂಭಾಷಣೆಯಿದೆ. ಇದರಲ್ಲಿ ಔಪೋದಿತಿಯು ಮೇಲೆ ವಿವರಿಸಿದಂತೆ ಪಾರ್ಥಿವವಾದ ಭೂಮಿಯನ್ನೇ ಪ್ರಕಾಶಪಡಿಸುತ್ತಾನೆಂದು ಶತಪಥದಲ್ಲಿ ತಿಳಿಸಿದೆ. ಪ್ರಕೃತದಲ್ಲಿ ಬೇಕಾದುದು ಆದಿತ್ಯರಶ್ಮಿರೂಪವಾದ ಗೋವಿನಿಂದ ಲೌಕಿಕವಾದ ಸಂಪತ್ತನ್ನೂ ಪಡೆಯಬಹುದು. ಅಥವಾ ಯಾಜ್ಞವಲ್ಕ್ಯನು ಇಚ್ಛಿಸಿದಂತೆ ಆಧ್ಯಾತ್ಮಿಕವಾದ ಸಂಪತ್ತನ್ನೂ ಪಡೆಯಬಹುದೆಂಬುದು ವಿಶದವಾಗಿದೆ. ಇದನ್ನೇ ಮುಂಡಕೋಪನಿಷತ್ತಿನಲ್ಲಿ ವಿವರಿಸುತ್ತಾ,

ಏತೇಷು ಯಶ್ಚರತೇ ಭ್ರಾಜಮಾನೇಷು ಯಥಾಕಾಲಂ ಚಾಹುತಯೋ ಹ್ಯಾದದಾಯನ್ ।
ತಂ ನಯಂತ್ಯೇತಾಃ ಸೂರ್ಯಸ್ಯ ರಶ್ಮಯೋ ಯತ್ರ ದೇವಾನಾಂ ಪತಿರೇಕೋಽಧಿವಾಸಃ ॥

(ಮು. ಉ. ೧-೨-೫)

ಈ ರಶ್ಮಿಗಳು ಪ್ರಕಾಶಮಾನವಾಗಿರುವಾಗಿ ಆಯಾ ಕಾಲಾನುಗುಣವಾದ ಆಹುತಿಯನ್ನು ಅರ್ಪಿಸಿದರೆ ಆ ಯಜಮಾನನನ್ನು ದೇವತೆಗಳಿಗೆಲ್ಲಾ ಅಧಿಪತಿಯಾದ ಪರಮಪುರುಷನು ಇರತಕ್ಕ ಪ್ರದೇಶಕ್ಕೆ ಈ ಆದಿತ್ಯರಶ್ಮಿಗಳು ಒಯ್ಯುತ್ತವೆ. ಅಷ್ಟೇ ಅಲ್ಲದೇ

ಏಹ್ಯೇಹೀತಿ ತಮಾಹುತಯಃ ಸುವರ್ಚಸಃ ಸೂರ್ಯಸ್ಯ ರಶ್ಮಿಭಿರ್ಯಜಮಾನಂ ವಹಂತಿ ।
ಪ್ರಿಯಾಂ ವಾಚಮಭಿವದಂತ್ಯೋಽರ್ಚಯಂತ್ಯ ಏಷ ವಃ ಪುಣ್ಯಃ ಸುಕೃತೋ ಬ್ರಹ್ಮಲೋಕಃ ॥

(ಮು. ಉಂ. ೧-೨-೬)

ಶ್ರೇಷ್ಠವಾದ ಈ ಆಹುತಿಗಳು ಯಜಮಾನನನ್ನು ಪ್ರೀತಿಯಿಂದ “ ಬಾ, ಬಾ ” ಎಂದು ಕರೆಯುತ್ತಲೂ ಮತ್ತು ಸೂರ್ಯರಶ್ಮಿಗಳೊಂದಿಗೆ ಅವನನ್ನು ಬ್ರಹ್ಮಲೋಕಕ್ಕೆ ಒಯ್ಯುತ್ತಲೂ “ ಇದು ನಿನ್ನ ಸತ್ಕರ್ಮಗಳಿಂದ ಗಳಿಸಿದ ಬ್ರಹ್ಮಲೋಕವು ” ಎಂದು ಪ್ರಿಯವಾಕ್ಯನ್ನು ಹೇಳುತ್ತಲೂ ಅವನನ್ನು ಪ್ರಶಂಸಿಸುತ್ತಲೂ ಕರೆದುಕೊಂಡು ಹೋಗುತ್ತವೆ ಎಂಬುದಾಗಿ ಆದಿತ್ಯರಶ್ಮಿಯು ಉತ್ತಮವಾದ ಯಜ್ಞಕರ್ತನಿಗೆ ಮಾಡತಕ್ಕ ಉಪಕಾರವನ್ನು ವರ್ಣಿಸಿದೆ. ಸಾಯಣರು ಮುಂಡಕೋಪನಿಷತ್ತಿನ ಈ ವಾಕ್ಯವನ್ನುದಹರಿಸಿ ಪ್ರಕೃತವಾದ ಋಕ್ಕಿನಲ್ಲಿಯೂ ಅದೇ ಭಾವವು ಹೇಳಲ್ಪಟ್ಟಿದೆಯೆಂದು ತಿಳಿಸಿದ್ದಾರೆ.

ವತ್ಸಂ ಬಿಭ್ರತಿ—ವತ್ಸಸ್ಥಾನೀಯಮಗ್ನಿಂ ಧಾರಯಂತೀ । ವತ್ಸರೂಪದಲ್ಲಿರುವ ಅಗ್ನಿಯನ್ನು ಧರಿಸುತ್ತಾ ಎಂದರ್ಥ.

ಅಬ್ಜಾ ಗೋಜಾ ಇತ್ಯಬ್ಜಾಶ್ಚ ಗೋಜಾಶ್ಚ । (ಶ. ಬ್ರಾ. ೬-೭-೩-೧೧)

ಇತ್ಯಾದಿಯಾಗಿ ವರ್ಣಿಸಿ ಅಗ್ನಿಯು ಗೋಜ ಎಂದರೆ ಗೋವಿನಿಂದ ಉತ್ಪನ್ನನಾದವನು ಎಂದು ತಿಳಿಸಿದೆ. ಮಾತೃವಾದ ಗೋವು ವತ್ಸನಾದ ಅಗ್ನಿಯನ್ನು ಧರಿಸುತ್ತಾ ಊರ್ಧ್ವಾಭಿಮುಖವಾಗಿ ಹತ್ತುತ್ತದೆಂದು ಇಲ್ಲಿ ವರ್ಣಿಸಿದೆ. ವತ್ಸನೆಂಬ ವಿಶೇಷಣವೂ ಸಂಬೋಧನವೂ ಅಗ್ನಿಯ ಸಹಜವಾದ ಗುಣವನ್ನು ತೋರಿಸುತ್ತಾ ಅನೇಕ ಕಡೆಗಳಲ್ಲಿ ಉಪಯೋಗಿಸಲ್ಪಟ್ಟಿದೆ.

**ಗರ್ಭೋ ಯೋ ಅಪಾಂ ಗರ್ಭೋ ವನಾನಾಂ ಗರ್ಭಶ್ಚ ಸ್ಥಾತಾಂ ಗರ್ಭಶ್ಚರಥಾಂ ।**

(ಋ. ಸಂ. ೧-೭೦-೨)

**ಕ ಇಮಂ ವೋ ನಿಣ್ಯಮಾ ಚಿಕೇತ ವತ್ಸೋ ಮಾತೄರ್ಜನಯತ ಸ್ವಧಾಭಿಃ ।**
**ಬಹ್ವೀನಾಂ ಗರ್ಭೋ ಅಪಸಾಮುಪಸ್ಥಾನ್ಮಹಾನ್ಕವಿರ್ನಿಶ್ಚರತಿ ಸ್ವಧಾವಾನ್ ॥**

(ಋ. ಸಂ. ೧-೯೫-೪)

ಇತ್ಯಾದಿ ವರ್ಣನೆಗಳಲ್ಲಿ ವಿದ್ಯುದ್ರೂಪದ ಅಗ್ನಿಯು ಆದಿತ್ಯಕಿರಣರೂಪಗಳಾದ ಅಪ್ಪಿನಲ್ಲಿ ಗರ್ಭಪ್ರಾಯನಾಗಿದ್ದು ಔಪಸಾಗ್ನಿರೂಪದಿಂದ ಆದಿತ್ಯನಾಗಿ ಪರಿವರ್ತಿಸಿ ಅಂತರಿಕ್ಷದಿಂದ ಹೊರಕ್ಕೆ ಬರುತ್ತಾನೆಂದೂ ಇದೇ ವತ್ಸರೂಪನಾದ ಅಗ್ನಿಯು **ಸ್ವಧಾವಾನ್** ಆಗಿದ್ದಾನೆಂದೂ ತಿಳಿಸಿದೆ.

**ಅಸ್ಮೇ ವತ್ಸಂ ಪರಿ ಷಂತಂ ನವಿಂದನ್ನಿಚ್ಛಂತೋ ವಿಶ್ವೇ ಅಮೃತಾ ಅಮೂರಾಃ**

(ಋ. ಸಂ. ೧.೭೨-೨)

ಇತ್ಯಾದಿ ಋಕ್ಕುಗಳಲ್ಲೂ ವತ್ಸರೂಪನಾದ ಅಗ್ನಿಗೂ ದೇವಮಾನವಾದಿಗಳೆಲ್ಲರಿಗೂ ಇರುವ ಸಂಬಂಧವನ್ನು ತಿಳಿಸಿದೆ. ಇಂತಹ ವತ್ಸರೂಪನಾದ ಅಗ್ನಿಯನ್ನು ಮಾತೆಯಾದ **ಗೋವು** ಧರಿಸಿದಳೆಂದು ತಾತ್ಪರ್ಯ. ಹೀಗೆ ಅಗ್ನಿಪರವಾದ ಅರ್ಥವು ಒಂದು ವಿಧ, ಎರಡನೆಯದಾಗಿ,

**ಗೌಃ ಉಕ್ತಲಕ್ಷಣಾ ರಶ್ಮಿರೂಪಾ ಗೌಃ ವತ್ಸಂ ವತ್ಸವದ್ರಕ್ಷಣೀಯಂ ಯಜಮಾನಂ ಉಕ್ತಕ್ರಮೇಣ ಬಿಭ್ರತೀ ಉದಸ್ಥಾತ್ ।**

ರಶ್ಮಿರೂಪಳಾದ ಗೋವು ತನ್ನ ವತ್ಸಪ್ರಾಯನಾದ ಯಜಮಾನನನ್ನು ಎತ್ತಿಕೊಂಡು ಹಾರುತ್ತಾ ಅದೃಶ್ಯಳಾಗಿ ಆದಿತ್ಯನಲ್ಲಿಗೆ ಹೋದಳು ಎಂದು ಅರ್ಥಮಾಡಬಹುದೆಂದು ತಿಳಿಸಿದ್ದಾರೆ. ಈ ಅಭಿಪ್ರಾಯವನ್ನು "ಕಂ ನಯಂತ್ಯೇತಾಃ..............." ಇತ್ಯಾದಿ ವಾಕ್ಯಗಳಲ್ಲಿ ವಿವರಿಸಿರುವುದನ್ನು ಮೇಲೆ ತಿಳಿಸಿದೆ.



## ಅವಃ ಪರೇಣ ಪಿತರಂ ಯೋ ಅಸ್ಯಾನುವೇದ ಪರ ಏನಾವರೇಣ । ಕವೀಯಮಾನಃ ಕ ಇಹ ಪ್ರ ವೋಚದ್ದೇವಂ ಮನಃ ಕುತೋ ಅಧಿಪ್ರಜಾತಂ ॥ ೧೮ ॥

ಅಧೋಭಾಗದಲ್ಲಿರುವವನೂ, ಈ ಪೃಥ್ವಿಯ ಪಾಲಕನೂ ಆದ ಅಗ್ನಿಯನ್ನು ಊರ್ಧ್ವಭಾಗದಲ್ಲಿರುವ ಆದಿತ್ಯನೊಡಗೂಡಿದವನಾಗಿಯೂ ಮತ್ತು ಮೇಲುಭಾಗದಲ್ಲಿರುವ ಆದಿತ್ಯನನ್ನು ಕೆಳಗಡೆ ಇರುವ ಈ ಅಗ್ನಿಯೊಡನೆ ಬೆರೆತವನನ್ನಾಗಿಯೂ ಸಹ ಯಾವನು ತಿಳಿಯುತ್ತಾನೆಯೋ ಅಂತಹ ಕ್ರಾಂತದರ್ಶಿಯಂತಿರುವ ಯಾವನು ತಾನೇ ಈ ಪೃಥ್ವಿಯಲ್ಲಿ ಆ ಆದಿತ್ಯಾದಿಗಳ ಸಂಬಂಧವನ್ನು ವಿಶದಪಡಿಸಿ ತಿಳಿಸಬಲ್ಲನು? ಅಲೌಕಿಕವಾದುದೂ, ದೇವವಿಷಯವಾದುದೂ ಆದ ಪ್ರಜ್ಞೆಯುಳ್ಳ ಮನಸ್ಸು ಅತಿಶಯವಾದ ರೀತಿಯಲ್ಲಿ ಯಾವ ಅದೃಷ್ಟವಿಶೇಷದಿಂದ ಉತ್ಪನ್ನವಾಗಿದೆ?

ಅಗ್ನಿಗೂ ಆದಿತ್ಯನಿಗೂ ಇರತಕ್ಕ ಸಂಬಂಧವನ್ನು ಈ ಋಕ್ಕಿನಲ್ಲಿ ತಿಳಿಸಿದೆ. ಈ ಸಂಬಂಧವನ್ನು ಎರಡು ವಿಧವಾಗಿ ತೋರಿಸಬಹುದು. ಮೊದಲನೆಯದಾಗಿ, ಆದಿತ್ಯಾಗ್ನಿಗಳ ಪರಸ್ಪರ ವಿನಿಮಯರೂಪವಾದ ಲೋಕರಕ್ಷಣಾಕ್ರಮದಲ್ಲಿ ಇವರಿಬ್ಬರಿಗೂ ಒಂದೇ ತತ್ತ್ವದ ಎರಡಂಶಗಳೆಂದೂ, ಎರಡನೆಯದಾಗಿ ಬಾಹ್ಯವಾದ ಆವಿರ್ಭಾವದಿಂದ ಇಬ್ಬರೂ ಬೇರೆಬೇರೆ ರೂಪದಿಂದ ಕಾಣಿಸಿಕೊಂಡರೂ ಸಹ ಇಬ್ಬರಿಗೂ ಐಕ್ಯವೇ ಇರುತ್ತದೆಂದೂ ಅರ್ಥವಾಗುತ್ತದೆ. ಇವರ ಸ್ಥಾನಗಳನ್ನು ಅವ, ಪರ ಎಂಬ ಪದಗಳಿಂದ ತಿಳಿಸಿದೆ. **ಅವ** ಎಂದರೆ ಅಧೋಭಾಗವೆಂದೂ, **ಪರ**ವೆಂದರೆ ಊರ್ಧ್ವಭಾಗದಲ್ಲಿರುವ ಅಂತರಿಕ್ಷವೆಂದೂ ಇಲ್ಲಿ ಅರ್ಥಮಾಡಬಹುದು. ಉತ್ಕರ್ಷಾಪಕರ್ಷಗಳೆಂಬ ಅರ್ಥವನ್ನು ಮಾಡುವುದು ಅಷ್ಟು ಉಚಿತವಾಗಿರುವುದಿಲ್ಲ. Wilson ಎಂಬ ಪಂಡಿತನು,

He who knows ihe protector of this world as the inferior associated with the Superior, and the superior associated with the inferior ...... ...... ...... ...... ......".
ಎಂದು **ಅವ**ಶಬ್ದಕ್ಕೆ ಅಪಕೃಷ್ಟವಾದುದೆಂದೂ, **ಪರ**ಶಬ್ದಕ್ಕೆ ಉತ್ಕೃಷ್ಟವಾದುದೆಂದೂ ಅರ್ಥಮಾಡಿದ್ದಾನೆ. ಆದಿತ್ಯಾಗ್ನಿಗಳಿಬ್ಬರೂ ಒಂದೇ ತತ್ತ್ವದ ಎರಡಂಶಗಳಾದುದರಿಂದ ಈ ಅರ್ಥವನ್ನು ಹೇಳುವುದು ಅನುಚಿತವಾಗಬಹುದು. ನಿರುಕ್ತದಲ್ಲಿ ಅಗ್ನಿಯ ಮಹತ್ತ್ವವನ್ನು ವರ್ಣಿಸುವಾಗ ಈ ಅರ್ಥಕ್ಕೆ ಸಮರ್ಥನೆಯು ದೊರೆಯುವುದಿಲ್ಲ.

**ಮೂರ್ಧಾ ಭುವೋ ಭವತಿ ನಕ್ತಮಗ್ನಿಸ್ತತಃ ಸೂರ್ಯೋ ಜಾಯತೇ ಪ್ರಾತರುದ್ಯನ್ ।**
**ಮಾಯಾಮೂ ತು ಯಜ್ಞಿಯಾನಾಮೇತಾಮಪೋ ಯತ್ತೂರ್ಣಿಶ್ಚರತಿ ಪ್ರಜಾನನ್ ॥**

(ಋ. ಸಂ. ೧೦-೮೮-೬)

ಈ ವೈಶ್ವಾನರಾಗ್ನಿಯು ತನ್ನ ಅಲೌಕಿಕವಾದ ಶಕ್ತಿಯಿಂದ ಸಕಲ ಭೂತಗಳಿಗೂ ಪ್ರಧಾನಭೂತನಾಗಿ ರಾತ್ರಿಕಾಲದಲ್ಲಿ ಅಗ್ನಿರೂಪದಿಂದಲೂ, ಪ್ರಾತಃಕಾಲದಲ್ಲಿ ಸೂರ್ಯನ ರೂಪದಿಂದಲೂ ಪ್ರಕಾಶಿಸುತ್ತಾ ತನ್ನ ಲೋಕರಕ್ಷಣಾಕಾರ್ಯವನ್ನು ನಿರ್ವಹಿಸುತ್ತಾನೆ ಎಂಬ ಇದೇ ಅಂಶವನ್ನು ವಿವರಿಸುತ್ತಾ, ಪುನಃ ನಿರುಕ್ತದಲ್ಲಿ,

**ಸ್ತೋಮೇನ ಹಿ ದಿವಿ ದೇವಾಸೋ ಅಗ್ನಿಮಜೀಜನಞ್ಛಕ್ತಿಭೀ ರೋದಸಿಪ್ರಾಂ ।**
**ತಮೂ ಅಕೃಣ್ವಂಸ್ತ್ರೇಧಾ ಭುವೇ ಕಂ ಸ ಓಷಧೀಃ ಪಚತಿ ವಿಶ್ವರೂಪಾಃ ॥**

(ಋ. ಸಂ. ೧೦-೮೮-೧೦)

"............**ದ್ಯಾವಾಪೃಥಿವ್ಯೋಃ ಪೂರಣಂ ತಮಕುರ್ವಂಸ್ತ್ರೇಧಾಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ**" ಪೃಥ್ವಿಯಲ್ಲಿಯೂ, ಅಂತರಿಕ್ಷದಲ್ಲಿಯೂ ದ್ಯುಲೋಕದಲ್ಲಿಯೂ ವ್ಯಾಪಿಸಿ ತನ್ನ ಪಾಲನಕರ್ತವ್ಯಗಳನ್ನು ನಿರ್ವಹಿಸುವುದಕ್ಕಾಗಿ ದೇವತೆಗಳು ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡಿದರು. ಅವನು ರೂಪಾಂತರಗಳಿಂದ ಮೂರು ಲೋಕಗಳಲ್ಲೂ ವ್ಯಾಪಿಸಿದ್ದಾನೆ. ಹೀಗೆ ಆದಿತ್ಯಾದಿ ರೂಪಗಳಿಂದ ಬೆಳಗುವ ವಿಶ್ವತತ್ತ್ವವು ಒಂದೇ ಹೊರತು ಬೇರೆಬೇರೆಯಲ್ಲ ಎಂಬ ಅಭಿಪ್ರಾಯವನ್ನು ನಿರುಕ್ತಕಾರರು ಶ್ರುತಿವಾಕ್ಯಗಳನ್ನುದಹರಿಸಿ ವಿವರಿಸಿದ್ದಾರೆ. (ನಿ. ೭-೨೮) ಅದೇ ಭಾವವು ಪ್ರಕೃತವಾದ ಋಕ್ಕಿನಲ್ಲಿಯೂ ಉಕ್ತವಾಗಿದೆ. ಆದರೆ ಆದಿತ್ಯಾಗ್ನಿಗಳಿಗೆ ಈ ವಿಧವಾದ ಐಕ್ಯವಿರುವುದು ಭೌತಿಕವಾದ ಚಕ್ಷುಸ್ಸಿಗೆ ಗೋಚರವಾಗತಕ್ಕ ವಿಷಯವಲ್ಲ. ಇದನ್ನು ಅರಿಯಬೇಕಾದರೆ ಕ್ರಾಂತದರ್ಶಿತ್ವವು ಅತ್ಯವಶ್ಯವಾಗಿರುತ್ತದೆ. ಆದುದರಿಂದ **ಕವೀಯಮಾನಃ ಕ ಇಹ ಪ್ರ ವೋಚತ್** । ಎಂದು ಪ್ರಶ್ನಿಸಿದೆ. ಈ ಕ್ರಾಂತದರ್ಶಿಯಾದವನು ಆದಿತ್ಯಾಗ್ನಿಗಳ ಎರಡುವಿಧವಾದ ಸಂಬಂಧವನ್ನು ಅರಿಯುತ್ತಾನೆ. ಮೊದಲನೆಯದಾಗಿ ಮೇಲೆ ಹೇಳಿದಂತೆ ಅಹೋರಾತ್ರಗಳಲ್ಲಿಯೂ ವಿನಿಮಯರೂಪದಿಂದ

ಬೇರೆಬೇರೆ ಕರ್ತವ್ಯಗಳನ್ನು ಮಾಡುವವರಾಗಿದ್ದಾರೆ. ಇದನ್ನು ಸಾಯಣರು "**ಅಗ್ನ್ಯಾದಿತ್ಯೌ ವ್ಯತಿಹಾರೇಣ ಉಪಾಸ್ತೇ**" ಎಂದು ತಿಳಿಸಿದ್ದಾರೆ. ಎರಡನೆಯದಾಗಿ, **ಯದ್ವಾ । ಅಭಿಭೂತರಜಸ್ತಮಸ್ಕೌ ಉದ್ಬುದ್ಧಸತ್ತ್ವೌ ಅತ ಏವ ಸ್ವಾಧೀನವಾಯೌ ಏತೌ ಏಕತ್ವೇನ ವಾ ಅಧಿಗಚ್ಛತಿ ।** ರಜೋಗುಣವನ್ನೂ, ತಮೋಗುಣವನ್ನೂ ನಾಶಮಾಡಿ ಶುದ್ಧವಾದ ಸತ್ತ್ವಗುಣವನ್ನು ಪ್ರಕಾಶಪಡಿಸಿ ಆದಿತ್ಯಾಗ್ನಿಗಳು ತಮ್ಮ ಪ್ರಭುತ್ವವನ್ನು ನಡೆಸುತ್ತಾರೆ. ಇವರ ವ್ಯವಹಾರಗಳಿಂದ ಬೇರೆಬೇರೆಯೇ ಹೊರತು ಇಬ್ಬರ ಮೂಲತತ್ತ್ವವೂ ಒಂದೇ ಎಂದು ಕವಿಯಾದವನು ತಿಳಿಯುತ್ತಾನೆಂದಿದೆ, ಇದನ್ನೇ ಬೃಹದಾರಣ್ಯಕದಲ್ಲಿ ವಿವರಿಸುತ್ತಾ,

> **ಸ ತ್ರೇಧಾತ್ಮಾನಂ ವ್ಯಕುರುತಾದಿತ್ಯಂ ತೃತೀಯಂ ವಾಯುಂ ತೃತೀಯಂ ಸ ಏಷ ಪ್ರಾಣ-ಸ್ತ್ರೇಧಾ ವಿಹಿತಃ ।** (ಬೃ. ಉ. ೧-೨-೩)

ಮೂಲಭೂತವಾದ ಪ್ರಜಾಪತಿಯು ಮೂರು ಭಾಗವಾಗಿ ವಿಸ್ತರಿಸಿ ಕಾರ್ಯಕಾರಣರೂಪದಿಂದ ಪ್ರಕಾಶಪಡಿಸಿಕೊಂಡನು ಇತ್ಯಾದಿಯಾಗಿಯೂ, ಛಾಂದ್ಯೋಗ್ಯದಲ್ಲಿ,

> **ವಾಗೇವ ಬ್ರಹ್ಮಣಶ್ಚತುರ್ಥಃ ಪಾದಃ ಸೋಽಗ್ನಿನಾ ಜ್ಯೋತಿಷಾ ಭಾತಿ ಚ ತಪತಿ ಚ ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚಸೇನ ಯ ಏವಂ ವೇದ । ಪ್ರಾಣ ಏವ ಬ್ರಹ್ಮಣಶ್ಚತುರ್ಥಃ ಸ ವಾಯುನಾ ಜ್ಯೋತಿಷಾ ಭಾತಿ ಚ ತಪತಿ ಚ...........ಬ್ರಹ್ಮವರ್ಚಸೇನ ಯ ಏವಂ ವೇದ ॥**
>
> **ಚಕ್ಷುರೇವ ಬ್ರಹ್ಮಣಶ್ಚತುರ್ಥಃ ಪಾದಃ ಸ ಆದಿತ್ಯೇನ ಜ್ಯೋತಿಷಾ ಭಾತಿ ಚ ತಪತಿ ಚ ॥**
> (ಛಾ. ಉ. ೩-೧೮-೩ ರಿಂದ ೬)

ಇತ್ಯಾದಿಯಾಗಿ ಅಗ್ನಿ, ವಾಯು, ಆದಿತ್ಯ ಎಂಬ ತ್ರಿಲೋಕಾಧಿದೇವತೆಗಳೂ ಬ್ರಹ್ಮನ ಆವಿರ್ಭಾವಗಳೆಂದೂ ಪುರುಷನ ವಾಗಾದಿಗಳು ಈ ಬ್ರಹ್ಮನ ಅಂಶಭೂತಗಳಾದ ಅಗ್ನ್ಯಾದಿದೇವತೆಗಳ ಸಹಾಯದಿಂದ ಪ್ರಕಾಶಿಸುತ್ತಿವೆ ಯೆಂದೂ ವರ್ಣಿಸಿದೆ. ಮತ್ತು ಶತಪಥ ಬ್ರಾಹ್ಮಣದಲ್ಲಿ,

> **ಸಂವಸಥಾಗ್ ಸ್ವರ್ವಿದಾ । ಸಮೀಚೀ ಉರಸಾ ತ್ಮನೇತಿ ಸಂವಸಥಾನೇನಗ್ ಸ್ವರ್ವಿದಾ ಸಮೀಚೀ ಉರಸಾ ಚಾತ್ಮನಾ ಚೇತ್ಯೇತದಗ್ನಿಮಂತರ್ಭರಿಷ್ಯಂತೀ ಜ್ಯೋತಿಷ್ಮಂತಮಜಸ್ರಮಿದಿತ್ಯಸೌ ವಾ ಆದಿತ್ಯ ಏಷೋಽಗ್ನಿಃ ಸ ಏಷ ಜ್ಯೋತಿಷ್ಮಾನಜಸ್ರಸ್ತಮೇತೇಅಂತ-ರಾಬಿಭೃತಸ್ತಸ್ಮಾದಾಹ ಜ್ಯೋತಿಷ್ಮಂತಮಜಸ್ರಮಿದಿತಿ ॥** (ಶ. ಬ್ರಾ. ೬-೪-೧-೧೧)

ಎಲ್ಲೈ ಜ್ಯೋತಿಷ್ಮತ್ತುಗಳೇ, ಈ ಪ್ರಕಾಶಮಾನನೂ, ಅಮರನೂ ಆದ ಅಗ್ನಿಯೇ ದ್ಯುಲೋಕದಲ್ಲಿ ಪ್ರಕಾಶಿಸುತ್ತಿರುವ ಆದಿತ್ಯನು. ಆದುದರಿಂದ ಉರಸ್ಸಿನಿಂದಲೂ ಹೃದಯದಿಂದಲೂ ಐಕ್ಯಮಾಡಿ ಈ ತೇಜಸ್ಸನ್ನು ಆರಾಧಿಸಿ ಎಂದೂ, ಹೀಗೆಯೇ,

> **ಅಗ್ನೇ ಯತ್ತೇ ದಿವಿ ವರ್ಚ ಇತಿ । ಆದಿತ್ಯೋ ವಾ ಅಸ್ಯ ದಿವಿ ವರ್ಚಃಪೃಥಿವ್ಯಾಮಿತ್ಯ-ಯಮಗ್ನಿಃ ಪೃಥಿವ್ಯಾಂ ಯದೋಷಧೀಷ್ವಪ್ಸ್ವಾ ಯಜತ್ರೇತಿ ಯ ಏವೌಷಧೀಷು ಚಾಪ್ಸು ಚಾಗ್ನಿಸ್ತಮೇತದಾಹ ಯೇನಾಂತರಿಕ್ಷಮುರ್ವಾ ತತಂಥೇತಿ ವಾಯುಃ ಸ ತ್ವೇಷಃ ಸ ಭಾನು-ರರ್ಣವೋ ನೃಚಕ್ಷಾ ಇತಿ ಮಹಾನ್ಸ ಭಾನುರರ್ಣವೋ ನೃಚಕ್ಷಾ ಇತ್ಯೇತತ್ ॥** (ಶ. ಬ್ರಾ. ೭-೧-೧-೨೩)

ಎಲೈ ಅಗ್ನಿಯೇ, ದ್ಯುಲೋಕದಲ್ಲಿರುವ ನಿನ್ನ ವರ್ಚಸ್ಸು ಮಹದ್ವಾದುದು ಇದೇ ವರ್ಚಸ್ಸೇ ಆದಿತ್ಯರೂಪದಲ್ಲಿ ಪ್ರಕಾಶಿಸುತ್ತದೆ. ಪೃಥ್ವಿಯಲ್ಲಿ ಪಾರ್ಥಿವಾಗ್ನಿಯು ರೂಪದಲ್ಲಿದೆ. ಮತ್ತು ಓಷದ್ಯಾದಿಗಳಲ್ಲಿಯೂ ರೂಪಾಂತರಗಳಲ್ಲಿ ಪ್ರಕಾಶಿಸುತ್ತಿದೆ. ಇದೇ ವರ್ಚಸ್ಸು ವಾಯ್ವಾದಿಗಳಲ್ಲಿಯೂ ವ್ಯಾಪಿಸಿ ಮನವಾದಿ ಸಕಲವನ್ನೂ ವೀಕ್ಷಿಸುತ್ತಾ ಮಹತ್ತಾದ ತೇಜೋರೂಪದಲ್ಲಿದೆ ಇತ್ಯಾದಿಯಾಗಿ ವರ್ಣಿಸಿದೆ. ಇದರಂತೆಯೇ ಕಠೋಪನಿಷತ್ತಿನಲ್ಲಿ ಈ ವಿಶ್ವಾತ್ಮನಾದ ಅಗ್ನಿಯ ಸ್ವರೂಪವನ್ನು ವರ್ಣಿಸುತ್ತಾ,

**ಪ್ರ ತೇ ಬ್ರವೀಮಿ ತದು ಮೇ ನಿಬೋಧ ಸ್ವರ್ಗ್ಯಮಗ್ನಿಂ ನಚಿಕೇತಃ ಪ್ರಜಾನನ್ ।**
**ಅನಂತಲೋಕಾಪ್ತಿಮಥೋ ಪ್ರತಿಷ್ಠಾಂ ವಿದ್ಧಿ ತ್ವಮೇತಂ ನಿಹಿತಂ ಗುಹಾಯಾಮ್ ॥** (ಕಠ. ೧-೧-೧೪)

ಎಲೈ ನಚಿಕೇತನೇ, ಈ ಸ್ವರ್ಗ್ಯವಾದ ಅಗ್ನಿಯು ಅನಂತವಾದ ಲೋಕವನ್ನು ಒದಗಿಸಿಕೊಡುವುದಾಗಿಯೂ ಮತ್ತು ಪ್ರತಿಷ್ಠಾರೂಪದಲ್ಲಿಯೂ ಎಂದರೆ ವಿರಾಟ್‌ಸ್ವರೂಪದಿಂದ ಜಗತ್ತಿಗೆ ಆಶ್ರಯವಾಗಿಯೂ ಉಪಾಸಕರ ಹೃದಯದಲ್ಲಿ ವ್ಯಾಪ್ತವಾಗಿದೆ ಎಂದೂ, ಇದೇ ವಿರಾಟ್‌ಪುರುಷನ ಸ್ವರೂಪವನ್ನು ವರ್ಣಿಸುತ್ತಾ, ಮುಂಡಕೋಪನಿಷತ್ತಿನಲ್ಲಿ,

**ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ ದಿಶಃ ಶ್ರೋತ್ರೇ ವಾಗ್ವಿವೃತಾಶ್ಚ ವೇದಾಃ ।**
**ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ ಪದ್ಭ್ಯಾಂ ಪೃಥಿವೀ ಹ್ಯೇಷ ಸರ್ವಭೂತಾಂತ-**
**ರಾತ್ಮಾ ॥** (ಮು. ಉ. ೨-೧-೪)

ಯಾವನಿಗೆ ಅಗ್ನಿಯು ಮೂರ್ಧವೂ. ಚಂದ್ರಸೂರ್ಯರು ಕಣ್ಣುಗಳೂ, ದಿಕ್ಕುಗಳು ಕಿವಿಗಳೂ, ವಾಯುವು ಪ್ರಾಣವೂ, ವಿಶ್ವವು ಹೃದಯವೂ, ಆಗಿರುವುದೋ, ಅಂತಹ ವಿರಾಟ್‌ಪುರುಷನು ವಿಶ್ವವ್ಯಾಪಿಯಾಗಿದ್ದಾನೆ.

**ತಸ್ಮಾದಗ್ನಿಃ ಸಮಿಧೋ ಯಸ್ಯ ಸೂರ್ಯಃ ಸೋಮಾತ್ಪರ್ಜನ್ಯ ಓಷಧಯಃ ಪೃಥಿವ್ಯಾಮ್ ।**
**ಪುಮಾನ್ ರೇತಃ ಸಿಂಚತಿ ಯೋಷಿತಾಯಾಂ ಬಹ್ವೀಃ ಪ್ರಜಾಃ ಪುರುಷಾತ್ ಸಂಪ್ರಸೂತಾಃ ॥**
(ಮು. ಉ. ೨-೧-೪)

ಯಾವ ಆ ಪರಮಪುರುಷನಿಗೆ ಸೂರ್ಯನೇ ಸಮಿತ್ತೋ, ಆತನಿಂದಲೇ ಆ ಅಗ್ನಿಯು ಹುಟ್ಟುತ್ತಾನೆ. ಮತ್ತು ಅದೇ ಸೂರ್ಯನಿಂದ ದ್ಯುಲೋಕವು ಬೆಳಗುತ್ತಿದೆ. ಆ ದ್ಯುಲೋಕವೆಂಬ ಅಗ್ನಿಯಿಂದ ಉಂಟಾದ ಸೋಮನಿಂದ ಪರ್ಜನ್ಯನೆಂಬ ಎರಡನೆಯ ಅಗ್ನಿಯು ಉಂಟಾಗುತ್ತದೆ. ಇತ್ಯಾದಿಯಾಗಿ ವರ್ಣಿತವಾಗಿದೆ. ಇದನ್ನೇ ಪ್ರಶ್ನೋಪನಿಷತ್ತಿನಲ್ಲಿ,

**ಏಷೋಽಗ್ನಿಸ್ತಪತ್ಯೇಷ ಸೂರ್ಯ ಏಷ ಪರ್ಜನ್ಯೋ ಮಘವಾನೇಷ ವಾಯುರೇಷ ಪೃಥಿವೀ**
**ರಯಿರ್ದೇವಃ ಸದಸಚ್ಚಾಮೃತಂ ಚ ಯತ್ ॥** (ಪ್ರಶ್ನ. ೨-೫)

ಪ್ರಾಣರೂಪನಾದ ಈ ಪರಮಾತ್ಮನೇ ಅಗ್ನಿಯಾಗಿ ಸುಡುತ್ತಾನೆ. ಹಾಗೆಯೇ ಸೂರ್ಯನಾಗಿ ಬೆಳಗುತ್ತಾನೆ. ಮತ್ತು ಪರ್ಜನ್ಯನಾಗಿ ಮಳೆಯನ್ನು ಸುರಿಸುತ್ತಾನೆ. ಇಂದ್ರನಾಗಿ ಪ್ರಜೆಗಳನ್ನು ಕಾಪಾಡುತ್ತಾನೆ. ಮೂರ್ತವೂ, ಅಮೂರ್ತವೂ, ದೇವಾದಿಗಳ ಉತ್ಪತ್ತಿಗೆ ಕಾರಣನಾದವನೂ ಈತನೇ ಆಗಿದ್ದಾನೆ. ಇತ್ಯಾದಿಯಾಗಿ ನಾನಾ ಶ್ರುತಿವಾಕ್ಯಗಳಲ್ಲಿ ಆದಿತ್ಯಾಗ್ನಿಗಳಿಗೆ ಹೇಳಿರುವ ತಾದಾತ್ಮ್ಯವನ್ನು ಪ್ರಕೃತವಾದ ಋಕ್ಕಿನಲ್ಲಿಯೂ **ಅವಃ ಪರೇಣ ಪಿತರಂ ಯೋ ಅಸ್ಯಾನುವೇದ ಪರ ಏನಾವರೇಣ** ಇತ್ಯಾದಿಯಾಗಿ ವರ್ಣಿತವಾಗಿದೆ. ಇಂತಹ ಪರಮಾತ್ಮನ ಸ್ವರೂಪವನ್ನರಿಯಲು ಕ್ರಾಂತದರ್ಶಿಯೇ ಆಗಿರಬೇಕು,

ಆದುದರಿಂದಲೇ ದೇವಂ ಮನಃ ಎಂದು ಅದರ ಲಕ್ಷಣವನ್ನು ತಿಳಿಸಿದೆ. ಇಂತಹ ಶುದ್ಧಿಯಿಲ್ಲದಿದ್ದರೆ ಈ ಪರಮಾತ್ಮನ ರೂಪವನ್ನು ತಿಳಿಯಲಾಗುವುದಿಲ್ಲ. ಏತಕ್ಕೆಂದರೆ,

**ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ ನಾನ್ಯೈರ್ದೇವೈಸ್ತಪಸಾ ಕರ್ಮಣಾ ವಾ ।**
**ಜ್ಞಾನಪ್ರಸಾದೇನ ವಿಶುದ್ಧಸತ್ತ್ವಸ್ತತಸ್ತು ತಂ ಪಶ್ಯತೇ ನಿಷ್ಕಲಂ ಧ್ಯಾಯಮಾನಃ ॥**

(ಮುಂ. ಉ. ೩-೧-೮)

ಮೂಲಕಾರಣವಾದ ಈ ತತ್ತ್ವಕ್ಕೆ ರೂಪವಿಲ್ಲ. ಆದುದರಿಂದ ಇದನ್ನು ಕಣ್ಣಿನಿಂದ ಗ್ರಹಿಸಲಾಗುವುದಿಲ್ಲ. ಇದು ವಾಚ್ಯವಲ್ಲ. ಆದುದರಿಂದ ಮಾತಿನಿಂದಲೂ ಗ್ರಹಿಸಲಾಗುವುದಿಲ್ಲ, ಉಳಿದ ಇಂದ್ರಿಯಗಳಿಂದಲೂ ಆಗುವುದಿಲ್ಲ. ಇಂದ್ರಿಯಗಳ ಮತ್ತು ವಿಷಯಸಂಬಂಧದಿಂದುಂಟಾಗುವ ರಾಗವೇ ಮುಂತಾದ ಮಲಗಳ ಸಂಪರ್ಕದಿಂದ ದೂರವಾಗಿ ಸ್ವಚ್ಛವಾಗಿಯೂ ಶಾಂತವಾಗಿಯೂ ಇರತಕ್ಕ ಚೇತಸ್ಸಿನಿಂದ ಮಾತ್ರ ಸಾಧ್ಯವಾಗುತ್ತದೆ. ಇಂತಹ ಶುದ್ಧಚೇತಸ್ಸಿನಿಂದ ಕೂಡಿದ ಕವಿಯ ಲಕ್ಷಣವು ಹೇಗಿರಬೇಕೆಂದರೆ,

**ಸಂಪ್ರಾಪ್ಯೈನಮೃಷಯೋ, ಜ್ಞಾನತೃಪ್ತಾಃ ಕೃತಾತ್ಮನೋ ವೀತರಾಗಾಃ ಪ್ರಶಾಂತಾಃ ।**
**ತೇ ಸರ್ವಗಂ ಸರ್ವತಃ ಪ್ರಾಪ್ಯ ಧೀರಾ ಯುಕ್ತಾತ್ಮಾನಃ ಸರ್ವಮೇವಾವಿಶಂತಿ ॥**

(ಮುಂ. ಉ. ೨-೮-೫)

ಇಂತಹ ಕವಿಚೇತಸ್ಸನ್ನು ಪಡೆದಿರುವ ಈ ಋಷಿಗಳು ಜ್ಞಾನತೃಪ್ತರಾಗಿಯೂ, ಕೃತಾತ್ಮರಾಗಿಯೂ, ವೀತರಾಗರಾಗಿಯೂ, ಪ್ರಶಾಂತರಾಗಿಯೂ ಇರುತ್ತಾರೆ. ಅಂತಹ ಧೀರರು ಸರ್ವಗತನಾದ ಆತ್ಮನನ್ನು ಎಲ್ಲೆಲ್ಲಿಯೂ ಪಡೆದುಕೊಂಡವರಾಗಿಯೂ ಯುಕ್ತಾತ್ಮರಾಗಿಯೂ ಸರ್ವವ್ಯಾಪಿಗಳಾಗುವರು, ಆದರೆ ಇಂತಹ ಯುಕ್ತಾತ್ಮರು ಬಹಳ ವಿರಳವಾದುದರಿಂದ **ದೇವಂ ಮನಃ ಕುತಃ ಅಧಿಜಾತಂ** ಇಂತಹ ದೇವವಿಷಯವಾದ ಚೇತಸ್ಸು ಕೇವಲ ಅದೃಷ್ಟವಿಶೇಷದಿಂದ ಮಾತ್ರ ಸಾಧ್ಯವೆಂದು ತಿಳಿಸಿದ್ದಾರೆ.



## ಯೇ ಅರ್ವಾಂಚಸ್ತಾँ ಉ ಪರಾಚ ಆಹುರ್ಯೇ ಪರಾಂಚಸ್ತಾँ ಉ ಅರ್ವಾಚ ಆಹುಃ । ಇಂದ್ರಶ್ಚ ಯಾ ಚಕ್ರಥುಃ ಸೋಮ ತಾನಿ ಧುರಾ ನ ಯುಕ್ತಾ ರಜಸೋ ವಹಂತಿ ॥ ೧೯ ॥

ಅಧೋಮುಖವಾದ ಸಂಚಾರವುಳ್ಳ ಆದಿತ್ಯಚಕ್ರದ ಯಾವ ರಶ್ಮಿಗಳಿವೆಯೋ ಅವನ್ನೇ ಊರ್ಧ್ವಮುಖವಾದ ಸ್ಥಿತಿಗಳುಳ್ಳವನ್ನಾಗಿ ಕಾಲವಿತ್ತುಗಳು ಹೇಳುತ್ತಾರೆ. ಯಾವ ರಶ್ಮಿಗಳು ಊರ್ಧ್ವಮುಖವಾದ ಪ್ರಸರಗಳುಳ್ಳವೋ ಅವನ್ನೇ ಅಧೋಗಾಮಿಯಾದವು ಎಂಬುದಾಗಿಯೂ ಹೇಳುತ್ತಾರೆ. ಎಲೈ ಸೋಮನೇ, ನೀನೂ, ಇಂದ್ರನೂ ಸೇರಿಕೊಂಡು ಪರಿಭ್ರಮಣಾತ್ಮಕಗಳಾದ ಯಾವ ಯಾವ ಗ್ರಹಾದಿಗಳನ್ನೂ ಸೃಷ್ಟಿಸಿದ್ದಿರೋ ಆವೆಲ್ಲವೂ ಸಹ ಶಕಟಾದಿಗಳ ನೊಗಗಳಲ್ಲಿ ಕಟ್ಟಲ್ಪಟ್ಟ ಅಶ್ವಾದಿಗಳಂತೆ ರಂಜನಾತ್ಮಕಗಳಾದ ಲೋಕಗಳನ್ನೂ ವಹಿಸುತ್ತವೆ.

ಪ್ರಕೃತವಾದ ಋಕ್ಕಿನಲ್ಲಿಯೂ ಹಿಂದಿನ ಮಂತ್ರದಲ್ಲಿ ವರ್ಣಿಸಿದ ವಿಷಯವನ್ನೇ ಬೇರೆ ವಾಕ್ಯಗಳಿಂದ ಹೇಳಿದೆ. ಈ ಮೂಲತತ್ತ್ವವು ತನ್ನ ಬಾಹ್ಯಾವಿರ್ಭಾವದಿಂದ ಚಕ್ರಾಕಾರವಾಗಿ ಪರಿಭ್ರಮಣವನ್ನು ಹೊಂದುತ್ತಿರುವಾಗ ಊರ್ಧ್ವಭಾಗದಲ್ಲಿ

ರತಕ್ಕ ರಶ್ಮಿಗಳೂ ಗ್ರಹಾದಿಗಳೂ ಆವೃತ್ತಿರೂಪದಿಂದ ಅಧೋಭಾಗಕ್ಕೂ, ಅಧೋಭಾಗದಲ್ಲಿರತಕ್ಕವು ಊರ್ಧ್ವಭಾಗಕ್ಕೂ ವಿನಿಮಯ ರೂಪದಿಂದ ಸುತ್ತುತ್ತಿವೆ. ಆದುದರಿಂದಲೇ ಒಂದೇ ಪದಾರ್ಥವು ಅಧೋಮುಖವುಳ್ಳದ್ದೆಂದೂ, ಊರ್ಧ್ವಮುಖವುಳ್ಳದ್ದೆಂದೂ ಎರಡು ವಿಧವಾಗಿಯೂ ಕರೆಯಲ್ಪಡುತ್ತದೆ.

**ಇಂದ್ರಶ್ಚ ಯಾ ಚಕ್ರಥುಃ ಸೋಮ**— ಈ ಆದಿತ್ಯಾದಿ ತೇಜೋಮಂಡಲಗಳು ಇಂದ್ರನಿಂದಲೂ ಸೋಮನಿಂದಲೂ ಸೃಷ್ಟಿಸಲ್ಪಟ್ಟವೆಂದು ಪ್ರಸಿದ್ಧವಾದ ವಿಷಯವಾಗಿದೆ.

**ಇಂದ್ರಾಸೋಮಾ ವಾಸಯಥ ಉಷಾಸಮುತ್ಸೂರ್ಯಂ ನಯಥೋ ಜ್ಯೋತಿಷಾ ಸಹ ।**
**ಉಪ ದ್ಯಾಂ ಸ್ಕಂಭಥುಃ ಸ್ಕಂಭನೇನಾಪ್ರಥತಂ ಪೃಥಿವೀಂ ಮಾತರಂ ವಿ ॥**
(ಋ. ಸಂ. ೬-೭೨-೨)

ಎಲೈ ಇಂದ್ರಾಸೋಮರೇ, ನೀವು ಉಷಸ್ಸನ್ನು ಕಾಂತಿಯಿಂದಲೂ, ಸೂರ್ಯನನ್ನು ತೇಜಸ್ಸಿನಿಂದಲೂ ಯೋಜಿಸಿ ಸೃಷ್ಟಿಸಿದ್ದೀರಿ. ದ್ಯಾವಾಪೃಥಿವಿಗಳನ್ನು ಸಾಧಾರದೊಡನೆ ಸ್ಥಾಪಿಸಿದ್ದೀರಿ ಇತ್ಯಾದಿಯಾಗಿ ಪ್ರಶಂಸಿಸಿದೆ. ಅಲ್ಲದೆ, ಇಂದ್ರನ ಮಹತ್ತ್ವವನ್ನು ಸ್ತುತಿಸುತ್ತಾ,

**ಯದಾ ಸೂರ್ಯಮಮುಂ ದಿವಿ ಶುಕ್ರಂ ಜ್ಯೋತಿರಧಾರಯಃ ।**
**ಆದಿತ್ತೇ ವಿಶ್ವಾ ಭುವನಾನಿ ಯೇಮಿರೇ ॥** (ಋ. ಸಂ. ೮-೧೨-೩೦)
**ಇಂದ್ರೇಣ ರೋಚನಾ ದಿವೋ ದೃಳ್ಹಾನಿ ದೃಂಹಿತಾನಿ ಚ ।**
**ಸ್ಥಿರಾಣಿ ನ ಪರಾಣುದೇ ॥** (ಋ. ಸಂ. ೮-೧೪-೯)

ಇಂದ್ರನು ಅಂತರಿಕ್ಷದಲ್ಲಿ ತೇಜೋಮಂಡಲವನ್ನು ಸ್ಥಾಪಿಸಿದಾಗ ಲೋಕಗಳೆಲ್ಲವೂ ಕೃತಜ್ಞತೆಯಿಂದ ಇಂದ್ರನಿಗೆ ಮಣಿದವು. ಅವನಿಂದ ಪ್ರತಿಷ್ಠಿತವಾದ ಅಂತರಿಕ್ಷದ ತೇಜಃಪುಂಜಗಳಲ್ಲಿ ಯಾವುದೂ ಸ್ಥಾನಭ್ರಷ್ಟತ್ವವನ್ನು ಹೊಂದದೇ ತಮ್ಮ ಕರ್ತವ್ಯಗಳನ್ನು ಅನುಸ್ಯೂತವಾಗಿ ನೆರವೇರಿಸುತ್ತವೆ. ಇತ್ಯಾದಿಯಾಗಿ ವರ್ಣಿತವಾದ ಅಂಶವನ್ನು ಇಲ್ಲಿ ತಿಳಿಸಿದೆ.



## ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ । ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿ ಚಾಕಶೀತಿ ॥ ೨೦ ॥

ಒಟ್ಟಿಗೆ ಸೇರಿಕೊಂಡಿರುವುವೂ, ಒಂದೇ ಆಕಾರವಾಗಿ ತೋರುವುವೂ, ಶ್ರೇಷ್ಠವಾದ ಪತನವುಳ್ಳವೂ ಆದ ಎರಡು ಪಕ್ಷಿಗಳು ಒಂದೇ ವೃಕ್ಷವನ್ನು ಆಶ್ರಯಿಸಿಕೊಂಡಿವೆ. ಅವೆರಡರಲ್ಲಿ ಒಂದು ಸಿಹಿಯಾದ ಫಲವನ್ನು ತಿನ್ನುತ್ತದೆ. ಇನ್ನೊಂದು ತಿನ್ನದೆ, ನೋಡುತ್ತಿದೆ.

ಇಲ್ಲಿ ಲೌಕಿಕವಾದ ಪಕ್ಷಿದ್ವಯದ ಸಾದೃಶ್ಯದಿಂ ಜೀವಾತ್ಮನನ್ನೂ ಪರಮಾತ್ಮನನ್ನೂ ಸ್ತುತಿಸಿದೆ. ಲೋಕದಲ್ಲಿ ಶ್ರೇಷ್ಠವಾದ ಪತನವುಳ್ಳವೂ, ಒಂದೇ ರೂಪದಲ್ಲಿ ಕಾಣಿಸಿಕೊಳ್ಳುವುವೂ ಆದ ಎರಡು ಪಕ್ಷಿಗಳು ಒಂದೇ ವೃಕ್ಷವನ್ನಾಶ್ರಯಿಸಿರು

ವಂತೆ ಜೀವಾತ್ಮಪರಮಾತ್ಮರು ಒಂದೇ ದೇಹವನ್ನಾಶ್ರಯಿರುವರು ಎಂದು ತಾತ್ಪರ್ಯ. ಆದರೆ ಆ ಎರಡುಪಕ್ಷಿಗಳಲ್ಲಿ ಒಂದು ಮಧುರವಾದ ಫಲವನ್ನು ತಿನ್ನುತ್ತಿದೆ; ಇನ್ನೊಂದು ಕೇವಲ ಸಾಕ್ಷಿಭೂತವಾಗಿ ನೋಡುತ್ತಾ ಕುಳಿತಿದೆ ಎನ್ನುವಾಗ ಜೀವಾತ್ಮನನ್ನು ಫಲವನ್ನು ಭೋಗಿಸುವ ಪಕ್ಷಿಗೂ ಪರಮಾತ್ಮನನ್ನು ಫಲಸಂಪರ್ಕವಿಲ್ಲದೆ ಕೇವಲ ಸಾಕ್ಷಿಭೂತವಾಗಿ ಕುಳಿತಿರುವ ಪಕ್ಷಿಗೂ ಹೋಲಿಸಿದೆ.

**ಸುಪರ್ಣಾ—ಸುಪರ್ಣೌ; ಶೋಭನಗಮನೌ.** ಚೆನ್ನಾಗಿ ಹಾರಾಡುವುದರಿಂದ ಇವು ಸುಪರ್ಣಗಳು ಜೀವನಿಗೆ ಸಂಸಾರಗಮನ; ಈಶ್ವರನಿಗೆ ಶುದ್ಧಗಮನವೆಂದು ಹೇಳಬಹುದು.

**ಸಯುಜಾ—ಸಮಾನಯೋಗೌ: ಸಹೈವ ಸರ್ವದಾ ಯುಕ್ತೌ।** ಯಾವಾಗಲೂ ಜೊತೆಯಲ್ಲಿಯೇ ಕೂಡಿಕೊಂಡಿರುವುವು.

**ಸಖಾಯಾ—ಸಮಾನಖ್ಯಾನೌ।** ತಮ್ಮನ್ನು ಒಂದೇ ರೀತಿಯಲ್ಲಿ ತೋರ್ಪಡಿಸಿಕೊಳ್ಳತಕ್ಕವು ಎಂದರ್ಥ, ಎಂದು ವಿವರಿಸಿ ಪುನಃ **ಸಯುಜಾ** ಎಂಬ ಪದದ ವಿಶೇಷಾರ್ಥವನ್ನು ಸಾಯಣರು ತಿಳಿಸಿದ್ದಾರೆ.

**ಸಯುಜಾ—ಸಮಾನಯೋಗೌ। ಯೋಗೋ ನಾಮ ಸಂಬಂಧಃ। ಸ ಚ ತಾದಾತ್ಮ್ಯಲಕ್ಷಣಃ, ಸ ಏವಾತ್ಮಾ ಜೀವಾತ್ಮನಃ ಸ್ವರೂಪಂ ಯಸ್ಯ ಪರಮಾತ್ಮನಂ ಸ ತದಾತ್ಮಾ।** ಯೋಗವೆಂದರೆ ಸಂಬಂಧವೆಂದರ್ಥ. ಆದರೆ ಸಂಬಂಧಗಳಲ್ಲಿ ಅನೇಕವಿಧಗಳಿವೆ. ಆದರೆ ಇಲ್ಲಿ **ಸಮಾನಯೋಗ**ವೆಂದರೆ ತಾದಾತ್ಮ್ಯಸಂಬಂಧವೆಂದರ್ಥ. ಪರಮಾತ್ಮನೂ ಜೀವಾತ್ಮನ ಸ್ವರೂಪನಾಗಿದ್ದಾನೆಯೇ ಹೊರತು ಬೇರೆಯಲ್ಲ ಎಂದು ತಾತ್ಪರ್ಯ. ಈ ವಿಶೇಷಣದಿಂದ ಭಾಸ್ಕರಮತವನ್ನು ನಿರಾಕರಿಸಿದಂತಾಯಿತು. ಹೇಗೆಂದರೆ, ಆ ಮತದ ಪ್ರಕಾರ ಜೀವಾತ್ಮ ಮತ್ತು ಪರಮಾತ್ಮ ಇವರಿಬ್ಬರಿಗೂ ಭೇದವುಂಟು. ಅದು ಅತಿರೇಕವಾದವಾಗುತ್ತದೆ. ಇಂತಹ ಭೇದವಾದವು ನಿಜವಾದ ತತ್ತ್ವವನ್ನು ವರ್ಣಿಸತಕ್ಕದಲ್ಲ. ಆದುದರಿಂದ ಅದನ್ನು ನಿರಾಸಮಾಡುವುದಕ್ಕಾಗಿ ಇಲ್ಲಿ **ಸಯುಜಾ** ಎಂಬ ವಿಶೇಷಣವನ್ನು ಹೇಳಿದೆ.

ಆದರೆ ಇಲ್ಲಿ ಇನ್ನೊಂದು ಆಶಂಕೆಗೆ ಅವಕಾಶವಿದೆಯೆಂದು ತೋರಿಸಿ ಸಾಯಣರು ಆದಕ್ಕೂ ಈರೀತಿ ಸಮಾಧಾನವನ್ನು ಹೇಳಿದ್ದಾರೆ.

**ನನು ಸಂಬಂಧೋ ದ್ವಿಷ್ಠಃ ಸ ಚ ಪಕ್ಷಿಣೋರಿವ ಭೇದಮಪೇಕ್ಷತೇ ಅಂತಃ ಕಥಂ ಐಕಾತ್ಮ್ಯಮಿತಿ ನ। ಔಪಾಧಿಕಭೇದಂ ವಾಸ್ತವಾಭೇದಂ ಚ ಅಪೇಕ್ಷ್ಯ ಪ್ರವೃತ್ತಃ॥**

ಸಂಬಂಧವೆಂದರೆ ಎರಡು ಬೇರೆಬೇರೆ ವಸ್ತುಗಳಿಗಿರತಕ್ಕದ್ದೆಂದು ವಿಶದವಾಗಿದೆ. ಅದು ಎರಡು ಬೇರೆಬೇರೆ ಪಕ್ಷಿಗಳಿಗಿರುವಂತೆ ಸಂಬಂಧವಾಗಬೇಕೇ ಹೊರತು, ಒಂದೇ ವಸ್ತುವಿದ್ದರೆ ಆಗ ಯೋಗ ಅಥವಾ ಸಂಬಂಧ ಎಂಬ ವರ್ಣನೆಗೆ ಅವಕಾಶವೇ ಇರುವುದಿಲ್ಲ ಎಂಬ ಆಕ್ಷೇಪವಿದ್ದರೆ ಅದು ತಪ್ಪು. ಏಕೆಂದರೆ ಭೇದದಲ್ಲಿ ಎರಡು ವಿಧ. ಒಂದು **ಔಪಾಧಿಕಭೇದ; ಇನ್ನೊಂದು ವಾಸ್ತವಭೇದ** ಇಲ್ಲಿರುವುದು ಔಪಾಧಿಕವಾದ ಭೇದವೇ ಹೊರತು ವಾಸ್ತವವಾಗಿಯೂ ಇಲ್ಲಿ ಭೇದವೇ ಇರುವುದಿಲ್ಲ.

**ಅಥವಾ; ನನು ಏಕಸ್ಯ ಯಾದೃಶಂ ಸ್ಥಾನಂ ತಾದೃಶಮೇವ ಅನ್ಯಸ್ಯ ಇತಿ ವ್ಯುತ್ಪತ್ತ್ಯಾ ಭೇದಂ ಸ್ಫುಟಂ ಪ್ರತಿಭಾತಿ ಕಥಂ ತಾದಾತ್ಮ್ಯಮುಚ್ಯತೇ ಇತಿ ನ ವಕ್ತವ್ಯಂ।** ಒಂದು ಪಕ್ಷಿಗೆ (ಜೀವಾತ್ಮನಿಗೆ) ಯಾವ ಸ್ಥಾನವೋ, ಇನ್ನೊಂದು ಪಕ್ಷಿಗೂ (ಪರಮಾತ್ಮನಿಗೆ) ಅದೇ ಸ್ಥಾನವೆಂದು ಮಾತನ್ನಾಡುವಾಗಲೂ ಸಹ ಇದು ಬೇರೆ, ಅದು ಬೇರೆ

ಎಂದಂತಾಗುವುದಿಲ್ಲವೇ, ಎಂದರೆ ಅದೂ ಸರಿಯಲ್ಲ. ಏತಕ್ಕೆಂದರೆ ಇಲ್ಲಿ **ನಾತ್ರ ಪರಸ್ಪರಂ ದೃಷ್ಟಾಂತದಾರ್ಷ್ಟಾಂತಿಕಭಾವಃ ।** ಇಲ್ಲಿ ಬೇರೆಯಾಗಿರುವ ಪರಮಾತ್ಮನಿಗೂ ಇದರಂತೆ ಅದು ಎಂದು ಒಂದಕ್ಕೊಂದಕ್ಕೆ ದೃಷ್ಟಾಂತವನ್ನಾಗಲಿ ಉಪಮಾನೋಪಮೇಯ ಭಾವವನ್ನಾಗಲಿ ಹೇಳಿಲ್ಲ. **ಸಖಾಯೌ** ಎಂಬ ವಿಶೇಷಣದಿಂದ ಈ ಅಭಿಪ್ರಾಯವು ಸ್ಪಷ್ಟವಾಗಿದೆ. ಯಸ್ಯ ಯಾದೃಶಂ ಖ್ಯಾನಂ ಪರಮಾತ್ಮನಃ ತದೇವ ಖ್ಯಾನಂ ಇತರಸ್ಯಾಪಿ ಜೀವಾತ್ಮನಃ, **ತದೇವ ಖ್ಯಾನಮಿತರಸ್ಯಾಪಿ ಜೀವಾತ್ಮನಃ ಇತಿ ಸಖಾಯೌ ಇತ್ಯುಚ್ಯತೇ ।** ಪರಮಾತ್ಮನಿಗೆ ಯಾವ ಪ್ರಕಾಶವೂ, ತೋರಿಕೆಯೂ ಇದೆಯೋ ಅದೇ ರೀತಿಯಾದ ಪ್ರಕಾಶವೂ ತೋರಿಕೆಯೂ ಜೀವಾತ್ಮನಿಗೂ ಇದೆಯೆಂದು ತೋರಿಸಲು **ಸಖಾಯೌ** ಎಂಬ ವಿಶೇಷಣವಿದೆಯೆಂಬ ಸಮಾಧಾನವನ್ನು ಹೇಳಿದೆ. ಆದುದರಿಂದ ಇಲ್ಲಿ ಐಕಾತ್ಮ್ಯವು ಸಿದ್ಧವಾದಂತಾಯಿತು. ಇದರಿಂದ ವಾಸ್ತವಭೇದವೂ ಸಹ ನಿರಸ್ತವಾಯಿತು. ಇದನ್ನು ಮುಂಡಕೋಪನಿಷದ್ಭಾಷ್ಯದಲ್ಲಿ ಶಂಕರಾಚಾರ್ಯರು ವಿವರಿಸುತ್ತಾ,

**ಸಯುಜಾ ಸಯುಜೌ ಸಹೈವ ಸರ್ವದಾ ಯುಕ್ತೌ, ಸಖಾಯಾ ಸಖಾಯೌ ಸಮಾನಖ್ಯಾನೌ ಸಮಾನಾಭಿವ್ಯಕ್ತಿಕಾರಣಾವೇವಂಭೂತೌ ಸಂತೌ ॥** (ಮು. ಉ. ಶಂ. ಭಾ. ೩-೧-೧)

ಸಮಾನವಾದ ಖ್ಯಾತಿಯುಳ್ಳವು ತಮ್ಮನ್ನು ಬೆಳಗಿ ತೋರಿಸುವ ಒಂದೇ ಕಾರಣವುಳ್ಳವು ಎಂದರ್ಥ.

**ವೃಕ್ಷಂ—ವೃಕ್ಷೋ ವ್ರಶ್ಚನಾತ್ । ವೃತ್ವಾ ಕ್ಷಾಂ ತಿಷ್ಠತೀತಿ ವಾ । ಕ್ಷಾ ಕ್ಷಿಯತೇರ್ನಿವಾಸಕರ್ಮಣಃ ।** ಛೇದಿಸಲ್ಪಡು ಎಂಬರ್ಥವನ್ನು ಕೊಡುವ ವ್ರಶ್ಚ್ ಧಾತುವಿನಿಂದ ನಿಷ್ಪನ್ನವಾಗಿದ ಅಥವಾ ನಿವಾಸಸ್ಥಾನವಾದ ಪೃಥ್ವಿಯನ್ನು ಆವರಿಸಿ ನಿಂತಿದೆ ಎಂಬರ್ಥವನ್ನು ಕೊಡುವುದರಿಂದಲೂ ಈ ಹೆಸರು ಪ್ರಸಿದ್ಧವಾಗಿದೆ. (ನಿ. ೨-೬) ಪ್ರಕೃತವಾದ ಋಕ್ಕಿನಲ್ಲಿ ಒಂದೇ ವೃಕ್ಷವನ್ನು ಆಶ್ರಯಿಸಿದೆ ಎನ್ನುವಾತ,

**ಏಕಂ ವೃಕ್ಷಂ ವೃಕ್ಷಮಿವೋಚ್ಛೇದನಸಾಮಾನ್ಯಾಚ್ಛರೀರಂ ಪರಿಷಸ್ವಜಾತೇ ಪರಿಷ್ವಕ್ತವಂತೌ ।**
(ಮುಂ. ಉ. ಶಂ. ಭಾ. ೩-೧-೧)

ಸಮಾನವಾದ ಎಂದರೆ ಯಾವ ವಿಶೇಷವೂ ಇಲ್ಲದೆ ಅರಿಯುವುದಕ್ಕೆ ಆಶ್ರಯವಾಗಿ ಒಂದೇ ಆಗಿರುವ ವೃಕ್ಷವನ್ನು ಆಲಂಗಿಸಿಕೊಂಡಿವೆಯೆಂದರ್ಥ. ಇಲ್ಲಿ ವೃಕ್ಷದಂತೆ ನಾಶವಾಗುವುದೆಂಬ ಹೋಲಿಕೆಯಿರುವುದರಿಂದ ಶರೀರವನ್ನು ವೃಕ್ಷಕ್ಕೆ ಹೋಲಿಸಿದೆ. ಈ ನಶ್ವರವಾದ ವೃಕ್ಷವನ್ನು ಶಂಕರಭಾಷ್ಯದಲ್ಲಿ ಈರೀತಿ ವರ್ಣಿಸಿದೆ.

**ಅಯಂ ಹಿ ವೃಕ್ಷಃ ಊರ್ಧ್ವಮೂಲೋಽವಾಕ್ಶಾಖೋಽಶ್ವತ್ಥೋಽವ್ಯಕ್ತಮೂಲಪ್ರಭವಃ ಕ್ಷೇತ್ರಸಂಜ್ಞಕಃ ಸರ್ವಪ್ರಾಣಿಕರ್ಮಫಲಾಶ್ರಯಃ ।** (ಮು. ಉ. ಶಂ. ಭಾ. ೩-೧-೧)

ಈ ವೃಕ್ಷವೇ ಮೇಲೆ ಬೇರೂ ಕೆಳಗೆ ಕೊಂಬೆಗಳೂ ಇರುವ ಅಶ್ವತ್ಥವು. ಇದು ಅವ್ಯಕ್ತವೆಂಬ ಮೂಲದಿಂದ ಹುಟ್ಟಿ ಕ್ಷೇತ್ರವೆನ್ನಿಸಿಕೊಂಡು ಎಲ್ಲಾ ಪ್ರಾಣಿಗಳ ಕರ್ಮದ ಫಲಕ್ಕೂ ಆಶ್ರಯವಾಗಿರುತ್ತದೆ. ಮತ್ತು ಇದೇ ವೃಕ್ಷವನ್ನು,

**ತಂ ಪರಿಷ್ವಕ್ತವಂತೌ ಸುಪರ್ಣಾವಿವಾವಿದ್ಯಾಕಾಮಕರ್ಮವಾಸನಾಶ್ರಯಲಿಂಗೋಪಾಧ್ಯಾತ್ಮೇಶ್ವರೌ । ತಯೋಃ ಪರಿಷ್ವಕ್ತಯೋರನ್ಯ ಏಕಃ ಕ್ಷೇತ್ರಜ್ಞೋ ಲಿಂಗೋಪಾಧಿವೃಕ್ಷಮಾಶ್ರಿತಃ ಪಿಪ್ಪಲಂ ಕರ್ಮನಿಷ್ಪನ್ನಂ ಸುಖದುಃಖಲಕ್ಷಣಂ ಫಲಂ ಸಾದ್ವನೇಕವಿಚಿತ್ರವೇದನಾಸ್ವಾದರೂಪಂ ಸ್ವಾದ್ವತ್ತಿ ಭಕ್ಷಯತ್ಯುಪಭುಂಕ್ತೇಽವಿವೇಕತಃ ॥** (ಮುಂ. ಉ. ಶಂ. ಭಾ ೩-೧-೧)

ಅವಿದ್ಯೇ, ಕಾಮ, ಕರ್ಮವಾಸನೆ ಇವುಗಳಿಗೆ ಆಶ್ರಯವಾಗಿರುವ ಲಿಂಗಶರೀರವೆಂಬ ಉಪಾಧಿಯುಳ್ಳ ಜೀವಾತ್ಮನೂ ಈಶ್ವರನೂ ಎರಡು ಹಕ್ಕಿಗಳಂತೆ ಆಶ್ರಯಿಸಿಕೊಂಡಿರುವುವು. ಹೀಗೆ ಆಶ್ರಯಿಸಿಕೊಂಡಿರುವ ಈ ಇಬ್ಬರಲ್ಲಿ ಒಬ್ಬನು ಎಂದರೆ ಲಿಂಗೋಪಾದಿಯುಳ್ಳ ಕ್ಷೇತ್ರಜ್ಞನು ವೃಕ್ಷವನ್ನು ಆಶ್ರಯಿಸಿಕೊಂಡು ಸ್ವವಿಯಾದ ಎಂದರೆ ನಾನಾಬಗೆಯಾಗಿರುವ ಅನುಭವಗಳನ್ನು ಸವಿಯುವುದೆಂಬ ಪಿಪ್ಪಲವನ್ನು ತಿನ್ನುತ್ತಾನೆ. ಎಂದರೆ ಸುಖದುಃಖರೂಪವಾದ ತನ್ನ ಕರ್ಮದಿಂದಾಗಿರುವ ಫಲವನ್ನು ಅನುಭವಿಸುತ್ತಾನೆ.

**ಅನಶ್ನನ್ನನ್ಯ ಇತರ ಈಶ್ವರೋ ನಿತ್ಯಶುದ್ಧಬುದ್ಧಮುಕ್ತಸ್ವಭಾವಃ ಸರ್ವಜ್ಞಃ ಸರ್ವಸತ್ತ್ವೋಪಾಧಿರೀಶ್ವರೋ ನಾಶ್ನಾತಿ ॥** (ಮುಂ. ಉ. ಶಂ. ಭಾ. ೩-೧-೧)

ಇನ್ನೊಬ್ಬನು ತಿನ್ನದೆ ನಿತ್ಯಶುದ್ಧಬುದ್ಧಮುಕ್ತಸ್ವಭಾವನಾಗಿಯೂ ಸರ್ವಜ್ಞನಾಗಿಯೂ ಸರ್ವಸತ್ತ್ವೋಪಾಧಿಯಾಗಿಯೂ ಇರುವ ಈಶ್ವರನಾಗಿರುವುದರಿಂದ ತಿನ್ನದೇ ಇರುತ್ತಾನೆ ಎಂದು ವರ್ಣಿತವಾಗಿರುವಾಗ ಸಾಯಣರು ಇನ್ನೊಂದು ಆಕ್ಷೇಪವನ್ನು ಆಶಂಕಿಸಿ ಅದಕ್ಕೂ ಸಮಾಧಾನವನ್ನು ಹೇಳಿದ್ದಾರೆ.

**ನ ಚ ಜೀವಸ್ಯ ವಸ್ತುತಃ ಈಶ್ವರತ್ವೇ ಕಥಂ ಜೀವಬುದ್ಧ್ಯಾ ಸಂಸಾರಶೋಕೌ ಇತಿ ವಾಚ್ಯಂ ತಯೋರ್ಮೋಹಕೃತತ್ವಾತ್ ॥**

ಒಂದುವೇಳೆ ಜೀವನಿಗೇ ಈಶ್ವರತ್ವವಿದ್ದಪಕ್ಷದಲ್ಲಿ ಜೀವಬುದ್ಧಿಯಿಂದ ಸಂಸಾರಶೋಕಮಗ್ನವಾಗುವುದು ಹೇಗೆ? ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಏತಕ್ಕೆಂದರೆ ಸಂಸಾರವೂ ಶೋಕವೂ ಮೋಹದ ನಿಮಿತ್ತಕಗಳಾದುದರಿಂದ ಈ ಆಕ್ಷೇಪವು ಪರಿಹಾರ್ಯವಾಗುವುದು ಸುಲಭವೆಂದು ತೋರಿಸಿ ತಮ್ಮ ವಾದವನ್ನು ಸಮರ್ಥಿಸಲು ಮುಂಡಕೋಪನಿಷತ್ತಿನ ವಾಕ್ಯವನ್ನು ಉದಹರಿಸಿ ತೋರಿಸಿದ್ದಾರೆ.

**ಸಮಾನೇ ವೃಕ್ಷೇ ಪುರುಷೋ ನಿಮಗ್ನೋಽನಿಶಯಾ ಶೋಚತಿ ಮುಹ್ಯಮಾನಃ ।**
**ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ ॥** (ಮು. ಉ. ೩-೧-೨)

ಒಂದೇ ವೃಕ್ಷದಲ್ಲಿ ಪುರುಷನು ನಿಮಗ್ನನಾಗಿ ಅನೀಶೆಯಿಂದ ಮೋಹಗೊಂಡು ಶೋಕಿಸುತ್ತಿರುವನು ಎಂಬ ಇದೇ ಭಾವವನ್ನು ಏಕ ಏವ ಶರೀರೇ **ಪೂರ್ಣಃ ಪುರುಷಃ**.........ಇತ್ಯಾದಿವಾಕ್ಯಗಳಿಂದ ವಿವರಿಸಿದ್ದಾರೆ. ಅದರ ಭಾವವು ಈ ರೀತಿಯಲ್ಲಿದೆ.

ಒಂದೇ ವೃಕ್ಷದಲ್ಲಿ ಎಂದರೆ ಮೇಲೆ ಹೇಳಿದಂತಹ ಶರೀರದಲ್ಲಿ ಪುರುಷನು ಎಂದರೆ ಭೋಕ್ತೃವಾಗಿರುವ ಜೀವನು ಅವಿದ್ಯೆ, ಕಾಮ, ಕರ್ಮ, ಫಲದ ಆಸೆ ಮುಂತಾದ ಭಾರವನ್ನು ಹೊತ್ತುಕೊಂಡು ಕಡಲಿನ ನೀರಿನಲ್ಲಿ ಸೋರೆಬುರುಡೆಯಂತೆ ನಿಮಗ್ನನಾಗಿಯೂ, ದೇಹವೇ ತಾನೆಂಬ ಭಾವವನ್ನು ಹೊಂದಿದವನಾಗಿಯೂ, (ಅಲಾಬುರಿವ ಸಾಮುದ್ರೇ ಜಲೇ ನಿಮಗ್ನಃ— ಶ. ಭಾ.) ನಾನೇ ಕರ್ತನು, ನಾನೇ ಸುಖಿಯು, ದುಃಖಿಯು, ಇತ್ಯಾದಿಯಾದ ಅನುಭವಗಳನ್ನು ಜನನ ಮರಣಾದಿರೂಪಗಳಲ್ಲಿ ಪಡೆಯುತ್ತಾನೆ.

**ಯದಾ ತು ಜುಷ್ಟಂ ನಿತ್ಯತೃಪ್ತಮನ್ಯಂ ಸಂಸಾರಶೋಕಾತೀತಂ ಪರಮೇಶ್ವರಂ ಪಶ್ಯತಿ................ ತದಾ ವೀತಶೋಕೋ ದೇಹಾದ್ಯತಿರಿಕ್ತಃ...........ಅಸ್ಯ ಪರಮೇಶ್ವರಸ್ಯ ಮಹಿಮಾನಂ ಪ್ರಾಪ್ನೋತಿ ।**

ಯಾವಾಗ ಸಂಸಾರಶೋಕದಿಂದ ಅತೀತನಾದ ಈಶ್ವರನನ್ನು ಸಾಕ್ಷಾತ್ಕಾರಮಾಡಿಕೊಳ್ಳುತ್ತಾನೆಯೋ ಆಗ ಶೋಕದಿಂದ ರಹಿತನಾಗಿಯೂ ದೇಹಾದಿಶೃಂಖಲೆಗಳಿಂದ ಬಿಡಲ್ಪಟ್ಟವನಾಗಿಯೂ ಈಶ್ವರನ ಮಹತ್ತ್ವವನ್ನೇ ಪಡೆಯುತ್ತಾನೆ. ಆ ಭಾವನೆಯುಂಟಾದ ಕೂಡಲೇ ಅವೇ ಈಶ್ವರರೂಪವನ್ನೇ ಪಡೆಯುತ್ತಾನೆಂದರ್ಥವು. **ತಸ್ಮಾದ್ವಸ್ತುತಃ ಏಕ ಏವ । ಭೇದಸ್ತು ಮೋಹಕೃತ ಇತಿ ಸಿದ್ಧಂ ।** ಆದುದರಿಂದ ವಾಸ್ತವವಾಗಿಯೂ ಒಂದೇ ಆಗಿರುವ ತತ್ತ್ವವು ಮೋಹಾವರಣದ ದೆಸೆಯಿಂದ ಭೇದವುಳ್ಳದ್ದಾಗಿ ತೋರುತ್ತದೆ ಎಂಬುದು ಸಿದ್ಧವಾದ ವಿಷಯವು.

**ಅನಶ್ನನ್ನನ್ಯೋ ಅಭಿ ಚಾಕಶೀತಿ— ಅನ್ಯಃ ಪರಮಾತ್ಮಾ ತು ಆಪ್ತಕಾಮತ್ವೇನ ಸ್ಪೃಹಾಯಾ ಅಭಾವಾತ್ ಅಭುಂಜಾನಃ ।** ಈಶ್ವರನು ಪೂರ್ಣಕಾಮನಾದುದರಿಂದ ತಿನ್ನದೆ ಸುಮ್ಮನೇ ನೋಡುತ್ತಲೇ ಇರುತ್ತಾನೆ.

**ಆಪ್ತಕಾಮಸ್ಯ ಕಾ ಸ್ಪೃಹಾ ।** (ಮಾ. ಉ. ಕಾ. ೧-೯)

ಇತ್ಯಾದಿಯಾಗಿ ಈಶ್ವರನ ಆಪ್ತಕಾಮತ್ವವನ್ನು ವರ್ಣಿಸಿದೆ. ಅದೇ ಅಂಶವನ್ನು ಪ್ರಕೃತಮಂದ ಋಕ್ಕಿನಲ್ಲಿಯೂ ವಿವರಿಸಿದೆ. ಇದೇ ಋಕ್ಕನ್ನು ನಿರುಕ್ತದಲ್ಲಿ ಈರೀತಿ ವಿವರಿಸಿದೆ—

**ದ್ವೌ ದ್ವೌ ಪ್ರತಿಷ್ಠಿತೌ ಸುಕೃತೌ ಧರ್ಮಕರ್ತಾರೌ ದುಷ್ಕೃತಂ ಪಾಪಂ ಪರಿಸಾರಕಮಿತ್ಯಾಚಕ್ಷತೇ । ಸುಪರ್ಣಾ ಸಯುಜಾ ಸಖಾಯೇತ್ಯಾತ್ಮಾನಂ ದುರಾತ್ಮಾನಂ ಪ್ರತ್ಯುತ್ತಿಷ್ಠತಿ ಶರೀರ ಏವ ತಜ್ಜಾಯತೇ............... ಆತ್ಮಗತಿಮಾಚಷ್ಟೇ ॥** (ನಿ. ೧೪-೩೦)

ಇದರ ಅರ್ಥವೂ ಮೇಲೆ ವಿವರಿದಂತೆಯೇ ಇರುತ್ತದೆ.



## ಯತ್ರಾ ಸುಪರ್ಣಾ ಅಮೃತಸ್ಯ ಭಾಗಮನಿಮೇಷಂ ವಿದಥಾಭಿಸ್ವರಂತಿ । ಇನೋ ವಿಶ್ವಸ್ಯ ಭುವನಸ್ಯ ಗೋಪಾಃ ಸ ಮಾ ಧೀರಃ ಪಾಕಮತ್ರಾ ವಿವೇಶ ॥ ೨೧ ॥

ಯಾವ ಆದಿತ್ಯಮಂಡಲದಲ್ಲಿ ಶ್ರೇಷ್ಠವಾದ ಪ್ರಸರವುಳ್ಳ ರಶ್ಮಿಗಳು ತಮ್ಮ ಕರ್ತವ್ಯಜ್ಞಾನದಿಂದ ಉದಕದ ಭಾಗವನ್ನು ಸರ್ವದಾ ಪ್ರವಿಸುವಂತೆ ಮಾಡುತ್ತವೆಯೋ ಮತ್ತು ಯಾವನು ಸಮಸ್ತವಾದ ವಿಶ್ವಕ್ಕೂ ಸ್ವಾಮಿಯಾಗಿಯೂ ರಕ್ಷಕನಾಗಿಯೂ ಆಗಿದ್ದಾನೆಯೋ ಅಂತಹ ಆದಿತ್ಯರೂಪನಾದ ಪರಮೇಶ್ವರನು ಅನುಗ್ರಹಾತ್ಮಕವಾದ ಬುದ್ಧಿಯುಳ್ಳವನಾಗಿ ನಾನು ಅಪರಿಪಕ್ವವಾದ ಜ್ಞಾನದಿಂದ ಕೂಡಿದ್ದರೂ ಸಹ ನನ್ನನ್ನೂ ಈ ತನ್ನ ಮಂಡಲದಲ್ಲಿ ಪ್ರವೇಶಿಸುವಂತೆ ಮಾಡುತ್ತಾನೆ.

ಈ ಋಕ್ಕಿಗೆ ನಿರುಕ್ತದ ವಿವರಣೆಯು ಎರಡು ವಿಧವಾಗಿದೆ.

**ಯತ್ರ ಸುಪರ್ಣಾಃ ಸುಪತನಾ ಆದಿತ್ಯರಶ್ಮಯಃ ಅಮೃತಸ್ಯ ಭಾಗಂ ಉದಕಸ್ಯ ಅನಿಮಿಷಂತೋ ವೇದನೇನಾಭಿಸ್ವರಂತೀತಿ ವಾಭಿಪ್ರಯಂತೀತಿ ವಾ । ಈಶ್ವರಃ ಸರ್ವೇಷಾಂ**

**ಭೂತಾನಾಂ ಗೋಪಾಯಿತಾದಿತ್ಯಃ । 'ಸ ಮಾ ಧೀರಃ ಪಾಕಮತ್ರಾವಿವೇಶ' । ಧೀರೋ ಧೀಮಾನ್ ಪಾಕಃ ಪಕ್ತವ್ಯೋ ಭವತಿ "ವಿಪಕ್ವಪ್ರಜ್ಞ ಆದಿತ್ಯಃ" ಇತ್ಯುಪನಿಷದ್ವರ್ಣೋ ಭವತೀತ್ಯಧಿದೈವತಂ ।** (ನಿ. ೩-೧೨)

ಅತ್ಯಂತ ಆಕರ್ಷಕವಾದ ಪತನವುಳ್ಳ ಆದಿತ್ಯರಶ್ಮಿಗಳು ಪೂರ್ಣವಾದ ಜ್ಞಾನದಿಂದ ಉದಕದ ಕಡೆಗೆ ಪ್ರಸರಿಸಿ ಯಾವ ಆದಿತ್ಯನಲ್ಲಿ ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತವೆಯೋ ಅಂತಹ ಸಕಲ ಲೋಕಕ್ಕೂ ಪಾಲಕನಾದವನೂ, ಪೂರ್ಣವಾಗಿ ಪಕ್ವವಾದ ಪ್ರಜ್ಞೆಯುಳ್ಳವನೂ ಆದ ಆದಿತ್ಯನು ಅಪರಿಪಕ್ವವಾದ ಜ್ಞಾನವುಳ್ಳ ನನ್ನನ್ನು ಅನುಗ್ರಾಹತ್ಮಕವಾದ ಬುದ್ಧಿಯಿಂದ ಸಮೀಪಿಸಿದ್ದಾನೆ. ಇದು ಆಧಿದೈವತವಾದ ವಿವರಣೆಯು.

**ಅಥಾಧ್ಯಾತ್ಮಂ । ಯತ್ರ ಸುಪರ್ಣಾಃ ಸುಪತನಾನೀಂದ್ರಿಯಾಣ್ಯಮೃತಸ್ಯ ಭಾಗಂ ಜ್ಞಾನಸ್ಯಾನಿಮಿಷಂತೋ ವೇದನೇನಾಭಿಸ್ವರಂತೀತಿ ವಾಭಿಪ್ರಯಂತೀತಿ ವಾ । ಈಶ್ವರಃ ಸರ್ವೇಷಾಮಿಂದ್ರಿಯಾಣಾಂ ಗೋಪಾಯಿತಾತ್ಮಾ ಸ ಮಾ ಧೀರಃ ಪಾಕಮತ್ರಾವಿವೇಶೇತಿ ಧೀರೋ ಧೀಮಾನ್ ಪಾಕಃ ಪಕ್ತವ್ಯೋ ಭವತಿ ವಿಪಕ್ವಪ್ರಜ್ಞ ಆತ್ಮೇತ್ಯಾತ್ಮಗತಿಮಾಚಷ್ಟೇ ॥** (ನಿ. ೩-೧೨)

ಆಧ್ಯಾತ್ಮಪರವಾದ ವಿವರಣೆಯು ಈರೀತಿಯಿದೆ. ಯಾವ ಶರೀರದಲ್ಲಿ (ತಮ್ಮನ್ನು ಆಕರ್ಷಿಸುವ ವಿಷಯಗಳ ಕಡೆಗೆ) ಸುಲಭವಾಗಿ ಪ್ರಸರಿಸುವ ಇಂದ್ರಿಯಗಳು ತಮ್ಮ ಸ್ವರೂಪವನ್ನು ತಿಳಿದುಕೊಂಡು ಅಮೃತಸಾಧನವಾದ ಜ್ಞಾನದ ಕಡೆಗೆ ಸರಿಯುತ್ತವೆಯೋ ಅಂತಹ ಶರೀರದಲ್ಲಿ ಸಕಲೇಂದ್ರಿಯಗಳಿಗೂ ಪ್ರಭುವಾದವನೂ, ಪೂರ್ಣಜ್ಞನೂ ಆದ ಆತ್ಮನು (ಪರಮಾತ್ಮನು) ಅಪರಿಪಕ್ವವಾದ ಜ್ಞಾನವುಳ್ಳವನನ್ನು ಅನುಗ್ರಹಾತ್ಮಕವಾದ ಬುದ್ಧಿಯಿಂದ ಸಮೀಪಿಸಿದ್ದಾರೆ ಎಂದು ಎರಡು ವಿಧವಾಗಿ ವಿವರಿಸಿ ಆನುಷಂಗಿಕವಾಗಿ **ಸುಪರ್ಣ** ಮತ್ತು **ಧೀರ** ಎಂಬ ಪದಗಳಿಗೆ ನಿರ್ವಚನವನ್ನೂ ಹೇಳಿದ್ದಾರೆ.

**ಧೀರೋ ಧೀಮಾನ್ ।** ಪ್ರಜ್ಞಾವಂತನೆಂದರ್ಥ. ಈ ಪದವು ಮೇಧಾವಿನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯ ಈಗಿನ ರೂಢಿಯಲ್ಲಿ ಧೀರಶಬ್ದಕ್ಕೆ ಧೈರ್ಯವುಳ್ಳವನೆಂದರ್ಥವಾಗುತ್ತದೆ. ವೇದಗಳಲ್ಲಿಯೂ ಉಪನಿಷತ್ತುಗಳಲ್ಲಿಯೂ ಸಹ **ಪ್ರಾಜ್ಞ,** ವಿವೇಕಿ ಎಂಬರ್ಥದಲ್ಲಿಯೇ ಉಪಯೋಗಿಸಲ್ಪಟ್ಟಿದೆ. ಅಲ್ಲಿಯೂ ಸಹ **ಧೀರನು** ಪ್ರಾಜ್ಞನಾದುದರಿಂದಲೂ ಭಯವನ್ನು ಜಯಿಸಿ ನಿರ್ಭಯನಾಗಿರುವುದೂ ಆಪತ್ಕಾಲದಲ್ಲೂ ಪ್ರಶಾಂತಚಿತ್ತನಾಗಿರುವುದೂ ಇತ್ಯಾದಿ ಗುಣಗಳಿರುವುದರಿಂದಲೂ ಧೈರವುಳ್ಳವನೆಂದೇ ತಾತ್ಪರ್ಯವಾಗುತ್ತದೆ.

**ಯುವಾ ಸುವಾಸಾಃ ಪರಿವೀತ ಆಗಾತ್ಸ ಉ ಶ್ರೇಯಾನ್ಭವತಿ ಜಾಯಮಾನಃ ।**
**ತಂ ಧೀರಾಸಃ ಕವಯಃ ಉನ್ನಯಂತಿ ಸ್ವಾಧ್ಯೋ೩ ಮನಸಾ ದೇವಯಂತಃ ।** (ಋ. ಸಂ. ೩-೮-೪)

ಇತ್ಯಾದಿ ಋಕ್ಕುಗಳಲ್ಲೂ ಮತ್ತು ಗಾ

**ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತಸ್ತೌ ಸಂಪರೀತ್ಯ ವಿವಿನಕ್ತಿ ಧೀರಃ ।**
**ಶ್ರೇಯೋ ಹಿ ಧೀರೋಽಭಿಪ್ರೇಯಸೋ ವೃಣೀತೇ ಪ್ರೇಯೋ ಮಂದೋ ಯೋಗಕ್ಷೇಮಾದ್ವೃಣೀತೇ ॥**
(ಕಠ. ೨-೨)

ಇತ್ಯಾದ್ಯುಪನಿಷದ್ವಾಕ್ಯಗಳಲ್ಲೂ ಸಹ **ಧೀರಶಬ್ದಕ್ಕೆ ಧೀಮಾನ್ ಪ್ರಾಜ್ಞಃ** ಎಂದರ್ಥವಾಗುತ್ತದೆ.

**ಸುಪರ್ಣಾಃ**-- ಸುಪರ್ಣಶಬ್ದವು ರಶ್ಮಿನಾಮಗಳಲ್ಲಿಯೂ (ನಿ. ೨-೧೫) ಅಶ್ವನಾಮಗಳಲ್ಲಿಯೂ (ನಿ. ೨-೨೭) ಪಠಿತವಾಗಿದೆಯಾದರೂ ಸಹ **ಪಕ್ಷಿ, ಬಾಣ** ಇತ್ಯಾದ್ಯರ್ಥಗಳಲ್ಲಿಯೂ ಸಹ ಉಪಯೋಗಿಸಲ್ಪಟ್ಟಿದೆ. ಯಾವ ಅರ್ಥವನ್ನು ಹೇಳಿದರೂ **ಶೋಭನಪತನ** ಎಂದರೆ ಮನೋಹರವಾಗಿ ಸಂಚರಿಸತಕ್ಕದ್ದು ಎಂಬ ಅಭಿಪ್ರಾಯವನ್ನೇ ಕೊಡುತ್ತದೆ. ಉದಾಹರಣೆಗೆ,

**ವಿ ಸುಪರ್ಣೋ ಅಂತರಿಕ್ಷಾಣ್ಯಖ್ಯದ್ಗಭೀರವೇಪಾ ಅಸುರಃ ಸುನೀಥಃ ।**
**ಕ್ವೇ೩ದಾನೀಂ ಸೂರ್ಯಃ ಕಶ್ಚಿಕೇತ ಕತಮಾಂ ದ್ಯಾಂ ರಶ್ಮಿರಸ್ಯಾ ತತಾನ ॥**

**(ಋ. ಸಂ. ೧-೩೫-೭)**

ಎಂಬ ಋಕ್ಕಿನಲ್ಲಿ ಗಂಭೀರವಾದ ಕಂಪನವುಳ್ಳವೂ ಅಂತರಿಕ್ಷವನ್ನೆಲ್ಲಾ ವ್ಯಾಪಿಸುವುವೂ, ಚಿತ್ತಾಕರ್ಷಕವೂ ಆದ ರಶ್ಮಿಯ ವರ್ಣನೆಯಿದೆ. **ಸುಪರ್ಣಶಬ್ದವು** ಇಲ್ಲಿ ರಶ್ಮಿಪರವಾಗಿದೆ. **ಶೋಭನಪತನಾ ರಶ್ಮಯಃ** ಎಂದು ರಶ್ಮಿಯ ವಿಶೇಷ ಗುಣವನ್ನು ತೋರಿಸುತ್ತದೆ. ಇದರಂತೆಯೇ,

**ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ ।**
**ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ॥**

**(ಋ. ಸಂ. ೧-೧೬೪-೪೬)**

ಎಂಬ ಇದೇ ಸೂಕ್ತದ ೪೬ ನೇ ಋಕ್ಕಿನಲ್ಲಿ ಸುಪತನಃ ಗರುತ್ಮಾನ್ ಆಕರ್ಷಕವಾದ ಗಗನಸಂಚಾರವುಳ್ಳ ಗರುಡನೆಂದು ಪಕ್ಷಿಯ ಪರವಾಗಿದೆ. ಮತ್ತು ಹಿಂದೆ ವಿವರಿಸಿದ (೧೬೪-೨೦) ಋಕ್ಕಿನಲ್ಲಿಯೂ ಲೌಕಿಕವಾದ ಪಕ್ಷಿಯ ವಿಶೇಷ ಗುಣವನ್ನು ವರ್ಣಿಸುವುದಾಗಿ ತಿಳಿಸಿದೆ. ಹೀಗೆಯೇ,

**ಉಕ್ಷಾ ಸಮುದ್ರೋ ಅರುಷಃ ಸುಪರ್ಣಃ ಪೂರ್ವಸ್ಯ ಯೋನಿಂ ಪಿತುರಾ ವಿವೇಶ ।**
**ಮಧ್ಯೇ ದಿವೋ ನಿಹಿತಃ ಪೃಶ್ನಿರಶ್ಮಾ ವಿ ಚಕ್ರಮೇ ರಜಸಸ್ಪಾತ್ಯಂತೌ ॥**

**(ಋ. ಸಂ. ೫-೪೭-೩)**

ಎಂಬಲ್ಲಿ ಸುಗಮನವುಳ್ಳ **ಸಮುದ್ರ** (ಅಂತರಿಕ್ಷ) ವೆಂದೂ,

**ಸುಪರ್ಣಂ ವಸ್ತೇ ಮೃಗೋ ಅಸ್ಯಾ ದಂತೋ ಗೋಭಿಃ ಸಂನದ್ಧಾ ಪತತಿ ಪ್ರಸೂತಾ ।**

**(ಋ. ಸಂ. ೬-೭೫-೧೧)**

ಎಂಬ ನಿರುಕ್ತದಲ್ಲಿ ಉದಾಹೃತವಾಗಿರುವ (ನಿ. ೯-೧೯) ಋಕ್ಕಿನಲ್ಲಿ ಸುಪತನವುಳ್ಳ ಬಾಣವೆಂದೂ ಅರ್ಥಮಾಡಿದೆ. ಪ್ರಕೃತವಾದ ಋಕ್ಕಿನಲ್ಲಿ ಅಧಿದೈವತಪಕ್ಷದಲ್ಲಿ ಶೋಭನಪತನಗಳಾದ ರಶ್ಮಿಗಳೆಂದೂ, ಅಧ್ಯಾತ್ಮಪಕ್ಷದಲ್ಲಿ ಶೋಭನಪತನಗಳಾದ ಇಂದ್ರಿಯಗಳೆಂದೂ ಅರ್ಥಮಾಡಿದೆ. **ಸುಪರ್ಣಾ ಅಭಿಸ್ವರಂತಿ** ಎನ್ನುವಾಗ ಅಧಿದೈವತಪಕ್ಷದಲ್ಲಿಯೂ ಮತ್ತು ಅಧ್ಯಾತ್ಮಪಕ್ಷದಲ್ಲಿಯೂ ಸೂಚಿತವಾಗುವ ಅಭಿಪ್ರಾಯಗಳೇನೆಂಬುದನ್ನು ಪರಿಶೀಲಿಸಬೇಕು.

ಅಭಿಸ್ವರಂತಿ ಎನ್ನುವ ಪದಕ್ಕೆ ನಿರುಕ್ತಕಾರರು **ಅಭಿಪ್ರಯಂತಿ** ಎಂದರ್ಥಮಾಡಿದ್ದಾರೆ. ದುರ್ಗಾಚಾರ್ಯರು ಇದನ್ನು ವಿವರಿಸುತ್ತಾ (**ಸ್ವೃ ಶಬ್ದೋಪತಾಪಯೋಃ**) ಉಪತಾಪಾರ್ಥಕವಾದ **ಸ್ವೃ** ಧಾತುವಿನಿಂದ ನಿಷ್ಪನ್ನವಾಗಿ ಸರ್ವಭೂತಗಳನ್ನೂ ತಪಿಸುವಂತೆ ಮಾಡುತ್ತವೆ ಎಂದು ತಾತ್ಪರ್ಯವೆಂದು ತಿಳಿಸಿದ್ದಾರೆ. ಎಂದರೆ ಪೃಥ್ವಿಯಲ್ಲಿರುವ ರಸವನ್ನು ಹೀರುವು. ದರಿಂದ ಪೃಥ್ವಿಯನ್ನು ತಪಿಸುವಂತೆ ಮಾಡುತ್ತವೆಂದು ಅರ್ಥವಾಗುತ್ತದೆ. ಇದು ಅಷ್ಟು ಸ್ವರಸವಾಗಿ ಕಾಣುವುದಿಲ್ಲ

ಆದುದರಿಂದ ಇನ್ನೊಂದು ವಿಧವಾಗಿಯೂ ಇದರ ನಿರ್ವಚನವನ್ನು ತೋರಿಸಿ, **ಅಥ ಅಭಿಮುಖ್ಯೇನ ರಸಾನ್ ಗೃಹೀತ್ವಾ ಆದಿತ್ಯಮಂಡಲಂ ಪ್ರಯಾಂತಿ** । ರಸವನ್ನು ಹೀರಿ ಆದಿತ್ಯಮಂಡಲದ ಅಭಿಮುಖವಾಗಿ ಹೋಗುತ್ತವೆ ಎಂದು ಎರಡನೆಯ ಅರ್ಥವನ್ನು ಹೇಳಿದ್ದಾರೆ. ಈ ಎರಡು ಅರ್ಥಗಳಲ್ಲೂ ರಸಗ್ರಹಣವೇ ಮುಖ್ಯ ತಾತ್ಪರ್ಯವಾದರೂ, ಮೊದಲನೆಯ ವಿವರಣೆಯಂತೆ ಪೃಥ್ವಿಯನ್ನು ತಪಿಸುವುದರಲ್ಲಿ ಅನ್ವಯವಾಗುತ್ತದೆ. ಆದರೆ ಇಲ್ಲಿ ರಶ್ಮಿಗಳ ಲೋಕರಕ್ಷಣೆಯ ತತ್ಪರತೆಯನ್ನು ವರ್ಣಿಸಿರುವುದರಿಂದ ಆ ಕರ್ತವ್ಯ ನಿರ್ವಹಣಕ್ಕಾಗಿಯೂ ಕರ್ತವ್ಯಜ್ಞಾನದಿಂದಲೂ (ವಿದಥಾ) ಪುನಃ ವೃಷ್ಟಿಪತನಕ್ಕೆ ಅನುಕೂಲವಾಗುವಂತೆ ಆ ರಸವನ್ನು ಆದಿತ್ಯನಲ್ಲಿಗೆ ತೆಗೆದುಕೊಂಡು ಹೋಗಿ ಸೇರಿಸುತ್ತವೆಯೆಂಬುದೇ ಉಚಿತವಾಗಿರುತ್ತದೆ. ಋಕ್ಸಂಹಿತೆಯಲ್ಲಿ ಈ ಪದಕ್ಕೆ ಎರಡು ಅರ್ಥಗಳಲ್ಲಿ ಪ್ರಯೋಗವಿರುತ್ತದೆ. ಮೊದಲನೆಯದಾಗಿ,

**ರಥಾನಾಂ ನ ಯೇ೭ ರಾಃ ಸನಾಭಯೋ ಜಿಗೀವಾಂಸೋ ನ ಶೂರಾ ಅಭಿದ್ಯವಃ ।**
**ವರೇಯವೋ ನ ಮರ್ಯಾ ಘೃತಪ್ರುಷೋಽಭಿಸ್ವರ್ತಾರೋ ಅರ್ಕಂ ನ ಸುಷ್ಟುಭಃ ॥**

(ಋ. ಸಂ. ೧೦-೭೮-೪)

ಎಂಬ ಋಕ್ಕಿನಲ್ಲಿ **ಅಭಿಸ್ವರ್ತಾರ ಅಭಿತಃ ಶಬ್ದಯಿತಾರಃ** । ಸ್ತುತಿವಚನವನ್ನು ಪಠಿಸುವವರು ಎಂಬರ್ಥಮಾಡಿರುವುದರಿಂದ **ಅಭಿಸ್ವರ** ಪದಕ್ಕೆ ಸ್ತುತಿವಚನವೆಂದರ್ಥವಾಗುತ್ತದೆ. ಇದರಂತೆಯೇ,

**ನೇಮಿಂ ನಮಂತಿ ಚಕ್ಷಸಾ ಮೇಷಂ ವಿಪ್ರಾ ಅಭಿಸ್ವರಾ ।**
**ಸುದೀತಯೋ ವೋ ಅದ್ರುಹೋಽಪಿ ಕರ್ಣೇ ತರಸ್ವಿನಃ ಸಮೃಕ್ವಭಿಃ ॥**

(ಋ. ಸಂ. ೮-೯೭-೧೨)

ಎಂಬಲ್ಲಿಯೂ ಸಹ **ಅಭಿಸ್ವರಾ ಅಭಿಸ್ವರಣೇನ ಸ್ತೋತ್ರೇಣ** । ಸ್ತೋತ್ರದಿಂದ ಎಂದರ್ಥವಾಗುತ್ತದೆ. ಇದಲ್ಲದೆ ಪರಸ್ಪರಾನುಸರಣವನ್ನು ಸೂಚಿಸುವ ಅರ್ಥದಲ್ಲಿಯೂ ಉಪಯೋಗಿಸಲ್ಪಟ್ಟಿದೆ.

**ಏಕಪಾದ್ಭೂಯೋ ದ್ವಿಪದೋ ವಿ ಚಕ್ರಮೇ ದ್ವಿಪಾತ್ತ್ರಿಪಾದಮಭ್ಯೇತಿ ಪಶ್ಚಾತ್ ।**
**ಚತುಷ್ಪಾದೇತಿ ದ್ವಿಪದಾಮಭಿಸ್ವರೇ ಸಂಪಶ್ಯನ್ ಪಂಕ್ತೀರುಪತಿಷ್ಠಮಾನಃ ॥**

(ಋ. ಸಂ. ೧೦-೧೧೭-೮

ಎಂಬ ಋಕ್ಕಿನಲ್ಲಿ ಉತ್ತಮಾಧಮರು ಅನ್ಯೋನ್ಯಾಪೇಕ್ಷೆಯಿಂದಲೂ ಪರಸ್ಪರವಾದ ಅನುಸರಣೆಯಿಂದಲೂ ಇರುತ್ತಾರೆ ಎಂಬುದನ್ನು ವಿವರಿಸಲು **ಅಭಿಸ್ವರೇ ಸಂಪಶ್ಯನ್** ಎಂದು ವರ್ಣಿಸಿದೆ. ಇಲ್ಲಿ ಅಭಿಸ್ವರ ಶಬ್ದಕ್ಕೆ **ಅಭಿಗಮನ**ವೆಂದರ್ಥ. ಎದುರುಗೊಂಡು ಹೋಗು ಅಥವಾ ಅನುಸರಿಸಿ ಹೋಗು ಎಂದರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಈ ಎರಡರ್ಥಗಳಲ್ಲಿಯೂ ಅನ್ವಯಿಸಬಹುದು. ಹೇಗೆಂದರೆ,

**ಶೀರ್ಷ್ಣಃಕ್ಷೀರಂ ದುಹ್ರತೇ ಗಾವೋ ಅಸ್ಯ ವವ್ರಿಂ ವಸಾನಾ ಉದಕಂ ಪದಾಪುಃ ।**

(ಋ. ಸಂ. ೧-೧೬೪-೭)

ಎಂಬ ಇದೇ ಸೂಕ್ತದ ಹಿಂದಿನ ಋಕ್ಕಿನಲ್ಲಿ ವಿವರಿಸಿರುವಂತೆ ಆದಿತ್ಯರಶ್ಮಿಗಳು ಆದಿತ್ಯನ ಕರ್ತವ್ಯವನ್ನು ನಿರ್ವಹಿಸುವಾಗ ಉದಕವನ್ನು ಸುರಿಸುತ್ತಲೂ ಪುನಃ ಉದಕವನ್ನು ಹೀರಿ ಸೂರ್ಯನಲ್ಲಿಗೆ ಸೇರಿಸುತ್ತಲೂ ಅವನನ್ನು ಸೇವಿಸುತ್ತವೆ. ಮತ್ತು ಅವನ ಮನೋಗತವನ್ನರಿತು ತಮ್ಮ ಕರ್ತವ್ಯಗಳನ್ನು ಮಾಡುತ್ತವೆ. ಉದಕವನ್ನು ಪೃಥ್ವಿಯಿಂದ ಹೀರಿ ಅವನ ಅಭಿಮುಖವಾಗಿ ಹೋಗಿ ಪುನಃ ವೃಷ್ಟಿಪತನಕ್ಕೆ ಅನುಕೂಲಮಾಡುತ್ತವೆ ಇತ್ಯಾದಿಯಾಗಿ ವರ್ಣಿಸಿರುವಂತೆ ಇಲ್ಲಿಯೂ ಸಹ **ಅಮೃತಸ್ಯ ಭಾಗಂ**

ಅಭಿಸ್ವರಂತಿ ಉದಕದ ಅಂಶವನ್ನು ಹೀರಿಕೊಂಡು (ತಮ್ಮ ಕರ್ತವ್ಯ ಜ್ಞಾನವನ್ನರಿತು) ಅವನಲ್ಲಿಗೆ ಸೇರಿಸುತ್ತವೆ ಎಂದು ತಾತ್ಪರ್ಯವಾಗಬಹುದು ಅಥವಾ ತಮ್ಮ ಸೇವಾರೂಪವಾದ ಸ್ತೋತ್ರದಿಂದಲೂ, ಉದಕದೊಡನೆ ಅವನನ್ನು ಸಮೀಪಿಸುವುದರಿಂದಲೂ ಪುನಃ ವೃಷ್ಟಿಯನ್ನು ಸುರಿಸಲು ಅವನನ್ನು ಪ್ರೇರಿಸಿದವು ಎಂದಾಗಲಿ ಆಗಬಹುದು.

**ಅಮೃತಸ್ಯ**—ಅಧಿದೈವತಪಕ್ಷದಲ್ಲಿ ಅಮೃತಶಬ್ದಕ್ಕೆ ಉದಕವೆಂದು ಅರ್ಥಮಾಡಿದೆ. ನಿರುಕ್ತಕಾರರು ಈ ಪದವನ್ನು ಉದಕನಾಮಗಳಲ್ಲಿ ಪಠಿಸಿದ್ದಾರೆ. (ನಿ. ೧-೧೨) ಮತ್ತು ಈ ಋಕ್ಕಿನ ವಿವರಣೆಯನ್ನು ಹೇಳುವಾಗಲೂ ಸಹ **ಉದಕಸ್ಯ** ಎಂದೇ ಅರ್ಥಮಾಡಿದ್ದಾರೆ. (ನಿ. ೩-೧೨)

**ತಸ್ಯ ಯೇ ಪ್ರಾಂಚೋ ರಶ್ಮಯ...... ....ತಾ ಅಮೃತಾ ಆಪಃ ।** (ಛಾ. ಉ. ೩-೧-೨)

ಎಂಬ ಛಾಂದೋಗ್ಯೋಪನಿಷತ್ತಿನಲ್ಲಿ ಆದಿತ್ಯನಿಗೂ ಅಪ್ಪುಗಳಿಗೂ ಇರುವ ಸಂಬಂಧವನ್ನು ತಿಳಿಸುವಾಗ **ಆಪಃ** ಎಂಬ ಪದಕ್ಕೆ **ಅಮೃತಾಃ** ಎಂಬ ವಿಶೇಷಣವಿದೆ. ಇದನ್ನು ಶಂಕರಾಚಾರ್ಯರು **ಅಮೃತಾರ್ಥತ್ವಾದತ್ಯಂತರಸವತ್ಯ ಆಪೋ ಭವಂತಿ** ಎಂದು ವಿವರಿಸಿದ್ದಾರೆ. ಇದನ್ನು ಮುಂದುವರಿಸುತ್ತಾ,

ಅಧ್ಯಾತ್ಮಪಕ್ಷದಲ್ಲಿ:—**ಅಮೃತಸ್ಯ** (ಅಮರಣಧರ್ಮಣಃ) **ಜ್ಞಾನಸ್ಯ** ಎಂದು ನಿರುಕ್ತಕಾರರು ಅರ್ಥವಯಡಿರುವಂತೆಯೇ ಸಾಯಣರೂ ಅರ್ಥಮಾಡಿ ಒಂದು ವಿಶೇಷವನ್ನೂ ಹೇಳಿದ್ದಾರೆ. **ಅತ್ರ ವಿಷಯಾವಚ್ಛಿನ್ನಚೈತನ್ಯಂ ಅಮೃತಮಿತ್ಯುಚ್ಯತೇ** ಎಂದು ವಿವರಿಸುತ್ತಾ **ವಿಷಯಾವಚ್ಛಿನ್ನವಾದ ಚೈತನ್ಯಕ್ಕೂ ವೃತ್ತ್ಯವಚ್ಛಿನ್ನಚೈತನ್ಯಕ್ಕೂ** ವ್ಯತ್ಯಾಸವನ್ನು ತೋರಿಸಿದ್ದಾರೆ. ಈ ವಿವರಣೆಯು,

**ದ್ವೇ ಅಕ್ಷರೇ ಬ್ರಹ್ಮಪರೇ ತ್ವನಂತೇ ವಿದ್ಯಾವಿದ್ಯೇ ನಿಹಿತೇ ಯತ್ರ ಗೂಢೇ । ಕ್ಷರಂ ತ್ವವಿದ್ಯಾ ಹ್ಯಮೃತಂ ತು ವಿದ್ಯಾ ವಿದ್ಯಾವಿದ್ಯೇ ಈಶತೇ ಯಸ್ತು ಸೋಽನ್ಯಃ ।** (ಶ್ವೇ. ಉ. ೫-೧)

ಅಕ್ಷರವೂ ಅನಂತವೂ ಆದ ಪರಬ್ರಹ್ಮನಲ್ಲಿ ವಿದ್ಯಾವಿದ್ಯೆಗಳು ನಿಹಿತವಾಗಿವೆ. ಅದರಲ್ಲಿ ಅವಿದ್ಯೆಯು ಕ್ಷರವು; ವಿದ್ಯೆಯು ಅಮೃತವು, ಎಂಬ ವ್ಯತ್ಯಾಸವನ್ನು ತೋರಿಸುವಂತೆ ಇಲ್ಲಿಯೂ ಸಹ ವಿಷಯಾವಚ್ಛಿನ್ನವಾದ ಚೈತನ್ಯಕ್ಕೂ, ವೃತ್ತ್ಯವಚ್ಛಿನ್ನವಾದ ಚೈತನ್ಯಕ್ಕೂ ವ್ಯತ್ಯಾಸವನ್ನು ತೋರಿಸಿದೆ. ಎರಡಕ್ಕೂ ಆತ್ಮನೇ ಆಧಾರವು. ಆದುದರಿಂದಲೇ **ಯತ್ರ ಯಸ್ಮಿನ್ನಾತ್ಮನಿ ಅಭಿಸ್ವರಂತಿ** ಎಂದು ಎರಡಕ್ಕೂ ಒಂದೇ ಆಧಾರವಾದ ಆತ್ಮವು ವರ್ಣಿತವಾಗಿದೆ.

**ಅನಿಮೇಷಂ**—ಎಂಬ ಪದಕ್ಕೆ ಉದಕಪರವಾದ ಅರ್ಥದಲ್ಲಿ ಅನವರತವಾಗಿ ಎಂದೂ, ಜ್ಞಾನಪರವಾದ ಅರ್ಥದಲ್ಲಿ ನಿಮೇಷರಹಿತವಾದುದು ಎಂದೂ ಅರ್ಥವು.

**ಧೀರಃ ಪಾಕಮತ್ರಾ ವಿವೇಶ**—ಎಂಬುದಕ್ಕೆ ಸಾಯಣರು ಎರಡು ವಿಧವಾಗಿ ಅರ್ಥಮಾಡಿದ್ದಾರೆ. ಮೊದಲನೆಯದಾಗಿ:—**ಸ ಪರಮೇಶ್ವರಃ ಧೀರಃ ಸಮಾಧಿನಿಷ್ಠಃ ಸರ್ವದಾ ಅವಿಕ್ರಿಯೋ ಮಾಂ ಪಾಕಂ ಪರಿ ಪಕ್ವಮನಸ್ಕಂ ಯಾಗಾದಿನಾ ಅಪಗತರಜಸ್ತಮಸ್ತ್ವೇನ ದರ್ಪಣವದತಿನಿರ್ಮಲಸತ್ತ್ವೋದ್ರಿಕ್ತಮನಸ್ಕಂ ಮಾಂ ಆ ವಿವೇಶ ।** ಸಮಾಧಿನಿಷ್ಠನಾದ ಪರಮೇಶ್ವರನು ಯಾಗಾದಿಸತ್ಕಾರ್ಯಗಳಿಂದ ರಜಸ್ತಮೋಗುಣಗಳನ್ನು ನಾಶಮಾಡಿ ಪರಿಪಕ್ವವಾದುದೂ, ಸತ್ತ್ವಗುಣದಿಂದ ತುಂಬಿದವಾದುದೂ, ಕನ್ನಡಿಯಂತೆ ಅತಿಶುದ್ಧವಾದುದೂ ಆದ ನನ್ನನ್ನು ಪ್ರವೇಶಿಸಿದನು ಎಂದೂ, ಎರಡನೆಯದಾಗಿ,

**ಯದ್ವಾ, ಅಪರಿಪಕ್ವಮನಾಃ ಅಹಂ ಪೂರ್ವಂ ಅಜ್ಞಾನದಶಾಯಾಂ ಮದನ್ಯಃ ಈಶ್ವರೋಽಸ್ತೀತಿ ಅವಿದ್ವಾನ್ ತತಃ ಪರಮಸ್ತಿ ಕಶ್ಚಿತ್ಸಜ್ಞಃ........ ಪಶ್ಚಾದ್ಗುರುಶಾಸ್ತ್ರಾಭ್ಯಾಂ ಸ ಏವಾಹಮಸ್ಮೀತಿ ಮತ್ವಾ........ ಪರಿಪೂರ್ಣಃ ಪರಮಾತ್ಮಾಭವಂ |** ಜ್ಞಾನಸಾಧನೆಯ ಪೂರ್ವಾವಸ್ಥೆಯಲ್ಲಿ ನಾನು ಬೇರೆ, ಈಶ್ವರನು ಬೇರೆ ಎಂಬ ಭೇದ ಬುದ್ಧಿಯನ್ನಿಟ್ಟುಕೊಂಡು ಅನಂತರ ಶಾಸ್ತ್ರಾಭ್ಯಾಸದಿಂದಲೂ, ಗುರುಗಳ ಉಪದೇಶದಿಂದಲೂ ಭೇದಭಾವವನ್ನು ತ್ಯಜಿಸಿ **ಅಹಮಸ್ಮಿ** ಎಂಬ ಭಾವನೆಯಿಂದ ಈಶ್ವರನಲ್ಲಿ ಐಕ್ಯವನ್ನು ಹೊಂದಿದೆನು ಎಂಬರ್ಥವೆಂದೂ ತಿಳಿಸಿದ್ದಾರೆ. ಎರಡನೆಯ ಅರ್ಥದ ಮೇರೆ, ಪಾಕಶಬ್ದಕ್ಕೆ ಅಪರಿಪಕ್ವಮನಸ್ಸುಳ್ಳವನೆಂಬುದು ಹೇಗೆಂಬುದನ್ನು ಇದೇ ಸೂಕ್ತದ ೫ ನೇ ಋಕ್ಕಿನಲ್ಲಿ **ಪಾಕಃ ಪೃಚ್ಛಾಮಿ ಮನಸಾ ವಿಜಾನನ್** ಎಂಬ ವಾಕ್ಯವನ್ನು ವಿವರಿಸುವಾಗ ತಿಳಿಸಿದೆ. ಇದನ್ನೇ ನಿರುಕ್ತಕಾರರೂ ವಿವರಿಸುತ್ತಾ **ಪಾಕಃ ಪಕ್ತವ್ಯೋ ಭವತಿ ವಿಪಕ್ವಪ್ರಜ್ಞ ಆತ್ಮೇತ್ಯಾತ್ಮಗತಿಮಾಚಷ್ಟೇ** ಎಂದು ತಿಳಿಸಿದ್ದಾರೆ.



**ಯಸ್ಮಿನ್ವೃಕ್ಷೇ ಮಧ್ವದಃ ಸುಪರ್ಣಾ ನಿವಿಶಂತೇ ಸುವತೇ ಚಾಧಿ ವಿಶ್ವೇ |**
**ತಸ್ಯೇದಾಹುಃ ಪಿಪ್ಪಲಂ ಸ್ವಾದ್ವಗ್ರೇ ತನ್ನೋನ್ನಶದ್ಯಃ ಪಿತರಂ ನ ವೇದ || ೨೨ ||**

ಯಾವ ಆದಿತ್ಯರೂಪವಾದ ವೃಕ್ಷದಲ್ಲಿ ಉದಕವನ್ನು ಸೇವಿಸತಕ್ಕ ರಶ್ಮಿಗಳು ರಾತ್ರಿಯ ಕಾಲದಲ್ಲಿ ಪ್ರವೇಶಿಸುತ್ತವೆಯೋ ಮತ್ತು ಪುನಃ ಉದಯಕಾಲದಲ್ಲಿ ಲೋಕಗಳಮೇಲೆಲ್ಲಾ ಆದಿತ್ಯನ ಪ್ರಕಾಶವನ್ನು ಹರಡುತ್ತವೆಯೋ ಅದೇ ಆದಿತ್ಯನ ಪಾಲಕವಾದ ಫಲವನ್ನು ರಸವತ್ತನ್ನಾಗಿಯೂ ಉಳಿದ ಎಲ್ಲಾ ಫಲಗಳಿಗಿಂತಲೂ ಉತ್ತಮವಾದದ್ದನ್ನಾಗಿಯೂ ತತ್ತ್ವವಿತ್ತುಗಳು ಹೇಳುತ್ತಾರೆ. ಯಾವ ಮನುಷ್ಯನು ಜಗತ್ಪಾಲಕನಾದ ಆದಿತ್ಯನನ್ನು ಉಪಾಸನಾದಿಗಳಿಂದ ತಿಳಿಯುವುದಿಲ್ಲವೋ ಅವನು ಆ ಫಲವನ್ನು ಪಡೆಯುವುದಿಲ್ಲ.

ಇಲ್ಲಿ ಅಧಿದೈವತಪಕ್ಷದಲ್ಲಿ ಆದಿತ್ಯನನ್ನೂ ಅಧ್ಯಾತ್ಮಪಕ್ಷದಲ್ಲಿ ಆತ್ಮನನ್ನೂ ಸ್ತುತಿಸಿದೆ. ಯಾವ ಆದಿತ್ಯನಲ್ಲಿ ರಶ್ಮಿಗಳು ರಾತ್ರಿಯ ಕಾಲದಲ್ಲಿ ಪ್ರವೇಶಿಸಿ ಪುನಃ ಉದಯಕಾಲದಲ್ಲಿ ಅವನ ಪ್ರಕಾಶವನ್ನು ಜಗತ್ತಿಗೆ ಹರಡುತ್ತವೆಯೋ ಅಂತಹ ಆದಿತ್ಯನನ್ನು ಉಪಾಸನಾದಿಗಳಿಂದ ಪೂಜಿಸತಕ್ಕವರು ಆದಿತ್ಯರೂಪವಾದ ವೃಕ್ಷದಲ್ಲಿರುವುದೂ, ಅತ್ಯಂತ ಸ್ವಾದುವಾದುದೂ, ಉಳಿದ ಎಲ್ಲಾ ಫಲಗಳಿಗಿಂತಲೂ ಅತ್ಯುತ್ತಮವಾದುದೂ ಆದ ಫಲವನ್ನು ಭೋಗಿಸುವರೆಂದೂ ಉಳಿದವರಿಗೆ ದುಲಭ್ಯವಿಲ್ಲವೆಂದೂ ಹೇಳಿದೆ **ಪಿತರಃ ನ ವೇದ** ಎಂಬುದರಿಂದ ಜ್ಞಾನಕ್ಕೆ ಪ್ರಾಶಸ್ತ್ಯವನ್ನು ಕೊಟ್ಟಿದೆ. ಆ ಫಲಾಸ್ವಾದಕ್ಕೆ ಆದಿತ್ಯನ ಸ್ವರೂಪಜ್ಞಾನವು ಅತ್ಯವಶ್ಯವೆಂದು ತಿಳಿಸಿದೆ. ಇದು ಅಧಿದೈವತಪಕ್ಷ. ಅಧ್ಯಾತ್ಮಪಕ್ಷದಲ್ಲಿ,

> **ಯಸ್ಮಿನ್ಪರಮಾತ್ಮನಿ ವೃಕ್ಷೇ ಸುಪರ್ಣಾಃ ಶೋಭನಗಮನಾನೀಂದ್ರಿಯಾಣಿ ಮಧ್ವದಃ ಜ್ಞಾನಸ್ವಾತ್ತ್ರಾಣಿ ನಿವಿಶಂತೇ ಸ್ವಾಪಕಾಲೇ ಸ್ವಸ್ವವಿಷಯೇಭ್ಯಃ ಪ್ರತಿನಿವೃತ್ತಾನಿ ಪುನಃ ಪ್ರಬೋಧಕಾಲೇ ವಿಶ್ವಸ್ಮೋಪರಿ ಸುವತೇ ಸ್ವಸ್ವವಿಷಯಾನ್ ಲಭಂತೇ | ತಸ್ಯ ಪರಮಾತ್ಮನಃ ಪಿಪ್ಪಲಂ ಪಾಲಕಂ ...................||**

ಯಾವ ಪರಮಾತ್ಮರೂಪವಾದ ವೃಕ್ಷದಲ್ಲಿ ಸುಲಭಸಂಚಾರಿಗಳಾದವೂ, ಜ್ಞಾನದ ಆಸ್ವಾದನೆಯನ್ನು ಅನುಭವಿಸುವುವೂ ಆದ ಇಂದ್ರಿಯಗಳು ಸ್ವಾಪಕಾಲದಲ್ಲಿ ತಮ್ಮ ವಿಷಯಗಳಿಂದ ಹಿಂತಿರುಗಿ ಆತ್ಮನಲ್ಲೇ ಲೀನವಾಗಿ ಅನಂತರ ಜಾಗೃತ್ಕಾಲದಲ್ಲಿ ಪುನಃ ತಮ್ಮ ವಿಷಯಗಳೊಡನೆ ಸಂಪರ್ಕವನ್ನು ಹೊಂದುತ್ತವೆಯೋ ಅಂತಹ ಪರಮಾತ್ಮನ ಸ್ವರೂಪವು, ಅದರ ಅನುಭವದಿಂದ ಲಭಿಸ

ತಕ್ಕವೂ, ಅತ್ಯಂತ ಸ್ವಾದುವಾದುದೂ, ಉಳಿದ ಎಲ್ಲಾ ಫಲಗಳಿಗಿಂತಲೂ ಅತ್ಯುತ್ತಮವಾದುದೂ ಆಗಿರುತ್ತದೆ. ಆದರೆ ಈ ಫಲದ ಭೋಗವು ಯಾರಿಗೆ ಸಾಧ್ಯ ಅಥವಾ ಯಾರಿಗೆ ಲಭಿಸತಕ್ಕದ್ದಲ್ಲವೆಂದರೆ, **ಯಃ ಪಿತರಂ ನ ವೇದ ನ ತನ್ನೋನ್ನಶತ್ ।** ಪಾಲಕನಾದ ಈ ಪರಮಾತ್ಮನ ಸ್ವರೂಪವನ್ನು ತಿಳಿದವನಿಗೆ ಲಭಿಸುತ್ತದೆ ತಿಳಿಯದ ಅಜ್ಞಾನಿಗೆ ಲಭಿಸುವುದಿಲ್ಲ ಎಂದರ್ಥವಾಗುತ್ತದೆ. ಇದೇ ವಿಧವಾಗಿ ಆದಿತ್ಯನಿಗೂ ಪರಮಾತ್ಮನಿಗೂ ತಾದಾತ್ಮ್ಯವನ್ನು ಹೇಳಿ ಏಕರೂಪವಾದ ವರ್ಣನೆಯೂ ಸ್ತುತಿಯೂ ಇರತಕ್ಕ ಸನ್ನಿವೇಶಗಳು ಸಂಹಿತೆಯಲ್ಲಿಯೂ ಆರಣ್ಯಕಾದಿಗಳಲ್ಲಿಯೂ ಅನೇಕವಿರುತ್ತವೆ. ಉದಾಹರಣೆಗೆ,

**ಮರೀಚಯಃ ಸ್ವಾಯಂಭುವಾಃ । ಯೇ ಶರೀರಾಣ್ಯಕಲ್ಪಯನ್ । ತೇ ತೇ ದೇಹಂ ಕಲ್ಪಯಂತು ಮಾ ಚ ತೇ ಖ್ಯಾಸ್ಮ ತೀರಿಷತ್ । ಉತ್ತಿಷ್ಠತ ಮಾ ಸ್ವಪ್ತ । ಅಗ್ನಿಮಿಚ್ಛಧ್ವಂ ಭಾರತಾಃ । ರಾಜ್ಞಃ ಸೋಮಸ್ಯ ತೃಪ್ತಾಸಃ ಸೂರ್ಯೇಣ ಸಯುಜೋಷಸಃ । ಯುವಾ ಸುವಾಸಾಃ । ಅಷ್ಟಾಚಕ್ರಾ ನವದ್ವಾರಾ । ದೇವಾನಾಂ ಪೂರಯೋಧ್ಯಾ । ತಸ್ಯಾಗ್ಂ ಹಿರಣ್ಮಯಃ ಕೋಶಃ । ಸ್ವರ್ಗೋ ಲೋಕೋ ಜ್ಯೋತಿಷಾವೃತಃ । ಯೋ ವೈ ತಾಂ ಬ್ರಹ್ಮಣೋ ವೇದ । ಅಮೃತೇನಾ-ವೃತಾಂ ಪುರೀಂ । ತಸ್ಮೈ ಬ್ರಹ್ಮ ಚ ಬ್ರಹ್ಮಾ ಚ । ಆಯುಃ ಕೀರ್ತಿಂ ಪ್ರಜಾಂ ದದುಃ । ವಿಭ್ರಾಜ-ಮಾನಾಗ್ಂ ಹರಿಣೀಂ । ಯಶಸಾ ಸಂಪರೀವೃತಾಂ । ಪುರಗ್ಂ ಹಿರಣ್ಮಯೀಂ ಬ್ರಹ್ಮಾ ॥**

(ತೈ. ಆ. ೧-೨೭-೨,೩)

ಎಂಬ ವಾಕ್ಯಗಳಲ್ಲಿ ಪ್ರಕೃತವಾದ ಋಕ್ಕಿನಲ್ಲಿರುವ ಅಂಶಗಳೆಲ್ಲವೂ ಇರುತ್ತವೆ. ಇಲ್ಲಿ **ಸುಪರ್ಣ** ಶಬ್ದದಿಂದ ಬೋಧಿತವಾಗುವ ಅರ್ಥವು **ಮರೀಚಯಃ** ಎಂಬ ಪದದಿಂದ ಸೂಚಿತವಾಗಿದೆ. **ರಶ್ಮಯಃ ಶರೀರಾಣ್ಯಾತ್ಮೋಪಾಸಕದೇಹಾನ-ಕಲ್ಪಯನ್ಸ್ಕೃತವಂತಸ್ತೇ ತವ ದೇಹಂ ಕಲ್ಪಯಂತು ।** ಸೂರ್ಯಶರೀರದ ಅವಯವಗಳಾದ ರಶ್ಮಿಗಳೆಂದೂ, ಆತ್ಮೋಪಾಸನೆಗೆ ಸಾಧನವಾದ ದೇಹದ ಇಂದ್ರಿಯಾದ್ಯವಯವಗಳೆಂದೂ ಅರ್ಥವಾಗುತ್ತದೆ. ಇಂತಹ ರಶ್ಮಿಗಳಾಗಲಿ ಇಂದ್ರಿಯಾದ್ಯವಯವಗಳಾಗಲಿ ಆದಿತ್ಯರೂಪನಾದ ಪರಮಾತ್ಮನಲ್ಲಿ ಸೇರಿ ಪುನಃ ಜಗತ್ಕಲ್ಯಾಣಕ್ಕೂ ಆತ್ಮಕಲ್ಯಾಣಕ್ಕೂ ಮಾರ್ಗವನ್ನು ಕಲ್ಪಿಸುತ್ತವೆ. ಆದರೆ ಇವು ಕಲ್ಯಾಣ ಸಾಧಕವಾಗಬೇಕಾದರೆ ಮುಖ್ಯವಾಗಿ ಆದಿತ್ಯನ ಅಥವಾ ಆದಿತ್ಯರೂಪನಾದ ಪರಮಾತ್ಮನ ಸ್ವರೂಪಜ್ಞಾನವು ಅತ್ಯವಶ್ಯವಾಗಿರಬೇಕು. ಆ ಮುಖ್ಯವಾದ ಅಂಶವನ್ನು ಪ್ರಕೃತವಾದ ಋಕ್ಕಿನಲ್ಲಿ **ಯಃ ಪಿತರಂ ನ ವೇದ ನೋನ್ನಶತ್** ಎಂದು ನಿಷೇಧರೂಪದಲ್ಲೂ; ಆರಣ್ಯಕ ವಾಕ್ಯದಲ್ಲಿ **ಯೋ ವೈ ತಾಂ ಬ್ರಹ್ಮಣೋ ವೇದ** ಎಂಬ ವಿಧಿರೂಪದಲ್ಲೂ ಉಕ್ತವಾಗಿದೆ. **ಪಿಪ್ಪಲಂ ಫಲಂ ಸ್ವಾದು** ಎಂಬುದನ್ನು **ಅಮೃತೇನಾವೃತಾಂ ಪುರೀಂ** ಎಂಬ ವಾಕ್ಯದಿಂದ ವಿವರಿಸಿದೆ. ಪರಮಾನಂದರೂಪವಾದ ಈ ಫಲಾಸ್ವಾದದಿಂದ ಲಭಿಸತಕ್ಕ ತೃಪ್ತಿಯನ್ನು ಇನ್ನು ಯಾವ ಫಲವೂ ಕೊಡಲಾರವು. ಸ್ವರ್ಗಾದಿರೂಪವಾದ ಇತರ ಫಲಗಳಿಲ್ಲವೇ ಎಂಬ ಪ್ರಶ್ನೆಯು ಸಂಭವಿಸಿದರೆ ಅದಕ್ಕೆ ಉತ್ತರವಾಗಿ ಸಾಯಣರು **ಇತರಸ್ವರ್ಗಾದಿಫಲಾನಿ ಪುನರ್ಜ-ನನಾದ್ಯಾಪಾದಕತ್ವಾತ್ ಆಪಾತಸ್ವಾದೂನಿ ।** ಇತರ ಸ್ವರ್ಗಾದಿಫಲಗಳು ಪುನಃಪುನಃ ಜನ್ಮಗಳನ್ನು ಲಭಿಸುವಂತೆ ಮಾಡುವುದರಿಂದ ಅವು ಈ ಅಮೃತರೂಪವಾದ ಆನಂದದಷ್ಟು ಉತ್ತಮವಾದ ಫಲವನ್ನು ಕೊಡತಕ್ಕವಲ್ಲ ಎಂದು ವಿಶದಪಡಿಸಿ ತಿಳಿಸಿದ್ದಾರೆ. ಉಪನಿಷದಾದಿಗಳಲ್ಲೂ ಸಹ ಆದಿತ್ಯನಿಗೂ ಪರಮಾತ್ಮನಿಗೂ ಈರೀತಿ ತಾದಾತ್ಮ್ಯವನ್ನು ತೋರಿಸಿ ಹೇಳಿರುವ ವರ್ಣನೆಗಳನ್ನು ತಿಳಿಯುವ ಮೊದಲು ಪ್ರಕೃತವಾದ ಋಕ್ಕಿನಲ್ಲಿ ಅಧಿದೈವತವಾದ ಆದಿತ್ಯನ ವರ್ಣನವನ್ನೂ, ಆತನ ಅವಯವಗಳಾದ ರಶ್ಮಿಗಳ ಸ್ವರೂಪವನ್ನೂ, ಅಧ್ಯಾತ್ಮಪಕ್ಷದಲ್ಲಿ ಆತ್ಮನ ವರ್ಣನವನ್ನೂ ಮತ್ತು ತದಾಧಾರವಾದ ದೇಹದ ಅವಯವಗಳಾದ ಇಂದ್ರಿಯಾದಿಗಳ ಸ್ವರೂಪವನ್ನೂ ವಿಷಯಾಸಕ್ತಗಳಾದ ಇಂದ್ರಿಯಗಳು ಆತ್ಮನಲ್ಲಿ ಪ್ರವೇಶಿಸಿ ಆತ್ಮಾನಂದಕ್ಕೆ ಯಾವರೀತಿ ಸಾಧಕಗಳಾಗುತ್ತವೆಂಬುದನ್ನೂ ವಿವರಿಸಿರುವ ವಾಕ್ಯಗಳಿಗೆ ವಾಕ್ಯಗಳಿಗೆ ಸರಿಯಾದ ಅರ್ಥವನ್ನು ಪರಿಶೀಲಿಸಬೇಕು.

ಅಧಿದೈವತಪಕ್ಷದಲ್ಲಿ— **ವೃಕ್ಷೇ** ಎಂಬ ಪದಕ್ಕೆ **ವೃಕ್ಷವತ್ ಸರ್ವಫಲಾಶ್ರಯಭೂತೇ।** ವೃಕ್ಷದಂತೆ ಸಕಲವಿಧವಾದ ಫಲಕ್ಕೂ ಆಶ್ರಯಭೂತವಾದ (ಆದಿತ್ಯನಲ್ಲಿ) ಎ ದರ್ಥಮಾಡಿದೆ. ಅಥವಾ ವೃಕ್ಷವು ಸಕಲವಿಧವಾದ ಪ್ರಾಣಿಗಳಿಗೂ ಆಧಾರವಾಗಿರುವಂತೆ ಆದಿತ್ಯನು ಸಕಲ ಲೋಕಗಳಿಗೂ ಅಧಾರಭೂತನೆಂದೂ ಸಹ ಅರ್ಥಮಾಡಿದರೆ ತಪ್ಪಾಗಲಾರದು.

**ಧರ್ತಾ ದಿವೋ ವಿಭಾತಿ ತಪಸಸ್ಪೃಥಿವ್ಯಾಮಿತಿ । ಧರ್ತಾ ಹ್ಯೇಷ ದಿವೋ ವಿಭಾತಿ ತಪಸಸ್ಪೃಥಿವ್ಯಾಂ ಧರ್ತಾ ದೇವೋ ದೇವಾನಾಮಮರ್ತ್ಯಸ್ತಪೋಜಾ ॥** (ಶ. ಬ್ರಾ. ೧೪ ೧-೪-೭)

ಇತ್ಯಾದಿ ವಾಕ್ಯಗಳಲ್ಲಿ ಈ ಎರಡರ್ಥಗಳೂ ಸೂಚಿತವಾಗಿ ಆದಿತ್ಯನು ಸಕಲ ಲೋಕಗಳ ಧಾರಕನೂ ಮತ್ತು ಸಕಲ ಲೋಕಗಳ ಫಲದಾಯಕನೂ ಆಗಿರುವನೆಂದು ವರ್ಣಿಸಿರುವುದರಿಂದ ಆದಿತ್ಯನು ಸಕಲಾಧಾರಕನು ಮತ್ತು ಸರ್ವಫಲದಾಯಕನು.

**ಸುಪರ್ಣ**ಶಬ್ದಕ್ಕೆ ರಶ್ಮಿಯೆಂದೂ, ಈ ರಶ್ಮಿಗಳೇ ಉದಕವನ್ನು ಪೃಥ್ವಿಯಿಂದ ಆಕರ್ಷಿಸಿ, ಆದಿತ್ಯನಲ್ಲಿ ಸೇರಿಸಿ ಪುನಃ ವೃಷ್ಟಿಪತನಕ್ಕೆ ಕಾರಣಗಳಾಗುವುವೆಂದೂ ಹಿಂದೆ ವಿವರಿಸಿದೆ. ಉದಕರೂಪವಾದ ರಸವನ್ನು ಹೀರುವುದರಿಂದಲೇ ಈ ರಶ್ಮಿಗಳಿಗೆ **ಮಧ್ವದ** ಎಂಬ ವಿಶೇಷಣವಿದೆ. **ಮಧ್ವಿತ್ಯುದಕನಾಮ । ತತ್ ಅದಂತೀತಿ ಮಧ್ವದಃ ಉದಕಸ್ಯ ಅತ್ತಾರಃ ।** ಮಧುವೆಂದರೆ ಉದಕವು ಅದನ್ನು ಭಕ್ಷಿಸುತ್ತದಾದುದರಿಂದ ರಶ್ಮಿಗಳಿಗೆ **ಮಧ್ವದಃ** ಎಂಬ ವಿಶೇಷಣವೆಂದು ಸಾಯಣರು ವಿವರಿಸಿದ್ದಾರೆ ಈ ರಶ್ಮಿಗಳು ರಾತ್ರಿಯಕಾಲದಲ್ಲಿ ಆದಿತ್ಯನಲ್ಲಿ ಸುಪ್ತವಾಗಿ ಉದಯಕಾಲದಲ್ಲಿ ಹೊರಗೆ ಅವಿರ್ಭವಿಸುತ್ತಾ ಆದಿತ್ಯನ ಪ್ರಕಾಶವನ್ನು ಲೋಕಕ್ಕೆಲ್ಲಾ ಹರಡುತ್ತವೆ.

ಈ ಆದಿತ್ಯರೂಪದ ವೃಕ್ಷದ ಫಲವನ್ನು ವರ್ಣಿಸುತ್ತಾ **ಪಿಪ್ಪಲಂ ಸ್ವಾದು**–ಇದು ಪಾಲಕವಾದುದೂ ರಸವತ್ತಾದುದೂ ಆದ ಫಲವೆಂದು ತಿಳಿಸಿದೆ. ಮತ್ತು ಎಲ್ಲಾ ಫಲಗಳಿಗಿಂತಲೂ ಉತ್ತಮವಾದುದೆಂದು **ಅಗ್ರೇ** ಎಂಬ ಪದದಿಂದ ಸೂಚಿಸಿದೆ. ಆದಿತ್ಯನಿಂದ ಆಭೃತವಾಗತಕ್ಕ ಈ ಫಲದ ವೈವಿಧ್ಯವನ್ನೂ ಮಹತ್ತ್ವವನ್ನೂ ತೈತ್ತಿರೀಯಾರಣ್ಯಕದಲ್ಲಿ ಈರೀತಿ ವರ್ಣಿಸಿ ಪ್ರಶಂಸಿಸಿದೆ. ಇಲ್ಲಿ ಹೃದಯಸ್ಥವಾದ ಪರಮಾತ್ಮನಿಗೂ ಆದಿತ್ಯನಿಗೂ ತಾದಾತ್ಮ್ಯವನ್ನು ತೋರಿಸುತ್ತಾ ಈ ಆದಿತ್ಯನನ್ನು ದೇವತೆಗಳೂ ಹುಡುಕಿ ಅವನಿಂದ ಲಭಿಸತಕ್ಕ ಫಲವನ್ನು ಹೊಂದಿದರು ಎಂದು ತಿಳಿಸಿದೆ. ಅಲ್ಲದೆ, ಕರ್ಮಕ್ಕೂ ಜ್ಞಾನಕ್ಕೂ ಇರತಕ್ಕ ಸಂಬಂಧವನ್ನು ತಿಳಿಸಿ ಎರಡೂ ಒಂದೇ ಫಲವನ್ನು ಕೊಡತಕ್ಕದ್ದೆಂದೂ ಪ್ರಶಂಸಿಸಿದೆ.

**ಪರೇಣ ತಂತುಂ ಪರಿಷಿಚ್ಯಮಾನಂ । ಅಂತರಾದಿತ್ಯೇ ಮನಸಾ ಚರಂತಂ । ದೇವಾನಾಗ್ಂ ಹೃದಯಂ ಬ್ರಹ್ಮಾನ್ವವಿಂದತ್ । ಬ್ರಹ್ಮೈತದ್ಬ್ರಹ್ಮಣ ಉಜ್ಜಭಾರ । ಅರ್ಕಗ್ಂ ಶ್ಚೋತಂತಗ್ಂ ಸರಿರಸ್ಯ ಮಧ್ಯೇ । ಆ ಯಸ್ಮಿನ್ತ್ಸಪ್ತಪೇರವಃ । ನೇಹಂತಿ ಬಹುಲಾಗ್ ಶ್ರಿಯಂ । ಬಹ್ವಶ್ವಾಮಿಂದ್ರ ಗೋಮತೀಂ ॥** (ತೈ. ಆ. ೩-೧೧-೬)

ಪ್ರಜಾಪತಿಯು ಇಂದ್ರಾದಿಗಳ ಹೃದಯದಲ್ಲಿರುವ ಪರಮಾತ್ಮನನ್ನು ಅನ್ವೇಷಣಮಾಡಿ ಕೊನೆಗೆ ಅವನ ದರ್ಶನವನ್ನು ಪಡೆದನು. ಈ ಪರಮಾತ್ಮನು ಯಜ್ಞಯಾಗಾದಿ ಕರ್ಮಗಳಿಗೆ ಫಲವನ್ನು ಕೊಡತಕ್ಕ ಕಾಲದಲ್ಲಿ ವೃಷ್ಟಿಯನ್ನು ಸುರಿಸುವುದಕ್ಕಾಗಿ ಆದಿತ್ಯಮಂಡಲದಲ್ಲಿ ಸಂಚರಿಸುತ್ತಿದ್ದಾನೆ. ಈ ಪರಮಾತ್ಮನು ಆದಿತ್ಯನ ರಶ್ಮಿರೂಪದಲ್ಲಿ ಮೇಘಸ್ಥವಾದ ಜಲದ ಮಧ್ಯದಲ್ಲಿ ಪ್ರವೇಶಿಸಿ ವೃಷ್ಟಿರೂಪವಾದ ಫಲವನ್ನು ಸುರಿಸುತ್ತಿದ್ದಾನೆ. ಈ ಆದಿತ್ಯನಲ್ಲಿ ಲೋಕಪಾಲಕಗಳಾದ ಏಳು ರಶ್ಮಿಗಳು ಸೇರಿ ಆಶ್ರಯವನ್ನು ಪಡೆದಿವೆ. (ಇದನ್ನು **ಸಾಕಂಜಾನಾಂ ಸಪ್ತಥಮಾಹುರೇಕಜಂ** ಇತ್ಯಾದಿ ಋಕ್ಕುಗಳಲ್ಲಿ ವರ್ಣಿಸಿದೆ)

ಈ ರಶ್ಮಿಗಳು ಸಸ್ಯಾದಿಸಂಪತ್ತುಗಳಿಗೆ ಕಾರಣವಾದ ವೃಷ್ಟಿಯನ್ನು ಸುರಿಸಿ ಲೋಕವನ್ನು ರಕ್ಷಿಸುತ್ತವೆ. ಗವಾದ್ಯೈಶ್ವರ್ಯಗಳನ್ನು ಒದಗಿಸುತ್ತವೆ.

ಅಚ್ಯುತಾಂ ಬಹುಲಾಗ್ ಶ್ರಿಯಂ। ಸ ಹರಿರ್ವಸುವಿತ್ತಮಃ। ಪೇರುರಿಂದ್ರಾಯ ಪಿನ್ವತೇ।..........ಶತಗ್ ಶತಾ ಅಸ್ಯ ಯುಕ್ತಾ ಹರೀಣಾಂ। ಅರ್ವಾಙಾಯಾತು ವಸುಭೀ ರಶ್ಮಿರಿಂದ್ರಃ..............। (ತೈ ಆ. ೩-೧೧-೭)

ಭದ್ರಂ ಪಶ್ಯಂತ ಉಪಸೇದುರಗ್ರೇ। ತಪೋ ದೀಕ್ಷಾಮೃಷಯಃ ಸುವರ್ವಿದಃ। ತತಃ ಕ್ಷತ್ರಂ ಬಲಮೋಜಶ್ಚ ಜಾತಂ। ತದಸ್ಮೈ ದೇವಾ ಅಭಿ ಸನ್ನಮಂತು। ಶ್ವೇತಗ್ಂ ರಶ್ಮಿಂ ಬೋಭುಜ್ಯಮಾನಂ। ಅಪಾಂ ನೇತಾರಂ ಭುವನಸ್ಯ ಗೋಪಾಂ॥ (ತೈ. ಆ. ೩-೧೧-೯)

ಈ ಆದಿತ್ಯರಶ್ಮಿಗಳು ಆದಿತ್ಯನಿಂದ ಲಭಿಸತಕ್ಕ ಫಲಗಳನ್ನು ಲೋಕಕ್ಕೆ ಹಂಚುತ್ತವೆ. ಅವು ಯಾವವೆಂದರೆ, ನಾಶರಹಿತವಾದವೂ ಪ್ರಭೂತವಾದವೂ ಆದ ಗವಾದಿಧನಸಂಪತ್ತುಗಳು. ಈ ಸಂಪತ್ತುಗಳನ್ನು ಪಡೆಯಲಿಚ್ಛೆಯಿಂದ ಸ್ವರ್ಗಮಾರ್ಗಗಾಮಿಗಳಾದ ಋಷಿಗಳು ಸಪ್ತಹೋತೃರೂಪನಾದ ಆದಿತ್ಯನನ್ನು ಸಮೀಪಿಸಿ ಅವನನ್ನು ಉಪಾಸನಾದಿ ಪೂಜೆಗಳಿಂದ ಅವನ ಅನುಗ್ರಹದಿಂದ, ಕ್ಷಾತ್ರರೂಪವಾದ ಬಲವನ್ನೂ, ಓಜಸ್ಸನ್ನೂ ಪಡೆದರು ಅದೇ ಸಂಪತ್ತನ್ನು ಯಜಮಾನರೂ ಪಡೆಯಲಿ. ಎಂದರೆ ಆದಿತ್ಯನ ಉಪಾಸನೆಯಿಂದ ಅವೆಲ್ಲವೂ ಲಭಿಸುವುವೆಂದರ್ಥ. ಇವುಗಳಲ್ಲಿ ಜಗತ್ಪೋಷಕವಾದ ಅನ್ನಾದಿಸಂಪತ್ತುಗಳ ಸಮೂಹವೊಂದು ಬಗೆ. ಇದನ್ನು ರಕ್ಷಿಸಲು ಸಮರ್ಥವಾದ ಕ್ಷಾತ್ರಸಂಪತ್ತು ಇನ್ನೊಂದುಬಗೆ. ಆದಿತ್ಯನಿಂದ ಲಭಿಸತಕ್ಕ ಈ ಸಂಪತ್ತುಗಳಿಗಿಂತಲೂ ಸ್ವಾದುತರವಾದವು ಮತ್ತೊಂದಿಲ್ಲ. ಇವು ಜಗತ್ತನ್ನು ಸಂರಕ್ಷಿಸತಕ್ಕ ಸಂಪತ್ತುಗಳು. ಈ ಆದಿತ್ಯನ ರಶ್ಮಿಗಳು ಹೇಗಿರುತ್ತವೆ, ಅವುಗಳ ಕ್ರಿಯೆಗಳೇನು ಎಂಬುದನ್ನು ವಿವರಿಸುತ್ತಾ,

ರೋಹಿಣೀಃ ಪಿಂಗಳಾ ಏಕರೂಪಾಃ। ಕ್ಷರಂತೀಃ ಪಿಂಗಳಾ ಏಕರೂಪಾಃ। ಶತಗ್ಂ ಸಹಸ್ರಾಣಿ ಪ್ರಯುತಾನಿ ನಾವ್ಯಾನಾಂ। (ತೈ. ಆ. ೩-೧೧-೧೦)

ರೋಹಿತವರ್ಣಾತ್ಮಕವೂ, ಪಿಂಗಳವರ್ಣಾತ್ಮಕವೂ ಆದ ಭೂಭಾಗಗಳಲ್ಲಿ ಪ್ರವಹಿಸತಕ್ಕ ಉದಕಗಳು ರಶ್ಮಿಗಳಿಂದ ಆಕರ್ಷಿತವಾಗಿ ಮೇಘಸ್ಥವಾದಾಗ ತಮ್ಮ ನಾನಾರೂಪಗಳನ್ನು ತ್ಯಜಿಸಿ ಏಕರೂಪತ್ವವನ್ನು ಪಡೆಯುತ್ತವೆ. ಪುನಃ ಶತಸಂಖ್ಯೆಯಲ್ಲಿಯೂ, ಸಹಸ್ರಸಂಖ್ಯೆಯಲ್ಲಿಯೂ ಪ್ರವಾಹರೂಪದಿಂದ ಭೂಮಿಯಮೇಲೆ ಹರಿಯುತ್ತವೆ. ಇವೆಲ್ಲವೂ ಸಪ್ತಹೋತೃರೂಪನಾದ ಆದಿತ್ಯನ ಅನುಗ್ರಹವು. ಇಂತಹ ಆದಿತ್ಯನ ಜ್ಞಾನವು ಅತ್ಯವಶ್ಯವಾದುದು. ಅವನ ಉಪಾಸನೆಯಿಂದಲೇ ಎಲ್ಲಾ ಸಂಪತ್ತೂ ಲಭಿಸತಕ್ಕದ್ದು. "ತನ್ನೋಽಸ್ನ ಶದ್ಯಃ ಪಿತರಂ ನ ವೇದ।" ಇಂತಹ ಆದಿತ್ಯನ ಸ್ವರೂಪವನ್ನೂ ಅವನ ಉಪಾಸನಾರೀತಿಯನ್ನೂ ತಿಳಿದು ವಿಧ್ಯುಕ್ತವಾದ ಕರ್ಮಗಳಿಂದ ಪೂಜಿಸದೆ ಅವನ ಅನುಗ್ರಹವು ಸಾಧ್ಯವಿಲ್ಲವಾದುದರಿಂದ ಕವಿಗಳು ಅವನನ್ನು ಅನ್ವೇಷಣಮಾಡುತ್ತಾರೆ. ಈ ಅನ್ವೇಷಣಪ್ರಕಾರವನ್ನು ಋಗ್ವೇದಸಂಹಿತೆಯಲ್ಲಿಯೇ ಈರೀತಿ ವರ್ಣಿಸಿದೆ. ಈ ವರ್ಣನೆಯಲ್ಲಿ ಉಪನಿಷತ್ತಿನಲ್ಲಿ ವರ್ಣಿತವಾಗಿರುವ ಧ್ಯಾನರೂಪವಾದ ಅನ್ವೇಷಣದ ರೀತಿಯಿದ್ದರೂ ಸಹ ಜ್ಞಾನವು ಕರ್ಮಕ್ಕೂ ತತ್ಫಲವನ್ನು ಪಡೆಯುವುದಕ್ಕೂ ಸಾಧನವಾಗಿರುವಂತಿದೆ. ಉದಾಹರಣೆಗೆ—

ಪತಂಗಮಕ್ತಮಸುರಸ್ಯ ಮಾಯಯಾ ಹೃದಾ ಪಶ್ಯಂತಿ ಮನಸಾ ಮನೀಷಿಣಃ।
ಸಮುದ್ರೇ ಅಂತಃ ಕವಯೋ ವಿ ಚಕ್ಷತೇ ಮರೀಚೀನಾಂ ಪದಮಿಚ್ಛಂತಿ ವೇದಸಃ॥

**ಪತಂಗೋ ವಾಚಂ ಮನಸಾ ಬಿಭರ್ತಿ ತಾಂ ಗಂಧರ್ವೋಽವದದ್ಗರ್ಭೇ ಅಂತಃ।**
**ತಾಂ ದ್ಯೋತಮಾನಾಂ ಸ್ವರ್ಯಂ ಮನೀಷಾಮೃತಸ್ಯ ಪದೇ ಕವಯೋ ನಿಪಾಂತಿ।**

(ಋ. ಸಂ. ೧೦-೧೭೭-೧,೨)

ಪರಮಾತ್ಮನ ಅಚಿಂತ್ಯವಾದ ಶಕ್ತಿಯಿಂದ ವ್ಯಾಪ್ತನಾದ ಆದಿತ್ಯನನ್ನು ತಮ್ಮ ಹೃತ್ಪುಂಡರೀಕಗತವಾದುದೂ, ನಿಯಮಿತವಾದುದೂ ಆದ ಅಂತಃಕರಣದಿಂದ ವೇದಶಾಸ್ತ್ರಾಭಿಜ್ಞರಾದ ಮಹರ್ಷಿಗಳು ಧ್ಯಾನಮಾಡಿ ಸಾಕ್ಷಾತ್ಕಾರಮಾಡಿಕೊಳ್ಳುತ್ತಾರೆ. ಸಮುದ್ರಸಮಾನವಾದ ಅಂತರಿಕ್ಷಮಧ್ಯದಲ್ಲಿ ಪ್ರಕಾಶಿಸುವ ಈ ಆದಿತ್ಯನನ್ನು ವಿಶೇಷವಾಗಿ ಪ್ರಶಂಸಿಸುತ್ತಾರೆ. ಅನುಷ್ಠಾನಕುಶಲರಾದ ಯಜಮಾನರು ರಶ್ಮಿಗಳ ಆಧಾರಭೂತನಾದ ಆದಿತ್ಯನ ಸಾಯುಜ್ಯವನ್ನು ಪಡೆಯುವುದಕ್ಕಾಗಿ ಅನುಷ್ಠಾನಾದಿಗಳನ್ನು ನೆರವೇರಿಸುತ್ತಾರೆ. ಈ ಆದಿತ್ಯನು ಪ್ರಕಾಶಮಾನವಾದ ವೇದಾದಿವಾಕ್ಕುಗಳನ್ನು ಪ್ರಾಣಿಗಳು ಉಚ್ಚರಿಸುವಂತೆ ಪ್ರೇರಿಸುತ್ತಾನೆ. ಶಾಸ್ತ್ರವಿತ್ತುಗಳು ಪರಬ್ರಹ್ಮವಿಷಯಕವಾದ ವೇದವಾಕ್ಯಗಳನ್ನು ಪಠಿಸಿ ಪುನಃ ಪರಮಾತ್ಮನನ್ನು ತೃಪ್ತಿಗೊಳಿಸುತ್ತಾರೆ. ಇವೆಲ್ಲವೂ ಆದಿತ್ಯನ ಮಹಿಮೆಯು. ಇತ್ಯಾದಿ ವರ್ಣನೆಗಳಲ್ಲಿ ನಿರಾಕಾರನೂ, ನಿರ್ವಿಕಾರನೂ ಆದ ಪರಮಾತ್ಮನಿಗೂ ಲೌಕಿಕವಾದ ಪ್ರತ್ಯಕ್ಷಕ್ಕೆ ಗೋಚರನಾದ ಆದಿತ್ಯನಿಗೂ ತಾದಾತ್ಮ್ಯವನ್ನು ಹೇಳಿದೆ. ಇದೇ ಅಲ್ಲದೆ ಕೇವಲ ಆಧ್ಯಾತ್ಮಿಕವಾದ ಸಂಪತ್ತನ್ನು ಮಾತ್ರ ಲಕ್ಷಿಸದೆ, ಐಹಿಕವಾದ ಸುಖಾದಿಗಳನ್ನೂ ಸಹ ಅಪೇಕ್ಷಿಸಿದೆ.

**ಪಂಚಾರಂ ಚಕ್ರಂ ಪರಿವರ್ತತೇ ಪೃಥು। ಹಿರಣ್ಯಜ್ಯೋತಿಃ ಸರಿರಸ್ಯ ಮಧ್ಯೇ। ಅಜಸ್ರಂ ಜ್ಯೋತಿರ್ನಭಸಾ ಸರ್ಪದೇತಿ। ಸ ನ ಇಂದ್ರಃ ಕಾಮವರಂ ದದಾತು।** (ತೈ. ಆ. ೩-೧೧-೮)

ಇತ್ಯಾದಿಯಾಗಿ ಹಿಂದೆ ವರ್ಣಿತವಾದ ಋತುರೂಪವಾದ ಪಂಚಾರಯುಕ್ತನೂ ಕಾಲಚಕ್ರರೂಪನೂ, ಪರಮೈಶ್ವರ್ಯಯುಕ್ತನೂ ಆದ ಆದಿತ್ಯನು ನಮ್ಮ ಸಮಸ್ತಕಾಮಗಳನ್ನು ನೆರವೇರುವಂತೆ ಮಾಡಲಿ ಎಂದು ಪ್ರಾರ್ಥಿಸಿದೆ. ಈ ವಿಧವಾಗಿ ಕರ್ಮಫಲವನ್ನಪೇಕ್ಷಿಸಿ ಲೌಕಿಕಪ್ರತ್ಯಕ್ಷಕ್ಕೆ ಗೋಚರನಾದ ಆದಿತ್ಯಮಧ್ಯವರ್ತಿಯಾದ ಪರಮಾತ್ಮನನ್ನು ಉಪಾಸನೆಮಾಡಿ ತದ್ರಶ್ಮಿಗಳ ಸಹಾಯದಿಂದ ಲಭ್ಯವಾಗತಕ್ಕ ಫಲಗಳನ್ನು ನಿರೀಕ್ಷಿಸಿ ಆದಿತ್ಯನನ್ನು ಲೋಕಪಾಲಕನೆಂದು (ಪಿತೃ) ಸ್ತುತಿಸುವುದು ಅಧಿದೈವತಪಕ್ಷದ ಅರ್ಥವಾಯಿತು.

ಅನಭಿವ್ಯಕ್ತವಾದ ಅಧ್ಯಾತ್ಮಪಕ್ಷದ ಅರ್ಥವನ್ನು ಸೂಕ್ಷ್ಮವಾಗಿ ಮೇಲೆ ತಿಳಿಸಿದೆ. ಪರಬ್ರಹ್ಮನ ಅಭಿವ್ಯಕ್ತವಾದುದೂ, ಅನಭಿವ್ಯಕ್ತವಾದುದೂ ಆದ ಎರಡು ಸ್ವರೂಪಗಳೂ **ಆದಿತ್ಯಮಂಡಲಾಂತರ್ಗತವಾಗಿದೆ**ಯೆಂದು ಬೃಹದಾರಣ್ಯಕದಲ್ಲಿ ಈರೀತಿ ವರ್ಣಿಸಿದೆ.

**ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚೈವಾಮೂರ್ತಂ ಚ ಮರ್ತ್ಯಂ ಚಾಮೃತಂ ಚ ಸ್ಥಿತಂ ಚ ಯಚ್ಚ ಸಚ್ಚ ತ್ಯಚ್ಚ ॥** (ಬೃ. ಉ. ೨-೩-೧)

ಸಾಕಾರವಾದುದೂ, ನಿರಾಕಾರವಾದುದೂ, ಮರ್ತ್ಯವಾದುದೂ, ಅಮರ್ತ್ಯವಾದುದೂ, ಸ್ಥಿರವಾದುದೂ, ಚಲನಾತ್ಮಕವಾದುದೂ, ಸವಿಶೇಷವಾದುದೂ ಮತ್ತು ನಿರ್ವಿಶೇಷವಾದುದೂ ಆಗಿ ಪರಬ್ರಹ್ಮನಸ್ವರೂಪವು ಎರಡು ವಿಧವಾಗಿದೆ.

**ತದೇತನ್ಮೂರ್ತಂ ಯದನ್ಯದ್ವಾಯೋಶ್ಚಾಂತರಿಕ್ಷಾಚ್ಚೈತನ್ಮರ್ತ್ಯಮೇತತ್ಸ್ಥಿತಮೇತತ್ಸತ್ತಸ್ಯೈತಸ್ಯಮೂರ್ತಸ್ಯೈತಸ್ಯ ಮರ್ತ್ಯಸ್ಯೈತಸ್ಯ ಸ್ಥಿತಸ್ಯೈತಸ್ಯ ಸತ ಏಷ ರಸೋ ಯ ಏಷ ತಪತಿ ಸತೋ ಹ್ಯೇಷ ರಸಃ ॥** (ಬೃ. ಉ. ೨-೩-೨)

ವಾಯುವಿಗಿಂತಲೂ ಅಂತರಿಕ್ಷಕ್ಕಿಂತಲೂ ಬೇರೆಯಾದ ಪ್ರತಿಯೊಂದು ವಸ್ತುವೂ ಸಹ ಮರ್ತ್ಯವೂ ಸ್ಥಿರಾತ್ಮಕವೂ ಸವಿಶೇಷವಾದುದೂ ಆಗಿದೆ. ಭೂತಾತ್ಮಕವೂ, ಮರ್ತ್ಯವೂ, ಸ್ಥಿರವೂ, ಸತ್ತಾತ್ಮಕವೂ ಆದ ಸಕಲವಸ್ತುಗಳ ಸಾರವೂ ಈ ಪ್ರಕಾಶಮಾನನಾದ ಆದಿತ್ಯನೇ ಆಗಿದ್ದಾನೆ. ಭಾವಾತ್ಮಕವಾದ ಮೂರ್ತರೂಪದ ಸಾರವೇ ಆದಿತ್ಯನು. ಇದು ಪರಬ್ರಹ್ಮನ ಎರಡು ರೂಪಗಳಲ್ಲಿ ಒಂದಾಗಿದೆ. ಇದಲ್ಲದೆ, -

**ಅಥಾಮೂರ್ತಂ ವಾಯುಶ್ಚಾಂತರಿಕ್ಷಂ ಚೈತದಮೃತಮೇತದ್ಯದೇತತ್ತ್ಯತ್ತಸ್ಯೈತಸ್ಯಾ-**
**ಮೂರ್ತಸ್ಯೈತಸ್ಯಾಮೃತಸ್ಯೈತಸ್ಯ ಯತ ಏತಸ್ಯ ತ್ಯಸ್ಯೈಷ ರಸೋ ಯ ಏಷ ಏತಸ್ಮಿನ್ಮಂಡಲೇ**
**ಪುರುಷಸ್ತ್ಯಸ್ಯ ಹ್ಯೇಷ ರಸ ಇತ್ಯಧಿದೈವತಂ ॥** (ಬೃ. ಉ. ೨-೩-೩)

ಅಮೂರ್ತವಾದುದು ವಾಯು ಮತ್ತು ಅಂತರಿಕ್ಷ. ಅವು ಅಮರ್ತ್ಯವೂ, ನಿರ್ವಿಶೇಷವೂ ಆದವು. ಇವುಗಳ ಸಾರವೂ ಪ್ರಕಾಶಮಾನನಾದ ಆದಿತ್ಯನೇ ಆಗಿದ್ದಾನೆ. ನಿರ್ವಿಶೇಷವಸ್ತುಗಳ ಸಾರವೂ ಈ ಆದಿತ್ಯನೇ ಆಗಿದ್ದಾನೆ. ಇದು ಅಧಿದೈವಕವು, ಎಂದು ಅಧಿದೈವತಪಕ್ಷದಲ್ಲಿಯೂ ಎರಡು ವಿಧವಾದ ವರ್ಣನೆಯನ್ನು ತೋರಿಸಿ, ಆದಿತ್ಯನೇ ಪರಬ್ರಹ್ಮನ ಈ ಎರಡು ವಿಧವಾದ ರೂಪಗಳಿಗೂ ಆಧಾರನೆಂದು ತೋರಿಸಿ. ಅನಂತರ ಪರಬ್ರಹ್ಮನ ಆಧ್ಯಾತ್ಮಪರವಾದ ಸ್ವರೂಪವನ್ನು ತಿಳಿಸುತ್ತಾ ಕೇವಲ ಸಮಾಧಿ ರೂಪವಾದ ಧ್ಯಾನದಿಂದ ಮಾತ್ರ ಸಾಕ್ಷಾತ್ಕರಿಸಲು ಸಾಧ್ಯನಾದ ಪರಮಾತ್ಮನೂ ಸಹ ಈ ಆದಿತ್ಯಮಂಡಲದ ಮಧ್ಯವರ್ತಿಯೇ ಆಗಿದ್ದಾನೆಂದೂ ಉಪನಿಷದಾದಿಗಳಲ್ಲಿ ವರ್ಣಿಸಿದೆ. ಉದಾಹರಣೆಗೆ -

**ಆದಿತ್ಯೋ ವಾ ಬ್ರಹ್ಮೇತ್ಯಾದೇಶಃ । ಸ ಯ ಏತಮೇವಂ ವಿದ್ವಾನಾದಿತ್ಯಂ ಬ್ರಹ್ಮೇತ್ಯುಪಾಸ್ತೇ ॥**
(ಛಾ. ಉ. ೩-೧೯-೧ ಮತ್ತು ೪)

ಇತ್ಯಾದಿ ವಾಕ್ಯಗಳಲ್ಲಿ ಆದಿತ್ಯನೇ ಬ್ರಹ್ಮನೆಂದು ಸ್ತುತಿಸಿದೆ ಮತ್ತು ಆದಿತ್ಯನನ್ನೇ ಬ್ರಹ್ಮನೆಂದು ಉಪಾಸನೆಮಾಡಬೇಕೆಂದೂ ತಿಳಿಸಿದೆ. ಪ್ರಕೃತವಾದ ಋಕ್ಕಿನ ಅಧ್ಯಾತ್ಮಪಕ್ಷದ ವಿವರಣೆಯಲ್ಲಿ ಜಗದ್ವ್ಯಾಪಿಯಾದ ಈ ಪರಮಾತ್ಮನ ಸ್ವರೂಪವನ್ನು ವರ್ಣಿಸುವುದೂ, ಆ ಪರಮಾತ್ಮನ ಸ್ವರೂಪದ ಸಾಕ್ಷಾತ್ಕಾರದಿಂದ ಲಭಿಸತಕ್ಕ ಫಲದ ಸ್ವರೂಪವರ್ಣನೆಯೂ, ಈ ಫಲಾನುಭವಕ್ಕೆ ಸಾಧನವಾದ ಈಶ್ವರಜ್ಞಾನದ ಆವಶ್ಯಕತೆಯೂ ಅನುಕ್ರಮವಾಗಿ ಹೇಳಲ್ಪಟ್ಟಿದೆ.

ಇಲ್ಲಿ ಪರಮಾತ್ಮನನ್ನು ವೃಕ್ಷಕ್ಕೆ ಹೋಲಿಸಿದೆ. **ವೃಕ್ಷವತ್ ಗಮನಾದಿರಹಿತೇ ಅವಿಕ್ರಿಯೇ**—ವೃಕ್ಷದಂತೆ ಅಚಲವಾದುದೂ ಅವಿಕ್ರಿಯವಾದುದೂ ಆದ ಪರತತ್ತ್ವವೆಂದು ಸಾಯಣರು ವ್ಯಾಖ್ಯಾನವನ್ನು ಮಾಡಿದ್ದಾರೆ. ಇದೇ ವರ್ಣನೆಯು ತೈತ್ತಿರೀಯ ಉಪನಿಷತ್ತಿನಲ್ಲಿಯೂ ಸಹ ಈ ರೀತಿಯಿದೆ.

**ಯಸ್ಮಾತ್ಪರಂ ನಾಪರಮಸ್ತಿ ಕಿಂಚಿದ್ಯಸ್ಮಾನ್ನಾಣೀಯೋ ನ ಜ್ಯಾಯೋಽಸ್ತಿ ಕಶ್ಚಿತ್ ।**
**ವೃಕ್ಷ ಇವ ಸ್ತಬ್ಧೋ ದಿವಿ ತಿಷ್ಠತ್ಯೇಕಸ್ತೇನೇದಂ ಪೂರ್ಣಂ ಪುರುಷೇಣ ಸರ್ವಂ ॥**
(ತೈ. ಉ. ೪-೧೦)

ಅದ್ವಿತೀಯನಾದ ಪರಮಾತ್ಮನು ವೃಕ್ಷದಂತೆ ಗಮನಾಗಮನರಹಿತನಾಗಿ ಸ್ತಬ್ಧನಾಗಿಯೂ, ನಿರ್ವಿಕಾರನಾಗಿಯೂ ತಾನೇ ವಿಶ್ವಜಗದಾತ್ಮನಾಗಿಯೂ ಇದ್ದಾನೆ. ಈ ಬ್ರಹ್ಮತತ್ತ್ವವು ಅದ್ವಿತೀಯವಾದುದರಿಂದ ಇದಕ್ಕಿಂತ ಉತ್ಕೃಷ್ಟವಾದುದಾಗಲಿ ಅಥವಾ ಅಪಕೃಷ್ಟವಾದುದಾಗಲಿ ಯಾವುದೂ ಇಲ್ಲ. ಆದರೆ ಈ ಪರಮಾತ್ಮನ ಸ್ಥಾನವಾವುದೆಂದರೆ—

**ಪರೇಣ ನಾಕಂ ನಿಹಿತಂ ಗುಹಾಯಾಂ ವಿಭ್ರಾಜತೇ ಯದ್ಯತಯೋ ವಿಶಂತಿ ॥**
(ತೈ. ಆ. ೧೦-೧೦-೫)

ಇಂದ್ರಿಯನಿಯಮನಶೀಲರಾದ ಯತಿಗಳು ಸ್ವರ್ಗಕ್ಕಿಂತಲೂ ಉತ್ಕೃಷ್ಟವಾದುದೂ ಏಕಾಗ್ರಚಿತ್ತವುಳ್ಳದ್ದೂ ಗುಹಾರೂಪವಾದದ್ದೂ ಆದ ತಮ್ಮ ಬುದ್ಧಿಯಲ್ಲಿ ಪ್ರಕಾಶಿಸುವಂತೆ ಮಾಡಿ ತಾವೂ ಸಹ ಅದರಲ್ಲಿ ಪ್ರವೇಶಿಸಿ ತಲ್ಲೀನರಾಗುತ್ತಾರೆ. ಅದು ಹೇಗೆಂಬುದನ್ನು ಪ್ರಕೃತವಾದ ಋಕ್ಕಿನ ವರ್ಣನೆಯಲ್ಲಿ ನೋಡಬಹುದು.

**ಯಸ್ಮಿನ್ಪರಮಾತ್ಮನಿ ಸುಪರ್ಣಾಃ ಶೋಭನಗಮನಾನೀಂದ್ರಿಯಾಣಿ ಮಧ್ವದೋ ಮಧುನೋ ಜ್ಞಾನಸ್ಯಾತ್ತ್ರಾಣಿ ತಜ್ಜ್ಞಾನೇನ ಜ್ಞಾನಭಾಂಜೀತ್ಯರ್ಥಃ ।**

ಪರಮಾತ್ಮನಲ್ಲಿ ಶೋಭನವಾದ ಗಮನಗಳುಳ್ಳ ಯಾವ ಇಂದ್ರಿಯಗಳು ಪ್ರವೇಶಿಸಿ ಅಲ್ಲಿ ಆತ್ಮಜ್ಞಾನದಲ್ಲಿ ತಾವೂ ಸಾಕ್ಷಾತ್ಕಾರದ ಭಾಗವನ್ನು ವಹಿಸುವುವೋ ಅಂತಹ ಇಂದ್ರಿಯಗಳಿಗೆ ಅವುಗಳ ಸ್ವರೂಪಾನುಗುಣವಾದ ಲಕ್ಷಣವನ್ನು ತೋರಿಸಲು **ಸುಪರ್ಣಾಃ** ಎಂಬ ದೆಶೇಷಣವನ್ನು ಹೇಳಿದೆ. ಆದರೆ, **ನಿವಿಶಂತೇ ; ಅಧಿ ವಿಶ್ವೇ ಸುವತೇ ಚ** ಅಂತಃ ಪ್ರವೇಶಿಸುವುದು ಮತ್ತು ಪುನಃ ಹೊರಕ್ಕೆ ಆವಿರ್ಭಾವವಾಗುವುದು ಇದರಿಂದ ಇಂದ್ರಿಯಗಳ ಕರ್ತವ್ಯವೇನು? ಈರೀತಿಯ ಗಮನಾಗಮನಗಳುಳ್ಳ ಇಂದ್ರಿಯಗಳಿಗೂ ಆತ್ಮನಿಗೂ ಇರತಕ್ಕ ಸಂಬಂಧವೇನು ಎಂದು ತಿಳಿಸಲು ಸಾಯಣರು ಈರೀತಿ ವಿವರಿಸಿದ್ದಾರೆ.

**ನಿವಿಶಂತೇ ಸ್ವಾಪಕಾಲೇ ಸ್ವಸ್ವವಿಷಯೇಭ್ಯಃ ಪ್ರತಿನಿವೃತ್ತಾನಿ ಆತ್ಮನಿವೃತ್ತಾನ್ಯಲೀಯಂತೇ ಪುನಃ ಪ್ರಬೋಧಕಾಲೇ ಅಧಿ ವಿಶ್ವೇ ವಿಶ್ವಸ್ಯೋಪರಿ ಸುವತೇ ಚ ಉದ್ಯಂತಿ । ಸ್ವಸ್ವವಿಷಯಾನ್ ಲಭಂತೇ ಇತ್ಯರ್ಥಃ ।**

ಸ್ವಾಪಕಾಲದಲ್ಲಿ (ಸುಷುಪ್ತಿಕಾಲದಲ್ಲಿ) ಇಂದ್ರಿಯಗಳು ತಮ್ಮ ವಿಷಯಗಳನ್ನು ಬಿಟ್ಟು, ವಿಷಯಸಂಪರ್ಕದಿಂದ ನಿವೃತ್ತಗಳಾಗಿ ಆತ್ಮನಲ್ಲಿ ಲೀನವಾಗುತ್ತವೆ. ಪುನಃ ಜಾಗೃತ್ಕಾಲದಲ್ಲಿ ವಿಶ್ವಾಭಿಮುಖವಾಗಿ ಆವಿರ್ಭೂತಗಳಾಗಿ ತಮ್ಮ ತಮ್ಮ ವಿಷಯಗಳ ಸಂಪರ್ಕವನ್ನು ಹೊಂದುತ್ತವೆ. ಇದು ಇಂದ್ರಿಯವೃತ್ತಿಗಳ ವರ್ಣನೆಯು. ಈ ಇಂದ್ರಿಯವೃತ್ತಿಗಳಿಗೂ, ಪರಮಾತ್ಮನಿಗೂ ಏನು ಸಂಬಂಧ? ಮತ್ತು ಈ ಇಂದ್ರಿಯವೃತ್ತಿಗಳ ಯಾವ ಸ್ಥಿತಿಯಲ್ಲಿ ಆತ್ಮಸಾಕ್ಷಾತ್ಕಾರವಾಗುತ್ತದೆ? ಆ ಸಾಕ್ಷಾತ್ಕಾರದಿಂದ ಲಭಿಸತಕ್ಕ ಫಲದ ಸ್ವರೂಪವೇನು? ಅದರ ವೈಶಿಷ್ಟ್ಯವೇನು? ಎಂಬುದನ್ನು ಮಾಂಡೂಕ್ಯೋಪನಿಷತ್ತಿನಲ್ಲಿ ಈರೀತಿ ತಿಳಿಸಿದೆ. ಮೊದಲು,

**" ಪರಾಂಚಿ ಖಾನಿ ವ್ಯತೃಣತ್ಸ್ವಯಂಭೂಸ್ತಸ್ಮಾತ್ ಪರಾಙ್ ಪಶ್ಯತಿ ನಾಂತರಾತ್ಮನ್ ॥**

(ಕಠ. ಉ. ೨-೧-೧)

ಶ್ರೋತ್ರಾದಿ ಇಂದ್ರಿಯಗಳನ್ನು ಯಾವಾಗಲೂ ಬಾಹ್ಯವಿಷಯಗಳಲ್ಲೇ ಆಸಕ್ತವಾಗಿರುವಂತೆ ಬಿಟ್ಟು ಹೊರಗಿರತಕ್ಕ ವಿಷಯಗಳಲ್ಲೇ ತೃಪ್ತಿಯನ್ನು ಪಡೆಯುವುದೂ, ಕಾಮಾದಿಗಳಿಂದ ಲಿಪ್ತವಾಗುವುದೂ ಆದ ಇಂದ್ರಿಯಸಂಬಂಧವಿರುವಾಗ ಆತ್ಮನಿಗೆ ಜಾಗೃದವಸ್ಥೆಯಿರುವುದು. ಆಗ **ಸುಪರ್ಣ**ಗಳ ಎಂದರೆ ಇಂದ್ರಿಯಗಳ ವ್ಯಾಪಾರಗಳೆಲ್ಲವೂ ಬಾಹ್ಯವಾಗಿಯೇ ಇರುವುವು. ಈ ಅವಸ್ಥೆಯನ್ನು ಮಾಂಡೂಕ್ಯದಲ್ಲಿ ಆತ್ಮನ ಮೊದಲನೆಯ ಪಾದವೆಂದು ವರ್ಣಿಸಿದೆ. ಅದು ಹೇಗೆಂದರೆ,

**ಜಾಗರಿತಸ್ಥಾನೋ ಬಹಿಷ್ಪ್ರಜ್ಞಃ ಸಪ್ತಾಂಗ ಏಕೋನವಿಂಶತಿಮುಖಃ ಸ್ಥೂಲಭುಗ್ವೈಶ್ವಾನರಃ ಪ್ರಥಮಃ ಪಾದಃ ॥** (ಮಾ. ಉ. ೧-೩)

ಎಚ್ಚರವು ಆತ್ಮನಿಗೆ ಸ್ಥಾನವಾಗಿರುವುದರಿಂದ ಈ ಅವಸ್ಥೆಯಲ್ಲಿ ಜಾಗರಿತಸ್ಥಾನನೆನಿಸಿಕೊಂಡಿರುತ್ತಾನೆ. ಹೊರಗೆ, ಎಂದರೆ ತನಗಿಂತ ಬೇರೆಯಾಗಿರುವ ವಿಷಯದಲ್ಲಿ ಅರಿವು ಉಳ್ಳವನಾದುದರಿಂದ ಇವನು ಬಹಿಷ್ಪ್ರಜ್ಞನು. ಇವನು ಸಪ್ತಾಂಗನು.

ಮತ್ತು ಹತ್ತೊಂಭತ್ತು ಮುಖಗಳು, (೫ ಬುದ್ಧೀಂದ್ರಿಯ, ೫ ಕರ್ಮೇಂದ್ರಿಯ, ೫ ವಾಯುಗಳು, ಮನಸ್ಸು, ಬುದ್ಧಿ, ಅಹಂಕಾರ ಮತ್ತು ಚಿತ್ತ). ಈ ದ್ವಾರಗಳಿಂಡ ಬಾಹ್ಯದೃಷ್ಟಿಯುಳ್ಳ ಆತ್ಮನು ಶಬ್ದಾದಿಸ್ಥೂಲ ವಿಷಯಗಳನ್ನು ಭೋಗಿಸುತ್ತಿರುತ್ತಾನೆ. ಇದು ಆತ್ಮನಿಗೆ ಮೊದಲನೆಯ ಪಾದ ಅಥವಾ ಅವಸ್ಥೆ.

**ಸ್ವಪ್ನಃಸ್ಥಾನೋಽಂತಃಪ್ರಜ್ಞಃ ಸಪ್ತಾಂಗ ಏಕೋನವಿಂಶತಿಮುಖಃ ಪ್ರವಿವಿಕ್ತಮುಖಃ ತೈಜಸೋ ದ್ವಿತೀಯಃ ಪಾದಃ ॥** (ಮಾ. ಉ. ೧–೪)

ಈ ಅವಸ್ಥೆಯಲ್ಲಿರುವ ಆತ್ಮನಿಗೆ ತೈಜಸನೆಂದು ಹೆಸರು. ಇವನು ಸ್ವಪ್ನಸ್ಥಾನನು. ಎಚ್ಚರದ ಅರಿವು ಚಕ್ಷುರಾದೀಂದ್ರಿಯ ರೂಪವಾದ ಅನೇಕ ಸಾಧನಗಳಿಂದ ಆಗುವುದಾಗಿ ಹೊರಗೆ ವಿಷಯಗಳುಳ್ಳದ್ದಾಗಿರುವಂತೆ ತೋರುವ ಬರಿಯ ಮನಸ್ಸಿನ ಅಲುಗಾಟವು ಮಾತ್ರವಾಗಿದ್ದು ಅಂತಹ ಸಂಸ್ಕಾರವನ್ನೇ ಮನಸ್ಸಿನಲ್ಲಿ ಉಂಟುಮಾಡುತ್ತದೆ. ಆ ಮನಸ್ಸು ಹಾಗೆ ಸಂಸ್ಕಾರವನ್ನು ಹೊಂದಿ ಚಿತ್ರವನ್ನು ಬರೆದ ಬಟ್ಟೆಯಂತೆ ಹೊರಗಿನ ಸಾಧನವನ್ನು ಬಯಸದೆಯೇ ಅವಿದ್ಯಾಕಾಮ ಕರ್ಮಗಳಿಂದ ಪ್ರೇರಿಸಲ್ಪಟ್ಟು ಎಚ್ಚರದಂತೆಯೇ ತೋರುವುದು. ಆದುದರಿಂದಲೇ,

**ಅಸ್ಯ ಲೋಕಸ್ಯ ಸರ್ವಾವತೋ ಮಾತ್ರಾಮುಪಾದಾಯ ।** (ಬೃ. ಉ. ೪-೩-೯)

ಸರ್ವಸಾಧನಸಂಪತ್ತೂ ಇರತಕ್ಕ ಜಾಗ್ರತ್ತಿನ ವಾಸನೆಯನ್ನು ತೆಗೆದುಕೊಂಡು ಕನಸನ್ನು ಅನುಭವಿಸುತ್ತಾನೆ. ಮನಸ್ಸು ಮಾತ್ರ ಇಂದ್ರಿಯಗಳಿಗಿಂತಲೂ ಒಳಗೆ ಇರುವುದರಿಂದಲೂ, ಅದರ ವಾಸನಾರೂಪದ ಪ್ರಜ್ಞೆಯು ಕನಸ್ಸಿನಲ್ಲಿ ಇವನಿಗೆ ಆಗುವುದೆಂಬ ಕಾರಣದಿಂದಲೂ, ಇವನು ಈ ಅವಸ್ಥೆಯಲ್ಲಿ ಅಂತಃಪ್ರಜ್ಞನೆನಿಸಿಕೊಳ್ಳುತ್ತಾನೆ. ಆದರೂ ಇಲ್ಲಿ ವಾಸನಾರೂಪ ವಾಗಿರುವ ಪ್ರಜ್ಞೆಯು ಭೋಜ್ಯವಾಗಿರುತ್ತದೆ. ಇದು ಎರಡನೆಯ ಪಾದವು. ಇದಲ್ಲದೇ,

**ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೇ ನ ಕಂಚನ ಸ್ವಪ್ನಂ ಪಶ್ಯತಿ ತತ್ ಸುಷುಪ್ತಂ । ಸುಷುಪ್ತಸ್ಥಾನ ಏಕೀಭೂತಃ ಪ್ರಜ್ಞಾನಘನ ಏವಾನಂದಮಯೋ ಹ್ಯಾನಂದ-ಭುಕ್ಚೇತೋಮುಖಃ ಪ್ರಾಜ್ಞಸ್ತೃತೀಯಃ ಪಾದಃ ॥** (ಮಾ. ಉ. ೧-೫)

ಈ ಅವಸ್ಥೆಯಲ್ಲಿ ಆತ್ಮನು ನಿದ್ರಿಸುತ್ತಿರುವನು. ಯಾವ ಕಾಮವನ್ನೂ ಬಯಸುವುದಿಲ್ಲ. ಯಾವ ಕನಸ್ಸನ್ನೂ ಕಾಣುವುದಿಲ್ಲ. ಈ ಕಾಲದಲ್ಲಿ ಸುಷುಪ್ತಸ್ಥಾನನೂ, ಏಕೀಭೂತನೂ, ಪ್ರಜ್ಞಾನಘನನೂ, ಆನಂದಮಯನೂ, ಆನಂದಭೋಗಿಯೂ, ಚೇತೋಮುಖನೂ ಆಗಿರುತ್ತಾನೆ. ಇದು ಮೂರನೆಯ ಪಾದವು. ಮತ್ತು ಮನಸ್ಸು ವಿಷಯಗಳ ಆಕಾರವಾಗಿ ಅಲುಗಾಡುವ ಆಯಾಸದ ದುಃಖವು ಇಲ್ಲದಿರುವುದರಿಂದ ಆತ್ಮನು ಆನಂದಮಯನು. ಆನಂದ ಪ್ರಚುರನಾಗಿರುವನು. (ಆನಂದ ಸ್ವರೂಪ ನೆಂದರ್ಥವಲ್ಲ) ಆದರೆ ಈ ಆನಂದವು ಕೊನೆಯವರಿಗೂ ಇರುವುದಿಲ್ಲ.

**ಏಷ ಸರ್ವೇಶ್ವರ ಏಷ ಸರ್ವಜ್ಞ ಏಷೋಽಂತರ್ಯಾಮ್ಯೇಷ ಯೋನಿಃ ಸರ್ವಸ್ಯ ಪ್ರಭವಾ-ಪ್ಯಯೌ ಹಿ ಭೂತಾನಾಂ ।** (ಮಾ. ಉ. ೧-೬)

ಈತನೇ ಸರ್ವೇಶ್ವರನು, ಈತನೇ ಸರ್ವಜ್ಞನು, ಈತನೇ ಅಂತರ್ಯಾಮಿಯು, ಈತನೇ ಎಲ್ಲಕ್ಕೂ ಕಾರಣನು. ಭೂತ ಗಳಿಗೆ ಉತ್ಪತ್ತಿಪ್ರಳಯಗಳೂ ಸಹ ಈತನೇ ಆಗಿರುವನು. ಹೀಗೆಯೇ ಸರದಿಯಪ್ರಕಾರ ಮೂರು ಪಾದಗಳನ್ನು ವರ್ಣಿಸಿ ನಾಲ್ಕ

ನೆಯ ಪಾದವನ್ನು ವಿವರಿಸಬೇಕೆಂದು **ನಾಂತಃ ಪ್ರಜ್ಞಂ** ಎಂಬ ವಾಕ್ಯದಿಂದ ಮುಂದಿನ ಮಂತ್ರವು ಪ್ರಾರಂಭವಾಗಿ ಆತ್ಮನ **ತುರಿಯಾವಸ್ಥೆಯನ್ನು** (ನಾಲ್ಕನೆಯ ಅವಸ್ಥೆ) ಈರೀತಿ ವರ್ಣಿಸಿದೆ.

**ನಾಂತಃಪ್ರಜ್ಞಂ ನ ಬಹಿಷ್ಪ್ರಜ್ಞಂ ನೋಭಯತಃಪ್ರಜ್ಞಂ ನ ಪ್ರಜ್ಞಾನಘನಂ ನ ಪ್ರಜ್ಞಂ ನಾ ಪ್ರಜ್ಞಂ । ಅದೃಷ್ಟಮವ್ಯವಹಾರ್ಯಮಗ್ರಾಹ್ಯಮಲಕ್ಷಣಮಚಿಂತ್ಯಮವ್ಯಪದೇಶ್ಯಮೇಕಾತ್ಮ-ಪ್ರತ್ಯಯಸಾರಂ ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ ಸ ವಿಜ್ಞೇಯಃ ॥** (ಮಾ. ಉ. ೧-೭)

ಆತ್ಮನು ಈ ಅವಸ್ಥೆಯಲ್ಲಿ ಅಂತಃಪ್ರಜ್ಞನೂ ಅಲ್ಲ, ಬಹಿಷ್ಪ್ರಜ್ಞನೂ ಅಲ್ಲ, ಪ್ರಜ್ಞಾನಘನನೂ ಅಲ್ಲ, ಪ್ರಜ್ಞನೂ ಅಲ್ಲ. ವ್ಯವಹಾರಾತೀತನು, ಅಲಕ್ಷಣನು, ಅಚಿಂತ್ಯನು, ಏಕಾತ್ಮಪ್ರತ್ಯಯಸಾರನು, ಶಾಂತನೂ, ಶಿವನೂ, ಅದ್ವೈತನೂ ಆದ ಆತ್ಮನು. ಈ ಆತ್ಮಸಾಕ್ಷಾತ್ಕಾರವನ್ನು ಪಡೆಯಬೇಕು. ಅದೇ ಆತ್ಮಸಾಕ್ಷಾತ್ಕಾರವನ್ನು ಪಡೆಯುವವನ ಗುರಿಯಾಗಿರುತ್ತದೆ. ಈ ಆತ್ಮ ಸಾಕ್ಷಾತ್ಕಾರದ ಫಲವನ್ನು ವರ್ಣಿಸುತ್ತಾ ಪ್ರಕೃತವಾದ ಋಕ್ಕಿನಲ್ಲಿ,

**ತಸ್ಯೇದಾಹುಃ ಪಿಪ್ಪಲಂ ಸ್ವಾದಗ್ರೇ— ತಸ್ಯ ಪರಮಾತ್ಮನಃ ಪಿಪ್ಪಲಂ ಪಾಲಕಂ ಸಂಸಾರತಃ ಉದ್ಧಾ-ರಕಂ ಸ್ವಾದು ಆಸ್ವಾದನೀಯಂ ಅಮೃತತ್ವಲಕ್ಷಣಂ ಜ್ಞಾನಂ ।** ಸಂಸಾರದಿಂದ ಉದ್ಧಾರಮಾಡುವುದೂ, ಪುನಃಪುನಃ ಜನನಮರಣಾದಿಗಳಲ್ಲಿರುವುದೂ ಆದ ಅಮೃತರೂಪವಾದ ಜ್ಞಾನವೇ ಇದರ ಫಲವು. ಇದು ಸ್ವರ್ಗಾದಿರೂಪದ ಇತರ ಎಲ್ಲಾ ಫಲಗಳಿಗಿಂತಲೂ ಅತ್ಯುತ್ತಮವಾದುದು, ಅನಂತವು ಇತ್ಯಾದಿಯಾಗಿ ಪ್ರಶಂಸಿಸಲ್ಪಟ್ಟಿದೆ.

**ಸ ಯೋ ಹ ವೈ ತತ್ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ ನಾಸ್ಯಾಬ್ರಹ್ಮವಿತ್ಕುಲೇ ಭವತಿ । ತರತಿ ಶೋಕಂ ತರತಿ ಪಾಪ್ಮಾನಂ ಗುಹಾಗ್ರಂಥಿಭ್ಯೋ ವಿಮುಕ್ತೋಽಮೃತೋ ಭವತಿ ॥ ತದೇತತ್ಸತ್ಯಂ........ನಮಃ ಪರಮಋಷಿಭ್ಯಃ ॥** (ಮು. ಉ. ೩-೨-೯,೧೧)

ಈ ಪರಮಾತ್ಮನ (ಪರಬ್ರಹ್ಮನ) ಸಾಕ್ಷಾತ್ಕಾರವಾದೊಡನೆಯೇ ಆತ್ಮನು ತಾನೂ ಬ್ರಹ್ಮನೇ ಆಗುತ್ತಾನೆ. ಅವನ ವಂಶದಲ್ಲಿ ಬ್ರಹ್ಮಜ್ಞಾನವಿಲ್ಲದವರು ಹುಟ್ಟುವುದೇ ಇಲ್ಲ. ಅವನು ದುಃಖವನ್ನೂ, ದುಃಖಕ್ಕೆ ಹೇತುವಾದ ಪಾಪವನ್ನೂ ಪೂರ್ಣವಾಗಿ ದಾಟುತ್ತಾನೆ. ಹೃದಯಗ್ರಂಥಿಯಿಂದ ವಿಮುಕ್ತನಾಗಿ ಅಮೃತನಾಗುತ್ತಾನೆ. ಇದು ಸತ್ಯವು. ಇದು ಪರಮ ಋಷಿಗಳಿಂದ ಉಪದಿಷ್ಟವಾದ ಸತ್ಯವಾದುದರಿಂದ ಅವರಿಗೆ ವಂದನೆಯು ಎಂದು ಮುಂಡಕೋಪನಿಷತ್ತಿನಲ್ಲಿ ಈ ಸಾಕ್ಷಾತ್ಕಾರದಿಂದ ಲಭಿಸುವ ಫಲವನ್ನೂ ಅದರ ಉತ್ಕೃಷ್ಟತೆಯನ್ನೂ ಪ್ರಶಂಸಿಸಿದೆ. ಇದನ್ನೇ ಕಠೋಪನಿಷತ್ತಿನಲ್ಲಿಯೂ ಸ್ತುತಿಸುತ್ತಾ,

**ಏಕೋ ವಶೀ ಸರ್ವಭೂತಾಂತರಾತ್ಮಾ ಏಕಂ ರೂಪಂ ಬಹುಧಾ ಯಃ ಕರೋತಿ ।**
**ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಂ ॥**
(ಕಠ. ಉ. ೨-೨-೧೨)

ಸಕಲ ಜಗತ್ತನ್ನೂ ತನ್ನ ವಶದಲ್ಲಿಟ್ಟಿರುವವನೂ, ಸರ್ವಭೂತಾಂತರಾತ್ಮನೂ ಆಗಿ ತನ್ನ ಒಂದೇ ರೂಪವನ್ನು ನಾನಾ ವಿಧವಾಗಿ ಪರಿವರ್ತಿಸಿಕೊಂಡಿರುವ ಪರಮಾತ್ಮನನ್ನು ತಮ್ಮ ಹೃದಯದಲ್ಲಿಯೇ ಯಾವ ಧೀಮಂತರು ಸಾಕ್ಷಾತ್ಕರಿಸಿಕೊಳ್ಳುವರೋ ಅವರಿಗೆ ಅನಂತವಾದ ಸುಖವು ದೊರೆಯುವುದೇ ವಿನಹ ಉಳಿದವರಿಗೆ ಖಂಡಿತವಾಗಿಯೂ ದೊರೆಯಲಾರದು ಎಂಬ ವಿಷಯವನ್ನು ನಿಸ್ಸಂಕೃಷ್ಟವಾಗಿ ತಿಳಿಸಿದೆ. ಇದನ್ನೇ ಅಪುನರಾವೃತ್ತಿಯೆಂದು ಹೇಳುತ್ತಾ,

**ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಂ ।**
(ಕಠ. ೨-೨-೧೩)

ಇಂತಹ ಧೀಮಂತರಿಗೆ ಶಾಶ್ವತವಾದ ಆತ್ಮಶಾಂತಿಯು ಲಭಿಸುವುದೇ ವಿನಹ ಉಳಿದ ಅಜ್ಞಾನಿಗಳಿಗೆ ಲಭಿಸಲಾರದು ಎಂದು ಹೇಳಿರುವ ಅಂಶವನ್ನು ಪ್ರಕೃತವಾದ ಋಕ್ಕಿನಲ್ಲಿ **ತನ್ನೋಽನ್ನಶದ್ಯಃ ಪಿತರಂ ನ ವೇದ**—ಇಂತಹ ಪಾಲಕನಾದ ಆತ್ಮನನ್ನು ಅರಿಯದವನಿಗೆ ಈ ಫಲವು ಖಂಡಿತವಾಗಿಯೂ ಲಭಿಸುವುದಿಲ್ಲವೆಂದು ಹೇಳಿದೆ.

**ತನ್ನೋಽನ್ನಶತ್— ನಶತಿರ್ಗತಿಕರ್ಮಾ । ತತ್ಫಲಂ ನ ಪ್ರಾಪ್ನೋತಿ ।** ಆ ಫಲವನ್ನು ಹೊಂದುವುದಿಲ್ಲ ಎಂದು ಆತ್ಮಜ್ಞಾನವಿಲ್ಲದವನಿಗೆ ಈ ಫಲದ ಅನುಭವವಿಲ್ಲವೆಂದು ತಿಳಿಸಿದೆ. ಇದನ್ನೇ ಮುಂಡಕದಲ್ಲಿ ತಿಳಿಸುತ್ತಾ ಇಂತಹ ಪರಮಾತ್ಮ ಜ್ಞಾನವಿಲ್ಲದವನಿಗೆ ಕೇವಲ ಆನಂದಾಭಾವಮಾತ್ರವಲ್ಲದೇ ಜನ್ಮರೂಪವಾದ ದುಃಖವೂ ಪ್ರಾಪ್ತವಾಗುವುದೆಂದು ವಿವರಿಸುತ್ತಾ,

**ಅವಿದ್ಯಾಯಾಮಂತರೇ ವರ್ತಮಾನಾಃ ಸ್ವಯಂ ಧೀರಾಃ ಪಂಡಿತಂಮನ್ಯಮಾನಾಃ ।**
**ಜಂಘನ್ಯಮಾನಾಃ ಪರಿಯಂತಿ ಮೂಢಾ ಅಂಧೇನೈವ ನೀಯಮಾನಾ ಯಥಾಂಧಾಃ ॥**
(ಮು. ಉ. ೧-೨-೮)

ಆತ್ಮಜ್ಞಾನವಿಲ್ಲದ ಮೂಢರು ಪುನಃಪುನಃ ಜನ್ಮವನ್ನು ಪಡೆಯುವುದರಿಂದ ಬಹಳವಾಗಿ ತಪಿಸುವರು ಇತ್ಯಾದಿಯಾಗಿ ತಿಳಿಸಿದೆ. ಆದುದರಿಂದ **ತಸ್ಮಾದೀದೃಶಂ ಪರಮೇಶ್ವರಂ ವಿದಿತ್ವಾ ಮುಕ್ತೋ ಭೂಯಾಸಮಿತ್ಯರ್ಥಃ ।** "ಆದುದರಿಂದ ಇಂತಹ ಲೋಕಪಾಲಕನಾದ ಪರಮಾತ್ಮನನ್ನು ಅರಿತು ಮುಕ್ತನಾಗುತ್ತೇನೆ" ಎಂದು ಋಷಿಯ ಉದ್ದೇಶವು ಸ್ಪಷ್ಟವಾಗಿದೆ ಎಂದು ಸಾಯಣರು ತಮ್ಮ ಭಾಷ್ಯವನ್ನು ಸಮಾಪ್ತಿಗೊಳಿಸಿದ್ದಾರೆ.



## ಯದ್ಗಾಯತ್ರೇ ಅಧಿ ಗಾಯತ್ರಮಾಹಿತಂ ತ್ರೈಷ್ಟುಭಾದ್ವಾ ತ್ರೈಷ್ಟುಭಂ ನಿರತಕ್ಷತ । ಯದ್ವಾ ಜಗಜ್ಜಗತ್ಯಾಹಿತಂ ಪದಂ ಯ ಇತ್ತದ್ವಿದುಸ್ತೇ ಅಮೃತತ್ವಮಾನಶುಃ ॥ ೨೩ ॥

ಪೃಥ್ವಿಯಮೇಲೆ ಅಗ್ನಿಯ ಸ್ಥಾಪಿತವಾಗಿರುವ ಯಾವ ಸತ್ಯವುಂಟೋ, ಅಂತರಿಕ್ಷದಿಂದ ವಾಯುವಿನ ಸ್ಥಾನವನ್ನು ದೇವತೆಗಳು ನಿರ್ಮಿಸಿರುವ ಯಾವ ಸತ್ಯವುಂಟೋ, ಅಥವಾ ದ್ಯುಲೋಕದಲ್ಲಿ ಆದಿತ್ಯನ ಸ್ಥಾನವು ಸ್ಥಾಪಿತವಾಗಿರುವ ಯಾವ ಸತ್ಯವುಂಟೋ, ಇದೆಲ್ಲವನ್ನೂ ತನ್ನ ಜ್ಞಾನದಿಂದ ತಿಳಿಯುವ ಪುರುಷನು ಮರಣರಹಿತವಾದ ಸ್ಥಾನವನ್ನು ಪಡೆಯುತ್ತಾನೆ.

ಗಾಯತ್ರದ ಸ್ಥಾನವು ಗಾಯತ್ರದಲ್ಲಿ ಸ್ಥಾಪಿತವಾಗಿದೆ. ತ್ರೈಷ್ಟುಭದ ಸ್ಥಾನವನ್ನು ತ್ರೈಷ್ಟುಭದಿಂದಲೇ ನಿರ್ಮಿಸಿದ್ದಾರೆ. ಜಗತ್ತಿನ ಸ್ಥಾನವು ಜಗತಿಯಲ್ಲಿಯೇ ಸ್ಥಾಪಿತವಾಗಿದೆ. ಪುರುಷನು ಅಮೃತತ್ತ್ವವನ್ನು ಪಡೆಯಬೇಕಾದರೆ ಈ ಸತ್ಯಾಂಶಗಳ ಜ್ಞಾನವು ಅತ್ಯವಶ್ಯವಾದುದು ಎಂಬುದೇ ಈ ಋಕ್ಕಿನ ಅರ್ಥದ ಸಾರಾಂಶವಾಗಿದೆ. ಕೇವಲ ಕಾವ್ಯದೃಷ್ಟಿಯಿಂದ ನೋಡುವುದಾದರೆ ಶಬ್ದಾಲಂಕಾರದ ಸ್ವಾರಸ್ಯವಿದೆ. ಮಂತ್ರದೃಷ್ಟಿಯಿಂದ ಪರಿಶೀಲಿಸುವುದಾದರೆ ಇದರ ಅರ್ಥವು ಬಹಳ ಗಭೀರವಾದುದು. ಜಗದ್ವ್ಯಾಪಿಯಾದ ಪರಮಾತ್ಮನು ನಾನಾಸ್ಥಾನಗಳಲ್ಲಿ ಸ್ಥಾಪಿತನಾಗಿರುವುದೂ, ಆಯಾ ಸ್ಥಾನಗಳಲ್ಲಿ ಅವನು ತನ್ನ ಮೂರ್ತವಾದ ರೂಪದಿಂದ ಆವಿರ್ಭವಿಸಿರುವುದೂ ವರ್ಣಿತವಾಗಿ, ಈ ಆವಿರ್ಭಾವಗಳ ವಿಜ್ಞಾನದಿಂದ ಸಮ್ಯಗ್‌ಜ್ಞಾನವು ಲಭಿಸಿ ಅಮೃತತ್ವವು

ಪ್ರಾಪ್ತವಾಗುವುದೆಂದು ಉಕ್ತವಾಗಿದೆ. ಈ ಶಬ್ದಾಲಂಕಾರದೊಳಗೆ ಅಂತರ್ಗತವಾಗಿರುವ ಗೂಢವಾದ ಅರ್ಥವೇನೆಂದು ಪರಿಶೀಲಿಸಿದರೆ:—

**ಯದ್ಗಾಯತ್ರೇ ಅಧಿ ಗಾಯತ್ರಮಾಹಿತಂ**— ಗಾಯತ್ರದ ಮೇಲೆ ಗಾಯತ್ರವು ಆಹಿತವಾಗಿದೆ ಎನ್ನುವಾಗ ಮೊದಲನೆಯ ಗಾಯತ್ರಶಬ್ದಕ್ಕೆ ಪೃಥ್ವಿಯೆಂದೂ; ಎರಡನೆಯ ಗಾಯತ್ರಶಬ್ದಕ್ಕೆ ಅಗ್ನೇಯಂ ಪದಂ ಎಂದು ಅರ್ಥಮಾಡಿದೆ. ಪೃಥ್ವಿಗೆ ಗಾಯತ್ರವೆಂಬ ಹೆಸರು ಹೇಗೆ ಪ್ರಸಿದ್ಧವಾಯಿತು ಎಂಬುದನ್ನು ವಿವರಿಸುತ್ತಾ, **ಪ್ರಾಥಮ್ಯಾತ್ ಸ್ತುತ್ಯತ್ವಾಚ್ಚ ಗಾಯತ್ರೀ ಭೂಃ** ಸೃಷ್ಟಿಯಲ್ಲಿ ಎಲ್ಲಕ್ಕಿಂತಲೂ ಪ್ರಥಮವಾದುದರಿಂದಲೂ ಮತ್ತು ಅತ್ಯಂತ ಸ್ತುತ್ಯರ್ಹವಾದುದರಿಂದಲೂ ಗಾಯತ್ರಿಗೂ ಭೂಮಿಗೂ ತಾದಾತ್ಮ್ಯವನ್ನು ಹೇಳಿದೆ ಯೆಂದು ಸಾಯಣರು ವಿವರಿಸಿದ್ದಾರೆ. ಇದಕ್ಕೆ ಶ್ರುತಿವಾಕ್ಯಗಳ ಆಧಾರವನ್ನೂ ತೋರಿಸಬಹುದು ಉದಾಹರಣೆಗೆ;

**ಸೋಽಸ್ನಾಹ। ಅಗ್ನಿಂ ದೂತಂ ವೃಣೀಮಹ ಇತಿ ದೇವಾಶ್ಚ ವಾಸುರಾಶ್ಚೋಭಯೇ ಪ್ರಜಾಪತ್ಯಾಃ ಪಸ್ಪೃಧಿರೇ ತಾನ್ತ್ಸ್ಪರ್ಧಮಾನಾನ್ಗಾಯತ್ರ್ಯಂತರಾ ತಸ್ಥೌ ಯಾ ವೈ ಸಾ ಗಾಯತ್ರ್ಯಾಸೀದಿಯಂ ವೈ ಸಾ ಪೃಥಿವೀಯಗ್ಂ ಹೈವ ತದಂತರಾ ತಸ್ಥೌ ತಾ ಉಭಯ ಏವ ವಿದಾಂ ಚಕ್ರುಃ ॥** (ಶ. ಬ್ರಾ. ೧-೪-೧-೩೪)

ಸ್ಪರ್ಧಿಸುತ್ತಿದ್ದಾಗ ಗಾಯತ್ರಿಯು ಮಧ್ಯಸ್ಥಿಕೆಯನ್ನು ನಡೆಸಲು ಅವರ ನಡುವೆ ನಿಂತಳು. ಈ ಪೃಥ್ವಿಯೇ ಆ ಗಾಯತ್ರಿಯ ರೂಪದಲ್ಲಿ ಅವರ ನಡುವೆ ನಿಂತಳೆಂದರ್ಥವು. ಆಗ ಗಾಯತ್ರೀರೂಪದ ಪೃಥ್ವಿಯು ಯಾರ ಕಡೆ ಇರುವಳೋ ಅವರಿಗೆ ಜಯವೆಂದೂ ಉಳಿದ ಗುಂಪಿಗೆ ಅಪಜಯವೆಂದೂ ಅವರು ತಿಳಿದುಕೊಂಡರು ಎಂದು ಬ್ರಾಹ್ಮಣರ ವಾಕ್ಯವಿದೆ. ಇದಕ್ಕೆ ಸಾಯಣರು ವ್ಯಾಖ್ಯಾನವನ್ನು ಮಾಡುವಾಗ ತಮ್ಮ ಭಾಷ್ಯದಲ್ಲಿ ಈರೀತಿ ವಿವರಿಸಿದ್ದಾರೆ.

**ಯೋಽಸ್ಪ್ಯಮಾನಾಂಸ್ತಾನ್ನಿವಾರಯಿತುಂ ಗಾಯತ್ರೀ ಮಧ್ಯೇ ಪ್ರಾದುರ್ಭೂತಾ ಸೇಯಂ ಪೃಥಿವ್ಯೇವ। ಮೇರೋರಗ್ರಭಾಗೇ ಹಿ ಅಮರಾವತೀ ನಾಮ ನಗರೀ ತಸ್ಯಾಂ ಹಿ ದೇವಾಃ ತಥಾಮೇರೋರಧಸ್ತಾದ್ಭಾಗೇ ಚ ಯತ್ ಇರಾಮುಖಂ ನಾಮ ನಗರಂ ತಸ್ಮಿನ್-ಹ್ಯಸುರಾ ನಿವಸಂತಿ ತಯೋರ್ಮಧ್ಯೇ ಪೃಥಿವೀ ವರ್ತತ ಇತಿ ಹ ಶಬ್ದದ್ಯೋತಿತ ಶಾಸ್ತ್ರಪ್ರಸಿದ್ಧಿಃ।** (ಸಾ. ಭಾ. ೧-೪-೧-೩೪)

ದೇವತೆಗಳೂ ಅಸುರರೂ ಸ್ಪರ್ಧಿಸುತ್ತಿದ್ದಾಗ ಗಾಯತ್ರಿಯು ಮಧ್ಯಸ್ಥಳಾದಳು. ಪೃಥ್ವಿಯೇ ಈ ಗಾಯತ್ರಿಯು. ಇದರ ತಾತ್ಪರ್ಯವು ಈರೀತಿಯಿದೆ. ಮೇರುವಿನ ಅಗ್ರಭಾಗದಲ್ಲಿ ಅಮರಾವತಿಯೆಂಬ ನಗರವಿದೆ. ಅದರಲ್ಲಿ ದೇವತೆಗಳು ವಾಸವಾಗಿದ್ದಾರೆ. ಮೇರುವಿನ ಅಧೋಭಾಗದಲ್ಲಿ ಇರಾವತಿಯೆಂಬ ನಗರವಿದೆ. ಅದರಲ್ಲಿ ಅಸುರರು ವಾಸವಾಗಿದ್ದಾರೆ. ಈ ಎರಡು ಪುರಗಳ ನಡುವೆ ಪೃಥ್ವಿಯಿದೆಯೆಂಬುದು ಹ ಶಬ್ದದಿಂದ ಸೂಚಿತವಾಗುವುದೆಂದು ಶಾಸ್ತ್ರಪ್ರಸಿದ್ಧಿಯಿದೆಯೆಂದು ಸಾಯಣರ ಅಭಿಪ್ರಾಯವು. ಇದರಂತೆಯೇ ಗಾಯತ್ರಿಗೂ ಪೃಥ್ವಿಗೂ ತಾದಾತ್ಮ್ಯವು ಛಾಂದೋಗ್ಯೋಪನಿಷತ್ತಿನಲ್ಲಿಯೂ ಸಹ ಉಕ್ತವಾಗಿದೆ.

**ಗಾಯತ್ರೀ ವಾ ಇದಂ ಸರ್ವಂ ಭೂತಂ ಯದಿದಂ ಕಿಂಚ ವಾಗ್ವೈ ಗಾಯತ್ರೀ ವಾಗ್ವಾ ಇದಂ ಸರ್ವಂ ಭೂತಂ ಗಾಯತಿ ಚ ತ್ರಾಯತೇ ಚ ಯಾ ವೈ ಸಾ ಗಾಯತ್ರೀಯಂ ವಾವ ಸಾ ಯೇಯಂ ಪೃಥಿವ್ಯಸ್ಯಾಂ ಹೀದಂ ಸರ್ವಂ ಭೂತಂ ಪ್ರತಿಷ್ಠಿತಮೇತಾಮೇವ ನಾತಿಶೀಯತೇ ॥**

**ಯಾ ವೈ ಸಾ ಪೃಥಿವೀಯಂ ವಾವ ಸಾ ಯದಿದಮಸ್ಮಿನ್ಪುರುಷೇ ಶರೀರಮಸ್ಮಿನ್ಹೀಮೇ ಪ್ರಾಣಾಃ ಪ್ರತಿಷ್ಠಿತಾ ಏತದೇವ ನಾತಿಶೀಯಂತೇ ॥** (ಛಾ. ಉ. ೩-೧೨-೧ ರಿಂದ ೩)

ಎಂಬ ತಾದಾತ್ಮ್ಯಬೋಧಕವಾದ ಉಪನಿಷದ್ವಾಕ್ಯದಲ್ಲಿ ಸಾಯಣರು ಪ್ರಕೃತವಾದ ಋಕ್ಕಿನಲ್ಲಿ ಹೇಳಿರುವ ಲಕ್ಷಣವು ಇರುತ್ತದೆ. **ಇದಂ ಸರ್ವಂ ಭೂತಂ ಪ್ರಾಣಿಜಾತಂ ಯತ್ಕಿಂಚ ಸ್ಥಾವರಂ ಜಂಗಮಂ ವಾ ತತ್ಸರ್ವಂ ಗಾಯತ್ರ್ಯೇವ**—(ಶಂ. ಭಾ.). ಸ್ಥಾವರಾತ್ಮಕವಾದುದೂ, ಜಂಗಮಾತ್ಮಕವಾದುದೂ ಆದ ಸಕಲ ಭೂತಗಳೂ ಸಹ ಈ ಗಾಯತ್ರಿಯ ಸ್ವರೂಪಗಳೇ ಆಗಿವೆ. ವಾಕ್ಕೇ ಗಾಯತ್ರಿಯು. ಸಕಲ ಭೂತಗಳನ್ನೂ ಸ್ತುತಿಸುವುದರಿಂದಲೂ (**ಗಾಯತಿ**) ಮತ್ತು ರಕ್ಷಿಸುವುದರಿಂದಲೂ (**ತ್ರಾಯತೇ**) ಸಹ ಗಾಯತ್ರಿಯೆಂಬ ಹೆಸರು ಪ್ರಸಿದ್ಧವಾಯಿತು. ಅಲ್ಲದೆ, ಸಕಲಭೂತಗಳೂ ಈ ಪೃಥ್ವಿಯಲ್ಲಿಯೇ ಪ್ರತಿಷ್ಠಾಪಿತವಾಗಿರುವುದರಿಂದ ಈ ಪೃಥ್ವಿಯೇ ಗಾಯತ್ರಿಯು. ಇತ್ಯಾದಿಯಾಗಿ ಅನೇಕ ಕಡೆಗಳಲ್ಲಿ ಪೃಥ್ವಿಗೆ ಗಾಯತ್ರಿಯೆಂಬ ಹೆಸರು ಪ್ರಸಿದ್ಧವಾಗಿದೆಯೆಂದು ತಿಳಿಸಿದೆ. ಈ ಗಾಯತ್ರದಮೇಲೆ ಗಾಯತ್ರದ (ಅಗ್ನಿಯ) ಸ್ಥಾನವು ಸ್ಥಾಪಿತವಾಗಿದೆಯೆಂದು ಹೇಳುವಾಗ ಅಗ್ನಿಗೂ ಗಾಯತ್ರಿಗೂ ತಾದಾತ್ಮ್ಯವನ್ನು ಹೇಳಿದಂತಾಯಿತು. ಇದೇ ಹೇಗೆಂಬುದನ್ನು ಸಾಯಣರು ವಿವರಿಸುತ್ತಾ—**ಗಾಯತ್ರಂ ಆಗ್ನೇಯಂ ಪದಂ ಆಹಿತಂ । ಪ್ರಥಮಸೃಷ್ಟತ್ವಾತ್ । ಗಾಯತಿ ತ್ರಾಯತೇ ಚ ಇತಿ ವ್ಯುತ್ಪತ್ತ್ಯಾ ಚ ಪ್ರಜಾಪತೇರ್ಮುಖಾತ್ ಗಾಯತ್ರ್ಯಾ ಸಹ ಉತ್ಪನ್ನತ್ವಾತ್ ಭಕ್ತ್ಯಾ ಅಗ್ನಿರಪಿ ಗಾಯತ್ರಃ ।** ಹಿಂದೆ ಹೇಳಿದಂತೆಯೇ ಸ್ತುತಿಸುವುದು, ರಕ್ಷಿಸುವುದು ಈ ಎರಡು ಕ್ರಿಯಾತ್ಮಕವಾಗಿರುವುದರಿಂದಲಾಗಲಿ ಅಥವಾ ಪ್ರಜಾಪತಿಯ ಮುಖದಿಂದ ಗಾಯತ್ರಿಯೊಡನೆ ಅಗ್ನಿಯೂ ಆವಿರ್ಭವಿಸಿರುವುದರಿಂದಾಗಲೀ ಇಲ್ಲಿ ಗಾಯತ್ರವು ಅಗ್ನಿಪರ್ಯಾಯವಾದ ಪದವಾಗಿದೆಯೆಂದು ಹೇಳಬಹುದು ಎಂದು ತಿಳಿಸಿದ್ದಾರೆ ಮತ್ತು ತಮ್ಮ ವಿವರಣೆಗೆ ಸಮರ್ಥನೆಯನ್ನು ತೋರಿಸುವುದಕ್ಕಾಗಿ ತೈತ್ತಿರೀಯಸಂಹಿತೆಯಿಂದ,

**ಅಷ್ಟಾಕ್ಷರಾ ಗಾಯತ್ರೀ ಗಾಯತ್ರೋಽಗ್ನಿಃ ।**
(ತೈ. ಸಂ. ೨-೨-೫-೫)

ಎಂಬ ವಾಕ್ಯವನ್ನುದಹರಿಸಿ ಶ್ರುತಿವಾಕ್ಯದಲ್ಲಿಯೂ ಈ ತಾದಾತ್ಮ್ಯವಿದೆಯೆಂದು ಹೇಳಿದ್ದಾರೆ. ಇದಲ್ಲದೆ ಶತಪಥ ಬ್ರಾಹ್ಮಣದಲ್ಲಿಯೂ ಸಹ ಅಗ್ನಿಗೂ ಗಾಯತ್ರಿಗೂ ಇರುವ ಸಂಬಂಧವನ್ನು ತೋರಿಸಿ ಛಂದೋರೂಪವಾದ ಗಾಯತ್ರಿಯು ಅಗ್ನಿಸಂಬಂಧವಾದುದೆಂದೂ ಆ ಸಂಬಂಧವನ್ನು ತೋರಿಸುವಾಗ ತಾದಾತ್ಮ್ಯಬೋಧಕವಾದ ಪದವನ್ನೇ ಉಪಯೋಗಿಸಿದೆಯೆಂದೂ ತಿಳಿಸಿದೆ. **ಉದಾಹರಣೆಗೆ**––

ಆಗ್ನೇಯೀರನ್ವಾಹ । ಸ್ವಯೈವೈನಮೇತದ್ದೇವತಯಾ ಸಮಿಂಧೇ । ಗಾಯತ್ರೀರನ್ವಾಹ ।
ಗಾಯತ್ರಂ ವಾ ಅಗ್ನೇಶ್ಛಂದಃ । ಸ್ವೇನೈವೈನಮೇತಚ್ಛಂದಸಾ ಸಮಿಂಧೇ ॥
(ಶ. ಬ್ರಾ. ೧-೩-೫-೪)

ಇತ್ಯಾದಿ ವಾಕ್ಯಗಳಲ್ಲಿ ಈ ಸಂಬಂಧವನ್ನು ವಿವರಿಸಿದೆ.

**ತ್ರೈಷ್ಟುಭಾತ್ ತ್ರೈಷ್ಟುಭಂ ನಿರತಕ್ಷತ**—ಅಂತರಿಕ್ಷದಿಂದ ವಾಯುವಿನ ಸ್ಥಾನವನ್ನು ನಿರ್ಮಿಸಿದರು ಎಂದಿರುವಾಗ ಅಂತರಿಕ್ಷಕ್ಕೆ ತ್ರೈಷ್ಟುಭವೆಂಬ ಹೆಸರು ಹೇಗೆ ಬಂದಿತು ಎಂಬುದನ್ನು ವಿವರಿಸುತ್ತಾ **ವೃಷ್ಟಿಪರ್ಜನ್ಯವಿದ್ಯುದ್ರೂಪತ್ರಿಸ್ತೋಭಯುಕ್ತಾತ್ ಅಂತರಿಕ್ಷಾತ್** ವೃಷ್ಟಿ, ಪರ್ಜನ್ಯ, ವಿದ್ಯುತ್ ಎಂಬ ಸ್ತೋಭತ್ರಯದಿಂದ ಕೂಡಿದ ಅಂತರಿಕ್ಷದಿಂದ ಎಂದು ಅರ್ಥಮಾಡಿದ್ದಾರೆ.

**ತ್ರಿಷ್ಟುಭೋಪದದಾತಿ । ತ್ರೈಷ್ಟುಭೋ ಹಿ ವಾಯುಃ ।**

(ಶ. ಬ್ರಾ. ೮-೭-೩-೧೨)

ಇತ್ಯಾದಿ ವಾಕ್ಯಗಳಲ್ಲಿ ತ್ರಿಷ್ಟುಭಕ್ಕೂ ವಾಯುವಿಗೂ ತಾದಾತ್ಮ್ಯವನ್ನು ಹೇಳಿರುವಂತೆ ಇಲ್ಲಿಯೂ ಸಹ ಎರಡನೇ **ತ್ರೈಷ್ಟುಭಂ** ಎಂಬ ಪದಕ್ಕೆ ವಾಯುವಿನ ಸ್ಥಾನವನ್ನು ಎಂದರ್ಥ. ಸಾಯಣರು **ಊರ್ಧ್ವಾರ್ಧಸ್ತಿರ್ಯಗ್ಲಕ್ಷಣ ಸ್ತ್ರೋಭತ್ರಯೋಪೇತಂ ವಾಯುಂ** ಎಂದು ವಿವರಿಸಿದ್ದಾರೆ.

**ಜಗತಿ ಜಗತ್ಪದಮಾಹಿತಂ**—ದ್ಯುಲೋಕದಲ್ಲಿ ಆದಿತ್ಯನ ಸ್ಥಾನವು ಸ್ಥಾಪಿತವಾಯಿತು ಎಂಬುದನ್ನು ವಿವರಿಸುತ್ತಾ, ಮೊದಲನೆಯ ಜಗತಿ ಎಂಬ ಪದಕ್ಕೆ **ಸರ್ವೈರ್ಗಂತವ್ಯೇ ಉದ್ಗತತಮೇ ವಾ ತೃತೀಯಭೂತೇ ದ್ಯುಲೋಕೇ ।** ಸಕಲರೂ ಹೋಗಿ ಸೇರಬೇಕಾದುದೂ ಅತ್ಯುತ್ತಮವಾದುದೂ ತೃತೀಯಭೂತವಾದುದೂ ಆದ ದ್ಯುಲೋಕವೆಂದು ಅರ್ಥವು. ಆದಿತ್ಯನು ಗಮನಶೀಲನಾದುದರಿಂದ ಅವನಿಗೆ **ಜಗತ್** ಎಂದು ಹೆಸರು. ಈ ಮೂರು ಸ್ಥಾನಗಳ ಜ್ಞಾನವಿದ್ದರೆ ಮುಕ್ತಿಯೆಂದು ವಿಧಿವಾಕ್ಯವಿದೆ. ಇದು ಅಧಿಲೋಕಪಕ್ಷದ ಅರ್ಥವಾಯಿತು. ಇದಲ್ಲದೇ, ಅಧಿಯಜ್ಞಪರವಾದ ಅರ್ಥವೊಂದಿದೆ. ಆ ಅರ್ಥದಲ್ಲಿ ಸವನತ್ರಯಗಳಲ್ಲೂ ಉಪಯೋಗಿಸತಕ್ಕ ಛಂದಸ್ಸುಗಳೆಂದರ್ಥವಾಗುತ್ತದೆ.

**ಗಾಯತ್ರೇ ಪ್ರಾತಃಸವನೇ ಗಾಯತ್ರಂ ಛಂದಃ ಪದಂ ಆಹಿತಂ । ತ್ರೈಷ್ಟುಭಾತ್ ಮಾಧ್ಯಂದಿನಾತ್ ಸವನಾತ್ ತ್ರೈಷ್ಟುಭಂ ಛಂದಃ ಜಗತೀ ತೃತೀಯಸವನೇ ಜಾಗತಂ ಪದಂ ॥**

ಗಾಯತ್ರವೆಂದರೆ ಪ್ರಾತಸ್ಸವನವೆಂದೂ, ತ್ರೈಷ್ಟುಭವೆಂದರೆ ಮಾಧ್ಯಂದಿನಸವನವೆಂದೂ, ಜಗತ್ತೆಂದರೆ ತೃತೀಯಸವನವೆಂದೂ ಅರ್ಥವಾಗುತ್ತದೆ. ಈ ಸವನಕಾಲಗಳಲ್ಲಿ ಈ ಛಂದಸ್ಸುಗಳನ್ನು ನಿರ್ಮಿಸಿ ಪಠಿಸಿದರೆಂದೂ ಅಥವಾ ಪಠಿಸಬೇಕೆಂಬ ವಿಧಿಯಿದೆಯೆಂದೂ ಅರ್ಥವಾಗುತ್ತದೆ. ಸವನತ್ರಯಗಳಲ್ಲೂ ಈ ಛಂದಃಸ್ಥಾನಗಳನರಿತು ಕರ್ಮವನ್ನು ಮಾಡತಕ್ಕ ಯಜಮಾನನು ಅಮೃತತ್ತ್ವವನ್ನು ಪಡೆಯುತ್ತಾನೆ ಎಂಬುದು ಸಿದ್ಧವು. ಇದನ್ನೇ ತೈತ್ತಿರೀಯ ಸಂಹಿತೆಯಲ್ಲಿ ವಿವರಿಸುತ್ತಾ,

**ಗಾಯತ್ರಂ ಪ್ರಾತಃಸವನಂ, ತ್ರೈಷ್ಟುಭಂ ಮಾಧ್ಯಂದಿನಗ್ಂ ಸವನಂ, ಜಾಗತಂ ತೃತೀಯಸವನಂ ।**

**(ತೈ. ಸಂ. ೨-೯-೫, ೬)**

ಎಂಬ ವಾಕ್ಯದಲ್ಲಿ ವಿವರಿಸಿದೆ.

ಇಂತಹ ಪ್ರಾತಃಸವನಾಗಿಗಳಲ್ಲಿ ಅಷ್ಟಾಕ್ಷರಾತ್ಮಕವಾದ ಗಾಯತ್ರಿಯನ್ನೂ ಹೀಗೆಯೇ ಇತರ ಲಕ್ಷಣಗಳಿಂದ ಕೂಡಿದ ತ್ರೈಷ್ಟುಭಾದಿಗಳನ್ನು ಪಠಿಸುವ ಕ್ರಮವು ಐತರೇಯಬ್ರಾಹ್ಮಣದಲ್ಲಿ ವರ್ಣಿತವಾಗಿದೆ. ಇದೇ ಅಂಶವನ್ನು ಮುಂದಿನ ಋಕ್ಕಿನಲ್ಲಿಯೂ ಹೇಳಿರುವುದರಿಂದ ಆದರ ವಿವರಣೆಯನ್ನು ಮುಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ.



## ಗಾಯತ್ರೇಣ ಪ್ರತಿ ಮಿಮೀತೇ ಅರ್ಕಮರ್ಕೇಣ ಸಾಮ ತ್ರೈಷ್ಟುಭೇನ ವಾಕಂ । ವಾಕೇನ ವಾಕಂ ದ್ವಿಪದಾ ಚತುಷ್ಪದಾಕ್ಷರೇಣ ಮಿಮತೇ ಸಪ್ತ ವಾಣೀಃ ॥ ೨೪ ॥

ಗಾಯತ್ರಚ್ಛಂದಸ್ಸಿನಿಂದ ಕವಿಗಳು ಪೂಜಾಸಾಧನವಾದ ಮಂತ್ರವನ್ನು ಪ್ರತ್ಯೇಕವಾಗಿ ರಚಿಸುತ್ತಾರೆ. ಪೂಜಾಸಾಧನವಾದ ಈ ಮಂತ್ರದಿಂದ ಸಾಮವನ್ನು ರಚಿಸುತ್ತಾರೆ. ತ್ರಿಷ್ಟುಪ್ಪಿನಿಂದ ಸೂಕ್ತರೂಪವಾದ ಭಾಗವನ್ನೂ, ಪಾದದ್ವಯವುಳ್ಳದ್ದೂ, ಪಾದಚತುಷ್ಟಯವುಳ್ಳದ್ದೂ ಆದ ಈ ಸೂಕ್ತಾತ್ಮಕವಾದ ಭಾಗದಿಂದ ವರ್ಗಾನುವಾಕಾತ್ಮಕಗಳಾದ ಭಾಗಗಳನ್ನೂ ರಚಿಸುತ್ತಾರೆ. ಮತ್ತು ಅಕ್ಷರಗಳಿಂದ ಸಪ್ತಚ್ಛಂದಸ್ಸುಗಳನ್ನೂ ನಿರ್ಮಿಸುತ್ತಾರೆ.

ಅರ್ಕ, ಸಾಮ, ವಾಕ, ಸಪ್ತವಾಣೀಃ ಇವುಗಳ ರಚನೆಯೂ ಸ್ವರೂಪವೂ ವರ್ಣಿತವಾಗಿದೆ. ಅರ್ಕವೆಂದರೇನು ? ಅರ್ಕದ ಸ್ವರೂಪವೇನು ಎಂಬುವನ್ನು ನಿರುಕ್ತಕಾರರು ಈರೀತಿ ತಿಳಿಸಿದ್ದಾರೆ. ನಿರುಕ್ತದಲ್ಲಿರುವ ವಿವರಣೆಯಂತೆ,

**ಅರ್ಕೋ॑ ದೇವೋ ಭವತಿ ಯದೇನಮರ್ಚತಿ ।**
**ಅರ್ಕೋ॑ ಮಂತ್ರೋ॑ ಭವತಿ ಯದನೇನಾರ್ಚಂತಿ ।**
**ಅರ್ಕಮನ್ನಂ ಭವತ್ಯರ್ಚತಿ ಭೂತಾನಿ ।**
**ಅರ್ಕೋ॑ ವೃಕ್ಷೋ॑ ಭವತಿ ಸಂವೃತ್ತಃ ಕಟುಕಿಮ್ನಾ ।**

ಪೂಜಾವಿಷಯವಾದುದರಿಂದ ಅರ್ಕವೇ ದೇವತೆಯು. ಪೂಜಾಸಾಧನವಾದುದರಿಂದ ಅರ್ಕವೇ ಮಂತ್ರವು. ಭೂತಗಳಿಗೆ ಚೈತನ್ಯದಾಯಿಯಾದುದರಿಂದ ಅರ್ಕವೇ ಅನ್ನವು. ಅರ್ಕವೆಂಬ ವೃಕ್ಷವಿಶೇಷವು ಕಟುವಾದ ವೃಕ್ಷವು ಎಂದು ಬೇರೆ ಬೇರೆ ಅರ್ಥಗಳನ್ನು ಹೇಳಿ,

**ಗಾಯಂತಿ ತ್ವಾ ಗಾಯತ್ರಿಣೋಽರ್ಚಂತ್ಯರ್ಕಮರ್ಕಿಣಃ । ಬ್ರಹ್ಮಾಣಸ್ತ್ವಾ ಶತಕ್ರತ ಉದ್ವಂಶಮಿವ ಯೇಮಿರೇ ॥** (ಋ. ಸಂ. ೧-೧೦-೧)

ಎಂಬ ಋಕ್ಕನ್ನು ದಹರಿಸಿ ಅರ್ಕದ ಸ್ವರೂಪವನ್ನು ವಿವರಿಸಿದ್ದಾರೆ. ಅರ್ಕದ ಪ್ರಭಾವವು ಅತ್ಯಧಿಕವಾದುದೆಂದು ಅನೇಕ ಕಡೆಗಳಲ್ಲಿ ಅದರ ಮಹಿಮೆಯನ್ನು ಸ್ತುತಿಸಿದೆ.

**ಅಥಾತಃ ಶಿರಃ । ತದ್ಗಾಯತ್ರೀಷು ಭವತ್ಯಗ್ರಂ ವೈ ಛಂದಸಾಂ ಗಾಯತ್ರ್ಯಗ್ರಮಂಗಾನಾಂ ಶಿರಃ । ತದರ್ಕವತೀಷು ಭವತ್ಯಗ್ನಿರ್ವಾ ಅರ್ಕಃ ।** (ಐ. ಆ. ೧-೪-೧)

ಎಂದು ಐತರೇಯಬ್ರಾಹ್ಮಣದಲ್ಲಿ ಪ್ರಶಂಸಿಸಿದೆ. ಈ ವಿವರಣೆಯಂತೆ '**ಇಂದ್ರಮಿದ್ಗಾಥಿನೋ ಬೃಹದಿಂದ್ರಮರ್ಕೇಭಿರರ್ಕಿಣಃ**' (ಋ. ಸಂ. ೧-೭-೧) ಎಂಬ ಋಕ್ಕಿನಿಂದ ಪ್ರಾರಂಭವಾದ ಒಂಭತ್ತು ಋಕ್ಕುಗಳು ಅರ್ಕಮಂತ್ರಗಳೆಂದೂ, ಅವೇ ಎಲ್ಲಕ್ಕೂ ಶಿರಾತ್ಮಕವಾದ ಎಂದರೆ ಪ್ರಧಾನವಾದ ಮಂತ್ರಗಳೆಂದೂ, ಗಾಯತ್ರವೇ ಪ್ರಧಾನವಾದ ತತ್ತ್ವವಾಗಿ ಈ ಮಂತ್ರಗಳೂ ಆ ಗಾಯತ್ರರೂಪದಲ್ಲಿರುವುದರಿಂದ ಅರ್ಕಮಂತ್ರಗಳು ಉಳಿದ ಎಲ್ಲಾ ಮಂತ್ರಗಳಿಗಿಂತಲೂ ಪ್ರಧಾನವಾದ ಸ್ಥಾನವನ್ನು ಪಡೆದಿವೆಯೆಂದೂ ಸಹ ಹೇಳಿದೆ.

ಉದಾಹೃತವಾದ ಈ ಐತರೇಯಾರಣ್ಯಕದ ವಾಕ್ಯದಲ್ಲಿ ಅಗ್ನಿ, ಗಾಯತ್ರೀ ಮತ್ತು ಅರ್ಕ ಮೂರಕ್ಕೂ ಇರತಕ್ಕ ಸಹಜವಾದ ಸಂಬಂಧವನ್ನು ತೋರಿಸಿದೆ. "**ಗಾಯತ್ರೋ॑ಽಗ್ನಿಃ**" ಎಂದು ತೈತ್ತಿರೀಯ ಸಂಹಿತೆಯಲ್ಲಿ ಗಾಯತ್ರಿಗೂ ಅಗ್ನಿಗೂ ತಾದಾತ್ಮ್ಯವನ್ನು ಹೇಳಿರುವುದನ್ನು ಹಿಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. ಈ ವಾಕ್ಯದ ಆಧಾರದ ಮೇಲೆಯೇ ಸಾಯಣರು ಹಿಂದಿನ ಋಕ್ಕಿನಲ್ಲಿ ಗಾಯತ್ರಮಾಹಿತಂ ಎನ್ನುವುದಕ್ಕೆ ಆಗ್ನೇಯಂ ಪದಮಾಹಿತಂ

ಎಂಬರ್ಥವನ್ನು ಮಾಡಿದ್ದಾರೆ. ಇಂತಹ ಗಾಯತ್ರರೂಪವಾದ ಅಗ್ನಿಗೂ ಅರ್ಕಕ್ಕೂ ತಾದಾತ್ಮ್ಯವನ್ನು ತೋರಿಸಿ " **ಅಗ್ನಿರ್ವಾ ಅರ್ಕಃ** " ಎಂದು ಆರಣ್ಯಕವಾಕ್ಯವಿದೆ. ಇದೇ ಅಂಶವನ್ನು ಶತಪಥಬ್ರಾಹ್ಮಣದಲ್ಲೂ ಸಹ ತಿಳಿಸುತ್ತಾ,

> **ಏಷೋಽಗ್ನಿರರ್ಕೋ ಯತ್ಪುರುಷಃ ಸ ಯೋ ಹೈತಮೇವಮಗ್ನಿಮರ್ಕಂ ಪುರುಷಮು-ಪಾಸ್ತೇಽಯಮಹಮಗ್ನಿರರ್ಕೋಽಸ್ಮೀತಿ ವಿದ್ಯಯಾ ಹೈವಾಸ್ಯೈಷ ಆತ್ಮನ್ನಗ್ನಿರರ್ಕಶ್ಚಿತೋ ಭವತಿ ||** (ಶ. ಬ್ರಾ. ೧೦-೩-೪-೫)

ಇತ್ಯಾದಿವಾಕ್ಯಗಳಲ್ಲಿಯೂ ಅಗ್ನಿಗೂ ಅರ್ಕಕ್ಕೂ ಇರುವ ತಾದಾತ್ಮ್ಯವನ್ನು ತಿಳಿಸಿವೆ. ಅಗ್ನಿಪ್ರಿಯವಾದ ಗಾಯತ್ರದಿಂದ ಈ ಅರ್ಕಮಂತ್ರವನ್ನು ನಿರ್ಮಿಸುತ್ತಾರೆಂದು ಪ್ರಕೃತವಾದ ಋಕ್ಕಿನಲ್ಲಿ ವಿವರಿಸಿದೆ. ಮೇಲೆ ನಿರುಕ್ತಕಾರರ ವಾಕ್ಯಗಳಲ್ಲಿ ವಿವರಿಸಿರುವಂತೆ ಅರ್ಕವು ದೇವತಾಪರವಾದರೆ ಅಗ್ನಿಯೆಂದೂ, ಮಂತ್ರಪರವಾದರೆ ಗಾಯತ್ರಿಯೆಂದೂ, ಅರ್ಥವಾಗುತ್ತದೆಂದು ತಿಳಿಯಬೇಕು.

**ಗಾಯತ್ರೇಣ ಅರ್ಕಂ ಪ್ರತಿ ಮಿಮೀತೇ**— ಎನ್ನುವಾಗ ಮಿಮೀತೇ ಎಂಬ ಕ್ರಿಯಾಪದದೊಂದಿಗೆ **ಪ್ರತಿ** ಎಂಬ ಉಪಸರ್ಗವನ್ನು ಸೇರಿಸಿದರೆ, ಎರಡು ವಿಧವಾದ ಅರ್ಥವಾಗುವುದೆಂದು ತೋರಿಸಿದೆ. ಮೊದಲನೆಯದಾಗಿ **ಪ್ರತ್ಯೇಕಂ ಪರಿಚ್ಛಿನತ್ತಿ**, ಒಂದೊಂದು ಮಂತ್ರವನ್ನೂ ವಿಭಾಗಿಸುತ್ತಾನೆ ಎಂದರೆ ಪ್ರತಿಯೊಂದು ಮಂತ್ರವನ್ನೂ ಗಾಯತ್ರಚ್ಛಂದಸ್ಸಿನಿಂದ ಬೇರೆ ಬೇರೆಯಾಗಿ ರಚಿಸುತ್ತಾನೆ ಎಂದರ್ಥವಾಗಬಹುದು ಅಥವಾ ಉಳಿದ ಇತರ ಛಂದಸ್ಸುಗಳೂ ಸಹ ಗಾಯತ್ರಚ್ಛಂದಸ್ಸಿನ ಆಧಾರದ ಮೇಲೆಯೇ ರಚಿತವಾಗುವುವು. ಹೇಗೆಂದರೆ, **ಇತರೇಷಾಂ ಛಂದಸಾಂ ಅಸ್ಯೈವ ಚತುಶ್ಚತುರಕ್ಷರಾಧಿಕ್ಯೇನ ತತ್ತಚ್ಛಂದೋಭಿಃ ಪ್ರತಿಮಿಮೀತೇ ಇತ್ಯರ್ಥಃ** | ಗಾಯತ್ರಚ್ಛಂದಸ್ಸಿಗೆ ಇಪ್ಪತ್ತುನಾಲ್ಕು ಅಕ್ಷರಗಳಾದರೆ:

| | |
|---|---|
| **ಉಷ್ಣಿಕ್** | ೨೪+೪ (೨೮) |
| **ಅನುಷ್ಟುಪ್** | ೨೪+೪+೪ ; (೩೨) |
| **ಬೃಹತೀ** | ೨೪+೪+೪+೪ ; (೩೬) |
| **ಪಂಕ್ತಿಃ** | ೨೪+೪+೪+೪+೪ (೪೦) |
| **ತ್ರಿಷ್ಟುಪ್** | ೨೪+೪+೪+೪+೪+೪ (೪೪) |
| **ಜಗತೀ** | ೨೪+೪+೪+೪+೪+೪+೪ (೪೮) |

ಈ ರೀತಿಯಾಗಿ ನಾಲ್ಕು ನಾಲ್ಕು ಅಕ್ಷರಗಳು ಅಧಿಕವಾಗಿ ಉಷ್ಣಿಗಾದಿಗಳು ಗಾಯತ್ರದ ಆಧಾರದ ಮೇಲೆಯೇ ರಚಿತವಾಗುವುವು ಎಂದೂ ಆಗಬಹುದು, ಎರಡನೆಯದಾಗಿ **ಪ್ರತಿಶಬ್ದವು ಸಮ್** ಎಂಬ ಪದದ ಅರ್ಥದಲ್ಲಿದ್ದರೆ, ಆಗ; **ಯದ್ವಾ ಪ್ರತಿಶಬ್ದಃ ಸಮ್ ಇತ್ಯೇತಸ್ಮಿನ್ನರ್ಥೇ | ಛಂದೋಭಿರ್ಮಂತ್ರಾನ್ ಸಂಮಿತಂ ಕರೋತೀತ್ಯರ್ಥಃ** | ಮೊದಲು ಮಂತ್ರಗಳನ್ನು ನಿರ್ಮಿಸಿ ಅನಂತರ ಅವನ್ನು ಛಂದಸ್ಸುಗಳಿಂದ ಯುಕ್ತವಾದವನ್ನಾಗಿ ಮಾಡುತ್ತಾನೆಂದರ್ಥವಾಗುತ್ತದೆ ಎಂದು ವಿವರಿಸಿದೆ. ಅನಂತರ,

**ಅರ್ಕೇಣ ಸಾಮಃ**—ಮಂತ್ರರೂಪವಾದ ಈ ಅರ್ಕದಿಂದ ಸಾಮವನ್ನು ಎಂದರೆ ಗಾಯತ್ರ ರಥಂತರವೆಂದು ಸಂಜ್ಞೆಯುಳ್ಳ ಸಾಮವನ್ನು ನಿರ್ಮಿಸುತ್ತಾರೆ ಎಂದರ್ಥ. ಗಾಯತ್ರದಿಂದ ಅರ್ಕವೂ, ಅರ್ಕದಿಂದ ಸಾಮವೂ ಸೃಷ್ಟವಾದರೆ ಆದಕ್ಕೆ **ಗಾಯತ್ರಸಾಮವೆಂದೂ** ಹೇಳಬಹುದು ಅಥವಾ **ಗಾಯತ್ರಸಾಮ, ರಥಂತರಸಾಮ, ಬೃಹತ್‌ಸಾಮ** ಎಂಬ ಮೂರು ಬಗೆಯೂ ಆಗಬಹುದು. ಈ ಮೂರು ಸಾಮಗಳೂ **ಅಗ್ನಿ** ಪರವಾದವು ಎಂಬುದನ್ನು ಶತಪಥಬ್ರಾಹ್ಮಣದಲ್ಲಿ ತಿಳಿಸಿದೆ.

ವೀರ್ಯವತ್ತರೋ ಹಿಂಕೃತ್ಯ ಗಾಯತಿ ತತ್ರ ಹಿ ಸರ್ವಂ ಕೃತ್ಸ್ನಗ್ಂ ಸಾಮ ಭವತಿ। ಗಾಯತ್ರಂ ಪುರಸ್ತಾದ್ಗಾಯತಿ। ಅಗ್ನಿರ್ವೈ ಗಾಯತ್ರಮಗ್ನಿಮೇವಾಸ್ಯೈತಚ್ಛಿರಃ ಕರೋತ್ಯ-ಥೋ ಶಿರ ಏವಾಸ್ಯೈತದನಸ್ಥಿಕಮಮೃತಂ ಕರೋತಿ ॥

(ಶ. ಬ್ರಾ. ೯-೧-೨-೩೫)

ಯಜ್ಞಕರ್ತನಾದ ಯಜಮಾನನು ಪೂರ್ಣವಾದ ಸಾಮವನ್ನು ಗಾನಮಾಡುತ್ತಾನೆ. ಅದರಲ್ಲಿ ಮೊದಲು ಗಾಯತ್ರಸಾಮವು ಗಾನಮಾಡಲ್ಪಡುತ್ತದೆ. ಗಾಯತ್ರಚ್ಛಂದಸ್ಸೇ ಅಗ್ನಿಯಾದುದರಿಂದ ಅಗ್ನಿಯೇ ಈ ಯಾಜಮಾನನಿಗೆ ಶಿರೋರೂಪನಾಗಿರುತ್ತಾನೆ.

ರಥಂತರಂ ದಕ್ಷಿಣೇ ಪಕ್ಷೇ। ಇಯಂ ವೈ ರಥಂತರಮಿಯಮು ವಾ ಏಷಾಂ ಲೋಕಾ-ನಾಗ್ಂ ರಸತಮೋಽಸ್ಯಾಗ್ಂಹೀಮೇ ಸರ್ವೇ ರಸಾ ರಸತಮಗ್ಂಹ ವೈ ತದ್ರಥಂತರಮಿತ್ಯಾ-ಚಕ್ಷತೇ ಪರೋಕ್ಷಂ ಪರೋಕ್ಷಕಾಮಾ ಹಿ ದೇವಾ ಇಮಾಮೇವಾಸ್ಯೈತದ್ದಕ್ಷಿಣಂ ಪಕ್ಷಂ ಕರೋ-ತ್ಯಥೋ ದಕ್ಷಿಣಮೇವಾಸ್ಯೈತತ್ಪಕ್ಷಮನಸ್ಥಿಕಮಮೃತಂ ಕರೋತಿ ॥

(ಶ. ಬ್ರಾ. ೯-೧-೨-೩೬)

ರಥಂತರಸಾಮವನ್ನು ಬಲಭಾಗದಲ್ಲಿ ಗಾನಮಾಡುತ್ತಾನೆ. ಲೋಕಗಳಲ್ಲೆಲ್ಲಾ ರಸವತ್ತಾದುದೂ ಅಗ್ನ್ಯಾವಾಸ ಸ್ಥಾನವಾದುದೂ ಆದ ಪೃಥ್ವಿಯೇ ರಥಂತರವು, 'ರಸಂತರ'ವೆಂದಿರಬೇಕಾದುದನ್ನು ಪರೋಕ್ಷಕಾಮಿಗಳಾದ ದೇವತೆಗಳು 'ರಥಂತರ'ವೆಂದು ಕರೆಯುತ್ತಾರೆ. ರಸತಮವಾದ ರಥಂತರದ ಗಾನದಿಂದ ಪೃಥ್ವಿಯು ಯಜಮಾನನ ಬಲಭಾಗದಲ್ಲಿದ್ದು ಅವನಿಗೆ ಅಮೃತತ್ವವು ಲಭಿಸುತ್ತದೆ.

ಬೃಹದುತ್ತರೇ ಪಕ್ಷೇ। ದ್ಯೌರ್ವೈ ಬೃಹದ್ದ್ಯೌರ್ಹಿ ಬರ್ಹಿಷ್ಠಾ ದಿವಮೇವಾಸ್ಯೈತದು-ತ್ತರಂ ಪಕ್ಷಂ ಕರೋತ್ಯಥೋ ಉತ್ತರಮೇವಾಸ್ಯೈತತ್ಪಕ್ಷಮನಸ್ಥಿಕಮಮೃತಂ ಕರೋತಿ ॥

(ಶ. ಬ್ರಾ. ೯-೧-೨-೩೭)

ಎಡಭಾಗದಲ್ಲಿ ಬೃಹತ್‌ಸಾಮವನ್ನು ಗಾನಮಾಡುತ್ತಾನೆ. ಸಕಲಲೋಕಗಳಲ್ಲಿಯೂ ಅತ್ಯಂತ ಬೃಹತ್ತಾದ ದ್ಯುಲೋಕವೇ ಈ ಅಗ್ನಿಯ ಎಡಭಾಗದಲ್ಲಿದ್ದು ಯಜಮಾನನಿಗೆ ಅಮೃತತ್ತ್ವವು ಲಭಿಸುವುದು, ಎಂದು ಸಾಮಗಾನದಲ್ಲಿರುವ ಪ್ರಭೇದಗಳನ್ನು ಹೇಳಿದೆ. ಅಲ್ಲದೆ ಇದೇ ಸಾಮದ ಪ್ರಭಾವವನ್ನೂ ಸಾಮಗಾನದಿಂದ ಪ್ರಾಪ್ತವಾಗತಕ್ಕ ಪ್ರಯೋಜನವನ್ನೂ ತಿಳಿಸುತ್ತಾ ಶತಪಥಬ್ರಾಹ್ಮಣದ ಇದೇ ಭಾಗದಲ್ಲಿ,

ಅಥೈನಂ ಸಾಮಭಿಃ ಪರಿಗಾಯತಿ। ಅತ್ರೈಷ ಸರ್ವೋಽಗ್ನಿಃ ಸಂಸ್ಕೃತಸ್ತಸ್ಮಿನ್‌ದೇವಾ ಏತದಮೃತಗ್ಂ ರೂಪಮುತ್ತಮಮದಧುಸ್ತಥೈವಾಸ್ಮಿನ್ನಯಮೇತದಮೃತಗ್ಂ ರೂಪಮು-ತ್ತಮಂ ದಧಾತಿ ಸಾಮಾನಿ ಭವಂತಿ ಪ್ರಾಣಾ ವೈ ಸಾಮಾನ್ಯಮೃತಮು ವೈ ಪ್ರಾಣಾ ಅಮೃತ-ಮೇವಾಸ್ಮಿನ್ನೇತದ್ರೂಪಮುತ್ತಮಂ ದಧಾತಿ ಸರ್ವತಃ ಪರಿಗಾಯತಿ ಸರ್ವತ ಏವಾಸ್ಮಿನ್ನೇತದ-ಮೃತಗ್ಂ ರೂಪಮುತ್ತಮಂ ದಧಾತಿ। (ಶ. ಬ್ರಾ ೯-೧-೨-೩೨).

ಅಗ್ನಿಯ ಸುತ್ತಲೂ ಈ ಸಾಮಗಾನವನ್ನು ಮಾಡತಕ್ಕದ್ದು. ಆದುದರಿಂದಲೇ ಋತ್ವಿಕ್ಕುಗಳು ತಮ್ಮ ಧ್ಯಾನಪೂರ್ವಕವಾದ ಮನಸ್ಸಿನಿಂದ ರಥಂತರಾದಿ ಸಾಮಗಳನ್ನು ಗಾನಮಾಡುತ್ತಾರೆ. ಈ ಗಾನದಿಂದ ಅಗ್ನಿಯೂ ಪೂರ್ಣಾಕಾರನಾಗುತ್ತಾನೆ. ದೇವತೆಗಳೂ ಅತ್ಯುತ್ತಮರೂಪಾತ್ಮಕವಾದ ಅಮೃತತ್ತ್ವವನ್ನು ಇರಿಸಿದರು. ಸಾಮವೇ ಮುಖ್ಯಪ್ರಾಣಗಳು. ಈ ಮುಖ್ಯಪ್ರಾಣಗಳು ಅಮೃತಗಳು. ಆದುದರಿಂದ ಸಾಮಗಾನವು ಅಮೃತತತ್ತ್ವವನ್ನುಂಟುಮಾಡುತ್ತವೆ.

ಇಂತಹ ಪವಿತ್ರವಾದುದೂ ಅಮೃತದಾಯಕವಾದುದೂ ಆದ **ಸಾಮವನ್ನು ಅರ್ಕೇಣ** (ಪ್ರತಿ ಮಿಮೀತೇ) ಅರ್ಕದಿಂದ ನಿರ್ಮಿಸಿದರು ಎಂದಿರುವಾಗ ಇಲ್ಲಿ ಸಾಯಣರು ಒಂದು ಆಕ್ಷೇಪವನ್ನೂಹಿಸಿ ಅದಕ್ಕೆ ಸಾಮಾಧಾನವನ್ನೂ ಹೇಳಿದ್ದಾರೆ. ಶ್ರುತಿವಾಕ್ಯದ ಆಧಾರದಮೇಲೆಯೇ ಈ ಸಂದರ್ಭದಲ್ಲಿ ಒಂದು ಆಕ್ಷೇಪವು ಪ್ರಾಪ್ತವಾಗಲು ಅವಕಾಶವಿದೆ. ಅದು ಹೇಗೆಂದರೆ—

**‘ ಏಕಂ ಸಾಮ ತೃಚೇ ಕ್ರಿಯತೇ ’ ಇತಿ ತಿಸೃಷು ಏಕಂ ಸಾಮ ವಿಹಿತಂ ಅತಃ ಅರ್ಕೈಃ ಸಾಮ ಇತಿ ವಕ್ತವ್ಯಂ ಕಥಮುಚ್ಯತೇ ಅರ್ಕೇಣ ಇತಿ ।**

“ ಮೂರು ಋಕ್ಕುಗಳಲ್ಲಿ ಒಂದು ಸಾಮವು ಸೇರಿದೆ.” ಎಂದು ಶ್ರುತಿವಾಕ್ಯವು ಹೇಳುತ್ತದೆ. ಆದುದರಿಂದ **ಅರ್ಕೈಃ** ಅರ್ಕಗಳಿಂದ ಸಾಮವು ನಿರ್ಮಿತವಾಗುತ್ತದೆ. ಎಂದು ಹೇಳಬೇಕೇ ಹೊರತು **ಅರ್ಕೇಣ** (ಅರ್ಕದಿಂದ) **ಪ್ರತಿಮೀತೇ** ಎಂದು ಏಕವಚನದ ಪ್ರಯೋಗವು ಸರಿಯಲ್ಲ ಎಂಬುದು ನ್ಯಾಯವಾದ ಆಕ್ಷೇಪವಾಗಿದೆ. ಇದಕ್ಕೆ ಶ್ರುತಿವಾಕ್ಯದ ಪ್ರಮಾಣವೇನಿದೆಯೆಂದು ಕೇಳಿದರೆ ಐತರೇಯಬ್ರಾಹ್ಮಣಾದಿಗಳಲ್ಲಿ ಋಕ್ಕಿಗೂ ಸಾಮ್ನಿಕ್ಕೂ ಇತರಕ್ಕ ಸಂಬಂಧವನ್ನು ಈ ರೀತಿ ವರ್ಣಿಸಿದೆ. ಇದಕ್ಕೆ ಒಂದು ಪೂರ್ವಕಥಾಸಂದರ್ಭವೂ ಉಕ್ತವಾಗಿದೆ.

**ಋಕ್ಚ ವಾ ಇದಮಗ್ರೇ ಸಾಮ ಚಾಸ್ತಾಂ ಸೈವ ನಾಮ ಋಗಾಸೀದಮೋ ನಾಮ ಸಾಮ ಸಾ ವಾ ಋಕ್ಸಾಮೋಪಾವದನ್ಮಿಥುನಂ ಸಂಭವಾವ ಪ್ರಜಾತ್ಯಾ ಇತಿ ನೇತ್ಯಬ್ರವೀತ್ಸಾಮ ಜ್ಯಾಯಾನ್ವಾ ಅತೋ ಮಮ ಮಹಿಮೇತಿ ತೇ ದ್ವೇ ಭೂತ್ವೋಪಾವದತಾಂ ತೇನ ಪ್ರತಿಚನ ಸಮವದತ ತಾಸ್ತಿಸ್ರೋ ಭೂತ್ವೋಪಾವದಂಸ್ತತ್ತಿಸೃಭಿಃ ಸಮಭವದ್ಯತ್ತಿಸೃಭಿಃ ಸಮಭವತ್ತಸ್ಮಾತ್ತಿಸೃಭಿಸ್ತುವಂತಿ ತಿಸೃಭಿರುದ್ಗಾಯಂತಿ ತಿಸೃಭಿರ್ಹಿ ಸಾಮ ಸಂಮಿತಂ ತಸ್ಮಾದೇಕಸ್ಯ ಬಹ್ವ್ಯೋ ಜಾಯಾ ಭವಂತಿ ನೈಕಸ್ಯೈ ಬಹವಃ ಸಹ ಪತಯೋ ಯದ್ವೈ ತತ್ಸಾ ಚಾಮಶ್ಚ ಸಮಭವತಾಂ ತತ್ಸಾಮಾಭವತ್ತತ್ಸಾಮ್ನಃ ಸಾಮತ್ವಂ ॥**

(ಐ. ಬ್ರಾ. ೩-೨೩)

ಪ್ರಾರಂಭದಲ್ಲಿ **ಋಕ್ಕೂ ಸಾಮವೂ** ಜೊತೆಯಲ್ಲಿದ್ದವು. ಋಕ್ಕು ಸ್ತ್ರೀರೂಪದಲ್ಲಿಯೂ ಸಾಮವು ಪುಂರೂಪದಲ್ಲಿಯೂ ಇದ್ದವು. ಆಗ ಋಕ್ಕು ಸಾಮವನ್ನು ಸಮೀಪಿಸಿ ನಾವಿಬ್ಬರೂ ದಾಂಪತ್ಯಸಂಬಂಧವನ್ನು ಬೆಳೆಸಿ ಸಂತಾನವನ್ನು ಪಡೆಯೋಣ ಎಂದಾಗ ಸಾಮವು ಅದಾಗುವುದಿಲ್ಲ, ನನ್ನ ಮಹಿಮೆಯು ನಿನ್ನದಕ್ಕಿಂತಲೂ, ಅಧಿಕವಾದುದು, ಎಂದುತ್ತರವನ್ನು ಕೊಟ್ಟಿತು. ಆಗ ಋಕ್ಕು ಮೊದಲಿಗಿಂತ ಎರಡರಷ್ಟು ಬೆಳೆದು (ಎರಡು ರೂಪವಾಗಿ) ಪುನಃ ಕೇಳಿತು. ಆಗಲೂ ಸಾಮವು ಒಪ್ಪಲಿಲ್ಲ. ಮೂರಾಗಿ ಬೆಳೆದು ಸಾಮವನ್ನು ಕೇಳಲಾಗಿ ಆಗ ಸಾಮವು ಒಪ್ಪಿಕೊಂಡಿತು. ಮೂರು ಋಕ್ಕುಗಳೊಂದಿಗೆ ಸಾಮವು ಬೆರೆತದ್ದರಿಂದ ಮೂರು ಋಕ್ಕುಗಳಿಂದ ಸ್ತುತಿಸುತ್ತಾರೆ. ಮೂರು ಋಕ್ಕುಗಳಿಂದ ಗಾನಮಾಡುತ್ತಾರೆ. ಆದುದರಿಂದಲೇ ಲೋಕದಲ್ಲಿಯೂ ಪುರುಷನಿಗೆ

ಬಹುಸಕ್ತಿಯಿರುವುದು ರೂಢಿಯಲ್ಲಿದೆ. ಸ್ತ್ರೀಯು ಬಹುಪತಿತ್ವವನ್ನು ಹೊಂದಲಾಗುವುದಿಲ್ಲ. ಈ ರೀತಿಯಲ್ಲಿ ಋಕ್ಕೂ ಸಾಮವೂ ಒಟ್ಟಿಗೆ ಸೇರಿದ್ದರಿಂದಲೇ (ಸಾ+ಅಮ) ಸಾಮವೆಂದು ಹೆಸರು ಪ್ರಸಿದ್ಧವಾಯಿತು.

ಈ ರೀತಿಯಲ್ಲಿ ಮೂರು ಋಕ್ಕುಗಳ ಜೊತೆಯಲ್ಲಿ ಒಂದು ಸಾಮವು ಸೇರಬೇಕಾದುದು ನ್ಯಾಯವಾಗಿರುವುದರಿಂದ ಮೇಲಿನ ಆಕ್ಷೇಪವು ನ್ಯಾಯವಾಗಿದೆಯೆಂದೂ ಸಾಯಣರು ಇದಕ್ಕೆ ಸಮಾಧಾನವನ್ನು ಹೇಳುತ್ತಾ, **ಇತಿ ನ । ವಸ್ತುತಃ ಏಕಂ ಸಾಮ ಏಕಸ್ಯಾಂ ಋಚಿ ಆರೂಢಂ ಪಶ್ಚಾದನ್ಯೋನ್ಯಾಂ ತದುತ್ತರಯೋರ್ಗಾಯತಿ ಇತ್ಯತಿದೇಶತಃ ಪ್ರಾಪ್ತಂ ತಿಸೃಷು ಗಾನಂ । ಅತಃ ಏಕವಚನಮವಿರುದ್ಧಂ ॥** ವಾಸ್ತವವಾಗಿ ಒಂದು ಸಾಮವು ಒಂದೇ ಋಕ್ಕಿನಲ್ಲಿ ಗಾನಮಾಡಲ್ಪಡುತ್ತದೆ. ಆನಂತರ ಉಳಿದ ಋಕ್ಕುಗಳೊಡನೆ ಸಂಬಂಧವನ್ನು ಬೆಳೆಸುತ್ತದೆ. ಎಂದರೆ ಉಳಿದ ಋಕ್ಕುಗಳಲ್ಲಿ ಗಾನಮಾಡಲ್ಪಡುತ್ತದೆ. ಅದ್ದರಿಂದ ಇಲ್ಲಿ ಅರ್ಕೇಣ ಎಂದು ಏಕವಚನದಲ್ಲಿ ಹೇಳಿರುವುದು ಸಂಪ್ರದಾಯವಿರುದ್ಧವೂ ಅಲ್ಲ, ಶಾಸ್ತ್ರವಿರುದ್ಧವೂ ಅಲ್ಲ ಎಂದು ತಿಳಿಸಿದ್ದಾರೆ.

ಅರ್ಕರೂಪವಾದ ಋಕ್ಕಿಗೂ, ಸಾಮಕ್ಕೂ ಇರುವ ಸಂಬಂಧವು ದಾಂಪತ್ಯಸಂಬಂಧವೆಂದು ಅನೇಕಕಡೆಗಳಲ್ಲಿ ಸ್ತುತವಾಗಿದೆ. ಶತಪಥಾದಿಬ್ರಾಹ್ಮಣಗಳಲ್ಲೂ, ಛಾಂದೋಗ್ಯಾದ್ಯುಪನಿಷತ್ತುಗಳಲ್ಲೂ ಋಕ್ಕನ್ನು ಪತ್ನಿಯೆಂದೂ ಸಾಮವನ್ನು ಪತಿಯೆಂದೂ ನಿರ್ದೇಶಿಸಿದೆ.

**ತದ್ಯಥಾ ಪಿತುಃ ಪುತ್ರಮೇವಂ ತ್ರೀಣಿ ಪ್ರಥಮಾನ್ಯಾಹಾಥ ಕಸ್ಮಾದೃಕ್ಸಾಮಯೋಃ ಸಂಕ್ರಾಮತೀತಿ ಸಾಮ ವಾ ಋಚಃ ಪತಿಸ್ತದ್ಯತ್ರಾಪಿ ಯಥಾ ಪಿತುಃ ಪುತ್ರಮೇವಂ ಬ್ರೂಯಾದ್ಯಥಾ ಪತಿಗ್ಂ ಸಂತಂ ಪುತ್ರಂ ಬ್ರೂಯಾತ್ತಾದೃಕ್ತತ್ತಸ್ಮಾದೃಕ್ಸಾಮಯೋಃ ಸಂಕ್ರಾಮತಿ ತಸ್ಮಾದು ತ್ರಿಃ ಸಂತನೋತೀತಿ ಪಿತರಂ ಪುತ್ರಂ ಪೌತ್ರಂ ತಾಂಸ್ತತ್ಸಂತನೋತಿ ತಸ್ಮಾದು ತೇಭ್ಯ ಏಕ ಏವ ದಧಾತಿ ॥** (ಶ. ಬ್ರಾ. ೮-೧-೩-೫)

ಪಿತೃವಿಗೂ ಪುತ್ರನಿಗೂ ಸಂಬಂಧವನ್ನು ಹೇಳುವಾಗ ಸಾಮಕ್ಕೂ ಋಕ್ಕಿಗೂ ಇರುವ ಸಂಬಂಧಕ್ಕೆ ಹೋಲಿಸುವುದರಲ್ಲಿ ಔಚಿತ್ಯವೇನು ಎಂದು ಪ್ರಶ್ನೆ ಬಂದರೆ, ಸಾಮವು ಋಕ್ಕಿಗೆ ಪತಿಯಾಗಿದೆ. ಅದರಂತೆಯೇ ಪತಿಯ ಸ್ಥಾನವನ್ನು ತೋರಿಸುತ್ತದೆ ಪಿತೃ, ಪುತ್ರ, ಪೌತ್ರ ಎಂದು ಮೂರು ಪರ್ಯಾಯವಿದೆ ಎಂದು ಸಾಮಕ್ಕೂ ತ್ರಯಾತ್ಮಕವಾದ ಋಕ್ಕಿಗೂ ಇರುವ ಪತಿಪತ್ನಿಯರ ಸಂಬಂಧವನ್ನೂ, ತಿಳಿಸಿದೆ. ಇದರಂತೆಯೇ ಛಾಂದ್ಯೋಗ್ಯೋಪನಿಷತ್ತಿನಲ್ಲಿಯೂ ಋಕ್ಕಿಗೂ ಸಾಮಕ್ಕೂ ಸಂಬಂಧವನ್ನು ತೋರಿಸುತ್ತಾ ಅಧಿದೈವತಪಕ್ಷದಲ್ಲಿ ಒಂದು ವಿಧವಾಗಿಯೂ ಅಧ್ಯಾತ್ಮಪಕ್ಷದಲ್ಲಿ ಇನ್ನೊಂದು ವಿಧವಾಗಿಯೂ ವರ್ಣಿಸಿದೆ. ಅಧಿದೈವತ ಪಕ್ಷದಲ್ಲಿರುವಂತೆ—(ಛಾ. ಉ. ೧-೬-೧-೮),

ಇಯಮೇವರ್ಗಗ್ನಿಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ ತಸ್ಮಾದೃಚ್ಯಧ್ಯೂಢಂ ಸಾಮ ಗೀಯತ ಇಯಮೇವ ಸಾಗ್ನಿರಮಸ್ತತ್ಸಾಮ ॥ ೧ ॥

ಅಂತರಿಕ್ಷಮೇವರ್ಗ್ವಾಯುಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ ತಸ್ಮಾದೃಚ್ಯಧ್ಯೂಢಂ ಸಾಮ ಗೀಯತೇಽಂತರಿಕ್ಷಮೇವ ಸಾ ವಾಯುರಮಸ್ತತ್ಸಾಮ ॥ ೨ ॥

ದ್ಯೌರೇವರ್ಗಾದಿತ್ಯಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ ತಸ್ಮಾದೃಚ್ಯಧ್ಯೂಢಂ ಸಾಮ ಗೀಯತೇ ದ್ಯೌರೇವ ಸಾಽಽದಿತ್ಯೋಽಮಸ್ತತ್ಸಾಮ ॥ ೩ ॥

**ನಕ್ಷತ್ರಾಣ್ಯೇವರ್ಕ್ಚಂದ್ರಮಾಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ ತಸ್ಮಾ-ದೃಚ್ಯಧ್ಯೂಢಂ ಸಾಮ ಗೀಯತೇ ನಕ್ಷತ್ರಾಣ್ಯೇವ ಸಾ ಚಂದ್ರಮಾ ಅಮಸ್ತತ್ಸಾಮ ॥ ೪ ॥**

ಈ ವಿವರಣೆಯಲ್ಲಿ ಪೃಥ್ವೀ, ಅಂತರಿಕ್ಷ, ದ್ಯುಲೋಕ, ನಕ್ಷತ್ರಗಳು ಇವುಗಳಿಗೂ, ಅಗ್ನಿ, ವಾಯು, ಆದಿತ, ಚಂದ್ರಮಾಃ ದೇವತೆಗಳಿಗೂ ಇರುವ ಸಂಬಂಧವನ್ನು ಋಕ್ಕಿಗೂ ಸಾಮಕ್ಕೂ ಇರುವ ಸಂಬಂಧವೆಂದು ತಿಳಿಸುವುದಲ್ಲದೆ ಪೃಥ್ವ್ಯಾದಿಗಳಿಗೂ ಋಕ್ಕಿಗೂ ಮತ್ತು ಅಗ್ನ್ಯಾದಿ ದೇವತೆಗಳಿಗೂ ಸಾಮಕ್ಕೂ ತಾದಾತ್ಮ್ಯವನ್ನೇ ಹೇಳಿದೆ. ಸಾಮಕ್ಕೆ ಋಕ್ಕು ಯಾವ ರೀತಿಯಲ್ಲಿ ಅಧಿಷ್ಠಾನವಾಗಿದೆಯೋ ಅದರಂತೆಯೇ ಪೃಥಿವ್ಯಾದಿಗಳು ಅಗ್ನ್ಯಾದಿಗಳಿಗೆ ಅಧಿಷ್ಠಾನಗಳಾಗಿವೆ. ಪೃಥಿವ್ಯಾದಿಗಳೇ ಋಕ್ಕು. ಆದುದರಿಂದ ಇವೇ ಸಾ ಎಂದೂ ಅಗ್ನ್ಯಾದಿಗಳೇ ಅಮವೆಂದೂ ಎರಡೂ ಸೇರಿ ಸಾಮವೆಂದು ಪ್ರಸಿದ್ಧವಾದವೆಂದೂ ವರ್ಣಿಸಿದೆ. ಇದೇ ರೀತಿಯಲ್ಲಿ ಅಧ್ಯಾತ್ಮಪಕ್ಷದಲ್ಲೂ ವಿವರಿಸುತ್ತಾ, (ಛಾ. ಉ. ೧-೭-೧ ರಿಂದ ೪).

**ಅಥಾಧ್ಯಾತ್ಮಂ ವಾಗೇವರ್ಕ್ಪ್ರಾಣಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ ತಸ್ಮಾದೃಚ್ಯಧ್ಯೂಢಂ ಸಾಮ ಗೀಯತೇ । ವಾಗೇವ ಸಾಮ ಗೀಯತೇ । ವಾಗೇವ ಪ್ರಾಣೋಽ-ಮಸ್ತತ್ಸಾಮ ॥ ೧ ॥**

**ಚಕ್ಷುರೇವರ್ಗಾತ್ಮಾ ಸಾಮ........ಚಕ್ಷುರೇವ ಸಾತ್ಮಾಮಸ್ತತ್ಸಾಮ ॥ ೨ ॥**

**ಶ್ರೋತ್ರಮೇವರ್ಙ್ಮನಃ ಸಾಮ..........ಶ್ರೋತ್ರಮೇವ ಸಾ ಮನೋಽಮಸ್ತತ್ಸಾಮ ॥ ೩ ॥**

ಇತ್ಯಾದಿಯಾಗಿ ವಾಕ್, ಚಕ್ಷುಸ್, ಶ್ರೋತ್ರ ಇತ್ಯಾದಿಗಳು ಪ್ರಾಣ, ಆತ್ಮ ಮತ್ತು ಮನಸ್ಸು ಇತ್ಯಾದಿಗಳಿಗೆ ಅಧಿಷ್ಠಾನಗಳಾಗಿ ಋಕ್ಕಿಗೂ ಸಾಮಕ್ಕೂ ಇರುವ ಸಂಬಂಧವನ್ನು ತೋರಿಸುತ್ತವೆ. ವಾಗಾದಿಗಳೇ ಋಕ್ಕುಗಳು (ಸಾ) ಪ್ರಾಣಾದಿಗಳೇ ಅಮವು ಎರಡೂ ಸೇರಿ ಸಾಮವಾಗುತ್ತವೆ. ಇದು ಅಧ್ಯಾತ್ಮಪಕ್ಷದ ವಿವರಣೆಯಾಗಿದೆ.

ಈ ವಿಧವಾಗಿ ಋಕ್ಕಿಗೂ ಸಾಮಕ್ಕೂ ಇರುವ ಸಂಬಂಧವನ್ನು ಹೇಳುವಾಗ ಪೃಥಿವ್ಯಾದಿಮೂರುಲೋಕಗಳೂ, ಈ ಲೋಕದ ಅಧಿಪತಿಗಳಾದ ಅಗ್ನ್ಯಾದಿದೇವತೆಗಳೂ ಈ ರೂಪದಲ್ಲಿರುವರೆಂದೂ ಅಥವಾ ಋಕ್ಸಾಮಗಳೇ ಆ ರೂಪದಲ್ಲಿರುವುದೆಂದೂ ಅಧಿದೈವತರೂಪದಲ್ಲಿಯೂ ಅಧ್ಯಾತ್ಮರೂಪದಲ್ಲಿಯೂ ಋಕ್ಸಾಮಗಳ ವಿಶ್ವವ್ಯಾಪ್ತಿಯನ್ನು ವರ್ಣಿಸಿದೆ.

**ಸ ಏಷ ಯೇ ಚೈತಸ್ಮಾದರ್ವಾಂಚೋ ಲೋಕಾಸ್ತೇಷಾಂ ಚೇಷ್ಟೇ ಮನುಷ್ಯಕಾಮಾ-ನಾಂ ಚೇತಿ ತದ್ಯ ಇಮೇ ವೀಣಾಯಾಂ ಗಾಯಂತ್ಯೇತಂ ತೇ ಗಾಯಂತಿ ತಸ್ಮಾತ್ತೇ ಧನಸನಯಃ ।**

(ಛಾ. ಉ. ೧-೭-೬)

ಅವನು ಇದರಡಿಯಲ್ಲಿರುವ (ಚಕ್ಷುಸ್ಸಿನೊಳಗಿರುವ ಆತ್ಮಸಂಬಂಧಿಯಾದ) ಸಮಸ್ತಲೋಕಗಳಿಗೂ, ಸಮಸ್ತ ಕಾಮಗಳಿಗೂ ಅಧಿಪತಿಯಾಗಿರುವನು. ಈ ಸಾಮವನ್ನು ವೀಣಾಗಾನರೂಪದಲ್ಲಿ ಹಾಡುವವರಿಗೆ ಸಮಸ್ತ ವಿಧವಾದ ಧನ ಸಂಪತ್ತೂ ಲಭಿಸುತ್ತವೆ. ಇಷ್ಟೇ ಅಲ್ಲದೆ

**ಅಥ ಯ ಏತದೇವಂ ವಿದ್ವಾನ್ಸಾಮ ಗಾಯತ್ಯುಭೌ ಸ ಗಾಯತಿ ಸೋಽಮುನೈವ ಸ ಏಷ ಯೇ ಚಾಮುಷ್ಮಾತ್ಪರಾಂಚೋ ಲೋಕಾಸ್ತಾಂಶ್ಚಾಪ್ನೋತಿ ದೇವಕಾಮಾಂಶ್ಚ ॥**

**ಕಂ ತೇ ಕಾಮಮಾಗಾಯಾನೀತ್ಯೇಷ ಹ್ಯೇವ ಕಾಮಾಗಾನಸ್ಯೇಷ್ಟೇ ಯ ಏವಂ ವಿದ್ವಾ-ನ್ಸಾಮ ಗಾಯತಿ ಸಾಮ ಗಾಯತಿ ॥**

(ಛಾ. ಉ. ೧-೭-೭ ರಿಂದ ೯)

ಈ ಸಾಮಗಾನದಿಂದ ದೇವಮಾನವಾದಿಗಳಿಗೆ ಸಾಧಾರಣವಾದ ಸಮಸ್ತ ಕಾಮಗಳೂ ಲಭಿಸುವುವು. ಆದುದರಿಂದ ಉದ್ಗಾತೃವಾದವನು "ಈ ಸಾಮಗಾನವನ್ನು ಮಾಡುವುದರಿಂದ ನಿಮ್ಮ ಯಾವ ಇಷ್ಟಾರ್ಥವು ಸಿದ್ಧಿಸುವಂತೆ ಮಾಡಲಿ?" ಎಂದು ಕೇಳಬಹುದು. ಏತಕ್ಕೆಂದರೆ ಈ ಪವಿತ್ರಾತ್ಮಕವಾದ ಸಾಮಗಾನವನ್ನು ಮಾಡುವವನೇ ಸಕಲವಿಧವಾದ ಐಹಿಕಾಮುಷ್ಮಿಕವಾದ ಕಾಮಗಳಿಗೂ ಪ್ರಭುವಾಗಿ ಅವನ್ನು ಸಂಪಾದಿಸಿಕೊಡಲು ಶಕ್ತನಾಗಿರುತ್ತಾನೆ.

**ಸ ಯ ಏತದೇವಂ ವಿದ್ವಾನ್ಸಾಧು ಸಾಮೇತ್ಯುಪಾಸ್ತೇಽಭ್ಯಾಶೋ ಹ ಯದೇವಂ ಸಾಧ-ವೋ ಧರ್ಮಾ ಆ ಚ ಗಚ್ಛೇಯುರುಪ ಚ ನಮೇಯುಃ ॥**

(ಛಾ. ಉ. ೨-೧-೪)

ಈ ತತ್ತ್ವವನ್ನು ತಿಳಿದ ಮಹಾತ್ಮನು ಸಾಮವನ್ನೇ ಸಾಧುವೆಂದು ತಿಳಿದು ಉಪಾಸನೆ ಮಾಡುವನು. ಅವನಿಗೆ ಯಾವಾಗಲೂ ಸಾಧುಧರ್ಮಗಳೇ ರಕ್ಷಕವಾಗಿ ಬರುವುವು ಮತ್ತು ಅವನ ಆತ್ಮರಕ್ಷಣೆಗಾಗಿ ಅವನಲ್ಲಿದ್ದು ಅವನನ್ನು ಸೇವಿಸುತ್ತವೆ ಇತ್ಯಾದಿಯಾಗಿ ಸಾಮದ ಪ್ರಭಾವವನ್ನು ನಾನಾವಿಧವಾಗಿ ವರ್ಣಿಸಿದೆ. ಇದಲ್ಲದೆ "**ಪಂಚವಿಧಂ ಸಾಮೋಪಾಸೀತ**" ಇತ್ಯಾದಿಯಾಗಿ ಈ ಸಾಮದ ವಿಭಾಗಗಳ ವರ್ಣನೆಯೂ, ಇದರ ಮಹತ್ತ್ವದ ಪ್ರಶಂಸೆಯೂ ನಾನಾ ವಿಧವಾಗಿದ್ದು ಇದು ಆತ್ಮಕಲ್ಯಾಣಕ್ಕೆ ಸಾಕ್ಷಾತ್ಸಾಧನವೆಂದೂ ಅನೇಕ ರೀತಿಯಲ್ಲಿ ಪ್ರಶಂಸಿತವಾಗಿದೆ. ಆದರ ವಿವರಣೆಯು ಅತ್ಯಂತ ವಿಸ್ತೃತವಾಗುವುದರಿಂದ ಇಲ್ಲಿ ಆ ಪ್ರಶಂಸಾವಾಕ್ಯಗಳನ್ನು ಉದಹರಿಸಲಾಗಲಾರದು. ಛಾಂದೋಗ್ಯಾದಿಗಳಲ್ಲಿ ಇದರ ಪ್ರಶಂಸೆಯನ್ನು ತಿಳಿಯಬಹುದು.

ಪ್ರಕೃತವಾದ ಋಕ್ಕಿನಲ್ಲಿ **ಉಕ್ತಲಕ್ಷಣೇನ ಮಂತ್ರೇಣ ಸಾಮ ಗಾಯತ್ರರಥಂತರಸಂಜ್ಞಕಂ ಸಾಮ ಪ್ರತಿಮಿಮೀತೇ** । ಎಂದು ಸಾಯಣರು ವಿವರಿಸಿರುವುದನ್ನು ಮೇಲೆ ತಿಳಿಸಿದೆ.

**ತ್ರೈಷ್ಟುಭೇನ ವಾಕಂ**—ತ್ರಿಷ್ಟುಪ್ ಛಂದಸ್ಸಿನಿಂದ ವಾಕವನ್ನು ನಿರ್ಮಿಸಿದನು ಎಂದು ಸ್ಥೂಲವಾದ ಅರ್ಥವನ್ನು ಹೇಳಬಹುದು. ಇಲ್ಲಿ ವಾಕಶಬ್ದಕ್ಕೆ ದ್ವ್ಯೃಚ ಮತ್ತು ತೃಚರೂಪಗಳಾದ ಸಮುದಾಯವ್ಯಾಗಳೆಂದು ಅರ್ಥವಾಗಬಹುದು **ಅಥವಾ ವಾಕಂ ಸೂಕ್ತಂ ಏತಾವದ್ಭಿಸ್ತ್ರಿಷ್ಟುಬ್ಭಿಃ ಉಪನಿಬದ್ಧಮಿದಂ ಸೂಕ್ತಂ** ತ್ರಿಷ್ಟುಬಾದಿಗಳಿಂದ ರಚಿತವಾದ ಸೂಕ್ತವೆಂದೂ ಅರ್ಥವಾಗಬಹುದು ಎಂದು ವಿವರಿಸಿದ್ದಾರೆ. ಆದರೆ ಇತರ ಛಂದಸ್ಸುಗಳೂ ಇರುವಾಗ ತ್ರಿಷ್ಟುಪ್ಪೆಂದು ಮಾತ್ರ ಹೇಳಲು ಕಾರಣವೇನೆಂದು ಪ್ರಶ್ನೆಯನ್ನು ಊಹಿಸಿ ಆದಕ್ಕೆ ಉತ್ತರವಾಗಿ ಹೀಗೆ ಹೇಳಿದೆ **ಅಥವಾ ಅನಾದೇಶೇ ಸರ್ವತ್ರ ತ್ರಿಷ್ಟುಭೋ ಗ್ರಹಣಾತ್ ಪ್ರಾಚುರ್ಯಾಭಿಪ್ರಾಯೇಣ ಇದಮುಕ್ತಂ** । ಋಕ್ಸಂಹಿತೆಯಲ್ಲೆಲ್ಲಾ ತ್ರಿಷ್ಟುಪ್ ಛಂದಸ್ಸಿನಲ್ಲಿ ನಿರ್ಮಿತವಾದ ಸೂಕ್ತಗಳೇ ಅತ್ಯಧಿಕವಾಗಿರುವುದರಿಂದ ಇದೊಂದು ಛಂದಸ್ಸನ್ನೇ ಮುಖ್ಯವಾದುದನ್ನಾಗಿ ಮಾಡಿಕೊಂಡು ಹೇಳಿದೆಯೆಂದು ಸಾಯಣರು ವಿವರಿಸಿದ್ದಾರೆ.

ಇಷ್ಟೇ ಅಲ್ಲದೇ ತ್ರಿಷ್ಟುಪ್ಪಿನ ಮಹತ್ತ್ವವು ಅತ್ಯಧಿಕವಾದುದು. ಇದರ ನಿರ್ವಚನವನ್ನು ನಿರುಕ್ತದಲ್ಲಿ ಈರೀತಿ ಹೇಳಿದೆ,

**ತ್ರಿಷ್ಟುಪ್ ಸ್ತೋಭತ್ಯುತ್ತರಪದಾ । ಕಾ ತು ತ್ರಿತಾ ಸ್ಯಾತ್ । ತೀರ್ಣತಮಂ ಛಂದಃ । ತ್ರಿವೃದ್ವಜ್ರಸ್ತಸ್ಯ ಸ್ತೋಭತೀತಿ ವಾ । ಯತ್ತ್ರಿರಸ್ತೋಭತ್ತತ್ತ್ರಿಷ್ಟುಭಸ್ತ್ರಿಷ್ಟುಪ್ತ್ವಮಿತಿ ವಿಜ್ಞಾ- ಯತೇ ।** (ನಿ. ೭-೧೨)

ಸ್ತುತ್ಯರ್ಥಕವಾದ **ಸ್ತುಭ್** ಧಾತುವಿನಿಂದ ನಿಷ್ಪನ್ನವಾಗಿದೆ. ಆದರೆ ಪೂರ್ವಪದವಾದ **ತ್ರಿ** ಶಬ್ದಕ್ಕೆ ಏನರ್ಥವೆಂದರೆ ಅತ್ಯಂತ ಚುರುಕಾದುದು ಎಂದರೆ ಇದು ಅತ್ಯಂತ ತೀವ್ರವಾದ ಛಂದಸ್ಸೆಂದರ್ಥ. ಅಥವಾ ತ್ರಿವೃತಾತ್ಮಕವಾದ ವಜ್ರವನ್ನು ಸ್ತುತಿಸುವುದರಿಂದಾಗಲಿ ಅಥವಾ ಮೂರುಸಲ ಸ್ತುತಿಸುವುದರಿಂದಾಗಲಿ ಈ ಹೆಸರು ಪ್ರಸಿದ್ಧವಾಗಿರಬಹುದು. ಇದು ವಜ್ರಾಯುಧವನ್ನು ಸ್ತುತಿಸುವುದೇ ಅಲ್ಲದೆ ವಜ್ರಾತ್ಮಕವಾಗಿಯೇ ಇದೆ ಎಂದು ತ್ರಿಷ್ಟುಪ್ಪಿನ ಆಕಾರವನ್ನು ಮತ್ತು ಶಕ್ತಿಯನ್ನೂ ಶತಪಥಬ್ರಾಹ್ಮಣದಲ್ಲಿ ಈರೀತಿ ಸ್ತುತಿಸಿದೆ.

**ಏಕಾದಶಾಕ್ಷರಾ ತ್ರಿಷ್ಟುಬ್ವಜ್ರಸ್ತ್ರಿಷ್ಟುಬ್ವೀರ್ಯಂ ತ್ರಿಷ್ಟುಬ್ವಜ್ರೇಣೈವೈತದ್ವೀರ್ಯೇಣ ಯಜ- ಮಾನಃ ಪುರಸ್ತಾದ್ಯಜ್ಞಮುಖಾದ್ರಕ್ಷಾಗ್ಂಸಿ ನಾಷ್ಟ್ರಾ ಅಪಹಂತಿ ।** (ಶ. ಬ್ರಾ. ೧೦- ೨-೩-೨)

ಏಕಾದಶಾಕ್ಷರಾತ್ಮಕವಾದ ತ್ರಿಷ್ಟುಪ್ಪೇ ವಜ್ರವು; ಅದೇ ವೀರ್ಯವು. ಈ ಉತ್ತಮವಾದ ಶಕ್ತಿಯಿಂದಲೇ ಯಜಮಾನನು ಯಜ್ಞಮುಖದಿಂದ ಅಸುರಾದಿಗಳನ್ನೆಲ್ಲಾ ದೂರಕ್ಕೆ ಅಟ್ಟಲು ಸಮರ್ಥನಾಗುತ್ತಾನೆ. ಆದುದರಿಂದ ತ್ರಿಷ್ಟುಬಾತ್ಮಕವಾದ ಮಂತ್ರವೇ ವೀರ್ಯಯುತವಾದುದು. ಇದನ್ನೇ ಐತರೇಯಬ್ರಾಹ್ಮಣದಲ್ಲೂ ವರ್ಣಿಸುತ್ತಾ,

**ತದೇಕಾದಶರ್ಚಂ ಭವತ್ಯೇಕಾದಶಾಕ್ಷರಾ ವೈ ತ್ರಿಷ್ಟುಪ್ತ್ರೈಷ್ಟುಭೋ ವೈ ರಾಜನ್ಯ ಓಜೋ ವಾ ಇಂದ್ರಿಯಂ ವೀರ್ಯಂ ತ್ರಿಷ್ಟುಬೋಜಃ........॥** (ಐ. ಬ್ರಾ. ೮-೨)

ಏಕಾದಶರ್ಚವುಳ್ಳ ತ್ರಿಷ್ಟುಪ್ಪು ಹನ್ನೊಂದಕ್ಷರಗಳುಳ್ಳದ್ದು. ಇದು ರಾಜನ್ಯಾತ್ಮಕವಾದುದು. ಇದು ಓಜಸ್ಸನ್ನೂ, ಇಂದ್ರಿಯವನ್ನೂ, ವೀರ್ಯವನ್ನೂ ಒಳಗೊಂಡು ಕ್ಷತ್ರಾತ್ಮಕವಾದುದು. ಇತ್ಯಾದಿಯಾಗಿ ತ್ರಿಷ್ಟುಪ್ಪನ್ನು ಸ್ತುತಿಸಿದೆ. ಆದುದರಿಂದ ವೀರ್ಯಪೂರಿತವಾದ ಈ ಛಂದಸ್ಸಿನ ವಾಕ್ಯವನ್ನು ನಿರ್ಮಿಸುವರೆಂದು ಪ್ರಕೃತವಾದ ಋಕ್ಕಿನಲ್ಲಿ ಅರ್ಥಮಾಡಿದೆ.

**ವಾಕೇನ ವಾಕಂ** ಎಂಬುದಕ್ಕೆ **ವರ್ಗಮನುವಾಕಂ ವಾ ಮಿಮತೇ** ವರ್ಗವನ್ನಾಗಲಿ ಅಥವಾ ಅನುವಾಕವನ್ನಾಗಲಿ ನಿರ್ಮಿಸುತ್ತಾರೆ ಎಂದರ್ಥ. ಇದಕ್ಕೆ ವಿಶೇಷಣವನ್ನು ತೋರಿಸುತ್ತಾ **ದ್ವಿಪದಾ ಚತುಷ್ಪದಾ । ಪಾದದ್ವಯ- ಬದ್ಧವಿರಾಡಾದಿಚ್ಛಂದೋನಿಬದ್ಧಮಂತ್ರರೂಪೇಣ ; ಪಾದಚತುಷ್ಟಯೋಪೇತೇನ ಅನುಷ್ಟುಬಾದಿಮಂತ್ರ- ರೂಪೇಣೇತಿ । ಇಯತೀಭಿಶ್ಚತುಷ್ಪದಾಭಿರುಪೇತೋ ವರ್ಗಃ ॥**

**ದ್ವಿಪದಾ ವಿರಾಟ್** ಎಂಬ ಛಂದಸ್ಸಿನಲ್ಲಿ ಎರಡು ಪಾದಗಳು ಮಾತ್ರವಿದ್ದು ಒಂದು ಅರ್ಧಋಕ್ಕು ಮಾತ್ರವಿರುವುದು. ಇಂತಹ ಮಂತ್ರಗಳಿಂದ ಕೂಡಿದ ವರ್ಗವೆಂದಾಗಲಿ ಅಥವಾ ಅನುಷ್ಟುಬಾದಿಗಳಿಂದ ಕೂಡಿದ ವರ್ಗವೆಂದಾಗಲಿ ಅರ್ಥವಾಗುತ್ತದೆ. **ಸೂಕ್ತಪಕ್ಷೇ ಏತಾವದ್ಭಿಃ ಸೂಕ್ತೈ ಅಯಮನುವಾಕ ಇತಿ ।** ಸೂಕ್ತಪಕ್ಷದಲ್ಲಿ ಇಷ್ಟು ಸೂಕ್ತಗಳುಳ್ಳ ಅನುವಾಕವೆಂದರ್ಥವೆಂದು ಈ ವಾಕ್ಯವ ಪರಿಗಣನೆಯನ್ನು ಹೇಳಿದೆ. ಈ ವಿಧವಾದ **ವರ್ಗ** ಅಥವಾ **ಸೂಕ್ತ** ಎಂಬ ಎರಡು ವಿಧವಾದ ಪರಿಗಣನೆಗೂ ಇಲ್ಲಿ ಅವಕಾಶವಿರುವುದರಿಂದ ಈ ವಿಭಾಗಗಳನ್ನು **ಶೌನಕರ ಅನುಕ್ರಮಣಿಯಲ್ಲಿ** ತಿಳಿಸಿರುವಂತೆ ಇಲ್ಲಿ ಉದಹರಿಸಿದರೆ ತಪ್ಪಾಗಲಾರದು. ಶೌನಕರ ಮತದಂತೆ ಋಗ್ವೇದದ **ಶಾಕಲ ಶಾಖೆಯ** ಪ್ರಕಾರ ೧೦ ಮಂಡಲಗಳೂ ೬೪ ಅಧ್ಯಾಯಗಳೂ ಇವೆ. ಇವುಗಳಲ್ಲಿ ಮೊದಲು ಮಂಡಲಗಳ ವಿಭಾಗಗಳೂ ಇವುಗಳ ಸಂಖ್ಯೆಯೂ ಈರೀಯಿದೆ.

| | | | | | |
|---|---|---|---|---|---|
| ೧ನೆಯ ಮಂಡಲದಲ್ಲಿ | | ೨೪ ಅನುವಾಕಗಳೂ | | ೧೯೧ ಸೂಕ್ತಗಳೂ ಇವೆ. | |
| ೨ ,, | ,, | ೪ | ,, | ೪೩ | ,, |
| ೩ ,, | ,, | ೫ | ,, | ೬೨ | ,, |
| ೪ ,, | ,, | ೫ | ,, | ೫೮ | ,, |
| ೫ ,, | ,, | ೬ | ,, | ೮೭ | ,, |
| ೬ ,, | ,, | ೬ | ,, | ೭೫ | ,, |
| ೭ ,, | ,, | ೬ | ,, | ೧೦೪ | ,, |
| ೮ ,, | ,, | ೧೦ | ,, | ೯೨ | (೧೧ ವಾಲಖಿಲ್ಯ ಸೂಕ್ತಗಳು) |
| ೯ ,, | ,, | ೭ | ,, | ೧೧೪ | ,, |
| ೧೦ ,, | ,, | ೧೨ | ,, | ೧೯೧ | ,, |

ಒಟ್ಟು ೧೦ ಮಂಡಲಗಳಲ್ಲಿ ೮೫ ಅನುವಾಕಗಳೂ ೧೦೧೭+೧೧=೧೦೨೮ ಸೂಕ್ತಗಳೂ,

(ಬಾಷ್ಕಲ ಶಾಖೆಯ ಪ್ರಕಾರ ೧೦೨೫ ಸೂಕ್ತಗಳೂ) ಇವೆ. **ವರ್ಗರೂಪವಾದ ವಿಭಾಗಗಳು ಈರೀತಿಯಿವೆ.**

| | | | | |
|---|---|---|---|---|
| ೧ ಮಂತ್ರವನ್ನುಳ್ಳ | ವರ್ಗಗಳು | ೧ ಒಟ್ಟು | ಮಂತ್ರಗಳು | ೧ |
| ೨ | ,, | ೨ | ,, | ೪ |
| ೩ | ,, | ೯೭ | ,, | ೨೯೧ |
| ೪ | ,, | ೧೭೪ | ,, | ೬೯೬ |
| ೫ | ,, | ೧೨೦೭ | ,, | ೬೦೩೫ |
| ೬ | ,, | ೩೪೬ | ,, | ೨೦೭೬ |
| ೭ | ,, | ೧೧೯ | ,, | ೮೩೩ |
| ೮ | ,, | ೫೯ | ,, | ೪೭೨ |
| ೯ | ,, | ೧ | ,, | ೯ |

ಒಟ್ಟು ೬೪ ಅಧ್ಯಾಯಗಳಲ್ಲಿ ೨೦೦೬ ವರ್ಗಗಳೂ ೧೦೪೧೭ ಮಂತ್ರಗಳೂ ಇವೆ. **ಚರಣವ್ಯೂಹದ ಸಂಗಣನೆಯಂತೆ** ಒಟ್ಟು ೨೦೪೨ ವರ್ಗಗಳೂ ೧೦೬೨೨ ಮಂತ್ರಗಳೂ ಆಗುತ್ತವೆ. ಆದರೆ ಈ ವ್ಯತ್ಯಾಸಕ್ಕೆ ಸರಿಯಾದ ಆಧಾರವೇನೆಂಬುದನ್ನು ಹೇಳಲಾಗುವುದಿಲ್ಲ. ಈ ವಿಭಾಗಗಳನ್ನೂ ಪ್ರಕೃತವಾದ ಋಕ್ಕಿನಲ್ಲಿ **ವಾಕೇನ ವಾಕಂ ದ್ವಿಪದಾ ಚತುಷ್ಪದಾ** ಎಂದು ವರ್ಣಿಸಿದೆ.

**ಅಕ್ಷರೇಣ ಮಿಮತೇ ಸಪ್ತವಾಣೀಃ—ಅಕ್ಷರೇಣೈವ ವಾಗಧಿಷ್ಠಿತಾನಿ ಸಪ್ತಚ್ಛಂದಾಂಸಿ ನಿರ್ಮಾಣಂ ಕುರ್ವಂತಿ।** ಅಕ್ಷರದಿಂದಲೇ ಗಾಯತ್ರ್ಯಾದಿಸಪ್ತಚ್ಛಂದಸ್ಸುಗಳನ್ನೂ ನಿರ್ಮಿಸುತ್ತಾರೆ ಎಂದರ್ಥ. **ಅಷ್ಟಾಕ್ಷರಾ ಗಾಯತ್ರೀ; ಏಕಾದಶಾಕ್ಷರಾ ತ್ರಿಷ್ಟುಪ್ ; ದ್ವಾದಶಾಕ್ಷರಾ ಜಗತೀ।** ಗಾಯತ್ರಿಗೆ ಎಂಟಕ್ಷರಗಳು; ತ್ರಿಷ್ಟುಪ್ಪಿಗೆ ಹನ್ನೊಂದಕ್ಷರಗಳು; ಜಗತಿಗೆ ಹನ್ನೆರಡಕ್ಷರಗಳು. ಇವೆಲ್ಲಾ ಒಂದೊಂದು ಪಾದಕ್ಕೆ ಎಂದು ತಿಳಿಯಬೇಕು. ಈ ಛಂದಸ್ಸುಗಳ ಸೃಷ್ಟಿಯ ಕ್ರಮವನ್ನೂ, ಇವುಗಳಿಂದ ಲಭಿಸತಕ್ಕ ಪ್ರಯೋಜನವನ್ನೂ ಐತರೇಯಬ್ರಾಹ್ಮಣದಲ್ಲಿ ಈರೀತಿ ತಿಳಿಸಿದೆ.

**ದೇವವಿಶಃ ಕಲ್ಪಯಿತವ್ಯಾ ಇತ್ಯಾಹುಶ್ಛಂದಶ್ಛಂದಸಿ ಪ್ರತಿಷ್ಠಾಪ್ಯಮಿತಿ ಶೋಂಸಾವೋ-ಮಿತ್ಯಾಹ್ವಯತೇ ಪ್ರಾತಃಸವನೇ ತ್ರ್ಯಕ್ಷರೇಣ ಶಂಸಾಮೋ ದೈವೋಮಿತ್ಯಧ್ವರ್ಯುಃ ಪ್ರತಿಗೃ-ಹ್ಣಾತಿ ಪಂಚಾಕ್ಷರೇಣ ತದಷ್ಟಾಕ್ಷರಂ ಸಂಪದ್ಯತೇಽಷ್ಟಾಕ್ಷರಾ ವೈ ಗಾಯತ್ರೀ ಗಾಯತ್ರೀಮೇವ ತತ್ಪುರಸ್ತಾತ್ಪ್ರಾತಃಸವನೇಽಚೀಕ್ಲೃಪತಾಂ ॥**

(ಐ. ಬ್ರಾ. ೩-೧೨)

ಹಿಂದಿನ ಖುಕ್ಕಿನಲ್ಲಿ ವರ್ಣಿತವಾಗಿರುವಂತೆ ಗಾಯತ್ರಪದವನ್ನು ಎಂದರೆ ಗಾಯತ್ರರೂಪವಾದ ಅಗ್ನಿಯ ಸ್ಥಾನವನ್ನು ಕಲ್ಪಿಸಲು ಅಗ್ನಿಪ್ರಿಯವಾದ ಗಾಯತ್ರೀಮಂತ್ರವನ್ನು ರಚಿಸಬೇಕು. ಇದು ಪ್ರಾತಃಸವನಕಾಲದಲ್ಲಿ ನೆರವೇರಿಸಬೇಕಾದ ವಿಧಿಯು. ಇದು ಆಹಾವಪ್ರತಿಗರರೂಪದಲ್ಲಿರುತ್ತದೆ. ಈ ಕಾಲದಲ್ಲಿ ಹೋತೃವು "**ಶೋಂಸಾವೋಂ**" (ನಾವಿಬ್ಬರೂ ಸ್ತುತಿಸೋಣ) ಎಂದು ಹೇಳುತ್ತಾನೆ. ಇದು ಮೂರಕ್ಷರವುಳ್ಳದ್ದು ಇದಕ್ಕೆ ಪ್ರತಿಯಾಗಿ ಅಧ್ವರ್ಯುವು "**ಶಂಸಾಮೋದೈವೋಂ**" (ನೀನು ಸ್ತುತಿವಾಕ್ಯವನ್ನು ಪಠಿಸು ನಾವು ಹರ್ಷಪಡುತ್ತೇವೆ.) ಎಂಬ ಪಂಚಾಕ್ಷರವುಳ್ಳ ಉತ್ತರರೂಪವಾದ ಮಂತ್ರವನ್ನು ಹೇಳುತ್ತಾನೆ. ಇವೆರಡೂ ಸೇರಿ ಎಂಟಕ್ಷರಗಳಾದವು. **ಅಷ್ಟಾಕ್ಷರಾ ವೈ ಗಾಯತ್ರೀ** ಎಂಬ ನಿಯಮಕ್ಕನುಸಾರವಾಗಿದೆ. ಇದರಂತೆಯೇ ಮಾಧ್ಯಂದಿನಸವನದ ಕಾಲದಲ್ಲಿ ತ್ರಿಷ್ಟುಪ್ಪಿನಿಂದ ನೆರವೇರಿಸಬೇಕಾದ ವಿಧಿಯನ್ನೂ ಹೇಳಿದೆ.

**ಅಧ್ವರ್ಯೋ ಶೋಂಸಾವೋಮಿತ್ಯಾಹ್ವಯತೇ ಮಧ್ಯಂದಿನೇ ಷಳಕ್ಷರೇಣ ಶಂಸಾಮೋ-ದೈವೋಮಿತ್ಯಧ್ವರ್ಯುಃ ಪ್ರತಿಗೃಹ್ಣಾತಿ ಪಂಚಾಕ್ಷರೇಣ ತದೇಕಾದಶಾಕ್ಷರಂ ಸಂಪದ್ಯತ ಏಕಾದ-ಶಾಕ್ಷರಾ ವೈ ತ್ರಿಷ್ಟುಪ್ ತ್ರಿಷ್ಟುಭಮೇವ ತತ್ಪುರಸ್ತಾನ್ಮಧ್ಯಂದಿನೇಽಚೀಕ್ಲೃಪತಾಂ ॥**

(ಐ. ಬ್ರಾ. ೩-೧೨)

"**ಅಧ್ವರ್ಯೋ ಶಂಸಾವೋಂ**" ಎಂಬ ಅಕ್ಷರಗಳುಳ್ಳ ಹೋತೃವಿನ ಪಠನಕ್ಕೆ ಪ್ರತಿಯಾಗಿ ಅಧ್ವರ್ಯುವು "**ಶಂಸಾ-ಮೋದೈವೋಂ**" ಎಂಬ ಪಂಚಾಕ್ಷರಾತ್ಮಕವಾದ ಉತ್ತರವನ್ನು ಹೇಳುತ್ತಾನೆ ಇವೆರಡೂ ಸೇರಿ ತ್ರಿಷ್ಟುಪ್ ರೂಪವಾದ ಹನ್ನೊಂದಕ್ಷರಗಳಾದವು. ಇದರಂತೆಯೇ ತೃತೀಯಸವನದಲ್ಲಿ "**ಅಧ್ವರ್ಯೋ ಶೋಶೋಂಸಾವೋ**" ಎಂದು ಹೋತೃವಿನ ಪಠನಕ್ಕೆ ಅಧ್ವರ್ಯುವು "**ಶಂಸಾಮೋದೈವೋಂ**" ಎಂದು ಪ್ರತಿಯನ್ನು ಹೇಳಿದಾಗ ಒಟ್ಟು ಹನ್ನೆರಡಕ್ಷರಗಳಾದವು. ಇದು ದ್ವಾದಶಾಕ್ಷರಾತ್ಮಕವಾದ ಜಗತಿಯ ಪಾದವಾಯಿತು. ಇದನ್ನೇ ಹಿಂದಿನ ಖುಕ್ಕಿನಲ್ಲಿ "**ಯದ್ಗಾಯತ್ರೇ ಅಧಿಗಾಯತ್ರಮಾಹಿತಂ ತ್ರೈಷ್ಟುಭಾದ್ವಾ ತ್ರೈಷ್ಟುಭಂ ನಿರತಕ್ಷತ**" ಇತ್ಯಾದಿಯಾಗಿ ವರ್ಣಿಸಿದೆ. ಈ ರೀತಿಯಾದ ಛಂದಸ್ಸ್ಥಾಪನದ ಜ್ಞಾನವನ್ನು ಅರಿತವರಿಗೆ ಅಮೃತತ್ತ್ವವು ಪ್ರಾಪ್ತವಾಗುವುದೆಂದು ಅಭಿಪ್ರಾಯವು.

ಪ್ರಕೃತವಾದ ಖುಕ್ಕಿನ ವಿವರಣೆಯಲ್ಲಿ ಸಾಯಣರು ಗಾಯತ್ರ್ಯಾದಿ ಮೂರು ಛಂದಸ್ಸುಗಳ ಪ್ರಭೇದಗಳನ್ನು ಮಾತ್ರ ತಿಳಿಸಿ ಆ ಮೂರು ಛಂದಸ್ಸುಗಳಲ್ಲೂ ಒಂದೊಂದು ಪಾದದ ಸಂಖ್ಯೆಯನ್ನು ಮಾತ್ರ ಕೊಟ್ಟಿರುತ್ತಾರೆ. ಎಲ್ಲಾ ಛಂದಸ್ಸುಗಳ ಪ್ರತ್ಯೇಕವಾದ ಅಕ್ಷರ ಸಂಖ್ಯೆಗಳನ್ನೂ ಅವುಗಳ ಮಹತ್ತ್ವವನ್ನೂ ತೈತ್ತಿರೀಯ ಸಂಹಿತೆಯಲ್ಲಿ,

**ಚತುರ್ವಿಗ್‌ಂಶತಿಮನುಬ್ರೂಯಾದ್ಬ್ರಹ್ಮವರ್ಚಸಕಾಮಸ್ಯ ಚತುರ್ವಿಗ್‌ಂಶತ್ಯಕ್ಷರಾ ಗಾಯತ್ರೀ....**
**ತ್ರಿಗ್‌ಂಶತಮನುಬ್ರೂಯಾದನ್ನಕಾಮಸ್ಯ ತ್ರಿಗ್‌ಂಶದಕ್ಷರಾ ವಿರಾಟ್ .... .... .... .... .... .... ....**
**ದ್ವಾತ್ರಿಗ್‌ಂಶತಮನುಬ್ರೂಯಾತ್ಪ್ರತಿಷ್ಠಾಕಾಮಸ್ಯ ದ್ವಾತ್ರಿಗ್‌ಂಶದಕ್ಷರಾನುಷ್ಟುಪ್ .... .... ....**
**ಷಟ್‌ತ್ರಿಗ್‌ಂಶತಮನುಬ್ರೂಯಾತ್ಪಶುಕಾಮಸ್ಯ ಷಟ್‌ತ್ರಿಗ್‌ಂಶದಕ್ಷರಾ ಬೃಹತೀ .... .... .... ....**

ಚತುಶ್ಚತ್ವಾರಿಗ್ಂಶತಮನುಬ್ರೂಯಾದಿಂದ್ರಿಯಕಾಮಸ್ಯ ಚತುಶ್ಚತ್ವಾರಿಗ್ಂಶದಕ್ಷರಾ ತ್ರಿಷ್ಟುಕ್ ಅಷ್ಟಾಚತ್ವಾರಿಗ್ಂಶತಮನುಬ್ರೂಯಾತ್ಪಶುಕಾಮಸ್ಯಾಷ್ಟಾಚತ್ವಾರಿಗ್ಂಶದಕ್ಷರಾ ಜಗತೀ .... .... ಸರ್ವಾಣಿ ಛಂದಾಗ್ಂಸ್ಯನು ಬ್ರೂಯಾದ್ಬಹುಯಾಜಿನಸ್ಸರ್ವಾಣಿ ವಾ ಏತಸ್ಯ ಛಂದಾಗ್ಸ್ಯವರುದ್ಧಾನಿ ಯೋ ಬಹುಯಾಜ್ಯಪರಿಮಿತಮನು ಬ್ರೂಯಾದಪರಿಮಿತಸ್ಯಾವರುದ್ಧ್ಯೈ ॥

(ತೈ. ಸಂ. ೨-೫-೧೦-೩, ೪)

ಇತ್ಯಾದಿ ವಾಕ್ಯಗಳಲ್ಲಿ ತಿಳಿಸಿದೆ.

| | | |
|---|---|---|
| ಗಾಯತ್ರಿಯ ಅಕ್ಷರಗಳು | | ೨೪ |
| ಅನುಷ್ಟುಪ್ಪಿನ | ,, | ೩೨ |
| ಬೃಹತಿಯ | ,, | ೩೬ |
| ತ್ರಿಷ್ಟುಪ್ಪಿನ | ,, | ೪೪ |
| ಜಗತಿಯ | ,, | ೪೮ |

ಎಂದು ಅವುಗಳ ಅಕ್ಷರ ಸಂಖ್ಯೆಯನ್ನು ತಿಳಿಸಿ ಗಾಯತ್ರಿಯು ಬ್ರಹ್ಮವರ್ಚಸ್ಸಿಗೂ, ಅನುಷ್ಟುಪ್ಪು ಪ್ರತಿಷ್ಠೆಗೂ ಬೃಹತಿಯೂ ಜಗತಿಯೂ ಪಶುಲಾಭಕ್ಕೂ, ತ್ರಿಷ್ಟುಪ್ಪು ಇಂದ್ರಿಯಬಲಕ್ಕೂ ಸಾಧಕಗಳಾಗುತ್ತವೆಂದು ತಿಳಿಸಿದೆ. ಇದರಲ್ಲಿ **ಉಷ್ಣಿಕ್** ಮತ್ತು **ಪಂಕ್ತಿ** ಎಂಬೆರಡು ಛಂದಸ್ಸುಗಳನ್ನು ಸೇರಿಸಿಲ್ಲ. **ಉಷ್ಣಿಕ್ಕಿಗೆ** ೨೮ ಅಕ್ಷರಗಳೂ **ಪಂಕ್ತಿಗೆ** ೪೦ ಅಕ್ಷರಗಳೂ ಇವೆ. ಈ ಏಳು ಮುಖ್ಯವಾದ ಛಂದಸ್ಸುಗಳಲ್ಲದೇ ಇವುಗಳ ಪ್ರಭೇದಗಳೂ ಸಹ ಅತಿ ಜಗತೀ (೫೨) ಶಕ್ವರೀ (೫೬); ಅತಿಶಕ್ವರೀ (೬೦); ಅಷ್ಟಿ (೬೪); ಅತ್ಯಷ್ಟಿ (೬೮); ಧೃತಿ (೭೨); ಅತಿಧೃತಿ (೭೬) ಎಂಬ ಹೆಸರುಗಳೊಂದಿವೆ **ದ್ವಿಪದಾ ವಿರಾಟ್** ಇತ್ಯಾದಿಯಾಗಿ ಮಿಶ್ರವಾದ ಛಂದಸ್ಸುಗಳೂ ಇವೆ. [ಇವುಗಳ ವಿವರಣೆಯನ್ನು ಋಗ್ವೇದಸಂಹಿತೆಯ ಭಾಗ ೧ ಪೇಜು ವಿಶದವಾಗಿ ತಿಳಿಸಿದೆ.]

**ತತಃ ಪದಾನಾಂ ಛಂದಸಾಂ ಅಕ್ಷರಂ ಮೂಲಮಿತಿ । ತಥಾ ಋಗ್ವರ್ಗಸೂಕ್ತಾನುವಾಕಾದೀನಾಂ ಚ ಅಕ್ಷರಂ ಮೂಲಮಿತ್ಯಕ್ಷರಪ್ರಶಂಸಾ ॥** ಛಂದಸ್ಸುಗಳಿಗೂ, ಅವುಗಳ ಅವಯವಗಳಾದ ಪಾದಗಳಿಗೂ, ಋಕ್ಕು ವರ್ಗ, ಸೂಕ್ತ ಅನುವಾಕ ಇವುಗಳೆಲ್ಲಕ್ಕೂ ಸಹ ಅಕ್ಷರವೇ ಮೂಲವು ಎಂದು ಅಕ್ಷರಪ್ರಶಂಸೆಯಿದೆಯೆಂದು ಸಾಯಣರು ವಿವರಿಸಿದ್ದಾರೆ.



**ಜಗತಾ ಸಿಂಧುಂ ದಿವ್ಯಸ್ತಭಾಯದ್ರಥಂತರೇ ಸೂರ್ಯಂ ಪರ್ಯಪಶ್ಯತ್ । ಗಾಯತ್ರಸ್ಯ ಸಮಿಧಸ್ತಿಸ್ರ ಆಹುಸ್ತತೋ ಮಹ್ನಾ ಪ್ರ ರಿರಿಚೇ ಮಹಿತ್ವಾ ॥ ೨೫ ॥**

ಜಗತೀಚ್ಛಂದಸ್ಸಿನಿಂದ ಉತ್ಪನ್ನವಾದ ಸಾಮದಿಂದ ಬ್ರಹ್ಮನು ಸ್ಯಂದನಶೀಲನಾದ ಆದಿತ್ಯನನ್ನು ದ್ಯುಲೋಕದಲ್ಲಿ ನಿಲ್ಲಿಸಿದನು. ರಥಂತರವೆಂಬ ಸಂಜ್ಞೆಯುಳ್ಳ ಸಾಮದಲ್ಲಿ ಸೂರ್ಯನನ್ನು ದೃಷ್ಟಿಸಿ ನೋಡಿದನು. ಗಾಯತ್ರೀಚ್ಛಂದಸ್ಸಿನಿಂದ ಉತ್ಪನ್ನವಾದ ವಿಭಾಗಗಳನ್ನು ಮೂರು ಸಂಖ್ಯಾಕಗಳುಳ್ಳವೆಂದು ಹೇಳುತ್ತಾರೆ. ಅವುಗಳಿಂದ ಉತ್ಪನ್ನವಾದ, ಉಳಿದ ಸಾಮಗಳೂ ಸಹ ಶಕ್ತಿಯಿಂದಲೂ ಮಹತ್ತ್ವದಿಂದಲೂ ವೃದ್ಧಿಯನ್ನು ಹೊಂದುತ್ತವೆ.

**ಜಗತಾ**— ಜಗತೀಚ್ಛಂದಸ್ಕಾಯಾಂ ಋಚಿ ಉತ್ಪನ್ನಂ ಸಾಮ ಜಗತ್ । ಜಗತೀಚ್ಛಂದಸ್ಕವಾದ ಋಕ್ಕಿನಿಂದ ಉತ್ಪನ್ನವಾದ ಸಾಮಕ್ಕೆ **ಜಗತ್** ಎಂದು ಹೆಸರು. ಜಗತಾ ಎಂದರೆ ಆ ಜಗದ್ರೂಪವಾದ ಸಾಮದಿಂದ ಎಂದರ್ಥ. ಈ ಸಾಮಕ್ಕೆ ಋಕ್ಸಾಮವೆಂದು ಹೆಸರು. ಶತಪಥಬ್ರಾಹ್ಮಣದಲ್ಲಿ ಇದರ ಸೃಷ್ಟಿಕ್ರಮವನ್ನು ವಿವರಿಸುತ್ತಾ,

> **ತಸ್ಯ ಚಕ್ಷುರ್ವೈಶ್ವವ್ಯಚಸಮಿತಿ । ಚಕ್ಷುಸ್ತಸ್ಮಾದ್ರೂಪಾದಾದಿತ್ಯಾನ್ನಿರಮಿಮೀತ ವರ್ಷಾಶ್ಚಾಕ್ಷುಷ್ಯ ಇತಿ ವರ್ಷಾ ಋತುರ್ಹಂ ಚಕ್ಷುಷೋ ನಿರಮಿಮೀತ ಜಗತೀ ವಾರ್ಷೀತಿ ಜಗತೀಂ ಛಂದೋ ವರ್ಷಾಭ್ಯ ಋತೋರ್ನಿರಮಿಮೀತ ಜಗತ್ಯಾ ಋಕ್ಸಮಮಿತಿ ಜಗತ್ಯೈ ಛಂದಸ ಋಕ್ಸಮಗ್ಂಸಾಮ ನಿರಮಿಮೀತರ್ಕ್ಸಮಾಚ್ಛುಕ್ರ ಇತ್ಯೃಕ್ಸಮಾತ್ಸಾಮ್ನಃ ಶುಕ್ರಂ ಗ್ರಹಂ ನಿರಮಿಮೀತ ಶುಕ್ರಾತ್ಸಪ್ತದಶ ಇತಿ ಶುಕ್ರಾದ್ಗ್ರಹಾತ್ಸಪ್ತದಶಗ್ಂ ಸ್ತೋಮಂ ನಿರಮಿಮೀತ....॥** (ಶ. ಬ್ರಾ. ೮-೧-೨-೨)

ವಿಶ್ವವ್ಯಾಪಿಯಾದುದೂ, ಚಕ್ಷೂರೂಪಿಯಾದುದೂ ಆದ ಆದಿತ್ಯನಿಂದ ಪ್ರಜಾಪತಿಯು ವರ್ಷಕಾಲವನ್ನು, ನಿರ್ಮಿಸಿದನು. ಈ ವರ್ಷರ್ತುವಿನಿಂದ ಋಕ್ಸಮಸಾಮವನ್ನೂ, ಋಕ್ಸಮಸಾಮದಿಂದ ಶುಕ್ರಗ್ರಹವನ್ನೂ ನಿರ್ಮಿಸಿದನೆಂದು ತಿಳಿಸಿದೆ. ಇದನ್ನೇ ತೈತ್ತಿರೀಯ ಸಂಹಿತೆಯಲ್ಲಿಯೂ ಸಹ.

> **ಪ್ರಜಾಭ್ಯೋಽಯಂ ಪಶ್ಚಾದ್ವಿಶ್ವವ್ಯಚಾಸ್ತಸ್ಯ ಚಕ್ಷುರ್ವೈಶ್ವವ್ಯಚಸಂ ವರ್ಷಾಣಿ ಚಾಕ್ಷುಷಾಣಿ ಜಗತೀ ವಾರ್ಷೀ ಜಗತ್ಯಾ ಋಕ್ಷಮಂ....॥** (ತೈ. ಸಂ. ೪-೩-೨-೨)

ಎಂಬ ವಾಕ್ಯದಲ್ಲಿ ಮೇಲೆ ಹೇಳದಂತೆಯೇ ತಿಳಿಸಿದೆ. ಇಲ್ಲಿ ಸಾಯಣರು **ಋಕ್ಷಮಂ** ಎಂಬುದಕ್ಕೆ **ಸಾಮವಿಶೇಷಃ** ಎಂದರ್ಥಮಾಡಿದ್ದಾರೆ ಇಂತಹ ಸಾಮಕ್ಕೆ **ಜಗತ್** ಎಂಬ ಹೆಸರೆಂದು ಸಾಯಣರ ವಿವರಣೆಯಿಂದ ತಿಳಿಯುತ್ತದೆ. ಈ ಜಗದ್ರೂಪವಾದ ಸಾಮದಿಂದ ಬ್ರಹ್ಮನು ಸೃಷ್ಟಿಕಾಲದಲ್ಲಿ ಆದಿತ್ಯನನ್ನು ದ್ಯುಲೋಕದಲ್ಲಿ ನಿಲ್ಲಿಸಿದನು ಎಂದು ಋಕ್ಕಿನ ವರ್ಣನೆಯಿದೆ. ಇಂತಹ ಜಗದ್ರೂಪವಾದ ಸಾಮಕ್ಕೂ ಆದಿತ್ಯನಿಗೂ ತಾದಾತ್ಮ್ಯಸಂಬಂಧವನ್ನೆ ತೋರಿಸುತ್ತಾ, ಸಾಯಣರು,

**" ಜಾಗತೋ ವಾ ಏಷ ಯ ಏಷ ತಪತಿ " ಇತಿ ಶ್ರುತಿಃ**

ಅಂತರಿಕ್ಷದಲ್ಲಿ ಪ್ರಕಾಶಿಸುತ್ತಿರುವ ಆದಿತ್ಯನು **ಜಗತ್** ಎಂಬ ಸಾಮಸಂಬಂಧಿಯು ಎಂಬರ್ಥವನ್ನು ಕೊಡುವ ಶ್ರುತಿವಾಕ್ಯವನ್ನು ದಹರಿಸಿದ್ದಾರೆ. ಆದರೆ ಈ ವಾಕ್ಯಕ್ಕೆ ಆಧಾರವಾವುದೆಂಬುದನ್ನು ಮಾತ್ರ ಹೇಳಿಲ್ಲ.

**ಸಿಂಧುಂ ದಿವ್ಯಸ್ತಭಾಯತ್**—ಸಿಂಧುವನ್ನು ಅಂತರಿಕ್ಷದಲ್ಲಿ ಸ್ಥಾಪಿಸಿದನು ಎಂದು ಉಕ್ತವಾಗಿದೆ. ಇಲ್ಲಿ **ಸಿಂಧು** ವೆಂಬ ಪದಕ್ಕೆ **ಸ್ಯಂದನಶೀಲಮುದಕಸ್ಯ ಸ್ಯಂದಕಂ ವಾ ಆದಿತ್ಯಂ ।** ಸ್ರವಿಸತಕ್ಕ ಉದಕದ ಪ್ರವಾಹವನ್ನು ಎಂದಾಗಲಿ ಅಥವಾ ಆದಿತ್ಯನನ್ನು ಎಂದಾಗಲಿ ಅರ್ಥವಾಗುವುದೆಂದು ತೋರಿಸಿದ್ದಾರೆ. ಸೃಷ್ಟಿಕಾಲದಲ್ಲಿ ಬ್ರಹ್ಮನು ಸೃಷ್ಟಿಗಿಂತ ಪೂರ್ವದಲ್ಲಿ ಅವ್ಯವಸ್ಥಿತವಾಗಿದ್ದ ಅಪ್ಪನ್ನು ವ್ಯವಸ್ಥಿತವಾದ ರೀತಿಯಲ್ಲಿ ಸ್ಥಾಪಿಸಿದನು ಎಂದೂ ಅದರಂತೆಯೇ ಅಪ್ಪಿನಿಂದ ಪೂರಿತವಾದ ಅಂತರಿಕ್ಷದಲ್ಲಿ ಪ್ರಥಮತಃ ಆದಿತ್ಯನನ್ನು ಸ್ಥಾಪಿಸಿದನು ಎಂದೂ ಸೃಷ್ಟಿಕಾಲದ ವರ್ಣನೆಯು ನಾನಾ ಶ್ರುತಿಗಳಲ್ಲಿ ಉಕ್ತವಾಗಿದೆ. ಆದುದರಿಂದ ಎರಡು ವಿಧವಾದ ಅರ್ಥಗಳನ್ನೂ ಮಾಡಬಹುದು.

> **ಆಪೋ ವಾ ಇದಮಾಸನ್ತ್ಸಲಿಲಮೇವ । ಸ ಪ್ರಜಾಪತಿರೇಕಃ ಪುಷ್ಕರಪರ್ಣೇ ಸಮಭವತ್ । ತಸ್ಯಾಂತರ್ಮನಸಿ ಕಾಮಃ ಸಮವರ್ತತ । ಇದಗ್ಂ ಸೃಜೇಯಮಿತಿ । ...............**

..............................ಸ ಇತ ಆದಾಯೋಪಃ । ಅಂಜಲಿನಾ ಪುರಸ್ತಾದುಪಾದಧಾತ್ ।
ಏವಾಹ್ಯೇವೇತಿ ತತ ಆದಿತ್ಯಉದತಿಷ್ಠತ್ ॥ (ತೈ. ಆ. ೧-೨೩-೧)

ಎಂಬ ವಾಕ್ಯಗಳಲ್ಲಿ ಪ್ರಜಾಪತಿಯು ಅಪ್ಪನ್ನು ಸ್ತಿಮಿತದಲ್ಲಿರಿಸಿದನಂತರ ಅದರಿಂದ ಆದಿತ್ಯನು ಉತ್ಪನ್ನನಾಗಿ ಅಂತರಿಕ್ಷಸ್ಥನಾಗಿರುವಂತೆ ಮಾಡಿದನು ಎಂದು ವರ್ಣಿಸಿದೆ. ಇದೇ ಅಭಿಪ್ರಾಯವು.

ಆಪೋ ವಾ ಇದಮಗ್ರೇ ಸಲಿಲಮಾಸೀತ್ । ತೇನ ಪ್ರಜಾಪತಿರಶ್ರಾಮ್ಯತ್ ।
(ತೈ. ಬ್ರಾ. ೧-೧-೩-೫)

ಇತ್ಯಾದಿ ಬ್ರಾಹ್ಮಣವಾಕ್ಯದಲ್ಲೂ ವರ್ಣಿತವಾಗಿದೆ. ಪ್ರಜಾಪತಿಯ ಧಾರಣಶಕ್ತಿಯನ್ನು ಪ್ರಶಂಸಿಸುತ್ತಾ ಋಕ್ಸಂಹಿತೆಯಿಲ್ಲಿಯೂ ಸಹ:—

ದಿವೋ ಧರ್ತಾ ಭುವನಸ್ಯ ಪ್ರಜಾಪತಿಃ ಪಿಶಂಗಂ ದ್ರಾಪಿಂ ಪ್ರತಿ ಮುಂಚತೇ ಕವಿಃ ।
ವಿಚಕ್ಷಣಃ ಪ್ರಥಯನ್ನಾಪೃಣನ್ನುರ್ವಜೀಜನತ್ಸವಿತಾ ಸುಮ್ನಮುಕ್ಥ್ಯಂ ॥ (ಋ. ಸಂ. ೪-೫೩-೨)

ದ್ಯುಲೋಕದಲ್ಲಿ ಸೂರ್ಯಾದಿಗಳನ್ನು ಸ್ಥಾಪಿಸಿದುದೇ ಅಲ್ಲದೇ ಪ್ರಜಾಪತಿಯು ಸಕಲಲೋಕಗಳ ಧಾರಕನೂ ಆಗಿದ್ದಾನೆ ಎಂದು ಹೇಳಿದೆ. ಇಲ್ಲಿ ಸಾಯಣರು ಪ್ರಜಾಪತಿಃ ಎಂಬ ಪದಕ್ಕೆ ಪ್ರಜಾನಾಂ ಪ್ರಕಾಶವೃಷ್ಟ್ಯಾದಿನಾ ಪಾಲಯಿತಾ ಎಂದರ್ಥವನ್ನು ಮಾಡಿದ್ದಾರೆ. ವೃಷ್ಟ್ಯಾದ್ಯುದಕಗಳನ್ನು ತನ್ನ ನಿಯಮದಲ್ಲಿಟ್ಟು ಹಂಚುವನೆಂದೂ ಮತ್ತು ಆದಿತ್ಯಾದಿ ತೇಜೋಮಂಡಲಗಳನ್ನು ಅಂತರಿಕ್ಷದಲ್ಲಿ ಸ್ಥಾಪಿಸಿ ಲೋಕಕ್ಕೆ ಪ್ರಕಾಶವನ್ನು ಹಂಚುವನೆಂದೂ ಅರ್ಥವಾಗುತ್ತದೆ. ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿ ಸಿಂಧುಂ ದಿವ್ಯಸ್ತಭಾಯತ್ ಎಂಬುದಕ್ಕೆ ಸೃಷ್ಟಿಕಾಲದಲ್ಲಿ ಅಪ್ಪನ್ನು ವ್ಯವಸ್ಥಿತವಾದ ರೀತಿಯಲ್ಲಿ ಸ್ಥಾಪಿಸಿದನು ಎಂದಾಗಲಿ ಅಥವಾ ಆದಿತ್ಯನನ್ನು ದ್ಯುಲೋಕದಲ್ಲಿ ಸ್ಥಾಪಿಸಿದನು ಎಂದಾಗಲಿ ಅರ್ಥಮಾಡಬಹುದು.

ರಥಂತರೇ ಸೂರ್ಯಂ ಪರ್ಯಪಶ್ಯತ್---ರಥಂತರವೆಂಬ ಸಾಮದಲ್ಲಿ ಸ್ತಂಭೀತನಾದ ಆದಿತ್ಯನನ್ನು ಪ್ರಜಾಪತಿಯು ನೋಡಿದನು ಎಂದು ಅರ್ಥಮಾಡಿ,

ಅಭಿ ತ್ವಾ ಶೂರ ನೋನುಮೋಽದುಗ್ಧಾ ಇವ ಧೇನವಃ ।
ಈಶಾನಮಸ್ಯ ಜಗತಃ ಸ್ವರ್ದೃಶಮೀಶಾನಮಿಂದ್ರ ತಸ್ಥುಷಃ ॥ (ಋ. ಸಂ. ೭-೩೨-೨೨)

ಎಂಬ ಋಕ್ಕನ್ನುದಹರಿಸಿ ಅಲ್ಲಿರುವ "ಸ್ವರ್ದೃಶಂ" ಎಂಬ ಪದಕ್ಕೆ ಸೂರ್ಯಪ್ರತಿಪಾದಕಶಬ್ದದರ್ಶನಾತ್ ಸೂರ್ಯಪ್ರತಿಪಾದಕವಾದ ಶಬ್ದದರ್ಶನದಿಂದ ಎಂದು ಅರ್ಥಮಾಡಿ ಇಲ್ಲಿ ತಾವು ಹೇಳಿರುವ ಅರ್ಥವನ್ನು ಸಮರ್ಥಿಸಿದ್ದಾರೆ. ಆದರೆ ಸ್ವದೃಶಂ ಎಂಬ ಪದವು ಇಂದ್ರನಿಗೆ ವಿಶೇಷಣವಾಗಿದೆ. ಇದಕ್ಕೆ 'ಸರ್ವದೃಶಂ' ಎಲ್ಲವನ್ನೂ ನೋಡತಕ್ಕ ಇಂದ್ರನನ್ನು (ಸರ್ವಜ್ಞನಾದ ಇಂದ್ರನನ್ನು ಎಂದಾದರೂ ಹೇಳಬಹುದು) ಎಂದರ್ಥವನ್ನು ಹೇಳಿದ್ದಾರೆ. ಪ್ರಕೃತವಾದ ಋಕ್ಕಿನ ಅರ್ಥಕ್ಕೂ ಈ ಉದಾಹರಣೆಗೂ ಯಾವ ರೀತಿಯ ಸಾದೃಶ್ಯವನ್ನು ಹೇಳಬಹುದೆಂಬುದು ಕೇವ ಸ್ಥೂಲವಾದ ದೃಷ್ಟಿಯಿಂದ ನೋಡಿದರೆ ಅರ್ಥವಾಗುವುದಿಲ್ಲ. ಆದರೆ ಇದೇ ವಿವರಣೆಯನ್ನು ಮುಂದುವರಿಸುತ್ತಾ,

ಈಶಾನಮಸ್ಯ ಜಗತಃ ಸ್ವರ್ದೃಶಮಿತ್ಯಸೌ ವಾವ ಸ್ವರ್ದೃಕ್ ತೇನ ಸೂರ್ಯಂ ನಾತಿಶಂಸತಿ ।
(ಐ. ಬ್ರಾ. ೪-೧೦)

ಎಂಬ ವಾಕ್ಯವನ್ನುದಹರಿಸಿ ಅಲ್ಲಿ ಸೂರ್ಯಪರವಾದ ಅರ್ಥವಾಗುವಂತೆಯೂ ರಥಂತರಸಾಮಕ್ಕೂ ಸೂರ್ಯನಿಗೂ ಸಂಬಂಧವಿರುವುದನ್ನು ತೋರಿಸುವಂತೆಯೂ ಸಹ ಪ್ರಕೃತವಾದ ಋಕ್ಕಿನಲ್ಲಿಯೂ ರಥಂತರಸಾಮಕ್ಕೂ ಆದಿತ್ಯನಿಗೂ ಸಂಬಂಧವನ್ನು ತೋರಿಸಿ ಪ್ರಜಾಪತಿಯಿಂದ ಕೃತವಾದ ಆದಿತ್ಯದರ್ಶನವನ್ನು ವಿವರಿಸಿದೆಯೆಂದು ತಿಳಿಸಿದ್ದಾರೆ. ಐತರೇಯಬ್ರಾಹ್ಮಣದಲ್ಲಿ ಅದೇ ವಾಕ್ಯದಲ್ಲಿ,

**ಅಭಿ ತ್ವಾ ಶೂರ ನೋನುಮ ಇತಿ ರಾಥಂತರೀಂ ಯೋನಿಂ ಶಂಸತಿ ರಾಥಂತರೇಣ ವೈ ಸಂಧಿನಾಶ್ವಿನಾಯ ಸ್ತುವತೇ ತದ್ಯದ್ರಾಥಂತರೀಂ ಯೋನಿಂ ಶಂಸತಿ ರಥಂತರಸ್ಯೈವ ಸಯೋನಿ-ತ್ವಾಯ ।** (ಐ. ಬ್ರಾ. ೪-೧೦)

ಎಂದು ಮೇಲೆ ಋಕ್ಸಂಹಿತೆಯಲ್ಲಿ ಉದಾಹೃತವಾದ "ಅಭಿ ತ್ವಾ ಶೂರ" (೭-೩೨-೨೨) ಎಂಬ ಋಕ್ಕಿನ ಗೂಢಾರ್ಥವನ್ನು ವಿವರಿಸಿದೆ ಈ ಮಂತ್ರವು ರಥಂತರಸಾಮದ ಯೋನಿಯಾಗಿದೆ. ಈ ಯೋನಿಯು ಆದಿತ್ಯ ದರ್ಶನದ ಸಾಧನವಾಗಿದೆ. ಅದೇ ಅರ್ಥವನ್ನು "ರಥಂತರೇ ಸೂರ್ಯಂ ಪರ್ಯಪಶ್ಯತ್" ಎಂಬ ಮಂತ್ರಭಾವೂ ತಿಳಿಸುತ್ತದೆ ಎಂದು ವಿವರಿಸಿದೆ.

**ರಥಂತರೇ ಪ್ರಸ್ತೂಯಮಾನೇ ಸಂಮೀಲಯೇತ್ ಸ್ವದೃಶಂ ಪ್ರತಿ ವೀಕ್ಷೇತ ।** (ತಾ. ಬ್ರಾ. ೭-೭-೧೮)

ಇತ್ಯಾದಿವಾಕ್ಯಗಳಲ್ಲೂ ಸಹ ಈ ಅಂಶವು ಪ್ರತಿಪಾದಿತವಾಗಿದೆ.

**ಗಾಯತ್ರಸ್ಯ ಸಮಿಧಃ ತಿಸ್ರಃ—ಗಾಯತ್ರಾತ್ಯಮುತ್ಪನ್ನಸ್ಯ ಸಾಮ್ನಃ ತಿಸ್ರಃ ವಿಭಕ್ತೀಃ । ಪಾದ-ತ್ರಯಮಾಹುಃ ।** ಗಾಯತ್ರಿಯಿಂದ ಉತ್ಪನ್ನವಾದ ಸಾಮಕ್ಕೆ ಪಾದತ್ರಯವೆಂದು ತಿಳಿದ ವಿಷಯವಾಗಿದೆ. ಆದರೂ ಅಲ್ಲಿ ಇನ್ನೊಂದು ರಹಸ್ಯವಾದ ಅರ್ಥವೂ ಇದೆಯೆಂದು ತಿಳಿಯುತ್ತದೆ.

**ಗಾಯತ್ರೀಮನುವಾಕ್ಯಾಮನ್ವಾಹ । ತ್ರಿಪದಾ ವೈ ಗಾಯತ್ರೀ ತ್ರಯ ಇಮೇ ಲೋಕಾ ಇಮಾನೇವೈಗಭ್ಯೋ ಲೋಕಾನ್ದೇವಾಃ ಪ್ರತ್ಯಷ್ಠಾಪಯನ್ ।** (ಶ. ಬ್ರಾ. ೧೧-೨-೨-೧)

ಗಾಯತ್ರಿಯ ಪಾದಗಳು ತ್ರಿಸಂಖ್ಯಾಕಗಳಾಗಿವೆ. ಪ್ರಸಿದ್ಧವಾದ ಲೋಕಗಳೂ ತ್ರಿಸಂಖ್ಯಾಕಗಳಾಗಿವೆ. ಇದರಿಂದ ದೇವತೆಗಳು ಈ ಮೂರು ಲೋಕಗಳನ್ನೂ ಪ್ರತಿಷ್ಠಾಪಿಸಿದರು.

**ಗಾಯತ್ರ್ಯೈ ಗಾಯತ್ರಮಿತಿ ಗಾಯತ್ರ್ಯೈ ಛಂದಸೋ ಗಾಯತ್ರಗ್ಂ ಸಾಮ ನಿರಮಿಮೀತ** (ಶ. ಬ್ರಾ. ೮-೧-೩)

ತ್ರಿಪಾದಾತ್ಮಕವಾದ ಈ ಗಾಯತ್ರಿಯಿಂದ ಗಾಯತ್ರಸಾಮವನ್ನು ರಚಿಸಿದನು ಇತ್ಯಾದಿಯಾಗಿ ಇದರ ವರ್ಣನೆಯಿರುವುದರಿಂದ ಇಲ್ಲಿ **ಗಾಯತ್ರಾತ್ಯಮುತ್ಪನ್ನಸ್ಯ ಸಾಮ್ನಃ ತಿಸ್ರಃ ವಿಭಕ್ತೀಃ** ಎಂಬ ಒಂದು ಅರ್ಥವನ್ನು ಹೇಳಬಹುದು ಅಥವಾ **ತಿಸ್ರಃ ಋಚ ಆಹುಃ** ಮೂರು ಋಕ್ಕುಗಳೆಂದು ಇನ್ನೊಂದರ್ಥವನ್ನೂ ಹೇಳಬಹುದೆಂದು ತಿಳಿಸಿದೆ.

**ತತಃ ಮಹ್ನಾ ಮಹಿತ್ವಾ ಪ್ರರಿರಿಚೇ—ಬಲೇನ ಮಹತ್ತ್ವೇನ ಅನ್ಯಾನಿ ಸಾಮಾನಿ ಪೃಥಕ್ ನಿರ್ಮಿತವಾನ್ ।** ಇದರ ಶಕ್ತಿಯಿಂದಲೂ, ಮಹತ್ತ್ವದಿಂದಲೂ ಇತರ ಸಾಮಗಳನ್ನೂ ಬೇರೆ ಬೇರೆ ನಿರ್ಮಿಸಿದನು ಎಂದು ಒಂದು ವಿಧವಾದ ಅರ್ಥವು. ಅದು ಹೇಗೆಂದರೆ,

ಗಾಯತ್ರೀ ವಾ ಇದಂ ಸರ್ವಂ ಭೂತಂ ಯದಿದಂ ಕಿಂಚ ವಾಗ್ವೈ ಗಾಯತ್ರೀ
(ಛಾ. ಉ. ೩-೧೨-೧)

ಸಕಲ ಭೂತಗಳಿಗೂ ಗಾಯತ್ರಿಯೇ ಆಧಾರವು ಮತ್ತು ವಾಕ್ಕಿಗೂ ಗಾಯತ್ರಿಯೇ ಆಧಾರವು. ಆದುದರಿಂದಲೇ,

ಗಾಯತ್ರೀ ಛಂದಸಾಂ ಮಾತಾ । (ಮ. ನಾ. ಉ. ೧೫-೧)

ಸಕಲಛಂದಸ್ಸುಗಳಿಗೂ ಗಾಯತ್ರಿಯೇ ಮಾತೆಯೆಂದೂ ಸ್ತುತಿಸಿದೆ. ಇದರಂತೆಯೇ,

ಅಥಾತಃ ಶಿರಃ । ತದ್ಗಾಯತ್ರೀಷು ಭವತ್ಯಗ್ರಂ ವೈ ಛಂದಸಾಂ ಗಾಯತ್ರ್ಯಗ್ರಮಂಗಾನಾಂ ಶಿರಃ ।
(ಐ. ಆ. ೧-೪-೧)

ಶರೀರದ ಅಂಗಗಳಿಗೆಲ್ಲಾ ಶಿರಸ್ಸೇ ಪ್ರಧಾನವಾಗಿರುವಂತೆ ಸಕಲಛಂದಸ್ಸುಗಳಿಗೂ ಗಾಯತ್ರಿಯೇ ಪ್ರಧಾನವಾಗಿ ಅನಂತರ ಅದರ ಆಧಾರದಮೇಲೆ ಉಳಿದ ಛಂದಸ್ಸುಗಳ ನಿರ್ಮಾಣವಾಯಿತೆಂದು ತಿಳಿಸಿದೆ. ಗಾಯತ್ರೀಛಂದಸ್ಸಿನಿಂದ ಗಾಯತ್ರಸಾಮವು ನಿರ್ಮಿತವಾದಂತೆ ಉಳಿದ ಛಂದಸ್ಸುಗಳಿಂದಲೂ ಬೇರೆಬೇರೆ ಸಾಮಗಳು ನಿರ್ಮಿತವಾದವು ಎಂಬುದನ್ನು ತೈತ್ತಿರೀಯ ಸಂಹಿತೆಯಲ್ಲಿ ಈರೀತಿ ತಿಳಿಸಿದೆ.

ಅಯಂ ಪುರೋ ಭುವಸ್ತಸ್ಯ ಪ್ರಾಣೋ ಭೌವಾಯನೋ ವಸಂತಃ ಪ್ರಾಣಾಯನೋ ಗಾಯತ್ರೀ ವಾಸಂತೀ ಗಾಯತ್ರಿಯೈ ಗಾಯತ್ರಂ........ ।

ಅಯಂ ದಕ್ಷಿಣಾ ವಿಶ್ವಕರ್ಮಾ ತಸ್ಯ ಮನೋ ವೈಶ್ವಕರ್ಮಣಂ ಗ್ರೀಷ್ಮೋ ಮಾನಸಸ್ತ್ರಿಷ್ಟುಗ್ಗ್ರೈಷ್ಮೀ ತ್ರಿಷ್ಟುಭ ಐಡಂ .... .... ।

ಅಯಂ ಪಶ್ಚಾದ್ವಿಶ್ವವ್ಯಚಾಸ್ತಸ್ಯ ಚಕ್ಷುರ್ವೈಶ್ವವ್ಯಚಸಂ ವರ್ಷಾಣಿ ಚಾಕ್ಷುಷಾಣಿ ಜಗತೀ ವಾರ್ಷೀ ಜಗತ್ಯಾ ಋಕ್ಷಮಂ .... .... ।

ಇದಮುತ್ತರಾತ್ಸುವಸ್ತಸ್ಯ ಶ್ರೋತ್ರಗ್ಂ ಸೌವಗ್ಂ ಶರಚ್ಛ್ರೌತ್ರ್ಯನುಷ್ಟುಪ್‌ಛಾರದ್ಯನುಷ್ಟುಭಃ ಸ್ವಾರಂ ........ । (ತೈ. ಸಂ. ೪-೩ ೨-೧, ೨)

ಪ್ರಾಣದಿಂದ ವಸಂತವೂ, ವಸಂತದಿಂದ ಗಾಯತ್ರಿಯೂ ಗಾಯತ್ರಸಾಮವೂ ಉತ್ಪನ್ನವಾದವು. ಇದರಂತೆಯೇ ವಿಶ್ವಕರ್ಮನಿಂದ ಮನಸ್ಸೂ, ಮನಸ್ಸಿನಿಂದ ಗ್ರೀಷ್ಮವೂ ಗ್ರೀಷ್ಮದಿಂದ ತ್ರಿಷ್ಟುಪ್ಪೂ, ತ್ರಿಷ್ಟುಪ್ಪಿನಿಂದ ಐಡಸಾಮವೂ ಉತ್ಪನ್ನವಾದವು. ಸರ್ವವ್ಯಾಪಿಯಾದ ಪ್ರಜಾಪತಿಯಿಂದ ಚಕ್ಷುಸ್ಸೂ, ಚಕ್ಷುಸ್ಸಿನಿಂದ ಜಗತಿಯೂ, ಜಗತಿಯಿಂದ ಋಕ್ಷಮವೂ (ಋಕ್ಸಮಸಾಮ) ಉತ್ಪನ್ನವಾದವು. ತೇಜಸ್ಸಿನಿಂದ ಶ್ರೋತ್ರವೂ, ಶ್ರೋತ್ರದಿಂದ ಶರತ್ತೂ ಶರತ್ಕಾಲದಿಂದ ಅನುಷ್ಟುಪ್ಪೂ, ಅನುಷ್ಟುಪ್ಪಿನಿಂದ ಸ್ವಾರಸಾಮವೂ ಉತ್ಪನ್ನವಾದವು ಎಂದು ಆಯಾ ಸಾಮಗಳ ನಿಷ್ಪತ್ತಿಯನ್ನು ವಿವರಿಸಿದೆ. ಇದನ್ನೇ ಸಾಯಣರು ಪ್ರಕೃತವಾದ ಋಕ್ಕಿನಲ್ಲಿ ಪ್ರ ರಿರಿಚೇ ಎಂಬ ಪದಕ್ಕೆ ಅರ್ಥವನ್ನು ಹೇಳುವಾಗ " ಅನ್ಯಾನಿ ಸಾಮಾನಿ ಪೃಥಕ್ ನಿರ್ಮಿತವಾನ್ " ಉಳಿದ ಸಾಮಾನುಗಳನ್ನೂ ಬೇರೆ ಬೇರೆ ನಿರ್ಮಿಸಿದನು ಎಂದು ಹೇಳಿದ್ದಾರೆ. ಇದರಲ್ಲಿಯೂ ಗಾಯತ್ರಿಯೇ ಅಧಿಕವಾದ ಮಹತ್ತ್ವವಾಗಿದೆಯಾದ್ದರಿಂದ ಅದಕ್ಕೆ ಪ್ರಥಮ ಸ್ಥಾನವಿದೆ. ಇದಲ್ಲದೆ, ಮಹ್ನಾ ಮಹಿತ್ವಾ ಪ್ರ ರಿರಿಚೇ ಎಂಬುದಕ್ಕೆ ಇನ್ನೊಂದರ್ಥವೂ ಸಾಧ್ಯವೆಂದು ಸಾಯಣರು ವಿವರಿಸಿದ್ದಾರೆ. ಅದು ಹೇಗೆಂದರೆ,

**ಯದ್ವಾ । ಗಾಯತ್ರಶಬ್ದಶ್ಛಂದೋವಾಚೀ । ತಸ್ಯ ತಿಸ್ರೋ ಮೂರ್ತೀಃ ಆಹುಃ ಕ್ರಮೇಣ ಅಷ್ಟಾದಕ್ಷರೈಕಾದಶಾಕ್ಷರದ್ವಾದಶಾಕ್ಷರೈಃ ಗಾಯತ್ರೀ ತ್ರಿಷ್ಟುಬ್‌ಜಗತ್ಯಾತ್ಮಿಕಾಃ। ಯಸ್ಮಾದೇವಂ ತತಸ್ತಸ್ಮಾದ್ಗಾಯತ್ರೀ ಛಂದಸಾಂ ಕನಿಷ್ಠಾ ಸತೀ ಮಹ್ನಾ ಬಲೇನ ನಾಹತ್ತ್ವೇನ ಪ್ರ ರಿರಿಚೇ ಸರ್ವಾಣಿ ಚ್ಛಂದಾಂಸ್ಯತಿಕ್ರಾಮತಿ ಯೇನೈವ ಬಲೇನ ಸೋಮಮಾಹೃತವತೀ ತಾದೃಶೇನೈವ ಭವತಿ ॥**

ಗಾಯತ್ರೀ, ತ್ರಿಷ್ಟುಪ್, ಜಗತೀ ಈ ಮೂರು ರೂಪಗಳೂ ಇಲ್ಲಿ ಗಾಯತ್ರಶಬ್ದದಿಂದ ಸೂಚಿತವಾಗುತ್ತವೆ. ಇವುಗಳಲ್ಲಿ ಗಾಯತ್ರಿಯು ಅಷ್ಟಾಕ್ಷರಗಳುಳ್ಳದ್ದು, ತ್ರಿಷ್ಟುಪ್ಪು ಏಕಾದಶಾಕ್ಷರಗಳುಳ್ಳದ್ದು (೧೧) ಮತ್ತು ಜಗತಿಯು ದ್ವಾದಶಾಕ್ಷರಗಳುಳ್ಳದ್ದು (೧೨). ಆದುದರಿಂದ ಎಲ್ಲಾ ಛಂದಸ್ಸುಗಳಿಗಿಂತಲೂ ಗಾಯತ್ರಿಯು ಅತ್ಯಂತ ಚಿಕ್ಕದು. ಆದರೂ ಸಹ ಇದಕ್ಕಿಂತಲೂ ದೊಡ್ಡದಾದ ತ್ರಿಷ್ಟುಪ್ ಮತ್ತು ಜಗತೀ ಛಂದಸ್ಸುಗಳಿಂದ ಆಗದ ಮಹತ್ಕಾರ್ಯವನ್ನು ಗಾಯತ್ರಿಯು ತನ್ನ ಶಕ್ತಿಯಿಂದಲೂ ಮಹತ್ತ್ವದಿಂದಲೂ ಸಾಧಿಸಿದೆ. ಆದುದರಿಂದಲೇ ಇತರ ಛಂದಸ್ಸುಗಳಿಂದ ಆಗದಿರುವ **ಸೋಮವನ್ನು** ತಂದಿತು ಎಂದು ಒಂದು ಕಥಾಸಂದರ್ಭವನ್ನು ಸೂಚಿಸುವ ವರ್ಣನೆಯಿದೆಯೆಂದು ಸಾಯಣರು ವಿವರಿಸಿದ್ದಾರೆ. ಈ ಕಥೆಯು ಐತರೇಯ ಬ್ರಾಹ್ಮಣದಲ್ಲಿ ಈರೀತಿ ವರ್ಣಿತವಾಗಿದೆ.

**ಸೋಮೋ ವೈ ರಾಜಾಽಮುಷ್ಮಿಂಲ್ಲೋಕ ಆಸೀತ್ತಂ ದೇವಾಶ್ಚ ಋಷಯಶ್ಚಾಭ್ಯಧ್ಯಾಯನ್ಕಥಮಯಮಸ್ಮಾನ್ತ್ಸೋಮೋ ರಾಜಾಗಚ್ಛೇದಿತಿ ತೇಽಬ್ರುವಂಶ್ಛಂದಾಂಸಿ ಯೂಯಂ ನ ಇಮಂ ಸೋಮಂ ರಾಜಾನಮಾಹರತೇತಿ ತಥೇತಿ ತೇ ಸುಪರ್ಣಾ ಭೂತ್ವೋದಪತಂಸ್ತೇ ಯತ್ಸುಪರ್ಣಾ ಭೂತ್ವೋದಪತಂಸ್ತದೇತತ್ಸೌಪರ್ಣಮಿತ್ಯಾಖ್ಯಾನವಿದ ಆಚಕ್ಷತೇ ॥**

(ಐ. ಬ್ರಾ. ೩-೨೫)

ದ್ಯುಲೋಕದಲ್ಲಿದ್ದ ಸೋಮವನ್ನು ರಾಜನನ್ನಾಗಿ ಪಡೆಯಬೇಕೆಂದು ದೇವತೆಗಳೂ ಋಷಿಗಳೂ ಆಶಿಸಿ ಆ ಸೋಮರಾಜನನ್ನು ತಮ್ಮಲ್ಲಿಗೆ ಕರೆದುಕೊಂಡು ಬರಬೇಕೆಂದು ಛಂದಸ್ಸುಗಳನ್ನು ಪ್ರಾರ್ಥಿಸಿದರು. ಆಗ ಅವು ಒಪ್ಪಿಕೊಂಡು ಈ ಕಾರ್ಯಸಾಧನೆಗೆ **ಸುಪರ್ಣ** (ಪಕ್ಷಿ) ರೂಪದಲ್ಲಿ ಪರಿವರ್ತನೆಯನ್ನು ಹೊಂದಿದುದರಿಂದ ಈ ಸಂದರ್ಭವು ಸೌಪರ್ಣಾಖ್ಯಾನವೆಂದು ಪ್ರಸಿದ್ಧವಾಗಿದೆ.

**ಛಂದಾಂಸಿ ವೈ ತತ್ಸೋಮಂ ರಾಜಾನಮಚ್ಛಾಚರಂಸ್ತಾನಿ ಹ ತರ್ಹಿ ಚತುರಕ್ಷರಾಣಿ ಚತುರಕ್ಷರಾಣ್ಯೇವ ಚ್ಛಂದಾಂಸ್ಯಾಸನ್ತ್ಸಾ ಜಗತೀ ಚತುರಕ್ಷರಾ ಪ್ರಥಮೋದಪತತ್ಸಾ ಪತಿತ್ವಾರ್ಧಮಧ್ವನೋ ಗತ್ವಾಶ್ರಾಮ್ಯತ್ ॥**

(ಐ. ಬ್ರಾ. ೩-೨೫)

**ಅಥ ತ್ರಿಷ್ಟುಬುದಪತತ್ಸಾ ಪತಿತ್ವಾ ಭೂಯೋಽರ್ಧಾದಧ್ವನೋ ಗತ್ವಾಶ್ರಾಮ್ಯತ್ ।**

(ಐ. ಬ್ರಾ. ೩-೨೫)

ಅನಂತರ ಪಕ್ಷಿರೂಪದ ಛಂದಸ್ಸುಗಳು ಸೋಮಾಹರಣಕ್ಕಾಗಿ ಹರಿದಾಗ ಜಗತಿಯು ಅರ್ಧದಾರಿಯಲ್ಲಿಯೇ ಸೋತು ಹೋಯಿತು. **ತ್ರಿಷ್ಟುಪ್ಪು** ಅನಂತರ ಪ್ರಯತ್ನಿಸಿ ಅರ್ಧದಾರಿಗಿಂತಲೂ ಮೀರಿಹೋದರೂ ಸಹ ಪೂರ್ಣವಾದ ದಾರಿಯನ್ನು ದಾಟಲಾಗದೇ ಹಿಂತಿರುಗಬೇಕಾಯಿತು.

**ತೇ ದೇವಾ ಅಬ್ರವನ್ಗಾಯತ್ರೀಂ ತ್ವಂ ನ ಇಮಂ ಸೋಮಂ ರಾಜಾನಮಾಹರೇತಿ ಸಾ ತಥೇತ್ಯಬ್ರವೀತ್ತಾಂ ವೈ ಮಾ ಸರ್ವೇಣ ಸ್ವಸ್ತ್ಯಯನೇನಾನುಮಂತ್ರಯಧ್ವಮಿತಿ .... .... .... ಸಾ ಪತಿತ್ವಾ ಸೋಮಪಾಲಾನ್ ಭೀಷಯಿತ್ವಾ ಪದ್ಭ್ಯಾಂ ಚ ಮುಖೇನ ಚ ಸೋಮಂ ರಾಜಾನಂ ಸಮಗೃಭ್ಣಾದ್ಯಾನಿ ಚೇತರೇ ಛಂದಸೀ ಅಕ್ಷರಾಣ್ಯಜಹಿತಾಂ ತಾನಿ ಚೋಪಸಮಗೃಭ್ಣಾತ್ ॥**
(ಐ. ಬ್ರಾ. ೩-೨೬)

ಆಗ ದೇವತೆಗಳೆಲ್ಲರೂ ಗಾಯತ್ರಿಯನ್ನು ಸಮೀಪಿಸಿ ಆ ಕೆಲಸವನ್ನು ನೆರವೇರಿಸಿಕೊಡಬೇಕೆಂದು ಪ್ರಾರ್ಥಿಸಿಕೊಂಡಾಗ ಅದು ಒಪ್ಪಿಕೊಂಡು ಅವರ ಆಶೀರ್ವಾದದ ಬೆಂಬಲದ ಮೇಲೆ ಮೇಲಕ್ಕೆ ಹಾರಿ ಸೋಮವನ್ನು ಸಮೀಪಿಸಿ ಅದರ ಪಾಲಕರನ್ನು ಬೆದರಿಸಿ ತನ್ನ ಕಾಲುಗಳಿಂದಲೂ ಮುಖದಿಂದಲೂ ಸಹ ಸೋಮವನ್ನು ತಂದಿತು. ಮತ್ತು ಇತರ ಛಂದಸ್ಸುಗಳಿಂದ ಆಗದ ಕಾರ್ಯವನ್ನು ಗಾಯತ್ರಿಯು ಸಾಧಿಸಿತು. ಆದುದರಿಂದ ಇದರ ಮಹಿಮೆಯು ಇದೇ ಆಗಿದೆ. ಇದೇ ಕಥೆಯನ್ನು ಶತಪಥ ಬ್ರಾಹ್ಮಣದಲ್ಲಿಯೂ,

**ತದ್ವೈ ಕನಿಷ್ಠಂ ಛಂದಃ ಸದ್ಗಾಯತ್ರೀ ಪ್ರಥಮಾ ಛಂದಸಾಂ ಯುಜ್ಯತೇ ತದು ತದ್ವೀರ್ಯೇಣೈವ ಯಚ್ಛ್ಯೇನೋ ಭೂತ್ವಾ ದಿವಃ ಸೋಮಮಾಭರತ್ ।** (ಶ. ಬ್ರಾ. ೧-೬-೨-೧೦)

ಛಂದಸ್ಸುಗಳಲ್ಲೆಲ್ಲಾ ಆಕಾರದಲ್ಲಿ ಅತ್ಯಂತ ಚಿಕ್ಕದಾದರೂ ಸಹ **ಗಾಯತ್ರಿಯು** ಎಲ್ಲಾ ಛಂದಸ್ಸುಗಳಿಗಿಂತಲೂ ಪ್ರಥಮಸ್ಥಾನವನ್ನು ಪಡೆಯುತ್ತದೆ. ಅದು ತನ್ನ ಸ್ವಶಕ್ತಿಯಿಂದ ಶ್ಯೇನರೂಪವಾಗಿ ಪರಿವರ್ತನವನ್ನು ಹೊಂದಿ ದೇವಲೋಕದಿಂದ ಸೋಮವನ್ನು ತಂದಿತು ಎಂದು ಪ್ರಶಂಸಿದೆ.

ಇದೇ ಆಖ್ಯಾನವು ಕೊಂಚ ಬದಲಾವಣೆಯನ್ನು ಹೊಂದಿ ತೈತ್ತಿರೀಯಸಂಹಿತೆಯಲ್ಲಿಯೂ ಸಹ ಕದ್ರು ಮತ್ತು ಸುಪರ್ಣಿಯ ವ್ಯಾಜ್ಯಸಂದರ್ಭದಲ್ಲಿ ತಿಳಿಸಿದೆ.

**ಸಾಷ್ಟಾಕ್ಷರಾ ಸಮಪದ್ಯತ ಬ್ರಹ್ಮವಾದಿನೋ ವದಂತಿ ಕಸ್ಮಾತ್ಸತ್ಯಾದ್ಗಾಯತ್ರೀ ಕನಿಷ್ಠಾ ಛಂದಸಾಗ್ಂ ಸತೀ ಯಜ್ಞಮುಖಂ ಪರೀಯಾಯೇತಿ ಯದೇವಾದಃ ಸೋಮಮಾಹರತ್ತಸ್ಮಾದ್ಯಜ್ಞಮುಖಂ ಪರ್ಯೈತ್ತಸ್ಮಾತ್ತೇಜಸ್ವಿನೀತಮಾ ।** (ತೈ. ಸಂ. ೬-೧-೬-೩,೪)

ಹಿಂದೆ ಕದ್ರುವಿಗೂ ಸುಪರ್ಣಿಗೂ ವ್ಯಾಜ್ಯವಾದಾಗ ಕದ್ರುವು ಜಯಿಸಿದ್ದರಿಂದ ಸುಪರ್ಣಿಯು ಅವಳ ಅಧೀನಳಾಗಬೇಕಾಯಿತು. ಆಗ ಕದ್ರುವು ಸುಪರ್ಣಿಯನ್ನು ಕುರಿತು ಅಂತರಿಕ್ಷದಲ್ಲಿರುವ ಸೋಮವನ್ನು ತಸ್ಕರರೂಪದಿಂದ ತಂದು ಪ್ರತಿಫಲವಾಗಿ ಕೊಟ್ಟ ಆಗ ಅವಳ ಬಿಡುಗಡೆಯಾಗಬಹುದೆಂದಳು. ಆಗ ಸುಪರ್ಣಿಯು ತನ್ನ ಮಕ್ಕಳಾದ ಛಂದಸ್ಸುಗಳ ಸಹಾಯವನ್ನು ಬೇಡಲಾಗಿ **ಜಗತೀ, ತ್ರಿಷ್ಟುಪ್** ಈ ಎರಡು ಛಂದಸ್ಸುಗಳ ಪ್ರಯತ್ನವೂ ವಿಫಲವಾಗಿ **ಗಾಯತ್ರಿಯು** ತನ್ನ ಮಹತ್ತ್ವದಿಂದ ಆ ಕಾರ್ಯವನ್ನು ಸಾಧಿಸಿತೆಂದು ತಿಳಿಸಿದೆ. ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿರುವ **ಮಹ್ನಾ, ಮಹಿತ್ವಾ** ಎಂಬ ಪದಗಳು ಗಾಯತ್ರಿಯ ಆ ಮಹತ್ವವನ್ನು ತೋರಿಸುತ್ತವೆ ಎಂದು ಸಾಯಣರು “ **ಯೇನೈವ ಬಲೇನ ಸೋಮಮಾಹೃತವತೀ ತಾದೃಶೇನೈವಂ ಭವತಿ** ” ಎಂದು ವಿವರಿಸಿದ್ದಾರೆ.



**ಉಪ ಹ್ವಯೇ ಸುದುಘಾಂ ಧೇನುಮೇತಾಂ ಸುಹಸ್ತೋ ಗೋಧುಗುತ ದೋಹದೇನಾಂ । ಶ್ರೇಷ್ಠಂ ಸವಂ ಸವಿತಾ ಸಾವಿಷನ್ನೋಽಭೀದ್ಧೋ ಘರ್ಮಸ್ತದು ಷು ಪ್ರ ವೋಚಂ ॥ ೨೬ ॥**

ಶ್ರೇಷ್ಠವಾದ ಕ್ಷೀರವನ್ನು ಕೊಡತಕ್ಕ ಈ ಧೇನುವನ್ನು ನಾನು ಪ್ರಾರ್ಥಿಸಿ ಆಹ್ವಾನಿಸುತ್ತೇನೆ. ಅನಂತರ ಶ್ರೇಷ್ಠವಾದ ಹಸ್ತವುಳ್ಳವನೂ, ಗೋವನ್ನು ಕರೆಯತಕ್ಕವನೂ ಆದ ಅಧ್ವರ್ಯುವು ಈ ಧೇನುವಿನ ಕ್ಷೀರವನ್ನು ಕರೆಯುತ್ತಾನೆ. ಪ್ರಶಸ್ತವೂ ನಮ್ಮಿಂದಕರೆಯಲ್ಪಟ್ಟದೂ ಆದ ಈ ಕ್ಷೀರವನ್ನು ಪರಮೇಶ್ವರನು ಅನುಗ್ರಹಿಸಲಿ. ಈ ಸವಿತೃವಿನ ಪ್ರವರ್ಗ್ಯವು ದೀಪ್ತವಾಗಿದೆ ಆದುದರಿಂದಲೇ ನಾನು ಈ ಧೇನುವನ್ನು ವಿಶೇಷರೀತಿಯಿಂದ ಆಹ್ವಾನಿಸುತ್ತೇನೆ.

ಪ್ರವರ್ಗ್ಯದಲ್ಲಿ ಘರ್ಮಧುಗಾಹ್ವಾನಕಾಲದಲ್ಲಿ **ಉಪ ಹ್ವಯೇ** ಎಂದು ಮೊದಲಾಗುವ ಎರಡು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತ ಸೂತ್ರದ **ಉಪ ಹ್ವಯೇ ಸುದುಘಾಂ ಧೇನುಮೇತಾಮಿತಿ ದ್ವೇ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೭)

ಈ ಋಕ್ಕಿನಲ್ಲಿ ಧೇನುಶಬ್ದಕ್ಕೆ ಎರಡು ವಿಧವಾದ ಅರ್ಥವನ್ನು ಮಾಡಬಹುದು. ಆಗ ಉಳಿದ ಪದಗಳಿಗೂ ಅದನ್ನನು ಸರಿಸಿಯೇ ಎರಡು ವಿಧವಾದ ಅನ್ವಯಗಳನ್ನೂ ತಾತ್ಪರ್ಯಗಳನ್ನೂ ಹೇಳಬೇಕಾಗುತ್ತದೆ. ಮೇಲೆ ಪ್ರತಿಪದಾರ್ಥದಲ್ಲಿ ಹೇಳಿರುವ ಅರ್ಥವಲ್ಲದೆ ಬೇರೆ ಅರ್ಥವನ್ನು ಈರೀತಿ ಹೇಳಬಹುದೆಂದು ಸಾಯಣರು ವಿವರಿಸಿದ್ದಾರೆ, ಇದರಂತೆ,

**ಧೇನುಂ—ವೃಷ್ಟ್ಯಾ ಪ್ರೀಣಯಿತ್ರೀಂ ಮೇಘಲಕ್ಷಣಾಂ ಧೇನುಂ ।** ಲೌಕಿಕವಾದ ಧೇನುವು ಕ್ಷೀರದಿಂದ ಯಜಮಾನನನ್ನು ತೃಪ್ತಿಗೊಳಿಸುವಂತೆ ಮೇಘವು ವೃಷ್ಟಿಯಿಂದ ಲೋಕವನ್ನು ತೃಪ್ತಿಗೊಳಿಸುವುದರಿಂದ ಅದಕ್ಕೂ ಧೇನುವೆಂಬ ಹೆಸರು ಪ್ರಸಿದ್ಧವಾಗಿದೆ, ಮೇಘರೂಪವಾದ ಈ ಧೇನುವನ್ನು ಕರೆಯತಕ್ಕವನು ಆದಿತ್ಯನು. ಆದುದರಿಂದ **ಸುಹಸ್ತಃ** ಎಂಬ ವಿಶೇಷಣಕ್ಕೆ ವೃಷ್ಟಿಕಾರಕವೂ, ಪ್ರಕಾಶಮಾನವೂ ಆದ ಕಿರಣಗಳಿಂದ ಕೂಡಿದವನೆಂದರ್ಥ. ಘರ್ಮವೆಂದರೆ ಗ್ರೀಷ್ಮವೆಂದರ್ಥ.

**ಧೇನುಂ—ಧೇನುರ್ಧಯತೇರ್ವಾ, ಧಿನೋತೇರ್ವಾ ಧಯತೇಽಸೌ ವತ್ಸೇನೇತಿ । ತರ್ಪಯತ್ಯಸೌ ಪಯಸಾ ।** (ನಿ. ೧೧-೪೨) ಕರುವಿನಿಂದ ಹಾಲು ಹೀರಲ್ಪಡುತ್ತದೆ ಎಂಬುದರಿಂದಾಗಲಿ, ಅಥವಾ ಕ್ಷೀರವನ್ನು ಕೊಟ್ಟು ತೃಪ್ತಿಯನ್ನುಂಟುಮಾಡುತ್ತದೆ ಎಂಬುದರಿಂದಾಗಲಿ ಗೋವುಗಳಿಗೆ ಧೇನುಗಳೆಂದು ಹೆಸರು. **ಗೋಧುಕ್** ಇಂತಹ ಗೋವನು ಕರೆಯತಕ್ಕವನು ಯಜ್ಞಸಂಬಂಧವಾದ ಅರ್ಥದಲ್ಲಿ ಅಧ್ವರ್ಯುವೂ, ಮೇಘಸಂಬಂಧವಾದ ಅರ್ಥದಲ್ಲಿ ಆದಿತ್ಯನೂ ಆಗುತ್ತಾರೆ.

**ಘರ್ಮಃ**—ಈ ಪದಕ್ಕೆ **ಪ್ರವರ್ಗ್ಯ**ವೆಂಬ ಹೆಸರುಳ್ಳ ಯಾಗವೆಂದರ್ಥಮಾಡಿದ್ದಾರೆ. ಮತ್ತು ತಮ್ಮ ಅರ್ಥವನ್ನು ಸಮರ್ಥಿಸಲು, **ತತ್ಪ್ರವರ್ಗ್ಯತ್ವಂ ಯದ್ಘರ್ಮಂ ೪ ಇತ್ಯಪತತ್ । ತದ್ಘರ್ಮಸ್ಯ ಘರ್ಮತ್ವಂ ।** (ತೈ. ಆ. ೫-೧-೫)

ಎಂಬ ಆರಣ್ಯಕದ ವಾಕ್ಯವನ್ನುದಹರಿಸಿ ಇಲ್ಲಿ **ಘರ್ಮ**ಶಬ್ದಕ್ಕೆ ಪ್ರವರ್ಗ್ಯವೆಂಬರ್ಥವನ್ನೂ ಅಲ್ಲದೇ **ಸವಂ** ಎಂಬ ಪದಕ್ಕೆ ಸೋಮಯಾಗವೆಂದೂ ಅರ್ಥಮಾಡಿದ್ದಾರೆ.

ಪ್ರವರ್ಗ್ಯವು ಸೋಮಯಾಗಕ್ಕೆ ಪೂರ್ವಭಾವಿಯಾಗಿ ನೆರವೇರಿಸಲ್ಪಡಬೇಕಾದ ವಿಧಿಯು. ಇದರ ಕ್ರಮವನ್ನು ಐತರೇಯ ಬ್ರಾಹ್ಮಣಾದಿಗಳಲ್ಲಿ ವಿಶದವಾಗಿ ತಿಳಿಸಿದೆ ಪ್ರಕೃತವಾದ ಋಕ್ಕಿನಂತೆಯೇ ಇದರ ಮುಂದಿನ ಎರಡು ಋಕ್ಕು

ಗಳಲ್ಲಿಯೂ ಸಹ ಇದೇ ವಿಷಯವನ್ನು ಹೇಳಿರುವುದರಿಂದ ಅವರ ಕೊನೆಯಲ್ಲಿ ಎಂದರೆ ಇದೇ ಸೂಕ್ತದ ೨೯ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ತಿಳಿಸಲಾಗುತ್ತದೆ.



## ಹಿಂಕೃಣ್ವತೀ ವಸುಪತ್ನೀ ವಸೂನಾಂ ವತ್ಸಮಿಚ್ಛಂತೀ ಮನಸಾಭ್ಯಾ-ಗಾತ್ । ದುಹಾಮಶ್ವಿಭ್ಯಾಂ ಪಯೋ ಅಘ್ನ್ಯೇಯಂ ಸಾ ವರ್ಧ-ತಾಂ ಮಹತೇ ಸೌಭಗಾಯ ॥ ೨೭ ॥

ಕ್ಷೀರಾದಿಸಂಪತ್ತುಗಳಿಗೆ ಪಾಲಕಳೂ, ತನ್ನಲ್ಲಿಯೇ ತನ್ನ ಕರುವನ್ನು ಲಾಲಿಸುವವಳೂ, ಆದುದರಿಂದಲೇ ಕರುವನ್ನು ದ್ದೇಶಿಸಿ ಶಬ್ದಮಾಡುತ್ತಾ ಕರುವನ್ನು ಸಮೀಪಿಸುವವಳೂ ಆದ ಧೇನುವು ಬಂದಿದ್ದಾಳೆ. ಅಹಿಂಸಿತಳಾದ ಈ ಧೇನುವು ಅಶ್ವಿನೀ ದೇವತೆಗಳಿಗೆ ಕ್ಷೀರವನ್ನು ಕರೆದುಕೊಡಲಿ. ಅದೇ ಧೇನುವು ಅತ್ಯಧಿಕವಾದ ಸೌಭಾಗ್ಯಕ್ಕಾಗಿ ಬೆಳೆಯಲಿ.

ಈ ಋಕ್ಕಿನಲ್ಲಿಯೂ ಸಹ ಮೇಘಪರವಾದ ಅರ್ಥವನ್ನು ಮಾಡಬಹುದು. **ಹಿಂಕೃಣ್ವತೀ** ಎಂಬ ಪದಕ್ಕೆ ಮಳೆಯನ್ನು ಸುರಿಸುವ ಕಾಲದಲ್ಲಿ ಗರ್ಜನವನ್ನು ಮಾಡುತ್ತಾ ಎಂದೂ **ವಸೂನಾಂ ವಸುಪತ್ನೀ** ಎಂಬುದಕ್ಕೆ ಗೋಸಸ್ಯಾದಿ ಧನಗಳ ಪಾಲಕಳು ಎಂದೂ ಅರ್ಥಮಾಡಿದೆ. ವತ್ಸಶಬ್ದಕ್ಕೆ ವತ್ಸದಂತೆ ಪೋಷಣಾರ್ಹವಾದ ಲೋಕವೆಂದರ್ಥವು. ಅಶ್ವಿಭ್ಯಾಂ ಎನ್ನುವಾಗ ಸ್ಥಾವರಜಂಗಮರೂಪವಾದ ಲೋಕಗಳಿಗಾಗಿ ಎಂದಾಗಲಿ ಅಥವಾ ವಾಯ್ವಾದಿತ್ಯರಿಂದ ಎಂದಾಗಲಿ ತಾತ್ಪರ್ಯವಾಗುತ್ತದೆ. ಮೊದಲನೆಯ ಅರ್ಥದಂತೆ ಸಕಲ ಲೋಕಗಳಿಗಾಗಿಯೂ ವೃಷ್ಟಿಯನ್ನು ಸುರಿಸಲಿ ಎಂದೂ ಎರಡನೆಯ ಅರ್ಥದಂತೆ ವಾಯ್ವಾದಿತ್ಯರ ಪ್ರೇರಣೆಯಿಂದ ವೃಷ್ಟಿಯನ್ನು ಸುರಿಸಲಿ ಎಂದೂ ಅರ್ಥವಾಗುತ್ತದೆ.

**ಅಘ್ನ್ಯಾ**—ಈ ಪದವು ಗೋನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) ನಿರುಕ್ತಕಾರರು ಈ ಪದದ ನಿರ್ವಚನವನ್ನು ತೋರಿಸುತ್ತಾ,

**ಅಘ್ನ್ಯಾ ಅಹಂತವ್ಯಾ ಭವತಿ । ಅಘಘ್ನೀ ಇತಿ ವಾ ।**

ಇದು ಕೊಲ್ಲಲ್ಪಡತಕ್ಕುದಲ್ಲ ಎಂಬುದರಿಂದಾಗಲಿ ಅಥವಾ ಪಾಪವನ್ನು ನಾಶಮಾಡತಕ್ಕದ್ದು ಎಂಬುದರಿಂದಾಗಲಿ **ಅಘ್ನ್ಯಾ** ಎಂಬ ಹೆಸರು ಬಂದಿದೆ ಎಂದು ವಿವರಿಸಿ,

**ಸೂಯವಸಾದ್ಭಗವತೀ ಹಿ ಭೂಯಾ ಅಥೋ ವಯಂ ಭಗವಂತಃ ಸ್ಯಾಮ ।**
**ಅದ್ಧಿ ತೃಣಮಘ್ನ್ಯೇ ವಿಶ್ವದಾನೀಂ ಶುದ್ಧಮುದಕಮಾಚರಂತೀ ॥** (ಋ. ಸಂ. ೧-೧೬೪-೪೦)

ಎಂಬ ಋಕ್ಕನ್ನುದಹರಿಸಿ ಈ ಪದದ ಅರ್ಥವನ್ನು ತಿಳಿಸಿದ್ದಾರೆ.

**ಅಶ್ವಿಭ್ಯಾಂ**- ಈ ಪದಕ್ಕೆ ಮೂರು ವಿಧವಾಗಿ ಅರ್ಥಮಾಡಿದೆ. ಮೊದಲನೆಯದಾಗಿ ಧೇನುಪರ್ಯಾಯವಾದ ಅರ್ಥದಲ್ಲಿ **ಅಶ್ವಿಭ್ಯಾಂ ಕ್ಷೀರಂ ದುಹಾಂ** ಎಂದರೆ ಅಶ್ವಿನೀದೇವತೆಗಳಿಗಾಗಿ ಕ್ಷೀರವನ್ನು ಕರೆಯಲಿ ಎಂದೂ; ಎರಡನೆಯದಾಗಿ ಮೇಘಪರ್ಯಾಯವಾದ ಅರ್ಥದಲ್ಲಿ ವಿಶ್ವವ್ಯಾಪಕಗಳಾದ ಸ್ಥಾವರಜಂಗಮರೂಪಗಳಾದ ಲೋಕಗಳಿಗಾಗಿ ಅಥವಾ ವಾಯ್ವಾದಿತ್ಯರಿಂದ ಎಂದೂ ಅರ್ಥವಾಗುತ್ತದೆ. ಈ ಎಲ್ಲಾ ಅರ್ಥಗಳಿಗೂ ಅವಕಾಶವಿದೆಯೆಂದು ನಿರುಕ್ತಕಾರರ ನಿರ್ವಚನದಿಂದ ತಿಳಿಯುತ್ತದೆ. (ನಿ. ೧೨-೧).

ಅಶ್ವಿನೌ— ಅಶ್ವಿನೌ ಯದ್ವ್ಯಶ್ನುವಾತೇ ಸರ್ವಂ ರಸೇನಾನ್ಯೋ ಜ್ಯೋತಿಷಾನ್ಯಃ । ಒಬ್ಬ ದೇವತೆಯು ಉದಕದಿಂದಲೂ, ಇನ್ನೊಬ್ಬ ದೇವತೆಯು ತೇಜಸ್ಸಿನಿಂದಲೂ ಕೂಡಿಕೊಂಡು ವಿಶ್ವವನ್ನೆಲ್ಲಾ ವ್ಯಾಪಿಸಿರುವುದರಿಂದ ಇವರಿಗೆ ಅಶ್ವಿನೀದೇವತೆಗಳೆಂದು ಹೆಸರು. (೧)

ಅಶ್ವೈರಶ್ವಿನಾವಿತ್ಯೌರ್ಣವಾಭಃ— ಅಶ್ವಗಳನ್ನು ಹೊಂದಿರುವುದರಿಂದ ಅಶ್ವಿನೀದೇವತೆಗಳು ಎಂಬ ಹೆಸರು ಪ್ರಸಿದ್ಧವಾಗಿದೆಯೆಂದು ಔರ್ಣವಾಭರ ಮತವೆಂದು ತಿಳಿಯುತ್ತದೆ. (೨)

ತತ್ಕಾವಶ್ವಿನೌ ದ್ಯಾವಾಪೃಥಿವ್ಯಾವಿತ್ಯೇಕೇ— ಇಲ್ಲಿಯವರೆಗೆ ಅಶ್ವಿನೀದೇವತೆಗಳ ಸ್ವರೂಪವನ್ನು ವರ್ಣಿಸಿದಂತಾಯಿತು. ಈಗ ಅವರಾರು? ಎಂಬ ಪ್ರಶ್ನೆಯನ್ನು ಕೇಳಿ ಮೊದಲು ದ್ಯಾವಾಪೃಥಿವ್ಯಾವಿತ್ಯೇಕೇ । ಅವರು ದ್ಯಾವಾಪೃಥಿವಿಗಳೆಂದು ಕೆಲವರ ಮತವಾಗಿದೆ. ಶತಪಥಬ್ರಾಹ್ಮಣದ ವಾಕ್ಯವನ್ನುದಹರಿಸಿ ಇದಕ್ಕೆ ಶ್ರುತಿವಾಕ್ಯದ ಆಧಾರವೂ ಇದೆಯೆಂದು ತೋರಿಸಬಹುದು.

ಅಥ ಯದಶ್ವಿನಾವಿತೀಮೇ ಹ ವೈ ದ್ಯಾವಾಪೃಥಿವೀ ಪ್ರತ್ಯಕ್ಷಮಶ್ವಿನಾವಿಮೇ ಹೀದಂ ಸರ್ವಮಶ್ನುವಾತಾಂ । (ಶ. ಬ್ರಾ. ೪-೧-೫-೧೯)

ವಿಶ್ವವನ್ನೆಲ್ಲಾ ವ್ಯಾಪಿಸುವವರು ದ್ಯಾವಾಪೃಥಿವಿಗಳೇ ಆದ್ದರಿಂದ ದ್ಯಾವಾಪೃಥಿವೀಗಳೇ ಅಶ್ವಿನೀದೇವತೆಗಳೆಂದು ಪ್ರಸಿದ್ಧರಾಗಿದ್ದಾರೆ ಎಂದು ಮೇಲಿನ ವಾಕ್ಯವು ನಿಷ್ಕೃಷ್ಟವಾಗಿ ತಿಳಿಸುತ್ತದೆ. ಈ ಅಭಿಪ್ರಾಯಕ್ಕೆ ಋಕ್ಸಂಹಿತಾ ವಾಕ್ಯದಿಂದಲೂ ಸಹಾಯವು ದೊರಕುವುದೆಂದು ತೋರಿಸಬಹುದು. ಉದಾಹರಣೆಗೆ—

ಮಧು ನೋ ದ್ಯಾವಾಪೃಥಿವೀ ಮಿಮಿಕ್ಷತಾಂ ಮಧುಶ್ಚುತಾ ಮಧುದುಘೇ ಮಧುವ್ರತೇ ।
ದಧಾನೇ ಯಜ್ಞಂ ದ್ರವಿಣಂ ಚ ದೇವತಾ ಮಹಿ ಶ್ರವೋ ವಾಜಮಸ್ಮೇ ಸುವೀರ್ಯಂ ।
(ಋ. ಸಂ. ೬-೭೦-೫)

ಎಂಬ ಋಕ್ಕಿನಲ್ಲಿ ವರ್ಣಿತವಾಗಿರುವ ದ್ಯಾವಾಪೃಥಿವಿಗಳ ಲಕ್ಷಣವೂ, ಮೇಲೆ ಉದಾಹೃತವಾದ ಶತಪಥಬ್ರಾಹ್ಮಣದ ವಾಕ್ಯದಲ್ಲಿ ವರ್ಣಿತವಾಗಿರುವ ಅಶ್ವಿನೀದೇವತೆಗಳ ಲಕ್ಷಣವೂ ಒಂದೇ ಆಗಿದೆ. ಅಲ್ಲದೇ, "ಪ್ರತ್ಯಕ್ಷವಾಗಿ ಕಾಣಿಸಿಕೊಳ್ಳುವ ದ್ಯಾವಾಪೃಥಿವಿಗಳೇ ಇವರು" ಎಂದು ನಿಷ್ಕೃಷ್ಟವಾಗಿ ತಾದಾತ್ಮ್ಯವನ್ನೇ ಹೇಳಿದೆ. (೩).

ಅಹೋರಾತ್ರಾವಿತ್ಯೇಕೇ— ಅಹೋರಾತ್ರಗಳೇ ಅಶ್ವಿನೀದೇವತೆಗಳೆಂದು ಇನ್ನು ಕೆಲವರ ಮತವಾಗಿದೆ (೪)

ಸೂರ್ಯಾಚಂದ್ರಮಸಾವಿತ್ಯೇಕೇ— ಇವರನ್ನೇ ಸೂರ್ಯಚಂದ್ರರೆಂದು ಇನ್ನು ಕೆಲವರು ಹೇಳುತ್ತಾರೆ (೫)

ರಾಜಾನೌ ಪುಣ್ಯಕೃತಾವಿತ್ಯೈತಿಹಾಸಿಕಾಃ— ಸುಕೃತಿಗಳಾದ ಇಬ್ಬರು ರಾಜರೆಂದು ಇತಿಹಾಸಕಾರರ ಮತವಾಗಿದೆ. (೬). ಹೀಗೆ ಬೇರೆಬೇರೆ ನಿರ್ವಚನಗಳನ್ನು ತೋರಿಸಿರುವುದರಿಂದ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಮೂರುವಿಧವಾದ ಅರ್ಥಗಳನ್ನು ಹೇಳಿರುವುದಕ್ಕೆ ಅವಕಾಶವಿದೆ. ಅಶ್ವಿನೌ ವಾಯ್ವಾದಿತ್ಯೌ ಎಂಬ ಅರ್ಥವನ್ನು ಅನುಮೋದಿಸುವ ಋಕ್ಕುಗಳೂ ಋಕ್ಸಂಹಿತೆಯಲ್ಲಿ ಕೆಲವಿವೆ. ಉದಾಹರಣೆಗೆ—

ಇಹೇಹ ಜಾತಾ ಸಮವಾವಶೀತಾಮರೇಪಸಾ ತನ್ವಾ೩ ನಾಮಭಿಃ ಸ್ವೈಃ ।
ಜಿಷ್ಣುರ್ವಾಮನ್ಯಃ ಸುಮಖಸ್ಯ ಸೂರಿರ್ದಿವೋ ಅನ್ಯಃ ಸುಭಗಃ ಪುತ್ರ ಊಹೇ ॥
(ಋ. ಸಂ. ೧-೧೮೧-೪)

ಎಂಬಲ್ಲಿ ' **ಅಸ್ಯಃ ಸುಮುಹತೋ ಬಲಸ್ಯೇಶಯಿತಾ ಮಧ್ಯಮೋ ದಿಷ್ಟೋ ಅಸ್ಯಃ ಸುಭಗಃ ಪುತ್ರ ಊಹ್ಯತ ಆದಿತ್ಯಃ** ॥ ಮಧ್ಯಮಲೋಕವರ್ತಿಯಾದವನು ಇಬ್ಬನು, ದ್ಯುಲೋಕದ ಶ್ರೇಷ್ಠನಾದ ಪುತ್ರನ, ಆದಿತ್ಯರೂಪದಲ್ಲಿ ಇನ್ನೊಬ್ಬನು ಎಂದು ಅರ್ಥಮಾಡಿದೆ (ನಿ. ೧೨-೨). ಇಲ್ಲಿ ಮಧ್ಯಮಲೋಕವರ್ತಿಯಾದವನು ವಾಯುವೆಂದು ಕೆಲವರೂ, ಚಂದ್ರನೆಂದು ಇನ್ನು ಕೆಲವರೂ ಹೇಳುತ್ತಾರೆ. ಮೊದಲನೆಯ ಅಭಿಪ್ರಾಯದಂತೆ ವಾಯ್ವಾದಿತ್ಯರೇ ಆಯಿತು. ಪ್ರಕೃತವಾದ ಋಕ್ಕಿನಲ್ಲಿ ಸಾಯಣರ ಅರ್ಥವನ್ನು ಅನುಮೋದಿಸುತ್ತದೆ. ಇಂತಹ ವಾಯ್ವಾದಿತ್ಯರಿಂದ ಪ್ರೇರಿತವಾಗಿ ಮೇಘವು ವೃಷ್ಟಿಯನ್ನು ಸುರಿಸಲಿ ಎಂದರ್ಥ.



**ಗೌರಮೀಮೇದನು ವತ್ಸಂ ಮಿಷಂತಂ ಮೂರ್ಧಾನಂ ಹಿಙ್ಙಕೃಣೋನ್ಮಾ-
ತವಾ ಉ । ಸೃಕ್ವಾಣಂ ಘರ್ಮಮಭಿ ವಾವಶಾನಾ ಮಿಮಾತಿ
ಮಾಯುಂ ಪಯತೇ ಪಯೋಭಿಃ ॥ ೨೮ ॥**

ಧೇನುವು ಕಣ್ಣುಮಿಟುಕಿಸುತ್ತಿರುವ ತನ್ನ ಕರುವನ್ನು ಸಮೀಪಿಸಿ ಶಬ್ದವನ್ನು ಮಾಡುತ್ತದೆ. ಅದರ ತಲೆಯನ್ನು ನೆಕ್ಕಿ ಶುದ್ಧಿಮಾಡುವ ಸನ್ನಾಹದಿಂದಲೇ ಗುಟುರುಶಬ್ದವನ್ನು ಮಾಡುತ್ತದೆ. ಕರುವಿನ ಮುಖಪ್ರಾಂತದಲ್ಲಿ ನೊರೆಯನ್ನು ನೋಡಿ ಮಮತಾಪೂರ್ವಕವಾಗಿ ಶಬ್ದವನ್ನು ಮಾಡುತ್ತದೆ. ಕ್ಷೀರಗಳಿಂದ ತನ್ನ ಕರುವನ್ನು ತೃಪ್ತಿಗೊಳಿಸುತ್ತದೆ.

ಪ್ರವರ್ಗ್ಯದಲ್ಲಿ ಹಾಲುಕರೆಯುವ ಕಾಲದಲ್ಲಿ ಕರುವನ್ನು ಹಸುವಿನಿಂದ ಬೇರ್ಪಡಿಸಿ ಬೇರೆ ಕಡೆ ಕಟ್ಟಲು ಕರೆದುಕೊಂಡು ಹೋಗುವಾಗ **ಗೌರಮೀಮೇತ್** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಗೌರಮೀಮೇದನು ವತ್ಸಂ ಮಿಷಂತಂ ನಮುಸೇದುಪ ಸೀದತ** ಎಂಬ ಸೂತ್ರದಿಂದ ನಿವೃತವಾಗಿರುವುದು (ಆ. ೪-೭)

ಈ ಋಕ್ಕಿನಲ್ಲಿಯೂ ಸಹ ಮೇಘಪರವಾದ ಅರ್ಥವನ್ನು ಹೇಳಬಹುದು. ಆಗ—**ಮಿಷಂತಂ ವತ್ಸಂ** ವೃಷ್ಟಿರೂಪವಾದ ಕ್ಷೀರಾಭಾವದಿಂದ ಪರಿತಪಿಸುತ್ತಿರುವ ಲೋಕರೂಪವಾದ ವತ್ಸವನ್ನು ನೋಡಿ **ಅಮೀಮೇತ್**—ವೃಷ್ಟಿಗೆ ಪೂರ್ವಭಾವಿಯಾದ ಗರ್ಜನಶಬ್ದವನ್ನು ಮಾಡಿತು;

**ಮೂರ್ಧಾನಂ ಮಾತವೈ ಹಿಙ್ ಅಕೃಣೋತ್**- ಮೂರ್ಧಸ್ಥಾನೀಯವಾದ ಪೃಥ್ವಿಯನ್ನು ಸಸ್ಯಾದಿಗಳಿಂದ ಯುಕ್ತವನ್ನಾಗಿ ಮಾಡಲು ಸನ್ನಾಹಪೂರಿತವಾದ ಶಬ್ದವನ್ನು ಮಾಡುತ್ತದೆ. **ಸೃಕ್ವಾಣಂ ಘರ್ಮಂ ಅಭಿ ವಾಶಾನಾ**—ಫಲದ ಸೃಷ್ಟಿಕರ್ತೃವಾದುದೂ ದೀಪ್ತವಾದ ದೂ ಆದ ಪೃಥ್ವಿಯನ್ನು ಮುಮುಕ್ಷೆಯಿಂದ ಲಾಲಿಸುತ್ತಾ; **ಪಯೋಭಿಃ ಪಯತೇ** ಉದಕರೂಪವಾದ ಕ್ಷೀರಾದಿಗಳಿಂದ ತುಂಬುತ್ತದೆ ಎಂದರ್ಥವಾಗುವುದೆಂದು ಸಾಯಣರು ವಿವರಿಸಿದ್ದಾರೆ. ಈ ಮಂತ್ರಕ್ಕೆ ನಿರುಕ್ತಕಾರರ ವಿವರಣೆಯು ಈರೀತಿಯಿದೆ.

ಗೌರನ್ವಮೀಮೇದ್ವತ್ಸಂ ನಿಮಿಷಂತಮನಿಮಿಷಂತಮಾದಿತ್ಯಮಿತಿ ವಾ ಮೂರ್ಧಾನ-
ಮಸ್ಯಾಭಿಹಿಙ್ಙಕರೋನ್ಮನನಾಯ ಸೃಕ್ವಾಣಂ ಸರಣಂ ಘರ್ಮಂ ಹರಣಮಭಿವಾವಶಾನಾ
ಮಿಮಾತಿ ಮಾಯುಂ ಪ್ರಪ್ಯಾಯತೇ ಪಯೋಭಿರ್ಮಾಯುಮಿವಾದಿತ್ಯಮಿತಿ ವಾ। (ನಿ. ೧೧-೪೨)

ಇಲ್ಲಿ ವತ್ಸಶಬ್ಧಕ್ಕೆ ಆದಿತ್ಯನೆಂದರ್ಥಮಾಡಿದೆ. ಆದಿತ್ಯನ ಮೂರ್ಧದ ಮೇಲೆ ಗುರ್ತಿಸುವುದಕ್ಕಾಗಿ ಹಿಙ್ಕಾರಶಬ್ಧ ಮಾಡುತ್ತದೆಂದೂ, ಪ್ರವಾಹರೂಪದಲ್ಲಿ ಸುರಿಯುವುದಕ್ಕಾಗಿ ಗರ್ಜನಶಬ್ಧವನ್ನು ಮಾಡುತ್ತದೆಂದೂ ಮತ್ತು ವಾಯುವಿನಂತೆ ಶಬ್ಧಮಾಡುತ್ತದೆಂದೂ ತಾತ್ಪರ್ಯವಾಗುತ್ತದೆ. ಇಲ್ಲಿ **ಮಾಯುವೆಂಬ** ಪದಕ್ಕೆ ಆದಿತ್ಯನೆಂದರ್ಥಮಾಡಿದೆ. **ಗೌಃ** ಎಂಬುದಕ್ಕೆ ಇಲ್ಲಿ **ಮಾಧ್ಯಮಿಕಾ ವಾಕ್** ಎಂದು ನಿರುಕ್ತಕಾರರು ತಮ್ಮ ಮತವನ್ನು ತಿಳಿಸಿ ಅನಂತರ **ಘರ್ಮಧುಗಿತಿ ಯಾಜ್ಞಿಕಾಃ** ತಪ್ತವಾದುದೂ ಉದಕರೂಪವಾದುದೂ ಆದ ಪಯಸ್ಸನ್ನು ಕೊಡತಕ್ಕದ್ದೆಂದು ವೈದಿಕರೂ ಹೇಳುವರೆಂದು ಯಜ್ಞಿಕಮತವನ್ನೂ ತಿಳಿಸಿದ್ದಾರೆ. [ಮಾಯು ಶಬ್ದದ ಅರ್ಥವನ್ನು ಪುನಃ ೨೯ನೇ ಋಕ್ಕಿನಲ್ಲಿ ವಿವರಿಸಲಾಗುತ್ತದೆ.]

**ವಾವಶಾನಾ— ವಾವಶಾನೋ ವಷ್ಟೇರ್ವಾ ವಾಶ್ಯತೇರ್ವಾ ।** (ನಿ. ೫-೧) ಆದುದರಿಂದ ಇಚ್ಛಿಸು ಎಂಬರ್ಥವನ್ನು ಕೊಡುವ **ವಶ್** ಧಾತುವಿನಿಂದಾಗಲೀ ಅಥವಾ ಗಟ್ಟಿಯಾಗಿ ಶಬ್ದವನ್ನು ಮಾಡು ಎಂಬರ್ಥವನ್ನು ಕೊಡುವ **ವಾಶ್** ಧಾತುವಿನಿಂದಾಗಲೀ ನಿಷ್ಪನ್ನವಾಗಿದೆಯೆಂದು ನಿರುಕ್ತಕಾರರು ಈ ಪದದ ನಿರ್ವಚನವನ್ನು ತೋರಿಸಿ ಅನಂತರ ಇದರ ಪ್ರಯೋಗವನ್ನು ತಿಳಿಸುವುದಕ್ಕಾಗಿ ಋಕ್ಸಂಹಿತೆಯಿಂದ,

**ಸಪ್ತ ಸ್ವಸ್ರೂರರುಷೀರ್ವಾವಶಾನೋ ವಿದ್ವಾನ್ಮಧ್ವ ಉಜ್ಜಭಾರಾ ದೃಶೇ ಕಂ ।**
**ಅಂತರ್ಯೇಮೇ ಅಂತರಿಕ್ಷೇ ಪುರಾಜಾ ಇಚ್ಛನ್ವವ್ರಿಮವಿದತ್ಪೂಷಣಸ್ಯ ॥** (ಋ. ಸಂ. ೧೦-೫-೫)

ಎಂಬ ಋಕ್ಕನ್ನುದಹರಿಸಿ ತೋರಿಸಿದ್ದಾರೆ. ಈ ಋಕ್ಕಿನಲ್ಲಿ **ವಾವಶಾನಃ** ಎಂದರೆ **ಕಾಮಯಮಾನಃ ವಾಶ್ಯಮಾನಃ ಸ್ತೋತೃಭಿಃ ಸ್ತೂಯಮಾನೋ ವಾ ಅಗ್ನಿಂ** ಎಂದು ಸಾಯಣರು ವಿವರಿಸುತ್ತಾ ಆದೃತನಾದ ಎಂಬರ್ಥದಲ್ಲಿ ಒಂದು ವಿಧವಾಗಿಯೂ, ಸ್ತೋತೃಗಳಿಂದ ಮಾಡಲ್ಪಟ್ಟ (ಶಬ್ದರೂಪವಾದ) ಸ್ತೋತ್ರಗಳಿಂದ ಸ್ತುತರಾದ ಎಂಬರ್ಥದಲ್ಲಿ ಇನ್ನೊಂದು ವಿಧವಾಗಿಯೂ, ಅರ್ಥಮಾಡಿದ್ದಾರೆ. ಇದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಅರ್ಥಮಾಡಬಹುದೆಂದು ನಿರುಕ್ತಕಾರರು ತಿಳಿಸಿದ್ದಾರೆ.

ಪಯತೇ— **ಪ್ಯಾಯತೇ ।** ಅತಿಶಯವಾಗಿ ವೃದ್ಧಿಯಾಗುವಂತೆಯೂ, ಸಂತೃಪ್ತಿಯನ್ನು ಪಡೆಯುವಂತೆಯೂ ಮಾಡುತ್ತದೆ ಎಂದರ್ಥವಾಗುತ್ತದೆ.



## ಅಯಂ ಸ ಶಿಂಕ್ತೇ ಯೇನ ಗೌರಭೀವೃತಾ ಮಿಮಾತಿ ಮಾಯುಂ ಧ್ವಸ-ನಾವಧಿ ಶ್ರಿತಾ । ಸಾ ಚಿತ್ತಿಭಿರ್ನಿ ಹಿ ಚಕಾರ ಮರ್ತ್ಯಂ ವಿದ್ಯುದ್ಭ-ವಂತೀ ಪ್ರತಿ ವವ್ರಿಮೌಹತ ॥ ೨೯ ॥

ಮಾತೆಯು ಬಂದೊಡನೇ ಕರುವು ಅದನ್ನು ಸುತ್ತುಕಟ್ಟಿಕೊಂಡು ತನ್ನ ತೃಪ್ತಿಯನ್ನು ಸೂಚಿಸುವ ಶಬ್ದವನ್ನು ಮಾಡುತ್ತದೆ. ಕೊಟ್ಟಿಗೆಯಲ್ಲಿ ನಿಂತು ತನ್ನ ಸ್ಥಾನವನ್ನು ಆಕ್ರಮಿಸಿದ ಧೇನುವೂ ಸಹ ಇದಕ್ಕೆ ಪ್ರತಿಯಾಗಿ ಶಬ್ದವನ್ನು ಮಾಡುತ್ತದೆ. ಆ ಧೇನುವು ತನ್ನ ಸಹಜವಾದ ಪ್ರೇಮವನ್ನು ಪ್ರಕಟಿಸುವಾಗ ಮಾನವನಿಗಿಂತಲೂ ಉತ್ಕೃಷ್ಟವಾದ ವಾತ್ಸಲ್ಯ ಜ್ಞಾನವನ್ನು ತೋರಿಸುತ್ತದೆ ಮತ್ತು ಅತಿಶಯವಾಗಿ ಪ್ರಕಾಶಿಸುವ ತನ್ನ ರೂಪವನ್ನು ಪ್ರಕಟಿಸುತ್ತದೆ.

ಮಾನವರ ಪ್ರೇಮಕ್ಕಿಂತಲೂ ಅತಿಶಯವಾದ ಪ್ರೇಮವನ್ನು ಪ್ರಕಟಿಸತಕ್ಕ ಧೇನುವಿನ ಸಹಜವಾದ ವಾತ್ಸಲ್ಯದ ಸ್ವರೂಪವನ್ನೂ, ಅಂತಹ ವಾತ್ಸಲ್ಯಪೂರಿತವಾದ ಅದರ ಪ್ರಕಾಶಮಾನವಾದುದೂ ಆಕರ್ಷಕವಾದುದೂ ಆದ ರೂಪವನ್ನೂ ಈ ಋಕ್ಕಿನಲ್ಲಿ ವರ್ಣಿಸಿದೆ. ಅದನ್ನೇ **ವವ್ರಿಮಾಹತ ರೂಪಂ ಪ್ರಕಾಶಯತಿ** ಎಂಬ ವಿವರಣೆಯಿಂದ ತಿಳಿಸಿದೆ. ಆದರೆ ಇಲ್ಲಿ **ಗೌಃ** ಎಂಬ ಪದಕ್ಕೆ ಅರ್ಥಾಂತರಗಳನ್ನು ಹೇಳಿರುವುದರಿಂದ ವವ್ರಿಯೆಂದರೆ ಯಾವ ರೀತಿಯಾದ ವವ್ರಿಯೆಂದು ತಿಳಿಯಬೇಕು. ನಿರುಕ್ತಕಾರರು ಈ ಪದದ ನಿರ್ವಚನವನ್ನು ತಿಳಿಸುತ್ತಾ

**ವವ್ರಿರಿತಿ ರೂಪನಾಮ ; ವೃಣೋತೀತಿ ಸತಃ ।** (ನಿ. ೨-೯)

ಆಚ್ಛಾದನೆ ಮಾಡು ಎಂಬರ್ಥವನ್ನು ಕೊಡುವ ವೃಧಾತುವಿನಿಂದ ಈ ಪದವು ನಿಷ್ಪನ್ನವಾಗಿದೆ. ಆದುದರಿಂದಲೇ ರೂಪನಾಮಗಳಲ್ಲಿಯೂ ಪಠಿತವಾಗಿದೆಯೆಂದು ಪ್ರಕೃತವಾದ ಋಕ್ಕನ್ನೇ ಉದಹರಿಸಿ ಈ ಪದದ ಅರ್ಥವನ್ನು ತಿಳಿಸಿದ್ದಾರೆ. ಇದೇ ಅಲ್ಲದೇ, ಪ್ರಕೃತವಾದ ಋಕ್ಕಿನ ಗಹನವಾದ ಅರ್ಥವನ್ನೂ ಚರ್ಚಿಸಿ ಇದರ ತಾತ್ಪರ್ಯವನ್ನು ಹೇಳುವಾಗ ಮತಾಂತರಗಳನೂ ತಿಳಿಸಿದ್ದಾರೆ.

ನಿರುಕ್ತಕಾರರು ಈ ಋಕ್ಕಿಗೆ ಅರ್ಥವನ್ನು ವಿವರಿಸುವಾಗ ಮೊದಲು ಒಂದು ಕಥಾಸನ್ನಿವೇಶವನ್ನು ತಿಳಿಸಿ ಅನಂತರ ಋಕ್ಕನ್ನು ವಿವರಿಸಿದ್ದಾರೆ. ಅದೇನೆಂದರೆ,

**ಶಾಕಪೂಣಿಃ ಸಂಕಲ್ಪಯಾಂ ಚಕ್ರೇ—“ಸರ್ವಾ ದೇವತಾ ಜಾನಾಮೀ”ತಿ । ತಸ್ಮೈ ದೇವತೋಭಯಲಿಂಗಾ ಪ್ರಾದುರ್ಬಭೂವ । ತಾಂ ನ ಜಜ್ಞೇ; ತಾಂ ಪ್ರಪಚ್ಛ ವಿವಿದಿಷಾಣಿ ತ್ವೇತಿ । ಸಾಸ್ಮಾ ಏತಾಮೃಚಮಾದಿದೇಶೈಷಾ ಮದ್ದೇವತೇತಿ ।** (ನಿ. ೨-೮)

ಶಾಕಪೂಣಿಯು “ನಾನು ಸಕಲ ದೇವತೆಗಳ ಸ್ವರೂಪವನ್ನೂ ತಿಳಿಯುವೆನು” ಎಂದು ಸಂಕಲ್ಪಮಾಡಿದನು. ಆಗ ಲಿಂಗದ್ವಯದಿಂದ ಯುಕ್ತವಾದ ಒಂದು ದೇವತೆಯು ಅವನ ಮುಂದೆ ಪ್ರಾದುರ್ಭೂತವಾಯಿತು. ಅವನಿಗೆ ಆ ದೇವತೆಯ ನಿಜವಾದ ಸ್ವರೂಪವು ತಿಳಿಯಲಿಲ್ಲ. “ನನಗೆ ನಿನ್ನ ಸ್ವರೂಪವನ್ನು ಸರಿಯಾಗಿ ತಿಳಿಸು” ಎಂದು ಪ್ರಾರ್ಥಿಸಿದಾಗ ಆ ದೇವತೆಯು ಪ್ರಕೃತವಾದ “ಅಯಂ ಸ ಶಿಂಕ್ತೇ” ಎಂಬ ಋಕ್ಕನ್ನು ನಿರ್ದೇಶಿಸಿ ಈ ಋಕ್ಕಿನಲ್ಲಿ ಯಾವ ದೇವತೆಯನ್ನು ಉದ್ದೇಶಿಸಿ ಸ್ತುತಿಸಿದೆಯೋ ಅದೇ ದೇವತೆಯೆಂದು ತಿಳಿಯಬೇಕೆಂದೂ, ಈ ಮಂತ್ರವು ತನ್ನನ್ನೇ ಉದ್ದೇಶಿಸಿರುವುದಾಗಿಯೂ ಅವನಿಗೆ ಹೇಳಿತು. ಆದರೆ ಋಕ್ಕಿನ ಅರ್ಥವನ್ನು ತಿಳಿಯುವುದು ಸುಲಭವಲ್ಲವಾದುದರಿಂದಲೂ ಆದುದರಿಂದಲೇ ಆ ದೇವತೆಯು ನಿಜವಾಗಿಯೂ ಯಾರು ಎಂದು ತಿಳಿಯುವುದು ಕಷ್ಟವಾದುದರಿಂದಲೂ ನಿರುಕ್ತಕಾರರು ಇದರ ಅರ್ಥವನ್ನು ವಿವರಿಸಿದ್ದಾರೆ.

**ಅಯಂ ಸ ಶಬ್ದಾಯತೇ ಯೇನ ಗೌರಭಿಪ್ರವೃತ್ತಾ ಮಿಮಾತಿ ಮಾಯುಂ ಶಬ್ದಂ ಕರೋತಿ ಮಾಯುಮಿವಾದಿತ್ಯಮಿತಿ ವಾ । ವಾಗೇಷಾ ಮಾಧ್ಯಮಿಕಾ ಧ್ವಸನೇ ಮೇಘೇಽಧಿಶ್ರಿತಾ । ಸಾ ಚಿತ್ತಿಭಿಃ ಕರ್ಮಭಿರ್ನೀಚೈರ್ನಿಕರೋತಿ ಮರ್ತ್ಯಂ ವಿದ್ಯುದ್ಭವಂತೀ ಪ್ರತ್ಯೂಹತೇ ವವ್ರಿಂ । ವವ್ರಿರಿತಿ ರೂಪನಾಮ ವೃಣೋತೀತಿ ಸತಃ । ವರ್ಷೇಣ ಪ್ರಚ್ಛಾದ್ಯ ಪೃಥಿವೀಂ ತತ್ಪುನರಾದತ್ತೇ ।** (ನಿ. ೨-೯)

ಇಲ್ಲಿ ಗೌಃ ಎಂದರೆ ಮಾಧ್ಯಮಿಕಾ ವಾಕ್ಕೆಂದೂ, ಮಾಯುವೆಂದರೆ ಆದಿತ್ಯನೆಂದೂ ಅರ್ಥವಾಗುತ್ತದೆ. ಮೇಘದ ಸ್ವನಿತದಿಂದ ಶಬ್ದವಾದೊಡನೆಯೇ ಅದರಿಂದ ಆವೃತವಾದ ಮಾಧ್ಯಮಿಕಾ ವಾಕ್ಕು ತಾನೂ ಸಹ ಆ ಶಬ್ದವನ್ನು ಅನುಕರಿಸುತ್ತದೆ

ಎಂದಾಗಲಿ ಅಥವಾ ತಾನೂ ಸಹ ಆದಿತ್ಯನಂತೆ ತನ್ನ ಶರೀರವನ್ನು ಪ್ರಕಾಶಮಾನವಾಗಿ ನಿರ್ಮಿಸಿಕೊಳ್ಳುತ್ತಾಳೆ ಎಂದಾಗಲಿ ಅರ್ಥವಾಗುತ್ತದೆ. **ಮಾಯುರಾದಿತ್ಯೋ ಭವತಿ ಸರ್ವ ಭೂತನಿರ್ಮಾತಾ**—ಸಕಲ ಭೂತಗಳ ನಿರ್ಮಾತೃವಾದುದರಿಂದ ಆದಿತ್ಯನಿಗೆ **ಮಾಯು**ವೆಂದು ಹೆಸರೆಂದು ದುರ್ಗಾಚಾರ್ಯರು ವಿವರಿಸಿದ್ದಾರೆ. ಗರ್ಜನೆ ಧ್ವನಿಯುನ್ನುಂಟುಮಾಡುತ್ತಿರುವ ಮೇಘವನ್ನಾಶ್ರಯಿಸಿ ತನ್ನ ಶಬ್ದರೂಪವಾದ ಕರ್ಮಗಳಿಂದ ಮಾನವರನ್ನು ಗದರಿಸುತ್ತಲೂ ಅವರು ಅವರು ನಮ್ರರಾಗಿರುವಂತೆ ಮಾಡುತ್ತಲೂ ಸಹ ತಾನು ವಿದ್ಯುದ್ರೂಪವನ್ನು ಹೊಂದಿ ತನ್ನ ಸ್ವರೂಪವನ್ನು ಮರೆಸಿಕೊಳ್ಳುತ್ತಾಳೆ. **ಪುನರಾಹತ**—ಎಂದರೆ ತನ್ನ ರೂಪವನ್ನು ಪುನಃ ಪಡೆದಳು ಎಂದರೆ ಪೃಥ್ವಿಯನ್ನು ಮೊದಲು ವೃಷ್ಟಿಯಿಂದ ಆಚ್ಛಾದಿತವಾಗುವಂತೆ ಮಾಡಿ ಅನಂತರ ಪುನಃ ಅದೇ ಉದಕವನ್ನು ರಶ್ಮ್ಯಾದಿಗಳಿಂದ ತನ್ನಲ್ಲಿಗೇ ಹಿಂದಕ್ಕೆ ಪಡೆಯುತ್ತಾಳೆ ಎಂದರ್ಥ

**ತತ್ಪುನರಾದತ್ತೇ**—ಎಂಬುದನ್ನು ದುರ್ಗಾಚಾರ್ಯರು ವಿವರಿಸುತ್ತಾ, **ವಿದ್ಯುದಾತ್ಮನಾ ಮೇಘಸ್ಥಾನೇ ಸ್ಥಿತ್ವಾ ವರ್ಷತಿ । ಆದಿತ್ಯಾತ್ಮನಾ ದ್ಯುಸ್ಥಾನೇ ಸ್ಥಿತ್ವಾ ಪುನರಾದತ್ತ ಇತ್ಯಭಿಪ್ರಾಯಃ ।** ವಿದ್ಯುದ್ರೂಪದಲ್ಲಿ ಮೇಘದ ಸ್ಥಾನದಲ್ಲಿದ್ದು ಮಳೆಯನ್ನು ಸುರಿಸಿ ಅನಂತರ ದ್ಯುಲೋಕದಲ್ಲಿ ಆದಿತ್ಯರೂಪದಲ್ಲಿದ್ದು ಅದೇ ಉದಕವನ್ನು ಪುನಃ ಹೀರಿಕೊಳ್ಳುತ್ತಾಳೆ ಎಂದರ್ಥವೆಂದು ತಿಳಿಸಿದ್ದಾರೆ.

ಸಾಯಣರು ಈ ಸಂದರ್ಭದಲ್ಲಿ ಆ ಶಂಕಾಸಮಾಧಾನಗಳನ್ನು ತೋರಿಸಿ ಬಹಳ ವಿಶದವಾಗಿ ವಿವರಿಸಿದ್ದಾರೆ. **ಶಾಕಪೂಣಿರ್ನಾಮ ನಿರುಕ್ತಾಚಾರ್ಯಃ ಸಕಲಮಂತ್ರದೇವತಾ ಜಾನಾಮೀತಿ ಅಭಿಮಾನಿತವಾನ್ ।** ಶಾಕಪೂಣಿಯೆಂಬ ನಿರುಕ್ತಾಚಾರ್ಯರು ಸಕಲ ಮಂತ್ರಗಳ ದೇವತೆಯ ಸ್ವರೂಪವನ್ನೂ ತಾನು ಪೂರ್ಣವಾಗಿ ತಿಳಿಯುವೆನೆಂಬ ಅಭಿಮಾನವನ್ನು ತೋರಿಸಿದರೆಂದೂ ಆಗ ಆ ದೇವತೆಯು ತನ್ನ ಉಭಯಲಿಂಗಾತ್ಮಕವಾದ ಸ್ವರೂಪವನ್ನು ಹೊಂದಿ ಪ್ರಾದುರ್ಭೂತವಾಯಿತೆಂದೂ, ಆಗ ಅವರಿಗೆ ಅದರ ಸ್ವರೂಪವು ತಿಳಿಯದೇ ತನಗೆ ಹೇಳಬೇಕೆಂದು ನಮ್ರತೆಯಿಂದ ಪ್ರಾರ್ಥಿಸಲಾಗಿ ಅವಳು ಪ್ರಕೃತವಾದ ಋಕ್ಕಿನಲ್ಲಿ ನಿರ್ದೇಶಿಸಿರುವ ದೇವತೆಯೆಂದೇ ತಿಳಿ ಎಂದು ಹೇಳಿದಳೆಂದು ಮೇಲೆ ನಿರುಕ್ತಕಾರರು ಹೇಳಿರುವಂತೆಯೇ ತಿಳಿಸಿ ಅನಂತರ ಪ್ರಕೃತವಾದ ಋಕ್ಕಿನ ಅರ್ಥವನ್ನು ವಿವರಿಸುವಾಗ ಸಂಭವಿಸತಕ್ಕ ಆಕ್ಷೇಪಗಳನ್ನು ಒಂದೊಂದಾಗಿ ತಿಳಿಸಿ ತಮ್ಮ ಸಮಾಧಾನಗಳನ್ನೂ ಹೇಳಿದ್ದಾರೆ.

**ದುರ್ಜ್ಞೇಯಸ್ಯ ತತ್ತ್ವಸ್ಯ ಸ್ವರೂಪಮಸೌ ಜಾನಾತಿ ಕಿಲ ಏನಂ ವ್ಯಾಮೋಹಯಾಮೀತಿ ಮನಸಿ ಕೃತ್ವಾ ಸಂದಿಗ್ಧೋಭಯಲಿಂಗದೇವತಾ ಪ್ರಾದುರಾಸೀತ್ ॥** ಆತ್ಮಾಭಿಮಾನದಿಂದ ಕೂಡಿ ದುರ್ಜ್ಞೇಯವಾದ ತತ್ತ್ವವನ್ನು ತಿಳಿಯುವೆನೆಂದು ಪ್ರೌಢಿಮೆಯನ್ನು ತೋರಿದ ಶಾಕಪೂಣಿಯನ್ನು ವ್ಯಾಮೋಹಿತನಾಗುವಂತೆ ಮಾಡುತ್ತೇನೆಂದು ಉದ್ದೇಶಿಸಿ ಸಂದಿಗ್ಧವಾದುದೂ ಉಭಯಲಿಂಗಾತ್ಮಕವಾದುದೂ ಆದ ದೇವತೆಯು ಪ್ರಾದುರ್ಭೂತವಾಯಿತು ಎನ್ನುವಾಗ ಒಂದು ಆಕ್ಷೇಪವು ಬರುತ್ತದೆ.

**ಕಥಮತ್ರ ಉಭಯಲಿಂಗತ್ವಂ ; ವಸ್ತುತಃ ಉಭಯಲಿಂಗತ್ವೇ ಕಥಂ ದೈವತೈಕ್ಯಂ ।** ಇಲ್ಲಿ ಉಭಯಲಿಂಗತ್ವವು ಹೇಗೆ? ಒಂದುವೇಳೆ ಲಿಂಗದ್ವಯಾತ್ಮಕವಾದ ಆಕಾರವಿದ್ದರೆ ಆಗ ಒಂದೇದೇವತೆಯೆಂದು ಹೇಳುವುದು ಹೇಗೆ? ಎಂಬ ಆಶಂಕೆಯು ಇಲ್ಲಿ ಸಹಜವಾಗಿರುತ್ತದೆ ಎಂದು ತಿಳಿಸಿ **ಉಚ್ಯತೇ** ಎಂದು ಅದಕ್ಕೆ ಸಮಾಧಾನವನ್ನು ಈರೀತಿ ಹೇಳಿದೆ. ಇಲ್ಲಿ ಉಭಯಲಿಂಗತ್ವವು ಹೇಗೆಂದರೆ:—

**ಅತ್ರ ಉಭಯಲಿಂಗತ್ವಂ ಉಭಯಥಾ ಸಂಭವತಿ । ಸ್ತ್ರೀಪುಲಿಂಗದ್ವಯೇನ ಮಧ್ಯಮೋತ್ತಮಲಿಂಗದ್ವಯೇನ ಚ ।** ಇಲ್ಲಿ ಉಭಯಲಿಂಗತ್ವವು ಎರಡುವಿಧವಾಗಿರಬಹುದು. ಮೊದಲನೆಯದಾಗಿ ಸ್ತ್ರೀಲಿಂಗ ಮತ್ತು ಪುಲ್ಲಿಂಗ

ಇವುಗಳ ಸಂಯೋಗವಿದ್ದಿರಬಹುದು ಅಥವಾ ಎರಡನೆಯದಾಗಿ ಮಧ್ಯಮೋತ್ತಮಲಿಂಗದ್ವಯವಿರಬಹುದು ಎಂದರೆ ಸ್ಥಾನವನು ಆಕ್ರಮಿಸುವುದರಲ್ಲಿ ಅಪಕರ್ಷ ಮತ್ತು ಉತ್ಕರ್ಷಗಳ ತಾರತಮ್ಯವಿರಬಹುದು. ಅವೂ ಲಿಂಗದ್ವಯವಾಯಿತು ಎಂದು ಹೇಳಿ ಈ ವಿವರಣೆಯೂ ಅಷ್ಟು ವಿಶದವಾಗಿಲ್ಲವೆಂದು ತಿಳಿದು ಉದಾಹರಣೆಗಳನ್ನು ತೋರಿ ಈ ಅಂಶವನ್ನು ಇನ್ನೂ ಪರಿಷ್ಕರಿಸಿದೆ.

'**ಅಯಂ ಸ ಯೇನ**' ಎಂಬ ಪುಲ್ಲಿಂಗವಾಚಕವಾದ ಶಬ್ದದಿಂದ ಮೇಘವು ಪ್ರತೀತವಾಗುತ್ತದೆ. '**ಅಧಿಶ್ರಿತಾ ಸಾ**' ಎಂಬ ವರ್ಣನೆಯಿಂದ ಸ್ತ್ರೀಲಿಂಗಸೂಚಕವಾದ **ಮಾಧ್ಯಮಿಕಾ ವಾಕ್** ಎಂಬ ದೇವತೆಯು ನಿರ್ದಿಷ್ಟವಾಗಿದೆ. ಆದುದರಿಂದ ಉಭಯಲಿಂಗಾತ್ಮಕವಾಯಿತು. ಎರಡನೆಯದಾಗಿ—**ತಥಾ ವಿದ್ಯುದ್ಭವಂತೀತ್ಯಂತಂ ಮಧ್ಯಮಲಿಂಗಂ ತತ್ರ ಮೇಘಸ್ತನಿತಯೋರ್ಮಾಧ್ಯಮಿಕಯೋಃ ಪ್ರತೀತೇಃ ।** ಮಧ್ಯಮಸ್ಥಾನವಾದ ಅಂತರಿಕ್ಷವನ್ನಾಶ್ರಯಿಸಿರುವ ಮೇಘಸ್ಥವಾದ ವಿದ್ಯುದ್ರೂಪದಿಂದ ಪ್ರಕಾಶಿಸುತ್ತಾ ಎಂದು ಹೇಳುವಾಗ ಮಧ್ಯಮಲಿಂಗವನ್ನು ಸೂಚಿಸುತ್ತದೆ. ಮೇಘದ ಶಬ್ದವೂ ಸಹ ಇದೇ ಅಂಶವನ್ನು ಸ್ಥಿರಪಡಿಸುತ್ತದೆ. ಹಾಗೆಯೇ '**ವವ್ರಿವಾಂಹತ**' ಎಂಬುದರಿಂದ ವೃಷ್ಟಿಯಿಂದ ಪೃಥ್ವಿಯನ್ನು ಆಚ್ಛಾದಿತವಾಗುವಂತೆ ಮಾಡಿ ಅನಂತರ ಪುನಃ ಅದನ್ನು ಹಿಂದಕ್ಕೆ ಹೀರುತ್ತಾನೆ ಎನ್ನುವಾಗ ಇದು ಆದಿತ್ಯವ್ಯಾಪಾರವಾಯಿತು. **ಸ ಚ ಆದಿತ್ಯವ್ಯಾಪಾರ ಇತ್ಯುತ್ತಮಲಿಂಗತ್ವಂ ।** ಇದು ಆದಿತ್ಯವ್ಯಾಪಾರವಾದುದರಿಂದ ಉತ್ತಮಲಿಂಗವನ್ನು ಸೂಚಿಸುತ್ತದೆ. ಆದುದರಿಂದ ಸ್ತ್ರೀಪುಲ್ಲಿಂಗದ್ವಯದ ದೃಷ್ಟಿಯಿಂದ ನೋಡಿದರೂ ಉಭಯಲಿಂಗಾತ್ಮಕವಾಗಿದೆ ಅಥವಾ ಮಧ್ಯಮೋತ್ತಮರೂಪವಾದ ಲಿಂಗದ್ವಯದ ದೃಷ್ಟಿಯಿಂದ ನೋಡಿದರೂ ಸಹ ಇಲ್ಲಿನ ದೇವತೆಯು ಉಭಯಲಿಂಗಾತ್ಮಕವಾಗಿದೆ. ಯಾವಾಗ ಉಭಯಲಿಂಗತ್ವವು ಸಿದ್ಧವಾಯಿತೋ ಆಗ **ಉಭಯಲಿಂಗತ್ವಪ್ರತೀತೇಃ ಉಭೇ ಅಪಿ ದೇವತೇ 'ಯಲ್ಲಿಂಗಂ ಸಾ ದೇವತಾ'** ಯಾವ ಲಿಂಗವಿದೆಯೋ ಆ ಲಿಂಗದಿಂದ ಸೂಚಿತವಾಗುವ ದೇವತೆಯು ಇತರ ದೇವತೆಗಿಂತಲೂ ಬೇರೆಯಾದುದು ಎಂದು ನಿಯಮವಿರುವಂತೆ ಇಲ್ಲಿ ಲಿಂಗದ್ವಯವಿರುವುದರಿಂದ **ದೇವತಾದ್ವಯವಾಯಿತು. ಅತಃ ಕಥ ಏಕದೇವತಾಸಿದ್ಧಿಃ**—ಆದುದರಿಂದ ಇಲ್ಲಿ ಏಕದೇವತಾಸಿದ್ಧಿಯು ಹೇಗೆ? ಪ್ರಕೃತವಾದ ಋಕ್ಕಿನಲ್ಲಿ ನಿರ್ದಿಷ್ಟವಾಗಿರುವುದು ಒಂದೇ ದೇವತೆಯೆಂದು ಹೇಳುವುದು ಹೇಗೆ? ಎಂಬ ಆಕ್ಷೇಪವು ನ್ಯಾಯವಾಗಿದೆ ಎಂದು ತಿಳಿಸಿ ಅನಂತರ ಆ ಆಕ್ಷೇಪಕ್ಕೂ ಸಮಾಧಾನವನ್ನು ಹೇಳಿ ಪ್ರಕೃತವಾದ ಋಕ್ಕಿನಲ್ಲಿ ಏಕದೇವತಾತ್ವವನ್ನೇ ನಿರ್ದೇಶಿಸಿದೆಯೆಂದು ಸಮರ್ಥಿಸುತ್ತಾರೆ. ಅದು ಹೇಗೆಂದರೆ—

**'ಅಯಂ ಸ ಯೇನ' ಇತ್ಯೇತೇಷಾಂ ವ್ಯತ್ಯಯಾಶ್ರಯಣೇನ ಸರ್ವದೇವತಾನಾಂ ಅಧಿಷ್ಠಾತ್ರಿಕಾಯಾಃ ಏಕತ್ವಾಶ್ರಯಣೇನ ವಾ ಸರ್ವಫಲದಾತೃತ್ವೇನ ಏಕತ್ವಾಶ್ರಯಣೇನ ವಾ ದೇವತೈಕ್ಯೋಪಪತ್ತೇಃ ।** ಇಲ್ಲಿ ವಿದ್ಯುತ್, ಆದಿತ್ಯ, ಮೇಘ ಇತ್ಯಾದ್ಯಾಕಾರಗಳಿಂದ ಬೇರೆ ಬೇರೆಯಾದ ರೂಪಗಳಿದ್ದರೂ ಸಹ ಎಲ್ಲಾ ರೂಪಗಳಿಗೂ ಆಧಾರವು ಒಂದೇ ದೇವತೆಯು. ಇಲ್ಲಿ ವ್ಯಾವಹಾರಿಕವಾದ ಸಂದರ್ಭಗಳಿಂದ ರೂಪಗಳನ್ನು ಬೇರೆ ಬೇರೆಯಾಗಿ ಹೊಂದಿ ಲಿಂಗವ್ಯತ್ಯಾಸವನ್ನು ಸೂಚಿಸುತ್ತಿದ್ದರೂ ಸಹ "**ಏಕೈವ ವಾ ಮಹಾನಾತ್ಮಾ ದೇವತಾ**" ಎಲ್ಲಕ್ಕೂ ಆತ್ಮಭೂತವಾದುದು ಒಂದೇ ದೇವತೆಯು ಎಂಬ ವಾಕ್ಯದಲ್ಲಿ ಹೇಳಿರುವಂತೆ ಇಲ್ಲಿಯೂ ಸಹ ಎಲ್ಲಾ ರೂಪಗಳಲ್ಲಿರುವ ದೇವತಾವಿಶೇಷಗಳಿಗೂ ಮೂಲದೇವತೆಯು ಒಂದೇ ಅಧಿಷ್ಠಾನವು. ಆದುದರಿಂದ ಇಲ್ಲಿ ಲಿಂಗಭೇದವು ದೇವತಾಭೇದವನ್ನು ತೋರಿಸುವುದಿಲ್ಲ ಎಂದು ಸಮಾಧಾನವನ್ನು ತಿಳಿಸಿದೆ. ಅದು ಹೇಗೆಂದರೆ:—

**ಅಯಂ ಸ ಶಿಂಕ್ತೇ** ಎಂದರೆ, ಈ ಮಾಧ್ಯಮಿಕವಾಕ್ಕಿಗೆ ಅಧಿಷ್ಠಾತ್ರಿಯಾದ ದೇವತೆಯು ಅವ್ಯಕ್ತವಾದ ಧ್ವನಿಯನ್ನುಂಟುಮಾಡುತ್ತಾನೆಂಬರ್ಥ. **ಯೇನ ಗೌರಭೀವೃತಾ । ಗೌರಿತಿ ವಾಙ್ನಾಮ । ಮಾಧ್ಯಮಿಕಾ ವಾಕ್ ಯಯಾ ಅಭಿವೃತಾ ಅಭಿತೋ ವ್ಯಾಪ್ತಾ, ಅಧಿಷ್ಠಿತಾ ।** ಇಲ್ಲಿ **ಯೇನ** ಎನ್ನುವುದಕ್ಕೆ ಲಿಂಗವ್ಯತ್ಯಯವಾಗಿ **ಯಯಾ** ಎಂದಾ

ಗುತ್ತದೆ. ಎಂದರೆ ಯಾವ ಈ ಅಧಿಷ್ಠಾತ್ರೀರೂಪವಾದ ದೇವತೆಯಿಂದ ಮಾಧ್ಯಮಿಕ ವಾಕ್ಕು ಸುತ್ತುವರಿಯಲ್ಪಟ್ಟಿದೆಯೋ **ಅಂತಹ ಸಾ ಇಯಂ ಶಿಂಕ್ತೇ** ಎಂದರ್ಥ.

ಅಥವಾ, **ಅಯಂ ಸ ಶಿಂಕ್ತ ಇತಿ ನೈವ ಮಾಧ್ಯಮಿಕಾ ವಾಕ್ ನಿರ್ದಿಶ್ಯತೇ ಅಪಿ ತು ಮೇಘಃ ।** ಇಲ್ಲಿ **ಅಯಂ** ಎಂದಿರುವುದರಿಂದ ಮಾಧ್ಯಮಿಕವಾಕ್ಕಲ್ಲ; ಮೇಘವು ಧ್ವನಿಮಾಡುತ್ತದೆ ಎಂದೇ ಅರ್ಥವೆಂದು ಹೇಳಿದರೆ ಅದೂ ಆಗಬಹುದು. ಅದು ಔಪಚಾರಿಕವಾದ ಮಾತಾಗುತ್ತದೆ. ಹೇಗೆಂದರೆ **ಮಂಚಾಃ ಕ್ರೋಶಂತಿ** ಎನ್ನುವಾಗ ಮಂಚಸ್ಥರಾದ ಪುರುಷರು ಕೂಗಿಕೊಳ್ಳುತ್ತಾರೆ ಎನ್ನುವುದರ ಬದಲು ಮಂಚಗಳೇ ಕೂಗಿಕೊಳ್ಳುತ್ತವೆ ಎಂದು ಹೇಳುವುದು ವಾಡಿಕೆಯಾಗಿದೆ. ಆದರಂತೆ ಇಲ್ಲಿಯೂ ಸಹ ಮೇಘಸ್ಥವಾದ ದೇವತೆಯು ಶಬ್ದವನ್ನು ಮಾಡುತ್ತದೆ ಎನ್ನುವುದಕ್ಕೆ ಬದಲಾಗಿ ಮೇಘವೇ ಶಬ್ದಮಾಡುತ್ತದೆ ಎಂದಿದೆ. ಆದುದರಿಂದ ಇಲ್ಲಿ ತಾತ್ತ್ವಿಕವಾದ ದೋಷವೇನೂ ಇರುವುದಿಲ್ಲ ಎಂದು ರೂಪಭೇದಗಳಿದ್ದರೂ ಆ ಎಲ್ಲಾ ರೂಪಗಳಲ್ಲಿಯೂ ಐಕಾತ್ಮ್ಯವನ್ನು ಪ್ರಕಾಶಪಡಿಸಿರುವ ಈ ದೇವತೆಯು ಉತ್ಪನ್ನಮಾಡುವ ಧ್ವನಿವಿಶೇಷವನ್ನು ಈರೀತಿ ವರ್ಣಿಸಿದೆ.

**ಶಬ್ದನೇ ಪ್ರಕಾರ ಏವೋಚ್ಯತೇ**—ಈ ಶಬ್ದದ ಪ್ರಕಾರವು ಹೇಗೆಂದರೆ

**ಮಿಮಾತಿ ಮಾಯುಂ— ಸ್ತನಿತಲಕ್ಷಣಂ ಶಬ್ದಂ ಕರೋತಿ ।** ಗುಡುಗಿನ ರೂಪದ ಶಬ್ದವನ್ನು ಮಾಡುತ್ತದೆ **ಅಥವಾ ಅಯಂ ಲುಪ್ತೋಪಮಾ । ಮಿನೋತಿ ಸ್ವತೇಜಃ ಸರ್ವತ್ರ ಪ್ರಕ್ಷಿಪತೀತಿ ಮಾಯುರಾದಿತ್ಯಃ । ತಮಿನ ಅತಿದೀಪ್ತಂ ಕರೋತೀತ್ಯರ್ಥಃ ।** ಅಥವಾ ಇಲ್ಲಿ ಲುಪ್ತೋಪಮೆಯನ್ನು ತೋರಿಸಿ ಅರ್ಥಮಾಡಬಹುದು ಹೇಗೆಂದರೆ ತನ್ನ ತೇಜಸ್ಸನ್ನು ಸರ್ವತ್ರ ಹರಡುವುದರಿಂದ ಆದಿತ್ಯನಿಗೆ **ಮಾಯು**ವೆಂದು ಹೆಸರು. ಈ ದೇವತೆಯೂ ಸಹ **ಮಾಯು**ವಿನಂತೆ ತನ್ನ ರೂಪವನ್ನು ಅತ್ಯಂತ ಪ್ರಕಾಶಮಾನವಾದುದನ್ನಾಗಿ ಮಾಡುತ್ತಾಳೆಂದರ್ಥ ಅಥವಾ ತನ್ನ ರೂಪವನ್ನು ಆದಿತ್ಯಸದೃಶವಾದುದನ್ನಾಗಿಯೇ ಮಾಡುತ್ತಾಳೆಂದೂ ಅರ್ಥವಾಗಬಹುದು. **ಕುತ್ರೆ ಸ್ಥಿತಾ** ಎಂದು ಪ್ರಶ್ನಿಸಿ,

**ಧ್ವಸನಾವಧಿ ಶ್ರಿತಾ । ಧ್ವಂಸನೇ ಮೇಘೇಽಧಿಶ್ರಿತಾ ।** ಮೇಘದಲ್ಲಿ ತನ್ನ ಸ್ಥಾನವನ್ನಾಕ್ರಮಿಸಿದವಳಾಗಿ ಎಂದು ಅಧಿಷ್ಠಾನವನ್ನು ತೋರಿಸಿದೆ. ಅಂತಹ ದೇವತೆಯು **ಚಿತ್ತಿಭಿಃ ಮರ್ತ್ಯಂ ನಿ ಚಕಾರ** ಎಂದಿದೆ. **ಚಿತ್ತಿಭಿಃ ಕರ್ಮನಾಮೈತತ್ ಸ್ವಕರ್ಮಭಿಃ ವೃಷ್ಟಿರೂಪೈಃ ಮರ್ತ್ಯಂ ಮರಣಧರ್ಮಾಣಂ ಸ್ಥಾವರಜಂಗಮರೂಪಂ ಕೃತ್ಸ್ನಂ ಜಗತ್ ನಿ ಹಿ ಚಕಾರ ನೀಚೈಃ ಕರೋತಿ । ಮನುಷ್ಯಾನ್ ಪ್ರಣತಾನ್ ಕರೋತಿ । ಓಷಧ್ಯಾದಿಕಂ ಫಲೇನ ಅವನತಂ ಕರೋತಿ ।** ವೃಷ್ಟಿರೂಪವಾದ ತನ್ನ ಕರ್ಮಗಳಿಂದ [ಚಿತ್ತಿಭಿಃ ಎಂದರೆ ಕರ್ಮಗಳಿಂದ ಎಂದರ್ಥ] ಸ್ಥಾವರಜಂಗಮಾತ್ಮಕವಾದ ಸಮಸ್ತ ಜಗತ್ತನ್ನೂ ಸಹ ಅವನತವಾಗುವಂತೆ ಮಾಡುತ್ತಾಳೆ. ಮಾನವರನ್ನು ಪ್ರಣತರನ್ನಾಗಿಯೂ, ಓಷಧ್ಯಾದಿಗಳನ್ನು ಫಲಸಮೃದ್ಧಿಯಿಂದ ಅವನತವಾಗುವಂತೆಯೂ ಮಾಡುತ್ತಾಳೆಂದರ್ಥ ಅಥವಾ **ಚಿತ್ತಿಭಿಃ ದ್ಯೋತನಲಕ್ಷಣೈಃ ಕರ್ಮಭಿಃ ।** ದ್ಯೋತನರೂಪವಾದ ಕರ್ಮಗಳಿಂದ ಎಂದರ್ಥ. ಮೊದಲು ತನ್ನ ವಿದ್ಯುದ್ರೂಪವಾದ ಪ್ರಕಾಶದಿಂದ ಪ್ರಾದುರ್ಭೂತವಾಗಿ ಅನಂತರ ಪುನಃ ತನ್ನ ರಶ್ಮಿಗಳ ದ್ವಾರಾ ಉದಕವನ್ನು ಹೀರಿ ಧರಿಸಿ ತನ್ನ ಸಹಜವಾದ ರೂಪವನ್ನು ಧರಿಸುತ್ತಾಳೆಂದರ್ಥ. ಆದುದರಿಂದ ಇಲ್ಲಿ ಜ್ಯೋತೀರೂಪವಾದ ಒಂದೇ ದೇವತೆಯು ಮೂರು ವಿಧವಾದ ರೂಪಗಳನ್ನು ಧರಿಸುತ್ತಾಳೆಂದರ್ಥ. ಅದು ಹೇಗೆಂದರೆ—

**ಸ್ತೋಮೇನ ಹಿ ದಿವಿ ದೇವಾಸೋ ಅಗ್ನಿಮಜೀಜನಞ್ಛಕ್ತಿಭೀ ರೋದಸಿಪ್ರಾಂ ।**
**ತಮೂ ಅಕೃಣ್ವನ್‌ತ್ರೇಧಾ ಭುವೇ ಕಂ ಸ ಓಷಧೀಃ ಪಚತಿ ವಿಶ್ವರೂಪಾಃ ॥**

(ಋ. ಸಂ. ೧೦-೮೮-೧೦)

ದೇವತೆಗಳು ತಮ್ಮ ಸ್ತೋಮರೂಪವಾದ ಸ್ತೋತ್ರದ ಸಹಾಯದಿಂದ ದ್ಯಾವಾಪೃಥಿವಿಗಳಲ್ಲೆಲ್ಲಾ ವ್ಯಾಪಕನಾದ ಅಗ್ನಿಯನ್ನು ಮೂರು ರೂಪಗಳಿಂದ ಪ್ರಕಾಶಿಸುವಂತೆ ಮಾಡಿದರು. ಒಂದೇ ದೇವತೆಯು ಪೃಥಿವಿಯಲ್ಲಿಯೂ, ಅಂತರಿಕ್ಷದಲ್ಲಿಯೂ, ದ್ಯುಲೋಕದಲ್ಲಿಯೂ ಸಹ ಪಾರ್ಥಿವಾಗ್ನಿ, ವಿದ್ಯುತ್ ಮತ್ತು ಆದಿತ್ಯ ಎಂಬ ಈ ಮೂರು ರೂಪಗಳಿಂದ ಪ್ರಕಾಶಿಸುತ್ತಾನೆ ಎಂದು ಹೇಳಿರುವಂತೆ ಅದೇ ಅಂಶವನ್ನು ಪ್ರಕೃತವಾದ ಋಕ್ಕಿನಲ್ಲಿಯೂ ಹೇಳಿದೆಯೆಂದು ಸಾಯಣರು ವಿವರಿಸಿದ್ದಾರೆ.

ಒಟ್ಟಿನಲ್ಲಿ ಈ ಋಕ್ಕಿಗೆ ಎರಡು ವಿಧವಾದ ವಿವರಣೆಯನ್ನು ಮಾಡಿದಂತಾಗಿದೆ. ಲೌಕಿಕವಾದ ಅರ್ಥವನ್ನು ಹೇಳುವಾಗ ಲೌಕಿಕವಾದ ಧೇನು ಮತ್ತು ಅದರ ವತ್ಸವನ್ನು ನಿರ್ದೇಶಿಸಿ ಅವುಗಳ ಪರಸ್ಪರವಾದ ವಾತ್ಸಲ್ಯವನ್ನು ವರ್ಣಿಸಿ, ಅವುಗಳ ಪರಸ್ಪರ ಸೂಚಕವಾದ ಧ್ವನಿಪ್ರತಿಧ್ವನಿಗಳಿಂದ ಮಾನವರ ಪ್ರೇಮಕ್ಕಿಂತಲೂ ಅತಿಶಯವಾದ ವಾತ್ಸಲ್ಯವನ್ನು ತೋರಿಸುತ್ತದೆಯೆಂದು ವಿವರಿಸಿದೆ. ಎರಡನೆಯದಾಗಿ, ಋಕ್ಕಿನ ರಹಸ್ಯಾರ್ಥವನ್ನು ಹೇಳುವಾಗ " **ಅಯಂ ಸ ಶಿಂಕ್ತೇ ಯೇನ ಗೌರಭೀವೃತಾ** " ಇತ್ಯಾದಿವರ್ಣನೆಗಳಿಂದ ವ್ಯಕ್ತಿದ್ವಯವು ಸೂಚಿತವಾಗುವುದಿಲ್ಲವೆಂದೂ ಇಲ್ಲಿರುವ ವರ್ಣನೆಗಳೆಲ್ಲವೂ ಏಕದೇವತಾಪರವೆಂದೂ, ಆ ಒಂದೇ ದೇವತೆಯ ರೂಪಭೇದಗಳನ್ನು ಮಾತ್ರ ಸೂಚಿಸುತ್ತಿವೆಯೆಂದೂ ಆ ದೇವತೆಯು ಲೋಕರಕ್ಷಕವಾದ ಕರ್ಮಗಳಿಂದ ಮಾನವಾದಿಸಕಲಭೂತಗಳೂ ಪ್ರಣತವಾಗುತ್ತವೆಯೆಂದೂ, ತಿಳಿಸಿದೆ. ಈ ಸಂದರ್ಭದಲ್ಲಿ ಶಾಕಪೂಣಿಯವರ ಅನುಭವವಿಶೇಷಗಳನ್ನು ಆನುಷಂಗಿಕವಾಗಿ ತಿಳಿಸುವಾಗ ವಿಷಯವು ಎಷ್ಟೇ ಕಠಿನವಾಗಿದ್ದರೂ, ಸಾಯಣರು ತಮ್ಮ ಸಹಜವಾದುದೂ ಉತ್ತಮವಾದುದೂ ಆದ ಶೈಲಿಯಿಂದ ಪಾರಿಭಾಷಾತ್ಮಕವಾದ ವಿಮರ್ಶೆಯನ್ನೂ ಸಹ ಬಹಳ ವಿಶದವಾಗಿ ತಿಳಿಯಪಡಿಸಿದ್ದಾರೆ. ಋಕ್ಸಂಹಿತೆಯಲ್ಲಿ ನಿರ್ದಿಷ್ಟವಾಗಿರುವ ದೇವತೆಗಳಲ್ಲಿ ಆಕಾರಭೇದವಿದ್ದರೂ ತಾತ್ವಿಕವಾದ ಐಕ್ಯವಿದೆಯೆಂದು ತೋರಿಸುವ ಅನೇಕ ಸನ್ನಿವೇಶಗಳಲ್ಲಿ ಪ್ರಕೃತವಾದ ಋಕ್ಕಿನ ವರ್ಣನವೂ ಒಂದಾಗಿದೆ. ಆಧ್ಯಾತ್ಮಿಕವಾದ ದೃಷ್ಟಿಯಿಂದ ಈ ದೇವತಾ ಸ್ವರೂಪವೇನು? ಜ್ಞಾನಸಾಧನವಾದ ಕರ್ಮಕ್ಕೂ, ಕರ್ಮಸಾಧ್ಯವಾದ ಈ ದೇವತಾಜ್ಞಾನಕ್ಕೂ ಯಾವ ಸಂಬಂಧವಿದೆ? ಇಲ್ಲಿ ಯಾವವಿಧವಾದ ಕರ್ಮವು ನಿರ್ದೇಶಿಸಲ್ಪಟ್ಟಿದೆ? ಆ ಕರ್ಮದ ವೈಶಿಷ್ಟ್ಯವೇನು? ಎಂಬುದನ್ನು ತಿಳಿಯಬೇಕಾದುದು ಅತ್ಯವಶ್ಯವಾಗಿರುತ್ತದೆ.

**ಪ್ರವರ್ಗ್ಯೇ ಘರ್ಮಧುಗಾಹ್ವಾನಕಾಲೇ 'ಉಪ ಹ್ವಯೇ' ಇತ್ಯಾದಿಕೇ ದ್ವೇ ಋಚೌ । 'ಉಪ ಹ್ವಯೇ ಸುದುಘಾಂ ಧೇನುಮೇತಾಮಿತಿ ದ್ವೇ' (ಆಶ್ವ. ಶ್ರೌ. ೪-೭) ಇತಿ ಸೂತ್ರಿತತ್ವಾತ್ । ಪ್ರವರ್ಗ್ಯೇಽಭಿಷ್ಟುವೇ ದೋಹನಸಮಯೇ ವತ್ಸೇ ಮಾತುಃ ಸಕಾಶಾದಪನೀಯಮಾನೇ "ಗೌರಮೀಮೇತ್" ಇತ್ಯೇಷಾ । ಸೂತ್ರಿತಂ ಚ "ಗೌರಮೀಮೇದನು ವತ್ಸಂ ಮಿಷಂತಂ ನಮುಸೇದುಪ ಸೀದತ" (ಅಶ್ವ. ಶ್ರೌ. ೪-೭) ಇತಿ ಚ ।** ಎಂದರೆ ಇದೇ ಸೂಕ್ತದಲ್ಲಿ **'ಉಪಹ್ವಯೇ ಸದುಘಾಂ'; (೨೬) 'ಹಿಙ್ಕೃಣ್ವತೀ' (೨೭)** 'ಗೌರಮೀಮೇತ್' (೨೮) ಎಂಬ ಋಕ್ಕುಗಳು ಸೋಮಯಾಗಾಂಗವಾದ ಪ್ರವರ್ಗ್ಯಯಾಗದ ಕಾಲದಲ್ಲಿ ಪಠಿಸಬೇಕಾದುದು ಎಂದು ಆಶ್ವಲಾಯನರು ಈ ಋಕ್ಕುಗಳ ವಿನಿಯೋಗವನ್ನು ತಿಳಿಸಿದ್ದಾರೆ. ಆ ಪ್ರವರ್ಗ್ಯಯಾಗದ ಮಹತ್ತ್ವವೇನು? ಅಲ್ಲಿ ಉಪಯುಕ್ತವಾಗಿರುವ ಈ ಮಂತ್ರಗಳ ತಾತ್ತ್ವಿಕವಾದ ಅರ್ಥವೇನು? ಎಂಬುದನ್ನು ಮುಖ್ಯವಾಗಿ ತಿಳಿಯಬೇಕು.

## ಪ್ರವರ್ಗ್ಯಯಾಗದ ಸ್ವರೂಪ ಮತ್ತು ಮಹತ್ತ್ವ

**ಉಪ ಹ್ವಯೇ ಸುದುಘಾಂ ಧೇನುಮೇತಾಂ ಸುಹಸ್ತೋ ಗೋಧುಗತ ದೋಹ-**
**ದೇನಾಂ । ಶ್ರೇಷ್ಠಂ ಸವಂ ಸವಿತಾ ಸಾವಿಷನ್ನೋಽಭಿದ್ಧೋ ಘರ್ಮಸ್ತದು ಷು ಪ್ರ ವೋಚಂ ॥**

**(ಋ. ಸಂ. ೧-೧೬೪-೨೬)**

ಒಂಬ ಋಕ್ಕಿನಲ್ಲಿ **ಶ್ರೇಷ್ಠಂ ಸವಂ** ಎಂದರೆ ಪ್ರಶಸ್ಯವಾದ ಸೋಮಯಾಗವನ್ನು ಎಂದೂ, **ಘರ್ಮಃ** ಎಂಬುದಕ್ಕೆ **ಪ್ರವರ್ಗ್ಯ**ವೆಂದೂ ಅರ್ಥಮಾಡಿದೆ ಮತ್ತು ಶ್ರೇಷ್ಠವಾದ ಸೋಮಯಾಗಕ್ಕಾಗಿ ಪ್ರವರ್ಗ್ಯವು ದೀಪ್ತವಾಗಲಿ ಎಂದು ಪ್ರವರ್ಗ್ಯವು ಸೋಮಯಾಗದ ಅಂಗವು ಮತ್ತು ತದಂಗವಾಗಿ ಅದರ ಪೂರ್ವಭಾವಿಯಾದ ಕರ್ಮವು ಎಂದು ತಿಳಿಸಿದೆ. ಶ್ರೌತಸೂತ್ರಗಳ ವಿವರಣೆಯಿಂದಲೂ ಪ್ರವರ್ಗ್ಯವು ಪ್ರಧಾನವಾದ ಮತ್ತು ಸ್ವತಂತ್ರವಾದ ಕರ್ಮವಲ್ಲವೆಂದೂ ತಿಳಿಯುತ್ತದೆ. ಆದರೆ ತೈತ್ತಿರೀಯಾರಣ್ಯಕದಲ್ಲಿಯೂ, ಶತಪಥಾದಿ ಬ್ರಾಹ್ಮಣಗಳಲ್ಲೂ ಉಕ್ತವಾಗಿರುವ ಈ ಪ್ರವರ್ಗ್ಯಯಾಗದ ಪ್ರಶಂಸೆಯನ್ನು ಪರಿಶೀಲಿಸಿದರೆ ದೇಹಕ್ಕೆಲ್ಲಾ ಶಿರಸ್ಸೇ ಪ್ರಧಾನವಾದ ಅಂಗವಾಗಿರುವಂತೆ ಕರ್ಮಗಳಿಗೆಲ್ಲಾ ಪ್ರವರ್ಗ್ಯವೇ ಶಿರೋರೂಪವಾದ ಕರ್ಮವೆಂದು ಸ್ತುತಿಸಿರುವುದು ವೇದ್ಯವಾಗುತ್ತದೆ. ಯಜ್ಞಕ್ಕೆ ನಿಜವಾದ ಯಜ್ಞಫಲವು ಲಭಿಸಬೇಕಾದರೆ, ಶಿರೋರೂಪವಾದ ಈ ಕರ್ಮದ ಆಚರಣೆಯು ಅತ್ಯವಶ್ಯವಾದುದು. ಈ ಕರ್ಮದ ಆಚರಣೆಯಿಲ್ಲದಿದ್ದರೆ ಯಜ್ಞಫಲವೇ ಲಭಿಸುವುದಿಲ್ಲ ಎಂದು ಇದರ ಪ್ರಾಧಾನ್ಯವನು ಹೇಳತಕ್ಕ ಒಂದು ಕಥೆಯು ತೈತ್ತಿರೀಯಾರಣ್ಯಕದಲ್ಲಿ ಉಕ್ತವಾಗಿದೆ.

> **ತಗ್ಂಸ್ತ್ರೇತಂ ದೇವತಾಸ್ತ್ರೇಧಾ ವ್ಯಗೃಹ್ಣತ । ಅಗ್ನಿಃ ಪ್ರಾತಃಸವನಂ । ಇಂದ್ರೋ ಮಾಧ್ಯಂದಿನಗ್ಂ ಸವನಂ । ವಿಶ್ವೇ ದೇವಾಸ್ತೃತೀಯಸವನಂ । ತೇನಾಪಶೀರ್ಷ್ಣಾ ಯಜ್ಞೇನ ಯಜಮಾನಾಃ । ನಾಶಿಷೋಽವಾರುಂಧತ । ನ ಸುವರ್ಗಂ ಲೋಕಮಭ್ಯಜಯನ್ ॥**
>
> (ತೈ. ಆ. ೫-೧-೬)

'**ಯಜ್ಞೋ ವೈ ದೇವೇಭ್ಯ ಉದಕ್ರಾಮತ್**' ಇತ್ಯಾದಿಯಾಗಿ ಐತರೇಯ ಬ್ರಾಹ್ಮಣದಲ್ಲಿ ವರ್ಣಿತವಾಗಿರುವಂತೆ ಪ್ರವರ್ಗ್ಯರೂಪವಾದ ಯಜ್ಞವು ದೇವತೆಗಳಿಂದ ಹಿಂಸಿತವಾದಾಗ, ಅಗ್ನ್ಯಾದಿದೇವತೆಗಳು ಪ್ರವರ್ಗ್ಯಾಖ್ಯವಾದ ಶಿರೋರಹಿತವಾದ ಯಜ್ಞದಲ್ಲಿ ಅಗ್ನಿಯು ಪ್ರಾತಃಸವನವನ್ನೂ, ಇಂದ್ರನು ಮಾಧ್ಯಂದಿನಸವನವನ್ನೂ ಮತ್ತು ವಿಶ್ವೇದೇವತೆಗಳು ತೃತೀಯಸವನವನ್ನೂ ಮತ್ತು ವಿಶ್ವೇದೇವತೆಗಳು ತೃತೀಯಸವನವನ್ನೂ ಗ್ರಹಣಮಾಡಿದರು. ಆದರೂ ಸಹ ಪ್ರವರ್ಗ್ಯಾಖ್ಯವಾದುದೂ, ಯಜ್ಞಗಳಿಗೆ ಶಿರೋರೂಪವಾದುದೂ ಆದ ಈ ಯಜ್ಞವು ಅಲ್ಲಿ ಅದೃಶ್ಯವಾಗಿದ್ದುದರಿಂದ ದೇವತೆಗಳು ತಮ್ಮ ಅಭೀಷ್ಟವಾದ ಯಜ್ಞಫಲವನ್ನು ಪಡೆಯಲಾಗಲಿಲ್ಲ. ಸ್ವರ್ಗಲೋಕವನ್ನು ಪಡೆಯಲೂ ಆಗಲಿಲ್ಲ. ಆಗ,

> **ತೇ ದೇವಾ ಅಶ್ವಿನಾವಬ್ರುವನ್ । ಭಿಷಜೌ ವೈ ಸ್ಥಃ । ಇದಂ ಯಜ್ಞಸ್ಯ ಶಿರಃ ಪ್ರತಿಧತ್ತಮಿತಿ । ತಾವಬ್ರೂತಾಂ ವರಂ ವೃಣಾವಹೈ । ಗ್ರಹ ಏವ ನಾವತ್ರಾಪಿ ಗೃಹ್ಯತಾಮಿತಿ । ತಾಭ್ಯಾಮೇತಮಾಶ್ವಿನಮಗೃಹ್ಣನ್ । ತಾವೇತದ್ಯಜ್ಞಸ್ಯ ಶಿರಃ ಪ್ರತ್ಯಧತ್ತಾಂ । ಯತ್ಪ್ರವರ್ಗ್ಯಃ । ತೇನ ಸಶೀರ್ಷ್ಣಾ ಯಜ್ಞೇನ ಯಜಮಾನಾಃ । ಅವಾಶಿಷೋಽರುಂಧತ । ಅಭಿ ಸುವರ್ಗಂ ಲೋಕಮಜಯನ್ ॥**
>
> (ತೈ. ಆ. ೫-೧-೬, ೭)

ಆ ದೇವತೆಗಳು ದೇವವೈದ್ಯರುಗಳಾದ ಅಶ್ವಿನೀದೇವತೆಗಳನ್ನು ಸಮೀಪಿಸಿ "ನೀವು ಭಿಷಕ್ಕುಗಳಾಗಿದ್ದೀರಿ. ಯಜ್ಞಶಿರಸ್ಸಾದ ಪ್ರವರ್ಗ್ಯವನ್ನು ಪುನಃ ಸವನತ್ರಯಾತ್ಮಕವಾದ ಯಜ್ಞದೇಹದೊಡನೆ ಸೇರಿಸಿರಿ" ಎಂದು ಪ್ರಾರ್ಥಿಸಿದಾಗ ಅವರು ತಮಗೂ ಯಜ್ಞಫಲದ ಭಾಗಾರ್ಹತ್ವವನ್ನು ಸಂಪಾದಿಸಿಕೊಂಡು ದೇವತೆಗಳ ಪ್ರಾರ್ಥನೆಯನ್ನು ನೆರವೇರಿಸಿದರು. ಆಗ ಪುನಃ ಶಿರೋಯುಕ್ತವಾದ ಯಜ್ಞವನ್ನು ಸಂಪಾದಿಸಿ ದೇವತೆಗಳು ತಮ್ಮ ಅಭೀಷ್ಟವನ್ನು ಪಡೆದರು ಎಂದು ಪೂರ್ವಕಥೆಯನ್ನು ತಿಳಿಸಿ ಅನಂತರ,

**ಯತ್ಪ್ರವರ್ಗ್ಯಂ ಪ್ರವೃಣಕ್ತಿ । ಯಜ್ಞಸ್ಯೈವ ತಚ್ಛಿರಃ ಪ್ರತಿದಧಾತಿ । ತೇನ ಸಶೀರ್ಷ್ಣಾ ಯಜ್ಞೇನ ಯಜಮಾನಃ । ಅವಾಶಿಷೋ ರುಂಧೇ । ಅಭಿ ಸುವರ್ಗಂ ಲೋಕಂ ಜಯತಿ । ತಸ್ಮಾದೇಷ ಆಶ್ವಿನಪ್ರವಯಾ ಇವ । ಯತ್ಪ್ರವರ್ಗ್ಯಃ ॥** (ತೈ. ಆ. ೫-೧-೭)

ಹೀಗೆ ದೇವತೆಗಳೂ ಸಹ ಪ್ರಧಾನವೆಂದು ಪೂಜಿಸಿದ ಪ್ರವರ್ಗ್ಯಾಖ್ಯವಾದ ಕರ್ಮಾಚರಣೆಯಿಂದ ಯಜಮಾನನು ತನ್ನ ಅಭೀಷ್ಟವನ್ನು ಸಾಧಿಸುವನು ಮತ್ತು ಸ್ವರ್ಗಲೋಕವನ್ನು ಪಡೆಯುವನು ಎಂದು ಇದರ ಮಹತ್ವವನ್ನು ಪ್ರಶಂಸಿಸಿದೆ. ಆಶ್ವಿನ ಮಂತ್ರಗಳೂ, ಅಶ್ವಿನೀದೇವತೆಗಳ ಪ್ರಾಶಸ್ತ್ಯವೂ ಈ ಕರ್ಮಕಾಲದಲ್ಲಿ ಪ್ರಧಾನವಾಗಿರುತ್ತದೆಯಾದ್ದರಿಂದ ಇದಕ್ಕೆ "**ಅಶ್ವಿನ-ಪ್ರವಯಾಃ**" ಎಂಬ ಪರ್ಯಾಯನಾಮವೂ ಇರುತ್ತದೆ. ಇದೇ ಅಂಶವನ್ನು,

**ದುಹಾಮಶ್ವಿಭ್ಯಾಂ ಪಯೋ ಅಘ್ನ್ಯೇಯಂ ಸಾ ವರ್ಧತಾಂ ಮಹತೇ ಸೌಭಗಾಯ ॥**
(ಋ. ಸಂ. ೧-೧೬೪-೨೭)

ಎಂದು ಇದೇ ಸೂಕ್ತದ ೨೭ ನೇ ಋಕ್ಕಿನಲ್ಲಿ ತಿಳಿಸಿದೆ. ಆದುದರಿಂದ ಪ್ರವರ್ಗ್ಯವು ಅಂಗಯಜ್ಞವೆಂದು ಪರಿಗಣಿತವಾಗಿದ್ದರೂ ಸಹ ಇದರ ಪ್ರಾಧಾನ್ಯವು ಅತ್ಯಧಿಕವಾಗಿರುತ್ತದೆ. ಇದಕ್ಕೆ **ಘರ್ಮ**ವೆಂಬ ಪರ್ಯಾಯನಾಮವು ಪ್ರಸಿದ್ಧವಾಗಿದೆ. ಆದುದರಿಂದಲೇ ಪ್ರಕೃತವಾದ ಸೂಕ್ತದ ೨೬ ನೇ ಋಕ್ಕಿನಲ್ಲಿ **ಅಭೀದ್ಧೋ ಘರ್ಮಃ** ಎಂದು ಘರ್ಮವಾಚಕವಾಗಿಯೇ ಇದೆ. ಈ ಹೆಸರು ಬರಲು ಕಾರಣವೇನು? ಇಲ್ಲಿ **ಗೌಃ, ವತ್ಸ** ಎಂದರಾವುದು? **ಅಪಶ್ಯಂ ಗೋಪಾಂ** (೧-೧೬೪-೩೧) ಇತ್ಯಾದಿ ಪ್ರವರ್ಗ್ಯಸಂಬಂಧವಾದ ಮಂತ್ರಗಳಲ್ಲಿ ಆದಿತ್ಯಸ್ತುತಿಯ ರಹಸ್ಯವೇನು ಇತ್ಯಾದಿಗಳನ್ನು ಪರಿಶೀಲಿಸಬೇಕು.

ತೈತ್ತಿರೀಯಾರಣ್ಯಕದಲ್ಲಿಯೂ ಶತಪಥಬ್ರಾಹ್ಮಣದಲ್ಲಿಯೂ ಈ ಪ್ರವರ್ಗ್ಯಯಾಗದ ವಿಧಿಯನ್ನು ವಿಶದವಾಗಿ ತಿಳಿಸಿರುವುದರಿಂದ ಇದರ ವಿಧಿಯ ಕ್ರಮವನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಅನಂತರ ಈ ಯಜ್ಞದಲ್ಲಿ ಉದ್ದಿಷ್ಟವಾದ ನಿಜವಾದ ದೇವತೆ ಯಾವುದು? ಕರ್ಮದ ದೃಷ್ಟಿಯಿಂದಲೂ ಆಧ್ಯಾತ್ಮಿಕವಾದ ದೃಷ್ಟಿಯಿಂದಲೂ ಇದರ ಪ್ರಾಶಸ್ತ್ಯವೇನು ಎಂಬುದನ್ನು ತಿಳಿಯಬಹುದು. ತೈತ್ತಿರೀಯಾರಣ್ಯಕದಲ್ಲಿ (೪ ನೇ ಪ್ರಪಾಠಕ) ಇದರ ಅನುಷ್ಠಾನಕ್ರಮವನ್ನು ಈರೀತಿ ತಿಳಿಸಿದೆ.

"**ನಮೋ ವಾಚೇ ಯಾ ಚೋದಿತಾ**" ಇತ್ಯಾದಿ ಮಂತ್ರಗಳಿಂದ ಇದರ ಶಾಂತಿಪಾಠವು ಪ್ರಾರಂಭವಾಗುತ್ತದೆ. (ಪ್ರ. ೪. ಅನು. ೧) ಅನಂತರ "**ಯುಂಜತೇ ಮನ ಉತ ಯುಂಜತೇ ಧಿಯಃ**" (೪-೨) ಮಹಾವೀರ ನಿರ್ಮಾಣಾರ್ಥವಾದ ಮಂತ್ರಗಳು ಪಠಿತವಾಗುತ್ತವೆ. ಇದರಲ್ಲಿ ಯಜ್ಞದಲ್ಲಿ ಭಾಗವಹಿಸತಕ್ಕ ಋತ್ವಿಗಾದಿಗಳು ವಿಷಯಗಳಿಂದ ನಿವೃತ್ತರಾಗಿ ಆತ್ಮಶುದ್ಧಿಯನ್ನು ಪಡೆಯಬೇಕೆಂದು ತಿಳಿಸಿದೆ. ಈ ಅನುವಾಕಕ್ಕೆ ವ್ಯಾಖ್ಯಾನವನ್ನು ಮಾಡುವಾಗ ಸಾಯಣರು **ಪ್ರವರ್ಗ್ಯ, ಘರ್ಮ,** ಮಹಾವೀರ ಮತ್ತು **ಸಮ್ರಾಟ್** ಎಂಬ ಶಬ್ದಗಳಿಗೆ ವಿವರಣೆಯನ್ನು ಹೇಳತಕ್ಕ ಐದನೇ ಪ್ರಪಾಠಕದ ವಾಕ್ಯಗಳನ್ನುದಹರಿಸಿ ಈ ಪದಗಳ ಅರ್ಥಗಳನ್ನು ವಿವರಿಸಿರುತ್ತಾರೆ.

**ಸ ಧನುಃ ಪ್ರತಿಷ್ಕಭ್ಯಾತಿಷ್ಠತ್ । ತಾ ಉಪದೀಕಾ ಅಬ್ರುವನ್ವರಂ ವೃಣಾಮಹೈ । ಅಥ ವ ಇಮಗ್ಂ ರಂಧಯಾಮ । ಯತ್ರ ಕ್ವ ಚ ಖನಾಮ । ತದಪೋಽಭಿತೃಣದಾಮೇತಿ । ತಸ್ಮಾದು-ಪದೀಕಾ ಯತ್ರ ಕ್ವ ಚ ಖನಂತಿ । ತದಪೋಽಭಿತೃಂದಂತಿ । ವಾರೇ ವೃತಗ್ಂ ಹ್ಯಾಸಾಂ । ತಸ್ಯ ಜ್ಯಾಮಪ್ಯಾದನ್ । ತಸ್ಯ ಧನುರ್ವಿಪ್ರವಮಾಣಗ್ಂ ಶಿರ ಉದವರ್ತಯತ್ । ತದ್ದ್ಯಾವಾಪೃಥಿವೀ ಅನುಪ್ರಾವರ್ತತ । ಯತ್ಪ್ರಾವರ್ತತ । ತತ್ಪ್ರವರ್ಗ್ಯಸ್ಯ ಪ್ರವರ್ಗ್ಯತ್ವಂ । ತದ್ಘ್ರಾಂಳ ಇತ್ಯ-**

**ಪತತ್ । ತದ್ಘರ್ಮಸ್ಯ ಘರ್ಮತ್ವಂ । ಮಹತೋ ವೀರ್ಯಮುಪಪ್ತದಿತಿ । ತನ್ಮಹಾವೀರಸ್ಯ ಮಹಾ-ವೀರತ್ವಂ । ಯದಸ್ಯಾಃ ಸಮಭರನ್ । ತತ್ಸಮ್ರಾಜ್ಞಃ ಸಮ್ರಾಟ್‌ತ್ವಂ ।** (ತೈ. ಆ. ೫ ೧-೪,೫,೬)

ಎಂಬ ವಿವರಣೆಯಲ್ಲಿ ಒಂದು ಕಥಾಸಂದರ್ಭವು ಸೂಚಿತವಾಗಿ ಅನಂತರ ಘರ್ಮಾದಿ ಹೆಸರುಗಳ ಪ್ರಸಿದ್ಧವಾದ ವಿಷಯವು ತಿಳಿಸಲ್ಪಟ್ಟಿದೆ. ಶತಪಥಬ್ರಾಹ್ಮಣದಲ್ಲಿ ಉಕ್ತವಾಗಿರುವಂತೆ ಈ ಕಥಾಸಂದರ್ಭವು ಈರೀತಿಯಿದೆ. ಇಂದ್ರಾದಿಗಳು ಕುರುಕ್ಷೇತ್ರಾಖ್ಯವಾದ ದೇವಯಜನ ಪ್ರದೇಶದಲ್ಲಿ ಸತ್ರವನ್ನು ನೆರವೇರಿಸಿದರು. ಆಗ ಅವರಲ್ಲಿ ಶ್ರೇಷ್ಠನಾರು ಎಂಬುದನ್ನು ನಿಷ್ಕರ್ಷಿಸಬೇಕಾದ ಪ್ರಮೇಯವೊದಗಿದಾಗ ಯಾರು ತಪಸ್ಸಿನಿಂದಲೂ, ಶ್ರದ್ಧೆಯಿಂದಲೂ, ಯಜ್ಞಾಚರಣೆಯಿಂದಲೂ ಯಜ್ಞಾಂತವನ್ನು ಪ್ರಥಮತಃ ಪಡೆಯುವರೋ ಅವರೇ ಶ್ರೇಷ್ಠರೆಂದು ಪರಿಗಣಿತರಾಗಬೇಕೆಂದು ತೀರ್ಮಾನಿಸಿದಾಗ ವಿಷ್ಣುವು ಆ ಸ್ಪರ್ಧೆಯಲ್ಲಿ ಗೆದ್ದನು. ಆಗ ವಿಷ್ಣುವು ಶ್ರೇಷ್ಠನೆಂದು ಪರಿಗಣಿತನಾದನು. ಇಂತಹ ಜಯದಿಂದ ಸಹಜವಾಗಿ ಪ್ರಾಪ್ತವಾಗುವ ಅಭಿಮಾನವೂ ಸಹ ವಿಷ್ಣುವನ್ನು ಆಕ್ರಮಿಸಿತು. ಸ್ವಾಭಿಮಾನಪೂರಿತನಾಗಿ ವಿಷ್ಣುವು ತನ್ನ ಧನಸ್ಸನ್ನು ಹಿಡಿದುಕೊಂಡು ಅದಕ್ಕೆ ಹೆದೆಯನ್ನು ಏರಿಸಿ ಬಾಣತ್ರಯವನ್ನು ಕೈಯಲ್ಲಿ ಹಿಡಿದುಕೊಂಡು ತನ್ನ ಬಿಲ್ಲಿನ ತುದಿಯಲ್ಲಿ ತಲೆಯನ್ನಿರಿಸಿಕೊಂಡಿದ್ದಾಗ ದೇವತೆಗಳಲ್ಲಿ ಯಾರೂ ಸಹ ಇವನನ್ನು ಎದುರಿಸಲಾಗದೆ ಎಲ್ಲರೂ ಇವನ ಸುತ್ತಲೂ ಕುಳಿತುಕೊಂಡರು. ಆಗ ಇವನ ಅಭಿಮಾನವನ್ನು ಹೋಗಲಾಡಿಸುವುದಕ್ಕಾಗಿ ವಮ್ರಿರೂಪವಾದ ಕ್ರಿಮಿಗಳನ್ನು ದೇವತೆಗಳು ಸಮೀಪಿಸಿ ಅವನ ಧನುಸ್ಸಿನ ಹೆದೆಯನ್ನು ಕತ್ತರಿಸಬೇಕೆಂದು ಕೇಳಿದಾಗ ಅವು ವಿಷ್ಣುವಿನ ಧನುಸ್ಸಿನ ಹೆದೆಯನ್ನು ಕತ್ತರಿಸಿದವು. (ಇಂದ್ರನೇ ವಮ್ರಿರೂಪದಲ್ಲಿ ಕತ್ತರಿಸಿದನು. **“ ತಸ್ಯೇಂದ್ರೋ ವಮ್ರಿರೂಪೇಣ । ಧನುರ್ಜ್ಯಾಮಭಿನತ್ಸ್ವಯಂ ”** ಎಂದು ತೈತ್ತಿರಿಯಾರಣ್ಯಕದಲ್ಲಿ) ಆಗ ಧನುಸ್ಸಿನ ತುದಿಯು ಮೇಲಕ್ಕೆ ಚಿಮ್ಮಿ ವಿಷ್ಣುವಿನ ಶಿರಸ್ಸು ಕತ್ತರಿಸಲ್ಪಟ್ಟಿತು.

ಧನುಸ್ಸಿನ ಹೆದೆಯು ಕತ್ತರಿಸಲ್ಪಟ್ಟಾಗ **“ ತದ್ ಘೃಙ್ಙಿತಿ ಪಪಾತ ”** ಅದು ಘೃಙ್ ಎಂದು ಶಬ್ದಮಾಡಿಕೊಂಡು ಬಿದ್ದಿತಾದುದರಿಂದ ಅದಕ್ಕೆ **ಘರ್ಮ**ವೆಂಬ ಹೆಸರು ಪ್ರಸಿದ್ಧವಾಯಿತು. ಸಂಕುಚಿತವಾದ ಧನಸ್ಸು, ಹೆದೆಯು ಕತ್ತರಿಸಲ್ಪಟ್ಟೊಡನೆಯೇ ವಿಸ್ತೃತವಾಗಿ ಹರಡಿದುದರಿಂದ ಅದಕ್ಕೆ ಪ್ರವರ್ಗ್ಯವೆಂಬ ಹೆಸರು ಪ್ರಸಿದ್ಧವಾಯಿತು. ದೇವತೆಗಳು **“ ನಮ್ಮ ಮಹಾ-ವೀರನು ಬಿದ್ದನು ”** ಎಂದು ಹೇಳಿಕೊಂಡುದುದರಿಂದ ಯಜ್ಞಪಾತ್ರೆಗೆ **ಮಹಾವೀರ** ಎಂಬ ಹೆಸರು ಬಂದಿತು. ಇತ್ಯಾದಿಯಾಗಿ ಈ ಹೆಸರುಗಳು ಬಂದುದನ್ನು ತಿಳಿಸಿದೆ.

ಇದೇ ಭಾಗದಲ್ಲಿ ಎಂದರೆ **‘ ಯುಂಜಂತೇ ಮನ........’** ಇತ್ಯಾದಿಯಾಗಿ **ಮಹಾವೀರ** ನಿರ್ಮಾಣಾರ್ಥಕವಾದ ಮಂತ್ರಗಳನ್ನು ಪಠಿಸುವ ಕಥಾ ಪ್ರಕರಣದಲ್ಲಿ (ತೈ. ಆ. ೪-೨),

**ಮುಖಸ್ಯ ಶಿರ ಇತ್ಯಾಹ । ಯಜ್ಞೋ ವೈ ಮುಖಃ ।** (ತೈ. ಆ. ೫-೩-೭)

ಎಂಬ ವಾಕ್ಯಗಳಲ್ಲಿ ಪ್ರವರ್ಗ್ಯವನ್ನು ಯಜ್ಞಗಳಿಗೆಲ್ಲಾ ಶಿರೋರೂಪವಾದುದು ಎಂದು ಪ್ರಶಂಸಿಸಿರುವ ಭಾಗವನ್ನು ದಹರಿಸಿ ಇದರ ಪ್ರಾಧಾನ್ಯವನ್ನು ಹೇಳಿದೆ. ಅನಂತರ,

**“ ವೃಷ್ಣೋ ಅಶ್ವಸ್ಯ ನಿಷ್ಪದಸಿ । ವರುಣಸ್ತ್ವಾ ಧೃತವ್ರತ ಆಧೂಪಯತು ” ।**
(ತೈ. ಆ. ೪-೩-೧)

ಎಂಬ ಮಂತ್ರದಿಂದ ಪ್ರಾರಂಭವಾಗುವ **ಮಹಾವೀರ**ಸಂಸ್ಕಾರಕ್ರಮವನ್ನು ತಿಳಿಸಿದೆ. ಇದೇ ಭಾಗದಲ್ಲಿ **“ ಸೂರ್ಯಸ್ಯ ತ್ವಾ ಚಕ್ಷುಷಾನ್ವೀಕ್ಷೇ ”** ಇತ್ಯಾದಿಮಂತ್ರಗಳಿಂದ ಪ್ರವರ್ಗ್ಯಕ್ಕೂ ಆದಿತ್ಯನಿಗೂ ಇರತಕ್ಕ ಸಂಬಂಧವನ್ನು ತಿಳಿಸಿದೆ.

" ಬ್ರಹ್ಮನ್ ಪ್ರವರ್ಗ್ಯೇಣ ಪ್ರಚರಿಷ್ಯಾಮಃ । ಹೋತರ್ಘರ್ಮಮಭಿಷ್ಟುಹಿ "
(ತೈ. ಆ. ೪-೪-೧)

ಎಂಬ ಪ್ರೈಷಾದಿಮಂತ್ರಗಳಿಂದಲೂ,

**ಬ್ರಹ್ಮನ್ ಪ್ರಚರಿಷ್ಯಾಮಃ । ಹೋತರ್ಘರ್ಮಮಭಿಷ್ಟುಹಿ ।**
(ತೈ. ಆ. ೪-೫-೧)

ಇತ್ಯಾದಿ ಮಹಾವೀರಸ್ಥಾಪನಾಮಂತ್ರಗಳಿಂದಲೂ ಪ್ರವರ್ಗ್ಯದ ಸ್ಥಾಪನವು ನೆರವೇರಿಸಲ್ಪಡುತ್ತದೆ. ಇದರ ಅಭಿಮಂತ್ರಣಪ್ರಕರಣದಲ್ಲಿ ಪ್ರಕೃತವಾದ ಸೂಕ್ತದ ೨೬ ನೇ ಋಕ್ಕಿನಲ್ಲಿ " **ಅಭೀದ್ಧಃ** " ಎಂಬ ವರ್ಣನೆಯಿಂದ ಸೂಚಿತವಾದ ಪ್ರವರ್ಗ್ಯದ ತೇಜಸ್ಸು ವರ್ಣಿತವಾಗಿದೆ.

**ರೋಚಿತಸ್ತ್ವಂ ದೇವ ಘರ್ಮ ದೇವೇಷ್ವಸಿ । ರೋಚಿಷೀಯಾಹಂ ಮನುಷ್ಯೇಷು ।**
**ಸಮ್ರಾಟ್ ಘರ್ಮರುಚಿತಸ್ತ್ವಂ ದೇವೇಷ್ವಾಯುಷ್ಮಾಗ್‌ಸ್ತೇಜಸ್ವೀ ಬ್ರಹ್ಮವರ್ಚಸ್ಯಸಿ ।**
(ತೈ. ಆ. ೪-೬-೨)

ಎಲೈ ಮಹಾವೀರನೇ ನೀನು ದೇವತೆಗಳ ನಡುವೆ ಪ್ರಕಾಶಿಸುತ್ತಾ ನಿನ್ನ ಮಹದ್ಗುಣಗಳನ್ನು ಪ್ರಕಟಿಸಿರುವೆ. ನೀನೇ ಸಮ್ರಾಟನಾಗಿದ್ದೀಯೆ. ನೀನು ಅದೇ ಕಾಂತಿಯಿಂದ ಮಾನವರ ನಡುವೆಯೂ ಬೆಳಗು ಇತ್ಯಾದಿಯಾಗಿ ಸ್ತುತವಾಗಿದೆ ಅನಂತರ ಇದೇ ಸೂಕ್ತದ ೩೧ ನೇ ಋಕ್ಕಿನಲ್ಲಿ ಪ್ರಶಂಸಿತವಾಗಿರುವಂತೆ " **ಅಪಶ್ಯಂ ಗೋಪಾಮನಿಪದ್ಯಮಾನಂ** " ಇತ್ಯಾದಿ ಮಂತ್ರಗಳಿಂದ ಮಹಾವೀರಾವೇಕ್ಷಣ ಮಂತ್ರಗಳು ಪಠಿತವಾಗಿವೆ. ಹೀಗೆ ಪೂರ್ಣವಾಗಿ ವಿಧಿಯನ್ನು ನೆರವೇರಿಸಿದನಂತರ,

**ಏತತ್ತ್ವಂ ದೇವ ಘರ್ಮ ದೇವೋ ದೇವಾನುಪಾಗಾಃ । ಇದಮಹಂ ಮನುಷ್ಯೋ ಮನುಷ್ಯಾನ್ । ಸೋಮಪೀಥಾನು ಮೇಹಿ । ಸಹ ಪ್ರಜಯಾ ಸಹ ರಾಯಸ್ಪೋಷೇಣ । ಸುಮಿತ್ರಾ ನ ಆಪ ಓಷಧಯಃ ಸಂತು ॥** (ತೈ. ಆ. ೪-೧೧-೮)

ಇತ್ಯಾದಿಯಾದ ಪ್ರಾರ್ಥನಾಮಂತ್ರಗಳಲ್ಲಿ ಸಂಪತ್ಸಮೃದ್ಧಿಯನ್ನು ಪ್ರಾರ್ಥಿಸಿದೆ. ಇಂತಹ ಪ್ರವರ್ಗ್ಯಯಾಗಕಾಲದಲ್ಲಿ,

**ಉಪಹ್ವಯೇ ಸುದುಘಾಂ ಧೇನುಮೇತಾಂ ಹಿಂಕೃಣ್ವತೀ ವಸುಪತ್ನೀ ವಸೂನಾಮಭಿತ್ವಾ ದೇವ ಸವಿತಃ .... ಇತ್ಯೇಕವಿಂಶತಿರಭಿರೂಪಾ ಯದ್ಯಜ್ಞೇಽಭಿರೂಪಂ ತತ್ಸಮೃದ್ಧಂ ॥**
(ಐ. ಬ್ರಾ. ೧-೨೨)

ಇತ್ಯಾದಿ ಮಂತ್ರಗಳಿಂದ ಉಪಸ್ತುತಿಯನ್ನು ಪಠಿಸಬೇಕೆಂದು ಐತರೇಯಬ್ರಾಹ್ಮಣದಲ್ಲಿ ತಿಳಿಸಿದೆ. ಇವು ಒಟ್ಟು ೨೧ ಋಕ್ಕುಗಳು. ಅವುಗಳಲ್ಲಿ ಪ್ರಕೃತವಾದ ಸೂಕ್ತಗಳಲ್ಲಿರುವ ೨೬, ೨೭, ೨೮ ಮತ್ತು ೩೧ ನೇ ಋಕ್ಕುಗಳೂ ಸೇರಿವೆ.

ಈ ನಾಲ್ಕು ಋಕ್ಕುಗಳಲ್ಲಿಯೂ ಸಹ ಉದ್ದಿಷ್ಟವಾಗಿರುವ ಮುಖ್ಯದೇವತೆಯು ಆದಿತ್ಯನೆಂದೇ ಹೇಳಬಹುದು ಎಂದು ಆಯಾ ಋಕ್ಕಿನ ವಿವರಣೆಯಲ್ಲಿ ತಿಳಿಸಿದೆ. ಘರ್ಮಕ್ಕೂ ಆದಿತ್ಯನಿಗೂ ಇರತಕ್ಕ ಸಂಬಂಧವನ್ನೂ ಹಿಂದೆ ತಿಳಿಸಿದೆ. ಶತಪಥಾದಿಗಳಲ್ಲಿ ಈ ಮಹಾವೀರವು ಆದಿತ್ಯನ ಪ್ರತಿನಿಧಿಯೆಂದೂ ಇದರಲ್ಲಿ ಪೂಣವಾಗಿರುವ ಕ್ಷೀರವು ವಿಶ್ವಪ್ರಾಣದ ದಿವ್ಯಪ್ರವಾಹವೆಂದೂ, ಈ ಆದಿತ್ಯನ ತೇಜಸ್ಸಿನಿಂದ ಯಜ್ಞಕರ್ತನೂ ತನ್ನ ಸ್ವರೂಪವನ್ನೇ ಪ್ರಕಾಶಮಾನವಾದುದನ್ನಾಗಿ ಮಾಡಿಕೊಳ್ಳುವನೆಂದೂ ತಿಳಿಸಿದೆ. ಮತ್ತು,

ಆಯುರೇತಜ್ಜ್ಯೋತಿಃ ಪ್ರವಿಶತಿ ಯ ಏತಮನು ವಾ ಬ್ರೂತೇ ಭಕ್ಷಯತಿ ವಾ ತಸ್ಯ ವ್ರತಚರ್ಯಾ ಯಾ ಸೃಷ್ಟಾ' (ಶ. ಬ್ರಾ. ೧೪-೩-೨-೩೧)

ಯಾವ ಯಜಮಾನನು ಈ ಪ್ರವರ್ಗ್ಯಾಖ್ಯವಾದ ಯಜ್ಞವನ್ನು ನೆರವೇರಿಸುವನೋ, ಇತರರಿಗೆ ಮಹತ್ವವನ್ನುಪದೇಶಿಸುವನೋ, ಮತ್ತು ಯಾವನು ಇದರಲ್ಲಿ ಪೂರ್ಣವಾದ ಭಾಗವನ್ನು ವಹಿಸುವನೋ, ಅವನು ಆದಿತ್ಯನ ಜ್ಯೋತಿಯೊಡನೆ ಸೇರಿ ತಾನೂ ಜ್ಯೋತಿರೂಪನಾಗುತ್ತಾನೆ. ಮತ್ತು ತನ್ನ ಪಾರ್ಥಿವನಾದ ಸ್ವರೂಪವನ್ನು ಬಿಟ್ಟು, ಹೊಸ ಸೃಷ್ಟಿಯನ್ನು ಸಂಪಾದಿಸಿ ತನ್ನ ಸತ್ಕರ್ಮದಿಂದ ಸಂಪಾದಿಸಿದ ಆ ಸೃಷ್ಟಿಯಿಂದ ದಿವ್ಯವಾದ ದೇಹವನ್ನು ಪಡೆದು ದೇವತ್ವವನ್ನು ಸಂಪಾದಿಸುವನು ಎಂದು ಪ್ರವರ್ಗ್ಯದ ಮಹತ್ತ್ವವನ್ನು ಪ್ರಶಂಸಿಸಿದೆ.



**ಅನಚ್ಛಯೇ ತುರಗಾತು ಜೀವಮೇಜದ್ಧ್ರುವಂ ಮಧ್ಯ ಆ ಪಸ್ತ್ಯಾನಾಂ ।**
**ಜೀವೋ ಮೃತಸ್ಯ ಚರತಿ ಸ್ವಧಾಭಿರಮರ್ತ್ಯೋ ಮರ್ತ್ಯೇನಾ ಸಯೋನಿಃ ॥ ೩೦ ॥**

ದೇಹದೊಂದಿಗಿರುವಾಗ ಜೀವಾತ್ಮನು ಪ್ರಾಣಯುಕ್ತನಾಗಿಯೂ, ಉಸಿರಾಡುತ್ತಲೂ, ತನ್ನ ಐಹಿಕವಾದ ಕರ್ತವ್ಯಗಳಿಗಾಗಿ ತ್ವರಿತವಾದ ಚಲನವಲನಗಳಿಂದಲೂ ಸಂಚರಿಸುತ್ತಿದ್ದರೂ ಸಹ ದೇಹರೂಪವಾದ ಗೃಹಗಳ ನಡುವೆ ಅಚಲನಾಗಿ ನೆಲೆಸಿರುತ್ತಾನೆ. ಜೀವಾತ್ಮನು ಮರಣಧರ್ಮವುಳ್ಳ ದೇಹಸಂಬಂಧಿಯಾಗಿಯೂ ಮತ್ತು ಉತ್ಪತ್ತಿಕಾಲದಲ್ಲಿ ಮರಣಾತ್ಮಕವಾದ ದೇಹದೊಡನೆ ಒಂದೇ ಉತ್ಪತ್ತಿಸ್ಥಾನವುಳ್ಳವನೂ ಆದರೂ ಸಹ ತಾನು ಮಾತ್ರ ಮರಣಧರ್ಮವಿಲ್ಲದೇ ಪುತ್ರಾದಿಗಳಿಂದ ದತ್ತವಾದ ಸ್ವಧೆಗಳಿಂದ ತೃಪ್ತನಾಗಿ ಸಂಚರಿಸುತ್ತಾನೆ.

ಜೀವನಿಗೆ (ಆತ್ಮನಿಗೆ) ಈ ಶರೀರವು ಈ ಜನ್ಮದಲ್ಲಿ ಮಾತ್ರವಿರುವುದು. ಆದುದರಿಂದ ದೇಹವು ನಿಸ್ಸಾರವೂ ಅಶಾಶ್ವತವೂ ಆಗಿರುವುದೆಂದೂ ಜೀವನು (ಆತ್ಮನು) ನಿತ್ಯನಾಗಿರುವನೆಂದೂ ಈ ಋಕ್ಕಿನಲ್ಲಿ ಪ್ರತಿಪಾದಿಸಲ್ಪಟ್ಟಿದೆ.

ಜೀವನು ದೇಹದೊಳಗಿದ್ದು ಐಹಿಕವಾದ ವ್ಯಾಪಾರಗಳಿಗೆ ಚೈತನ್ಯದಾಯಿಯಾಗಿರುವ ಕಾಲದಲ್ಲಿ ದೇಹಕ್ಕೆ ಸಜೀವಿಯೆಂಬ ವ್ಯವಹಾರವಿರುತ್ತದೆ. ಅದಿಲ್ಲದಿದ್ದರೆ ದೇಹವು ಮೃತವೆಂದು ಭಾವಿಸಲ್ಪಡುತ್ತದೆ. ಇದರಿಂದ ದೇಹವು ಮರ್ತ್ಯವು, ಜೀವವು ಅಮರ್ತ್ಯವು ಎಂದು ದೇಹಕ್ಕೂ ಜೀವಕ್ಕೂ ಇರತಕ್ಕ ವ್ಯತ್ಯಾಸವನ್ನು ಈ ಋಕ್ಕಿನಲ್ಲಿ ತಿಳಿಸಿದೆ.

**ಏಜದ್ಧ್ರುವಂ**—ಎಂಬ ವರ್ಣನೆಯಿಂದ ಜೀವಾತ್ಮನ ಚಲನಾತ್ಮಕವೂ ಮತ್ತು ಅಚಲನಾತ್ಮಕವೂ ಆದ ಎರಡು ವಿಧವಾದ ಸ್ಥಿತಿಗಳೂ ವರ್ಣಿತವಾಗಿವೆ. ಜೀವಾತ್ಮನು ತನ್ನ ಸಹಜವಾದ ಸ್ವರೂಪದಿಂದ ಧ್ರುವನು, ಅಚಲನು. ಆದರೆ ದೇಹದೊಡನೆ ಸೇರಿ ಉಪಾಧಿಗಳಿಂದ ಕೂಡಿರುವಾಗ ಚಲನಾತ್ಮಕನು. ಇದೇ ಅಂಶವನ್ನು ಈಶೋಪನಿಷತ್ತಿನಲ್ಲಿ ವರ್ಣಿಸುತ್ತಾ,

**ತದೇಜತಿ ತನ್ನೈಜತಿ ತದ್ದೂರೇ ತದ್ವಂತಿಕೇ ।**
**ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ ॥** (ಈಶ. ೫)

ಈ ಆತ್ಮನು ಒಂದೇ ಕಾಲದಲ್ಲಿ ಚಲನಾತ್ಮಕವಾದುದೂ, ಅಚಲನಾತ್ಮಕವಾದುದೂ ಆಗಿದೆ. ಒಂದೇ ಕಾಲದಲ್ಲಿ ದೂರ ದಲ್ಲಿರುವುದೂ ಹತ್ತಿರದಲ್ಲಿರುವುದೂ ಆಗಿದೆ. ಎಂದರೆ ದೇಹದೊಡನೆ ಸಂಬಂಧವಿದ್ದರೂ ಸಹ ಸ್ವತಃ ಶುದ್ಧವಾದುದರಿಂದ ನಿರ್ಲಿಪ್ತ ವಾಗಿರುತ್ತದೆ. ಅದಲ್ಲದೇ,

**ಅನಕ್ ತುರಗಾತು** — ಈ ಜೀವಾತ್ಮನು ದೇಹದೊಳಗಿದ್ದು ದೇಹದ ಪ್ರಾಣರೂಪವಾಗಿದ್ದರೆ ಆಗ ಇಂದ್ರಿಯಾದಿಗಳು ತಮ್ಮ ತಮ್ಮ ವ್ಯಾಪಾರಗಳಲ್ಲಿ ತೊಡಗುವುವು. ಆಗ ಈ ಜೀವನೇ ವ್ಯವಹಾರಗಳಲ್ಲಿ ತೊಡಗಿರುವನು ಎಂದೀ ವ್ಯವಹಾರವಿದೆ. ಜೀವಸಿರುವ ಕಾಲದಲ್ಲಿ ದೇಹವು ಅಥವಾ ದೇಹಾಂತರ್ಗತವಾದ ಪ್ರಾಣವು ತನ್ನ ನಿಯತವಾದ ಕಾರ್ಯಗಳಲ್ಲಿ ತೊಡಗಿರುವ ಅಂಶ ವನ್ನು ಕಠಾದಿಗಳಲ್ಲಿ ಈರೀತಿ ವರ್ಣಿಸಿದೆ.

**ಯದಿದಂ ಕಿಂ ಚ ಜಗತ್ಸರ್ವಂ ಪ್ರಾಣ ಏಜತಿ ನಿಸ್ಸೃತಂ ।** (ಕಠ. ೨-೩-೨)

**ಯದಿದಂ ಕಿಂ ಚ ಯತ್ಕಿಂಚೇದಂ ಜಗತ್ ಸರ್ವಂ ಪ್ರಾಣೇ ಪರಸ್ಮಿನ್ ಬ್ರಹ್ಮಣಿ ಸತಿ ಏಜತಿ ಕಂಪತೇ ತತ ಏವ ನಿಸ್ಸೃತಂ ನಿರ್ಗತಂ ಸತ್ ಪ್ರಚಲತಿ ನಿಯಮೇನ ಚೇಷ್ಟತೇ ॥**

(ಶಂಕರ ಭಾಷ್ಯ)

ಈ ಜಗತ್ತೆಲ್ಲವೂ ಸಹ ಪ್ರಾಣನು (ಎಂದರೆ ಪರಬ್ರಹ್ಮನು) ಇದ್ದರೆ ಅವನ ಪ್ರೇರಣೆಯಿಂದಲೂ, ಆ ಪ್ರಭುವಿರುವ ಭೀತಿ ಯಿಂದಲೂ ಸಹ ನಡಗುತ್ತಾ ತನ್ನ ಪ್ರಾಪಂಚಿಕವಾದ ವ್ಯವಹಾರಗಳಲ್ಲಿ ತೊಡಗಿರುತ್ತದೆ ಮತ್ತು ನಿಯಮದಿಂದ ಕೆಲಸಗಳನ್ನು ಮಾಡುತ್ತಿರುತ್ತದೆ ಎಂದು ಕಠೋಪನಿಷತ್ತಿನಲ್ಲಿ ವಿವರಿಸಿದೆ. ದೇಹೇಂದ್ರಿಯಗಳ ವ್ಯಾಪಾರಗಳಿಗೆ ಹೇತುಭೂತನಾದ ಈ ಆತ್ಮನು ದೇಹರೂಪವಾದ ಗೃಹದಲ್ಲಿ ವಾಸಮಾಡುವುದರಿಂದ **ಪಸ್ತ್ಯಾನಾಂ ಮಧ್ಯೇ ಆ ಶಯೇ ।** ಎಂದು ಆತ್ಮನ ದೇಹಾಂತರ್ಗತ ವಾದ ಸ್ಥಿತಿಯನ್ನು ತಿಳಿಸಿದೆ. ಈರೀತಿಯಾದ ಸ್ಥಿತಿಯಿರುವುದರಿಂದಲೇ ಆತ್ಮನಿಗೆ ಪುರುಷನೆಂದೂ ಹೆಸರು. ಉಪಾಧಿಯುಕ್ತ ವಾದುದೂ ಲೌಕಿಕವಾದುದೂ ಆದ ದೇಹದಲ್ಲಿ ಅಡಗಿರುವವನು ಎಂದರ್ಥವು. ಇದನ್ನೇ ವರ್ಣಿಸುತ್ತಾ,

**ಪುರಃ ಸ ಪಕ್ಷೀ ಭೂತ್ವಾ ಪುರಃ ಪುರುಷ ಆವಿಶದಿತಿ । ಸ ವಾ ಅಯಂ ಪುರುಷಃ ಸರ್ವಾಸು ಪೂರ್ಷು ಪುರಿಶಯೋ ನೈನೇನ ಕಿಂಚನಾನಾವೃತಂ ನೈನೇನ ಕಿಂಚನಾಸಂವೃತಂ ॥**

(ಬೃ. ಉ. ೨-೫-೧೮)

**ಪುರಃ ಪುರಸ್ತಾತ್ಸ ಈಶ್ವರಃ ಪಕ್ಷೀ ಲಿಂಗಶರೀರಂ ಭೂತ್ವಾ ಪುರಃ ಶರೀರಾಣಿ ಪುರುಷಃ ಆವಿಶದಿತ್ಯಸ್ಯಾರ್ಥಮಾಚಷ್ಟೇ ಶ್ರುತಿಃ । ಸ ವಾ ಅಯಂ ಪುರುಷಃ ಸರ್ವಾಸು ಪೂರ್ಷು ಸರ್ವ ಶರೀರೇಷು ಪುರಿಶಯಃ [ಪುರಿ ಶೇತ ಇತಿ ಪುರಿಶಯಃ] ಸನ್ ಪುರುಷ ಇತ್ಯುಚ್ಯತೇ ॥**

(ಶಂಕರ ಭಾಷ್ಯ)

ಪರಮಾತ್ಮನು ಲಿಂಗಶರೀರಾತ್ಮಕನಾಗಿ ಸಕಲ ವಿಧವಾದ ದೇಹಗಳಲ್ಲಿಯೂ ಪ್ರವೇಶಿಸಿರುವುದರಿಂದ ಇವನಿಗೆ **ಪುರುಷ** ನೆಂಬ ವ್ಯವಹಾರವಿದೆ. ಆದರೆ ಉಪಾಧಿಗಳಿಂದ ಕೂಡಿದ ದೇಹಗಳೊಳಗೆ ಅಂತರ್ಗತನಾಗಿದ್ದು, ಆಯಾ ದೈಹಿಕವಾದ ವ್ಯಾಪಾರ ಗಳಿಂದ ತಾನೂ ಸಹ ಲಿಪ್ತನಾಗುವುದಿಲ್ಲವೇ ಎಂಬ ಶಂಕೆಯನ್ನು ಪರಿಹರಿಸುವುದಕ್ಕಾಗಿ ತಾನು ಆಶ್ರಯಿಸಿರುವ ದೇಹಕ್ಕೂ ಆತ್ಮನಿಗೂ ವ್ಯತ್ಯಾಸವನ್ನು ತೋರಿಸಿದೆ. ಈ ಜೀವವು ದೇಹಾಂತರಗತವಾಗಿರುವವರೆಗೂ ದೇಹವು ಸಜೀವಿಯೆನಿಸಿಕೊಳ್ಳುತ್ತದೆ. ಇದು ನಿರ್ಗಮಿಸಿದನಂತರ ದೇಹವು ಮೃತವೆನಿಸಿಕೊಳ್ಳುತ್ತದೆ. ಆದುದರಿಂದ ಆತ್ಮನು ಅಮರ್ತ್ಯನು; ದೇಹವು ಮರ್ತ್ಯವು.

ಆದುದರಿಂದ **ಅಮರ್ತ್ಯಃ ಜೀವಃ ಮೃತಸ್ಯ ಚರತಿ** ಎಂದು ವ್ಯತ್ಯಾಸವನ್ನು ಹೇಳಿದೆ. ಇದನ್ನೇ ಛಾಂದೋಗ್ಯೋಪನಿಷತ್ತಿನಲ್ಲಿ:—

**‘ ಜೀವಾಪೇತಂ ವಾವ ಕಿಲೇದಂ ಮ್ರಿಯತೇ ನ ಜೀವೋ ಮ್ರಿಯತೇ ’ ।**

(ಛಾ. ಉ. ೬-೧೧-೩)

ಜೀವವು ಶರೀರವನ್ನು ಬಿಟ್ಟಾಗ ಶರೀರವು ಮೃತವಾಗುತ್ತದೆ. ಆದರೆ ಜೀವವು ಅಮರ್ತ್ಯವಾದುದರಿಂದ ಅದು ಮೃತವಾಗುವುದಿಲ್ಲ ಎಂದು ತಿಳಿಸಿದೆ. ಆದರೂ ಸಹ ಶರೀರದೊಡನೆ ಉತ್ಪನ್ನವಾಗುವ ಕಾಲದಲ್ಲಿ ಶರೀರಕ್ಕೂ ಈ ಜೀವಕ್ಕೂ ಒಂದೇ ಉತ್ಪತ್ತಿಸ್ಥಾನವೆಂಬ ವ್ಯವಹಾರವಿದೆ.

**ಸ್ವಧಾಭಿಃ ಚರತಿ**—ದೇಹವನ್ನು ಈ ಜೀವವು ತ್ಯಾಗಮಾಡಿದೊಡನೆ ಇದಕ್ಕಿರುವ ಮಾರ್ಗಗಳು ಎರಡು ವಿಧವಾಗಿದೆ. ಒಂದು ದೇವಮಾರ್ಗವು. ಇನ್ನೊಂದು ಪಿತೃಮಾರ್ಗವು. ಪಿತೃಮಾರ್ಗವನ್ನನುಸರಿಸಿದರೆ ಆಗ ಪುತ್ರಾದಿಗಳಿಂದ ದತ್ತವಾದ ಸ್ವಧೆಗಳಿಂದ (ಕವ್ಯಗಳಿಂದ) ಈ ಜೀವಕ್ಕೆ ತೃಪ್ತಿಯು ಲಭಿಸುತ್ತದೆ. ಸ್ವಧಾರೂಪವಾದ ಅನ್ನಗಳಿಂದ ತೃಪ್ತಿಯನ್ನು ಪಡೆಯುತ್ತಾ ಪಿತೃಲೋಕದಲ್ಲಿ ಸಂಚರಿಸುತ್ತಾರೆಂದರ್ಥವು.



## ಅಪಶ್ಯಂ ಗೋಪಾಮನಿಪದ್ಯಮಾನಮಾ ಚ ಪರಾ ಚ ಪಥಿಭಿಶ್ಚರಂತಂ । ಸ ಸಧ್ರೀಚೀಃ ಸ ವಿಷೂಚೀರ್ವಸಾನ ಆ ವರೀವರ್ತಿ ಭುವನೇಷ್ವಂತಃ ॥ ೩೧ ॥

ವಿಶ್ವರಕ್ಷಕನೂ, ಯಾವಾಗಲೂ ಖಿನ್ನನಾಗದಿರುವವನೂ, ಅಂತರಿಕ್ಷಾದಿ ಮಾರ್ಗಗಳಿಂದ ಸಂಚರಿಸುವವನೂ, ಗಮನಾಗಮನಾದಿ ರೂಪಗಳಿಂದ ಲೋಕಕ್ಕೆ ಅಭಿಮುಖವಾಗಿಯೂ ಮತ್ತು ಪರಾಙ್ಮುಖವಾಗಿಯೂ ಸಹ ಪರ್ಯಾಯ ರೂಪವಾದ ಸಂಚಾರವುಳ್ಳವನೂ ಆದ ಆದಿತ್ಯನನ್ನು ನಾನು ತಿಳಿಯುತ್ತೇನೆ. ಅದೇ ಆದಿತ್ಯನು ತನ್ನಲ್ಲಿ ಒಟ್ಟಿಗೆ ಸೇರಿರುವುವೂ ಮತ್ತು ನಾನಾ ರೂಪಗಳಲ್ಲಿ ಹರಡಿ ವಿಶ್ವವನ್ನು ವ್ಯಾಪಿಸುವುವೂ ಆದ ಕಿರಣಗಳಿಂದ ಲೋಕಗಳನ್ನು ಆಚ್ಛಾದನೆಮಾಡುತ್ತಾ ಲಿಂಗರೂಪವಾದ ಭುವನಗಳ ಮಧ್ಯಭಾಗದಲ್ಲಿ ಉದಯಾಸ್ತಮರೂಪದಲ್ಲಿ ಪರಿಭ್ರಮಣವನ್ನು ಹೊಂದುತ್ತಾನೆ.

ಪ್ರವರ್ಗ್ಯದಲ್ಲಿ ಅಭಿಷ್ಟವಕಾಲದಲ್ಲಿ **ಅಪಶ್ಯಂ ಗೋಪಾಂ** ಎಂಬ ಈ ಋಕ್ಕಿನ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಅಪಶ್ಯಂ ಗೋಪಾಮನಿಪದ್ಯಮಾನಂ ಸ್ರಕ್ವೇ ದ್ರಪ್ಸಸ್ಯ** ಎಂಬ ಸೂತ್ರದಿಂದ ನಿವೃತವಾಗಿರುವುದು. (ಆ. ೪-೬)

**ಪ್ರವರ್ಗ್ಯೇ ಅಭಿಷ್ಟವೇ ‘ ಅಪಶ್ಯಂ ಗೋಪಾಂ ’ ಇತ್ಯೇಕಾ ವಿನಿಯುಕ್ತಾ ।** ಎಂದು ಸಾಯಣರು **‘ ಅಪಶ್ಯಂ ಗೋಪಾಮನಿಪದ್ಯಮಾನಃ ಸ್ರಕ್ವೇದ್ರಪ್ಸಸ್ಯ ’** (ಅಶ್ವ. ಶ್ರೌ. ೪-೬) ಎಂಬ ಅಶ್ವಲಾಯನಶ್ರೌತ ಸೂತ್ರವನ್ನು ಉದಹರಿಸಿ ಈ ಮಂತ್ರದ ವಿನಿಯೋಗವನ್ನು ತಿಳಿಸಿದ್ದಾರೆ. ಪ್ರವರ್ಗ್ಯಯಾಗಕಾಲದಲ್ಲಿ ಪಠಿಸಬೇಕಾದ ಮಂತ್ರವಿದು. ಆದರೆ ಅದರಲ್ಲೂ ನಿರ್ದಿಷ್ಟವಾದ ಕಾಲವಾವುದೆಂಬುದನ್ನು ತೈತ್ತಿರೀಯಾರಣ್ಯಕದ ಭಾಷ್ಯದಲ್ಲಿ ಸಾಯಣರು ತಿಳಿಸಿದ್ದಾರೆ. **ಅಥ ಸಪ್ತಮೋ ಮಹಾವೀರಾವೇಕ್ಷಣಮುಚ್ಯತೇ ।** ಇದು ಮಹಾವೀರಾವೇಕ್ಷಣಕಾಲದಲ್ಲಿ ಪಠಿಸತಕ್ಕ ಮಂತ್ರವು ಎಂದು ಇದೇ ಮಂತ್ರವನ್ನು ಆರಣ್ಯಕದಲ್ಲಿ ವ್ಯಾಖ್ಯಾನಮಾಡುವ ಪೀಠಿಕಾಭಾಗದಲ್ಲಿ ಹೇಳಿದೆ. ಆದುದರಿಂದ ಈ ಮಂತ್ರಕ್ಕೆ ಪ್ರವರ್ಗ್ಯರೂಪವಾದ

ಕರ್ಮಪರವಾಗಿಯೂ ಮತ್ತು ಆಧ್ಯಾತ್ಮಿಕಜ್ಞಾನದ ಪರವಾಗಿಯೂ ಅರ್ಥವನ್ನು ಹೇಳಬೇಕು. ಮೊದಲು ಕರ್ಮಪರವಾಗಿ ಅರ್ಥವನ್ನು ಮಾಡಿದರೆ ಮಹಾವೀರವೆಂಬ ಕುಂಭವನ್ನು ಇಲ್ಲಿ ಲೋಕಸಂಚಾರಿಯಾದ ಆದಿತ್ಯನಿಗೆ ಹೋಲಿಸಿದೆ. ಅಥವಾ ಮಹಾವೀರಕ್ಕೂ ಆದಿತ್ಯನಿಗೂ ತಾದಾತ್ಮ್ಯವನ್ನೇ ಹೇಳಿದೆ.

ಲೌಕಿಕವಾದ ಪ್ರತ್ಯಕ್ಷಕ್ಕೆ ಗೋಚರವಾಗುವ ಆದಿತ್ಯನ ಉದಯಾಸ್ತಮಯರೂಪವಾದ ಸಂಚಾರವು ಲೋಕಕ್ಕೆಲ್ಲಾ ವಿದಿತವಾಗಿರುವ ಅಂಶವೇ ಆಗಿದೆ. ಆದರೂ ಸಹ, **ವಿಶ್ವಸ್ಯ ಗೋಪಾಂ ಅನಿಪದ್ಯಮಾನಂ** ಇತ್ಯಾದಿ ವಿಶೇಷಣಗಳು ಆದಿತ್ಯನ ಲೋಕರಕ್ಷಣಸ್ವರೂಪವನ್ನೂ, ಅದಕ್ಕಾಗಿ ಅವನು ನಿರಂತರವಾಗಿ ಸಂಚರಿಸುತ್ತಿದ್ದರೂ ಸಹ ಅಕುಂಠಿತವಾದ ಸ್ವರೂಪವನ್ನು ಹೊಂದಿರುವುದನ್ನೂ ವರ್ಣಿಸುತ್ತವೆ.

**ಅಸೌ ವಾ ಆದಿತ್ಯೋ ಲೋಕಂಪೃಣಾಯಾತಯಾಮಾ ।** (ಶ. ಬ್ರಾ. ೮-೭-೨-೭)

ಇತ್ಯಾದಿವಾಕ್ಯಗಳಿಂದ ಶತಪಥಾದಿಗಳಲ್ಲಿ ಆದಿತ್ಯನ ಈ ಅಕುಂಠಿತವಾದ ಸ್ವರೂಪವನ್ನು ವರ್ಣಿಸಿರುವಂತೆ ಇಲ್ಲಿಯೂ ಸಹ **ಅನಿಪದ್ಯಮಾನಂ** ಅನುಸ್ಯೂತವಾದ ಸಂಚಾರವನ್ನಿಟ್ಟುಕೊಂಡಿದ್ದರೂ ಸಹ ಕೊಂಚವೂ ಖಿನ್ನವಾಗದ ಸ್ವರೂಪವುಳ್ಳ ಆದಿತ್ಯನನ್ನು ಎಂದು ತಿಳಿಸಿದೆ.

**ಗೋಪಾಂ—ಸರ್ವಸ್ಯ ಲೋಕಸ್ಯ ವೃಷ್ಟಿಪ್ರಕಾಶಾದಿನಾ ಗೋಪಾಯಿತಾರಂ ।** ವೃಷ್ಟಿದಾನದಿಂದಲೂ, ಪ್ರಕಾಶವನ್ನು ಪ್ರಸರಿಸುವುದರಿಂದಲೂ ಸಹ ಸಕಲ ಲೋಕಗಳನ್ನೂ ಕಾಪಾಡತಕ್ಕವನೆಂದರ್ಥವು. ಇದನ್ನೇ ತೈತ್ತಿರೀಯಾರಣ್ಯಕದಲ್ಲಿ,

**ಅಪಶ್ಯಂ ಗೋಪಾಮಿತ್ಯಾಹ । ಅಸೌ ವಾ ಆದಿತ್ಯೋ ಗೋಪಾಃ । ಸ ಹೀಮಾಃ ಪ್ರಜಾ ಗೋಪಾಯತಿ । ತಮೇವ ಪ್ರಜಾನಾಂ ಗೋಪ್ತಾರಂ ಕುರುತೇ ।** (ತೈ. ಆ. ೫-೬-೪)

ಎಂಬ ವಾಕ್ಯಗಳಿಂದ ಸ್ತುತಿಸಿದೆ. **ಉದಯೇನ ಪ್ರಕಾಶಂ ಕೃತ್ವಾ ಸರ್ವಾಃ ಪ್ರಜಾ ಗೋಪಾಯತಿ ।** ಎಂದು ಸಾಯಣರು ವಿವರಿಸಿದ್ದಾರೆ.

**ಅನಿಪದ್ಯಮಾನಂ—ಕದಾಚಿದಪಿ ಅವಿಷಣ್ಣಂ ।** ಯಾವಾಗಲೂ ಖಿನ್ನನಾಗದಿರತಕ್ಕ ಎಂದು ಆದಿತ್ಯನ ಧ್ರುವಸ್ಥಿತಿಯನ್ನು ತಿಳಿಸಿದೆ.

**ಅನಿಪದ್ಯಮಾನಮಿತ್ಯಾಹ । ನ ಹ್ಯೇಷ ನಿಪದ್ಯತೇ ।** (ತೈ. ಆ. ೫-೬-೪, ೫)

ಇಲ್ಲಿ **ಭೂಮೌ ಪತನಾಭಾವಃ ।** ಅಂತರಿಕ್ಷಸ್ಥನಾದ ಆದಿತ್ಯನಿಗೆ ಭೂಮಿಯಮೇಲೆ ಪತನವಾಗುವ ಸಂಭವವಿಲ್ಲವೆಂದು ಆರಣ್ಯಕದ ವಿವರಣೆಯಿದೆ ಎಂದು ಸಾಯಣರು ತಿಳಿಸಿದ್ದಾರೆ. (ಸಾ ಭಾ.)

**ಸಧ್ರೀಚೀಃ ವಿಷೂಚೀಃ**— ಎಂಬೆರಡುಪದಗಳೂ ಆದಿತ್ಯರಶ್ಮಿಗಳಿಗೆ ವಿಶೇಷಣಗಳಾಗಿವೆ. **ವಿಷೂಚೀಃ** ಎಂದರೆ ವಿವಿಧವಾಗಿ ನಾನಾ ಕಡೆಗಳಲ್ಲಿಯೂ ಹರಡಿ ಜಗತ್ತಿಗೆ ಕ್ಲೇಶವನ್ನುಂಟುಮಾಡುವುವು ಎಂದರ್ಥ. ಸಾಕ್ಷಾತ್ತಾಗಿ ಆದಿತ್ಯನ ಸನ್ನಿಧಿಯಿಂದಲೇ ಪ್ರಸರಿಸುವುದು ಮಾತ್ರವಲ್ಲದೇ ಚಂದ್ರಾದಿಗ್ರಹಗಳಲ್ಲಿಯೂ ಕೇಂದ್ರಿತವಾಗಿ ಅಲ್ಲಿಯೂ ಬೇರೆಬೇರೆ ರೀತಿಗಳಲ್ಲಿ ಜಗತ್ತನ್ನು ವ್ಯಾಪಿಸಿ ಪ್ರಕಾಶರೂಪವಾದ ಪೊದ್ದಿಕೆಯನ್ನು ಹೊದ್ದಿಸಕ್ಕ ಕಿರಣಗಳು ಎಂಬುದನ್ನು ತಿಳಿಸಲು **ಚಂದ್ರಭಾಮಾಧಿ-**

**ತ್ಯಾನಂ ರಾತ್ರಾವಪಿ ಪ್ರಕಾಶಯಿತ್ರೀಃ ತ್ವಿಷಃ** ಎಂದು ಸಾಯಣರು **ವಿಷೂಚೀಃ** ಎಂಬ ಪದಕ್ಕೆ ಅರ್ಥವನ್ನು ವಿವರಿಸಿದ್ದಾರೆ. ಇದನ್ನೇ ತೈತ್ತಿರೀಯಾರಣ್ಯಕದಲ್ಲಿ

**ಸ ಸಧ್ರೀಚೀಸ್ಸವಿಷೂಚೀರ್ವಸಾನ ಇತ್ಯಾಹ । ಸಧ್ರೀಚೀಶ್ಚ ಹ್ಯೇಷ ವಿಷೂಚೀಶ್ಚ ವಸಾನಃ ಪ್ರಜಾ ಅಭಿ ವಿಪಶ್ಯತಿ ॥**　　(ತೈ. ಆ. ೫-೬-೫)

ಎಂದು ವಿವರಣರೂಪದಲ್ಲಿ ತಿಳಿಸಿದೆ. ಇದೆಲ್ಲಾ ಆದಿತ್ಯಪರವಾದರೆ— ಪ್ರವರ್ಗ್ಯಯಾಗದಲ್ಲಿ ಆದಿತ್ಯನೊಡನೆ ತಾದಾತ್ಮ್ಯವನ್ನು ತೋರಿಸಿ ಮಹಾವೀರ ಪರವಾದ ಅರ್ಥವನ್ನು ತೈತ್ತಿರೀಯಾಣ್ಯಕದ ವ್ಯಾಖ್ಯಾನದಲ್ಲಿ ಸಾಯಣರು ಹೇಳಿದ್ದಾರೆ. **ಗೋಪಾಂ** ಎನ್ನುವುದಕ್ಕೆ **ಕರ್ಮನಿಷ್ಪಾದನೇನ ರಕ್ಷಕಂ ।** ಕರ್ಮವು ನಿರ್ವಿಘ್ನವಾಗಿ ನೆರವೇರುವಂತೆ ಮಾಡುವುದರಿಂದ ಈ ವಿಶೇಷಣವು ಮಹಾವೀರಪರವಾಗಿದೆ. **ಅನಿಪದ್ಯಮಾನಂ** ಎಂಬ ಪದಕ್ಕೆ **ವಿನಂಶರಹಿತಂ** ಅಥವಾ **ಆದಿತ್ಯರೂಪೇಣ ಪತನರಹಿತಂ ।** ನಾಶರಹಿತವಾದುದು ಅಥವಾ ಆದಿತ್ಯರೂಪದಿಂದಿದ್ದು ಪತನವಿಲ್ಲದಿರತಕ್ಕದ್ದು ಎಂದರ್ಥ. ಇವೆಲ್ಲವು ಕರ್ಮಪರವಾದ ಅರ್ಥವಾಗಿದೆ. ಆಧ್ಯಾತ್ಮಿಕವಾದ ದೃಷ್ಟಿಯಿಂದಲೂ ಈ ವಿಶೇಷಣಗಳ ಔಚಿತ್ಯವನ್ನು ತೋರಿಸಿ ಪರಬ್ರಹ್ಮನೇ ಆದಿತ್ಯಸ್ವರೂಪನು ; ಆದುದರಿಂದ ಈ ವರ್ಣನೆಗಳೆಲ್ಲವೂ ಪರಬ್ರಹ್ಮನ ವರ್ಣನಗಳು ಎಂದೂ ಅರ್ಥಮಾಡಬಹುದು.

**ತದ್ಯಥಾ ಮಹಾಪಥ ಆತತ ಉಭೌ ಗ್ರಾಮೌ ಗಚ್ಛತೀಮಂ ಚಾಮುಂ ಚೈವಮೇವೈತಾ ಆದಿತ್ಯಸ್ಯ ರಶ್ಮಯ ಉಭೌ ಲೋಕೌ ಗಚ್ಛತೀಮಂ ಚಾಮುಂ ಚಾಮುಷ್ಮಾದಾದಿತ್ಯಾತ್ಪ್ರತಾಯಂತೇ ತಾ ಆಸು ನಾಡೀಷು ಸೃಪ್ತಾ ಆಭ್ಯೋ ನಾಡೀಭ್ಯಃ ಪ್ರತಾಯಂತೇ ತೇಽಮುಷ್ಮಿನ್ನಾದಿತ್ಯೇ ಸೃಪ್ತಾಃ ।**　　(ಛಾ. ಉ. ೮-೬-೨)

ಎಂದು ಪ್ರಕೃತವಾದ ಋಕ್ಕಿನಲ್ಲಿ **ಸಧ್ರೀಚೀಃ ವಿಷೂಚೀಃ** ಎಂಬ ವಿಶೇಷಣಗಳಿಂದ ತಿಳಿಸುವ ಗುಣಗಳು ವರ್ಣಿತವಾಗಿವೆ. ಎರಡು ಮಹಾಗ್ರಾಮಗಳಿಗೆ ದಾರಿಯನ್ನು ತೋರಿಸುವ ಎರಡು ಮಹಾಪಥಗಳು ವಿಸ್ತೃತವಾಗಿ ಹರಡಿರುವಂತೆ, ಈ ಆದಿತ್ಯರಶ್ಮಿಗಳಿಗೂ ಸಹ ಎರಡು ಮಹಾಪಥಗಳಿದ್ದು ಆ ಪಥಗಳಲ್ಲಿ ಆ ರಶ್ಮಿಗಳ ಪ್ರಸರಣವು ಎರಡು ವಿಧಗಳಲ್ಲಿರುತ್ತದೆ. ಆದಿತ್ಯನಿಂದ ಉಳಿದೆಲ್ಲಾ ಲೋಕಗಳಿಗೂ ಹರಡುವುದೂ ಪುನಃ ಅವೆಲ್ಲವೂ ಅಲ್ಲಿಂದ ಹೊರಡು ಆದಿತ್ಯನಲ್ಲಿಗೇ ಸೇರಿ ಕೇಂದ್ರೀಕೃತವಾಗುವುದೂ ಸಹ ಇಲ್ಲಿ ವಿವರಿಸಲ್ಪಟ್ಟಿದೆ. ಇಲ್ಲಿ ನಾಡಿಗಳೆಂದರೆ ಕೇವಲ ಪುರುಷವ್ಯಕ್ತಿಯ ದೇಹದಲ್ಲಿರುವ ಸಕಲ ನಾಡಿಗಳೆಂದರ್ಥಮಾಡಬಹುದು ಅಥವಾ ಇದನ್ನೇ ರೂಪಕವಾಗಿ ತೆಗೆದುಕೊಂಡರೆ ವಿಶ್ವವನ್ನೇ ಶರೀರವನ್ನಾಗಿ ತಿಳಿದು ಅಲ್ಲಿರುವ ಅವಯವಗಳನ್ನೇ ನಾಡಿಗಳಿಗೆ ಹೋಲಿಸಿ ಅರ್ಥಮಾಡಬಹುದು. ಆದುದರಿಂದಲೇ **ಉಭೌ ಲೋಕೌ ಗಚ್ಛಂತಿ** ಎಂದು ಹೇಳಿದೆ. ಆದಿತ್ಯನಿಂದ ಪ್ರಸರಿಸಿ **ವಿಷೂಚಿ**ಗಳಾದ ಈ ರಶ್ಮಿಗಳ ರೂಪಗಳೂ ಕ್ರಿಯೆಗಳೂ ವಿವಿಧಾತ್ಮಕಗಳಾಗಿರುವುವು ಎಂಬುದನ್ನು ವರ್ಣಿಸುತ್ತಾ—

**ಅಸೌ ವಾ ಆದಿತ್ಯಃ ಪಿಂಗಲಃ ಏಷ ನೀಲ ಏಷ ಪೀತ ಏಷ ಲೋಹಿತಃ ।**　(ಛಾ. ಉ. ೮-೬-೧)

ಇತ್ಯಾದಿಯಾಗಿ ತಿಳಿಸಿದೆ. ಇಂತಹ ಜಗದ್ರಕ್ಷಕನೂ ಜಗದ್ವ್ಯಾಪಿಯೂ ಸಕಲಭುವನಾಂತರ್ವರ್ತಿಯೂ ಆದ ಆದಿತ್ಯನ ಸ್ವರೂಪವನ್ನು ತಿಳಿಯಬೇಕೆಂಬ ಉದ್ದಿಶ್ಯದಿಂದ **ಅಪಶ್ಯಂ** ಎಂದು ಹೇಳಿದೆ. ಅಪಶ್ಯಂ ಎಂದರೆ ಕೇವಲ ಭೌತಿಕವಾದ ಚಕ್ಷುಸ್ಸಿಗೆ ಮಾತ್ರ ಗೋಚರವಾಗತಕ್ಕ ಆದಿತ್ಯನ ಸ್ವರೂಪವಲ್ಲ ಎಂಬುದನ್ನು ತಿಳಿಸಲು ಸಾಯಣರು “ **ಅಪಶ್ಯಂ— ಯಾಥಾತ್ಮ್ಯೇನ ಪಶ್ಯೇಯಂ** ” ಆದಿತ್ಯನ ಸತ್ಯಸ್ವರೂಪವನ್ನು ಅರಿಯುವೆನು ಎಂದು ವಿವರಿಸಿದ್ದಾರೆ. ಆದಿತ್ಯನ ಸತ್ಯಸ್ವರೂಪವು ಕೇವಲ ರಶ್ಮಿಗಳ

ದ್ವಾರಾ ಪ್ರಸರಣವೂ, ಸಂಗ್ರಹವೂ ಆಗಿರುವುದು ಮಾತ್ರವಲ್ಲದೆ ಸಕಲವಾದ ವಿಶ್ವವೂ ಯಾರಲ್ಲಿ ಅಂತರ್ಗತವಾಗಿದೆಯೋ ಅಂತಹ ಪರಬ್ರಹ್ಮನೇ ಎಂದು ಅರಿಯಬೇಕು.

**ಸ ಹೋವಾಚ ಗಾರ್ಗ್ಯೋ ಯ ಏವಾಸಾವಾದಿತ್ಯೇ ಪುರುಷ ಏತಮೇವಾಹಂ ಬ್ರಹ್ಮೋಪಾಸ ಇತಿ ।** (ಬೃ. ಉ. ೩-೧-೨)

ಈ ಆದಿತ್ಯನಲ್ಲಿ ಮಧ್ಯವರ್ತಿಯಾಗಿರುವ ಮಹಾಪುರುಷನೇ ಪರಬ್ರಹ್ಮನು ಎಂದು ಉಪಾಸನೆಯನ್ನು ಮಾಡಬೇಕು. ಏತಕ್ಕೆಂದರೆ—

**ಅಯಮಾದಿತ್ಯಃ ಸರ್ವೇಷಾಂ ಭೂತಾನಾಂ ಮಧ್ವಸ್ಯಾದಿತ್ಯಸ್ಯ ಸರ್ವಾಣಿ ಭೂತಾನಿ ಮಧು ಯಶ್ಚಾಯಮಸ್ಮಿನ್ನಾದಿತ್ಯೇ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ಚಾಕ್ಷುಷಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಂ ಸರ್ವಂ ॥** (ಬೃ. ಉ. ೨-೫-೫)

ಈ ಆದಿತ್ಯನು ಸಕಲ ಭೂತಗಳಿಗೂ ಮಧುವಾಗಿದ್ದಾನೆ. ಸಕಲ ಭೂತಗಳೂ ಈ ಆದಿತ್ಯನಿಗೆ ಮಧುವಾಗಿದೆ. ಈ ಆದಿತ್ಯಾಂತರ್ಗತನಾದವನೂ, ಅಮೃತಮಯನೂ ಆದ ಪುರುಷನೇ ಪರಬ್ರಹ್ಮನಾಗಿದ್ದಾನೆ ಎಂಬ ತತ್ತ್ವವನ್ನು ತಿಳಿಯುತ್ತೇನೆ ಎಂಬುದೇ **ಅಪಶ್ಯಂ** ಎಂಬುದರ ಅರ್ಥವೆಂದು ತಿಳಿಸಿದೆ.



## ಯ ಈಂ ಚಕಾರ ನ ಸೋ ಅಸ್ಯ ವೇದ ಯ ಈಂ ದದರ್ಶ ಹಿರುಗಿನ್ನು ತಸ್ಮಾತ್ । ಸ ಮಾತುರ್ಯೋನಾ ಪರಿವೀತೋ ಅಂತರ್ಬಹುಪ್ರಜಾ ನಿರ್ಋತಿಮಾ ವಿವೇಶ ॥ ೩೨ ॥

ಯಾವ ಪುರುಷನು ಸಂತಾನರೂಪವಾದ ಈ ಗರ್ಭವನ್ನು ಸೃಷ್ಟಿಸಿದನೋ ಅವನು ಈ ಗರ್ಭದ ಮರ್ಮವನ್ನರಿಯಲಾರನು. ಉದರವೃದ್ಧಿಯೇ ಮುಂತಾದ ಹೊರಗಿನ ಸಂಜ್ಞೆಗಳಿಂದ ಇದನ್ನು ನೋಡಿದರೂ ಸಹ ಇದರ ತತ್ತ್ವವು ಅಂತರ್ಹಿತವಾಗಿಯೇ ಇದೆ. ಇದರ ಮರ್ಮವನ್ನರಿಯದ ಅಜ್ಞಾನಿಯು ತನ್ನ ಜನ್ಮಕ್ಕೆ ಕಾರಣಳಾದ ತಾಯಿಯ ಯೋನಿಯ ಒಳಗಡೆ ಉಲ್ಬಾದಿಗಳಿಂದ ಸುತ್ತುವರಿಯಲ್ಪಟ್ಟು ಪುನಃ ಪುನಃ ಜನ್ಮವುಳ್ಳವನಾಗಿ ದುಃಖಕ್ಕೆ ಭಾಗಿಯಾಗುತ್ತಾನೆ.

ಈ ಋಕ್ಕಿಗೆ ನಿರುಕ್ತಕಾರರು ಎರಡು ವಿಧವಾದ ಅರ್ಥವನ್ನು ತೋರಿಸಿದ್ದಾರೆ. ಮೊದಲನೆಯದು ಪರಿವ್ರಾಜಕರ ಆಧ್ಯಾತ್ಮಿಕವಾದ ಅರ್ಥ. ಎರಡನೆಯದು ನಿರುಕ್ತಕಾರರ ನಿರ್ವಚನರೂಪವಾದ ಅರ್ಥ.

**ಬಹುಪ್ರಜಾಃ ಕೃಚ್ಛ್ರಮಾಪದ್ಯತ ಇತಿ ಪರಿವ್ರಾಜಕಾಃ । ವರ್ಷಕರ್ಮೇತಿ ನೈರುಕ್ತಾಃ ।** (ನಿ. ೨-೮)

ಅನೇಕ ಸಂತಾನವುಳ್ಳವನು (ಅಥವಾ ಜನ್ಮವುಳ್ಳವನು) ನಾನಾವಿಧವಾದ ಕಷ್ಟವನ್ನನುಭವಿಸುತ್ತಾನೆಂದು ತಾತ್ಪರ್ಯವೆಂದು ಆಧ್ಯಾತ್ಮಿಕತತ್ತ್ವವನ್ನರಿತ ಸನ್ಯಾಸಿಗಳು ಒಂದು ವಿಧವಾಗಿಯೂ, ವೃಷ್ಟಿತತ್ತ್ವವನ್ನು ವಿವರಿಸುವುದೇ ಈ ಋಕ್ಕಿನ

ಮುಖ್ಯ ತಾತ್ಪರ್ಯವೆಂದು ನಿರುಕ್ತಕಾರರು ಇನ್ನೊಂದು ವಿಧವಾಗಿಯೂ ಅರ್ಥಮಾಡಿದ್ದಾರೆಂದು ಯಾಸ್ಕರು ಮೊದಲು ಹೇಳಿ ಅನಂತರ ತಮ್ಮ ವಿವರಣೆಯನ್ನು ಈರೀತಿ ಹೇಳಿದ್ದಾರೆ.

**ಯ ಈಂ ಚಕಾರೇತಿ ಕರೋತಿ ಕಿರತೀ ಸಂದಿಗ್ಧೌ ವರ್ಷಕರ್ಮಣಾ 'ನ ಸೋ ಅಸ್ಯವೇದ' ಮಧ್ಯಮಃ ಸ ಏವಾಸ್ಯ ವೇದ ಮಧ್ಯಮೋ ಯೋ ದದರ್ಶಾದಿತ್ಯೋಪಹಿತಂ। 'ಸಮಾತುರ್ಯೋನಾ' ಮಾತಾಂತರಿಕ್ಷಂ ನಿರ್ಮೀಯಂತೇಽಸ್ಮಿನ್ ಭೂತಾನಿ । ಯೋನಿರಂತರಿಕ್ಷಂ ಮಹಾನವಯವಃ ಪರಿವೀತೋ ವಾಯುನಾ । ಅಯಮಪೀತರೋ ಯೋನಿರೇತಸ್ಮಾದೇವ, ಪರಿಯುತೋ ಭವತಿ । ಬಹುಪ್ರಜಾ ಭೂಮಿಮಾಪದ್ಯತೇ ವರ್ಷಕರ್ಮಣಾ ।** (ನಿ. ೨-೮)

ಇಲ್ಲಿ ಸೃಷ್ಟಿಸು, ಹರಡು ಎಂಬರ್ಥಗಳನ್ನು ಕೊಡತಕ್ಕ 'ಚಕಾರ' ಎಂಬ ಪದವು ವೃಷ್ಟಿಕರ್ಮದ ವ್ಯಾಪಾರವನ್ನು ತೋರಿಸುತ್ತದೆ. **'ನ ಸೋ ಅಸ್ಯ ವೇದ'** ಎಂದರೆ ಮೇಘಕ್ಕೆ ಈ ವೃಷ್ಟಿತತ್ತ್ವದ ಮರ್ಮವನ್ನು ತಿಳಿಯಲಾಗುವುದಿಲ್ಲ. ಇದು ಕೇವಲ ವೃಷ್ಟಿರೂಪವಾದ ಉದಕವನ್ನು ಸುರಿಸುವುದೇ ವಿನಹ ಇದಕ್ಕೆ ಅದರ ಮರ್ಮವು ತಿಳಿಯುವುದಿಲ್ಲ. ಆದರೆ ಅದೇ ಮಧ್ಯಮ ಲೋಕವರ್ತಿಯಾದ ಇಂದ್ರನು ಇದರ ಮರ್ಮವನ್ನು ತಿಳಿಯುತ್ತಾನೆ. ಈ ಇಂದ್ರನು ಸೂರ್ಯ ರಶ್ಮಿಗಳಿಂದಲೂ ವಾಯುವಿನಿಂದಲೂ ಪರಿವೀತನಾಗಿದ್ದಾನೆ. ಮತ್ತು ವರ್ಷಾಕಾಲದಲ್ಲಿ ನಾನಾ ರೂಪದಿಂದ ಪ್ರವಹಿಸತಕ್ಕ ವೃಷ್ಟಿಯ ರೂಪದಲ್ಲಿ ಇಳಿದು ಭೂಮಿಯನ್ನು ಪ್ರವೇಶಿಸುತ್ತಾನೆ ಎಂದು ಯಾಸ್ಕರು ಈ ಋಕ್ಕಿನ ಒಟ್ಟಿನ ತಾತ್ಪರ್ಯವನ್ನು ಹೇಳಿದ್ದಾರೆ. ಯಾಸ್ಕರ ನಿರ್ವಚನದ ಪ್ರಕಾರ—

**ಚಕಾರ**—ಎಂಬ ಕ್ರಿಯಾಪದವು 'ಮಾಡು' ಎಂಬರ್ಥವನ್ನು ಕೊಡುವ ಕೃ ಧಾತುವಿನಿಂದ ನಿಷ್ಪವಾಗಿದೆಯೇ ಅಥವಾ, 'ಎಂಬರ್ಥವನ್ನು ಕೊಡುವ ಕೄ (ವಿಕ್ಷೇಪೇ) ಎಂಬ ಧಾತುವಿನಿಂದ ನಿಷ್ಪನ್ನವಾಗಿದೆಯೇ ಎಂಬುದು ಸಂದಿಗ್ಧವಾಗಿದ್ದರೂ ಸಹ ವರ್ಷಕರ್ಮಕ್ಕೆ ಸಂಬಂಧಿಸಿದೆ. ವೃಷ್ಟಿಯನ್ನು ಸೃಷ್ಟಿಸುತ್ತಾನೆ ಅಥವಾ ವೃಷ್ಟಿ ರೂಪವಾದ ಉದಕವನ್ನು ಹರಡುತ್ತಾನೆಂದರ್ಥವು, **ಕಃ ಪುನರಸೌ** ಎಂದು ದುರ್ಗಾಚಾರ್ಯರು ನಿರುಕ್ತನಿರ್ವಚನವನ್ನು ವಿವರಿಸುವಾಗ ಪ್ರಶ್ನಿಸಿ, **ಮೇಘಃ । ಯಃ** ಎಂಬುದು ಮೇಘಪರವಾದ ಪದವೆಂದು ತೋರಿಸಿದ್ದಾರೆ. ಈ ಮೇಘಕ್ಕೆ ವೃಷ್ಟಿವಿಷಯಕವಾದ ತತ್ತ್ವಜ್ಞಾನವಿಲ್ಲವೆಂದರ್ಥ. ಅದೇ ಮಧ್ಯ ಲೋಕವರ್ತಿಯಾದ ಇಂದ್ರನಿಗಿದೆಯೆಂದರ್ಥ.

**ಸ ಮಾತುರ್ಯೋನಾ ಪರಿವೀತಃ**—ಎಂಬ ವರ್ಣನೆಯು ಅಂತರಿಕ್ಷಸ್ಥನಾದ ಇಂದ್ರನ ಪರವಾಗಿದೆ. ಇಲ್ಲಿ **ಮಾತುಃ** ಎಂದರೆ ಅಂತರಿಕ್ಷವೆಂದರ್ಥ. ಈ ಅರ್ಥವು ಹೇಗಾಯಿತೆಂದು ನಿರುಕ್ತಕಾರು ಈ ಪದದ ನಿರ್ವಚನವನ್ನು ಹೇಳಿದ್ದಾರೆ.

**ಮಾತಾಂತರಿಕ್ಷಂ ನಿರ್ಮೀಯಂತೇಽಸ್ಮಿನ್ ಭೂತಾನಿ ।** (ನಿ. ೨-೮)

ಇದರಲ್ಲಿ ಭೂತಗಳು ಸೃಷ್ಟಿಸಲ್ಪಡುವುವಾದ್ದರಿಂದ ಅಂತರಿಕ್ಷಕ್ಕೆ ಮಾತೃವೆಂದು ಹೆಸರು ಈ ಅಂತರಿಕ್ಷಕ್ಕೇ ಯೋನಿಯೆಂದೂ ಪರ್ಯಾಯನಾಮವಾಗಿದೆ. ಹೇಗೆಂದರೆ,

**ಯೋನಿರಂತರಿಕ್ಷಂ ಮಹಾನವಯವಃ ಪರಿವಿತೋ ವಾಯುನಾ ।** (ನಿ. ೨-೮)

ವಾಯುವಿನಿಂದ ಪರಿವೀತವಾದುದೂ ಅತ್ಯಂತ ವಿಸ್ತೃತವಾದುದೂ ಆದ ಅವಯವವಾದುದರಿಂದ ಅಂತರಿಕ್ಷಕ್ಕೆ ಯೋನಿಯೆಂದು ಹೆಸರು.

ಅಯಮಪೀತರೋ ಯೋನಿರೇತಸ್ಮಾದೇವ । ಪರಿಯುತೋ ಭವತಿ । (ನಿ. ೨-೮)

ಸಂತಾನರೂಪವಾದ ಗರ್ಭವನ್ನು ಧರಿಸುವ ಅವಯವಕ್ಕೂ ಸಹ ಮಾಂಸಾದಿಗಳಿಂದ ಪರಿಯುತವಾಗಿರುವುದರಿಂದ ಯೋನಿಯೆಂಬ ಹೆಸರೆಂದು ಎರಡರ್ಥಗಳಲ್ಲೂ **ಯೋನಿ** ಶಬ್ದದ ನಿರ್ವಚನವನ್ನು ತಿಳಿಸಿದೆ.

**ಬಹುಪ್ರಜಾ ನಿರ್ಋತಿಮಾವಿವೇಶ**—ಬಹುಪ್ರಜಾ ಭೂಮಿಮಾಪದ್ಯತೇ ವರ್ಷಕರ್ಮಣಾ । ವೃಷ್ಟಿ ರೂಪದಿಂದ ಅತ್ಯಂತ ವಿಸ್ತೃತವಾಗಿಯೂ ಪ್ರಸರಿಸಿ ಭೂಮಿಯನ್ನು ಸೇರುತ್ತಾನೆಂದರ್ಥವು. ಇಲ್ಲಿ **ನಿರ್ಋತಿ** ಶಬ್ದಕ್ಕೆ ಭೂಮಿಯೆಂದರ್ಥಮಾಡಿದೆ. ಅದು ಹೇಗೆಂದರೆ:—

ಇಮಾನ್ಯೇಕವಿಂಶತಿಃ ಪೃಥಿವೀನಾಮಧೇಯಾನ್ಯನುಕ್ರಾಂತಾನಿ । ತತ್ರ ನಿರ್ಋತಿರ್ನಿ-
ರಮಣಾದೃಚ್ಛತೇಃ ಕೃಚ್ಛ್ರಾಪತ್ತಿರಿತರಾ ಸಾ ಪೃಥಿವ್ಯಾ ಸಂದಿಹ್ಯತೇ । ತಯೋರ್ವಿಭಾಗಃ ।
(ನಿ. ೨-೭)

ಇಪ್ಪತ್ತೊಂದು ಪೃಥ್ವೀನಾಮಗಳಲ್ಲಿ **ನಿರ್ಋತಿ** ಶಬ್ದವೂ ಪಠಿತವಾಗಿದೆ. ಆನಂದದಾಯಿನಿಯಾದುದರಿಂದ ಪೃಥ್ವಿಗೆ **ನಿರ್ಋತಿ**ಯೆಂದು ಹೆಸರು. ಆದರೆ **ಆಪತ್ತು** ಎಂಬರ್ಥದಲ್ಲಿಯೂ ಸಹ ಈ ಪದವು ಪ್ರಯೋಗಿಸಲ್ಪಡುತ್ತದೆ. ಆಗ **ಋ** ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ತಿಳಿಯಬೇಕು ಎಂದು ನಿರುಕ್ತಕಾರರು ಇದರ ನಿರ್ವಚನವನ್ನು ತೋರಿಸಿ ಅನಂತರ ಈ ಪದದ ನಿಸ್ಪೃಷ್ಟವಾದ ಪ್ರಯೋಗವನ್ನು ತಿಳಿಯಬೇಕೆಂದೂ, ಪೃಥ್ವಿಯೆಂದರ್ಥವಿರುವಾಗ ಆಪತ್ತೆಂದರ್ಥಮಾಡಬಾರದೆಂದೂ ಅದರಂತೆಯೇ ಎರಡನೆಯ ಅರ್ಥವನ್ನು ಹೇಳಬೇಕಾಗಿರುವಾಗ ಪೃಥ್ವಿಯೆಂದು ಅರ್ಥಮಾಡಬಾರದೆಂದೂ ಎಚ್ಚರಿಸಿದ್ದಾರೆ. ಈ ಎರಡರ್ಥಗಳನ್ನೂ ಕೊಡಬಹುದಾದ ಸಂದರ್ಭಗಳೂ ಇವೆಯೆಂದೂ ತಿಳಿಸಿ ಅದರ ಉದಾಹರಣೆಗಾಗಿ ನಿರುಕ್ತದಲ್ಲಿ ಪ್ರಕೃತವಾದ ಋಕ್ಕನ್ನು ಉದಹರಿಸಿ ಮೇಲ್ಕಂಡಂತೆ ಈ ಋಕ್ಕನ್ನು ವಿವರಿಸಿದ್ದಾರೆ. ಈ ಋಕ್ಕಿನಲ್ಲಿ ಆಧ್ಯಾತ್ಮಿಕವಾದ ಅರ್ಥವನ್ನು ಮಾಡುವಾಗ **ಆಪತ್ತೆಂ**ದೂ ಆಧಿದೈವತಪಕ್ಷದಲ್ಲಿ ಪೃಥಿವಿಯೆಂದೂ ಅರ್ಥವಾಗುತ್ತದೆ.

ದುರ್ಗಾಚಾರ್ಯರು ಈ ಸಂದರ್ಭವನ್ನು ವಿವರಿಸುತ್ತಾ, ಇದೇ ರೀತಿ ಎರಡು ವಿಧವಾದ ಅರ್ಥಗಳನ್ನು ಕೊಡತಕ್ಕ ಮಂತ್ರಗಳು ಇನ್ನೂ ಇವೆಯೆಂದು ತಿಳಿಸಿ.

ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ । ಸುರಭಿ ನೋ ಮುಖಾ ಕರತ್ಪ್ರಣ
ಆಯೂಂಷಿ ತಾರಿಷತ್ ॥ (ಋ. ಸಂ. ೪-೩೯-೬)

ಎಂಬ ಋಕ್ಕನುದಹರಿಸಿ, ಅಲ್ಲಿಯೂ ಸಹ ಸಂದಿಗ್ಧವಾದ ಸನ್ನಿವೇಶವಿದೆಯೆಂದೂ ಅರ್ಥದ್ವಯವು ಸಾಧ್ಯವೆಂದೂ ತಿಳಿಸಿದ್ದಾರೆ. ಹೇಗೆಂದರೆ, ಇದೇ ಮಂತ್ರವು ಅಗ್ನಿಷ್ಟೋಮದಲ್ಲಿ ದಧಿಭಕ್ಷಣಕಾಲದಲ್ಲಿ ಪಠಿತವಾಗುತ್ತದೆ. ಅಲ್ಲದೆ, ಅಶ್ವಮೇಧ ಯಾಗದಲ್ಲಿ ಸ್ತ್ರೀಯರು ಅಶ್ವದ ಮುಂದೆ ಈ ಮಂತ್ರವನ್ನು ಪಠಿಸುತ್ತಾರೆ. ಆಯಾ ಸಂದರ್ಭಕ್ಕನುಗುಣವಾಗಿ ಈ ಮಂತ್ರಕ್ಕೆ ಅರ್ಥಮಾಡಲು ಸಾಧ್ಯವಾದುದರಿಂದಲೇ ಬೇರೆಬೇರೆ ಸಂದರ್ಭಗಳಲ್ಲೂ ಇದರ ಪ್ರಯೋಗವಿದೆಯೆಂದೂ ಇದರಂತೆಯೇ, **ನಿರ್ಋತಿ**ಯೆಂಬ ಪದವು ಪ್ರಕೃತವಾದ ಋಕ್ಕಿನಲ್ಲಿ ಪ್ರಯೋಗಿಸಲ್ಪಟ್ಟು ಒಟ್ಟು ಋಕ್ಕಿಗೇ ಎರಡು ವಿಧವಾದ ಅರ್ಥವು ಸಾಧ್ಯವಾಗುವಂತೆ ಮಾಡುತ್ತದೆಯೆಂದೂ ತಿಳಿಸಿದ್ದಾರೆ.

ಅಧಿದೈವತಪಕ್ಷದಲ್ಲಿ **ಈಂ ದದರ್ಶ ಹಿರುಗಿನ್ನು ತಸ್ಮಾತ್** ಎನ್ನುವಾಗ ಈ ದರ್ಶನಕರ್ಮವು ಇಂದ್ರನಿಗೆ ಸಂಬಂಧಿಸಿದುದೆಂದು ನಿರುಕ್ತವಾಕ್ಯದಿಂದ ತಿಳಿಯುತ್ತದೆ. ಹೇಗೆಂದರೆ, **ಹಿರುಕ್** ಎಂದರೆ ಅಂತರ್ಹಿತನೆಂದರ್ಥ. ಈ ಪದವು **ನಿಣ್ಯಂ,**

**ಸಸ್ವಃ** ಇತ್ಯಾದಿ ಅಂತರ್ಹಿತನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೯) ಅವ್ಯಕ್ತನಾದವನೆಂದರ್ಥ. ಇಲ್ಲಿ ಅವ್ಯಕ್ತನಾದವನು ಯಾರು ಎಂದರೆ ಎಂದರೆ **ಆದಿತ್ಯೋಽಪಹಿತಂ** ಎಂದು ನಿರುಕ್ತಕಾರರು ತಿಳಿಸಿದ್ದಾರೆ. ಇದನ್ನು ವಿವರಿಸುತ್ತಾ ದುರ್ಗಾಚಾರ್ಯರು **ಆದಿತ್ಯಸ್ಯ ರಶ್ಮ್ಯಂತರ್ಗತಂ ವರ್ಷಮನಭಿವ್ಯಕ್ತಂ । ಕಶ್ಚಸೌ ಅಂತರ್ಗತಃ ಸ ಇಂದ್ರಃ । ಅಸಾವಪಿ ಮಧ್ಯಮ ಏವ ।** ಆದಿತ್ಯನ ರಶ್ಮಿಗಳ ನಡುವೆ ಅಂತರ್ಗತನಾದವನು ಯಾರೆಂದರೆ ಅವನು ಇಂದ್ರನೆಂದು ತಿಳಿಯಬೇಕು. ಮೇಘವೂ, ಇಂದ್ರನೂ, ವಾಯುವೂ ಮಧ್ಯಮಲೋಕವರ್ತಿಗಳು. ಆದರೆ ವಾಯುವೂ ಮೇಘವೂ ವೃಷ್ಟಿಕಾರಕಗಳಾದರೂ ಅವು ಅಚೇತನಗಳಾದುದರಿಂದ ವೃಷ್ಟಿತತ್ತ್ವವನ್ನು ತಿಳಿಯಲಾರವು. " **ತಯೋರ ಚೇತನತ್ವಾದಿತಿ ಭಾವಃ** " ಎಂದು ಸಾಯಣರ ವಿವರಣೆಯಿದೆ. ಆದರೆ **ಯ ಈಂ ದದರ್ಶ, ಹಿರುಕ್**—ಎನ್ನುವುದಕ್ಕೆ ದುರ್ಗಾಚಾರ್ಯರು ನಿರುಕ್ತವಾಕ್ಯದ ಆಧಾರದಮೇಲೆ ಇಂದ್ರನೆಂದರ್ಥಮಾಡಿದ್ದಾರೆ. ಸಾಯಣರು " **ಪ್ರಾಣಿಕರ್ಮವಶೇನ ಕಾಲೇ ವರ್ಷಿತಾ ಪರಮೇಶ್ವರಃ ಆದಿತ್ಯಾತ್ಮನಿ ಗೂಢ ಇತ್ಯರ್ಥಃ** " ಆಯಾ ಜೀವಿಗಳ ಕರ್ಮಾಯತ್ತವಾಗಿ ವೃಷ್ಟಿಯನ್ನು ಸುರಿಸತಕ್ಕ ಪರಮೇಶ್ವರನು ಆದಿತ್ಯನಲ್ಲಿ ಅಂತರ್ಗತನಾಗಿಯೂ ಗೂಢನಾಗಿಯೂ ಇದ್ದಾನೆ ಎಂದು ವಿವರಿಸಿದ್ದಾರೆ. ಇಲ್ಲಿ **ಹಿರುಗಿನ್ನು ತಸ್ಮಾತ್** ಎಂದು ವರ್ಣಿತವಾಗಿರುವುದನ್ನು ಉಪನಿಷತ್ತುಗಳಲ್ಲಿ ಈರೀತಿ ವರ್ಣಿಸಿದೆ.

**ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ ।**
**ತತ್ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ ॥**

(ಈಶಾ. ಉ. ೧೫)

ಹಿರಣ್ಮಯವಾದ ಪಾತ್ರೆಯಿಂದ ಸತ್ಯದ ಮುಖವು ಮುಚ್ಚಿರುತ್ತದೆ, ಎಂದು ಈಶೋಪನಿಷತ್ತು ತಿಳಿಸುತ್ತದೆ.

**ಹಿರಣ್ಮಯೇನ ಪಾತ್ರೇಣ । ಹಿರಣ್ಮಯಮಿವ ಹಿರಣ್ಮಯಂ । ಜ್ಯೋತಿರ್ಮಯಮಿತ್ಯೇತತ್ । ತೇನ ಪಾತ್ರೇಣೇವಾಪಿಧಾನಭೂತೇನ ಸತ್ಯಸ್ಯೈವಾದಿತ್ಯಮಂಡಲಸ್ಥಸ್ಯ ಬ್ರಹ್ಮಣೋಽಪಿಹಿತಮಾಚ್ಛಾದಿತಂ ಮುಖಂ ದ್ವಾರಂ ॥** (ಶಾಂಕರ ಭಾಷ್ಯ)

ಹಿರಣ್ಮಯವಾದ ಪಾತ್ರೆಯಿಂದ, ಎಂದರೆ ಪಾತ್ರೆಯಂತೆ ಮರೆಯಾಗಿರುವ ಪ್ರಕಾಶದಿಂದ ಆದಿತ್ಯಮಂಡಲದಲ್ಲಿರುವ ಸತ್ಯಬ್ರಹ್ಮದ ಮುಖವು ಎಂದರೆ ದ್ವಾರವು ಮುಚ್ಚಿರುತ್ತದೆ, ಹೊದಿಸಲ್ಪಟ್ಟಿರುತ್ತದೆ ಎಂದರೆ, ಸೂರ್ಯಮಂಡಲದ ಕಿರಣಗಳು ಅದರಲ್ಲಿರುವ ಸತ್ಯಬ್ರಹ್ಮವನ್ನು ಕಾಣದಂತೆ ಮುಚ್ಚಿರುತ್ತವೆ. ಇಲ್ಲಿ ಮಂಡಲವೇ ಮುಚ್ಚಳದ ಪಾತ್ರೆ. ಸತ್ಯಬ್ರಹ್ಮವೇ ಅದರೊಳಗೆ ಪರಮಾತ್ಮತತ್ತ್ವವು. ಇದನ್ನೇ ಬೃಹದಾರಣ್ಯಕದಲ್ಲಿ,

**ತದ್ಯತ್ತತ್ಸತ್ಯಮಸೌ ಸ ಆದಿತ್ಯೋ ಯ ಏಷ ಏತಸ್ಮಿನ್ಮಂಡಲೇ ಪುರುಷಃ ।** (ಬೃ. ಉ. ೫-೭-೨)

ಈ ಆದಿತ್ಯಮಂಡಲಾಂತರ್ವರ್ತಿಯಾದ ಈ ಪುರುಷನೇ ಪರವಸ್ತುವು ಇತ್ಯಾದಿಯಾಗಿ ವರ್ಣಿಸಿದೆ. ಈ ಪರವಸ್ತುವು ಲೌಕಿಕವಾದ ಪ್ರತ್ಯಕ್ಷಕ್ಕೆ ಗೋಚರವಾಗುವುದಿಲ್ಲವಾದುದರಿಂದ ಇದನ್ನೇ ಪ್ರಕೃತವಾದ ಋಕ್ಕಿನಲ್ಲಿ ಹಿರುಗಿನ್ನು ತಸ್ಮಾತ್ ಕೇವಲ ಭೌತಿಕವಾದ ದೃಷ್ಟಿಯಿಂದ ನೋಡುವವನಿಗೆ ಈ ಆದಿತ್ಯನು ಪ್ರತ್ಯಕ್ಷದಲ್ಲಿದ್ದರೂ ಸಹ ಈ ಪರವಸ್ತುವು ಮಾತ್ರ ಅಂತರ್ಹಿತವಾಗಿಯೇ ಇದೆ ಎಂಬುದಾಗಿ ವರ್ಣಿಸಿದೆ. ಇಂತಹ ಪರಮಾತ್ಮನ ಸ್ವರೂಪವನ್ನು ಪೂರ್ಣವಾಗಿ ಅರಿಯದಿದ್ದರೆ ಆಗ ನಾನಾವಿಧವಾದ ದುಃಖಗಳಿಗೆ ಹೇತುವಾದ ಜನ್ಮಜರಾದಿಗಳು ಪುನಃಪುನಃ ಸಂಭವಿಸುವುವು ಎಂಬುದನ್ನು ಪ್ರಕೃತವಾದ ಋಕ್ಕಿನಲ್ಲಿ ತಿಳಿಸಿದೆಯೆಂದು " **ಬಹುಪ್ರಜಾಃ ಕೃಚ್ಛ್ರಮಾಪದ್ಯತ ಇತಿ ಪರಿವ್ರಾಜಕಾಃ** " ಎಂಬ ವಾಕ್ಯದಿಂದ ನಿರುಕ್ತಕಾರರು ತಿಳಿಸಿದ್ದಾರೆ. (ನಿ. ೨-೮)

**ಅತ್ರ ಗರ್ಭವಾಸಕ್ಲೇಶಪೂರ್ವಕಜನನಪ್ರತಿಪಾದನೇನ ತತ್ಪರಿಹಾರಾಯ ಆತ್ಮಾ ಜ್ಞಾತವ್ಯಃ ಇತ್ಯರ್ಥಾತ್ಪ್ರತಿಪದ್ಯತೇ ||**

ಗರ್ಭದಲ್ಲಿ ವಾಸ, ಕ್ಲೇಶಪೂರ್ವಕವಾದ ಜನನ, ಕ್ಲೇಶಭರಿತವಾದ ಜೀವನ, ದುಃಖಾತ್ಮಕವಾದ ಜರಾಮರಣಾದಿಗಳು, ಪುನಃ ಇವೆಲ್ಲದರ ಆವೃತ್ತಿಗಳು. ಇವೆಲ್ಲವೂ ಆ ಪರಮಾತ್ಮನನ್ನು ತಿಳಿಯದೇ ಇರುವ ಅಜ್ಞಾನದಿಂದ ಸಂಭವಿಸುವ ದುಃಖಗಳಾದುದರಿಂದ ಇವುಗಳಿಂದ ಮುಕ್ತನಾಗಲು ಆತ್ಮವು ಅರಿಯಲ್ಪಡಬೇಕು ಎಂಬುದೇ ಈ ಋಕ್ಕಿನ ಮುಖ್ಯತಾತ್ಪರ್ಯವೆಂದು ಸಾಯಣರು ತಮ್ಮ ಭಾಷ್ಯದ ಪ್ರಾರಂಭದಲ್ಲೇ ತಿಳಿಸಿದ್ದಾರೆ. ಈ ಅರ್ಥವನ್ನು ಹೇಳುವಾಗ ಇಲ್ಲಿ **ನಿರ್ಋತಿ** ಎಂಬ ಪದಕ್ಕೆ ದುಃಖ; ಆಪತ್ತು ಎಂದರ್ಥಮಾಡಬೇಕು. [ಅಧಿದೈವತಪಕ್ಷದಲ್ಲಿ ಭೂಮಿಯೆಂದರ್ಥವೆಂದು ಮೇಲೆ ತಿಳಿಸಿದೆ.] ಆತ್ಮಜ್ಞಾನವಿಲ್ಲದವನು ಬಹುಪ್ರಜೆಯುಳ್ಳವನಾಗಿ ನಿರಂತರವಾದ ದುಃಖಕ್ಕೆ ಭಾಗಿಯಾಗುತ್ತಾನೆ ಎಂದರ್ಥವು. ಇಲ್ಲಿ ಬಹುಪ್ರಜೆಯೆಂದರೆ ಮಿತಿಮೀರಿದ ಪ್ರಜಾಸಂತಾನವೆಂದಾಗಲಿ ಅಥವಾ ತಾನೇ ಜನ್ಮಾಂತರಗಳನ್ನು ಹೊಂದಿ ಅನೇಕ ಗರ್ಭಗಳಲ್ಲಿ ಪ್ರಜಾರೂಪವನ್ನು ಪಡೆಯುತ್ತಾನೆ ಎಂದಾಗಲಿ ಅರ್ಥವಾಗಬಹುದೆಂದು ತಿಳಿಸಿದೆ. ಇದನ್ನೇ ಕಠೋಪನಿಷತ್ತಿನಲ್ಲಿ ವರ್ಣಿಸುತ್ತಾ,

**ಅವಿದ್ಯಾಯಾಮಂತರೇ ವರ್ತಮಾನಾಃ ಸ್ವಯಂ ಧೀರಾಃ ಪಂಡಿತಂಮನ್ಯಮಾನಾಃ |**
**ದಂದ್ರಮ್ಯಮಾಣಾಃ ಪರಿಯಂತಿ ಮೂಢಾ ಅಂಧೇನೈವ ನೀಯಮಾನಾ ಯಥಾಂಧಾಃ ||**
**ನ ಸಾಂಪರಾಯಃ ಪ್ರತಿಭಾತಿ ಬಾಲಂ ಪ್ರಮಾದ್ಯಂತಂ ವಿತ್ತಮೋಹೇನ ಮೂಢಂ |**
**ಅಯಂ ಲೋಕೋ ನಾಸ್ತಿ ಪರ ಇತಿ ಮಾನೀ ಪುನಃಪುನರ್ವಶಮಾಪದ್ಯತೇ ಮೇ ||**

(ಕಠ ೧-೨-೫, ೬)

ಯಾರು ಸಂಸಾರಚಕ್ರದಲ್ಲಿ ಸಿಕ್ಕಿ ಅವಿದ್ಯಾಪೂರಿತರಾಗಿರುವರೋ ಅವರು "**ದಂದ್ರಮ್ಯಮಾಣಾಃ**" ಡೊಂಕುಡೊಂಕಾಗಿರುವ ಕರ್ಮಗತಿಯಲ್ಲಿ ನಡೆಯುತ್ತಾ ಮುಪ್ಪು, ಸಾವು, ಬೇನೆ ಮುಂತಾದ ದುಃಖಗಳಿಂದ ತೊಳಲುತ್ತಿರುವರು. ಇಂತಹ ಜ್ಞಾನರಹಿತರಾದ ಅಂಧರು ಪುನಃ ಪುನಃ ಜನ್ಮವನ್ನು ಸಂಪಾದಿಸಿ ಮೃತ್ಯುವಾದ ನನ್ನ ವಶವನ್ನು ಹೊಂದುವರು. ಹುಟ್ಟುವುದು ಸಾಯುವುದು ಮುಂತಾದ ದುಃಖದ ಸಾಲನ್ನೇರಿಕೊಂಡೇ ಇರುವರು ಎಂದು ನಚಿಕೇತನಿಗೆ ಯಮನು ವಿವರಿಸಿರುವನು. ಇದನ್ನೇ ಮುಂಡಕದಲ್ಲಿ

**ಅವಿದ್ಯಾಯಾಂ ಬಹುಧಾ ವರ್ತಮಾನಾ ವಯಂ ಕೃತಾರ್ಥಾ ಇತ್ಯಭಿಮನ್ಯಂತಿ ಬಾಲಾಃ | ಯತ್ಕರ್ಮಿಣೋ ನ ಪ್ರವೇದಯಂತಿ ರಾಗಾತ್ತೇನಾತುರಾಃ ಕ್ಷೀಣಲೋಕಾಶ್ಚ್ಯವಂತೇ ||** (ಮು. ೧-೨-೯)

ಅವಿದ್ಯಾಸಮೂಹದಲ್ಲಿ ಇರುವವರು ರಾಗದಿಂದ ಎಂದರೆ ಕರ್ಮಫಲದ ಆಸೆಯಿಂದ ಆತುರರಾಗಿ, ದುಃಖದಿಂದ ನರಳುತ್ತಾ ಕ್ಷೀಣಲೋಕರಾಗಿ ಪುನರ್ಜನ್ಮವನ್ನು ಪಡೆಯುವರು ಇತ್ಯಾದಿಯಾಗಿ ವರ್ಣಿತವಾಗಿದೆ. ಆದುದರಿಂದ ಭೌತಿಕವಾದ ಚಕ್ಷುಸ್ಸಿಗೂ ನಿಲುಕದ ಈ ಪರವಸ್ತುವನ್ನು ಧ್ಯಾನಾದಿಗಳಿಂದ ಸಾಕ್ಷಾತ್ಕರಿಸಬೇಕೆಂದು ತಿಳಿಸಿದೆ. ಈ ಸಾಕ್ಷಾತ್ಕಾರಕ್ಕೆ ಕರಣವಾವುದು; ದರ್ಶನವಾವುದು? ಎಂಬುದನ್ನು ವಿವರಿಸುತ್ತಾ ಸಾಧಾರಣವಾದ ಲೌಕಿಕವಾದ ಕರಣವು ಈ ದರ್ಶನದ ಹೇತುವಾಗಲಾರದು. ಆದುದರಿಂದ '**ಯ ಈಂ ಚಕಾರ ನ ಸೋ ಅಸ್ಯ ವೇದ**' **ಯಃ ಸಂಸಾರಾವಸ್ಥಾಯಾಂ ಈಂ ಏನಂ ಕೃಷಿವಾಣಿಜ್ಯವೇದಾಧ್ಯಯನಾದಿಕಂ ಚಕಾರ ಸೋಽಸ್ಯ ಏತನ್ನವೇದ |** ಕೇವಲ ಬಾಹ್ಯವಾದ ಕೃಷ್ಯಾದಿಕರ್ಮಗಳನ್ನೂ ಅಧ್ಯಯನಾದಿಕರ್ಮಗಳನ್ನೂ ಮಾಡಿದವನ ತಿಳಿಯಲಾರನು ಅಥವಾ **ಯೋ ದದರ್ಶ ಹಿರಗಿನ್ನು ತಸ್ಮಾತ್ | ಯಃ ಗಿರಿ-**

**ನದೀಸಮುದ್ರಬಂಧ್ವಾದಿಕಂ ದದರ್ಶಜೀವನಸಮಯೇ ತಸ್ಮಾದ್ದೃಷ್ಟಾತ್ ಹಿರಗಿನ್ನು ಪೃಥಗೇವ ।** ಯಾವ ಗಿರಿನದ್ಯಾದಿಗಳನ್ನು ಸಂಸಾರಾವಸ್ಥೆಯಲ್ಲಿ ಮಾನವನು ನೋಡುತ್ತಾನೆಯೋ ಅವೆಲ್ಲಕ್ಕಿಂತಲೂ ಈ ಆತ್ಮತತ್ತ್ವವು ಬೇರೆ. ಇದರ ಸಾಕ್ಷಾತ್ಕಾರಕ್ಕೆ ಧ್ಯಾನಾದಿಕರಣವೂ, ಮನನನಿದಿಧ್ಯಾಸನಾದಿದರ್ಶನಸಾಧನವೂ ಅತ್ಯಗತ್ಯವಾದುದು ಎಂದು ತಿಳಿಸಿದೆ. ಈ ಸಾಕ್ಷಾತ್ಕಾರವಾದರೆ ಆಗ ಬ್ರಹ್ಮಜ್ಞಾನವುಂಟಾಗಿ ಜನ್ಮಾಂತರಗಳ ಬಾಧೆಗಳಿಲ್ಲದೆ ನಿತ್ಯಸುಖವು ಲಭಿಸುವುದೆಂದು ಅಧ್ಯಾತ್ಮಪಕ್ಷದ ಅಭಿಪ್ರಾಯವೆಂದು ಸಾಯಣರು ವಿವರಿಸಿದ್ದಾರೆ.



**ದ್ಯೌರ್ಮೇ ಪಿತಾ ಜನಿತಾ ನಾಭಿರತ್ರ ಬಂಧುರ್ಮೇ ಮಾತಾ ಪೃಥಿವೀ ಮಹೀಯಂ । ಉತ್ತಾನಯೋಶ್ಚಮ್ವೋರ್ಯೋನಿರಂತರತ್ರಾ ಪಿತಾ ದುಹಿತುರ್ಗರ್ಭಮಾಧಾತ್ ॥ ೩೩ ॥**

ದ್ಯುಲೋಕವು ನನಗೆ ಪಾಲಕವೂ ನನ್ನ ಉತ್ಪತ್ತಿಹೇತುವೂ ಆಗಿದೆ. ಸಕಲರಿಗೂ ಬಂಧುಭೂತವಾದುದೂ ವಿಸ್ತೃತವಾದುದೂ ಆದ ಈ ಪೃಥ್ವಿಯು ನನಗೆ ಮಾತೃರೂಪಳಾಗಿದ್ದಾಳೆ. ಊರ್ಧ್ವಮುಖವಾಗಿ ವಿಸ್ತೃತವಾದವೂ, ಚಮೂಪಾತ್ರೆಯಂತೆ ಭೋಗಸಾಧನಗಳಾದವೂ ಆದ ಈ ದ್ಯಾವಾಪೃಥಿವಿಗಳ ಮಧ್ಯಭಾಗದಲ್ಲಿ ಸಕಲ ಭೂತಗಳಿಗೂ ನಿರ್ಮಾತೃಸ್ಥಾನವಾದ ಅಂತರಿಕ್ಷದಲ್ಲಿ ಆದಿತ್ಯನು ತನ್ನ ದುಹಿತೃವಾದ ಪೃಥ್ವಿಯ ಗರ್ಭರೂಪವಾದ ಉದಕವನ್ನು ಧರಿಸಿದ್ದಾನೆ.

ಆದಿತ್ಯನ ಸ್ಥಾನವನ್ನೂ, ವಿಶ್ವಕ್ಕೂ ಅವನಿಗೂ ಇರತಕ್ಕ ರಕ್ಷಕರಕ್ಷ್ಯಸಂಬಂಧವನ್ನೂ ತಿಳಿಸುವುದೇ ಈ ಋಕ್ಕಿನ ತಾತ್ಪರ್ಯವಾಗಿದೆ. ಆನುಷಂಗಿಕವಾಗಿ ಆದಿತ್ಯನ ನಿವಾಸಸ್ಥಾನವಾದ ಅಂತರಿಕ್ಷವನ್ನೂ ಅದಕ್ಕೆ ಸಂಬಂಧಿಸಿದ ದ್ಯಾವಾಪೃಥಿವಿಗಳನ್ನೂ ಸ್ತುತಿಸಿದೆ. ದ್ಯುಲೋಕವನ್ನು ಪಿತೃವೆಂದೂ, ಪೃಥ್ವಿಯನ್ನೂ ಮಾತೃವೆಂದೂ ಸಹ ಋಷಿಯು ನಿರ್ದೇಶಿಸಿದ್ದಾನೆ. ಮತ್ತು ಅವುಗಳ ಸ್ವರೂಪವನ್ನು ವರ್ಣಿಸಲು ನಾಭಿಃ ಯೋನಿಃ ಇತ್ಯಾದಿ ವಿಶೇಷಣಗಳನ್ನೂ ಉಪಯೋಗಿಸಿದ್ದಾನೆ. ಈ ಪದಗಳು ಅನೇಕಾರ್ಥಗಳಲ್ಲಿ ಋಕ್ಸಂಹಿತೆಯಲ್ಲಿ ಉಪಯೋಗಿಸಲ್ಪಡುವುವಾದುದರಿಂದ ಅವುಗಳ ನಾನಾರ್ಥಗಳ ಪ್ರಯೋಗಗಳನ್ನು ತಿಳಿದು ಅನಂತರ ಇಲ್ಲಿ ಅವು ದ್ಯಾವಾಪೃಥಿವಿಗಳ ಯಾವ ನಿರ್ದಿಷ್ಟವಾದ ಸ್ವರೂಪಗಳನ್ನು ವರ್ಣಿಸುವುವು ಎಂಬುದನ್ನು ತಿಳಿಯಬಹುದು.

**ನಾಭಿಃ**—ನಾಭಿಶಬ್ದಕ್ಕೆ ಸಂಬಂಧ, ರಕ್ಷಣ, ಅನುರಾಗ, ಉತ್ಪತ್ತಿಸ್ಥಾನ ಇತ್ಯಾದ್ಯರ್ಥಗಳು ಋಕ್ಸಂಹಿತಾ ಪ್ರಯೋಗಗಳಲ್ಲಿ ಪ್ರಸಿದ್ಧವಾಗಿವೆ.

**ವೈಶ್ವಾನರ ನಾಭಿರಸಿ ಕ್ಷಿತೀನಾಂ ಸ್ಥೂಣೇವ ಜನಾ೯ ಉಪಮಿದ್ಯಯಂಥ ।** (ಋ. ಸಂ. ೧-೫೯-೧)

ಎಂಬಲ್ಲಿ ವೈಶ್ವಾನರು ಕ್ಷಿತಿಗಳ **ನಾಭಿ**ಯೆಂದು ವರ್ಣಿತನಾಗಿದ್ದಾನೆ. ಸಕಲ ಮಾನವರಿಗೂ **ಸಂನದ್ಧ**ನು ಎಂದರೆ ಅವಸ್ಥಾಪಕನು ಎಂದು ಅರ್ಥವು. ಎಂದರೆ ವೈಶ್ವಾನರನು ಸಕಲ ಲೋಕಗಳೊಂದಿಗೂ ವ್ಯಾಪಕವಾದ ಸಂಬಂಧವನ್ನಿಟ್ಟುಕೊಂಡಿರುವುದರಿಂದ ಈ ವಿಶೇಷಣವು ಪ್ರಯೋಗಿಸಲ್ಪಟ್ಟಿದೆ.

**ಮೂರ್ಧಾ ದಿವೋ ನಾಭಿರಗ್ನಿಃ ಪೃಥಿವ್ಯಾ ಅಥಾಭವದರತೀ ರೋದಸ್ಯೋಃ ।**
**ತಂ ತ್ವಾ ದೇವಾಸೋಽಜನಯಂತ ದೇವಂ ವೈಶ್ವಾನರ ಜ್ಯೋತಿರಿದಾರ್ಯಾಯ ॥** (ಋ. ಸಂ. ೧-೫೯-೨)

ಎಂಬಲ್ಲಿಯೂ ಅದೇ ವೈಶ್ವಾನರಾಗ್ನಿಯ ಸ್ತುತಿಯಿದೆ. ಇಲ್ಲಿ **ಪೃಥಿವ್ಯಾ ನಾಭಿಃ** ಎಂದರೆ ಪೃಥ್ವಿಯ ಸಂನಾಹಕನು ಎಂದರೆ ರಕ್ಷಕನು ಎಂದರ್ಥವಾಗುತ್ತದೆ.

**ಅಜಃ ಪುರೋ ನೀಯತೇ ನಾಭಿರಸ್ಯಾನು ಪಶ್ಚಾತ್ಕವಯೋ ಯಂತಿ ರೇಭಾಃ ।**
(ಋ. ಸಂ. ೧-೧೬೩-೧೨)

**ಪೃಚ್ಛಾಮಿ ತ್ವಾ ಪರಮಂತಂ ಪೃಥಿವ್ಯಾಃ ಪೃಚ್ಛಾಮಿ ಯತ್ರ ಭುವನಸ್ಯ ನಾಭಿಃ ।**
(ಋ. ಸಂ. ೧-೧೬೪-೩೪)

ಇತ್ಯಾದಿ ವಾಕ್ಯಗಳಲ್ಲಿ **ಬಂಧನಹೇತು** ಎಂದರೆ ಸರ್ವ ಭೂತಗಳಿಗೂ ಸಂಬಂಧವನ್ನು ತೋರಿಸುವ ಒಂದು ನಿಯಮನ ರೂಪವಾದ ಬಂಧಕವೆಂದೂ,

**ಗಂಧರ್ವೋ ಅಪ್ಸ್ವಪ್ಯಾ ಚ ಯೋಷಾ ಸಾ ನೋ ನಾಭಿಃ ಪರಮಂ ಜಾಮಿ ತನ್ನೌ ।**
(ಋ. ಸಂ. ೧೦-೧೦-೪)

ಇತ್ಯಾದಿ ವಾಕ್ಯಗಳಲ್ಲಿ ಉತ್ಪತ್ತಿಸ್ಥಾನವೆಂದೂ,

**ಮಾತಾ ರುದ್ರಾಣಾಂ ದುಹಿತಾ ವಸೂನಾಂ ಸ್ವಸಾದಿತ್ಯಾನಾಮಮೃತಸ್ಯ ನಾಭಿಃ ।**
(ಋ. ಸಂ. ೮-೧೦೧-೧೫)

ಇತ್ಯಾದಿ ಋಕ್ಕುಗಳಲ್ಲಿ ಆವಾಸಸ್ಥಾನವೆಂದೂ ಅರ್ಥವಾಗುತ್ತದೆ. ಇದರಂತೆಯೇ **ಯೋನಿ**ಶಬ್ದವೂ ಸಹ ಕೇವಲ ಉತ್ಪತ್ತಿಸ್ಥಾನವೆಂಬರ್ಥದಲ್ಲಿ ಮಾತ್ರವಲ್ಲದೆ ನಿವಾಸಸ್ಥಾನ, ಗೃಹ ಇತ್ಯಾದ್ಯರ್ಥಗಳಲ್ಲಿಯೂ ಪ್ರಯುಕ್ತವಾಗಿದೆ. ನಿಘಂಟುವಿನಲ್ಲಿ ಈ ಪದವನ್ನು **ಅರ್ಣಃ ಕ್ಷೋದಃ** ಇತ್ಯಾದಿ ೧೦೧ ಉದಕನಾಮಗಳಲ್ಲಿ ಪಠಿಸಿದ್ದಾರೆ. (ನಿ. ೨-೨೪)

**ವರ್ಧಂತೀಮಾಪಃ ಪನ್ವಾ ಸುಶಿಶ್ವಿಮೃತಸ್ಯ ಯೋನಾ ಗರ್ಭೇ ಸುಜಾತಂ ।**
(ಋ. ಸಂ. ೧-೬೫-೪)

ಎಂಬಲ್ಲಿ **ಯಜ್ಞಸ್ಯ ಅನ್ನಸ್ಯ ವಾ ಕಾರಣಭೂತೇ ಜಲೇ** ಎಂದು ಯೋನಿಶಬ್ದಕ್ಕೆ ಉತ್ಪತ್ತಿಹೇತುವೆಂಬರ್ಥದಲ್ಲಿ ಪ್ರಯೋಗವಿದೆ.

**ಸಮಿದ್ಧಃ ಶುಕ್ರ ದೀದಿಹ್ಯೃತಸ್ಯ ಯೋನಿಮಾಸದಃ ಸಸಸ್ಯ ಯೋನಿಮಾಸದಃ ।**
(ಋ. ಸಂ. ೫-೨೧-೧)

ಎಂಬಲ್ಲಿ **ಯೋನಿಂ ಕಾರಣಂ । ಸ್ವರ್ಗಸಾಧನಂ ।** ಕಾರಣ, ಅಥವಾ ಸಾಧನವೆಂದರ್ಥವಾಗುತ್ತದೆ.

**ದುರೋಕಶೋಚಿಃ ಕ್ರತುರ್ನ ನಿತ್ಯೋ ಜಾಯೇವ ಯೋನಾವರಂ ವಿಶ್ವಸ್ಮೈ ।**
(ಋ. ಸಂ. ೧-೬೬-೫)

ಎಂಬಲ್ಲಿ **ಗೃಹ**ವೆಂದೂ, ಹೀಗೆಯೇ ಅನೇಕಾರ್ಥಗಳಲ್ಲಿ ಉಪಯೋಗಿಸಲ್ಪಟ್ಟಿದೆ. ಪ್ರಕೃತವಾದ ಋಕ್ಕಿನಲ್ಲಿ **ನಾಭಿ** ಶಬ್ದವು ಭೌಮವಾದ ರಸದ ಪರ್ಯಾಯನಾಮವಾಗಿದೆಯೆಂದು ವ್ಯಾಖ್ಯಾನದಿಂದ ತಿಳಿಯುತ್ತದೆ. ಎಂದರೆ ಉತ್ಪಾದಕ ಹೇತುವೆಂದರ್ಥವಾಗುತ್ತದೆ. ಸಾಯಣರು ಇದನ್ನು ವಿವರಿಸುತ್ತಾ **ನಾಭಿಭೂತೋ ಭೌಮೋ ರಸೋಽತ್ರ ತಿಷ್ಠತೀತಿಶೇಷಃ। ತತಶ್ಚಾನ್ನಂ ಜಾಯತೇ ಅನ್ನಾದ್ರೇತಃ ರೇತಸೋ ಮನುಷ್ಯ ಇತ್ಯೇವಂ ಪಾರಂಪರ್ಯೇಣ ಜನನಸಂಬಂಧಿನೋ ಹೇತೋಃ ರಸಸ್ಯಾತ್ರ ಸದ್ಭಾವಾತ್ ।** ಈ ರಸದಿಂದ ಅನ್ನವೂ, ಅನ್ನದಿಂದ ರೇತಸ್ಸೂ, ರೇತಸ್ಸಿನಿಂದ ಮಾನವನೂ ಉತ್ಪನ್ನವಾಗಿ ಈ ನಾಭಿರೂಪವಾದ ರಸವು ಎಲ್ಲಕ್ಕೂ ಪರಂಪರೆಯಾಗಿ ಉತ್ಪತ್ತಿಸ್ಥಾನವೆಂದು ತಿಳಿಸಲು ಈ ಪದವನ್ನು ಪಯೋಗಿಸಿದೆಯೆಂದು ತಿಳಿಸಿದ್ದಾರೆ.

**ಯೋನಿ**ಶಬ್ದವು ಅಂತರಿಕ್ಷಪರವಾಗಿದೆ. ಸರ್ವಭೂತಗಳಿಗೂ ನಿರ್ಮಾತ್ರಿಯೆಂದು ಹಿಂದೆ ಅಂತರಿಕ್ಷಪರವಾದ ಈ ಶಬ್ದವನ್ನು ವಿವರಿಸಿದೆ. ಹೀಗೆ ವರ್ಣಿತವಾದ ದ್ಯಾವಾಪೃಥಿವಿಗಳ ನಡುವೆ ಇರುವ ಅಂತರಿಕ್ಷಸ್ಥನಾದ ಆದಿತ್ಯನು ತನ್ನ ದುಹಿತೃವಾದ ಪೃಥ್ವಿಯ ರಸರೂಪವಾದ ಗರ್ಭವನ್ನು ಧರಿಸಿದ್ದಾನೆಂದು ತಾತ್ಪರ್ಯವು.

**ಮಹೀ—ಮಹತೀ ಪೃಥಿವೀ** ಎಂದು ಈ ಪದವು ಪೃಥಿವಿಗೆ ವಿಶೇಷಣವಾಗಿದೆ. ಇಲ್ಲಿ **ಮಹೀ** ಎಂಬ ಪದಕ್ಕೆ ಪೂಜ್ಯವಾದ ಎಂಬರ್ಥವನ್ನು ಹೇಳಬೇಕು. ಪೃಥಿವೀಶಬ್ದದಿಂದಲೇ ಅದರ ವ್ಯಾಪಕವಾದ ವಿಸ್ತೃತಿಯು ತೋರುತ್ತದೆ.

**ಪ್ರಥನಾತ್ಪೃಥಿವೀತ್ಯಾಹುಃ ಕ ಏನಾಮಪ್ರಥಯಿಷ್ಯತ್ ಕಿಮಾಧಾರಶ್ಚೇತ್ಯಥ ವೈ ದರ್ಶನೇನ ಪೃಥುರಥಿತಾ ಚೇದಪ್ಯನ್ಯೈಃ ।** (ನಿ. ೧-೧೪)

ವಿಸ್ತೃತವಾಗಿ ಹರಡಿರುವುದರಿಂದಲೇ ಪೃಥಿವಿಗೆ ಈ ಹೆಸರು ಪ್ರಸಿದ್ಧವಾಗಿದೆ. ಅದನ್ನು ವಿಸ್ತೃತವಾಗಿ ಹರಡಿದವರು ಯಾರೆಂದರೆ ಅದಕ್ಕೆ ಉತ್ತರವನ್ನು ಹೇಳುವುದು ಶ್ರಮ. ಒಂದುವೇಳೆ ಯಾರೂ ಅದನ್ನು ಹರಡದೇ ಇದ್ದಿದ್ದರೂ ಸಹ ಅದು ತಾನಾಗಿಯೇ ಹರಡಿರುವುದು. ಅದು ಹೇಗೆ ಸಾಧ್ಯವೆಂಬುದನ್ನು ತೈತ್ತಿರೀಯಸಂಹಿತೆಯಲ್ಲಿ ವರ್ಣಿಸುತ್ತಾ ಪೃಥ್ವಿಯ ವಿಸ್ತೃತಿಯು ಸ್ವಾಭಾವಿಕವಾದುದು ಎಂದು ತಿಳಿಸಿದೆ.

**ಆಪೋ ವಾ ಇದಮಗ್ರೇ ಸಲಿಲಮಾಸೀತ್ತಸ್ಮಿನ್ಪ್ರಜಾಪತಿರ್ವಾಯುರ್ಭೂತ್ವಾಚರತ್ಸ ಇಮಾಮಪಶ್ಯತ್ತಾಂ ವರಾಹೋ ಭೂತ್ವಾಹರತ್ತಾಂ ವಿಶ್ವಕರ್ಮಾ ಭೂತ್ವಾ ವ್ಯಮಾರ್ಟ್ಸಾ ಪ್ರಥತ ಸಾ ಪೃಥಿವ್ಯಭವತ್ತತ್ಪೃಥಿವ್ಯೈ ಪೃಥಿವಿತ್ವಂ ।** (ತೈ. ಸಂ. ೭-೧-೫-೧)

ಇತ್ಯಾದಿ ವಾಕ್ಯಗಳಿಂದ ಪೃಥ್ವಿಯ ಸಹಜವಾದ ವಿಸ್ತೃತಿಯು ವರ್ಣಿತವಾಗಿರುವುದರಿಂದ ಈ ಗುಣವನ್ನು ತಿಳಿಸಲು ಪುನಃ **ಮಹೀ** ಎಂಬ ವಿಶೇಷಣವು ಬೇಕಿಲ್ಲ. ಆದುದರಿಂದ ಇಲ್ಲಿ ಪೂಜ್ಯವೆಂಬರ್ಥವೆಂದು ತಿಳಿಸಿದೆ. ಇಲ್ಲಿ ಋಷಿಯು ದ್ಯಾವಾಪೃಥಿವಿಗಳನ್ನು ಜನಿತಾ, ಪಿತಾ, ಮಾತಾ ಇತ್ಯಾದಿವಿಶೇಷಣಗಳಿಂದ ಸ್ತುತಿಸಿದ್ದಾನೆ. ದ್ಯಾವಾಪೃಥಿವಿಗಳು, ತಮ್ಮ ದಾಂಪತ್ಯಸಂಬಂಧದಿಂದ ಸಕಲಲೋಕಗಳಿಗೂ ಆಧಾರಭೂತರಾಗಿರುವರೆಂದು ವರ್ಣಿತವಾಗಿರುವ ಅಂಶವನ್ನು ಹಿಂದೆಯೇ ವಿವರಿಸಿದೆ. ಅದೂ ಅಲ್ಲದೆ,

**ಯ ಇಮೇ ದ್ಯಾವಾಪೃಥಿವೀ ಜನಿತ್ರೀ ರೂಪೈರಪಿಂಶದ್ಭುವನಾನಿ ವಿಶ್ವಾ। ತಮದ್ಯ ಹೋತರಿಷಿತೋ ಯಜೀಯಾನ್ ದೇವಂ ತ್ವಷ್ಟಾರಮಿಹ ಯಕ್ಷಿ ವಿದ್ವಾನ್ ॥** ಋ. ಸಂ. ೧೦-೧೧೦-೯)

ಇತ್ಯಾದಿ ಋಕ್ಕುಗಳಲ್ಲಿ ಜನಿತ್ರೀ ಎಂಬ ಪದಕ್ಕೆ **ವಿಶ್ವಸ್ಯ ಜನಯಿತ್ರ್ಯೌ** ಎಂಬರ್ಥವಾಗುವುದರಿಂದ ದ್ಯಾವಾಪೃಥಿವಿಗಳನ್ನ ದೇವಮಾನವಾದಿ ಸಕಲಭೂತಗಳಿಗ ಜನಯಿತ್ರಿಯರೆಂದು ಹೇಳಿದೆ. ವಿಶ್ವಪಿತೃಗಳಾದ ಇವರು ತನಗೂ ಪಿತೃಗಳೆಂದೂ ಪೂಜ್ಯರೆಂದೂ ಋಷಿಯು ಪ್ರಾರ್ಥಿಸಿದ್ದಾನೆಂದು ಸಾಯಣರು 'ಪಾರಂಪರ್ಯೇಣ ಜನನಸಂಬಂಧಿನೋಃಹೇತೋಃ' ಎಂದು ವಿವರಿಸಿದ್ದಾರೆ.

ಅನೇಕ ಸಂದರ್ಭಗಳಲ್ಲಿ ದ್ಯಾವಾಪೃಥಿವಿಗಳನ್ನು **ಪಿತರಾ** ಎಂಬ ಪದದಿಂದಲೇ ನಿರ್ದೇಶಿಸಿದೆ. ಆದರೆ **ಪಿತೃ** ಯಾರು, **ಮಾತೃವು** ಯಾರು ಎಂಬುದನ್ನು ಸ್ಪಷ್ಟವಾಗಿ ಹೇಳಿರುವುದಿಲ್ಲ. ಇಂತಹ ಸಂದರ್ಭಗಳಲ್ಲಿ ಸಾಯಣರು ಎರಡುವಿಧವಾಗಿಯೂ ಅರ್ಥಮಾಡಿದ್ದಾರೆ. ನಿರುಕ್ತದಲ್ಲಿಯೂ ಸಹ,

> **(ಪಿತುಃ ಪಿತೃಸ್ಥಾನೀಯಾಯಾಃ ಪೃಥಿವ್ಯಾಃ); ಮಾತುಃ ಮಾತಾಂತರಿಕ್ಷಂ ನಿರ್ಮೀಯಂತೇಽಸ್ಮಿನ್ ಭೂತಾನಿ ।** (ನಿ. ೨-೮)

ಪಾಲನಾರ್ಥಕವಾದ **ಪಾ** ಧಾತುವಿನಿಂದ ನಿಷ್ಪನ್ನವಾಗಿ ಸಕಲ ಭೂತಗಳನ್ನೂ ಪಾಲಿಸತಕ್ಕ ಪೃಥಿವಿಗೆ ಪಿತೃವೆಂದೂ, ಅಂತರಿಕ್ಷದಲ್ಲೇ ಸಕಲ ಭೂತಗಳೂ ನಿರ್ಮಿತವಾಗುವುದರಿಂದ ಅಂತರಿಕ್ಷಕ್ಕೆ ಮಾತೃವೆಂದೂ ವಿಶೇಷಣಗಳು ಪ್ರಸಿದ್ಧವಾಗಿವೆಯೆಂದು ನಿರುಕ್ತಕಾರರ ವಾಕ್ಯವಿದೆ. ಅಲ್ಲದೇ,

> **ದ್ಯೌಷ್ಪಿತಃ ಪೃಥಿವಿ ಮಾತರಧ್ರುಗಗ್ನೇ ಭ್ರಾತರ್ವಸೋ ಮೃಳತಾ ನಃ । ವಿಶ್ವ ಆದಿತ್ಯಾ ಅದಿತೇ ಸಜೋಷಾ ಅಸ್ಮಭ್ಯಂ ಶರ್ಮ ಬಹುಲಂ ವಿ ಯಂತ ॥** (ಋ. ಸಂ. ೬-೫೧-೫)

ಇತ್ಯಾದಿ ಋಕ್ಕುಗಳಲ್ಲೂ,

> **ದ್ಯೌಃ ಪಿತಾ । ಪೃಥಿವೀ ಮಾತಾ** (ತೈ. ಬ್ರಾ. ३-೭-೫-೪, ೫)

> **ಉಪಹೂತಾ ಪೃಥಿವೀ ಮಾತೋಪ ಮಾಂ ಪೃಥಿವೀ ಮಾತಾ ಹ್ವಯತಾಮಗ್ನಿರಾಗ್ನೀಧ್ರಾತ್ಸ್ವಾಹೋಪಹೂತಾ ದ್ಯೌಷ್ಪಿತೋಪ ಮಾಂ ದ್ಯೌಷ್ಪಿತಾ ॥** (ಶ. ಬ್ರಾ. ೧-೮-೪೧)

ಇತ್ಯಾದಿ ಬ್ರಾಹ್ಮಣವಾಕ್ಯಗಳಲ್ಲಿಯೂ,

**ಮಧು ದ್ಯೌರಸ್ತು ನಃ ಪಿತಾ** (ಋ. ಸಂ. ೧-೯೦-೭) ಇತ್ಯಾದಿ ಋಕ್ಕುಗಳಲ್ಲಿಯೂ ಸಹ ದ್ಯುಲೋಕಾಧಿ ದೇವತೆಗೆ ಪಿತೃವೆಂಬ ವಿಶೇಷಣವು ರೂಢವಾಗಿದೆ. ಅದರಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ದ್ಯೌರ್ನಃ ಪಿತಾ: ಮಾತಾ ಪೃಥಿವೀ** ಎಂದು ಸ್ತುತಿಸಿದೆ.

**ಉತ್ತಾನಯೋಃ**— **ಊರ್ಧ್ವತಾನಯೋಃ**— ಊರ್ಧ್ವಮುಖವಾಗಿ ಪ್ರಸರಿಸಿದ ಎಂದರ್ಥಮಾಡಿದೆ. ಮತ್ತು ಇದು **ಚಮ್ವೋಃ** ಎಂಬ ಪದಕ್ಕೆ ವಿಶೇಷಣವಾಗಿದೆ. **ಸರ್ವಸ್ಯ ಅತ್ರ್ಯೋಃ ಭೋಗಸಾಧನಯೋಃ ದ್ಯಾವಾಪೃಥಿವ್ಯೋಃ ।** ಸಕಲ ಲೋಕಗಳನ್ನೂ ತಮ್ಮಲ್ಲಿ ಅಂತರ್ಗತವಾಗುವಂತೆ ಮಾಡುವುವೂ ಮತ್ತು ಎಲ್ಲಕ್ಕೂ ಭೋಗಸಾಧನಗಳಾಗಿರುವುವೂ ಆದ ದ್ಯಾವಾ ಪೃಥಿವಿಗಳೆಂದರ್ಥ.

**ದ್ಯಾವಾಪೃಥಿವೀಭ್ಯಾಮಿತಿ ತದಾಭ್ಯಾಂ ದ್ಯಾವಾಪೃಥಿವೀಭ್ಯಾಮಾರಭತೇ ಯಯೋರಿದಂ ಸರ್ವಮಧಿ ।** (ಶ. ಬ್ರಾ. ೩-೧-೩-೨೬)

ಎಂದಿರುವಂತೆ ಸಮಸ್ತವಿಶ್ವವೂ ಸಹ ಭರಣಕ್ಕೂ ಧಾರಣೆಗೂ ದ್ಯಾವಾಪೃಥಿಗಳನ್ನೇ ನಂಬಿವೆಯೆಂಬಂಶವನ್ನು ಇಲ್ಲಿಯೂ ತಿಳಿಸಿದೆ.

**ದುಹಿತುಃ ಗರ್ಭಮಾಧಾತ್**–ಎಂಬಲ್ಲಿ **ದುಹಿತುಃ** ಎಂಬ ಪದಕ್ಕೆ ಪೃಥ್ವಿಯು ಆದಿತ್ಯನಿಗೆ ಪುತ್ರಿಯೆಂಬರ್ಥವನ್ನು ಹೇಳುವುದು ಸಹಜವಾದರೂ ಸಹ ಸಾಯಣರು **ದೂರೇ ನಿಹಿತಾಯಾಃ ಭೂಮ್ಯಾಃ ।** ದೂರದಲ್ಲಿ ಸ್ಥಿತವಾಗಿರುವ ಭೂಮಿಯ ಗರ್ಭರೂಪವಾದ ಉದಕವನ್ನು ಧರಿಸಿದನು ಎಂದು ವಿವರಿಸಿದ್ದಾರೆ. ಉತ್ತರಾರ್ಧದಲ್ಲಿರುವ **ಪಿತಾ** ಎಂಬ ಪದಕ್ಕೆ ಮೊದಲು **ದ್ಯುಲೋಕಃ** ಎಂದರ್ಥಮಾಡಿ, ಅನಂತರ **ಅಧಿಷ್ಠಾನಯೋಃ ಅಭೇದೇನ ಆದಿತ್ಯೋ ದ್ಯೌರುಚ್ಯತೇ**— ದ್ಯುಲೋಕರೂಪವಾದ ಅಧಿಷ್ಠಾನಕ್ಕೂ ಆದಿತ್ಯರೂಪವಾದ ಅಧಿಷ್ಠಾತೃವಿಗೂ ಅಭೇದವಿರುವುದರಿಂದ ಇಲ್ಲಿ ಆದಿತ್ಯನೆಂದೇ ಅರ್ಥವೆಂದು ತಿಳಿಸಿದ್ದಾರೆ. **ಅಥವಾ ಇಂದ್ರಃ ಪರ್ಜನ್ಯೋ ವಾ** ಎಂಬ ವಿಕಲ್ಪಾರ್ಥವನ್ನೂ ಹೇಳಿದ್ದಾರೆ.

**ಆಧಾತ್— ಸರ್ವತಃ ಕರೋ ।** ತಾನು ತನ್ನ ರಶ್ಮಿಗಳಿಂದ ಮೊದಲು ಹೀರಿ ಅನಂತರ ಉದಕವನ್ನು ವಿಶ್ವಕ್ಕೆಲ್ಲಾ ಹರಡುವನು ಎಂದರ್ಥ.



**ಪೃಚ್ಛಾಮಿ ತ್ವಾ ಪರಮಂತಂ ಪೃಥಿವ್ಯಾಃ ಪೃಚ್ಛಾಮಿ ಯತ್ರ ಭುವನಸ್ಯ ನಾಭಿಃ । ಪೃಚ್ಛಾಮಿ ತ್ವಾ ವೃಷ್ಣೋ ಅಶ್ವಸ್ಯ ರೇತಃ ಪೃಚ್ಛಾಮಿ ಪರಮಂ ವ್ಯೋಮ ॥ ೩೪ ॥**

ಎಲೈ ಯಜಮಾನನೇ, ಪೃಥಿವಿಯ ತುತ್ತತುದಿಯಾವುದೆಂಬುದನ್ನಾಗಿಯೂ, ವಿಶ್ವದ ಎಲ್ಲಾ ಭಾಗಗಳನ್ನು ಒಟ್ಟಿಗೆ ಸೇರಿಸತಕ್ಕ ಬಂಧಕವು ಎಲ್ಲಿದೆಯೆಂದೂ, ವೃಷ್ಟಿಯನ್ನು ಸುರಿಸತಕ್ಕ ಆದಿತ್ಯನ ವೀರ್ಯವಾವುದೆಂದೂ, ಮತ್ತು ಸಕಲ ವ್ಯವಹಾರಗಳಿಗೂ ಕಾರಣವಾದ ವಾಕ್ಕಿನ ಪರಮಸ್ಥಾನವಾವುದು ಎಂಬುದನ್ನೂ ತಿಳಿದುಕೊಳ್ಳಲು ನಿನ್ನನ್ನು ಪ್ರಶ್ನಿಸುತ್ತೇನೆ. (ಇವುಗಳ ಸ್ವರೂಪಗಳನ್ನು ನನಗೆ ತಿಳಿಸು).

ಅಶ್ವಮೇಧಯಜ್ಞದ ಮಧ್ಯದ ದಿವಸದಲ್ಲಿ ಬ್ರಹ್ಮೋದ್ಯವು (ಬ್ರಹ್ಮವಿಷಯವಾದ ತತ್ತ್ವವಿಮರ್ಶೆಯು) ನಡೆಯುತ್ತಿರುವಾಗ ಹೋತೃವೇ ಮೊದಲಾದ ಋತ್ವಿಕ್ಕುಗಳು ಪೃಚ್ಛಾಮಿ ತ್ವಾ ಎಂಬ ಈ ಋಕ್ಕಿನಿಂದ ಯಜಮಾನನನ್ನು ಪ್ರಶ್ನೆ ಮಾಡುವರು. ಈ ವಿಷಯವು ಅಶ್ವಲಾಯನಶ್ರೌತಸೂತ್ರದ **ಏಕೈಕಶೋ ಯಜಮಾನಂ ಪೃಚ್ಛಂತಿ ಪೃಚ್ಛಾಮಿ ತ್ವಾ ಪರಮಂತಂ ಪೃಥಿವ್ಯಾಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೧೦-೯)

**ಅಶ್ವಮೇಧಿಕೇ ಮಧ್ಯಮೇಽಹನಿ ಬ್ರಹ್ಮೋದ್ಯೇ ಹೋತ್ರಾದಯಃ "ಪೃಚ್ಛಾಮಿ ತ್ವಾ ಇತ್ಯನಯಾ ಯಜಮಾನಂ ಪೃಚ್ಛೇಯುಃ"** ಇದು ಬ್ರಹ್ಮೋದ್ಯಕಾಲದಲ್ಲಿ ಪಠಿಸತಕ್ಕ ಮಂತ್ರವು. ಹೋತ್ರಾದಿಗಳು ಯಜಮಾನನನ್ನು ಕೇಳತಕ್ಕ ಪ್ರಶ್ನೆಗಳು ಈ ಮಂತ್ರದಲ್ಲಡಗಿವೆ. ಇದು ಬ್ರಹ್ಮವಿಷಯಕವಾದ ಪ್ರಶ್ನೆ. "**ಏಕೈಕಶೋ ಯಜಮಾನಂ ಪೃಚ್ಛಾಮಿ ತ್ವಾ ಪರಮಂತಂ ಪೃಥಿವ್ಯಾಃ**" ಎಂದು ಆಶ್ವಲಾಯನಶ್ರೌತಸೂತ್ರದಲ್ಲಿಯೂ ಸಹ ಈ ಮಂತ್ರದ ವಿನಿಯೋಗ

ವನ್ನು ತಿಳಿಸಿದ್ದಾರೆ. ಈ ಬ್ರಹ್ಮೋದ್ಯವು ಅಶ್ವಮೇಧದ ಮಧ್ಯಕಾಲದಲ್ಲಿ ನಿಯತವಾಗಿ ಆಚರಿಸಲ್ಪಡಬೇಕಾದ ವಿಧಿಯು. ಇದು ಕರ್ಮಾಂಗವಾಗಿದ್ದರೂ ಸಹ ಇದರಲ್ಲಿ ವಿಶ್ವತತ್ತ್ವದ ವಿಷಯಕವಾದ ಜ್ಞಾನಾನ್ವೇಷಣವಿರುತ್ತದೆ. ವಿಶ್ವತತ್ತ್ವಕ್ಕೆ ಸಂಬಂಧಿಸಿದ ರಹಸ್ಯವಾದ ಅಂಶಗಳನ್ನು ತಿಳಿಯಬೇಕೆಂಬ ಕುತೂಹಲವೂ, ಆ ವಿಷಯದಲ್ಲಿ ಆಯಾ ಋಷಿಗಳಿಗೆ ತಿಳಿದ ಉತ್ತರವೂ ಬ್ರಹ್ಮಸ್ವರೂಪವನ್ನು ಕುರಿತ ಪ್ರಶ್ನೋತ್ತರಗಳಾಗಿವೆ. ತೈತ್ತಿರೀಯಸಂಹಿತೆ, ಐತರೇಯಬ್ರಾಹ್ಮಣ, ಶತಪಥಬ್ರಾಹ್ಮಣ, ಬೃಹದಾರಣ್ಯಕೋಪನಿಷತ್ ಇತ್ಯಾದಿ ಶ್ರುತಿಗಳಲ್ಲೆಲ್ಲಾ ಈ ಬ್ರಹ್ಮೋದ್ಯವು ಒಂದೇ ರೂಪವಾಗಿಲ್ಲ. ಬ್ರಹ್ಮಾನ್ವೇಷಣವು ಇದರಲ್ಲಿ ಮುಖ್ಯವಾದ ಅಂಶವಾಗಿದ್ದರೂ ಸಹ ಪ್ರಶ್ನೋತ್ತರಗಳಲ್ಲಿ ಕ್ರಮಭೇದಗಳಿರುತ್ತವೆ. ಉದಾಹರಣೆಗೆ ಪ್ರಕೃತವಾದ ಸೂಕ್ತದಲ್ಲಿ ಇದು ಹೋತ್ರಾದಿಗಳು ಯಜಮಾನನಿಗೆ ಹಾಕತಕ್ಕ ಪ್ರಶ್ನೆಯೆಂದು ಸಾಯಣರು ಅಶ್ವಲಾಯನಶ್ರೌತಸೂತ್ರದ ವಾಕ್ಯವನ್ನುದಹರಿ ಹೇಳಿದ್ದಾರೆ. ತೈತ್ತಿರೀಯಸಂಹಿತೆಯಲ್ಲಿ ಹೋತೃವು ಈ ಪ್ರಶ್ನೆಯನ್ನು ಯಜ್ಞಕಾಲದಲ್ಲಿ ಬ್ರಹ್ಮನಿಗೆ ಹಾಕುತ್ತಾನೆ. ಉತ್ತರವನ್ನು ಬ್ರಹ್ಮನು ಹೇಳುತ್ತಾನೆ.

“ **ಕಿಗ್ಂಸ್ವಿದಾಸೀತ್ ಪೂರ್ವಚಿತ್ತಿಃ....**” ಇತ್ಯಾದಿವಾಕ್ಯದಿಂದ ಈ ಪ್ರಶ್ನೋತ್ತರವು ತೈತ್ತಿರೀಯ ಸಂಹಿತೆಯಲ್ಲಿ ಉಕ್ತವಾಗಿದೆ. ಅಲ್ಲಿ “ **ಅಥ ಹೋತುಃ ಪ್ರಶ್ನಾಃ ಬ್ರಹ್ಮಣಃ ಪ್ರತಿವಚನಾನಿ** ” ಹೋತೃವಿಗೂ ಬ್ರಹ್ಮನಿಗೂ ನಡೆಯತಕ್ಕ ಪ್ರಶೋತ್ತರರೂಪವಾದ ಸಂಭಾಷಣೆಯು ಎಂದು ವ್ಯಾಖ್ಯಾನದಿಂದ ತಿಳಿಯುತ್ತದೆ.

ತೈತ್ತಿರೀಯಾದಿಸಂಹಿತೆಗಳಲ್ಲಿ ಈ ಬ್ರಹ್ಮೋದ್ಯದ ಕ್ರಮವು ಯಾವ ರೀತಿಯಲ್ಲಿ ವಿವರಿಸಲ್ಪಟ್ಟಿದೆಯೆಂದು ಮುಂದಿನ ಋಕ್ಕಿನ (೧-೧೬೪-೩೫) ವಿಶೇಷವಿಷಯಗಳಲ್ಲಿ ತಿಳಿಸಲಾಗುತ್ತದೆ.

**ಪೃಚ್ಛಾಮಿ ಯತ್ರ ಭುವನಸ್ಯ ನಾಭಿಃ**— ಎಂಬಲ್ಲಿ **ನಾಭಿ** ಶಬ್ದಕ್ಕೆ **ಸಂನಾಹಃ** ಎಂದರೆ ಸಕಲಭೂತಜಾತಗಳಿಗೂ ಒಂದು ಸಂಬಂಧವನ್ನು ತೋರಿಸತಕ್ಕ ಬಂಧಕರೂಪವಾದ ತಂತುವಾವುದು ಎಂದು ಪ್ರಶ್ನಿಸಿದೆ. [ನಾಭಿ ಶಬ್ದಕ್ಕೆ ಇರತಕ್ಕ ನಾನಾರ್ಥಗಳನ್ನು ಹಿಂದಿನ ಋಕ್ಕಿನ ವಿಶೇಷ ವಿಷಯಗಳಲ್ಲಿ ತಿಳಿಸಿದೆ].

**ವೃಷ್ಣೋ ಅಶ್ವಸ್ಯ**—ಎಂಬುದಕ್ಕೆ **ವರ್ಷಕಸ್ಯ ; ವ್ಯಾಪ್ತಸ್ಯಾದಿತ್ಯಸ್ಯ ।** ವರ್ಷಕನೂ, ಜಗದ್ವ್ಯಾಪಕನೂ ಆದ ಆದಿತ್ಯನ ಎಂಬರ್ಥವೆಂದು ತಿಳಿಸಿದೆ. **ವೃಷನ್** ಶಬ್ದಕ್ಕೆ **ವೃಷು-ಸೇಚನೇ ; ವೃಷ-ಶಕ್ತಿಬಂಧನೇ** ಎಂಬ ಎರಡು ಧಾತುಗಳಿಂದಲೂ ನಿಷ್ಪತ್ತಿಯನ್ನು ತೋರಿಸಬಹುದು. ಮೊದಲನೆಯ ಧಾತುವಿನಿಂದ ನಿಷ್ಪನ್ನವಾದರೆ ಸೇಚಿಸು ಎಂಬರ್ಥವೂ, ಎರಡನೆಯ ಧಾತುವಿನಿಂದ ನಿಷ್ಪನ್ನವಾದರೆ ಶಕ್ತಿಯುತನು ಎಂದೂ ಅರ್ಥವಾಗುತ್ತದೆ. [ಈ ಪದದ ನಿಷ್ಪತ್ತಿಯನ್ನೂ ಇದಕ್ಕಿರುವ ನಾನಾರ್ಥಗಳನ್ನೂ ಸಹ ಋಗ್ವೇದ ಸಂಹಿತೆಯ ೮ನೇ ಭಾಗದಲ್ಲಿ ೧೬೮-೧೭೨ನೆ ಪುಟಗಳಲ್ಲಿ ವಿಶದವಾಗಿ ತಿಳಿಸಿದೆ]. ಈ ಎರಡು ಗುಣಗಳೂ ಇರುವುದರಿಂದ ಇಲ್ಲಿ ಆದಿತ್ಯನಿಗೆ **ವೃಷ್ಣಃ** ಎಂಬ ವಿಶೇಷಣವಿದೆ. **ಅಶ್ವಸ್ಯ** ಎಂಬ ವಿಶೇಷಣವು ಇವನ ಜಗದ್ವ್ಯಾಪಕತ್ವವನ್ನು ತೋರಿಸುತ್ತದೆ. ಇದೇ ಅಂಶವನ್ನು ತೈತ್ತಿರೀಯಾರಣ್ಯಕದಲ್ಲಿ,

> **ವೃಷ್ಣೋ ಅಶ್ವಸ್ಯ ನಿಷ್ಪದಸೀತ್ಯಾಹ । ಅಸೌ ವಾ ಆದಿತ್ಯೋ ವೃಷಾಶ್ವಃ । ತಸ್ಯ ಛಂದಾ-**
> **ಗ್ಂಸಿ ನಿಷ್ಪತ್ । ಛಂದೋಭಿರೇವೈನಂ ಧೂಪಯತಿ ।** (ತೈ. ಆ. ೫-೩-೫, ೬)

ಇತ್ಯಾದಿ ವಾಕ್ಯಗಳಲ್ಲಿ ತಿಳಿಸಿದೆ. ವೃಷ್ಟಿರೂಪವಾದ ಉದಕವನ್ನು ಸೇಚನಮಾಡತಕ್ಕವನೆಂದೂ ಜಗದ್ವ್ಯಾಪಕನೆಂದೂ ಆದಿತ್ಯನ ವಿಶೇಷಗುಣಗಳನ್ನು ತಿಳಿಸುತ್ತದೆ.



**ಇಯಂ ವೇದಿಃ ಪರೋ ಅಂತಃ ಪೃಥಿವ್ಯಾ ಅಯಂ ಯಜ್ಞೋ ಭುವನಸ್ಯ ನಾಭಿಃ । ಅಯಂ ಸೋಮೋ ವೃಷ್ಣೋ ಅಶ್ವಸ್ಯ ರೇತೋ ಬ್ರಹ್ಮಾಯಂ ವಾಚಃ ಪರಮಂ ವ್ಯೋಮ ॥ ೩೫ ॥**

ಯಜ್ಞವೇದಿಯೇ ಪೃಥ್ವಿಯ ಅತ್ಯಂತ ಅತಿಶಯನಾದ ಪರ್ಯವಸಾನವು. ಯಜ್ಞವೇ ವಿಶ್ವದ ನಾಭಿರೂಪವಾಗಿದೆ. ಸೇಚನಸಮರ್ಥನಾದವನೂ ವ್ಯಾಪಕನೂ ಆದ ಆದಿತ್ಯನಿಗೆ ಸೋಮರಸವೇ ರೇತಸ್ಸಾಗಿದೆ. ಪ್ರಜಾಪತಿಯೇ ವಾಕ್ಕಿಗೆ ಶ್ರೇಷ್ಠವಾದ ರಕ್ಷಕಸ್ಥಾನವಾಗಿದ್ದಾನೆ.

ಹಿಂದಿನ ಋಕ್ಕಿನಲ್ಲಿ ಹೋತ್ರಾದಿಋತ್ವಿಕ್ಕುಗಳು ಯಜಮಾನನನ್ನು ಪ್ರಶ್ನೆ ಮಾಡಲಾದ ವಿಷಯಗಳಿಗೆ ಪ್ರತ್ಯುತ್ತರವಾಗಿ ಯಜಮಾನನು **ಇಯಂ ವೇದಿಃ ;** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಇಯಂ ವೇದಿಃ ಪರೋ ಅಂತಃ ಪೃಥಿವ್ಯಾ ಇತಿ ಪ್ರತ್ಯಾಹ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೧೦-೯)

ಬ್ರಹೋದ್ಯರೂಪವಾದ ಹಿಂದಿನ ಮಂತ್ರದಲ್ಲಿ (೩೪ನೆಯ ಋಕ್ಕಿನಲ್ಲಿ) ನಾಲ್ಕು ಪ್ರಶ್ನೆಗಳನ್ನು ಕೇಳಿದೆ. ಅವುಗಳಲ್ಲಿ ಮೊದಲನೆಯದು **" ಪೃಚ್ಛಾಮಿ ತ್ವಾ ಪರಮಂತಂ ಪೃಥಿವ್ಯಾಃ "** ॥ ಪೃಥಿವಿಯ ತುತ್ತತುದಿಯಾವುದು ಎಂಬ ಪ್ರಶ್ನೆಯಾಗಿದೆ. ಆದಕ್ಕೆ ಉತ್ತರವಾಗಿ ಪ್ರಕೃತವಾದ ಋಕ್ಕಿನಲ್ಲಿ " ಇಯಂ ವೇದಿಃ ಪರೋ ಅಂತಃ ಪೃಥಿವ್ಯಾಃ " ಈ ವೇದಿಯೇ ಪೃಥಿವಿಯ ತುತ್ತತುದಿಯೆಂದು ಉತ್ತರರೂಪವಾಗಿ ಹೇಳಿದೆ. ಎಂದರೆ ಯಜ್ಞಾಧಾರವಾದ ವೇದಿಯೆಂದಾಯಿತು. ಯಜ್ಞವೇ ಪರಬ್ರಹ್ಮಸ್ವರೂಪವಾದುದರಿಂದಲೂ, ಪೃಥಿವ್ಯಾದಿಲೋಕಗಳೆಲ್ಲವೂ ಬ್ರಹ್ಮನ ಆಧಾರವೇ ಆದುದರಿಂದಲೂ ಸಹ ಯಜ್ಞಾಧಾರವಾದ ವೇದಿಗೂ ಪೃಥಿವಿಗೂ ತಾದಾತ್ಮ್ಯವನ್ನು ಹೇಳಿದೆ (ಪೃಥಿವಿಯೆಂಬ ಪದವು ಅಂತರಿಕ್ಷಪರ್ಯಾಯವೂ ಆಗಿರುವುದರಿಂದ ಇಲ್ಲಿ ಕೇವಲ ಭೂಮಿಯೆಂದೇ ಅರ್ಥವಿರಲಾರದು).

**ಸ ವೈ ತ್ರಿಃ ಪೂರ್ವಂ ಪರಿಗ್ರಹಂ ಪ್ರತಿಗೃಹ್ಣಾತಿ । ತ್ರಿರುತ್ತರಂ ತತ್ ಷಟ್‌ಕೃತ್ವಃ ಷಡ್ವಾ ಋತವಃ ಸಂವತ್ಸರಸ್ಯ ಸಂವತ್ಸರೋ ಯಜ್ಞಃ ಪ್ರಜಾಪತಿಃ ಸ ಯಾವಾನೇವ ಯಜ್ಞೋ ಯಾವತ್ಯಸ್ಯ ಮಾತ್ರಾ ತಾವಂತಮೇವೈತತ್ಪರಿಗೃಹ್ಣಾತಿ ॥**

(ಶ. ಬ್ರಾ. ೧-೨-೫-೧೨)

ಇತ್ಯಾದಿ ವಾಕ್ಯಗಳಲ್ಲಿ ಪ್ರಜಾಪತಿಗೂ ಕಾಲಾತ್ಮಕವಾದ ಸಂವತ್ಸರಕ್ಕೂ, ವತ್ಸರರೂಪವಾದ ಯಜ್ಞಕ್ಕೂ ಪ್ರಜಾಪತಿಗೂ ತಾದಾತ್ಮ್ಯವನ್ನು ಹೇಳಿದೆ. ಹೀಗೆ ದೇಶಕಾಲಾದಿರೂಪಿಯಾದ ಪ್ರಜಾಪತಿಗೂ ಆಧಾರವು ಎಷ್ಟು ವಿಸ್ತೃತವೋ ಯಜ್ಞಾಧಾರವೂ ಅಷ್ಟೇ ವಿಸ್ತೃತಿಯುಳ್ಳದ್ದು ಎಂದು " **ಯಾವತ್ಯಸ್ಯ ಮಾತ್ರಾ ತಾವಂತಮೇವೈತತ್ಪರಿ ಗೃಹ್ಣಾತಿ** " ಎಂಬ ವಾಕ್ಯದಿಂದ ತಿಳಿಸಿದೆ ಮತ್ತು ಯಜ್ಞಾಧಾರವಾದ **ವೇದಿಯ** ಶಬ್ದನಿಷ್ಪತ್ತಿಯನ್ನು ತಿಳಿಸುತ್ತಾ,

**ತಂ ಛಂದೋಭಿರಭಿತಃ ಪರಿಗೃಹ್ಯ । ಅಗ್ನಿಂ ಪುರಸ್ತಾತ್ಸಮಾಧಾಯ ತೇನಾರ್ಚಂತಃ ಶ್ರಾಮ್ಯಂತಶ್ಚೇರುಸ್ತೇನೇಮಾಗ್ಂ ಸರ್ವಾಂ ಪೃಥಿವೀಂ ಸಮವಿಂದಂತ ತದ್ಯದೇನೇನೇಮಾಗ್ಂ ಸರ್ವಾಗ್ಂ ಸಮವಿಂದಂತ ತಸ್ಮಾದ್ವೇದಿರ್ನಾಮ ತಸ್ಮಾದಾಹುರ್ಯಾವತೀ ವೇದಿಸ್ತಾವತೀ ಪೃಥಿವೀತ್ಯೇತಯಾ ಹೀಮಾಗ್ಂ ಸರ್ವಾಗ್ಂ ಸಮವಿಂದಂತ್ಯೇವಗ್ಂ ಹ ವಾ ಇಮಾಗ್ಂ ಸರ್ವಾಗ್ಂ ಸಪತ್ನಾನಾಂ ಸಂವೃಂಕ್ತೇ ನಿರ್ಭಜತ್ಯಸ್ಯೈ ಸಪತ್ನಾನ್ಯ ಏವಮೇತದ್ವೇದ ॥** (ಶ. ಬ್ರಾ. ೧-೨-೫೭)

ಛಂದಸ್ಸುಗಳಿಂದ ಯಜ್ಞವೇದಿಯನ್ನು ಪರಿಗ್ರಹಿಸಿದನಂತರ ಅದರಲ್ಲಿ ಅಗ್ನಿಯನ್ನು ಸ್ಥಾಪಿಸಿ ಅನುಸ್ಯೂತವಾದ ತಪೋರೂಪವಾದ ನಿಯಮಗಳಿಂದಲೂ ವ್ರತಗಳಿಂದಲೂ ಪೂಜಿಸತೊಡಗಿದರು. ಇದರ ಫಲವಾಗಿ ಅವರು ಪೂರ್ಣವಾದ ಪೃಥ್ವಿಯನ್ನು ಪಡೆದರು (ಸಮವಿಂದಂತ). ಅವರು ಈ ಪೃಥ್ವಿಯನ್ನು ಪೂರ್ಣವಾಗಿ ಪಡೆದುದರಿಂದಲೇ (ಸಂವಿದ್) ಯಜ್ಞಭೂಮಿಗೆ **ವೇದಿ** ಯೆಂಬ ಹೆಸರು ಪ್ರಸಿದ್ಧವಾಯಿತು. ಆದುದರಿಂದಲೇ "ಪೃಥ್ವಿಯು ಎಷ್ಟು ವಿಸ್ತೃತವಾಗಿದೆಯೋ ಯಜ್ಞವೇದಿಯೂ ಅಷ್ಟೇ ಅಸ್ತೃತವಾಗಿದೆ" ಎಂದು ತಿಳಿದವರು ಹೇಳುತ್ತಾರೆ. ಈ ತತ್ತ್ವವನ್ನು ತಿಳಿದವನು ತಾನೇ ಈ ಸಮಸ್ತವಾದ ಪೃಥ್ವಿಗೂ ಒಡೆಯನಾಗುತ್ತಾನೆ, ಎಂದು ಶತಪಥಬ್ರಾಹ್ಮಣದಲ್ಲಿ ತಿಳಿಸಿದೆ. ಇದೇ ಅಂಶವನ್ನು ಐತರೇಯಬ್ರಾಹ್ಮಣದಲ್ಲೂ ವಿವರಿಸುತ್ತ,

**ತಂ ವೇದ್ಯಾಮುಮನ್ವವಿಂದನ್ಯದ್ವೇದ್ಯಾಮನ್ವವಿಂದಂಸ್ತದ್ವೇದೇರ್ವೇದಿತ್ವಂ ॥**
(ಐ. ಬ್ರಾ. ೩-೯)

ಈ ಯಜ್ಞವನ್ನು ವೇದಿಕೆಯಮೇಲೆ ಕಂಡು ಅದನ್ನೂ ಪಡೆದುದರಿಂದ ಅದಕ್ಕೆ ವೇದಿಯೆಂದು ಹೆಸರು ಬಂದಿತು ಎಂದು ಈ ಪದದ ನಿರ್ವಚನರೂಪವಾದ ಮಹತ್ತ್ವವನ್ನು ಸ್ತುತಿಸಿದೆ ಮತ್ತು "ಇದೇ ವೇದಿಯು ಪೃಥಿವಿಯ ಪರವಾದ ಅಂತವು" ಎಂದು ತಿಳಿಸಿರುವಾಗ ಪೃಥಿವಿಯೆಂದರೆ ಕೇವಲ ಭೂಮಿಯೆಂದೇ ಅರ್ಥಮಾಡಬಾರದೆಂದು ಮೇಲೆ ತಿಳಿಸಿದೆ. ಪೃಥಿವೀ ಶಬ್ದವು **ಅಂತರಿಕ್ಷ** ನಾಮಗಳಲ್ಲಿಯೂ ಪಠಿತವಾಗಿದೆ. (೨-೧೦) ಪ್ರಥನಾತ್ಪೃಥಿವೀತ್ಯಾಹುಃ (ನಿ. ೧-೧೪) ಎಂಬ ನಿರುಕ್ತಕಾರರ ನಿರ್ವಚನದ ಆಧಾರದಮೇಲೆ ಅತ್ಯಂತವಾಗಿ ವಿಸ್ತೃತಿಯನ್ನು ಹೊಂದಿದ ಭೂಮ್ಯಾಕಾಶಗಳೆಲ್ಲವೂ ಪೃಥಿವೀವಾಚ್ಯಗಳೇ ಆಗಿವೆ. ಈ ಅರ್ಥವನ್ನು ತೆಗೆದುಕೊಂಡರೆ ಈ ವೇದಿಯು ಭೂಮ್ಯಂತರಿಕ್ಷಗಳಿಗೂ ಪರವಾದ ಅಂತವು ಎಂದರ್ಥಮಾಡಬಹುದು. ಇದಕ್ಕೆ ಈ ಮಹತ್ತ್ವವಿರುವುದರಿಂದಲೇ ಶತಪಥಬ್ರಾಹ್ಮಣದಲ್ಲಿ ಈ ಯಜ್ಞವೇದಿಕೆಯನ್ನು ಈರೀತಿ ಸ್ತುತಿಸಿದೆ.

**ಅಯಂ ವಾವ ಲೋಕ ಏಷೋಽಗ್ನಿಶ್ಚಿತಃ । ತಸ್ಯಾಪ ಏವ ಪರಿಶ್ರಿತೋ ಮನುಷ್ಯಾ ಯಜುಷ್ಮತ್ಯ ಇಷ್ಟಕಾಃ ಸೂದದೋಹಾ ಓಷಧಯಶ್ಚ ವನಸ್ಪತಯಶ್ಚ ಪುರೀಷವಮಾಹುತಯಃ ಸಮಿದೋಽಗ್ನಿ .... .... .... ಸಯೋ ಹ್ಯೈತದೇವಂ ವೇದ ಲೋಕಂಪೃಣಾಮೇನಂ ಭೂತಮೇತತ್ಸರ್ವಮಭಿ ಸಂಪದ್ಯತೇ ॥** (ಶ. ಬ್ರಾ. ೧೦-೫-೪-೧)

ಇಷ್ಟಕೆಗಳಿಂದ (ಇಟ್ಟಿಗೆಗಳಿಂದ) ನಿರ್ಮಿತವಾದ ಈ ಯಜ್ಞವೇದಿಯೇ ಈ ಪಾರ್ಥಿವಲೋಕವು. ಇದನ್ನು ಸುತ್ತುವರಿದಿರುವ ಇಷ್ಟಕೆಗಳೇ (ಪೃಥ್ವಿಯನ್ನು ಸುತ್ತುವರಿದಿರುವ) ಉದಧಿಗಳು, ಯಜುಷ್ಮತಿಗಳೇ ಮಾನವರು. ಸೂದದೋಹಗಳೇ ಪಶುಗಳು, ಇಷ್ಟಕೆಗಳ ಮಧ್ಯವರ್ತಿಯಾದ ಮೃತ್ತಿಕೆಗಳೇ ಓಷಧಿವನಸ್ಪತಿಗಳು ಲೋಕಂಪೃಣವೇ ಅಗ್ನಿಯು. ಈ ತತ್ತ್ವವನ್ನು ತಿಳಿದವನು ಲೋಕಾಧಿಸ್ವಾಮ್ಯತ್ವವನ್ನು ಪಡೆಯುತ್ತಾನೆ. ಅಲ್ಲದೇ,

**ಅಂತರಿಕ್ಷಗ್ಂ ಹ ತ್ವೇವೈಷೋಽಗ್ನಿಶ್ಚಿತಃ । ತಸ್ಯ ದ್ಯಾವಾಪೃಥಿವ್ಯೋರೇವ ಸಂಧಿಃ । ಪರಿಶ್ರಿತಃ ಪರೇಣ ಹಾಂತರಿಕ್ಷಂ ದ್ಯಾವಾಪೃಥಿವೀ ಸಂಧತ್ತಸ್ಸಾಃ ಪರಿಶ್ರಿತೋ ವಯಾಗ್ಂಸಿ ಯಜುಷ್ಮತ್ಯ ಇಷ್ಟಕಾ ವರ್ಷಗ್ಂಸೂದದೋಹಾ ಮರೀಚಯಃ ಪುರೀಷಮಾಹುತಯಃ ಸಮಿಧೋ ಲೋಕಂಪೃಣಾ ತದ್ವಾ ಏತತ್ಸರ್ವಂ .... .... .... .... .... ॥** (ಶ. ಬ್ರಾ. ೧೦-೫-೪-೨)

ಈ ಯಜ್ಞವೇದಿಕೆಯೇ ಅಂತರಿಕ್ಷವು. ದ್ಯಾವಾಪೃಥಿವಿಗಳ ಸಂಧಿಯು ಅಂತರಿಕ್ಷಕ್ಕೂ ಮೀರಿದ ಪ್ರದೇಶದಲ್ಲಾಗುವುದರಿಂದ ಈ ವೇದಿಕೆಯ ಪರಿಶ್ರಿತಗಳೇ ದ್ಯಾವಾಪೃಥಿವಿಗಳ ಸಂಧಿಯು. ಯಜುಷ್ಮತಿಯೆಂಬ ಇಷ್ಟಕಗಳೇ ಪಕ್ಷಿಗಳು

ಸೂದದೋಹಗಳೇ ವೃಷ್ಟಿಯು. ಇಷ್ಟಕೆಗಳ ಮಧ್ಯವರ್ತಿಯಾದ ಮೃತ್ತಿಕೆಗಳೇ ರಶ್ಮಿಗಳು. ಆಹುತಿಗಳೇ ಸಮಿತ್ತುಗಳು ಲೋಕಂಪೃಣವೇ ವಾಯುವು. ಈ ತತ್ತ್ವವನ್ನು ತಿಳಿದವನು ಅಗ್ನಿಯಲ್ಲಿ ತಾದಾತ್ಮ್ಯವನ್ನು ಹೊಂದುತ್ತಾನೆ.

**ದ್ಯೌರ್ಹ ತ್ವೇವೈಷೋಽಗ್ನಿಶ್ಚಿತಃ । ತಸ್ಯಾಪ ಏವ ಪರಿಶ್ರಿತೋ ಯಥಾ ಹ ವಾ ಇದಂ ಕೋಶಃ ಸಮುಬ್ಜಿತ ಏವಮಿಮೇ ಲೋಕಾ ಅಪ್ಸ್ವಂತಸ್ತದ್ಯಾ ಇಮಾಂ ಲೋಕಾನ್ ಪರೇಣಾ-ಪಸ್ತಾಃ ಪರಿಶ್ರಿತೋ ದೇವಾ ಯಜುಷ್ಮತ್ಯ ಇಷ್ಟಕಾ ಯದೇವೈತಸ್ಮಿನ್‌ಲೋಕೇಽನ್ನಂ ತತ್ಸೂದ-ದೋಹಾ ನಕ್ಷತ್ರಾಣಿ ಪುರೀಷಮಾಹುತಯಃ ಸಮಿಧ ಆದಿತ್ಯೋ ಲೋಕಂಪೃಣಾ ತದ್ವಾ ಏತತ್ಸರ್ವಮಾದಿತ್ಯಮೇತಾಭಿಸಂಪದ್ಯತೇ ತತ್ಸರ್ವೋಽಗ್ನಿಃ .... .... .... .... .... ॥**

(ಶ. ಬ್ರಾ. ೧೦-೫-೪-೩)

ಈ ಯಜ್ಞವೇದಿಕೆಯೇ ದ್ಯುಲೋಕವು. ಸುತ್ತುವರಿದಿರುವ ಇಷ್ಟಕೆಗಳೇ ಈ ಲೋಕವನ್ನಾವರಿಸಿರುವ ಉದಧಿಗಳು. ಯಜುಷ್ಮತಿಯೆಂಬ ಇಷ್ಟಕೆಗಳೇ ದೇವತೆಗಳು. ಸೂದದೋಹಗಳೇ ಈ ಲೋಕದ ಅನ್ನವು. ಇಷ್ಟಕೆಗಳ ಮಧ್ಯವರ್ತಿಯಾದ ಮೃತ್ತಿಕೆಗಳೇ ನಕ್ಷತ್ರಗಳು. ಲೋಕಂಪೃಣವೇ ಆದಿತ್ಯನು.

**ಆದಿತ್ಯೋ ಹ ತ್ವೇವೈಷೋಽಗ್ನಿಶ್ಚಿತಃ । ತಸ್ಯ ದಿಶ ಏವ ಪರಿಶ್ರಿತಸ್ತಾಃ ಷಷ್ಟಿಶ್ಚ ತ್ರೀಣಿ ಚ ಶತಾನಿ ಭವಂತಿ ಷಷ್ಟಿಶ್ಚ ಹ ವೈ ತ್ರೀಣಿ ಚ ಶತಾನ್ಯಾದಿತ್ಯಂ ದಿಶಃ ಸಮಂತಂ ಪರಿಯಂತಿ ರಶ್ಮಯೋ ಯಜುಷ್ಮತ್ಯ ಇಷ್ಟಕಾಸ್ತಾಃ ಷಷ್ಟಿಶ್ಚೈವ ತ್ರೀಣಿ ಚ ಶತಾನಿ ಭವಂತಿ ಷಷ್ಟಿಶ್ಚ ಹ ವೈ ತ್ರೀಣಿ ಚ ಶತಾನ್ಯಾದಿತ್ಯಸ್ಯ ರಶ್ಮಯಸ್ತದ್ಯತ್ಪರಿಶ್ರಿತ್ಸು ಯಜುಷ್ಮತೀಃ ಪ್ರತ್ಯರ್ಪಯತಿ ರಶ್ಮೀಂಸ್ತದ್ದಿಕ್ಷು ಪ್ರತ್ಯರ್ಪಯತ್ಯಥ ಯದಂತರಾ ದಿಶಶ್ಚ ರಶ್ಮೀಂಶ್ಚ ತತ್ಸೂದದೋಹಾ ಅಥ ಯದ್ದಿಕ್ಷು ಚ ರಶ್ಮಿಷು ಚಾನ್ನಂ ತತ್ಪುರೀಷಂ ತಾ ಆಹುತಯಸ್ತಾಃ ಸಮಿಧಃ .... .... .... .... ॥**

(ಶ. ಬ್ರಾ. ೧೦-೫-೪-೪)

ಈ ಯಜ್ಞವೇದಿಕೆಯೇ ಆದಿತ್ಯನು. ಆದಿತ್ಯನನ್ನು ಮುನ್ನೂರ ಅರವತ್ತು ದಿಕ್ಕುಗಳೂ ಅವಾಂತರದಿಕ್ಕುಗಳೂ ಸುತ್ತು ವರಿದಿವೆ. ಮುನ್ನೂರ ಅರವತ್ತು ಸಂಖ್ಯಾಕಗಳಾದ ಯಜುಷ್ಮತಿಗಳೇ ಆದಿತ್ಯನ ಮುನ್ನೂರ ಅರವತ್ತು ರಶ್ಮಿಗಳಾಗಿವೆ. ಸೂದದೋಹಗಳೇ ಆದಿತ್ಯರಶ್ಮಿಗಳಿಗೂ ದಿಕ್ಕುಗಳಿಗೂ ಮಧ್ಯದಲ್ಲಿರುವ ತತ್ತ್ವವಿಶೇಷಗಳು. ಇಷ್ಟಕೆಗಳ ಮಧ್ಯವರ್ತಿಗಳಾದ ಮೃತ್ತಿಕೆಗಳೇ ರಶ್ಮಿಗಳಿಗೂ ದಿಕ್ಕುಗಳಿಗೂ ನಡುವೆ ಇರುವ ಅನ್ನವು.

**ನಕ್ಷತ್ರಾಣಿ ಹ ತ್ವೇವೈಷೋಽಗ್ನಿಶ್ಚಿತಃ । ತಾನಿ ವಾ ಏತಾನಿ ಸಪ್ತವಿಗ್ಂಶತಿರ್ನಕ್ಷತ್ರಾಣಿ........ ॥**

**ಛಂದಾಗ್ಂಸಿ ಹ ತ್ವೇವೈಷೋಽಗ್ನಿಶ್ಚಿತಃ । ತಾನಿ ವಾ ಏತಾನಿ ಸಪ್ತಚ್ಛಂದಾಗ್ಂಸಿ............ ॥**

**ಸರ್ವಾಣಿ ಹ ತ್ವೇವ ಭೂತಾನಿ । ಸರ್ವೇ ದೇವಾ ಏಷೋಽಗ್ನಿಶ್ಚಿತ ಆಪೋ ವೈ ಸರ್ವೇ ದೇವಾಃ ಸರ್ವಾಣಿ ಭೂತಾನಿ ತಾ ಹ್ಯೇತಾ ಆಪ ಏವೈಷೋಽಗ್ನಿಶ್ಚಿತಸ್ತಸ್ಯ ನಾವ್ಯಾ ಏವ ಪರಿಶ್ರಿ-ತಸ್ತಾಃ ಷಷ್ಟಿಶ್ಚ ತ್ರೀಣಿ ಚ ಶತಾನಿ ಭವಂತಿ ಷಷ್ಟಿಶ್ಚ ಹ ವೈ ತ್ರೀಣಿ ಚ ಶತಾನ್ಯಾದಿತ್ಯಂ ನಾವ್ಯಾಃ ಸಮಂತಂ ಪರಿಯಂತಿ .... .... ಆತ್ಮಾಯಮೇವ ಸ ಯೋಽಯಂ ಹಿರಣ್ಮಯಃ ಪುರುಷಃ ॥—**

(ಶ. ಬ್ರಾ. ೧೦-೫-೪, ೬ ರಿಂದ ೧೪)

ಈ ಯಜ್ಞವೇದಿಯೇ ಸಮಸ್ತ ನಕ್ಷತ್ರಗಳು; ಸಪ್ತಚ್ಛಂದಸ್ಸುಗಳು; ಇದೇ ಸಂವತ್ಸರವು; ಇದೇ ಸಕಲ ಭೂತಗಳೂ ಆಗಿದೆ. ಆದಿತ್ಯನ ಸುತ್ತಲೂ ಮುನ್ನೂರ ಅರವತ್ತು ರಶ್ಮಿರೂಪಗಳಾದ ನಾವೆಗಳು ಸುತ್ತುವರಿದಿರುವಂತೆ ಈ ವೇದಿಯು ಸುತ್ತಲೂ ಯಜುಷ್ಮತೀರೂಪದ ದೇವಮಾನವಾದಿಗಳು ಸುತ್ತುವರಿದಿದ್ದಾರೆ. ಈ ವೇದಿಕೆಯ ದೇಹವೇ ಈ ಆದಿತ್ಯಾಂತರ್ಗತನಾದ ಹಿರಣ್ಮಯಪುರುಷನು. ಈ ಹಿರಣ್ಮಯಪುರುಷನ ಸ್ವರೂಪವು ಎಷ್ಟು ಆಕರ್ಷಕವಾದದ್ದು ಮತ್ತು ಎಷ್ಟು ಮಹತ್ತ್ವವುಳ್ಳದ್ದು ಎಂದರೆ—

**ತಸ್ಯೈತೇ ಪ್ರತಿಷ್ಠೇ । ರುಕ್ಮಶ್ಚ ಪುಷ್ಕರಪರ್ಣಂ ಚಾಪಶ್ಚಾದಿತ್ಯಮಂಡಲಂ ಚ ಸ್ರುಚೌ ಬಾಹೂ ತಾವಿಂದ್ರಾಗ್ನೀ ದ್ವೇ ಸ್ವಯಮಾತೃಣ್ಣೇ ಇಯಂ ಚಾಂತರಿಕ್ಷಂ ಚ ತಿಸ್ರೋ ವಿಶ್ವಜ್ಯೋತಿಷ ಏತಾ ದೇವತಾ ಅಗ್ನಿರ್ವಾಯುರಾದಿತ್ಯ ಏತಾ ಹ್ಯೇವ ದೇವತಾ ವಿಶ್ವಂ ಜ್ಯೋತಿರ್ದ್ವಾದಶರ್ತವ್ಯಾಃ ಸಂವತ್ಸರಃ ಸ ಆತ್ಮಾ ಪಂಚ ನಾಕಸದಃ ಪಂಚ ಪಂಚಚೂಡಾಃ ಸ ಯಜ್ಞಸ್ತೇ ದೇವಾ ಅಥ ಯದ್ವಿಕರ್ಣೀ ಚ ಸ್ವಯಮಾತೃಣ್ಣಾ ಚಾಶ್ಮಾ .... .... .... .... .... .... ....ಆತ್ಮಾ ಸ ಏಷ ಸರ್ವಾಸಾಮಪಾಂ ಮಧ್ಯೇ ಸ ಏಷ ಸರ್ವೈಃ ಕಾಮೈಃ ಸಂಪನ್ನ ಆಪೋ ವೈ ಸರ್ವೇ ಕಾಮಾಃ ಸ ಏಷೋಽಕಾಮಃ ಸರ್ವಕಾಮೋ ನ ಹ್ಯೇತಂ ಕಸ್ಯ ಚನ ಕಾಮಃ ॥**

(ಶ. ಬ್ರಾ. ೧೦-೫-೪-೧೫)

ಸ್ವರ್ಣಪಾತ್ರವೂ, ಪುಷ್ಕರಪರ್ಣವೂ ಈ ಆದಿತ್ಯಾಂತರ್ಗತನಾದ ಹಿರಣ್ಮಯಪುರುಷನ ಎರಡು ಪಾದಗಳು. ಯಜ್ಞವೇದಿಕೆಯಲ್ಲಿರುವ ಎರಡು ಸ್ರುಚ (ಪಾತ್ರೆಗಳೂ ಇವನ ಬಾಹುಗಳು. ಇವರೇ ಇಂದ್ರಾಗ್ನಿಗಳು. ಸಹಜವಾಗಿಯೇ ಅತೃಣವಾಗಿರುವ ಈ ಎರಡು ಇಷ್ಟಕೆಗಳೇ ಪೃಥಿವ್ಯಂತಕ್ಷರಿಗಳು. ವಿಶ್ವಜ್ಯೋತೀರೂಪವಾದ ಇಷ್ಟಕಗಳೇ ಸಕಲ ದೇವತೆಗಳು. ಇವುಗಳ ಸಂಖ್ಯೆಗಳು ಮೂರು. ಈ ಮೂರೂ ಸಹ ಅಗ್ನಿ, ವಾಯು ಮತ್ತು ಆದಿತ್ಯರನ್ನು ಪ್ರತಿಬಿಂಬಿಸುತ್ತವೆ. ಈ ವೇದಿಯ ದೇಹವೇ ಸಕಲಕ್ಕೂ ಅಂತವಾಗಿದೆ. ಈ ವೇದಿರೂಪವಾದ ಆದಿತ್ಯಾಂತರ್ಗತನಾದ ಹಿರಣ್ಯಯಪುರುಷನು ಸರ್ವಕಾಮಗಳನ್ನೂ ಪಡೆದಿರುವುದರಿಂದ ಕಾಮರಹಿತನಾಗಿಯೂ ಪೂರ್ಣತೃಪ್ತನಾಗಿಯೂ ಇದ್ದಾನೆ. ಇತ್ಯಾದಿಯಾಗಿ ವೇದಿಯ ಮಹತ್ತ್ವವನ್ನೂ ವಿಸ್ತೃತಿಯನ್ನೂ ನಾನಾವಿಧವಾಗಿ ಸ್ತುತಿಸಿದೆ. ಕೇವಲ ಅಧಿದೈವತ ಪಕ್ಷದಲ್ಲಿಯೇ ಅಲ್ಲದೇ, ಅಧ್ಯಾತ್ಮಪಕ್ಷದಲ್ಲಿಯೂ ಇದರ ಮಹಿಮೆಯು ಸ್ತುತವಾಗಿದೆ. ಇದೇ ಅಂಶವನ್ನು ಪ್ರಕೃತವಾದ ಋಕ್ಕಿನಲ್ಲಿ " **ಇಯಂ ವೇದಿಃ ಪೃಥಿವ್ಯಾ ಅಂತಃ** " ಎಂದು ವರ್ಣಿತವಾಗಿದೆ. ಪೃಥಿವಿಯ ಉತ್ಕೃಷ್ಟವಾದ ಸ್ಥಾನ ಅಥವಾ ಸ್ವಭಾವವೆಂದು ತಾತ್ಪರ್ಯ. ಸಾಯಣರು ಇದೇ ಅರ್ಥವನ್ನು ತಿಳಿಸತಕ್ಕ,

**ಏತಾವತೀ ವೈ ಪೃಥಿವೀ ಯಾವತೀ ವೇದಿಃ ।** (ತೈ. ಸಂ. ೨-೬-೪-೧)

ಎಂಬ ತೈತ್ತಿರೀಯಸಂಹಿತೆಯ ವಾಕ್ಯವನ್ನು ಉದಹರಿಸಿ ' **ನ ಹಿ ವೇದ್ಯತಿರಿಕ್ತಾ ಭೂಮಿರಸ್ತಿ** ' ಈ ಯಜ್ಞವೇದಿಗಿಂತಲೂ ಮೀರಿದ ಪೃಥ್ವಿಯೇ ಇಲ್ಲ ಎಂಬ ತಾತ್ಪರ್ಯವನ್ನು ಕೊಡುತ್ತದೆಂದು ವಿವರಿಸಿದ್ದಾರೆ.

**ಅಯಂ ಯಜ್ಞೋ ಭುವನಸ್ಯ ನಾಭಿಃ ಅಯಂ ಯಜ್ಞಃ ಭೂತಜಾತಸ್ಯ ಸಂನಹನಂ । ತತ್ರೈವ ವೃಷ್ಟ್ಯಾದಿಸರ್ವಫಲೋತ್ಪತ್ತೇಃ ಸರ್ವಪ್ರಾಣಿನಾಂ ಬಂಧಕತ್ವಾತ್ ।** ಈ ಯಜ್ಞದಿಂದಲೇ ವೃಷ್ಟಿಯುಂಟಾಗಿ ತದ್ದ್ವಾರಾ ಸರ್ವಪ್ರಾಣಿಗಳಿಗೂ ಇದು ಬಂಧಕವಾಗಿರುವುದರಿಂದಲೂ ಸಹ ಇದು ನಾಭಿರೂಪದಲ್ಲಿದೆಯೆಂದು ವರ್ಣಿತವಾಗಿದೆ.

ನಾಭಿಶಬ್ದಕ್ಕೆ, ವಾಸಸ್ಥಾನ, ವ್ಯಾಪಕಸಂಬಂಧ, ಸಂನಾಹಕ ಎಂದರೆ ರಕ್ಷಕ, ಬಂಧಕ, ಉತ್ಪತ್ತಿಸ್ಥಾನ ಇತ್ಯಾದಿಯಾಗಿ ಬೇರೆ ಬೇರೆ ಅರ್ಥಗಳಿರುವುದನ್ನು ಹಿಂದೆ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಯಜ್ಞವೇ ನಾಭಿಯೆಂದು ಹೇಳಿದರೆ ಈ ಎಲ್ಲಾ ಅರ್ಥಗಳಲ್ಲೂ ಈ ಪದದ ಪ್ರಯೋಗವನ್ನು ತೋರಿಸಬಹುದು. **ಪೃಚ್ಛಾಮಿ ಯತ್ರ ಭುವನಸ್ಯ ನಾಭಿಃ** ಎಂದು ಹಿಂದಿನ ಋಕ್ಕಿನಲ್ಲಿ ಕೇಳಿರುವ ಪ್ರಶ್ನೆಗೆ ಉತ್ತರರೂಪವಾಗಿ ಈ ವಾಕ್ಯವಿದೆ. ಯಜ್ಞವೇ ಸಕಲ ವಿಶ್ವಗಳ ಉತ್ಪತ್ತಿಗೂ, ಸ್ಥಿತಿಗೂ ಕಾರಣವಾಗಿ ದೇವಮಾನವಾದಿ ಸಕಲ ಭೂತತಳಿಗೂ ಪರಸ್ಪರ ಸಂಬಂಧವನ್ನು ಬೆಳೆಸುವ ಬಂಧಕಸಾಧನವಾಗಿರುವುದರಿಂದ ಇದು ನಾಭಿರೂಪದಲ್ಲಿದೆಯೆಂದು ತಾತ್ಪರ್ಯ.

**ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ ।**
**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥** (ಭ. ಗೀ. ೩-೧೧

**ದೇವಾನ್ ಇಂದ್ರಾದೀನ್ ಭಾವಯತ ವರ್ಧಯತ ಅನೇನ ಯಜ್ಞೇನ । ತೇ ದೇವಾ ಭಾವಯಂತು ವೃಷ್ಟ್ಯಾದಿನಾ ಆಪ್ಯಾಯಯಂತು ವಃ ಯುಷ್ಮಾನ್ । ಏವಂ ಪರಸ್ಪರಂ ಅನ್ಯೋನ್ಯಂ ಭಾವಯಂತಃ ಶ್ರೇಯಃ ಪರಂ ಬ್ರಹ್ಮವಿಜ್ಞಾನಪ್ರಾಪ್ತಿಂ ಕ್ರಮೇಣ ಅವಾಪ್ಸ್ಯಥ । ಸ್ವರ್ಗಂ ವಾ ಪರಂ ಶ್ರೇಯಃ ಅವಾಪ್ಸ್ಯಥ ।** (ಶಂ. ಭಾ.)

ಯಜ್ಞವೇ ದೇವತೆಗಳಿಗೆ ಅನ್ನರೂಪವೆಂದೂ, ಈ ಅನ್ನವನ್ನು ಮಾನವರು ಯಜ್ಞರೂಪದಿಂದ ಅರ್ಪಿಸಬೇಕೆಂದೂ, ಇದರಿಂದ ತೃಪ್ತರಾದ ದೇವತೆಗಳು ವೃಷ್ಟ್ಯಾದಿಗಳಿಂದ ಮಾನವರ ಸ್ಥಿತಿಗೂ, ವೃದ್ಧಿಗೂ ಕಾರಣರಾಗಬೇಕೆಂದೂ ಭಗವದ್ಗೀತೆಯಲ್ಲಿ ಉಪದೇಶವಿದೆ. ಇದರಿಂದ ಸಮಸ್ತವಾದ ಶ್ರೇಯಸ್ಸಿಗೂ ಯಜ್ಞವೇ ಸಾಧನವೆಂದಾಯಿತು. ಈ ಯಜ್ಞವು ಲೋಕಕ್ಕೆಲ್ಲಾ ಶ್ರೇಯಃಸಾಧನವು ಎಂಬ ತತ್ತ್ವವನ್ನರಿತು ಇದನ್ನು ಸೇವಾದೃಷ್ಟಿಯಿಂದಾಚರಿಸಿದರೆ ಇದು ಬ್ರಹ್ಮಜ್ಞಾನಕ್ಕೂ ಸಾಧನವಾಗುವುದೆಂದು ಶಂಕರಾದಿಗಳು ವಿವರಿಸಿದ್ದಾರೆ.

ಈ ಯಜ್ಞತತ್ತ್ವವು ವಿಶ್ವದ ಐಕ್ಯವನ್ನೂ ಈ ಐಕ್ಯದ ನೆಲೆಯು ಪರಬ್ರಹ್ಮನೆಂಬ ತತ್ತ್ವವನ್ನೂ ತಿಳಿಸುತ್ತದೆ. ಉಪನಿಷದಾದಿಗಳಲ್ಲಿ ಯಾವ ಮೂಲತತ್ತ್ವವನ್ನು ಪರಬ್ರಹ್ಮನೆಂದು ಕರೆದಿದೆಯೋ ಅದನ್ನು ಸಂಹಿತಾ ಮತ್ತು ಬ್ರಾಹ್ಮಣಗಳಲ್ಲಿ ಪ್ರಜಾಪತಿಯೆಂದು ಕರೆದಿದೆ ಮತ್ತು ಯಜ್ಞಕ್ಕೂ ಪ್ರಜಾಪತಿಗೂ ತಾದಾತ್ಮ್ಯವನ್ನು ಹೇಳಿದೆ. ವಿಶ್ವಸೃಷ್ಟಿಯು ಪ್ರಜಾಪತಿಯ ಯಜ್ಞದ ಮತ್ತು ತಪಸ್ಸಿನ ಫಲವು. ಜಗತ್ಕಾರಣನೂ, ಜಗತ್ಸೃಷ್ಟಿಗೆ ಪೂರ್ವಭಾವಿಯಾಗಿ ಅದ್ವಿತೀಯನಾಗಿಯೂ ಇದ್ದ ಪ್ರಜಾಪತಿಯು ಸೃಷ್ಟಿಸಾಧನವಾದ ಯಜ್ಞವನ್ನು ನಿರ್ವಹಿಸಬೇಕಾದರೆ ಅದಕ್ಕೆ ಆಹುತಿಯಾಗಿ ತನ್ನನ್ನೇ ಅರ್ಪಿಸಬೇಕಾಯಿತು.

**ಯ ಆತ್ಮದಾ ಬಲದಾ ಯಸ್ಯ ವಿಶ್ವ ಉಪಾಸತೇ ಪ್ರಶಿಷಂ ಯಸ್ಯ ದೇವಾಃ ।**
**ಯಸ್ಯ ಛಾಯಾಮೃತಂ ಯಸ್ಯ ಮೃತ್ಯುಃ ಕಸ್ಮೈ ದೇವಾಯ ಹವಿಷಾ ವಿಧೇಮ ॥**
(ಋ. ಸಂ. ೧೦-೧೨೧-೨)

ಇತ್ಯಾದಿಯಾಗಿ ವರ್ಣಿತವಾಗಿರುವಂತೆ ತನ್ನ ವಿಶ್ವಯಜ್ಞದಲ್ಲಿ ತನ್ನನ್ನೇ ಅರ್ಪಿಸಿ ಪ್ರಜಾಪತಿಯು ಸೃಷ್ಟಿಕಾರ್ಯವನ್ನು ನಿರ್ವಹಿಸಿದನು. ಅವನ ಆಜ್ಞೆಯನ್ನೇ ದೇವಾದಿಗಳೆಲ್ಲರೂ ನಿರ್ವಹಿಸುತ್ತಾರೆ. ಮೃತ್ಯುವೂ, ಅಮೃತತ್ವವೂ ಅವನ ಛಾಯೆಗಳು. ಅಂತಹ ವಿಶ್ವಹೇತುವಾದ ಪ್ರಜಾಪತಿಗೆ ನಾವೂ ಸಹ ಯಜ್ಞಾದಿಕರ್ಮಗಳನ್ನಾಚರಿಸಿ ಪುರೋಡಾಶಾದಿಗಳಿಂದ ಆರಾಧಿಸೋಣ ಎಂದು ಯಜ್ಞದ ಪ್ರಾಶಸ್ತ್ಯವನ್ನು ಸ್ತುತಿಸಿದೆ. ಯಜ್ಞವು ಸೃಷ್ಟಿಯ ಮೂಲವು; ಸ್ಥಿತಿಗೆ ಹೇತುವು ಮತ್ತು ಶ್ರೇಯಸ್ಸಿಗೆ ಸಾಧಕವು. ಈ ವಿಷಯವನ್ನೇ ಶತಪಥಬ್ರಾಹ್ಮಣದಲ್ಲಿ ಈರೀತಿ ವರ್ಣಿಸಿದೆ.

ಅಥ ದೇವಾಃ । ಅನ್ಯೋನ್ಯಮುಸ್ಮಿನ್ನೇವ ಜುಹ್ವತಶ್ಚೇರುಸ್ತೇಭ್ಯಃ ಪ್ರಜಾಪತಿರಾತ್ಮಾನಂ ಪ್ರದದೌ ಯಜ್ಞೋ ಹೈಷಾಮಾಸ ಯಜ್ಞೋ ಹಿ ದೇವಾನಾಮನ್ನಂ ।

(ಶ. ಬ್ರಾ. ೧೧-೧-೮-೨)

ದೇವತೆಗಳು ಯಜ್ಞವನ್ನಾಚರಿಸಿ ಪರಸ್ಪರಾನುಕೂಲಿಕನಾದ ಆಹುತಿಗಳನ್ನರ್ಪಿಸಿದರು. ಆಗ ಪ್ರಜಾಪತಿಯು ಅವರಿಗೆ ತನ್ನನ್ನೇ ಅರ್ಪಿಸಿದನು. ಆಗ ಯಜ್ಞವು ದೇವತೆಗಳ ಸ್ವತ್ತಾಯಿತು. ಆದುದರಿಂದಲೇ ಯಜ್ಞವನ್ನು ದೇವತೆಗಳ ಅನ್ನವೆಂದು [ಎಂದರೆ ಅನ್ನಸಾಧನವೆಂದು] ಕರೆಯುತ್ತಾರೆ. ಇದಲ್ಲದೇ,

ಸ ಏತೇನ ಯಜ್ಞೇನ । ದೇವೇಭ್ಯ ಆತ್ಮಾನಂ ನಿರಕ್ರೀಣೀತ ಸ ಯದ್ವ್ರತಮುಪೈಶಿ ಯಥೈವ ತತ್ಪ್ರಜಾಪತಿರ್ದೇವೇಭ್ಯ ಆತ್ಮಾನಂ ಪ್ರಾಯಚ್ಛದೇವಮೇವೈಷ ಏತದ್ದೇವೇಭ್ಯ ಆತ್ಮಾನಂ ಪ್ರಯಚ್ಛತಿ ತಸ್ಮಾದು ಸಂಯತ ಏವೈತಾಗ್ಂ ರಾತ್ರಿಂ ಚಿಚರಿಷೇದ್ಯಥಾ ಹವಿಷಾ ಚರೇದೇವಗ್ಂ ಹವಿರ್ಹ್ಯೇಷ ದೇವಾನಾಂ ಭವತಿ ॥

ದೇವತೆಗಳ ಯಜ್ಞದಿಂದ ತೃಪ್ತನಾದ ಪ್ರಜಾಪತಿಯು ಅವರಿಗೆ ತನ್ನನ್ನೇ ಅರ್ಪಿಸಿದನಂತರ ಪುನಃ ಯಜ್ಞಪ್ರತಿನಿಧಿಯಾದ ತನ್ನ ಪ್ರತಿರೂಪವನ್ನು ಸೃಷ್ಟಿಸಿದನು. ಈರೀತಿ ಯಜ್ಞಾರ್ಥವಾಗಿ ತನ್ನ ಪ್ರತಿರೂಪವನ್ನು ಸೃಷ್ಟಿಸಿ ಯಜ್ಞವನ್ನು ಪ್ರತಿಬಿಂಬಿಸಿದುದರಿಂದ ತಿಳಿದವರು ಪ್ರಜಾಪತಿಯನ್ನೇ ಯಜ್ಞನೆಂಬ ಪರ್ಯಾಯನಾಮದಿಂದ ಕರೆಯುತ್ತಾರೆ.

ಅಥ ಯದ್ಯಜ್ಞಂ ತನುತೇ । ಯಜ್ಞೇನೈವೈತದ್ದೇವೇಭ್ಯ ಆತ್ಮಾನಂ ನಿಷ್ಕ್ರೀಣೀತೇ ಯಥೈವ ತತ್ಪ್ರಜಾಪತಿರ್ನಿರಕ್ರೀಣೀತೈವಂ ಅಥ ಯದ್ಧವಿರ್ನಿರ್ವಪತಿ ಹವಿಷೈವೈತದ್ಯಜ್ಞಂ ನಿಷ್ಕ್ರೀಣಾತಿ ಹವಿರನುವಾಕ್ಯಾನುವಾಕ್ಯಾಮುವದಾನೇನಾವದಾನಂ ಯಾಜ್ಯಾಂ ವಷಟ್ಕಾರೇಣ ವಷಟ್ಕಾರಂ .... .... .... .... .... ॥ (ಶ. ಬ್ರಾ. ೧೧-೧-೮-೪)

ಪ್ರಜಾಪತಿಯ ಮಾರ್ಗವನ್ನೇ ಅನುಸರಿಸಿ ಯಾವನು ಯಜ್ಞಕರ್ಮವನ್ನಾಚರಿಸುತ್ತಾನೆಯೋ ಮತ್ತು ತನ್ನ ಋಣವನ್ನು ತೀರಿಸಿ ಆ ದೇವಋಣದಿಂದ ಮುಕ್ತನಾಗುತ್ತಾನೆಯೋ ಅವನು ಪ್ರಜಾಪತಿಯು ಸೃಷ್ಟಿಕಾರ್ಯದಲ್ಲಿ ನೆರವಾಗುತ್ತಾನೆ, ಎಂದು ಶತಪಥದಲ್ಲಿ ಹೇಳಿರುವ ಅಂಶವನ್ನೇ ಭಗವದ್ಗೀತೆಯಲ್ಲೂ ಸಹ,

ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ ।
ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥
ಯಜ್ಞಶಿಷ್ಟಾಶಿನಸ್ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।
ತೇ ತ್ವಘಂ ಭುಂಜತೇ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥ (ಭ. ಗೀ. ೩-೧೨, ೧೩)

ಯಜ್ಞದಿಂದ ತೃಪ್ತರಾದ ದೇವತೆಗಳು ಮಾನವರಿಗೆ ಅದಕ್ಕೆ ಪ್ರತಿಯಾಗಿ ಅವರವರ ಇಷ್ಟಾರ್ಥಗಳನ್ನು ಕೊಡುತ್ತಾರೆ. ದೇವತೆಗಳಿಂದ ಅನ್ನಾದಿಸಂಪತ್ತುಗಳನ್ನು ಪಡೆದು ಪುನಃ ಅದಕ್ಕೆ ಪ್ರತಿಯಾಗಿ ದೇವತೆಗಳಿಗೆ ತೃಪ್ತಿಕರವಾದ ಯಜ್ಞಾಹುತಿಯನ್ನರ್ಪಿಸದಿದ್ದರೆ ಅವನು ಚೋರನಾಗುತ್ತಾನೆ. ಯಜ್ಞಕರ್ಮವನ್ನು ನೆರವೇರಿಸುವ ಸತ್ಪುರುಷರು ಕಿಲ್ಬಿಷದಿಂದ ಮುಕ್ತರಾಗುತ್ತಾರೆ. ಅದಿಲ್ಲದವರು ಪಾಪಿಗಳಾಗಿ ಪಾಪಫಲವನ್ನನುಭವಿಸುತ್ತಾರೆ. ಏಕೆಂದರೆ ಈ ಯಜ್ಞವು ವಿಶ್ವಕ್ಕೆಲ್ಲಾ ಏಕಸಂಬಂಧವನ್ನು ತೋರಿಸತಕ್ಕ ತಂತುವಾಗಿದೆ. ಇದನ್ನೇ ವಿಶ್ವಚಕ್ರವೆಂದೂ ಕರೆದಿವೆ. ಉದಾಹರಣೆಗೆ—

ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥
ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಂ ।
ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಂ ॥
ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।
ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥

(ಭ. ಗೀ. ೩-೧೪ ರಿಂದ ೧೬)

ಕರ್ಮರೂಪವಾದ ಯಜ್ಞದಿಂದ ಪರ್ಜನ್ಯವೂ (ವೃಷ್ಟಿಯೂ) ಪರ್ಜನ್ಯದಿಂದ ಅನ್ನವೂ ಅನ್ನದಿಂದ ಭೂತಗಳೂ ಉತ್ಪನ್ನವಾಗುವುವು. ಈ ಯಜ್ಞರೂಪವಾದ ಕರ್ಮವು ಬ್ರಹ್ಮನಿಂದ ಉತ್ಪನ್ನವಾಯಿತು. ಆದುದರಿಂದ ವಿಶ್ವದ ಸೃಷ್ಟಿಯಿಂದ ಪ್ರಾರಂಭಿಸಿ ಸಕಲವಿಧವಾದ ವ್ಯವಹಾರಗಳಿಗೂ, ಪುನರಾವೃತ್ತಿರೂಪವಾದ ವಿಶ್ವಚಕ್ರಕ್ಕೂ ಸಹ ಮೂಲನಾದ ಪರಬ್ರಹ್ಮನೇ ಯಜ್ಞದಲ್ಲಿ ನಿತ್ಯವಾಗಿ ಪ್ರತಿಷ್ಠಿತನಾಗಿದ್ದಾನೆ. ಯಾವ ವ್ಯಕ್ತಿಯು ಯಜ್ಞರೂಪವಾದ ಈ ವಿಶ್ವತತ್ವವನ್ನರಿಯದೆ, ನಿಯತವಾದ ಈ ವಿಶ್ವಚಕ್ರದ ಹಾದಿಯನ್ನನುಸರಿಸದೆ, ಸ್ವೇಚ್ಛೆಯಾಗಿರುವನೋ ಅವನು ಪಾಪಿಷ್ಠನು ಇತ್ಯಾದಿಯಾಗಿ ಗೀತಾದಿಗಳಲ್ಲಿ ಶ್ರುತಿವಾಕ್ಯಪ್ರತಿಪಾದಿತವಾದ ಯಜ್ಞತತ್ತ್ವವು ವಿವರಿಸಲ್ಪಟ್ಟಿದೆ. **'ಭುವನಸ್ಯ ನಾಭಿಃ'** ಎಂದು ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿರುವ ಈ ಯಜ್ಞತತ್ತ್ವವನ್ನು ಋಕ್ಸಂಹಿತೆಯ ಬೇರೆ ಭಾಗಗಳಲ್ಲಿಯೂ ಇದೇರೀತಿ ಪ್ರಶಂಸಿಸಿದೆ. ಉದಾಹರಣೆ—

ಯಜ್ಞೇನ ಯಜ್ಞಮಯಜಂತ ದೇವಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ।
ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ।

(ಋ. ಸಂ. ೧-೧೬೪-೫೦ ಮತ್ತು ೧೦-೯೦-೧೬)

ದೇವತೆಗಳು ತಮ್ಮ ಸಂಕಲ್ಪರೂಪವಾದುದೂ, ಧ್ಯಾನಾತ್ಮಕವಾದುದೂ ಆದ ಯಜ್ಞದಿಂದ ಯಜ್ಞಸ್ವರೂಪಿಯಾದ ಪ್ರಜಾಪತಿಯನ್ನು ಪೂಜಿಸಿದರು. ಪ್ರಾಪಂಚಿಕವಾದ ಧರ್ಮಗಳಿಗೆಲ್ಲಾ ಈ ವಿಧವಾದ ಯಜ್ಞವೇ ಮೂಲವಾಯಿತು. ಈ ಯಜ್ಞದ ಧರ್ಮಗಳೇ ಅಂತರಿಕ್ಷದಲ್ಲಿ ಸ್ಥಾಪಿತವಾಗಿ ದ್ಯುಲೋಕಸ್ಥರಾದ ದೇವತೆಗಳನ್ನು ಅವರವರ ಸ್ಥಾನಗಳಲ್ಲಿರಿಸುತ್ತದೆ. ಯಜ್ಞದಿಂದಲೇ ಪ್ರಜಾಪತಿಯಿಂದ ಸೃಷ್ಟವಾದ ಸಕಲ ಭೂತಗಳೂ ತಮ್ಮ ಸ್ಥಿತಿಹೇತುವಾದ ಅನ್ನವನ್ನೂ, ಶಕ್ತಿಯನ್ನೂ ಪಡೆಯುತ್ತವೆ. ಆದುದರಿಂದ ಯಜ್ಞದ ಅವಶ್ಯಕತೆಯನ್ನು ತಿಳಿಸುತ್ತಾ ತೈತ್ತಿರೀಯಸಂಹಿತೆಯಲ್ಲಿ,

ಪ್ರಜಾಪತಿಃ ಪ್ರಜಾ ಅಸೃಜತ ತಾಸ್ಸೃಷ್ಟಾಃ ಕ್ಷುಧಂ ನ್ಯಾಯಂತ್ಸಂ ಏತಂ ನವರಾತ್ರ-ಮಪಶ್ಯತ್ತಮಾಹರತ್ತೇನಾಯಜತ ತತೋ ವೈ ಪ್ರಜಾಭ್ಯೋಽಕಲ್ಪತ ಯರ್ಹಿ ಪ್ರಜಾಃ ಕ್ಷುಧಂ ನಿಗಚ್ಛೇಯುಸ್ತರ್ಹಿ ನವರಾತ್ರೇಣ ಯಜೇತೇಮೋ ಹಿ ವಾ ಏತಾಸಾಂ ಲೋಕಾ ಲೆಕ್ಲೃಪ್ತಾ....॥

(ತೈ. ಸಂ. ೭-೨-೪-೧)

ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಿದನಂತರ ಅವು ಕ್ಷುತ್ತಿನಿಂದ ಭರಿತವಾದವು. ಅವುಗಳ ಕ್ಷುತ್ತಿನ ಶಮನಕ್ಕಾಗಿ ನವರಾತ್ರಾತ್ಮಕವಾದ ಯಜ್ಞವನ್ನು ವೀಕ್ಷಿಸಿ ಅದರಿಂದ ಯಜ್ಞವನ್ನು ನಿರ್ವಹಿಸಿದನು. ಅದರಿಂದ ಆ ಪ್ರಜೆಗಳ ಕ್ಷುತ್ತಿನ ಶಮನವಾಯಿತು. ಆದುದರಿಂದ ಕ್ಷುತ್ತಿನ ಶಮನಕ್ಕಾಗಿ ಯಜ್ಞವು ಆಚರಿಸಲ್ಪಡತಕ್ಕದ್ದು ನಿಯತವಾಗಿದೆ. ಆ ಯಜ್ಞವೇ ಮೂರು ಲೋಕಗಳನ್ನೂ ಒಂದು ಸ್ಥಿತಿಯಲ್ಲಿಯೂ ನಿಯಮನದಲ್ಲಿಯೂ ಇಡುತ್ತದೆ. ಹೇಗೆಂದರೆ,

**ಕಲ್ಪಂತೇಽಸ್ಮಾ ಇಮೇ ಲೋಕಾ ಊರ್ಜಂ ಪ್ರಜಾಸು ದಧಾತಿ ತ್ರಿರಾತ್ರೇಣೈವೇಮಂ ಲೋಕಂ ಕಲ್ಪಯತಿ ತ್ರಿರಾತ್ರೇಣಾಂತರಿಕ್ಷಂ ತ್ರಿರಾತ್ರೇಣಾಮುಂ ಲೋಕಂ ಯಥಾ ಗುಣೇ ಗುಣಮನ್ವಸ್ಯತ್ಯೇವಮೇವ ತಲ್ಲೋಕೇ ಲೋಕಮನ್ವಸ್ಯತಿ ಧೃತ್ಯಾ ಅಶಿಥಿಲಂ ಭಾವಾಯ........॥**

(ತೈ. ಸಂ. ೭-೨-೪-೨)

ನವರಾತ್ರರೂಪವಾದ ಈ ಯಜ್ಞದಿಂದ ಲೋಕತ್ರಯಕ್ಕೂ ಚೈತನ್ಯವು ದೊರೆಯಿತು. ತ್ರಿರಾತ್ರದಿಂದ ಪೃಥ್ವಿಗೂ ತ್ರಿರಾತ್ರದಿಂದ ಅಂತರಿಕ್ಷಕ್ಕೂ, ಉಳಿದ ತ್ರಿರಾತ್ರದಿಂದ ದ್ಯುಲೋಕಕ್ಕೂ ಪ್ರಜಾಪತಿಯು ಸ್ಥಿತಿಶಕ್ತಿಯನ್ನು ಈ ಯಜ್ಞದ ಶಕ್ತಿಯಿಂದ ಕಲ್ಪಿಸಿದನು. ಓತಪ್ರೋತರೂಪದಿಂದ ತಂತುವಿನೊಡನೆ ತಂತುವನ್ನು ಸೇರಿಸಿ ಪಟವನ್ನು (ಬಟ್ಟೆಯನ್ನು) ನಿರ್ಮಿಸುವಂತೆ ಶೈಥಿಲ್ಯವನ್ನು ತಪ್ಪಿಸುವುದಕ್ಕೂ ಮತ್ತು ವಿಶ್ವಕ್ಕೆಲ್ಲಾ ಒಂದೇ ಸಂಬಂಧರೂಪವಾದ ಶಕ್ತಿಯನ್ನು ಉತ್ಪಾದನೆ ಮಾಡಿ ಮೂರು ಲೋಕಗಳೂ ಅವುಗಳ ನಿಯತವಾದ ಸ್ಥಿತಿಯಲ್ಲಿರುವುದಕ್ಕೂ ಈ ಯಜ್ಞದಿಂದ ಲೋಕತ್ರಯಕ್ಕೂ ಓತಪ್ರೋತರೂಪವಾದ ಸಂಬಂಧವನ್ನು ಕಲ್ಪಿಸಿದನು. ಈ ಯಜ್ಞವು ವಿಶ್ವಜೀವದ ನಾಡಿಯಾಗಿದೆ. ಅದನ್ನು ಶತಪಥದಲ್ಲಿ ವರ್ಣಿಸುತ್ತಾ,

**ಸರ್ವೇಷಾಂ ವಾ ಏಷ ಭೂತಾನಾಗ್ಂ ಸರ್ವೇಷಾಂ ದೇವಾನಾವಯತ್ಮಾ ಯದ್ಯಜ್ಞ-ಸ್ತಸ್ಯ ಸಮೃದ್ಧಿ ಮನು ಯಜಮಾನಃ ಪ್ರಜಯಾ ಪಶುಭಿರ್ಋಧ್ಯತೇ ।** (ಶ. ಬ್ರಾ. ೧೪-೩-೨-೧)

ಈ ಯಜ್ಞವು ಸಕಲ ಮಾನವರ ಮತ್ತು ಸಕಲ ದೇವತೆಗಳ ಆತ್ಮವೇ ಆಗಿದೆ. ಯಾವನು ಈ ಯಜ್ಞವನ್ನು ನಿರ್ವಹಿಸುತ್ತಾನೋ ಅವನು ಸತ್ಸಂತಾನವನ್ನೂ, ಪಶುಸಂಪತ್ತನ್ನೂ ಪಡೆಯುತ್ತಾನೆ. ಮತ್ತು,

**ಸ ಯದಗ್ನೌ ಜುಹೋತಿ । ತದ್ದೇವೇಷು ಜುಹೋತಿ ತಸ್ಮಾದ್ದೇವಾಃ ಸಂತ್ಯಥ ಯತ್ಸ-ದಸಿ ಭಕ್ಷಯಂತಿ ತನ್ಮನುಷ್ಯೇಷು ಜುಹೋತಿ ತಸ್ಮಾನ್ಮನುಷ್ಯಾಃ ಸಂತ್ಯಥ ಯದ್ಧವಿರ್ಧಾನ-ಯೋರ್ನಾರಾಶಗ್ಂಸಾಃ ಸೀದೇತಿ ತತ್ಪಿತೃಷು ಜುಹೋತಿ ತಸ್ಮಾತ್ಪಿತರಃ ಸಂತಿ ।।**

(ಶ. ಬ್ರಾ. ೨-೬-೨-೨೫)

ಅಗ್ನಿಯಲ್ಲಿ ಹುತವಾದುದು ದೇವತೆಗಳಿಗೆ ಅರ್ಪಿತವಾಗುತ್ತದೆ. ಆದುದರಿಂದಲೇ ದೇವತೆಗಳು ತಮ್ಮ ಸ್ಥಿತಿಯನ್ನು ಕಾಪಾಡಿಕೊಂಡಿದ್ದಾರೆ. ಸದಸ್ಸಿನಲ್ಲಿ ಹಂಚಲ್ಪಟ್ಟ (ಸೋಮ) ರಸದಿಂದ ಮಾನವರ ಸ್ಥಿತಿಯಿದೆ. ನಾರಾಶಂಸಪಾತ್ರೆಯಿಂದ ಅರ್ಪಿತವಾದ ಆಹುತಿಯು ಪಿತೃಗಳನ್ನು ತೃಪ್ತಿಪಡಿಸುತ್ತದೆ. ಆದುದರಿಂದ ಮಾನವನು ತನ್ನ ದೇವ ಋಣವನ್ನೂ ಪಿತೃ ಋತುವನ್ನು ಸಹ ಯಜ್ಞಕರ್ಮದಿಂದಲೇ ತೀರಿಸಬೇಕು. ಇದಿಲ್ಲದೇ ಇವನಿಗೆ ಋಣದಿಂದ ವಿಮೋಚನೆಯಿಲ್ಲ. ತೈತ್ತಿರೀಯಸಂಹಿತೆಯಿಂದ ಹಿಂದೆ ಉದಹರಿಸಿದ,

**" ತಲ್ಲೋಕೇ ಲೋಕಮನ್ವಸ್ಯತಿ ಧೃತ್ಯಾ ಅಶಿಥಿಲಂ ಭಾವಾಯ " ।**

(ತೈ. ಸಂ. ೭-೨-೪-೨)

ಎಂಬ ವಾಕ್ಯದಲ್ಲಿ ವಿಶ್ವದ ಅಸ್ತಿತ್ವವು ಶಿಥಿಲವಾಗದೇ ಭದ್ರವಾಗಿರುವುದಕ್ಕಾಗಿಯೂ ಮತ್ತು ಮೂರು ಲೋಕಗಳ ಸಂಬಧವೂ ಓತಪ್ರೋತಗಳಂತೆ ಹೆಣೆದುಕೊಂಡಿರುವುದಕ್ಕಾಗಿಯೂ ಸಹ ಯಜ್ಞಕರ್ಮದ ಅವಶ್ಯಕತೆಯಿದೆಯೆಂದು ತಿಳಿಸಿದೆ ಋಣತ್ರಯದ ವಿಷಯವನ್ನು ಹೇಳುವಾಗಲೂ ಸಹ ಈ ಪರಸ್ಪರವಾದ ಬಂಧನವು ವರ್ಣಿತವಾಗುತ್ತದೆ. ಉದಾಹರಣೆಗೆ ಶತಪಥಬ್ರಾಹ್ಮಣದಲ್ಲಿ,

**ಋಣಗ್‍ಂ ಹ ವೈ ಜಾಯತೇ ಯೋಽಸ್ತಿ ಸ ಜಾಯಮಾನ ಏವ ದೇವೇಭ್ಯ ಋಷಿಭ್ಯಃ ಪಿತೃಭ್ಯೋ ಮನುಷ್ಯೇಭ್ಯಃ ॥** ಶ. ಬ್ರಾ. ೧-೭-೨-೧)

ಪ್ರತಿಯೊಬ್ಬ ವ್ಯಕ್ತಿಯ ಸ್ಥಿತಿಯಕಾಲದಲ್ಲೂ ಸಹ ಅವನ ಜನ್ಮದಿಂದಲೇ ಪ್ರಾಪ್ತವಾದ ದೇವಋಣವೂ, ಋಷಿಋಣವೂ, ಪಿತೃಋಣವೂ ಅವನ ಮೇಲಿನ ಹೊರೆಯಾಗಿದ್ದೇ ಇರುತ್ತದೆ.

**ಸ ಯದೇವ ಋಜೇತ । ತೇನ ದೇವೇಭ್ಯ ಋಣಂ ಜಾಯತೇ ತದ್ಧ್ಯೇಭ್ಯ ಏತತ್ಕರೋತಿ ಯದೇಭ್ಯೋ ಜುಹೋತಿ ॥**

(ಶ. ಬ್ರಾ. ೧-೭-೨-೨)

ಈ ಋಣದಿಂದ ಮುಕ್ತನಾಗಿ ವಿಶ್ವದ ಸ್ಥಿತಿಯಲ್ಲಿ ತಾನು ಸಹ ಭಾಗವಹಿಸುವಂತೆ ತನ್ನ ಅಸ್ತಿತ್ವವನ್ನು ಕಾಪಾಡಿಕೊಳ್ಳಬೇಕಾದರೆ ಪ್ರತಿಯೊಂದು ವ್ಯಕ್ತಿಯೂ ಯಜ್ಞಮಾಡಿ ದೇವಋಣವನ್ನು ತೀರಿಸಿ ಆ ಋಣದಿಂದ ಮುಕ್ತನಾಗಲೇಬೇಕು.

**ಜಾಯಮಾನೋ ವೈ ಬ್ರಾಹ್ಮಣಸ್ತ್ರಿಭಿರ್ಋಣವಾ ಜಾಯತೇ ಬ್ರಹ್ಮಚರ್ಯೇಣರ್ಷಿಭ್ಯೋ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯ ಏಷ ವಾ ಅನೃಣೋ ಯಃ ಪುತ್ರೀ ಯಜ್ವಾ ಬ್ರಹ್ಮಚಾರಿವಾಸೀ ॥**

(ತೈ. ಸಂ. ೬-೩-೧೧-೫)

ಇದಲ್ಲದೆ ಬ್ರಾಹ್ಮಣನಾದವನು ಹುಟ್ಟುವಾಗಲೇ ಋಷಿಋಣ, ದೇವಋಣ. ಪಿತೃಋಣಗಳೆಂಬ ಮೂರು ವಿಧವಾದ ಋಣಗಳನ್ನು ಹೊತ್ತುಕೊಂಡೇ ಹುಟ್ಟುವನು. ಬ್ರಹ್ಮಚರ್ಯವ್ರತದಿಂದ ಗುರುಕುಲದಲ್ಲಿ ವಾಸಿಸುತ್ತಾ ನಿಯಮವಾಗಿ ಗುರುವಿನಿಂದ ಉಪದೇಶಪೂರ್ವಕವಾಗಿ ವೇದಾಧ್ಯಯನಮಾಡುವುದರಿಂದ ಋಷಿಋಣವು ತೀರುವುದು ಯಜ್ಞಾದಿಗಳಿಂದ ದೇವತೆಗಳನ್ನು ಆರಾಧಿಸುವುದರಿಂದ ದೇವಋಣವು ತೀರುವುದು. ವಿವಾಹವಾದ ಪತ್ನಿಯಲ್ಲಿ ಧರ್ಮಪ್ರಜೋತ್ಪಾದನೆಮಾಡುವುದರಿಂದ ಪಿತೃಋಣವು ತೀರುವುದು ಎಂದು ತೈತ್ತರೀಯಸಂಹಿತೆ(ಯಜುರ್ವೇದ) ಯಲ್ಲಿಯೂ ಹೇಳಿದೆ.

ಇತ್ಯಾದಿಯಾಗಿ ವಿಶ್ವತತ್ತ್ವದಲ್ಲಿ ಪ್ರತಿವ್ಯಕ್ತಿಯೂ ಸಹ ತನ್ನ ಪ್ರಭಾವಪೂರಿತವಾದ ಅಸ್ತಿತ್ವವನ್ನು ಹೊಂದಬೇಕಾದರೆ ಯಜ್ಞವು ಈ ಸಾಮಾನ್ಯವಿಶೇಷಗಳಿಗೆ ಸಂಬಂಧವನ್ನು ಕಲ್ಪಿಸುವ ಸೂತ್ರವಾಗಿರುತ್ತದೆ. ಸೂತ್ರರೂಪವಾದ ಈ ಯಜ್ಞವು ಸಹ ವಿಶ್ವದ ವಿಕಾಸ ಮತ್ತು ಸಂಕೋಚಗಳೊಡನೆ ತಾನೂ ಸಹ ಒಂದು ಸಲ ಬೆಳೆಯುತ್ತದೆ. ಇನ್ನೊಂದು ಸಲ ಸಂಕುಚಿತವಾಗುತ್ತದೆ. ವಿಶ್ವಗತಿಯೊಡನೆ ತನ್ನ ಗತಿಯನ್ನು ಹೊಂದಿಸಿಕೊಳ್ಳುತ್ತದೆ. ಈ ಅಂಶವನ್ನು ವಿವರಿಸುತ್ತಾ ಶತಪಥಬ್ರಾಹ್ಮಣದಲ್ಲಿ ಯಜ್ಞಶಬ್ದದ ನಿರ್ವಚನವನ್ನು ತಿಳಿಸಿದೆ.

**ಅಥ ಯಸ್ಮಾದ್ಯಜ್ಞೋ ನಾಮ । ಘ್ನಂತಿ ವಾ ಏನಮೇತದ್ಯದಭಿಷುಣ್ವಂತಿ ತದ್ಯದೇನಂ ತನ್ವತೇ ತದೇನಂ ಜನಯಂತಿ ಸ ತಾಯಮಾನೋ ಜಾಯತೇ ಸ ಯನ್ ಜಾಯತೇ ತಸ್ಮಾದ್ಯಜ್ಞೋ ಯಜ್ಞೋ ಹ ವೈ ನಾಮೈತದ್ಯಜ್ಞ ಇತಿ ।** ಶ. ಬ್ರಾ. ೩-೯-೪-೨೩)

ಅಭಿಷವಕಾಲದಲ್ಲಿ ಹನನಮಾಡುತ್ತಾರೆ. ಪುನಃ ಉತ್ಪನ್ನವಾಗುವಂತೆ ಮಾಡುತ್ತಾರೆ. ಪ್ರಸಾರರೂಪವಾದ ಗತಿಯೊಂದಿಗೆ ಉತ್ಪನ್ನವಾಗುವುದರಿಂದ ಯಜ್ಞವೆಂಬ ಹೆಸರು ಪ್ರಸಿದ್ಧವಾಯಿತು ಎಂದು ಆವಶ್ಯಕತೆಗಳಿಗೆ ತಕ್ಕಂತೆ ಸಂಕೋಚ ವಿಕಾಸಗಳೂ ಇವೆಯೆಂದು ತಿಳಿಸಿದೆ ಮತ್ತು ವಿಶ್ವದ ಸ್ಥಿತಿಗತಿಗಳಿಗನುಗುಣವಾಗಿಯೇ ಇರುವುದರಿಂದ ವಿಶ್ವಕ್ಕೆ ಉಪಕಾರಕವಾಗಿದೆ. ಅದು ಹೇಗೆಂದರೆ,

**ಭುಜ್ಯುಃ ಸುಪರ್ಣ ಇತಿ । ಯಜ್ಞೋ ವೈ ಭುಜ್ಯುಃ ಯಜ್ಞೋ ಹಿ ಸರ್ವಾಣಿ ಭುನಕ್ತಿ ಯಜ್ಞೋ ಗಂಧರ್ವಃ .... .... .... .... .... ॥** (ಶ. ಬ್ರಾ. ೯ ೪-೧-೧೧)

ಯಜ್ಞವು ಸಕಲ ಭೂತಗಳನ್ನೂ ತನ್ನ ಆಹುತಿಗಾಗಿ ಅಪೇಕ್ಷಿಸುತ್ತದೆ. ಪುನಃ ಸಕಲಭೂತಗಳ ಉಪಹಾರಕ್ಕಾಗಿ ಪ್ರಸರಿಸುತ್ತದೆ. ಇತ್ಯಾದಿಯಾಗಿ ವಿಶ್ವತತ್ತ್ವಕ್ಕೂ ಯಜ್ಞಕ್ಕೂ ಇರತಕ್ಕ ತಾದಾತ್ಮ್ಯಸಂಬಂಧವನ್ನು ತಿಳಿಸಿ ವ್ಯಾವಹಾರಿಕವಾದ ಸಮಸ್ತ ವಿಶ್ವವ್ಯವಹಾರಗಳಿಗೂ ಸಹ ಯಜ್ಞವು ಕಾರಣವು. ಅದೇ ರಕ್ಷಕವು ಮತ್ತು ಅದೇ ಸೂತ್ರರೂಪವಾದ ಸಂಬಂಧವು' ಇತ್ಯಾದಿಯಾಗಿ ನಾನಾಶ್ರುತಿವಾಕ್ಯಗಳಲ್ಲಿ ವರ್ಣಿಸಿರುವ ಅಂಶವನ್ನು ಪ್ರಕೃತವಾದ ಋಕ್ಕಿನಲ್ಲಿ " **ಯಜ್ಞೋ ವಿಶ್ವಸ್ಯ ನಾಭಿಃ** " ಎಂಬ ವಾಕ್ಯದಿಂದ ವರ್ಣಿತವಾಗಿದೆ. ಆದುದರಿಂದಲೇ ವಿಶ್ವನಾಭಿಯಾದ ಈ ಯಜ್ಞವನ್ನು ನಿರ್ವಹಿಸಬೇಕಾದರೆ ದೇವಮಾನವಾದಿಗಳೆಲ್ಲರಿಗೂ ಸಮಾನವಾದ ಶ್ರದ್ಧೆಯು ಅತ್ಯವಶ್ಯವೆಂದು ತೋರಿಸಿದೆ.

**ಯೋ ವೈ ಶ್ರದ್ಧಾಮನಾರಭ್ಯ ಯಜ್ಞೇನ ಯಜತೇ ನಾಸ್ಯೇಷ್ಟಾಯ ಶ್ರದ್ದಧತೇಽಪಃ ಪ್ರಣಯತಿ ಶ್ರದ್ಧಾ ವಾ ಆಪಃ ಶ್ರದ್ಧಾಮೇವಾರಭ್ಯ ಯಜ್ಞೇನ ಯಜತ ಉಭಯೋಽಸ್ಯ ದೇವಮನುಷ್ಯಾ ಇಷ್ಟಾಯ ಶ್ರದ್ದಧತೇ ॥** (ತೈ. ಸಂ. ೧-೬-೮-೧)

ಶ್ರದ್ಧಾರಹಿತನಾಗಿ ಯಜ್ಞಮಾಡಿದವನ ಯಜ್ಞವು ಸಿದ್ಧಿಸುವುದಿಲ್ಲ. ಶ್ರದ್ಧಾರೂಪವಾದ ಅಪ್ಪನ್ನು (ನೀರನ್ನು) ಮುಂದಿಟ್ಟುಕೊಂಡು ಯಜ್ಞವನ್ನು ನೆರವೇರಿಸತಕ್ಕದ್ದು. ದೇವಮಾನವಾದಿ ಸಕಲರೂ ಸಹ ಶ್ರದ್ಧೆಯಿಂದಲೇ ಯಜ್ಞದಲ್ಲಿ ಭಾಗವಹಿಸುವರು ಎಂದು ಶ್ರದ್ಧೆಯ ಅವಶ್ಯಕತೆಯನ್ನೂ ತಿಳಿಸಿದೆ.

ಯಜ್ಞತತ್ತ್ವದಲ್ಲಿಡಬೇಕಾದ ಈ ಶ್ರದ್ಧೆಯು ಕೇವಲ ಅಂಧಶ್ರದ್ಧೆಯಲ್ಲ. ಈ ಶ್ರದ್ಧೆಯು ಆಧ್ಯಾತ್ಮಿಕವಾದ ತತ್ತ್ವವನ್ನು ಗ್ರಹಣಮಾಡುವ ಶಕ್ತಿಯುಳ್ಳದ್ದಾಗಿರಬೇಕು. ಇದು ಭುವನನಾಭಿಯಾದ ಯಜ್ಞಕ್ಕೂ ಬ್ರಹ್ಮತತ್ತ್ವಕ್ಕೂ ಇರುವ ಸಂಬಂಧವನ್ನರಿಯತಕ್ಕದ್ದು. ಆಧ್ಯಾತ್ಮಿಕಜ್ಞಾನದ ಆಧಾರದಮೇಲೆ ನಿಂತಿರುವ ಈ ಶ್ರದ್ಧೆಯುಳ್ಳ ಯಜಮಾನನು ತನಗೂ ಯಜ್ಞಕ್ಕೂ ತಾದಾತ್ಮ್ಯವನ್ನು ಕಲ್ಪಿಸಿಕೊಳ್ಳುತ್ತಾನೆ. ಅನಂತರ ಯಜ್ಞಕ್ಕೂ ಪ್ರಜಾಪತಿಗೂ ಇರುವ ತಾದಾತ್ಮ್ಯವನ್ನರಿಯುತ್ತಾನೆ. ಪ್ರಜಾಪತಿರೂಪಿಯಾದ ಪರಬ್ರಹ್ಮನ ವಿಶ್ವವ್ಯವಹಾರಗಳೆಲ್ಲವೂ ಈ ಯಜ್ಞತತ್ತ್ವದಲ್ಲಡಗಿರುತ್ತದೆಂದರಿಯುತ್ತಾನೆ ಮತ್ತು ಆ ವಿಶ್ವಚಕ್ರದಲ್ಲಿ ತಾನೂ ಸಹ ಭಾಗವನ್ನು ವಹಿಸುತ್ತಾನೆ.

**ಅಯಂ ಸೋಮೋ ವೃಷ್ಣೋ ಅಶ್ವಸ್ಯ ರೇತಃ**—ವೃಷ್ಟ್ಯಾದಿಗಳನ್ನು ಸೇಚನಮಾಡುವವನೂ, ಜಗದ್ವ್ಯಾಪಕನೂ ಆದ ಆದಿತ್ಯನ ರೇತಸ್ಸು ಸೋಮರೂಪವಾಗಿದೆಯೆಂದು " **ಪೃಚ್ಛಾಮಿ ತ್ವಾ ವೃಷ್ಣೋ ಅಶ್ವಸ್ಯ ರೇತಃ** " ಎಂಬ ಪ್ರಶ್ನೆಗೆ ಉತ್ತರರೂಪವಾಗಿ ಹೇಳಿದೆ. ಇಲ್ಲಿ ಅಶ್ವವೆಂಬ ಪರ್ಯಾಯಪದವು ಆದಿತ್ಯನ ಯಾವ ಗುಣವನ್ನು ತೋರಿಸುತ್ತದೆ ಎಂಬುದನ್ನು ತಿಳಿದು ಅನಂತರ ಸೋಮವು ಅವನ ರೇತಸ್ಸು ಎಂಬುದರ ಅರ್ಥವೇನು ಎಂಬ ವಿಷಯವನ್ನು ಪರಿಶೀಲಿಸಬೇಕು. ಶತಪಥಬ್ರಾಹ್ಮಣದಲ್ಲಿ ಅಶ್ವಶಬ್ದದ ನಿರ್ವಚನವನ್ನು ತಿಳಿಸುತ್ತಾ—

**ಪ್ರಜಾಪತೇರಕ್ಷ್ಯಶ್ವಯತ್ ತತ್ಪರಾಪತತ್ತತೋಽಶ್ವಃ ಸಮಭವದ್ಯದಶ್ವಯತ್ತದಶ್ವಸ್ಯಾಶ್ವತ್ವಂ ।** (ಶ. ಬ್ರಾ. ೧೩-೩-೧-೧)

ಪ್ರಜಾಪತಿಯ ಅಕ್ಷಿಯು (ಕಣ್ಣು) ಉಬ್ಬಿಕೊಂಡು ಕೆಳಕ್ಕೆ ಬಿದ್ದುಹೋಯಿತು. ಅದರಿಂದ ಅಶ್ವವು ಉತ್ಪನ್ನವಾಯಿತು. ಅದು ವೃದ್ಧವಾದುದರಿಂದ ಅದಕ್ಕೆ ಅಶ್ವವೆಂಬ ಹೆಸರು ಪ್ರಸಿದ್ಧವಾಯಿತು ಎಂದು ತಿಳಿಸಿ ಅನಂತರ ಈ ಅಶ್ವಕ್ಕೂ ಆದಿತ್ಯನಿಗೂ ಇರುವ ತಾದಾತ್ಮ್ಯವು ಹೇಗೆ ಎಂಬುದನ್ನು ವಿವರಿಸಿದೆ.

**ಪ್ರಜಾಪತಿರ್ವಾ ಇದಮುಗ್ರ ಆಸೀತ್ .... .... .... .... .... .... ನಿರಮಿಮೀತ ಮನಸಃ ಪುರುಷಂ ಚಕ್ಷುಷೋಽಶ್ವಂ ।** (ಶ. ಬ್ರಾ. ೭-೫-೨-೬)

ಈ ಅಶ್ವವು ಪ್ರಜಾಪತಿಯ ಚಕ್ಷುಸ್ಸಿನಿಂದ ಸೃಷ್ಟವಾಯಿತು ಎಂದು ಹೇಳಿ ಅನಂತರ ವರುಣನಿಗೂ ಈ ಅಶ್ವಕ್ಕೂ ಇರತಕ್ಕ ನಿಕಟವಾದ ಸಂಬಂಧವನ್ನು ಅನೇಕ ಕಡೆಗಳಲ್ಲಿ ತಿಳಿಸಿದೆ.

**ವಾರುಣೋ ವಾ ಅಶ್ವಃ । ೦ಂ ದೇವತಯಾ ವ್ಯರ್ಧಯತಿ । ಯತ್ಪ್ರಾಜಾಪತ್ಯಂ ಕರೋತಿ ನಮೋ ರಾಜ್ಞೇ ನಮೋ ವರುಣಾಯೇತ್ಯಾಹ । ವಾರುಣೋ ವಾ ಅಶ್ವಃ ।**

(ತೈ.ಬ್ರಾ. ೩-೯-೧೬-೧)

ಎಂದು ವರುಣನಿಗೂ ಅಶ್ವಕ್ಕೂ ಇರುವ ಸಂಬಂಧವನ್ನು ತಿಳಿಸುವಾಗ ಸಾಯಣರು **ಅಶ್ವಸ್ಯಾಬ್ಯೋನಿತ್ವಾದ್ವರುಣಸ್ಯ ಚಾಪಾಂ ಪತಿತ್ವಾದಯಮಶ್ವೋ ವಾರುಣಃ ।** ಅಶ್ವವು ವಿಶ್ವವ್ಯಾಪಕವಾದ ನೀರಿನಿಂದ ಜನಿಸಿದುದರಿಂದಲೂ, ವರುಣನು ನೀರಿಗೆ ಒಡೆಯನಾದುದರಿಂದಲೂ ಯಜ್ಞಾಶ್ವವು ವರುಣದೇವತೆಗೆ ಸಂಬಂಧಿಸಿದುದು ಎಂದು ವಿವರಣೆಯನ್ನು ಹೇಳಿದ್ದಾರೆ. ಈ ವಾರಣಾಶ್ವದ ರಹಸ್ಯಾರ್ಥವೇನು ಎಂಬ ವಿಷಯವನ್ನು ವಿಮರ್ಶಿಸುತ್ತಾ Eggelling ಎಂಬ ಪಂಡಿತನು ಶತಪಥಬ್ರಾಹ್ಮಣವನ್ನು ಪರಿವರ್ತಿಸುವ ಕಾಲದಲ್ಲಿ ಈ ರೀತಿ ಹೇಳಿದ್ದಾನೆ—

Varuna's horse is none other than the fiery races who pursue his diurnal course across the all-encompassing arch of heaven, the sphere of Varuna's the all-ruler. It is in the form of the horse that the Sun is thus lauded in the hymn in praise of Aswamedha.

(Sacred Books of the East. Vol. XLIV; P. XIX-XX)

ದ್ಯಾವಾಪೃಥಿವಿಗಳಿಗೆಲ್ಲಾ ಪ್ರಭುವಾದ ವರುಣನ ಈ ಅಶ್ವವು ಯಾವುದೆಂದರೆ ತನ್ನ ದೈನಂದಿನದ ಪರಿಭ್ರಮಣವನ್ನು ಹೊಂದುತ್ತಿರುವ ಸೂರ್ಯನಲ್ಲದೆ ಬೇರೆಯಲ್ಲ. ವರುಣನಿಗೂ ಈ ಅಶ್ವದೊಡನೆ ಒಟ್ಟಿಗೆ ಇರತಕ್ಕ ಸಂಬಂಧವು ತೈತ್ತಿರೀಯ ಸಂಹಿತೆಯಲ್ಲಿ ಈ ರೀತಿ ವರ್ಣಿತವಾಗಿದೆ.

**ಪ್ರಜಾಪತಿರ್ವರುಣಾಯಾಶ್ವಮನಯ ತ್ಸ ಸ್ವಾಂ ದೇವತಾಮಾರ್ಛತ್ಸ ಪರ್ಯದೀರತ್ಸ ಸ ಏತಂ ವಾರುಣಂ ಚತುಷ್ಕಪಾಲಮಪಶ್ಯತ್ತಂ ನಿರವತ್ತತೋ ವೈ ಸ ವರುಣಪಾಶಾದಮುಚ್ಯತ ವರುಣೋ ವಾ ಏತಂ ಗೃಹ್ಣಾತಿ ಯೋಽಶ್ವಂ ಪ್ರತಿಗೃಹ್ಣಾತಿ........॥** (ತೈ. ಸಂ. ೨-೩-೧೨-೧)

ಪ್ರಜಾಪತಿಯು ಈ ಅಶ್ವವನ್ನು ವರುಣನಲ್ಲಿಗೆ ಕರೆದುಕೊಂಡು ಹೋದನು. ಆದರೆ ಆ ಅಶ್ವವು ತನ್ನ ಸ್ವಂತ ದೇವತೆಯಲ್ಲಿಗೇ (ಪ್ರಜಾಪತಿಯಲ್ಲಿಗೇ) ಹೋಯಿತು. ಆಗ ವರುಣನಿಗೆ ಖೇದವುಂಟಾದುದರಿಂದ ಪ್ರಜಾಪತಿಯು ವರುಣನನು ಉದ್ದೇಶಿಸಿ ಚತುಷ್ಕಪಾಲವನ್ನರ್ಪಿಸಿದನು. ಆಗ ಪ್ರಜಾಪತಿಯು ವರುಣನ ಪಾಶದಿಂದ ಮುಕ್ತನಾದನು ಎಂಬುದಾಗಿ ವಿವರಿಸಿದೆ. ಈ ಅಂಶವನ್ನು ವಿಶದವಾಗಿ ತಿಳಿಯಲು ಇನ್ನೂ ಕೆಲವು ಮಂತ್ರಗಳು ಸಹಾಯಕಗಳಾಗಿರುವವು. ಆದರೆ ಗ್ರಂಥವು ಬಹಳ ವಿಸ್ತಾರವಾಗುವುದೆಂದು ಅವುಗಳನ್ನು ವಿವರಿಸಲಾಗುವುದಿಲ್ಲ. ಅವುಗಳ ಆಧಾರಗಳನ್ನು ಮಾತ್ರ ಕೊಡಲಾಗುತ್ತದೆ. ಇವು ಅಶ್ವಪದವು ಸೂರ್ಯನಿಗೆ ಪರ್ಯಾಯಪದವಾಗಿರುವುದನ್ನು ಸೂಚಿಸುತ್ತವೆ.

ಋ. ಸಂ. ೧-೫೦-೧ ; . ತೈ. ಸಂ. ೨-೨-೧೨-೧ ;
,, . ೧-೧೧೫-೧ ; ,, ೨-೫-೧೨-೧ ಇತ್ಯಾದಿ.

ವಿಶ್ವವ್ಯಾಪಿಯಾದ (ಅಶ್ವಸ್ಯ) ಈ ಆದಿತ್ಯನಿಗೆ ಸೋಮವು ರೇತೋರೂಪವಾಗಿರುವುದು. ಎಂದರೆ ಆದಿತ್ಯರೂಪದಲ್ಲಿರುವ ಪರಬ್ರಹ್ಮನಿಗೆ ಸೋಮವೇ ರೇತಸ್ಸಾಗಿರುವುವೆಂದ ಹೇಳಬಹುದು. ಹೇಗೆಂದರೆ ಸಕಲ ಭೂತಗಳ ಸೃಷ್ಟಿಗೆ ಸೋಮವೇ ಉತ್ಪಾದಕ ವಾದ ಬೀಜವೆಂಬುದನ್ನು ಬೃಹದಾರಣ್ಯಕೋಪನಿಷತ್ತಿನಲ್ಲಿ ಈರೀತಿ ಹೇಳಿದೆ.

**ಅಥ ಯತ್ಕಿಂಚೇದಮಾರ್ದ್ರಂ ತದ್ರೇತಸೋಽಸೃಜತ ತದು ಸೋಮ ಏತಾವದ್ವಾ ಇದಂ ಸರ್ವಮನ್ನಂ ಚೈವಾನ್ನಾದಶ್ಚ ಸೋಮ ಏವಾನ್ನಮಗ್ನಿರನ್ನಾದಃ ।** (ಬೃ. ಉ. ೧-೪-೬)

ಅದ್ವಿತೀಯನಾದ ಪರಬ್ರಹ್ಮನು ತನ್ನ ರೇತಸ್ಸಿನಿಂದ ವಿಶ್ವದಲ್ಲಿ ಆರ್ದ್ರವಾಗಿರುವ ಸಕಲ ವಸ್ತುಗಳನ್ನೂ ಸೃಷ್ಟಿಸಿದನು ಆ ರೇತಸ್ಸೇ ಸೋಮವು. ಈ ಸೋಮವು ಅಗ್ನಿಯಲ್ಲಿ ಅರ್ಪಿತವಾಗಿ ಎರಡೂ ಪರಸ್ಪರವಾದ ಭಕ್ಷ್ಯ ಭಕ್ಷಕಗಳಾಗುತ್ತವೆ. ಇದನ್ನೇ ಮೈತ್ರ್ಯುಪನಿಷತ್ತಿನಲ್ಲಿ ವಿವರಿಸುತ್ತಾ,

**ರವಿಮಧ್ಯೇ ಸ್ಥಿತಃ ಸೋಮಃ ಸೋಮಮಧ್ಯೇ ಹುತಾಶನಃ ।** ಮೈ. ಉ. ೬-೩೮)

ಸೋಮನು ಆದಿತ್ಯಮಂಡಲದ ಮಧ್ಯವರ್ತಿಯಾಗಿಯೂ ಅಗ್ನಿಯು ಸೋಮದ ಮಧ್ಯವರ್ತಿಯಾಗಿಯೂ ಇದ್ದಾರೆಂದು ತಿಳಿಸಿದೆ. ಸಾಧಾರಣವಾಗಿ ಆದಿತ್ಯನಿಗೂ ಸೋಮನಿಗೂ ಇರುವ ಸಂಬಂಧವನ್ನು ಋಕ್ಸಂಹಿತೆಯಲ್ಲಿ ಅನೇಕಕಡೆಗಳಲ್ಲಿ ವರ್ಣಿಸಿದೆ. ಉದಾಹರಣೆಗೆ—

**ಮಹತ್ತತ್ಸೋಮೋ ಮಹಿಷಶ್ಚಕಾರಾಪಾಂ ಯದ್ಗರ್ಭೋಽವೃಣೀತ ದೇವಾನ್ ।**
**ಅದಧಾದಿಂದ್ರೇ ಪವಮಾನ ಓಜೋಽಜನಯತ್ಸೂರ್ಯೇ ಜ್ಯೋತಿರಿಂದುಃ ॥**

**(ಋ. ಸಂ. ೯-೯೭-೪೧)**

ಆದಿತ್ಯಸ್ಥವಾದ ಉದಕಗಳ ಗರ್ಭಭೂತವಾದ ಸೋಮವು ದೇವತೆಗಳಿಗೂ ತೃಪ್ತಿಯನ್ನುಂಟುಮಾಡಿತು. ವೀರ್ಯರೂಪದಲ್ಲಿದ್ದು ಆದಿತ್ಯನಲ್ಲಿ ವಿಶ್ವಜೋತಿಯನ್ನು ಸೃಷ್ಟಿಸಿತು, ಎಂದಿದೆ. ಮತ್ತು,

**ತಂ ಸಮುದ್ರೋ ಅಸಿ ವಿಶ್ವವಿತ್ಕವೇ ತವೇಮಾಃ ಪಂಚ ಪ್ರದಿಶೋ ವಿಧರ್ಮಣಿ ।**
**ತ್ವಂ ದ್ಯಾಂ ಚ ಪೃಥಿವೀಂ ಚಾತಿ ಜಭ್ರಿಷೇ ತವ ಜ್ಯೋತೀಂಷಿ ಪವಮಾನ ಸೂರ್ಯಃ ॥**

(ಋ. ಸಂ. ೯-೮೬-೨೯)

ಎಂಬಲ್ಲಿ ಸೋಮನೇ ಅಂತರಿಕ್ಷಸ್ಥವಾದ ಸಮುದ್ರವೆಂದೂ, ಸಕಲ ಜ್ಯೋತಿಗೂ ಆಧಾರವೆಂದೂ, ಆದಿತ್ಯನೇ ಸೋಮನ ಪ್ರಭಾವ ದಿಂದ ಬೆಳಗುತ್ತಿರುವನೆಂದೂ ತಿಳಿಸಿದೆ. .ಇಲ್ಲಿ **ಸೋಮವು** ಯಾವ ತತ್ತ್ವವನ್ನು ಪ್ರತಿಬಿಂಬಿಸುತ್ತದೆ ಎಂಬುದನ್ನು ವಿವರಿಸುತ್ತಾ Eggeling ಎಂಬ ಪಂಡಿತನು ಈರೀತಿ ತಿಳಿಸಿದ್ದಾನೆ.

The poet of IX 86. 29 ; while saying "Thon art the heavenly ocean (Samudra), thine are the lights (ಜ್ಯೋತೀಂಷಿ) O pavamaua, thine the Sun," seems to conceive Soma as the bright ether, the axure 'sea of light' generally.

(Sacred Books of the East. Vol. XRVI. P. XV.)

ಪ್ರಕೃತವಾದ ಋಕ್ಕಿನಲ್ಲಿ ಸಾಯಣರು ಈ ಅಂಶವನ್ನು ವಿವರಿಸುತ್ತಾ, **ಅಗ್ನೌ ಹುತಃ ಸೋಮರಸಃ ಆದಿತ್ಯಂ ಪ್ರಾಪ್ಯ ವೃಷ್ಟ್ಯಾದಿಫಲಂ ಜನಯತಿ ।** ಅಗ್ನಿಯಲ್ಲಿ ಅರ್ಪಿಸಿದ ಸೋಮವು ಆದಿತ್ಯನನ್ನು ಸೇರಿ ವೃಷ್ಟ್ಯಾದಿಫಲವನ್ನು ಉತ್ಪನ್ನವಾಗುವಂತೆ ಮಾಡುತ್ತದೆ. ಆದುದರಿಂದ ಆದಿತ್ಯನ ರೇತಸ್ಸೆಂದು ವರ್ಣಿತವಾಗಿದೆಯೆಂದು ತಿಳಿಸಿದ್ದಾರೆ. ಇಲ್ಲಿ ಕೇವಲ ಅಧಿದೈವತ ಪಕ್ಷದಲ್ಲಿಯೇ ಅರ್ಥಮಾಡದೆ ಅಧ್ಯಾತ್ಮಪಕ್ಷದಲ್ಲಿಯೂ ಅರ್ಥಮಾಡಬೇಕು. ಅಧ್ಯಾತ್ಮಪಕ್ಷದಲ್ಲಿ ಮೇಲೆ ಉದಹರಿಸಿರುವ ಉಪನಿಷದ್ವಾಕ್ಯಗಳಲ್ಲಿ ರೇತಸ್ಸಿನ ರೂಪದಲ್ಲಿರುವ ಸೋಮನಿಗಿರುವ ವಿಶ್ವೋತ್ಪಾದನ ಶಕ್ತಿಯನ್ನೂ, ಸೋಮನಿಗೂ ಆದಿತ್ಯನಿಗೂ ಇರುವ ಸಂಬಂಧವನ್ನೂ ತಿಳಿಸಿದೆ.

**ಬ್ರಹ್ಮಾಯಂ ವಾಚಃ ಪರಮಂ ವ್ಯೋಮ ಮಂತ್ರಾದಿರೂಪಾಯಾಃ ವಾಚಃ ಪ್ರಜಾಪತಿರೇವ ಉತ್ಕೃಷ್ಟಂ ರಕ್ಷಕಂ ಸ್ಥಾನಂ । ತತ್ರೈವ ಉತ್ಪತ್ತೇಸ್ತತ್ರೈವ ಪರ್ಯವಸಾನಾಚ್ಚ ।** ಮಂತ್ರಾದಿರೂಪವಾದ ವಾಕ್ಕಿಗೆ ಪ್ರಜಾಪತಿಯೇ ಉತ್ಪತ್ತಿಸ್ಥಾನವೂ, ಅವನೇ ಪರ್ಯವಸಾನವೂ ಆಗಿರುವುದರಿಂದ ಅವನೇ **ವ್ಯೋಮವು** ಎಂದು ತಿಳಿಸಿದೆ. ಇಲ್ಲಿ **ವ್ಯೋಮ** ಶಬ್ದಕ್ಕೆ **ಉತ್ಕೃಷ್ಟಂ ರಕ್ಷಕಂ ಸ್ಥಾನಂ** ಅತಿಶಯವಾದುದೂ ರಕ್ಷಕವೂ ಆದ ಆಧಾರಸ್ಥಾನವೆಂದೂ ಅರ್ಥ ಮಾಡಿದ್ದಾರೆ.

**ವ್ಯೋಮ**ಶಬ್ದವು ನಿರುಕ್ತದಲ್ಲಿ **ಅಂತರಿಕ್ಷ**ನಾಮಗಳಲ್ಲಿ ಪಠಿತವಾಗಿವೆ (ನಿ. ೨-೧೦). **ವ್ಯಾಪಿಸು, ಆಚ್ಛಾದಿಸು** ಎಂದರ್ಥವುಳ್ಳ **ವ್ಯೇಞ್** ಧಾತುವಿನಿಂದ ನಿಷ್ಪನ್ನವಾಗಿದೆ. ಸರ್ವವ್ಯಾಪಕವಾದ ಅಂತರಿಕ್ಷವೆಂದರ್ಥ. ಇಇಲ್ಲದೆ ರಕ್ಷಣಾರ್ಥಕವಾದ **ಅವ** ಧಾತುವಿಗೆ ವಿ ಎಂಬ ಉಪಸರ್ಗವು ಸೇರಿ **ವ್ಯೋಮ**ಪದವು ನಿಷ್ಪನ್ನವಾಗಬಹುದು. ನಾನಾವಿಧವಾದ ರಕ್ಷಣೆಗಳಿಂದ ಕೂಡಿದ ಸ್ಥಾನವೆಂದು ಅರ್ಥವಾಗುತ್ತದೆ, ಇದೇ ಅರ್ಥದಲ್ಲಿ,

> **ಋತೇನ ಋತಂ ಧರುಣಂ ಧಾರಯಂತ ಯಜ್ಞಸ್ಯ ಶಾಕೇ ಪರಮೇ ವ್ಯೋಮನ್ ।**
> **ದಿವೋ ಧರ್ಮನ್ ಧರುಣೇ ಸೇದುಷೋ ನೄಞ್ಜಾತೈರಜಾತಾ ಅಭಿ ಯೇ ನನಕ್ಷುಃ ॥**
> (ಋ. ಸಂ. ೫-೧೫-೨)

ಎಂಬಲ್ಲಿಯೂ ಸಹ ಉತ್ತರವೇದಿಗೆ ಈ ಪದವು ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ.

> **ವ್ಯೋಮಸದಿತ್ಯೇಷ ವೈ ವ್ಯೋಮಸದ್ವ್ಯೋಮ ವಾ ಏತತ್ಸದ್ಮಾನಾಂ ಯಸ್ಮಿನ್ನೇಷ ಆಸನ್ನಸ್ತಪತಿ ॥** (ಐ. ಬ್ರಾ. ४-२०)

ಎಂಬ ಐತರೇಯಬ್ರಾಹ್ಮಣದ ವಾಕ್ಯದಲ್ಲೂ ರಕ್ಷಣಾಸ್ಥಾನ ಅಥವಾ ಆಧಾರಸ್ಥಾನ ಎಂಬರ್ಥದಲ್ಲಿ ಈ ಪದದ ಪ್ರಯೋಗವಿರುವುದು.

ಪ್ರಜಾಪತಿಯು ವಾಕ್ಕಿಗೆ ಆಧಾರ ಅಥವಾ ರಕ್ಷಕಸ್ಥಾನವಾಗಿರುವುದು ಹೇಗೆಂದರೆ ಅವನೇ ಅದರ ಉತ್ಪತ್ತಿಗೂ ಕಾರಣನು ಮತ್ತು ಅದರ ಪರ್ಯವಸಾನವು ಎಂದು ಸಾಯಣರು ಅಧ್ಯಾತ್ಮಪರವಾದ ಅರ್ಥವನ್ನು ಹೇಳಿದ್ದಾರೆ. ಪರಬ್ರಹ್ಮನಿಗೂ ವಾಕ್ಕಿಗೂ ತಾದಾತ್ಮ್ಯವನ್ನೇ ಹೇಳಿ ಲೋಕದ ಸಕಲ ವ್ಯವಹಾರಗಳೂ ವಾಕ್ಕಿನ ಆಧಾರದಮೇಲೆಯೇ ನಡೆಯುತ್ತವೆ ಮತ್ತು ಈ ವಾಕ್ಕಿಗೆ ಪರಬ್ರಹ್ಮನೇ ಆಧಾರನು, ಅವನ ತತ್ತ್ವವನ್ನೇ ಇದು ಬಾಹ್ಯವಾಗಿ ಪ್ರಕಾಶಗೊಳಿಸುತ್ತದೆ ಎಂಬ ವಿಷಯವನ್ನು ಬೃಹದಾರಕೋಪನಿಷತ್ತಿನಲ್ಲಿ ಈರೀತಿ ತಿಳಿಸಿದೆ.

ಜನಕೋ ಹ ವೈದೇಹ ಆಸಾಂಚಕ್ರೇಥ ಹ ಯಾಜ್ಞವಲ್ಕ್ಯ ಆವವ್ರಾಜ ತಂ ಹೋವಾಚ ಯಾಜ್ಞವಲ್ಕ್ಯ ಕಿಮರ್ಥಮಚಾರೀಃ ಪಶೂನಿಚ್ಛನ್ನಣ್ವಂತಾನೀತಿ । ಉಭಯಮೇವ ಸಮ್ರಾಡಿತಿ ಹೋವಾಚ । (ಬೃ. ಉ. ೪-೧)

ಜನಕವೈದೇಹನು ತನ್ನ ಆಸ್ಥಾನದಲ್ಲಿ ಕುಳಿತಿರುವಾಗ ಅವನಲ್ಲಿಗೆ ಯಾಜ್ಞವಲ್ಕ್ಯನೆಂಬ ಋಷಿಯು ಬಂದನು. ಆಗ ಜನಕನು ಅವನನ್ನು ಕುರಿತು "ನೀನು ಬಂದ ಉದ್ದಿಶ್ಯವೇನು? ಪಶುವನ್ನು ಪಡೆಯಲು ಬಂದೆಯಾ? ಅಥವಾ ತಾತ್ತ್ವಿಕವಾದ ಚರ್ಚೆಯನ್ನು ನಡೆಸಲು ಬಂದೆಯಾ?" ಎಂದು ಕೇಳಲು "ಎಲೈ ಪ್ರಭುವೇ, ಎರಡನ್ನೂ ಉದ್ದೇಶಿಸಿ ಬಂದಿರುವೆನು" ಎಂದು ಹೇಳಿದನು.

ಯತ್ತೇ ಕಶ್ಚಿದಬ್ರವೀತ್ತಚ್ಛೃಣವಾಮೇತ್ಯಬ್ರವೀನ್ಮೇ ಜಿತ್ವಾ ಶೈಲಿನಿರ್ವಾಗ್ವೈ ಬ್ರಹ್ಮೇತಿ ಯಥಾ ಮಾತೃಮಾನ್ ಪಿತೃಮಾನಾಚಾರ್ಯವಾನ್ ಬ್ರೂಯಾತ್ತಥಾ ತಚ್ಛೈಲಿನಿರಬ್ರವೀದ್ವಾಗ್ವೈ ಬ್ರಹ್ಮೇತ್ಯವದತೋ ಹಿ ಕಿಂ ಸ್ಯಾದಿತ್ಯಬ್ರವೀತ್ತು ತೇ ತಸ್ಯಾಯತನಂ ಪ್ರತಿಷ್ಠಾಂ ನ ಮೇಽಬ್ರವೀದಿತ್ಯೇಕಪಾದ್ವಾ ಏತತ್ಸಮ್ರಾಡಿತಿ ಸ ವೈ ನೋ ಬ್ರೂಹಿ ಯಾಜ್ಞವಲ್ಕ್ಯ ।
(ಬೃ. ಉ. ೪-೧)

ಈ ತತ್ವದ ವಿಷಯದಲ್ಲಿ ನಿನಗೆ ತಿಳಿದುದನ್ನು ಅಥವಾ ನೀನು ಇತರರಿಂದ ತಿಳಿದುದನ್ನು ವಿವರಿಸು ಎಂದು ಜನಕನನ್ನು ಯಾಜ್ಞವಲ್ಕ್ಯನು ಪ್ರಶ್ನಿಸಿದನು. ಆದಕ್ಕೆ ಉತ್ತರವಾಗಿ ಜನಕನು "ವಾಕ್ಕೇ ಬ್ರಹ್ಮವೆಂದು ಶೈಲಿನಿಯು ಹೇಳಿದನು" ಎಂದು ತಿಳಿಸಿದನು. ಯಾಜ್ಞವಲ್ಕ್ಯನು ಅದನ್ನು ಒಪ್ಪಿ ಆದರಲ್ಲಿ ಸತ್ಯದ ಒಂದಂಶವನ್ನು ಮಾತ್ರ ಹೇಳಿದಂತಾಯಿತು. ಆದರೆ ಆ ವಾಗ್ರೂಪವಾದ ಬ್ರಹ್ಮಸಿಗೆ ಆಯತನವಾವುದು ಮತ್ತು ಪ್ರತಿಷ್ಠೆಯಾವುದು (ಆಧಾರಸ್ಥಾನ) ಎಂಬುದನು ಹೇಳಿದನೇ ಎಂದು ಕೇಳಲು, ಜನಕನು ಅವನು ಅದನ್ನು ಹೇಳಲಿಲ್ಲವೆಂದನು. ಆಗ ಯಾಜ್ಞವಲ್ಕ್ಯನು ಈ ಬ್ರಹ್ಮನಿಗೆ ಏಕಪಾದಮಾತ್ರವಿರುತ್ತದೆ ಎಂದನು. ಆಗ ಜನಕನು ಅದು ಹೇಗೆಂದು ವಿವರಿಸಬೇಕೆಂದು ಕೇಳಿದಾಗ ಯಾಜ್ಞವಲ್ಕ್ಯನು ಈರೀತಿ ವಿವರಿಸಿದ್ದಾನೆ.

ವಾಗೇವಾಯತನಮಾಕಾಶಃ ಪ್ರತಿಷ್ಠಾ ಪ್ರಜ್ಞೇತ್ಯೇತದುಪಾಸೀತ ।

ವಾಗ್ರೂಪಿಯಾದ ಈ ಬ್ರಹ್ಮನಿಗೆ ಜಿಹ್ವೆಯೇ ಆಯತನವು, ಆಕಾಶವೇ ಪ್ರತಿಷ್ಠಾಸ್ಥಾನವು. ಇದನ್ನೇ ಪ್ರಜ್ಞೆಯೆಂದು ತಿಳಿದು ಉಪಾಸನೆಯನ್ನು ಮಾಡಬೇಕು ಎಂದಾಗ,

ಕಾ ಪ್ರಜ್ಞತಾ ಯಾಜ್ಞವಲ್ಕ್ಯ? ಆ ಪ್ರಜ್ಞೆಯ ಸ್ವರೂಪವೇನೆಂದನು. ಆಗ ಯಾಜ್ಞವಲ್ಕ್ಯನು,

ವಾಗೇವ ಸಮ್ರಾಡಿತಿ ಹೋವಾಚ । ವಾಚಾ ವೈ ಸಮ್ರಾಡ್‌ಬಂಧುಃ ಪ್ರಜ್ಞಾಯತ ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಂಗಿರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾನಿ ವ್ಯಾಖ್ಯಾನಾನೀಷ್ಟಂ ಹುತಮಾಶಿತಂ ಪಾಯಿತಮಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ವಾಚೈವ ಸಮ್ರಾಟ್ ಪ್ರಜ್ಞಾಯಂತೇ ವಾಗ್ವೈ ಸಮ್ರಾಟ್ ಪರಮಂ ಬ್ರಹ್ಮ ನೈನಂ ವಾಗ್ಜಹಾತಿ ಸರ್ವಾಣ್ಯೇನಂ ಭೂತಾನ್ಯಭಿರಕ್ಷಂತಿ ದೇವೋ ಭೂತ್ವಾ ದೇವಾನಪ್ಯೇತಿ ಯ ಏವಂ ವಿದ್ವಾನೇತದುಪಾಸ್ತೇ ॥
(ಬೃ. ಉ. ೪-೧)

ವಾಕ್ಕೇ ಈ ಜ್ಞಾನವು. ಬಂಧುವೂ, ಋಗ್ವೇದವೂ, ಯಜುರ್ವೇದವೂ, ಸಾಮವೇದವೂ, ಅಥರ್ವವೇದವೂ, ಇತಿಹಾಸಪುರಾಣಾದಿಗಳೂ, ಅವುಗಳ ವ್ಯಾಖ್ಯಾನಾನುವ್ಯಾಖ್ಯಾನಗಳೂ, ಯಜ್ಞಾಹುತಿಗಳೂ, ಈ ಲೋಕತತ್ತ್ವವೂ ಅದರಂತೆಯೇ ಪರಲೋಕತತ್ತ್ವವೂ ಸಮಸ್ತವೂ ಸಹ ಈ ವಾಕ್ಕಿನ ಸಹಾಯದಿಂದಲೇ ತಿಳಿಯಲ್ಪಡುತ್ತವೆ. ವಾಕ್ಕಿನಿಂದಲೇ ಬ್ರಹ್ಮವೂ ತಿಳಿಯಲ್ಪಡುತ್ತದೆ. ವಾಕ್ಕೇ ಪರಬ್ರಹ್ಮವು. ಈ ತಾತ್ತ್ವಿಕಜ್ಞಾನದಿಂದ ಯಾರು ವಾಗ್ರೂಪಿಯಾದ ಬ್ರಹ್ಮವನ್ನು ಆರಾಧಿಸುತ್ತಾರೋ ಅವರನ್ನು ವಾಕ್ಕು ತ್ಯಜಿಸುವುದಿಲ್ಲ. ಅವನೂ ಸಹ ದೇವತ್ವವನ್ನು ಪಡೆಯುತ್ತಾನೆ. ಇತ್ಯಾದಿಯಾಗಿ **ಬ್ರಹ್ಮಾಯಂ ವಾಚಃ ಪರಮಂ ವ್ಯೋಮ** ಎಂಬ ವಾಕ್ಯದಲ್ಲಿ ಹೇಳಿರುವ ಅಂಶವನ್ನು ವಿವರಿಸಿದ್ದಾನೆ. ವಾಕ್ಕಿಗೂ ಪರಬ್ರಹ್ಮಕ್ಕೂ ತಾದಾತ್ಮ್ಯವನ್ನೇ ಹೇಳಿದ್ದಾನೆ. ಇದನ್ನೇ ಶತಪಥಬ್ರಾಹ್ಮಣದಲ್ಲಿಯೂ ಸಹ,

**ವಾಚಸ್ಪತಿರ್ವಾಚಂ ನಃ ಸ್ವದತು ಸ್ವಾಹೇತಿ ಪ್ರಜಾಪತಿರ್ವೈ ವಾಚಸ್ಪತಿಃ ।** (ಶ. ಬ್ರಾ. ೫-೧-೧-೧೬)

ಇತ್ಯಾದಿವಾಕ್ಯಗಳಿಂದ ತಿಳಿಸಿದೆ ಮತ್ತು ಸೃಷ್ಟಿಯ ಕ್ರಮವನ್ನು ವಿವರಿಸುವಾಗ ಪ್ರರಬ್ರಹ್ಮವು ವಾಗ್ರೂಪದಲ್ಲಿ ತನ್ನನ್ನು ಪ್ರಕಾಶಪಡಿಸಿದನು ಎಂಬ ವಿವರಣೆಯಲ್ಲಿಯೂ ಸಹ ಬ್ರಹ್ಮಕ್ಕೂ ವಾಕ್ಕಿಗೂ ಇರುವ ಆಧಾರಾಧೇಯಭಾವವನ್ನು ತಿಳಿಯಬಹುದು. ಅದು ಹೇಗೆಂದರೆ:—

**ಪ್ರಜಾಪತಿಃ ಪ್ರಜಾ ಅಸೃಜತ । ತಾಃ ಸೃಷ್ಟಾಃ ಸಮಶ್ಲಿಷ್ಯನ್ । ತಾ ರೂಪೇಣಾನು-ಪ್ರಾವಿಶತ್ । ತಸ್ಮಾದಾಹುಃ । ರೂಪಂ ವೈ ಪ್ರಜಾಪತಿರಿತಿ । ತಾ ನಾಮ್ನಾನುಪ್ರಾವಿಶತ್ । ತಸ್ಮಾದಾಹುಃ । ನಾಮ ವೈ ಪ್ರಜಾಪತಿರಿತಿ ।** (ತೈ. ಬ್ರಾ. ೨-೨-೭-೧)

ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಿದನಂತರ ಅವೆಲ್ಲವೂ ಪರಸ್ಪರವಾದ ವ್ಯಕ್ತಿತ್ವವನ್ನು ತೋರಿಸದೆ ಸಂಶ್ಲಿಷ್ಟವಾದವು. ಆಗ ಅವುಗಳ ವಿಶೇಷಧರ್ಮಗಳನ್ನು ತೋರಿಸುವುದಕ್ಕಾಗಿ ನಾಮ ಮತ್ತು ರೂಪ ಇವೆರಡನ್ನೂ ಸೃಷ್ಟಿಸಿದನು ರೂಪವು ಮಾನಸಿಕವಾದ ವಿಭಜನೆಗೂ, ನಾಮವು ವಾಗ್ರೂಪವಾದ ವಿಭಜನೆಗೂ ಸಹಾಯವಾಯಿತೆಂದು ತಿಳಿಸುತ್ತಾ ಶತಪಥಬ್ರಾಹ್ಮಣದಲ್ಲಿ ಈರೀತಿ ತಿಳಿಸಿದೆ.

**ಮರ್ತ್ಯಾ ಹ ವಾ ದೇವಾ ಆಸುಃ । ಸ ಯದೈವ ತೇ ಬ್ರಹ್ಮಣಾಪುರಥಾಮೃತಾ ಆಸುಃ ಸ ಯಂ ಮನಸ ಆಘಾರಯತಿ ಮನೋ ವೈ ರೂಪಂ ಮನಸಾ ಹಿ ವೇದೇದಗ್‌ಂರೂಪಮಿತಿ ತೇನ ರೂಪಮಾಪ್ನೋತ್ಯಥ ಯಂ ವಾಚ ಆಘಾರಯತಿ ವಾಗ್ವೈ ನಾಮ ವಾಚಾ ಹಿ ನಾಮ ಗೃಹ್ಣಾತಿ ತೇನ ನಾಮಾಪ್ನೋತ್ಯೇತಾವದ್ವಾ ಇದಗ್‌ಂ ಸರ್ವಂ ಯಾವದ್ರೂಪಂ ಚೈವ ನಾಮ ಚ ತತ್ಸರ್ವಮಾಪ್ನೋತಿ ॥** (ಶ. ಬ್ರಾ. ೧೧-೨-೩-೬)

ಪ್ರಾರಂಭದಲ್ಲಿ ದೇವತೆಗಳು ಮರ್ತ್ಯರಾಗಿದ್ದರು. ಅವರು ಬ್ರಹ್ಮನನ್ನು ಸಾಕ್ಷಾತ್ಕರಿಸಿದನಂತರವೇ ಅಮೃತತ್ವವನ್ನು ಪಡೆದರು. ಆ ಬ್ರಹ್ಮನಿಗೆ ನಾಮ ಮತ್ತು ರೂಪಗಳೆಂಬ ಎರಡುರೂಪಗಳು. ರೂಪವು ಮನೋಗತವಾದ ತತ್ತ್ವವು. ಆದುದರಿಂದ ಮಾನಸಿಕವಾದ ಆಘಾರದಿಂದ ರೂಪಾತ್ಮಕವಾದ ಬ್ರಹ್ಮತತ್ತ್ವವನ್ನರಿಯುತ್ತಾನೆ. ವಾಗ್ರೂಪವಾದ ಆಘಾರದಿಂದ ವಾಗಾತ್ಮಕವಾದ ಬ್ರಹ್ಮನನ್ನರಿಯುತ್ತಾನೆ. ಮನೋರೂಪವಾದುದೂ ವಾಗ್ರೂಪವಾದುದೂ ಆದ ಈ ಬ್ರಹ್ಮತತ್ತ್ವವನ್ನರಿಯುವುದರಿಂದ ಮಾನವನೂ ಸಹ ಬ್ರಹ್ಮತ್ವವನ್ನು ಎಂದರೆ ಅಮೃತತ್ವವನ್ನು ಪಡೆಯುತ್ತಾನೆ ಎಂದು ವಾಕ್ಕಿಗೂ ಬ್ರಹ್ಮನಿಗೂ ಇರುವ ಸಂಬಂಧವನ್ನು ತಿಳಿಸಿದೆ.

**ಸಪ್ತಾರ್ಧಗರ್ಭಾ ಭುವನಸ್ಯ ರೇತೋ ವಿಷ್ಣೋಸ್ತಿಷ್ಠಂತಿ ಪ್ರದಿಶಾ ವಿಧರ್ಮಣಿ । ತೇ ಧೀತಿಭಿರ್ಮನಸಾ ತೇ ವಿಪಶ್ಚಿತಃ ಪರಿಭುವಃ ಪರಿ ಭವಂತಿ ವಿಶ್ವತಃ ॥ ೩೬ ॥**

ಬ್ರಹ್ಮಾಂಡದ ಮಧ್ಯಭಾಗವಾದ ಅಂತರಿಕ್ಷದಲ್ಲಿ ಗರ್ಭರೂಪದಲ್ಲಿ ಉದಕಗಳನ್ನು ವಹಿಸಿರುವುವೂ, ಲೋಕಕ್ಕೆಲ್ಲಾ ಸಾರಭೂತವೂ ಆದ ಸಪ್ತಸಂಖ್ಯಾಕವಾದ ರಶ್ಮಿಗಳು ವ್ಯಾಪಕನಾದ ಆದಿತ್ಯನ ಜಗದ್ಧಾರಣರೂಪವಾದ ವ್ಯಾಪಾರದಲ್ಲಿ ಅವನ ಸಹಾಯಕ್ಕಾಗಿ ತಮ್ಮ ತಮ್ಮ ನಿಯತವಾದ ಸ್ಥಾನಗಳಲ್ಲಿರುತ್ತವೆ. ಆ ರಶ್ಮಿಗಳು ತಮ್ಮ ಪ್ರಜ್ಞೆಗಳಿಂದಲೂ, ತಮ್ಮ ಕರ್ತವ್ಯಜ್ಞಾನದಿಂದಲೂ ಸಹ ಜಗತ್ತನ್ನು ಸುತ್ತಲೂ ವ್ಯಾಪಿಸಿವೆ.

ಇಲ್ಲಿ ಅಧಿದೈವತಪಕ್ಷವಾದ ಸಂದರ್ಭವನ್ನು ಮೊದಲು ತೋರಿಸಿ ಅನಂತರ ಅಧ್ಯಾತ್ಮಪರವಾದ ಅರ್ಥವನ್ನು ಹೇಳಿದೆ. ಅಧಿದೈವತಪಕ್ಷದಲ್ಲಿ ಸಪ್ತಶಬ್ದಕ್ಕೆ ಸಪ್ತರಶ್ಮಿಗಳೆಂದು ಹೇಳಿದೆ. ಈ ರಶ್ಮಿಗಳಿಗೆ **ಅರ್ಧಗರ್ಭಾಃ, ವಿಪಶ್ಚಿತಃ** ಎಂಬ ವಿಶೇಷಣಗಳಿವೆ ಮತ್ತು **ವಿಧರ್ಮಣಿ ಪ್ರದಿಶಾ ತಿಷ್ಠಂತಿ, ಧೀತಿಭಿರ್ಮನಸಾ ಪರಿ ಭವಂತಿ** ಇತ್ಯಾದಿ ವಾಕ್ಯಗಳಿಂದ ಇವುಗಳ ಕರ್ತವ್ಯಜ್ಞಾನವನ್ನೂ ಮತ್ತು ಈ ಕರ್ತವ್ಯಜ್ಞಾನದಿಂದ ವಿಶ್ವವನ್ನೆಲ್ಲಾ ವ್ಯಾಪಿಸಿ ಲೋಕರಕ್ಷಣಕಾರ್ಯದಲ್ಲಿ ಆದಿತ್ಯನಿಗೆ ಸಹಾಯಮಾಡುವುದೂ ವರ್ಣಿತವಾಗಿದೆ.

**ಸಪ್ತ— ಸರ್ಪಣಸ್ವಭಾವಾಃ, ಸಪ್ತ ಸಂಖ್ಯಾ ವಾ ರಶ್ಮಯಃ ।** ಪ್ರಸರಿಸುವ ಸ್ವಭಾವವುಳ್ಳ ರಶ್ಮಿಗಳು ಅಥವಾ ಸಪ್ತಸಂಖ್ಯಾಕಗಳಾದ ರಶ್ಮಿಗಳು ಎಂದು ಎರಡು ವಿಧವಾಗಿ ಅರ್ಥಮಾಡಿದೆ. ಈ ಸಪ್ತವೆಂಬ ಪದಕ್ಕೆ ರಶ್ಮಿಪರವಾಗಿಯೂ, ಋತುಪರವಾಗಿಯೂ, ಸಪ್ತರ್ಷಿಗಳ ಪರವಾಗಿಯೂ, ಸಪ್ತಾಕ್ಷರಪರವಾಗಿಯೂ ಸಹ ಹಿಂದೆ ಇವರ ಪ್ರಯೋಗಗಳನ್ನು ವಿಶದವಾಗಿ ತಿಳಿಸಿದೆ [ಇದೇ ಭಾಗದಲ್ಲಿ 295 ; 302-303 ; 310-311 ; 365-366 ಇತ್ಯಾದಿ ಪುಟಗಳಲ್ಲಿ ಆಯಾ ಸಂದರ್ಭಕ್ಕನುಸಾರವಾಗಿ ವಿವರಿಸಿದೆ]. ಪ್ರಕೃತವಾದ ಋಕ್ಕಿನಲ್ಲಿ ರಶ್ಮಿಪರವಾಗಿಯೇ (ಅಧಿದೈವತಪಕ್ಷದಲ್ಲಿ) ಅರ್ಥಮಾಡಬೇಕು.

ಅರ್ಧಗರ್ಭಾಃ— ಎಂಬ ವಿಶೇಷಣಕ್ಕೆ **ಸಂವತ್ಸರಸ್ಯಾರ್ಧೇ ಗರ್ಭಂ ಗರ್ಭಸ್ಥಾನೀಯಮುದಕಂ ಧಾರಯಮಣಾಃ ।** ಸಂವತ್ಸರದ ಅರ್ಧಭಾಗದಲ್ಲಿ ಎಂದರೆ ವರ್ಷಾಕಾಲದಲ್ಲಿ ಗರ್ಭಸ್ಥಾನೀಯವಾದ ಉದಕಗಳನ್ನು ಧರಿಸಿರುವ ರಶ್ಮಿಗಳೆಂದು ಒಂದು ವಿಧವಾಗಿಯೂ, ಅಥವಾ **ಬ್ರಹ್ಮಾಂಡಸ್ಯಾರ್ಧೇ ಮಧ್ಯೇಽಂತರಿಕ್ಷೇ ಗರ್ಭವದ್ವರ್ತಮಾನಾಃ ।** ಬ್ರಹ್ಮಾಂಡದ ಅರ್ಧಭಾಗವಾದ ಎಂದರೆ ಮಧ್ಯಭಾಗದಲ್ಲಿರುವ ಅಂತರಿಕ್ಷದಲ್ಲಿ ಗರ್ಭರೂಪದಲ್ಲಿರುವ ರಶ್ಮಿಗಳೆಂದು ಇನ್ನೊಂದು ವಿಧವಾಗಿಯೂ ಅರ್ಥಮಾಡಿದೆ. ರಶ್ಮಿಗಳಿಂದ ಜನ್ಯವಾದ ಋತುಗಳು ತಮ್ಮ ನಿಯತವಾದ ಸ್ಥಾನಗಳಲ್ಲಿ ಆವಿರ್ಭವಿಸಿ ತಮ್ಮ ಅಧಿಷ್ಠಾತೃವಾದ ಆದಿತ್ಯನ ಅನುಶಾಸನದಂತೆ ಜಗದ್ವ್ಯವಹಾರಗಳಿಗೆ ಸಹಾಯಕಗಳಾಗುತ್ತವೆಯೆಂದು **ಪ್ರದಿಶಾ ತಿಷ್ಠಂತಿ** ಎಂಬುದರಿಂದ ತಿಳಿಸಿವೆ. ನಿರುಕ್ತಕಾರರು, **“ ಯತ್ರಾ ಸುಪರ್ಣಾ ಅಮೃತಸ್ಯ ಭಾಗಮನಿಮೇಷಂ ವಿದಥಾಭಿಸ್ವರಂತಿ ”** (ಋ. ಸಂ. ೧-೧೬೪-೨೧) ಎಂಬ ಋಕ್ಕಿಗೆ ವಿವರಣೆಯನ್ನು ಹೇಳುತ್ತಾ ಅತ್ಯಂತ ಆಕರ್ಷಕವಾದ ಪತನ ಅಥವಾ ಪ್ರಸರವುಳ್ಳ ಆದಿತ್ಯರಶ್ಮಿಗಳು ತಮ್ಮ ಪೂರ್ಣವಾದ ಜ್ಞಾನದಿಂದ ಉದಕದ ಕಡೆ ಪ್ರಸರಿಸಿ ಆದಿತ್ಯನಲ್ಲಿ ಪುನಃ ಸೇರಿ ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತವೆಯೆಂದು ರಶ್ಮಿಗಳ ಕರ್ತವ್ಯಜ್ಞಾನವನ್ನೂ ಮತ್ತು ಕರ್ತವ್ಯನಿಷ್ಠೆಯನ್ನೂ ತಿಳಿಸಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ **ವಿಪಶ್ಚಿತಃ** ಎಂಬ ವಿಶೇಷಣಕ್ಕೂ, **ಮನಸಾ ಪರಿಭವಂತಿ** ಇತ್ಯಾದಿ ವರ್ಣನೆಗಳಿಗೂ ಅರ್ಥಮಾಡಬೇಕು.

ಈ ರಶ್ಮಿಗಳನ್ನು ಭುವನದ ರೇತಸ್ಸುಗಳೆಂಬ ಪದದಿಂದ ವರ್ಣಿಸಿದೆ. ರೇತಃ ಎಂಬುವಕ್ಕೆ ಹಿಂದಿನ ಋಕ್ಕಿನಲ್ಲಿ ವಿವರಿಸಿದಂತೆ ಜಗದುತ್ಪಾದಕವಾದ ವೀರ್ಯವೆಂದಾದರೂ ಅರ್ಥವಾಗಬಹುದು ಅಥವಾ ಭೂತಗಳ ಉತ್ಪತ್ತಿಗೂ, ರಕ್ಷಣೆಗೂ ಹೇತುವಾದ ಉದಕವೆಂದಾದರೂ ಆಗಬಹುದು.

ನಿರುಕ್ತಕಾರರು ಈ ಪದವನ್ನು ಅರ್ಣಃ, ಕ್ಷೋದಃ, ಇತ್ಯಾದ್ಯುದಕ ನಾಮಗಳಲ್ಲಿ ಸೇರಿಸಿದ್ದಾರೆ. (ನಿ. ೨-೨೭). ಮತ್ತು,

**ದಿವೋ ನ ಯಸ್ಯ ರೇತಸೋ ದುಘಾನಾಃ ಪಂಥಾಸೋ ಯಂತಿ ಶವಸಾಪರೀತಾಃ ।**
**ತರದ್ದ್ವೇಷಾಃ ಸಾಸಹಿಃ ಪೌಂಸ್ಯೇಭಿರ್ಮರುತ್ವಾನ್ನೋ ಭವತ್ವಿಂದ್ರ ಊತೀ ॥**
(ಋ. ಸಂ. ೧-೧೦೦-೩)

ಇತ್ಯಾದಿ ಋಕ್ಕುಗಳಲ್ಲಿ ವೃಷ್ಟ್ಯುದಕವೆಂಬರ್ಥದಲ್ಲಿ ಈ ಪದದ ಪ್ರಯೋಗವಿದೆ. [ಸಂತಾನಜನಕವಾದ ವೀರ್ಯವೆಂಬರ್ಥದಲ್ಲಿ ಈ ಪದದ ಪ್ರಯೋಗವನ್ನೂ, ರೇತಸ್ಸಿಗಿರತಕ್ಕ ಅತಿಶಯವಾದ ಶಕ್ತಿಯ ವಿವರಣೆಯನ್ನೂ ತೈತ್ತಿರೀಯಸಂಹಿತೆಯಲ್ಲಿ (೫-೬-೮) ವಿಶದವಾಗಿ ತಿಳಿಸಿದೆ.] ಪ್ರಕೃತವಾದ ಋಕ್ಕಿನಲ್ಲಿ ರೇತಃ ಸಾರಂ ವೃಷ್ಟಿಪ್ರದಾನೇನ **ರೇತೋಭೂತಾಃ ತಾದೃಶಾ ರಶ್ಮಯಃ** ವೃಷ್ಟಿಪ್ರದಾನದಿಂದ ವೃಷ್ಟ್ಯುದಕರೂಪವಾದ ರಶ್ಮಿಗಳೆಂದರ್ಥವೆಂದು ಸಾಯಣರು ವ್ಯಾಖ್ಯಾನಮಾಡಿದ್ದಾರೆ. ರಶ್ಮಿಗಳಿಗೂ ಉದಕಗಳಿಗೂ ತಾದಾತ್ಮ್ಯವನ್ನು ಅನೇಕ ಕಡೆಗಳಲ್ಲಿ ಹೇಳಿದೆ. ಉದಾಹರಣೆಗೆ ಇದೇ ಸೂಕ್ತದ ೧೨ನೇ ಋಕ್ಕನ್ನು ವಿವರಿಸುವಾಗ ಅಪರ ವಿಶೇಷವಿಷಯಗಳಲ್ಲಿ ಶತಪಥಬ್ರಾಹ್ಮಣದ (೧೦-೫-೪-೧೪) ವಾಕ್ಯವನ್ನುದಹರಿಸಿ ಆ ವಾಕ್ಯಕ್ಕೆ ಸಾಯಣಭಾಷ್ಯದಲ್ಲಿ **ಅರ್ಚಿಷೋ ಹ್ಯಾಪಸ್ಸೂರ್ಯಕಿರಣಾನಾಮೇವ ವೃಷ್ಟಿಕರ್ತೃಕತ್ವಾತ್ ಕಾರ್ಯಕಾರಣಯೋರಭೇದೇನ ಅರ್ಚಿರ್ವಾ ಆಪ ಇತ್ಯುಕ್ತಂ ।** ಸೂರ್ಯರಶ್ಮಿಗಳು ಉದಕಪ್ರವಾಹಗಳಿಗೆ ಹೇತುಗಳಾಮುದರಿಂದ ರಶ್ಮಿಗಳನ್ನೇ ಪ್ರವಾಹಗಳೆಂದು ರೂಪಕಮಾಡಿ ಹೇಳಿದೆಯೆಂಬ ವಿವರಣೆಯನ್ನು ತಿಳಿಸಿದೆ. (ಪುಟ 369).

**ವಿಷ್ಣೋಃ—ವ್ಯಾಪಕಸ್ಯ ಆದಿತ್ಯಸ್ಯ ।** ವ್ಯಾಪಕವಾದ ಆದಿತ್ಯನೆಂದರ್ಥ. ನಿರುಕ್ತಕಾರರು ಈ ಪದದ ನಿರ್ವಚನವನ್ನು ತೋರಿಸುತ್ತಾ,

**ಅಥ ಯದ್ವಿಷಿತೋ ಭವತಿ ತದ್ವಿಷ್ಣುರ್ಭವತಿ ವಿಷ್ಣುರ್ವಿಶತೇರ್ವಾ ವ್ಯಶ್ನೋತೇರ್ವಾ ।**
(ನಿ. ೧೨-೧೮)

ವ್ಯಾಪಿಸು ಅಥವಾ ಎಲ್ಲದರಲ್ಲಿಯೂ ಸೇರಿಕೊಂಡು ಐಕ್ಯವಾಗುವಂತೆ ಪ್ರವೇಶಿಸು ಎಂಬರ್ಥವನ್ನು ಕೊಡುವ **ವಿಶ್** ಧಾತುವಿನಿಂದಾಗಲೀ ಅಥವಾ **ವ್ಯಶ್** (ವಿ+ಅಶೂ) ಧಾತುವಿನಿಂದಾಗಲಿ ನಿಷ್ಪನ್ನವಾಗಿದೆಯೆಂದು ತಿಳಿಸಿದ್ದಾರೆ ಮತ್ತು,

**ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿ ದಧೇ ಪದಂ ।**
**ಸಮೂಢಮಸ್ಯ ಪಾಂಸುರೇ ॥**　　(ಋ. ಸಂ. ೧-೨೨-೧೭)

ಎಂಬ ಋಕ್ಕನ್ನುದಹರಿಸಿ ಅಲ್ಲಿ ವರ್ಣಿತವಾಗಿರುವ ವಿಷ್ಣುವಿನ ವ್ಯಾಪಕತ್ವವನ್ನು ಸೂಚಿಸಿದ್ದಾರೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಇದೇ ಪದವು ಆದಿತ್ಯನಿಗೆ ವಿಶೇಷಣವಾಗಿದ್ದು ಆದಿತ್ಯನ ವ್ಯಾಪಕತ್ವವನ್ನು ವರ್ಣಿಸುತ್ತದೆ. ವಿಷ್ಣುಸೂಕ್ತದಲ್ಲೂ ಸಹ ಕಲವೆಡೆಗಳಲ್ಲಿ ವಿಷ್ಣುವಿನ ಪಾದಪ್ರಕ್ಷೇಪವನ್ನು ವರ್ಣಿಸುವಾಗ ಆದಿತ್ಯನ ಪರವಾದ ಅರ್ಥವನ್ನೇ ಹೇಳಿದ್ದಾರೆ. ಉದಾಹರಣೆಗೆ ಮೇಲೆ (ನಿರುಕ್ತಕಾರರಿಂದ) ಉದಾಹೃತವಾದ ೧-೨೨-೧೭ ನೇ ಋಕ್ಕಿನಲ್ಲಿ ತ್ರೇಧಾ ನಿದಧೇ ಪದಂ ಎನ್ನುವಾಗ ಈ ಮೂರು ವಿಧವಾದ

ಪಾದಪ್ರಕ್ಷೇಪಗಳು ಯಾವುವು, ಎಲ್ಲೆಲ್ಲಿ ಎಂಬ ವಿಷಯದಲ್ಲಿ ವಿಪ್ರತಿಪತ್ತಿಯಿದ್ದು ಪಾಶ್ಚಾತ್ಯಪಂಡಿತರು ಇದಕ್ಕೆ ಸೂರ್ಯನ ಉದಯ, ಸೂರ್ಯನು ಉಚ್ಚಸ್ಥನಾಗಿರುವುದು ಮತ್ತು ಅಸ್ತ ಈ ಮೂರು ಅವಸ್ಥೆಗಳೆಂದು ತಿಳಿಸಿದ್ದಾರೆ. Max Muller ಪಂಡಿತನು ಈ ವಿಚಾರದಲ್ಲಿ ತನ್ನ ಅಭಿಪ್ರಾಯವನ್ನು ತಿಳಿಸುತ್ತಾ,

This stepping of Vishnu is emblamatic of the rising, the culminating and setting of the Sun.

(Sacred Books of the East· Vol· XXXII—P 133)

ಎಂದು ಹೇಳಿದ್ದಾನೆ. ಔರ್ಣವಾಭಾದಿ ಪ್ರಾಚೀನಪಂಡಿತರೂ ಸಹ ಈ ಅರ್ಥವನ್ನು ಸಮರ್ಥಿಸಿದ್ದಾರೆಂದು ನಿರುಕ್ತ ವಾಕ್ಯದಿಂದ ತಿಳಿಯುತ್ತದೆ.

**ಸಮಾರೋಹಣೇ ವಿಷ್ಣುಪದೇ ಗಯಶಿರಸೀತ್ಯೌರ್ಣವಾಭಃ ।**

(ನಿ. ೧೨-೧೧)

ಎಂದು **ಔರ್ಣವಾಭರ** ಮತವನ್ನು ತಿಳಿಸಿದ್ದಾರೆ. ಈ ವಾಕ್ಯಕ್ಕೆ ದುರ್ಗಾಚಾರ್ಯರು **ಸಮಾರೋಹಣೇ— ಉದಯಗಿರಾವುದ್ಯನ್ ಪದಮೇಕಂ ನಿಧತ್ತೇ । ವಿಷ್ಣುಪದೇ ಮಾಧ್ಯಂದಿನೇಽಂತರಿಕ್ಷೇ । ಗಯಶಿರಸಿ ಅಸ್ತಂಗಿರೌ ।** ಉದಯಾಚಲದಲ್ಲಿ ಸೂರ್ಯೋದಯಕಾಲದಲ್ಲಿ ಉದಯರೂಪದಲ್ಲಿರತಕ್ಕ ಒಂದು ಪಾದವೂ, ಮಧ್ಯಾಹ್ನಕಾಲದಲ್ಲಿ ಅಂತರಿಕ್ಷದಲ್ಲಿ ಉಚ್ಚಸ್ಥವಾಗಿರತಕ್ಕ ಇನ್ನೊಂದು ಪಾದವೂ, ಅಸ್ತಕಾಲದಲ್ಲಿ ಅಸ್ತಾಚಲದಲ್ಲಿಡತಕ್ಕ ಮೂರನೆಯ ಪಾದವೂ, ಸಹ **ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಂ** ಎಂಬ ವಾಕ್ಯದಿಂದ ಸೂಚಿತವಾಗುತ್ತದೆಂದು ವಿವರಿಸಿದ್ದಾರೆ. ಇದರಂತೆಯೇ,

**ವಿಷ್ಣುಸ್ತ್ರಿಧಾ ನಿಧತ್ತೇ ಪದಂ ತ್ರೇಧಾ ಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ ।**

(ನಿ. ೧೨-೧೯)

ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕ ಎಂಬ ಮೂರು ಲೋಕಗಳಲ್ಲೂ ಸಂಚರಿಸುವ ಸೂರ್ಯನ ಮೂರು ಅವಸ್ಥೆಗಳೆಂದು ಶಾಕಪೂರ್ಣಿಗಳ ಮತವೆಂದೂ ಸೂಚಿಸಿದ್ದಾರೆ. ಆದುದರಿಂದ ಈ ಋಕ್ಕಿನಲ್ಲಿ ಮಾತ್ರವಲ್ಲದೆ ಉಳಿದ ಅನೇಕ ಇತರ ಸ್ಥಳಗಳಲ್ಲೂ ಸಹ ಸೂರ್ಯನಿಗೆ ವಿಷ್ಣುವೆಂಬ ವಿಶೇಷಣವು ಪರ್ಯಾಯನಾಮವಾಗಿದೆಯೆಂದು ಇದರಿಂದ ತಿಳಿಯುತ್ತದೆ. ಇದು ಅಧಿದೈವತಪಕ್ಷದ ಅರ್ಥವೆಂದು ಸೂಚಿಸಿ ಅಧ್ಯಾತ್ಮಪಕ್ಷದ ಅರ್ಥವನ್ನೂ ಸಹ ಸಾಯಣರು ಹೇಳಿದ್ದಾರೆ.

ಅಧ್ಯಾತ್ಮಪಕ್ಷದ ಅರ್ಥವನ್ನು ಹೇಳುವಾಗ ಸಾಯಣರು ಸಾಂಖ್ಯಮತದ ಪ್ರಕ್ರಿಯೆಗಳನ್ನುಪಯೋಗಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿರುವ ಪದಗಳಿಗೆ ಸಾಂಖ್ಯಮತನುಸಾರವಾದ ಅರ್ಥವನ್ನು ಹೇಳುವಾಗ ಅವರ ಪ್ರಯತ್ನದಲ್ಲಿ ಕೊಂಚ ಪ್ರಯಾಸವೂ ಕಾಣುತ್ತದೆ. ಷಡ್ದರ್ಶನಗಳಲ್ಲಿ ಒಂದಾದ ಸಾಂಖ್ಯದರ್ಶನದ ಪಾರಿಭಾಷಿಕವಾದ ವಿವರಣೆಗಳಿಗೂ ಪ್ರಕೃತವಾದ ಋಕ್ಕಿನಲ್ಲಿರುವ ವರ್ಣನೆಗೂ ವ್ಯತ್ಯಾಸವಿದೆ. ಅವೆರಡನ್ನೂ ಹೊಂದಿಸಿಕೊಂಡು ಅರ್ಥವನ್ನು ಹೇಳುವುದು ಒಂದು ವಿಧವಾದ ಪ್ರಯಾಸ. ಅದಲ್ಲದೆ ವೇದಾಂತ ಮತದ ಪ್ರಕ್ರಿಯೆಗೂ ಸಾಂಖ್ಯಮತದ ಪ್ರಕ್ರಿಯೆಗೂ ಹೊಂದಿಕೊಳ್ಳುವುದಿಲ್ಲ. ವೇದಾಂತ ಮತಕ್ಕೆ * ಅದ್ವೈತವೇ ತಳಹದಿಯಾಗಿರುತ್ತದೆ. ಸಾಂಖ್ಯಮತಕ್ಕೆ ದೊದಲನೆಯದಾ ಪ್ರಕೃತಿಪುರುಷರ ಸಹಜವಾದ ಬೇದ

* ಇಲ್ಲಿ ಸಾಯಣಭಾಷ್ಯವನ್ನು ವಿವರಿಸುತ್ತಿರುವುದರಿಂದ 'ಅದ್ವೈತ' ವೆಂಬ ಅವರ ಸಾಂಪ್ರದಾಯಿಕವಾದ ಪದವನ್ನು ಪಯೋಗಿಸಿದೆ.

ವೊಂದುಕಡೆಯಾದರೆ, ಪುರುಷಸಂಖ್ಯೆಯ ಅನಂತರತ್ವವಿನ್ನೊಂದು ಕಡೆ, ಈರೀತಿ ಇವೆರಡು ಮತಗಳಿಗೂ ಸಾಮಂಜಸ್ಯವನ್ನು ಕಲ್ಪಿಸುವುದು ಇನ್ನೊಂದು ವಿಧವಾದ ಪ್ರಯಾಸ, ಈ ಪ್ರಯತ್ನದ ಶ್ರಮವು ಸಾಯಣರ ವಿವರಣೆಯಲ್ಲಿ ಕಂಡುಬರುತ್ತದೆ. ಆದರೆ ಅವರ ವಿವರಣೆಯಲ್ಲಿ ಅಶಾಸ್ತ್ರೀಯವಾದ ಪ್ರತಿಪಾದನೆಯಿದೆಯೆಂದು ತಿಳಿಯಬಾರದು. ಸಾಂಖ್ಯಮತಕ್ಕೆ ಆಧಾರವಾಗಿರುವ ಉಪನಿಷದ್ವಾಕ್ಯಗಳಲ್ಲಿ ಪ್ರತಿಪಾದಿತವಾಗಿರುವ ಅಂಶಗಳಿಗೂ ಸಾಯಣರ ವಿವರಣೆಯಲ್ಲಿರುವ ಅಂಶಗಳಿಗೂ ಸಾಮ್ಯವಿದೆ ಯೆಂದು ಹೇಳಬಹುದು.

ಪ್ರಕೃತವಾದ ಋಕ್ಕಿನಲ್ಲಿ ಸಾಯಣರು **ಸಪ್ತಾರ್ಧಗರ್ಭಾಃ** ಎಂಬ ಪದಕ್ಕೆ ಅರ್ಥವನ್ನು ಹೇಳುತ್ತಾ, **ಸಪ್ತಮಹ-ದಹಂಕಾರಾ ಪಂಚ ತನ್ಮಾತ್ರಾಣಿ ಮಿಳಿತ್ವಾ ಸಪ್ತಸಂಖ್ಯಾನಿ ತತ್ತ್ವಾನಿ । ಮಹತ್, ಅಹಂಕಾರ,** ಐದು **ತನ್ಮಾತ್ರಗಳು** ಇವೆಲ್ಲವೂ ಸೇರಿ ಸಪ್ತಸಂಖ್ಯಾಕವಾದ ತತ್ತ್ವಗಳಾದವು, ಎಂದು ವಿವರಿಸಿದ್ದಾರೆ. ಈ ಸಪ್ತತತ್ತ್ವಗಳೂ ಅರ್ಧ ಗರ್ಭಗಳೆಂದೂ, ವರ್ಣಿಸಲ್ಪಟ್ಟಿವೆ. ಅದು ಹೇಗೆಂದರೆ, **ವಿಕಾರಾಶ್ರಯಾಯಾಃ ಮೂಲಪ್ರಕೃತೇಃ ಪ್ರಕೃತಿವಿಕೃತೇರು-ದಾಸೀನಸ್ಯಾತ್ಮನಶ್ಚೋತ್ಪನತ್ವಾದರ್ಧಾಂಶೇನ ಪ್ರಪಂಚಾಕಾರೇಣ ಪರಿಣಾಮಾದರ್ಧಗರ್ಭಾಃ ।** ಸಹಜವಾಗಿ ಅವಿಕೃತವಾದ ಪ್ರಕೃತಿಯೂ, ಪ್ರಕೃತಿ ಮತ್ತು ವಿಕೃತಿಗಳಿಂದ ದೂರವಾಗಿ ಉದಾಸೀನನಾಗಿರುವ ಪುರುಷನೂ ಸೇರಿ ಪ್ರಪಂಚ ರೂಪದಿಂದ ಉತ್ಪನ್ನವಾಗುವುದರಿಂದ ಮೂಲಪ್ರಕೃತಿಯಲ್ಲಿ ಅರ್ಧಭಾಗವು ವಿಕಾರವಿಲ್ಲದೆಯೂ ಇನ್ನರ್ಧಭಾಗವು ವಿಕೃತವಾಗಿಯೂ ಪರಿಣಾಮವನ್ನು ಹೊಂದುತ್ತದೆ. ಪುರುಷನಲ್ಲಿಯೂ ಸಹ ನಿತ್ಯಾಂಶವು ವಿಕೃತವಾಗದೇ ಪ್ರಕೃತಿಸಂಸರ್ಗವು ಇರುವ ಕೇವಲ ಒಂದಂಶವು ಮಾತ್ರ ಪ್ರಪಂಚರೂಪದ ಸುಖದುಃಖಾದಿಗಳಿಗೆ ಆಶ್ರಯವಾಗಿರುವುದರಿಂದ ಅಲ್ಲಿಯೂ ಸಹ ಅರ್ಧಗರ್ಭವೆಂಬ ವಿಶೇಷಣವು ಉಚಿತವಾಗಿದೆಯೆಂದು ವಿವರಿಸಿದೆ. ಈ ವಿಧವಾದ ಪಾರಿಭಾಷಿಕವಾದ ಪದಗಳನ್ನು ಅರ್ಥಮಾಡಿಕೊಳ್ಳಬೇಕಾದರೆ ರೂಢವಾಗಿರುವ ಸಾಂಖ್ಯಪ್ರಪ್ರಿಯೆಗಳ ಪರಿಚಯವು ಅವಶ್ಯವಾದುದರಿಂದ ಸೂಕ್ಷ್ಮವಾಗಿ ಸಾಂಖ್ಯಮತದ ತತ್ತ್ವಗಳನ್ನು ಇಲ್ಲಿ ವಿವರಿಸಿ ಅನಂತರ ಪ್ರಕೃತವಾದ ಋಕ್ಕಿನಲ್ಲಿ ಉಳಿದ ಭಾಗಗಳಿಗೆ ಈ ಮತಾನುಸಾರವಾದ ಅರ್ಥವನ್ನು ವಿವರಿಸಲಾಗುತ್ತದೆ.

**ಸಾಂಖ್ಯತತ್ತ್ವಗಳು** :—ಪ್ರಕೃತಿ (1), ಮಹತ್ (1), ಅಹಂಕಾರ (1), ಕಣ್ಣುಮೊದಲಾದ ಜ್ಞಾನೇಂದ್ರಿಯ ಗಳು (5), ವಾಕ್ಕು ಮೊದಲಾದ ಕರ್ಮೇಂದ್ರಿಯಗಳು (5), ಉಭಯಸ್ವರೂಪವಾದ ಮನಸ್ಸು (1), ತನ್ಮಾತ್ರಗಳು (5), ಆಕಾಶಾದಿಭೂತಗಳು (5), ಜೀವಾತ್ಮ (1) ಇವೆಲ್ಲವೂ ಸೇರಿ ಒಟ್ಟು ಇಪ್ಪತ್ತೈದು ತತ್ತ್ವಗಳು. ಇವನ್ನು ಭೂತಪಂಚಕ, ತನ್ಮಾತ್ರಪಂಚಕ, ಜ್ಞಾನೇಂದ್ರಿಯಪಂಚಕ, ಕರ್ಮೇಂದ್ರಿಯಪಂಚಕ, ಅವಶಿಷ್ಟಪಂಚಕವೆಂದು ಐದು ಪಂಚಕಗಳಾಗಿ ವಿಭಜಿಸು ವರು. ಈ ಮೂಲಪ್ರಕೃತಿಯೆಂಬುದು ಮೊದಲನೆಯ ತತ್ತ್ವವು. ತತ್ತ್ವವೆಂದರೆ ಒಂದೊಂದು ಹೊಸ ಸ್ವಭಾವವುಳ್ಳ ವಸ್ತು. ಎಂದರೆ ವೃಕ್ಷಾದಿ ಕಾರ್ಯವಸ್ತುವಿನಲ್ಲಿ ತೋರಿಬರುವ ಸ್ವಭಾವವು ಬೀಜಾದಿಕಾರಣವಸ್ತುವಿನಲ್ಲಿ ಸೂಕ್ಷ್ಮದಿಂದಿರಬೇಕು ಎಂದರ್ಥ. ಪ್ರಕೃತಿಗೂ, ಮಹತ್ತಿಗೂ ತಾತ್ತ್ವಿಕವಾದ ವ್ಯತ್ಯಾಸವೇನೆಂದರೆ, ಪ್ರಕೃತಿಯಲ್ಲಿಲ್ಲದೇ ಇರುವ ಅಧ್ಯವಸಾಯವೆಂಬ ಕ್ರಿಯಾಶಕ್ತಿಯ ಮಹತ್ತಿನಲ್ಲಿ ಅಭಿವ್ಯಕ್ತವಾಗುವುದು. ಹೀಗೆ, ಅಭಿಮಾನ, ಸಂಕಲ್ಪ, ಆಲೋಚನೆ, ಶಬ್ದಾದಿಸ್ವಭಾವಗಳು ಹೊಸಹೊಸದು ಬರುವುವು ಈ ಪ್ರಕೃತಿಗೆ ಪ್ರಧಾನವೆಂದು ಹೆಸರು. ಇದರಲ್ಲಿ ಸತ್ತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳಿರುವುದರಿಂದ ಇದನ್ನು ತ್ರಿಗುಣವೆಂದು ಹೇಳುತ್ತಾರೆ. ಇದನ್ನೇ ಛಾಂದೋಗ್ಯೋಪನಿಷತ್ತಿನಲ್ಲಿ,

**ಯದಗ್ನೇ ರೋಹಿತಂ ರೂಪಂ ತೇಜಸ್ತದ್ರೂಪಂ ಯಚ್ಛುಕ್ಲಂ ತದಪಾಂ ಯತ್ಕೃಷ್ಣಂ ತದನ್ನಸ್ಯಾಪಾಗಾದಗ್ನೇರಗ್ನಿತ್ವಂ ವಾಚಾರಂಭಣಂ ವಿಕಾರೋ ನಾಮಧೇಯಂ ತ್ರೀಣಿ ರೂಪಾಣೀತ್ಯೇವ ಸತ್ಯಂ ॥** (ಛಾ. ಉ. ೬-೪-೧)

ರೋಹಿತ, ಶುಕ್ಲ, ಕೃಷ್ಣರೂಪಗಳೆಂದು ಕರೆದಿದೆ. ಈ ಮೂರು ರೂಪಗಳೂ ಮೂರು ಗುಣಗಳನ್ನು ಪ್ರತಿಬಿಂಬಿಸುತ್ತವೆಂದು ಪಂಡಿತರು ಅಭಿಪ್ರಾಯಪಟ್ಟಿದ್ದಾರೆ.

ಈ ಮೂರುಗುಣಗಳನ್ನುಳ್ಳ ಪ್ರಕೃತಿಯು ಮಹಾಸಮುದ್ರದಂತೆ ಸರ್ವದೇಶ, ಸರ್ವಕಾಲ, ಸರ್ವವಸ್ತುಗಳನ್ನೂ ವ್ಯಾಪಿಸಿಕೊಂಡಿರುವುದರಿಂದ ಇವೇ ಬ್ರಹ್ಮಪದಕ್ಕೆ ಅರ್ಥ. ಬ್ರಹ್ಮವೆಂದರೆ ಸರ್ವಪ್ರಕಾರದಲ್ಲೂ ದೊಡ್ಡದಾಗಿರುವುದೆಂದರ್ಥ. ಈ ಪ್ರಕೃತಿಯಲ್ಲಿ ಅನಂತಕೋಟಿಬ್ರಹ್ಮಾಂಡಗಳು ಸಮುದ್ರದಲ್ಲಿ ಗುಳ್ಳೆಗಳ ಹಾಗೆ ಹುಟ್ಟಿ ನಾಶವಾಗುವುವು. ಈ ಮೂರು ಗುಣಗಳು ಆಯಾ ಸಮಾವಸ್ಥೆಯಲ್ಲಿದ್ದರೆ ಪ್ರಳಯ; ವಿಷಮಾವಸ್ಥೆಯಲ್ಲಿದ್ದರೆ ಸೃಷ್ಟಿಯೆಂದು ವ್ಯವಹರಿಸಲ್ಪಡುವುದು.

ಇಂತಹ ಪ್ರಕೃತಿಯಲ್ಲಿ ಬುದ್ಧಿ ಎಂಬ ಮಹತತ್ತ್ವವು ಹುಟ್ಟುವುದು. ಇಲ್ಲಿ **ಪರಿಣಾಮ** ವನ್ನೇ **ಉತ್ಪತ್ತಿ** ಎಂದು ವ್ಯವಹಾರ. ಆ ಬುದ್ಧಿ ಎಂಬ ಸಮುದ್ರದಲ್ಲಿ ಗುಳ್ಳೆಗಳಂತೆ ಅಹಂಕಾರವೆಂಬ ಮೂರನೆಯ ತತ್ತ್ವವು ಹೊರಬೀಳುವುದು. ಅದು ಸಾತ್ತ್ವಿಕ, ರಾಜಸ ಮತ್ತು ತಾಮಸ ಎಂದು ಮೂರು ವಿಧ. ಸಾತ್ತ್ವಿಕವಾದ ಅಹಂಕಾರದಿಂದ (ಮನಸ್ಸೂ ಸೇರಿ) ಹನ್ನೊಂದು ಇಂದ್ರಿಯಗಳು ಹುಟ್ಟುವುವು. ತಾಮಸಾಹಂಕಾರದಿಂದ ಪಂಚಭೂತಗಳಿಗೆ ಸೂಕ್ಷ್ಮಾವಸ್ಥೆಗಳೆಂಬ ಪಂಚತನ್ಮಾತ್ರಗಳಿಂದ ಆಕಾಶ, ವಾಯು, ತೇಜಸ್ಸು, ಜಲ ಮತ್ತು ಪೃಥ್ವಿ ಎಂಬ ಪಂಚಮಹಾಭೂತಗಳು ಹುಟ್ಟುವುವು. ಬುದ್ಧಿ ಮೊದಲಾಗಿ ತನ್ಮಾತ್ರಗಳ ಪರ್ಯಂತ ಹದಿನೆಂಟು ತತ್ತ್ವಗಳು ಪ್ರತಿಪ್ರಾಣಿಗೂ ಲಿಂಗಶರೀರವಾಗಬೇಕಾಗುವುದು.

ಪುರುಷ (ಆತ್ಮ)ನೆಂಬುದು ಈ ಪ್ರಕೃತಿಗಿಂತಲೂ ಬೇರೆಯಾದ ವಸ್ತುವು. ಅದರಲ್ಲಿ ಯಾವ ವಿಧವಾದ ಗುಣವೂ ಇಲ್ಲ, ಶಕ್ತಿಯೂ ಇಲ್ಲ, ಸಾಮರ್ಥ್ಯವೂ ಇಲ್ಲ. ಶುದ್ಧವಾದ ಕನ್ನಡಿಯಂತಿರುವುದು. ನಿರ್ವಿಕಾರ. ಅವನು ಕೂಟಸ್ಥನು. ಇದಕ್ಕೆ ನಿರತಿಶಯವಾದ ವಸ್ತುವೆಂದೂ ಹೆಸರು. ಇಂತಹ ಚಿತಿಶಕ್ತಿಗಳೆಂಬ ಜೀವಾತ್ಮರು ಅಸಂಖ್ಯಾತಗಳಾಗಿರುವರು. ಇದು ಸಾಂಖ್ಯತತ್ತ್ವಗಳ ಸೂಕ್ಷ್ಮವಾದ ವಿವರಣೆಯಾಗಿರುತ್ತದೆ.

ಪ್ರಕೃತವಾದ ಋಕ್ಕಿನಲ್ಲಿ **ಪ್ರಪಂಚರೂಪೇಣ ಪರಿಣಾಮಾದರ್ಥಗರ್ಭಾಃ** ಎಂದಿರುವ ಸಾಯಣರ ವಿವರಣೆಗೆ ಅರ್ಥವಾಗುವುದು ಕಷ್ಟ. ಈ ಅರ್ಥವಿವರಣೆಯುಲ್ಲಿ ಸಾಂಖ್ಯಮತದಲ್ಲಿ ಹೇಳಿರುವ ಸೃಷ್ಟಿಕ್ರಮವೂ ಅಡಗಿದೆ. ಅದನ್ನು **ಪರಿಣಾಮ**ವೆಂಬ ಪದದಿಂದ ವ್ಯವಹರಿಸಬೇಕೆಂದು ಸಾಯಣರು ಸೂಚಿಸಿದ್ದಾರೆ. ಮೇಲೆಯೂ ಸಹ ಈ ಅಂಶವನ್ನು ತಿಳಿಸಿದೆ ಪ್ರಕೃತದಲ್ಲಿ ವ್ಯವಹಾರಕ್ಕಾಗಿ ನಾವು ಸೃಷ್ಟಿಯೆಂಬ ಪದವನ್ನೇ ಉಪಯೋಗಿಸುತ್ತಿದ್ದರೂ ಈ ಸಂಕೇತವನ್ನು ಮಾತ್ರ ಮರೆಯಬಾರದು. ಸಾಂಖ್ಯಮತದಲ್ಲಿ ಸೃಷ್ಟಿಯ ಸ್ವರೂಪವನ್ನು ಈ ರೀತಿ ವಿವರಿಸಿದೆ.

ಪ್ರಕೃತಿಯು ಅಚೇತನವಾದುದರಿಂದ ಇಚ್ಛಾಶಕ್ತಿಯಿಲ್ಲದೆ ಅಂಧಸ್ಥಾನದಲ್ಲೂ, ಪುರುಷನು ಕ್ರಿಯಾಶಕ್ತಿಯಿಲ್ಲದೇ ಪಂಗು (ಕುಂಟ) ಸ್ಥಾನದಲ್ಲೂ ಇದ್ದು ಅಂಧಪಂಗು (ಕುರುಡ ಮತ್ತು ಕುಂಟ) ನ್ಯಾಯದಿಂದ ಸೃಷ್ಟ್ಯಾದಿ ಸಕಲವ್ಯಾಪಾರಗಳೂ ನಡೆಯುವುವು. ಅಂಧಪಂಗುನ್ಯಾಯವೆಂದರೆ ಒಂದು ಮಹಾರಣ್ಯದಲ್ಲಿ ಕುಂಟನೂ ಕುರುಡನೂ ಸೇರಿ ಕುರುಡನ ಮೇಲೆ ಕುಂಟನು ಕೂತು ದಾರಿತೋರಿಸುತ್ತಾ ಕುರುಡನು ನಡೆಯುತ್ತಾ ಗ್ರಾಮಕ್ಕೆ ಬಂದು ಸೇರಿದಂತೆ ಈ ಪ್ರಕೃತಿಪುರುಷರ ಸ್ವಭಾವವನ್ನು ತಿಳಿದು ಇವುಗಳಿಗೆ ಪ್ರೇರಕನಾಗಿ ಮತ್ತೊಬ್ಬ ಪುರುಷೋತ್ತಮನು ಬೇಕಾಗಿಲ್ಲ. ಈ ಸಂದರ್ಭದಲ್ಲಿ **ಪುರುಷಾರ್ಥ** ಮತ್ತು **ಪರಾರ್ಥ** ಎಂಬ ವಿಷಯದಲ್ಲಿ ದಾರ್ಶನಿಕವಾದ ಚರ್ಚೆಗೆ ಅವಕಾಶವಿದೆ. ಪ್ರಕೃತವಾದ ಋಕ್ಕನ್ನು ವಿವರಿಸುವಾಗ ನಮಗೆ ಆ ಚರ್ಚೆಯು ನೇರವಾಗಿ ಸಂಬಂಧಿಸಿರುವುದಿಲ್ಲವಾದುದರಿಂದ ಅದು ಮುಖ್ಯವಾದ ವಿಷಯವನ್ನು ಅಧಿಕರಿಸುವುದಾದರೂ ಸಹ ಇಲ್ಲಿ ಅದರ ವಿವರಣೆಯನ್ನು ಹೇಳಿಲ್ಲ.

ಮೇಲೆ ಹೇಳಿದ ಒಟ್ಟು ಇಪ್ಪತ್ತೈದು ತತ್ತ್ವಗಳಲ್ಲಿ ಸಾಯಣರು **ಮಹತ್, ಅಹಂಕಾರ, ಪಂಚತನ್ಮಾತ್ರ**ಗಳು ಈ ಏಳನ್ನು ಮಾತ್ರ ನಿರ್ದೇಶಿಸಿದ್ದಾರೆ. ಮತ್ತು **ವಿಷ್ಣೋಃ** ಎಂಬ ಪದಕ್ಕೆ **ವ್ಯಾಪ್ತಸ್ಯ ಪುರುಷಸ್ಯ** ವ್ಯಾಪಕಪುರುಷನೆಂದೂ, **ವಿಧರ್ಮಣಿ** ಎಂಬುದಕ್ಕೆ ಜಗದ್ಧಾರಣರೂಪವಾದ ವ್ಯಾಪಾರವೆಂದೂ ಅರ್ಥಮಾಡಿದ್ದಾರೆ. ಇದು ಸೇಶ್ವರವಾದಿಗಳಾದ ವೇದಾಂತ ಮತದವರ ಅಭಿಪ್ರಾಯವಾಗುತ್ತದೆಯೇ ಹೊರತು **ನಿರೀಶ್ವರ**ವಾದಿಗಳಾದ ಸಾಂಖ್ಯಮತದವರ ಅಭಿಪ್ರಾಯವಾಗುವುದಿಲ್ಲ. ಆದರೆ ಸಾಯಣರ ವಿವರಣೆಯು ಅಶಾಸ್ತ್ರೀಯವೇ ಎಂದರೆ ಅದೆಂದಿಗೂ ಆಗುವುದಿಲ್ಲ. ಇದಕ್ಕೆ ಶ್ರುತಿಯ ಆಧಾರವಿದೆಯೇ ಎಂದರೆ ಧಾರಾಳವಾಗಿದೆಯೆಂದು ಅವುಗಳನ್ನುದಹರಿಸಬಹುದು. ಉಪನಿಷತ್ತುಗಳಲ್ಲಿ ನಿರೀಶ್ವರವಾದಿಯಾದ ಸಾಂಖ್ಯಮತದ ಪ್ರಕ್ರಿಯೆಗಳಿಂದಲೇ ವಿಶ್ವದ ಸೃಷ್ಟಿಕ್ರಮವನ್ನು ವಿವರಿಸಿ, ಸೇಶ್ವರವಾದಿಯಾದ ವೇದಾಂತದಲ್ಲಿ ಪ್ರತಿಪಾದಿಸುವ ಪುರುಷೋತ್ತಮನ ಲೀಲಾವ್ಯಾಪಾರವನ್ನೂ ತಿಳಿಸಿದೆಯಾದುದರಿಂದ ಆ ಶ್ರುತಿವಾಕ್ಯಗಳ ಆಧಾರದಮೇಲೆ ಸಾಯಣಭಾಷ್ಯದ ಔಚಿತ್ಯವನ್ನು ಹೇಳಬಹುದು. ಸಾಂಖ್ಯತತ್ತ್ವದ ಪ್ರತಿಪಾದನೆಗೆ ಆಧಾರವಾಗಿರುವ ಉಪನಿಷದ್ವಾಕ್ಯಗಳಲ್ಲಿ ಪ್ರಕೃತಿಪುರುಷರ ಸ್ವರೂಪವಿವರಣೆಯು ಈ ರೀತಿಯಿದೆ. ಕಠೋಪನಿಷತ್ತಿನಲ್ಲಿ,

**ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ ।**
**ಮನಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಮಹಾನ್ ಪರಃ ॥**
**ಮಹತಃ ಪರಮವ್ಯಕ್ತಮವ್ಯಕ್ತಾತ್ಪುರುಷಃ ಪರಃ ।**
**ಪುರುಷಾನ್ನ ಪರಂ ಕಿಂಚಿತ್ಸಾ ಕಾಷ್ಠಾ ಸಾ ಪರಾ ಗತಿಃ ॥**

(ಕಠ. ಉ. ೧-೩-೧೦, ೧೧)

ಇಂದ್ರಿಯಗಳಿಗಿಂತ ಅರ್ಥಗಳು ಹೆಚ್ಚಿನವು. ಅರ್ಥಗಳಿಂದ ಮನಸ್ಸು ಹೆಚ್ಚಿನದು. ಮನಸ್ಸಿಗಿಂತ ಬುದ್ಧಿ ಹೆಚ್ಚು. ಬುದ್ಧಿಗಿಂತ ಮಹಾನ್ ಎಂಬ ಆತ್ಮನು ಹೆಚ್ಚು. ಮಹತ್ತಿಗಿಂತ ಅವ್ಯಕ್ತವು ಹೆಚ್ಚು. ಅವ್ಯಕ್ತಕ್ಕಿಂತ ಪುರುಷನು ಹೆಚ್ಚು. ಪುರುಷನಿಗಿಂತ ಹೆಚ್ಚಿನದು ಯಾವುದೂ ಇಲ್ಲ. ಇದೇ ಕೊನೆ. ಇದೇ ಅತ್ಯಂತ ಶ್ರೇಷ್ಠವಾದ ಗತಿಯು ಎಂದಿದೆ. ಇದನ್ನೇ ಮುಂಡಕೋಪನಿಷತ್ತಿನಲ್ಲಿ,

**ತಪಸಾ ಚೀಯತೇ ಬ್ರಹ್ಮ ತತೋಽನ್ನಮಭಿಜಾಯತೇ ।**
**ಅನ್ನಾತ್ಪ್ರಾಣೋ ಮನಃ ಸತ್ಯಂ ಲೋಕಾಃ ಕರ್ಮಸು ಚಾಮೃತಂ ॥**

(ಮು. ಉ. ೧-೮)

ಇಲ್ಲಿ ಅನ್ನವೆಂಬ ಪದಕ್ಕೆ ಶಂಕರಾಚಾರ್ಯರು ಅವ್ಯಾಕೃತವೆಂದರ್ಥಮಾಡಿದ್ದಾರೆ. ಸಾಯಣರು ಪ್ರಕೃತವಾದ ಋಕ್ಕಿನಲ್ಲಿ ಪಂಚತನ್ಮಾತ್ರವೆಂದಿರುವ ತತ್ತ್ವವನ್ನು ಪ್ರಶ್ನೋಪನಿಷತ್ತಿನಲ್ಲಿ " **ಪೃಥಿವೀಂ ಚ ಪೃಥಿವೀಮಾತ್ರಾ ಚ**.... .... .... .... ...." ಎಂಬ ಮಂತ್ರದಲ್ಲಿ ವಿವರಿಸಿದೆ.

ಆದರೆ, ಉಪನಿಷತ್ತಿನಲ್ಲಿಯೂ ಸಹ ಪ್ರಕೃತಿ, ಅವ್ಯಕ್ತ, ಮಹತ್ ಇತ್ಯಾದಿಸಾಂಖ್ಯಪ್ರಕ್ರಿಯೆಯು ಇದ್ದರೂ ಸಹ ಇಲ್ಲಿ ಪ್ರಕೃತಿಯು ಸ್ವತಂತ್ರವಾದುದೂ, ಭಿನ್ನವಾದುದೂ ಆದ ತತ್ತ್ವವೆಂಬುದಾಗಿ ಪರಿಗಣಿತವಾಗಿಲ್ಲ. ಪ್ರಕೃತಿಯ ವ್ಯವಹಾರಗಳೆಲ್ಲವೂ ಈಶ್ವರಾಧೀನವು ಈ ಈಶ್ವರನನ್ನೇ ಪರಮಪುರುಷನೆಂಬುದಾಗಿ ಕರೆದಿದೆ. ಅಚೇತನವಾದ ಪ್ರಕೃತಿಗೆ ಕ್ರಿಯಾಶಕ್ತಿಯೇ ಇಲ್ಲನೆಂಬುದು ಉಪನಿಷತ್ತಿನ ಮತವು.

"The Upanishads protest against the transfer of creative functions to mere matter divorced from God. Their main tendency is to support the hypothesis of an absolute spirit on the background of which subject and object arise."

(S. Radhakrishnan's Indian Philosophy Vol. I. p. 260)

ಪ್ರಕೃತಿಗೆ ಈ ವಿಧವಾದ ಈಶ್ವರಾಧೀನತ್ವವು ಶ್ವೇತಾಶ್ವತರೋಪನಿಷತ್ತಿನಲ್ಲಿ ವಿಶದವಾಗಿ ವರ್ಣಿತವಾಗಿದೆ.

**ಪ್ರಧಾನಕ್ಷೇತ್ರಜ್ಞಪತಿರ್ಗುಣೇಶಃ ।** (ಶ್ವೇ. ಉ. ೬-೧೬)

**ಯಸ್ತೂರ್ಣನಾಭ ಇವ ತಂತುಭಿಃ ಪ್ರಧಾನಜೈಃ ಸ್ವಭಾವತೋ ದೇವ ಏಕಃ ಸಮಾವೃಣೋತ್ ।**

(ಶ್ವೇ. ಉ. ೬-೧೦)

ಊರ್ಣನಾಭವು (ಜೇಡರಹುಳುವು) ತನ್ನ ಉದರದಲ್ಲಿರತಕ್ಕ ತಂತುವಿನಿಂದಲೇ ಬಲೆಯನ್ನು ನಿರ್ಮಿಸುವಂತೆ ಪ್ರಧಾನ ವೆಂಬ ಹೆಸರುಳ್ಳ ಪ್ರಕೃತಿಗೆ ಪ್ರಭುವಾದ ಈಶ್ವರನು ಪ್ರಕೃತಿಜವಾದ ಗುಣತ್ರಯದ ದ್ವಾರಾ ವಿಶ್ವವನ್ನು ಸೃಷ್ಟಿಸಿ ತನ್ನನ್ನು ಕಾರ್ಯರೂಪವಾದ ವಿಶ್ವದ ಮೂಲಕ ಪ್ರಕಾಶಪಡಿಸಿಕೊಳ್ಳುತ್ತಾನೆ.

**ಮಾಯಾಂ ತು ಪ್ರಕೃತಿಂ ವಿದ್ಧಿ ಮಾಯಿನಂ ತು ಮಹೇಶ್ವರಂ ।** (ಶ್ವೇ. ಉ. ೪-೧೦)

**ಅಸ್ಮಾನ್ಮಾಯೀ ಸೃಜತೇ ವಿಶ್ವಮೇತತ್ತಸ್ಮಿಂಶ್ಚಾನ್ಯೋ ಮಾಯಯಾ ಸಂನಿರುದ್ಧಃ ।**

(ಶ್ವೇ. ಉ. ೪-೯)

ಇತ್ಯಾದಿ ವಾಕ್ಯಗಳಲ್ಲಿ ಪ್ರಕೃತಿಯು ಈಶ್ವರನ ಕೇವಲ ಮಾಯಾಶಕ್ತಿಯೆಂದೂ ಈ ಶಕ್ತಿಯುಳ್ಳ ಈಶ್ವರನು ವಿಶ್ವವನ್ನು ಸೃಷ್ಟಿಸಿದನೆಂದೂ ವರ್ಣಿಸಿದೆ. ಈ ಈಶ್ವರನಿಗೂ ಪ್ರಕೃತಿಗೂ ಇರುವ ಸಂಬಂಧವು ಪ್ರಕೃತವಾದ ಋಕ್ಕಿನಲ್ಲಿ ಸೇವ್ಯಸೇವಕ ಸಂಬಂಧವೆಂದು ತಿಳಿಸಿದೆ. **'ತಿಷ್ಠಂತಿ ಪ್ರದಿಶಾ ವಿಧರ್ಮಣಿ', 'ಧೀತಿಭಿಃ ಮನಸಾ ಪರಿ ಭವಂತಿ'** ಇತ್ಯಾದಿ ವಾಕ್ಯಗಳಲ್ಲಿ ಸರ್ವವ್ಯಾಪಕನೂ, ಸರ್ವಪ್ರಭುವೂ ಆದ ಈ ಪರಮಪುರುಷನು ನಿರ್ದೇಶಿಸಿದ ಪ್ರದೇಶಗಳಲ್ಲಿ ಪ್ರಕೃತಿಯ ಅವಯವ ಗಳು ತಮ್ಮ ತಮ್ಮ ನಿಯತವಾದ ಕರ್ತವ್ಯಗಳನ್ನು ಮಾಡುತ್ತಾ ಅವನನ್ನು ಸುತ್ತುವರಿದು ನಿಂತಿವೆಯೆಂದು ವರ್ಣಿಸಿದೆ. ಇಲ್ಲಿ ಸೂಚಿತವಾಗಿರುವ ಸಂಬಂಧವನ್ನು ಸಾಂಖ್ಯಕಾರಿಕೆಯಲ್ಲಿ ಈರೀತಿ ಚಿತ್ರಿಸಿದೆ.

**ರಂಗಸ್ಯ ದರ್ಶಯಿತ್ವಾ ನಿವರ್ತತೇ ನರ್ತಕೀ ಯಥಾ ನೃತ್ಯಾತ್**

**ಪುರುಷಸ್ಯ ತಥಾತ್ಮಾನಂ ಪ್ರಕಾಶ್ಯ ವಿನಿವರ್ತತೇ ಪ್ರಕೃತಿಃ ॥**

(ಸಾಂಖ್ಯಕಾರಿಕಾ ೫೯)

ಇಲ್ಲಿ ಪುರುಷನು ಪುಲ್ಲಿಂಗ. ಬುದ್ಧಿ ಸ್ತ್ರೀಲಿಂಗ. ಈ ಬುದ್ಧಿಪುರುಷಸಂಬಂಧವನ್ನು ದಂಪತಿದೃಷ್ಟಿಯಿಂದ ನೋಡಿದರೆ ಬುದ್ಧಿಯು ಸರ್ವಾಧಿಕಾರವನ್ನು ವಹಿಸಿ ತನ್ನ ಕೈಕೆಳಗಿರುವ ಸಕಲಪರಿವಾರಗಳಿಂದ ಸಕಲ ವ್ಯಾಪಾರಗಳನ್ನು ನಡೆಸುತ್ತಾ ಸದಾ ಪುರುಷನ ಸಂತೋಷವನ್ನು ನಿರೀಕ್ಷಿಸುತ್ತಾ ಅವನ ಭೋಗಕ್ಕೆ ದುಡಿಯುತ್ತಿರುವುದು. ರಂಗಸ್ಥಲದಲ್ಲಿ ನರ್ತಕಿಯು ವಿಚಿತ್ರವೇಷ ಗಳಿಂದ ತನ್ನ ಸಾಮರ್ಥ್ಯವನ್ನು ತೋರಿಸುವ ಹಾಗೆ ಬುದ್ಧಿಯ ನರ್ತನವೆಲ್ಲವೂ ಪುರುಷಾರ್ಥವಾಗಿರುವುದು.

ಅಥವಾ ಸಾಂಖ್ಯದರ್ಶನವನ್ನು ಲೋಕದೃಷ್ಟಿಯಿಂದ ನೋಡಿ ಒಬ್ಬ ರಾಜನ ರಾಜ್ಯಭಾರವನ್ನು ಅದಕ್ಕೆ ನಿದರ್ಶನವಾಗಿ ತಿಳಿಯಬಹುದು. ಹೇಗೆಂದರೆ, ಪುರುಷಪದಕ್ಕೆ ಪುರಿಶಯನ ಎಂಬರ್ಥದಿಂದ ಒಬ್ಬ ನಗರಾಧಿಪತಿ ತೋರುತ್ತಾನೆ. ಅವನು

ಮಂತ್ರಿಸ್ಥಾನದಲ್ಲಿರುವ ಬುದ್ಧಿಗೆ ಸರ್ವಾಧಿಕಾರವನ್ನು ಒಪ್ಪಿಸಿ ಉದಾಸೀನನಾಗಿ ಸರ್ವಸಾಕ್ಷಿಯಾಗಿ ಸರ್ವಭೋಗಕ್ಕೂ ಸ್ವಾಮಿಯಾಗಿ ತಾನು ಯಾವ ಕೆಲಸವನ್ನೂ ಮಾಡದಿರುವುದರಿಂದ ಅಕರ್ತನಾಗಿ ಯಾರೊಡನೆಯೂ ಸೇರದಿರುವುದರಿಂದ ಕೇವಲನಾಗಿಯೂ ಇರುವನು.

ಸರ್ವಾಧಿಕಾರಿಯಾದ ಬುದ್ಧಿ ಎಂಬ ಮಂತ್ರಿಯು ಸಾಕ್ಷಾತ್ ಸರ್ವಕಾರ್ಯಕರ್ತನಾಗಿ ಸರ್ವವಿಧವಾದ ಭಾವವನ್ನೂ ಸಿದ್ಧಿಯನ್ನೂ ತುಷ್ಟಿಯನ್ನೂ ಹೊಂದಿ ಇವುಗಳನ್ನೆಲ್ಲಾ ಪುರುಷನೆಂಬ ರಾಜನಿಗೆ ಅರಿಕೆಮಾಡುವನು. ಕೈಕೆಳಗೆ ಇರುವ ಇಪ್ಪತ್ತೆರಡು ಅಧಿಕಾರಿಗಳು ಅವರವರ ವ್ಯಾಪಾರಗಳು ಒಟ್ಟುಗೂಡಿ, ಮಾಡತಕ್ಕ ವ್ಯಾಪಾರಗಳು ಅನಂತಗಳಾಗಿದ್ದರೂ ಮಂತ್ರಿಯ ಶಕ್ತಿಯಿಂದಲೇ ನಡೆಯುವುದರಿಂದ ಅವನೇ ಪ್ರಧಾನನಾಗಿರುವನು.

ಈ ವಿಧವಾದ ಸೇವ್ಯಸೇವಕಭಾವವನ್ನು ಹೇಳಿದ್ದರೂ ಸಹ ಸಾಂಖ್ಯದರ್ಶನದ ರೀತ್ಯಾ ಪುರುಷನಿಗೂ ಪ್ರಕೃತಿಗೂ ಪ್ರಾಪಂಚಿಕವ್ಯವಹಾರ ಸಂಬಂಧವೇ ಹೊರತು, ಸಹಜವಾದ ಸಂಬಂಧವಿಲ್ಲ. ಪುರುಷನು ನಿರ್ಲಿಪ್ತನು. ಅವನಲ್ಲಿ ಕ್ರಿಯೆಯೇ ಇಲ್ಲ. ಕ್ರಿಯೆಯೆಲ್ಲವೂ ಪ್ರಕೃತಿಯದು. ಆದರೆ ಪ್ರಕೃತವಾದ ಋಕ್ಕಿನ ವಿವರಣೆಯಂತೆ, ಪ್ರಕೃತಿಯೇ ಪರಮಪುರುಷನ ಅಂಶವಾದುದರಿಂದ ಪ್ರಕೃತಿಯ ಪರಿಣಾಮಗಳೆಲ್ಲವೂ ಈಶ್ವರನ ಸಂಕಲ್ಪಕ್ರಿಯೆಯೆಂದೇ ಅರ್ಥವಾಗುವುದು. ಈ ಪರಿಣಾಮರೂಪವಾದ ಕ್ರಿಯೆಗಳಿಂದ ಈಶ್ವರನು ಸುಖದುಃಖಾದಿಗಳ ಅನುಭವಗಳಿಂದ ದೂರನಾಗಿರಬಹುದು. ಆದರೆ ಅವನು ಕ್ರಿಯಾವಂತನೆಂದೂ ಪ್ರಕೃತಿಯು ಅವನ ಅಂಶವೆಂದೂ ಮೂಲತತ್ತ್ವವು ಈಶ್ವರತೊಬ್ಬನೇ ಎಂದೂ ಅರ್ಥವಾಗುತ್ತದೆ. **“ಕಾರಣಭೂತಾನಿ ತಾನ್ಯೇವ ವಿಷ್ಣೋರ್ವ್ಯಾಪ್ತಸ್ಯ ಪುರುಷಸ್ಯ ಪ್ರದೇಶೇನ ತಿಷ್ಠಂತಿ”** ಪ್ರಾಪಂಚಿಕ ವ್ಯವಹಾರಗಳಿಗೆ ಕಾರಣಭೂತಗಳಾದರೂ ಸಹ ಮಹದಹಂಕಾರಗಳೂ, ತನ್ಮಾತ್ರಗಳವಿ ಇವುಗಳಿಗೆಲ್ಲಾ ಮೂಲವಾದ ಪ್ರಧಾನವೂ ಎಲ್ಲವೂ ಸಹ ಈಶ್ವರನ ಅಧೀನಗಳಾಗಿದ್ದು ತಮ್ಮ ತಮ್ಮ ನಿಯತವಾದ ಪ್ರದೇಶಗಳಲ್ಲಿ ತಮ್ಮ ಕರ್ತವ್ಯವನ್ನು ನೆರವೇರಿಸುತ್ತವೆ.



**ನ ವಿ ಜಾನಾಮಿ ಯದಿವೇದಮಸ್ಮಿ ನಿಣ್ಯಃ ಸಂನದ್ಧೋ ಮನಸಾ ಚರಾಮಿ । ಯದಾ ಮಾಗನ್ಪ್ರಥಮಜಾ ಋತಸ್ಯಾದಿದ್ವಾಚೋ ಅಶ್ನುವೇ ಭಾಗಮಸ್ಯಾಃ ॥ ೩೭ ॥**

ನಾನೇ ಈ ಸಕಲಪ್ರಪಂಚವ್ಯಾಪಿಯಾದ ಬ್ರಹ್ಮನಾಗಿರಬಹುದೇ ಎಂಬ ತತ್ತ್ವವನ್ನು ನಾನು ವಿಚಾರಮಾಡಿ ಅರಿತಿಲ್ಲ. ಆದುದರಿಂದಲೇ ಅವಿದ್ಯೆಯಿಂದ ಆವರಿಸಲ್ಪಟ್ಟವನಾಗಿಯೂ, ವಿಷಯಾದಿಗಳಿಂದ ಬಂಧಿತನಾಗಿಯೂ, ಬಹಿರ್ಮುಖವಾದ ಮನಸ್ಸುಳ್ಳವನಾಗಿಯೂ ವ್ಯವಹರಿಸುತ್ತಿದ್ದೇನೆ. ಸತ್ಯಾತ್ಮಕವಾದ ಪರಬ್ರಹ್ಮನ ಯಥಾರ್ಥಜ್ಞಾನವು ಯಾವಾಗ ಲಭಿಸುತ್ತದಯೋ ಆ ಒಡನೆಯೇ ‘ಅಹಂ ಬ್ರಹ್ಮಾಸ್ಮಿ’ ಎಂಬ ತತ್ತ್ವವನ್ನುಪದೇಶಿಸುವ ಉಪನಿಷದ್ವಾಕ್ಯಗಳ ಅಂಶವನ್ನು ಸಾಕ್ಷಾತ್ಕಾರಮಾಡಿಕೊಳ್ಳುತ್ತೇನೆ.

**“ಅಹಂ ಬ್ರಹ್ಮಾಸ್ಮಿ”** ಎಂಬ ಪರಮಾರ್ಥಜ್ಞಾನದ ಆವಶ್ಯಕತೆಯನ್ನೂ, ಈ ಜ್ಞಾನಾಭಾವದಿಂದ ಉಂಟಾಗತಕ್ಕ ಪಶ್ಚಾತ್ತಾಪದ ಸ್ವರೂಪವನ್ನೂ ಈ ಋಕ್ಕಿನಲ್ಲಿ ತಿಳಿಸಿದೆ. ಇದನ್ನೇ ನಿರುಕ್ತಕಾರರು ಪರಿದೇವನಾ ವಾಕ್ಯಗಳಲ್ಲಿ ಸೇರಿಸಿರುತ್ತಾರೆ.
**“ಅಥಾಪಿ ಪರಿದೇವನಾ ಕಸ್ಮಾಚ್ಚಿದ್ಭಾವಾತ್”** (ನಿ. ೭-೩)

ಮಾನಸಿಕವಾದ ಭಾವವನ್ನು ಪ್ರಕಾಶಪಡಿಸತಕ್ಕ ಪಶ್ಚಾತ್ತಾಪಸೂಚಕವಾದ ವಾಕ್ಯವಿದು ಎಂದು ವಿವರಿಸಿದೆ. **“ ಆತ್ಮನಿಂದಾಪೂರ್ವಕೋ ವಿಲಾಪಃ ಪರಿದೇವನಾ ”** ತನ್ನ ಅಜ್ಞಾನಾದಿಗಳಿಗಾಗಿ ಆತ್ಮನಿಂದಾಪೂರ್ವಕವಾದ ಭಾವ ಪ್ರಕಾಶನಕ್ಕೆ ಪರಿದೇವನೆಯೆಂದು ದುರ್ಗಾಚಾರ್ಯರು ನಿರುಕ್ತವಾಕ್ಯವನ್ನು ವಿವರಿಸಿದ್ದಾರೆ.

ಸಾಯಣರು ಈ ಬ್ರಹ್ಮಜ್ಞಾನವು ಯಾವ ಸಾಧನದಿಂದ ಲಭ್ಯವು ಎಂಬುದನ್ನು ತಿಳಿಸುತ್ತಾ ಮೊದಲು **‘ ಪರಂ ಶಾಸ್ತ್ರಜನಿತಮಿದಮಹಮಸ್ಮೀತಿ ಜ್ಞಾನಂ ’** ಅತ್ಯುತ್ತಮವಾದ ವೇದಾಂತಶಾಸ್ತ್ರದಿಂದ ಲಭಿಸತಕ್ಕಜ್ಞಾನವಿದು. ಆ ಶಾಸ್ತ್ರ ಜ್ಞಾನವಿಲ್ಲದ ಅವಿವೇಕಿಯು ನಾನು ಎಂಬ ಪಶ್ಚಾತ್ತಾಪಪೂರ್ವಕವಾದ ಅಜ್ಞಾನಪ್ರಕಾಶನವಿದೆಯೆಂದು ಮೊದಲನೆಯ ಅರ್ಥವನ್ನು ತಿಳಿಸಿ ಅನಂತರ “ ಯದಿವೇದಂ ” ಎಂಬುದಕ್ಕೆ ಇವ ಶಬ್ದಕ್ಕೆ ಉಪಮಾರ್ಥವನ್ನು ತೋರಿಸಿ ಎರಡನೆಯ ಅರ್ಥವನ್ನೂ ಹೇಳಿದ್ದಾರೆ. ಮೊದಲನೆಯದು ಶಾಸ್ತ್ರಜನಿತವಾದ ಜ್ಞಾನವನ್ನೂ, ಎರಡನೆಯದು ಆತ್ಮಸಾಕ್ಷಾತ್ಕಾರರೂಪವಾದ ಜ್ಞಾನವನ್ನೂ ಸೂಚಿಸುತ್ತದೆ. ಕೇವಲ ಶಾಸ್ತ್ರಜನಿತವಾದ ಜ್ಞಾನವನ್ನು ಮಾತ್ರ ಸಂಪಾದಿಸಿದರೆ ಅದು ಸಾಲದು,

**“ .... .... .... .... ವಿಹ್ಯಾಸ್ವ ವ್ಯಾಖ್ಯಾಸ್ಯಾಮಿ ತೇ ವ್ಯಾಚಕ್ಷಾಣಸ್ಯ ತು । ನೇ ನಿದಿ-**
**ಧ್ಯಾಸಸ್ವ” ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯೋ ಮೈತ್ರೇ-**
**ಯ್ಯಾತ್ಮನೋ ವಾ ಅರೇ ದರ್ಶನೇನ ಶ್ರವಣೇನ ಮತ್ಯಾ ವಿಜ್ಞಾನೇನೇದಂ ಸರ್ವಂ ವಿದಿತಂ ।**

(ಬೃ. ಉ. ೨-೪-೪, ೫)

ಶಾಸ್ತ್ರೋಪದೇಶದ ಶ್ರವಣವಾದೊಡನೆಯೇ ಅಲ್ಲಿಗೆ ಪೂರ್ಣಜ್ಞಾನವು ಲಭಿಸಿತೆಂದು ತಿಳಿಯಕೂಡದು. ಶ್ರವಣಾನಂತರ ಮನನವೂ, ಮನನಾನಂತರ ನಿಧಿಧ್ಯಾಸನವೂ ಅತ್ಯವಶ್ಯವಾದ ಸಾಧನಗಳು. ಆ ನಿದಿಧ್ಯಾಸವನ್ನೇ ಬೃಹದಾರಣ್ಯಕದಲ್ಲಿ ವಿಜ್ಞಾನ ವೆಂದಿದೆ. ಶ್ರವಣದಿಂದಲೂ, ಮತಿಯಿಂದಲೂ ವಿಜ್ಞಾನದಿಂದಲೂ ಈ ಆತ್ಮನ ಸ್ವರೂಪವನ್ನರಿಯಬೇಕೆಂದು ಯಾಜ್ಞವಲ್ಕ್ಯರು ಮೈತ್ರೇಯಿಗೆ ಉಪದೇಶವನ್ನು ಮಾಡುವಾಗ ಈ ಮೂರು ಸಾಧನಗಳ ಆವಶ್ಯಕತೆಯನ್ನು ತಿಳಿಸಿದ್ದಾರೆ. ಪ್ರಕೃತವಾದ ಋಕ್ಕಿನ ಲ್ಲಿಯೂ ಸಹ ಸಾಯಣರು **“ ಶಾಸ್ತ್ರಜನಿತಂ ಸಾರ್ವಾತ್ಮ್ಯಂ ಜಾತಂ ನ ತು ಆನುಭಾವಿಕಂ ” “ ಅಹಂ ಬ್ರಹ್ಮಾಸ್ಮಿ ”** ಎಂಬ ಶಾಸ್ತ್ರಜನಿತಜ್ಞಾನವು ಬೋಧವಾಯಿತೇ ಹೊರತು, ಈ ವಿಷಯದಲ್ಲಿ ಮನನಪೂರ್ವಕವಾದ ಸಾಕ್ಷಾತ್ಕಾರವುಂಟಾಗಲಿಲ್ಲ ಎಂಬ ನಿರ್ವೇದವು ಸೂಚಿತವಾಗಿದೆಯೆಂದು ತಿಳಿಸಿದ್ದಾರೆ. ಆದರೆ ಶಾಸ್ತ್ರಜನಿತವಾದ ಬ್ರಹ್ಮಜ್ಞಾನವು ಮನನನಿದಿಧ್ಯಾಸನಗಳಿಗೆ ಆಧಾರವಾಗಿರುವುದರಿಂದ ಶಾಸ್ತ್ರೋಪದೇಶವು ಅತ್ಯವಶ್ಯವಾಗಿರುತ್ತದೆ. ಆದುದರಿಂದ ಮೊದಲು ಸಾಯಣರು ಶಾಸ್ತ್ರೋಪದಿಷ್ಟ ವಾದ ಜ್ಞಾನವಾವುದೆಂಬುದನ್ನು ನಿರ್ದೇಶಿಸಲು ಶ್ರುತಿವಾಕ್ಯಗಳನ್ನುದಹರಿಸಿದ್ದಾರೆ. ಆ ಜ್ಞಾನದ ಸ್ವರೂಪವೇನೆಂದರೆ,

**ಯದಿವೇದಂ ಅಸ್ಮಿ—ಯದಪೀದಂ ಕೃತ್ಸ್ನಃ ಪ್ರಪಂಚೋಽಸ್ಯಹಮೇವಾಸ್ಮಿ । ನಾಮ-**
**ರೂಪಾಂಶಂ ಪರಮಾರ್ಥಂ ತ್ಯಕ್ತ್ವಾ ಸರ್ವತ್ರ ಅನುಗತೋಽಸ್ಮಿ** ...... ...... .... ..... ॥

ನಾನೇ ಪರಬ್ರಹ್ಮನು. ಸಕಲವಿಶ್ವವೂ ನನ್ನ ರೂಪವೇ. ನನ್ನ ಈ ವೈಯಕ್ತಿಕವಾದ ನಾಮವೂ, ರೂಪವೂ ಮಿಥ್ಯೆಯು ಈ ಮಿಥ್ಯಾಜ್ಞಾನವನ್ನು ದಾಟಿ ಪರಮಾರ್ಥಜ್ಞಾನವನ್ನು ಸಂಪಾದಿಸಿದರೆ ಆಗ ಭೇದಜ್ಞಾನವು ಹೋಗಿ ಸಕಲವೂ ಬ್ರಹ್ಮಮಯ ವೆಂಬ ಜ್ಞಾನವು ಲಭಿಸುತ್ತದೆ ಎಂಬ ಐಕ್ಯಜ್ಞಾನವು. ಇದಕ್ಕೆ ಆಧಾರವೇನು ಎಂದು ಕೇಳಿದರೆ, ಉಪನಿಷದಾದಿ ಸಕಲ ಶ್ರುತಿವಾಕ್ಯ ಗಳೂ ಇದನ್ನು ಬೋಧಿಸುವುದೇ ಇದರ ಆಧಾರವು.

**ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ ।**

(ಛಾ. ಉ. ೩-೧೪-೧)

ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ।
(ಛಾ. ಉ. ೬-೮-೭)

ಅಥಾತೋಽಹಂಕಾರಾದೇಶ ಏವಾಹಮೇವಾಧಸ್ತಾದಹಮುಪರಿಷ್ಟಾದಹಂ ಪಶ್ಚಾದಹಂ ಪುರಸ್ತಾದಹಂ ದಕ್ಷಿಣತೋಽಹಮುತ್ತರತೋಽಹಮೇವೇದಂ ಸರ್ವಮಿತಿ ॥
(ಛಾ. ಉ. ೭-೨೫-೧)

'ಅಹಂ' ಎಂಬ ಪ್ರತೀತಿಯಿಂದ ಪ್ರಸಿದ್ಧವಾದ ತತ್ತ್ವವೇ ಪರಬ್ರಹ್ಮವು. 'ಅಹಂ' ಎಂಬುದು ಬ್ರಹ್ಮನಿಂದ ಬೇರೆಯಾದ ವಸ್ತುವಲ್ಲ. ಸರ್ವವೂ ಬ್ರಹ್ಮಮಯವಾದುದರಿಂದ ವ್ಯವಹಾರಕಾಲದಲ್ಲಿ 'ಅಹಂ' ಎಂಬ ಶಬ್ದದಿಂದ ವ್ಯವಹರಿಸಲ್ಪಡತಕ್ಕ ವಸ್ತುವೂ ಆ ಬ್ರಹ್ಮವೇ ಆಗಿದೆ. ಸರ್ವವೂ ಬ್ರಹ್ಮ, ಸರ್ವವೂ ಆತ್ಮ. 'ಇದಂ ಸರ್ವಂ ಯದಯಮಾತ್ಮಾ' ಎಂದಿರುವಂತೆ ಅಧಃಪ್ರದೇಶದಲ್ಲಿರತಕ್ಕದ್ದೂ, ಮೇಲುಭಾಗದಲ್ಲಿ ಯಾವುದಿರುವುದೋ ಅದೂ, ಮುಂಭಾಗದಲ್ಲಿರುವುದೂ, ದಕ್ಷಿಣದಲ್ಲಿರುವುದೂ, ಉತ್ತರಭಾಗದಲ್ಲಿರುವುದೂ, ಸಕಲವೂ ಸಹ ಆತ್ಮರೂಪದಲ್ಲಿರುವ ಬ್ರಹ್ಮವೇ ಆಗಿದೆ ಎಂದು ಛಾಂದೋಗ್ಯದಲ್ಲಿ ತಿಳಿಸಿದೆ. ಇದೇ ತತ್ತ್ವವನ್ನು ಬೃಹದಾರಣ್ಯಕೋಪನಿಷತ್ತಿನಲ್ಲಿ ಪ್ರತಿಪಾದಿಸುತ್ತಾ,

ಬ್ರಹ್ಮ ವಾ ಇದಮಗ್ರ ಆಸೀತ್ತದಾತ್ಮಾನಮೇವಾವೇತ್ । ಅಹಂ ಬ್ರಹ್ಮಾಸ್ಮೀತಿ । ತಸ್ಮಾತ್ತತ್ಸರ್ವಮಭವತ್ತದ್ಯೋ ಯೋ ದೇವಾನಾಂ ಪ್ರತ್ಯಬುಧ್ಯತ ಸ ಏವ ತದಭವತ್ತಥರ್ಷೀಣಾಂ ತಥಾ ಮನುಷ್ಯಾಣಾಂ ತದ್ಧೈತತ್ಪಶ್ಯನ್ನೃಷಿರ್ವಾಮದೇವಃ ಪ್ರತಿಪೇದೇಽಹಂ ಮನುರಭವಂ ಸೂರ್ಯಶ್ಚೇತಿ । ತದಿದಮಪ್ಯೇತರ್ಹಿ ಯ ಏವಂ ವೇದಾಹಂ ಬ್ರಹ್ಮಾಸ್ಮೀತಿ ಸ ಇದಂ ಸರ್ವಂ ಭವತಿ ತಸ್ಯ ಹ ನ ದೇವಾಶ್ಚ ನಾಭೂತ್ಯಾ ಈಶತೇ । ಆತ್ಮಾ ಹ್ಯೇಷಾಂ ಸ ಭವತಿ ಅಥ ಯೋಽನ್ಯಾಂ ದೇವತಾಮುಪಾಸ್ತೇಽನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ ಯಥಾ ಪಶುರೇವಂ ಸ ದೇವಾನಾಂ ॥ (ಬೃ. ಉ. ೧-೪-೧೦)

ಆದಿಯಲ್ಲಿ ಬ್ರಹ್ಮವು ಮಾತ್ರವಿದ್ದು "ನಾನೇ ಸಮಸ್ತವು" ಎಂಬ ಜ್ಞಾನದಿಂದ ಅದೇ ಸಮಸ್ತವಿಶ್ವವಾಗಿ ಪರಿಣಮಿಸಿತು. ದೇವತೆಗಳಲ್ಲಿಯೂ ಯಾರು ಈ ಜ್ಞಾನವನ್ನು ಎಂದರೆ "ಅಹಂ ಬ್ರಹ್ಮಾಸ್ಮಿ" ಎಂಬ ಜ್ಞಾನವನ್ನು ಹೊಂದುವರೋ ಅವರೂ ಸಹ ವಿಶ್ವಾತ್ಮರಾಗಿಯೇ ಆಗುವರು. ಈ ಪರಮಾತ್ಮಜ್ಞಾನವನ್ನು ಪಡೆದ ಋಷಿಗಳೂ ಸಹ ವಿಶ್ವವ್ಯಾಪಕವಾದ ಬ್ರಹ್ಮದ ಸ್ವರೂಪವನ್ನೇ ಪಡೆಯುವರು. ಈ ತತ್ತ್ವವನ್ನು ತಿಳಿದ ವಾಮದೇವಋಷಿಯು 'ನಾನೇ ಮನುವು, ನಾನೇ ಸೂರ್ಯನು' ಎಂದು ಅರಿತನು. ಇದನ್ನೇ ಋಗ್ವೇದದಲ್ಲೂ ಸಹ,

ಅಹಂ ಮನುರಭವಂ ಸೂರ್ಯಶ್ಚಾಹಂ ಕಕ್ಷೀವಾँ ಋಷಿರಸ್ಮಿ ವಿಪ್ರಃ । ಅಹಂ ಕುತ್ಸಮಾರ್ಜುನೇಯಂ ನ್ಯೃಂಜೇಽಹಂ ಕವಿರುಶನಾ ಪಶ್ಯತಾ ಮಾ ॥ (ಋ. ಸಂ. ೪-೨೬-೧)

ಎಂಬ ವಾಕ್ಯಗಳಿಂದ ಹೇಳಿದೆಯೆಂದು ಉದಹರಿಸಿ ವಾಮದೇವಾದಿಜ್ಞಾನಿಗಳು ಬ್ರಹ್ಮತ್ವವನ್ನು ಪಡೆದ ವಿಷಯವನ್ನು ತಿಳಿಸಿದೆ. ಆದರೆ ಯಾರು—"ಬ್ರಹ್ಮವು ಬೇರೆ, ನಾನೇ ಬೇರೆ" ಎಂಬ ಭೇದಜ್ಞಾನವನ್ನು ಇಟ್ಟುಕೊಂಡಿರುವರೋ ಅವರು ದೇವತೆಗಳನ್ನು ದ್ವೇಷಿಸಿದ ಯಜ್ಞಪಶುಗಳಾಗುವರು ಎಂದೂ ಸಹ ಎಚ್ಚರಿಸಿದೆ. ಇದೇ ತತ್ತ್ವವನ್ನು ಈಶಾವಾಸ್ಯೋಪನಿಷತ್ತಿನಲ್ಲಿ ಪ್ರತಿಪಾದಿಸುತ್ತಾ,

ಈಶಾವಾಸ್ಯಮಿದಗ್ಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ । (ಈಶ. ಉ. ೧)

ಜಗದೀಶ್ವರನಾದ ಪರಮಾತ್ಮನೇ ಪ್ರತ್ಯಗಾತ್ಮರೂಪದಿಂದ ಎಲ್ಲಾ ಪ್ರಾಣಿಗಳಿಗೂ ಆತ್ಮನಾಗಿದ್ದುಕೊಂಡು ಎಲ್ಲವನ್ನೂ ಆಳುತ್ತಿರುವನು. ಜಗತ್ತಿನಲ್ಲಿ ಜಂಗಮಾತ್ಮಕವಾಗಿರತಕ್ಕದ್ದನ್ನೆಲ್ಲಾ ಪ್ರತ್ಯಗಾತ್ಮರೂಪದಿಂದ ಈಶನಾಗಿರುವ ತನ್ನ ಆತ್ಮದಿಂದ "ಇದೆಲ್ಲವೂ ನಾನೇ" ಎಂದು ಪರಮಾರ್ಥಸತ್ಯವಾಗಿರುವ ರೂಪದಿಂದ ಹೊದ್ದಿಸಬೇಕು ಎಂದು ತಿಳಿಸಿದೆ ಈ ಬ್ರಹ್ಮಜ್ಞಾನವು ಅತ್ಯವಶ್ಯವಾದುದು. ಆದರೆ ಇದರ ತಿಳಿವಳಿಕೆಯು ಅತಿಕಠಿಣವಾದುದು. ಇದನ್ನು ಶ್ರುತಿವಾಕ್ಯದಿಂದ ಅರಿತು ಅನಂತರ ಇದರ ಸಾಕ್ಷಾತ್ಕಾರಕ್ಕೆ ಪ್ರಯತ್ನಿಸಬೇಕು ಎಂಬುದಾಗಿ ಶ್ರವಣಮನನಗಳ ಆವಶ್ಯಕತೆಯನ್ನು ತಿಳಿಸುತ್ತಾ ಕಠೋಪನಿಷತ್ತಿನಲ್ಲಿ,

**ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ ।**
**ತಂ ಸ್ವಾಚ್ಛರೀರಾತ್ಪ್ರವೃಹೇನ್ಮುಂಜಾದಿವೇಷೀಕಾಂ ಧೈರ್ಯೇಣ ॥ ತಂ ವಿದ್ಯಾಚ್ಛುಕ್ರಮಮೃತಂ**
**ತಂ ವಿದ್ಯಾಚ್ಛುಕ್ರಮಮೃತಮಿತಿ ॥** (ಕಠ. ಉ. ೨-೩-೧೭)

ಕೇವಲ ಅಂಗುಷ್ಠಪ್ರಮಾಣದ ಈ ಮಹಾಪುರುಷನು ಎಲ್ಲರಿಗೂ ಅಂತರಾತ್ಮನಾಗಿದ್ದಾನೆ. ಭೌತಿಕವಾದ ಶರೀರಾಂತರ್ಗತನಾದ ಈ ಆತ್ಮನನ್ನು ಬಂಧನದಿಂದ ಬಿಡಿಸಿ ಮುಕ್ತನನ್ನಾಗಿ ಮಾಡತಕ್ಕದ್ದು. ಆದರೆ ಇದು ಸಾಧಾರಣವಾದ ಪ್ರಯತ್ನದಿಂದ ಸಾಧ್ಯವಿಲ್ಲ. ಇದಕ್ಕೆ ಅಸಾಧಾರಣವಾದ ಧೈರ್ಯವು ಬೇಕು. ಆ ಆತ್ಮನು ಶುದ್ಧನು. ಅಮೃತನು. ಇವನನ್ನು ಅರಿಯಬೇಕಾದರೆ ಆತ್ಮಸಾಕ್ಷಾತ್ಕಾರವು ಅತ್ಯವಶ್ಯವಾದುದು. ಶ್ರುತಿಯ ಉಪದೇಶದಿಂದ ತಿಳಿದ ಬ್ರಹ್ಮಜ್ಞಾನವು ಸಾಕ್ಷಾತ್ಕಾರಕೆ ಸಾಧನವಾಗುವುದೇ ಹೊರತು ಸಾಕ್ಷಾತ್ಕಾರವೇ ಆಗುವುದಿಲ್ಲ. ಅದೇ ಅಂಶವನ್ನು ಸಾಯಣರು ವಿವರಿಸುತ್ತಾ,

**"ಇದಂ ಸರ್ವಮಹಮಸ್ಮೀತಿ ಜ್ಞಾನಂ ಮೇ ಜಾತಂ । ಅಪಿ ತ್ವೇತದ್ದಾರ್ಷ್ಟಾಂತಿಕಭೂತಂ । ಆನುಭವಿಕಂ ಸಾರ್ವಾತ್ಮ್ಯಂ ಯದಸ್ತಿ ತನ್ನ ವಿಜಾನಾಮಿ । ನ ಪ್ರಾಪ್ತೋಽಸ್ಮಿ । ಶಾಸ್ತ್ರಜನಿತಂ ಸಾರ್ವಾತ್ಮ್ಯಂ ಜಾತಂ ನ ತ್ವಾನುಭವಿಕಮಿತ್ಯರ್ಥಃ ॥**

ಶಾಸ್ತ್ರೋಪದೇಶದಿಂದ 'ಅಹಂ ಬ್ರಹ್ಮಾಸ್ಮಿ' ಎಂಬ ಜ್ಞಾನವನ್ನೇನೋ ಪಡೆದುದು ನಿಜ, ಆದರೆ ಇದು ದೃಷ್ಟಾಂತರೂಪದ ಜ್ಞಾನವಾದುದೇ ಹೊರತು ನಾನು ಈ ಜ್ಞಾನವನ್ನು ಅನುಭವರೂಪದಲ್ಲಿ ಪಡೆಯಲಿಲ್ಲ. ಶಾಸ್ತ್ರಜನಿತಜ್ಞಾನವು ಸ್ವಂತವಾದ ಅನುಭವರೂಪದ ಜ್ಞಾನವಾಗುವುದೇ ಇಲ್ಲ. ಆದರಿಂದ ಬ್ರಹ್ಮಸಾಕ್ಷಾತ್ಕಾರವು ಪೂರ್ಣವಾಗುವುದಿಲ್ಲ. ಚಕ್ಷುರಾದೀಂದ್ರಿಯಗಳಾಗಲಿ, ವೇದಾದಿ ಶ್ರುತಿಗಳಾಗಲಿ, ಪೂರ್ಣವಾದ ಸಾಕ್ಷಾತ್ಕಾರವಾಗಲಾರವು ಎಂಬುದನ್ನು ಶ್ರುತಿವಾಕ್ಯಗಳು ಸಾರಿವೆ. ಉದಾಹರಣೆಗೆ ಮುಂಡಕೋಪನಿಷತ್ತಿನಲ್ಲಿ,

**ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ ನಾನ್ಯೈರ್ದೇವೈಸ್ತಪಸಾ ಕರ್ಮಣಾ ವಾ ।**
**ಜ್ಞಾನಪ್ರಸಾದೇನ ವಿಶುದ್ಧಸತ್ತ್ವಸ್ತತಸ್ತು ತಂ ಪಶ್ಯತೇ ನಿಷ್ಕಳಂ ಧ್ಯಾಯಮಾನಃ ॥** (ಮು. ಉ. ೩-೧-೮)

**ನಾಯಮಾತ್ಮಾ ಪ್ರವಚನೇನ ಲಭ್ಯಸ್ತ ನ ಮೇಧಯಾ ನ ಬಹುನಾ ಶ್ರುತೇನ । ಯಮೈವೈಷ**
**ವೃಣುತೇ ತೇನ ಲಭ್ಯಃ ತಸ್ಯೈಷ ಆತ್ಮಾ ವಿವೃಣುತೇ ತನುಂ ಸ್ವಾಂ ॥** (ಮು. ೩-೨-೩)

ಈ ಆತ್ಮನನ್ನು ಕಣ್ಣಿನಿಂದ ಗ್ರಹಿಸಲಾಗುವುದಿಲ್ಲ. ಮಾತಿನಿಂದಲೂ ಆಗುವುದಿಲ್ಲ. ಬಾಹ್ಯವಾದ ಆಡಂಬರದ ಕರ್ಮಗಳಿಂದಾಗಲಿ ಆಗುವುದಿಲ್ಲ. ಜ್ಞಾನಪ್ರಸಾದದಿಂದ ಸತ್ತ್ವಶುದ್ಧಿಯನ್ನು ಮಾಡಿಕೊಂಡು ಧ್ಯಾನಮಾಡುವವನಿಗೆ ಮಾತ್ರ ನಿಷ್ಕಲನಾದ ಈ ಪರಮಾತ್ಮನು ಗೋಚರನಾಗುತ್ತಾನೆ. ಈ ಆತ್ಮನು ವೇದಶಾಸ್ತ್ರವನ್ನು ಹೆಚ್ಚಾಗಿ ಅಧ್ಯಯನಮಾಡಿ ಕೇವಲ ಪ್ರವಚನವನ್ನು ಮಾಡುವುದರಿಂದ ಸಿಕ್ಕುವವನಲ್ಲ. ಮೇಧೆಯಿಂದ (ಬುದ್ಧಿವಂತಿಕೆ) ಸಿಕ್ಕುವವನೂ ಅಲ್ಲ. ಆದರೆ, ಬಲ, ಅಪ್ರಮಾದ

ಸನ್ಯಾಸ, ಜ್ಞಾನ ಇವುಗಳಿಂದ ತತ್ಪರನಾಗಿ ಯಾವ ವಿದ್ವಾಂಸನು ಧ್ಯಾನರೂಪವಾದ ಪ್ರಯತ್ನವನ್ನು ಮಾಡುವನೋ ಅವನಿಗೆ ಮಾತ್ರ ಲಭ್ಯನು ಎಂದು ಖಚಿತವಾಗಿ ತಿಳಿಸಿದೆ.

ಈ ವಿಧವಾದ ಬ್ರಹ್ಮಸಾಕ್ಷಾತ್ಕಾರದ ನಿಜವಾದ ಸಾಧನಗಳಾವುವೆಂದರೆ,

**ಸತ್ಯೇನ ಲಭ್ಯಸ್ತಪಸಾ ಹ್ಯೇಷ ಆತ್ಮಾ ಸಮ್ಯಗ್‌ಜ್ಞಾನೇನ ಬ್ರಹ್ಮಚರ್ಯೇಣ ನಿತ್ಯಂ ।**
**ಅಂತಃಶರೀರೇ ಜ್ಯೋತಿರ್ಮಯೋ ಹಿ ಶುಭ್ರೋ ಯ ಪಶ್ಯಂತಿ ಯತಯಃ ಕ್ಷೀಣದೋಷಾಃ ॥**
(ಮು. ೩-೧-೫)

ಈ ಆತ್ಮನು ನಿತ್ಯವಾಗಿ ಸತ್ಯದಿಂದಲೂ ತಪಸ್ಸಿನಿಂದಲೂ ಸರಿಯಾದ ಜ್ಞಾನದಿಂದಲೂ ಬ್ರಹ್ಮಚರ್ಯೆಯಿಂದಲೂ ಲಭ್ಯನಾಗುವನು. ಅಂತಶ್ಶರೀರದಲ್ಲಿ ಇವನು ಜ್ಯೋತಿರ್ಮಯನಾಗಿಯೂ ಶುಭ್ರನಾಗಿಯೂ ಇರುವನು. ನಿದಿಧ್ಯಾಸನ ಪೂರ್ವಕವಾದ ತಪಸ್ಸಿನಿಂದ ಕ್ಷೀಣದೋಷರಾದ ಯತಿಗಳು ಮಾತ್ರ ಈ ಅಂತರಾತ್ಮನ ಸಾಕ್ಷಾತ್ಕಾರವನ್ನು ಪಡೆಯಲರ್ಹರಾಗಿ ರುವರು. ಈರೀತಿ ಮನನವೂ ನಿದಿಧ್ಯಾಸನವೂ ಇಲ್ಲದೆ ಕೇವಲ ಶ್ರುತಿವಾಕ್ಯದ ಶ್ರವಣದಿಂದಲೇ ತೃಪ್ತರಾಗುವವರು ಪೂರ್ಣವಾದ ಬ್ರಹ್ಮಜ್ಞಾನವಿಲ್ಲದೆ ಸಂದಿಗ್ಧಾವಸ್ಥೆಯಲ್ಲಿರುತ್ತಾರೆಂಬುದೇ '**ನ ವಿಜಾನಾಮಿ**' ಎಂದು ಪ್ರಕೃತವಾದ ಋಕ್ಕಿನ ಪರಿದೇವನಾ ವಾಕ್ಯದ ಅರ್ಥವೆಂದು ಸಾಯಣರು ತಿಳಿಸಿದ್ದಾರೆ. ಸಕಲಶಾಸ್ತ್ರಪಾರಂಗತನಾದರೂ ಸಹ ಆತ್ಮತತ್ತ್ವವನ್ನರಿಯದ ವಿದ್ಯೆಯು ಪೂರ್ಣವಾದ ವಿದ್ಯೆಯಾಗಲಾರದೆಂದು ಛಾಂದೋಗ್ಯೋಪನಿಷತ್ತಿನಲ್ಲಿ ನಾರದನಿಗೂ ಸನತ್ಕುಮಾರನಿಗೂ ನಡೆದ ಸಂಭಾಷಣೆಯಲ್ಲಿ ನಾರದನು,

**"ಸೋಽಹಂ ಭಗವೋ ಮಂತ್ರವಿದೇವಾಸ್ಮಿ ನಾತ್ಮವಿಚ್ಛ್ರುತಂ ಹ್ಯೇವ ಮೇ ಭಗವದ್ದೃಶೇಭ್ಯಃ ತರತಿ ಶೋಕಮಾತ್ಮವಿತ್ ಸೋಽಹಂ ಭಗವಃ ಶೋಚಾಮಿ ತಂ ಮಾ ಭಗವಾಞ್ಛೋಕಸ್ಯ ಪಾರಂ ತಾರಯತ್ವಿತಿ ॥"** (ಛಾ. ಉ. ೭-೧-೩)

"ನಾನು ಆಯಾ ಶಾಸ್ತ್ರಗಳ ಮಂತ್ರೋಚ್ಚಾರಣೆಯನ್ನು ಮಾತ್ರ ತಿಳಿದಿದ್ದೇನೆ. ಆತ್ಮತತ್ತ್ವಜ್ಞಾನವಿಲ್ಲದೇ ಸಂಸಾರ ದುಃಖದಿಂದ ಮುಕ್ತಿಯಿಲ್ಲ" ಎಂದು ಪರಿತಪಿಸುವುದನ್ನು ಹಿಂದೆ ಇದೇ ಸೂಕ್ತದ ೫ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ಉದಹರಿಸಿದೆ. (ಪುಟ 230) ಈ ವಿಧವಾದ ಸಂದಿಗ್ಧಾವಸ್ಥೆಯನ್ನೂ ಪರಿತಾಪವನ್ನೂ "**ನಿಣ್ಯಃ ಸಂನದ್ಧೋ ಮನಸಾ ಚರಾಮಿ**" । ಎಂದಿದೆ. ಇದನ್ನು ಸಾಯಣರು ವಿವರಿಸುತ್ತಾ "**ಅವಿದ್ಯಾಕಾಮಕರ್ಮಭಿಃ ಸಮ್ಯಗ್‌ಬದ್ಧೋ ವೇಷ್ಟಿತಃ । ಅತ ಏವ ಭಾವನಾಸಹಿಷ್ಣುನಾ ಬಹಿರ್ಮುಖೇನ ವಿಕ್ಷಿಪ್ತೇನ ಚೇತಸಾ ಯುಕ್ತಃ ಸಂಚರಾಮಿ ಸಂಸಾರೇ । ಇಂದ್ರಿಯಪರವಶ ಏವ ಸನ್ ಸಂಸಾರೇ ದುಃಖಮನುಭವಾಮಿ**" ಅವಿದ್ಯೆಯಿಂದಲೂ ಅದರಿಂದ ಉತ್ಪನ್ನವಾದ ಕಾಮ, ರಾಗ, ದ್ವೇಷ ಇತ್ಯಾದಿಗಳಿಂದ ಕೂಡಿದ ಕರ್ಮಗಳಿಂದಲೂ, ಬಂಧಿತನಾಗಿಯೂ, ಅಂತರ್ಧ್ಯಾನವಿಲ್ಲದೇ, ಬಾಹ್ಯಪ್ರವೃತ್ತಿಗಳಿಂದ ಕೂಡಿದ ಚೇತಸ್ಸಿನಿಂದ ಕೂಡಿಯೂ ಸಂಸಾರದ ದುಃಖವನ್ನನುಭವಿಸುತ್ತಿದ್ದೇನೆ ಎಂದು ತಾತ್ಪರ್ಯವೆಂದು ತಿಳಿಸಿದ್ದಾರೆ. ಇಲ್ಲಿ,

**ನಿಣ್ಯಃ**—ಎಂಬ ಪದಕ್ಕೆ ಅವಿದ್ಯೆಯಿಂದ ಆವೃತನಾಗಿ ಎಂದರ್ಥ. **ನಿಣ್ಯಂ, ಸಸ್ವಃ, ಸನುತಃ** ಇತ್ಯಾದಿ ೬ ಅಂತರ್ಹಿತನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೨೫) ಈ ಪದಕ್ಕೆ ಗೂಢವಾಗಿರುವುದು ಎಂಬರ್ಥವನ್ನು ಕೊಡುವ ಸಂದರ್ಭಗಳಲ್ಲಿ ನಿಣ್ಯಶಬ್ದದ ಪ್ರಯೋಗವನ್ನು ಋಕ್ಸಂಹಿತೆಯಲ್ಲಿ ಅನೇಕ ಕಡೆಗಳಲ್ಲಿ ನೋಡಬಹುದು. ಉದಾಹರಣೆಗೆ—

**ಕವಿರ್ನ ನಿಣ್ಯಂ ವಿದಥಾನಿ ಸಾಧನ್‌ವೃಷಾ ಯತ್ಸೇಕಂ ವಿಪಿಪಾನೋ ಅರ್ಚಾತ್ ।**
**ದಿವ ಇತ್ಥಾ ಜೀಜನತ್ಸಪ್ತ ಕಾರೂನಹ್ನಾ ಚಿಚ್ಚಕ್ರುರ್ವಯುನಾ ಗೃಣಂತಃ ॥** (ಋ. ಸಂ. ೪-೧೬-೩)

ಎಂಬಲ್ಲಿ ಕವಿಯ ದೃಷ್ಟಿಗೆ ಮಾತ್ರ ಗೋಚರವಾಗುವುದು; ಸಾಧಾರಣವಾದ ಮತಿಗೆ ಗೋಚರವಾಗದೇ ರಹಸ್ಯವಾಗಿರುವುದು ಎಂದರ್ಥವಾಗಿರುತ್ತದೆ. ಇನ್ನು ಕೆಲವು ಸಂದರ್ಭಗಳಲ್ಲಿ ತತ್ತ್ವಾನ್ವೇಷಣವನ್ನು ಮಾಡುವಾಗ ತತ್ತ್ವವು ಅತಿ ನಿಗೂಢವಾಗಿದ್ದು ಸಮಸ್ಯೆಯು ಬಹಳ ಜಟಿಲವಾದದ್ದೂ ತೊಡಕಾದುದೂ ಆದಾಗ ಮನಸ್ಸಿನ ಕ್ಷೋಭೆಯನ್ನು ಸೂಚಿಸುವಾಗ ಈ ಶಬ್ದದ ಪ್ರಯೋಗವಿದೆ. ಪ್ರಕೃತವಾದ ಋಕ್ಕಿನಲ್ಲಿ ಅದಕ್ಕೆ ನಿದರ್ಶನವಿದೆ. ಅವಿದ್ಯೆಯಿಂದ ಚೇತಸ್ಸು ಆವೃತವಾಗಿ, ಅಧ್ಯಾತ್ಮಜ್ಞಾನವಿಲ್ಲದೆ, ಆತ್ಮನ ವ್ಯವಹಾರಗಳೆಲ್ಲವೂ ಬಾಹ್ಯವಾದ ವಿಷಯಗಳಿಂದಲೇ ಆಕರ್ಷಿಸಲ್ಪಟ್ಟರೆ ಆಗ ಕೇವಲ ಬಾಹ್ಯವಿಷಯಗಳಿಂದಲೇ ಬಂಧಿತವಾಗಿ ಆತ್ಮನು ಚಲಿಸುತ್ತಿರುತ್ತದೆ ಎಂದು "**ಸಂನದ್ಧೋ ಮನಸಾ ಚರಾಮಿ**" ಎಂಬ ವಾಕ್ಯದಿಂದ ತಿಳಿಸಿದೆ. ಅಜ್ಞಾನಾವೃತವಾದ ಚೇತಸ್ಸು ಪರಿತಪಿಸುವುದನ್ನು ಈಶಾದ್ಯುಪನಿಷತ್ತುಗಳಲ್ಲಿ ವಿಶದವಾಗಿ ವಿವರಿಸಿದೆ.

**ಅಂಧಂ ತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ ।**
**ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾಗ್‌ಂ ರತಾಃ ॥** (ಈಶ ಉ. ೯)

ಯಾರು ಆತ್ಮಜ್ಞಾನವಿಲ್ಲದೆ ಕೇವಲ ಕರ್ಮರತರಾಗಿ ಅವಿದ್ಯಾರೂಪವಾದ ಕರ್ಮವನ್ನು ಮಾತ್ರ ಆಚರಿಸುತ್ತಾರೆಯೋ ಅವರೂ, ತಪೋರೂಪವಾದ ಕರ್ಮವನ್ನು ತ್ಯಜಿಸಿ ಕೇವಲ ಶಾಸ್ತ್ರಜನ್ಯವಾದ ಜ್ಞಾನದಲ್ಲಿ ಮಾತ್ರ ಆಸಕ್ತರಾಗಿರುತ್ತಾರೋ ಅವರಿಬ್ಬರೂ ಸಹ ಕಗ್ಗತ್ತಲೆಯನ್ನು ಪ್ರವೇಶಿಸುತ್ತಾರೆ.

**ಅವಿದ್ಯಾಯಾಮಂತರೇ ವರ್ತಮಾನಾಃ ಸ್ವಯಂಧೀರಾಃ ಪಂಡಿತಂಮನ್ಯಮಾನಾಃ ।**
**ದಂದ್ರಮ್ಯಮಾಣಾಃ ಪರಿಯಂತಿ ಮೂಢಾ ಅಂಧೇನೈವ ನೀಯಮಾನಾ ಯಥಾಂಧಾಃ ॥**
(ಕಠ. ೧-೨-೫)

**ಅವಿದ್ಯಾಯಾಂ ಬಹುಧಾ ವರ್ತಮಾನಾ ವಯಂ ಕೃತಾರ್ಥಾ ಇತ್ಯಭಿಮನ್ಯಂತಿ ಬಾಲಾಃ ।**
**ಯತ್ಕರ್ಮಿಣೋ ನ ಪ್ರವೇದಯಂತಿ ರಾಗಾತ್ತೇನಾತುರಾಃ ಕ್ಷೀಣಲೋಕಾಶ್ಚ್ಯವಂತೇ ॥**
(ಮುಂ. ಉ. ೧-೨-೯)

ಇತ್ಯಾದಿ ಕಠ ಮತ್ತು ಮುಂಡಕೋಪನಿಷತ್ತುಗಳಲ್ಲಿ ವರ್ಣಿತವಾಗಿರುವ ಅವಿದ್ಯಾದೋಷದ ಫಲವನ್ನೂ, ಜೀವನು ಬ್ರಹ್ಮಜ್ಞಾನವಿಲ್ಲದೆ ಪುನರ್ಜನ್ಮಮರಣಾದಿಗಳಿಗೆ ಭಾಜನವಾಗಿ ಪದೇ ಪದೇ ಸಂಸಾರದಲ್ಲಿ ತೊಳಲುತ್ತಿರುವುದನ್ನೂ ಸೂಚಿಸುತ್ತಾ ಈ ಅವಸ್ಥೆಯನ್ನು ಪ್ರಕೃತವಾದ ಋಕ್ಕಿನಲ್ಲಿ ವರ್ಣಿಸಿದೆ. ಋಕ್ಕಿನ ಪೂರ್ವಾರ್ಧದಲ್ಲಿ ಎರಡು ವಿಧವಾದ ಅಭಿಪ್ರಾಯವು ಹೇಳಲ್ಪಟ್ಟಿದೆ. ಮೊದಲನೆಯದಾಗಿ, ಮನನನಿದಿಧ್ಯಾಸನಗಳಿಲ್ಲದ ಕೇವಲ ಶಸ್ತ್ರಜ್ಞಾನವು "ಅಹಂ ಬ್ರಹ್ಮಾಸ್ಮಿ" ಎಂಬ ತತ್ತ್ವಜ್ಞಾನದ ಸಾಕ್ಷಾತ್ಕಾರಕ್ಕೆ ಸಹಾಯಕವಾಗುವುದಿಲ್ಲ. ಎರಡನೆಯದಾಗಿ ತತ್ತ್ವಜ್ಞಾನದ ನಿಜವಾದ ಸಾಕ್ಷಾತ್ಕಾರವಿಲ್ಲದೆ ಸಂಸಾರದಿಂದ ಮುಕ್ತಿಯಿಲ್ಲ. ಆಗ ವಿಷಯನಿಬಂಧನಗಳಿಗೆ ಸಿಕ್ಕಿ ಆತ್ಮನು ಅಲೆಯುತ್ತಿರಬೇಕು. ಆದುದರಿಂದ ಧ್ಯಾನಾದಿಗಳಿಂದ ಆತ್ಮಸಾಕ್ಷಾತ್ಕಾರವನ್ನು ಪಡೆಯಬೇಕೆಂಬುದೇ ಮುಖ್ಯವಾದ ಗುರಿಯಾಗಿರಬೇಕು. ಈ ಸಾಕ್ಷಾತ್ಕಾರಕ್ಕೆ ಮುಖ್ಯವಾದ ಮಾರ್ಗವೇನೆಂದರೆ ಅದನ್ನು ಕಠೋಪನಿಷತ್ತಿನಲ್ಲಿ ಈರೀತಿ ತಿಳಿಸಿದೆ.

**ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ ಶೃಣ್ವಂತೋಽಪಿ ಬಹವೋ ಯಂ ನ ವಿದ್ಯುಃ ।**
**ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾಽಶ್ಚರ್ಯೋ ಜ್ಞಾತಾ ಕುಶಲಾನುಶಿಷ್ಟಃ ॥**
**ನ ನರೇಣಾವರೇಣ ಪ್ರೋಕ್ತ ಏಷ ಸುವಿಜ್ಞೇಯೋ ಬಹುಧಾ ಚಿಂತ್ಯಮಾನಃ ।**
**ಅನನ್ಯಪ್ರೋಕ್ತೇ ಗತಿರತ್ರ ನಾಸ್ತ್ಯಣೀಯಾನ್ ಹ್ಯತರ್ಕ್ಯಮಣುಪ್ರಮಾಣಾತ್ ॥**

**ನೈಷಾ ತರ್ಕೇಣ ಮರಾಪನೇಯಾ ಪ್ರೋಕ್ತಾನ್ಯೇನೈವ ಸುಜ್ಞಾನಾಯ ಪ್ರೇಷ್ಠ ।**
**ಯಾಂ ತ್ವಮಾಪಃ ಸತ್ಯಧೃತಿರ್ಬತಾಸಿ ತ್ವಾದೃಙ್ ನೋ ಭೂಯಾನ್ನ ಚಿಕೇತಃ ಪ್ರಷ್ಟಾ ॥**
(ಕಠ. ೧-೨-೭ ರಿಂದ೯)

ಯಾವ ಈ ಅಂತರಾತ್ಮರೂಪದಲ್ಲಿ ಬ್ರಹ್ಮವು ಬಹುಜನರ ಶ್ರವಣಕ್ಕೂ ಸಿಕ್ಕುವುದಿಲ್ಲವೋ, ಶ್ರುತಿಶ್ರವಣಾನಂತರವೂ ಅನೇಕರ ಅರಿವಿಗೆ ನಿಲುಕದೇ ಇರುತ್ತದೆಯೋ, ಅಂತಹ ಈ ಪರಬ್ರಹ್ಮದ ಸ್ವರೂಪವನ್ನು ಸಾಕ್ಷಾತ್ಕಾರಮಾಡಿಕೊಂಡು ವಿವರಿಸುವವನು ಬಹಳ ವಿರಳ. ಅದನ್ನು ಪಡೆಯತಕ್ಕವನು ಬಹುಕುಶಲನು. ಸಾಧಾರಣವಾದ ಬುದ್ಧಿಯುಳ್ಳ ಮಾನವನಿಂದ ಈ ಆತ್ಮನ ಸ್ವರೂಪವು ವರ್ಣಿತವಾಗತಕ್ಕದ್ದಲ್ಲ. ಪೂರ್ಣವಾಗಿ ಸಾಕ್ಷಾತ್ಕಾರವನ್ನು ಪಡೆದಿರುವವನಿಗೆ ಮಾತ್ರ ಇದರ ಅನುಭವವು ಸಾಧ್ಯ. ಅವನು ಮಾತ್ರ ಇತರರಿಗೆ ಗುರುವಾಗಬಲ್ಲನು. ತರ್ಕಾದಿಗಳಿಂದ ನಿಲುಕದೇ ಇರುವ ಈ ಬ್ರಹ್ಮಜ್ಞಾನವನ್ನು ಪಡೆಯಲು ಸತ್ಯಧೃತಿಯಾದ ನಚಿಕೇತಸ್ಸೇ ಮುಂತಾದವರಿಂದ ಸಾಧ್ಯವೇ ಹೊರತು ಉಳಿದವರಿಂದ ಸಾಧ್ಯವಿಲ್ಲವೆಂದು ಖಂಡಿತವಾಗಿಯೂ ತಿಳಿಸಿದೆ ಅದನ್ನೇ ಸಾಯಣರು "ಸರ್ವೈಕಾತ್ಮ್ಯರೂಪಮಾನುಭವಿಕಮಸ್ತಿ ತದ್ವದೇವ" ಸ್ವಾನುಭವರೂಪವಾದ ಪೂರ್ಣಜ್ಞಾನವೆಂದು ತಿಳಿಸಿದ್ದಾರೆ.

"ಯದಾ ಮಾಗನ್ ಪ್ರಥಮಜಾ ಋತಸ್ಯಾದಿದ್ವಾಚೋ ಅಶ್ನುವೇ ಭಾಗಮಸ್ಯಾಃ ॥

ಎಂಬ ಇದೇ ಋಕ್ಕಿನ ಉತ್ತರಾರ್ಧದಲ್ಲಿ ಸಾಕ್ಷಾತ್ಕಾರಪೂರ್ವಕವಾದುದೂ ಪೂರ್ಣವಾದುದೂ ಆದ ಬ್ರಹ್ಮಜ್ಞಾನವು ಲಭಿಸಿದಕೂಡಲೇ ಅದರ ರಸವನ್ನು ಅನುಭವಿಸುತ್ತೇನೆ ಎಂದು ಅನುಭವದ ಸ್ವರೂಪವನ್ನು ತಿಳಿಸಿದೆ. ಆ ಅನುಭವದ ಸ್ವರೂಪವೇನೆಂದರೆ,

**ಸಂಪ್ರಾಪ್ಯೈನಮೃಷಯೋ ಜ್ಞಾನತೃಪ್ತಾಃ ಕೃತಾತ್ಮಾನೋ ವೀತರಾಗಾಃ ಪ್ರಶಾಂತಾಃ ॥**
**ತೇ ಸರ್ವಗಂ ಸರ್ವತಃ ಪ್ರಾಪ್ಯಧೀರಾ ಯುಕ್ತಾತ್ಮಾನಃ ಸರ್ವಮೇವಾವಿಶಂತಿ ॥** (ಮು. ಉ. ೩-೨-೫)

ಈ ಪರಮಾತ್ಮನನ್ನು ಅರಿತ ಋಷಿಗಳು ಅದೇ ಜ್ಞಾನದಿಂದಲೇ ತೃಪ್ತರಾಗಿಯೂ, ಪರಬ್ರಹ್ಮಸ್ವರೂಪದಿಂದಲೇ ಏರ್ಪಟ್ಟಿರುವ ಆತ್ಮವುಳ್ಳವರಾಗಿಯೂ, ವೀತರಾಗರಾಗಿಯೂ, ಪ್ರಶಾಂತಚಿತ್ತರಾಗಿಯೂ ಇರುವರು.

**ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ ಗುಹಾಹಿತಂ ಗಹ್ವರೇಷ್ಠಂ ಪುರಾಣಂ ।**
**ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ ಹರ್ಷಶೋಕೌ ಜಹಾತಿ ॥** (ಕಠ. ೧-೨-೧೨)

ಬಹುಶ್ರಮದಿಂದ ಮಾತ್ರ ಅರಿಯಲು ಸಾಧ್ಯವಿರುವವನೂ ಅತ್ಯಂತ ಗೂಢನೂ, ಹೃದಯರೂಪವಾದ ಗುಹೆಯಲ್ಲಿರುವವನೂ, ಗಹ್ವರದಲ್ಲಿರುವವನೂ, ಪುರಾಣನೂ ಆದ ಬ್ರಹ್ಮನನ್ನು ಅಧ್ಯಾತ್ಮಯೋಗದಿಂದ ಸಾಕ್ಷಾತ್ಕಾರಮಾಡಿಕೊಂಡ ಧೀರನು ಹರ್ಷಶೋಕಗಳನ್ನು ಬಿಡುತ್ತಾನೆ. "ಸಂನದ್ಧೋ ಮನಸಾ ಚರಾಮಿ" ಎಂಬ ಪರಾಙ್ಮುಖವಾದ ಪ್ರವೃತ್ತಿಯೂ, ಅದರ ಫಲವಾದ ರಾಗದ್ವೇಷಗಳೂ ಇಲ್ಲದೇ ಪ್ರಶಾಂತಚಿತ್ತನಾಗಿರುತ್ತಾನೆ.

**ಯಸ್ತು ಸರ್ವಾಣಿ ಭೂತಾನ್ಯಾತ್ಮನ್ಯೇವಾನುಪಶ್ಯತಿ । ಸರ್ವಭೂತೇಷು ಚಾತ್ಮಾನಂ ತತೋ ನ ವಿಜುಗುಪ್ಸತೇ ॥ ಯಸ್ಮಿನ್ಸರ್ವಾಣಿ ಭೂತಾನ್ಯಾತ್ಮೈವಾಭೂದ್ವಿಜಾನತಃ । ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ ॥** (ಈಶ. ಉ. ೬-೭)

ಯಾವ ಮಹಾಜ್ಞಾನಿಯು 'ಅಹಂ ಬ್ರಹ್ಮಾಸ್ಮಿ' ಎಂಬ ಅನುಭವರೂಪವಾದ ಜ್ಞಾನದಿಂದ ಸಕಲ ಭೂತಗಳನ್ನೂ ತನ್ನ ಆತ್ಮನಲ್ಲಿಯೇ ಕಾಣುವನೋ, ಮತ್ತು ಎಲ್ಲಾ ಭೂತಗಳಲ್ಲಿಯೂ ತನ್ನ ಆತ್ಮನನ್ನು ಕಾಣುವನೋ ಅವನಿಗೆ ಜುಗುಪ್ಸೆ ಯೆಂಬುದೇ ಇಲ್ಲ. ತಾನೇ ಬ್ರಹ್ಮರೂಪನು, ಸಕಲ ವಿಶ್ವವೂ ತನ್ನ ರೂಪವೇ ಆಗಿದೆ ಎಂಬ ಅದ್ವೈತಾನುಭವವು ಲಭಿಸಿದವನಿಗೆ ಮೋಹವೂ ಇಲ್ಲ, ಶೋಕವೂ ಇಲ್ಲ. ಅಂತಹ ಪ್ರಶಾಂತಚಿತ್ತನಿಗೆ ಬ್ರಹ್ಮಾನಂದಾನುಭವವು ಲಭಿಸುತ್ತದೆ ಎಂಬುದೇ "**ಅಸ್ಮಿನ್ನೇವ ಭಾಗಮುಸ್ಮಾಕಃ**" ಎಂಬ ಸಂಹಿತಾವಾಕ್ಯದ ಅಭಿಪ್ರಾಯವಾಗಿರುತ್ತದೆ.



**ಅಪಾಙ್ ಪ್ರಾಙೇತಿ ಸ್ವಧಯಾ ಗೃಭೀತೋಽಮರ್ತ್ಯೋ ಮರ್ತ್ಯೇನಾ ಸಯೋನಿಃ । ತಾ ಶಶ್ವಂತಾ ವಿಷೂಚೀನಾ ವಿಯಂತಾ ನ್ಯನ್ಯಂ ಚಿಕ್ಯುರ್ನ ನಿ ಚಿಕ್ಯುರನ್ಯಂ ॥ ೩೮ ॥**

ಮರಣಹಿತನಾದ ಆತ್ಮನು ಮರಣಧರ್ಮವುಳ್ಳ ದೇಹದೊಡನೆ ಸಮಾನಸ್ಥಾನವುಳ್ಳವನಾಗಿಯೂ ವಿಷಯ ಸುಖೇಚ್ಛೆ ಯಿಂದ ಆವರಿಸಲ್ಪಟ್ಟವನಾಗಿಯೂ, ಅಧೋಮುಖನಾಗಿಯೂ, ಸತ್ಕರ್ಮಗಳ ಫಲವಾಗಿ ಸ್ವರ್ಗಾಭಿಮುಖನಾಗಿಯೂ ಹೋಗು ತ್ತಾನೆ. ಆ ದೇಹಾತ್ಮಗಳೆರಡೂ ಯಾವಾಗಲೂ ಈ ಲೋಕದಲ್ಲಿ ಒಟ್ಟಿಗೆ ಓಡಾಡುವವರಾಗಿಯೂ ಅವರವರ ಕರ್ಮಾನುಭವಗ ಳಿಗಾಗಿ ಲೋಕಾಂತರಗಳಲ್ಲೂ ಸಂಚರಿಸುವವರಾಗಿಯೂ ಇದ್ದಾರೆ. ದೇಹಸಂಬಂಧಿಯಾದವನನ್ನು ಜನರು ಅರಿಯಬಲ್ಲರು. ದೇಹಾತಿರಿಕ್ತನಾದವನನ್ನು (ಆತ್ಮನನ್ನು) ಅರಿಯಲಾರರು.

ಅಮರ್ತ್ಯನಾದ ಆತ್ಮವು ಮರ್ತ್ಯವಾದ ದೇಹದೊಡನೆ ಸಂಬಂಧವನ್ನಿಟ್ಟುಕೊಂಡಿರುತ್ತದೆ. ದೇಹಕೃತವಾದ ಕರ್ಮಫಲ ಗಳನ್ನನುಭವಿಸುವುದಕ್ಕಾಗಿ ಪುನಃಪುನಃ ಜನ್ಮಾಂತರಗಳನ್ನು ಹೊಂದುವುದು. ಮತ್ತು ಈ ಕರ್ಮಾನುಭವಗಳ ಕಾಲಗಳಲ್ಲೆಲ್ಲಾ ದೇಹದೊಡನೆ ಸಂಬಂಧವಿದ್ದೇ ಇರಬೇಕಾದುದರಿಂದ ದೇಹಕ್ಕೆ ಹುಟ್ಟುತ್ತದೆ, ಸಾಯುತ್ತದೆ ಎಂಬ ವ್ಯವಹಾರವಿರುವಂತೆ ಆತ್ಮ ನಿಗೂ ಇರುತ್ತದೆ. ಆದುದರಿಂದಲೇ "**ಸಯೋನಿಃ**" ಸಮಾನೋತ್ಪತ್ತಿಃ । **ಸಹವಾಸೇನ ಸ್ವಸ್ಮಿನ್ನಪಿ ಉತ್ಪತ್ತಿರು- ಪಚರ್ಯತೇ** । ನಿಜವಾಗಿಯೂ ಶುದ್ಧನಾದ ಆತ್ಮನಿಗೆ ಜನ್ಮಮರಣಗಳಿಲ್ಲದಿದ್ದರೂ ದೇಹಾಂತರ್ಗತನಾಗಿ ದೈಹಿಕನಾದ ಸಂಬಂಧ ವಿರುವುದರಿಂದ ಈ ಪ್ರತೀತಿಯಿದೆಯೆಂದು ಸಾಯಣರು ವಿವರಿಸಿದ್ದಾರೆ.

ಈ ಋಕ್ಕಿನಲ್ಲಿ ಅಮರ್ತ್ಯನೆಂದು ವರ್ಣಿತವಾಗಿರುವುದು ಜೀವಾತ್ಮನೇ ಅಥವಾ ಪರಮಾತ್ಮನೇ? ಪರಮಾತ್ಮನಾದರೆ ದೇಹಸಂಬಂಧವೂ, ದೇಹದೊಡನೆ ಜರಾಮರಣಾದಿಗಳೂ ಹೇಗೆ ಸಂಬಂಧಿಸುತ್ತವೆ? ಜೀವಾತ್ಮನಾದರೆ ಜೀವನಿಗೂ ಈಶ್ವರನಿಗೂ ಭೇದವುಂಟೇ ಇತ್ಯಾದಿ ಪ್ರಶ್ನೆಗಳು ಸಂಭವಿಸುತ್ತವೆ. ನಿರ್ಲಿಪ್ತನಾದ ಈಶ್ವರನು ಕರ್ಮಬಂಧಿತನಾಗುತ್ತಾನೆಂಬುದರಲ್ಲಿಯೂ ಶ್ರುತಿವಾಕ್ಯಗಳಲ್ಲೇ ವಿರೋಧವು ಕಾಣುತ್ತದೆ. ಆದುದಂದ ಇಲ್ಲಿ ವಿಷಯವನ್ನು ಕೂಲಂಕಷವಾಗಿ ವಿಮರ್ಶಿಸಬೇಕು. ಈಋಕ್ಕಿನಲ್ಲಿ ಹೇಳಿರುವ ವಿಷಯಗಳನ್ನು ನಾಲ್ಕು ಭಾಗಗಳನ್ನಾಗಿ ವಿಂಗಡಿಸಬಹುದು.

(೧) ಅಮರ್ತ್ಯನು ಮರ್ತ್ಯದೊಂದಿಗೆ ಸಯೋನಿಯಾಗಿರುವುದು,

(೨) ಮರ್ತ್ಯವಾದ ದೇಹದೊಂದಿಗೆ ಸೇರಿಕೊಂಡು ಅದರ ಕರ್ಮಾನುಗುಣವಾದ ಫಲಗಳನ್ನನುಭವಿಸಲು ಜನ್ಮಾಂತರ ಗಳನ್ನು ಹೊಂದುವುದು.

(೩)　ದೇಹಸಂಬಂಧಿಯಾದ ಆತ್ಮನು ಮಾತ್ರ ಅನುಭವಗೋಚರನಾಗುವುದು ಮತ್ತು,

(೪)　ದೇಹಾತಿರಿಕ್ತನಾದ ಆತ್ಮನು ಅನುಭವಾತೀತನಾಗಿರುವುದು.

ಈರೀತಿ ಆತ್ಮನ ಲೌಕಿಕಾಲೌಕಿಕವಾದ ಸ್ಥಿತಿಗಳನ್ನು ಸೂಕ್ಷ್ಮವಾಗಿ ತಿಳಿಸಿ, ದೇಹಾತಿರಿಕ್ತನಾದ ಆತ್ಮನ ಜ್ಞಾನವನ್ನೂ ಅನುಭವವನ್ನೂ ಧ್ಯಾನಾದಿಗಳಿಂದ ಪಡೆಯಬೇಕೆಂದು ಸೂಚಿಸಿದೆ. ಹಿಂದಿನ ಸೂಕ್ತಿಯಲ್ಲಿ ಹೇಳಿರುವಂತೆಯೇ ಇಲ್ಲಿಯೂ ಸಹ **"ದುರ್ಲಭಮಾತ್ಮಜ್ಞಾನಂ"** ಸಾಧಾರಣವಾದ ಪ್ರಯತ್ನಗಳಿಂದ ಆತ್ಮಜ್ಞಾನವು ದುರ್ಲಭವೆಂದು ತಿಳಿಸುವುದೇ ಉದ್ದಿಶ್ಯವಾಗಿದೆಯೆಂದು ಸಾಯಣರ ವಿವರಣೆಯಿದೆ.

ಅಮರ್ತ್ಯನಾದ ಆತ್ಮನು ಮರ್ತ್ಯವಾದ ದೇಹದೊಂದಿಗೆ ಸಯೋನಿಯಾಗಿರುವುದು ಎಂಬುದರ ಅರ್ಥವೇನು? ಇದು ಜೀವಾತ್ಮನೇ! ಪರಮಾತ್ಮನೇ? ಎಂಬ ಪ್ರಶ್ನೆಯು ಸಾಧ್ಯವಾದರೆ, ಇಲ್ಲಿ ಪರಮಾತ್ಮನೆಂದರ್ಥಮಾಡಿದರೂ ಅದರಲ್ಲಿ ವಿರೋಧವಿರುವುದಿಲ್ಲ. ಯಾವುದನ್ನು ವ್ಯವಹಾರದಲ್ಲಿ ವೈಯಕ್ತಿಕವಾದ ದೇಹ ಅಥವಾ ವೈಯಕ್ತಿಕವಾದ ಆತ್ಮ ಎನ್ನುತ್ತೇವೆಯೋ ಅವೆಲ್ಲವೂ ಈಶ್ವರನ ಆವಿರ್ಭಾವಗಳೇ ಆಗಿರುವುದರಿಂದ ಇಲ್ಲಿ ಅಮರ್ತ್ಯನಾದ ಪರಮಾತ್ಮನು ಮರ್ತ್ಯವಾದ ದೇಹಾದಿಗಳೊಡನೆ ಸಂಬಂಧವನ್ನು ಬೆಳೆಸುತ್ತಾನೆ ಎಂದು ಅರ್ಥಮಾಡಬಹುದು. ಅಮರ್ತ್ಯನಾದ ಈಶ್ವರನು ಮರ್ತ್ಯವಾದ ದೇಹಾದಿಗಳೊಡನೆ ಸೇರದಿದ್ದರೆ ಪ್ರಾಪಂಚಿಕವಾದ ವ್ಯವಹಾರವೇ ಇರುವುದಿಲ್ಲ. ಆದರೆ ಅನಾದ್ಯಂತವಾದ ಪ್ರಾಪಂಚಿಕವ್ಯವಹಾರದಲ್ಲಿ ಮಗ್ನನಾದ ಈಶ್ವರನೂ ಸಹ ಇದರಲ್ಲಿಯೇ ಮುಳುಗಿರುತ್ತಾನೆಯೇ ಎಂದರೆ ಅಲ್ಲ. ಈಶ್ವರನು ಅನಾದ್ಯನಂತನು ಪ್ರಾಪಂಚಿಕವ್ಯವಹಾರವು ಸಾದಿಯಾದುದು ಮತ್ತು ಸಾಂತವಾದುದು. ಅನಾದ್ಯನಂತನಾದ ಈಶ್ವರನ ಅಧೀನದಲ್ಲಿಯೂ ಅವನಲ್ಲಿ ವ್ಯಾಪ್ತವಾಗಿಯೂ ಇರುವ ಜಗತ್ತು ಆದಿಯಲ್ಲಿಯೂ ಅಂತ್ಯದಲ್ಲಿಯೂ ಅವಧಿಯೊಂದಿಗೆ ಕೂಡಿದೆ. ಈ ವಿಷಯವು **ಸತ್ಯ** ಎಂಬ ಶಬ್ದದ ನಿರ್ವಚನದಿಂದ ತಿಳಿಯುತ್ತದೆ.

**ತದೇತತ್ತ್ರ್ಯಕ್ಷರಂ ಸತ್ಯಮಿತಿ । ಸ ಇತ್ಯೇಕಮಕ್ಷರಂ । ತೀತ್ಯೇಕಮಕ್ಷರಂ । ಯಮಿತ್ಯೇಕಮಕ್ಷರಂ । ಪ್ರಥಮೋತ್ತಮೇ ಅಕ್ಷರೇ ಸತ್ಯಂ । ಮಧ್ಯತೋಽನೃತಂ । ತದೇತದನೃತಮುಭಯತಃ ಸತ್ಯೇನ ಪರಿಗೃಹೀತಂ ಸತ್ಯಭೂಯಮೇವ ಭವತಿ ॥** (ಬೃ. ಉ. ೫-೫-೧)

**ಸ, ತಿ, ಯಂ** ಎಂಬ ಮೂರು ಅಕ್ಷರಗಳಿಂದ ಕೂಡಿದ ಸತ್ಯಂ ಎಂಬ ಪದದಲ್ಲಿ ಸ ಮತ್ತು **ಯಂ** ಎಂಬ ಎರಡಕ್ಷರಗಳೂ ಸತ್ಯಾತ್ಮಕವು. (Real) ಮಧ್ಯದ **ತಿ** ಎಂಬಕ್ಷರವು ಅಸತ್ಯಾತ್ಮಕವಾದುದು (Unreal). ಆದುದರಿಂದ ಅಸತ್ಯಾತ್ಮಕವಾದ ತತ್ತ್ವವು ಎರಡು ಕಡೆಗಳಲ್ಲಿಯೂ ಸತ್ಯಾತ್ಮಕವಾದ ತತ್ತ್ವದಿಂದ ಆವೃತವಾಗಿದೆ. ಆದುದರಿಂದ ಅದೂ ಸಹ ಸತ್ಯದ ಸ್ವರೂಪವನ್ನೇ ತೋರಿಸುತ್ತದೆ. ಈ ಸತ್ಯಾಂಶವನ್ನು ತಿಳಿದವನಿಗೆ ಭಯವಿಲ್ಲ ಎಂದು ಸತ್ಯರೂಪನಾದ ಈಶ್ವರನ ಸ್ವರೂಪವನ್ನು ತಿಳಿಸಿದೆ. ಆದ್ಯಂತಗಳುಳ್ಳ ಈ ಜಗತ್ತು ಅನಾದ್ಯನಂತನಾದ ಈಶ್ವರನಿಂದ ಆವೃತವಾಗಿದೆಯೆಂದಾಯಿತು. ಆದರೆ ಆದ್ಯಂತಗಳಿದ್ದರೂ ಸಹ ಈ ಜಗತ್ತು ಸ್ವತಂತ್ರವೇ, ಈಶ್ವರಾಧೀನದಲ್ಲಿಲ್ಲವೇ ಎಂದರೆ ಜಗತ್ತು ಈಶ್ವರಸಂಕಲ್ಪದಿಂದಲೇ ಉತ್ಪನ್ನವಾದುದು ಮತ್ತು ಈಶ್ವರ ಸಂಕಲ್ಪದಿಂದಲೇ ಮಾಯವಾಗುತ್ತದೆ ಎಂಬುದೂ ಜೊತೆಯಲ್ಲಿಯೇ ಅಧ್ಯಾಹಾರ್ಯವಾಗುತ್ತದೆ ಎಂದರೆ, ಅನಾದ್ಯನಂತನಾದ ಈಶ್ವರನು ತಾನೇ ಜಗತ್ತನ್ನು ಸೃಷ್ಟಿಸಿ, ಮರ್ತ್ಯವಾದ ಜಗತ್ತಿನೊಂದಿಗೆ ತಾನೂ ಸಹ ವ್ಯವಹರಿಸುವನು ಎಂದರ್ಥ. ಆದರೆ, ಪೂರ್ಣಜ್ಞಾನವಿಲ್ಲದಿರುವವನು ಜಗದ್ವ್ಯವಹಾರದೊಡನೆ ಸೇರಿಕೊಂಡಿರುವ ಪರಮಾತ್ಮನೇ ತಾತ್ತ್ವಿಕವಾದ ಪರಮಾತ್ಮನೆಂದು ತಿಳಿಯುವನು. ಅದು ತಪ್ಪು. ಪರಮಾತ್ಮನ ಸ್ವರೂಪವೇನು? ಮರ್ತ್ಯರೂಪವಾದ ಜಗತ್ಸೃಷ್ಟಿಯು ಹೇಗೆ? ನಾಮರೂಪಾದಿಗಳಿಂದ ಕೂಡಿದ ಜಗತ್ತಿನಲ್ಲಿ ವ್ಯವಹಾರಗಳಲ್ಲಿ ತೊಡಗಿರುವ ಆತ್ಮನ ಚಲನವಲನಗಳೇನು? ಇವನ್ನೆಲ್ಲಾ ಸೂಕ್ಷ್ಮವಾಗಿ

ಅರಿಯಬೇಕು. ಮೊದಲು ಅಮರ್ತ್ಯನಾದ ಪರಮಾತ್ಮನು ಮರ್ತ್ಯವಾದ ಜಗತ್ತಿನೊಡನೆ ಸಂಬಂಧವನ್ನು ಹೊಂದಿದುದು ಹೇಗೆಂದು ತಿಳಿಯಬೇಕು.

**ಸೋಽಕಾಮಯತ । ಬಹು ಸ್ಯಾಂ ಪ್ರಜಾಯೇಯೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಇದಗ್ಂ ಸರ್ವಮಸೃಜತ । ಯದಿದಂ ಕಿಂಚ । ತತ್ಸೃಷ್ಟ್ವಾ । ತದೇವಾನುಪ್ರಾವಿಶತ್ ತದನು ಪ್ರವಿಶ್ಯ । ಸಚ್ಚ ತ್ಯಚ್ಚಾಭವತ್ । ನಿರುಕ್ತಂ ಚಾನಿರುಕ್ತಂ ಚ । ನಿಲಯನಂ ಚಾನಿಲಯನಂ ಚ । ವಿಜ್ಞಾನಂ ಚಾವಿಜ್ಞಾನಂ ಚ । ಸತ್ಯಂ ಚಾನೃತಂ ಚ ಸತ್ಯಮಭವತ್ ॥**

(ತೈ. ಉ. ೨-೬)

ಪರಬ್ರಹ್ಮವು ತಾನು ವೃದ್ಧಿಯಾಗಿ ನಾನಾರೂಪಗಳಲ್ಲಿ ಬೆಳೆಯಬೇಕೆಂದು ಇಚ್ಛಿಸಿತು. ಅನಂತರ ತನ್ನ ತಪಶ್ಶಕ್ತಿಯಿಂದ ಸಕಲ ಭೂತಗಳನ್ನೂ ಸೃಷ್ಟಿಸಿತು. ಅನಂತರ ತನ್ನಿಂದ ಸೃಷ್ಟವಾದ ಜಗತ್ತನ್ನೇ ಪ್ರವೇಶಿಸಿತು. ಆದರಿಂದ ಸತ್, ತ್ಯತ್ ಎಂದರೆ ಮೂರ್ತ ಮತ್ತು ಅಮೂರ್ತ ಎಂಬ ವಿಭಾಗವೂ, ನಿಲಯನ, ಅನಿಲಯನ ಎಂದರೆ ಗೂಡಿನ ರೂಪದ ಆಶ್ರಯ ಮತ್ತು ಅದನ್ನು ಆಶ್ರಯಿಸತಕ್ಕದ್ದು ಎಂಬ ವಿಭಾಗವೂ, ಚೇತನ ಮತ್ತು ಅಚೇತನ ಎಂಬ ವಿಭಾಗವೂ ಉಂಟಾದವು.

**ಸ ಯಥೋರ್ಣನಾಭಿಸ್ತಂತುನೋಚ್ಚರೇದ್ಯಥಾಗ್ನೇಃ ಕ್ಷುದ್ರಾ ವಿಸ್ಫುಲಿಂಗಾ ವ್ಯುಚ್ಚರಂತ್ಯೇವಮೇವಾಸ್ಮಾದಾತ್ಮನಃ ಸರ್ವೇ ಪ್ರಾಣಾಃ ಸರ್ವೇ ಲೋಕಾಃ ಸರ್ವೇ ದೇವಾಃ ಸರ್ವಾಣಿ ಭೂತಾನಿ ವ್ಯುಚ್ಚರಂತಿ ತಸ್ಯೋಪನಿಷತ್ಸತ್ಯಸ್ಯ ಸತ್ಯಮಿತಿ ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಂ ॥** (ಬೃ. ಉ. ೨-೧-೨೦)

ತಂತುವಾಯುವಿನಿಂದ (ಜೇಡರ ಹುಳು) ತಂತುಗಳು ಸ್ವಾಭಾವಿಕವಾಗಿಯೇ ಹೊರಬಂದು ಬಲೆಯು ನಿರ್ಮಿತವಾಗುವಂತೆಯೂ, ಅಗ್ನಿಯಿಂದ ಕಣಗಳು ಹೊರಗೆ ಬಂದು ತೇಜೋರಾಶಿಗಳಾಗುವಂತೆಯೂ, ಸಹ ಈ ಮೂಲಾತ್ಮನಿಂದ ಸಕಲ ಪ್ರಾಣಗಳೂ, ಸಕಲ ಲೋಕಗಳೂ, ಸಕಲ ದೇವತೆಗಳೂ ನಿಷ್ಪನ್ನರಾಗಿರುತ್ತಾರೆ. ಇವನೇ ಸತ್ಯಕ್ಕೂ ಮೂಲವಾದ ಸತ್ಯವು. ಪ್ರಾಣಗಳೇ ಸತ್ಯರೂಪವಾಗಿದ್ದರೆ, ಆ ಪ್ರಾಣಗಳಿಗೂ ಇವನೇ ಸತ್ಯನು. ಆದುದರಿಂದ ಮರ್ತ್ಯನೂ ಇವನೇ, ಅಮರ್ತ್ಯನೂ ಇವನೇ. ದೇಹವೂ ಇವನೇ, ಆತ್ಮನೂ ಇವನೇ. ಇದನ್ನೇ ಬೃಹದಾರಣ್ಯಕದಲ್ಲಿ ವರ್ಣಿಸುತ್ತಾ,

**ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚೈವಾಮೂರ್ತಂ ಚ ಮರ್ತ್ಯಂ ಚಾಮೃತಂ ಚ ಸ್ಥಿತಂ ಚ ಯಚ್ಚ ಸಚ್ಚ ತ್ಯಚ್ಚ ॥** (ಬೃ. ಉ. ೨-೩-೧)

ಮೂರ್ತಾಮೂರ್ತರೂಪಗಳೂ, ಮರ್ತ್ಯಾಮರ್ತ್ಯರೂಪಗಳೂ, ಸ್ಥಾವರಜಂಗಮಾತ್ಮಕರೂಪಗಳೂ ಎಲ್ಲವೂ ಸಹ ಬ್ರಹ್ಮನ ರೂಪಗಳೇ ಆಗಿವೆ. ಆದುದರಿಂದ "**ಅಮರ್ತ್ಯೋ ಮರ್ತ್ಯೇನ ಸಯೋನಿಃ**" ಎಂಬ ಪ್ರಕೃತವಾದ ಋಕ್ಕಿನ ವರ್ಣನೆಯಲ್ಲಿ ಮರ್ತ್ಯವೂ ಮತ್ತು ಅಮರ್ತ್ಯವೂ ಸಹ ಪರಬ್ರಹ್ಮರೂಪವಾದ ಒಂದೇ ಯೋನಿಯುಳ್ಳವು ಎಂದರ್ಥವಾಗಬಹುದು. ಅಥವಾ ವ್ಯಾವಹಾರಿಕವಾದ ಪ್ರಪಂಚದಲ್ಲಿ ಚೇತನ ಮತ್ತು ಅಚೇತನ ಎಂದರೆ ಜೀವಾತ್ಮ ಮತ್ತು ದೇಹ ಎಂಬ ಭಾಗಗಳಲ್ಲಿ ಈಶ್ವರನ ಅಂಶಗಳು ವಿಭಕ್ತಗಳಾಗಿ ಲೌಕಿಕವಾದ ವ್ಯವಹಾರಗಳಲ್ಲಿರುವಾಗ ಜೀವಾತ್ಮ ಮತ್ತು ದೇಹ ಈ ಎರಡರ ನಿರಂತರವಾದ ಸಾಹಚರ್ಯವು ಇದ್ದೇ ಇರಬೇಕಾಗುತ್ತದೆ. ದೇಹದ ಉತ್ಪತ್ತಿಯೊಡನೆ ತಾನೂ ಸೇರಿಕೊಂಡಿರುವುದರಿಂದ ಇಲ್ಲಿ ಆತ್ಮನಿಗೂ ಉತ್ಪತ್ತಿಯೆಂಬ ಪ್ರತೀತಿಯುದೆ. ದೇಹದ ಉತ್ಪತ್ತಿ ಕಾಲದಲ್ಲಿ ಆತ್ಮನೂ ಹುಟ್ಟಿದನು ಎನ್ನುತ್ತಾರೆ. ದೇಹವು ಅದರ ಕರ್ಮಾನುಸಾರವಾದ ಯಾವ ಯೋನಿಯಿಂದ ಉತ್ಪನ್ನವಾಗುತ್ತದೆಯೋ ಆಯಾ ಕರ್ಮಾನುಗುಣವಾದ ಫಲವನ್ನು ಅನುಭವಿಸುವುದಕ್ಕೆ ಆತ್ಮನೂ ಅದೇ

ಯೋನಿಯಿಂದಲೇ ಅದೇ ದೇಹದೊಡನೆ ಉತ್ಪನ್ನನಾಗುತ್ತಾನೆ. ಆದುದರಿಂದ ಸಂಯೋನಿಃ ಎಂಬುದು ಅಮರ್ತ್ಯನಾದ ಆತ್ಮನಿಗೆ ವಿಶೇಷಣವಾಗಿದೆ. ಆದರೆ ದೇಹದೊಡನೆ ಸಂಸರ್ಗವಾದೊಡನೆಯೇ ದೇಹದ ಉಪಾದಿಗಳೆಲ್ಲವೂ ಆತನಿಗೆ ಉಪಾದಿಗಳಾಗಿರುತ್ತವೆ. ದೇಹವು ಅನ್ನಾದಿಗಳಿಂದ ಬೆಳೆದರೆ ಆತ್ಮನೂ ಬೆಳೆದನು ಎನ್ನುತ್ತಾರೆ. ರಾಗದ್ವೇಷಾದಿಗಳಿಂದ ದೇಹವು ಕಲುಷಿತವಾದರೆ ಆತ್ಮನೂ ಕಲುಷಿತನಾದನೆಂದರ್ಥವು. ಆದುದರಿಂದ ದೇಹವು ಯಾವರೀತಿ ಸ್ವಧೆಯಿಂದ ಗೃಭೀತವಾಗುವುದೋ ಅಮರ್ತ್ಯನಾದ ಆತ್ಮನೂ ಸಹ ಅದೇ ಸ್ವಧೆಯಿಂದ ಗೃಭೀತನಾಗುತ್ತಾನೆ. ಈ ಭೋಗೇಚ್ಛೆಯು ಆತ್ಮನನ್ನು ಸಂಸಾರದಲ್ಲಿ ಬದ್ಧನಾಗುವಂತೆ ಮಾಡುತ್ತದೆ.

ಇಲ್ಲಿ ಇನ್ನೊಂದು ಆಕ್ಷೇಪಕ್ಕೆ ಅವಕಾಶವಿದೆ. ಈ ಆಕ್ಷೇಪವನ್ನು Dr. ರಾಧಾಕೃಷ್ಣನ್ ಎಂಬುವರು ಉದಹರಿಸಿ ಅದಕ್ಕೆ ತಕ್ಕ ಸಮಾಧಾನವನ್ನು ಹೇಳಿದ್ದಾರೆ. "The problem of evil is a stumblingblock to all monistic systems" (Indian Philosophy. Vol I. P. 242) ಅದ್ವೈತವನ್ನು ಪ್ರತಿಪಾದಿಸುವ ಸಕಲ ಮತಗಳೂ ಸಹ ಈ ಸಮಸ್ಯೆಯನ್ನು ಪರಿಹರಿಸಲು ದುಸ್ತರವಾಗುತ್ತದೆ. ಸಕಲ ವಿಶ್ವವೂ ಈಶ್ವರನ ಆವಿರ್ಭಾವವೇ ಆಗಿರುವಾಗ ಈಶ್ವರಾಂಶವಾದ ಆತ್ಮನಿಗೆ ಬಂಧನವೆಂದರೇನು, ಆ ಬಂಧನದ ಸ್ವರೂಪವೇನು ಇತ್ಯಾದಿ ಪ್ರಶ್ನೆಗಳು ಸಹಜವಾಗಿರುತ್ತವೆ. ಆದರೆ ಪ್ರಕೃತದಲ್ಲಿ ಈ ಚರ್ಚೆಗೆ ಅವಕಾಶವಿಲ್ಲದಿರುವುದರಿಂದ ಈ ಆಕ್ಷೇಪವನ್ನು ಅದಕ್ಕೆ ತಕ್ಕ ಉತ್ತರವನ್ನು ಮುಂದೆ ತಿಳಿಸಲಾಗುತ್ತದೆ. ದೇಹದ ಉಪಾಧಿಗಳಿಗೆ ಸಿಕ್ಕಿ ಬದ್ಧಾವಸ್ಥೆಯಲ್ಲಿರತಕ್ಕ ಜೀವಾತ್ಮನಿಗೆ ದೇವದ ಕರ್ಮಗಳಿಗನುಗುಣವಾದ ಫಲಗಳ ಅನುಭವವೂ ಆಗತಕ್ಕದ್ದು ಅದೂ ಸಹ ಈಶ್ವರನ ಲೀಲೆಯೇ ಆಗಿದೆ. ಅದು ಹೇಗೆಂದರೆ—

**ಗುಣಾನ್ವಯೋ ಯಃ ಫಲಕರ್ಮಕರ್ತಾ ಕೃತಸ್ಯ ತಸ್ಯೈವ ಸ ಚೋಪಭೋಕ್ತಾ ।**
**ಸ ವಿಶ್ವರೂಪಸ್ತ್ರಿಗುಣಸ್ತ್ರಿವರ್ತ್ಮಾ ಪ್ರಾಣಾಧಿಪಃ ಸಂಚರತಿ ಸ್ವಕರ್ಮಭಿಃ ॥**
(ಶ್ವೇ. ಉ. ೫-೭)

**ಪರಮಾತ್ಮೈವ ಸೂಕ್ಷ್ಮಶರೀರೋಪಾಧಿಕಃಸನ್ ನಾನಾವಿಧಕರ್ಮ ಕೃತ್ವಾ ತದ್ಭೋಗಾಯ ಜೀವಸಂಜ್ಞಾಂ ಲಬ್ಧ್ವಾ ಶರೀರತ್ರಯೇಣ ಸಂಬಂದ್ಧಃ ಲೋಕಾಂತರೇಷು ಸಂಚರತಿ ॥** ಪರಮಾತ್ಮನು ಸೂಕ್ಷ್ಮಶರೀರದ ಉಪಾಧಿಯಿಂದ ಕೂಡಿ ನಾನಾವಿಧವಾದ ಕರ್ಮವನ್ನು ಮಾಡಿ ಆ ಕರ್ಮಫಲವನ್ನನುಭವಿಸಲು ಜೀವಸಂಜ್ಞೆಯನ್ನು ಹೊಂದಿ ತ್ರಿಗುಣಾತ್ಮಕವಾದ ಶರೀರವನ್ನು ಪಡೆದು ಲೋಕಾಂತರಗಳಲ್ಲಿ ಸಂಚರಿಸುತ್ತಾನೆ ಎಂದು ಜೀವನ ಚಲನವಲನಗಳಿಗೂ ಈಶ್ವರನ ಸಂಕಲ್ಪವೇ ಮೂಲವೆಂದಿರುತ್ತದೆ.

**ಸ್ವಧಯಾ ಗೃಭೀತಃ** ಎಂಬುದಕ್ಕೆ **ಅನ್ನೋಪಲಕ್ಷಿತತದ್ಭೋಗೇನ**–ಅನ್ನದಿಂದ ಉಪಕ್ಷಿತವಾದ ಅದರ ಭೋಗದಿಂದ ಎಂದು ಬಂದರ್ಥವನ್ನೂ, **ಯದ್ವಾ ಸ್ವಧಾಶಬ್ದೇನ ಅನ್ನಮಯಂ ಶರೀರಂ ।** ಸ್ವಧಾ ಶಬ್ದದಿಂದ ಅನ್ನಮಯವಾದ ಶರೀರವೆಂದೂ ಅದರಿಂದ ಗೃಹೀತವಾದ ಎಂದೂ ಎರಡನೆಯ ಅರ್ಥವನ್ನೂ ಹೇಳಿದೆ. ಅನ್ನರೂಪವಾದ ಸ್ವಧೆಯನ್ನು ಸೃಷ್ಟಿಸಿದವನೂ ಈಶ್ವರನೇ ಮತ್ತು ಇದನ್ನು ಭೋಗಿಸುವವನೂ ಅವನೇ.

**ಸ ಐಕ್ಷತ ಯದಿ ವಾ ಇಮಮಭಿಮಂಸ್ಯೇ ಕನಿಯೋಽನ್ನಂ ಕರಿಷ್ಯ ಇತಿ ಸ ತಯಾ ವಾಚಾ ತೇನಾತ್ಮನೇದಂ ಸರ್ವಮಸೃಜತ ಯದಿದಂ ಕಿಂಚರ್ಚೋ ಯಜೂಂಷಿ ಸಾಮಾನಿ ಛಂದಾಂಸಿ ಯಜ್ಞಾನ್ ಪ್ರಜಾಃ ಪಶೂನ್ । ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಂ ಸರ್ವಸ್ಯೈತಸ್ಯಾತ್ತಾ ಭವತಿ ಸರ್ವಮಸ್ಯಾನ್ನಂ ಭವತಿ ಯ ಏವ ಮೇತದದಿತೇರದಿತಿತ್ವಂ ವೇದ ।** (ಬೃ. ಉ. ೧-೨-೫)

ಆ ವಾಕ್ಕಿನಿಂದಲೂ, ಆ ಸ್ವರೂಪದಿಂದಲೂ ಈ ಜಗತ್ತನ್ನೆಲ್ಲಾ ಸೃಷ್ಟಿಸಿದನು. ಸಕಲ ವೇದಗಳನ್ನೂ, ಯಜ್ಞಾದಿಗಳನ್ನೂ, ಪಶುಮಾನವಾದಿಗಳನ್ನೂ, ವಿಶ್ವದಲ್ಲಿರುವ ಸಮಸ್ತಭೂತಗಳನ್ನೂ ಸೃಷ್ಟಿಸಿದನು. ಯಾವ ಯಾವ ಪದಾರ್ಥಗಳನ್ನು ಸೃಷ್ಟಿಸಿದನೋ ಅವೆಲ್ಲವೂ ಅವನಿಗೆ ಅನ್ನರೂಪವಾದವು. ಸೃಷ್ಟಿಸಿದೊಡನೆಯೇ ಅವನ್ನೆಲ್ಲಾ ಭಕ್ಷಿಸತೊಡಗಿದನು. ಸಕಲವೂ ಅವನಿಗೆ ಅನ್ನವಾಗಿ ಅವನು ಅತ್ತೃವಾದುದರಿಂದ ಅವನು **ಅದಿತಿಯೆಂದು** ವರ್ಣಿಸಲ್ಪಟ್ಟನು. ಆದುದರಿಂದ ಅನ್ನವೂ ಅವನ ಸೃಷ್ಟಿಯು. ಆ ಅನ್ನದ ಭೋಕ್ತೃವೂ ಅವನೇ ಆಯಿತು. ಪ್ರಕೃತವಾದ ಋಕ್ಕಿನಲ್ಲಿ **ಸ್ವಧಯಾ ಗೃಭೀತಃ** ಎಂಬ ವಾಕ್ಯಕ್ಕೆ ಅವನ ಸೃಷ್ಟಿಸಿದ ಸ್ವಧೆಯಿಂದ ಅವನೇ ಗೃಹೀತನಾದನು ಎಂದರ್ಥಮಾಡಬಹುದು. ಈ ಭೋಗದ ಸಲುವಾಗಿ **ಪ್ರಾಙ್ ಏತಿ; ಅಪ್ರಾಙ್ ಏತಿ** ಎಂದು ಅವನ ಸೋಪಾಧಿಕವಾದ ಸಂಚಾರವನ್ನು ತಿಳಿಸಿದೆ. ಅದನ್ನೇ ಪ್ರಶ್ನೋಪನಿಷತ್ತಿನಲ್ಲಿ ವರ್ಣಿಸುತ್ತಾ,

**ಪ್ರಜಾಪತಿಶ್ಚರಸಿ ಗರ್ಭೇ ತ್ವಮೇವ ಪ್ರತಿಜಾಯಸೇ । ತುಭ್ಯಂ ಪ್ರಾಣ ಪ್ರಜಾಸ್ತ್ವಿಮಾ ಬಲಿಂ ಹರಂತಿ ಯಃ ಪ್ರಾಣೈಃ ಪ್ರತಿತಿಷ್ಠಸಿ ॥** (ಪ್ರಶ್ನ. ಉ. ೨-೭)

ಸೃಷ್ಟಿಗೆ ಒಡೆಯನಾದ ನೀನೇ ಗರ್ಭಗಳಲ್ಲಿ ಸಂಚರಿಸುತ್ತೀಯೆ, ಪುನಃ ಪುನಃ ಉತ್ಪನ್ನವಾಗುವವನೂ ನೀನೇ. ನೀನು ಪ್ರಾಣಿಗಳ ಪ್ರಾಣರೂಪದಲ್ಲಿರುವುದರಿಂದ ನಿನಗೇ ಬಲಿಯು ಅರ್ಪಿತವಾಗುತ್ತದೆ, ಎಂದು ಪುನಃ ಪುನಃ ನಾಮರೂಪಗಳಲ್ಲಿ ಉತ್ಪನ್ನನಾಗುವ ಸಕಲ ಜೀವರಾಶಿಗಳೂ ನೀನೇ ಎಂದಿದೆ. ಆದುದರಿಂದ **ಅಮರ್ತ್ಯೋ ಮರ್ತ್ಯೇನ ಸಯೋನಿಃ** ಎಂಬುದಕ್ಕೆ ಅಮರ್ತ್ಯನಾದ ಆತ್ಮನು ಮರ್ತ್ಯನಾದ ದೇಹದೊಂದಿಗೆ ಸಮಾನವಾದ ಯೋನಿಯಿಂದ ಉತ್ಪನ್ನವಾಗುತ್ತಾನೆಂದು ವರ್ಣಿಸಿದೆ.

ಸ್ವಧಾರೂಪವಾದ ಉಪಾಧಿಯು ಭೋಗಸಾಧನವಾದುದರಿಂದ ಈ ಭೋಗವನ್ನನುಭವಿಸಲು ಮರ್ತ್ಯನಾದ ದೇಹದೊಡನೆ ಲೋಕಾಂತರಗಳಲ್ಲಿ ಸಂಚರಿಸಬೇಕಾಗಿ ಈಶ್ವರನಿಗೆ ತನ್ನ ಸಂಕಲ್ಪದ ಫಲವೇ ಆಗಿದೆ. ಈ ಉಪಾಧಿಯು ಒಂದೇ ರೂಪವಾಗಿಲ್ಲ. ಸ್ವಧೆಯ ಸ್ವರೂಪಗಳು ನಾನಾವಿಧವಾದವು. ಆದುದರಿಂದ ಅದರ ಭೋಗಗಳೂ ನಾನಾವಿಧವಾಗಿರಬೇಕು. ಆ ಭೋಗಕ್ಕೆ ತಕ್ಕಂತೆ ಲೋಕಗಳೂ, ಆ ಲೋಕಗಳಿಗೆ ತಕ್ಕಂತೆ ದೇಹಗಳೂ ಇರಬೇಕು. ಆಯಾ ಅನುಭವಕ್ಕೆ ತಕ್ಕಂತೆಯೂ, ಆಯಾ ಕರ್ಮಗಳಿಗೆ ತಕ್ಕಂತೆಯೂ ದೇಹಗಳನ್ನಾಶ್ರಯಿಸಿದ ಆತ್ಮನ ಸಂಚಾರ ಕ್ರಮವನ್ನು **ಪ್ರಾಙ್ ಏತಿ, ಅಪ್ರಾಙ್ ಏತಿ** ಎಂದು ಪ್ರಕೃತವಾದ ಋಕ್ಕಿನಲ್ಲಿ ವರ್ಣಿಸಿದೆ.

ಸಾಯಣರು ಪ್ರಾಙ್ ಏತಿ ಎಂಬುದಕ್ಕೆ **ಊರ್ಧ್ವಂ ಸ್ವರ್ಗಾದಿಲೋಕಂ ಪ್ರಾಪ್ನೋತಿ ।** ಸ್ವರ್ಗಾದಿ ಲೋಕದ ಅಭಿಮುಖವಾಗಿ ಊರ್ಧ್ವಲೋಕಕ್ಕೆ ಹೋಗುವನೆಂದೂ, ಅಪ್ರಾಙ್ ಏತಿ ಎಂಬುದಕ್ಕೆ **ಅಶುಕ್ಲಂ ಕರ್ಮ ಕೃತ್ವಾ ಅಧೋ ಗಚ್ಛತಿ ।** ಅಶುಭವಾದ ಕರ್ಮಾಚರಣೆಯ ಫಲವಾಗಿ ಅಧೋಲೋಕದಲ್ಲಿ ಸಂಚರಿಸುವನು ಎಂದರ್ಥವೆಂದೂ ತಿಳಿಸಿದ್ದಾರೆ. ಪ್ರತಿಯೊಂದು ಜೀವಾತ್ಮನಿಗೂ ಅವನವನ ಕರ್ಮಾನುಗುಣವಾದ ದೇಹಸಂಬಂಧವೂ, ಲೋಕಸಂಚಾರವೂ, ಫಲಾನುಭವವೂ ಲಭಿಸುತ್ತವೆ. ಪುನಃ ಪುನಃ ಈ ವಿಧವಾದ ಜನ್ಮಮರಣಗಳಿರುವುದರಿಂದ ಪ್ರತಿಜನ್ಮಕ್ಕೂ ಬೇರೆ ಬೇರೆ ದೇಹವನ್ನಾಕ್ರಮಿಸಬೇಕಾಗುತ್ತದೆ. ಇದನ್ನೇ ಬೃಹದಾರಣ್ಯಕೋಪನಿಷತ್ತಿನಲ್ಲಿ ವರ್ಣಿಸುತ್ತಾ,

**ತದ್ಯಥಾ ತೃಣಜಲಾಯುಕಾ ತೃಣಸ್ಯಾಂತಂ ಗತ್ವಾ ಅನ್ಯಮಾಕ್ರಮಮಾಕ್ರಮ್ಯಾತ್ಮಾನಮುಪಸಂಹರತ್ಯೇವಮೇವಾಯಮಾತ್ಮೇದಂ ಶರೀರಂ ನಿಹತ್ಯಾವಿದ್ಯಾಂ ಗಮಯಿತ್ವಾನ್ಯಮಾಕ್ರಮಮಾಕ್ರಮ್ಯಾತ್ಮಾನಮುಪಸಂಹರತಿ ।** (ಬೃ. ಉ. ೪-೪-೩)

ಜಿಗ್ಗಿಯು ಗರಿಕೆಯ ಒಂದು ಪಟಲದ ಅಗ್ರಭಾಗವನ್ನು ಸೇರಿದನಂತರ ಅದನ್ನು ಬಿಟ್ಟು ಬೇರೊಂದು ಪಟಲವನ್ನು ಸೇರಿಕೊಳ್ಳುವಂತೆ, ಜೀವನೂ ಸಹ ತನ್ನ ಪ್ರಕೃತವಾದ ದೇಹವನ್ನು ತ್ಯಜಿಸಿ ಬೇರೊಂದು ದೇಹವನ್ನು ಸೇರುತ್ತಾನೆ. ಈ ವಿಧ

ವಾದ ಸಂಕ್ರಮಣಕಾಲದಲ್ಲಿ ಜೀವಾತ್ಮನು ಸತ್ಕರ್ಮಗಳನ್ನು ಮಾಡಿದ್ದ ಪಕ್ಷದಲ್ಲಿ ಆಗ ಮೊದಲಿನ ದೇಹಕ್ಕಿಂತ ಉತ್ತಮವಾದ ದೇಹವನ್ನು ಪಡೆಯುತ್ತಾನೆ. ಅದು ಹೇಗೆಂದರೆ,

**ತದ್ಯಥಾ ಪೇಶಸ್ಕಾರೀ ಪೇಶಸೋ ಮಾತ್ರಾಮುಪಾದಾಯಾನ್ಯನ್ನವತರಂ ಕಲ್ಯಾಣತರಂ ರೂಪಂ ತನುತ ಏವಮೇವಾಯಮಾತ್ಮೇದಂ ಶರೀರಂ ನಿಹತ್ಯಾವಿದ್ಯಾಂ ಗಮಯಿತ್ವಾನ್ಯನ್ನವತರಂ ಕಲ್ಯಾಣತರಂ ರೂಪಂ ಕುರುತೇ ಪಿತ್ರ್ಯಂ ವಾ ಗಾಂಧರ್ವಂ ವಾ ದೈವಂ ವಾ ಪ್ರಾಜಾಪತ್ಯಂ ವಾ ಬ್ರಾಹ್ಮಂ ವಾನ್ಯೇಷಾಂ ವಾ ಭೂತಾನಾಂ ||** (ಬೃ. ಉ. ೪-೪-೪)

ಅಕ್ಕಸಾಲೆಯು ಚಿನ್ನದ ಚೂರನ್ನು ತೆಗೆದುಕೊಂಡು ಒರಟಾಗಿರುವ ಆ ಚೂರನ್ನು ಕುಟ್ಟಿ ರೂಪಾಂತರಕ್ಕೆ ತಿರುಗಿಸಿ ಆಕರ್ಷಕವಾದ ಆಭರಣಾದಿಗಳನ್ನು ಮಾಡುವಂತೆ, ಸುಕೃತಿಯಾದ ಈ ಆತ್ಮನೂ ಸಹ ತನ್ನ ಪೂರ್ವದೇಹವನ್ನು ತ್ಯಜಿಸಿ ಅದಕ್ಕಿಂತ ಉತ್ತಮವಾದ ಗಾಂಧರ್ವವಾದುದೋ, ದೈವವಾದುದೋ ಆದ ಕಲ್ಯಾಣರೂಪವನ್ನು ಪಡೆಯುತ್ತಾನೆ. ಆದರೆ ಪೂರ್ವದೇಹವನ್ನು ತ್ಯಜಿಸಿದನಂತರ ಪುನಃ ದೇಹಾಂತರವನ್ನಾಶ್ರಯಿಸುವಾಗ ಅದಕ್ಕಿಂತಲೂ ಉತ್ತಮವಾದ ದೇಹವನ್ನು ಪಡೆಯಬೇಕೆಂಬ ನಿಯಮವಿಲ್ಲ. ಏತಕ್ಕೆಂದರೆ,

**ಸ ವಾ ಅಯಮಾತ್ಮಾ ಬ್ರಹ್ಮ ವಿಜ್ಞಾನಮಯೋ ಮನೋಮಯಃ ಪ್ರಾಣಮಯಶ್ಚಕ್ಷುರ್ಮಯಃ ಶ್ರೋತ್ರಮಯಃ ಪೃಥ್ವೀಮಯ ಆಪೋಮಯೋ ವಾಯುಮಯ ಆಕಾಶಮಯಸ್ತೇಜೋಮಯೋಽತೇಜೋಮಯಃ ಕಾಮಮಯೋಽಕಾಮಮಯಃ ಕ್ರೋಧಮಯೋಽಕ್ರೋಧಮಯೋ ಧರ್ಮಮಯೋಽಧರ್ಮಮಯಃ ಸರ್ವಮಯಸ್ತದ್ಯದೇತದಿದಂ ಮಯೋಽದೋಮಯ ಇತಿ ಯಥಾಕಾರೀ ಯಥಾಚಾರೀ ತಥಾ ಭವತಿ ಸಾಧುಕಾರೀ ಸಾಧುರ್ಭವತಿ ಪಾಪಕಾರೀ ಪಾಪೋ ಭವತಿ ಪುಣ್ಯಂ ಪುಣ್ಯೇನ ಕರ್ಮಣಾ ಭವತಿ ಪಾಪಃ ಪಾಪೇನ | ಅಥೋ ಖಲ್ವಾಹುಃ ಕಾಮಮಯ ಏವಾಯಂ ಪುರುಷ ಇತಿ ಸ ಯಥಾಕಾಮೋ ಭವತಿ ತತ್ಕ್ರತುರ್ಭವತಿ ತತ್ಕರ್ಮ ಕುರುತೇ ಯತ್ಕರ್ಮ ಕುರುತೇ ತದಭಿಸಂಪದ್ಯತೇ ||** (ಬೃ. ಉ. ೪-೪-೫)

ಈ ಜೀವನೇ ವಿಜ್ಞಾನಮಯನೂ, ಮನೋಮಯನೂ, ಪ್ರಾಣಮಯನೂ, ಚಕ್ಷುರ್ಮಯನೂ, ಶ್ರೋತ್ರಮಯನೂ, ಪೃಥಿವೀಮಯನೂ, ಆಪೋಮಯನೂ, ವಾಯುಮಯನೂ, ಆಕಾಶಮಯನೂ, ತೇಜೋಮಯನೂ, ಅತೇಜೋಮಯನೂ, ಕಾಮಮಯನೂ, ಅಕಾಮಮಯನೂ, ಕ್ರೋಧಮಯನೂ, ಅಕ್ರೋಧಮಯನೂ, ಧರ್ಮಮಯನೂ, ಅಧರ್ಮಮಯನೂ ಆದ ಬ್ರಹ್ಮನಾಗಿದ್ದಾನೆ. ಇವನು ಸರ್ವಮಯನು. ಆದುದರಿಂದಲೇ ಈ ಆತ್ಮನನ್ನು " **ಇದಂಮಯಃ ; ಅದೋಮಯಃ** " ಇದರಿಂದ ಪೂರ್ಣನಾದವನು ಅಥವಾ ಅದರಿಂದ ಪೂರ್ಣನಾದವನು ಎಂದು ವರ್ಣಿಸಿದೆ.

ಈ ಆತ್ಮನು ತಾನು ಯಾವಬಗೆಯ ಕರ್ಮವನ್ನು ಮಾಡುವನೋ ಮತ್ತು ಯಾವರೀತಿಯಲ್ಲಿ ವ್ಯವಹರಿಸುವನೋ ಅದರಂತೆ ಪರಿಣಮಿಸುವನು. ಸತ್ಕರ್ಮವನ್ನು ಮಾಡಿದರೆ ಸದ್ರೂಪವನ್ನು ಪಡೆಯುತ್ತಾನೆ. ಅಸತ್ಕರ್ಮಕಾರಿಯಾದರೆ ಅಸದ್ರೂಪವನ್ನು ಪಡೆಯುತ್ತಾನೆ. ಸುಕೃತಿಯು ಸದ್ಗತಿಯನ್ನೂ, ದುಷ್ಕೃತಿಯು ಅಸದ್ಗತಿಯನ್ನೂ ಪಡೆಯುತ್ತಾನೆ.

" ಪುರುಷನ ರೂಪಾಂತರಗಳೆಲ್ಲಾ ಅವನ ಇಚ್ಛಾಧೀನವಾದವೇ ಹೊರತು ಕರ್ಮಾಧೀನವಲ್ಲ " ಎಂದು ಕೆಲವರು ಹೇಳುತ್ತಾರೆ. ಆದರೆ ಅವನವನ ಇಚ್ಛೆಯು ಯಾವ ವಿಧವಾಗಿರುವುದೋ ಅವನ ಸಂಕಲ್ಪವೂ ಅದೇ ವಿಧವಾಗಿರುತ್ತದೆ. ಅವನ ಸಂಕಲ್ಪದಂತೆಯೇ ಅವನ ಕ್ರಿಯೆಯೂ ಇರುತ್ತದೆ. ಅವನವನ ಕ್ರಿಯೆಗೆ ತಕ್ಕಂತೆ ರೂಪಾಂತರವನ್ನು ಪಡೆಯುತ್ತಾನೆ.

ತದೇಷ ಶ್ಲೋಕೋ ಭವತಿ ।
ತದೇವ ಸಕ್ತಃ ಸಹ ಕರ್ಮಣೈತಿ ಲಿಂಗಂ ಮನೋ ಯತ್ರ ನಿಷಕ್ತಮಸ್ಯ ।
ಪ್ರಾಪ್ಯಾಂತಂ ಕರ್ಮಣಸ್ತಸ್ಯ ಯತ್ಕಿಂಚೇಹ ಕರೋತ್ಯಯಂ ॥

ತಸ್ಮಾಲ್ಲೋಕಾತ್ಪುನರೈತ್ಯಸ್ಮೈ ಲೋಕಾಯ ಕರ್ಮಣ ಇತಿ ನು ಕಾಮಯಮಾನೋಽಥಾಕಾಮಯಮಾನೋ ಯೋಽಕಾಮೋ ನಿಷ್ಕಾಮ ಆಪ್ತಕಾಮ ಆತ್ಮಕಾಮೋ ನ ತಸ್ಯ ಪ್ರಾಣಾ ಉತ್ಕ್ರಾಮಂತಿ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ॥

(ಬೃ. ಉ. ೪-೪-೬)

ಆದುದರಿಂದಲೇ "ಮನಸ್ಸಿಗೆ ಯಾವ ವಿಧವಾದ ಸಂಗವಿರುತ್ತದೆಯೋ, ಅದನ್ನನುಸರಿಸಿಯೇ ಅಂತರಾತ್ಮನೂ ಅದೇ ಪ್ರವೃತ್ತಿಯನ್ನು ಹೊಂದುತ್ತದೆ. ಆ ಪ್ರವೃತ್ತಿಯಲ್ಲಿಯೇ ಸಕ್ತವಾಗಿ ತದನುಗುಣವಾದ ಕರ್ಮವನ್ನೇ ಮಾಡುತ್ತದೆ. ವಿಶ್ವದಲ್ಲಿ ಎಲ್ಲಿ ಯಾವ ಕರ್ಮವನ್ನು ಮಾಡಿದರೂ ಸಹ ಅದರ ಫಲವಾದ ಅನುಭವವನ್ನು ಹೊಂದುವುದಕ್ಕೆ ಲೋಕಾಂತರವನ್ನು ಸೇರಿ ಆದರ ಅಂತ್ಯವು ಸಮೀಪಿಸಿದೊಡನೆಯೇ ಪುನಃ ಪೂರ್ವಲೋಕವನ್ನು ಸೇರುತ್ತಾನೆ" ಎಂಬ ಶ್ರುತಿವಾಕ್ಯವಿರುತ್ತದೆ. ಆದುದರಿಂದ ನಿಷ್ಕಾಮಿಯಾದವನೂ, ಪೂರ್ಣಕಾಮನಾದವನೂ ಲೋಕಾಂತರದ ಅನುಭವಕ್ಕಾಗಿ ಹೋಗದೆ ನೇರವಾಗಿ ಬ್ರಹ್ಮನನ್ನೇ ಸೇರುತ್ತಾನೆ.

ಜೀವಾತ್ಮನ ಕರ್ಮಾನುರೋಧವಾದ ಗತಿಯು ಎರಡು ವಿಧವಾಗಿರುತ್ತದೆ. ಉತ್ತಮವಾದ ಕರ್ಮವನ್ನು ಆಚರಿಸಿ ಸ್ವರ್ಗಾದಿಲೋಕವನ್ನು ಪಡೆಯುವಾಗ ಆ ಜೀವನು ಹೋಗುವ ಮಾರ್ಗಕ್ಕೆ ದೇವಯಾನವೆಂದೂ, ಉತ್ತಮವಾದ ಕರ್ಮವನ್ನಾಚರಿಸದೆ ಸ್ವಾರ್ಥಾದಿವ್ಯಾಪಾರಗಳಲ್ಲಿ ಉದ್ಯುಕ್ತನಾದವನು ಹೋಗತಕ್ಕ ಮಾರ್ಗಕ್ಕೆ ಪಿತೃಯಾನವೆಂದೂ ಕರೆದಿದೆ. ಋಕ್ಸಂಹಿತೆಯಲ್ಲಿಯೂ ಸಹ ದೇವಯಾನವೆಂಬ ಪದವು ಪ್ರಸಿದ್ಧವಾಗಿದೆ. ಉದಾಹರಣೆಗೆ—

ಪರಂ ಮೃತ್ಯೋ ಅನು ಪರೇಹಿ ಪಂಥಾಂ ಯಸ್ತೇ ಸ್ವ ಇತರೋ ದೇವಯಾನಾತ್ ।
ಚಕ್ಷುಷ್ಮತೇ ಶೃಣ್ವತೇ ತೇ ಬ್ರವೀಮಿ ಮಾ ನಃ ಪ್ರಜಾಂ ರೀರಿಷೋ ಮೋತ ವೀರಾನ್ ॥

(ಋ. ಸಂ. ೧೦-೧೮-೧)

ಇತ್ಯಾದಿ ಋಕ್ಕುಗಳಲ್ಲಿ ದೇವಯಾನವು ಮೃತ್ಯುರಹಿತವಾದ ಮಾರ್ಗವೆಂದು ಹೇಳಿದೆ. ಈ ಮಾರ್ಗದಲ್ಲಿ ಸವಿತೃವು ಸುಕೃತಿಗಳನ್ನು ಮರಣರಹಿತವಾದ ಪುಣ್ಯಲೋಕಕ್ಕೆ ಕರೆದುಕೊಂಡು ಹೋಗುವನು ಎಂದು ಪ್ರಸಿದ್ಧವಾಗಿದೆ.

ಯೇ ತೇ ಪಂಥಾಃ ಸವಿತಃ ಪೂರ್ವ್ಯಾಸೋಽರೇಣವಃ ಸುಕೃತಾ ಅಂತರಿಕ್ಷೇ ।

ತೇಭಿರ್ನೋ ಅದ್ಯ ಪಥಿಭಿಃ ಸುಗೇಭೀ ರಕ್ಷಾ ಚ ನೋ ಅಧಿ ಚ ಬ್ರೂಹಿ ದೇವ ॥

(ಋ. ಸಂ. ೧-೩೫-೧೧)

ಯತ್ರಾಸತೇ ಸುಕೃತೋ ಯತ್ರ ತೇ ಯಯುಸ್ತತ್ರ ತ್ವಾ ದೇವಃ ಸವಿತಾ ದಧಾತು ।

(ಋ. ಸಂ. ೧೦-೧೭-೪)

ಇತ್ಯಾದಿ ಋಕ್ಕುಗಳಲ್ಲಿ ಸವಿತೃವು ಸತ್ಪಥದಲ್ಲಿ ಸುಕೃತಿಗಳನ್ನು ಕರೆದುಕೊಂಡುಹೋಗುವ ದೇವನಾದುದರಿಂದ ಯಜ್ಞಕರ್ತರಾದ ಸುಕೃತಿಗಳನ್ನು ಅದೇ ಶುದ್ಧವಾದುದೂ, ರಜೋರಹಿತವಾದುದೂ, ಮೃತ್ಯುರಹಿತವಾದುದೂ ಆದ ಮಾರ್ಗದಲ್ಲಿ ಕರೆದು

ಕೊಂಡುಹೋಗಬೇಕೆಂದು ಪ್ರಾರ್ಥಿತನಾಗಿದ್ದಾನೆ. ಈ ಮಾರ್ಗವನ್ನು ಉಪನಿಷತ್ತುಗಳಲ್ಲಿ ಅರ್ಚಿರಾದಿಮಾರ್ಗವೆಂದು ಹೇಳಿದೆ. ಮರಣಾನಂತರ ಈ ಮಾರ್ಗದಲ್ಲಿ ಬ್ರಹ್ಮಲೋಕವನ್ನು ಸೇರಿದ ಸುಕೃತಿಗಳಿಗೆ ಪುನರಾವರ್ತಿಯಿಲ್ಲವೆಂದು ಈ ಮಾರ್ಗವನ್ನು ವರ್ಣಿಸಿದೆ.

**ತತ್ಪುರುಷೋಽಮಾನವಃ ಸ ಏನಾನ್ಬ್ರಹ್ಮ ಗಮಯತ್ಯೇಷ ದೇವಪಥೋ ಬ್ರಹ್ಮಪಥ ಏತೇನ ಪ್ರತಿಪದ್ಯಮಾನಾ ಇಮಂ ಮಾನವಮಾವರ್ತಂ ನಾವರ್ತಂತೇ ನಾವರ್ತಂತೇ ॥**

(ಛಾ. ಉ. ೪-೧೫-೫)

ವಿದ್ಯುದ್ರೂಪದ ಪುರುಷನು (ಅಮಾನವನು) ಈ ಸುಕೃತಿಯನ್ನು ಬ್ರಹ್ಮಲೋಕಕ್ಕೆ ಒಯ್ಯುತ್ತಾನೆ. ಇದೇ ಬ್ರಹ್ಮ ಲೋಕದ ಮಾರ್ಗವು. ಈ ಮಾರ್ಗದಿಂದ ಬ್ರಹ್ಮಲೋಕಕ್ಕೆ ಸೇರಿದವರು ಹಿಂತಿರುಗುವುದಿಲ್ಲ. ಇದು ಖಂಡಿತ, ಎಂದು ಹೇಳಿದೆ ಇದೇ ಅಭಿಪ್ರಾಯವನ್ನು ಇದೇ ರೀತಿಯಲ್ಲಿ ಮುಂಡಕೋಪನಿಷತ್ತಿನಲ್ಲಿಯೂ ವರ್ಣಿಸುತ್ತಾ ಪ್ರಕೃತವಾದ ಋಕ್ಕಿನಲ್ಲಿ ಹೇಳಿರುವಂತೆಯೇ ತಿಳಿಸಿದೆ. ಅದರಲ್ಲಿ,

**ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾಂತಿ ಯತ್ರಾಮೃತಃ ಸ ಪುರುಷೋ ಹ್ಯವ್ಯಯಾತ್ಮಾ ।**

(ಮು. ಉ. ೧-೧೧)

ಎಂಬ ಸೂರ್ಯದ್ವಾರವನ್ನು ವರ್ಣಿಸುವ ವಾಕ್ಯಗಳಲ್ಲಿ ಉಕ್ತವಾಗಿರುವುದು. ದೇವಯಾನದಿಂದ ಬ್ರಹ್ಮಲೋಕವನ್ನು ಸೇರುವವರಿಗೆ ಪುನರಾಗಮನವಿಲ್ಲ. ಆದರೆ, ಧೂಮಮಾರ್ಗದಿಂದ (ಪಿತೃಯಾನ) ಚಂದ್ರಲೋಕವನ್ನು ಸೇರುವವರೂ ಸಹ ಸುಕೃತಿಗಳಾದರೂ ಅವರು ಅಲ್ಲಿ ತಮ್ಮ ಸತ್ಕರ್ಮಗಳನ್ನನುಭವಿಸಿ ಅನಂತರ ಅದರ ಅಂತವಾದಮೇಲೆ ಪುನಃ ಪೃಥ್ವಿಗೆ ಬರುತ್ತಾರೆ. ದೇವಯಾನ ಮತ್ತು ಪಿತೃಯಾಣಗಳ ವರ್ಣನೆಗಳಲ್ಲಿ ಅನೇಕ ವ್ಯತ್ಯಸ್ತವಾದ ಅಭಿಪ್ರಾಯಗಳಿವೆ. ಪ್ರಕೃತದಲ್ಲಿ ಅವು ಅಷ್ಟು ಅವಶ್ಯವಲ್ಲ. ಪ್ರಕೃತವಾದ ಋಕ್ಕಿನಲ್ಲಿ ದೇಹದೊಡನ ಸೇರಿ ತನ್ನ ಸಂಸ್ಕಾರಾನುಗುಣವಾದ ಕರ್ಮಗಳನ್ನು ಮಾಡುವವನಿಗೆ ಎರಡು ವಿಧವಾದ ಸಂಚಾರಗಳಿವೆಯೆಂದು ತಿಳಿಸಿದೆ. ಅದನ್ನು ಬೃಹದಾರಣ್ಯಕದಲ್ಲಿ,

**.... .... .... ವೇತ್ಥೋ ದೇವಯಾನಸ್ಯ ವಾ ಪಥಃ ಪ್ರತಿಪದಂ ಪಿತೃಯಾಣಸ್ಯ ವಾ ಯತ್ಕೃತಾ ದೇವಯಾನಂ ವಾ ಪಂಥಾನಂ ಪ್ರತಿಪದ್ಯಂತೇ ಪಿತೃಯಾಣಂ ವಾಪಿ ಹಿ ಋಷೇ-ರ್ವಚಃ ಶ್ರುತಂ ದ್ವೇ ಸೃತೀ ಅಶೃಣವಂ ಪಿತೄಣಾಮಹಂ ದೇವಾನಾ ಮುತ ಮರ್ತ್ಯಾನಾಂ ತಾಭ್ಯಾಮಿದಂ ವಿಶ್ವ ಮೇಜತ್ಸಮೇತಿ ಯದಂತರಾ ಪಿತರಂ ಮಾತರಂ ಚ ಇತಿ ॥**

(ಬೃ. ಉ. ೬-೨-೨)

ದೇವತೆಗಳ ಲೋಕಕ್ಕೆ ಕರೆದುಕೊಂಡುಹೋಗುವ ಮಾರ್ಗವು ನಿನಗೆ ಗೊತ್ತೇ ಅಥವಾ ಪಿತೃಗಳ ಲೋಕಕ್ಕೆ ಕರೆದು ಕೊಂಡುಹೋಗುವ ಮಾರ್ಗವನ್ನು ನೀನು ಅರಿತಿರುವೆಯಾ ಎಂದು ಪ್ರವಾಹಣ ಜೈಬಲಿಯು ಶ್ವೇತಕೇತುವನ್ನು ಕೇಳಿದಾಗ ಅವನು ಇಲ್ಲವೆಂದನು. ಆಗ ಜೈಬಲಿಯು " ಪಿತೃಲೋಕಕ್ಕೆ ಒಯ್ಯುವ ಮಾರ್ಗವೊಂದಿದೆ; ದೇವಲೋಕಕ್ಕೆ ಒಯ್ಯುವ ಮಾರ್ಗ ವೊಂದಿದೆ. ಇವೆರಡೂ ಮರ್ತ್ಯರು ಮರಣಾನಂತರ ಸಂಚರಿಸತಕ್ಕ ಮಾರ್ಗಗಳು ದ್ಯಾವಾಪೃಥಿವಿಗಳ ಅಂತರದಲ್ಲಿರತಕ್ಕ ಈ ಮಾರ್ಗಗಳಲ್ಲಿ ಜಂಗಮಾತ್ಮಕವಾದ ಸಕಲ ಭೂತಗಳೂ ಸಂಚರಿಸುತ್ತವೆ" ಎಂದು ಋಷಿವಾಕ್ಯವನ್ನು ಉಪದೇಶಿಸಿವನು.

**ಶಶ್ವಂತಾ, ವಿಷೂಚೀನಾ, ವಿಯಂತಾ** – ಈ ಪದಗಳು ಭೂತಾತ್ಮ ಕರ್ತ್ರಾತ್ಮರಿಗೆ ವಿಶೇಷಣಗಳು. **ಶಶ್ವಂತಾ— ಅವಿಭಾಗೇನ ಸರ್ವದಾ ವರ್ತಮಾನೌ ।** ಅವಿನಾಭಾವಸಂಬಂಧದಿಂದ ಯಾವಾಗಲೂ ಕೂಡಿಕೊಂಡಿರುವ; **ವಿಷೂ-ಚೀನಾ- ಇಹ ಲೋಕೇ ಸರ್ವತ್ರಗಮನೌ ।** ಈ ಲೋಕದಲ್ಲಿ ಎಲ್ಲೆಲ್ಲೂ ಸಂಚರಿಸತಕ್ಕ; **ವಿಯಂತಾತತ್ತತ್ಫಲೋಪ-**

ಭೋಗಾಯ ಸರ್ವತ್ರ ಲೋಕಾಂತರೇಷು ಗಚ್ಛಂತೌ । ಆಯಾ ಕರ್ಮಗಳ ಫಲಗಳನ್ನನುಭವಿಸಲು ಲೋಕಾಂತರಗಳ ಸಂಚಾರವನ್ನಿಟ್ಟುಕೊಂಡಿರುವ ಎಂದರ್ಥಮಾಡಿದೆ.

ಅನ್ಯಂ ನಿ ಚಿಕ್ಯುಃ ; ಅನ್ಯಂ ಚ ನಿ ಚಿಕ್ಯುಃ—ಭೂತಾತ್ಮನನ್ನು ಜನರು ಅರಿಯುತ್ತಾರೆ. ದೇಹಾತಿರಿಕ್ತನಾದ ಆತ್ಮನನ್ನು ಅರಿಯಲಾರರು. ಅದೇ ಅಲ್ಲದೆ ದೇಹಸಂಬಂಧಿಯಾದ ಆತ್ಮನಿಗೂ ದೇಹಕ್ಕೂ ತಾದಾತ್ಮ್ಯವನ್ನೇ ಕಲ್ಪಿಸಿ ದೇಹಾತ್ಮನ್ಯಾಯದಿಂದಲೇ ವ್ಯವಹರಿಸುತ್ತಾರೆ. ಆದುದರಿಂದಲೇ ಭಗವದ್ಗೀತೆಯಲ್ಲಿ ಅರ್ಜುನನ ವ್ಯಾಮೋಹವನ್ನು ಕುರಿತು ಕೃಷ್ಣನು

ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಂ ।
ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥ (ಭ. ಗೀ. ೨-೧೭)

ದೇಹಾಂತರ್ಗತನಾದ ಆತ್ಮನು ಬೇರೆ; ದೇಹವು ಬೇರೆ; ದೇಹವು ನಶ್ಯವಾದುದು, ಆತ್ಮನು ಅವಿನಶ್ಯನು, ಅವ್ಯಯನು ಆದುದರಿಂದ ದೇಹಾತ್ಮನ್ಯಾಯದಿಂದ ತಾದಾತ್ಮ್ಯವನ್ನು ಹೇಳಲು ಸಾಧ್ಯವಿಲ್ಲವೆಂದು ಹೇಳಿದ್ದಾನೆ. ಒಂದು ವೇಳೆ, ದೇಹಾತಿರಿಕ್ತನಾದ ಆತ್ಮನ ಅರಿವಿದ್ದರೂ ಸಹ ದೈಹಿಕಸಂಬಂಧವಿಲ್ಲದ ಆತ್ಮನ ಸಾಕ್ಷಾತ್ಕಾರವು ಕೆಲವರಿಗಿರುವುದೇ ಇಲ್ಲ. ಆದರ ಅರಿವನ್ನು ಕೇವಲ ಅನುಮಾನದಿಂದ ಊಹಿಸುತ್ತಾರೆಯೇ ಹೊರತು ಅನುಭವರೂಪದಲ್ಲಿ ಸಾಕ್ಷಾತ್ಕಾರಮಾಡಿಕೊಳ್ಳಲಾರರು. ದೇಹಾತಿರಿಕ್ತನಾದ ಆತ್ಮನ ಸ್ವರೂಪವನ್ನು ಬೃಹದಾರಣ್ಯಕಾದಿಗಳಲ್ಲಿ ಈರೀತಿ ವರ್ಣಿಸಿದೆ.

ತಸ್ಯ ಹೈತಸ್ಯ ಪುರುಷಸ್ಯ ರೂಪಂ । ಯಥಾ ಮಹಾರಜನಂ ವಾಸೋ ಯಥಾ ಪಾಂಡ್ವಾವಿಕಂ ಯಥೇಂದ್ರಗೋಪೋ ಯಥಾಗ್ನ್ಯರ್ಚಿರ್ಯಥಾ ಪುಂಡರೀಕಂ ಯಥಾ ಸಕೃದ್ವಿದ್ಯುತ್ತಂ ಸಕೃದ್ವಿದ್ಯುತೇವ ಹ ವಾ ಅಸ್ಯ ಶ್ರೀರ್ಭವತಿ ಯ ಏವಂ ವೇದಾಥಾತ ಆದೇಶೋ ನೇತಿ ನೇತಿ ನ ಹ್ಯೇತಸ್ಮಾದಿತಿ ನೇತ್ಯನ್ಯತ್ಪರಮಸ್ತ್ಯಥ ನಾಮಧೇಯಂ ಸತ್ಯಸ್ಯ ಸತ್ಯ ಇತಿ ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಂ ॥ (ಬೃ. ಉ. ೨-೩-೬)

ಲಿಂಗಾತ್ಮನಾದ ಈ ಪುರುಷನ ರೂಪವು ಕೇಸರವರ್ಣದ ವಸ್ತ್ರದಂತೆಯೂ, ಶುಭ್ರವಾದ ಉಣ್ಣೆಯಂತೆಯೂ, ಇಂದ್ರಗೋಪದಂತೆಯೂ, ಅಗ್ನಿಜ್ವಾಲೆಯಂತೆಯೂ, ಶುಭ್ರವಾದ ಕಮಲಪುಷ್ಪದಂತೆಯೂ, ವಿದ್ಯುತ್ಪ್ರಕಾಶದಂತೆಯೂ ಇರುತ್ತದೆ. ದೇಹಾತಿರಿಕ್ತನಾದ ಈ ಪರಮಾತ್ಮನ ಸ್ವರೂಪವನ್ನು ಹೀಗೆಂದು ವರ್ಣಿಸುವುದಕ್ಕಾಗುವುದಿಲ್ಲ. ಪ್ರಪಂಚದ ಎಲ್ಲಾ ವಸ್ತುಗಳನ್ನೂ ತೆಗೆದುಕೊಂಡು 'ಇದು ಆ ಪರಮಾತ್ಮನಲ್ಲ' 'ಅದೂ ಅಲ್ಲ' ಇತ್ಯಾದಿ ನಿಷೇಧವಾಕ್ಯಗಳಿಂದಲೇ ಅವನ ಸ್ವರೂಪವನ್ನು ವರ್ಣಿಸಬೇಕಾಗಿದೆ. ಆದುದರಿಂದಲೇ "ನೇತಿ ; ನೇತಿ" ಎಂಬ ಶ್ರುತಿವಾಕ್ಯದಿಂದ ಆ ಪರಬ್ರಹ್ಮನ ಸ್ವರೂಪವು ವರ್ಣಿತವಾಗಿದೆ. ಒಂದು ದೃಷ್ಟಿಯಿಂದ ನಿಷೇಧಾರ್ಥಕವಾದ ವಾಕ್ಯಗಳಿಂದಲೇ ವರ್ಣಿಸಬೇಕಾಗಿದೆ. ಆದರೆ ಅದು ಕೇವಲ ನಿಷೇಧರೂಪವಾದ ತತ್ತ್ವಮಾತ್ರವಲ್ಲ. ಅಸ್ತಿತ್ವಪ್ರತಿಪಾದನೆಯೂ ಅದರ ಮಹಾಮಹಿಮೆಯನ್ನು ಪ್ರಶಂಸಿಸುತ್ತವೆ.

ಹಿರಣ್ಮಯೇ ಪರೇ ಕೋಶೇ ವಿರಜಂ ಬ್ರಹ್ಮ ನಿಷ್ಕಲಂ ।
ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಸ್ತದ್ಯದಾತ್ಮವಿದೋ ವಿದುಃ ॥ (ಮು. ಉ. ೨-೨-೯)

ಹಿರಣ್ಮಯವಾದ ಎಂದರೆ ವಿಜ್ಞಾನಸ್ವರೂಪವಾದ ತೇಜಸ್ಸಿನಿಂದ ತುಂಬಿದ ಕೋಶದಲ್ಲಿ ಅವಿದ್ಯಾದಿರಜೋರಹಿತವಾದುದೂ ನಿರವಯವವುಳ್ಳದ್ದೂ, ಸೂರ್ಯಾದಿ ಸಕಲ ಜ್ಯೋತಿಗಳಿಗಿಂತಲೂ ಅಧಿಕವಾದ ಜ್ಯೋತಿಯುಳ್ಳದ್ದೂ ಆದ ಈ ಪರತತ್ತ್ವವು ಪ್ರಕಾಶಿಸುತ್ತಿದೆ. ಆದರೆ ಇದನ್ನು ಆತ್ಮಜ್ಞರುಗಳು ಮಾತ್ರ ಅರಿಯಬಲ್ಲರು. ಇತರರಿಂದ ಸಾಧ್ಯವಿಲ್ಲ.

" ನ ನಿ ಚಿಕ್ಯುಃ " ಯಾರೂ ಅರಿಯಲಾರರು ಎಂದು ಪ್ರಕೃತವಾದ ಋಕ್ಕಿನಲ್ಲಿ ಹೇಳಿರುವುದು ಈ ಆತ್ಮವಿತ್ತುಗಳಿಗೆ ಅನ್ವಯಿಸುವುದಿಲ್ಲ. ಕೇವಲ ಕರ್ಮಪರರಾಗಿ, ಶ್ರವಣರೂಪವಾದ ಜ್ಞಾನದಿಂದಲೇ ತೃಪ್ತರಾಗಿರುವವರಿಗೆ ಈ ನಿಷೇಧವು ಅನ್ವಯಿಸುವುದು. ಈ ನಿಷೇಧದಲ್ಲಿ ಆತ್ಮಜ್ಞಾನವು ಎಷ್ಟು ಕಠಿಣವಾದ ಸಾಧನೆಯಿಂದ ಲಭ್ಯವಾಗತಕ್ಕದ್ದೆಂಬ ವಿಷಯವನ್ನು ಮಾತ್ರ ತಿಳಿಸುತ್ತದೆ. ಆ ಸಾಧನೆಯ ಕ್ಲೇಶವನ್ನು ವರ್ಣಿಸುತ್ತಲೂ, ಕೇವಲ ಆ ಸಾಧನೆಯಿಂದ ಮಾತ್ರ ಬ್ರಹ್ಮತತ್ತ್ವವನ್ನು ತಿಳಿಯಬಹುದೇ ವಿನಾ ಉಳಿದ ಮಾರ್ಗದಿಂದ ಸಾಧ್ಯವೇ ಇಲ್ಲವೆಂದ ಕಠೋಪನಿಷತ್ತಿನಲ್ಲಿ ಈರೀತಿ ತಿಳಿಸಿದೆ.

**ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾನ್ನಿಬೋಧತ ।**
**ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ದುರ್ಗಂ ಪಥಸ್ತತ್ಕವಯೋ ವದಂತಿ ॥**

(ಕಠ. ೧-೩-೧೪)

ಎಲ್ಲರೂ ಏಳಿರಿ, ಎಚ್ಚರವಾಗಿರಿ, ಬ್ರಹ್ಮಜ್ಞರನ್ನು ಆಶ್ರಯಿಸಿ ನೀವೂ ಆ ಬ್ರಹ್ಮತತ್ತ್ವವನ್ನು ತಿಳಿಯಿರಿ. ಆ ಆತ್ಮನು ಕೇವಲ ಸೂಕ್ಷ್ಮವಾದ ಬುದ್ಧಿಗೆ ಮಾತ್ರ ಗೋಚರನಾಗತಕ್ಕವನು. ಸಾಣೆಹಿಡಿದು ಹರಿತವಾಗಿರುವ ಕ್ಷೌರದ ಕತ್ತಿಯ ಅಲಗಿನ ಮೇಲೆ ಕಾಲನ್ನಿಟ್ಟುಕೊಂಡು ನಡೆಯುವುದು ಎಷ್ಟು ಕಠಿಣವಾದುದೋ, ಬ್ರಹ್ಮವನ್ನು ತಿಳಿಯುವ ಮಾರ್ಗವೂ ಕೂಡ ಅಷ್ಟೇ ಕಷ್ಟವೆಂದು ತಿಳಿದವರು ಹೇಳುತ್ತಾರೆ. ಅದೇತಕ್ಕೆಂದರೆ, ಆ ಪರಬ್ರಹ್ಮನು,

**ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾರಸಂ ನಿತ್ಯಮಗಂಧವಚ್ಚ ಯತ್ ।**
**ಅನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯ ತನ್ಮೃತ್ಯುಮುಖಾತ್ಪ್ರಮುಚ್ಯತೇ ॥**

(ಕಠ. ೧-೩-೧೫)

ಅದು ಶಬ್ದವಿಲ್ಲದುದು, ಸ್ಪರ್ಶವಿಲ್ಲದುದು, ರೂಪವಿಲ್ಲದುದು. ಅವ್ಯಯವು ರೂಪರಹಿತವಾದುದು. ಗಂಧರಹಿತವಾದುದು. ಆದರೂ ಅದು ಅನಾದ್ಯನಂತವು ಧ್ರುವವಾದದ್ದು. ಇಂತಹ ಪರತತ್ತ್ವವನ್ನು ಅರಿಯಬೇಕಾದರೆ ಸಾಧನೆಯು ಅತ್ಯಂತ ಕಠಿಣವಾದುದಾಗಿರಬೇಕು. ಈ ಸಾಧನೆಯಿಂದ ಅರಿತರೆ ಮೃತ್ಯುಮುಖದಿಂದ ಪಾರಾಗಬಹುದು.

ಈ ವಿಧವಾಗಿ ಲೌಕಿಕದೃಷ್ಟಾಂತಗಳಿಂದ ನಿಷೇಧರೂಪದಲ್ಲಿಯೂ ದೃಷ್ಟಾಂತರಹಿತವಾಗಿ ಅಲೌಕಿಕವಾದ ಸ್ವರೂಪವರ್ಣನದಿಂದ ಅಸ್ತಿತ್ವರೂಪದಲ್ಲಿಯೂ ವರ್ಣಿತವಾಗಿರುವ ಪರಬ್ರಹ್ಮತತ್ತ್ವವನ್ನು ಅರಿಯುವ ಆವಶ್ಯಕತೆಯನ್ನು ಸೂಚಿಸುತ್ತಾ ಪ್ರಕೃತವಾದ ಋಕ್ಕಿನಲ್ಲಿ ಅಂತಹ ತತ್ತ್ವಜ್ಞರು ವಿರಳವೆಂದು ತೋರಿಸುವುದಕ್ಕಾಗಿ " ನ ನಿ ಚಿಕ್ಯುರನ್ಯಂ " ಎಂದು ತಿಳಿಸಿದೆ.



## ಋಚೋ ಅಕ್ಷರೇ ಪರಮೇ ವ್ಯೋಮನ್ಯಸ್ಮಿನ್ದೇವಾ ಅಧಿ ವಿಶ್ವೇ ನಿಷೇದುಃ । ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ ಯ ಇತ್ತದ್ವಿದುಸ್ತ ಇಮೇ ಸಮಾಸತೇ ॥ ೩೯ ॥

ಋಕ್ಪ್ರಧಾನವಾದ ವೇದಗಳಿಂದ ಪ್ರತಿಪಾದಿತನಾದವನೂ, ನಾಶರಹಿತನೂ, ಉತ್ಕೃಷ್ಟವಾದ ರಕ್ಷಕನಾದವನದ ಆದ ಈ ಪರಮಾತ್ಮನಲ್ಲಿ ಸಕಲ ದೇವತೆಗಳೂ ಆಶ್ರಯವನ್ನು ಪಡೆದಿರುತ್ತಾರೆ. ಯಾವ ಮಾನವನು ವೇದಾಧ್ಯಯನದ ಗುರಿಯು ಪರತತ್ತ್ವ

ವನ್ನರಿಯುವುದರಲ್ಲಿದೆಯೆಂದು ತಿಳಿಯುವುದಿಲ್ಲವೋ ಅವನು ಕೇವಲ ಋಗಾದಿಗಳ ಪಠನದಿಂದ ಯಾವ ಪ್ರಯೋಜನವನ್ನೂ ಹೊಂದುವುದಿಲ್ಲ. ಈ ತತ್ತ್ವವನ್ನು ತಿಳಿಯುವ ಜ್ಞಾನಿಗಳು ಮಾತ್ರ ಬ್ರಹ್ಮೈಕ್ಯವನ್ನು ಪಡೆಯುತ್ತಾರೆ.

ಈ ಋಕ್ಕಿಗೆ ಮೂರು ವಿಧವಾದ ಅರ್ಥಗಳನ್ನು ಹೇಳಬಹುದು. ಎಲ್ಲಾ ಅರ್ಥಗಳೂ **ಋಚಃ** ಎಂಬ ಪದದ ನಿರ್ವಚನ ವನ್ನನುಸರಿಸುತ್ತವೆ. **ಋಚಃ** ಎಂಬ ಪದಕ್ಕೆ ;

೧) ಋಗಾದಿವೇದಗಳೆಂದೂ,

೨) ಅರ್ಚನೀಯವಾದ ಆದಿತ್ಯಮಂಡಲವೆಂದೂ,

೩) ಅರ್ಚನೀಯವಾದ ಜೀವವೆಂದೂ,

ಮೂರು ವಿಧವಾದ ಅರ್ಥವನ್ನು ಹೇಳುವುದು ಸಾಧ್ಯವೆಂದು ಸಾಯಣರು ತೋರಿಸಿದ್ದಾರೆ. ಇವುಗಳಲ್ಲಿ ಋಗಾದಿವೇದ ಗಳೆಂದು ಮೊದಲನೆಯ ಅರ್ಥವನ್ನು ತೆಗೆದುಕೊಂಡರೆ;

೧) **ಋಚಃ— ಋಕ್ ಶಬ್ದೇನ ಋಕ್ಪ್ರಧಾನಭೂತಾಃ ಸಾಂಗಾಪರವಿದ್ಯಾತ್ಮಕಾಶ್ಚತ್ವಾರೋ ವೇದಾಃ ಉಚ್ಯಂತೇ ।** ಋಕ್‌ಶಬ್ದದಿಂದ ಋಕ್ಕೇ ಪ್ರಧಾನವಾಗಿರತಕ್ಕವೂ, ವೇದಾಂಗಗಳಿಂದ ಕೂಡಿದವೂ ಆದ ನಾಲ್ಕು ವೇದಗಳೆಂದರ್ಥ ಇವುಗಳಿಗೆ ಅಪರವಿದ್ಯೆಗಳೆಂದು ಹೆಸರು. ವಿದ್ಯೆಯ ವಿಭಾಗಗಳನ್ನು ತೋರಿಸುತ್ತಾ ಮುಂಡಕೋಪನಿಷತ್ತಿನಲ್ಲಿ **ಪರವಿದ್ಯಾ** ಮತ್ತು **ಅಪರವಿದ್ಯಾ** ಎಂಬ ಎರಡು ಪಂಗಡಗಳನ್ನಾಗಿ ವಿಭಾಗಿಸಿ ಅವುಗಳಲ್ಲಿ,

**ದ್ವೇ ವಿದ್ಯೇ ವೇದಿತ್ಯವೇ ಇತಿ ಹ ಸ್ಮ ಯದ್ಬ್ರಹ್ಮವಿದೋ ವದಂತಿ ಪರಾ ಚೈವಾಪರ ಚ ।**

**ತತ್ರಾಪರಾ ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವವೇದಃ ಶಿಕ್ಷಾ ಕಲ್ಪೋ ವ್ಯಾಕರಣಂ ನಿರುಕ್ತಂ ಛಂದೋ ಜ್ಯೋತಿಷಮಿತಿ । ಅಥ ಪರಾ ಯಯಾ ತದಕ್ಷರಮಧಿಗಮ್ಯತೇ ।** (ಮು. ಉ. ೧-೧-೪,೫)

“ **ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ** ” “ಯಾವ ತತ್ತ್ವವನ್ನು ಅರಿತರೆ **ಸಕಲ** ತತ್ತ್ವಗಳ ಜ್ಞಾನಖೂ ಬರುತ್ತದೆಯೋ ಆ ತತ್ತ್ವವನ್ನು ನನಗೆ ಉಪದೇಶಿಸು” ಎಂದು ಶೌನಕನು ಅಂಗಿರಸ್ಸನ್ನು ಪ್ರಾರ್ಥಿಸಿದಾಗ ಅಂಗಿರಸ್ಸು ಶೌನಕನಿಗೆ ಬ್ರಹ್ಮವಿದ್ಯೆಯನ್ನುಪದೇಶಿಸುತ್ತಾನೆ. ಆಗ ಆ ವಿದ್ಯೆಯಲ್ಲಿ ಎರಡು ವಿಭಾಗವಿದೆಯೆಂದು ತಿಳಿಸುತ್ತಾ ಪುರುಷನು ತಿಳಿಯಬೇಕಾದುದು ಎರಡು ವಿದ್ಯೆಗಳು. ಒಂದು ಪರವಿದ್ಯೆ; ಇನ್ನೊಂದು ಅಪರವಿದ್ಯೆ. ಇವುಗಳಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಶಿಕ್ಷೆ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು ಮತ್ತು ಜ್ಯೋತಿಷ ಇವು ಅಪರ ವಿದ್ಯೆ. ಮತ್ತು ಯಾವುದರಿಂದ ಅಕ್ಷರವು (ನಾಶರಹಿತವಾದ ಬ್ರಹ್ಮಜ್ಞಾನವು) ಪ್ರಾಪ್ತವಾಗುತ್ತದೆಯೋ ಅದು ಪರವಿದ್ಯೆ ಎಂದು ಎರಡು ಭಾಗಗಳನ್ನು ಮಾಡಿ ತೋರಿಸಿದೆ. **ತಸ್ಯಾಃ ಸಂಬಂಧನಿ ಅಕ್ಷರೇ** ಆ ಅಪರವಿದ್ಯಾ ರೂಪವಾದ ಋಗಾದಿಗಳು ಪ್ರತಿಪಾದಿಸುವ ಅಕ್ಷರರೂಪವಾದ ಬ್ರಹ್ಮವು ಎಂದು ಸಾಯಣರು ಅರ್ಥಮಾಡಿ “ ತತ್ರಾಪರಾ ಋಗ್ವೇದಃ........” ಎಂಬ ಮಂತ್ರವನ್ನೂ ತಮ್ಮ ಭಾಷ್ಯಕ್ಕೆ ಆಧಾರವನ್ನಾಗಿ ಉದಹರಿಸಿದ್ದಾರೆ. ಇಲ್ಲಿ ಇನ್ನೊಂದಂಶವನ್ನು ಗಮನಿಸಬೇಕು.

“ ತತ್ರಪರಾ ಋಗ್ವೇದಃ........” ಎಂಬ ವಾಕ್ಯಕ್ಕೆ ಶಂಕರಾಚಾರ್ಯರ ಭಾಷ್ಯವನ್ನು ಬರೆಯುವಾಗ ಅಲ್ಲಿ ಒಂದಾಕ್ಷೇಪ ವನ್ನೂಹಿಸಿಕೊಂಡು ಅದಕ್ಕೆ ಸಮಾಧಾನವನ್ನು ಹೇಳಿದ್ದಾರೆ. “ **ನನು ಕಸ್ಮಿನ್ವಿದಿತೇ ಸರ್ವವಿದ್ಭವತೀತಿ ಶೌನಕೇನ**

**ಪೃಷ್ಟಂ । ತಸ್ಮಿನ್ ವಕ್ತವ್ಯೇಽಪೃಷ್ಟವಮಾಹಾಂಗಿರಾ ದ್ವೇ ವಿದ್ಯೇ ಇತ್ಯಾದಿ"** ಯಾವ ಒಂದು ವಿದ್ಯೆಯನ್ನು ತಿಳಿದರೆ ಬ್ರಹ್ಮತತ್ತ್ವವು ತಿಳಿಯುತ್ತದೆಯೋ ಅಂತಹ ಒಂದು ವಿದ್ಯೆಯನ್ನು ಮಾತ್ರ ಉಪದೇಶಿಸು ಎಂದರೆ ಅಪೃಷ್ಟವಾದ ಎರಡು ವಿದ್ಯೆಗಳನ್ನು ಅಂಗಿರಸ್ಸು ಹೇಳಿದನಲ್ಲಾ ಎಂಬ ಆಕ್ಷೇಪವು ಬಂದರೆ ಅದಕ್ಕೆ ಸಮಾಧಾನವಾಗಿ ಈರೀತಿ ಅರಿಯಬೇಕು. **" ನೈಷ ದೋಷಃ । ಕ್ರಮಾಪೇಕ್ಷತ್ವಾತ್ಪ್ರತಿವಚನಸ್ಯ । ಅಪರಾ ಹಿ ವಿದ್ಯಾ ಅವಿದ್ಯಾ ಸಾ ನಿರಾಕರ್ತವ್ಯಾ । ತದ್ವಿಷಯೇ ಹಿ ವಿದಿತೇ ನ ಕಶ್ಚಿತ್ತತ್ತ್ವತಃ ವಿದಿತಂ ಸ್ಯಾದಿತಿ । ನಿರಾಕೃತ್ಯ ಹಿ ಪೂರ್ವಪಕ್ಷಂ ಪಶ್ಚಾತ್ ಸಿದ್ಧಾಂತೋ ವಕ್ತವ್ಯೋ ಭವತೀತಿ ನ್ಯಾಯಾತ್ ॥ "**

ಇದರಲ್ಲಿ ಯಾವ ದೋಷವೂ ಇಲ್ಲ. ಉತ್ತರವನ್ನು ಕೊಡುವುದರಲ್ಲಿ ಒಂದು ಕ್ರಮವಿರುತ್ತದೆ. ಮೊದಲು ವಿದ್ಯಾ ವಿಭಾಗವನ್ನು ತೋರಿಸಿ ಅದರಲ್ಲಿ ಅಪರವಿದ್ಯೆಯು ನಿಜವಾಗಿಯೂ ಅವಿದ್ಯೆಯೇ ಹೊರತು ತತ್ತ್ವವನ್ನುಪದೇಶಿಸತಕ್ಕ ವಿದ್ಯೆಯಲ್ಲ. ಅದರ ವಿಷಯವನ್ನರಿತರೆ ಬ್ರಹ್ಮತತ್ತ್ವವನ್ನರಿತಂತಾಗುವುದಿಲ್ಲ. ಆದುದರಿಂದ ತತ್ತ್ವಜ್ಞಾನಕ್ಕೆ ಸಾಧಕವಲ್ಲದ ಅಪರವಿದ್ಯಾರೂಪವಾದ ಅವಿದ್ಯೆಯನ್ನು ನಿರಾಕರಿಸಿ ತತ್ತ್ವಜ್ಞಾನಕ್ಕೆ ನಿಜವಾದ ಸಾಧನವಾದ ಪರವಿದ್ಯೆಯನ್ನುಪದೇಶಿಸಿದೆ ಎಂದು ಉತ್ತರವನ್ನು ಹೇಳಿದ್ದಾರೆ. ಆದರೆ ಇಲ್ಲಿ ಋಗಾದ್ಯಪರವಿದ್ಯೆಯು ನಿರಾಕೃತವಾಗತಕ್ಕದ್ದೇ ಎಂಬ ಪ್ರಶ್ನೆಯು ಸಹಜವಾಗಿದೆ. ಇದರಲ್ಲಿ ಮತಭೇದವಿದೆ. ಅಪರವಿದ್ಯೆಯು ಕೇವಲ ಕರ್ಮಪರವಾದುದರಿಂದಲೂ, ಕರ್ಮಫಲವನ್ನುದ್ದೇಶಿಸಿ ಅಶಾಶ್ವತವಾದ ಫಲಸಾಧಕವಾದುದರಿಂದಲೂ ಅದು ತತ್ತ್ವಜ್ಞಾನಕ್ಕೆ ಸಹಾಯಕವಲ್ಲವೆಂದೂ ಒಂದುಮತ. [ಅಥವಾ ಒಂದೇಋಷಿಯ ಬೇರೆ ಬೇರೆ ಮತಗಳಲ್ಲಿ ಒಂದು] ಆದರೆ **ಜ್ಞಾನಕ್ಕೆ** ಪೂರ್ವಭಾವಿಯಾದುದು **ಕರ್ಮವೆಂದೂ**, ಅದೂ ಸಹ ಜ್ಞಾನಸಾಧನವಾಗುತ್ತದೆಂದೂ, ಆದುದರಿಂದ ಕರ್ಮಪ್ರಧಾನವಾದ ಅಪರವಿದ್ಯಾಜ್ಞಾನವು ಅತ್ಯವಶ್ಯವೆಂದೂ ಇನ್ನೊಂದು ಮತ. ಅಪರವಿದ್ಯೆಯು **ಅವಿದ್ಯಾ** ಎಂದು ಶಂಕರಾಚಾರ್ಯರು ಹೇಳಿರುವುದಕ್ಕೆ ಶ್ರುತಿವಾಕ್ಯದ ಆಧಾರವೂ ಇರುತ್ತದೆ. ಉದಾಹರಣೆಗೆ ಈಶಾವಾಸ್ಯೋಪನಿಷತ್ತಿನಲ್ಲಿ **ವಿದ್ಯಾ** ಮತ್ತು **ಅವಿದ್ಯಾ** ಎಂಬೆರಡು ವಿಭಾಗಗಳನ್ನು ಈರೀತಿ ವಿವರಿಸಿದೆ—

**ಅನ್ಯದೇವಾಹುರ್ವಿದ್ಯಯಾ ಅನ್ಯದಾಹುರವಿದ್ಯಯಾ ।**
**ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ವಿಚಚಕ್ಷಿರೇ ॥** (ಈಶ. ಉ. ೧೦)

ವಿದ್ಯೆಯಿಂದ ಒಂದು ಫಲವೂ, ಅವಿದ್ಯೆಯಿಂದ ಇನ್ನೊಂದು ಫಲವೂ ಸಾಧ್ಯವೆಂದು ತಿಳಿದವರು ಹೇಳುತ್ತಾರೆ ಇದರಲ್ಲಿ ವಿದ್ಯಾಫಲವಾವುದು ; ಅವಿದ್ಯಾಫಲವಾವುದು ಎಂದರೆ,

**ಕರ್ಮಣಾ ಪಿತೃಲೋಕೋ ವಿದ್ಯಯಾ ದೇವಲೋಕಃ ॥** (ಬೃ. ಉ. ೧-೫-೧೬)

ವಿದ್ಯೆಯಿಂದ ದೇವಲೋಕವೂ, ಅವಿದ್ಯೆಯಿಂದ ಎಂದರೆ ಕರ್ಮದಿಂದ ಪಿತೃಲೋಕವೂ ಪ್ರಾಪ್ತವಾಗುವುದು ಎಂದು ಬೃಹದಾರಣ್ಯಕೋಪನಿಷತ್ತಿನಲ್ಲಿ ಹೇಳಿರುವಂತೆ ಇಲ್ಲಿಯೂ ತಿಳಿಸಿದೆಯೆಂದು ಶಂಕರಾಚಾರ್ಯರು ಉದಹರಿಸಿರುವ ಈ ಶೋಪನಿಷದ್ವಾಕ್ಯಕ್ಕೆ ಭಾಷ್ಯವನ್ನು ಬರೆಯುತ್ತಾ ತಿಳಿಸಿರುವರು.

**ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯಗ್ಂ ಸಹ ।**
**ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಮೃತಮಶ್ನುತೇ ॥** (ಈಶ. ಉ. ೧೧)

ವಿದ್ಯೆಯನ್ನೂ ಅವಿದ್ಯೆಯನ್ನೂ ಎಂದರೆ ದೇವತಾಜ್ಞಾನವನ್ನೂ, ಕರ್ಮಾನುಷ್ಠಾನವನ್ನೂ ಒಟ್ಟಿಗೆ ಸೇರಿಸಿ ಅವೆರಡರ ಜ್ಞಾನವನ್ನೂ ಯಾವನು ತಿಳಿಯುತ್ತಾನೆಯೋ ಅವನಿಗೆ ಒಂದೇ ಪುರುಷಾರ್ಥದ ಸಂಬಂಧವು ಕ್ರಮವಾಗಿ ಆಗುತ್ತದೆ. ಕರ್ಮಾ

ಚರಣೆಯಿಂದ ಕರ್ಮರೂಪವಾದ ಮೃತ್ಯುವನ್ನು ದಾಟಿ ಅನಂತರ ದೇವತಾಜ್ಞಾನದಿಂದ ಅಮೃತತ್ವವನ್ನು ಪಡೆಯುವನು ಎಂದಿದೆ.

ಈರೀತಿ ಯಾವ ಈ ಅಪರವಿದ್ಯೆಯನ್ನು ಅವಿದ್ಯೆಯೆಂದೂ, ಅದು ನಿರಾಕೃತವಾಗತಕ್ಕದ್ದೆಂದೂ, ಬ್ರಹ್ಮಜ್ಞಾನಕ್ಕೆ ಸಾಧಕವಾಗತಕ್ಕದ್ದಲ್ಲವೆಂದೂ ಹೇಳಿರುವರೋ ಅದೇ ಅಪರವಿದ್ಯೆಯಿಂದ ಪುರುಷಾರ್ಥದ ಸಾಧಕವಾದ ಕರ್ಮಜ್ಞಾನವು ಲಭಿಸಿ ಆ ಕರ್ಮಾನುಷ್ಠಾನದಿಂದಲೇ ದೇವತಾಜ್ಞಾನಕ್ಕೂ ಮಾರ್ಗವನ್ನು ಕಲ್ಪಿಸಿಕೊಳ್ಳಬೇಕೆಂದೂ ಕೆಲವು ಕಡೆಗಳಲ್ಲಿ ಹೇಳಿದೆ. ಅಲ್ಲದೇ ಋಕ್ಕುಗಳು ಕೇವಲ ಕರ್ಮವನ್ನು ಮಾತ್ರ ಪ್ರಶಂಸಿಸಿಲ್ಲ. ಪುರೋಷತ್ತಮನ ಸ್ವರೂಪವನ್ನೂ ಅವು ಪ್ರಶಂಸಿಸಿವೆ. ಉದಾಹರಣೆಗೆ—

**ತಾವಾನಸ್ಯ ಮಹಿಮಾ ತತೋ ಜ್ಯಾಯಾँಶ್ಚ ಪೂರುಷಃ ।**
**ಪಾದೋಽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವೀತಿ ॥** (ಛಾ. ಉ. ೩-೧೨-೫)

ಎಂಬ ಋಕ್ಕನ್ನು ಛಾಂದೋಗ್ಯೋಪನಿಷತ್ತಿನಲ್ಲಿ ಉದಹರಿಸಿ "**ತದೇತದೃಚಾಭ್ಯುಕ್ತಂ**" ಈ ಪರಮಪುರುಷನ ಮಹಿಮೆಯು ಋಕ್ಕಿನಲ್ಲಿ ಪ್ರಶಂಸಿಸಿದೆಯೆಂದು ತಿಳಿಸಿದೆ. (ಛಾ. ಉ. ೩-೧೨-೫) ಆದರೆ ಋಕ್ಸಂಹಿತೆಯಲ್ಲಿ ಈ ಋಕ್ಕಿನ ಆನುಪೂರ್ವಿಯು ಕೊಂಚ ವ್ಯತ್ಯಸ್ತವಾಗಿದೆ.

**ಏತಾವಾನಸ್ಯ ಮಹಿಮಾತೋ ಜ್ಯಾಯಾಂಶ್ಚ ಪೂರುಷಃ ।**
**ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥** (ಋ. ಸಂ. ೧೦-೯೦-೩)

ಗಾಯತ್ರ್ಯಾಖ್ಯನಾದ ಬ್ರಹ್ಮನ ಸ್ವರೂಪವನ್ನು ಈ ಋಕ್ಕಿನಲ್ಲಿ ವರ್ಣಿಸಿದೆ. ಸಮಸ್ತಭೂತಗಳೂ ಇದರ ನಾಲ್ಕನೆಯ ಒಂದು ಭಾಗದಲ್ಲಿ ವ್ಯಾವಹಾರಿಕಪ್ರಪಂಚದಲ್ಲಿರುವುವು. ಉಳಿದ ನಾಲ್ಕನೇ ಮೂರು ಭಾಗವು ದ್ಯುಲೋಕದಲ್ಲಿ ಅಮೃತವಾಗಿರುತ್ತದೆ. ಇದೇ ವಿಧದಲ್ಲಿ ಎಂದು ಬೃಹದಾರಣ್ಯಕಾದಿಗಳಲ್ಲೂ ಸಹ ಋಗ್ವಾಕ್ಯಗಳನ್ನೇ ಉದಹರಿಸಿ ಪರಮಪುರುಷನನ್ನು ವರ್ಣಿಸುವ ಸನ್ನಿವೇಶಗಳು ಅನೇಕವಾಗಿವೆ.

**ತದೇತದೃಚಾಭ್ಯುಕ್ತಂ । ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ ನ ವರ್ಧತೇ ಕರ್ಮಣಾ ನೋ ಕನೀಯಾನ್ । ತಸ್ಯೈವ ಸ್ಯಾತ್ಪದವಿತ್ತಂ ವಿದಿತ್ವಾ ನ ಲಿಪ್ಯತೇ ಕರ್ಮಣಾ ಪಾಪಕೇನ॥**
(ಬೃ. ಉ. ೪-೪-೨೩)

ಬ್ರಹ್ಮನ ನಿತ್ಯವಾದ ಮಹಿಮೆಯು ಕರ್ಮದಿಂದ ಅಧಿಕವೂ ಆಗುವುದಿಲ್ಲ; ಕಡಿಮೆಯೂ ಆಗುವುದಿಲ್ಲ; ಯಾವನು ಈ ಬ್ರಹ್ಮತತ್ವವನ್ನರಿಯುತ್ತಾನೆಯೋ ಅವನಿಗೆ ಕರ್ಮದಲ್ಲಿ ಸಂಗವಿಲ್ಲವೆ ಅವರ ದೋಷದಿಂದ ಬಾಹ್ಯನಾಗಿರುತ್ತಾನೆ. ಇತ್ಯಾದಿಯಾದ ಮಂತ್ರಗಳನ್ನು ಬ್ರಹ್ಮತತ್ತ್ವಪ್ರತಿಪಾದನೆಗೆ ಆಧಾರಗಳನ್ನಾಗಿ ತೋರಿಸಿದೆ. ಆದರೆ ಕೆಲವು ಸಂದರ್ಭಗಳಲ್ಲಿ **ಋಚಾ-ಭ್ಯುಕ್ತಂ** ಎಂದು ಮಂತ್ರಗಳನ್ನು ಪಠಿಸಿದ್ದರೂ ಸಹ ಅವು ಸಾಕ್ಷಾತ್ತಾಗಿ ಋಗ್ವೇದಮಂತ್ರಗಳೇ ಆಗಿರಬಹುದು. ಅಥವಾ ಆನುಪೂರ್ವಿಯಲ್ಲಿ ಅಲ್ಪಸ್ವಲ್ಪ ಬದಲಾವಣೆಯಿರಬಹುದು. ಇದಕ್ಕೆ ಒಂದು ಉದಾಹರಣೆಯನ್ನು ಮೇಲೆ ತಿಳಿಸಿದೆ. (ಛಾ. ಉ. ೩-೧೨-೫; ಋ. ಸಂ. ೧೦-೯೦-೩) ಇದರಂತೆಯೇ ಮುಂಡಕಾದಿಗಳಲ್ಲಿಯೂ ನೋಡಬಹುದು. (ಮು. ಉ. ೩-೨-೧೦; ಪ್ರ. ೧-೭)

ಆದರಿಂದ **ಋಚಃ** ಎಂಬ ಪದಕ್ಕೆ ಪ್ರಕೃತವಾದ ಋಕ್ಕಿನಲ್ಲಿ ಸಾಯಣರು ಹೇಳಿರುವಂತೆ, ಅಪರವಿದ್ಯೆಯೆಂದರ್ಥ ಮಾಡಿದರೆ, ಆ ಅಪರವಿದ್ಯೆಗೆ ಅವಿದ್ಯೆ (ಕರ್ಮ) ಎಂದೂ ಅರ್ಥವಾಗುತ್ತದೆ. ಕರ್ಮಪ್ರಧಾನವಾದ ಈ ಅಪರವಿದ್ಯೆಯು ಜ್ಞಾನಕ್ಕೆ ಸಂಬಂಧಿಸದೇ ಇದ್ದರೆ ಆಗ ಶಂಕರಾಚಾರ್ಯರು ಹೇಳಿರುವಂತೆ ಅದು ನಿಮಿತ್ತವಾಗಬೇಕಾಗುತ್ತದೆ. ಆದರೆ ಇಲ್ಲಿ **ಋಚಃ**

**ಸಂಬಂಧಿನಿ ಅಕ್ಷರೇ** ಎಂದರ್ಥವಾಗುವುದರಿಂದ ಮೇಲೆ ಉದಹರಿಸಿರುವ ಛಾಂದೋಗ್ಯಾದಿಗಳಲ್ಲಿರುವ ಮಂತ್ರಗಳಿಂದ ಪ್ರತಿಪಾದಿತವಾದ **ಅಕ್ಷರ**ವೆಂದರ್ಥವನ್ನು ಹೇಳಬಹುದು. ಬ್ರಹ್ಮತತ್ತ್ವವನ್ನು ವಿವರಿಸುವಾಗ ಮುಖ್ಯವಾದ ಅಂಶವನ್ನು ಪ್ರತಿಪಾದಿಸುವ ಸಮಯಗಳಲ್ಲೆಲ್ಲಾ **ತದೇತದೃಚಾಭ್ಯುಕ್ತಂ** ಎಂದು ಋಙ್ಮಂತ್ರಗಳನ್ನುದಹರಿಸಿಯೇ ಉಪನಿಷತ್ತುಗಳು ತಮ್ಮ ವಿವರಣೆಗಳನ್ನು ಮುಂದುವರಿಸುತ್ತವೆ.

**ಅಕ್ಷರೇ—ಅದೃಶ್ಯಾದಿಗುಣಕೇ—ಕ್ಷರಣರಹಿತೇ ಅನಶ್ವರೇ ನಿತ್ಯೇ ಸರ್ವತ್ರ ವ್ಯಾಪ್ತೇ ಬ್ರಹ್ಮಣಿ। ಅಕ್ಷರಶಬ್ದಸ್ಯ ಬ್ರಹ್ಮವಾಚಕತ್ವಂ।** ಅಕ್ಷರಶಬ್ದಕ್ಕೆ ನಶ್ವರವಲ್ಲದ್ದೂ, ನಿತ್ಯವಾದುದೂ, ಸರ್ವತ್ರ ವ್ಯಾಪ್ತವಾದದ್ದೂ ಆದ ಪರಬ್ರಹ್ಮವೆಂದರ್ಥ. **ಅಕ್ಷರಶಬ್ದಸ್ಯ ಬ್ರಹ್ಮವಾಚಕತ್ವಂ।** ಬ್ರಹ್ಮಶಬ್ದಪರ್ಯಾಯವಾಗಿಯೇ ಉಪನಿಷತ್ತುಗಳಲ್ಲಿ ಅಕ್ಷರಶಬ್ದದ ಪ್ರಯೋಗವಿದೆಯೆಂದು ಸಾಯಣರು ಇದನ್ನು ನಿರೂಪಿಸಲು ಅನೇಕ ಉಪನಿಷದ್ವಾಕ್ಯಗಳನ್ನುದಹರಿಸಿದ್ದಾರೆ.

**ಅಥ ಪರಾ ಯಯಾ ತದಕ್ಷರಮಧಿಗಮ್ಯತೇ।** (ಮು. ೧-೧-೫)

ಬ್ರಹ್ಮತತ್ತ್ವವನ್ನುಪದೇಶಿಸತಕ್ಕ ಪರವಿದ್ಯೆಯಿಂದ ಈ ಅಕ್ಷರದ ಸ್ವರೂಪವು ತಿಳಿಯುತ್ತದೆ. ಇದರ ಸ್ವರೂಪವೇನೆಂದರೆ,

**ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃಶ್ರೋತ್ರಂ ತದಪಾಣಿಪಾದಂ।**
**ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ।**
(ಮು. ೧-೧-೬)

ಅದು ಗೋಚರಾತೀತವಾದುದು, ಗ್ರಾಹ್ಯಾತೀತವಾದುದು, ಅನ್ವಯರಹಿತವಾದುದು, ಅವರ್ಣಾತ್ಮಕವಾದುದು, ಚಕ್ಷುಃಶ್ರೋತ್ರರಹಿತವಾದುದು, ಪಾಣಿಪಾದರಹಿತವಾದುದು; ಮತ್ತು ನಿತ್ಯವೂ, ಸರ್ವವ್ಯಾಪಿಯೂ, ಸರ್ವಗತವೂ, ಅವ್ಯಯವೂ ಆಗಿದೆ. ಧೀಮಂತರು ಇದನ್ನು ಸಕಲಭೂತಗಳಿಗೂ ಉತ್ಪತ್ತಿಸ್ಥಾನವೆಂದು ಅರಿಯುತ್ತಾರೆ.

**ಪರಮೇವಾಕ್ಷರಂ ಪ್ರತಿಪದ್ಯತೇ ಸ ಯೋ ಹ ವೈ ತದಚ್ಛಾಯಮಶರೀರಮಲೋಹಿತಂ**
**ಶುಭ್ರಮಕ್ಷರಂ ವೇದಯತೇ ಯಸ್ತು ಸೋಮ್ಯ।** (ಪ್ರಶ್ನ. ೪-೧೦)

**ಸ ಹೋವಾಚೈತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತ್ಯಸ್ಥೂಲಮನಣ್ವಹ್ರ-**
**ಸ್ವಮದೀರ್ಘಮಲೋಹಿತಮಸ್ನೇಹಂ ............... ನ ತದಶ್ನಾತಿ ಕಿಂಚನ ನ ತದಶ್ನಾತಿ ಕಶ್ಚನ॥**
(ಬೃ. ಉ. ೩-೮-೮)

ಪರತತ್ವವಾದ ಈ ಅಕ್ಷರವು ಸ್ಥೂಲವೂ ಅಲ್ಲ, ಅಲ್ಪವೂ ಅಲ್ಲ, ಹ್ರಸ್ವವೂ ಅಲ್ಲ, ದೀರ್ಘವೂ ಅಲ್ಲ, (ಅಗ್ನಿಯಂತೆ) ಲೋಹಿತವರ್ಣದ್ದೂ ಅಲ್ಲ, (ಉದಕದಂತೆ) ಸ್ನಿಗ್ಧವಾದ್ದೂ ಅಲ್ಲ, ಅದು ಜರಾಮರಣರಹಿತವಾದದ್ದು. ಇತ್ಯಾದಿಯಾಗಿ ಪ್ರಶ್ನೆ, ಬೃಹದಾರಣ್ಯಕ ಇತ್ಯಾದ್ಯುಪನಿಷತ್ತುಗಳಲ್ಲ ವರ್ಣಿತವಾಗಿದೆ.

**ಅಕ್ಷರಂ ನ ಕ್ಷರತಿ ನ ಕ್ಷೀಯತೇ ವಾಕ್ಷಯಾ ಭವತಿ ನಾ** .... .... .... ....। (ನಿ. ೧೩-೧೨)

ಇದು ನಾಶರಹಿತವಾದುದು, ಶಾಶ್ವತವಾದ ಸ್ಥಿತಿಯುಳ್ಳದ್ದು ಇತ್ಯಾದಿಯಾಗಿ ನಿರುಕ್ತಕಾರರೂ ಸಹ ಇದರ ನಿರ್ವಚನವನ್ನು ತಿಳಿಸಿದ್ದಾರೆ.

**ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ।** (ಭ. ಗೀ. ೮-೧)

ನಾಶರಹಿತವಾದ ಈ ಅಕ್ಷರವೇ ಪರಬ್ರಹ್ಮವೆಂದು ಭಗವದ್ಗೀತೆಯಲ್ಲಿಯೂ ಪ್ರತಿಪಾದಿತವಾಗಿದೆ. ಋಙ್ಮಂತ್ರದಿಂದ ಸ್ತುತವಾಗಿರತಕ್ಕದ್ದು ಬ್ರಹ್ಮತತ್ತ್ವವಾದ ಈ ಅಕ್ಷರವು; "**ಋಚಃ ಸಂಬಂಧಿನಿ ಅಕ್ಷರೇ ಬ್ರಹ್ಮಣಿ**" ಎಂದು ಪ್ರಕೃತವಾದ ಋಕ್ಕಿನಲ್ಲಿ ಸಾಯಣರು ವಿವರಿಸಿದ್ದಾರೆ.

**ಋಚಃ ಅಕ್ಷರೇ** ಎಂದಿರುವಾಗ **ಋಗಕ್ಷರಯೋಃ ಪ್ರತಿಪಾದ್ಯಪ್ರತಿಪಾದಕಭಾವಃ ಸಂಬಂಧಃ । ಸರ್ವೈರ್ವೇದೈಃ ಖಲು ಬ್ರಹ್ಮ ಅಧಿಗಮ್ಯತೇ** ಋಕ್ಕಿಗೂ ಮತ್ತು ಬ್ರಹ್ಮತತ್ತ್ವವಾದ ಅಕ್ಷರಕ್ಕೂ ಪ್ರತಿಪಾದ್ಯಪ್ರತಿಪಾದಕಭಾವವಾದ ಸಂಬಂಧವಿರುತ್ತದೆ. ಎಂದರೆ ಅಕ್ಷರವು ಪ್ರತಿಪಾದ್ಯವಾದ ವಿಷಯ. ಮಂತ್ರವು ಪ್ರತಿಪಾದನೆಯನ್ನು ಮಾಡತಕ್ಕದ್ದು. ಬ್ರಹ್ಮತತ್ತ್ವವು ತಿಳಿಯಬೇಕಾದರೆ ವೇದದಿಂದ ಮಾತ್ರ ಸಾಧ್ಯವು. ಅದು ಹೇಗೆಂದರೆ,

**ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ ।** (ಬೃ. ಉ. ೩-೯-೨೬)

ಉಪನಿಷತ್ತುಗಳಲ್ಲಿ ಪ್ರತಿಪಾದಿತನಾದ ಪುರುಷನ ಸ್ವರೂಪವನ್ನು ವರ್ಣಿಸಿ ತಿಳಿಸು ಎಂದು ಕೇಳಿಕೊಳ್ಳುತ್ತೇನೆಂದು ಶಾಕಲ್ಯನು ಯಾಜ್ಞವಲ್ಕ್ಯನನ್ನು ಕೇಳುತ್ತಾನೆ. ಇದರಿಂದ ಮಂತ್ರಕ್ಕೂ ಬ್ರಹ್ಮನಿಗೂ ಪ್ರತಿಪಾದ್ಯಪ್ರತಿಪಾದಕಭಾವವಾದ ಸಂಬಂಧವುಂಟಾಯಿತೆಂದು ಹೇಳಿದರೆ ಇಲ್ಲಿ ಒಂದು ಆಕ್ಷೇಪವು; ಅದನ್ನು ಆಶಂಕಿಸಿ ಸಾಯಣರು **ನನು ಉಪನಿಷದ್ಭಾಗಾನಾಂ ತಥಾಸ್ತು । ಇತರೇಷಾಂ ತು ಕಥಂ ಬ್ರಹ್ಮವಿಷಯತ್ವಮಿತಿ ಉಚ್ಯತೇ ।** ಉಪನಿಷನ್ಮಂತ್ರಗಳಿಗೂ ಬ್ರಹ್ಮಕ್ಕೂ ಪ್ರತಿಪಾದ್ಯಪ್ರತಿಪಾದಕಭಾವಸಂಬಂಧವಿರಲಿ, ಆದರೆ ಉಳಿದ ಋಗಾದಿ ಮಂತ್ರಗಳು ಕೇವಲ ಕರ್ಮಪರವಾದುದರಿಂದ ಅವಕ್ಕೂ ಬ್ರಹ್ಮತತ್ತ್ವಪ್ರತಿಪಾದನೆಗೂ ಏನು ಸಂಬಂಧ ಎಂಬ ಪ್ರಶ್ನೆಯು ಬಂದರೆ ಅದಕ್ಕೆ ಸಮಾಧಾನವನ್ನು ಹೇಳಬಹುದೆಂದು ತಿಳಿಸಿದೆ. (ಈ ವಿಷಯವನ್ನು ಮೇಲೆ ಸೂಕ್ಷ್ಮವಾಗಿ ಚರ್ಚಿಸಿದೆ). **ಯದ್ಯಪಿ ಇತರಭಾಗಾನಾಂ ಯಾಗಾದಿವಿಷಯತ್ವಂ ತಥಾಪಿ ಬುದ್ಧಿಶುದ್ಧ್ಯುತ್ಪಾದನದ್ವಾರಾ ವೇದನಸಾಧನತ್ವೇನ ಬ್ರಹ್ಮವಿಷಯತ್ವಂ ಭವಿಷ್ಯತಿ ।** ಇತರ ವೇದಭಾಗಗಳು ಕೇವಲ ಯಾಗಾದಿ ಕರ್ಮಗಳನ್ನು ನಿರ್ದೇಶಿಸಿದರೂ, ಸಹ ಅವುಗಳನ್ನು ತಿಳಿಯುವುದರಿಂದಾಗಲಿ ಅಥವಾ ಆಯಾ ಕರ್ಮಗಳನ್ನು ನಿರ್ವಹಿಸುವುದರಿಂದಾಗಲಿ ಬುದ್ಧಿಯು ನಿಷ್ಕಲ್ಮಷವಾಗಿ ಬ್ರಹ್ಮಜ್ಞಾನಕ್ಕೆ ಶುದ್ಧವಾದ ಸಾಧನವಾಗುತ್ತದೆ. ಇದನ್ನೇ ಉಪನಿಷತ್ತಿನಲ್ಲಿಯೂ ತಿಳಿಸಿದೆ.

**ಸ ವಾ ಏಷ ಮಹಾನಜ ಆತ್ಮಾ ಯೋಽಯಂ ವಿಜ್ಞಾನಮಯಃ..............................**
**ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ತಪಸಾಽನಾಶಕೇನೈತಮೇವ ವಿದಿತ್ವಾ ಮುನಿರ್ಭವತಿ ।** (ಬೃ. ಉ. ೪-೪-೨೨)

ವಿಜ್ಞಾನಮಯನೂ, ಅಜನೂ ಆದ ಆತ್ಮನನ್ನು ವೇದಾನುವಚನದಿಂದ ಬ್ರಹ್ಮವಿತ್ತುಗಳು ಅರಿತಿದ್ದಾರೆ. ಇದರಿಂದಲೇ ಅರಿಯುತ್ತಾರೆ. ವೇದೋಕ್ತವಾದ ಯಜ್ಞದಿಂದಲೂ, ದಾನದಿಂದಲೂ, ತಪಸ್ಸಿನಿಂದಲೂ ಬ್ರಹ್ಮಜ್ಞಾನವನ್ನು ಪಡೆದ ಪ್ರಶಾಂತ ಚಿತ್ತನು ಮುನಿಯಾಗುತ್ತಾನೆ, ಎಂದಿದೆ. ಶಂಕರಾಚಾರ್ಯರೂ ಸಹ ತಮ್ಮ ಭಾಷ್ಯದಲ್ಲಿ ಈ ವಾಕ್ಯವನ್ನು ವಿವರಿಸುವಾಗ ಇದೇ ಆಕ್ಷೇಪವನ್ನೂಹಿಸಿ,

**ನೈಷ ದೋಷಃ । ಕರ್ಮಣಾಂ ವಿಶುದ್ಧಿಹೇತುತ್ವಾತ್ । ಕರ್ಮಭಿಃ ಸಂಸ್ಕೃತಾ ಹಿ ವಿಶುದ್ಧಾತ್ಮಾನಃ ಶಕ್ನುವಂತ್ಯಾತ್ಮಾನಮುಪನಿಷತ್ಪ್ರಕಾಶಿತಮಪ್ರತಿಬಂಧೇನ ವೇದಿತುಂ ॥**

(ಶಾಂಕರಭಾಷ್ಯ)

ಇದರಲ್ಲಿ ಯಾವ ದೋಷವೂ ಇಲ್ಲ. ಕರ್ಮಾಚರಣೆಯಿಂದ ಆತ್ಮಸಂಸ್ಕಾರವೂ, ಆತ್ಮಶುದ್ಧಿಯೂ ಉಂಟಾಗಿ ಉಪನಿಷತ್ತುಗಳಲ್ಲಿ ಪ್ರತಿಪಾದಿತವಾದ ಪರಮಾತ್ಮನನ್ನು ಯಾವ ಮಾನಸಿಕವಾದ ಪ್ರತಿಬಂಧಕವೂ ಇಲ್ಲದೇ ಸಾಕ್ಷಾತ್ಕರಿಸಲು ಅನುಕೂಲವಾಗುತ್ತದೆ. "**ಜ್ಞಾನಮುತ್ಪದ್ಯತೇ ಪುಂಸಾಂ ಕ್ಷಯಾತ್ಪಾಪಸ್ಯ ಕರ್ಮಣಃ**" ಎಂಬ ಸ್ಮೃತಿವಾಕ್ಯವೂ ಸಹ ಇದೇ ವಿಷಯವನ್ನು ತಿಳಿಸುತ್ತದೆ. ಆದುದರಿಂದ ಉಪನಿಷತ್ತುಗಳಿಲ್ಲದ ಶ್ರುತಿವಾಕ್ಯಗಳಿಗೂ ಬ್ರಹ್ಮಜ್ಞಾನಕ್ಕೂ ಸಂಬಂಧವಿಲ್ಲವೆಂಬುದು ಸರಿಯಲ್ಲವೆಂದು ತಿಳಿಸಿದ್ದಾರೆ.

**ಪರಮೇ ವ್ಯೋಮನಿ— ಉತ್ಕೃಷ್ಟೇ ನಿರತಿಶಯೇ ವ್ಯೋಮನಿ । ಅಲೇಪತ್ವನೀರೂಪತ್ವವ್ಯಾಪಿತ್ವಾದಿ ಸಾದೃಶ್ಯೇನ ವ್ಯೋಮ ಇತ್ಯುಕ್ತಂ ।** ಲಿಪ್ತವಾಗದಿರುವುದೂ, ರೂಪರಹಿತವಾದುದೂ, ವ್ಯಾಪಕವಾದುದೂ ಆದ ಗುಣಗಳಿರುವುದರಿಂದ ಇದೇ ಗುಣಗಳುಳ್ಳ ಅಂತರಿಕ್ಷಕ್ಕೆ ಸಾದೃಶ್ಯವನ್ನು ತೋರಿಸಿ ಬ್ರಹ್ಮನನ್ನು ವರ್ಣಿಸಿದೆ. ಇದೊಂದರ್ಥ ಅಥವಾ **ವಿಶೇಷೇಣ ಸರ್ವಸ್ಯ ರಕ್ಷಕೇ । ನಿರಧಿಷ್ಠಾನ ನ ಕಸ್ಯಚಿದಸ್ತಿ ಸ್ಥಾಧ್ಯಸ್ತಸ್ಯ ಸರ್ವಸ್ಯಾಧಿಷ್ಠಾನತ್ವೇನ ರಕ್ಷಕತ್ವಾತ್ ।** ಸಕಲ ಭೂತಗಳಿಗೂ, ಅಧಿಷ್ಠಾನರೂಪದಲ್ಲಿ ರಕ್ಷಕನಾಗಿರುವುದರಿಂದ **ವ್ಯೋಮ**ವೆಂಬ ವಿಶೇಷಣವಿದೆಯೆಂದೂ ಹೇಳಬಹುದು. ಇಲ್ಲಿ ಎರಡು ಅರ್ಥಗಳಿಗೂ ಅವಕಾಶವಿದೆ. ಮೊದಲನೆಯದಾಗಿ:—

**ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾರಸಂ ನಿತ್ಯಮಗಂಧವಚ್ಚ ಯತ್ ।**
**ಅನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯ ತನ್ಮೃತ್ಯುಮುಖಾತ್ ಪ್ರಮುಚ್ಯತೇ ॥**

(ಕಠ. ೧-೩-೧೫)

ಬ್ರಹ್ಮನು ಶಬ್ದರಹಿತನು, ಸ್ಪರ್ಶವಿಲ್ಲದವನು, ರೂಪರಹಿತನು, ಅವ್ಯಯನು, ನಿತ್ಯನು, ಅನಾದ್ಯನಂತನು, ಮಹತ್ತಿಗಿಂತಲೂ ಪರನಾದವನು, ಧ್ರುವನು. ಇತ್ಯಾದಿ ಗುಣಗಳಿಂದ ಕೂಡಿದ ಈ ಪರಮಾತ್ಮನನ್ನು ಅರಿತವನು ಮುಕ್ತನಾಗುತ್ತಾನೆ ಎಂದು ಅನೇಕ ವಾಕ್ಯಗಳಲ್ಲಿ ಬ್ರಹ್ಮದ ವ್ಯಾಪ್ಯತ್ವವನ್ನೂ ಮಹತ್ತ್ವವನ್ನೂ ಸ್ತುತಿಸಿರುವುದು. ಆದುದರಿಂದ ಇದೇ ಗುಣಗಳುಳ್ಳ ಅಂತರಿಕ್ಷಕ್ಕೆ ಹೋಲಿಸಿ **ವ್ಯೋಮ**ವೆಂಬ ವಿಶೇಷಣವನ್ನು ಹೇಳಿದೆ. ಎರಡನೆಯದಾಗಿ, ವ್ಯೋಮ ಶಬ್ದಕ್ಕೆ ಅಕ್ಷರವೆಂದರ್ಥ ಮಾಡಿದೆ. ಕ್ಷರಣಾರ್ಥಕವಾದ ಧಾತುವಿಗೆ ವಿ ಎಂಬ ಉಪಸರ್ಗವು ಸೇರಿ ಈ ರೂಪವು ನಿಷ್ಪನ್ನವಾಗಿದೆ. ರಕ್ಷಣೆಯೆಂಬರ್ಥದಲ್ಲೂ ವ್ಯಾಪಕವೆಂಬರ್ಥದಲ್ಲೂ ಈ ಪದದ ಪ್ರಯೋಗವನ್ನು **ಋಗ್ವೇದಸಂಹಿತೆಯ** ೧೧ ನೇ ಭಾಗದಲ್ಲಿ 298-299 ನೇ ಪುಟಗಳಲ್ಲಿ ತಿಳಿಸಿದೆ ಮತ್ತು

**ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮೇತಿ । ಸ ಹೋವಾಚ ವಿಜಾನಾಮ್ಯಹಂ ಯತ್ಪ್ರಾಣೋ ಬ್ರಹ್ಮ ಕಂ ಚ ತು ಖಂ ಚ ನ ವಿಜಾನಾಮೀತಿ ತೇ ಹೋಚುರ್ಯದ್ವಾವ ಕಂ ತದೇವ ಖಂ ಯದೇವ ಖಂ ತದೇವ ಕಮಿತಿ ಪ್ರಾಣಂ ಚ ಹಾಸ್ಮೈ ತದಾಕಾಶಂ ಚೋಚುಃ ॥**

(ಛಾ. ಉ. ೪-೧೦-೫)

(ಇದು ಸತ್ಯಕಾಮಜಾಬಾಲನ ಯಜ್ಞಾಗ್ನಿಗಳು ಉಪಕೋಸಲ ಕಾಮಲಾಯನನಿಗೆ ಮಾಡಿದ ಬ್ರಹ್ಮೋಪದೇಶವು.) ಪ್ರಾಣವೇ ಬ್ರಹ್ಮವು, ಬ್ರಹ್ಮನೇ ಆನಂದವು, ಬ್ರಹ್ಮನೇ ಆಕಾಶವು. ಆಗ ಉಪಕೋಸಲನು "ಪ್ರಾಣವೇ ಬ್ರಹ್ಮವೆಂಬುದು ನನಗೆ ಅರ್ಥವಾಗುತ್ತದೆ. ಆದರೆ ಬ್ರಹ್ಮವೇ ಆನಂದವು, ಆಕಾಶವು ಎಂಬ ತತ್ತ್ವವು ನನಗೆ ಅರ್ಥವಾಗುವುದಿಲ್ಲ ಎಂದಾಗ ಅಗ್ನಿಗಳು— "ಆನಂದವೆಂಬುದೇ (ಕ) ಆಕಾಶವು (ಖ) ಆಕಾಶವೇ ಆನಂದವು." ಎಂದು ಹೇಳಿ ಅನಂತರ ಪ್ರಾಣದ ಸ್ವರೂಪವನ್ನೂ ಆಕಾಶದ ಸ್ವರೂಪವನ್ನೂ ಉಪದೇಶಿಸಿದವು, ಇತ್ಯಾದಿ ಉಪನಿಷದ್ವಾಕ್ಯಗಳಲ್ಲಿ ಬ್ರಹ್ಮನಿಗೂ ಆಕಾಶಕ್ಕೂ ತಾದಾತ್ಮ್ಯವನ್ನೇ ಹೇಳಿದೆ.

**ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದುಃ**---**ಯಸ್ಮಿನ್ ಪರಮಾತ್ಮನಿ ಸರ್ವೇ ದೇವಾಃ ನಿಷೀದಂತಿ ಆಶ್ರಿತ್ಯ ತಿಷ್ಠಂತಿ ।** ಯಾವ ಈ ಪರಮಾತ್ಮನಲ್ಲಿ ಸಕಲ ದೇವತೆಗಳೂ ಆಶ್ರಯವನ್ನು ಪಡೆದು ನೆಲಸಿರುವರೋ ಅಂತಹ ಅಕ್ಷರ ರೂಪನಾದ ಪರಮಾತ್ಮನೆಂದು ಒಂದು ವಿಧವಾದ ಅರ್ಥವನ್ನೂ ಅಥವಾ **ಯಸ್ಮಿನ್ ಋಗುಪಲಕ್ಷಿತಾಃ ಸರ್ವೇ ಸಾಂಗಾ ವೇದಾಃ ಪರ್ಯವಸಿತಾಃ ।** ಯಾವ ಈ ಪರಮಾತ್ಮನಲ್ಲಿ ಋಗಾದಿವೇದಗಳೂ ಸಕಲ ವೇದಾಂಗಗಳೂ ಪರ್ಯವಸಿತಗಳಾಗುವುವೋ ಅಂತಹ ಅಕ್ಷರರೂಪನಾದ ಪರಮಪುರುಷನೆಂದು ಇನ್ನೊಂದು ವಿಧವಾಗಿಯೂ ಸಾಯಣರು ಅರ್ಥಮಾಡಿದ್ದಾರೆ. ಸಕಲ ವಿಶ್ವವೂ ಅಕ್ಷರದಲ್ಲಡಗಿದೆ. ಇದರ ಆಶ್ರಯವನ್ನು ಪಡೆದಿದೆ. ಮತ್ತು ಇದರ ಅನುಶಾಸನದಲ್ಲಿ ತಮ್ಮ ತಮ್ಮ ವ್ಯವಹಾರಗಳನ್ನು ನಡೆಸು ತ್ತಿವೆಯೆಂದರ್ಥ. ಉಪನಿಷತ್ತುಗಳಲ್ಲಿ ಈ ಅಂಶವನ್ನು ವರ್ಣಿಸುತ್ತಾ,

> **ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ ವಿಧೃತೇ ತಿಷ್ಠತ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ನಿಮೇಷಾಮುಹೂರ್ತಾ ಅಹೋರಾತ್ರಾಣ್ಯರ್ಧಮಾಸಾ ಮಾಸಾ ಋತವಃ ಸಂವತ್ಸರಾ ಇತಿ ವಿಧೃತಾಸ್ತಿಷ್ಠಂತ್ಯೇತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋಽನ್ಯಾ ನದ್ಯಃ ಸ್ಯಂದಂತೇ ಶ್ವೇತೇಭ್ಯಃ ಪರ್ವತೇಭ್ಯಃ ಪ್ರತೀಚ್ಯೋಽನ್ಯಾ ಯಾಂ ಯಾಂ ಚ ದಿಶಮನ್ವೇ- ತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದದತೋ ಮನುಷ್ಯಾಃ ಪ್ರಶಂಸಂತಿ ಯಜಮಾನಂ ದೇವಾ ದರ್ವೀಂ ಪಿತರೋಽನ್ವಾಯತ್ತಾಃ ॥** (ಬೃ. ಉ. ೩.೮-೯)

ಎಂಬ ವಾಕ್ಯಗಳಲ್ಲಿ ಯಾಜ್ಞವಲ್ಕ್ಯನು ಗಾರ್ಗಿಗೆ ಅಕ್ಷರದ ಸ್ವರೂಪವನ್ನು ವರ್ಣಿಸಿ ತಿಳಿಸಿದ್ದಾನೆ. ಈ ಅಕ್ಷರದ ಪ್ರಶಾಸನದಿಂದಲೇ, ಸೂರ್ಯನೂ ಚಂದ್ರನೂ ಅವರವರ ನಿಯಮಿತವಾದ ಸ್ಥಾನಗಳಲ್ಲಿ ಬೇರ್ಪಟ್ಟು ತಮ್ಮ ಸ್ಥಿರವಾದ ಚಲನವನ್ನಿಟ್ಟುಕೊಂಡಿದ್ದಾರೆ. ಈ ಅಕ್ಷರದ ಪ್ರಶಾಸನದಿಂದಲೇ ದ್ಯಾವಾಪೃಥಿವಿಗಳು ತಮ್ಮ ತಮ್ಮ ನಿಯತವಾದ ಸ್ಥಾನಗಳಲ್ಲಿ ಸ್ಥಿರವಾಗಿವೆ. ಇದರ ಪ್ರಶಾಸನ ದಿಂದಲೇ ನಿಮೇಷಗಳೂ, ಅಹೋರಾತ್ರಾದಿಕಾಲಾವಯವಗಳೂ ತಮ್ಮ ಆವೃತ್ತಿರೂಪವಾದ ಗಮನಾಗಮನಗಳನ್ನು ಇಟ್ಟುಕೊಂಡಿ ರುತ್ತವೆ. ಇದರ ಪ್ರಶಾಸನದಿಂದಲೇ ಸಕಲ ನದಿಗಳೂ ಪ್ರವಹಿಸುತ್ತವೆ. ಮಾನವರು ಹವಿರ್ದಾತರಾಗಿಯೂ, ಹವಿರ್ದಾತನಾದ ಯಜಮಾನನು ಪ್ರಶಸ್ಯನಾಗಿಯೂ ದೇವತೆಗಳೂ ಪಿತೃಗಳೂ ತೃಪ್ತರಾಗಿಯೂ ಇರುತ್ತಾರೆ.

> ತಸ್ಮಾದೃಚಃ ಸಾಮ ಯಜೂಂಷಿ ದೀಕ್ಷಾ ಯಜ್ಞಾಶ್ಚ ಸರ್ವೇ ಕ್ರತವೋ ದಕ್ಷಿಣಾಶ್ಚ ।
> ಸಂವತ್ಸರಶ್ಚ ಯಜಮಾನಶ್ಚ ಲೋಕಾಃ ಸೋಮೋ ಯತ್ರ ಪವತೇ ಯತ್ರ ಸೂರ್ಯಃ ॥
> (ಮುಂಡಕ ೨-೧-೬)

ಈ ಪರಮಪುರುಷನಿಂದಲೇ ಋಕ್ಕುಗಳೂ, ಸಾಮವೂ, ಯಜುಸ್ಸುಗಳೂ, ದೀಕ್ಷೆಗಳೂ, ಸಕಲ ಯಜ್ಞಗಳೂ, ಸಂವತ್ಸ ರವೂ, ಯಜಮಾನನೂ, ಚಂದ್ರಸೂರ್ಯಾದಿಗಳಿರುವ ಲೋಕಗಳೂ ಸಮಸ್ತವೂ ಉದ್ಭವಿಸುತ್ತವೆ.

> **ತಸ್ಮಾಚ್ಚ ದೇವಾ ಬಹುಧಾ ಸಂಪ್ರಸೂತಾಃ ಸಾಧ್ಯಾ ಮನುಷ್ಯಾಃ ಪಶವೋ ವಯಾಂಸಿ ।**
> **ಪ್ರಾಣಾಪಾನೌ ವ್ರೀಹಿಯವೌ ತಪಶ್ಚ ಶ್ರದ್ಧಾ ಸತ್ಯಂ ಬ್ರಹ್ಮಚರ್ಯಂ ವಿಧಿಶ್ಚ ॥**
> (ಮು. ಉ. ೨-೧-೭)

ಈ ಪರಮಪುರುಷನಿಂದಲೇ ದೇವತೆಗಳೂ, ಸಾಧ್ಯರೂ, ಮನುಷ್ಯರೂ, ಪಶುಪಕ್ಷ್ಯಾದಿಗಳೂ, ತಪಸ್ಸು, ಶ್ರದ್ಧೆ, ಸತ್ಯ ಬ್ರಹ್ಮಚರ್ಯ ಇತ್ಯಾದಿಗಳೂ ಹುಟ್ಟಿರುವುವು.

**ಆವಿಃಸನ್ನಿಹಿತಂ ಗುಹಾಚರಂ ನಾಮ ಮಹತ್ಪದಮತ್ರೈತತ್ಸಮರ್ಪಿತಂ ।**

**ಏಜತ್ಪ್ರಾಣನ್ನಿಮಿಷಚ್ಚ ಯದೇತಜ್ಜಾನಥ ಸದಸದ್ವರೇಣ್ಯಂ ಪರಂ ವಿಜ್ಞಾನಾದ್ಯದ್ವರಿಷ್ಠಂ ಪ್ರಜಾನಾಂ ॥**　　(ಮು. ೨-೨-೧)

**ತದೇತದಕ್ಷರಂ ಬ್ರಹ್ಮ ಸ ಪ್ರಾಣಸ್ತದು ವಾಙ್ಮನಃ ।**
**ತದೇತತ್ಸತ್ಯಂ ತದಮೃತಂ ತದ್ವೇದ್ಧವ್ಯಂ ಸೋಮ್ಯ ವಿದ್ಧಿ ॥**　　(ಮು. ೨-೨-೨)

ಎಲ್ಲಾ ಪ್ರಾಣಿಗಳ ಹೃದಯದಲ್ಲಿದ್ದುಕೊಂಡು ಗುಹಾಚರವೆನ್ನಿಸಿಕೊಳ್ಳುವುದೂ, ಸಕಲ ಶ್ರುತಿಗಳಿಗೂ ಆಧಾರವಾಗಿರುವುದೂ, ಪ್ರಾಣನಾದಿ ಸಕಲ ಪ್ರಾಪಂಚಿಕವ್ಯವಹಾರಗಳಿಗೂ ಹೇತುವಾಗಿರುವುದೂ ಆದ ಈ ಅಕ್ಷರವೆಂಬ ಬ್ರಹ್ಮವೇ ಸಕಲ ಭೂತಗಳ ಪ್ರಾಣವು. ಇದೇ ವಾಙ್ಮನಸ್ಸು, ಇದೇ ಸತ್ಯವು, ಇದೇ ಅಮೃತವಾದದ್ದು. ಇದರ ಸಾಕ್ಷಾತ್ಕಾರವನ್ನು ಹೊಂದಬೇಕು. [**ಧನುರ್ಗೃಹೀತ್ವೌಪನಿಷದಂ ಮಹಾಸ್ತ್ರಂ** ಎಂದು ಈ ಲಕ್ಷ್ಯವನ್ನು ಮುಟ್ಟುವ ಕ್ರಮವನ್ನು ಮುಂದಿನ ಮಂತ್ರಗಳಲ್ಲಿ ತಿಳಿಸಿದೆ].

ಋಗಾದಿವೇದಾಧ್ಯಯನವೂ, ವೇದೋಕ್ತವಾದ ಕರ್ಮಾಚರಣೆಯೂ ಸಹ ಈ ಅಕ್ಷರವೆಂಬ ಬ್ರಹ್ಮವನ್ನು ಸಾಕ್ಷಾತ್ಕರಿಸುವ ಸಾಧನಗಳಾಗಬೇಕು. ಈ ಗುರಿಯನ್ನು ಬಿಟ್ಟು ಕೇವಲ ಸಾಧನವನ್ನೇ ನಂಬಿ, ಅದರಲ್ಲೇ ಸಂತು ಮುಖ್ಯವಾದ ಲಕ್ಷ್ಯವನ್ನು ಮರೆತರೆ ಆಗ ವೇದಾಧ್ಯಯನವಾಗಲಿ, ವೇದೋಕ್ತವಾದ ಕರ್ಮಾಚರಣೆಯಾಗಲಿ, ನಿಷ್ಪ್ರಯೋಜಕವಾಗುತ್ತದೆ ಎಂಬಭಿಪ್ರಾಯದಿಂದ ' **ಯಸ್ತನ್ನವೇದ ಕಿಮೃಚಾ ಕರಿಷ್ಯತಿ** ' ಈ ಪರಬ್ರಹ್ಮವನ್ನು ಅರಿಯದಿದ್ದರೆ ಆಗ ಆ ಋಕ್ಕುಗಳನ್ನು ಪಠಿಸಿ ಏನನ್ನು ತಾನೇ ಪಡೆಯಬಲ್ಲನು ? ಎಂದು ಪ್ರಶ್ನಿಸಿದೆ. ಸಾಧ್ಯವನ್ನು ಮರೆತು ಕೇವಲ ಸಾಧನದಲ್ಲಿ ಮಾತ್ರ ಮಗ್ನನಾಗಿರುವ ಪುರುಷನು ಇದ್ದರೆ ಅವನ ಸ್ವರೂಪವನ್ನು ನಿರುಕ್ತಕಾರರು ಈರೀತಿ ತಿಳಿಸಿದ್ದಾರೆ.

**ಸ್ಥಾಣುರಯಂ ಭಾರಹಾರಃ ಕಿಲಾಭೂದಧೀತ್ಯ ವೇದಂ ನ ವಿಜಾನಾತಿ ಯೋಽರ್ಥಂ ।**
**ಯೋಽರ್ಥಜ್ಞ ಇತ್ಸಕಲಂ ಭದ್ರಮಶ್ನುತೇ ನಾಕಮೇತಿ ಜ್ಞಾನವಿಧೂತಪಾಪ್ಮಾ ॥**
(ನಿ. ೧-೧೮)

ವೇದಾಧ್ಯಯನವನ್ನು ಮಾತ್ರ ಮಾಡಿ ಅದರ ಅರ್ಥವನ್ನು ತಿಳಿಯದಿದ್ದರೆ ಅಂತಹ ಪುರುಷನಿಗೆ ಈ ಅಧ್ಯಯನವು ಕೇವಲ ಭಾರವಾಗಿರುತ್ತದೆ. ಅವನು ಭಾರವನ್ನು ವಹಿಸಿರುವ ದಡ್ಡನಾಗಿರುತ್ತಾನೆ. ಆದರೆ ವೇದಾರ್ಥವನ್ನು ಪೂರ್ಣವಾಗಿ ಅರಿತು ವೇದಾಧ್ಯಯನವನ್ನು ಮಾಡತಕ್ಕವನು. ಸಕಲವಿಧವಾದ ಶ್ರೇಯಸ್ಸುಗಳನ್ನೂ ಪಡೆಯುತ್ತಾನೆ. ಪೂರ್ಣವಾದ ಜ್ಞಾನವು ಅವನ ಎಲ್ಲಾ ದೋಷಗಳನ್ನೂ ನಾಶಮಾಡುತ್ತದೆ.

**ಯದ್ಗೃಹೀತಮವಿಜ್ಞಾತಂ ನಿಗದೇನೈವ ಶಬ್ದ್ಯತೇ ।**
**ಅನಗ್ನಾವಿವ ಶುಷ್ಕೈಧೋ ನ ತಜ್ಜ್ವಲತಿ ಕರ್ಹಿಚಿತ್ ॥**　　(ನಿ. ೧-೧೮)

ಅರ್ಥಮಾಡಿಕೊಳ್ಳದೆ ಯಾವ ವಾಕ್ಯವನ್ನು ಪಠಿಸಿದರೂ ಅದು ಕೇವಲ ಶಬ್ದಜಾಲವಾಗುತ್ತದೆ. ಆರಿದ ಬೆಂಕಿಯಲ್ಲಿ ಹಾಕಿದ ಶುಷ್ಕವಾದ ಕಟ್ಟಿಗೆಯು ಯಾವ ರೀತಿ ಪ್ರಜ್ವಲಿಸುವುದಿಲ್ಲವೋ ಅದೇ ರೀತಿ ಅರ್ಥಜ್ಞಾನವಿಲ್ಲದ ಚೇತಸ್ಸೂ ಪ್ರಕಾಶಿಸಲಸಮರ್ಥವಾಗುತ್ತದೆ. ಈ ಭಾವವನ್ನು ಋಕ್ಸಂಹಿತೆಯು ಇತರ ಭಾಗಗಳಲ್ಲೂ ಹೇಳಿರುತ್ತದೆ. ಅರ್ಥವನ್ನರಿಯದೇ ಅಧ್ಯಯನ ಮಾಡುವವನು,

**ಉತ ತ್ವಃ ಪಶ್ಯನ್ನ ದದರ್ಶ ವಾಚಮುತ ತ್ವಃ ಶೃಣ್ವನ್ನ ಶೃಣೋತ್ಯೇನಾಂ ।**
**ಉತೋ ತ್ವಸ್ಮೈ ತನ್ವಂ೧ ವಿ ಸಸ್ರೇ ಜಾಯೇವ ಪತ್ಯ ಉಶತೀ ಸುವಾಸಾಃ ॥**
**(ಋ. ಸಂ. ೧೦-೭೧-೪)**

ಋಙ್ಮಂತ್ರಗಳನ್ನು ನೋಡುತ್ತಿದ್ದರೂ ಸಹ ಅದರ ಫಲಾಭಾವವಿರುವುದರಿಂದ ನೋಡದಿರುವಂತೆಯೇ ಆಗುತ್ತದೆ. ಎಂದರೆ ಅಂಧನಂತಾಯಿತು. ವೇದವಾಕ್ಯವನ್ನು ಕಿವಿಯಲ್ಲಿ ಕೇಳುತ್ತಿದ್ದರೂ ಸಹ ಶ್ರವಣಫಲದ ಅಭಾವದಿಂದ ಕಿವುಡನಂತೆಯೇ ಆಯಿತು. ಆದರೆ ವೇದಾರ್ಥವನ್ನು ಪೂರ್ಣವಾಗಿ ಅರಿತವನಿಗಾದರೋ ಎಂದರೆ ಸುಂದರಳಾದ ಸ್ತ್ರೀಯು ವಸ್ತ್ರಾಲಂಕಾರಾದಿಗಳಿಂದ ಶೋಭಿತಳಾಗಿ ಪತಿಯ ಎದುರಿಗೆ ನಿಂತರೆ ಮನಸ್ಸಿಗೆ ಯಾವ ಹರ್ಷವಾಗುತ್ತದೆಯೋ ಅದರಂತಾಗುತ್ತದೆ. ಅಲ್ಲದೇ,

**ಉತ ತ್ವಂ ಸಖ್ಯೇ ಸ್ಥಿರಪೀತಮಾಹುರ್ನೈನಂ ಹಿನ್ವಂತ್ಯಪಿ ವಾಜಿನೇಷು ।**
**ಅಧೇನ್ವಾ ಚರತಿ ಮಾಯಯೈಷ ವಾಚಂ ಶುಶ್ರುವಾँ ಅಫಲಾಮಪುಷ್ಪಾಂ ॥**
**(ಋ. ಸಂ. ೧೦-೭೧-೫)**

ವೇದಾರ್ಥವನ್ನು ಪೂರ್ಣವಾಗಿ ಅರಿತವನಿಗೆ ವಿದ್ವತ್ಸಭೆಗಳಲ್ಲಿಯೂ ದೇವತೆಗಳ ನಡುವೆಯೂ ಸಹ ಸಖನಿಗೆ ಸಿಕ್ಕತಕ್ಕ ಪ್ರೇಮವೂ ಮರ್ಯಾದೆಯೂ ಸಿಕ್ಕುತ್ತದೆ. ಚರ್ಚೆಗಳು ನಡೆಯುದ ಸಂದರ್ಭದಲ್ಲಿ ಇವನನ್ನು ಸೋಲಿಸುವವರೂ ಸಹ ಯಾರೂ ಇರುವುದಿಲ್ಲ. ಆದರೆ ಅರ್ಥಜ್ಞಾನವಿಲ್ಲದವನು ಫಲಪುಷ್ಪಾದಿಗಳಿಂದ ರಹಿತವಾದ ಕೇವಲ ಶಬ್ದಜಾಲದಲ್ಲಿ ಮುಳುಗುತ್ತಾ ನಿಷ್ಪ್ರಯೋಜಕವಾದ ಭಾರವನ್ನು ವಹಿಸುತ್ತಾ ವಿದ್ವಾಂಸರುಗಳ ನಡುವೆ ಅಲೆಯುತ್ತಿರುವನು. ಬೃಹದಾರಣ್ಯಕಾದ್ಯುಪನಿಷತ್ತುಗಳಲ್ಲಿಯೂ ಸಹ ಈ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಸಿದೆ.

**ತಮೇವ ಧೀರೋ ವಿಜ್ಞಾಯ ಪ್ರಜ್ಞಾಂ ಕುರ್ವೀತ ಬ್ರಾಹ್ಮಣಃ ।**
**ನಾನುಧ್ಯಾಯಾದ್ಬಹೂಞ್ಛಬ್ದಾನ್ ವಾಚೋ ವಿಗ್ಲಾಪನಂ ಹಿ ತತ್ । ಇತಿ ॥**
**(ಬೃ. ಉ. ೪-೪-೨೧)**

ಅಕ್ಷರಾತ್ಮಕವಾದ ಈ ಪರಬ್ರಹ್ಮತತ್ತ್ವವನ್ನು ಧೀಮಂತನಾದವನು ತನ್ನ ವಿಮರ್ಶಾತ್ಮಕವೂ, ಸಾಕ್ಷಾತ್ಕಾರಸಾಧಕವೂ ಆದ ಪ್ರಜ್ಞೆಯನ್ನು ಸಫಲಗೊಳಿಸಬೇಕು. ಅರ್ಥವನ್ನು ಒಳಹೊಕ್ಕು ಪ್ರವೇಶಮಾಡದೆ ಕೇವಲ ಶಬ್ದಾಡಂಬರದಲ್ಲಿಯೇ ತೇಲುತ್ತಿರಬಾರದು. ಬರೀ ಶಬ್ದವು ಆಯಾಸಕಾರಿಯಾಗುತ್ತದೆ. ಮತ್ತು,

**ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನೇತಿ ॥** (ತೈ. ಉ. ೨-೯)

ಅರ್ಥಾನುಸಂಧಾನವಿಲ್ಲದ ಕೇವಲ ವಾಕ್ಕಾದರೆ ಅದು ಪರಬ್ರಹ್ಮವನ್ನು ಸಮಿಾಪಿಸುವುದೇ ಇಲ್ಲ. ಅಂತಹ ಮನಸ್ಸೂ ಸಹ ಬ್ರಹ್ಮವನ್ನು ಸಮಿಾಪಿಸಲಾರದು. ಆದರೆ ಬ್ರಹ್ಮಜ್ಞನು ಬ್ರಹ್ಮಸಾಕ್ಷಾತ್ಕಾರವನ್ನು ಪಡೆದ ಬಳಿಕ ಯಾರಿಗೂ ಹೆದರದೆ ತಾನು ನಿರ್ಭಯನಾಗಿಯೂ, ಪ್ರಶಾಂತಚಿತ್ತನಾಗಿಯೂ ಇರುತ್ತಾನೆ. ಆದುದರಿಂದ ವೇದಾಧ್ಯಯನದ ಫಲವು ಬ್ರಹ್ಮಸಾಕ್ಷಾತ್ಕಾರ ರೂಪದಲ್ಲಿಯೇ ಇರಬೇಕು. ಇಲ್ಲದಿದ್ದರೆ ಅದು ವ್ಯರ್ಥ, ಎಂದು ಸಾಯಣರು ಪ್ರಕೃತವಾದ ಋಕ್ಕಿನ "**ಕಿಮೃಚಾ ಕರಿಷ್ಯತಿ**" ಎಂಬ ಭಾಗವನ್ನು ವಿವರಿಸುತ್ತಾ "**ಪ್ರಯೋಜನಾಭಾವಾತ್ ಸರ್ವಸ್ಯಾಪಿ ವೇದಸ್ಯ ನೈಷ್ಫಲ್ಯಾತ್ ಇತಿ ಭಾವಃ**" ಎಂದು ಆ ವಾಕ್ಯದ ತಾತ್ಪರ್ಯವನ್ನು ತಿಳಿಸಿದ್ದಾರೆ.

ಯ ಇತ್ತದ್ವಿಮುಸ್ತ ಇಮೇ ಸಮಾಸತೇ - ಯೇ ಏವ ತತ್ತತ್ತ್ವಂ ಜಾನಂತಿ ತೇ ಏವ ಜ್ಞಾತಾರಃ ಸಮ್ಯಕ್ ತಿಷ್ಠಂತಿ । ಯಾರು ಈ ಪರತತ್ತ್ವವನ್ನರಿಯುತ್ತಾರೆಯೋ ಅವರು ಮಾತ್ರ ಆತ್ಮಸಾಮರಸ್ಯವನ್ನು ಹೊಂದಿ ಪ್ರಶಾಂತಚಿತ್ತರಾಗುತ್ತಾರೆ.

ಏಕೋ ವಶೀ ಸರ್ವಭೂತಾಂತರಾತ್ಮಾ ಏಕಂ ರೂಪಂ ಬಹುಧಾ ಯಃ ಕರೋತಿ ।
ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಂ ।
(ಕಠ. ೨-೨-೧೨)

ಈ ಪರಮಾತ್ಮನು ಸರ್ವವ್ಯಾಪಿಯು ಜಗತ್ತೆಲ್ಲವೂ ಇವನ ವಶದಲ್ಲಿರುತ್ತದೆ. ಆತ್ಮಸ್ಥನಾದ ಈ ಪರಮಾತ್ಮನನ್ನು ಯಾವ ವಿವೇಕಿಗಳು ಅಂತಶ್ಚಕ್ಷುಸ್ಸಿನಿಂದ ವೀಕ್ಷಿಸಿ ಸಾಕ್ಷಾತ್ಕಾರ ಮಾಡಿಕೊಳ್ಳುವರೋ ಅವರಿಗೆ ಮಾತ್ರ ನಿತ್ಯವೂ ಆತ್ಮಾನಂದ ರೂಪವೂ ಆದ ಸುಖವೂ ಲಭಿಸುತ್ತದೆ. ಇದಿಲ್ಲದವರಿಗೆ ಖಂಡಿತ ಈ ಸುಖಾನುಭವವಿಲ್ಲ.

ಪ್ರಾಣೋ ಹ್ಯೇಷ ಯಃ ಸರ್ವಭೂತೈರ್ವಿಭಾತಿ ವಿಜಾನನ್ವಿದ್ವಾನ್ ಭವತೇ ನಾತಿವಾದೀ ।
ಆತ್ಮಕ್ರೀಡ ಆತ್ಮರತಿಃ ಕ್ರಿಯಾವಾನೇಷ ಬ್ರಹ್ಮವಿದಾಂ ವರಿಷ್ಠಃ ॥ (ಮು. ಉ. ೩-೧-೪)

ವಿಶ್ವಪ್ರಾಣರೂಪನಾದ ಈ ಅಕ್ಷರಬ್ರಹ್ಮನೇ ಸಕಲ ಭೂತಗಳ ರೂಪದಲ್ಲಿಯೂ ತನ್ನನ್ನು ಪ್ರಕಾಶಪಡಿಸುತ್ತಿರುವನು. ಇವನ ತತ್ತ್ವವನ್ನರಿತ ವಿದ್ವಾಂಸನು ಅತಿವಾದಿಯಾಗುವುದಿಲ್ಲ. ಆತ್ಮಕ್ರೀಡನಾಗಿಯೂ ಆತ್ಮರತಿಯುಳ್ಳವನಾಗಿಯೂ ಆಗುತ್ತಾನೆ. ಬ್ರಹ್ಮವಿತ್ತುಗಳಲ್ಲೆಲ್ಲಾ ಇವನೇ ಅತ್ಯಂತ ಶ್ರೇಷ್ಠನು, ಎಂದು ಬ್ರಹ್ಮವಿತ್ತಿನ ಸ್ವರೂಪವನ್ನು ವರ್ಣಿಸುತ್ತಲೂ ಪ್ರಕೃತವಾದ ಋಕ್ಕಿನಲ್ಲಿ "ತ ಇಮೇ ಸಮಾಸತೇ" ಎಂಬ ವಾಕ್ಯದ ಭಾವವನ್ನು ವಿವರಿಸುತ್ತಲೂ, ಮುಂಡಕೋಪನಿಷತ್ತಿನಲ್ಲಿ ಬ್ರಹ್ಮಜ್ಞಾನಿಗಳಾದ ಋಷಿಗಳ ಪ್ರಶಾಂತಚಿತ್ತತೆಯನ್ನು ಈರೀತಿ ವರ್ಣಿಸಿದೆ.

ಸಂಪ್ರಾಪ್ಯೈನಮೃಷಯೋ ಜ್ಞಾನತೃಪ್ತಾಃ ಕೃತಾತ್ಮನೋ ವೀತರಾಗಾಃ ಪ್ರಶಾಂತಾಃ ॥
ತೇ ಸರ್ವಗಂ ಸರ್ವತಃ ಪ್ರಾಪ್ಯ ಧೀರಾ ಯುಕ್ತಾತ್ಮಾನಃ ಸರ್ವಮೇವಾವಿಶಂತಿ ॥
(ಮು. ಉ. ೩-೨-೫)

ಪರತತ್ತ್ವವಾದ ಈ ಆತ್ಮನನ್ನು ಪಡೆದ ಋಷಿಗಳು ಜ್ಞಾನತೃಪ್ತರಾಗಿಯೂ, ಕೃತಾತ್ಮರಾಗಿಯೂ, ರಾಗರಹಿತರಾಗಿಯೂ, ಪ್ರಶಾಂತಚಿತ್ತರಾಗಿಯೂ ಇರುವರು. ಆ ಧೀರರು ಸರ್ವವ್ಯಾಪಿಯಾದ ಆತ್ಮನನ್ನು ಸರ್ವತ್ರ ಸಾಕ್ಷಾತ್ಕರಿಸಿಕೊಂಡವರಾಗಿಯೂ, ಯುಕ್ತಾತ್ಮರಾಗಿಯೂ ಆ ಪರಮಾತ್ಮನಂತೆಯೇ ತಾವೂ ಸರ್ವವ್ಯಾಪಿಗಳಾಗಿಯೂ ಆಗುವರು. ಬ್ರಹ್ಮತಾದಾತ್ಮ್ಯವನ್ನು ಪಡೆದ ಈ ಪರಮಋಷಿಯ ಸ್ವರೂಪವನ್ನು ಬೃಹದಾರಣ್ಯಕೋಪನಿಷತ್ತಿನಲ್ಲಿ ವರ್ಣಿಸುತ್ತಾ,

ಯಸ್ಯಾನುವಿತ್ತಃ ಪ್ರತಿಬುದ್ಧ ಆತ್ಮಾಽಸ್ಮಿನ್ ಸಂದೇಹ್ಯೇ ಗಹನೇ ಪ್ರವಿಷ್ಟಃ ।
ಸ ವಿಶ್ವಕೃತ್ ಸ ಹಿ ಸರ್ವಸ್ಯ ಕರ್ತಾ ತಸ್ಯ ಲೋಕಃ ಸ ಉ ಲೋಕ ಏವ ॥
(ಬೃ. ಉ. ೪-೪-೧೩)

ಯಾವನು ಪ್ರಬುದ್ಧನಾಗಿರುತ್ತಾನೆಯೋ ಮತ್ತು ದುಃಖಹೇತುವಾದುದೂ ಪಿಂಡೀಭೂತವಾದುದೂ ಆದ ಈ ದೇಹವನ್ನು ಪ್ರವೇಶಿಸಿರುವ ಆತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆಯೋ ಅವನು ಸಕಲವನ್ನೂ ನಿರ್ಮಿಸುವ ಶಕ್ತಿಯುಳ್ಳವನಾಗುತ್ತಾನೆ. ಪ್ರಪಂಚವೇ ಅವನಿಗೆ ಸೇರಿದುದು ಅಥವಾ ಅವನೇ ಪ್ರಪಂಚವಾಗಿರುತ್ತಾನೆಂದೂ ಹೇಳಬಹುದು. ಆದುದರಿಂದ,

**ಏಕಧೈವಾನುದ್ರಷ್ಟವ್ಯಮೇತದಪ್ರಮಯಂ ಧ್ರುವಂ ।**
**ವಿರಜಃ ಪರ ಆಕಾಶಾದಜ ಆತ್ಮಾ ಮಹಾನ್ ಧ್ರುವಃ ॥** (ಬೃ. ಉ. ೪-೪-೨೦)

ನಿರಂತರವೂ ಸರ್ವವ್ಯಾಪಿಯೂ ಆದ ಆಕಾಶದಲ್ಲಿ ಐಕ್ಯವನ್ನು ಕಾಣುವಂತೆ ಸರ್ವಾಂತರ್ಯಾಮಿಯಾದ ಈ ಆತ್ಮನಲ್ಲಿ ವಿಶ್ವದ ಐಕ್ಯವನ್ನು ಕಂಡುಕೊಳ್ಳಬೇಕು. [**ವಿಜ್ಞಾನಘನೈಕರಸಪ್ರಕಾರೇಣ ಆಕಾಶವನ್ನಿರಂತರೇಣಾನುದ್ರಷ್ಟವ್ಯಂ ।** (ಶ. ಭಾ.)] ರಜೋರಹಿತನೂ, ಆಕಾಶಕ್ಕಿಂತಲೂ ಮಹತ್ತಾದವನೂ, ಜನ್ಮರಹಿತನೂ, ಧ್ರುವನೂ ಆದ ಪರಮಾತ್ಮನ ಸಾಕ್ಷಾತ್ಕಾರವೇ ಸಕಲಶ್ರುತಿವಾಕ್ಯಗಳ ಲಕ್ಷ್ಯವು ಎಂಬುದನ್ನು ಪ್ರಕೃತವಾದ ಋಕ್ಕಿನಲ್ಲಿ ತಿಳಿಸಿದೆಯೆಂಬುದು ಒಂದು ವಿಧವಾದ ವಿವರಣೆ.

(೨) ಮೇಲೆ ವಿಭಾಗಿಸಿರುವಂತೆ ಈ ಋಕ್ಕಿಗೆ ಹೇಳಿರುವ ನಾಲ್ಕು ಅರ್ಥಗಳಲ್ಲಿ **ಋಚಃ** ಎಂಬ ಪದಕ್ಕೆ **ಋಕ್ಪ್ರಧಾನಭೂತಾಃ ಸಾಂಗಾಪರವಿದ್ಯಾತ್ಮಕಾಶ್ಚತ್ವಾರೋ ವೇದಾಃ ।** ವೇದಾಂಗಗಳಿಂದ ಕೂಡಿದ ನಾಲ್ಕು ವೇದಗಳು ಎಂದೂ, ಇವುಗಳ ಅಧ್ಯಯನವು ಆತ್ಮಸಾಕ್ಷಾತ್ಕಾರಕ್ಕೆ ಸಾಧಕವೆಂದೂ ವಿವರಿಸುವುದು ಒಂದು ಪಕ್ಷ. ಎರಡನೆಯದಾಗಿ **ಋಕ್** ಶಬ್ದಕ್ಕೆ ಅರ್ಚನೀಯವಾದ ಆದಿತ್ಯಮಂಡಲವೆಂದೂ ಅರ್ಥಮಾಡಬಹುದು. ಈ ಪಕ್ಷದ ಅರ್ಥವನ್ನು ನಿರುಕ್ತದಲ್ಲಿ ಈರೀತಿ ವಿವರಿಸಿದೆ.

**ಆದಿತ್ಯ ಇತಿ ಪುತ್ರಃ ಶಾಕಪೂಣೇರೇಷರ್ಗ್ಭವತಿ ಯದೇನಮರ್ಚಂತಿ ಪ್ರತ್ಯೃಚಃ ಸರ್ವಾಣಿ ಭೂತಾನಿ ತಸ್ಯ ಯದನ್ಯನ್ಮಂತ್ರೇಭ್ಯಸ್ತದಕ್ಷರಂ ಭವತಿ ರಶ್ಮಯೋಽತ್ರ ದೇವಾ ಉಚ್ಯಂತೆ ಯ ಏತಸ್ಮಿನ್ನಧಿನಿಷಣ್ಣಾ ಇತ್ಯಧಿದೈವತಂ ॥** (ನಿ. ೧೩-೧೧)

**ಋಚಃ** ಎಂಬ ಶಬ್ದಕ್ಕೆ ಅರ್ಚನೀಯನಾದ ಆದಿತ್ಯನೆಂದರ್ಥವೆಂದೂ, ಯಾವುದರಿಂದ ಈ ಆದಿತ್ಯನನ್ನು ಪೂಜಿಸುತ್ತಾರೋ ಅದಕ್ಕೆ **ಋಕ್** ಎಂಬ ಹೆಸರೆಂದೂ, **ದೇವಾಃ** ಎಂಬ ಪದಕ್ಕೆ ರಶ್ಮಿಗಳೆಂದೂ, ಎಲ್ಲಾ ರಶ್ಮಿಗಳಿಗೂ ಆಧಾರವಾಗಿರುವ ಆದಿತ್ಯನು ಉಪಾಸ್ಯನು ಎಂದು ತಿಳಿಸುವುದೇ ಪ್ರಕೃತವಾದ ಋಕ್ಕಿನ ಉದ್ದಿಶ್ಯವೆಂದೂ ಶಾಕಪೂಣಿಪುತ್ರಮತ

**ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷಃ ।** (ತೈ. ಉ. ೪-೧೩)

ಎಂಬ ಮಂತ್ರವನ್ನು ಸಾಯಣರು ಉದಹರಿಸಿ ಆದಿತ್ಯಮಂಡಲಾಂತರ್ವರ್ತಿಯಾದ ಪುರುಷನನ್ನು ಆರಾಧಿಸುವುದೇ ಲಕ್ಷ್ಯವೆಂದು ಹೇಳುವ ಮತವನ್ನೂ ವಿವರಿಸಿದ್ದಾರೆ. ಆದಿತ್ಯಾಂತರ್ಗತನಾದ ಪರಮಪುರುಷನು ಉಪನಿಷದಾದಿಗಳಲ್ಲಿ ವರ್ಣಿತನಾಗಿರುವುದನ್ನು ಇದೇ ಸೂಕ್ತದಲ್ಲಿ ಹಿಂದೆ ಅನೇಕ ಕಡೆಗಳಲ್ಲಿ ತಿಳಿಸಿದೆ.

**ಅಥಾಧ್ಯಾತ್ಮಂ** ಎಂದು ನಿರುಕ್ತಕಾರರು ಅಧ್ಯಾತ್ಮಪಕ್ಷವಾದ ಮೂರನೆಯ ಮತವನ್ನು ತಿಳಿಸುತ್ತಾ,

**ಶರೀರಮತ್ರ ಋಗುಚ್ಯತೇ ಯದೇನೇನಾರ್ಚಂತಿ ಪ್ರತ್ಯೃಚಃ ಸರ್ವಾಣೀಂದ್ರಿಯಾಣಿ-ತಸ್ಯ ಯದವಿನಾಶಿಧರ್ಮ ತದಕ್ಷರಂ ಭವತೀಂದ್ರಿಯಾಣ್ಯತ್ರ ದೇವಾ ಉಚ್ಯಂತೇ ಯಾನ್ಯಸ್ಮಿನ್ನ-ನಿಷಣ್ಣಾನೀತ್ಯಾತ್ಮಪ್ರವಾದಾಃ ॥** (ನಿ. ೧೩-೧೧)

ಇವರಂತೆ **ಋಕ್** ಶಬ್ದಕ್ಕೆ ಶರೀರವೆಂದರ್ಥ. ನಶ್ಯವಾದ ಶರೀರದಲ್ಲಿ ಯಾವತತ್ತ್ವವು ಅವಿನಾಶಿಯಾಗಿದೆಯೋ ಅದು ಅಕ್ಷರ ಆತ್ಮನೆಂದರ್ಥ. **ದೇವಾಃ** ಎಂಬುದು ಇಂದ್ರಿಯಗಳಿಗೆ ಪರ್ಯಾಯಶಬ್ದವಾಗಿದೆ. ಆ ಇಂದ್ರಿಯಗಳೆಲ್ಲವೂ ದೇಹದಲ್ಲಿ ಅಧಿಷ್ಠಿತಗಳಾಗಿವೆಯೆಂದರ್ಥ.

ಸಾಯಣರು ಇದನ್ನು ಕೊಂಚ ಬದಲಾಯಿಸಿ, (ಋಕ್ ಎಂಬುದಕ್ಕೆ ಶರೀರವೆಂದರ್ಥಮಾಡುವುದಲ್ಲದೆ) **ಋಕ್ ಅರ್ಚನೀಯೋ ಜೀವಃ ತಸ್ಯ ಸಂಬಂಧಿನ್ಯಕ್ಷರೇಽವಿನಾಶೇ ವ್ಯಾಪ್ತೇ ವಾ ಪರಮಾತ್ಮನೀತ್ಯರ್ಥಃ । ಋಕ್** ಶಬ್ದಕ್ಕೆ ಪೂಜ್ಯನಾದ ಜೀವನೆಂದರ್ಥ. ಅದಕ್ಕೆ ಸಂಬಂಧಿಸಿದವನೂ, ನಾಶರಹಿತನಾದವನೂ ಆದ ಪರಮಾತ್ಮನು ಅಕ್ಷರಶಬ್ದದಿಂದ ವ್ಯವಹೃತನಾಗಿದ್ದಾನೆ ಜೀವನಿಗಿಂತಲೂ ಅತಿಶಯವಾದ ಸ್ಥಾನದಲ್ಲಿರುವುದರಿಂದ ಈ ಪರಮಾತನನ್ನು **ಅಕ್ಷರೇ ಪರಮೇ ವ್ಯೋಮನ್** ಎಂದು ವರ್ಣಿಸಿದೆ. **ಯಸ್ಮಿನ್ ಪರಮಾತ್ಮನಿ ದೇವಾ ಗಮನವಂತೋ ವಾ ಇಂದ್ರಿಯಸಂಜ್ಞಕಾ ವಿಶ್ವೇ ಸರ್ವೇಽಪಿ ಅಧಿ ನಿಷೇದುಃ ।** ಸಕಲ ಜೀವಗಳೂ ಈ ಪರಮಾತ್ಮನ ಆಶ್ರಯವನ್ನು ಪಡೆದಿವೆ. ಆದ್ದರಿಂದ ಅವನೊಂದಿಗೆ ಐಕ್ಯವಾಗದಿರತಕ್ಕ ಜೀವರಾಶಿಗಳೆಲ್ಲರೂ ಜರಾಮರಣಾದ್ಯುಪಾಧಿಗಳಿಂದ ಕೂಡಿದ ಶರೀರಸಂಬಂಧಿಗಳಾಗಿರುವುದರಿಂದ ಜೀವನಿಗೆ ದುಃಖವೇ ಹೊರತು ಸುಖವಿಲ್ಲ. ಆದುದರಿಂದ ಪರಮಾತ್ಮನ ಸಾಕ್ಷಾತ್ಕಾರವು ಅತ್ಯವಶ್ಯವೆಂಬುದು ತಾತ್ಪರ್ಯ.

ಋಚಃ ಎಂಬ ಪದಕ್ಕೆ ಪ್ರಣವಪರವಾಗಿಯೂ ಅರ್ಥವನ್ನು ಹೇಳಬಹುದೆಂದು ಸಾಯಣರು ತೋರಿಸಿದ್ದಾರೆ.

**ಋಚೋಽಕ್ಷರೇ -- ಋಗುಪಲಕ್ಷಿತಸರ್ವವೇದಸಂಬಂಧಿನಿ ಅಕ್ಷರೇ ಪ್ರಣವರೂಪೇ ಓಂಕಾರೇ ಅವಿನಾಶಿನಿ ಸರ್ವವೇದೇಷು ವ್ಯಾಪ್ತೇ ವಾ ॥**

ಋಗಾದಿಸರ್ವವೇದಗಳ ಸಾರವಾದುದೂ, ಅವಿನಾಶಿಯಾದುದೂ, ಸರ್ವವೇದಗಳಲ್ಲೂ ವ್ಯಾಪಿಸಿರುವುದೂ ಆದ ಓಂಕಾರದಲ್ಲಿ, ಓಂಕಾರವು ಸರ್ವವೇದಗಳ ಸಾರವೆಂಬುದು ಹೇಗೆಂದರೆ, ಅದಕ್ಕೆ ಶ್ರುತಿವಾಕ್ಯವೇ ಆಧಾರವೆಂದು ಐತರೇಯ ಬ್ರಾಹ್ಮಣದ ವಾಕ್ಯವನ್ನು ಉದಹರಿಸಿದ್ದಾರೆ. ಐತರೇಯಬ್ರಾಹ್ಮಣದಲ್ಲಿ ವೇದಗಳ ಸಾರವಾದ ಪ್ರಣವದ ಆವಿರ್ಭಾವವನ್ನು ಈರೀತಿ ತಿಳಿಸಿದೆ.

**ಪ್ರಜಾಪತಿರಕಾಮಯತ ಪ್ರಜಾಯೇಯ ಭೂಯಾನ್ತ್ಸ್ಯಾಮಿತಿ ಸ ತಪೋಽತಪ್ಯತ ಸ ತಪಸ್ತಪ್ತ್ವೇಮಾँಲ್ಲೋಕಾನಸೃಜತ ಪೃಥಿವೀಮಂತರಿಕ್ಷಂ ದಿವಂ ತಾँಲ್ಲೋಕಾನಭ್ಯತಪತ್ತೇ-ಭ್ಯೋಽಭಿತಪ್ತೇಭ್ಯಸ್ತ್ರೀಣಿ ಜ್ಯೋತೀಂಷ್ಯಜಾಯಂತಾಗ್ನಿರೇವ ಪೃಥಿವ್ಯಾ ಅಜಾಯತ ವಾಯು-ರಂತರಿಕ್ಷಾದಾದಿತ್ಯೋ ದಿವಸ್ತಾನಿ ಜ್ಯೋತೀಂಷಭ್ಯತಪತ್ತೇಭ್ಯೋಽಭಿತಪ್ತೇಭ್ಯಸ್ತ್ರಯೋ ವೇದಾ ಅಜಾಯಂತ ಋಗ್ವೇದ ಏವಾಗ್ನೇರಜಾಯತ ಯಜುರ್ವೇದೋ ವಾಯೋಃ ಸಾಮವೇದ ಆದಿತ್ಯಾತ್ತಾನ್ವೇದಾನಭ್ಯತಪತ್ತೇಭ್ಯೋಽಭಿತಪ್ತೇಭ್ಯಸ್ತ್ರೀಣಿ ಶುಕ್ರಾಣ್ಯಜಾಯಂತ ಭೂರಿತ್ಯೇವ ಋಗ್ವೇದಾದಜಾಯತ ಭುವ ಇತಿ ಯಜುರ್ವೇದಾತ್ಸ್ವರಿತಿ ಸಾಮವೇದಾತ್ । ತಾನಿ ಶುಕ್ರಾಣ್ಯ-ಭ್ಯತಪತ್ತೇಭ್ಯೋಽಭಿತಪ್ತೇಭ್ಯಸ್ತ್ರಯೋ ವರ್ಣಾ ಅಜಾಯಂತಾಕಾರ ಉಕಾರೋ ಮಕಾರ ಇತಿ ತಾನೇಕಧಾಸಮಭರತ್ತದೇತದೋಮಿತಿ ತಸ್ಮಾದೋಮೋಮಿತಿ ಪ್ರಣೌತ್ಯೋಮಿತಿ ವೈ ಸ್ವರ್ಗೋ ಲೋಕ ಓಮಿತ್ಯಸೌ ಯೋಽಸೌ ತಪತಿ ॥** (ಐ. ಬ್ರಾ. ೫-೩೨)

ಪ್ರಜಾಪತಿಯು ತಾನು ವೃದ್ಧಿಯನ್ನು ಹೊಂದಲಿಚ್ಛಿಸಿ ತಪಸ್ಸನ್ನಾಚರಿಸಿದನು. ಆ ತಪಃಪ್ರಭಾವದಿಂದ ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕಗಳನ್ನು ಸೃಷ್ಟಿಸಿ ಅವುಗಳನ್ನು ಪಕ್ವವಾಗುವಂತೆ ಮಾಡಿದನು. ಅವುಗಳಲ್ಲಿ ಪೃಥ್ವಿಯಿಂದ ಅಗ್ನಿಯೂ, ಅಂತರಿಕ್ಷದಿಂದ ವಾಯುವೂ, ದ್ಯುಲೋಕದಿಂದ ಆದಿತ್ಯನು ಉತ್ಪನ್ನರಾದರು. ಇವರನ್ನೂ ಪಕ್ವವಾಗುವಂತೆ ಮಾಡಲು ಅಗ್ನಿ

ಯಿಂದ ಋಗ್ವೇದವೂ, ವಾಯುವಿನಿಂದ ಯಜುರ್ವೇದವೂ, ಆದಿತ್ಯನಿಂದ ಸಾಮವೇದವೂ ಉತ್ಪನ್ನವಾದವು. ಇವುಗಳಲ್ಲಿ ಶುಭ್ರವಾದ ಮೂರು ಧ್ವನಿಗಳು ಹೊರಟವು. ಋಗ್ವೇದದಿಂದ ಭೂಃ ಎಂಬ ಸ್ವರವೂ, ಯಜುರ್ವೇದದಿಂದ **ಭುವಃ** ಎಂಬ ಸ್ವರವೂ, ಸಾಮವೇದದಿಂದ **ಸ್ವರ್** ಎಂಬ ಸ್ವರವೂ ನಿಷ್ಪನ್ನವಾದವು. ಶುಭ್ರವಾದ ಆ ಸ್ವರಗಳನ್ನೂ ಪಕ್ವವಾಗುವಂತೆ ಮಾಡಿದಾಗ **ಅ, ಉ, ಮ** ಎಂಬ ಮೂರು ಅಕ್ಷರಗಳು ಆವಿರ್ಭೂತವಾದುವು. ಅವುಗಳನ್ನೆಲ್ಲಾ ಒಟ್ಟಿಗೆ ಸೇರಿಸಿದಾಗ **ಓಂ** ಎಂಬ **ಪ್ರಣವವು** ರಚಿತವಾಯಿತು. ಓಂ ಎಂಬುದೇ ಸ್ವರ್ಗಲೋಕವು. ಅದೇ ಆದಿತ್ಯನು ಎಂದು ವಿವರಿಸಿ ಓಂಕಾರರೂಪವಾದ ಪ್ರಣವವು ವೇದಗಳ ಸಾರವೆಂದು ತಿಳಿಸಿದೆ.

ಈ ಪ್ರಣವವನ್ನು ಪರಮೇ ವ್ಯೋಮನ್ ಎಂಬ ವಿಶೇಷಣಗಳಿಂದ ವರ್ಣಿಸಿದೆ. **ನ ಹಿ ಪ್ರಣವಾದಧಿಕಂ ಕಿಂಚಿನ್ಮಂತ್ರಜಾತಮಸ್ತೀ ತ್ರಿಕಾಲಾತೀತಸ್ಯ ಬ್ರಹ್ಮಣಃ ಪ್ರತಿಪಾದಕತ್ವಾತ್ ।** ತ್ರಿಕಾಲಾತೀತವಾದ ಬ್ರಹ್ಮತತ್ತ್ವವನ್ನು ಪ್ರತಿಪಾದಿಸುವುದರಿಂದ ಪ್ರಣವಕ್ಕಿಂತಲೂ ಉತ್ಕೃಷ್ಟತರವಾದ ಮಂತ್ರವೇ ಇಲ್ಲವೆಂದಭಿಪ್ರಾಯ. ಅದರ ಮಹಿಮೆಯು ಉಪನಿಷತ್ತುಗಳಲ್ಲಿ ಈರೀತಿ ವರ್ಣಿಸಲ್ಪಟ್ಟಿದೆ.

**ಓಮಿತ್ಯೇತದಕ್ಷರಮಿದಗ್ಂ ಸರ್ವಂ ತಸ್ಯೋಪವ್ಯಾಖ್ಯಾನಂ ಭೂತಂ ಭವದ್ಭವಿಷ್ಯದಿತಿ ಸರ್ವಮೋಂಕಾರ ಏವ । ಯಚ್ಚಾನ್ಯತ್ತ್ರಿಕಾಲಾತೀತಂ ತದಪ್ಯೋಂಕಾರ ಏವ ॥**

(ಮಾ. ಉ. ೧.)

ವಿಶ್ವವೆಲ್ಲವೂ **ಓಂಕಾರಮಯವೇ** ಆಗಿದೆ. ಆದುದರಿಂದ ಓಂಕಾರ ರೂಪವಾದ ಪ್ರಣವವೇ ಪರಬ್ರಹ್ಮನು. ಅದು ಹೇಗೆಂದು ಶಂಕರಾಚಾರ್ಯರು ವಿವರಿಸುತ್ತಾ,

**ಯದಿದಂ ಅರ್ಥಜಾತಂ ಅಭಿಧೇಯಭೂತಂ ತಸ್ಯ ಅಭಿಧಾನವ್ಯತಿರೇಕಾತ್ ಅಭಿಧಾನಸ್ಯ ಚ ಓಂಕಾರಾವ್ಯತಿರೇಕಾತ್ ಓಂಕಾರ ಏವೇದಂ ಸರ್ವಂ, ಪರಂ ಚ ಬ್ರಹ್ಮ ಅಭಿಧಾನಾಭಿಧೇಯೋಪಾಯಪೂರ್ವಕಮೇವ ಗಮ್ಯತೇ ಇತಿ ಓಂಕಾರ ಏವ । ತಸ್ಯ ಏತಸ್ಯ ಪರಾಪರಬ್ರಹ್ಮರೂಪಸ್ಯ ಅಕ್ಷರಸ್ಯ ಓಂ ಇತ್ಯೇತಸ್ಯ ಉಪವ್ಯಾಖ್ಯಾನಂ ॥** (ಮಾ. ಉ. ಶಂಕರ ಭಾಷ್ಯ ೧)

ನಾಮರೂಪಗಳಿಂದ ನಿರ್ದೇಶಿಸಲ್ಪಟ್ಟ ಯಾವ ಯಾವ ವಸ್ತುಗಳು ಲೋಕದಲ್ಲಿ ಅಭಿಧೇಯವಾಗಿರುವುವೋ (ಹೆಸರಿನಿಂದ ಕರೆಯಲ್ಪಡುವುವೋ) ಅವೆಲ್ಲವೂ ಓಂಕಾರಮಯವೇ ಆಗಿವೆ. ಅಭಿಧಾನವೂ ಸಹ (ನಿರ್ದೇಶಮಾಡುವಕ್ರಮ) **ಓಂಕಾರವೇ** ಆಗಿದೆ. ಪರಬ್ರಹ್ಮವೂ ಸಹ ಅಭಿಧಾನ ಮತ್ತು ಅಭಿಧೇಯ ಎಂಬ ಸಾಧನದ ಮೂಲಕವಾಗಿಯೇ ತಿಳಿಯಬರುತ್ತಾದ್ದರಿಂದ ಅದೂ **ಓಂಕಾರವೇ.** ಅಂತಹ ಪರಾಪರಬ್ರಹ್ಮರೂಪವಾದ ಓಂ ಎಂಬೀ ಅಕ್ಷರದ ಉಪಾಖ್ಯಾನವು ಬ್ರಹ್ಮನನ್ನು ಅರಿತುಕೊಳ್ಳುವುದಕ್ಕೆ ಸಾಧನವಾಗಿರುವುದರಿಂದ ಬ್ರಹ್ಮಕ್ಕೆ ಸಮೀಪವಾಗಿದೆ. ಎಂದು ಪ್ರಣವದ ಸ್ತುತಿಯನ್ನು ಮಾಡುವಾಗ ಪ್ರಣವಕ್ಕೂ ಪರಬ್ರಹ್ಮಕ್ಕೂ ತಾದಾತ್ಮ್ಯವನ್ನು ಹೇಳಿದೆ. ತೈತ್ತಿರೀಯೋಪನಿಷತ್ತಿನಲ್ಲಿಯೂ ಸಹ,

ಓಮಿತಿ ಬ್ರಹ್ಮ । ಓಮಿತೀದಗ್ಂ ಸರ್ವಂ । ಓಮಿತ್ಯೇತದನುಕೃತಿ ಹ ಸ್ಮ ವಾ ಅಪ್ಯೋ ಶ್ರಾವಯೇತ್ಯಾಶ್ರಾವಯಂತಿ । ಓಮಿತಿ ಸಾಮಾನಿ ಗಾಯಂತಿ । ಓಗ್ಂಶೋಮಿತಿ ಶಸ್ತ್ರಾಣಿ ಶಗ್ಂಸಂತಿ । ಓಮಿತ್ಯಧ್ವರ್ಯುಃ ಪ್ರತಿಗರಂ ಪ್ರತಿಗೃಣಾತಿ । ಓಮಿತಿ ಬ್ರಹ್ಮಾ ಪ್ರಸೌತಿ । ಓಮಿತ್ಯಗ್ನಿಹೋತ್ರಮನುಜಾನತಿ । ಓಮಿತಿ ಬ್ರಾಹ್ಮಣಃ ಪ್ರವಕ್ಷ್ಯನ್ನಾಹ ಬ್ರಹ್ಮೋಪಾಪ್ನವಾನೀತಿ । ಬ್ರಹ್ಮೈವೋಪಾಪ್ನೋತಿ । (ತೈ. ಉ. ೧-೮)

ಓಂ ಎಂಬುದೇ (ಪ್ರಣವವೇ) ಬ್ರಹ್ಮವು. ವಿಶ್ವವೆಲ್ಲವೂ ಓಂ ಎಂಬುದೇ ಆಗಿದೆ. ಅದೇ ಅನುಕರಣವು. ಸಾಮಗಾನ ಮಾಡುವವರೂ ಅಧ್ವರ್ಯ್ವಾದಿಗಳಿಗೂ ಸಹ ಇದರಿಂದಲೇ ಪ್ರತಿಗರವನ್ನು ಹೇಳುತ್ತಾರೆ. ಅಧ್ಯಯನವನ್ನು ಮಾಡುವುದಕ್ಕೆ ಮೊದಲು ಬ್ರಹ್ಮನನ್ನು ಪಡೆಯೋಣ ಎಂದು ವೇದಾಧ್ಯಯನವನ್ನು ಮಾಡತಕ್ಕವನು ಓಂಕಾರೋಚ್ಚಾರಣದಿಂದ ಬ್ರಹ್ಮನನ್ನೇ ಪಡೆಯುತ್ತಾನೆ. ಓಂ ಎಂದರೆ ಪರಮಾತ್ಮನು. ಇದರ ಉಚ್ಚಾರಣೆಯಿಂದ ಪರಮಾತ್ಮನ ಪ್ರಾಪ್ತಿಯಾಗುತ್ತದೆಂದು ತಿಳಿಸಿದೆ.

**ಓಂಕಾರಪೂರ್ವಂ ಪ್ರವೃತ್ತಾನಾಂ ಕ್ರಿಯಾಣಾಂ ಫಲವತ್ತ್ವಂ ಯಸ್ಮಾತ್, ತಸ್ಮಾತ್ ಓಂಕಾರಂ ಬ್ರಹ್ಮೇತ್ಯುಪಾಸೀತ ಇತ್ಯರ್ಥಃ ।** (ಶಂಕರ ಭಾಷ್ಯ)

ಪ್ರಣವೋಚ್ಚಾರಣೆಗೆ ಬ್ರಹ್ಮಸಾಕ್ಷಾತ್ಕಾರವೇ ಫಲವೆಂದು ಶಂಕರಾಚಾರ್ಯರು ಮೇಲಿನ ವಾಕ್ಯಕ್ಕೆ ಭಾಷ್ಯವನ್ನು ಹೇಳುವಾಗ ತಿಳಿಸಿರುತ್ತಾರೆ.

ಓಂಕಾರರೂಪವಾದ ಪ್ರಣವವು ಅಮೃತತ್ವ ಸಾಧಕವೆಂದು ತಿಳಿಸಲು ಛಾಂದೋಗ್ಯೋಪನಿಷತ್ತಿನಲ್ಲಿ ಒಂದು ಕಥೆಯನ್ನು ಹೇಳಿದೆ. (ಛಾ. ೧-೪)

**ದೇವಾ ವೈ ಮೃತ್ಯೋರ್ಬಿಭ್ಯತಸ್ತ್ರಯೀಂ ವಿದ್ಯಾಂ ಪ್ರಾವಿಶಂಸ್ತೇ ಛಂದೋಭಿರಚ್ಛಾದಯನ್ಯದೇಭಿರಚ್ಛಾದಯಂಸ್ತಚ್ಛಂದಸಾಂ ಛಂದಸ್ತ್ವಂ ॥ ೨ ॥**

**ತಾನು ತತ್ರ ಮೃತ್ಯುರ್ಯಥಾ ಮತ್ಸ್ಯಮುದಕೇ ಪರಿಪಶ್ಯೇದೇವಂ ಪರ್ಯಪಶ್ಯದೃಚಿ ಸಾಮ್ನಿ ಯಜುಷಿ । ತೇ ನು ವಿದಿತ್ವೋರ್ಧ್ವಾ ಋಚಃ ಸಾಮ್ನೋ ಯಜುಷಃ ಸ್ವರಮೇವ ಪ್ರಾವಿಶನ್ ॥ ೩ ॥**

**ಯದಾ ವಾ ಋಚಮಾಪ್ನೋತ್ಯೋಮಿತ್ಯೇವಾತಿಸ್ವರತ್ಯೇವಂ ಸಾಮೈವಂ ಯಜುರೇಷ ಉ ಸ್ವರೋ ಯದೇತದಕ್ಷರಮೇತದಮೃತಮಭಯಂ ತತ್ಪ್ರವಿಶ್ಯ ದೇವಾ ಅಮೃತಾ ಅಭಯಾ ಅಭವನ್ ॥ ೪ ॥**

**ಸ ಯ ಏತದೇವಂ ವಿದ್ವಾನಕ್ಷರಂ ಪ್ರಣೌತ್ಯೇತದೇವಾಕ್ಷರಂ ಸ್ವರಮಮೃತಮಭಯಂ ಪ್ರವಿಶತಿ ತತ್ಪ್ರವಿಶ್ಯ ಯದಮೃತಾ ದೇವಾಸ್ತದಮೃತೋ ಭವತಿ ॥ ೫ ॥**

ದೇವತೆಗಳು ಮೃತ್ಯುವಿಗೆ ಹೆದರಿ ತ್ರಯೀರೂಪವಾದ ವಿದ್ಯೆಯಲ್ಲಿ ಆಶ್ರಯವನ್ನು ಪಡೆದು ಅದನ್ನು ಛಂದಸ್ಸುಗಳಿಂದ ಮರೆಸಿದರು. (ಆದುದರಿಂದಲೇ ಅದಕ್ಕೆ ಛಂದಸ್ಸೆಂದು ಹೆಸರು) ಆದರೆ ನೀರಿನೊಳಗೆ ಮೀನುಗಳನ್ನು ಸುಲಭವಾಗಿ ಕಂಡುಹಿಡಿಯುವಂತೆ ಮೃತ್ಯುವು ಋಗಾದಿಗಳಲ್ಲಿ ಅಡಗಿದ್ದ ದೇವತೆಗಳನ್ನು ಕಂಡುಕೊಂಡಿತು. ಆಗ ಅವರು ಋಕ್ಕಿನಿಂದಲೂ ಯಜುಸ್ಸಿನಿಂದಲೂ, ಸಾಮದಿಂದಲೂ ಹೊರಕ್ಕೆದ್ದು ಸ್ವರದಲ್ಲಿ ಅಡಗಿಕೊಂಡು ಅದರ ಆಶ್ರಯವನ್ನು ಪಡೆದರು. [ಆದುದರಿಂದಲೇ ಋಗಾದಿಗಳ ಸಮಾಪ್ತಿಕಾಲದಲ್ಲಿ ಓಂಕಾರವನ್ನು ಪಠಿಸುತ್ತಾರೆ.] ಈ ಓಂಕಾರರೂಪವಾದ ಸ್ವರವು ಅಮೃತವೂ ಅಭಯರೂಪದ್ದೂ ಆಗಿದೆ. ದೇವತೆಗಳೂ ಸಹ ಇದರ ಆಶ್ರಯವನ್ನು ಪಡೆದು ಅಮೃತತ್ವವನ್ನೂ ಅಭಯವನ್ನೂ ಹೊಂದಿದರು ಯಾರು ಈ ತತ್ತ್ವವನ್ನರಿತು ಈ ಓಂಕಾರರೂಪವಾದ ಸ್ವರದ ಆಶ್ರಯವನ್ನು ಪಡೆಯುತ್ತಾರೆಯೋ ಅವರೂ ಅಮೃತರಾಗುತ್ತಾರೆ, ಅಭಯವನ್ನು ಪಡೆಯುತ್ತಾರೆ.

**ಯಸ್ಮಿನ್ ವಿಶ್ವೇ ಸರ್ವೇ ದೇವಾ ಅಧಿ ನಿಷೇದುಃ । ಪ್ರಣವಸ್ಯ ಸರ್ವಮಂತ್ರಾತ್ಮಕತ್ವಾತ್ ಮಂತ್ರೇಷು ಸರ್ವದೇವತಾನಾಂ ನಿವಾಸಾತ್ ಸರ್ವದೇವನಿವಾಸತ್ವಂ । ಬ್ರಹ್ಮಾಧಿಷ್ಠಾನತ್ವಾದ್ವಾ ಬ್ರಹ್ಮಣಿ ಸರ್ವದೇವಾನಾಂ ನಿವಾಸಾತ್ ॥** ಪ್ರಣವದಲ್ಲಿ ಸಕಲವಾದ ದೇವತೆಗಳೂ ಅಧಿಷ್ಠಿತರಾಗಿದ್ದಾರೆ. ಹೇಗೆಂದರೆ, ಇದನ್ನು ಎರಡು ವಿಧದಲ್ಲಿ ಹೇಳಬಹುದು. ಮಂತ್ರಗಳು ದೇವತೆಗಳ ನಿವಾಸಸ್ಥಾನವು. ಪ್ರಣವವು ಸರ್ವಮಂತ್ರಾತ್ಮಕವಾಗಿದೆ. ಆದುದರಿಂದ ಪ್ರಣವವು ದೇವತೆಗಳ ನಿವಾಸಸ್ಥಾನವು ಎಂದು ಒಂದು ವಿಧವಾಗಿ ಹೇಳಬಹುದು ಅಥವಾ ಪ್ರಣವವು ಬ್ರಹ್ಮನ ಅಧಿಷ್ಠಾನವು. ಬ್ರಹ್ಮನು ಸಕಲ ದೇವತೆಗಳ ಅಧಿಷ್ಠಾನವು. ಆದುದರಿಂದ ಪ್ರಣವವು ದೇವತೆಗಳಿಗೆಲ್ಲಾ ಅಧಿಷ್ಠಾನವು.

ಆದುದರಿಂದ ಪ್ರಣವದ ಉಪಾಸನೆಯಿಲ್ಲದೆ ಬ್ರಹ್ಮಸಾಕ್ಷಾತ್ಕಾರವಿಲ್ಲವೆಂದು ತಿಳಿಸುವುದಕ್ಕಾಗಿ **"ಕಿಮೃಚಾ ಕರಿಷ್ಯತಿ"** ಎಂದು ಪ್ರಕೃತವಾದ ಋಕ್ಕಿನಲ್ಲಿ ವಿವರಿಸಿ, **ಯ ಇತ್ತದ್ವಿದುಸ್ತ ಇಮೇ ಸಮಾಸತೇ ।** ಯಾರು ಇದನ್ನು ಅರಿಯುವರೋ ಅವರು ಆತ್ಮಸಾಮರಸ್ಯವನ್ನು ಪಡೆಯುವರೆಂದಿದೆ. ಪ್ರಕೃತವಾದ ಋಕ್ಕಿನಲ್ಲಿ **ಅಕ್ಷರಶಬ್ದಕ್ಕೆ ಪ್ರಣವವೆಂದರ್ಥ**ಮಾಡಿದರೆ ಆಗ ಪ್ರಣವರೂಪವಾದ ಬ್ರಹ್ಮವನ್ನು ಸಾಕ್ಷಾತ್ಕರಿಸಲು ಪ್ರಣವರೂಪವಾದ ಸಾಧನದಿಂದಲೇ ಸಾಧ್ಯವೆಂಬುದನ್ನು ಮುಂಡಕೋಪನಿಷತ್ತಿನಲ್ಲಿ ಈರೀತಿ ತಿಳಿಸಿದೆ.

**ತದೇತದಕ್ಷರಂ ಬ್ರಹ್ಮ ಸ ಪ್ರಾಣಸ್ತದು ವಾಙ್ಮನಃ ।**
**ತದೇತತ್ಸತ್ಯಂ ತದಮೃತಂ ತದ್ವೇದ್ಧವ್ಯಂ ಸೋಮ್ಯ ವಿದ್ಧಿ ॥** (ಮು. ಉ. ೨-೨-೨)

ಯಾವ ಪರತತ್ತ್ವದಲ್ಲಿ ಸಕಲ ಲೋಕಗಳೂ ಅಡಗಿರುವುವೋ ಅದೇ ಅಕ್ಷರವೆಂಬ ಬ್ರಹ್ಮವು. ಅದೇ ಪ್ರಾಣವು. ಅದೇ ವಾಙ್ಮನಸ್ಸು. ಅದೇ ಸತ್ಯವು. ಅದೇ ಅಮೃತವು. ಅದನ್ನೇ ಲಕ್ಷ್ಯವನ್ನಾಗಿ ಮಾಡಿಕೊಂಡು ಅದನ್ನು (ಗುರಿಯನ್ನು) ಸಾಧಿಸಬೇಕು. ಅದು ಹೇಗೆಂದರೆ

**ಧನುರ್ಗೃಹೀತ್ವೌಪನಿಷದಂ ಮಹಾಸ್ತ್ರಂ ಶರಂ ಹ್ಯುಪಾಸಾನಿಶಿತಂ ಸಂಧಯೀತ ।**
**ಆಯಮ್ಯ ತದ್ಭಾವಗತೇನ ಚೇತಸಾ ಲಕ್ಷ್ಯಂ ತದೇವಾಕ್ಷರಂ ಸೋಮ್ಯ ವಿದ್ಧಿ ॥** (ಮು. ಉ. ೨ ೨-೩)

ಔಪನಿಷದ ಮಹಾಸ್ತ್ರವಾದ ಧನುಸ್ಸನ್ನು ತೆಗೆದುಕೊಂಡು ಉಪಾಸನೆಯೆಂಬ ಹರಿತವಾಗಿರುವ ಬಾಣವನ್ನು ಜೋಡಿಸಬೇಕು. ಅದನ್ನು ಎಳೆದುಕೊಂಡು ಅದರ ಭಾವನೆಯಲ್ಲಿಯೇ ಇರುವ ಚಿತ್ತದಿಂದ ಲಕ್ಷ್ಯವಾದ ಅಕ್ಷರವನ್ನು ಹೊಡೆಯಬೇಕು.

**ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।**
**ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ॥** (ಮು. ಉ. ೨-೨-೪)

ಪ್ರಣವವೇ ಧನುಸ್ಸು. ಆತ್ಮನೇ ಬಾಣ. ಬ್ರಹ್ಮವೇ ಲಕ್ಷ್ಯ. ಅದನ್ನು ಎಚ್ಚರತಪ್ಪದೆ ಹೊಡೆಯಬೇಕು. ಬಾಣದಂತೆ ತನ್ಮಯನಾಗಬೇಕು. ಹೇಗೆ ಧನುಸ್ಸು ಗುರಿಯಲ್ಲಿ ಬಾಣವು ಹೋಗಿ ಸೇರುವುದಕ್ಕೆ ಕಾರಣವಾಗಿರುವುದೋ ಅದರಂತೆ ಆತ್ಮನೆಂಬ ಬಾಣವು ಅಕ್ಷರವೆಂಬ ಗುರಿಯಲ್ಲಿ ಸೇರುವುದಕ್ಕೆ ಓಂಕಾರರೂಪವಾದ ಪ್ರವಣವು ಕಾರಣವು. ಜೀವನು ಪ್ರಣವವನ್ನು ಅಭ್ಯಾಸಮಾಡಿದರೆ ಎಂದರೆ ಉಪಾಸನೆಮಾಡಿದರೆ ಅದರಿಂದ ಸಂಸ್ಕಾರವುಂಟಾಗಿ ಅದನ್ನು ಆಶ್ರಯಿಸಿಕೊಂಡು ಯಾವ ಅಡ್ಡಿಯೂ ಇಲ್ಲದೆ ಅಕ್ಷರವನ್ನು ಸೇರಿ ಅಲ್ಲಿ ನೆಲೆಸುತ್ತಾನೆಂದರ್ಥ.

ಈ ರೀತಿಯಾಗಿ ಸಾಯಣರು ಪ್ರಕೃತವಾದ ಋಕ್ಕಿಗೆ ನಾಲ್ಕು ವಿಧವಾದ ಅರ್ಥವನ್ನು ತೋರಿಸಿ ಅವೆಲ್ಲಕ್ಕೂ ನಿರುಕ್ತದಿಂದಲೂ ಉಪನಿಷತ್ತುಗಳಿಂದಲೂ ಆಧಾರಗಳನ್ನು ಕೊಟ್ಟಿರುತ್ತಾರೆ.

**ಸೂಯವಸಾದ್ಭಗವತೀ ಹಿ ಭೂಯಾ ಅಥೋ ವಯಂ ಭಗವಂತಃ ಸ್ಯಾಮ । ಅದ್ಧಿ ತೃಣಮಘ್ನ್ಯೇ ವಿಶ್ವದಾನೀಂ ಪಿಬ ಶುದ್ಧಮುದಕ ಮಾಚರಂತೀ ॥ ೪೦ ॥**

ಅಹಿಂಸಿತಳಾದ ಎಲೈ ಗೋವೇ, ಶ್ರೇಷ್ಠವಾದ ತೃಣಾದಿಗಳನ್ನು ಭಕ್ಷಿಸುತ್ತಾ ಪೂಜ್ಯವಾದ ಕ್ಷೀರಸಂಪತ್ತಿನಿಂದ ಕೂಡಿಕೊಂಡು ಇರು. ಅನಂತರ ನಾವೂ ಸಹ ಪ್ರಭೂತವಾದ ಧನವಂತರಾಗಿ ಆಗುವೆವು. ನೀನಃ ಸರ್ವದಾ ತೃಣವನ್ನು ಭಕ್ಷಿಸು. ಎಲ್ಲಾ ಕಡೆಯೂ ಸಂಚರಿಸುತ್ತಾ ಪವಿತ್ರವಾದ ಉದಕವನ್ನು ಕುಡಿ.

ಅಗ್ನಿಹೋತ್ರಾದಿಗಳಿಗಾಗಿ ಹಾಲುಕರೆಯುವಾಗ ಹಸುವು ಕೆಟ್ಟ ಧ್ವನಿಯಿಂದ ಕೂಗಿದರೆ ಆಗ **ಸೂಯವಸಾತ್** ಎಂಬ ಈ ಋಕ್ಕನ್ನು ಪಠಿಸಿ ಹಸುವಿಗೆ ತೃಣಾದಿ ಆಹಾರವನ್ನು ಕೊಡಬೇಕೆಂದು ಆಶ್ವಲಾಯನಶ್ರೌತಸೂತ್ರದ **ವಾಶ್ಯಮಾನಾಯೈ ಯವಸಂ ಪ್ರಯಚ್ಛೇತ್ ಸೂಯವಸಾದ್ಭಗವತೀ ಹಿ ಭೂಯಾಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೩-೧೧) ಮತ್ತು ಪ್ರವರ್ಗ್ಯವೆಂಬ ಯಾಗವಿಶೇಷದಲ್ಲಿ ಅಭಿಷ್ಟವಕಾಲದಲ್ಲಿ ಈ ಋಕ್ಕನ್ನು ಪರಿಧಾನಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಸೂಯವಸಾದ್ಭಗವತೀ ಹಿ ಭೂಯಾ ಇತಿ ಪರಿದಧ್ಯಾತ್** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೭).

ಅಗ್ನಿಹೋತ್ರಾರ್ಥವಾಗಿ ಉದ್ದೇಶಿಸಿದ ಗೋವು ಕುತ್ಸಿತವಾದ ಶಬ್ದವನ್ನು ಮಾಡಿದ ಪಕ್ಷದಲ್ಲಿ ಆಗ ಈ ಮಂತ್ರವನ್ನು ಪಠಿಸಿ ಯವಸಾದಿಗಳನ್ನು ಕೊಡಬೇಕೆಂಬ ವಿಧಿಯಿದೆ.

**" ವಾಶ್ಯಮಾನಾಯೈ ಯವಸಂ ಪ್ರಯಚ್ಛೇತ್ ಸೂಯವಸಾದ್ಭಗವತೀ ಹಿ ಭೂಯಾಃ "**
(ಆಶ್ವ. ಶ್ರೌ. ೩-೧೧)

ಎಂದು ಆಶ್ವಲಾಯನಶ್ರೌತಸೂತ್ರವು ಈ ಮಂತ್ರದ ವಿನಿಯೋಗವನ್ನು ತಿಳಿಸುತ್ತದೆ.

**ಅಘ್ನ್ಯೇ**—ಈ ಪದವು ಗೋನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) ನಿರುಕ್ತಕಾರರು ಈ ಪದದ ನಿರ್ವಚನವನ್ನು ತೋರಿಸುತ್ತಾ,

**ಅಘ್ನ್ಯಾ—ಅಹಂತವ್ಯಾ ಭವತಿ । ಅಘಘ್ನೀ ಇತಿ ವಾ ।** (ನಿ. ೧೧-೪೩)

ಇದು ಕೊಲ್ಲಲ್ಪಡತಕ್ಕದ್ದಲ್ಲ ಎಂಬುದರಿಂದಾಗಲೀ, ಅಥವಾ ಪಾಪವನ್ನು ನಾಶಮಾಡತಕ್ಕದ್ದು ಎಂಬುದರಿಂದಾಗಲಿ **ಅಘ್ನ್ಯಾ** ಎಂಬ ಹೆಸರು ಬಂದಿದೆ ಎಂದು ವಿವರಿಸಿ, ಪ್ರಕೃತವಾದ ಋಕ್ಕನ್ನೇ ಉದಹರಿಸಿ ಈ ಋಕ್ಕಿಗೆ ಪೂರ್ಣವಾದ ವ್ಯಾಖ್ಯಾನವನ್ನು ಬರೆದಿದ್ದಾರೆ. ಕೇವಲ ಗೋವಿನ ಪರವಾದರೆ ಈ ಮಂತ್ರದ ತಾತ್ಪರ್ಯವು ಸುಲಭವಾಗಿ ಅರ್ಥವಾಗುತ್ತದೆ. ದುರ್ಗಾಚಾರ್ಯರು ನಿರುಕ್ತವಾಕ್ಯಕ್ಕೆ ವ್ಯಾಖ್ಯಾನವನ್ನು ಬರೆಯುತ್ತಾ ಗೋವಿನ ಪರವಾಗಿ ಒಂದರ್ಥವನ್ನೂ, ಮಾಧ್ಯಮಿಕಾವಾಕ್ಕಿನ ಪರವಾಗಿ ಇನ್ನೊಂದರ್ಥವನ್ನೂ ತಿಳಿಸಿದ್ದಾರೆ. ಇದಕ್ಕೆ ನಿರುಕ್ತವು ಈರೀತಿಯಿದೆ—

**ಸುಯವಸಾದಿನೀ ಭಗವತೀ ಹಿ ಭವಾಥೇದಾನೀಂ ವಯಂ ಭಗವಂತಃ ಸಮಾದ್ಧಿ ತೃಣಮಘ್ನ್ಯೇ ಸರ್ವದಾ ಪಿಬ ಚ ಶುದ್ಧಮುದಕಮಾಚರಂತೀ ।** (ನಿ. ೧೧-೪೩)

ಇಲ್ಲಿ ಗೋವಿನ ಪರವಾದ ಅರ್ಥವು ಮೇಲೆ ಭಾವಾರ್ಥದಲ್ಲಿ ತಿಳಿಸಿದಂತೆಯೇ ಆಗುತ್ತದೆ. ಮಾಧ್ಯಮಿಕಾವಾಕ್ಕಿನ ಪರವಾದರೆ – **ಶೋಭನಂ ಯವಸಮುದಕಮಧ್ಯಾತ್ಮೀಕೃತ್ಯ ಸೂರ್ಯಾತ್ ತೇನ 'ಭಗವತೀ' ಧನವತೀ ಉದಕೇನ ಉದಕವತೀ ಭವ** । ಸೂಯವಸವೆಂದರೆ ಶ್ರೇಷ್ಠವಾದ ಉದಕವೆಂದೂ, ಇದಕ್ಕೆ ಆಧಾರವಾದ ಆದಿತ್ಯನಿಂದ ಉದಕವನ್ನು ಪಡೆದು ಪೂರ್ಣವಾದ ಉದಕವುಳ್ಳವಳಾಗು ಎಂಬ ಮೊದಲನೆಯ ಪ್ರಾರ್ಥನೆಯೂ, ಅನಂತರ, **"ಅಥೋ ವಯಂ ಭಗವಂತಃ ಸ್ಯಾಮ"** ಅನಂತರ ನಿನ್ನಿಂದ ಉತ್ಸೃಷ್ಟವಾದ ಉದಕದಿಂದ ನಾವೂ ಉದಕವುಳ್ಳವರಾಗುತ್ತೇವೆ. ತತ್ಪರಿಣಾಮವಾಗಿ ಅನ್ನಾದಿಸಂಪತ್ತನ್ನು ಗಡೆಯುತ್ತೇವೆ ಎಂಬ ಹಾರೈಕೆಯೂ ಪೂರ್ವಾರ್ಧದ ತಾತ್ಪರ್ಯವು.

**ಅದ್ಧಿ ತೃಣಂ** ಎಂಬ ವಾಕ್ಯದಲ್ಲಿ **ತೃಣ**ಶಬ್ದಕ್ಕೆ **ಮೇಘವೆಂದರ್ಥ.** ಘನೀಭೂತವಾದ **ಮೇಘವು** ಘರ್ಷಿತವಾಗಿ ಸೀಳಲ್ಪಟ್ಟು ಅನಂತರ ವೃಷ್ಟಿಪತನವಾಗುತ್ತದೆ **ತೃದ್ಯತೇಽಸೌ ಇತಿ ತೃಣಃ** ಸೀಳು ಎಂದರ್ಥವನ್ನು ಕೊಡುವ **ತೃದ್** ಧಾತುವಿನಿಂದ ನಿಷ್ಪನ್ನವಾಗಿ ಘರ್ಷಣವಾಗಿ ಸೀಳಲ್ಪಡುವುದರಿಂದ ಮೇಘಕ್ಕೆ ತೃಣವೆಂಬ ಹೆಸರೆಂದು ದುರ್ಗಾಚಾರ್ಯರ ವಿವರಣೆಯಿದೆ. [**ತೃನ್ನಾದ್ಭಿತ್** ತೃಣಂ ಎಂದು ನಿರುಕ್ತಕಾರರು ಬೇರೆ ಸಂದರ್ಭದಲ್ಲಿ ಈ ಪದದ ನಿರ್ವಚನವನ್ನು ತಿಳಿಸಿದ್ದಾರೆ. (ನಿ. ೧-೨೨) ] ಇಂತಹ ಮೇಘವನ್ನು **ಅದ್ಧಿ** ಎಂದರೆ ಘನೀಭೂತವಾದ ಮೇಘವು ಕರಗುವಂತೆ ಮಾಡಿ ನೀರನ್ನು ಸುರಿಸು ಎಂದರ್ಥ.

**ಶುದ್ಧಮಾಚರಂತೀ**—ಯಾವಾಗಲೂ ಅಂತರಿಕ್ಷದಲ್ಲೇ ಸಂಚರಿಸುವುದರಿಂದ ಯಾವ ಅಶುದ್ಧಿಯೂ ಇಲ್ಲದೆ **ಉದಕಂ**—ಸೂರ್ಯರಶ್ಮಿಯಿಂದ ಅಪಹೃತವಾದ ಉದಕವನ್ನು, **ಆಚರಂತೀ**—ಸೇವಿಸುತ್ತಾ, **ವಿಶ್ವದಾನೀಂ** ವೃಷ್ಟಿಕಾಲವು ಪ್ರಾಪ್ತವಾದಾಗಲೆಲ್ಲಾ, **ಪಿಬ**—ಕುಡಿ, ಎಂದು ಪುನಃ ಪ್ರಾರ್ಥಿಸಿದೆ.



**ಗೌರೀರ್ಮಿಮಾಯ ಸಲಿಲಾನಿ ತಕ್ಷತ್ಯೇಕಪದೀ ದ್ವಿಪದೀ ಸಾ ಚತುಷ್ಪದೀ ।**
**ಅಷ್ಟಾಪದೀ ನವಪದೀ ಬಭೂವುಷೀ ಸಹಸ್ರಾಕ್ಷರಾ ಪರಮೇ**
**ವ್ಯೋಮನ್ ॥ ೪೧ ॥**

ಅಂತರಿಕ್ಷಸ್ಥಳಾದ ಮಾಧ್ಯಮಿಕಾ ವಾಕ್ಕು ಶಬ್ದಮಾಡುತ್ತಾಳೆ. ಉದಕಗಳನ್ನು ಸಂಪಾದಿಸುವವಳಾಗಿಯೂ, ಒಂದು, ಎರಡು, ನಾಲ್ಕು, ಎಂಟು ಮತ್ತು ಒಂಭತ್ತು ಅಧಿಷ್ಠಾನಗಳುಳ್ಳವಳಾಗಿಯೂ ಇರುತ್ತಾ ಉತ್ಕೃಷ್ಟವಾದ ಅಂತರಿಕ್ಷದಲ್ಲಿ **ಅಪರಿಮಿತ**ವಾದ ವ್ಯಾಪ್ತಿಯುಳ್ಳವಳಾಗುತ್ತಾಳೆ.

ಈ ಋಕ್ಕಿಗೆ ಮಾಧ್ಯಮಿಕವಾದ ವಾಕ್ಕಿನ ಪರವಾಗಿ ಒಂದು ವಿಧವಾಗಿಯೂ, ಶಬ್ದಬ್ರಹ್ಮಾತ್ಮಕವಾದ ವಾಕ್ಕಿನ ಪರವಾಗಿ ಇನ್ನೊಂದು ವಿಧವಾಗಿಯೂ ಅರ್ಥಮಾಡಿದೆ.

**ಗೌರೀಃ** **ಗೌರೀ ರೋಚತೇರ್ಜ್ವಲತಿಕರ್ಮಣಃ** । ದೀಪ್ತ್ಯರ್ಥಕವಾದ **ರುಚ್** ಧಾತುವಿನಿಂದ ನಿಷ್ಪನ್ನವಾಗಿದೆ. [**ಅಯಮಪೀತರೋ ಗೌರೋ ವರ್ಣ ಏತಸ್ಮಾದೇವ ಪ್ರಶಸ್ಯೋ ಭವತಿ** । ವರ್ಣವಾಚಕವಾದ ಗೌರಶಬ್ದವೂ ಸಹ ಈ ಧಾತುವಿನಿಂದಲೇ ನಿಷ್ಪನ್ನವಾಗಿ ಅತ್ಯಂತ ಪ್ರಶಸ್ಯವಾಗಿರುತ್ತದೆ] ಎಂದು ತಿಳಿಸಿ ನಿರುಕ್ತಕಾರರು ಪ್ರಕೃತವಾದ ಋಕ್ಕನ್ನೂ ಉದಹರಿಸಿ ವಿಶದವಾಗಿ ವಿವರಿಸಿದ್ದಾರೆ. ಇದರ ನಿರುಕ್ತವು ಈರೀತಿಯಿದೆ—

**ಗೌರೀರ್ಮಿಮಾಯ ಸಲಿಲಾನಿ ತಕ್ಷತೀ ಕುರ್ವತ್ಯೇಕಪದೀ ಮಧ್ಯಮೇನ, ದ್ವಿಪದೀ ಮಧ್ಯಮೇನ ಚಾದಿತ್ಯೇನ ಚ, ಚತುಷ್ಪದೀ ದಿಗ್ಭಿಃ, ಅಷ್ಟಾಪದೀ ದಿಗ್ಭಿಶ್ಚಾವಾಂತರದಿಗ್ಭಿಶ್ಚ, ನವಪದೀ ದ್ವಿಶ್ಚಾವಾಂತರದಿಗ್ಭಿಶ್ಚಾದಿತ್ಯೇನ ಚ ಸಹಸ್ರಾಕ್ಷರಾ ಬಹೂದಕಾ ಪರಮೇ ವ್ಯವನೇ ॥**
(ನಿ. ೧೧-೪೦)

ಉದಕಗಳನ್ನು ಸೃಷ್ಟಿಸುತ್ತಾ ಅಂತರಿಕ್ಷಸ್ಥಳದ ಮಾಧ್ಯಮಿಕಾ ವಾಕ್ಕು ಶಬ್ದಮಾಡುತ್ತಾಳೆ. **ಏಕಪದಿಯೆಂದರೆ** ಮಧ್ಯಮ ರೂಪವಾದ ಒಂದಧಿಷ್ಠಾನವುಳ್ಳವಳೆಂದರ್ಥ. ಇದನ್ನು ಸಾಯಣರು ವಿವರಿಸುತ್ತಾ **ಮೇಘೇ ವರ್ತಮಾನಾ ಗಮನಸಾಧನೇನ ವಾಯುನಾ ಏಕಪದೀ ವಾ ।** ಮೇಘಸ್ಥಳಾದುದರಿಂದಾಗಲಿ ಅಥವಾ ತನ್ನ ಸಂಚಾರಕ್ಕೆ ಸಾಧನಭೂತವಾದ ವಾಯು ರೂಪವಾದ ಅಧಿಷ್ಠಾನವನ್ನು ಹೊಂದಿರುವುದರಿಂದಾಗಲಿ ಏಕಪದಿಯೆಂಬ ವಿಶೇಷಣವಿದೆಯೆಂದು ತಿಳಿಸಿದ್ದಾರೆ.

**ದ್ವಿಪದೀ ಮಧ್ಯಮೇನ ಚಾದಿತ್ಯೇನ ಚ**--ಅಂತರಿಕ್ಷ, ಆದಿತ್ಯ ಈ ಎರಡು ಅಧಿಷ್ಠಾನವುಳ್ಳವಳು ಅಥವಾ **ಮೇಘಾಂತರಿಕ್ಷಾಖ್ಯದ್ವ್ಯಧಿಷ್ಠಾನಾ ।** ಮೇಘ ಮತ್ತು ಅಂತರಿಕ್ಷರೂಪವಾದ ಎರಡು ಅಧಿಷ್ಠಾನಗಳುಳ್ಳವಳು.

**ಚತುಷ್ಪದೀ--ದಿಗ್ಭಿಃ ದಿಕ್ಚತುಷ್ಟಯಾಧಿಷ್ಠಾನಾ ।** ನಾಲ್ಕುದಿಕ್ಕುಗಳು, ಆಶ್ರಯಿಸಿ ನಾಲ್ಕು ಕಾಲುಗಳುಳ್ಳವಳಂತೆ ಇರುವಳು. **(ಪಾದಚತುಷ್ಟಯೋಪೇತಾ).**

**ಅಷ್ಟಾಪದೀ, ನವಪದೀ--ದಿಗ್ಭಿಶ್ಚಾವಾಂತರದಿಗ್ಭಿಶ್ಚಾದಿತ್ಯೇನ ಚ ।** ನಾಲ್ಕುದಿಕ್ಕುಗಳು ನಾಲ್ಕುಅವಾಂತರ ದಿಕ್ಕುಗಳು (ವಿದಿಕ್ಕುಗಳು) ಮತ್ತು ಆದಿತ್ಯ ಈ ಒಂಭತ್ತು ಅಧಿಷ್ಠಾನಗಳು.

ಈರೀತಿ ಸಮಸ್ತ ದಿಗ್ವಿದಿಕ್ಕುಗಳಲ್ಲಿಯೂ ವ್ಯಾಪಿಸಿ ಅಪರಿಮಿತವಾದ ಪ್ರಸರವುಳ್ಳವಳೂ, ಅಪರಿಮಿತವಾದ ಉದಕಗಳನ್ನು ಸೃಷ್ಟಿಸುವವಳೂ ಆಗಿ ಈ ವಾಗ್ದೇವತೆಯು ಉತ್ಕೃಷ್ಟವಾದ ಅಂತರಿಕ್ಷದಲ್ಲಿ ಪ್ರಕಾಶಿಸುತ್ತಲೂ, ಲೋಕೋಪಕಾರಕಳಾಗಿಯೂ ಇರುತ್ತಾಳೆಂದು ಸ್ತುತಿಸಿದೆ.

ನಿರುಕ್ತಕಾರರು ವ್ಯೋಮಶಬ್ದಕ್ಕೆ ಪರ್ಯಾಯವಾಗಿ **ವ್ಯವನವೆಂಬ** ಪದವನ್ನು ಪಯೋಗಿಸಿದ್ದಾರೆ. ಇದಕ್ಕೆ ದುರ್ಗಾಚಾರ್ಯರು ವ್ಯಾಖ್ಯಾನಮಾಡುತ್ತಾ **ವಿಭಕ್ತಾನಾಂ ಭೂತಾನಾಂ ಯತ್ಪರಮಂ ಅವನಂ ।** ವಿಭಕ್ತವಾಗಿರತಕ್ಕ ಭೂತಗಳಿಗೆಲ್ಲಾ ಒಂದೇ ವಿಧವಾದ ಸಂಬಂಧವನ್ನು ಕಲ್ಪಿಸಿ ಎಲ್ಲಕ್ಕೂ ಉತ್ಕೃಷ್ಟವಾದ ರಕ್ಷಣಸ್ಥಾನವಾದ ಅಂತರಿಕ್ಷವೆಂದು ವಿವರಿಸಿದ್ದಾರೆ. ಓತಪ್ರೋತ ರೂಪದಲ್ಲಿ ಸಕಲ ಭೂತಗಳಿಗೂ ಸಂಬಂಧವನ್ನು ಕಲ್ಪಿಸುವುದೆಂದರ್ಥ.

**ಕಸ್ಮಿನ್ನು ಖಲ್ವಾಪ ಓತಾಶ್ಚ ಪ್ರೋತಾಶ್ಚೇತಿ ವಾಯೌ ಗಾರ್ಗೀತಿ ಕಸ್ಮಿನ್ನು ಖಲು ವಾಯುರೋತಶ್ಚ ಪ್ರೋತಶ್ಚೇತ್ಯಂತರಿಕ್ಷಲೋಕೇಷು ಗಾರ್ಗಿ ।** (ಬೃ. ಉ. ೩-೬-೧)

ಸಕಲ ವಿಶ್ವವೂ ಉದಕದಲ್ಲಿ ಓತಪ್ರೋತರೂಪದಲ್ಲಿ ಸೇರಿವೆ. ಉದಕವು ವಾಯುವಿನಲ್ಲಿಯೂ, ವಾಯುವು ಅಂತರಿಕ್ಷದಲ್ಲಿಯೂ ಸಂಬಂಧಿಸಿದೆ. ಇತ್ಯಾದಿಯಾಗಿ ವರ್ಣಿತವಾಗಿದೆ.

ಈ ಋಕ್ಕಿಗೆ ಇನ್ನೊಂದು ವಿಧವಾದ ಅರ್ಥವೂ ಸಾಧ್ಯವಾಗುತ್ತದೆ. **ಗೌರೀಃ--ಗರಣಶೀಲಾ ಶಬ್ದಬ್ರಹ್ಮಾತ್ಮಿಕಾ ವಾಕ್ ।** ವಿಸ್ತೃತವಾಗಿ ಮಾಹಾತ್ಮ್ಯವನ್ನು ಪಡೆಯತಕ್ಕ ಶಬ್ದಬ್ರಹ್ಮಾತ್ಮಿಕವಾದ ವಾಕ್ಕೆಂದು **ಗೌರೀ** ಶಬ್ದಕ್ಕೆ ಅರ್ಥ. ಈ ಗೌರಿಯು ಘಟಾದಿದ್ರವ್ಯಗಳನ್ನು ವೈಯುಕ್ತಿಕವಾದ ನಾಮದ ವ್ಯವಹಾರದಿಂದ ವಿಭಾಗಿಸಿ ಅದರ ವ್ಯಕ್ತಿತ್ವವನ್ನು ಸಂಪಾದಿಸಿ ಕೊಡುವುದರಿಂದ **ತಕ್ಷತೀ** ಎಂದು ವರ್ಣಿತವಾಗಿದೆ.

**ವಾಗ್ವೈ ಗ್ರಹಃ ಸ ನಾಮ್ನಾತಿಗ್ರಾಹೇಣ ಗೃಹೀತೋ ವಾಚಾ ಹಿ ನಾಮಾನ್ಯಭಿವದತಿ ।**
(ಬೃ. ಉ. ೩-೨-೩)

ಸಕಲವನ್ನೂ ಗ್ರಹಿಸತಕ್ಕದ್ದು ವಾಕ್ಕು. ಅದು ನಾಮಾತ್ಮಕವಾಗಿದೆ. ನಾಮದಿಂದಲೇ ಸಕಲ ಪದಾರ್ಥಗಳೂ ವ್ಯವಹೃತಗಳಾಗುತ್ತವೆ. ಸಕಲವೂ ನಾಮಾತ್ಮಕಗಳಾಗಿ ಉತ್ಪನ್ನವಾದವೆಂದರ್ಥ.

**ವಾಗ್ವೈ ಬ್ರಹ್ಮೇತಿ ಯಥಾ ಮಾತೃಮಾನ್ ಪಿತೃಮಾನಾಚಾರ್ಯವಾನ್ ಬ್ರೂಯಾತ್ತಥಾ ತಚ್ಛೈಲಿನಿರಬ್ರವೀದ್ವಾಗ್ವೈ ಬ್ರಹ್ಮೇತ್ಯವದತೋ ಹಿ ಕಿಂ ಸ್ಯಾದಿತ್ಯಬ್ರವೀತ್ತು ತೇ ತಸ್ಯಾಯತನಂ ಪ್ರತಿಷ್ಠಾಂ ನ ಮೇಽಬ್ರವೀದಿತ್ಯೇಕಪಾದ್ವಾ ಏತತ್ಸಮ್ರಾಡಿತಿ ಸ ವೈ ನೋ ಬ್ರೂಹಿ ಯಾಜ್ಞ-ವಲ್ಕ್ಯ.** (ಬೃ. ಉ. ೩-೨-೩)

ಇದು ಜನಕನಿಗೂ ಯಾಜ್ಞವಲ್ಕ್ಯನಿಗೂ ನಡೆದ ಸಂಭಾಷಣೆಯು. ಇದರಲ್ಲಿ ವಾಕ್ಕಿಗೂ ಬ್ರಹ್ಮನಿಗೂ ತಾದಾತ್ಮ್ಯವನ್ನು ತೋರಿಸಿ ವಾಕ್ಕಿನ ಮಹತ್ತನ್ನು ಪ್ರಶಂಸಿಸಿದೆ. ಶೈಲಿನಿಯು ಜನಕನಿಗೆ ವಾಕ್ಕೇ ಬ್ರಹ್ಮನೆಂದು ಹೇಳಿದನೇ ಹೊರತು ಅದರ ಆಯತನವನ್ನೂ ಆಧಾರವನ್ನೂ ಹೇಳಲಿಲ್ಲ. ಯಾಜ್ಞವಲ್ಕ್ಯನು ಇದನ್ನು ತಿಳಿದು ಶೈಲಿನಿಯು ಜನಕನಿಗೆ ವಾಕ್ಕಿನ ವಿಷಯದಲ್ಲಿ ಹೇಳದೇ ಬಿಟ್ಟ ವಿಷಯವನ್ನು ತಾನು ತಿಳಿಸುತ್ತಾನೆ.

**ವಾಗೇವಾಯತನಮಾಕಾಶಃ ಪ್ರತಿಷ್ಠಾ ಪ್ರಜ್ಞೇತ್ಯೇನದುಪಾಸೀತ । ಕಾ ಪ್ರಜ್ಞತಾ ಯಾಜ್ಞವಲ್ಕ್ಯ । ವಾಗೇವ ಸಮ್ರಾಡಿತಿ ಹೋವಾಚ । ವಾಚಾ ವೈ ಸಮ್ರಾಡ್ಬಂಧುಃ ಪ್ರಜ್ಞಾ-ಯತ ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಂಗಿರಸಃ .. ................ ಅಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ವಾಚೈವ ಸಮ್ರಾಟ್ ಪ್ರಜ್ಞಾಯಂತೇ ವಾಗ್ವೈ ಸಮ್ರಾಟ್ ಪರಮಂ ಬ್ರಹ್ಮ ।** (ಬೃ. ಉ. ೪-೧-೨)

ವಾಕ್ಕೇ ಇದರ ಆಯತನವು. ಆಕಾಶವೇ ಪ್ರತಿಷ್ಠೆಯು (ಅವಲಂಬನವು). ಸುಹೃತ್ತಾಗಲಿ ಇತರ ಬಂಧುವಾಗಲಿ ವಾಕ್ಕಿನಿಂದಲೇ ವ್ಯವಹೃತನಾಗುತ್ತಾನೆ. ವಾಕ್ಕಿನಿಂದಲೇ ಋಗಾದಿವೇದಗಳೂ, ಇತಿಹಾಸಾದಿಗಳೂ, ಸಕಲ ಶಾಸ್ತ್ರಸ್ಮೃತಿಗಳೂ ಯಜ್ಞಯಾಗಾದಿಗಳೂ, ಸಮಸ್ತಲೋಕಗಳೂ ತಿಳಿಯಲ್ಪಡುತ್ತವೆ. ವಿಶ್ವವೆಲ್ಲವೂ ವಾಕ್ಕಿನ ವ್ಯವಹಾರವನ್ನೇ ಆಶ್ರಯಿಸಿದೆ. ವಾಕ್ಕೇ ಪರಬ್ರಹ್ಮವು ಇತ್ಯಾದಿಯಾಗಿ ವಾಕ್ಕಿನ ಮಹತ್ವವು ವರ್ಣಿತವಾಗಿದೆ. ಅದನ್ನೇ ಇಲ್ಲಿ ಸಾಯಣರು '**ಘಟಾದಿದ್ರವ್ಯಾಣಿ ತತ್ತದ್ವಾಚಕತ್ವೇನ ನಿಷ್ಪಾದಯಂತಿ**' ಎಂದು ವಿವರಿಸಿದ್ದಾರೆ. ಶಬ್ದಬ್ರಹ್ಮಾತ್ಮಕವಾದ ಈ ವಾಕ್ಕನ್ನು 'ಏಕಪದೀ' ಇತ್ಯಾದಿ ವಿಶೇಷಣಗಳಿಂದ ವರ್ಣಿಸಿದೆ.

**ಏಕಪದೀ—ಅವ್ಯಾಕೃತತ್ವೇನ ಏಕಪ್ರತಿಷ್ಠಾನಾ ಏಕರೂಪಾ ವಾ ಆತ್ಮಾನಾ ।** ಈ ಶಬ್ದಬ್ರಹ್ಮವು ವ್ಯಾಕೃತಾವಸ್ಥೆಯಲ್ಲಿ ನಾನಾರೂಪದಲ್ಲಿರುತ್ತದೆ. ಅವ್ಯಾಕೃತವಾದ ಅವಸ್ಥೆಯಲ್ಲಿ ಅದ್ವಿತೀಯವೂ, ಅವಿಭಕ್ತವೂ ಆಗಿರುತ್ತದೆ. ಒಂದೇ ರೂಪವು ಮತ್ತು ಒಂದೇ ಅಧಿಷ್ಠಾನವು. ಆದುದರಿಂದ **ಏಕಪದೀ** ಎಂಬ ವಿಶೇಷಣವು.

**ದ್ವಿಪದೀ—ಸುಪ್ತಿಙ್‌ಭೇದೇನ ಪಾದದ್ವಯವತೀ ।** ಸುಬಂತ ಮತ್ತು ತಿಙಂತ ಎಂದರೆ ನಾಮಪದ ಮತ್ತು ಕ್ರಿಯಾಪದ ಎಂಬ ಭೇದಗಳಿಂದ ಎರಡು ಪಾದಗಳುಳ್ಳದ್ದು.

**ಚತುಷ್ಪದೀ—ನಾಮಾಖ್ಯಾತೋಪಸರ್ಗನಿಪಾತಭೇದೇನ** । ನಾಮ, ಆಖ್ಯಾತ, ಉಪಸರ್ಗ ಮತ್ತು ನಿಪಾತ ಈ ನಾಲ್ಕು ವಿಭಾಗಗಳುಳ್ಳದ್ದು.

**ತದ್ಯಾನ್ಯೇತಾನಿ ಚತ್ವಾರಿ ಪದಜಾತಾನಿ ನಾಮಾಖ್ಯಾತೇ ಚೋಪಸರ್ಗನಿಪಾತಾಶ್ಚ ತಾನೀಮಾನಿ ಭವಂತಿ ॥** (ನಿ. ೧-೧)

ಎಂಬುದಾಗಿ ನಿರುಕ್ತಕಾರರು ನಾಮಾದಿಗಳ ಸ್ವರೂಪಗಳನ್ನು ವಿವರಿಸಿದ್ದಾರೆ.

**ಅಷ್ಟಾಪದೀ - ಆಮಂತ್ರಿತಸಹಿತಾಷ್ಟಭೇದೇನ**—ಸಂಬೋಧನೆಯೊಂದಿಗೆ ಸೇರಿ ಎಂಟು ವಿಭಕ್ತಿಗಳುಳ್ಳದ್ದು.

**ನವಪದೀ**—ಅವ್ಯಯದೊಂದಿಗೆ ಸೇರಿದುದೂ ಅಷ್ಟವಿಭಕ್ತ್ಯಾತ್ಮಕವಾದದ್ದೂ ಆದ ವಾಕ್ಕು ; ಎಂದು ಒಂದರ್ಥ ಅಥವಾ ನಾಭಿ, ಉರಸ್ಸು, ಕಂಠ ಇತ್ಯಾದಿ ಒಂಭತ್ತು ಪ್ರದೇಶಗಳಲ್ಲಿ ಉತ್ಪನ್ನವಾಗಿ ಅನಂತರ ಅನಂತವಾಗಿ ಹರಡತಕ್ಕ (ಸಹಸ್ರಾಕ್ಷರಾ) ವಾಕ್ಕು ಎಂದು ಇನ್ನೊಂದರ್ಥ.

ಶಬ್ದಬ್ರಹ್ಮರೂಪವಾದ ಈ ವಾಕ್ಕಿಗೆ ಹೃದಯಾಕಾಶವೇ ಮೂಲವು. ಈ ಮೂಲದಿಂದ ಉತ್ಪನ್ನವಾಗಿ ಅಥವಾ ಆವಿರ್ಭೂತವಾಗಿ ವಿಶ್ವವ್ಯಾಪಿಯಾಗುತ್ತದೆಂದು ತಾತ್ಪರ್ಯ. **ಪರಮೇ ವ್ಯೋಮನ್** ಎಂಬುದಕ್ಕೆ ಉತ್ಕೃಷ್ಟೇ **ಹೃದಯಾಕಾಶೇ** ಎಂದರ್ಥಮಾಡಿದೆ. ಶಬ್ದಬ್ರಹ್ಮಕ್ಕೆ ಮೂಲವಾದ ಹೃದಯಾಕಾಶವನ್ನು ಉಪನಿಷತ್ತುಗಳಲ್ಲಿ ಈರೀತಿ ವರ್ಣಿಸಿದೆ.

**ಯಾವಾನ್ ವಾ ಅಯಮಾಕಾಶಸ್ತಾವಾನೇಷೋಽಂತರ್ಹೃದಯ ಆಕಾಶ ಉಭೇ ಅಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ ಉಭಾವಗ್ನಿಶ್ಚ ವಾಯುಶ್ಚ ಸೂರ್ಯಾಚಂದ್ರಮಸಾವುಭೌ ವಿದ್ಯುನ್ನಕ್ಷತ್ರಾಣಿ ಯಚ್ಚಾಸ್ಯೇಹಾಸ್ತಿ ಯಚ್ಚ ನಾಸ್ತಿ ಸರ್ವಂ ತದಸ್ಮಿನ್ ಸಮಾಹಿತಮಿತಿ ॥** (ಛಾ. ಉ. ೮-೧-೩)

ದೇಹರೂಪವಾದ ಈ ಬ್ರಹ್ಮಪುರದಲ್ಲಿ ಸೂಕ್ಷ್ಮವೂ ಪುಂಡರೀಕರೂಪವೂ ಆದ ಗೃಹವಿದೆ. ಅದು ಹೃದಯಾಕಾಶವು. ಅದು ಬ್ರಹ್ಮನ ಆವಾಸಸ್ಥಾನವು. ಅದರ ಅನ್ವೇಷಣವನ್ನು ಮಾಡಿ ಅಲ್ಲಿ ಬ್ರಹ್ಮತತ್ತ್ವವನ್ನು ಕಾಣಬೇಕು. (ಛಾ. ಉ. ೮-೧-೧). ಬ್ರಹ್ಮಾಂಡಕ್ಕಿಂತಲೂ ಮಹತ್ತಾದ ಈ ಬ್ರಹ್ಮತತ್ತ್ವವನ್ನು ಅಡಗಿಸಿಕೊಂಡಿರುವ ಸೂಕ್ಷ್ಮವಾದ ಈ ಅಂತರಾಕಾಶದ ಸ್ವರೂಪವೇನೆಂದರೆ, ಬಾಹ್ಯಾಕಾಶವು ಎಷ್ಟು ವಿಸ್ತೃತವಾಗಿ ಹರಡಿರುವುದೋ ಅಷ್ಟೇ ವಿಸ್ತಾರವಾಗಿ ಈ ಹೃದಯಾಕಾಶವು ಹರಡಿರುವುದು. ಇದರಲ್ಲೇ ದ್ಯಾವಾಪೃಥಿವಿಗಳೆರಡೂ ಹರಡಿರುವುವು. ಅಲ್ಲದೆ ವಾಯ್ವಗ್ನಿಗಳೂ, ಚಂದ್ರಸೂರ್ಯರೂ, ವಿದ್ಯುತ್ತೂ, ನಕ್ಷತ್ರಗಳೂ, ದೇಹಾಂತರ್ಗತವಾದುದೂ ಆಗಿಲ್ಲದಿರುವುದೂ ಆದ ಸಮಸ್ತವೂ ಸಹ ಈ ದಹರಾಕಾಶದಲ್ಲಿ ಅಡಕವಾಗಿದೆ. (ಛಾ. ೮-೧-೩) ಇದನ್ನೇ ತೈತ್ತಿರೀಯೋಪನಿಷತ್ತಿನಲ್ಲಿ,

**ದಹ್ರಂ ವಿಪಾಪಂ ಪರಮೇಶ್ಮಭೂತಂ ಯತ್ಪುಂಡರೀಕಂ ಪುರಮಧ್ಯಸಗ್‌ಸ್ಥಂ ।**
**ತತ್ರಾಪಿ ದಹ್ರಂ ಗಗನಂ ವಿಶೋಕಸ್ತಸ್ಮಿನ್ ಯದಂತಸ್ತದುಪಾಸಿತವ್ಯಂ ॥** (ತೈ. ಉ. ೪-೧೨-೩)

ಈ ಹೃದಯಾಕಾಶವು ಅತಿಸೂಕ್ಷ್ಮವಾದುದು. ಪಾಪರಹಿತವಾದುದು. ಇದು ಉತ್ತಮವಾದ ಆವಾಸಸ್ಥಾನವು. ಇದು ಪುಂಡರೀಕರೂಪದಲ್ಲಿ ದೇಹರೂಪವಾದ ಪುರದ ಮಧ್ಯಭಾಗದಲ್ಲಿ ಈ ಸೂಕ್ಷ್ಮವಾದ ಹೃದಯದಲ್ಲಿ ಅದಕ್ಕಿಂತಲೂ ಸೂಕ್ಷ್ಮವಾದ ಆಕಾಶವಿದ್ದು ಆ ಆಕಾಶದಲ್ಲಿ ಯಾವ ಬ್ರಹ್ಮತತ್ತ್ವವಡಗಿದೆಯೋ ಅದನ್ನು ಉಪಾಸನೆಮಾಡಬೇಕು, ಎಂದು ಹೃದಯಾಕಾಶದನ್ನು ವರ್ಣಿಸಿದೆ.

ಪ್ರಕೃತವಾದ ಋಕ್ಕಿನಲ್ಲಿ ಈ ಹೃದಯಾಕಾಶಕ್ಕೂ ಶಬ್ದಬ್ರಹ್ಮಾತ್ಮಕವಾದ ವಾಕ್ಕಿಗೂ ಅಧಾರಾಧೇಯಭಾವವನ್ನು ತಿಳಿಸಿದೆಯೆಂದು ಸಾಯಣಭಾಷ್ಯವು ಹೇಳುತ್ತದೆ. ಇದೇ ಸಂಬಂಧವನ್ನು ಛಾಂದೋಗ್ಯದಲ್ಲಿಯೂ ತಿಳಿಸುತ್ತಾ ನಾಮರೂಪಗಳ ವಿಭಾಗಕ್ಕೆ ಮೂಲವಾದ ವಾಕ್ಕಿಗೆ ಆಕಾಶವೇ ಮೂಲವೆಂದು ತಿಳಿಸಿದೆ.

**ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದಂತರಾ ತದ್ಬ್ರಹ್ಮ ತದಮೃತಂ ಸ ಆತ್ಮಾ ।** (ಛಾ. ಉ. ೮-೧೪-೧)

ನಾಮರೂಪಗಳೆಂದು ವೈಯಕ್ತಿಕವಾದ ವಿಭಾಗವನ್ನು ಮಾಡಲು ಆಕಾಶವೇ ಕಾರಣವು. ಇದರಲ್ಲಿ ಅಂತರ್ಗತನಾಗಿರುವವನೇ ಪರಬ್ರಹ್ಮನು. ಪರಮಾತ್ಮನು. ಈ ವಾಕ್ಯವನ್ನು ಶಂಕರಾಚಾರ್ಯರು ಬ್ರಹ್ಮಸೂತ್ರಭಾಷ್ಯದ ದಹರಾಧಿಕರಣದ ಪ್ರಕರಣದಲ್ಲಿ ಉದಹರಿಸಿ ಪರಬ್ರಹ್ಮನಿಗೂ ಈ ದಹರಾಕಾಶಕ್ಕೂ ತಾದಾತ್ಮ್ಯವನ್ನು ಹೇಳಿದ್ದಾರೆ.

**ಪ್ರಸಿದ್ಧೇಶ್ಚ–ಇತಶ್ಚ ಪರಮೇಶ್ವರ ಏವ "ದಹರೋಽಸ್ಮಿನ್ನಂತರಾಕಾಶಃ" ಇತ್ಯುಚ್ಯತೇ । ಯತ್ಕಾರಣಮಾಕಾಶಶಬ್ದಃ ಪರಮೇಶ್ವರೇ ಪ್ರಸಿದ್ಧಃ । "ಆಕಾಶೋ ವೈ ನಾಮ .... .... .... ಸ ಆತ್ಮಾ" "ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ" (ಛಾ. ಉ. ೧-೯-೧) ಇತ್ಯಾದಿ ಪ್ರಯೋಗದರ್ಶನಾತ್ ॥** (ಬ್ರಹ್ಮಸೂತ್ರಭಾಷ್ಯ ೧ ೩-೧೭)

ಈ ಅಂತರ್ಹೃದಯಾಕಾಶವೇ ಪರಮೇಶ್ವರನೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಪರಬ್ರಹ್ಮನ ಬಾಹ್ಯಾವಿರ್ಭಾವಗಳಾದ ನಾಮರೂಪಗಳ ವಿಭಾಗಕ್ಕೆ ಆಕಾಶವೇ ಕಾರಣವಾಗಿರುವುದರಿಂದಲೂ, ಈ ಸಕಲಭೂತಗಳೂ ಆಕಾಶದಿಂದಲೇ ಉತ್ಪನ್ನವಾಗುತ್ತವೆ, ಇತ್ಯಾದಿ ಶ್ರುತಿವಾಕ್ಯಗಳಿದ್ದು ಆಕಾಶಕ್ಕೆ ಬ್ರಹ್ಮತಾದಾತ್ಮ್ಯವನ್ನು ಹೇಳಿರುವುದರಿಂದಲೂ ಸಹ ದಹರಾಕಾಶವು ಕೆಲವು ಕಡೆಗಳಲ್ಲಿ ಬ್ರಹ್ಮಾವಾಸಸ್ಥಾನವೆಂದೂ ಇನ್ನು ಕೆಲವು ಕಡೆಗಳಲ್ಲಿ ಬ್ರಹ್ಮರೂಪಿಯೇ ಎಂದೂ ಸಹ ಪ್ರಸಿದ್ಧವಾಗಿದೆ.

**ಸಾ ಇಯಂ ಶಬ್ದಬ್ರಹ್ಮಾತ್ಮಿಕಾ ವಾಕ್ ಉತ್ಕೃಷ್ಟೇ ಹೃದಯಾಕಾಶೇ ಮೂಲಾಧಾರೇ-ಸಹಸ್ರಾಕ್ಷರಾ ಅನೇಕಾಕಾರೇಣ ವ್ಯಾಪ್ತಾ ಭವತೀತ್ಯರ್ಥಃ ॥** (ಸಾ. ಭಾ.)

ಶಬ್ದಬ್ರಹ್ಮರೂಪವಾದ ಈ ವಾಕ್ಕು ಅತಿಶಯವಾದುದೂ ಹೃದಯಾಕಾಶರೂಪವಾದುದೂ ಆದ ಮೂಲಾಧಾರದಲ್ಲಿದ್ದು ಅಪರಿಮಿತವಾದ ಆಕಾರಗಳನ್ನು ಪಡೆದು ವಿಶ್ವವನ್ನು ವ್ಯಾಪಿಸುತ್ತದೆ ಎಂದು ತಾತ್ಪರ್ಯವೆಂದು ಸಾಯಣರು ವಿವರಿಸಿದ್ದಾರೆ.



**ತಸ್ಯಾಃ ಸಮುದ್ರಾ ಅಧಿ ವಿ ಕ್ಷರಂತಿ ತೇನ ಜೀವಂತಿ ಪ್ರದಿಶಶ್ಚತಸ್ರಃ ।**
**ತತಃ ಕ್ಷರತ್ಯಕ್ಷರಂ ತದ್ವಿಶ್ವಮುಪ ಜೀವತಿ ॥೪೨॥**

ಮಾಧ್ಯಮಿಕವಾದ ವಾಕ್ಕಿನಿಂದ ಮೇಘಗಳು ಪ್ರಭೂತವಾಗಿ ವೃಷ್ಟಿಯನ್ನು ಸುರಿಸುತ್ತವೆ. ಅದರಿಂದ ನಾಲ್ಕು ದಿಕ್ಕುಗಳಲ್ಲೂ ಇರತಕ್ಕ ಪ್ರಜೆಗಳು ಜೀವಿಸುತ್ತಾರೆ. ಅನಂತರ ಉದಕವು ಸಸ್ಯಾದಿಗಳಿಗೆ ಪ್ರಸರಿಸುತ್ತದೆ. ಸಸ್ಯವೇ ಮುಂತಾದ ಸಮಸ್ತ ಜಗತ್ತೂ ಸಹ ಅದರ ಆಶ್ರಯದಿಂದ ಬದುಕುತ್ತದೆ.

**ಸಮುದ್ರಾಃ**--**ವೃಷ್ಟ್ಯುದಕಮುಂದನಾಧಿಕರಣಭೂತಾ ಮೇಘಾಃ ।** ವೃಷ್ಟ್ಯುದಕಪ್ರವಾಹಕ್ಕೆ ಆಧಾರಭೂತವಾದ ಮೇಘಗಳೆಂದರ್ಥ. ನಿರುಕ್ತಕಾರರು ಇದರ ನಿರ್ವಚನವನ್ನು ತಿಳಿಸುತ್ತಾ,

**ಸಮುದ್ರಃ ಕಸ್ಮಾತ್ಸಮುದ್ದ್ರವಂತಸ್ಮಾದಾಪಃ ಸಮಭಿದ್ರವಂತ್ಯೇನಮಯನಃ ಸಮೋ-ದಂತೇऽಸ್ಮಿನ್ ಭೂತಾನಿ ಸಮುದಕೋ ಭವತಿ ಸಮುನತ್ತೀತಿ ವಾ ।** (ನಿ. ೨-೧೦)

ಚಲಿಸು ಎಂಬರ್ಥವನ್ನು ಕೊಡುವ **ದ್ರು** ಧಾತುವಿನೊಡನೆ **ಸಂ, ಉದ್** ಎಂಬ ಎರಡು ಉಪಸರ್ಗಗಳೂ ಸೇರಿಕೊಂಡು ಮೇಲಕ್ಕೆ ಉಕ್ಕಿ ಹರಿಯುತ್ತವೆ. ಎಂದು ತಾತ್ಪರ್ಯವನ್ನು ಕೊಡುತ್ತಾದ್ದರಿಂದಲೂ, ಅಥವಾ, ಅದೇ **ದ್ರು** ಧಾತುವಿನೊಡನೆ **ಸಮ್** ಅಭಿ ಎಂಬ ಉಪಸರ್ಗಗಳು ಸೇರಿಕೊಂಡು (ನದಿಯ) ನೀರುಗಳು ಇದರ ಕಡೆಗೆ ಹರಿದು ಬರುತ್ತವೆಯೆಂಬ ಅರ್ಥವನ್ನು ಕೊಡುಡುವುದರಿಂದಾಗಲಿ, ಅಥವಾ ಸಂತೋಷಪಡು ಎಂಬರ್ಥವನ್ನು ಕೊಡುವ **ಮುದ್** ಧಾತುವಿನೊಡನೆ **ಸಮ್** ಎಂಬ ಉಪಸರ್ಗವು ಸೇರಿ ಜಲಚರಪ್ರಾಣಿಗಳು ಇದರಲ್ಲಿ ಹಷವನನ್ನನುಭವಿಸುತ್ತವೆ ಎಂಬರ್ಥವನ್ನು ಕೊಡುವುದರಿಂದಾಗಲಿ, ಅಥವಾ ಉದಕಕ್ಕೆ ನಿಧಿಯಾಗಿರುವುದರಿಂದಾಗಲಿ, ಅಥವಾ ತೇವಮಾಡು ಎಂಬರ್ಥವನ್ನು ಕೊಡುವ **ಉದ್** ಧಾತುವಿನೊಡನೆ **ಸಮ್** ಉಗಸರ್ಗವು ಸೇರಿ ನೆನೆಯಿಸು ಎಂದು ತಾತ್ಪರ್ಯವನ್ನು ಕೊಡುವುದರಿಂದಾಗಲಿ **ಸಮುದ್ರ**ವೆಂಬ ಪದವು ನಿಷ್ಪನ್ನವಾಗಿದೆಯೆಂದು ಹೇಳಿದ್ದಾರೆ.

ಅನಂತರ ಪಾರ್ಥಿವವಾದ ಸಮುದ್ರಕ್ಕೂ, ಅಂತರಿಕ್ಷಪರ್ಯಾಯವಾದ ಸಮುದ್ರಕ್ಕೂ ವ್ಯತ್ಯಾಸವನ್ನು ತೋರಿಸುತ್ತಾ ಇವೆರಡಕ್ಕೂ ವ್ಯತ್ಯಾಸವನ್ನು ತಿಳಿಯದೇ ಸಂದೇಹಕ್ಕವಕಾಶವನ್ನು ಕೊಡುವಂತೆ ಅರ್ಥಮಾಡುವವರನ್ನು ಕುರಿತು ನಿರುಕ್ತಕಾರರು,

**ತತ್ರ ಸಮುದ್ರ ಇತ್ಯೇತತ್ಪಾರ್ಥಿವೇನ ಸಮುದ್ರೇಣ ಸಂದಿಹ್ಯತೇ ।** ಅಂತರಿಕ್ಷಪರ್ಯಾಯವಾದ ಸಮುದ್ರವನ್ನು ಅನೇಕರು ಪಾರ್ಥಿವಸಮುದ್ರವೆಂದು ಭ್ರಮಿಸಿ ಅರ್ಥಮಾಡುತ್ತಾರೆ. ಅದು ಸರಿಯಲ್ಲ. ಎಂದು ತಿಳಿಸಿ ಈ ಸಂದರ್ಭದಲ್ಲಿ ಇಂತಂಕ್ಷಪರ್ಯಾಯವಾದ ಸಮುದ್ರಕ್ಕೂ ಪಾರ್ಥಿವವಾದ ಸಮುದ್ರಕ್ಕೂ ವ್ಯತ್ಯಾಸವನ್ನು ತೋರಿಸಲು ಒಂದು ಇತಿಹಾಸವನ್ನು ಉದಹರಿಸಿದ್ದಾರೆ. ಈ ಇತಿಹಾಸವನ್ನು ಇದೇ ಭಾಗದ 54-55 ನೇ ಪುಟಗಳಲ್ಲಿ ತಿಳಿಸಿದೆ.

**ಅದ್ಭಿರ್ಯಾತಿ ವರುಣಃ ಸಮುದ್ರೈರ್ಯುಷ್ಮಾ ಇಚ್ಛಂತಃ ಶವಸೋ ನಪಾತಃ ।**
(ಋ. ಸಂ. ೧-೧೬೧-೧೪)

ಎಂಬಲ್ಲಿ **ಸಮುದ್ರೈಃ** ಎಂಬ ಪದವು **ಅದ್ಭಿಃ** ಎಂಬುದಕ್ಕೆ ವಿಶೇಷಣವಾಗಿದೆ. ಪ್ರವಹಿಸತಕ್ಕ ಉದಕಗಳಿಂದ ಎಂದರ್ಥ. ಪ್ರಕೃತವಾದ ಋಕ್ಕಿನಲ್ಲಿ ಸ್ರವಿಸತಕ್ಕ ವೃಷ್ಟ್ಯುದಕಗಳಿಗೆ ಆಧಾರಭೂತವಾಗಿರುವ ಮೇಘಗಳು ಎಂದರ್ಥ. **ತಸ್ಯಾಃ ಸಮುದ್ರಾ ಅಧಿ ವಿ ಕ್ಷರಂತಿ—ವರ್ಷಂತಿ ಮೇಘಾಃ ।** ಮೇಘಗಳು ಮಳೆಯನ್ನು ಸುರಿಸುತ್ತವೆಯೆಂದು ನಿರುಕ್ತಕಾರರು ಅರ್ಥಮಾಡಿದ್ದಾರೆ. (ನಿ. ೧೧-೪೧)

**ಪ್ರದಿಶಶ್ಚತಸ್ರಃ—ದಿಗಾಶ್ರಯಾಣಿ ಭೂತಾನಿ** (ನಿ). ಸಕಲದಿಕ್ಕುಗಳನ್ನೂ ಆಶ್ರಯಿಸಿರುವ ಭೂತಗಳು (**ತೇನ ಜೀವಂತಿ**) ಎಂದು ತಾತ್ಪರ್ಯ.

**ಅಕ್ಷರಂ-ಅಕ್ಷರಮುದಕಂ ।** ಉದಕಪರ್ಯಾಯವಾಗಿ ಈ ಪದವನ್ನುಪಯೋಗಿಸಿದೆ. ಈ ಪದದ ಪ್ರಯೋಗದಲ್ಲಿ ಒಂದು ವಿಶೇಷವಿಷಯವನ್ನು ಗಮನಿಸಬೇಕು.

**ಅಕ್ಷರಂ ನ ಕ್ಷರತಿ ನ ಕ್ಷೀಯತೇ ವಾಕ್ಷಯೋ ಭವತಿ ವಾಚೋಽಕ್ಷ ಇತಿ ವಾ ।** (ನಿ. ೧೩-೧೩)

ಕ್ಷರವಲ್ಲದ್ದು, ಕ್ಷರರಹಿತವಾದದ್ದು **ಅಕ್ಷರಂ** ಆದುದರಿಂದ ಈ ಪದವನ್ನು (೧-೧೬೪-೩೯) ಇತ್ಯಾದಿ ಋಕ್ಕುಗಳಲ್ಲಿ ಕ್ಷಯರಹಿತವಾದ ಆತ್ಮನ ಪರವಾಗಿ ಉಪಯೋಗಿಸಿದೆ. **ಕ್ಷರ ಸಂಚಲನೇ, ಸ್ರವಣೇಚ,** ಸಂಚರಿಸತಕ್ಕದ್ದು. ಸ್ರವಿಸ ತಕ್ಕದ್ದು ಎಂಬರ್ಥದಲ್ಲಿ **ಕ್ಷರ** ಧಾತುವು ಉಪಯೋಗಿಸಲ್ಪಡುತ್ತದೆ. ಪ್ರಕೃತವಾದ ಋಕ್ಕಿನಲ್ಲಿ **ಅಕ್ಷರ**ಶಬ್ದವು ಸ್ರವಿಸುವ ಉದಕಕ್ಕೆ ವಿಶೇಷಣವಾಗಿದೆ. ಇದೇ ರೀತಿಯಲ್ಲಿ,

**ತ್ರಿರ್ವರ್ತಿರ್ಯಾತಂ ತ್ರಿರನುವ್ರತೇ ಜನೇ ತ್ರಿಃ ಸುಪ್ರಾವ್ಯೇ ತ್ರೇಧೇವ ಶಿಕ್ಷತಂ ।**
**ತ್ರಿರ್ನಾಂದ್ಯಂ ವಹತಮಶ್ವಿನಾ ಯುವಂ ತ್ರಿಃ ಪೃಕ್ಷೋ ಅಸ್ಮೇ ಅಕ್ಷರೇವ ಪಿನ್ವತಂ ॥**
(ಋ. ಸಂ. ೧-೩೪-೪)

ಎಂಬಲ್ಲಿಯೂ ಸಹ ಇದೇ ರೀತಿ ಅಕ್ಷರವೆಂದರೆ ಉದಕವೆಂದರ್ಥವಾಗುತ್ತದೆ. **ಅಕ್ಷರಾ, ಸ್ತೋತ್ರ, ತೃಪ್ತಿಃ** (ನಿ. ೨-೨೪) ಇತ್ಯಾದ್ಯುದಕನಾಮಗಳಲ್ಲಿ ನಿರುಕ್ತಕಾರರೂ ಈ ಪದವನ್ನು ಪಠಿಸಿರುತ್ತಾರೆ. ಕ್ಷರವಲ್ಲದ ಸತ್ತ್ವವುಳ್ಳದ್ದು: ಚೈತನ್ಯದಾಯಿಯಾದುದು ಎಂದರ್ಥ.



## ಶಕಮಯಂ ಧೂಮಮಾರಾದಪಶ್ಯಂ ವಿಷೂವತಾ ಪರ ಏನಾವರೇಣ । ಉಕ್ಷಾಣಂ ಪೃಶ್ನಿಮಪಚಂತ ವೀರಾಸ್ತಾನಿ ಧರ್ಮಾಣಿ ಪ್ರಥಮಾ- ನ್ಯಾಸನ್ ॥೪೩॥

ಯಜ್ಞಾಗ್ನಿಯಿಂದ ಸುಡಲ್ಪಟ್ಟ ಒಣಗಿದ ಬೆರಣಿಯಿಂದ ಉತ್ಪನ್ನವಾದ ಧೂಮವನ್ನು ಸಮೀಪದಲ್ಲಿಯೇ ನೋಡಿದ್ದೇನೆ. ವ್ಯಾಪಿಸಿರುವುದೂ, ಸಮೀಪದಲ್ಲಿರುವುದೂ ಆದ ಈ ಧೂಮದಿಂದ ಧೂಮಕ್ಕೆ ಕಾರಣವಾದ ಅಗ್ನಿಯನ್ನೂ ನೋಡಿದ್ದೇನೆ. ಫಲವನ್ನು ಸುರಿಸತಕ್ಕದ್ದೂ, ಶುಕ್ಲರೂಪವುಳ್ಳದ್ದೂ ಆದ ಸೋಮವನ್ನು ಋತ್ವಿಕ್ಕುಗಳು ಸಂಪಾದಿಸಿದ್ದಾರೆ. ಅದಕ್ಕೆ ಸಾಧನ ಗಳಾದ ಅನುಷ್ಠಾನಾದಿಗಳು ಅತಿಶಯವಾಗಿ ಸಂಪಾದಿತವಾದವು.

ಈ ಋಕ್ಕಿಗೆ ಮೇಲೆ ಭಾವಾರ್ಥದಲ್ಲಿ ಹೇಳಿರುವುದಲ್ಲದೆ ಇನ್ನೊಂದರ್ಥವನ್ನೂ ಹೇಳಬಹುದೆಂದು ಸಾಯಣರು ತಿಳಿಸಿದ್ದಾರೆ.

**ಸೋಮ ಉಕ್ಷಾಭವತ್ಪೂರ್ವಂ ತಂ ದೇವಾಃ ಶಕೃತಾಪಚನ್ ।**
**ಯಜ್ಞಾರ್ಥೇ ತದ್ಭವೋ ಧೂಮೋ ಮೇಘ ಆಸೀತ್ ತದುಚ್ಯತೇ ।**
**ತತ್ಪರತ್ವೇನ ವಾ ಮಂತ್ರೋ ವ್ಯಾಖ್ಯೇಯೋಽಯಂ ವಿಚಕ್ಷಣೈಃ ॥**

ಫಲಗಳ ಸೇಕ್ತೃವಾದ ಸೋಮನನ್ನು ಪೂರ್ವದಲ್ಲಿ ದೇವತೆಗಳು ಶಕೃತ್ತಿನಿಂದ ಪಾಕಮಾಡಿದರು. ಯಜ್ಞಾರ್ಥವಾಗಿ ಉತ್ಪನ್ನವಾದ ಆ ಧೂಮವು ಮೇಘವಾಗಿ ಪರಿಣಮಿಸಿತು. ಆ ವಿಷಯವನ್ನು ಇಲ್ಲಿ ತಿಳಿಸಿದೆ. ಈ ಮಂತ್ರಕ್ಕೆ ಆ ಸಂದರ್ಭ ವನ್ನೂ ಸೂಚಿಸಿ ತಿಳಿದವರು ಅರ್ಥಮಾಡಬಹುದು ಎಂದು ಹೇಳಿದೆ.

ಪ್ರಕೃತವಾದ ಋಕ್ಕಿನ ವಿವರಣೆಯು ಶಕಮಯಂ ಧೂಮಂ ಎಂಬುದರ ಅರ್ಥವನ್ನನುಸರಿಸುತ್ತದೆ. **ಶಕೃನ್ಮಯಂ ಶುಷ್ಕಗೋಮಯಸಂಭೂತಂ ಧೂಮಂ** ಒಣಗಿದ ಬೆರಣಿಯಿಂದ ಉತ್ಪನ್ನವಾದ ಧೂಮವೆಂದು ಸಾಯಣರ ಅರ್ಥ. ಅವರು ಹೇಳಿರುವ ಕಥಾಸಂದರ್ಭವೂ ಸಹ ಇದೇ ಅರ್ಥವನ್ನು ಸೂಚಿಸುತ್ತದೆ. ಆದರೆ **ಶಕಧೂಮವೆಂಬ** ಹೆಸರು ಇತರ ಕಡೆಗಳಲ್ಲಿ ಅಂಕಿತನಾಮವಾಗಿಯೂ ಅನ್ವರ್ಥನಾಮವಾಗಿಯೂ ಉಪಯೋಗಿಸಲ್ಪಟ್ಟಿರುವುದರಿಂದ ಈ ಪದದಿಂದ ಶ್ರುತ್ಯಂತರಗಳಲ್ಲಿ ನಿರ್ದಿಷ್ಟವಾಗಿರುವ ಬೇರೆ ಬೇರೆ ಅರ್ಥಗಳೇನೆಂಬುದನ್ನು ಪರಿಶೀಲಿಸಬೇಕಾಗಿದೆ.

Monier-Williams ಎಂಬ ಪಂಡಿತನು ತನ್ನ Sanskrit-English Dictionary ಯಲ್ಲಿ ಈ ಪದಕ್ಕೆ ಮೂರು ಅರ್ಥಗಳನ್ನು ಹೇಳಿ ಎಲ್ಲಾ ಅರ್ಥಗಳಿಗೂ ಆಧಾರಗಳನ್ನೂ ತೋರಿಸಿದ್ದಾನೆ.

೧) The smoke of burnt or burning dow-dung. ಗೋಮಯ (ಬೆರಣಿ) ದಿಂದ ಉತ್ಪನ್ನವಾದ ಧೂಮ. Atharva-Veda.

೨) Name of Nakshatra / ಒಂದು ನಕ್ಷತ್ರದ ಹೆಸರು } Atharva-Veda.

೩) A Priest who argues by means of cow-dung. ಗೋಮಯವನ್ನು ಸಾಕ್ಷಿಯಾಗಿಟ್ಟುಕೊಂಡು ವಾದಿಸುವ ಬ್ರಾಹ್ಮಣ.

(ಕೌಶಿಕಪರಿಭಾಷಾಸೂತ್ರ)

ಬೃಹದ್ದೇವತೆಯಲ್ಲಿ ಪ್ರಕೃತವಾದ ಋಕ್ಕನ್ನು ನಿರ್ದೇಶಿಸಿ ಶಕಕ್ಕೆ ಮೇಘವೆಂದರ್ಥಮಾಡಿದೆ.

**ಮೇಘೋ ಶಕಸ್ತಸ್ಯ ಧೂಮಃ ಸಲಿಲಂ ವಾಸ ಏವ ವಾ ।**
**ಸೋಮ ಉಕ್ಷಾ ಭವಂತಸ್ಯ ಪಾದಕಾಶ್ಚ ತ್ರಯೋಽಧಿಪಾಃ ॥** (ಬೃ. ದೇ. ೪-೪೧)

**ಶಕವೆಂಬ** ಪದವು ಮೇಘವೆಂಬರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಉದಕವೇ ಅದರ ಧೂಮವು. ಅಥವಾ ಮೇಘದ ಆಚ್ಛಾದಕರೂಪವಾದ ವಸ್ತ್ರವಾಗಬಹುದು. ಸೋಮವು ವೃಷಭವು. (ಸೇಕ್ತೃವು) ಎಂದು **ಶಕ, ಧೂಮ, ಸೋಮ** ಎಂಬ ಪದಗಳ ಅರ್ಥಗಳನ್ನು ತಿಳಿಸಿದೆ. Macdonell ಎಂಬ ಪಂಡಿತನು ಬೃಹದ್ದೇವತೆಯ ಈ ವಾಕ್ಯವನ್ನು ಪರಿವರ್ತಿಸುವಾಗ ತನ್ನ ಟಿಪ್ಪಣಿಯನ್ನು ಮೇಘದೂತದ ವಾಕ್ಯವನ್ನು ಉದಹರಿಸಿ,

**" ಧೂಮಜ್ಯೋತಿಸ್ಸಲಿಲಮರುತಾಂ ಸನ್ನಿಪಾತಃ ಕ್ವ ಮೇಘಃ .... .... .... .... " ॥**
(ಮೇಘದೂತ. ೫)

ಎಂಬ ವರ್ಣನೆಯಲ್ಲಿಯೂ ಸಹ ಶಕಧೂಮದಿಂದ ಸೂಚಿತವಾಗಿರುವ ಭಾವವು ಅಭಿವ್ಯಕ್ತವಾಗಿದೆಯೆಂದು ತಿಳಿಸಿದ್ದಾನೆ. ಆದರೆ ಬೃಹದ್ದೇವತೆಯಲ್ಲಿ ಧೂಮವೇ ಸಲಿಲವೆಂದು ಹೇಳಿದೆ. ಅಥರ್ವವೇದದಲ್ಲಿ **ಶಕಧೂಮನು** ನಕ್ಷತ್ರರಾಜನೆಂದು ವರ್ಣಿತನಾಗಿದ್ದಾನೆ.

**ಯದ್ರಾಜಾನಂ ಶಕಧೂಮಂ ನಕ್ಷತ್ರಾಣ್ಯಕೃಣ್ವತ ।**
**ಭದ್ರಾಹಮಸ್ಮೈ ಪ್ರಾಯಚ್ಛನ್ನಿತೋ ರಾಷ್ಟ್ರಮಜಾಯತ ॥**

ನಕ್ಷತ್ರಗಳೆಲ್ಲವೂ ಶಕಧೂಮನನ್ನು ತಮ್ಮ ರಾಜನನ್ನಾಗಿ ಮಾಡಿ ಅವನಿಗೆ ಮಂಗಳಾತ್ಮಕವಾದ ಅಹಸ್ಸನ್ನಂಟುಮಾಡಿ "ಇದು ನಿನ್ನ ಸಾರ್ವಭೌಮತ್ವವು" ಎಂದು ಹೇಳಿದವು.

**ಭದ್ರಾಹಮಸ್ತು ನಃ ಸಾಯಂ ಭದ್ರಾಹಂ ಪ್ರಾತರಸ್ತು ನಃ ।**
**ಭದ್ರಾಹಮಸ್ಮಭ್ಯಂ ತ್ವಂ ಶಕಧೂಮ ಸದಾ ಕೃಣು ॥**

ನಮಗೂ ಸಹ ಮಧ್ಯಾಹ್ನಕಾಲದಲ್ಲೂ, ಸಾಯಂಕಾಲದಲ್ಲೂ ಪ್ರಾತಃಕಾಲದಲ್ಲೂ ನಮ್ಮ ಅಹಸ್ಸು ಮಂಗಳಾತ್ಮಕವಾದ ವಾತಾವರಣದೊಂದಿಗಿರುವಂತೆ ಮಾಡು.

**ಯೋ ನೋ ಭದ್ರಾಹಮಕರಸ್ಸಾಯಂಪ್ರಾತರಥೋ ದಿವಾ ।**
**ತಸ್ಮೈ ತೇ ನಕ್ಷತ್ರರಾಜ ಶಕಧೂಮ ಸದಾ ನಮಃ ॥** (ಅಥರ್ವವೇದ ೬-೧೨೮-೧ ರಿಂದ ೩)

ಸಾಯಂಕಾಲದಲ್ಲೂ, ಪ್ರಾತಃಕಾಲದಲ್ಲೂ, ಮಧ್ಯಾಹ್ನಕಾಲದಲ್ಲೂ ನಮಗೆಲ್ಲಾ ಮಂಗಳವನ್ನುಂಟುಮಾಡತಕ್ಕವನೂ, ನಕ್ಷತ್ರರಾಜನೂ ಆದ ಶಕಧೂಮನೇ, ನಿನಗೆ ಸರ್ವದಾ ನಮಸ್ಕರಿಸುವೆವು.

[ ಇಲ್ಲಿ ಉದಾಹೃತವಾಗಿರುವ ವಾಕ್ಯಗಳಲ್ಲಿ ಪಾಠಾಂತರಗಳೂ ಇವೆ ]

ಅಥರ್ವವೇದದ ಈ ವಾಕ್ಯಗಳಲ್ಲಿ ನಿರ್ದಿಷ್ಟವಾಗಿರುವ **ಶಕಧೂಮನ** ವಿಷಯವನ್ನು ವಿಮರ್ಶಿಸುವಾಗ Bloomffeld **ಎಂಬ ಪಂಡಿತನು ಇತರ ಕೆಲವು** ಪಾಶ್ಚಾತ್ಯಪಂಡಿತರ ಅಭಿಪ್ರಾಯಗಳನ್ನೂ ಚರ್ಚಿಸಿ ತನ್ನ ವಿವರಣೆಯನ್ನು ಕೊಟ್ಟಿರುತ್ತಾನೆ. **ಅವುಗಳಲ್ಲಿ Weber** ಎಂಬುವನ ಅಭಿಪ್ರಾಯವನ್ನು ತಿಳಿಸುತ್ತಾ,

"Weber, recognising ಶಕಧೂಮ, ss the word on which the interpretation depends, takes it as equivalent to the ಶಕಮಯಧೂಮ of R.V. I.--164-43, the smoke that rises from burning cow-dung' a well-known fuel and surmises that it may be the first morning fire, kindled while the stars are still shining, and indicating by its rising or falling smoke, the weather of the breaking doy".

(American journal of Philology. Vol. VII. P. 486)

**ವೀಬರ್** ಎಂಬ ಪಂಡಿತನ ಮತದಂತೆ, ಅಥರ್ವವೇದೋಕ್ತವಾಗಿರುವ **ಶಕಧೂಮವೂ** ಋಕ್ಸಂಹಿತೆಯಲ್ಲಿ ಹೇಳಿರುವ **ಶಕಮಯಧೂಮವೂ** ಒಂದೇ ಅರ್ಥವುಳ್ಳ ಪದಗಳು. ಪ್ರಾತಃಕಾಲದಲ್ಲಿ ಇನ್ನೂ ನಕ್ಷತ್ರಗಳು ಪ್ರಕಾಶಿಸುತ್ತಿರುವಾಗಲೇ ಬೆರಣಿಯಿಂದ ಉತ್ಪನ್ನವಾದ ಹೊಗೆಯು ಅಂತರಿಕ್ಷಕ್ಕೆ ಹತ್ತುವುದನ್ನು ಇಲ್ಲಿ ವರ್ಣಿಸಿದೆ. ಈ ಧೂಮವು ಮೇಲಕ್ಕೆ ಹೋಗುವ ಕ್ರಮದಿಂದ ಆಯಾ ದಿನದ ಹವದ ಸ್ವರೂಪವು ತಿಳಿಯುತ್ತದೆ. ಆದುದರಿಂದ **ಶಕಧೂಮವು** ಪ್ರತಿದಿನದ ಹವವನ್ನು ತಿಳಿಸುವ ಸಾಧನವು. ಮೇಲೆ ಉದಾಹೃತವಾಗಿರುವ ಅಥರ್ವವೇದ ೬-೧೨೮-೩ನೇ ಮಂತ್ರದ ಅರ್ಥವನ್ನು ವಿವರಿಸುತ್ತಾ ಅಥರ್ವವೇದವನ್ನು ಆಂಗ್ಲಭಾಷೆಗೆ ಪರಿವರ್ತಿಸಿರುವ Whitney ಎಂಬ ಪಂಡಿತನು ತನ್ನ ಅಭಿಪ್ರಾಯವನ್ನು ಈರೀತಿ ತಿಳಿಸಿದ್ದಾನೆ.

One may conjecture that it is the Milky-way, which is not unlike a thin line of smoke drawn across the sky, that is the real king of asterisms, and that its imitation by a column of the heavy smoke of burning dung is what was relied on to counteract any evil influences from the asterisms; or the behaviour of such smoke, as rising upward or hanging low, may have been really a weather-sign.

(Harvard Oriental Series. Vol 7-P. 378)

ಗೋಮಯದಿಂದ ಉತ್ಪನ್ನವಾದ ಧೂಮವು ಯಾವ ಆಕಾರದಲ್ಲಿರುವುದೋ ಅದೇ ಆಕಾರವನ್ನು ಹೋಲುತ್ತಿರುವ ನಕ್ಷತ್ರಪುಂಜವು (Milky-way) ಇಲ್ಲಿ ಶಕಧೂಮವೆಂದು ನಿರ್ದಿಷ್ಟವಾಗಿದೆ. ನಕ್ಷತ್ರಗಳಿಂದ ಉಂಟಾಗತಕ್ಕ ದುಷ್ಪರಿಣಾಮಗಳು ಇದನ್ನು ಆರಾಧಿಸುವುದರಿಂದ ತಪ್ಪುತ್ತವೆ. ಅದುದರಿಂದಲೇ "ಭದ್ರಾಹಮಸ್ಮಿ ನಃ ಸಾಯಂ" ಎಂದು ಪ್ರಾರ್ಥಿತವಾಗಿದೆ ಅಥವಾ Weber ಎಂಬುವನು ಹೇಳುವಂತೆಯೇ ಧೂಮದ ಆರೋಹಣಾವರೋಹಣಗಳು ಇಲ್ಲಿ ವರ್ಣಿತವಾಗಿರಬಹುದು. ಆಯಾ ದಿನದ ಹವದ ಸ್ವರೂಪವನ್ನು ಅಂತರಿಕ್ಷದಲ್ಲಿ ಊರ್ಧ್ವಮುಖವಾಗಿ ಪ್ರಸರಿಸುವ ಧೂಮರೇಖೆಯು ತನ್ನ ನೇರವಾದ ಆರೋಹಣದಿಂದಲೂ, ಹವಾಗುಣಕ್ಕನುಗುಣವಾದ ವಕ್ರವಾದ ಪ್ರಸರಣದಿಂದಲೂ ತಿಳಿಸುತ್ತದೆ. ಆ ಶಕಧೂಮವು ಪ್ರಕೃತವಾದ ಋಕ್ಕಿನಲ್ಲಿಯೂ ವರ್ಣಿತವಾಗಿರುವುದೆಂದರ್ಥವು.

ಕೌಶಿಕಪರಿಭಾಷಾಸೂತ್ರದಲ್ಲಿ (VIII. 17) ಶಕಧೂಮವೆಂಬ ಪದವನ್ನು ಯಜ್ಞದಲ್ಲಿ ಮುಖ್ಯಪಾತ್ರವನ್ನು ವಹಿಸುವ ಬ್ರಹ್ಮನಿಗೆ ಪರ್ಯಾಯಪದವಾಗಿ ಉಪಯೋಗಿಸಿದೆ.

" ಪ್ರಮಂದೋ ಶೀರಶಲಲ್ಯುಪಧಾನಶಕಧೂಮ ಜರಂತಃ............... "

ಎಂಬ ಈ ವಾಕ್ಯಕ್ಕೆ ದಾರಿಲನು ವ್ಯಾಖ್ಯಾನಮಾಡುತ್ತಾ ಶಕಧೂಮ (?) ಬ್ರಾಹ್ಮಣಃ............... ಏತಾನಿ ಜೀರ್ಣಾನಿ ಪ್ರತ್ಯೇತವ್ಯಾನಿ ಎಂದರ್ಥಮಾಡಿದ್ದಾನೆ. ಅಲ್ಲದೇ ಇದೇ ಕೌಶಿಕಸೂತ್ರದಲ್ಲಿ, ಶಕಧೂಮದ ಸ್ತುತಿಯಿರುವ ಅ. ವೇ. ೬-೧೨೮ ನೇ ಅಧ್ಯಾಯವನ್ನು ಪರಸ್ಥಳಕ್ಕೆ ಪ್ರಯಾಣಮಾಡುವ ವ್ಯಾಪಾರಿಯು ತನ್ನ ಪೂಜಾಕಾಲಗಳಲ್ಲಿ ಪಠಿಸಿ ಶಕಧೂಮನನ್ನು ಪ್ರಾರ್ಥಿಸಬೇಕೆಂದೂ ತಿಳಿಸಿದೆ. (ಕೌ. ಸೂ. ೫೦-೧೩)

ಈರೀತಿ ಶಕಧೂಮವೆಂಬ ಪದಕ್ಕೆ ಒಂದೊಂದು ಕಡೆ ಒಂದೊಂದರ್ಥವನ್ನು ಹೇಳಿದೆ. ಆದರೆ ಪ್ರಕೃತವಾದ ಋಕ್ಕಿನ ವರ್ಣನೆಯಲ್ಲಿ ಯಾವ ಅರ್ಥವೆಂದು ನಿಷ್ಕೃಷ್ಟವಾಗಿ ಹೇಳಲು ಕಷ್ಟವಾದರೂ ಸಹ ನಮಗೆ ಬೃಹದ್ದೇವತೆಯೇ ಈ ಸಂದರ್ಭದಲ್ಲಿ ಪ್ರಮಾಣವಾಗಿರುತ್ತದೆ. ಆ ಪ್ರಮಾಣದಂತೆ ಶಕಶಬ್ದಕ್ಕೆ ಮೇಘವೆಂದೂ, ಧೂಮಶಬ್ದಕ್ಕೆ ಸಲಿಲವೆಂದೂ ಅಥವಾ ಅದರ ವಾಸವೆಂದೂ ಅರ್ಥಮಾಡಿದರೆ ಈ ಸಂದರ್ಭದಲ್ಲಿ ಅರ್ಥವು ಹೊಂದಿಕೊಳ್ಳುತ್ತದೆ. ಅದೂ ಅಲ್ಲದೆ ಹಿಂದಿನ ಮಂತ್ರಗಳಲ್ಲೂ ಸಹ ವೃಷ್ಟಿಪತನದ ವರ್ಣನೆಯಿರುತ್ತದೆ. ಅಥವಾ ಸಾಯಣರು ವಿವರಿಸಿರುವಂತೆ ಮೇಘದ ಉತ್ಪತ್ತಿಗೆ ಕಾರಣವಾದುದೂ, ಗೋಮಯದ ಜ್ವಾಲೆಯಿಂದ ಉತ್ಪನ್ನವಾದ ಧೂಮರೇಖೆಯೆಂದೂ ಹೇಳಬಹುದು.

ವಿಷೂವತಾ— ವ್ಯಾಪ್ತಿಮತಾ । ವ್ಯಾಪಿಸಿರುವ ಧೂಮರೇಖೆಯಿಂದ ಎಂದರ್ಥ.

ಉಕ್ಷಾಣಂ- ಫಲಸ್ಯ ಸೇಕ್ತಾರಂ ಇಷ್ಟಾರ್ಥಗಳನ್ನು ಸುರಿಸಿಕೊಡುವವನು ಎಂದರ್ಥ. ಸೇಚನ ಎಂದರೆ ಸುರಿಸು ಎಂಬರ್ಥವನ್ನು ಕೊಡುವ ಉಕ್ಷ್ ಧಾತುವಿನಿಂದ ಈ ಪದವು ನಿಷ್ಪನ್ನವಾಗಿದೆ. ಭಕ್ತರಿಗೆ ಇಷ್ಟಾರ್ಥವನ್ನು ಕೊಡುವ ದೇವತೆಯೆಂದರ್ಥ. ಉಕ್ಷನ್ ಶಬ್ದವನ್ನು ನಿರುಕ್ತಕಾರರು ಮಹನ್ನಾಮಗಳಲ್ಲಿ ಪಠಿಸಿದ್ದಾರೆ. (ನಿ. ३-೧३) ಅಲ್ಲದೇ ಋಕ್ಸಂಹಿತೆಯ,

ವೃಷಕಪಾಯಿ ರೇವತಿ ಸುಪುತ್ರ ಆದು ಸುಸ್ನುಷೇ ।
ಘಸತ್ತ ಇಂದ್ರ ಉಕ್ಷಣಃ ಪ್ರಿಯಂ ಕಾಚಿತ್ಕರಂ ಹವಿರ್ವಿಶ್ವಸ್ಮಾದಿಂದ್ರ ಉತ್ತರಃ ।

(ಋ. ಸಂ. ೧೦-೮೬-೧೩)

ಎಂಬ ಋಕ್ಕನ್ನುದಹರಿಸಿ ಅದರಲ್ಲಿರುವ **ಉಕ್ಷಣಶಬ್ದಕ್ಕೆ** ಅರ್ಥವನ್ನು ಹೇಳುವಾಗ **ಉಕ್ಷಣ ಉಕ್ಷತೇರ್ವೃದ್ಧಿಕರ್ಮಣಃ ಉಕ್ಷಂತ್ಯುದಕೇನೇತಿ ವಾ** (ನಿ. ೧೨-೯) ವೃದ್ಧಿಯಾಗು ಎಂಬರ್ಥವನ್ನು ಕೊಡುವ **ಉಕ್ಷ್** ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ ಉದಕದೊಂದಿಗೆ ವೃದ್ಧಿಯಾಗತಕ್ಕ ಎಂಬರ್ಥವನ್ನು ಆ ಸಂದರ್ಭದಲ್ಲಿ ಹೇಳಿರುತ್ತಾರೆ. ಸಾಧಾರಣವಾಗಿ **ಉಕ್ಷಶಬ್ದವು ಶಕ್ತಿ, ಸಾಮರ್ಥ್ಯ** ಎಂಬರ್ಥಗಳಲ್ಲಿಯೂ ಉಪಯೋಗಿಸಲ್ಪಟ್ಟಿದೆ. ಎಂದರೆ ಸೇಚನದ ಸಾಮರ್ಥ್ಯದಲ್ಲಿ ತಾತ್ಪರ್ಯವುಳ್ಳದ್ದಾಗುತ್ತದೆ.

**ತೇ ಜಜ್ಞಿರೇ ದಿವ ಋಷ್ವಾಸ ಉಕ್ಷಣೋ ರುದ್ರಸ್ಯ ಮರ್ಯಾ ಅಸುರಾ ಅರೇಪಸಃ ।**
**ಪಾವಕಾಸಃ ಶುಚಯಃ ಸೂರ್ಯಾ ಇವ ಸತ್ವಾನೋ ನ ದ್ರಪ್ಸಿನೋ ಘೋರವರ್ಪಸಃ ॥**
(ಋ. ಸಂ. ೧-೬೪-೨)

**ಯಜ್ಞಸ್ಯ ಕೇತುಂ ಪ್ರಥಮಂ ಪುರೋಹಿತಂ ಹವಿಷ್ಮಂತ ಈಳತೇ ಸಪ್ತ ವಾಜಿನಂ ।**
**ಶೃಣ್ವಂತಮಗ್ನಿಂ ಘೃತಪೃಷ್ಠಮುಕ್ಷಣಂ ಪೃಣಂತಂ ದೇವಂ ಪೃಣತೇ ಸುವೀರ್ಯಂ ॥**
(ಋ. ಸಂ. ೧೦-೧೨೨-೪)

ಇತ್ಯಾದಿ ಋಕ್ಕುಗಳಲ್ಲೆಲ್ಲಾ **ಉಕ್ಷಶಬ್ದಕ್ಕೆ ಸೇಚನ** ಅಥವಾ **ಸೇಚನಸಾಮರ್ಥ್ಯ** ಎಂದು ಅದರ ಶಕ್ತಿಯನ್ನು **ಸೂಚಿಸುತ್ತದೆ.** ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಸೇಚನ ಸಾಮರ್ಥ್ಯವುಳ್ಳ ಎಂದರೆ ಇಷ್ಟಾರ್ಥಗಳನ್ನು ಒದಗಿಸಿ ಕೊಡುವ **ಸಾಮರ್ಥ್ಯವುಳ್ಳ ಸೋಮವೆಂದು** ತಾತ್ಪರ್ಯ.

**ಪೃಶ್ನಿಂ—ಪೃಶ್ನಿಃ ವಲ್ಲೀರೂಪಃ ಸೋಮಃ ।** ಸೋಮಕ್ಕೆ ವಿಶೇಷಣವಾಗಿದೆ. ಸಾಧಾರಣವಾಗಿ **ಪೃಶ್ನಿಶಬ್ದವು ಆದಿತ್ಯನಿಗೆ ಪರ್ಯಾಯವಾಗಿ** ಉಪಯೋಗಿಸಲ್ಪಡುತ್ತದೆ. ನಿರುಕ್ತಕಾರರು ಈ ಪದವನ್ನು ದ್ಯುನಾಮಗಳಲ್ಲಿಯೂ ಪಠಿಸಿದ್ದಾರೆ. (ನಿ. ೧-೧೩) ಅನಂತರ ಆದಿತ್ಯಪರವಾಗಿ ಈ ಪದದ ನಿರ್ವಚನವನ್ನು ತಿಳಿಸುತ್ತಾ ಈರೀತಿ ವಿವರಿಸಿದ್ದಾರೆ.

**ಪೃಶ್ನಿರಾದಿತ್ಯೋ ಭವತಿ । ಪ್ರಾಶ್ನುತ ಏನಂ ವರ್ಣ ಇತಿ ನೈರುಕ್ತಾಃ ಸಂಸ್ಪ್ರಷ್ಟಾ ರಸಾನ್ । ಸಂಸ್ಪ್ರಷ್ಟಾ ಭಾಸಂ ಜ್ಯೋತಿಷಾಂ । ಸಂಸ್ಪೃಷ್ಟೋ ಭಾಸೇತಿ ವಾ ।** (ನಿ. ೨-೧೪)

ಪ್ರಭೆಯಿಂದ ವ್ಯಾಪ್ತವಾಗಿರುವುದರಿಂದ ಆದಿತ್ಯನಿಗೆ **ಪೃಶ್ನಿ**ಯೆಂಬ ಹೆಸರೆಂದು ಪ್ರಾಚೀನ ನಿರುಕ್ತಕಾರರ ಮತ. ಸ್ರವಿಸುವ ರಸಗಳನ್ನು ಒಂದುಗೂಡಿಸುತ್ತದಾದ್ದರಿಂದಲೂ, ತೇಜೋಮಂಡಲಗಳ ಪ್ರಭೆಗಳನ್ನೆಲ್ಲಾ ಒಟ್ಟುಗೂಡಿಸುತ್ತದಾದ್ದರಿಂದಲೂ ಈ ವಿಶೇಷಣವು ಆದಿತ್ಯನ ಸ್ವರೂಪವನ್ನು ವರ್ಣಿಸುತ್ತದೆಯೆಂದು ಯಾಸ್ಕರ ವಿವರಣೆಯದೆ.

**ಅಥ ದ್ಯೌರಾವಿಷ್ಟಾ ಜ್ಯೋತಿರ್ಭಿಃ ಪುಣ್ಯಕೃದ್ಭಿಶ್ಚ ।** (ನಿ. ೨-೧೪)

ತೇಜಸ್ಸುಗಳಿಂದಲೂ, ಸುಕೃತಿಗಳಿಂದಲೂ ಕೂಡಿರುವುದರಿಂದ ದ್ಯುಲೋಕಕ್ಕೂ ಪೃಶ್ನಿಯೆಂಬ ವಿಶೇಷಣವಿದೆಯೆಂದು ನಿರುಕ್ತಕಾರರು ಈ ಪದದ ಅರ್ಥವನ್ನು ತಿಳಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿಯಲ್ಲಿ ಸಹ **ಪ್ರಾಶ್ನುತೇ ತೇನ ಫಲಂ** ಇತ್ಯಾದಿಯಾಗಿ ಇದೇ ಅರ್ಥವು ಸೋಮನ ಸ್ವರೂಪವನ್ನು ತಿಳಿಸಿ ಅವನಿಗೆ ವಿಶೇಷಣವಾಗಿದೆ.

ವೀರಾಃ ವಿವಿಧೇರಣಕುಶಲಾ ಋತ್ವಿಜಃ । ನಾನಾವಿಧವಾದ ಯಜ್ಞಾದಿಕಾರ್ಯಗಳಲ್ಲಿ ಪ್ರವೃತ್ತಿಯುಳ್ಳ ಋತ್ವಿಕ್ಕುಗಳಿಗೆ ವಿಶೇಷಣವಾಗಿವೆ ನಿರುಕ್ತಕಾರರು ಈ ಪದದ ನಿರ್ವಚನವನ್ನು ತೋರಿಸುತ್ತಾ,

ವೀರವಂತಃ । ಕಲ್ಯಾವೀರಾ ವಾ । ವೀರೋ ವೀರಯತ್ಯಮಿತ್ರಾನ್ । ವೀತೇರ್ವಾಸ್ಯಾ-
ದ್ಗತಿಕರ್ಮಣೋ ವೀರಯತೇರ್ವಾ ॥　　(ನಿ. ೧-೨)

ಶತ್ರುಗಳನ್ನು ಚದುರಿಸಿ ಅಟ್ಟುತ್ತಾರಾದ್ದರಿಂದ ಈ ವಿಶೇಷಣವಿದೆ. ಅಥವಾ ಚಲನಾರ್ಥಕವಾದ ವೀ ಧಾತುವಿನಿಂದಾಗಲಿ ಅಥವಾ ಶಕ್ತ್ಯರ್ಥಕವಾದ ವಿರ್ ಧಾತುವಿನಿಂದಾಗಲಿ ಈ ಪದವು ನಿಷ್ಪನ್ನವಾಗಿರಬಹುದು ಎಂದು ತಿಳಿಸಿದ್ದಾರೆ. ಋತ್ವಿಕ್ಕುಗಳಿಗೂ ಈ ಸಾಮರ್ಥ್ಯವಿರುವುದರಿಂದ ಪ್ರಕೃತವಾದ ಋಕ್ಕಿನಲ್ಲಿ ಅವರಿಗೆ ವಿಶೇಷಣವಾಗಿದೆ.



**ತ್ರಯಃ ಕೇಶಿನ ಋತುಥಾ ವಿ ಚಕ್ಷತೇ ಸಂವತ್ಸರೇ ವಪತ ಏಕ ಏಷಾಂ ।**
**ವಿಶ್ವಮೇಕೋ ಅಭಿ ಚಷ್ಟೇ ಶಚೀಭಿರ್ಧ್ರಾಜಿರೇಕಸ್ಯ ದದೃಶೇ ನ**
**ರೂಪಂ ॥ ೪೪ ॥**

ಕೇಶದಂತಿರತಕ್ಕ ರಶ್ಮಿಗಳೊಡಗೂಡಿದ ಅಗ್ನಿ, ಆದಿತ್ಯ ಮತ್ತು ವಾಯುಗಳು ಆಯಾ ಕಾಲಕ್ಕೆ ಸರಿಯಾಗಿ ವಿಶೇಷ ರೀತಿಯಲ್ಲಿ ಭೂಮಿಯನ್ನು ನೋಡುತ್ತಿರುತ್ತಾರೆ. ಇವರಲ್ಲಿ ಅಗ್ನಿಯು ಸಂವತ್ಸರಾತೀತವಾದನಂತರ ಓಷಧ್ಯಾದಿಗಳನ್ನು ಛೇದಿಸುತ್ತಾನೆ. ಇನ್ನೊಬ್ಬನಾದ ಆದಿತ್ಯನು ಸಕಲ ಜಗತ್ತನ್ನೂ ತನ್ನ ಪ್ರಕಾಶನಾದಿ ಕರ್ಮಗಳಿಂದ ಸರ್ವತ್ರ ನೋಡುತ್ತಾನೆ. ಇನ್ನೊಬ್ಬನಾದ ವಾಯುವಿನ ಚಲನವಲನಾದಿಗಳು ಮಾತ್ರ ಕಾಣುತ್ತವೆ. ಅವನ ರೂಪವು ಕಾಣಿಸುವುದಿಲ್ಲ.

**ತ್ರಯಃ ಕೇಶಿನಃ—ಕೇಶಸ್ಥಾನೀಯಪ್ರಕೃಷ್ಟರಶ್ಮಿಯುಕ್ತಾಃ ।** ಕೇಶಸ್ಥಾನಗಳಲ್ಲಿ ಅತಿಶಯವಾದ ರಶ್ಮಿಗಳುಳ್ಳವರೆಂದು ಅಗ್ನಿ ವಾಯು ಮತ್ತು ಆದಿತ್ಯ ಈ ಮೂವರಿಗೂ ಸಮಾನವಾದ ವಿಶೇಷಣವಾಗಿದೆ. ಇದೇ ವರ್ಣನೆಯನ್ನು ಬೃಹದ್ದೇವತೆಯಲ್ಲಿಯೂ ತಿಳಿಸುತ್ತಾ ಅಗ್ನಿವಾಯ್ವಾದಿತ್ಯರ ವಿಶೇಷಸ್ವರೂಪವನ್ನು ತಿಳಿಸಿದೆ.

**ಅರ್ಚಿಭಿಃ ಕೇಶ್ಯಯಂ ತ್ವಗ್ನಿರ್ವಿದ್ಯುದ್ಭಿರ್ಶ್ಚೈವ ಮಧ್ಯಮಃ ।**
**ನಿಪಾತಮಾತ್ರೇ ಕಥ್ಯಂತೇ ತಥಾಗ್ನೇಯಾನಿ ಕಾನಿಚಿತ್ ।**　　(ಬೃ. ದೇ. ೧-೯೪)

ಪಾರ್ಥಿವಾಗ್ನಿಯ ಜ್ವಾಲೆಯು ಕೇಶಗಳಂತಿರುವುದರಿಂದ ಅಗ್ನಿಗೆ **ಕೇಶಿಯೆಂದು** ಹೆಸರು ಅಂತರಿಕ್ಷಸ್ಥನಾದ ವಾಯುವು ವಿದ್ಯುದ್ರೂಪವಾದ ಪ್ರಭೆಗಳಿಂದಲೂ, ದ್ಯುಲೋಕಸ್ಥನಾದ ಆದಿತ್ಯನು ತನ್ನ ರಶ್ಮಿಗಳಿಂದ ಪ್ರಕಾಶಿಸುತ್ತಿರುವುದರಿಂದಲೂ, ಇವೆಲ್ಲವೂ ಅವರವರ ಕೇಶಸ್ಥಾನಗಳಲ್ಲಿದ್ದು ಅವರ ಪ್ರಭಾವವನ್ನು ವೃದ್ಧಿಮಾಡುತ್ತಿರುವುದರಿಂದಲೂ ಅಗ್ನಿವಾಯ್ವಾದಿತ್ಯರಿಗೆ **ಕೇಶಿಗಳೆಂದು** ಹೆಸರು.

**ಏತೇಷಾಂ ತು ಪೃಥಕ್ತ್ವೇನ ತ್ರಯಾಣಾಂ ಕೇಶಿನಾಮಿಹ ।**
**ಸಂಲಕ್ಷ್ಯಂತೇ ಪ್ರಕ್ರಿಯಾಸು ತ್ರಯಃ ಕೇಶಿನ ಇತ್ಯೃಚಿ ॥**　　(ಬೃ. ದೇ. ೧-೯೫)

ಈ ಮೂರುವಿಧವಾದ **ಕೇಶಿಗಳ** ಸ್ವರೂಪಗಳು ಬೇರೆಬೇರೆಯಾಗಿರುವುದರಿಂದ ಅವರವರ ಪ್ರಕ್ರಿಯಾ ಭೇದಗಳನ್ನೂ ಸಹ " **ತ್ರಯಃ ಕೇಶಿನಃ** " ಎಂಬ ಋಕ್ಕಿನಲ್ಲಿ (೧-೧೬೪-೪೪) ಹೇಳಿದೆ. ಆದರೆ ಅವರ ಉತ್ಪತ್ತಿ, ಅವರ ಕ್ರಿಯಾವ್ಯಾಪ್ತಿ ಇವುಗಳನ್ನು ವಿಭಾಗಿಸಿ ಇದಮಿತ್ಥಂ (ಇದು ಹೀಗೆಯೇ ಸರಿ) ಎಂದು ನಿಷ್ಕೃಷ್ಟವಾಗಿ ಹೇಳಲು ಸಾಧ್ಯವಿಲ್ಲ ಎಂಬಂಶವನು ತಿಳಿಸುತ್ತಾ ಬೃಹದ್ದೇವತೆಯಲ್ಲಿ,

**ನ ಚೈನ್ಯೈಷಾಂ ಪ್ರಸೂತಿರ್ವಾ ವಿಭೂತಿಸ್ಥಾನಜನ್ಮ ವಾ।**
**ನಿರ್ವಕ್ತುಂ ಶಕ್ಯನೇತ್ಯೈರ್ಹಿ ಕೃತ್ಸ್ನಂ ವ್ಯಾಪ್ತಮಿದಂ ಜಗತ್ ॥** (ಬೃ. ದೇ. ೧-೯೬)

ಇವರ ಪ್ರಸೂತಿಯಾಗಲಿ, ಪ್ರಭಾವವಾಗಲಿ, ಸ್ಥಾನಭೇದಗಳಲ್ಲಾಗಲಿ ನಿಷ್ಕೃಷ್ಟವಾಗಿ ಹೇಳಲ್ಪಡತಕ್ಕನಲ್ಲ. ಸಮಸ್ತ ಜಗತ್ತೂ ಸಹ ಇವರಿಂದ ವ್ಯಾಪ್ತವಾಗಿದೆ. ಇವರ ಸರ್ವವ್ಯಾಪಕತೆಯನ್ನು ಋಕ್ಸಂಹಿತಾವಾಕ್ಯಗಳಲ್ಲೂ ವರ್ಣಿಸಿ ಇವರ ಪ್ರಭಾವವೂ, ಕ್ರಿಯೆಗಳೂ ಸ್ಥಾನದ ದೃಷ್ಟಿಯಿಂದಾಗಲಿ, ಕಾಲವೃಷ್ಟಿಯಿಂದಾಗಲಿ ಪರಿಮಿತವಾದುದಲ್ಲವೆಂದು ತಿಳಿಸಿದೆ. (ಇದಕ್ಕೆ ಆಧಾರಗಳನ್ನು ಮುಂದೆ ಕೊಡಲಾಗುತ್ತದೆ.) ಮೊದಲು ಇವರಿಗೆ ಕೇಶಿ ಎಂಬ ವಿಶೇಷಣವು ಪ್ರಸಿದ್ಧವಾಗಿರಲು ಕಾರಣವೇನೆಂಬು ತಿಳಿಯಲು ನಿರುಕ್ತದ ನಿರ್ವಚನವನ್ನು ನೋಡಬೇಕಾಗುತ್ತದೆ. ನಿರುಕ್ತಕಾರರು ಈ ಪದದ ನಿರ್ವಚನವನ್ನೂ, ಈ ವಿಶೇಷಣವು ಅಗ್ನ್ಯಾದಿಗಳ ಯಾವ ವಿಶೇಷಗುಣಗಳನ್ನೂ ತಿಳಿಸುತ್ತದೆ ಎಂಬುದನ್ನೂ ಈ ರೀತಿ ವಿವರಿಸಿದ್ದಾರೆ.

**ಕೇಶಿ– ಕೇಶೀ ಕೇಶಾ ರಶ್ಮಯಸ್ತೈಸ್ತದ್ವಾನ್, ಕಾಶನಾದ್ವಾ, ಪ್ರಕಾಶನಾದ್ವಾ ।**
(ನಿ. ೧೨-೨೫)

ಕೇಶವುಳ್ಳವನು ಕೇಶಿ. ಕೇಶವೆಂದರೆ ರಶ್ಮಿಗಳೆಂದರ್ಥ, ರಶ್ಮಿಯುಕ್ತನಾದವನಿಗೆ ಕೇಶಿಯೆಂಬ ಪರ್ಯಾಯನಾಮವಿದೆ. ಪ್ರಕಾಶವನ್ನುಂಟುಮಾಡು ಎಂಬರ್ಥವನ್ನು ಕೊಡುವ ಕಾಶ್ ಧಾತುವಿನಿಂದಾಗಲಿ ಅಥವಾ ತಾನೇ ಅತ್ಯಂತ ಪ್ರಕಾಶಮಾನವಾಗಿದೆ ಎಂದು ತೋರಿಸುವ ಪ್ರ+ಕಾಶ್ ಎಂಬುದರಿಂದಾಗಲಿ ಈ ಪದವು ನಿಷ್ಪನ್ನವಾಗಬಹುದು ಎಂದು ಈ ಪದದ ನಿರ್ವಚನವನ್ನು ತೋರಿಸಿ ಅನಂತರ ಆದಿತ್ಯಪರವಾದ ಈ ಪದದ ಪ್ರಯೋಗಕ್ಕೆ ಋಕ್ಸಂಹಿತಾವಾಕ್ಯವನ್ನುದಹರಿಸಿದ್ದಾರೆ.

**ಕೇಶ್ಯಗ್ನಿಂ ಕೇಶೀ ವಿಷಂ ಕೇಶೀ ಬಿಭರ್ತಿ ರೋದಸೀ ।**
**ಕೇಶೀ ವಿಶ್ವಂ ಸ್ವರ್ದೃಶೇ ಕೇಶೀದಂ ಜ್ಯೋತಿರುಚ್ಯತೇ ॥** (ಋ. ಸಂ. ೧೦-೧೩೬-೧)

ಕೇಶಿಯು ಎಂದರೆ ಪ್ರಕಾಶಮಾನನಾದ ಆದಿತ್ಯನು ಅಗ್ನಿಯನ್ನೂ, ಉದಕವನ್ನೂ ಧರಿಸಿದ್ದಾನೆ. (ವಿಷವು ಇಲ್ಲಿ ಉದಕ ಪರ್ಯಾಯವಾದ ಪದವು). ಅವನೇ ದ್ಯಾವಾಪೃಥಿವಿಗಳನ್ನು ಧರಿಸಿದ್ದಾನೆ. ಸಕಲ ಜಗತ್ತೂ ಅವನ ಪ್ರಭಾಮಯವಾದ ಸ್ವರೂಪವನ್ನು ನೋಡುತ್ತದೆ. ಇಂತಹ ಜ್ಯೋತಿರೂಪವಾದ ಮೂರ್ತಿಗೆ ಕೇಶಿಯೆಂಬ ಹೆಸರು ಎಂದು ಆದಿತ್ಯನ ಸ್ವರೂಪವರ್ಣನೆಗೆ ಋಕ್ಕನ್ನುದಹರಿಸಿ ಅನಂತರ ಪ್ರಕೃತವಾದ ಋಕ್ಕಿನಲ್ಲಿ ಸಹ ಅಗ್ನ್ಯಾದಿಗಳ ಸ್ವರೂಪವು ಈ ವಿಶೇಷಣದಿಂದ ಹೇಗೆ ವರ್ಣಿತವಾಗಿದೆಯೆಂದೂ ತಿಳಿಸಿದ್ದಾರೆ. ಪ್ರಕೃತವಾದ ಋಕ್ಕಿಗೆ ನಿರುಕ್ತಕಾರರ ನಿರ್ವಚನವು ಇರೀತಿ ಇದೆ.

**ತ್ರಯಃ ಕೇಶಿನಃ ಋತುಥಾ ವಿಚಕ್ಷತೇ ಕಾಲೇಕಾಲೇಽಭಿವಿಪಶ್ಯಂತಿ ಸಂವತ್ಸರೇ ವಪತ ಏಕ ಏಷಾಮಿತ್ಯಗ್ನಿಃ ಪೃಥಿವೀಂ ದಹತಿ ಸರ್ವಮೇಕೋಽಭಿವಿಪಶ್ಯತಿ ಕರ್ಮಭಿರಾದಿತ್ಯೋ ಗತಿರೇಕಸ್ಯ ದೃಶ್ಯತೇ ನ ರೂಪಂ ಮಧ್ಯಮಸ್ಯ ।** (ನಿ. ೧೨-೨೭)

ಇದರ ಅರ್ಥವು ಮೇಲೆ ಭಾವಾರ್ಥದಲ್ಲಿ ವಿವರಿಸಿದಂತೆಯೇ ಇರುತ್ತದೆ. ಈ ಋಕ್ಕಿನಲ್ಲಿ ಅಗ್ನಿ, ವಾಯು, ಆದಿತ್ಯ ಎಂಬ ಮೂರು ದೇವತೆಗಳನ್ನು ನಿರ್ದೇಶಿಸಿದ್ದರೂ ಸಹ ಇವರ ಕ್ರಿಯೆಗಳು ಆಯಾ ಲೋಕಕ್ಕೆ ಮಾತ್ರ ಪರಿಮಿತವಾದುವಲ್ಲ. ಇವರ ಸ್ಥಾನವಿಭಾಗವನ್ನು ತೋರಿಸುವಾಗ ಹಿಂದೆ ನಿರುಕ್ತಕಾರರು ಇವರ ವ್ಯಾಪ್ತಿಯ ಪರಿಮಿತಿಯನ್ನು ತೋರಿಸಿದ್ದಾರೆ.

**ಅಗ್ನಿಃ ಪೃಥಿವೀಸ್ಥಾನೋ ವಾಯುರ್ವೇಂದ್ರೋ ವಾಂತರಿಕ್ಷಸ್ಥಾನಃ ಸೂರ್ಯೋ ದ್ಯುಸ್ಥಾನಃ ।**
(ನಿ. ೭-೫)

ಅಗ್ನಿಯಸ್ಥಾನವು ಪೃಥ್ವಿಯೆಂದೂ, ವಾಯು (ಅಥವಾ ಇಂದ್ರನ) ವಿನ ಸ್ಥಾನವು ಅಂತರಿಕ್ಷವೆಂದೂ, ಆದಿತ್ಯನ ಸ್ಥಾನವು ದ್ಯುಲೋಕ ವೆಂದೂ ತಿಳಿಸಿದ್ದಾರೆ. ಈ ಸ್ಥಾನದ ಪರಿಮಿತಿಯಿಲ್ಲ. **ವಿಶ್ವಮೇಕೋ ಅಭಿ ಚಷ್ಟೇ । ಸರ್ವಮೇಕೋಽಭಿವಿಪಶ್ಯತಿ** ಆದಿತ್ಯನು ಸಕಲಲೋಕವನ್ನೂ ವೀಕ್ಷಿಸುತ್ತಾನೆ ಇತ್ಯಾದಿಯಾಗಿ ವರ್ಣಿಸಿದೆ.

ಇವರಲ್ಲಿ ಅಗ್ನಿ ಮತ್ತು ಆದಿತ್ಯನ ರೂಪವು ಜಗತ್ತಿಗೆ ಗೋಚರವಾಗುತ್ತದೆ. ಆದರೆ ವಾಯುವಿನ ರೂಪವು ಗೋಚರ ವಾಗುವುದಿಲ್ಲ. ಅವನ **ಗತಿ**ಯಿಂದ ಮಾತ್ರ ಅವನ ವ್ಯಾಪಾರವನ್ನು ಊಹಿಸಬೇಕಾಗುತ್ತದೆ. ಇದನ್ನು **ಧ್ರಾಜಿರೇಕಸ್ಯ ದದೃಶೇ ನ ರೂಪಂ** ಎಂದು ತಿಳಿಸಿದೆ.

**ಧ್ರಾಜಿಃ**—ಈ ಪದವು **ಗತಿಕರ್ಮ**ನಾಮಗಳಲ್ಲಿ ಪಠಿತವಾಗಿದೆ. (ನಿ. ೩೯) ಸಾಧಾರಣವಾಗಿ ಇದು ವಾಯುವಿನ ಗತಿಯನ್ನು ತಿಳಿಸುವ ಪದವಾಗಿದೆ. ಉದಾಹರಣೆಗೆ—

**ಮುನಯೋ ವಾತರಶನಾಃ ಪಿಶಂಗಾ ವಸತೇ ಮಲಾ ।**
**ವಾತಸ್ಯಾನು ಧ್ರಾಜಿಂ ಯಂತಿ ಯದ್ದೇವಾಸೋ ಅವಿಕ್ಷತ ॥** (ಋ. ಸಂ. ೧೦-೧೩೬-೨)

ಎಂಬಲ್ಲಿ **ವಾತಸ್ಯ ಧ್ರಾಜಿಂ** ಎಂದು ವಾಯುವಿನ ವೇಗದ ಗತಿಯನ್ನು ವರ್ಣಿಸಿ ಅಲೌಕಿಕವಾದ ಶಕ್ತಿಯನ್ನು ಸಂಪಾದಿಸಿದ ಋಷಿಗಳು ವಾಯುವಿನ ಸಂಚಾರಕ್ರಮವನ್ನರಿತರೆಂದಿದೆ ಅಥವಾ ಈ ಪದವು ಇತರ ಸನ್ನಿವೇಶಗಳಲ್ಲಿ ಉಪಯೋಗಿಸಿದ್ದರೂ ಸಹ ಆಗಲೂ, ವಾಯುವಿನ ಗತಿಗೇ ಹೋಲಿಸಿದೆ. ಉದಾಹರಣೆಗೆ—

**ಹಿರಣ್ಯಕೇಶೋ ರಜಸೋ ವಿಸಾರೇಽಹಿರ್ಧುನಿರ್ವಾತ ಇವ ಧ್ರಜೀಮಾನ್ ।**
**ಶುಚಿಭ್ರಾಜಾ ಉಷಸೋ ನವೇದಾ ಯಶಸ್ವತೀರಪಸ್ಯುವೋ ನ ಸತ್ಯಾಃ ॥**
(ಋ. ಸಂ. ೧-೭೯-೧)

ಎಂಬಲ್ಲಿ ಅಗ್ನಿಯ ಗಮನದ ವೇಗವನ್ನು ವರ್ಣಿಸುವುದೇ ಉದ್ದೇಶವಾದರೂ ಸಹ, ಅದನ್ನು **ವಾತ ಇವ ಧ್ರಜೀಮಾನ್** ಎಂದು ವಾಯುವಿನ ಗತಿಗೆ ಹೋಲಿಸಿದೆ.

ಅಗ್ನಿ, ವಾಯು, ಆದಿತ್ಯ ಎಂಬ ಹೆಸರುಗಳಿಂದ ಮೂರು ಲೋಕಗಳಲ್ಲಿಯೂ ಮೂರು ವಿಧವಾಗಿ ತಮ್ಮ ಕರ್ತವ್ಯಗಳನ್ನು ಋತುಕಾಲಗಳಿಗನುಸಾರವಾಗಿ ನಡೆಸುತ್ತಿರುವ ಈ ಮೂರು ದೇವತೆಗಳೂ ಭಿನ್ನಾತ್ಮಕರೇ ಅಥವಾ ಒಂದೇ ತತ್ತ್ವದ ಮೂರು ಬೇರೆ ಸ್ವರೂಪಗಳೇ ಎಂದು ಪರಿಶೀಲಿಸಬೇಕು. ಈ ಸೂಕ್ತದಲ್ಲಿ ಮೊದಲಿನಿಂದಲೂ ಸಹ ಸಕಲವಿಶ್ವವ್ಯಾಪಿಯಾದ ಏಕತತ್ತ್ವದ ಪ್ರತಿಪಾದನೆಯೇ ಮುಖ್ಯವಾದ ಗುರಿಯೆಂದು ತಿಳಿದುಬರುತ್ತದೆ. ಕೆಲವು ಋಕ್ಕುಗಳಲ್ಲಿ ಅದನ್ನು ಪರಬ್ರಹ್ಮವೆಂದೂ, ಇನ್ನು ಕೆಲವೆಡೆಗಳಲ್ಲಿ ಆದಿತ್ಯಾಂತರ್ಗತನೂ, ಹಿರಣ್ಮಯರೂಪನೂ ಆದ ಪರಮಪುರುಷನೆಂದೂ ವರ್ಣಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಭಿನ್ನಾತ್ಮಕರಾದ ದೇವತೆಗಳ ವರ್ಣನೆಯಿರುವಂತೆ ಕಂಡರೂ ಸಹ ಇವರೆಲ್ಲರಿಗೂ ಮೂಲತತ್ತ್ವವು ಒಂದೇ ಎಂದೂ, ಇವರೆಲ್ಲರೂ ಆ ಮೂಲತತ್ತ್ವದ ಬೇರೆ ಬೇರೆ ಸ್ವರೂಪಗಳೆಂದೂ ಅನೇಕ ಕಡೆಗಳಲ್ಲಿ ವರ್ಣಿತವಾಗಿರುವುದನ್ನು ತಿಳಿಯಬಹುದು. ಆ ಮೂಲ ತತ್ತ್ವವನ್ನು ಕೆಲವೆಡೆಗಳಲ್ಲಿ ಆದಿತ್ಯನೆಂದೂ ಇನ್ನು ಕೆಲವೆಡೆಗಳಲ್ಲಿ ಅಗ್ನಿಯೆಂದೂ ಹೇಳಿದೆ.

**ಭವದ್ಭೂತಸ್ಯ ಭವ್ಯಸ್ಯ ಜಂಗಮಸ್ಥಾವರಸ್ಯ ಚ ।**
**ಅಸ್ಯೈಕೇ ಸೂರ್ಯಮೇವೈಕಂ ಪ್ರಭವಂ ಪ್ರಲಯಂ ವಿದುಃ ॥**

ಅಸತಶ್ಚ ಸತಶ್ಚೈವ ಯೋನಿರೇಷಾ ಪ್ರಜಾಪತಿಃ ।
ಯದಕ್ಷರಂ ಚ ವಾಚ್ಯಂ ಚ ಯಥೈತದ್ಬ್ರಹ್ಮ ಶಾಶ್ವತಂ ॥
ಕೃತ್ವೈಷ ಹಿ ತ್ರಿಧಾತ್ಮಾನಂ ಏಷ ಲೋಕೇಷು ತಿಷ್ಠತಿ ।
ದೇವಾನ್ಯಥಾಯಥಂ ಸರ್ವಾನ್ ನಿವೇಶ್ಯ ಸ್ವೇಷು ರಶ್ಮಿಷು ॥
ಏತದ್ಭೂತೇಷು ಲೋಕೇಷು ಅಗ್ನಿಭೂತಂ ಸ್ಥಿತಂ ತ್ರಿಧಾ ।
ಋಷಯೋಗೀರ್ಭಿರರ್ಚಂತಿ ಹೋತ್ರಾಯಾಂ ವೃಕ್ತಬರ್ಹಿಷಃ ॥

(ಬೃಹದ್ದೇವತಾ ೧-೬೧-೬೪)

ವರ್ತಮಾನಕಾಲದಲ್ಲಿರುವುದಕ್ಕೂ, ಹಿಂದೆ ಇದ್ದುದಕ್ಕೂ, ಮುಂದೆ ಉತ್ಪನ್ನವಾಗುವುದಕ್ಕೂ ಜಂಗಮಾತ್ಮಕವಾಗಿರುವುದಕ್ಕೂ, ಸ್ಥಿರವಾಗಿರುವುದಕ್ಕೂ, ವಿಶ್ವದ ಸಕಲ ಕಾಲದ ಮತ್ತು ಸಕಲ ಪ್ರದೇಶದ ಭೂತಗಳಿಗೂ ಸಹ ಆದಿತ್ಯನೇ ಉತ್ಪತ್ತಿಸ್ಥಾನವು. ಇವನೇ ಸೃಷ್ಟಿಕರ್ತನು ಮತ್ತು ಇವನೇ ಪ್ರಲಯಕರ್ತನು. ಈ ಆದಿತ್ಯನೇ ವಿಶ್ವಕರ್ತನಾದ ಪ್ರಜಾಪತಿಯು ಸತ್ತಿಗೂ ಅಸತ್ತಿಗೂ ಇವನೇ ಆಶ್ರಯನು. ಇವನೇ ಶಾಶ್ವತನಾದ ಪರಬ್ರಹ್ಮನು. ಇವನೇ ಅನಿರ್ವಾಚ್ಯನಾದ ಅಕ್ಷರನು. (ಅಕ್ಷರನ ಸ್ವರೂಪವನ್ನು ಹಿಂದೆ ವಿವರಿಸಿದೆ). ವಾಚ್ಯನಾದ ದೈವವೂ ಇವನೇ.

ಆದಿತ್ಯರೂಪನಾದ ಈ ಪ್ರಜಾಪತಿಯೇ ಮೂರು ರೂಪಗಳಲ್ಲಿ ವಿಭಕ್ತನಾಗಿ ಮೂರು ಲೋಕಗಳಲ್ಲೂ ಪ್ರಕಾಶಿಸುತ್ತಿದ್ದಾನೆ. ವಿಶ್ವವ್ಯಾಪಕವಾದ ತನ್ನ ರಶ್ಮಿಗಳಲ್ಲಿ ದೇವಾದಿಸಕಲಭೂತಗಳನ್ನೂ ಸ್ಥಾಪಿಸಿ ನೆಲೆಸುವಂತೆ ಮಾಡಿದ್ದಾನೆ. ಇದೇ ಆದಿತ್ಯರೂಪನಾದ ಪ್ರಜಾಪತಿಯು ಅಗ್ನಿಯ ರೂಪದಲ್ಲೂ ಸಹ ಮೂರು ಲೋಕಗಳಲ್ಲೂ ಮೂರು ರೂಪಗಳಲ್ಲಿರುತ್ತಾನೆ. ಈ ಅಗ್ನಿಯೇ ಆದಿತ್ಯನು, ಇವನೇ ಪಾರ್ಥಿವಾಗ್ನಿಯು. ಇವನೇ ವಾಯುವು. ಪ್ರಕೃತವಾದ ಋಕ್ಕಿನಲ್ಲಿ ಮೂರು ರೂಪಗಳಲ್ಲಿ ವರ್ಣಿತವಾಗಿರುವ ಮೂರು ದೇವತೆಗಳಿಗೂ ಇವನೇ ಮೂಲತತ್ತ್ವವು ಅವರೆಲ್ಲರೂ ಇವನ ಬೇರೆ ಬೇರೆ ರೂಪಗಳು. ಅಗ್ನಿರೂಪವಾದ ಈ ಮೂಲತತ್ತ್ವವನ್ನೂ, ಅಗ್ನಿ, ವಾಯು, ಆದಿತ್ಯ ಈ ಮೂವರೂ ಈ ಮೂಲತತ್ತ್ವದ ಬೇರೆ ಬೇರೆ ರೂಪಗಳೆಂಬುದನ್ನೂ ಅನೇಕ ಶ್ರುತಿಗಳಲ್ಲಿ ವರ್ಣಿತವಾಗಿರುವುದನ್ನೂ ನೋಡಬಹುದು, ವಿಶ್ವಾಪ್ಸುವಾದ ಅಗ್ನಿಯೇ ರುದ್ರನೆಂದೂ, ಪಶುಪತಿಯೆಂದೂ, ವಾಯುವೆಂದೂ, ಪ್ರಜಾಪತಿಯೆಂದೂ, ಸಕಲ ದೇವತೆಗಳೂ ಅಗ್ನಿಯೇ ಎಂದೂ ಶತಪಥಾದಿಗಳಲ್ಲಿ ವರ್ಣಿತವಾಗಿರುವುದನ್ನು ಹಿಂದೆ ತಿಳಿಸಿದೆ. [ಋಗ್ವೇದಸಂಹಿತಾ ಭಾಗ ೧೧, ಪುಟ 426-428].

ತ್ರಿಸ್ಥಾನಂ ಚೈನಮರ್ಚಂತಿ ಹೋತ್ರಾಯಾಂ ವೃಕ್ತಬರ್ಹಿಷಃ ।
...... ...... ...... ...... ...... ...... ......
...... ...... ...... ...... ...... ...... ...... ......
ತಾಸಾಮಿಯಂ ವಿಭೂತಿರ್ಹಿ ನಾಮಾನಿ ಯದನೇಕಶಃ ।
ಆಹುಸ್ತಾಸಾಂ ತು ಮಂತ್ರೇಷು ಕವಯೋಽನ್ಯೋನ್ಯಯೋನಿತಾಂ ॥

(ಬೃ. ದೇ. ೧-೭-೧)

ಬೇರೆ ಬೇರೆ ರೂಪಗಳಲ್ಲಿ ಆವಿರ್ಭೂತರಾಗಿ ಅಗ್ನಿ, ವಾಯು ಮತ್ತು ಆದಿತ್ಯರು ತಮ್ಮ ತಮ್ಮ ವಿಭೂತಿಗಳನ್ನು ನಾನಾವಿಧವಾಗಿ ಪ್ರಕಾಶಪಡಿಸುತ್ತಾರೆ. ಆದರೆ ಇವರೆಲ್ಲರಿಗೂ ಸಹ ಒಂದೇ ಉತ್ಪತ್ತಿಸ್ಥಾನವು; ಎಲ್ಲರಿಗೂ ಮೂಲತತ್ತ್ವವು ಒಂದೇ ಆಗಿದೆಯೆಂದು ಕವಿಗಳು ಈ ಮೂಲತತ್ತ್ವವನ್ನು ಸ್ತುತಿಸಿದ್ದಾರೆ ಈ ವಿಷಯವನ್ನು ಇದೇ ಸೂಕ್ತದ ೪೬ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಲಾಗುತ್ತದೆ.

**ಧ್ರಾಜಿಃ ಏಕಸ್ಯ ದದೃಶೇ ನ ರೂಪಂ**— **ವಾಯೋಃ ಗತಿಃ ಸರ್ವೈಃ ದೃಶ್ಯತೇ ನ ರೂಪಂ ಅಪ್ರತ್ಯಕ್ಷತ್ವಾತ್ ।** ವಾಯುವು ಪ್ರತ್ಯಕ್ಷಗೋಚರನಲ್ಲದಿರುವುದರಿಂದ ಇವನ ರೂಪವು ಕಣ್ಣಿಗೆ ಕಾಣಿಸುವುದಿಲ್ಲ. ಇವನ ಚಲನವಲನಗಳು ಮಾತ್ರ ದೃಷ್ಟಿಗೋಚರವಾಗುತ್ತದೆ ಎಂಬ ಈ ವರ್ಣನೆಯಲ್ಲಿ ರಹಸ್ಯವಾದ ಅರ್ಥವಿರಬೇಕು. ಉಳಿದೆಡೆಗಳಲ್ಲಿ ವಾಯುವಿನ ರೂಪವರ್ಣನೆಗಳು ವಾಯುವಿನ ಸೌಂದರ್ಯಾದಿಗಳನ್ನು ತಿಳಿಸುತ್ತವೆ. ಉದಾಹರಣೆಗೆ—

**ತ್ವಾಂ ಹಿ ಸುಪ್ಸರಸ್ತಮಂ ನೃಷದನೇಷು ಹೂಮಹೇ । ಗ್ರಾವಾಣಾಂ ನಾಶ್ವಪೃಷ್ಠಂ ಮಂಹನಾ ।**

ಎಂಬಲ್ಲಿ ವಾಯುವಿನ ಅತಿಶಯವಾದುದೂ ಶೋಭನಾತ್ಮಕವಾದುದೂ ಆದ ರೂಪದ ವರ್ಣನೆಯಿದೆ. ಇದು **ದದೃಶೇ ನ ರೂಪಂ** ಎಂಬುದಕ್ಕೆ ವಿರುದ್ಧವಾಗಿದೆ. ಮತ್ತು,

**ವಾಯವಾ ಯಾಹಿ ದರ್ಶತೇಮೇ ಸೋಮಾ ಅರಂಕೃತಾಃ । ತೇಷಾಂ ಪಾಹಿ ಶ್ರುಧೀ ಹವಂ ॥**

(ಋ. ಸಂ. ೧-೨-೧)

ಇತ್ಯಾದಿ ಕಡೆಗಳಲ್ಲಿ **ದಶತ-ದರ್ಶನೀಯ** ಇತ್ಯಾದಿ ವಿಶೇಷಣಗಳನ್ನೇ ಉಪಯೋಗಿಸಿದೆ. ಪ್ರಕೃತವಾದ ಋಕ್ಕಿನ ವಿವರಣೆಯಲ್ಲಿ ಸಾಯಣರಾಗಲಿ, ನಿರುಕ್ತಕಾರರಾಗಲೀ ಈ ವಿಷಯದಲ್ಲಿ ಏನನ್ನೂ ಹೇಳಿಲ್ಲವಾದ್ದರಿಂದ ಶ್ರುತಿವಾಕ್ಯಗಳಲ್ಲಿ ವಿರೋಧ ವಿದೆಯೆಂದು ನಾವು ತೋರಿಸುವುದು ಸಾಹಸದ ಕಾರ್ಯವಾಗಬಹುದು.



## ಚತ್ವಾರಿ ವಾಕ್ಪರಿಮಿತಾ ಪದಾನಿ ತಾನಿ ವಿದುರ್ಬ್ರಾಹ್ಮಣಾ ಯೇ ಮನೀಷಿಣಃ । ಗುಹಾ ತ್ರೀಣಿ ನಿಹಿತಾ ನೇಂಗಯಂತಿ ತುರೀಯಂ ವಾಚೋ ಮನುಷ್ಯಾ ವದಂತಿ ॥ ೪೫ ॥

ವಾಕ್ಕಿನ ವರ್ಗಗಳು ನಾಲ್ಕು ಭಾಗಗಳಾಗಿ ನಿಯಮಿತವಾಗಿವೆ. ಆ ವರ್ಗಗಳನ್ನು ಮೇಧಾವಿಗಳಾದ ವೇದ ವಿತ್ತುಗಳು ಮಾತ್ರ ಅರಿಯುತ್ತಾರೆ. ಅವುಗಳಲ್ಲಿ ಮೂರು ವರ್ಗಗಳು ರಹಸ್ಯದಲ್ಲಿಡಲ್ಪಟ್ಟು ಸ್ಪಷ್ಟವಾಗಿ ತಿಳಿಯುವುದಿಲ್ಲ. ಮಾನವ ರೆಲ್ಲರೂ ವಾಕ್ಕಿನ ನಾಲ್ಕನೆಯ ಪದವನ್ನು ಮಾತ್ರ ಉಚ್ಚರಿಸಿ ವ್ಯವಹರಿಸುತ್ತಾರೆ.

ವಾಗ್ದೇವತೆಯನ್ನುದ್ದೇಶಿಸಿ ಮಾಡುವ ಪಶುಹೋಮದಲ್ಲಿ **ಚತ್ವಾರಿ ವಾಕ್** ಎಂಬ ಈ ಋಕ್ಕನ್ನು ಹವಿರ್ನಿರ್ವಪಣ ಕಾಲದಲ್ಲಿ ಪುರೋನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಚತ್ವಾರಿ ವಾಕ್ಪರಿಮಿತಾ ಪದಾನಿ ಯಜ್ಞೇನ ವಾಚಃ ಪದವೀಯಮಾಯನ್** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೩-೮).

**ಚತ್ವಾರಿ ವಾಕ್ಪರಿಮಿತಾ ಪದಾನಿ**:— **ಕಾನಿ ಕಾನಿ ಚತ್ವಾರಿ ಇತ್ಯತ್ರ ಬಹವಃ ಸ್ವಸ್ವಮತಾನುರೋಧೇನ ಬಹುಧಾ ವರ್ಣಯಂತಿ ।** ವಾಕ್ಕಿನ ನಾಲ್ಕು ಪದಗಳು ಯಾವುವೆಂದರೆ ಈ ವಿಷಯದಲ್ಲಿ ಅನೇಕ ಮತಗಳಿವೆ. ಎಲ್ಲರೂ ಅವರವರ ಸಂಪ್ರದಾಯಗಳಿಗನುಸಾರವಾಗಿ **ಚತ್ವಾರಿ ಪದಾನಿ** ಎಂಬುದರ ವಿವರಣೆಯನ್ನು ಹೇಳಿದ್ದಾರೆ. ಈ ಮತಗಳ ಪಟ್ಟಿ ಯನ್ನು ನಿರುಕ್ತಕಾರರು ವಿಶದವಾಗಿ ತಿಳಿಸಿದ್ದಾರೆ. (ನಿ. ೧೩-೯)

**ಕತಮಾನಿ ತಾನಿ ಚತ್ವಾರಿ ಪದಾನಿ** ಆ ನಾಲ್ಕು ಪದಗಳು ಯಾವುವು? ಎಂದು ಪ್ರಶ್ನಿಸಿ ಅನಂತರ ಒಂದೊಂದಾಗಿ ಅಭಿಪ್ರಾಯಭೇದಗಳನ್ನು ಹೇಳಿದೆ.

೧. **ಓಂಕಾರೋ ಮಹಾವ್ಯಾಹೃತಯಶ್ಚೇತ್ಯಾರ್ಷಂ—ಸರ್ವವೈದಿಕವಾಗ್ಜಾಲಸ್ಯ ಸಂಗ್ರಹರೂಪಾಃ ಭೂರಾದಯಸ್ತಿಸ್ರೋ ವ್ಯಾಹೃತಯಃ ಪ್ರಣವ ಏಕ ಇತಿ ವೇದತ್ರಯಸಾರತ್ವಾತ್ .... .... .... ಸಪ್ರಣವಾಸು ವ್ಯಾಹೃತಿಷು ಸರ್ವಾ ವಾಕ್ ಪರಿಮಿತೇತಿ ಕೇಚೇನ ವೇದವಾದಿನೋ ವದಂತಿ ।** ಸಕಲವೈದಿಕ ವಾಙ್ಮಯದ ಸಾರವೂ ಸಂಗ್ರಹರೂಪವಾದುದೂ ಆದ, **ಭೂಃ, ಭುವಃ, ಸುವಃ** ಎಂಬ ವ್ಯಾಹೃತಿತ್ರಯವೂ, **ಓಂಕಾರ** ರೂಪವಾದ ಪ್ರಣವವೂ ಸೇರಿ ಒಟ್ಟು ನಾಲ್ಕು ಪಾದಗಳಾಗುತ್ತವೆ. ಇದು ವೈದಕಮತಾನುಸಾರವಾದ ವಿಭಜನೆ.

ವ್ಯಾಹೃತಿಗಳು ಬ್ರಹ್ಮೋಪಾಸನೆಗೆ ಸಾಧನಗಳು. ಸಕಲಲೋಕಗಳ ತತ್ತ್ವವನ್ನೂ ಸಕಲದೇವತೆಗಳ ತತ್ತ್ವಗಳನ್ನೂ ಪ್ರತಿಬಿಂಬಿಸತಕ್ಕವು. ಅಲ್ಲದೆ, ಪರಬ್ರಹ್ಮತತ್ತ್ವವೇ ಈ ರೂಪಗಳಲ್ಲಿ ಪ್ರಕಾಶಿತವಾಗಿದೆ. ಆದುದರಿಂದ ವ್ಯಾಹೃತಿಗಳ ಉಪಾಸನೆಯು ಪರಬ್ರಹ್ಮಜ್ಞಾನಕ್ಕೆ ಸಾಧನವು ಎಂದು ತೈತ್ತಿರೀಯೋಪನಿಷತ್ತಿನಲ್ಲಿ ವ್ಯಾಹೃತಿಗಳ ಸ್ವರೂಪವನ್ನೂ, ವ್ಯಾಹೃತ್ಯಾತ್ಮಕ ಬ್ರಹ್ಮದ ಉಪಾಸನೆಯ ಕ್ರಮವನ್ನೂ ವರ್ಣಿಸಿದೆ. ಆದರೆ ಪ್ರಕೃತದಲ್ಲಿ ನಿರುಕ್ತಕಾರರು ಹೇಳಿರುವಂತೆ ಪ್ರವಣಕ್ಕೆ ಬದಲಾದ **ಮಹಃ** ಎಂಬ ತತ್ತ್ವವು ನಾಲ್ಕನೆಯದಾಗಿರುವುದೆಂದು ತಿಳಿಸಿದೆ. ಆದರೆ ಆ **ಮಹತಃ** ಎಂಬುದೇ ಬ್ರಹ್ಮತತ್ತ್ವವೆಂದೂ, ಅದೇ ಬ್ರಹ್ಮಪ್ರತಿಬಿಂಬಕವಾದ ಪ್ರಣವವೆಂದೂ ಮುಂದಿನ ವರ್ಣನೆಗಳಿಂದ ತಿಳಿಯುತ್ತದೆ. ತೈತ್ತಿರಿಯೋಪನಿಷತ್ತಿನಲ್ಲಿ ಸ್ವರಾಜ್ಯವೆಂಬ ಫಲವನ್ನು ಕೊಡುವ ವ್ಯಾಹೃತಿರೂಪವಾದ ಬ್ರಹ್ಮನ ಉಪಾಸನಾಕ್ರಮವು ಈರೀತಿಯಿದೆ.

> **ಭೂರ್ಭುವಃ ಸುವರಿತಿ ವಾ ಏತಾಸ್ತಿಸ್ರೋ ವ್ಯಾಹೃತಯಃ । ತಾಸಾಮುಹಸ್ಮೈತಾಂ ಚತುರ್ಥೀಂ । ಮಾಹಾಚಮಸ್ಯಃ ಪ್ರವೇದಯತೇ । ಮಹ ಇತಿ । ತದ್ಬ್ರಹ್ಮ । ಸ ಆತ್ಮಾ । ಅಂಗಾನ್ಯನ್ಯಾ ದೇವತಾಃ । ಭೂರಿತಿ ವಾ ಅಯಂ ಲೋಕಃ । ಭುವ ಇತ್ಯಂತರಿಕ್ಷಂ । ಸುವರಿತ್ಯಸೌ ಲೋಕಃ । ಮಹ ಇತ್ಯಾದಿತ್ಯಃ । ಆದಿತ್ಯೇನ ವಾವ ಸರ್ವೇ ಲೋಕಾ ಮಹೀಯಂತೇ । ಭೂರಿತಿ ವಾ ಅಗ್ನಿಃ । ಭುವ ಇತಿ ವಾಯುಃ । ಸುವರಿತ್ಯಾದಿತ್ಯಃ । ಮಹ ಇತಿ ಚಂದ್ರಮಾಃ । ಚಂದ್ರಮಸಾ ವಾವ ಸರ್ವಾಣಿ ಜ್ಯೋತೀಗ್ಂಷಿ ಮಹೀಯಂತೇ । ಭೂರಿತಿ ವಾ ಋಚಃ । ಭುವ ಇತಿ ಸಾಮಾನಿ । ಸುವರಿತಿ ಯಜೂಗ್ಂಷಿ । ಮಹ ಇತಿ ಬ್ರಹ್ಮ । ಬ್ರಹ್ಮಣಾ ವಾವ ಸರ್ವೇವೇದಾ ಮಹೀಯಂತೇ । ಭೂರಿತಿ ವೈ ಪ್ರಾಣಃ । ಭುವ ಇತ್ಯಪಾನಃ । ಸುವರಿತಿ ವ್ಯಾನಃ । ಮಹ ಇತ್ಯನ್ನಂ । ಅನ್ನೇನ ವಾವ ಸರ್ವೇ ಪ್ರಾಣಾ ಮಹೀಯಂತೇ । ತಾ ವಾ ಏತಾಶ್ಚತಸ್ರಶ್ಚತುರ್ಧಾ । ಚತಸ್ರಶ್ಚತಸ್ರೋ ವ್ಯಾಹೃತಯಃ । ತಾ ಯೋ ವೇದ । ಸ ವೇದ ಬ್ರಹ್ಮ । ಸರ್ವೇಽಸ್ಮೈ ದೇವಾ ಬಲಿಮಾವಹಂತಿ ॥** (ತೈ. ಉ ೧-೫)

**ಭೂಃ, ಭುವಃ, ಸುವಃ** ಎಂಬ ಮೂರು ವ್ಯಾಹೃತಿಗಳು. ಅವುಗಳಲ್ಲಿ ನಾಲ್ಕನೆಯದಾದ **ಮಹಃ** ಎಂಬ ಮಹಾವ್ಯಾಹೃತಿಯನ್ನು ಮಾಹಾಚಮಸ್ಯನು ತಿಳಿದುಕೊಂಡನು. ಮಹಃ ಎಂಬುದೇ ಬ್ರಹ್ಮವು. ಅದೇ ಆತ್ಮನು. ಉಳಿದ ದೇವತೆಗಳು ಅಂಗಗಳು. ಈ ವ್ಯಾಹೃತಿಗಳಲ್ಲಿ- **ಭೂಃ** ಎಂಬುದೇ ಈ ಲೋಕವು; **ಭುವಃ** ಎಂಬುದು ಅಂತರಿಕ್ಷವು; **ಸುವಃ** ಎಂಬುದು ದ್ಯುಲೋಕವು. ಮಹಃ ಎಂಬುದೇ ಆದಿತ್ಯನು. ಆದಿತ್ಯನಿಂದಲೇ ಸಕಲಲೋಕಗಳೂ ಮಹತ್ತಾಗುವುವು. (ಇಲ್ಲಿ ವ್ಯಾಹೃತಿಗಳನ್ನು ಸಕಲಲೋಕಗಳ ಸಾರವೆಂದು ತಿಳಿಸಿದೆ).

**ಭೂಃ** ಎಂಬುದೇ ಅಗ್ನಿಯು; **ಭುವಃ** ಎಂಬುದು ವಾಯುವು; **ಸುವಃ** ಎಂಬುದು ಆದಿತ್ಯನು; **ಮಹಃ** ಎಂಬುದು ಚಂದ್ರನು; ಚಂದ್ರನಿಂದಲೇ ಜ್ಯೋತಿಗಳೆಲ್ಲವೂ ವಿಸ್ತಾರವಾಗುವುವು. (ಇಲ್ಲಿ ವ್ಯಾಹೃತಿಗಳು ಲೋಕತ್ರಯದ ದೇವತೆಗಳಾದ ಅಗ್ನಿ, ವಾಯು ಮತ್ತು ಆದಿತ್ಯ, ಇವರ ತತ್ತ್ವವನ್ನು ಪ್ರತಿಬಿಂಬಿಸುತ್ತವೆ).

ಭೂಃ ಎಂಬುದೇ ಋಕ್ಕುಗಳು; ಭುವಃ ಎಂಬುದೇ ಸಾಮಗಳು; ಸುವಃ ಎಂಬುದು ಯಜಸ್ಸುಗಳು; ಮಹಃ ಎಂಬುದು ಬ್ರಹ್ಮ; ಬ್ರಹ್ಮನಿಂದಲೇ ಸಕಲವೂ ಮಹತ್ತಾಗುವುವು. (ಎಂದು ಇಲ್ಲಿ ವ್ಯಾಹೃತಿಗಳು ಸಕಲ ವೇದಗಳ ಸಾರವೆಂದು ತಿಳಿಸಿದೆ).

ಭೂಃ ಎಂಬುದೇ ಪ್ರಾಣವು; ಭುವಃ ಎಂಬುದು ಅಪಾನವು; ಸುವಃ ಎಂಬುದೇ ವ್ಯಾನವು. ಮಹಃ ಎಂಬುದು ಅನ್ನವು; ಅನ್ನದಿಂದಲೇ ಪ್ರಾಣಗಳೆಲ್ಲವೂ ಮಹತ್ತಾಗುತ್ತವೆ (ಎಂದು ಪ್ರಾಣತತ್ತ್ವವನ್ನು ಪ್ರತಿಬಿಂಬಿಸುವ ವ್ಯಾಹೃಗಳನ್ನು ಈ ವಾಕ್ಯಗಳಿಂದ ಸ್ತುತಿಸಿದೆ).

ವ್ಯಾಹೃತಿಗಳು ಈರೀತಿ ಪ್ರಸಿದ್ಧವಾದ ನಾಲ್ಕುಬಗೆಯುಳ್ಳವಾಗಿರುತ್ತವೆ. (**ಚತಸ್ರಶ್ಚತಸ್ರೋ ವ್ಯಾಹೃತಯಃ**) ಈ ನಾಲ್ಕರ ಪರಸ್ಪರ ಸಂಬಂಧವು ಅಂಗಾಂಗಿಭಾವರೂಪವಾದ ಸಂಬಂಧವುಳ್ಳದ್ದಾಗಿದೆ.

**ಭೂರ್ಭುವಃಸುವಃಸ್ವರೂಪಾ ಮಹಃ ಇತ್ಯೇತಸ್ಯ ವ್ಯಾಹೃತ್ಯಾತ್ಮನೋ ಬ್ರಹ್ಮಣಃ ಅಂಗಾನ್ಯನ್ಯಾ ದೇವತಾ ಇತ್ಯುಕ್ತಂ । ಯಸ್ಯ ತಾಃ ಅಂಗಭೂತಾಃ ತಸ್ಯ ಏತಸ್ಯ ಬ್ರಹ್ಮಣಃ ಸಾಕ್ಷಾತ್ ಉಪಲಬ್ಧ್ಯರ್ಥಂ ಉಪಾಸನಾರ್ಥಂ ಚ ಹೃದಯಾಕಾಶಃ ಸ್ಥಾನಮುಚ್ಯತೇ........॥**

(ಶಂಕರಭಾಷ್ಯ)

**ಭೂಃ; ಭುವಃ; ಸುವಃ** ಎಂಬ ವ್ಯಾಹೃತಿತ್ರಯದಿಂದ ನಿರ್ದಿಷ್ಟರಾದ ದೇವತೆಗಳೆಲ್ಲರೂ ಸಹ **ಮಹಃ** ಎಂಬ ವ್ಯಾಹೃತಿರೂಪವಾದ ಬ್ರಹ್ಮಕ್ಕೆ ಅಂಗಗಳಾಗಿರುತ್ತಾರೆ. ಹೃದಯಾಕಾಶವೇ ಈ ಬ್ರಹ್ಮನ ಸ್ಥಾನವು.

**ಸ ಯ ಏಷೋಽಂತರ್ಹೃದಯ ಆಕಾಶಃ । ತಸ್ಮಿನ್ನಯಂ ಪುರುಷೋ ಮನೋಮಯಃ । .... .... .... ಯತ್ರಾಸೌ ಕೇಶಾಂತೋ ವಿವರ್ತತೇ । ವ್ಯಪೋಹ್ಯ ಶೀರ್ಷಕಪಾಲೇ । ಭೂರಿತ್ಯಗ್ನೌ ಪ್ರತಿತಿಷ್ಠತಿ । ಭುವ ಇತಿ ವಾಯೌ । ಸುವರಿತ್ಯಾದಿತ್ಯೇ । ಮಹ ಇತಿ ಬ್ರಹ್ಮಣಿ । ಆಪ್ನೋತಿ ಸ್ವಾರಾಜ್ಯಂ ॥** (ತೈ. ಉ. ೧-೬)

ಈ ವರ್ಣನೆಯಲ್ಲಿ ಹೃದಯಾಕಾಶದಲ್ಲಿ ಸಾಕ್ಷಾತ್ಕೃತನಾಗಿ ಉಪಾಸಕನ ಸ್ವರೂಪವೇ ಆಗಿರುವ ಇಂದ್ರನ ಈಶ್ವರರೂಪವನ್ನು ಹೊಂದುವುದಕ್ಕೆ ಮಾರ್ಗವನ್ನು ಹೇಳಲಾಗಿದೆ. ಸುಷುಮ್ನಾನಾಡಿಯಿಂದ ಉಪಾಸನೆ ಮಾಡಿದ ಮನೋಮಯಾತ್ಮನ ಉಪಾಸಕನು ಮೂರ್ಧಭಾಗದಿಂದ ಹೊರಟು ಈ ಲೋಕಕ್ಕೆ ಅಧಿಷ್ಠಾತೃವಾಗಿ **ಭೂಃ** ಎಂಬ ವಾಹೃತಿರೂಪನೂ ಮಹತ್ತಾದ ಬ್ರಹ್ಮಕ್ಕೆ ಅಂಗವಾಗಿರುವವನೂ ಆದ ಅಗ್ನಿಯಲ್ಲಿ ನಿಲ್ಲುವನು. ಹೀಗೆಯೇ **ಭುವಃ** ಎಂಬ ಎರಡನೆಯ ವ್ಯಾಹೃತಿರೂಪನಾದ ವಾಯುವಿನಲ್ಲಿಯೂ, ಅನಂತರ **ಸುವಃ** ಎಂಬ ಮೂರನೆಯ ವ್ಯಾಹೃತಿರೂಪನಾದ ಆದಿತ್ಯನಲ್ಲಿಯೂ ನಿಲ್ಲುವನು. ಅನಂತರ **ಮಹಃ** ಎಂದು ಎಲ್ಲಕ್ಕೂ **ಅಂಗಿ**ಯಾಗಿರುವ ಪರಬ್ರಹ್ಮನಲ್ಲಿ ನೆಲ್ಲುವನು ಎಂದರೆ ಅವುಗಳೆಲ್ಲಾ ಆತ್ಮಭಾವದಿಂದ ಇದ್ದುಕೊಂಡು ಬ್ರಹ್ಮವೇ ಆಗಿ ಸ್ವರಾಜ್ಯವನ್ನು ಎಂದರೆ ಸ್ವರಾಡ್ರೂಪವನ್ನು ಪಡೆಯುವನು ಎಂದರ್ಥ. ಇದನ್ನೇ "**ಸತ್ಯಾತ್ಮ ಪ್ರಾಣಾರಾಮಂ ಮನ ಆನಂದಂ । ಶಾಂತಿಸಮೃದ್ಧಮಮೃತಂ**" ಇತ್ಯಾದಿಯಾಗಿ ವರ್ಣಿಸಿದೆ.

ಛಾಂದೋಗ್ಯೋಪನಿಷತ್ತಿನಲ್ಲಿ-ಪ್ರಣವವು ವ್ಯಾಹೃತಿಗಳಿಂದ ಉತ್ಪನ್ನವಾಗಿ ಸಕಲ ಲೋಕಗಳೂ ಪ್ರಣವದಿಂದ ಉತ್ಪನ್ನವಾದವೆಂದೂ, ಪ್ರಣವವೇ ಸಕಲ ಲೋಕವೆಂದೂ ಹೇಳಿದೆ.

**ಪ್ರಜಾಪತಿರ್ಲೋಕಾನಭ್ಯತಪತ್ತೇಭ್ಯೋಽಭಿತಪ್ತೇಭ್ಯಸ್ತ್ರಯೀ ವಿದ್ಯಾ ಸಂಪ್ರಾಸ್ರವತ್ತಾಮಭ್ಯತಪತ್ತಸ್ಯಾ ಅಭಿತಪ್ತಾಯಾ ಏತಾನ್ಯಕ್ಷರಾಣಿ ಸಂಪ್ರಾಸ್ರವಂತ ಭೂರ್ಭುವಃಸ್ವರಿತಿ ॥**

(ಛಾ. ಉ. ೨-೨೩-೧)

ಪ್ರಜಾಪತಿಯು ಸಕಲ ಲೋಕಗಳನ್ನೂ ಅಭಿತಪ್ತವಾಗುವಂತೆ ಮಾಡಿದನು ಪಕ್ವವಾಗಿ ಮಾಡಲ್ಪಟ್ಟ ಆ ಲೋಕಗಳಿಂದ ತ್ರಯ್ಯಾತ್ಮಕವಾದ ವೇದವು ಉತ್ಪನ್ನವಾಯಿತು. ವೇದತ್ರಯವನ್ನೂ ಅಭಿತಪ್ತವಾಗುವಂತೆ ಮಾಡಲು ಪಕ್ವವಾದ ಅವುಗಳಿಂದ ಭೂಃ, ಭುವಃ, ಸ್ವಃ ಎಂಬ ವ್ಯಾಹೃತಿಗಳು ಉತ್ಪನ್ನವಾದವು.

**ತಾನ್ಯಭಿತಪತ್ತೇಭ್ಯೋಽಭಿತಪ್ತೇಭ್ಯ ಓಂಕಾರಃ ಸಂಪಾಸ್ರವತ್ತದ್ಯಥಾ ಶಂಕುನಾ ಸರ್ವಾಣಿ ಪರ್ಣಾನಿ ಸಂತೃಣ್ಣಾನ್ಯೇವಮೋಂಕಾರೇಣ ಸರ್ವಾ ವಾಕ್ಸಂತೃಣ್ಣೋಂಕಾರ ಏವೇದಂ ಸರ್ವಮೋಂಕಾರ ಏವೇದಂ ಸರ್ವಂ ॥** (ಛಾ. ಉ. ೨-೨೩-೨)

ವ್ಯಾಹೃತಿಗಳನ್ನೂ ಅಭಿತಪ್ತವಾಗುವಂತೆ ಮಾಡಿದಾಗ ಅವುಗಳಿಂದ ಓಂಕಾರರೂಪವಾದ ಪ್ರಣವವು ಉತ್ಪನ್ನವಾಯಿತು. ಯಾವ ರೀತಿ ಪರ್ಣಗಳೆಲ್ಲವೂ ಒಂದೇ ಶಂಕುವಿನ ಆಧಾರದ ಮೇಲೆ ಒಟ್ಟಿಗೆ ಸೇರಿಕೊಂಡಿವೆಯೋ ಅದರಂತೆಯೇ ಸಕಲವಿಧವಾದ ವಾಕ್ಕುಗಳೂ ಸಹ ಈ ಪ್ರಣವದ ಆಧಾರದಮೇಲೆ ಒಟ್ಟಿಗೆ ಸೇರಿಕೊಂಡಿದೆ. ಓಂ ಎಂಬುದೇ ಸಕಲಲೋಕಗಳೂ ಆಗಿದೆ. ಈ ವ್ಯಾಹೃತಿಗಳೇ ಪೃಥಿವ್ಯಾದಿಲೋಕಗಳು ಮತ್ತು ಅಗ್ನ್ಯಾದಿದೇವತೆಗಳು. ಇವೇ ಲೋಕರಕ್ಷಕಗಳು.

**ಅಥ ಯದವೋಚಂ ಭೂಃ ಪ್ರಪದ್ಯ ಇತಿ ಪೃಥಿವೀಂ ಪ್ರಪದ್ಯೇಽಂತರಿಕ್ಷಂ ಪ್ರಪದ್ಯೇ ದಿವಂ ಪ್ರಪದ್ಯ ಇತ್ಯೇವ ತದವೋಚಂ ।**

**ಭೂಃ** ಎಂಬ ವ್ಯಾಹೃತಿಯ ರಕ್ಷಣೆಯನ್ನು ಪಡೆದೆವು ಎಂದರೆ, ಪೃಥಿವೀ, ಅಂತರಿಕ್ಷ, ಸ್ವರ್ಗ ಈ ಲೋಕತ್ರಯದ ರಕ್ಷಣೆಯೂ ಲಭಿಸಿತೆಂದು ಹೇಳಬೇಕು.

**ಅಥ ಯದವೋಚಂ ಭುವಃ ಪ್ರಪದ್ಯ ಇತ್ಯಗ್ನಿಂ ಪ್ರಪದ್ಯೇ ವಾಯುಂ ಪ್ರಪದ್ಯ ಆದಿತ್ಯಂ ಪ್ರಪದ್ಯ ಇತ್ಯೇವ ತದವೋಚಂ ॥**

**ಭುವಃ** ಎಂಬ ವ್ಯಾಹೃತಿಯ ರಕ್ಷಣೆಯನ್ನು ಪಡೆದೆವು ಎಂದರೆ, ಅಗ್ನಿ, ವಾಯು, ಆದಿತ್ಯ ಈ ದೇವತೆಗಳೆಲ್ಲರ ರಕ್ಷಣೆಯೂ ಲಭಿಸಿತೆಂದರ್ಥ.

**ಅಥ ಯದವೋಚಂ ಸ್ವಃ ಪ್ರಪದ್ಯ ಇತ್ಯೃಗ್ವೇದಂ ಪ್ರಪದ್ಯೇ ಯಜುರ್ವೇದಂ ಪ್ರಪದ್ಯೇ ಸಾಮವೇದಂ ಪ್ರಪದ್ಯ ಇತ್ಯೇವ ತದವೋಚಂ ತದವೋಚಂ ।**

**ಸ್ವಃ** ಎಂಬ ವ್ಯಾಹೃತಿಯ ರಕ್ಷಣೆಯನ್ನು ಪಡೆದೆವೆಂದರೆ ಋಗ್ವೇದ, ಯಜುರ್ವೇದ ಮತ್ತು ಸಾಮವೇದ ಎಂಬ ಸಕಲ ಶ್ರುತಿಗಳ ರಕ್ಷಣೆಯೂ ಲಭಿಸಿತೆಂದರ್ಥ.

ಇತ್ಯಾದಿಯಾಗಿ ವ್ಯಾಹೃತಿತ್ರಯದ ಮತ್ತು ಪ್ರಣವದ ಮಹತ್ತ್ವವು ನಾನಾಶ್ರುತಿವಾಕ್ಯಗಳಲ್ಲಿ ವರ್ಣಿತವಾಗಿರುವುದರಿಂದ ಸಾಯಣರು **ಸಪ್ರಣವಾಸು ವ್ಯಾಹೃತಿಷು ಸರ್ವಾ ವಾಕ್ ಪರಿಮಿತೇತಿ ಕೇಚನ ವೇದವಾದಿನೋ ವದಂತಿ** ಎಂದು ವಿವರಿಸಿದ್ದಾರೆ. **ಚತ್ವಾರಿ ಪದಾನಿ** ಎಂಬುದಕ್ಕೆ ಇರತಕ್ಕ ಅನೇಕ ವಿವರಣೆಗಳಲ್ಲಿ **ಇದೊಂದು** ಎಂದು ನಿರುಕ್ತಕಾರರು ತಿಳಿಸಿದ್ದಾರೆ. ಎರಡನೆಯದಾಗಿ—

**(೨) ನಾಮಾಖ್ಯಾತೇ ಚೋಪಸರ್ಗನಿಪಾತಾಶ್ಚೇತಿ ವೈಯಾಕರಣಾಃ |** ನಾಮ, ಆಖ್ಯಾತ, **ಉಪಸರ್ಗ, ನಿಪಾತ** ಎಂಬ ನಾಲ್ಕುಭೇದಗಳು **ಚತ್ವಾರಿ ಪದಾನಿ** ಎಂಬುದರಿಂದ ನಿರ್ದಿಷ್ಟವಾಗಿವೆಯೆಂದು ವೈಯಾಕರಣರ ಮತ. [ಪತಂಜಲಿ ಮೊದಲಾದವರು ಜಾತಿಶಬ್ದ, ಗುಣಶಬ್ದ, ಕ್ರಿಯಾಶಬ್ದ, ದ್ರವ್ಯಶಬ್ದ ಎಂಬ ವಿಭಾಗಮಾಡಿರುವರು] ಇಂತಹ ಪ್ರಮಾಣದಿಂದಲೇ ಸಕಲ ಲೌಕಿಕವೈದಿಕವ್ಯವಹಾರವೆಲ್ಲವೂ ನಡೆಯುತ್ತಿರುವುದು. ಈ ನಾಲ್ಕು ಪ್ರಭೇದಗಳನ್ನೂ ನಿರುಕ್ತದಲ್ಲಿ ವಿವರಿಸಿದೆ—

**ತದ್ಯಾನ್ಯೇತಾನಿ ಚತ್ವಾರಿ ಪದಜಾತಾನಿ ನಾಮಾಖ್ಯಾತೇ ಚೋಪಸರ್ಗನಿಪಾತಾಶ್ಚ ತಾನೀಮಾನಿ ಭವಂತಿ | ತತ್ರೈತನ್ನಾಮಾಖ್ಯಾತಯೋರ್ಲಕ್ಷಣಂ ಪ್ರದಿಶಂತಿ ಭಾವಪ್ರಧಾನಮಾಖ್ಯಾತಂ ಸತ್ತ್ವಪ್ರಧಾನಾನಿ ನಾಮಾನಿ |**

ಈ ನಾಲ್ಕುಬಗೆಗಳಲ್ಲಿ ಭಾವಪ್ರಧಾನವಾದುದೇ ಆಖ್ಯಾತವು ಮತ್ತು ಸತ್ತ್ವಪ್ರಧಾನವಾದುದೇ ನಾಮವು, ಎಂದು ನಿರುಕ್ತದಲ್ಲಿ ಇವುಗಳ ಲಕ್ಷಣವನ್ನು ಹೇಳಿದೆ. ಬೃಹದ್ದೇವತೆಯಲ್ಲಿಯೂ ಸಹ.

**ಶಬ್ದೇನೋಚ್ಚಾರಿತೇನೇಹ ಯೇನ ದ್ರವ್ಯಂ ಪ್ರತೀಯತೇ |**
**ತದಕ್ಷರವಿಧೌ ಯುಕ್ತಂ ನಾಮೇತ್ಯಾಹುರ್ಮನೀಷಿಣಃ ||**
**ಅಷ್ಟೌ ಯತ್ರ ಪ್ರಯುಜ್ಯಂತೇ ನಾನಾರ್ಥೇಷು ವಿಭಕ್ತಯಃ |**
**ತನ್ನಾಮ ಕವಯಃ ಪ್ರಾಹುರ್ಭೇದೇ ವಚನಲಿಂಗಯೋಃ ||** (ಬೃ. ದೇ. ೧-೪೨, ೪೩)

ಯಾವ ಶಬ್ದದ ಉಚ್ಚಾರಣೆಯಿಂದ ಒಂದು ದ್ರವ್ಯವು ಗೋಚರಕ್ಕೆ ಬರುತ್ತದೆಯೋ ಆ ಶಬ್ದವನ್ನು **ನಾಮವೆಂಬ** ಹೆಸರಿನಿಂದ ಪ್ರಾಜ್ಞರು ವ್ಯವಹರಿಸುತ್ತಾರೆ. ಅರ್ಥವ್ಯತ್ಯಾಸಗಳನ್ನು ತೋರಿಸುವ ಪ್ರತ್ಯಯವುಳ್ಳದ್ದೂ, ಲಿಂಗ ಮತ್ತು ವಚನ ಭೇದಗಳನ್ನು ತೋರಿಸತಕ್ಕದ್ದೂ ಆದ ಪದಕ್ಕೆ ಕವಿಗಳು **ನಾಮವೆಂಬ** ಹೆಸರಿನಿಂದ ವ್ಯವಹರಿಸಿದ್ದಾರೆಂದು ನಾಮ ' ದ ಲಕ್ಷಣವು ಉಕ್ತವಾಗಿದೆ. ಅನಂತರ ಆಖ್ಯಾತದ ಸ್ವರೂಪವನ್ನು ತಿಳಿಸುತ್ತಾ,

**ಕ್ರಿಯಾಸು ಬಹ್ವೀಷ್ವಭಿಸಂಶ್ರಿತೋ ಯಃ ಪೂರ್ವಾಪರೀಭೂತ ಇಹೈಕ ಏವ |**
**ಕ್ರಿಯಾಭಿನಿರ್ವೃತ್ತಿವಶೇನ ಸಿದ್ಧ ಆಖ್ಯಾತಶಬ್ದೇನ ತಮರ್ಥಮಾಹುಃ ||**
(ಬೃ. ದೇ. ೧-೪೪)

ಬೇರೆಬೇರೆ ಕ್ರಿಯೆಗಳಲ್ಲಿ ಅನ್ವಿತವಾಗಿರುವುದೂ, ಪೂರ್ವಾವಸ್ಥೆಗೆ ಮಾರ್ಪಡತಕ್ಕದ್ದೂ ಮತ್ತು ಕಾರ್ಯವೃದ್ಧಿಯನ್ನು ಸೂಚಿಸತಕ್ಕದ್ದೂ ಆದ ಭಾವಕ್ಕೆ ಆಖ್ಯಾತವೆಂದು ವ್ಯವಹಾರವಿದೆಯೆಂದು ಆಖ್ಯಾತದ ಲಕ್ಷಣವನ್ನು ಹೇಳಿದೆ. ಆಖ್ಯಾತದಭೇದಗಳೆಷ್ಟು ಎಂಬುದನ್ನೂ ಸಹ ಮುಂದೆ ಈರೀತಿ ವಿವರಿಸಿದೆ.

**ಭಾವಪ್ರಧಾನಮಾಖ್ಯಾತಂ ಷಡ್ವಿಕಾರಾ ಭವಂತಿ ತೇ ।**
**ಜನ್ಮಾಸ್ತಿತ್ವಂ ಪರೀಣಾಮೋ ವೃದ್ಧಿರ್ಹಾನಂ ವಿನಾಶನಂ ॥**
**ಏತೇಷಾಮೇವ ಷಣ್ಣಾಂ ತು ಯೇಽನ್ಯೇ ಭಾವವಿಕಾರಜಾಃ ॥**

(ಬೃ. ದೇ. ೨-೧೨೧, ೧೨೨)

ಭಾವಪ್ರಧಾನವಾದ (Becoming) ಆಖ್ಯಾತದಲ್ಲಿ ಉತ್ಪತ್ತಿ, ಸ್ಥಿತಿ, ಪರಿಣಾಮ, ವೃದ್ಧಿ, ಹಾನ, (decline) ಮತ್ತು ನಾಶ ಎಂಬ ಆರುವಿಧವಾದ ಭಾವಗಳಿರುತ್ತವೆ. ಉಳಿದ ಭಾವಗಳ ವಿಕಾರಗಳೂ ಸಹ ಈ ಮೂಲಗಳಿಂದಲೇ ಉತ್ಪನ್ನ ವಾಗುತ್ತವೆ. ಬೃಹದ್ದೇವತೆಯಲ್ಲಿ ಮಾಡಿರುವ ಈ ವಿಭಾಗಕ್ಕೆ ನಿರುಕ್ತವಾಕ್ಯವೇ ಆಧಾರವಾಗಿರುತ್ತದೆ ನಿರುಕ್ತದಲ್ಲಿ ಸತ್ತ್ವ ಪ್ರಧಾನವಾದುದು ನಾಮವೆಂದೂ, ಭಾವಪ್ರಧಾನವಾದುದು ಆಖ್ಯಾತವೆಂದೂ ಮೊದಲು ತಿಳಿಸಿ ಅನಂತರ ಸತ್ತ್ವನಿರೂಪಣ, ಭಾವನಿರೂಪಣವೆಂದು ಸತ್ತ್ವ ಮತ್ತು ಭಾವಗಳ ಸ್ವರೂಪವನ್ನು ವಿವರಿಸಿದ್ದಾರೆ.

**ಅದ ಇತಿ ಸತ್ತ್ವಾನಾಮುಪದೇಶಃ । ಗೌರಶ್ವಃ ಪುರುಷೋ ಹಸ್ತೀತಿ ।** (ನಿ. ೧-೨)

ಅದಶ್ಶಬ್ದದಿಂದ ಸೂಚಿತವಾಗುವ ಪದಾರ್ಥವೆಲ್ಲವೂ ಸತ್ತ್ವವು. 'ಗೌಃ' 'ಅಶ್ವಃ' 'ಪುರುಷಃ' ಇತ್ಯಾದಿ.

**ಭವತೀತಿ ಭಾವಸ್ಯ । ಆಸ್ತೇ, ಶೇತೇ, ವ್ರಜತಿ, ತಿಷ್ಠತೀತಿ ।** (ನಿ. ೧-೧)

'ಅವನು ಕುಳಿತುಕೊಳ್ಳುತ್ತಾನೆ', 'ಮಲಗುತ್ತಾನೆ', 'ಹೋಗುತ್ತಾನೆ', 'ನಿಲ್ಲುತ್ತಾನೆ' ಇತ್ಯಾದಿ ಭಾವರೂಪ ವಾದ ಕಾರ್ಯಗಳನ್ನು ತಿಳಿಸುವುದು ಭಾವವು. (Becoming) ಎಂದು ನಾಮಾಖ್ಯಾತಗಳ ಲಕ್ಷಣವನ್ನು ಹೇಳುತ್ತಾ ಈರೀತಿ ಯಾದ ಪದವಿಭಾಗದಲ್ಲಿ ಮತಾಂತರಗಳನ್ನೂ ತಿಳಿಸಿದೆ.

**ಇಂದ್ರಿಯನಿತ್ಯಂ ವಚನಮೌದುಂಬರಾಯಣಃ । ತತ್ರ ಚತುಷ್ಟ್ವಂ ನೋಪಪದ್ಯತೇ ।**

(ನಿ. ೧-೨)

ವಚನಕ್ಕೆ ಇಂದ್ರಿಯನಿತ್ಯತ್ವಮಾತ್ರವಿರುವುದರಿಂದ ಮೇಲೆ ಹೇಳಿದ ನಾಲ್ಕು ವಿಭಾಗಗಳು ಸರಿಯಾಗಿರುವುದಿಲ್ಲವೆಂದು ಔದಂಬರಾಯಣರ ಮತ, ಎಂದು **ಚತ್ವಾರಿ ಪದಾನಿ** ಎಂಬ ವಿಭಜನೆಗೆ ಒಪ್ಪದಿರಲು ಅವರು ಹೇಳಿರುವ ಕಾರಣವನ್ನೂ **"ಯುಗಪದುತ್ಪನ್ನಾನಾಂ"** ಇತ್ಯಾದಿವಾಕ್ಯಗಳಿಂದ ಚರ್ಚಿಸಿದೆ. [ಪ್ರಕೃತದಲ್ಲಿ ಆ ವಿವರಣೆಯು ಬಹಳ ದೀರ್ಘವಾಗು ವುದರಿಂದ ಅದನ್ನು ವಿವರಿಸಿಲ್ಲ.] ಸತ್ತ್ವದ ಸ್ವರೂಪವನ್ನು ತಿಳಿಸಿದನಂತರ ಭಾವದ ವಿವರಣೆಯನ್ನು ತೋರಿಸುತ್ತಾ ಅದರ ಸ್ವರೂಪ ಮತ್ತು ವಿಭಾಗಗಳನ್ನು ಹೇಳಿದೆ. (ನಿ. ೧-೨)

**ಷಡ್ಭಾವವಿಕಾರಾ ಭವಂತೀತಿ ವಾರ್ಷ್ಯಾಯಣಿರ್ಜಾಯತೇಽಸ್ತಿ ವಿಪರಿಣಮತೇ ವರ್ಧ-ತೇಽಪಕ್ಷೀಯತೇ ವಿನಶ್ಯತೀತಿ ।**

ವಾರ್ಷ್ಯಾಯಣಿಯ ಮತದಂತೆ ಜನ್ಮ, ಅಸ್ತಿತ್ವ, ವಿಪರಿಣಾಮ, ವೃದ್ಧಿ, ಅಪಕ್ಷಯ, ವಿನಾಶ ಎಂಬುದಾಗಿ ಭಾವಗಳನ್ನು ಆರು ಬಗೆಯಾಗಿ ವಿಂಗಡಿಸಬಹುದು. ಅವುಗಳಲ್ಲಿ,

(೧) **ಜಾಯತ ಇತಿ ಪೂರ್ವಭಾವಸ್ಯಾದಿಮಾಚಷ್ಟೇ, ನಾಪರಭಾವಮಾಚಷ್ಟೇ, ನ ಪ್ರತಿಷೇಧತಿ ।** **ಉತ್ಪತ್ತಿ** (Generis) ರೂಪವಾದ ಭಾವವು ಪೂರ್ವಭಾವದ ಆದಿಯನ್ನು ಮಾತ್ರ ತೋರಿಸುತ್ತದೆ. ಅದರೆ ಪರಭಾವದ ಸ್ಥಿತಿಯನ್ನು ಅಸ್ತ್ಯರ್ಥದಲ್ಲಾಗಲಿ ಅಥವಾ ನಿಷೇಧಾರ್ಥದಲ್ಲಾಗಲಿ ಹೇಳುವುದಿಲ್ಲ.

**(೨) ಅಸ್ತೀತ್ಯುತ್ಪನ್ನಸ್ಯ ಸತ್ತ್ವಸ್ಯಾವಧಾರಣಂ ।**

ಉತ್ಪನ್ನವಾದ ಸತ್ತ್ವದ ಸ್ಥಿತಿಯನ್ನು 'ಅಸ್ತಿ' ಎಂಬ ಕ್ರಿಯೆಯು ಹೇಳುತ್ತದೆ.

**(೩) ವಿಪರಿಣಮತ ಇತ್ಯಪ್ರಚ್ಯವಮಾನಸ್ಯ ತತ್ತ್ವಾದ್ವಿಕಾರಂ ।**

ಕ್ಷಯರಹಿತವಾದ ತತ್ತ್ವದ ಪರಿಣಾಮವನ್ನು ಮಾತ್ರ 'ವಿಪರಿಣಮತೇ' ಎಂಬ ಕ್ರಿಯೆಯು ಸೂಚಿಸುತ್ತದೆ.

**(೪) ವರ್ಧತ ಇತಿ ಸ್ವಾಂಗಾಭ್ಯುಚ್ಚಯಂ ಸಾಂಯೋಗಿಕಾನಾಂ ವಾರ್ಥಾನಾಂ ವರ್ಧತೇ ವಿಜಯೇನೇತಿ ವಾ ವರ್ಧತೇ ಶರೀರೇಣೇತಿ ವಾ ॥**

ಶರೀರಾವಯವಗಳ ವೃದ್ಧಿಯನ್ನಾಗಲಿ ಅಥವಾ ಆಯಾ ವಸ್ತುವಿಗೆ ಸಂಬಂಧಿಸಿದ ಅರ್ಥಗಳ ವೃದ್ಧಿಯನ್ನಾಗಲಿ 'ವರ್ಧತೇ' ಎಂಬ ಕ್ರಿಯೆಯು ಸೂಚಿಸುತ್ತದೆ. ಉದಾಹರಣೆಗೆ--ಅವನು ಜಯದಿಂದ ವೃದ್ಧಿಯನ್ನು ಹೊಂದುತ್ತಾನೆ ಅಥವಾ ಅವನು ಶರೀರದಿಂದ ವೃದ್ಧಿಯನ್ನು ಹೊಂದುತ್ತಾನೆ ಇತ್ಯಾದಿ.

**(೫) ಅಪಕ್ಷೀಯತ ಇತ್ಯೇತೇನೈವ ವ್ಯಾಖ್ಯಾತಃ ಪ್ರತಿಲೋಮಂ ।**

ಕ್ಷಯವೆಂಬ ಪದವೇ ವೃದ್ಧಿಯ ವಿರುದ್ಧವಾದ ಭಾವವನ್ನು ಸೂಚಿಸುತ್ತದೆ.

**(೬) ವಿನಶ್ಯತೀತ್ಯಪರಭಾವಸ್ಯಾದಿಮಾಚಷ್ಟೇ ನ ಪೂರ್ವಭಾವಮಾಚಷ್ಟೇ ನ ಪ್ರತಿಷೇಧತಿ ।** ನಾಶವು ಪರಭಾವದ ಪ್ರಾರಂಭವನ್ನು ಸೂಚಿಸುವುದೇ ಹೊರತು ಪೂರ್ವಭಾವದ ಸ್ಥಿತಿಯನ್ನು ಅಸ್ತಿತ್ವರೂಪದಲ್ಲಾಗಲಿ ಅಥವಾ ನಿಷೇಧರೂಪದಲ್ಲಾಗಲಿ ತಿಳಿಸುವುದಿಲ್ಲ.

**ಅತೋಽನ್ಯೇ ಭಾವವಿಕಾರಾ ಏತೇಷಾಮೇವ ವಿಕಾರಾ ಭವಂತೀತಿ ಹ ಸ್ಮಾಹ । ತೇ ಯಥಾವಚನಮಭ್ಯೂಹಿತವ್ಯಾಃ** ಉಳಿದ ಭಾವವಿಕಾರಗಳೂ ಈ ಮೂಲಗಳಿಂದಲೇ ಉತ್ಪನ್ನವಾಗುತ್ತವೆ. ಅವುಗಳನ್ನು ಸಂದರ್ಭಾನುಸಾರವಾಗಿ ಊಹಿಸಿಕೊಳ್ಳಬೇಕು. ಹೀಗೆ ನಾಮ ಮತ್ತು ಆಖ್ಯಾತಗಳ ಲಕ್ಷಣವನ್ನು ತಿಳಿಸಿ ಕ್ರಮಪ್ರಾಪ್ತವಾದ ಉಪಸರ್ಗದ ಸ್ವರೂಪವನ್ನು ಚರ್ಚಿಸಿದೆ. (ನಿ. ೧-೨)

**ನ ನಿರ್ಬದ್ಧಾ ಉಪಸರ್ಗಾ ಅರ್ಥಾನ್ನಿರಾಹುರಿತಿ ಶಾಕಟಾಯನಃ । ನಾಮಾಖ್ಯಾತಯೋಸ್ತು ಕರ್ಮೋಪಸಂಯೋಗದ್ಯೋತಕಾ ಭವಂತಿ ।** ನಾಮದೊಂದಿಗಾಗಲಿ, ಆಖ್ಯಾತದೊಂದಿಗಾಗಲಿ ಸೇರದಿರುವ ಉಪಸರ್ಗಕ್ಕೆ ಅರ್ಥವಿಲ್ಲವೆಂದೂ, ಉಪಸರ್ಗಗಳು ನಾಮದ ಮತ್ತು ಆಖ್ಯಾತದ ಗೌಣವಾದ ಅರ್ಥವನ್ನು ಮಾತ್ರ ಹೇಳುತ್ತದೆಂದೂ ಶಾಕಟಾಯನರ ಮತವಾಗಿದೆ.

**ಉಚ್ಚಾವಚಾಃ ಪದಾರ್ಥಾ ಭವಂತೀತಿ ಗಾರ್ಗ್ಯಃ । ತದ್ಯ ಏಷು ಪದಾರ್ಥಃ ಪ್ರಾಹುರಿಮೇ ತಂ ನಾಮಾಖ್ಯಾತಯೋರರ್ಥವಿಕರಣಂ ॥**

ಉಪಸರ್ಗಗಳ ಭಿನ್ನಾರ್ಥಕವಾಗಿವೆಯೆಂದೂ, ನಾಮಾಖ್ಯಾತಗಳ ಅರ್ಥವು ವ್ಯತ್ಯಸ್ತವಾಗುವಂತೆ ಮಾಡುವುದೆಂದೂ ಗಾರ್ಗ್ಯರ ಮತ. ಉದಾಹರಣೆಗೆ—

**ಆ ಇತ್ಯರ್ವಾಗರ್ಥೇ। ಪ್ರಪರೇತ್ಯೇತಸ್ಯ ಪ್ರಾತಿಲೋಮ್ಯಂ। ಅಭೀತ್ಯಾಭಿಮುಖ್ಯಂ।** ಇತ್ಯಾದಿಯಾದ ಆ, ಪ್ರ, ಪರ ಮುಂತಾದ ಉಪಸರ್ಗಗಳ ಅರ್ಥಗಳನ್ನು ತೋರಿಸಿದೆ. (ನಿ. ೧-೩) ಅನಂತರ,

**ಅಥ ನಿಪಾತಾಃ । ಉಚ್ಚಾವಚೇಷ್ವರ್ಥೇಷು ನಿಪತಂತಿ । ಅಪ್ಯುಪಮಾರ್ಥೇಽಪಿ ಕರ್ಮೋಪಸಂಗ್ರಹಾರ್ಥೇಽಪಿ ಪದಪೂರಣಾಃ।** (ನಿ. ೧-೪)

ನಿಪಾತಗಳು ಅನೇಕಾರ್ಥಗಳುಳ್ಳವುಗಳಾಗಿರುತ್ತವೆ. ಉಪಮಾರ್ಥದಲ್ಲಿಯೂ, ಸಂಯುಕ್ತಾರ್ಥದಲ್ಲಿಯೂ, ಆಧಿಕ್ಯಾರ್ಥದಲ್ಲಿಯೂ, ನಿಷೇದಾರ್ಥದಲ್ಲಿಯೂ ಹೀಗೆಯೇ ಇನ್ನೂ ಬೇರೆ ಬೇರೆ ಅರ್ಥಗಳಲ್ಲಿಯೂ ನಿಪಾತಗಳ ಪ್ರಯೋಗಗಳಿರುತ್ತವೆ. **ನೇತಿ ಪ್ರತಿಷೇಧಾರ್ಥೀಯೋ ಭಾಷಾಯಾಂ, ನು ಇತ್ಯೇಷೋಽನೇಕಕರ್ಮಾ।** ನ ಎಂಬ ನಿಪಾತವು ಪ್ರತಿಷೇಧಾರ್ಥಕವು ಇತ್ಯಾದಿಯಾಗಿ ನಿಪಾತಗಳ ಅರ್ಥಗಳನ್ನೂ ಪ್ರಯೋಗಗಳನ್ನೂ ವಿಶದವಾಗಿ ತಿಳಿಸಿದೆ. (ನಿ. ೨-೪) ಇದನ್ನೇ ಬೃಹದ್ದೇವತೆಯಲ್ಲಿ

**ಉಚ್ಚಾವಚೇಷು ಚಾರ್ಥೇಷು ನಿಪಾತಾಃ ಸಮುದಾಹೃತಾಃ।**
**ಕರ್ಮೋಪಸಂಗ್ರಹಾರ್ಥೇ ಚ ಕ್ವಚಿಚ್ಚೌಪಮ್ಯಕಾರಣಾತ್ ॥**
**ಊನಾನಾಂ ಪೂರಣಾರ್ಥಾ ವಾ ಪಾದಾನಾಮುಪರೇ ಕ್ವಚಿತ್।**
**ಮಿತಾಕ್ಷರೇಷು ಗ್ರಂಥೇಷು ಪೂರಣಾರ್ಥಾಸ್ತ್ವನರ್ಥಕಾಃ॥**

(ಬೃ. ದೇ. ೨-೮೯ ರಿಂದ ೯೨)

ಇತ್ಯಾದಿ ವಾಕ್ಯಗಳಲ್ಲಿ ತಿಳಿಸಿದೆ. ಈ ವಾಕ್ಯಗಳಲ್ಲಿಯೂ ಮೇಲೆ ಹೇಳಿದ ಅರ್ಥವನ್ನೇ ಸೂಚಿಸಿದೆ. ಹೀಗೆ ಪ್ರಕೃತ ವಾದ ಋಕ್ಕಿನಲ್ಲಿ ಚತ್ವಾರಿ ಪದಾನಿ ಎಂಬುದಕ್ಕೆ, ನಾಮ, ಆಖ್ಯಾತ, ಉಪಸರ್ಗ, ನಿಪಾತ ಎಂಬ ನಾಲ್ಕುಭಾಗಗಳೆಂದು ವೈಯಾಕರಣರ ಮತ್ತು ನಿರುಕ್ತಕಾರರ ಮತವಾಗಿದೆ. ಹೀಗೆಯೇ ನಿರುಕ್ತದಲ್ಲಿ ಇತರರು ಹೇಳಿರುವ ಅರ್ಥಗಳನ್ನೂ ತಿಳಿಸುತ್ತಾ,

೩) **ಮಂತ್ರಃ, ಕಲ್ಪೋ, ಬ್ರಾಹ್ಮಣಂ, ಚತುರ್ಥೀ ವ್ಯಾವಹಾರಿಕೀತಿ ಯಾಜ್ಞಿಕಾಃ।** ಮಂತ್ರ, ಕಲ್ಪ, ಬ್ರಾಹ್ಮಣ ಎಂಬ ವೈದಿಕವಾದ ಮೂರು ವಿಭಾಗಗಳೂ ಮತ್ತು ವ್ಯಾವಹಾರಿಕವಾದ ನಾಲ್ಕನೆಯದೂ ಸೇರಿ ಒಟ್ಟು ನಾಲ್ಕು ಭಾಗಗಳೆಂದು ಯಾಜ್ಞಿಕರ ಅಭಿಪ್ರಾಯವಾಗಿದೆ.

೪) **ಋಚೋ, ಯಜೂಂಷಿ ಸಾಮಾನಿ ಚತುರ್ಥೀ ವ್ಯಾವಹಾರಿಕೀತಿ ನೈರುಕ್ತಾಃ।** ಋಗ್ವೇದ, ಯಜುರ್ವೇದ, ಸಾಮ ಮತ್ತು ವ್ಯಾವಹಾರಿಕವಾದ ನಾಲ್ಕನೆಯದು ಎಂದು ನೈರುಕ್ತಮತ.

೫) **ಸರ್ವಾಸಾಂ ವಾಗ್ವಯಸಾಂ ಕ್ಷುದ್ರಸ್ಯ ಸರೀಸೃಪಸ್ಯ ಚತುರ್ಥೀ ವ್ಯಾವಹಾರಿಕೀತ್ಯೇಕೇ।** ಸರ್ಪಗಳು, ಪಕ್ಷಿಗಳು, ಕ್ರಿಮಿಕೀಟಗಳು ಇವುಗಳ ಮೂರುವಿಧವಾದ ಭಾಷೆಯೂ, ಮಾನವರ ವ್ಯಾವಹಾರಿಕವಾದ ಭಾಷೆಯೂ ಸೇರಿ ನಾಲ್ಕೆಂದು ಇನ್ನು ಕೆಲವರ ಅಭಿಪ್ರಾಯ. ಇತ್ಯಾದಿಯಾಗಿ ಈ ವಾಕ್ಯಕ್ಕೆ ಸಾಧ್ಯವಾಗಬಹುದಾದ ಅರ್ಥಾಂತರಗಳನ್ನು ನಿರುಕ್ತಕಾರರು ತಿಳಿಸಿದ್ದಾರೆ. (ನಿ. ೧೩-೯).

**ಗುಹಾ ತ್ರೀಣಿ ನಿಹಿತಾ ನೇಂಗಯಂತಿ ತುರೀಯಂ ವಾಚೋ ಮನುಷ್ಯಾವದಂತಿ ।** ಈ ನಾಲ್ಕು ವಿಧವಾದ ಭಾಷೆಗಳಲ್ಲಿ ಮೂರು ಬಗೆಯ ಭಾಷೆಗಳು ನಮ್ಮ ವ್ಯಾವಹಾರಿಕವಾದ ಗೋಚರಕ್ಕೆ ಅತೀತವಾದುವು; ಎಂದರೆ ಅವುಗಳ ಅರ್ಥವು ನಮಗಾಗುವುದಿಲ್ಲ. ಇವುಗಳಲ್ಲಿ ನಾಲ್ಕನೆಯದನ್ನು ಮಾತ್ರ ನಾವು ಅರ್ಥಮಾಡಿಕೊಳ್ಳಬಲ್ಲೆವು. ಎಂದು ಸ್ಥೂಲವಾದ

ಅರ್ಥವಾಗುತ್ತದೆ. ಈ ವಾಕ್ಯದ ವಿವರಣೆಯಲ್ಲಿಯೂ ಮತಾಂತರಗಳಿವೆ. ಶತಪಥಬ್ರಾಹ್ಮಣದಲ್ಲಿ ಈ ಋಕ್ಕನ್ನುದಹರಿಸಿ ಇದರ ವಿವರಣೆಯನ್ನು ಈ ರೀತಿ ಹೇಳಿದೆ.

**ಸ ಹೋವಾಚ । ತುರೀಯಂ ತುರೀಯಂ ಚೇನ್ಮಾಮಭೀಭಜಸ್ತುರೀಯಮೇವ ತರ್ಹಿ ವಾಙ್ನಿರುಕ್ತಂ ವದಿಷ್ಯತೀತಿ ತದೇತತ್ತುರೀಯಂ ವಾಚೋ ನಿರುಕ್ತಂ ಯನ್ಮನುಷ್ಯಾ ವದಂತ್ಯ- ಥೈತತ್ತುರೀಯಂ ವಾಚೋಽನಿರುಕ್ತಂ ಯತ್ಪಶವೋ ವದಂತ್ಯಥೈತತ್ತುರೀಯಂ ವಾಚೋಽನಿ- ರುಕ್ತಂ ಯದಿದಂ ಕ್ಷುದ್ರಗ್ಂ ಸರೀಸೃಪಂ ವದಂತಿ । ತಸ್ಮಾದೇತದೃಷಿಣಾಭ್ಯನೂಕ್ತಂ । " ಚತ್ವಾರಿ ವಾಕ್ಪರಿಮಿತಾ ಪದಾನಿ .... .... .... .... .... ಮನುಷ್ಯಾ ವದಂತೀತಿ" ॥**

ಶ. ಬ್ರಾ. ೪-೧-೩ ೧೪)

ಈ ವಾಕ್ಯವೆ ಇಂದ್ರನಿಂದ ಉಕ್ತವಾದುದು. ತನಗೆ ಯಾಜ್ಯಭಾಗವು, ಕೇವಲ ನಾಲ್ಕನೇ ಒಂದು ಭಾಗವು ಅರ್ಪಿತ ವಾಗಿರುವುದಕ್ಕೆ ಕಾರಣವನ್ನು ಇಲ್ಲಿ ತಿಳಿಸಿದೆ. ವಾಕ್ಕಿನಲ್ಲಿ ಮೂರುಭಾಗಗಳನ್ನು ಕ್ರಿಮಿಕೀಟಾದಿಗಳೂ ಪಕ್ಷ್ಯಾದಿ ಪ್ರಾಣಿಗಳೂ ವ್ಯವಹರಿಸಿರುವುದರಿಂದ ಅದು ಅರ್ಥವಾಗತಕ್ಕದ್ದಲ್ಲ. ಉಳಿದ ನಾಲ್ಕನೇ ಭಾಗವನ್ನು ಮಾತ್ರ ಮಾನವರು ವ್ಯವಹರಿಸತಕ್ಕದ್ದಾ ದ್ದರಿಂದ ನಾಲ್ಕನೇ ಒಂದು ಭಾಗದಲ್ಲಿ ಅರ್ಥವಾಗತಕ್ಕ ಮಂತ್ರದಿಂದ ಯುಕ್ತವಾದ ಯಾಜ್ಯವು ಮಾತ್ರ ತನಗೆ ಅರ್ಪಿತವಾಗ ತಕ್ಕದ್ದೆಂದು ಇದರಲ್ಲಿ ಹೇಳಿದೆ.

ಆದರೆ ಸಾಯಣರ ಅರ್ಥವು ಇದಕ್ಕೆ ಕೊಂಚ ವ್ಯತ್ಯಸ್ತವಾಗಿದೆ.



## ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ । ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ॥ ೪೬ ॥

ಒಬ್ಬನೇ ಆದ ಆದಿತ್ಯನನ್ನು ಇಂದ್ರನೆಂದೂ, ಮಿತ್ರನೆಂದೂ, ವರುಣನೆಂದೂ, ಅಗ್ನಿಯೆಂದೂ ಕರೆಯುತ್ತಾರೆ. ಅಲ್ಲದೆ, ಇವನೇ ದಿವ್ಯಾತ್ಮನೂ, ಶ್ರೇಷ್ಠವಾದ ಪತನವುಳ್ಳವನೂ ಆದ ಗರುತ್ಮಂತನಾಗಿದ್ದಾನೆ. ಮೇಧಾವಿಗಳಾದ ವಿಪ್ರರು ಏಕಾತ್ಮನಾದ ಒಬ್ಬ ಪರಮಾತ್ಮನನ್ನೇ ಅಗ್ನಿಯೆಂದೂ, ಯಮನೆಂದೂ, ಮಾತರಿಶ್ವನೆಂದೂ ನಾನಾ ವಿಧವಾಗಿ ಕರೆಯುತ್ತಾರೆ.

ಈ ಋಕ್ಕಿನಲ್ಲಿ ತಾತ್ತ್ವಿಕವಾದ ಐಕ್ಯವನ್ನು ಹೇಳಿದೆ. ಇಂದ್ರಾದಿದೇವತೆಗಳೆಲ್ಲರೂ ಈ ಒಂದೇ ಮೂಲತತ್ತ್ವದ ಬೇರೆ ಬೇರೆ ಸ್ವರೂಪಗಳೆಂದೂ ಅವರಲ್ಲಿ ತಾತ್ತ್ವಿಕವಾದ ವೈವಿಧ್ಯವಿಲ್ಲವೆಂದೂ ಸ್ಪಷ್ಟವಾಗಿ ತಿಳಿಸಿದೆ. ಇಂದ್ರಾದಿದೇವತೆಗಳನ್ನುದ್ದೇಶಿಸಿ ನೆರವೇರಿಸತಕ್ಕ ಸಕಲ ಪೂಜೆಗಳೂ ಈ ಪರದೇವತೆಗೇ ಅರ್ಪಿತಗಳಾಗುವುವೆಂದಭಿಪ್ರಾಯವು. " ಅಮುಮೇವಾದಿತ್ಯಂ" ಆದಿತ್ಯನೇ ಈ ಮೂಲತತ್ತ್ವವೆಂದು ಸಾಯಣರ ವಿವರಣೆ ಇದೆ. ಆದರೆ ನಿರುಕ್ತಕಾರರು ಏಕಂ ಎಂಬುದಕ್ಕೆ ಇಲ್ಲಿ ಅಗ್ನಿಯೆಂದ ರ್ಥಮಾಡಿದ್ದಾರೆ.

**ಇಮಮೇವಾಗ್ನಿಂ ಮಹಾಂತಮಾತ್ಮಾನಮೇಕಮಾತ್ಮಾನಂ ಬಹುಧಾ ಮೇಧಾವಿನೋ ವದಂತೀಂದ್ರಂ ಮಿತ್ರಂ ವರುಣಮಗ್ನಿಂ ದಿವ್ಯಂ ಚ ಗರುತ್ಮಂತಂ ದಿವ್ಯೋ ದಿವಿಜೋ ಗರುತ್ಮಾನ್**

**ಗರುಣವಾನ್ ಗುರ್ವಾತ್ಮಾ ಮಹಾತ್ಮೇಽತಿ ವಾ । ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿ-ರೂಪ್ಯತೇಽಯಮೇವ ಸೋಽಗ್ನಿಃ ॥** (ನಿ. ೭-೧೮)

ಮಹಾತ್ಮನಾದ ಈ ಅಗ್ನಿಯನ್ನೇ ತತ್ತ್ವವಿತ್ತುಗಳು ಇಂದ್ರ, ಮಿತ್ರ, ವರುಣ, ಗರುತ್ಮಾನ್ ಇತ್ಯಾದಿ ನಾನಾ ನಾಮಗಳಿಂದ ಕರೆಯುತ್ತಾರೆ. ಮಾನವರಿಂದ ಅರ್ಪಿತವಾಗತಕ್ಕ ಪ್ರಾರ್ಥನೆಯಾಗಲಿ, ಹವಿರಾದಿಗಳಾಗಲಿ ಈ ಅಗ್ನಿಯನ್ನೇ ಉದ್ದೇಶಿಸಿ ಮಾಡತಕ್ಕವು ಮತ್ತು ಈ ಅಗ್ನಿಯನ್ನೇ ಸೇರತಕ್ಕವು. ಈ ವಿಷಯವನ್ನೇ ಋಕ್ಸಂಹಿತಾವಾಕ್ಯಗಳಲ್ಲಿಯೇ ಸ್ಪಷ್ಟವಾಗಿ ತಿಳಿಸಿದೆ. ಉದಾಹರಣೆಗೆ—

**ತ್ವಮಗ್ನ ಇಂದ್ರೋ ವೃಷಭಃ ಸತಾಮಸಿ ತ್ವಂ ವಿಷ್ಣುರುರುಗಾಯೋ ನಮಸ್ಯಃ ।**
**ತ್ವಂ ಬ್ರಹ್ಮಾ ರಯಿವಿದ್ಬ್ರಹ್ಮಣಸ್ಪತೇ ತ್ವಂ ವಿಧರ್ತಃ ಸಚಸೇ ಪುರಂಧ್ಯಾ ॥**

(ಋ. ಸಂ. ೨-೧-೩)

ಎಲೈ ಅಗ್ನಿಯೇ, ಇಷ್ಟಾರ್ಥಗಳನ್ನು ಸುರಿಸುವವನಾದುದರಿಂದ ನೀನೇ ಇಂದ್ರನಾಗಿದ್ದೀಯೆ. ಎಲ್ಲರಿಂದಲೂ ಸ್ತುತಿಸಲ್ಪಡುವ ವಿಷ್ಣುವೂ ನೀನೇ. ಧನದ ಸ್ವರೂಪವನ್ನು ತಿಳಿದ ಬ್ರಹ್ಮನೂ ನೀನೇ. ನೀನು ಅನೇಕ ವಿಧವಾದ ಪ್ರಶಂಸೆಗಳಿಂದ ಸ್ತುತನಾಗಿದ್ದೀಯೆ.

**ತ್ವಮಗ್ನೇ ರಾಜಾ ವರುಣೋ ಧೃತವ್ರತಸ್ತ್ವಂ ಮಿತ್ರೋ ಭವಸಿ ದಸ್ಮ ಈಡ್ಯಃ ।**
**ತ್ವಮರ್ಯಮಾ ಸತ್ಪತಿರ್ಯಸ್ಯ ಸಂಭುಜಂ ತ್ವಮಂಶೋ ವಿದಥೇ ದೇವ ಭಾಜಯುಃ ॥**

(ಋ. ಸಂ. ೨-೧-೪)

ಎಲೈ ಅಗ್ನಿಯೇ, ನೀನು ಧೃತವ್ರತನಾದ ವರುಣನೂ, ಶತ್ರುನಾಶಕನೂ, ಸ್ತುತ್ಯನೂ ಆದ ಮಿತ್ರನೂ, ಅಭಿಮತಪ್ರದಾತನಾದ ಅರ್ಯಮನೂ ಆಗಿದ್ದೀಯೆ ಮತ್ತು ಸೂರ್ಯನ ಮೂರ್ತ್ಯಂತರವಾದ ಅಂಶನೂ ನೀನಲ್ಲದೆ ಬೇರೆಯಲ್ಲ ಎಲ್ಲಾ ದೇವತೆಗಳ ಪ್ರಭಾವವನ್ನೂ ಪಡೆದಿರುವ ನೀನು ಫಲದಾತನಾಗು.

**ತ್ವಮಗ್ನೇ ರುದ್ರೋ ಅಸುರೋ ಮಹೋ ದಿವಸ್ತ್ವಂ ಶರ್ಧೋ ಮಾರುತಂ ಪೃಕ್ಷ ಈಶಿಷೇ ।**
**ತ್ವಂ ವಾತೈರರುಣೈರ್ಯಾಸಿ ಶಂಗಯಸ್ತ್ವಂ ಪೂಷಾ ವಿಧತಃ ಪಾಸಿ ನು ತ್ಮನಾ ॥**

(ಋ. ಸಂ. ೨-೧-೬)

ಎಲೈ ಅಗ್ನಿಯೇ, ಲೋಕತ್ರಯದಿಂದಲೂ ಅಸುರರನ್ನು ಓಡಿಸತಕ್ಕ ರುದ್ರನೇ ನೀನು. ಮರುತ್ಸಮೂಹವೇ ನೀನು. ಎಲ್ಲರ ಪೋಷಕನೂ, ಸುಖದಾತನೂ ಆಗಿ ಯಜ್ಞಗೃಹವನ್ನು ಪ್ರವೇಶಿಸು. ಇತ್ಯಾದಿಯಾಗಿ ಅಗ್ನಿಯೇ ಸಕಲ ದೇವತೆಗಳ ಮೂಲತತ್ತ್ವವಾಗಿರುವನೆಂದು ಸ್ಪಷ್ಟವಾಗಿ ತಿಳಿಸಿದೆ. ಅಷ್ಟೇ ಅಲ್ಲದೆ,

**ಅಗ್ನೇ ನೇಮಿರರಾ ಇವ ದೇವಾಸ್ತ್ವಂ ಪರಿಭೂರಸಿ । ಆ ರಾಧಶ್ಚಿತ್ರಮೃಂಜಸೇ ॥**

(ಋ. ಸಂ. ೫-೧೩-೬)

ಎಂಬ ಋಕ್ಕಿನಲ್ಲಿ, ಅಗ್ನಿಯನ್ನು ರಥಚಕ್ರದ ನೇಮಿಗೂ ಇತರ ದೇವತೆಗಳನ್ನೆಲ್ಲಾ ರಥಚಕ್ರದ ಅರಗಳಿಗೂ ಹೋಲಿಸಿ ಯಾವ ರೀತಿ ರಥಚಕ್ರದ ನೇಮಿಯು ಅರಗಳನ್ನೆಲ್ಲಾ ಒಟ್ಟುಗೂಡಿಸಿ ಒಂದು ಐಕ್ಯವನ್ನು ಸಂಪಾದಿಸಿದೆಯೋ ಅದರಂತೆ ಅಗ್ನಿಯೂ ಸಹ ವೈವಿಧ್ಯವನ್ನು ತೋರಿಸುವ ಬೇರೆಬೇರೆ ದೇವತೆಗಳನ್ನು ವ್ಯಾಪಿಸಿ ಎಲ್ಲರಲ್ಲಿಯೂ ಸಹ ಏಕತತ್ತ್ವವನ್ನು ಪ್ರಕಾಶಪಡಿಸಿದ್ದಾನೆ.

**ವಿಭೂಃ, ಪರಿಭೂಃ** ಇತ್ಯಾದಿ ವಿಶೇಷಣಗಳಿಂದ ಅಗ್ನಿಯ ಸರ್ವವ್ಯಾಪಕತ್ವವು ಸೂಚಿತವಾಗಿದೆ. ಯಜ್ಞಕರ್ಮಗಳನ್ನೂ, ಅಗ್ನಿಯನ್ನೂ, ರಥದ ಶಂಕು ಮತ್ತು ವಲಯಗಳಿಗೆ ಹೋಲಿಸಿದೆ. ಯಜ್ಞವು ವಿಶ್ವತತ್ತ್ವವನ್ನು ಪ್ರತಿಬಿಂಬಿಸುತ್ತದೆ. ಯಜ್ಞವೇದಿಯು ಯಜ್ಞದ ನಾಭಿಯಾದುದರಿಂದ ವಿಶ್ವಕ್ಕೇ ನಾಭಿಯಾಗಿರುತ್ತದೆ. ಈ ನಾಭಿಯಲ್ಲಿ ಪ್ರತಿಷ್ಠಿತನಾದ ಅಗ್ನಿಯು ವಿಶ್ವದ ಸಕಲ ತತ್ತ್ವಕ್ಕೂ ಕೇಂದ್ರನಾಗಿಯೂ ಮತ್ತು ಸರ್ವವ್ಯಾಪಕನಾಗಿಯೂ ಇರುತ್ತಾನೆ. ಸೂರ್ಯಚಂದ್ರಾದಿ ಸಕಲಗ್ರಹಗಳೂ ಈ ಕೇಂದ್ರವನ್ನೇ ತಮ್ಮ ಚಲನವಲನಗಳಿಗೆ ಆಶ್ರಯವನ್ನಾಗಿಟ್ಟುಕೊಂಡಿರುತ್ತಾರೆ.

> **ಸರ್ವಾಣಿ ಹ ತ್ವೇವ ಭೂತಾನಿ । ಸರ್ವೇ ದೇವಾ ಏಷೋಽಗ್ನಿಶ್ಚಿತ ಆಪೋ ವೈ ಸರ್ವೇ ದೇವಾಸ್ಸರ್ವಾಣಿ ಭೂತಾನಿ ತಾ ಹೈತಾ ಏನ್ಮೈಷೋಽಗ್ನಿಶ್ಚಿತಸ್ತಸ್ಯ ನಾವ್ಯಾ ಏವ ಪರಿಶ್ರಿತಸ್ತಾಃ ಷಷ್ಟಿಶ್ಚ ತ್ರೀಣಿ ಚ ಶತಾನಿ ಭವಂತಿ .... .... .... .... ಯೋಽಯಂ ಹಿರಣ್ಮಯಃ ಪುರುಷಃ ॥**
>
> (ಶ. ಬ್ರಾ. ೧೦-೫-೪-೧೪)

ಎಂಬ ವಾಕ್ಯಗಳಲ್ಲಿ ಅಗ್ನಿವೇದಿಕೆಯಲ್ಲಿ ಇದ್ದನಾದ ಅಗ್ನಿಯು ಸಕಲಲೋಕಗಳನ್ನೂ ವ್ಯಾಪಿಸುವವನಾಗಿಯೂ, ಸಕಲ ಕರ್ಮಗಳಿಗೂ ಅಧ್ಯಕ್ಷನಾಗಿಯೂ, ಈ ಕೇಂದ್ರವನ್ನಾಶ್ರಯಿಸಿಯೇ ವಿಶ್ವವ್ಯವಹಾರವೆಲ್ಲವೂ ನಡೆಯುವುದಾಗಿಯೂ ವರ್ಣಿಸಿ, ಈ ವಿಶ್ವಾತ್ಮನಾದ ಅಗ್ನಿಯೇ ಹಿರಣ್ಮಯಾಕಾರನಾದ ಪರಮಪುರುಷನೆಂದು ತಿಳಿಸಿದೆ. ಹಿರಣ್ಮಯಃ ಪುರುಷಃ ಎಂಬ ವಿಶೇಷಣವು ಅಗ್ನಿಪರವಾಗಿರುವಂತೆ ಅನೇಕಕಡೆ ಆದಿತ್ಯನ ಪರವಾಗಿಯೂ ಇದೆ. ಆದಿತ್ಯನಿಗೂ ಅಗ್ನಿಗೂ ತಾತ್ತ್ವಿಕವಾದ ವೈವಿಧ್ಯವಿಲ್ಲದಿರುವುದರಿಂದ ಪ್ರಕೃತವಾದ ಋಕ್ಕಿನಲ್ಲಿ ಸಾಯಣರು **ಅಮುಮೇವಾದಿತ್ಯಂ** ಎಂದಿರುವುದಕ್ಕೂ, ನಿರುಕ್ತಕಾರರು **ಇಮಮೇವಾಗ್ನಿಂ** ಎಂದಿರುವುದಕ್ಕೂ ವಿರೋಧವಿರುವುದಿಲ್ಲ.

**ಸುಪರ್ಣೋ ಗರುತ್ಮಾನ್** ಈ ವಿಶೇಷಣವು ಇಲ್ಲಿ ಗಮನಾರ್ಹವಾದುದು. ಗರುತ್ಮಾನ್ ಎಂಬ ಪದಕ್ಕೆ ನಿರುಕ್ತಕಾರರು **ಗುರ್ವಾತ್ಮಾ, ಮಹಾತ್ಮಾ** ಎಂಬರ್ಥಮಾಡಿದ್ದಾರೆ. ವಿಶ್ವಾತ್ಮನಾದ ಪರಮಾತ್ಮನೆಂದರ್ಥ. ಪರಮಾತ್ಮನಿಗೆ **ಸುಪರ್ಣ**ವೆಂಬ ವಿಶೇಷಣವು ಋಕ್ಸಂಹಿತೆಯಲ್ಲಿ ಬಹಳವಾಗಿ ಪ್ರಯುಕ್ತವಾಗಿದೆ.

> **ಸುಪರ್ಣಂ ವಿಪ್ರಾಃ ಕವಯೋ ವಚೋಭಿರೇಕಂ ಸಂತಂ ಬಹುಧಾ ಕಲ್ಪಯಂತಿ ।**
> **ಛಂದಾಂಸಿ ಚ ದಧತೋ ಅಧ್ವರೇಷು ಗ್ರಹಾನ್ತ್ಸೋಮಸ್ಯ ಮಿಮತೇ ದ್ವಾದಶ ॥**
>
> (ಋ. ಸಂ. ೧೦-೧೧೪-೫)

ಸುಪತನನಾದವನೂ, ಅದ್ವಿತೀಯನೂ ಆದ ಪರಮಾತ್ಮನನ್ನು ಕ್ರಾಂತಪ್ರಜ್ಞರಾದ ಮಾನವರು ನಾನಾವಿಧವಾದ ಕಲ್ಪನೆಗಳಿಂದ ಭಾವಿಸಿ ಅವನಿಂದ ಸ್ತುತಿಸುತ್ತಾರೆ. ಅಧ್ವರಗಳಲ್ಲಿ ಛಂದೋರೂಪವಾದ ಸ್ತುತಿವಾಕ್ಯಗಳಿಂದ ಅವನ ಮಹಿಮೆಯನ್ನು ಪ್ರಶಂಸಿಸುತ್ತಾರೆ ಇತ್ಯಾದಿಯಾಗಿ **ಸುಪರ್ಣ**ವೆಂಬ ವಿಶೇಷಣದಿಂದ ಪರಮಾತ್ಮನ ಸ್ತುತಿಯಿದೆ.

ಆಧ್ಯಾತ್ಮಿಕವಾದ ತತ್ತ್ವಪ್ರತಿಪಾದನೆಯನ್ನು ವಿವರಿಸಿ ವಿಮರ್ಶಿಸುವಾಗ ಪಾಶ್ಚಾತ್ಯಪಂಡಿತರು ಋಕ್ಸಂಹಿತೆಯಲ್ಲಿ ಮೂರು ವಿಧವಾದ ಬೆಳೆವಣಿಗೆಯಿದೆಯೆಂಬ ಅಭಿಪ್ರಾಯಪಡುತ್ತಾರೆ. Dr. ರಾಧಾಕೃಷ್ಣನ್‌ರವರು ಈ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ಈರೀತಿ ತಿಳಿಸಿದ್ದಾರೆ.

A religious growth of many centuries can not be a simple and transparent creed admitting of easy definition and classification. A striking aspect of the

hymns is their Polytheistic character. A great many gods are named and worshipped. Yet some of the hymns shock us by their highly abstract philosophising and from primitive polytheism to systematic Philosophy, it is a long long way. Three strata of thought can be discerned in the religion of the hymns of the Rig-Veda, which are naturalistic polytheism, monotheism and monism.

(Indian Philosophy Vol I. p. 72)

ಅನೇಕ ಶತಮಾನಗಳ ಕಾಲದಿಂದ ಬೆಳೆದುಬಂದ ತಾತ್ತ್ವಿಕವಾದ ಅನ್ವೇಷವನ್ನು ಸುಲಭವಾಗಿ ವಿವರಿಸುವುದು ಸಾಧ್ಯವಲ್ಲ. ಅದರ ಲಕ್ಷಣವು ಹೀಗೆಯೇ ಎಂದು ನಿಷ್ಕೃಷ್ಟವಾಗಿ ಹೇಳಲು ಸಾಧ್ಯವಿಲ್ಲ. ಋಕ್ಸಂಹಿತಾ ವಾಕ್ಯಗಳಲ್ಲಿ ಬಹುದೇವತಾ ತತ್ತ್ವವು ಪ್ರತಿಪಾದಿತವಾಗಿರುವುದು ಮೊದಲನೆಯ ಮತ್ತು ಮುಖ್ಯವಾದ ಅಂಶವಾಗಿದೆ. ಆದರೂ ಸಹ ಕೆಲವು ಮಂತ್ರಗಳಲ್ಲಿ ಏಕದೇವತಾತತ್ತ್ವವು ಪ್ರತಿಪಾದಿತವಾಗಿರುವುದೂ, ಅದ್ವೈತವಾದಕ್ಕೆ ತಳಹದಿಯಾದ ಈ ಪ್ರತಿಪಾದನೆಯು ಋಕ್ಸಂಹಿತೆಯಲ್ಲಿಯೂ ಸಹ ಕೆಲವೆಡೆಗಳಲ್ಲಿ ಪ್ರಧಾನವಾದ ಅಂಶವಾಗಿರುವುದೂ ಸಹ ತತ್ತ್ವಾನ್ವೇಷಿಗಳಿಗೆ ಸೋಜಿಗವನ್ನುಂಟುಮಾಡುವುದಾಗಿದೆ. ಋಕ್ಸಂಹಿತಾ ವಾಕ್ಯಗಳಿಂದ ಸೂಚಿತವಾಗುವ ತತ್ತ್ವಭಾವನೆಯ ಶ್ರೇಣಿಯಲ್ಲಿ ಮುಖ್ಯವಾದ ಮೂರು ಮೆಟ್ಟಲುಗಳನ್ನು ನೋಡಬಹುದು. ಅವು—

೧) ಪ್ರಕೃತಿತತ್ತ್ವವನ್ನು ಪ್ರತಿಬಿಂಬಿಸುವ ಬಹುದೇವತಾಭಾವ

೨) ನಾನಾದೇವತೆಗಳಲ್ಲೂ ಐಕ್ಯವನ್ನು ತೋರಿಸುವ ಏಕದೇವತಾಭಾವ

೩) ಏಕತತ್ತ್ವಪ್ರತಿಪಾದಕವಾದ ಅದ್ವೈತ

ಎಂಬ ಈ ಮೂರು ವಿಭಾಗಗಳನ್ನು ತೋರಿಸಿ ಈ ಮೂರು ಅಂಶಗಳನ್ನೂ ವಿಶದವಾಗಿ ವಿಮರ್ಶಿಸಿದ್ದಾರೆ. (p. 72-98) ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿರುವ ಭಾವವನ್ನು Monotheism ಎಂಬ ವರ್ಗಕ್ಕಾಗಲಿ ಅಥವಾ Monism (ಅದ್ವೈತ) ಎಂಬ ವರ್ಗಕ್ಕಾಗಲಿ ಸೇರಿಸಬಹುದು. ಅಗ್ನಿ ಅಥವಾ ಆದಿತ್ಯನೊಬ್ಬನೇ ಇಂದ್ರಾದಿದೇವತೆಗಳ ರೂಪದಲ್ಲಿ ಪೂಜಿತನಾಗಿರುವನು ಎಂದರೆ ಇಂದ್ರಾದಿದೇವತೆಗಳ ತತ್ತ್ವವನ್ನು ಅಂಗೀಕರಿಸಿ ಅವರಲ್ಲಿ ಐಕ್ಯವನ್ನು ಅಗ್ನಿರೂಪನಾದ ಏಕದೇವತೆಯು ಸಂಪಾದಿಸಿರುವನು ಎಂದು ಅರ್ಥಮಾಡಿದೆ. ಅಥವಾ ಪ್ರಕೃತವಾದ ಋಕ್ಕಿನ ಉತ್ತರಾರ್ಧದಲ್ಲಿ " ಏಕಂ ಸದ್ವಿಪ್ರಾ ಬಹುಧಾ ವದಂತಿ " ಎಂಬ ವರ್ಣನೆಯು ಅದ್ವೈತವನ್ನು ಪ್ರತಿಪಾದಿಸುತ್ತದೆ. ಸದ್ವಿಪ್ರರು ಬಹುಪ್ರಕಾರವಾಗಿ ವರ್ಣಿಸುವ ಈ ಏಕತತ್ತ್ವವು ಋಕ್ಸಂಹಿತೆಯಲ್ಲಿ ನಾನಾಕಡೆಗಳಲ್ಲಿ ನಿರ್ದಿಷ್ಟವಾಗಿದೆ.

ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ಪ್ರಕೇತಃ ।
ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂ ಚನಾಸ ॥

(ಋ. ಸಂ. ೧೦-೧೨೯-೨)

ಈ ಏಕತತ್ತ್ವವು ವಿಶ್ವಕ್ಕೆ ಆದಿಯಾಗಿಯೂ ವಿಶ್ವಕ್ಕೆ ಆಧಾರವಾಗಿಯೂ ಇದೆ. ಈ ಅದ್ವೈತಭಾವದ ಮಹತ್ತ್ವವನ್ನೂ ಸೌಂದರ್ಯವನ್ನೂ Radakrishnan ಅವರು ತಮ್ಮ ಉತ್ತಮವಾದ ಶೈಲಿಯಲ್ಲಿ ಈರೀತಿ ವರ್ಣಿಸಿದ್ದಾರೆ.

This one is the soul of the world, the reason immanent in the Universe, the source of all nature, the eternal energy. It is neither heaven, nor the earth, neither sunshine nor storm, but another essence, perhaps the Rita substantiated

the Aditi spiritualised the ONE Breathing breathless. It is the supreme reality which lives in all things and moves them all, the real one that blushes in the rose, breaks into beauty in the clouds, shows its strength in the storms and sets the stars in the sky.

(Indian Philosophy. p. 95)

ಈ ಏಕವೇ ವಿಶ್ವಾತ್ಮ, ವಿಶ್ವಾಂತರ್ಗತವಾದ ಚಿಚ್ಛಕ್ತಿ ಮತ್ತು ವಿಶ್ವಶಕ್ತಿಯ ಆಧಾರ. ಇದು ಇತರ ಅನೇಕ ಋಕ್ಕುಗಳಲ್ಲಿ ವರ್ಣಿತವಾಗಿರುವ ಕೇವಲ ಪೃಥ್ವಿಯೂ ಅಲ್ಲ, ಅಂತರಿಕ್ಷವೂ ಅಲ್ಲ, ಸೂರ್ಯನ ಪ್ರಕಾಶವೂ ಅಲ್ಲ, ಭೌತಿಕವಾದ ಪ್ರಕೃತಿ ಶಕ್ತಿಯೂ ಅಲ್ಲ. ಬೃಹದಾರಣ್ಯಕದಲ್ಲಿ '**ನೇತಿ ನೇನೆ**' ಎಂಬ ನಿಷೇಧವಾಕ್ಯಗಳಿಂದಲೇ ಯಾವ ಪರಬ್ರಹ್ಮದ ಅಸ್ತಿತ್ವವನ್ನು ಪ್ರತಿಪಾದಿಸಿದೆಯೋ ಅದೇ ಬ್ರಹ್ಮತತ್ತ್ವವು ವಿಶ್ವಚೇತನವಾಗಿದೆ. **ಋುತ, ಅದಿತಿ** ಎಂದು ಇತರ ಕಡೆಗಳಲ್ಲಿ ವರ್ಣಿತವಾಗಿರುವ ವಿಶ್ವತತ್ತ್ವವು ಇಲ್ಲಿ ಸ್ತುತವಾಗಿದೆ. ವಿಶ್ವದ ನಾನಾ ಜೀವಗಳಲ್ಲೂ ಜೀವತತ್ತ್ವವನ್ನು ತುಂಬುವ ಈ ಶಕ್ತಿಯು ಸರ್ವವ್ಯಾಪಕವಾಗಿದೆ. ಇದೇ ಅಂಶವನ್ನು Prof. MaxMnller ಪಂಡಿತನು ವಿವರಿಸುತ್ತಾ ತನ್ನ ಅಭಿಪ್ರಾಯವನ್ನು ಇರೀತಿ ಹೇಳಿದ್ದಾನೆ.

"Whatever is the age when the collection of our Rig-Veda Samhita was finished it was before that age that the conviction had been formed that there is ONE, ONE being, neither male nor female, a Being raised high above all the conditions and limitations of personality and of hyman nature, and nevertheless the being that was really meant by all such names as Indra, Agni, Matariswan, nay, even by the name of Prajapati, Lord of creatures. In fact, the Vedic poets had arrived at a conception of the god-head which was reached once mare by some of the Christian Philosophers at Alexandria, but which even at present is beyond the reach of many who call themselves Christians."

(Six Systems of Indian Phylosophy, p. 51-52)

ಋಕ್ಸಂಹಿತಾಕಾಲವು ಯಾವ ಶತಮಾನದಲ್ಲಾಗಿದ್ದರೂ ಸಹ, ಸಂಹಿತಾಕಾಲಕ್ಕಿಂತಲೂ ಪೂರ್ವಭಾವಿಯಾದ ಮಂತ್ರಗಳ ಕಾಲದಲ್ಲಿಯೇ ಈ ಅದ್ವೈತತತ್ತ್ವದ ಪ್ರತಿಪಾದನೆಯು ಸ್ಪಷ್ಟವಾಗಿದ್ದಿತು. ಈ ಮಹಾಮೂಲತತ್ತ್ವವು ಲಿಂಗಾತೀತವೂ, ಮಾನವನ ಗೋಚರಾತೀತವೂ ಆದ ಏಕವೆಂದು ವರ್ಣಿತವಾಗಿದೆ. ಇದನ್ನು ಕೆಲವೆಡೆಗಳಲ್ಲಿ ಹಿರಣ್ಯಗರ್ಭವೆಂದೂ ವರ್ಣಿಸಿದೆ. ಈ ವಿಧವಾದ ಅದ್ವೈತತತ್ತ್ವಪ್ರತಿಪಾದನೆಯಲ್ಲಿರುವ ಮಹತ್ತ್ವವು ಈ ವಿಷಯದಲ್ಲಿ ಪರಿಶ್ರಮವನ್ನು ತೋರಿಸಿರುವ ಕ್ರಿಶ್ಚಿಯನ್ ಮತದಲ್ಲಿ ಕೂಡ ಕಾಣುವುದಿಲ್ಲ.

ಇಂದ್ರಂ, ಮಿತ್ರಂ ಇತ್ಯಾದಿಪದಗಳು ಇಂದ್ರಾದಿ ನಾನಾ ದೇವತೆಗಳಲ್ಲಿರುವ ಮಹಚ್ಛಕ್ತಿಯೆಲ್ಲವೂ ಈ ಏಕದೇವನಲ್ಲಿಯೇ ಇದೆ ಎಂದು ಸೂಚಿಸುತ್ತವೆಯೆಂದು "**ಐಶ್ವರ್ಯವಿಶಿಷ್ಟಂ**" ಇತ್ಯಾದಿ ವಿವರಣೆಗಳಿಂದ ಸಾಯಣರು ತಿಳಿಸಿದ್ದಾರೆ. ಇಂದ್ರಾದಿಶಬ್ದಗಳ ನಿರ್ವಚನವನ್ನೂ ಅವುಗಳ ವಿಶೇಷಾರ್ಥವನ್ನೂ ಆಯಾ ದೇವತಾಪರವಾದ ಸೂಕ್ತಗಳನ್ನೂ ವಿವರಿಸುವಾಗ ತಿಳಿಸಿದೆ.



**ಕೃಷ್ಣಂ ನಿಯಾನಂ ಹರಯಃ ಸುಪರ್ಣಾ ಅಪೋ ವಸಾನಾ ದಿವಮು-
ತ್ಪತಂತಿ । ತ ಆವವೃತ್ರನ್ತ್ಸದನಾದೃತಸ್ಯಾದಿದ್ಘೃತೇನ ಪೃಥಿವೀ
ವ್ಯುದ್ಯತೇ ॥ ೪೭ ॥**

ಉದಕವನ್ನು ವಹಿಸಿರತಕ್ಕವೂ, ಶ್ರೇಷ್ಠವಾದ ಸಂಚಾರವುಳ್ಳವೂ ಆದ ರಶ್ಮಿಗಳು ಕಪ್ಪುಬಣ್ಣವುಳ್ಳದ್ದೂ ನಿಯತವಾದ ಗತಿಯುಳ್ಳದ್ದೂ ಆದ ಮೇಘವನ್ನು ಉದಕದಿಂದ ಆಚ್ಛಾದಿತವಾಗುವಂತೆ ಮಾಡಿ ಎಂದರೆ ಉದಕದಿಂದ ತುಂಬಿ ದ್ಯುಲೋಕಾಭಿಮುಖವಾಗಿ ಮೇಲಕ್ಕೆ ಪ್ರಸರಿಸುತ್ತವೆ. ಪುನಃ ಅವು ಉದಕದ ಸ್ಥಾನವಾದ ಆದಿತ್ಯನಿಂದ ಹಿಂತಿರುಗುತ್ತವೆ. ಒಡನೆಯೇ ಪೃಥ್ವಿಯು ಉದಕದಿಂದ ತೋಯಲ್ಪಡುತ್ತದೆ.

ವರ್ಷಕಾಮೇಷ್ಟಿಯೆಂಬ ಯಾಗದಲ್ಲಿ ಮೂರು ಪಿಂಡಗಳನ್ನು ಹೋಮಮಾಡಬೇಕಾಗಿರುವುದು. ಅವುಗಳಲ್ಲಿ ಮೂರನೆಯದನ್ನು ಹೋಮಮಾಡುವಾಗ ಕೃಷ್ಣಂ ನಿಯಾನಂ ಎಂಬ ಈ ಋಕ್ಕನ್ನು ಪುರೋಽನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ಕೃಷ್ಣಂ ನಿಯಾನಂ ಹರಯಃ ಸುಪರ್ಣಾ ನಿಯುತ್ವಂತೋ **ಗ್ರಾಮಜಿತೋ ಯಥಾ ನರಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೨-೧೩)

ಈ ಋಕ್ಕಿಗೆ ಸಾಯಣರು ಹೇಳಿರುವ ಅರ್ಥವು ನಿರುಕ್ತಕಾರರ ವಿವರಣೆಗಿಂತ ಕೊಂಚ ವ್ಯತ್ಯಸ್ತವಾಗಿದೆ. ಸಾಯಣರು **ಕೃಷ್ಣಂ ನಿಯಾನಂ** ಎಂಬುದಕ್ಕೆ **ಕೃಷ್ಣವರ್ಣಂ ಮೇಘಂ** । ಕೃಷ್ಣವರ್ಣದ ಮೇಘವೆಂದರ್ಥಮಾಡಿದ್ದಾರೆ. ನಿರುಕ್ತದಲ್ಲಿ **ಕೃಷ್ಣಂ ನಿರಯಣಂ ರಾತ್ರಿಂ** ಎಂದರ್ಥಮಾಡಿದೆ. ಈ ಋಕ್ಕಿಗೆ ನಿರುಕ್ತವು ಈ ರೀತಿಯಿದೆ.

**ಕೃಷ್ಣಂ ನಿರಯಣಂ ರಾತ್ರಿರಾದಿತ್ಯಸ್ಯ ಹರಯಃ ಸುಪರ್ಣಾ ಹರಣಾ ಆದಿತ್ಯರಶ್ಮಯಸ್ತೇ ಯದಾಮುತೋಽರ್ವಾಂಚಃ ಪರ್ಯಾವರ್ತಂತೇ ಸಹಸ್ಥಾನಾದುದಕಸ್ಯಾದಿತ್ಯಾದಥ ಘೃತೇನೋದಕೇನ ಪೃಥಿವೀ ವ್ಯುದ್ಯತೇ ॥** (ನಿ. ೭-೨೪)

ನಿರಯಣವೆಂದರೆ ಇಲ್ಲಿ ಸಂಚಾರಮಾರ್ಗವೆಂದು ಹೇಳಬಹುದು. (ನಿರ್ಗಮನ ಮಾರ್ಗವೆಂದು ಈ ಪದಕ್ಕೆ ಸಾಧಾರಣವಾದ ಅರ್ಥವಿರುತ್ತದೆ). ಆದಿತ್ಯನ ಸಂಚಾರಮಾರ್ಗಗಳೆರಡು. ಒಂದು ಕೃಷ್ಣವರ್ಣದ್ದು ಇನ್ನೊಂದು ಶುಕ್ಲವರ್ಣದ್ದು. ಕೃಷ್ಣವರ್ಣದ ಸಂಚಾರಮಾರ್ಗಕ್ಕೆ ರಾತ್ರಿಯೆಂದಾಗಲಿ ಅಥವಾ ದಕ್ಷಿಣಾಯನವೆಂದಾಗಲಿ ಅರ್ಥಮಾಡಬಹುದು ಅಥವಾ ದಕ್ಷಿಣಾಯನದ ಸಂಚಾರವನ್ನೇ ಆದಿತ್ಯನ ರಾತ್ರಿಸಂಚಾರವೆಂದಾಗಲಿ ಹೇಳಬಹುದು. ದುರ್ಗಾಚಾರ್ಯರು ನಿರುಕ್ತವಾಕ್ಯಕ್ಕೆ ವ್ಯಾಖ್ಯಾನವನ್ನು ಈರೀತಿ ಬರೆದಿರುತ್ತಾರೆ.

**ನಿಯಾನಂ ನಿರಯಣಂ ನಿರ್ಗತಿಃ [ನಿರ್ಯಾತಿ] ನಿರ್ಗಚ್ಛಂತ್ಯೇತದಿತಿ ನಿಯಾನಂ ವರ್ತ್ಮ ಪಂಥಾಃ । ತಚ್ಚ ಪುನರೇತತ್ । ರಾತ್ರಿಃ ಆದಿತ್ಯಸ್ಯ । ದ್ವೇಹ್ಯಸ್ಯಾಯನೇ ಶುಕ್ಲಂ ಚೋತ್ತರಂ ಕೃಷ್ಣಂ ಚ ದಕ್ಷಿಣಂ । ಸಾ ಹಿ ದೈವೀರಾತ್ರಿರಭಿಪ್ರೇತಾ । ತತೋ ಬ್ರವೀತಿ ರಾತ್ರಿರಾದಿತ್ಯಸ್ಯ ಜ್ಯೋತಿಷಃ । ಸ ಏಷ ಭಗವಾನಾದಿತ್ಯೋ ಯದಾ ಜಗದನುಗ್ರಹಾಯ ಗರ್ಭಮುದಕಮಾತ್ಮನ್ಯಾಧಿತ್ಸುರುತ್ತಸ್ಮಾದಸ್ಮಾರಾಯಣಂ ಪ್ರತಿಪದ್ಯತೇ ತದೈತೇ ಹರಯಃ ರಸ ಹರಣಾಃ ಸುಪರ್ಣಾಃ ತಸ್ಯ ರಶ್ಮಯಃ ಸರ್ವಸ್ಮಾದಸ್ಮಾಲ್ಲೋಕಾತ್ ಅಪೋವಸಾನಾಃ ಆತ್ಮನ್ಯಾಚ್ಛಾದಯಂತಃ ಆದದಾನಾಃ ದಿವಂ ದ್ಯೂತನವಂತಮೇತಮಾದಿತ್ಯಂ ಪ್ರತಿ ಉತ್ಪತಂತಿ ॥** (ನಿರುಕ್ತವ್ಯಾಖ್ಯಾ ೭-೪)

ಆದಿತ್ಯನ ಗತಿಯು ಎರಡು ವಿಧವಾಗಿರುತ್ತದೆ. ಒಂದು ಉತ್ತರಾಯಣಕ್ಕೂ ಇನ್ನೊಂದು ದಕ್ಷಿಣಾಯನಕ್ಕೂ ಸಂಬಂಧಿಸಿದುದು. ಒಂದನ್ನು ಶುಕ್ಲವೆಂದೂ ಇನ್ನೊಂದನ್ನು ಕೃಷ್ಣವೆಂದೂ ಕರೆದಿದೆ. ಇಲ್ಲಿ ರಾತ್ರಿಯೆಂಬುದು ಕೃಷ್ಣಾಯನಕ್ಕೆ ಪರ್ಯಾಯವಾದ ಪದವಾಗಿದೆ ಎಂದು ವಿವರಿಸಿರುವುದನ್ನೇ ಸಾಯಣರೂ ಸಹ ತಮ್ಮ ಎರಡನೇ ಅರ್ಥದಲ್ಲಿ ತಿಳಿಸಿದ್ದಾರೆ. **ಯದ್ವಾ। ಕೃಷ್ಣಂ ನಿಯಾನಂ ನಿಯಮನಂ ರಾತ್ರಿಃ। ದೇವಾನಾಂ ಹಿ ರಾತ್ರಿರ್ದಕ್ಷಿಣಾಯನಂ। ತತ್ರೃತಿ ತಸ್ಮಿನ್ವರ್ಷಾಕಾಲೇ ಇತ್ಯರ್ಥಃ।** ದೇವತೆಗಳಿ ರಾತ್ರಿಕಾಲಕ್ಕೆ ದಕ್ಷಿಣಾಯನವೆಂದು ಹೆಸರು. ಆದಿತ್ಯನು ಉತ್ತರಾಯಣದ ಗತಿಯನ್ನನುಸರಿಸುತ್ತಿದ್ದಾಗ ಅವನ ರಶ್ಮಿಗಳೆಲ್ಲವೂ ಪ್ರಪಂಚದಲ್ಲಿ ಪ್ರಸರಿಸಿ ಎಲ್ಲಾ ಪ್ರದೇಶಗಳಿಂದಲೂ ಉದಕವನ್ನು ಸಂಗ್ರಹಿಸಿ ಈ ರಾತ್ರಿಕಾಲಕ್ಕೆ ಸರಿಯಾಗಿ ಪುನಃ ಆದಿತ್ಯನನ್ನು ಸೇರುವುವು. ಇದೇ ವರ್ಷಾಕಾಲವು. ಈ ಕಾಲದಲ್ಲಿ ವೃಷ್ಟಿಯು ಪ್ರಭೂತವಾಗಿ ಸುರಿಯುವುದೆಂದರ್ಥವು. ಈ ಶುಕ್ಲಕೃಷ್ಣಗಳನ್ನು ಭಗವದ್ಗೀತೆಯಲ್ಲಿ ವಿವರಿಸುತ್ತಾ,

**ಅಗ್ನಿರ್ಜ್ಯೋತಿರಹಶ್ಶುಕ್ಲಃ ಷಣ್ಮಾಸಾ ಉತ್ತರಾಯಣಂ।**
**ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ॥**
**ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಂ।**
**ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ॥**
**ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಶ್ಶಾಶ್ವತೇ ಮತೇ।**
**ಏಕಯಾ ಯಾತ್ಯನಾವೃತ್ತಿಮನ್ಯಯಾವರ್ತತೇ ಪುನಃ॥** (ಭಗವದ್ಗೀತಾ ೮-೨೪-೨೬)

ಎಂಬ ವಾಕ್ಯಗಳಿಂದ ವರ್ಣಿಸಿದೆ. ಇಲ್ಲಿ ಕೇವಲ ಭೌತಿಕವಾದ ವರ್ಣನೆಯು ಮಾತ್ರವಲ್ಲದೇ, ನೈತಿಕವ್ಯವಹಾರಕ್ಕೆ ಸಂಬಂಧಿಸಿದ ಫಲಾಫಲಗಳನ್ನೂ ತಿಳಿಸಿದೆ. ಇದಕ್ಕೆ ಅರ್ಚಿರಾದಿ ಮಾರ್ಗವೆಂದೂ ಧೂಮಮಾರ್ಗವೆಂದೂ ವ್ಯವಹಾರವಿರುವುದಾಗಿ ಹಿಂದೆ ದೇವಯಾನ ಮತ್ತು ಪಿತೃಯಾನಗಳ ವಿಷಯವನ್ನು ವಿವರಿಸುವಾಗ ಹೇಳಿದೆ. [cf. ಛಾ. ಉ. ೫-೧೦-೩; ಬೃ. ಉ ೬-೨-೧೯]. ಈ ವಿಧವಾದ ಆಧಾರಗಳಿಂದ **ಕೃಷ್ಣಂ ನಿರಯಣಂ** ಎಂಬುದಕ್ಕೆ ನಿರುಕ್ತಕಾರರು ಕೇವಲ ರಾತ್ರಿಯೆಂದು ಅರ್ಥ ಮಾಡಿದ್ದರೂ ಸಹ ಸಾಯಣರು " **ದೇವಾನಾಂ ರಾತ್ರಿರ್ದಕ್ಷಿಣಾಯನಂ** " ಎಂದು ಅರ್ಥಮಾಡಿದ್ದಾರೆ.

**ಋತಸ್ಯ ಸದನಾತ್—ಉದಕಸ್ಯ ಸ್ಥಾನಾದಾದಿತ್ಯಮಂಡಲಾತ್।** ಉದಕಕ್ಕೆ ಉತ್ಪತ್ತಿಸ್ಥಾನವಾದ ಆದಿತ್ಯಮಂಡಲದಿಂದ ಎಂದರ್ಥಮಾಡಿದೆ. ಋತಶಬ್ದಕ್ಕೆ ಇಲ್ಲಿ ಉದಕವೆಂದರ್ಥ. [ಋತಶಬ್ದಕ್ಕೆ ಸತ್ಯ. ಆದಿತ್ಯನ ಪಥ ಇತ್ಯಾದ್ಯನೇಕವಾದ ಅರ್ಥಗಳಿರುವುದನ್ನು ಹಿಂದೆ ಆಯಾ ಸಂದರ್ಭಗಳಲ್ಲಿ ತಿಳಿಸಿದೆ]. ನಿರುಕ್ತಕಾರರು **ಋತಶಬ್ದ**ವನ್ನು **ಉದಕನಾಮ**ಗಳಲ್ಲಿ ಪಠಿಸಿದ್ದಾರೆ. (ನಿ. ೨-೨೪). ಋಕ್ಸಂಹಿತೆಯಲ್ಲಿ ಸುಮಾರು ಎಪ್ಪತ್ತು ಋಕ್ಕುಗಳಲ್ಲಿ ಋತಶಬ್ದಕ್ಕೆ ಉದಕವೆಂದೇ ಅರ್ಥವಾಗಿದೆ. ನಿರುಕ್ತದಲ್ಲಿ **ಋತಂ ಯೋನಿಃ। ಋತಸ್ಯ ಯೋನಿಃ। ಸತ್ಯಂ। ನೀರಂ।** ಎಂಬ ಪದಗಳನ್ನೆಲ್ಲಾ ಒಟ್ಟಿಗೆ ಸೇರಿಸಿದೆ. ಋತಶಬ್ದಕ್ಕೆ ಸತ್ಯವೆಂಬರ್ಥವನ್ನು ಮಾಡಿದರೂ ಸಹ ಆಗ ಉದಕವೇ ವಿಶ್ವದ ಮೂಲತತ್ತ್ವ ಎಂಬ ಕೆಲವು ತಾತ್ತ್ವಿಕರ ಮತದಂತೆ ಸತ್ಯಾತ್ಮಕವಾಗಿರುವ ಉದಕವೆಂದು ಅರ್ಥವಾಗುತ್ತದೆ. ಆದರೆ,

**ಯದ್ಧ ತ್ಯನ್ಮಿತ್ರಾವರುಣಾವೃತಾದಧ್ಯಾದದಾಥೇ ಅನೃತಂ ಸ್ವೇನ ಮನ್ಯುನಾ ದಕ್ಷಸ್ಯ ಸ್ವೇನ ಮನ್ಯುನಾ।**

**ಯುವೋ ರಿತ್ಥಾಧಿ ಸದ್ಮಸ್ವಪಶ್ಯಾಮ ಹಿರಣ್ಯಯಂ .... .... .... ....।**
**ಧೀಭಿಶ್ಚನ ಮನಸಾ ಸ್ವೇಭಿರಕ್ಷಭಿಃ ಸೋಮಸ್ಯ ಸ್ವೇಭಿರಕ್ಷಿಭಿಃ॥** (ಋ. ಸಂ. ೧-೧೩೯-೨)

ಎಂಬ ಋಕ್ಕಿನಲ್ಲಿ **ಋತಾದನೃತಮಾಡದಾಥೇ** ಎಂಬುದಕ್ಕೆ **ಋತಾತ್—ಆದಿತ್ಯಾತ್ । ಅನೃತಂ ಶೋಷಣಸ್ವಭಾವಂ (ಉದಕಂ)** ಎಂದು ಋತಶಬ್ದಕ್ಕೆ ಆದಿತ್ಯನೆಂದೂ, ಅನೃತಶಬ್ದಕ್ಕೆ ಉದಕವೆಂದೂ, ಅರ್ಥವಾಗುತ್ತದೆ. ಮತ್ತು ಉದಕಕ್ಕೆ ಅನೃತವೆಂಬ ವಿಶೇಷಣವು ನೀರಿನ ಅಶಾಶ್ವತವಾದ ಸ್ಥಿತಿಯನ್ನು ತೋರಿಸುತ್ತದೆಯೆಂದು ಸಾಯಣರು ವಿವರಿಸಿದ್ದಾರೆ. ಉಪನಿಷದಾದಿಗಳಲ್ಲಿ ಹೇಳುವಂತೆ ಶಾಶ್ವತವಾದುದೇ ಸತ್ಯವೆಂದೂ, ಅಶಾಶ್ವತವಾದುದೇ ಅಸತ್ಯವೆಂದೂ ಸಹ ಅರ್ಥವಾಗಬಹುದು. ಈ ಅಭಿಪ್ರಾಯವು ಉದಾಹೃತವಾದ ಋಕ್ಕಿನ ಅರ್ಥಕ್ಕೆ ಮಾತ್ರ ಹೊಂದಿಕೊಂಡರೂ ಸಹ ಅನೃತಶಬ್ದವನ್ನು ಉದಕಪರ್ಯಾಯವಾಗಿ ಉಪಯೋಗಿಸಿರುವುದು ಅಪರೂಪ.

**ಘೃತೇನ—ಘೃತಮಿತ್ಯುದಕನಾಮ** (ನಿ. ೧-೧೨) ಘೃತವೆಂಬುದು ಉದಕಪರ್ಯಾಯವಾದ ನಾಮವಾಗಿದೆ. ಸೇಚನಾರ್ಥಕವಾದ **ಘೃ** ಧಾತುವಿನಿಂದ ನಿಷ್ಪನ್ನವಾಗಿದೆ. “ಜಿಘರ್ತೇಃ ಸಿಂಚತಿಕರ್ಮಣಃ”

**ಆವವೃತ್ರನ್ತ್ಸದನಾದೃತಸ್ಯಾದಿದ್ ಘೃತೇನ ಪೃಥಿವೀ ವ್ಯುದ್ಯತೇ**— ಎಂಬ ಉತ್ತರಾರ್ಧಕ್ಕೆ ನಿರುಕ್ತಕಾರರು ಬೇರೊಂದು ಅರ್ಥವೂ ಸಾಧ್ಯವೆಂದು ತಿಳಿಸಿದ್ದಾರೆ.

**ಅಥಾಪಿ ಬ್ರಾಹ್ಮಣಂ ಭವತ್ಯಗ್ನಿರ್ವಾ ಇತೋ ವೃಷ್ಟಿಂ ಸಮೀರಯತಿ ಧಾಮಚ್ಛದ್ದಿವಿ ಖಲು ಭೂತ್ವಾ ವರ್ಷತಿ ಮರುತಃ ಸೃಷ್ಟಾಂ ವೃಷ್ಟಿಂ ನಯಂತಿ । ಯದಾ ಖಲು ವಾಸಾವಾದಿತ್ಯೋಽಗ್ನಿಂ ರಶ್ಮಿಭಿಃ ಪರ್ಯಾವರ್ತತೇಽಥ ವರ್ಷತೀತಿ ।** (ನಿ. ೭-೨೪)

‘ಅಗ್ನಿಯು ಈ ಲೋಕದಿಂದ ಮಳೆಯನ್ನು ಸುರಿಸುತ್ತಾನೆ’ ಎಂಬ ಬ್ರಾಹ್ಮಣವಾಕ್ಯವಿದೆ. ಅದು ಹೇಗೆಂದರೆ ಅಗ್ನಿಯು ಧೂಮರೂಪದಿಂದ ಅಂತರಿಕ್ಷವನ್ನು ಸೇರಿ ಮೇಘವಾಗಿ ಪರಿಣಮಿಸಿ ವೃಷ್ಟಿಯನ್ನು ಸುರಿಸುತ್ತದೆ. ‘ಆದಿತ್ಯನು ತನ್ನ ರಶ್ಮಿಗಳಿಂದ ಅಗ್ನಿಯನ್ನು ಪ್ರತಿನಿವೃತನಾಗುವಂತೆ ಮಾಡಿದಾಗ ವೃಷ್ಟಿಪತನವಾಗುತ್ತದೆ’ ಎಂಬುದೂ ಸಹ ಇನ್ನೊಂದು ಬ್ರಾಹ್ಮಣವಾಕ್ಯವಿದೆಯೆಂದು ಅಗ್ನಿಪರವಾದ ಅರ್ಥವನ್ನೂ ಮಾಡಿದೆ.

**ಆ ಅವವೃತ್ರನ್: ಅರ್ವಾಙ್ ಆಗಚ್ಛತಿ ।** ಅಭಿಮುಖವಾಗಿ ಎಂದಾಗಲಿ ಅಥವಾ ಅಧೋಮುಖವಾಗಿ ಬಂದಾಗ ಎಂದಾಗಲಿ ಅರ್ಥವಾಗುತ್ತದೆ.

**ಸುಪರ್ಣಾಃ—ಶೋಭನಪತನಾ ರಶ್ಮಯಃ ।** ಆಕರ್ಷಕವಾಗಿ ಸಂಚರಿಸತಕ್ಕವು ಎಂದು ರಶ್ಮಿಗಳಿಗೆ ಪರ್ಯಾಯನಾಮವಾಗಿದೆ. ಸುಪರ್ಣಶಬ್ದವು ರಶ್ಮಿನಾಮಗಳಲ್ಲಿಯೂ (ನಿ. ೧-೫), ಅಶ್ವನಾಮಗಳಲ್ಲಿ (ನಿ. ೧-೧೪) ಪಠಿತವಾಗಿದೆ. **ಪಕ್ಷಿ, ಬಾಣ** ಇತ್ಯಾದ್ಯರ್ಥಗಳಲ್ಲಿಯೂ ಸಹ ಉಪಯೋಗಿಸಲ್ಪಟ್ಟಿದೆ. ಯಾವ ಅರ್ಥವನ್ನು ಹೇಳಿದರೂ, ಗರ್ಭವಾದ ಕಂಪನವುಳ್ಳ ಎಂದರ್ಥ. ಈ ಪದಕ್ಕೆ ಇರುವ ನಾನಾರ್ಥಗಳನ್ನೂ ಈ ವಿಶೇಷಣದ ವೈಶಿಷ್ಟ್ಯವನ್ನೂ ಸಹ ಇದೇ ಭಾಗದ 421 ನೇ ಪುಟದಲ್ಲಿ ವಿಶದವಾಗಿ ತಿಳಿಸಿದೆ.



**ದ್ವಾದಶ ಪ್ರಧಯಶ್ಚಕ್ರಮೇಕಂ ತ್ರೀಣಿ ನಭ್ಯಾನಿ ಕ ಉ ತಚ್ಚಿಕೇತ ।**
**ತಸ್ಮಿನ್ತ್ಸಾಕಂ ತ್ರಿಶತಾ ನ ಶಂಕವೋಽರ್ಪಿತಾಃ ಷಷ್ಟಿರ್ನ ಚಲಾಚಲಾಸಃ ॥ ೪೮ ॥**

ಸಂವತ್ಸರರೂಪವಾದ ಚಕ್ರಕ್ಕೆ ಪರಿಧಿಗಳು ಹನ್ನೆರಡು. ಮಧ್ಯಭಾಗದ ಅಚ್ಚುಗಳು ಮೂರು. ಈ ಚಕ್ರದಲ್ಲಿ ಪರಿಭ್ರಮಣವನ್ನು ಮಾಡತಕ್ಕ ಮುನ್ನೂರ ಅರವತ್ತು ಅವಯವಗಳು ಶಂಕುಗಳಂತೆ ಒಟ್ಟಿಗೆ ಅರ್ಪಿತಗಳಾಗಿವೆ. ಈ ರಹಸ್ಯವನ್ನು ತಿಳಿದ ಮಹಾತ್ಮನು ಅಪರೂಪ.

ಈ ಋಕ್ಕಿನಲ್ಲಿ ವರ್ಣಿತವಾಗಿರುವುದು ಆದಿತ್ಯಚಕ್ರವಾಗಬಹುದು ಅಥವಾ ಕಾಲಚಕ್ರವಾಗಬಹುದು. ಆವೃತ್ತಿರೂಪವಾದ ಪರಿಭ್ರಮಣವನ್ನು ಹೊಂದುತ್ತಿರುವುದರಿಂದ ಆದಿತ, ಸಂವತ್ಸರ ಎಂಬ ಎರಡು ತತ್ತ್ವಗಳಿಗೂ **ಚಕ್ರ**ವೆಂಬ ಪರ್ಯಾಯನಾಮವನ್ನು ಹೇಳಬಹುದು. ಎರಡೂಕ್ಕೂ ದ್ವಾದಶ ಪರಿಧಿಗಳಿವೆ, ನಾಭಿತ್ರಯಗಳಿಗೆ ಮುನ್ನೂರ ಅರವತ್ತು ಶಂಕುಗಳಿವೆ. ಎರಡಕ್ಕೂ ತಾದಾತ್ಮ್ಯವನ್ನು ಹೇಳಿದರೂ ಸರಿಯಾಗುತ್ತದೆ.

**ದ್ವಾದಶ ಪ್ರಧಯಃ—ಪರಿಧಯಃ ; ತತ್ಸ್ಥಾನೀಯಾ ದ್ವಾದಶಾಮಾಸಾಃ |** ಪರಿಧಿರೂಪಗಳಾದ ಹನ್ನೆರಡು ಮಾಸಗಳೆಂದರ್ಥ. ಆದಿತ್ಯಮಂಡಲವನ್ನು ರಥದ ಚಕ್ರಕ್ಕೂ ದ್ವಾದಶಮಾಸಗಳನ್ನು ಪರಿಧಿಗಳಿಗೂ ಹೋಲಿಸಿದೆ. ಮೇಷ, ವೃಷಭ ಇತ್ಯಾದಿ ಹನ್ನೆರಡು ರಾಶಿಗಳುಳ್ಳ ಸೂರ್ಯಮಂಡಲವಾಗುತ್ತದೆ. ಮುನ್ನೂರ ಅರವತ್ತು ಅಹೋರಾತ್ರಗಳ ಪರಿಗಣನೆಯಿರುವುದರಿಂದ ಇಲ್ಲಿ ಮಾಸಪರ್ಯಾಯವಾಗಿ ಅರ್ಥಮಾಡಿದರೆ ಹೆಚ್ಚು ಹೊಂದಿಕೊಳ್ಳುತ್ತದೆ. **ದ್ವಾದಶ** ಎಂಬ ಪದವನ್ನು ದ್ವಾದಶ ಮಾಸಗಳನ್ನು ಹೊಂದಿರುವ ಸಂವತ್ಸರದ ಪರ್ಯಾಯವಾಗಿಯೇ **ಉಪ**ಯೋಗಿಸಿರುವುದೂ ಉಂಟು. ಉದಾಹರಣೆಗೆ—

**ದೇವಹಿತಿಂ ಜುಗುಪುರ್ದ್ವಾದಶಸ್ಯ ಋತುಂ ನರೋ ನ ಪ್ರ ಮಿನಂತ್ಯೇತೇ |**
**ಸಂವತ್ಸರೇ ಪ್ರಾವೃಷ್ಯಾಗತಾಯಾಂ ತಪ್ತಾ ಘರ್ಮಾ ಅಶ್ನುವತೇ ವಿಸರ್ಗಂ ||**

(ಋ. ಸಂ. ೭-೧೦೩-೯)

ಎಂಬಲ್ಲಿ **ದ್ವಾದಶಮಾಸಾತ್ಮಕಸ್ಯ ಸಂವತ್ಸರಸ್ಯ** ಎಂದರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿಯೂ ಅದೇ ಅರ್ಥವಾಗಬಹುದು. ನಿರುಕ್ತಕಾರರು **ದ್ವಾದಶ ಪ್ರಧಯಶ್ಚಕ್ರಮೇಕಂ** ಎಂಬ ಪಾದವನ್ನು ಉದಹರಿಸಿ " **ಇತಿ ಮಾಸಾನಾಂ** " ಈ ದ್ವಾದಶಮಾಸಗಳು ಮಾಸಪರ್ಯಾಯವಾದವು ಎಂದು ವಿವರಿಸಿದ್ದಾರೆ. (ನಿ. ೪-೨೭) ಇಂತಹ ಮಾಸಾತ್ಮಕವಾದ ಚಕ್ರವೆಂದರ್ಥ.

**ತ್ರೀಣಿ ನಭ್ಯಾನಿ—ನಾಭ್ಯಶ್ರಯಾಣಿ ಫಂಕಾನಿ ತತ್ಸ್ಥಾನೀಯಾನಿ ಗ್ರೀಷ್ಮವರ್ಷಾಹೇಮಂತಾಖ್ಯಾನ್ಯಾಶ್ರಿತಾನಿ |** ನಾಭಿತ್ರಯವು ಇಲ್ಲಿ ಗ್ರೀಷ್ಮ, ವರ್ಷ ಮತ್ತು ಹೇಮಂತಋತುಗಳನ್ನು ತಿಳಿಸುತ್ತದೆ ಅಥವಾ ನಾಭೀಸ್ಥಾನೀಯಗಳಾದ ಸಂಧ್ಯಾತ್ರಯಗಳಾಗಬಹುದು ಅಥವಾ ಭೂತಭವಿಷ್ಯತ್ವರ್ತಮಾನಕಾಲಗಳಾಗಬಹುದು.

**ಕ ಉ ತಚ್ಚಿಕೇತ—ಕೋಽಪಿ ಮಹಾನ್ ಜಾನಾತಿ |** ಯಾವ ಮಹಾತ್ಮನು ತಿಳಿಯುತ್ತಾನೆ ಎಂಬುದರಲ್ಲಿ ಈ ರಹಸ್ಯವನ್ನು ತಿಳಿಯುವವನು ಯಾರು? ಎಂದು ಪ್ರಶ್ನಾರ್ಥಕವಾಗಿರಬಹುದು ಅಥವಾ ಇದನ್ನು ತಿಳಿಯುವ ಮಹಾತ್ಮನು ಅಪರೂಪ ಎಂದರ್ಥವಾಗಬಹುದು. ಕಾಲತತ್ತ್ವದ ರಹಸ್ಯವು ಸಕಧಾರಣವಾದ ಬುದ್ಧಿಗೆ ಗೋಚರವಾಗತಕ್ಕದ್ದಲ್ಲವೆಂದರ್ಥ. ಈ ಭಾವದ ಅರ್ಥವನ್ನು **ಕೋ ದದರ್ಶ ಪ್ರಥಮಂ ಜಾಯಮಾನಂ** ಇತ್ಯಾದಿ ಭಾವಗಳನ್ನು ವಿವರಿಸುವಾಗ ಹಿಂದೆ ತಿಳಿಸಿದೆ. (cf. ೧-೧೬೪-೪)

**ಶಂಕವೋ ನ ; ಷಷ್ಟಿರ್ನ**— ಈ ಎರಡುಕಡೆಗಳಲ್ಲಿಯೂ **ನ** ಎಂಬ ನಿಪಾತವು ಉಪಯೋಗಿಸಲ್ಪಟ್ಟಿದೆ. **ಶಂಕವೋ ನ** ಎಂಬಲ್ಲಿ **' ದುರ್ಮದಾಸೋ ನ ಸುರಾಯಾಂ '** ಎಂಬ ಉದಾಹರಣೆಯನ್ನು ತೋರಿಸಿ ನಿರುಕ್ತಕಾರರು ವಿವರಿಸಿರುವಂತೆ

ಉಪಮಾರ್ಥೀಯವಾಗುತ್ತದೆ. ಶಂಕುಗಳಂತೆ ಎಂದರ್ಥ. (ನಿ. ೧-೪) ಷಷ್ಟಿರ್ನ ಎಂಬಲ್ಲಿ **ನ ಶಬ್ದಃ ಚಾರ್ಥೇ ತ್ರಿಶತಾಃ ಷಷ್ಟಿಶ್ಚ ।** ನ ಶಬ್ದವು ಸಮುಚ್ಚಯಾರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಮುನ್ನೂರು ಮತ್ತು ಅರವತ್ತು ಎಂದರೆ ಮುನ್ನೂರರವತ್ತು ಎಂದರ್ಥವೆಂದು ವಿವರಿಸಿದೆ. ಇಲ್ಲಿ ನಿರುಕ್ತಕಾರರು ನ ಎಂಬ ನಿಪಾತಕ್ಕೆ ಕೇವಲ ಪ್ರತಿಷೇದಾರ್ಥದಲ್ಲಿಯೂ ಮತ್ತು ಉಪಮಾರ್ಥದಲ್ಲಿಯೂ ಉದಾಹರಣೆಗಳನ್ನು ಕೊಟ್ಟು ವಿವರಿಸಿದ್ದಾರೆ. ಸಮುಚ್ಚಯಾರ್ಥವು ಇಲ್ಲಿ ಹೇಗೆ ಸಾಧ್ಯ ಎಂಬ ಪ್ರಶ್ನೆಯು ಬಂದರೆ ಆಗ ಅದಕ್ಕೆ ಸಮರ್ಥನಮಾಡಿ ಸಾಯಣರು—

**ಷಷ್ಟಿಶ್ಚ ಹ ವೈ ತ್ರೀಣಿ ಚ ಚ ಶತಾನಿ ಸಂವತ್ಸರಸ್ಯಾಹಾನಿ ।** (ಶ. ಬ್ರಾ. ೯-೧-೧-೪೩)

ಎಂಬ ಶತಪಥಬ್ರಾಹ್ಮಣದ ವಾಕ್ಯವನ್ನು ದಹರಿಸಿ ತಮ್ಮ ಅರ್ಥವನ್ನು ಸಮರ್ಥಿಸಿದ್ದಾರೆ.

**ಚಕ್ರಂ**—**ಚಕತೇರ್ವಾ ಚರತೇರ್ವಾ ಕ್ರಾಮತೇರ್ವಾ ।** ಪ್ರತಿಘಾತಾರ್ಥಕವಾದ **ಚರ್** ಅಥವಾ **ಕ್ರಮು** ಧಾತುವಿನಿಂದ **ಚಕ್ರ**ಶಬ್ದವು ನಿಷ್ಪನ್ನವಾಗಿದೆ.

**ಚಲಾಚಲಾಸಃ**— **ಏಕಶ್ಚಲಶಬ್ದೋ ದ್ವಿರ್ಭಾವಪ್ರಾಪ್ತಃ । ಚಲಾ । ಚಲನಸ್ವಭಾವಾನೀತ್ಯರ್ಥಃ** ಇಲ್ಲಿ ಚಲನಾರ್ಥಕವಾದ **ಚಲ**ಶಬ್ದಕ್ಕೆ ದ್ವಿರ್ಭಾವವು ಪ್ರಾಪ್ತವಾಗಿದೆ. ಪರಿಭ್ರಮಣಾತ್ಮಕವಾದವು ಎಂದರ್ಥವೆಂದು ಸಾಯಣರು ವಿವರಿಸಿದ್ದಾರೆ. ಆದರೆ Wilson ಎಂಬ ಪಂಡಿತನು ಈ ಪದಕ್ಕೆ ಅರ್ಥಮಾಡುವಾಗ **ಚಲ, ಅಚಲ** ಎಂಬ ಎರಡು ಭಾಗಮಾಡಿ,

Within it are collected 360 spokes, which are, as it were, movable and immoveaBle.

(Rig-veda Translaton. Vol. II. p. 78).

ಚಲಿಸತಕ್ಕದ್ದೂ ಮತ್ತು ಚಲಿಸದಿರುವುವು ಎಂದು ಅರ್ಥಮಾಡಿದ್ದಾನೆ. ಸಾಯಣರು,

**ಚರಿಚಲಿಪತಿವದೀನಾಮುಚ್ಯಾಕ್ಚಾಭ್ಯಾಸಸ್ಯ ।** (ಪಾ. ಸೂ. ೬-೧-೧೨-೬)

ಎಂಬ ಪಾಣಿನಿಯ ಸೂತ್ರವನ್ನು ದಹರಿಸಿ **ಚಲ**ಶಬ್ದವೇ ದ್ವಿರ್ಭಾವವನ್ನು ಪಡೆಯುತ್ತದೆಂದೂ, ಇಲ್ಲಿ **ಚಲಾಚಲಾಸಃ** ಎಂಬ ಪದಕ್ಕೆ ಕೇವಲ ಚಲನಾತ್ಮಕವಾದ ಎಂದೂ ಅರ್ಥಮಾಡಿದ್ದಾರೆ. ಸಂವತ್ಸರರೂಪವಾದ ಏಕಚಕ್ರದಲ್ಲಿರುವ ಮುನ್ನೂರ ಅರವತ್ತು ಅವಯವಗಳಲ್ಲಿ ಕೆಲವು ಚಲಿಸುತ್ತಲೂ ಕೆಲವು ಚಲನವಿಲ್ಲದೆಯೂ ಇರಲು ಸಾಧ್ಯವಿಲ್ಲ. ಆದುದರಿಂದ ಸಾಯಣರು ಹೇಳಿರುವ ಅರ್ಥವು ಈ ಸಂದರ್ಭದಲ್ಲಿ ಉಚಿತವಾಗಿರುತ್ತದೆ. Wilson ಹೇಳಿರುವ ಅರ್ಥವು ತಪ್ಪೆಂದು ಹೇಳಬಹುದು.



ಯಸ್ತೇ ಸ್ತನಃ ಶಶಯೋ ಯೋ ಮಯೋಭೂರ್ಯೇನ ವಿಶ್ವಾ ಪುಷ್ಯಸಿ
ವಾರ್ಯಾಣಿ । ಯೋ ರತ್ನಧಾ ವಸುವಿದ್ಯಃ ಸುದತ್ರಃ ಸರಸ್ವತಿ
ತಮಿಹ ಧಾತವೇ ಕಃ ॥ ೪೯ ॥

ಎಲೈ ಸರಸ್ವತಿಯೇ, ಮೇಧಾವಿಗಳಾದ ಋತ್ವಿಕ್ಕುಗಳಿಗೆ ತೃಪ್ತಿದಾಯಕವಾದುದೂ, ಸುಶಬ್ದರೂಪವಾದುದೂ ಆದ ಯಾವ ನಿನ್ನ ಸ್ತನವು ವಿಶ್ರಾಂತಿಯನ್ನು ಪಡೆಯುತ್ತಾ ನಿನ್ನ ದೇಹದಲ್ಲಿರುವುದೋ ಯಾವ ಶಬ್ದರೂಪವಾದ ನಿನ್ನ ಸ್ತನಸುಖವು

ದಾಯಕವಾದುದೋ, ಯಾವುದರಿಂದ ಸಮಸ್ತವಾದ ಇಷ್ಟಾರ್ಥಗಳನ್ನೂ ನೀನು ಅಧಿಕವಾಗಿ ಕೊಡುತ್ತೀಯೋ, ಯಾವುದು ರಮಣೀಯವಾದ ರಸವನ್ನು ಒದಗಿಸುವುದೋ ಮತ್ತು ಯಾವುದು ಧನವೇತ್ತೃವೂ ಮತ್ತು ದಾತೃವೂ ಆಗಿರುವುದೋ ಆ ಸ್ತನವನ್ನು ಈ ಯಜ್ಞಕರ್ಮದಲ್ಲಿ ನಮ್ಮ ಪಾನಕ್ಕೆ ಯೋಗ್ಯವಾದುದನ್ನಾಗಿ ಮಾಡು.

ಪ್ರವರ್ಗ್ಯವೆಂಬ ಯಾಗವಿಶೇಷದಲ್ಲಿ ಅಭಿಷ್ಟವಕಾಲದಲ್ಲಿ **ಯಸ್ತೇ ಸ್ತನ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಯಸ್ತೇ ಸ್ತನಃ ಶಶಯೋ ಯೋ ಮಯೋಭೂರ್ಗೌರಮೀಮೇದನು ವತ್ಸಂ ಮಿಷಂತಂ** ಎಂಬ ಸೂತ್ರದಿಂದಲೂ (ಆ. ೪-೭) ಸಾರಸ್ವತಸಂಬಂಧವಾದ ಪಶುಹೋಮದಲ್ಲಿ ಹವಿಸ್ಸನ್ನು ಹೋಮ ಮಾಡುವಾಗ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಯಸ್ತೇ ಸ್ತನಃ ಶಶಯೋ ಯೋ ಮಯೋಭೂಸ್ತ್ವಂ ಸೋಮ ಪ್ರ ಚಿಕಿತೋ ಮನೀಷೇತಿ ದ್ವೇ** ಎಂಬ ಸೂತ್ರದಿಂದಲೂ (ಆ. ೩-೭) ವಿವೃತವಾಗಿರುವುದು.

ಸರಸ್ವತಿಯೆಂಬ ಹೆಸರು ಋಗ್ವೇದದಲ್ಲಿ ಪ್ರಾಯಃ ನದೀನಾಮವಾಗಿಯೇ ಅನೇಕ ಕಡೆಗಳಲ್ಲಿ ಪ್ರಸಿದ್ಧವಾಗಿದೆ. ವಾಗ್ದೇವತಾವಾಗಿರುವುದು ಬಹಳ ಅಪರೂಪ.

Though there is nothing to show distinctly that Saraswathi is ever anything more in the Rig-Veda than a river goddess, we find her identified in the Brahamanas, with ವಾಕ್ speech and In post Vedic mythology she has become goddess of eloquence and wisdom, invoked as a muse and regarded as the wife of Brahma.

(Macdonell : Vedic Mythology. p. 87)

ಋಕ್ಸಂಹಿತೆಯಲ್ಲಿ ಸರಸ್ವತಿಯೆಂಬ ಹೆಸರು ನದೀನಾಮಕವಾಗಿದೆ. ಬ್ರಾಹ್ಮಣಾದಿಗಳಲ್ಲಿ ಸರಸ್ವತಿಯನ್ನು ವಾಗ್ದೇವತೆಯೆಂದೂ, ಬ್ರಹ್ಮಪತ್ನಿಯೆಂದೂ, ಪ್ರಜ್ಞಾದಾತ್ರಿಯೆಂದೂ ಕರೆದಿದೆ; ಎಂಬದಾಗಿ Mac-Donell ಮುಂತಾದ ಪಾಶ್ಚಾತ್ಯ ಪಂಡಿತರ ಅಭಿಪ್ರಾಯವಾಗಿದೆ ಆದರೆ,

**ಶಂ ನೋ ದೇವಾ ವಿಶ್ವದೇವಾ ಭವಂತು ಶಂ ಸರಸ್ವತೀ ಸಹ ಧೀಭಿರಸ್ತು ।**
**ಶಮಭಿಷಾಚಃ ಶಮು ರಾತಿಷಾಚಃ ಶಂ ನೋ ದಿವ್ಯಾಃ ಪಾರ್ಥಿವಾಃ ಶಂ ನೋ ಅಪ್ಯಾಃ ॥**

(ಋ. ಸಂ. ೭-೩೫-೧೧)

ಎಂಬಲ್ಲಿ ಪೃಥಿವ್ಯಾದಿಲೋಕತ್ರಯದಲ್ಲೂ ಇರತಕ್ಕ ದೇವತೆಗಳನ್ನು ಪ್ರಾರ್ಥಿಸಿ ಅವರಿಂದ ಶಾಂತಿಯನ್ನೂ ಸೌಖ್ಯವನ್ನೂ ಅಪೇಕ್ಷಿಸಿದೆ. **ದಿವ್ಯಾಃ, ಪಾರ್ಥಿವಾಃ, ಅಪ್ಯಾಃ** ಎಂದು ಲೋಕತ್ರಯದ ದೇವತೆಗಳನ್ನೂ ಉದ್ದೇಶಿಸಿ ಪುನಃ **ಸರಸ್ವತೀ ಸಹ ಧೀಭಿರಸ್ತು** ಎಂದು ಸರಸ್ವತಿಯನ್ನೂ ಪ್ರತ್ಯೇಕವಾಗಿ ಪ್ರಾರ್ಥಿಸಿದೆ. ಉದಹರಿಸಿರುವ ಈ ಋಕ್ಕಿನಲ್ಲಿ ನದೀನಾಮವಾಗಿರಲು ಕಾರಣವಿಲ್ಲ. ವಾಗ್ದೇವತೆಯೇ ಇಲ್ಲಿ ಉದ್ದಿಷ್ಟವಾದ ದೇವತೆ. ಅದರಂತೆಯೇ ಪ್ರಕೃತವಾದ ಋಕ್ಕಿನಲ್ಲೂ ಸಹ ವಾಗ್ದೇವತೆಯನ್ನೇ ನಿರ್ದೇಶಿಸಿ ಪ್ರಾರ್ಥಿಸಿದೆಯೆಂದು ಋಕ್ಕಿನಲ್ಲಿರುವ ವರ್ಣನೆಯಿಂದಲೂ, ಸಾಯಣರ ಭಾಷ್ಯದಿಂದಲೂ ನಿಷ್ಕೃಷ್ಟವಾಗಿ ತಿಳಿಯುತ್ತದೆ.

ನಿರುಕ್ತದಲ್ಲಿ **ಸರಸ್ವತೀ** ಶಬ್ದವನ್ನು **ವಾಕ್**ನಾಮಗಳಲ್ಲಿಯೂ, ನದೀನಾಮಗಳಲ್ಲಿಯೂ ಪಠಿಸಿದೆ. (ನಿ. ೨-೨೩; ೨-೨೪) ವಾಗಧಿದೇವತೆಯಾದ ಸರಸ್ವತಿಯ ಸ್ವರೂಪವನ್ನು ಯಾವರೀತಿ ವರ್ಣಿಸಿದೆಯೆಂಬುದನ್ನು ತಿಳಿಯುವುದೇ ಪ್ರಕೃತದಲ್ಲಿ

ನನುಗೆ ಬೇಕಾದುದು. ಮೇಲೆ ಉದಹರಿಸಿದ ಋಙ್ಮಂತ್ರದಲ್ಲಿ ಮಾತ್ರವಲ್ಲದೆ ಋಕ್ಸಂಹಿತೆಯಲ್ಲಿ ಇನ್ನೂ ಅನೇಕ ಸಂದರ್ಭಗಳಲ್ಲಿ ವಾಗ್ದೇವತೆಯಾದ ಸರಸ್ವತಿಯ ಪ್ರಶಂಸೆಯಿದೆ. ಉದಾಹರಣೆಗೆ—

**ಪಾವಕಾ ನಃ ಸರಸ್ವತೀ ವಾಜೇಭಿರ್ವಾಜಿನೀವತೀ । ಯಜ್ಞಂ ವಷ್ಟು ಧಿಯಾವಸುಃ ॥**

(ಋ. ಸಂ. ೧-೩-೧೦)

ಇತ್ಯಾದಿ ಋಕ್ಕುಗಳಲ್ಲಿ ವಾಕ್ಕಿಗೂ ಸರಸ್ವತಿಗೂ ತಾದಾತ್ಮ್ಯವನ್ನು ಹೇಳಿ ವಾಗ್ದೇವಿಯನ್ನು ಸ್ತುತಿಸಿದೆ. ನಿರುಕ್ತಕಾರರು **ಶ್ಯೇನಃ ಸೋಮಃ** ಇತ್ಯಾದಿ ಮೂವತ್ತೈದು ದೇವತೆಗಳಲ್ಲಿ **ಸರಮಾ, ಸರಸ್ವತೀ** ಎಂಬ ದೇವತೆಗಳನ್ನು ಸೇರಿಸಿ ಉದಾಹರಣೆಗಾಗಿ ಮೇಲಿನ (ಋ.ಸಂ. ೧-೩-೧೦) ಋಕ್ಕನ್ನು ಪಠಿಸಿ ವಿವರಿಸಿದ್ದಾರೆ. ಈ ಋಕ್ಕಿನಲ್ಲಿ ಪ್ರಕೃತವಾದ (೧-೧೬೪-೪೯) ಋಕ್ಕಿನಲ್ಲಿ ವರ್ಣಿತವಾಗಿರುವ ಸರಸ್ವತಿಯ ಗುಣಗಳೆಲ್ಲವೂ ಸ್ತುತಿಸಲ್ಪಟ್ಟಿವೆ. **ಪಾವಕಾ, ವಾಜಿನೀವತೀ, ಧಿಯಾವಸುಃ** ಇತ್ಯಾದಿವಿಶೇಷಣಗಳು ವಾಗ್ದೇವಿಯಾದ ಸರಸ್ವತಿಯ ಸ್ವರೂಪವನ್ನು ತಿಳಿಸುತ್ತವೆ. ಅವಳು ಶುದ್ಧಿಕಾರಕಳು, ಅವಳೇ ಧಿಯಾವಸುವು.

ಐತರೇಯಾರಣ್ಯಕದಲ್ಲಿ ಈ ಋಕ್ಕಿನ ತಾತ್ಪರ್ಯವನ್ನು ವಿಶದವಾಗಿ ವಿವರಿಸಿರುವುದನ್ನು ತಿಳಿಸುತ್ತಾ ಸಾಯಣರು ತಮ್ಮ ಅರ್ಥದ ಸಮರ್ಥನೆಗೆ ಆ ವಾಕ್ಯವನ್ನುದಹರಿಸಿದ್ದಾರೆ. ಅಲ್ಲಿರುವ ಅರ್ಥವಿವರಣೆಯು ಹೀಗಿದೆ.

**ಪಾವಕಾ ನಃ ಸರಸ್ವತೀ ಯಜ್ಞಂ ವಷ್ಟು ಧಿಯಾವಸುರಿತಿ ವಾಗ್ವೈ ಧಿಯಾವಸುಃ । ವಾಚಮೇವಾಸ್ಮಿಂಸ್ತದ್ದಧಾತಿ ಯ ಏವಂ ವೇದ ಯೇಷಾಂ ಚೈವಂ ವಿದ್ವಾನೇತದ್ಧೋತಾ ಶಂಸತಿ। ಯಜ್ಞಂ ವಷ್ಟ್ವಿತಿ ಯದಾಹ ಯಜ್ಞಂ ವಹತ್ವಿತ್ಯೇವ ತದಾಹ ।** (ಐ. ಆ. ೧-೧-೪)

ಇಲ್ಲಿ **ಧೀ** ಶಬ್ದಕ್ಕೆ ಸ್ತುತಿಮಾತ್ರವೆಂದರ್ಥಮಾಡಿದೆ. ವಾಗ್ದೇವಿಯು ಈ ಸ್ತುತಿಮಂತ್ರಗಳ ನಿಧಿಯಾಗಿದ್ದಾಳೆ. ಈ ತತ್ತ್ವವನ್ನು ತಿಳಿದವನು ಅಥವಾ ಇದನ್ನು ಅರಿತ ಹೋತೃವು ಯಾವ ಯಜಮಾನನಿಗಾಗಿ ಇದನ್ನು ಪಠಿಸುತ್ತಾನೋ ಅವನೂ ವಾಗ್ದೇವಿಯ ಅನುಗ್ರಹವನ್ನು ಪಡೆಯುತ್ತಾನೆ. ಅಷ್ಟೇ ಅಲ್ಲದೇ ಈ ದೇವಿಯು ಸಕಲ ಪಾಪಗಳನ್ನೂ ನಾಶಮಾಡಿ ಯಜ್ಞಕರ್ತನಿಗೆ ಆತ್ಮಶುದ್ಧಿಯನ್ನುಂಟುಮಾಡತಕ್ಕವಳು. ಪವಿತ್ರಾತ್ಮಳೂ ಪವಿತ್ರಕಾರಕಳೂ ಆದ ಈ ದೇವತೆಯು "**ಯಜ್ಞಂ ವಷ್ಟು**" ನಮ್ಮ ಯಜ್ಞವನ್ನು ವಹಿಸಿ ದೇವತೆಗಳಿಗೆ ಸೇರಿಸಲಿ ಎಂದು ಪ್ರಾರ್ಥಿಸಿದೆಯೆಂದು ತಿಳಿಸಿದೆ. ಇದರಂತೆಯೇ ನಿರುಕ್ತಕಾರರು,

**ಮಹೋ ಅರ್ಣಃ ಸರಸ್ವತೀ ಪ್ರಚೇತಯತಿ ಕೇತುನಾ । ಧಿಯೋ ವಿಶ್ವಾ ವಿ ರಾಜತಿ ॥**

(ಋ. ಸಂ. ೧-೩-೧೨)

ಎಂಬ ಋಕ್ಕನ್ನೂ ಉದಹರಿಸಿ ವಿವರಿಸಿದ್ದಾರೆ. ಈ ಋಕ್ಕಿನಲ್ಲಿ ಸರಸ್ವತಿಯು ನದ್ಯಾತ್ಮಕವಾದ ದೇವತೆಯೆಂದು ತಿಳಿಸಿದೆ. ಆದರೂ ಸಹ ವಾಗ್ದೇವತೆಗೆ ಯಾವ ಗುಣಗಳಿವೆಯೋ, ಅದೇ ಗುಣಗಳು ಇಲ್ಲಿಯೂ ವರ್ಣಿಸಲ್ಪಟ್ಟಿವೆ. **ಸರಸ್ವತೀ** ಶಬ್ದದ ಲಕ್ಷಣವನ್ನು ಹೇಳುವಾಗಲೂ ಸಹ ನಿರುಕ್ತಕಾರರು ಎರಡು ಸನ್ನಿವೇಶಗಳಲ್ಲೂ ಒಂದೇ ಲಕ್ಷಣವು ಹೊಂದಿಕೊಳ್ಳುವು ತಿಳಿಸಿದ್ದಾರೆ.

**ತತ್ರ ಸರಸ್ವತೀತ್ಯೇತಸ್ಯ ನದೀವದ್ದೇವತಾವಚ್ಚ ನಿಗಮಾ ಭವಂತಿ ।** (ನಿ. ೨-೨೩)
**ಸರಸ್ವತೀ । ಸರ ಇತ್ಯುದಕನಾಮ ಸರ್ತೇಸ್ತದ್ವತೀ ।** (ನಿ. ೯-೨೬)

ಪ್ರವಹಿಸು ಎಂಬರ್ಥವನ್ನು ಕೊಡತಕ್ಕ ಸೃ ಧಾತುವಿನಿಂದ ಸರಶಬ್ದವು ನಿಷ್ಪನ್ನವಾಗಿದೆ. ಉದಕವೆಂದರ್ಥ. ಈ ಸರವುಳ್ಳದ್ದು ಸರಸ್ವತೀ. ಇದು ನದೀರೂಪವಾದ ಸರಸ್ವತಿಯ ಲಕ್ಷಣವಾಗಿದೆ ಇದೇ ಲಕ್ಷಣವು ವಾಗ್ದೇವೀರೂಪವಾದ ಸರಸ್ವತೀ ಪದದ ಸ್ವರೂಪವನ್ನೂ ತಿಳಿಸುವುದೆಂದು "ಸರಸ್ವತೀ ವ್ಯಾಖ್ಯಾತಾ" ಎಂದು (ನಿ. ೧೧-೧೫) ತಿಳಿಸಿದೆ.

ಸರಸ್ವತಿಗೆ ವಿಶೇಷಣವಾಗಿರುವ ಧಿಯಾವಸುಃ ಎಂಬ ಪದದಲ್ಲಿ ಧೀ ಶಬ್ದಕ್ಕೆ ಸ್ತುತಿಯೆಂದು ಐತರೇಯಾರಣ್ಯಕದಲ್ಲಿ ಅರ್ಥಮಾಡಿರುವುದನ್ನು ಮೇಲೆ ತಿಳಿಸಿದೆ. ನಿರುಕ್ತಕಾರರು ಧಿಯಾವಸುಃ-ಕರ್ಮವಸುಃ ಎಂದು ಧೀ ಶಬ್ದಕ್ಕೆ ಕರ್ಮವೆಂದರ್ಥಮಾಡಿದ್ದಾರೆ. ಧೀ ಎಂಬ ಪದವನ್ನು ನಿರುಕ್ತದಲ್ಲಿ ಕರ್ಮನಾಮಗಳಲ್ಲಿಯೂ ಪ್ರಜ್ಞಾನಾಮಗಳಲ್ಲಿಯೂ (ನಿ. ೩-೧; ನಿ. ೩-೧೩) ನಿರಕ್ತಕಾರರು "ಮಹೋ ಅರ್ಣಃ ಸರಸ್ವತೀ" ಎಂಬ ಋಕ್ಕಿನಲ್ಲಿರುವ ಪದಕ್ಕೆ **ಸರ್ವಾಣಿ ಪ್ರಜ್ಞಾನಾನಿ** (೧೧-೨೭) ಎಂದು ಅರ್ಥಮಾಡಿರುವಾಗ ನಮ್ಮ ಸಕಲವಾದ ಪ್ರಜ್ಞಾಯುತವಾದ ಧ್ಯಾನವೆಂಬರ್ಥವನ್ನು ಹೇಳಿದ್ದಾರೆ. ಮತ್ತು

**ಪಥಸ್ಪಥಃ ಪರಿಪತಿಂ ವಚಸ್ಯಾ ಕಾಮೇನ ಕೃತೋ ಅಭ್ಯಾನಳರ್ಕಂ ।**
**ಸ ನೋ ರಾಸಚ್ಛುರುಧಶ್ಚಂದ್ರಾಗ್ರಾ ಧಿಯಂಧಿಯಂ ಸೀಷಧಾತಿ ಪ್ರ ಪೂಷಾ ॥**

(ಋ. ಸಂ. ೬-೪೯-೮)

**ಪಾವೀರವೀ ತನ್ಯತುರೇಕಪಾದಜೋ ದಿವೋ ಧರ್ತಾ ಸಿಂಧುರಾಪಃ ಸಮುದ್ರಿಯಃ**
**ವಿಶ್ವೇ ದೇವಾಸಃ ಶೃಣವನ್ ವಚಾಂಸಿ ಮೇ ಸರಸ್ವತೀ ಸಹ ಧೀಭಿಃ ಪುರಂಧ್ಯಾ ॥**

(ಋ. ಸಂ. ೧೦-೬೫-೧೩)

ಎಂಬ ಋಕ್ಕುಗಳಲ್ಲಿ ಧೀ ಶಬ್ದಕ್ಕೆ ಯಜ್ಞಯಾಗಾದಿಕರ್ಮಗಳೆಂದರ್ಥಮಾಡಿದೆ. ಪ್ರಕೃತವಾದ ಋಕ್ಕಿನಲ್ಲಿ ಯಾವ ಅರ್ಥವನ್ನು ಹೇಳಿದರೂ ಸಹ ಸಂದರ್ಭಕ್ಕೆ ಹೊಂದಿಕೊಳ್ಳುತ್ತದೆ.

**ಸ್ತನಃ-ಸ್ತನವಚ್ಛಿಶುಸ್ಥಾನೀಯಾನಾಂ ಪ್ರಾಣಿನಾಮಾಪ್ಯಾಯನಕಾರೀ ಲೌಕಿಕವೈದಿಕಸುಶಬ್ದರೂಪಃ ಸ್ತನಃ ।** ಶಿಶುರೂಪರಾದ ಪ್ರಜೆಗಳಿಗೆ ಸ್ತನವು ಕ್ಷೀರವನ್ನು ಕೊಟ್ಟು ಯಾವರೀತಿ ತೃಪ್ತಿಯನ್ನುಂಟುಮಾಡುತ್ತದೆಯೋ ಅದೇ ರೀತಿಯಾಗಿ ಲೌಕಿಕರೂಪವಾದುದೂ ವೈದಿಕರೂಪವಾದುದೂ ಆದ ವಾಙ್ಮಯವಾಧ ಶಬ್ದವು ಮೇಧಾವಿಗಳಾದ ಋತ್ವಿಕ್ಕುಗಳಿಗೆ ತೃಪ್ತಿಯನ್ನುಂಟುಮಾಡತಕ್ಕವೆಂದು ಸಾಯಣರು ವಿವರಿಸಿದ್ದಾರೆ. ಮತ್ತು **ಸರ್ವಪ್ರಾಣ್ಯುಪಕಾರಕಂ ಸೂಕ್ತಮಯಂ ಸ್ತನಂ ।** ಸಕಲಪ್ರಾಣಿಗಳಿಗೂ ಉಪಕಾರಕವಾದುದೂ, ಸೂಕ್ತಮಯವಾದುದೂ ಆದ ಸ್ತನವೆಂದು ಅರ್ಥ. ಬೃಹದಾರಣ್ಯಕೋಪನಿಷತ್ತಿನಲ್ಲಿ ಇದೇ ಮಂತ್ರವನ್ನು ಪಠಿಸಿ ಅಲ್ಲಿ ಎರಡುವಿಧವಾದ ಅರ್ಥಗಳಿಗೂ ಅವಕಾಶವಿದೆಯೆಂದು ತಿಳಿಸಿದೆ.

"ಅಥೈನಂ ಮಾತ್ರೇ ಪ್ರದಾಯ ಸ್ತನಂ ಪ್ರಯಚ್ಛತಿ "ಯಸ್ತೇ ಸ್ತನಃ"......................" ಎಂದು ಮಾತೃವು ತನ್ನ ಮಗುವಿಗೆ ಸ್ತನ್ಯಪಾನವನ್ನು ಮಾಡಿಸುವಾಗ ಈ ಮಂತ್ರವನ್ನು ಪಠಿಸಬೇಕೆಂಬ ವಿಧಿಯನ್ನು ತಿಳಿಸಿದೆ. **"ಅಥೈನಂ ಮಾತ್ರೇ ಪ್ರದಾಯ ಸ್ವಾಂಕಸ್ಥಂ ಸ್ತನಂ ಪ್ರಯಚ್ಛತಿ ಯಸ್ತೇ ಸ್ತನ ಇತ್ಯಾದಿ ಮಂತ್ರೇಣ"** ಎಂದು ಶಂಕರಾಚಾರ್ಯರು ತಿಳಿಸಿದ್ದಾರೆ. (ಬೃ. ಉ. ಶಾಂಕರಭಾಷ್ಯ. ೬-೪-೨೭)

**ಮಯೋಭೂಃ—ರಸಾಸ್ವಾದಿನಾಂ ಸುಖಸ್ಯ ಭಾವಯಿತಾ ।** ವಾಗ್ರಸದ ಸುಖವನ್ನು ಅನುಭವಿಸುವಂತೆ ಮಾಡತಕ್ಕವಳು ಎಂದರ್ಥ. ಅಥವಾ ವಾಗ್ರೂಪವಾದ ಸ್ತನದಿಂದ ರಸವೆಂಬ ಕ್ಷೀರವನ್ನು ಸುರಿಸುವವಳು ಮತ್ತು ಆನಂದದಾಯಕಳು ಎಂದರ್ಥ. ಬೃಹದಾರಣ್ಯಕದಲ್ಲಿ ವಾಕ್ಕನ್ನು ಧೇನುವಿಗೆ ಹೋಲಿಸಿ ಈ ತಾತ್ಪರ್ಯವನ್ನು ಸೂಚಿಸಿದೆ.

ವಾಚಂ ಧೇನುಮುಪಾಸೀತ ತಸ್ಯಾಶ್ಚತ್ವಾರಃ ಸ್ತನಾಃ ಸ್ವಾಹಾಕಾರೋ ವಷಟ್ಕಾರೋ ಹಂತಕಾರೋ ಸ್ವಧಾಕಾರಸ್ತಸ್ಯೈ ದ್ವೌ ಸ್ತನೌ ದೇವಾ ಉಪಜೀವಂತಿ ಸ್ವಾಹಾಕಾರಂ ಚ ವಷಟ್ಕಾರಂ ಚ ಹಂತಕಾರಂ ಮನುಷ್ಯಾಃ ಸ್ವಧಾಕಾರಂ ಪಿತರಸ್ತಸ್ಯಾಃ ಪ್ರಾಣ ಋಷಭೋ ಮನೋ ವತ್ಸಃ ॥ (ಬೃ. ಉ. ೫-೮)

ವಾಕ್ಕನ್ನು ಧೇನುವೆಂದು ಉಪಾಸನೆಮಾಡತಕ್ಕದ್ದು. ಈ ಧೇನುವಿಗೆ ನಾಲ್ಕು ಸ್ತನಗಳಿವೆ ಸ್ವಾಹಾಕಾರ, ವಷಟ್ಕಾರ, ಹಂತಕಾರ, ಸಧಾಕಾರ ಎಂಬಿವೇ ನಾಲ್ಕು ಸ್ತನಗಳು. ಸ್ವಾಹಾಕಾರವೂ, ವಷಟ್ಕಾರವೂ ದೇವತೆಗಳಿಗೆ ಹವಿಸ್ಸಿನರೂಪವಾದ ಅನ್ನವನ್ನೊದಗಿಸಿ ಅವರಿಗೆ ತೃಪ್ತಿಯನ್ನುಂಟುಮಾಡುತ್ತವೆ. ಹಂತಕಾರವು ಮಾನವರಿಗೂ ಸ್ವಧೆಯು ಪಿತೃಗಳಿಗೂ ತೃಪ್ತಿಯನ್ನು ಕೊಡುತ್ತದೆ. ಪ್ರಾಣವೇ ಈ ವಾಗ್ರೂಪವಾದ ಧೇನುವಿಗೆ ವೃಷಭದಂತಿರುವುದು.

ಪ್ರಾಣೇಣ ಹಿ ವಾಕ್ಪ್ರಸೂಯತೇ । ಮನೋ ವತ್ಸಃ । ಮನಸಾ ಹಿ ಪ್ರಸ್ರಾವ್ಯತೇ । ಮನಸಾ ಹ್ಯಾಲೋಚಿತೇ ವಿಷಯೇ ವಾಕ್ಪ್ರವರ್ತತೇ । ತಸ್ಮಾನ್ಮನೋ ವತ್ಸಸ್ಥಾನೀಯಂ ॥
(ಶಾಂಕರಭಾಷ್ಯ)

ಪ್ರಾಣದಿಂದಲೇ ವಾಕ್ಕಿನ ಪ್ರಸವವಾಗುವುದರಿಂದ ಪ್ರಾಣವು ವೃಷಭವು. ಮನಸ್ಸು ಆಲೋಚಿಸಿದನಂತರವೇ ವಾಕ್ಕಿನ ಪ್ರವೃತ್ತಿಯಿರುವುದರಿಂದ ಮನಸ್ಸು ವತ್ಸಸ್ಥಾನೀಯವಾಯಿತು. ಎಂಬುದಾಗಿ ವಾಗ್ಧೇನುವಿನ ಸ್ತನ್ಯದಿಂದ ಲಭಿಸತಕ್ಕ ಫಲವನ್ನು ವರ್ಣಿಸಿದೆ. ಅದರಿಂದ ಲಭಿಸುವ ತೃಪ್ತಿಯ ಸ್ವರೂಪವನ್ನೂ ಸೂಚಿಸಿದೆ.

**ಯೇನ ವಿಶ್ವಾ ಪುಷ್ಯಸಿ ವಾರ್ಯಾಣಿ** ಎಂಬ ಪಾದದಲ್ಲಿ ವರ್ಣಿತವಾಗಿರುವುದನ್ನೂ **ರತ್ನಧಾಃ, ವಸುವಿತ್** ಇತ್ಯಾದಿ ವಿಶೇಷಗಳಿಂದ ಸೂಚಿತವಾಗಿರುವ ಅಂಶಗಳನ್ನೂ ಛಾಂದೋಗ್ಯದಲ್ಲಿ ವರ್ಣಿಸಿ ವಾಕ್ಕೇ ಸಕಲ ಲೋಕಗಳಿಗೂ, ಸಕಲ ಭೂತಗಳಿಗೂ, ಸಕಲ ವಿಧವಾದ ವ್ಯವಹಾರಗಳಿಗೂ ಆಧಾರವೆಂದು ತಿಳಿಸಿದೆ.

ವಾಗ್ವಾವ ನಾಮ್ನೋ ಭೂಯಸೀ ವಾಗ್ವಾ ಋಗ್ವೇದಂ ವಿಜ್ಞಾಪಯತಿ ಯಜುರ್ವೇದಂ ಸಾಮವೇದಮಾಥರ್ವಣಂ ಚತುರ್ಥಮಿತಿಹಾಸಪುರಾಣಂ ಪಂಚಮಂ ವೇದಾನಾಂ ವೇದಂ ಪಿತ್ರ್ಯಂ ರಾಶಿಂ ನಿಧಿಂ ವಾಕೋವಾಕ್ಯಮೇಕಾಯನಂ ದೇವವಿದ್ಯಾಂ ಬ್ರಹ್ಮವಿದ್ಯಾಂ ಭೂತವಿದ್ಯಾಂ ಕ್ಷತ್ರವಿದ್ಯಾಂ ನಕ್ಷತ್ರವಿದ್ಯಾಂ ಸರ್ಪದೇವಜನವಿದ್ಯಾಂ ದಿವಂ ಚ ಪೃಥಿವೀಂ ಚ ವಾಯುಂ ಚಾಕಾಶಂ ಚಾಪಶ್ಚ ತೇಜಶ್ಚ ದೇವಾಂಶ್ಚ ಮನುಷ್ಯಾಂಶ್ಚ ಪಶೂಂಶ್ಚ ವಯಾಂಸಿ ಚ ...... ...... ...... ಧರ್ಮಂ ಚಾಧರ್ಮಂ ಚ ಸತ್ಯ ಚಾನೃತಂ ಚ ಸಾಧು ಚಾಸಾಧು ಚ ಹೃದಯಜ್ಞಂ ಚಾಹೃದಯಜ್ಞಂ ಚ ಯದ್ವೈ ವಾಙ್ನಾಭವಿಷ್ಯನ್ನಧರ್ಮೋ ನಾಧರ್ಮೋ ವ್ಯಜ್ಞಾಪಯಿಷ್ಯನ್ನ ಸತ್ಯಂ ನಾನೃತಂ ...... ...... ...... ವಾಚಮುಪಾಸ್ವೇತಿ ॥ (ಛಾ. ಉ. ೭-೨-೧)

ವಾಕ್ತತ್ತ್ವವು ಕೇವಲ ನಾಮಕ್ಕಿಂತಲೂ ಅಧಿಕವಾದುದು. ವಾಕ್ಕಿನಿಂದಲೇ ಋಗ್ವೇದವೂ, ಯಜುರ್ವೇದವೂ, ಸಾಮವೇದವೂ, ಅಥರ್ವವೇದವೂ, ಸಕಲವಾದ ಇತಿಹಾಸಪುರಾಣಾದಿಗಳೂ ತಿಳಿಯಲ್ಪಡುತ್ತವೆ. ದ್ಯಾವಾಪೃಥಿವಿಗಳೂ, ವಾಯುವೂ, ಆಕಾಶವೂ, ಸಕಲ ದೇವಮನುಷ್ಯಾದಿಗಳೂ, ಪಶುಪಕ್ಷ್ಯಾದಿಗಳೂ ವಾಕ್ಕಿನಿಂದಲೇ ಅರಿಯಲ್ಪಡುತ್ತಾರೆ. ಸತ್ಯಾಸತ್ಯಗಳೂ, ಸದಸತ್ತುಗಳೂ, ಪ್ರಿಯಾಪ್ರಿಯಾಗಳೂ ವಾಕ್ಕಿನಿಂದಲೇ ಜ್ಞಾತವಾಗುತ್ತವೆ. ವಾಕ್ಕಿಲ್ಲದಿದ್ದರೆ ಪ್ರಿಯಾಪ್ರಿಯಗಳಾಗಲಿ, ಸದಸತ್ತುಗಳಾಗಲಿ ಯಾವುವೂ ಇಲ್ಲ. ಆದುದರಿಂದಲೇ,

**ಸ ಯೋ ವಾಚಂ ಬ್ರಹ್ಮೇತುಪಾಸ್ತೇ । ಯಾವದ್ವಾಚೋ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯೋ ವಾಚಂ ಬ್ರಹ್ಮೇತ್ಯುಪಾಸ್ತೇ ॥** (ಛಾ. ಉ. ೭-೨-೨)

ಯಾವನು ವಾಗ್ರೂಪವಾದ ಬ್ರಹ್ಮವನ್ನು ಉಪಾಸನೆಮಾಡುತ್ತಾನೋ ಅವನು ಸಕಲ ವಿಧವಾದ ಸ್ವಾತಂತ್ರ್ಯವನ್ನೂ, ಇಷ್ಟಾರ್ಥಗಳನ್ನೂ ಪಡೆಯುತ್ತಾನೆ. ಅಲ್ಲದೇ,

**ವಾಗ್ವೈ ಗಾಯತ್ರೀ ವಾಗ್ವಾ ಇದಂ ಸರ್ವಂ ಭೂತಂ ಗಾಯತ್ರಿ ಚ ತ್ರಾಯತೇ ಚ ।** (ಛಾ ಉ. ೩-೧೨-೧)

ವಾಕ್ಕಿನಿಂದಲೇ ಸಕಲ ತತ್ತ್ವಗಳ ಸ್ವರೂಪವನ್ನೂ ವರ್ಣಿಸಿ ಪರಿಸುವುದರಿಂದಲೂ, ಸಕಲಕ್ಕೂ ವಾಕ್ಕು ರಕ್ಷಕವಾದುದರಿಂದಲೂ, ವಾಕ್ಕೇ ಗಾಯತ್ರಿಯು ಇತ್ಯಾದಿಯಾಗಿ ವಾಕ್ಕಿನ ಮಹತ್ವವನ್ನು ಸ್ತುತಿಸಿದೆ.

**ಅಥ ಸಾರಸ್ವತಂ । ವಾಗ್ವೈ ಸರಸ್ವತೀ ವಾಚೈವ ತತ್ಪ್ರಜಾಪತಿಃ ಪುನರಾತ್ಮಾನಮಾಪ್ಯಾಯಯತ ವಾಗೇನಮುಪಸಮಾವರ್ತತೇ ವಾಚಮನುಕಾಮಾತ್ಮಾನಃ ಕುರುತೇ ।** (ಶ. ಬ್ರಾ. ೩-೯-೧-೭)

ವಾಕ್ಕೇ ಸರಸ್ವತಿಯು ವಾಕ್ಕಿನಿಂದಲೇ ಪ್ರಜಾಪತಿಯು ತನ್ನ ಶಕ್ತಿಯನ್ನು ವೃದ್ಧಿಮಾಡಿಕೊಂಡು ತೃಪ್ತಿಯನ್ನು ಪಡೆದನು ವಾಕ್ಕು ಪ್ರಜಾಪತಿಯನ್ನು ಸೇರಿ ಅವನ ಸಂತೋಷವನ್ನು ವೃದ್ಧಿಪಡಿಸುತ್ತದೆ. ಅದರಂತೆಯೇ ಯಜಮಾನನೂ ಸಹ ವಾಕ್ಕಿನ ಅನುಗ್ರಹದಿಂದ ತೃಪ್ತಿಯನ್ನು ಹೊಂದುತ್ತಾನೆ.

**ತದ್ಯತ್ಸಾರಸ್ವತಮನುಭವತಿ । ವಾಗ್ವೈ ಸರಸ್ವತ್ಯನ್ನಗ್ಂ ಸೋಮಸ್ತಸ್ಮಾದ್ಯೋ ವಾಚಾ ಪ್ರಸಾಮ್ಯನ್ನಾದೋ ಹೈವ ಭವತಿ ।** (ಶ. ಬ್ರಾ. ೩-೯-೧-೯)

ಸರಸ್ವತಿಯೇ ವಾಗ್ದೇವತೆಯು. ಸೋಮನೇ ಅನ್ನವು ಇವೆರಡನ್ನೂ ಒಟ್ಟಿಗೆ ಪಡೆದವನು ಅನ್ನಸಂಪದ್ಯುಕ್ತನಾಗುತ್ತಾನೆ ಇತ್ಯಾದಿಯಾಗಿ ಶತಪಥಾದಿಗಳಲ್ಲಿ ವಾಗ್ದೇವತೆಯಾದ ಸರಸ್ವತಿಯ ಪ್ರಶಂಸೆ ಇದೆ.

**ರತ್ನಧಾ—ಬಹುವಿಧರಮಣೀಯರಸಾನಾಂ ಧಾರಯಿತಾ ।** ರಮಣೀಯವಾದ ರಸವನ್ನು ಹೊಂದಿರುವುದು ಎಂದು ವಾಕ್ಕಿಗೆ (ಸರಸ್ವತಿಗೆ) ವಿಶೇಷಣವಾಗಿದೆ. ರತ್ನಶಬ್ದಕ್ಕೆ ರಮಣೀಯವೆಂಬ ಅರ್ಥವನ್ನು ಅನೇಕಕಡೆಗಳಲ್ಲಿ ಹೇಳಬಹುದು. ನಿರುಕ್ತಕಾರರು **"ಹೋತಾರಂ ರತ್ನಧಾತಮಂ"** ಎಂಬ ವಾಕ್ಯದಲ್ಲಿ ರತ್ನಶಬ್ದಕ್ಕೆ ಈ ಅರ್ಥವನ್ನೇ ಹೇಳಿದ್ದಾರೆ. (ನಿ. ೭-೧೫) ಪ್ರಕೃತವಾದ ಋಕ್ಕಿನಲ್ಲಿ ಆನಂದರೂಪವಾದ ರಸವನ್ನು ಹೊಂದಿರುವವಳು ಎಂದರ್ಥ.

**ಸುದತ್ರಃ—ಸುದತ್ರಃ ಕಲ್ಯಾಣದಾನಃ । ಸುವಿದತ್ರಃ ಕಲ್ಯಾಣವಿದ್ಯಃ** ಸುದತ್ರ ಶಬ್ದಕ್ಕೆ ಶೋಭನಾತ್ಮಕವಾದ ದಾನವುಳ್ಳವನೆಂದೂ, ಸುವಿದತ್ರಶಬ್ದಕ್ಕೆ ಕಲ್ಯಾಣಾತ್ಮಕವಾದ ವಿದ್ಯವುಳ್ಳವನೆಂದೂ ನಿರುಕ್ತಕಾರರು ಈ ಎರಡು ಶಬ್ದಗಳಿಗೂ ವ್ಯತ್ಯಾಸವನ್ನು ತೋರಿಸಿದ್ದಾರೆ. (ನಿ. ೬-೧೪) ಸಾಯಣರೂ ಸಹ ಇದೇ ಅರ್ಥವನ್ನು ಹೇಳಿ ಸಮರ್ಥನೆಗಾಗಿ ನಿರುಕ್ತದ ನಿರ್ವಚನವನ್ನು ತೋರಿಸಿದ್ದಾರೆ. ನಿರುಕ್ತಕಾರರು ಸುದತ್ರ ಶಬ್ದದ ಪ್ರಯೋಗವನ್ನು ತೋರಿಸಲು,

**ತಾ ನೋ ರಾಸನ್ರಾತಿಷಾಚೋ ವಸೂನ್ಯಾ ರೋದಸೀ ವರುಣಾನೀ ಶೃಣೋತು ।**
**ವರೂತ್ರೀಭಿಃ ಸುಶರಣೋ ನೋ ಅಸ್ತು ತ್ವಷ್ಟಾ ಸುದತ್ರೋ ವಿ ದಧಾತು ರಾಯಃ ॥**
(ಋ. ಸಂ. ೭-೩೪-೨೨)

ಎಂಬ ಋಕ್ಕನ್ನುದಹರಿಸಿದ್ದಾರೆ. ಇಲ್ಲಿ **ಸುದತ್ರ** ಶಬ್ದವು ತ್ವಷ್ಟೃವಿಗೆ ವಿಶೇಷಣವಾಗಿದೆ ಕಲ್ಯಾಣಾತ್ಮಕವಾದ ದಾನವುಳ್ಳವನೆಂದರ್ಥ. ಅದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಸರಸ್ವತಿಯ ಸ್ತನಕ್ಕೆ ವಿಶೇಷಣವಾಗಿ ಕಲ್ಯಾಣಾತ್ಮಕವಾದ ಫಲವನ್ನು ಕೊಡತಕ್ಕದ್ದು ಎಂದು ವರ್ಣಿತವಾಗಿದೆ.

**ತಮಿಹ ಧಾತವೇ ಕಃ**—ಎನ್ನುವಾಗ ತಂ ಎಂದರೆ ಸಕಲ ಪ್ರಾಣಿಗಳಿಗೂ ಉಪಕಾರಕವಾದುದೂ ಸೂಕ್ತರೂಪವಾದುದೂ ಆದ ಸ್ತನವೆಂದೂ, ಇದನ್ನು ಪಾನಮಾಡಲು ಅನುಗ್ರಹಿಸಬೇಕೆಂದೂ ಸರಸ್ವತಿಯನ್ನು ಪ್ರಾರ್ಥಿಸಿದೆಯೆಂದು ಸಾಯಣರು ವಿವರಿಸಿದ್ದಾರೆ. "**ಪ್ರವರ್ಗ್ಯೇ ಅಭಿಷ್ಟವೇ ಯಸ್ತೇ ಸ್ತನಃ ಇತ್ಯೇಕಾ**" ಈ ಮಂತ್ರವು ಪ್ರವರ್ಗ್ಯಯಾಗದ ಕಾಲದಲ್ಲಿ ಸ್ತುತಿರೂಪವಾಗಿ ಪಠಿಸತಕ್ಕದ್ದೆಂದು ತಿಳಿಸಿದೆ.



**ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ । ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥ ೫೦ ॥**

ಯಜ್ಞಕರ್ತರು ಯಜ್ಞದಿಂದ ಯಜ್ಞವನ್ನು ನಿರ್ವಹಿಸಿದರು. ಆ ವಿಧವಾಗಿ ನೆರವೇರಿಸಿದ ಯಜ್ಞಕರ್ಮಗಳು ಅತ್ಯಂತ ಶ್ರೇಷ್ಠವಾಗಿ ಆದವು. ಅನಂತರ, ಪ್ರಾಚೀನರೂ, ಹಿಂದೆ ನೆರವೇರಿಸಿದ ಯಜ್ಞಾದಿಸಾಧನಗಳಿಂದ ಕೂಡಿದವರೂ ಮತ್ತು ದೇವತ್ವವನ್ನು ಪಡೆದವರೂ ಸಹ ಸೇರಿ ಸೇವಿಸುತ್ತಿರುವ ಸ್ವರ್ಗವನ್ನು ಈ ಯಜಮಾನರೂ ಪಡೆದು ತಮ್ಮ ಅತ್ಯಂತ ಪ್ರಭಾವಶಾಲಿಯಾದ ಮಹಿಮೆಯಿಂದ ಕೂಡಿಕೊಂಡು ಸ್ವರ್ಗಸುಖವನ್ನನುಭವಿಸುತ್ತಾರೆ.

ಅಗ್ನಿಮಂಥನಕಾಲದಲ್ಲಿ ಯಜ್ಞೇನ ಯಜ್ಞಂ ಎಂಬ ಈ ಋಕ್ಕನ್ನು ಪರಿಧಾನಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಯಜ್ಞೇನ ಯಜ್ಞಮಯಜಂತ ದೇವಾ ಇತಿ ಪರಿದಧ್ಯಾತ್** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೨-೧೬).

ಇದು ಯಜ್ಞಫಲವನ್ನು ಸ್ತುತಿಸತಕ್ಕ ಮಂತ್ರವಾಗಿದೆ. ಶ್ರೇಷ್ಠವಾದ ಯಜ್ಞಕ್ಕೆ ಉತ್ತಮವಾದ ಸ್ವರ್ಗಪ್ರಾಪ್ತಿಯೇ ಫಲವೆಂದು **ತೇ ಹ ನಾಕಂ ಮಹಿಮಾನಃ ಸಚಂತೇ** ಎಂದು ಪ್ರಶಂಸಿಸಿದೆ.

**ನಾಕಂ**—ನಾಕಂ ಸ್ವರ್ಗಲೋಕವನ್ನು **ನಾಸ್ಮಿನ್ನಕಮಸ್ತೀತಿ ನಾಕಃ ಸ್ವರ್ಗಃ** ದುಃಖವಿಲ್ಲದಿರುವುದರಿಂದ ಸ್ವರ್ಗಕ್ಕೆ ನಾಕವೆಂಬ ಹೆಸರು ಪ್ರಸಿದ್ಧವಾಗಿದೆ. **ನಾಕ**ಶಬ್ದವನ್ನು ಋಕ್ಸಂಹಿತೆಯಲ್ಲಿ ಬೇರೆಬೇರೆ ಅರ್ಥಗಳಲ್ಲಿ ಉಪಯೋಗಿಸಿದೆ. ಯಜ್ಞ, ಸ್ವರ್ಗ, ಆದಿತ್ಯ ಇತ್ಯಾದ್ಯರ್ಥಗಳಲ್ಲಿ ಈ ಶಬ್ದದ ಪ್ರಯೋಗವಿದೆ. ನಿರುಕ್ತಕಾರರು ಈ ಪದವನ್ನು ಆರು ಸಾಧಾರಣ ನಾಮಗಳಲ್ಲಿ ಸೇರಿಸಿ ಅವುಗಳ ಅರ್ಥವನ್ನು ಸಾಧಾರಣವೆಂದು ವಿವರಿಸುತ್ತಾ **ಸಾಧಾರಣಾನ್ಯುತ್ತರಾಣಿ ಷಟ್ ದಿವಶ್ಚಾದಿತ್ಯಸ್ಯ ಚ ।** ದ್ಯುಲೋಕಕ್ಕೂ ಆದಿತ್ಯನಿಗೂ ಸಾಧಾರಣವಾದ ಪರ್ಯಾಯಪದಗಳೆಂದೂ ತಿಳಿಸಿದ್ದಾರೆ (ನಿ. ೨-೧೩). ಅನಂತರ ಈ ಶಬ್ದದ ನಿರ್ವಚನವನ್ನು ತಿಳಿಸುತ್ತಾ,

**ನಾಕ ಆದಿತ್ಯೋ ಭವತಿ ; ನೇತಾ ರಸಾನಾಂ । ನೇತಾ ಭಾಸಾಂ ಜ್ಯೋತಿಷಾಂ ಪ್ರಣಯಃ ।**

(ನಿ. ೨-೧೪)

ರಸದ ವಾಹಕನೂ ಮತ್ತು ತೇಜೋವಾಹಕನೂ ಆದ ಆದಿತ್ಯನಿಗೆ ನಾಕವೆಂದು ಹೆಸರು ಎಂದು ಆದಿತ್ಯನ ಪರ್ಯಾಯವಾಗಿ ಈ ಪದವಿರುವುದನ್ನು ತಿಳಿಸಿ ಅನಂತರ,

**ಅಥ ದ್ಯೌಃ; ಕಮಿತಿ ಸುಖನಾಮ, ತತ್ಪ್ರತಿಷಿದ್ಧಂ ಪ್ರತಿಷಿಧ್ಯೇತ ।** (ನಿ. ೨-೧೪)

**ಕಂ** ಎಂಬುದು ಸುಖದ ಪರ್ಯಾಯನಾಮವಾಗಿದೆ; ಸುಖವಿಲ್ಲದಿರುವುದು ಅಕಂ ಅದರ ಅಭಾವವಿಲ್ಲದಿರುವುದು ಎಂದರೆ ಸುಖಾಭಾವಾಭಾವ (ಸುಖಾಭಾವವಿಲ್ಲದಿರುವುದು), ದುಃಖರಹಿತವಾದುದು ಎಂದು ವಿವರಿಸಿ,

**ನ ವಾ ಅಮುಂ ಲೋಕಂ ಜಗ್ಮುಷೇ ಕಿಂಚ ನಾಕಂ ।** (ಕಾಠಕ ಸ. ೨೧-೨)

ಎಂಬ ವಾಕ್ಯವನ್ನುದಹರಿಸಿ **ನ ವಾ ಅಮುಂ ಲೋಕಂ ಗತವತೇ ಕಿಂಚ ನಾಸುಖಂ ಪುಣ್ಯಕೃತೋ ಹ್ಯೇವ ತತ್ರ ಗಚ್ಛಂತಿ ।** ಈ ಲೋಕಕ್ಕೆ ಹೋದವರಿಗೆ ದುಃಖವೇ ಇಲ್ಲ. ಸುಕೃತಿಗಳಿಗೆ ಮಾತ್ರ ಈ ಲೋಕಕ್ಕೆ ಪ್ರವೇಶವುಂಟು ಎಂದು **ನಾಕ**ಶಬ್ದದ **ಅರ್ಥವನ್ನು** ತಿಳಿಸುತ್ತಾರೆ. ಋಕ್ಸಂಹಿತೆಯಲ್ಲಿ ಈ ಪದವು ಆದಿತ್ಯನ ಪರ್ಯಾಯವಾಗಿ ಕೆಲವು ಕೆಡೆಯೂ, ಸ್ವರ್ಗದ ಪರ್ಯಾಯವಾಗಿ ಕೆಲವು ಕೆಡೆಯೂ ಉಪಯೋಗಿಸಲ್ಪಟ್ಟಿದೆ.

**ತಿಸ್ರಃ ಪೃಥಿವೀರುಪರಿ ಪ್ರವಾ ದಿವೋ ನಾಕಂ ರಕ್ಷೇಥೇ ದ್ಯುಭಿರಕ್ತುಭಿರ್ಹಿತಂ ॥**
(ಋ. ಸಂ. ೧-೩೪-೮)

**ಯೋ ನಾಕಸ್ಯಾಧಿ ರೋಚನೇ ದಿವಿ ದೇವಾಸ ಆಸತೇ । ಮರುದ್ಭಿರಗ್ನ ಆ ಗಹಿ ॥**
(ಋ. ಸಂ. ೧-೧೯-೬)

ಇತ್ಯಾದಿ **ಋಕ್ಕುಗಳಲ್ಲಿ ನಾಕಶಬ್ದಕ್ಕೆ ಸೂರ್ಯನೆಂದರ್ಥಮಾಡಿದೆ.**

**ತೇಽವರ್ಧಂತ ಸ್ವತವಸೋ ಮಹಿತ್ವನಾ ನಾಕಂ ತಸ್ಥುರುರು ಚಕ್ರಿರೇ ಸದಃ ।**
**ವಿಷ್ಣುರ್ಯದ್ಧಾವದ್ವೃಷಣಂ ಮದಚ್ಯುತಂ ವಯೋ ನ ಸೀದನ್ನಧಿ ಬರ್ಹಿಷಿ ಪ್ರಿಯೇ ।**
(ಋ. ಸಂ. ೧-೮೫-೭)

ಇತ್ಯಾದಿ ಋಕ್ಕುಗಳಲ್ಲಿ ನಾಕಶಬ್ದಕ್ಕೆ ಸ್ವರ್ಗವೆಂದರ್ಥಮಾಡಿದೆ.

**ವೃಷೈವ ಕಪಿಲೋ ಭೂತ್ವಾ ಯನ್ನಾಕಮಧಿರೋಹತಿ ।**
(ಬೃ. ದೇ. ೨-೬೯)

ಎಂಬ ಬೃಹದ್ದೇವತಾ ವಾಕ್ಯದಲ್ಲಿ ಅಂತರಿಕ್ಷವೆಂದಿದೆ.

**ಇತೋಽಸಾವಾದಿತ್ಯೋ ದ್ವಾವಿಂಶೇನ ಪರವಮಾದಿತ್ಯಾಜ್ಜಯತಿ ತನ್ನಾಕಂ ತದ್ವಿಶೋಕಂ ।**
(ಛಾ. ಉ. ೨-೧೦-೫)

ಎಂಬ ಛಾಂದೋಗ್ಯೋಪನಿಷತ್ತಿನ ವಾಕ್ಯದಲ್ಲಿ ಶೋಕರಹಿತವಾದ ಸ್ವರ್ಗಲೋಕವು ಆದಿತ್ಯನ ಲೋಕಕ್ಕಿಂತ ಪರವಾದುದೆಂದು ಹೇಳಿದೆ.

ಶತಪಥಬ್ರಾಹ್ಮಣದಲ್ಲಿಯೂ ತೈತ್ತಿರೀಯ ಉಪನಿಷತ್ತಿನಲ್ಲಿಯೂ ಬ್ರಹ್ಮವಿತ್ತಾದ ಮುದ್ಗಲಪುತ್ರನಿಗೆ **ನಾಕ** ಎಂಬ ಹೆಸರು ಪ್ರಸಿದ್ಧವಾಗಿದೆ. ದುಃಖರಹಿತನೆಂದರ್ಥ.

ಯಜ್ಞೇನ ಯಜ್ಞಮಯಜಂತ ಎನ್ನುವಾಗ ಯಜ್ಞಶಬ್ದಕ್ಕೆ ಎರಡು ಮೂರು ಅರ್ಥಗಳು ಸಾಧ್ಯವೆಂದು ಸಾಯಣರು ತೋರಿಸಿದ್ದಾರೆ. ಮೊದಲನೆಯದಾಗಿ,

೧) **ಯಜ್ಞೇನ ನಿರ್ಮಂಥ್ಯಾಗ್ನಿನಾ ; ಯಜ್ಞಂ-ಹೋಮಸಾಧನಮಾಹವನೀಯಂ ಅಯಜಂತ ಪೂಜಿತವಂತಃ ।** ನಿರ್ಮಂಥ್ಯಾಗ್ನಿಯಿಂದ ಹೋಮಸಾಧನವಾದ ಆಹವನೀಯಾಗ್ನಿಯನ್ನು ಸಂಯೋಜಿಸಿ ಪೂಜಿಸಿದರು ಎಂದರ್ಥ. ಎರಡನೆಯದಾಗಿ,

೨) **ಯಜ್ಞೇನಾಗ್ನಿನಾ ಪಶುಭೂತೇನ ಯಜ್ಞಂ ಯಷ್ಟವ್ಯಮಗ್ನಿಮಯಜಂತ ಪೂಜಿತವಂತಃ ।** ಪಶುರೂಪವಾದ ಅಗ್ನಿಯಿಂದ ಯಜ್ಞಾಗ್ನಿ ಪೂಜಿಸಿದರು ಎಂದೂ ಮೂರನೆಯದಾಗಿ,

೩) **ಯಜ್ಞೇನ ಜ್ಞಾನಾದಿಯಜ್ಞೇನ ಯಜ್ಞಂ ವಿಷ್ಣುಮಯಜಂತ ।** ಜ್ಞಾನರೂಪವಾದ ಯಜ್ಞದಿಂದ ವಿಷ್ಣುರೂಪವಾದ ಯಜ್ಞವನ್ನು ಪೂಜಿಸಿದರು ಎಂದೂ ಅರ್ಥ. ಸಾಯಣರು ಈ ಮೂರು ಅರ್ಥಗಳಿಗೂ ಶ್ರುತಿವಾಕ್ಯಗಳನ್ನು ದಹರಿಸಿ ತಮ್ಮ ಅರ್ಥಗಳನ್ನು ಸಮರ್ಥಿಸಿದ್ದಾರೆ.

ಈ ಮೂರರಲ್ಲಿ ಮೊದಲನೆಯ ಅರ್ಥದ ಸಮರ್ಥನೆಗೆ ಸಾಯಣರು ಕೆಳಗಿನ ತೈತ್ತಿರೀಯಸಂಹಿತಾವಾಕ್ಯವನ್ನು ದಹರಿಸಿ ವಿವರಿಸಿದ್ದಾರೆ.

> **ಅಗ್ನಿಶ್ಚ ವಾ ಏತೌ ಸೋಮಶ್ಚ ಕಥಾ ಸೋಮಾಯಾತಿಥ್ಯಂ ಕ್ರಿಯತೇ ನಾಗ್ನಯ ಇತಿ ಯದಗ್ನಾವಗ್ನಿಂ ಮಥಿತ್ವಾ ಪ್ರಹರತಿ ತೇನೈವಾಗ್ನಯ ಆತಿಥ್ಯಂ ಕ್ರಿಯತೇಽಥೋ ಖಲ್ವಾಹುರಗ್ನಿಸ್ಸರ್ವಾ ದೇವತಾ ಇತಿ ಯದ್ಧವಿರಾಸಾದ್ಯಾಗ್ನಿಂ ಮಂಥತಿ ಹವ್ಯಾಯೈವಾಸನ್ನಾಯ ಸರ್ವಾ ದೇವತಾ ಜನಯತಿ ॥** (ತೈ. ಸಂ. ೬-೨-೧-೬)

ದೇವತೆಗಳಿಗೂ ಅಸುರರಿಗೂ ವೈಷಮ್ಯವು ಪ್ರಾಪ್ತವಾದಾಗ ಅಸುರರನ್ನು ಓಡಿಸಲು ಮಾಡಿದ ಪ್ರಯತ್ನದಲ್ಲಿ ನೆರವೇರಿಸಿದ ಯಜ್ಞವಿಧಾನವನ್ನು ಈ ಪ್ರಕರಣದಲ್ಲಿ ಹೇಳಿದೆ. ಆ ಸಂದರ್ಭದಲ್ಲಿ, ಯಜ್ಞಕ್ಕೆ ಪಾದಗಳಂತಿರುವ **ಅಗ್ನಿ, ಸೋಮ** ಎಂಬ ದೇವತೆಗಳು ಪಡೆಯುವ ಆತಿಥ್ಯದ ಸ್ವರೂಪವನ್ನು ಮೇಲಿನ ಸಂಹಿತಾವಾಕ್ಯಗಳಲ್ಲಿ ವರ್ಣಿಸಿದೆ. ಅದರಲ್ಲಿ ಪ್ರಥಮತಃ ಒಂದು ಶಂಕೆಯು ಸೂಚಿತವಾಗಿದೆ. ಸ್ಥೂಲವಾಗಿ ನೋಡುವುದಕ್ಕೆ ಈ ಸಂದರ್ಭದಲ್ಲಿ ಸೋಮನಿಗೆ ಮಾತ್ರ ಆತಿಥ್ಯವನ್ನರ್ಪಿಸುವಂತೆಯೂ, ಅಗ್ನಿಗೆ ಆ ಆತಿಥ್ಯಲಾಭವಿಲ್ಲದಿರುವಂತೆಯೂ ತಿಳಿಯುತ್ತದೆ. ಇಬ್ಬರೂ ಒಂದೇ ವಿಧವಾದ ಪೂಜೆಗೆ ಅರ್ಹರಾಗಿರುವಾಗ ಸೋಮನಿಗೆ ಲಭಿಸಿದ ಆತಿಥ್ಯವು ಅಗ್ನಿಗೆ ಏತಕ್ಕಾಗಿ ಲಭಿಸಲಿಲ್ಲ ಎಂಬ ಪ್ರಶ್ನೆಯು ಸಂಭವಿಸಿದಾಗ ಅದಕ್ಕೆ ಉತ್ತರವಾಗಿ "**ಅಗ್ನಿಂ ಮಥಿತ್ವಾ ಪ್ರಹರತಿ ತೇನೈವಾಗ್ನಯ ಆತಿಥ್ಯಂ**" ಅಗ್ನಿಮಂಥನವನ್ನು ಮಾಡಿ ಅಗ್ನಿಯನ್ನು ಅದರಮೇಲೆ ಸ್ಥಾಪಿಸುವುದರಿಂದಲೇ ಅಗ್ನಿಗೆ ಪೂರ್ಣವಾಗಿ ಆತಿಥ್ಯವನ್ನು ಅರ್ಪಿಸಿದಂತಾಯಿತು, ಅದೂ ಅಲ್ಲದೇ ಅಗ್ನಿಯೇ ಸಕಲದೇವತೆಗಳೂ ಆದುದರಿಂದ ಅಗ್ನಿಯನ್ನು ಮಂಥನಮಾಡಿ ಅಗ್ನಿಯಲ್ಲಿ ಆಹುತ್ಯರ್ಪಣವನ್ನು ಮಾಡುವುದರಿಂದ ಸಕಲ ದೇವತೆಗಳಿಗೂ ಸಹ ಪೂಜೆಯನ್ನು ಸಲ್ಲಿಸದಂತೆ ಎಂದು ಸಮಾಧಾನವನ್ನು ಹೇಳಿದೆ. "**ಯಜ್ಞೇನ ಯಜ್ಞಮಯಜಂತ**" ಎಂಬುದರಲ್ಲಿ ಈ ಭಾವವು ಸೂಚಿತವಾಗಿವೆಯೆಂದು ಅರ್ಥ. ಅಗ್ನಿಮಂಥನವನ್ನು ಮಾಡಿ ಅಗ್ನಿಯಲ್ಲಿ ಆಹುತಿಯನ್ನರ್ಪಿಸುವುದರಿಂದ ಸಕಲದೇವತಾ ಪೂಜೆಯೂ ನೆರವೇರಿದಂತಾಗುವುದರಿಂದ ಈ ಯಜನವನ್ನು "**ತಾನಿ ಧರ್ಮಾಣಿ ಪ್ರಥಮಾನ್ಯಾಸನ್**" ಈ ಕರ್ಮಗಳು ಅತ್ಯಂತಶ್ರೇಷ್ಠವಾದುದೂ, ಫಲಗಳನ್ನು ಕೊಡತಕ್ಕದ್ದೂ ಆದವೆಂದು ಪ್ರಶಂಸಿಸಿದೆ.

**ಪ್ರಥಮಾನಿ—ಪ್ರಥಮ ಇತಿ ಮುಖ್ಯನಾಮ । ಪ್ರತಮಾನಿ ಪ್ರಕೃಷ್ಟತಮಾನಿ । ಅತ್ಯಂತ ಶ್ರೇಷ್ಠವಾದ ಧರ್ಮಗಳು ಎಂದರ್ಥ.** ನಿರುಕ್ತಕಾರರು,

**ದೇವಾನಾಂ ಮಾನೇ ಪ್ರಥಮಾ ಅತಿಷ್ಠನ್ ಕೃಂತತ್ರಾದೇಷಾಮುಪರಾ ಉದಾಯನ್ ।**
**ತ್ರಯಸ್ತಪಂತಿ ಪೃಥಿವೀಮನೂಪಾ ದ್ವಾ ಬೃಬೂಕಂ ವಹತಃ ಪುರೀಷಂ ॥**

(ಋ. ಸಂ. ೧೦-೨೭-೨೩)

**ಅಲ್ಲಿ ಪ್ರಥಮಶಬ್ದಕ್ಕೆ ಪ್ರಥಮ ಇತಿ ಮುಖ್ಯನಾಮ । ಪ್ರತಮೋ ಭವತಿ** (ನಿ. ೨-೨೪) ಎಂದು ವಿವರಿಸಿರುವುದನ್ನು ಉದಹರಿಸಿ ಪ್ರಕೃತವಾದ ಋಕ್ಕಿನಲ್ಲಿಯೂ ಅದೇ ಅರ್ಥವೆಂದು ಸಾಯಣರು ತಿಳಿಸಿದ್ದಾರೆ.

೨) ಎರಡನೆಯದಾಗಿ, **ಯಜ್ಞೇನಾಗ್ನಿನಾ ಪಶುಭೂತೇನ ಯಜ್ಞಂ ಯಷ್ಟವ್ಯಮಗ್ನಿಮ ಯಜಂತ ।** ಪಶುಭೂತವಾದ ಅಗ್ನಿಯಿಂದ ಆಗ್ನಿರೂಪವಾದ ಯಜ್ಞವನ್ನು ಪೂಜಿಸಿದರು ಎಂದಿದೆ. ನಿರುಕ್ತಕಾರರ ವಿವರಣೆಯು ಈ ಎರಡನೆಯ ಅರ್ಥವನ್ನು ಸಮರ್ಥಿಸುತ್ತದೆ.

**ಯಜ್ಞೇನ ಯಜ್ಞಮಯಜಂತ ದೇವಾಃ । ಅಗ್ನಿನಾಗ್ನಿಮಯಜಂತ ದೇವಾಃ । 'ಅಗ್ನಿಃ ಪಶುರಾಸೀತ್ತಮಾಲಭಂತ ತೇನಾಯಜಂತ' ಇತಿ ಚ ಬ್ರಾಹ್ಮಣಂ ॥** (ನಿ. ೧೨-೪೧)

ದೇವತೆಗಳು ಯಜ್ಞಾದಿಕರ್ಮಗಳಿಂದ ಯಜ್ಞವನ್ನು ಸೇವಿಸಿದರು. ಎಂದರೆ, ದೇವತೆಗಳು ಅಗ್ನಿಮಂಥನದಿಂದ ಅಗ್ನಿಯನ್ನು ಪೂಜಿಸಿದರು ಎಂಬುದು ಒಂದು ವಿಧ ಅಥವಾ ಪಶುವಾಗಿದ್ದ ಅಗ್ನಿಯನ್ನು ಕರತಂದು ಆ ಪಶುವನ್ನು ಅರ್ಪಿಸಿ ಯಜ್ಞವನ್ನು ಸೇವಿಸಿದರು ಎಂದೂ ಆಗಬಹುದು. ಅಗ್ನಿಯು ಪಶುರೂಪನಾಗಿದ್ದನು ಎಂಬುದರ ಅರ್ಥವೇನು? ಇದಕ್ಕೆ ಆಧಾರವೇನು ಎಂದರೆ, ನಿರುಕ್ತಕಾರರು ಐತರೇಯಬ್ರಾಹ್ಮಣದ ವಾಕ್ಯವನ್ನುದಹರಿಸಿ ಈ ಅರ್ಥವನ್ನು ಹೇಳಿದ್ದಾರೆ. ಐತರೇಯಬ್ರಾಹ್ಮಣದಲ್ಲಿ ಈ ವಿಷಯವನ್ನು ಕೆಳಗೆ ಉದಹರಿಸಿರುವ ವಾಕ್ಯಗಳಲ್ಲಿ ತಿಳಿಸಿದೆ.

**ಅಗ್ನಿಂ ಮಂಥಂತಿ ಸೋಮೇ ರಾಜನ್ಯಾಗತೇ ತದ್ಯಥೈವಾದೋ ಮನುಷ್ಯರಾಜ ಆಗತೇಽನ್ಯಸ್ಮಿನ್ ವಾರ್ಹತ್ಯುಕ್ಷಾಣಂ ವಾ ವೇಹತಂ ವಾ ಕ್ಷದಂತ ಏವಮೇವಾಸ್ಮಾ ಏತತ್ಕ್ಷದಂತಂ ಯದಗ್ನಿಂ ಮಂಥಂತ್ಯಗ್ನಿರ್ಹಿ ದೇವಾನಾಂ ಪಶುಃ ॥** (ಐ. ಬ್ರಾ. ೧-೧೫)

ಸೋಮರಾಜನು ಅತಿಥಿಯಾಗಿ ಬಂದಾಗ ಅಗ್ನಿಯನ್ನು ಮಥನಮಾಡಿದನು. ಇದು ಸಹಜವಾದುದು. ಯಾವ ರೀತಿ ಮಾನವರು ತಮ್ಮ ರಾಜನು ತಮ್ಮ ಮನೆಗೆ ಅತಿಥಿಯಾಗಿ ಬಂದಾಗ ವೃಷಭಾದಿಗಳನ್ನು ಅರ್ಪಿಸಿ ಅತಿಥಿಸತ್ಕಾರವನ್ನು ಮಾಡುವರೋ ಅದರಂತೆಯೇ ದೇವತೆಗಳೂ ಸಹ ಅಗ್ನಿರೂಪವಾದ ಪಶುವನ್ನು ಅರ್ಪಿಸಿ ಸೋಮರಾಜನನ್ನು ಸತ್ಕರಿಸಿದರು. ಅಗ್ನಿಯು ದೇವತೆಗಳ ಪಶುವೆಂಬುದು ಪ್ರಸಿದ್ಧವಾದ ವಿಷಯವಾಗಿದೆ. ಅಗ್ನಿಗೆ ಯಜ್ಞಪಶುವೆಂಬ ಹೆಸರು ಏತಕ್ಕೆ ಬಂದಿತು, ಹೇಗೆ ಪ್ರಸಿದ್ಧವಾಯಿತು ಎಂದು ತಿಳಿಸುವ ಸನ್ನಿವೇಶವನ್ನು ಶತಪಥಬ್ರಾಹ್ಮಣದಲ್ಲಿ ಈರೀತಿ ತಿಳಿಸಿದೆ.

**ಪ್ರಜಾಪತಿರಗ್ನಿರೂಪಾಣ್ಯಭ್ಯಧ್ಯಾಯತ್ । ಸ ಯೋಽಯಂ ಕುಮಾರೋ ರೂಪಾಣ್ಯನುಪ್ರವಿಷ್ಟ ಆಸೀತ್ತಮನ್ವೈಚ್ಛತ್ಸೋಽಗ್ನಿರವೇದನು ವೈ ಮಾ ಪಿತಾ ಪ್ರಜಾಪತಿರಿಚ್ಛತಿ ಹಂತ ತದ್ರೂಪಮಸಾನಿ ಯನ್ಮ ಏಷ ನ ವೇದೇತಿ ॥** (ಶ. ಬ್ರಾ. ೬-೨-೧-೧)

ಪ್ರಜಾಪತಿಯು ಅಗ್ನಿಯ ರೂಪಗಳನ್ನು ಕುರಿತು ಧ್ಯಾನಮಾಡಿದನು. ಬೇರೆಬೇರೆ ರೂಪಗಳಲ್ಲಿ ಪ್ರವೇಶಿಸಿರುವ ಕುಮಾರನನ್ನು ಹುಡುಕಿದನು. ಆಗ ಅಗ್ನಿಗೆ ಈ ಅನ್ವೇಷಣವು ತಿಳಿಯಿತು. ಆಗ ಅವನು "ಪ್ರಜಾಪತಿಯು ನನ್ನನ್ನೇ ಹುಡುಕುತ್ತಿದ್ದಾನೆ. ನಾನು ಅವನಿಗೆ ತಿಳಿಯದಂತಾಗುತ್ತೇನೆ" ಎಂದುಕೊಂಡನು.

**ಸ ಏತಾನ್ಪಂಚ ಪಶೂನಪಶ್ಯತ್ । ಪುರುಷಮಶ್ವಂ ಗಾಮವಿಮಜಂ ಯದಪಶ್ಯತ್ತಸ್ಮಾ-ದೇತೇ ಪಶವಃ ॥** (ಶ. ಬ್ರಾ. ೬-೨-೧-೨)

ಆಗ ಪುರುಷನನ್ನೂ, ಅಶ್ವವನ್ನೂ, ಗೋವನ್ನೂ, ಮೇಷವನ್ನೂ, ಅಜವನ್ನೂ ನೋಡಿದನು. ಅಗ್ನಿಯು ಅವುಗಳನ್ನು ನೋಡಿದುದರಿಂದ (ಅಪಶ್ಯತ್–ಪಶ್) ಅವುಗಳಿಗೆ ಪಶುಗಳೆಂಬ ಪರ್ಯಾಯನಾಮವು ಪ್ರಸಿದ್ಧವಾಯಿತು.

**ಸ ಏತಾನ್ಪಂಚ ಪಶೂನ್ಪ್ರಾವಿಶತ್ । ಸ ಏತೇ ಪಂಚ ಪಶವೋಽಭವತ್ತಮು ಹೈ ಪ್ರಜಾ-ಪತಿರನ್ವೇಷೈಚ್ಛತ್ ॥** (ಶ. ಬ್ರಾ. ೬-೨-೧-೩)

ಅಗ್ನಿಯು ಆ ಐದು ಪಶುಗಳಲ್ಲಿಯೂ ಪ್ರವೇಶಿಸಿದನು. ಅವುಗಳ ತಾದಾತ್ಮ್ಯವನ್ನೇ ಪಡೆದನು. ಆದರೂ ಸಹ ಪ್ರಜಾಪತಿಯು ಅಗ್ನಿಯನ್ನು ಹುಡುಕುತ್ತಲೇ ಇದ್ದನು.

**ಸ ಏತಾನ್ಪಂಚ ಪಶೂನಪಶ್ಯತ್ । ಯದಪಶ್ಯತ್ತಸ್ಮಾದೇತೇ ಪಶವಸ್ತೇಷ್ವೇತಮಪಶ್ಯ-ತ್ತಸ್ಮಾದ್ವೇವೈತೇ ಪಶವಃ ॥** (ಶ. ಬ್ರಾ. ೬-೨-೧-೪)

ಪ್ರಜಾಪತಿಯೂ ಸಹ ಆ ಐದು ಪಶುಗಳನ್ನೂ ನೋಡಿದನು. ಅವನು ದರ್ಶನಮಾಡಿದ್ದರಿಂದಾಗಲಿ (ಪಶ್) ಅಥವಾ ಅವುಗಳಲ್ಲಿ ಅಗ್ನಿಯನ್ನು ದರ್ಶನಮಾಡಿದ್ದರಿಂದಾಗಲಿ (ಪಶ್) ಅವುಗಳಿಗೆ ಪಶುಗಳೆಂಬ ಹೆಸರು ಪ್ರಸಿದ್ಧವಾಯಿತು. ಆಗ ಪ್ರಜಾಪತಿಯು ಈ ರೀತಿಯಾಗಿ ಆಲೋಚಿಸಿದನು.

**ಸ ಐಕ್ಷತ । ಇಮೇ ವಾ ಅಗ್ನಿರಿಮಾನೇವಾತ್ಮಾನಮಭಿಸಂಸ್ಕರವೈ ಯಥಾ ವಾ ಅಗ್ನಿಃ ಸಮಿದ್ಧೋ ದೀಪ್ಯತ ಏವಮೇಷಾಂ ಚಕ್ಷುರ್ದೀಪ್ಯತೇ ಯಥಾಗ್ನೇರ್ಧೂಮ ಉದಯತ ಏವ-ಮೇಷಾಮೂಷ್ಮೋದಯತೇ ಯಥಾಗ್ನಿರಭ್ಯಾಹಿತಂ ದಹತ್ಯೇವಂ ಬಪ್ಸತಿ ಯಥಾಗ್ನೇರ್ಭಸ್ಮ ಸೀದತ್ಯೇವಮೇಷಾಂ ಪುರೀಷಗ್ಂ ಸೀದತೀಮೇ ವಾ ಅಗ್ನಿರಿಮಾನೇವಾತ್ಮಾನಭಿಸಂಸ್ಕರವಾ ಇತಿ ತಾನ್ನಾನಾ ದೇವತಾಭ್ಯ ಆಲಿಪ್ಸತ ವೈಶ್ವಕರ್ಮಣಂ ಪುರುಷಂ ವಾರುಣಮಶ್ವಮೈಂದ್ರ-ಮೃಷಭಂ ತ್ವಾಷ್ಟ್ರಮವಿಮಾಗ್ನೇಯಮಜಂ ॥** (ಶ. ಬ್ರಾ. ೬-೨-೧-೫)

"ಇವೇ ಅಗ್ನಿಗಳು. ಇವನ್ನು ನನ್ನ ಆತ್ಮದಲ್ಲಿ ಐಕ್ಯಮಾಡುತ್ತೇನೆ. ಪ್ರಜ್ವಲಿತನಾದ ಅಗ್ನಿಯು ಯಾವ ರೀತಿ ಪ್ರಕಾಶಿಸುತ್ತಾನೆಯೋ, ಈ ಪಶುಗಳ ಕಣ್ಣುಗಳೂ ಅದೇರೀತಿ ಪ್ರಕಾಶಿಸುತ್ತಿವೆ. ಅಗ್ನಿಯಿಂದ ಧೂಮವು ಹೇಗೆ ಊರ್ಧ್ವಮುಖವಾಗಿ ಹೊರಡುವುದೋ ಅದೇರೀತಿ ಇವುಗಳ ಮುಖಗಳಿಂದಲೂ ಧೂಮವು (ಉಸಿರು) ಊರ್ಧ್ವಮುಖವಾಗಿ ಹೊರಡುತ್ತಿದೆ. ಅಗ್ನಿಯೊಳಕ್ಕೆ ಅರ್ಪಿಸಿದ ಆಹುತಿಗಳನ್ನು ಅಗ್ನಿಯು ಯಾವರೀತಿ ಭಕ್ಷಿಸುತ್ತಾನೋ ಅದರಂತೆ ಈ ಪಶುಗಳೂ ಸಹ ತಮ್ಮ ಬಾಯಲ್ಲಿ ಹಾಕಿದ ಸಕಲ ವಸ್ತುಗಳನ್ನೂ ನುಂಗುತ್ತವೆ. ಅಗ್ನಿಯ ಭಸ್ಮವು ಕೆಳಕ್ಕೆ ಬೀಳುವಂತೆ ಈ ಪಶುಗಳ ಪುರೀಷವೂ ಕೆಳಕ್ಕೆ ಬೀಳುತ್ತವೆ. ಆದುದರಿಂದ ಇವುಗಳೇ ಅಗ್ನಿಯ ರೂಪಾಂತರಗಳು. ಆದುದರಿಂದ ಇವನ್ನು ನನ್ನಲ್ಲೇ ಐಕ್ಯಮಾಡಿಕೊಳ್ಳುತ್ತೇನೆ"

ಎಂದು ಯೋಚಿಸಿ ಅವುಗಳನ್ನು ಬೇರೆ ಬೇರೆ ದೇವತೆಗಳಿಗೆ ಆಹುತಿಗಳನ್ನಾಗಿ ಅರ್ಪಿಸಲು ಮನಸುಮಾಡಿದನು. ಪುರುಷನನ್ನು ವಿಶ್ವಕರ್ಮನಿಗೂ, ಅಶ್ವವನ್ನು ವರುಣನಿಗೂ, ವೃಷಭವನ್ನು ಇಂದ್ರನಿಗೂ, ಮೇಷವನ್ನು ತ್ವಷ್ಟೃವಿಗೂ, ಅಜವನ್ನು ಅಗ್ನಿಗೂ ವಿಭಾಗಮಾಡಿದನು. ಆಮೇಲೆ ಪುನಃ ಹೀಗೆ ಯೋಚಿಸಿದನು.

**ಸ ಐಕ್ಷತ । ನಾನಾ ವಾ ಇದಂ ದೇವತಾಭ್ಯ ಆಲಿಪ್ಸೇಽಗ್ನೇರ್ವಹಗ್ಂ ರೂಪಾಣಿ ಕಾಮಯೇ ಹಂತೈನಾನಗ್ನಿಭ್ಯಃ ಕಾಮಾಯಾಲಭಾ ಇತಿ ತಾನಗ್ನಿಭ್ಯಃ ಕಾಮಾಯಾಲಭತ ತದ್ಯದಗ್ನಿಭ್ಯ ಇತಿ ಬಹೂನಿ ಹ್ಯಗ್ನಿರೂಪಾಣ್ಯಭ್ಯಧ್ಯಾಯದಥ ಯತ್ಕಾಮಾಯೇತಿ ಕಾಮೇನ ಹ್ಯಾಲಭತ ತಾನಾಪ್ರೀತಾನ್ಪರ್ಯಗ್ನಿಕೃತಾನುದೀಚೋ ನೀತ್ವಾ ಸಮಜ್ಞಪಯತ್ ।**

(ಶ. ಬ್ರಾ. ೬-೨-೧-೬)

"ಇವುಗಳನ್ನು ಪ್ರತ್ಯೇಕವಾಗಿ ಬೇರೆಬೇರೆ ದೇವತೆಗಳಿಗೆ ಆರ್ಪಿಸಲು ಮನಸ್ಸುಮಾಡಿದೆನು. ಆದರೆ ನಾನೇ ಸ್ವತಃ ಅಗ್ನಿಯ ರೂಪವನ್ನು ಇಚ್ಛಿಸುತ್ತೇನೆ. ಆ ಇಚ್ಛೆಯು ನೆರವೇರುವಂತೆ ಇವುಗಳನ್ನು ಅಗ್ನಿಯ ರೂಪಾಂತರಗಳಿಗಾಗಿ ಆಹುತಿ ರೂಪದಿಂದ ಅರ್ಪಿಸುತ್ತೇನೆ" ಎಂದು ಸಂಕಲ್ಪಿಸಿ ಹಾಗೆಯೇ ಮಾಡಿದನು. ಅಗ್ನಿಯ ರೂಪಗಳು ಬಹಳವಾಗಿದ್ದವು. ಅವನ ಇಚ್ಛೆಗನುಗುಣವಾಗಿ ಅವುಗಳನ್ನು ಉತ್ತರದಿಕ್ಕಿಗೆ ಕರೆದುಕೊಂಡು ಹೋಗಿ ಅವುಗಳನ್ನು ಆಹುತಿಯಾಗರ್ಪಿಸಿದನು.

**ತ ಏತೇ ಸರ್ವೇ ಪಶವೋ ಯದಗ್ನಿಃ । ತಸ್ಮಾದಗ್ನೌ ಪಶವೋ ರಮಂತೇ ಪಶುಭಿರೇವ ತತ್ಪಶವೋ ರಮಂತೇ ತಸ್ಮಾದ್ಯಸ್ಯ ಪಶವೋ ಭವಂತಿ ತಸ್ಮಿನ್ನಗ್ನಿರಾಧೀಯತೇಽಗ್ನಿರ್ಹ್ಯೇಷ ಯತ್ಪಶವಸ್ತತೋ ವೈ ಪ್ರಜಾಪತಿರಗ್ನಿರಭವತ್ ॥** (ಶ. ಬ್ರಾ. ೬-೨-೧-೧೨)

ಅಗ್ನಿಯೇ ಈ ಆಹುತಿಪಶುಗಳಾಗಿರುವುದರಿಂದ ಪಶುಗಳೆಲ್ಲವೂ ಅಗ್ನಿಯ ಹತ್ತಿರವಿರಲು ಸಂತೋಷಪಡುತ್ತವೆ ಒಂದು ಪಶುವು ಇನ್ನೊಂದು ಪಶುವಿನೊಂದಿಗೆ ಕ್ರೀಡಿಸುತ್ತದೆ. ಆದುದರಿಂದಲೇ ಪಶುಸಂಪತ್ತಿನಿಂದ ಕೂಡಿದವನ ಹತ್ತಿರ ಅಗ್ನಿಯು ಅಧೀನವಾಗಿರುತ್ತದೆ. ಅಗ್ನಿಯೇ ಆ ಪಶುವಾದುದರಿಂದ ಪ್ರಜಾಪತಿಯೂ ಅಗ್ನಿರೂಪವನ್ನು ಪಡೆದನು.

**ಯಜ್ಞಮಯಜಂತ ದೇವಾಃ**– ಎಂಬುದಕ್ಕೆ ಸಾಯಣರು **ಅಗ್ನೇರೇವ ಮೂರ್ತಿಭೇದೇನ ದೇವತ್ವಂ ಚ ಪಶುತ್ವಂ ಚ ದ್ರಷ್ಟವ್ಯಂ** । ಮೂರ್ತಿಭೇದದಿಂದ ಅಗ್ನಿಗೇ ದೇವತ್ವವೂ, ಪಶುತ್ವವೂ ಇರುವುದೆಂದೂ ತಿಳಿಸಿದ್ದಾರೆ. ದೇವಾಃ ಎಂದರೆ ಯಜಮಾನರೆಂದೂ ಆಗಬಹುದು ಅಥವಾ ದೇವತೆಗಳೆಂದಾದರೂ ಆಗಬಹುದು.

೩) ಮೂರನೆಯದಾಗಿ, **ಯಜ್ಞೇನ ಯಜ್ಞಮಯಜಂತ** ಎನ್ನುವುದಕ್ಕೆ **ಯಜ್ಞೇನ ಜ್ಞಾನಾದಿ ಯಜ್ಞೇನ ಯಜ್ಞಂ ವಿಷ್ಣುಮಯಜಂತ** । ಯಜ್ಞರೂಪನಾದ ವಿಷ್ಣುವನ್ನು ಪೂಜಿಸಿದರು ಎಂದರ್ಥಮಾಡಿದೆ.

ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।
ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥ (ಭಗವದ್ಗೀತಾ ೪-೨೮)

ಎಂದು ಯಜ್ಞದಲ್ಲಿ ಅನೇಕ ಬಗೆಗಳನ್ನು ಹೇಳಿದೆ. ಅದರಲ್ಲಿ ಜ್ಞಾನಯಜ್ಞವೂ ಒಂದಾಗಿದೆ. **ಜ್ಞಾನಂ ಶಾಸ್ತ್ರಾರ್ಥಪರಿಜ್ಞಾನಂ ಯಜ್ಞಃ ಯೇಷಾಂ ತೇ ಜ್ಞಾನಯಜ್ಞಾಃ** (ಶಾಂಕರಭಾಷ್ಯ) ಶಾಸ್ತ್ರಾರ್ಥಪರಿಜ್ಞಾನರೂಪವಾದ ಯಜ್ಞವುಳ್ಳವರು ಯಾರೋ ಅವರನ್ನು ಜ್ಞಾನಯಜ್ಞರೆಂದು ಕರೆದಿದೆ.

**ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ।**
**ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮ ಸನಾತನಂ ।**
**ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥** (ಭಗವದ್ಗೀತಾ ೪. ೩೦-೩೧)

ಎಲ್ಲಾ ವಿಧವಾದ ಯಜ್ಞಗಳನ್ನೂ ತಿಳಿದವರು ಯಜ್ಞದಿಂದಲೇ ಅವರ ದೋಷಗಳನ್ನು ನಾಶಮಾಡಿಕೊಂಡು ಶಾಶ್ವತವಾದ ಬ್ರಹ್ಮಲೋಕವನ್ನು ಪಡೆಯುತ್ತಾರೆ. ಯಜ್ಞರಹಿತನಾದವನಿಗೆ ಇಹದಲ್ಲಿಯೇ ಉತ್ತಮವಾದ ಸ್ಥಾನವಿರುವುದಿಲ್ಲ. ಇನ್ನು ಬ್ರಹ್ಮಲೋಕದ ಪ್ರಾಪ್ತಿಯಲ್ಲಿ ಎಂದು ಯಜ್ಞದ ಮಹತ್ತ್ವವನ್ನು ಸ್ತುತಿಸಿದೆ.

**ಏವಂ ಬಹುವಿಧಾ ಯಜ್ಞಾ ವಿತತಾ ಬ್ರಾಹ್ಮಣೋ ಮುಖೇ ।**
**ಕರ್ಮಜಾನ್ವಿದ್ಧಿ ತಾನ್ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥** (ಭಗವದ್ಗೀತಾ ೪-೩೨)

ಈರೀತಿ ನಾನಾವಿಧವಾದ ಯಜ್ಞಗಳು ಬ್ರಹ್ಮನ ಮುಖದಿಂದ ವಿಸ್ತೃತವಾಗಿವೆ. [ಇಲ್ಲಿ ಬ್ರಹ್ಮಶಬ್ದಕ್ಕೆ ಪರಬ್ರಹ್ಮನೆಂದಾದರೂ ಅರ್ಥವಾಗಬಹುದು; ಅಥವಾ ಪರಬ್ರಹ್ಮತತ್ತ್ವವನ್ನು ಪ್ರತಿಪಾದಿಸುವ ವೇದವೆಂದಾದರೂ ಅರ್ಥವಾಗಬಹುದು.] ಇವುಗಳೆಲ್ಲವೂ ಕಾಯಿಕ, ವಾಚಿಕ, ಮಾನಸಿಕಕರ್ಮೋದ್ಭವಗಳೆಂದು ತಿಳಿಯಬೇಕು. ಇವುಗಳ ಸ್ವರೂಪವನ್ನು ಅರಿತವನಿಗೆ ಮೋಕ್ಷವು ಲಭಿಸುತ್ತದೆ. ಈ ವಿಧವಾಗಿ ಯಜ್ಞದಲ್ಲಿ ಪ್ರಭೇದಗಳಿದ್ದರೂ ಸಹ,

**ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ ।**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥** (೪-೩೩)

ದ್ರವ್ಯಮಯವಾದ ಯಜ್ಞಕ್ಕಿಂತಲೂ ಜ್ಞಾನಯಜ್ಞವು ಅತ್ಯುತ್ತಮವಾದದ್ದು. ಸಕಲ ಕರ್ಮಗಳೂ ಜ್ಞಾನದಲ್ಲಿಯೇ ಪರಿಸಮಾಪ್ತಿಯನ್ನು ಪಡೆಯುತ್ತವೆ ಇತ್ಯಾದಿಯಾಗಿ ಜ್ಞಾನಯಜ್ಞದ ವೈಶಿಷ್ಟ್ಯವನ್ನು ನಾನಾಕಡೆಗಳಲ್ಲಿ ಪ್ರಶಂಸಿಸಿದೆ. ಇಂತಹ ಜ್ಞಾನಾತ್ಮಕವಾದ ಯಜ್ಞದಿಂದ **ಯಜ್ಞಂ** ಅಯಜಂತ ಎನ್ನುವಾಗ, ಎರಡನೆಯ ಯಜ್ಞಶಬ್ದಕ್ಕೆ ವಿಷ್ಣುವೆಂದಾಗಲಿ ಅಥವಾ ಪ್ರಜಾಪತಿಯೆಂದಾಗಲಿ ಅರ್ಥವನ್ನು ಹೇಳಬಹುದು. **ಯಜ್ಞೋ ವಿಷ್ಣುಃ ಪ್ರಜಾಪತಿಃ "** (ಮೈತ್ರ್ಯುಪನಿಷತ್ ೬-೧೬) ಇತ್ಯಾದಿವಾಕ್ಯಗಳಿಂದ ಯಜ್ಞಕ್ಕೂ ವಿಷ್ಣುವಿಗೂ ಮತ್ತು ಯಜ್ಞಕ್ಕೂ ಪ್ರಜಾಪತಿಗೂ ತಾದಾತ್ಮ್ಯವನ್ನೇ ಹೇಳಿದೆ. ಆದುದರಿಂದ ಜ್ಞಾನಯಜ್ಞದಿಂದ ವಿಷ್ಣುವನ್ನು ಪೂಜಿಸಿ ಸಾಧ್ಯರು ವಿಷ್ಣುಲೋಕವನ್ನು ಹೊಂದಿದರು ಎಂದು ತಾತ್ಪರ್ಯ. ಪವಿತ್ರವಾದ ಈ ನಾಕದಲ್ಲಿ ಹಿಂದೆ ಯಜ್ಞದಿಂದ ಯಜ್ಞವನ್ನು ಆರಾಧಿಸಿದ ಸಾಧ್ಯಾದಿಗಳೆಲ್ಲರೂ ತಮ್ಮ ತಮ್ಮ ಸ್ಥಾನಗಳನ್ನು ಪಡೆದಿರುತ್ತಾರೆಂದರ್ಥ.

**ಸಾಧ್ಯಾಃ**—ಈ ಪದವನ್ನು ರಶ್ಮಿನಾಮಗಳಲ್ಲಿ ಪಠಿಸಿದೆ. (ನಿ. ೨-೧೫) ಮತ್ತು ಇದೇ ಋಕ್ಕನ್ನು ವಿವರಿಸುವಾಗ ಮುಂದೆ **ದ್ಯುಸ್ಥಾನೋ ದೇವಗಣ ಇತಿ ನೈರುಕ್ತಾಃ । ಪೂರ್ವಂ ದೇವಯುಗಮಿತ್ಯಾಖ್ಯಾನಂ ।** ನಿರುಕ್ತಕಾರರ ಮತದಂತೆ ದ್ಯುಲೋಕದ ದೇವತೆಗಳೆಂದರ್ಥ. ಅಥವಾ ದೇವತೆಗಳಲ್ಲಿ ಪ್ರಥಮರು ಎಂಬುದು ಸಾಂಪ್ರದಾಯಿಕವಾದ ಮತವೆಂದು ಯಾಸ್ಕರು ತಿಳಿಸಿದ್ದಾರೆ. (ನಿ. ೧೨-೪೧) ಸಾಧ್ಯರ ಸ್ವರೂಪವನ್ನು ಒಂದೊಂದುಕಡೆ ಒಂದೊಂದು ವಿಧವಾಗಿ ತಿಳಿಸಿದೆ. ಉದಾಹರಣೆಗೆ ಐತರೇಯಬ್ರಾಹ್ಮಣದಲ್ಲಿ ಇದೇ ಭಾಗವನ್ನು ವಿವರಿಸುತ್ತಾ,

**ಛಂದಾಂಸಿ ವೈ ಸಾಧ್ಯಾ ದೇವಾಸ್ತೇಽಗ್ರೇಽಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಕಮಾಯನ್ ॥ ಆದಿತ್ಯಾಶ್ಚೈವೇಹಾಸನ್ನಂಗಿರಸಶ್ಚ ತೇಽಗ್ರೇಽಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಕಮಾಯನ್ ।** (ಐ. ಬ್ರಾ. ೧-೧೬)

ಛಂದಸ್ಸುಗಳೇ ಸಾಧ್ಯರು ಅವರು ಪೂರ್ವದಲ್ಲಿ ಅಗ್ನಿಯಿಂದ (ಅಗ್ನಿಮಥನದಿಂದ) ಅಗ್ನಿಯಿಂದ ಪೂಜಿಸಿದರು. ಅದರ ಫಲವಾಗಿ ಸ್ವರ್ಗಲೋಕವನ್ನು ಪಡೆದರು. ಹಾಗೆಯೇ ಆದಿತ್ಯರು ಅಂಗಿರಸ್ಸುಗಳೂ ಸಹ ಅಗ್ನಿಯಿಂದ ಅಗ್ನಿಪೂಜೆಯನ್ನು ನೆರವೇರಿಸಿ ಸ್ವರ್ಗಲೋಕವನ್ನು ಪಡೆದರು ಎಂದು. ಇದನ್ನೇ **ಆದಿತ್ಯಾ ಅಂಗಿರಸಶ್ಚ ಸಾಧ್ಯಾ ದೇವಾ ಉಚ್ಯಂತೇ ।** ಆದಿತ್ಯರೂ, ಅಂಗಿರಸ್ಸುಗಳೂ ಸಾಧ್ಯದೇವತೆಗಳೆಂದು ಪ್ರಸಿದ್ಧರಾಗಿದ್ದಾರೆಂದು ಸಾಯಣರು ತಿಳಿಸಿದ್ದಾರೆ. ಅಂಗಿರಸ್ಸುಗಳು ಅಗ್ನಿಯನ್ನು ಹುಡುಕಿ ತಂದುದೂ, ಅಗ್ನಿಪೂಜೆಯನ್ನು ಮಾಡಿದುದೂ ಅನೇಕಕಡೆಗಳಲ್ಲಿ ವರ್ಣಿತವಾಗಿದೆ. ಋಕ್ಸಂಹಿತೆಯಲ್ಲಿಯೂ ಇತರಕಡೆಗಳಲ್ಲಿಯೂ ಈ ಪದಕ್ಕೆ ಅಂಕಿತನಾಮವಾಗಿಯೂ ಒಂದು ಋಷಿಸಂತತಿಯ ನಾಮಧೇಯವಾಗಿಯೂ ಮತ್ತು ದೇವತೆಗಳ ಗುಂಪಿಗೆ ಸೇರಿದ ಹೆಸರಾಗಿಯೂ ಮೂರು ವಿಧವಾದ ಅನ್ವಯವಿದೆ. ಈ ಮೂರು ಸನ್ನಿವೇಶಗಳಲ್ಲಿಯೂ ಸಹ ಅಂಗಿರಸ್ಸುಗಳಿಗೂ ಯಜ್ಞರೂಪಿಯಾದ ಅಗ್ನಿಗೂ ಸಾಕ್ಷಾತ್ಸಂಬಂಧವನ್ನು ಹೇಳಿದೆ. ಮೊದಲನೆಯದಾಗಿ,

**ಶೌನಕೋ ಹ ವೈ ಮಹಾಶಾಲೋಽಂಗಿರಸಂ ವಿಧಿವದುಪಸನ್ನಃ ಪ್ರಪಚ್ಛ । ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ ॥** (ಮುಂಡಕೋಪನಿಷತ್. ೧-೧-೩)

ಎಂಬಲ್ಲಿ ಅಂಗಿರಸ್ಸು ತತ್ತ್ವಜ್ಞಾನಿಯಾದ ಒಬ್ಬ ಋಷಿಯೆಂದೂ ಅವನಿಗೆ ಶೌನಕನಿಗೆ **ಯಜ್ಞಾಗ್ನಿವಿದ್ಯೆಯನ್ನು** ಉಪದೇಶಿಸಿದನೆಂದೂ ತಿಳಿಸಿದೆ. ಎರಡನೆಯದಾಗಿ,

ಇದು ಒಂದು ಋಷಿಸಂತತಿಯ ಹೆಸರು. ಆ ಸಂತತಿಗೆ ಮೂಲಪುರುಷನು ಯಜ್ಞಾಗ್ನಿಯು. ಆ ಯಜ್ಞಾಗ್ನಿಯಿಂದಲೇ ಅಂಗಿರಸ್ಸೆಂಬ ಋಷಿಯು ಉತ್ಪನ್ನನಾಗಿ ಆ ಸಂತತಿಯು ಪ್ರವರ್ಧಮಾನವಾಗಿ ಬೆಳೆಯಿತು. ಇದೇ ವಿಷಯವನ್ನು ಋಕ್ಸಂಹಿತೆಯಲ್ಲಿಯೂ ಸಹ ತಿಳಿಸಿದೆ.

**ತ್ವಮಗ್ನೇ ಪ್ರಥಮೋ ಅಂಗಿರಾ ಋಷಿರ್ದೇವೋ ದೇವಾನಾಮಭವಃ ಶಿವಃ ಸಖಾ ।**
(ಋ. ಸಂ. ೧-೩೧-೧)

ಇತ್ಯಾದಿ ಋಕ್ಕುಗಳಲ್ಲಿ ಈ ವಿಷಯವನ್ನು ಸೂಚಿಸಿರುವಂತೆ ಐತರೇಯಬ್ರಾಹ್ಮಣದಲ್ಲೂ ಸಹ **ಯೇಽಂಗಿರಾ ಅಸಂಸ್ತೇಽಂಗಿರಸೋಽಭವನ್** (ಐ. ಬ್ರಾ. ೩-೩೪) ಇತ್ಯಾದಿ ವಾಕ್ಯಗಳಲ್ಲಿ ತಿಳಿಸಿದೆ. ಹೀಗೆಯೇ ಅಂಗಿರಸ್ಸೆಂಬ ಋಷಿಗಳು ಗುಹೆಯಲ್ಲಿ ಅಡಗಿದ್ದ ಯಜ್ಞಾಗ್ನಿಯನ್ನು ಹುಡುಕಿ ಅವನನ್ನು ಸಂಪಾದಿಸಿಕೊಂಡರು ಎಂಬ ಕಥೆಯನ್ನು,

**ತ್ವಾಮಗ್ನೇ ಅಂಗಿರಸೋ ಗುಹಾ ಹಿತಮನ್ವವಿಂದಞ್ಛಿಶ್ರಿಯಾಣಂ ವನೇವನೇ ।**
**ಸ ಜಾಯಸೇ ಮಥ್ಯಮಾನಃ ಸಹೋ ಮಹತ್ತ್ವಾಮಾಹುಃ ಸಹಸಸ್ಪುತ್ರಮಂಗಿರಃ ॥**
(ಋ. ಸಂ. ೫-೧೧-೬)

ಇತ್ಯಾದಿ ಋಕ್ಸಂಹಿತಾವಾಕ್ಯಗಳಲ್ಲೂ ಮತ್ತು

**ಸಮಿದ್ಭಿರ್ಹ್ಯೇತಮಂಗಿರಸ ಐಂಧತ ।** (ಶ. ಬ್ರಾ. ೧-೪-೧೨೫)

ಇತ್ಯಾದಿ ಬ್ರಾಹ್ಮಣವಾಕ್ಯಗಳಲ್ಲೂ ವಿವರಿಸಿ. ಯಜ್ಞಾಗ್ನಿಯನ್ನು ಪಡೆದು ಆ ಯಜ್ಞಾಜ್ಞಿಯನ್ನು ಅಗ್ನಿಯಿಂದಲೇ ಪೂಜಿಸಿದ ಅಂಗಿರಸ್ಸುಗಳನ್ನು ಕೃತಜ್ಞತೆಯಿಂದಲೂ, ಭಕ್ತಿಯಿಂದಲೂ,

**ಅಂಗಿರಸೋ ನಃ ಪಿತರೋ ನವಗ್ವಾ ಅಥರ್ವಾಣೋ ಭೃಗವಃ ಸೋಮ್ಯಾಸಃ ।**
**ತೇಷಾಂ ವಯಂ ಸುಮತೌ ಯಜ್ಞಿಯಾನಾಮಪಿ ಭದ್ರೇ ಸೌಮನಸೇ ಸ್ಯಾಮ ॥**
(ಋ. ಸಂ, ೧೦-೧೪-೬)

ಎಂದು ಪ್ರಶಂಸಿಸಿದೆ. ಆ ಅಂಗಿರಸ್ಸುಗಳನ್ನೇ ಸಾಧ್ಯರೆಂದು ಪ್ರಕೃತವಾದ ಋಕ್ಕಿನಲ್ಲಿ ನಿರ್ದೇಶಿಸಿದೆಯೆಂದು ಒಂದು ಮತ. ಅದನ್ನು ಐತರೇಯಬ್ರಾಹ್ಮಣದ ವಿವರಣೆಯಿಂದಲೂ, ಸಾಯಣಭಾಷ್ಯದ ವಿವರಣೆಯಿಂದಲೂ ತಿಳಿಯಬಹುದು. ಇದಲ್ಲದೆ ಸಾಧ್ಯರೆಂಬುವರು ದೇವತಾವಿಶೇಷಗಳಲ್ಲಿ ಸೇರಿದವರೆಂದೂ, ಯಜ್ಞಾದಿಗಳಿಗೆ ಮಾರ್ಗದರ್ಶಕರೆಂದೂ, ಯಜ್ಞಾದಿಕರ್ಮಾಚರಣೆಯಿಂದ ಉತ್ತಮವಾದ ಲೋಕವನ್ನು ಪಡೆದವರೆಂದೂ ಅವರನ್ನು ಬಹಳವಾಗಿ ಪ್ರಶಂಸಿಸಿದೆ.

**ಅಥ ಯತ್ಪಂಚಮಮಮೃತಂ ತತ್ಸಾಧ್ಯಾ ಉಪಜೀವಂತಿ ಬ್ರಹ್ಮಣಾ ಮುಖೇನ ನ ವೈ ದೇವಾ ಅಶ್ನಂತಿ ನ ಪಿಬಂತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯಂತಿ ||** (ಛಾ. ಉ. ೩-೧೦-೧)

ಬ್ರಹ್ಮಮುಖದ ಸಹಾಯದಿಂದ ಸಾಧ್ಯರು ಐದನೆಯ ಅಮೃತವನ್ನು ಸೇವಿಸುತ್ತಾರೆ [ಐದನೆಯ ಅಮೃತವೆಂದರೆ ಉಪನಿಷತ್ತೆಂದರ್ಥ. ಬ್ರಹ್ಮಸಾಕ್ಷಾತ್ಕಾರವನ್ನು ಪಡೆದು ಆನಂದವನ್ನನುಭವಿಸುತ್ತಾರೆಂದು ತಾತ್ಪರ್ಯ.] ಸೇವಿಸುವುದೆಂದರೆ ಭುಜಿಸುವುದೆಂದಾಗಲಿ, ಪಾನಮಾಡುವುದೆಂದಾಗಲಿ ಅರ್ಥವಲ್ಲ. ದೇವತೆಗಳಾದ ಸಾಧ್ಯರು ಭುಜಿಸುವುದೂ ಇಲ್ಲ, ಪಾನಮಾಡುವುದೂ ಇಲ್ಲ ಉಪನಿಷದ್ರೂಪವಾದ ಅಮೃತವನ್ನು ಕೇವಲ ವೀಕ್ಷಿಸುತ್ತಾ ಆನಂದವನ್ನನುಭವಿಸುರೆಂದು ತಾತ್ಪರ್ಯ.

**ತ ಏತದೇವ ರೂಪಮಭಿಸಂವಿಶಂತ್ಯೇತಸ್ಮಾದ್ರೂಪಾದುದ್ಯಂತಿ । ಸ ಯ ಏತದೇವಮಮೃತಂ ವೇದ ಸಾಧ್ಯಾನಾಮೇವೈಕೋ ಭೂತ್ವಾ ಬ್ರಹ್ಮಣೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಏತದೇವ ರೂಪಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ ||**
(ಛಾ. ಉ. ೩-೧೦-೨, ೩)

ಈ ಸಾಧ್ಯರು ಆದಿತ್ಯಾಂತರ್ಗತವಾದ ರೂಪವನ್ನು ಪಡೆಯುತ್ತಾರೆ ಪುನಃ ಅದೇ ರೂಪದಿಂದ ತಮ್ಮ ಅಸ್ತಿತ್ವವನ್ನು ಪಡೆಯುತ್ತಾರೆ. ಈ ತತ್ತ್ವವನ್ನು ತಿಳಿದ ಜ್ಞಾನಿಯೂ ಸಹ ತಾನೂ ಸಾಧ್ಯರಲ್ಲೊಬ್ಬನಾಗುತ್ತಾನೆ. ಉಪನಿಷದ್ರೂಪವಾದ ಅಮೃತವನ್ನು ಸೇವಿಸುತ್ತಾ ಆತ್ಮತೃಪ್ತಿಯನ್ನು ಪಡೆಯುತ್ತಾನೆ. ಅವನೂ ಸಹ ಆದಿತ್ಯನ ಮಧ್ಯವರ್ತಿಯಾದ ರೂಪವನ್ನೇ ಪಡೆಯುತ್ತಾನೆ.

**ಸ ಯಾವದಾದಿತ್ಯ ಉತ್ತರತ ಉದೇತಾ ದಕ್ಷಿಣತೋಽಸ್ತಮೇತಾ ದ್ವಿಸ್ತಾವದೂರ್ಧ್ವ-ಉದೇತಾರ್ವಾಗಸ್ತಮೇತಾ ಸಾಧ್ಯಾನಾಮೇವ ತಾವದಾಧಿಪತ್ಯಂ ಸ್ವಾರಾಜ್ಯಂ ಪರ್ಯೇತಾ ||**
(ಛಾ. ಉ. ೩-೧೦-೪)

ಸಾಧ್ಯರೂಪವನ್ನು ಹೊಂದಿದ ಈ ಯಜ್ಞಕರ್ತನೂ, ಯಜ್ಞತತ್ತ್ವವನ್ನು ತಿಳಿದ ಜ್ಞಾನಿಯೂ ಸಾಧ್ಯರು ಅನುಭವಿಸುವ ಸ್ವರಾಜ್ಯವನ್ನು ಪಡೆದು ಆದಿತ್ಯನ ದಕ್ಷಿಣೋತ್ತರಮಾರ್ಗವಾದುದೂ, ಊರ್ಧ್ವಾರ್ವಾಗ್ರೂಪವಾದುದೂ ಆದ ಸಂಚಾರವು ಇರುವವರೆಗೆ ಅದನ್ನು ಅನುಭವಿಸುತ್ತಿರುವನು ಎಂದು ಯಜ್ಞಕ್ರಿಯೆಯ ಪ್ರಾಶಸ್ತ್ಯವನ್ನು ಸ್ತುತಿಸಿದೆ. ಪ್ರಕೃತವಾದ ಋಕ್ಕನ್ನೇ ಶತಪಥಬ್ರಾಹ್ಮಣದಲ್ಲಿ ಉದಹರಿಸಿ ಈರೀತಿ ವಿವರಿಸಿದೆ.

**ಯಾನ್ತ್ಸೈ ತಾನ್ತ್ಸಪ್ತಪುರುಷಾನ್ । ಏಕಂ ಪುರುಷಮಕುರ್ವನ್ತ್ಸ ಪ್ರಜಾಪತಿರಭವತ್ಸ ಪ್ರಜಾ ಅಸೃಜತ ಸ ಪ್ರಜಾಃ ಸೃಷ್ಟ್ವೋರ್ಧ್ವ ಉದಕ್ರಾಮತ್ಸ ಏತಂ ಲೋಕಮಗಚ್ಛದ್ಯತ್ರೈಷ ಏತತ್ತಪತಿ ನೋ ಹ ತರ್ಹ್ಯನ್ಯ ಏತಸ್ಮಾದತ್ರ ಯಜ್ಞಿಯ ಆಸ ತಂ ದೇವಾ ಯಜ್ಞೇನೈವ ಯಷ್ಟುಮಧ್ರಿಯಂತ ।** (ಶ. ಬ್ರಾ. ೧೦-೨-೨-೧)

**'ಸಪ್ತಪುರುಷಾನೇಕಂ ಪುರುಷಮಕುರ್ವನ್'** ಸಪ್ತಪುರುಷರನ್ನೂ ಒಂದೇ ಪುರುಷನನ್ನಾಗಿ ಪರಿವರ್ತಿಸಿದರು ಎಂದು ಹಿಂದೆ ತಿಳಿಸಿದೆ. (ಶ. ಬ್ರಾ. ೬-೧-೧-೩) ಅದ್ವಿತೀಯನಾದ ಈ ಪುರುಷನೇ ಪ್ರಜಾಪತಿಯು. ಈ ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಿ ಊರ್ಧ್ವಮುಖವಾಗಿ ಆದಿತ್ಯಲೋಕಕ್ಕೆ ಹೋದನು. ಆಗ ಯಜ್ಞಕ್ಕೆ ಬೇರೆ ಪಶುಗಳಿಲ್ಲದ್ದರಿಂದ ದೇವತೆಗಳು ಈ ಪ್ರಜಾಪತಿಯನ್ನೇ ಯಜ್ಞಪಶುವನ್ನಾಗಿ ಮಾಡಿದರು. ಆದುದರಿಂದಲೇ—

**ತಸ್ಮಾದೇತದೃಷಿಣಾಭ್ಯನೂಕ್ತಂ । ಯಜ್ಞೇನ ಯಜ್ಞಮಯಜಂತ ದೇವಾ ಇತಿ ಯಜ್ಞೇನ ಹಿ ತಂ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ನಿತಿ ತೇ ಹಿ ಧರ್ಮಾಃ ಪ್ರಥಮೇಽಕ್ರಿಯಂತ ತೇ ಹ ನಾಕಂ ಮಹಿಮಾನಃ ಸಚಂತೇತಿ ಸ್ವರ್ಗೋ ವೈ ಲೋಕೋ ನಾಕೋ ದೇವಾ ಮಹಿಮಾನಸ್ತೇ ದೇವಾಃ ಲೋಕಗ್ಂಸಚಂತ ಯೋ ತಂ ಯಜ್ಞಮಯ ಜನ್ನಿತ್ಯೇತತ್ ॥** (ಶ. ಬ್ರಾ. ೧೦-೨ ೨-೨)

ಯಜ್ಞದಿಂದ ಪ್ರಜಾಪತಿರೂಪಿಯಾದ ಯಜ್ಞವನ್ನ ರ್ಪಿಸಿದರು; ಈ ನಿಯಮವೇ ಪ್ರಥಮತಃ ಸ್ಥಾಪಿತವಾದುದರಿಂದ ಇದನ್ನೇ **ತಾನಿ ಧರ್ಮಾಣಿ ಪ್ರಥಮಾನ್ಯಾಸನ್** ಎಂದು ಋಷಿಗಳು ಹೇಳಿದ್ದಾರೆ. ಈ ನಿಯಮಗಳು ಅಂತರಿಕ್ಷಕ್ಕೆ ವ್ಯಾಪ್ತವಾದವು. ಆದುದರಿಂದಲೇ ಈ ಯಜ್ಞದಿಂದ ಪ್ರಜಾಪತಿರೂಪವಾದ ಯಜ್ಞವನ್ನು ನೆರವೇರಿಸುವವರು ಸ್ವರ್ಗಕ್ಕೆ ಸೇರುವರು ಎಂದು ತಿಳಿಸಿದೆ. ಅದೇ ಪ್ರಕಾರವಾಗಿ ಯಜ್ಞಕರ್ತರಾದ ದೇವತೆಗಳೆಲ್ಲರೂ ಸ್ವರ್ಗವಾಸಿಗಳಾಗಿದ್ದಾರೆ.

**ಯತ್ರ ಪೂರ್ವೇ ಸಾಧ್ಯಾಸ್ಸಂತಿ ದೇವಾಃ ಇತಿ । ಪ್ರಾಣಾ ವೈ ಸಾಧ್ಯಾ ದೇವಾಸ್ತ ಏತಮಗ್ರ ಏವಮಸಾಧಯನ್ನೇತದೇವ ಬುಭೂಷಂತಸ್ತ ಉ ಏವಾಪ್ಯೇತರ್ಹಿ ಸಾಧಯಂತಿ ಪಶ್ಚೇದಮನ್ಯದಭವದ್ಯಜತ್ರಮಮರ್ತ್ಯಸ್ಯ ಭುವನಸ್ಯ ಭೂನೇತಿ ಪಶ್ಚಾಹ್ಯೇನೇದಮನ್ಯದ್ಯಜ್ಞಿಯಮಾಸ ಯತ್ಕಿಂಚಾಮೃತಂ ॥** (ಶ. ಬ್ರಾ. ೧೦-೨-೨-೩)

ಸಾಧ್ಯರು ಪೂರ್ವದಿಂದಲೇ ಈ ಸ್ವರ್ಗನಿವಾಸಿಗಳಾಗಿದ್ದಾರೆ. ಸಪ್ತಪ್ರಾಣಗಳೇ ಈ ಸಾಧ್ಯರು. ಪ್ರಜಾಪತಿಯ ದೇಹರೂಪಿಗಳಾಗಲು ಪ್ರಾರಂಭದಲ್ಲಿ ಸಪ್ತಪ್ರಾಣಗಳೇ ಆವನನ್ನು ಸಾಧ್ಯನನ್ನಾಗಿ ಮಾಡಿದವು. ಆದುದರಿಂದಲೇ ಇದೇ ವಿಷಯವನ್ನು ಋಕ್ಸಂಹಿತಾವಾಕ್ಯದಲ್ಲಿಯೂ ಈರೀತಿ ವರ್ಣಿಸಿದೆ.

**ಪಶ್ಚೇದಮನ್ಯದಭವದ್ಯಜತ್ರಮಮರ್ತ್ಯಸ್ಯ ಭುವನಸ್ಯ ಭೂನಾ ।**
**ಸುಪರ್ಣೋ ಅಂಗ ಸವಿತುರ್ಗರುತ್ಮಾನ್ಪೂರ್ವೋ ಜಾತಃ ಸ ಉ ಅಸ್ಯಾನು ಧರ್ಮ ॥**
(ಋ. ಸಂ. ೧೦ ೧೪೯-೩)

ಅನಂತರವೇ ಪೂಜ್ಯವಾದ ಈ ದೇವತೆಯು ಅಮರ್ತ್ಯವಾದ ಲೋಕದೊಡನೆ ಉತ್ಪನ್ನವಾಯಿತು. ಈ ಪರವಸ್ತುವನ್ನೇ ಸುಪರ್ಣನಾದ ಗರುತ್ಮಂತನೆಂದು ಕರೆಯುತ್ತಾರೆ. ಈ ಮೂಲವಸ್ತುವಿನ ಸಹಾಯದಿಂದಲೇ ಉಳಿದ ಅಮರ್ತ್ಯವಾದ ವಸ್ತುಗಳೆಲ್ಲವೂ ಪೂಜಾರ್ಹವಾದವು ಎಂಬುದಾಗಿ ಸಾಧ್ಯಶಬ್ದಕ್ಕೂ, ಯಜ್ಞಶಬ್ದಕ್ಕೂ ಅರ್ಥವನ್ನು ಹೇಳಿ ಅವೆರಡರ ಸಂಬಂಧವನ್ನು ತಿಳಿಸಿದೆ. ಇದೇ ಮಂತ್ರವು ಪುರುಷಸೂಕ್ತದಲ್ಲಿ ಪಠಿತವಾದಾಗ ಸಾಯಣರು ಕೊಂಚ ವ್ಯತ್ಯಸ್ತವಾದ ಅರ್ಥವನ್ನು ಹೇಳಿದ್ದಾರೆ. (ಋ. ಸಂ. ೧೦-೯೦-೧೬)

**ದೇವಾಃ—ಪ್ರಜಾಪತಿಪ್ರಾಣರೂಪಾಃ; ಯಜ್ಞೇನ ಯಥೋಕ್ತೇನ ಮಾನಸೇನ ಸಂಕಲ್ಪೇನ; ಯಜ್ಞಂ—ಯಥೋಕ್ತಯಜ್ಞಸ್ವರೂಪಂ ಪ್ರಜಾಪತಿಂ; ಅಯಜಂತ—ಪೂಜಿತವಂತಃ ।** ಪ್ರಜಾಪತಿಯ

ಪ್ರಾಣರೂಪವಾದ ದೇವತೆಗಳನ್ನು ತಮ್ಮ ಮಾನಸಸಂಕಲ್ಪದಿಂದ ಪ್ರಜಾಪತಿರೂಪಿಯಾದ ಯಜ್ಞವನ್ನು ನೆರವೇರಿಸಿದರು. ಆ ಪೂಜಾವಿಶೇಷವು ಜಗತ್ತಿನ ಧಾರಣೆಗೆ ಸಹಾಯಕವಾಯಿತು.

**ಯತ್ರ—ಯಸ್ಮಿನ್ವಿರಾಟ್‌ಪ್ರಾಪ್ತಿರೂಪೇ ನಾಕೇ ; ಪೂರ್ವೇ ಸಾಧ್ಯಾಃ ಪುರಾತನಾ ವಿರಾಡುಪಾಸ್ತಿ-ಸಾಧಕಾಃ ಸಂತಿ । ತೇ ವಿರಾಟ್‌ಪ್ರಾಪ್ತಿರೂಪಂ ಸ್ವರ್ಗಂ ಪ್ರಾಪ್ನುವಂತಿ ।** ವಿರಾಟ್ಪುರುಷನನ್ನು ಆರಾಧಿಸತಕ್ಕ ಈ ಪ್ರಜಾಪತಿಪ್ರಾಣರೂಪರಾದ ಸಾಧ್ಯರೆಲ್ಲರೂ, ವಿರಾಟ್‌ಪುರುಷನ ಪ್ರಾಪ್ತಿಗೆ ಯೋಗ್ಯವಾದ ಸ್ವರ್ಗವನ್ನು ಪಡೆಯುತ್ತಾರೆ ಎಂದು ಪುರುಷಸೂಕ್ತದಲ್ಲಿರುವ ಈ ಋಕ್ಕಿಗೆ ಅರ್ಥಮಾಡಿದೆ. ಐತರೇಯಬ್ರಾಹ್ಮಣದಲ್ಲಿ ಈ ಯಜ್ಞಸೇವನೆಯನ್ನು ಸ್ತುತಿಸುತ್ತಾ,

**ಸೈಷಾ ಸ್ವರ್ಗ್ಯಾಹುತಿರ್ಯದಗ್ನ್ಯಾಹುತಿರ್ಯದಿ ಹ ವಾ ಅಪ್ಯಬ್ರಾಹ್ಮಣೋಕ್ತೋ ಯದಿ ದುರುಕ್ತೋಕ್ತೋ ಯಜತೇಽಥ ಹೈಷಾಹುತಿರ್ಗಚ್ಛತ್ಯೇವ ದೇವಾನ್ನ ಪಾಪ್ಮನಾ ಸಂಸೃಜ್ಯತೇ ॥**

(ಐ. ಬ್ರಾ. ೧-೧೬)

**"ಯಜ್ಞೇನ ಯಜ್ಞಮಯಜಂತ"** ಎಂಬ ಮಂತ್ರದಲ್ಲಿ ವರ್ಣಿತವಾಗಿರುವ ನಿಯಮದಂತೆಯೂ ಸಾಧ್ಯಾದಿ ದೇವತೆಗಳು ಅನುಸರಿಸಿದಂತೆಯೂ ಯಜ್ಞಾಗ್ನಿಯಿಂದ ಯಜ್ಞವನ್ನು ಸೇವಿಸುವವರು ಸ್ವರ್ಗಲೋಕವನ್ನು ಪಡೆಯುತ್ತಾರೆ. ಈ ತತ್ತ್ವವನ್ನರಿತು ಯಜ್ಞವನ್ನು ನಿರ್ವಹಿಸುವವನ ಆಹುತಿಗಳು ಸ್ವರ್ಗವಾಸಿಗಳಾದ ದೇವತೆಗಳನ್ನು ಸೇರುತ್ತ . ಅವನು ಅಬ್ರಾಹ್ಮಣನಾದರೂ ಸರಿ ಅಥವಾ ಇತರ ವಿಧದಲ್ಲಿ ದೂಷ್ಯನಾಗಿದ್ದರೂ ಸರಿ ಅವನಿಗೆ ಸ್ವರ್ಗಲಾಭವು ಸಿದ್ಧವು. ಅವನು ಪಾಪರಹಿತನಾಗುತ್ತಾನೆ, ಎಂದು ತಿಳಿಸಿದೆ. ಈ ರೀತಿ ಪ್ರಕೃತವಾದ ಋಕ್ಕಿಗೆ ಅಧಿದೈವತಪಕ್ಷದಲ್ಲಿಯೂ ಅಧ್ಯಾತ್ಮಪಕ್ಷದಲ್ಲಿಯೂ ಸಹ ಶತಪಥಾದಿಬ್ರಾಹ್ಮಣಗಳಲ್ಲಿಯೂ, ಛಾಂದೋಗ್ಯಾದ್ಯುಪನಿಷತ್ತುಗಳಲ್ಲಿಯೂ ತಾತ್ಪರ್ಯವನ್ನು ವಿವರಿಸಿದೆ.



## ಸಮಾನಮೇತದುದಕಮುಚ್ಚೈತ್ಯವ ಚಾಹಭಿಃ । ಭೂಮಿಂ ಪರ್ಜನ್ಯಾ ಜಿನ್ವಂತಿ ದಿವಂ ಜಿನ್ವಂತ್ಯಗ್ನಯಃ ॥೫೧॥

ಏಕರೂಪವಾದ ಉದಕವು ಗ್ರೀಷ್ಮಕಾಲದ ದಿನಗಳಲ್ಲಿ ಊರ್ಧ್ವಮುಖವಾಗಿ ಅಂತರಿಕ್ಷಕ್ಕೆ ಹತ್ತುತ್ತದೆ. ಮಳೆಗಾಲದ ದಿನಗಳಲ್ಲಿ ಅಂತರಿಕ್ಷದಿಂದ ಅಧೋಮುಖವಾಗಿ ಸುರಿಯುತ್ತದೆ ಪ್ರಪಂಚಕ್ಕೆ ಸಂತೃಪ್ತಿಯನ್ನುಂಟುಮಾಡುವ ಮೇಘಗಳು ಭೂಮಿಯನ್ನು ತೃಪ್ತಿಗೊಳಿಸುತ್ತವೆ. ಆಹವನೀಯಾದ್ಯಗ್ನಿಗಳು ದ್ಯುಲೋಕವನ್ನು ಅಥವಾ ದ್ಯುಲೋಕದಲ್ಲಿರುವ ದೇವತೆಗಳನ್ನು ತೃಪ್ತಿಗೊಳಿಸುತ್ತದೆ.

**ಭೂಮಿಂ ಪರ್ಜನ್ಯಾ ಜಿನ್ವಂತಿ । ದಿವಂ ಜಿನ್ವಂತ್ಯಗ್ನಯೋ ।** ಸಸ್ಯಾದಿಗಳ ಬೆಳವಣಿಗೆಗೆ ಕಾರಣವಾಗಿ ಭೂಮಿಗೆ ಅನ್ನಸಂಪತ್ತನ್ನೊದಗಿಸುವುದರಿಂದ ಪರ್ಜನ್ಯಗಳು ಭೂಲೋಕದ ಪ್ರಜೆಗಳಿಗೆ ತೃಪ್ತಿಯನ್ನುಂಟುಮಾಡುತ್ತವೆ. ಯಜ್ಞಾಹುತಿಗಳನ್ನು ಹೊತ್ತುಕೊಂಡು ಹೋಗಿ ದ್ಯುಲೋಕದಲ್ಲಿ ದೇವತೆಗಳಿಗೆ ಹಂಚಿ ಅಗ್ನಿಗಳು ದೇವಲೋಕ ನಿವಾಸಿಗಳನ್ನು ತೃಪ್ತಿಪಡಿಸುತ್ತವೆ. ಕೇವಲ ತೃಪ್ತಿಪಡಿಸುವುದೇ ಅಲ್ಲದೇ ಪರ್ಜನ್ಯಾಗ್ನಿಗಳು ಉಭಯಲೋಕ ನಿವಾಸಿಗಳ ಸ್ಥಿತಿಗತಿಗಳಿಗೆಲ್ಲಾ ಕಾರಣಗಳಾಗಿವೆ.

**ಜಿನ್ವಂತಿ—ಪ್ರೀಣಯಂತಿ** । ತೃಪ್ತಿಯನ್ನುಂಟುಮಾಡುತ್ತವೆ. **ಜಿನ್ವತಿಃ ಪ್ರೀತಿಕರ್ಮಾ** (ನಿ. ೬-೨೨) ಎಂದು ಈ ಪದದ ವಿಶೇಷಾರ್ಥವನ್ನು ಹೇಳಿ ನಿರುಕ್ತಕಾರರು ಪ್ರಕೃತವಾದ ಋಕ್ಕನ್ನೇ ಉದಹರಿಸಿದ್ದಾರೆ. ಚೈತನ್ಯದಾಯಿಯೆಂದೂ ಅರ್ಥ ವಾಗುತ್ತದೆ. ಉಭಯಲೋಕಗಳಿಗೂ ಸಹ ತಮ್ಮ ಆವೃತ್ತಿರೂಪದಿಂದ ಪ್ರಾಣದಾಯಕಗಳಾಗಿರುತ್ತವೆ.

ಪರ್ಜನ್ಯಾಗ್ನಿಗಳ ಸಂಬಂಧವು ಬಿಜಾಂಕುರಗಳ ಸಂಬಂಧದಂತಿದೆ. ಯಜ್ಞಾದಿಗಳಿಂದ ಪರ್ಜನ್ಯವೂ, ಪರ್ಜನ್ಯದಿಂದ ಯಜ್ಞವೂ ವೃದ್ಧಿಯಾಗುತ್ತವೆ. ಇವು ಪರಸ್ಪರವಾಗಿ ಅನ್ಯೋನ್ಯಾಶ್ರಯವನ್ನು ಪಡೆದಿವೆ. ಒಂದಕ್ಕೊಂದು ಹೇತುವಾಗಿದೆ. ಪೃಥಿವ್ಯಂತರಿಕ್ಷಾದಿಲೋಕಗಳ ಸ್ಥಿತಿಗಳೆಲ್ಲವೂ ಈ ಅನ್ಯೋನ್ಯಾಶ್ರಯವನ್ನೇ ನಂಬಿವೆ.

**ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।**
**ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥** (ಭಗವದ್ಗೀತಾ. ೩-೧೪)

ಯಜ್ಞಾದಿಕರ್ಮಗಳು ನೆರವೇರಬೇಕಾದರೆ ಅನ್ನಸಂಪತ್ತಿನಿಂದ ಮಾತ್ರ ಸಾಧ್ಯ. ಯಜ್ಞಕ್ಕೆ ಮೂಲವಾದ ಅನ್ನವು ಪರ್ಜನ್ಯದಿಂದಲೇ ಉತ್ಪನ್ನವಾಗುತ್ತದೆ. ಪರ್ಜನ್ಯವು ಯಜ್ಞದಿಂದ ಮಾತ್ರ ಸಾಧ್ಯವಾಗುತ್ತವೆ. ಈ ವಿಧವಾಗಿ ಪರ್ಜನ್ಯಕ್ಕೂ ಯಜ್ಞಕ್ಕೂ ಅನ್ಯೋನ್ಯಾಶ್ರಯವಿರುತ್ತದೆ. **ಅಗ್ನಯಃ** ಎಂದರೆ ಆಹವನೀಯಾದಿಯಜ್ಞಾಗ್ನಿಗಳೆಂದರ್ಥ. **ಅಗ್ನಯಃ ಆಹವನೀಯಾದ್ಯಾಃ** ಎಂದು ಸಾಯಣರು ತಿಳಿಸಿದ್ದಾರೆ. ಆದುದರಿಂದ ಪರ್ಜನ್ಯಕ್ಕೂ ಯಜ್ಞಕ್ಕೂ ಇರುವ ಸಂಬಂಧವೇ ಪರ್ಜನ್ಯಕ್ಕೂ ಆಹವನೀಯಾಗ್ನಿಗಳಿಗೂ ಇರುವುದೆಂದರ್ಥ. ಇದೇ ಸಂಬಂಧವನ್ನು ಛಾಂದೋಗ್ಯೋಪನಿಷತ್ತಿನಲ್ಲಿ ಈರೀತಿ ತಿಳಿಸಿದೆ.

**ಪರ್ಜನ್ಯೋ ವಾವ ಗೌತಮಾಗ್ನಿಸ್ತಸ್ಯ ವಾಯುರೇವ ಸಮಿದಭ್ರಂ ಧೂಮೋ ವಿದ್ಯುದ-ರ್ಚಿರಶನಿರಂಗಾರಾ ಹ್ರಾದನಯೋ ವಿಸ್ಫುಲಿಂಗಾಃ ।** (ಛಾ. ಉ. ೫-೫-೧)

ಪರ್ಜನ್ಯವೇ ಯಜ್ಞಾಗ್ನಿಯು. ವಾಯುವೇ ಅದರ ಸಮಿತ್ತು. ಮೇಘವೇ ಅದರ ಧೂಮವು. ವಿದ್ಯುತ್ತೇ ಅದರ ಜ್ವಾಲೆಯು. ಸಿಡಿಲೇ ಅಂಗಾರಗಳು. ಗುಡುಗುಗಳೇ ಶಬ್ದಗಳು.

**ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಸೋಮಂ ರಾಜಾನಾಂ ಜುಹ್ವತಿ ತಸ್ಯಾ ಆಹುತೇರ್ವರ್ಷಂ ಸಂಭವಂತಿ ॥** (ಛಾ. ಉ. ೫-೫-೨)

ಈ ಪರ್ಜನ್ಯರೂಪವಾದ ಅಗ್ನಿಯಲ್ಲಿ ದೇವತೆಗಳು ಸೋಮವನ್ನರ್ಪಿಸುತ್ತಾರೆ. ಇದರ ಫಲವಾಗಿ ವೃಷ್ಟಿಪತನವಾಗುತ್ತದೆ ಎಂದು ಪರ್ಜನ್ಯಕ್ಕೂ ಯಜ್ಞಾಗ್ನಿಗೂ ತಾದಾತ್ಮ್ಯವನ್ನೇ ಹೇಳಿದೆ. ಪೃಥಿವ್ಯಂತರಿಕ್ಷಗಳ ಮತ್ತು ಪ್ರಜೆಗಳ ಜೀವನಾಧಾರವಾಗಿರುವುದಲ್ಲದೆ ಪರ್ಜನ್ಯವು ಎರಡು ಲೋಕಗಳ ಸಂಬಂಧವನ್ನೂ ನಿಕಟವಾಗಿ ಬೆಳೆಸುವುದರಲ್ಲಿಯೂ ನಿರತವಾಗಿದೆ.

**ಪೃಥಿವೀ ಪೂರ್ವರೂಪಂ ದ್ಯೌರುತ್ತರರೂಪಂ ವೃಷ್ಟಿಃ ಸಂಧಿಃ ಪರ್ಜನ್ಯಃ ಸಂಧಾತಾ । ತದುತಾಪಿ ಯತ್ರೈತದ್ಬಲಪದನುದ್ಗೃಹ್ಣನ್ತ್ಸಂದಧದಹೋರಾತ್ರೇ ವರ್ಷತಿ ದ್ಯಾವಾಪೃಥಿವೌ ಸಮಧಾತಾಮಿತ್ಯುತಾಪ್ಯಾಹುಃ । ಇತೀನ್ನಧಿದೈವತಂ । ಅಥಾಧ್ಯಾತ್ಮಂ ।**

(ಐ. ಆರಣ್ಯಕಂ. ೨-೨-೧ ರಿಂದ ೩)

ಪೃಥ್ವಿಯು ಪೂರ್ವಾರ್ಧವು. ದ್ಯುಲೋಕವು ಉತ್ತರಾರ್ಧವು. ವೃಷ್ಟಿಯಿಂದ ಇವೆರಡರ ಸಂಬಂಧವುಂಟಾಗುತ್ತದೆ. ಪರ್ಜನ್ಯನೇ ಸಂಬಂಧಕಾರಕನು. ಅಹೋರಾತ್ರವೂ ಎಡಬಿಡದೇ ಪರ್ಜನ್ಯನು ವೃಷ್ಟಿಯನ್ನು ಸುರಿಸಿದ ಪಕ್ಷದಲ್ಲಿ ಆಗ ದ್ಯಾವಾ

ಪೃಥಿವಿಗಳೆರಡೂ ಒಟ್ಟಿಗೆ ಸೇರಿರುವುವು ಎಂದು ತಿಳಿದವರು ಹೇಳುತ್ತಾರೆ. ಈರೀತಿ ಉಭಯಲೋಕಗಳಿಗೂ ಉಪಕಾರಕನಾದ ಪರ್ಜನ್ಯನ ಸ್ತುತಿಯು ಋಕ್ಸಂಹಿತೆಯಲ್ಲಿ ಬಹಳ ಮಹತ್ವದಿಂದ ಕೂಡಿದೆ.

**ಅಚ್ಛಾ ವದ ತವಸಂ ಗೀರ್ಭಿರಾಭಿಃ ಸ್ತುಹಿ ಪರ್ಜನ್ಯಂ ನಮಸಾ ವಿವಾಸ ।**
**ಕನಿಕ್ರದದ್ವೃಷಭೋ ಜೀರದಾನೂ ರೇತೋ ದಧಾತ್ಯೋಷಧೀಷು ಗರ್ಭಂ ॥**
(ಋ. ಸಂ. ೫-೮೩-೧)

ವೃಷ್ಟಿಕಾರಕನೂ, ಸಸ್ಯೌಷಧ್ಯಾದಿಗಳಲ್ಲಿ ರಸವನ್ನು ತುಂಬತಕ್ಕವನೂ ಆದ ಪರ್ಜನ್ಯನಿಗೆ ಎಲ್ಲರೂ ಕೃತಜ್ಞತೆಯನ್ನರ್ಪಿಸಿ ಅವನನ್ನು ಉತ್ತಮವಾದ ಸ್ತುತಿವಾಕ್ಯಗಳಿಂದ ಪ್ರಶಂಸಿಸಿ ಎಂದು ಸ್ತುತಿಕಾರರನ್ನುದ್ದೇಶಿಸಿ ಹೇಳಿದೆ.

**ಯತ್ಪರ್ಜನ್ಯ ಕನಿಕ್ರದತ್ಸ್ತನಯನ್ ಹಂಸಿ ದುಷ್ಕೃತಂ ।**
**ಪ್ರತೀದಂ ವಿಶ್ವಂ ಮೋದತೇ ಯತ್ಕಿಂ ಚ ಪೃಥಿವ್ಯಾಮಧಿ ॥** (ಋ. ಸಂ. ೫-೮೩-೯)

ಎಲೈ ಪರ್ಜನ್ಯನೇ, ನೀನು ಶಬ್ದಮಾಡುತ್ತಲೂ, ಶತ್ರುಗಳನ್ನು ದೂರಕ್ಕೆ ಅಟ್ಟುತ್ತಲೂ ಲೋಕೋಪಕಾರವನ್ನು ಮಾಡುವಾಗ ಚರಾಚರಾತ್ಮಕವಾದ ಲೋಕವೆಲ್ಲವೂ ತನ್ನ ಹರ್ಷವನ್ನು ವ್ಯಕ್ತಪಡಿಸುತ್ತದೆ ಇತ್ಯಾದಿಯಾಗಿ ಪರ್ಜನ ಸ್ತುತಿಯಿದೆ.

**ಪರ್ಜನ್ಯಾಃ ಪ್ರೀಣಯಿತಾರೋ ಮೇಘಾಃ ।** ತೃಪ್ತಿಯನ್ನುಂಟುಮಾಡತಕ್ಕ ಮೇಘಗಳೆಂದು ಸಾಯಣರು ಅರ್ಥ ಮಾಡಿದ್ದಾರೆ. ನಿರುಕ್ತಕಾರರು ಈ ಪದದ ನಿರ್ವಚನವನ್ನು ತಿಳಿಸುತ್ತಾ,

**ಪರ್ಜನ್ಯಸ್ತೃಪೇರಾದ್ಯಂತವಿಪರೀತಸ್ಯ ತರ್ಪಯಿತಾ ಜನ್ಯಃ ।** (ನಿ. ೧೦-೧೦)

ತೃಪ್ತಿಯನ್ನುಂಟುಮಾಡು ಎಂಬರ್ಥವನ್ನು ಕೊಡುವ ತೃಪ್‌ಧಾತುವಿನ ಅಕ್ಷರಗಳು ವ್ಯತ್ಯಸ್ತವಾಗಿ ಈ ಪದವು ನಿಷ್ಪನ್ನವಾಗಿದೆ. ಮಾನವರಿಗೆ ಅನುಕೂಲಕಾರಕನಾಗಿ ಅವರಿಗೆ ತೃಪ್ತಿದಾಯಕನಾಗಿರುವನೆಂದರ್ಥ.

**ತೃಪ್ + ಜನ್ಯಃ = ಪೃತ್ + ಜನ್ಯಃ = ಪರ್ಜ್ + ಜನ್ಯಃ = ಪರ್ಜನ್ಯಃ ।** ಅಥವಾ;

**ಪರೋ ಜೇತಾ ವಾ**—ಉತ್ತಮವಾದ ಜೇತೃವೆಂದಾಗಲಿ, (ಪರಃ + ಜೀ) ಅಥವಾ; **ಪರೋ ಜನಯಿತಾ ವಾ**—ಉತ್ತಮವಾದ ಉತ್ಪಾದಕನೆಂದಾಗಲಿ, ಅಥವಾ **ಪ್ರಾರ್ಜಯಿತಾ ವಾ ರಸಾನಾಂ**—ರಸರೂಪವಾದ ಉದಕವನ್ನು ಕೊಡತಕ್ಕವನೆಂದಾಗಲೀ (ಪ್ರ + ಋಜ್) ಪರ್ಜನ್ಯಶಬ್ದಕ್ಕೆ ಅರ್ಥವನ್ನು ಹೇಳಬಹುದು. (ನಿ. ೧೦-೧೦) ಎಂದು ತಿಳಿಸಿ ನಿರುಕ್ತಕಾರರು,

**ವಿ ವೃಕ್ಷಾನ್ ಹನ್ತ್ಯುತ ಹಂತಿ ರಕ್ಷಸೋ ವಿಶ್ವಂ ಬಿಭಾಯ ಭುವನಂ ಮಹಾವಧಾತ್ ।**
**ಉತಾನಾಗಾ ಈಷತೇ ವೃಷ್ಣ್ಯಾವತೋ ಯತ್ಪರ್ಜನ್ಯಃ ಸ್ತನಯನ್ ಹಂತಿ ದುಷ್ಕೃತಃ ॥**
(ಋ. ಸಂ. ೫-೮೩-೨)

ಎಂಬ ಋಕ್ಕನ್ನುದಹರಿಸಿ ಪರ್ಜನ್ಯನ ನಾನಾಗುಣಗಳನ್ನು ತಿಳಿಸಿದ್ದಾರೆ. ಪರ್ಜನ್ಯನ ಸ್ವರೂಪವನ್ನು ಬೃಹದ್ದೇವತಾಕಾರರು ಬೃಹದ್ದೇವತೆಯಲ್ಲಿ ಈರೀತಿ ತಿಳಿಸಿದ್ದಾನೆ.

**ಯದಿಮಾಂ ಪ್ರಾರ್ಜಯತ್ಯೇಕೋ ರಸೇನಾಂಬರಜೇನ ಗಾಂ ।**
**ಕಾಲೇಽತ್ರಿತಾರ್ವಶಶ್ಚರ್ಷಿಃ ತೇನ ಪರ್ಜನ್ಯಮಾಹತುಃ ॥** (ಬೃ. ದೇ. ೨-೩೭)

ತಾನೊಬ್ಬನೇ ಪೃಥ್ವಿಯನ್ನು ಅಂತರಿಕ್ಷೋತ್ಪನ್ನವಾದ ಉದಕದಿಂದ ತುಂಬುತ್ತಾನಾದ್ದರಿಂದ **ಉರ್ವಶೀಪುತ್ರನಾದ ಅತ್ರಿಋಷಿಯು** ಈ ದೇವತೆಯನ್ನು ಪರ್ಜನ್ಯನೆಂದು ಕರೆದು ಸ್ತುತಿಸಿದ್ದಾರೆ.

**ತರ್ಪಯತ್ಯೇಷ ಯಲ್ಲೋಕಾನ್ ಜನ್ಯೋ ಜನಹಿತಶ್ಚ ಯತ್ ।**
**ಪರೋ ಜೇತಾ ಜನಯಿತಾ ಯದ್ವಾಗ್ನೇಯಸ್ತತೋ ಜಗೌ ॥**　　(ಬೃ. ದೇ. ೨-೩೮)

ಪ್ರಜೆಗಳಿಗೆ ತೃಪ್ತಿಕಾರಕನಾಮವರಿಂದಲೂ, ಪ್ರಸನ್ನನಾಗಿರುವುದರಿಂದಲೂ, ಪ್ರಜಾಸಖನಾಗಿರುವುದರಿಂದಲೂ ಅಥವಾ ಉತ್ತಮವಾದ ಜೈತ್ರವಾಗಿರುವುದರಿಂದಲೂ, ಅಥವಾ ಉತ್ಪಾದಕನಾಗಿರುವುದರಿಂದಲೂ ಅಗ್ನಿಪುತ್ರನು ಈ ದೇವತೆಯನ್ನು ಪರ್ಜನ್ಯನೆಂದು ಕರೆದಿದ್ದಾನೆ, ಎಂದು ಪರ್ಜನ್ಯನ ನಾನಾಗುಣಗಳನ್ನು ವಿವರಿಸಿದೆ.

ಪರ್ಜನ್ಯನು ಭೂಲೋಕಕ್ಕೆ ಚೈತನ್ಯವನ್ನೂ, ಹರ್ಷವನ್ನೂ ಉಂಟುಮಾಡುವಂತೆ ಅಗ್ನಿಗಳೂ ಸಹ ದ್ಯುಲೋಕಕ್ಕೆ ಚೈತನ್ಯದಾಯಕವಾಗಿಯೂ, ಹರ್ಷದಾಯಕವಾಗಿಯೂ ಇದ್ದಾರೆ. ಅಗ್ನಯಃ-**ಆವಹನೀಯಾದ್ಯಾಃ ಸ್ವೇ ಹುತೇ ಆಹುತ್ಯಾ । ದಿವಂ-ದ್ಯುಲೋಕಸ್ಥಾನ್ ದೇವಾನ್ ಜಿನ್ವಂತಿ-ಪ್ರೀಣಯಂತಿ ।** ತಮ್ಮಲ್ಲಿ ಅರ್ಪಿಸಿದ ಆಹುತಿಗಳಿಂದ ಆಹವನೀಯಾದ್ಯಗ್ನಿಗಳು ದ್ಯುಲೋಕಸ್ಥರಾದ ದೇವತೆಗಳನ್ನು ತೃಪ್ತಿಪಡಿಸುತ್ತಾರೆಂದು ತಾತ್ಪರ್ಯ. ಅಗ್ನಿಯ ಸ್ವರೂಪವು ನಾನಾ ವಿಧವಾಗಿದೆ. **ಜಾತವೇದಸ್, ದ್ರವಿಣೋದಾಃ, ವೈಶ್ವಾನರ** ಇತ್ಯಾದಿ ರೂಪಗಳಿಂದ ಅಗ್ನಿಯು ವಿಶ್ವವ್ಯಾಪಕನಾಗಿ ತನ್ನ ಮಹತ್ತ್ವವನ್ನು ಪ್ರಕಾಶಪಡಿಸುವುದನ್ನೂ, ನಾನಾಶ್ರುತಿಗಳಲ್ಲಿ ಈ ಅಗ್ನಿಯ ವೈಶ್ವಾನರಾದಿರೂಪಗಳನ್ನು ಸ್ತುತಿಸಿರುವುದನ್ನೂ ಹಿಂದೆ ಎಂದರೆ ಋಗ್ವೇದಸಂಹಿತೆಯ ೧೧ನೇ ಭಾಗದಲ್ಲಿ ವಿಶದವಾಗಿ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಅಗ್ನಿಯ ಗಾರ್ಹಪತ್ಯಾದಿಸ್ವರೂಪಗಳನ್ನು ನಿರ್ದೇಶಿಸಿದೆ. **ದಕ್ಷಿಣಾಗ್ನಿ ಗಾರ್ಹಪತ್ಯ, ಆಹವನೀಯ** ಎಂದು ಯಜ್ಞಾಗ್ನಿಯ ಮೂರು ಪ್ರಭೇದಗಳು ಪ್ರಸಿದ್ಧವಾದವು. ಇವುಗಳ ಸ್ವರೂಪವನ್ನು ತಿಳಿಸುತ್ತಾ ತೈತ್ತಿರೀಯಸಂಹಿತೆಯಲ್ಲಿ,

**ಯಥಾ ವೈ ಸಮೃತಸೋಮಾ ಏವಂ ವಾ ಏತೇ ಸಮೃತಯಜ್ಞಾ ಯದ್ದರ್ಶಪೂರ್ಣಮಾಸೌ ಕಸ್ಯ ವಾಹ ದೇವಾ ಯಜ್ಞಮಾಗಚ್ಛಂತಿ ಕಸ್ಯ ವಾ ಬಹೂನಾಂ ಯಜಮಾನಾನಾಂ ಯೋ ವೈ ದೇವತಾಃ ಪೂರ್ವಃ ಪರಿಗೃಹ್ಣಾತಿ ಸ ಏನಾಶ್ವೋ ಭೂತೇ ಯಜತ ಏತದ್ವೈ ದೇವಾನಾಮಾಯತನಂ ಯದಾಹವನೀಯೋಽಂತರಾಗ್ನೀ ಪಶೂನಾಂ ಗಾರ್ಹಪತ್ಯೋ ಮನುಷ್ಯಾಣಾಮನ್ವಾಹಾರ್ಯಪಚನಃ ಪಿತೄಣಾಮಗ್ನಿಂ ಗೃಹ್ಣಾತಿ ಸ್ವ ಏವಾಯತನೇ ದೇವತಾಃ ಪರಿ ಗೃಹ್ಣಾತಿ॥**
(ತೈ. ಸಂ. ೧-೬-೭)

ಸೋಮಯಜ್ಞಗಳಲ್ಲಿ ಸ್ಪರ್ಧೆಯಿರುವಂತೆಯೇ, ದರ್ಶಪೂರ್ಣಾದಿಗಳಲ್ಲಿಯೂ ಸ್ಪರ್ಧೆಯಿರುತ್ತದೆ. ಯಾವ ಯಜಮಾನನು ತನ್ನ ಯಜ್ಞವನ್ನು ದೇವತಾತೃಪ್ತ್ಯರ್ಥವಾಗಿಯೇ ನೆರವೇರಿಸುತ್ತಾನೆಯೋ ಆ ಯಜ್ಞವನ್ನೇ ದೇವತೆಗಳು ಸಮೀಪಿಸುವರು, ಈ ಯಜ್ಞಾಗ್ನಿಗಳಲ್ಲಿ, ಪಶ್ವಂತರಗಳಲ್ಲಿರುವ **ಆಹವನೀಯಾಗ್ನಿಯು** ದೇವತೆಗಳಿಗೆ ಆಯತನವು. **ಗಾರ್ಹಪತ್ಯವು** ಮಾನವರಿಗೂ, **ಅನ್ವಾಹಾರ್ಯಪಚನವು** ಪಿತೃಗಳಿಗೂ ಆಯತನವಾಗಿದೆಯೆಂದು ತಿಳಿಸಿ ಅನಂತರ, ಆಹವನೀಯವು ದೇವಲೋಕಗಾಮಿಗೆ ಸಹಾಯಕವಾದುದು ಎಂದು ತಿಳಿಸಿದೆ.

**“.... .... .... ಬ್ರಹ್ಮವಾದಿನೋ ವದಂತಿ ಕಿಂ ಯಜ್ಞಸ್ಯ ಯಜಮಾನ ಇತಿ ಪ್ರಸ್ತರ ಇತಿ ತಸ್ಯ ಕ್ವ ಸುವರ್ಗೋ ಲೋಕ ಇತ್ಯಾಹವನೀಯ ಇತಿ ಬ್ರೂಯಾದ್ಯತ್ಪ್ರಸ್ತರ ಮಾಹವನೀಯೇ ಪ್ರಹರತಿ ಯಜಮಾನಮೇವ ಸುವರ್ಗಂ ಲೋಕಂ ಗಮಯತಿ ॥**　　(ತೈ. ಸಂ. ೨-೬-೫)

ಯಜ್ಞಕರ್ತನಿಗೂ ಯಜ್ಞಕ್ಕೂ ಇರುವ ಉಪಕಾರ್ಯೋಪಕಾರಕಸಂಬಂಧವನ್ನು ಈ ವಾಕ್ಯದಲ್ಲಿ ತಿಳಿಸಿ ಆಹವನೀಯಾಗ್ನಿಯನ್ನು ಉಪಾಸನೆಮಾಡಿ ಯಜ್ಞವನ್ನಾಚರಿಸುವವನಿಗೆ ದೇವಲೋಕವು ಸಿದ್ಧವೆಂದು ಹೇಳಿದೆ, ಈ ಆಹವನೀಯಾಗ್ನಿಯು ದೇವಲೋಕಕ್ಕೆ ಸಂಬಂಧಿಸಿದುದು ಮತ್ತು ದೇವತೆಗಳಿಗೆ ತೃಪ್ತಿದಾಯಕವಾದುದು.

**ಆಹವನೀಯಂ ಪರೀತ್ಯ ವಾಚಂ ವಿಸೃಜೇರನ್ಯಜ್ಞೋ ವಾ ಆಹವನೀಯಃ ಸ್ವರ್ಗೋ ಲೋಕ ಆಹವನೀಯೋ ಯಜ್ಞೇನೈವ ತತ್ಸ್ವರ್ಗೇಣ ಲೋಕೇನ ಸ್ವರ್ಗಂ ಲೋಕಂ ಯಂತಿ ॥**

(ಐ. ಬ್ರಾ. ೫-೨೪)

ಆಹವನೀಯಾಗ್ನಿಯ ಪ್ರದಕ್ಷಿಣವನ್ನು ಮಾಡುತ್ತಾ "ಆಹವನೀಯವೇ ಯಜ್ಞವು; ಆಹವನೀಯವೇ ಸ್ವರ್ಗವು; ಈ ಆಹವನೀಯಾಗ್ನಿಯ ಉಪಾಸನೆಯಿಂದ ಮಾಡಿದ ಯಜ್ಞದಿಂದಲೇ ಸ್ವರ್ಗಪ್ರಾಪ್ತಿಯಾಗುತ್ತದೆ" ಎಂದು ಪಠಿಸಬೇಕು ಎಂಬ ನಿಯಮವನ್ನು ಐತರೇಯಬ್ರಾಹ್ಮಣದಲ್ಲಿ ತಿಳಿಸಿದೆ.

**ಏಷ ವೈ ಸ ಯಜ್ಞಃ । ಯೇನ ತದ್ದೇವಾ ದಿವಮುಪೋದಕ್ರಾಮನ್ನೇಷ ಆಹವನೀ-ಯೋಽಥ ಯ ಇಹಾಹೀಯತ ಸ ಗಾರ್ಹಪತ್ಯಃ ॥** (ಶ. ಬ್ರಾ. ೧-೨-೩-೨೨)

ಆಹವನೀಯವೇ ಯಜ್ಞವು. ಇದರಿಂದಲೇ ದೇವತೆಗಳಿಗೆ ಸ್ವರ್ಗವಾಸವು ಲಬ್ಧವಾಯಿತು.

**ದೇವಯೋನಿರ್ವಾ ಏಷ ಯದಾಹವನೀಯಃ । ತಸ್ಯೈತಾವಮೃತಪಕ್ಷೌ ಯಾವೇತಾವ-ಭಿತೋಽಗ್ನೀ ತದ್ಯದಾಹವನೀಯೇ ಯಜ್ಞಂ ತನ್ವತೇ ದೇವಯೋನಾವೇವೈತದ್ದೇವೇಭ್ಯೋ ಯಜ್ಞಂ ತನ್ವತ ಉಪ ಹೈನಂ ಪುನರ್ಯಜ್ಞೋ ನಮತಿ ನಾಸ್ಮಾದ್ಯಜ್ಞೋ ವ್ಯವಚ್ಛಿದ್ಯತೇ ಯ ಏವಮೇತದ್ವೇದ ಯಸ್ಯ ವೈವಂ ವಿದುಷ ಏತತ್ಕರ್ಮ ಕ್ರಿಯತೇ ॥** (ಶ. ಬ್ರಾ. ೧೨-೯-೩-೧೦)

ಆಹವನೀಯವು ದೇವತೆಗಳ ಯೋನಿಯು. ಅದರ ಎಡಬಲಭಾಗದಲ್ಲಿರುವ ಅಗ್ನಿಗಳು ಅದರ ಅಮೃತ್ಯವಾದ ಪಕ್ಷಗಳು ಆಹವನೀಯಾಗ್ನಿಯಲ್ಲಿ ಯಜ್ಞಮಾಡತಕ್ಕವರು ದೇವಯೋನಿಯಲ್ಲಿ ಯಜ್ಞಮಾಡಿದಂತೆಯೇ ಆಗುತ್ತದೆ. ಈ ತತ್ತ್ವವನ್ನು ತಿಳಿದವನು ದೇವತೆಗಳ ತೃಪ್ತಿಗೆ ಕಾರಣನಾಗುತ್ತಾನೆ.

ಹೀಗೆ ಆಹವನೀಯಾದ್ಯಗ್ನಿಗಳ ವೈಯಕ್ತಿಕವಾದ ಸ್ವರೂಪವನ್ನು ಅಧಿದೈವತಪಕ್ಷದಲ್ಲಿ ತಿಳಿಸಿದೆ. ಆಹವನೀಯಾದ್ಯಗ್ನಿಗಳ ಸ್ವರೂಪವನ್ನು ಆಧ್ಯಾತ್ಮಪಕ್ಷದಲ್ಲಿ ವಿವರಿಸುತ್ತಾ ಅವುಗಳೆಲ್ಲವೂ ಪರಬ್ರಹ್ಮತತ್ವವನ್ನು ಪ್ರತಿಬಿಂಬಿಸುವುವೆಂದು ಛಾಂದೋಗ್ಯೋಪನಿಷತ್ತಿನಲ್ಲಿ ವಿಶದವಾಗಿ ವರ್ಣಿತವಾಗಿದೆ. (ಛಾ. ಉ. ೪-೧೦-೧೪)

ಪ್ರಕೃತವಾದ ಋಕ್ಕಿನಲ್ಲಿ **ದಿವಃ ಜಿನ್ವಂತ್ಯಗ್ನಯಃ** ಎಂದು ದೇವತಾತೃಪ್ತಿಗೆ ಕಾರಣವಾದ ಅಗ್ನಿಯ ದೇವದೂತತತ್ತ್ವವನ್ನು ಋಕ್ಸಂಹಿತೆಯ ಅನೇಕಕಡೆಗಳಲ್ಲಿ ಸ್ತುತಿಸಿದೆ.

**ಮಹಾँ ಅಸಧ್ವರಸ್ಯ ಪ್ರಕೇತೋ ನ ಋತೇ ತ್ವದಮೃತಾ ಮಾದಯಂತೇ ।**
**ಆ ವಿಶ್ವೇಭಿಃ ಸರಥಂ ಯಾಹಿ ದೇವೈರ್ನ್ಯಗ್ನೇ ಹೋತಾ ಪ್ರಥಮಃ ಸದೇಹ ॥**

(ಋ. ಸಂ. ೭-೧೧-೧)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯಿಲ್ಲದೇ ದೇವತೆಗಳಿಗೆ ಹರ್ಷವೂ ತೃಪ್ತಿಯೂ ಸಾಧ್ಯವಿಲ್ಲವೆಂದೂ ಮತ್ತು ಅವರು ತೃಪ್ತಿಯನ್ನು ಪಡೆಯಬೇಕಾದರೆ ಅಗ್ನಿಯ ಸಹಾಯದ ಅವಶ್ಯಕತೆಯನ್ನು ತಿಳಿಸುತ್ತಾ,

**ತ್ವೇ ಅಗ್ನೇ ವಿಶ್ವೇ ಅಮೃತಾಸೋ ಅದ್ರುಹ ಆಸಾ ದೇವಾ ಹವಿರದಂತ್ಯಾಹುತಂ ।**
**ತ್ವಯಾ ಮರ್ತಾಸಃ ಸ್ವದಂತ ಆಸುತಿಂ ತ್ವಂ ಗರ್ಭೋ ವೀರುಧಾಂ ಜಜ್ಞಿಷೇ ಶುಚಿಃ**

(ಋ. ಸಂ. ೨-೧-೧೪)

ಅಮರ್ತ್ಯರ ತೃಪ್ತಿಗೆ ಅಗ್ನಿಮುಖವೇ ಅತ್ಯಗತ್ಯವೆಂದೂ, ಅಗ್ನಿಮುಖದಿಂದಲೇ ದೇವತೆಗಳು ಆಹುತಿಗಳನ್ನು ಭಕ್ಷಿಸಿ ಹರ್ಷವನ್ನು ಪಡೆಯುವರೆಂದೂ, ಅವನೇ ದೇವತೆಗಳಿಗೆ ಅನ್ನರೂಪನೆಂದೂ ವರ್ಣಿಸಿರುವುದನು ಪ್ರಕೃತವಾದ ಋಕ್ಕಿನಲ್ಲಿ ತಿಳಿಸಿದೆ.



## ದಿವ್ಯಂ ಸುಪರ್ಣಂ ವಾಯಸಂ ಬೃಹಂತಮಪಾಂ ಗರ್ಭಂ ದರ್ಶತಮೋಷಧೀನಾಂ । ಅಭೀಪತೋ ವೃಷ್ಟಿಭಿಸ್ತರ್ಪಯಂತಂ ಸರಸ್ವಂತಮವಸೇ ಜೋಹವೀಮಿ ॥ ೫೨ ॥

ದ್ಯುಲೋಕೋತ್ಪನ್ನನೂ, ಶ್ರೇಷ್ಠವಾದ ಪತನಸಾಧನವುಳ್ಳವನೂ, ಗಮನಶೀಲನೂ, ಮಹತ್ತಿನಿಂದ ಕೂಡಿದವನೂ, ಉದಕಗಳ ಉತ್ಪಾದಕನೂ, ಓಷಧಿಗಳ ಪ್ರಕಾಶಕನೂ, ಅನುಕೂಲಾತ್ಮನಾಗಿ ವೃಷ್ಟಿಗಳಿಂದ ಜಗತ್ತನ್ನು ತೃಪ್ತಿಗೊಳಿಸುವವನೂ, ಉದಕದಿಂದ ಪೂರ್ಣನಾದವನೂ ಆದ ದೇವನನ್ನು ರಕ್ಷಣೆಗಾಗಿ ಪುನಃ ಪುನಃ ಕರೆಯುತ್ತೇನೆ.

ಸರಸ್ವದ್ದೇವತಾಸಂಬಂಬಂಧವಾದ ಯಾಗದಲ್ಲಿ ಪಶುಹೋಮಕಾಲದಲ್ಲಿ ವಪಾಹೋಮಕ್ಕಾಗಿ **ದಿವ್ಯಂ ಸುಪರ್ಣಂ** ಎಂಬ ಈ ಋಕ್ಕನ್ನು ಯಾಜ್ಯಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ದಿವ್ಯಂ ಸುಪರ್ಣಂ ವಾಯಸಂ ಬೃಹಂತಂ ಸ ವಾವೃಧೇ ನರ್ಯೋ ಯೋಷನಾಸು** ಎಂಬ ಸೂತ್ರದಿಂದಲೂ (ಆ. ೩-೮) ಅನ್ವಾರಂಭಣೀಯಸಂಬಂಧವಾದ ಸರಸ್ವದ್ಯಾಗದಲ್ಲಿ ಈ ಋಕ್ಕನ್ನೇ ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ದಿವ್ಯಂ ಸುಪರ್ಣಂ ವಾಯಸಂ ಬೃಹಂತ**ಮಾ ಸವಂ ಸವಿತುರ್ಯಥಾ ಎಂಬ ಸೂತ್ರದಿಂದಲೂ (ಆ. ೨-೮) ವಿವೃತವಾಗಿರುವುದು.

ಈ ಮಂತ್ರವು ಸರಸ್ವದ್ದೇವತಾಕವಾಗಿದೆ. "**ಸರಸ್ವದ್ದೇವತಾಕೇ ಪಶೌ ದಿವ್ಯಂ ಸುಪರ್ಣಂ ಇತಿ ವಪಾಯಾಜ್ಯಾ**" ಎಂದು ವಿಧಿವಾಕ್ಯವು ಈ ಮಂತ್ರದ ವಿನಿಯೋಗವನ್ನು ತಿಳಿಸುತ್ತದೆ. (ಆಶ್ವ. ಶ್ರೌ. ೩-೮) ಸಾಯಣರು **ಸರಸ್ವಂತಂ** ಎಂಬ ಪದಕ್ಕೆ **ದೇವಂ ಸೂರ್ಯಂ ವಾ** ಸರಸ್ವತ್ತೆಂಬ ದೇವತೆಯೆಂದಾಗಲಿ ಅಥವಾ **ಸರಸ್** ಶಬ್ದಕ್ಕೆ ಉದಕವೆಂದರ್ಥವಾಗಿ ಸರಸ್ವತ್ತೆಂದರೆ ಉದಕಯುಕ್ತನಾದ ಸೂರ್ಯನೆಂದಾಗಲಿ ಅರ್ಥವಾಗಬಹುದೆಂದು ವಿಕಲ್ಪಾರ್ಥದಲ್ಲಿ ಹೇಳಿದ್ದಾರೆ. ಈ ಋಕ್ಕಿನಲ್ಲಿ **ದಿವ್ಯಂ ಸುಪರ್ಣಂ** ಇತ್ಯಾದಿ ವಿಶೇಷಣಗಳು ಈ ಎರಡರ್ಥಗಳನ್ನೂ ಸಮರ್ಥಿಸುತ್ತವೆ.

ನಿರುಕ್ತಕಾರರು **ಸರಸ್ವತೀ**ಶಬ್ದದ ನಿರ್ವಚನವನ್ನು ಹೇಳುವುದರಿಂದಲೇ **ಸರಸ್ವತ್**ಶಬ್ದದ ಅರ್ಥವನ್ನೂ ಹೇಳಿದಂತಾಯಿತು ಎಂದು ಸೂಚಿಸಿ ಸರಸ್ವಾನ್ ವ್ಯಾಖ್ಯಾತಃ ಎಂದು ಹೇಳಿದ್ದಾರೆ. (ನಿ. ೧೦-೨೩) **ಸರಸ್ವತೀ**ಶಬ್ದದ ನಿರ್ವಚನವನ್ನು ತಿಳಿಸುತ್ತಾ,

**ಸರಸ್ವತೀ ಸರ ಇತ್ಯುದಕನಾಮ ಸರ್ತೇಸ್ತದ್ವತೀ ॥** (ನಿ. ೯-೨೬)

**ಸರ**ವೆಂದರೆ ಉದಕವೆಂದರ್ಥ. ಇದನ್ನುಳ್ಳವರು **ಸರಸ್ವತೀ** (ಇದೇ ನದ್ಯಾತ್ಮಕವಾದ ದೇವತೆಯ ಹೆಸರಾಗಬಹುದು) ಇದೇ ವಿವರಣೆಯು **ಸರಸ್ವತ್** ಶಬ್ದದ ಅರ್ಥವನ್ನೂ ಹೇಳುತ್ತದೆಂದು ತಿಳಿಸಿ ಅನಂತರ ಋಕ್ಸಂಹಿತೆಯಿಂದ,

**ಯೇ ತೇ ಸರಸ್ವ ಊರ್ಮಯೋ ಮಧುಮಂತೋ ಘೃತಶ್ಚುತಃ । ತೇಭಿರ್ನೋಽವಿತಾ ಭವ ॥**
(ಋ. ಸಂ. ೭-೯೬-೫)

ಎಂಬ ಋಕ್ಕನ್ನು ಉದಹರಿಸಿ ಕೇವಲ ಪಠನದಿಂದಲೇ ಈ ಋಕ್ಕಿನ ಅರ್ಥವು ಸುಲಭವಾಗಿ ಆಗುತ್ತದೆಂದು ತಿಳಿಸಿದ್ದಾರೆ. ಆದರೂ ಸಹ **ಊರ್ಮಯಃ, ಘೃತಶ್ಚುತಃ** ಇತ್ಯಾದಿ ಪದಗಳು ಇಲ್ಲಿ ಗಮನಾರ್ಹವಾದವಾಗಿವೆ. ಈ ದೇವತೆಯು ಮಧ್ಯ ಲೋಕವರ್ತಿಯಾದ ದೇವತೆಯೆಂದು ಬೃಹದ್ದೇವತಾವಾಕ್ಯದಿಂದ ತಿಳಿಯುತ್ತದೆ.

**ಮನ್ಯುಶ್ಚ ವಿಶ್ವಕರ್ಮಾ ಚ ಮಿತ್ರಃ ಕ್ಷೇತ್ರಪತಿರ್ಯಮಃ ।**
**ತಾರ್ಕ್ಷ್ಯೋ ವಾಸ್ತೋಷ್ಪತಿಶ್ಚೈವ ಸರಸ್ವಾಂಶ್ಚೈವಮತ್ರ ಹ ॥** (ಬೃ. ದೇ. ೧-೧೨೩)

ಇಂದ್ರನ ವಾಸಸ್ಥಾನವಾದ ಮಧ್ಯಮಲೋಕದಲ್ಲಿ ಮನ್ಯು, ವಿಶ್ವಕರ್ಮ, ಸರಸ್ವಾನ್ ಇತ್ಯಾದಿ ದೇವತೆಗಳೆಲ್ಲರೂ ಸಹ ಇಂದ್ರನೊಡನೆ ಸೇರಿಕೊಂಡಿರುತ್ತಾರೆ.

**ಸರಾಂಸಿ ಘೃತವಂತ್ಯಸ್ಯ ಸಂತಿ ಲೋಕೇಷು ಯತ್ರಿಷು ।**
**ಸರಸ್ವಂತಮಿತಿ ಪ್ರಾಣೋ ವಾಚಂ ಪ್ರಾಹುಃ ಸರಸ್ವತೀಂ ॥** (ಬೃ. ದೇ. ೪-೩೯)

ವಾಕ್ಕೇ ಮಾತೃವು; ಪ್ರಾಣವೇ ಪುತ್ರನು. **ಸರಸ್ವತ್** ಶಬ್ದದಿಂದ ಪ್ರಾಣವೂ, ಸರಸ್ವತೀಶಬ್ದದಿಂದ ವಾಕೂ ನಿರ್ದಿಷ್ಟವಾಗಿದೆ. ಅವರಿಬ್ಬರಿಗೂ ಮಾತೃಪುತ್ರಸಂಬಂಧವಾಯಿತು.

**ಇಂದ್ರಂ ಮಿತ್ರಮಿಮೇ ಸೌತ್ಯಾ ಸೌರೀ ವಾಂತ್ಯಾ ಸರಸ್ವತೇ ।** (ಬೃ. ದೇ. ೪-೪೨)

೨-೧-೬೪ ನೇ ಸೂಕ್ತದಲ್ಲಿ ಅಂತ್ಯಮಂತ್ರವಾದ "**ದಿವ್ಯಂ ಸುಪರ್ಣಂ**" ಎಂಬುದು ಮೇಲೆ ತಿಳಿಸಿದ ಸರಸ್ವದ್ದೇವತಾಕವಾಗಿದೆ ಎಂದು ಬೃಹದ್ದೇವತೆಯಿಂದ ಸ್ಪಷ್ಟವಾಗಿ ತಿಳಿಯುತ್ತದೆ. ಶತಪಥಬ್ರಾಹ್ಮಣದಲ್ಲಿ ಸರಸ್ವತ್ ಮತ್ತು ಸರಸ್ವತೀ ಎಂಬ ಎರಡು ದೇವತೆಗಳ ಸಂಬಂಧವನ್ನು ತಿಳಿಸುತ್ತಾ ಅವರನ್ನು ಉದ್ದೇಶಿಸಿ ಅರ್ಪಿತವಾಗುವ ಆಹುತಿಯ ವಿಭಾಗವನ್ನು ಈ ರೀತಿ ಹೇಳಿದೆ.

**ತದ್ಧೈಕೇ । ಚತೂ ನಿರ್ವಪಂತಿ ಪೌರ್ಣಮಾಸ್ಯಾಂ ಸರಸ್ವತೇಽಮಾವಾಸ್ಯಾಯಾಂ ಸರಸ್ವತ್ಯಾ ಏತತ್ಪ್ರತ್ಯಕ್ಷಂ ದರ್ಶಪೂರ್ಣಮಾಸೌ ಯಜಾಮಹ ಇತಿ ವದಂತಸ್ತದು ತಥಾ ನ ಕುರ್ಯಾನ್ಮನೋ ವೈ ಸರಸ್ವಾನ್ವಾಕ್ಸರಸ್ವತೀ ಸ ಯದೇವೈತಾವಾಘಾರಯತಿ ತದೇವಾಸ್ಯ ದರ್ಶಪೂರ್ಣಮಾಸಾವಿಷ್ಟೌ ಭವತಸ್ತಸ್ಮಾದೇತೌ ಚತೂ ನ ನಿರ್ವಪೇತ್ ॥**
ಶ. ಬ್ರಾ. ೧೧-೨-೪-೯)

ಸರಸ್ವತ್ತೇ ಮನಸ್ಸು, ಸರಸ್ವತಿಯೇ ವಾಕ್ಕು; ದರ್ಶಪೂರ್ಣಮಾಸಾದಿಗಳಲ್ಲಿ ಆಘಾರಗಳ ಅರ್ಪಣೆಯೇ ಸಾಕಾಗಿರುವುದರಿಂದ ಚತೂನಿರ್ವಪನವು ಅವಶ್ಯವಲ್ಲವೆಂದು ತಿಳಿಸುವಾಗ ಸರಸ್ವತ್ತಿಗೂ ಸರಸ್ವತಿಗೂ ಇರುವ ಸಂಬಂಧವನ್ನೂ ಹೇಳಿದೆ.

ಸಾಯಣರು ಅರ್ಥಮಾಡಿರುವಂತೆ ಪ್ರಕೃತವಾದ ಋಕ್ಕಿನಲ್ಲಿ **ಸರಸ್ವಂತಂ-ಉದಕವಂತಂ । ಸರ ಇತ್ಯುದಕನಾಮ । ದೇವಂ ಸೂರ್ಯಂ ವಾ ।** ಸರಸ್ವದ್ದೇವತೆಯೆಂದಾಗಲಿ ಅಥವಾ ಉದಕವಂತನಾದ ಸೂರ್ಯನೆಂದಾಗಲಿ ಅರ್ಥವಾಗುತ್ತದೆ. ಒಂದು ವೇಳೆ ಸೂರ್ಯನೆಂದರ್ಥಮಾಡಿದರೂ ಸಹ **ಸರಸ್ವಾನ್** ಎಂಬ ವಿಶೇಷಣವು ಈ ಸಂದರ್ಭದಲ್ಲಿ ಹೊಂದಿಕೊಳ್ಳುತ್ತದೆ.

ಉದಕವು ಸೂರ್ಯನ ಅಂತರ್ಗತವಾಗಿಲ್ಲದಿದ್ದರೂ ಸಹ ಸೂರ್ಯನು ಉದಕದ ಮಧ್ಯದಲ್ಲಿ ಪರಿಭ್ರಮಣವನ್ನು ಮಾಡುತ್ತಿರುವುದರಿಂದಲೂ ಅಥವಾ ಉದಕದ ಉತ್ಪಾದಕನಾಗಿರುವುದರಿಂದಲೂ ಈ ವಿಶೇಷಣವು ಉಚಿತವಾಗಿರುವುದೆಂದು ಶತಪಥಾದಿವಾಕ್ಯಗಳ ವರ್ಣನೆಯಿಂದ ತಿಳಿಯುತ್ತದೆ.

**ಅಪಾಂ ಗಂಭನ್ತ್ಸೀದೇತಿ । ಏತದ್ವಾಪಾಂ ಗಂಭಿಷ್ಠಂ ಯತ್ರೈಷ ಏತತ್ತಪತಿ ।**

(ಶ. ಬ್ರಾ. ೭-೫-೧-೮)

ಸೂರ್ಯನು ಅಂತರಿಕ್ಷದಲ್ಲಿ ಗಭೀರವಾದ ಉದಕದ ಮಧ್ಯದಲ್ಲಿ ಪ್ರಕಾಶಿಸುತ್ತಿದ್ದಾನೆ.

**ಅಗ್ನೇ ದಿವೋಽರ್ಣಮಚ್ಛಾ ಜಿಗಾಸೀತಿ । ಅಪೋ ವಾ ಅಸ್ಯ ದಿವೋಽರ್ಣಸ್ತಾ............**
**ಯಾ ರೋಚನೇ ಪರಸ್ತಾತ್ಸೂರ್ಯಸ್ಯ ॥** (ಶ. ಬ್ರಾ. ೭-೧-೧-೨೪)

ಎಲೈ ಅಗ್ನಿಯೇ, [ಸರಸ್ವತ್ತೆಂಬ ದೇವತೆಯೂ ಸಹ ಮಧ್ಯಲೋಕವರ್ತಿಯಾದ ಅಗ್ನಿಯ ರೂಪಾಂತರವೆಂದೂ ಹೇಳಬಹುದು]. ದ್ಯುಲೋಕದಲ್ಲಿ ನಿನ್ನ ತೇಜಸ್ಸೆಲ್ಲವೂ ಆದಿತ್ಯರೂಪದಲ್ಲಿ ಪ್ರಕಾಶಿಸುತ್ತಿದೆ. ಅಂತರಿಕ್ಷಸ್ಥವಾದ ಪ್ರವಾಹದಲ್ಲಿ ನೀನು ಬೆಳಗುತ್ತಿದ್ದೀಯೆ. ಆ ಪ್ರವಾಹವು ಅಂತರಿಕ್ಷಸ್ಥವಾದ ಉದಕದಿಂದ ವ್ಯಾಪ್ತವಾಗಿದೆ. ಆ ಉದಕದ ಪ್ರವಾಹವು ಆದಿತ್ಯನ ತೇಜೋಮಂಡಲವನ್ನೂ ಮೀರಿದೆ. ಕೆಳಗೂ, ಮೇಲೂ, ಸುತ್ತಲೂ ವ್ಯಾಪಿಸಿರುವ ಪ್ರವಾಹದ ನಡುವೆ ಆದಿತ್ಯರೂಪದ ಅಗ್ನಿಯು ಪ್ರಕಾಶಿಸುತ್ತಿದ್ದಾನೆ, ಇತ್ಯಾದಿಯಾಗಿ ವರ್ಣಿತವಾಗಿದೆ. **ಸರಸ್ವಾನ್** ಎಂಬ ವಿಶೇಷಣವಿರುವುದರಿಂದ **ಸರಸ್ವತೀ** ನಾಮಕವಾದ ನದಿಗೂ ಸಂಬಂಧವಿರಬಹುದೆಂದು ಊಹಿಸಬಹುದು. Macdonell ಎಂಬ ಪಂಡಿತನು ಬೃಹದ್ದೇವತೆಯಲ್ಲಿರುವ ಈ ದೇವತಾಪರವಾದ ವಾಕ್ಯಗಳನ್ನು ಪರಿವರ್ತಿಸುವಾಗ ತನ್ನ ಅಭಿಪ್ರಾಯವನ್ನು ಈರೀತಿ ತಿಳಿಸಿದ್ದಾನೆ.

Yaska does not explain this word Saraswati (Nirukta-X 24) he merely remarks ಸರಸ್ವಾನ್ ವ್ಯಾಖ್ಯಾತಃ This must refer to Nir. II 23 where ಸರಸ್ವತೀ is stated to be a name of ವಾಕ್ (R. V. VI. 61-2) being quoted as an example of ಸರಸ್ವತೀ as a river, while examples of her as a goddess (ಮಧ್ಯಸ್ಥಾನಾ ಸ್ತ್ರೀ) were deffered to Nir. XI. 25-27

(Brihaddevata II-51. Translation and notes by Macdonell p. 44)

**ಸುಪರ್ಣಂ ವಾಯಸಂ** ಎಂಬ ಎರಡು ವಿಶೇಷಣಗಳಿವೆ. ಸಾಯಣರು **ಸುಪರ್ಣಶಬ್ದಕ್ಕೆ ಶೋಭನಗಮನಂ** ಎಂದೂ, **ವಾಯಸಂ** ಎಂಬ ಶಬ್ದಕ್ಕೆ ಗಮನಶೀಲಂ ಎಂದೂ ಅರ್ಥಮಾಡಿದ್ದಾರೆ. Wilson ಎಂಬುವನು ಸುಪರ್ಣಶಬ್ದಕ್ಕೆ Well-Winged ಎಂದು ಅರ್ಥಹೇಳಿರುವುದು ಉಚಿತವಾಗಿರುವಂತೆ ಕಾಣುತ್ತದೆ.

ಸುಪರ್ಣಶಬ್ದವು ರಶ್ಮಿ ನಾಮಗಳಲ್ಲಿಯೂ (ನಿ. ೨-೧೫) ಅಶ್ವನಾಮಗಳಲ್ಲಿಯೂ (ನಿ. ೨-೨೭) ಪಠಿತವಾಗಿದೆಯಾದರೂ, **ಪಕ್ಷಿ, ಬಾಣ** ಇತ್ಯಾದ್ಯರ್ಥಗಳಲ್ಲಿಯೂ ಸಹ ಉಪಯೋಗಿಸಲ್ಪಟ್ಟಿದೆ. ಯಾವ ಅರ್ಥವನ್ನು ಹೇಳಿದರೂ ಸಹ ಶೋಭನಪತನ ಎಂದರೆ ಮನೋಹರವಾಗಿ ಸಂಚರಿಸತಕ್ಕದ್ದು ಎಂಬರ್ಥವನ್ನೇ ತಿಳಿಸಿದೆ. ಈ ಪದದ ನಿರ್ವಚನವನ್ನೂ ಬೇರೆ ಬೇರೆ ಅರ್ಥಗಳಲ್ಲಿ ಇದರ ಪ್ರಯೋಗಗಳನ್ನೂ ಸಹ ಇದೇ ಭಾಗದ 421ನೇ ಪೇಜಿನಲ್ಲಿ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಗಮನಸಾಧನವೆಂಬರ್ಥವನ್ನು ಹೇಳಬಹುದು. ಉಳಿದ ವಿಶೇಷಣಗಳು ಸ್ಪಷ್ಟಾರ್ಥಗಳುಳ್ಳವಾಗಿಯೇ ಇವೆ. ಸಂತಾನೇಚ್ಛೆಯುಳ್ಳವರು ಸರಸ್ವದ್ದೇವತೆಯನ್ನು ಆರಾಧಿಸುವ ವಾಡಿಕೆಯಿರುವುದಾಗಿ ಕೆಲವು ಸನ್ನಿವೇಶಗಳಿಂದ ತಿಳಿಯುತ್ತದೆ. Muir ಎಂಬುವನು ಈ ಅಂಶವನ್ನು ವಿವರಿಸುತ್ತಾ ತನ್ನ ಅಭಿಪ್ರಾಯವನ್ನು ಕೆಳಗಿನ ವಾಕ್ಯಗಳಲ್ಲಿ ತಿಳಿಸಿದ್ದಾನೆ. ಅವನು ಹೇಳುವಂತೆ,

"In VII 96. 4-6, a river God called ಸರಸ್ವತ್, is assigned as a consort to ಸರಸ್ವತೀ, who rolls along his fertilizing waters and is invoked by the worshippers who are seeking for wives and offspring, as well as for plenty and protection"

(Muir· original Sanskrit Texts· Vol· V· P. 240)

ಸರಸ್ವತೀನದಿಯ ಪತಿಯೂ, ನದ್ಯಾತ್ಮಕವಾದ ದೇವತೆಯೂ ಆದ ಸರಸ್ವದ್ದೇವತೆಯನ್ನು ಪತ್ನೀಕಾಮರೂ, ಪುತ್ರ ಕಾಮರೂ, ಸಂಪತ್ತನ್ನು ಪಡೆಯಲಿಚ್ಛೆಯುಳ್ಳವರೂ ಸಹ ಪ್ರಾರ್ಥಿಸುತ್ತಾರೆ. ಋಕ್ಸಂಹಿತೆಯಲ್ಲಿ ಈ ಪ್ರಾರ್ಥನಾ ವಿಶೇಷವು ಈ ದೇವತೆಯ ಮಹತ್ತ್ವವನ್ನು ಸೂಚಿಸುತ್ತದೆ. ಇದನ್ನು ಸಂಕ್ಷೇಪವಾಗಿ ಇಲ್ಲಿ ಉದಹರಿಸಲಾಗುತ್ತದೆ.

**ಜನೀಯಂತೋ ನಗ್ರವಃ ಪುತ್ರೀಯಂತಃ ಸುದಾನವಃ । ಸರಸ್ವಂತಂ ಹವಾಮಹೇ ।**

(ಋ. ಸಂ. ೭-೯೬-೪)

ಪತ್ನಿಯರನ್ನು ಅಪೇಕ್ಷಿಸುವವರೂ, ಪುತ್ರೇಚ್ಛೆಯುಳ್ಳವರೂ, ಶ್ರೇಷ್ಠವಾದ ದಾತೃಗಳೂ ಆದ ನಾವು ನಮ್ಮ ಇಷ್ಟಾರ್ಥ ಗಳನ್ನು ನೆರವೇರಿಸಿಕೊಡಬೇಕೆಂದು ಸರಸ್ವಂತನನ್ನು ಪ್ರಾರ್ಥಿಸುತ್ತೇವೆ.

**ಯೇ ತೇ ಸರಸ್ವ ಊರ್ಮಯೋ ಮಧುಮಂತೋ ಘೃತಶ್ಚುತಃ । ತೇಭಿರ್ನೋಽವಿತಾ ಭವ ।**

(ಋ. ಸಂ. ೭-೯೬-೫)

ಎಲೈ ಸರಸ್ವದ್ದೇವತೆಯೇ, ನಿನ್ನ ಜಲಸಂಘಗಳು ರಸವತ್ತಾಗಿವೆ. ವೃಷ್ಟ್ಯುದಕವನ್ನು ಸುರಿಸುವವಾಗಿವೆ. ನಿನ್ನ ಜಲ ಸಂಘ ಗಳಿಂದ ನಮ್ಮೆಲ್ಲರನ್ನೂ ರಕ್ಷಿಸು.

**ಪೀಪಿವಾಂಸಂ ಸರಸ್ವತಃ ಸ್ತನಂ ಯೋ ವಿಶ್ವದರ್ಶತಃ । ಭಕ್ಷೀಮಹಿ ಪ್ರಜಾಮಿಷಂ ॥**

(ಋ. ಸಂ. ೭-೯೬-೬)

ಸರಸ್ವದ್ದೇವತೆಯು ಪ್ರವೃದ್ಧವಾದುದೂ, ಸ್ತನದಂತೆ ರಸಾಧಾರವಾದುದೂ ಆದ ಮೇಘವನ್ನು ನಾವು ಭಜಿಸುತ್ತೇವೆ. ಆ ದೇವತೆಯು ನಮಗೆ ಪ್ರತ್ಯಕ್ಷನಾಗುತ್ತಾನೆ. ಅವನ ಅನುಗ್ರಹದಿಂದ ನಾವೆಲ್ಲರೂ ಪುತ್ರಾದಿಗಳನ್ನೂ ಅನ್ನಸಂಪತ್ತನ್ನೂ ಪಡೆದು ಸುಖವನ್ನನುಭವಿಸುತ್ತೇವೆ. ಇತ್ಯಾದಿಯಾಗಿ ಈ ದೇವತೆಯನ್ನು ಪ್ರಾರ್ಥಿಸಿದೆ.

ತೈತ್ತಿರೀಯಸಂಹಿತೆಯಲ್ಲಿ ಈ ದೇವತೆಯು ಪಶುಗಳಿಗೂ, ಉದಕಗಳಿಗೂ ಪ್ರಭುವೆಂದು ಪ್ರಶಂಸಿಸುತ್ತಾ,

ಯಸ್ಯ ವ್ರತಂ ಪಶವೋ ಯಂತಿ ಸರ್ವೇ ಯಸ್ಯ ವ್ರತಮುಪತಿಷ್ಠಂತ ಆಪಃ ।
ಯಸ್ಯ ವ್ರತೇ ಪುಷ್ಟಿಪತಿರ್ನಿವಿಷ್ಟಸ್ತಗ್ಂ ಸರಸ್ವಂತಮವಸೇ ಹುವೇಮ ॥ (ತೈ. ಸಂ. ೩-೧-೧೧ ೩)

ಯಾವ ದೇವತೆಯ ಅನುಶಾಸನವನ್ನು ಪಶುಗಳೆಲ್ಲವೂ ಪಾಲಿಸುತ್ತವೆಯೋ, ಯಾವ ದೇವತೆಯ ನಿಯಮವನ್ನು ಉದಕಗಳೆಲ್ಲವೂ ಪರಿಪಾಲಿಸುತ್ತವೆಯೋ ಅಂತಹ ಸರಸ್ವದ್ದೇವತೆಯನ್ನು ನಾವು ರಕ್ಷಣೆಗಾಗಿ ಪ್ರಾರ್ಥಿಸಿ ಕರೆಯುತ್ತೇವೆ ಆ ದೇವತೆಯ ಅಧೀನದಲ್ಲಿಯೇ ಪುಷ್ಟಿಪತಿಯೂ ಸಹ ಆಶ್ರಯವನ್ನು ಪಡೆದಿರುತ್ತಾನೆ. ಇತ್ಯಾದಿಯಾಗಿ ಪ್ರಾರ್ಥಿಸಿದೆ. ಇದೇ ಸಂದರ್ಭದಲ್ಲಿ ಮೇಲೆ ಉದಹರಿಸಿರುವ "ಯೇ ತೇ ಸರಸ್ವ............................" (ಋ. ಸಂ. ೭-೯೬-೫) ಎಂಬ ಋಕ್ಕನ್ನೂ ಪ್ರಕೃತವಾದ "ದಿವ್ಯಂ ಸುಪರ್ಣಂ...................." (ಋ. ೧-೧೬೪-೫೨) ಎಂಬ ಋಕ್ಕನ್ನೂ ಸಹ ಪಠಿಸಿ ಈ ದೇವತೆಯ ರಕ್ಷಣೆಯನ್ನು ಕೋರಿದೆ.

**ಇಲ್ಲಿಗೆ ಬ್ರಹ್ಮೋದ್ಯವು ಸಮಾಪ್ತವು.**

# ಅಥೈತರೇಯಬ್ರಾಹ್ಮಣೇ ಪಂಚವಿಂಶಾಧ್ಯಾಯೇ ಪ್ರಥಮಃ ಖಂಡಃ

## ಇಪ್ಪತ್ತೈದನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು



[ ಅಗ್ನಿಹೋತ್ರವು ಬ್ರಹ್ಮನೆಂಬ ಋತ್ವಿಜನ ಕರ್ತವ್ಯವು.]

[ ಅಗ್ನಿಹೋತ್ರವು : ಯಜ್ಞಮಾಡುವ ಯಜಮಾನನು ಆಹವನೀಯಕುಂಡಕ್ಕೆ ಅಗ್ನಿಯನ್ನು ತರುವಂತೆ. ಪುರೋಹಿತನಿಗೆ ಹೇಳುವುದು. ಅಗ್ನಿಹೋತ್ರದ ಹದಿನಾರು ಭಾಗಗಳು.]



**ಉದ್ಧರಾऽऽಹವನೀಯಮಿತ್ಯಪರಾಹ್ಣ ಆಹ ಯದೇವಾನ್ಹಾ ಸಾಧು ಕರೋತಿ ತದೇವ ತತ್ಪ್ರಾಙುದ್ಧೃತ್ಯ ತದಭಯೇ ನಿಧತ್ತೇ ॥**

**ದಶಮಮಹರವಿವಾಕ್ಯಮಭಿಧಾಯ ದ್ವಾದಶಾಹಃ ಸಮಾಪಿತಃ । ಅಥಾಗ್ನಿಹೋತ್ರಮಭಿಧೀಯತೇ । ತತ್ರಾಧ್ವರ್ಯುಂ ಪ್ರತಿ ಯಜಮಾನೋऽಗ್ನ್ಯುದ್ಧರಣಕರ್ತವ್ಯತಾಂ ಬ್ರೂಯಾತ್ । ತದಾಹಾऽऽಪಸ್ತಂಬಃ—'ಉದ್ಧರೇತ್ಯೇವ ಸಾಯಮಾಹ ಯಜಮಾನ ಉದ್ಧರೇತಿ ಪ್ರಾತಃ' ಇತಿ । ತತ್ರ ಸಾಯಂಕಾಲೀನಂ ಯಜಮಾನಕರ್ತವ್ಯಂ ವಿಧತ್ತೇ—ಅಗ್ನಿಹೋತ್ರಸ್ಯಾಧ್ವರ್ಯುರೇಕ ಏವ ಋತ್ವಿಗ್ಭವತಿ । ತಥಾ ಚ ಶಾಖಾಂತರೇ ಶ್ರೂಯತೇ—'ತಸ್ಮಾದಗ್ನಿಹೋತ್ರಸ್ಯ ಕ್ರತೋರೇಕ ಋತ್ವಿಕ್' ಇತಿ । ತಮಧ್ವರ್ಯುಂ ಯಜಮಾನಃ ಪ್ರೇಷ್ಯತಿ । ಹೇऽಧ್ವರ್ಯೋ, ಆಹವನೀಯಾಖ್ಯಂ ವಹ್ನಿಮುದ್ಧರೇತಿ । ಜ್ವಲಂತಮಗ್ನಿಂ ಗಾರ್ಹಪತ್ಯಾದುದ್ಧೃತ್ಯ ಪ್ರಾಂಚಂ ಪ್ರಣೀಯಾಹವನೀಯಸ್ಥಾನೇ ನಿಧೇಹೀತ್ಯರ್ಥಃ । ತಥಾ ಚಾಶ್ವಲಾಯನ ಆಹ—ಗಾರ್ಹಪತ್ಯಾದಾಹವನೀಯಂ ಜ್ವಲಂತಮುದ್ಧರೇತ್' ಇತಿ । ಉದ್ಧರಾಹವನೀಯಮಿತ್ಯಮುಂ ಪ್ರೈಷಮಪರಾಹ್ಣೇ ಸಾಯಂಕಾಲೇ ಸೂರ್ಯಾಸ್ತಮಯಾತ್ಪ್ರಾಗ್ಯಜಮಾನೋ ಬ್ರೂಯಾತ್ । ಏವಂ ಸತಿ ಅಹ್ನಾ ಸರ್ವೇಣಾಪಿ ಯದೇವ ಪುಣ್ಯಂ ಯಜಮಾನಃ ಕರೋತಿ ತತ್ಸರ್ವಂ ಪ್ರಾಙುದ್ಧೃತ್ಯ ಭಯರಹಿತ ಆಹವನೀಯಸ್ಥಾನೇ ನಿಹಿತಂ ಭವತಿ ॥**

ದ್ವಾದಶಾಹಸತ್ರದಲ್ಲಿ ಹೆಚ್ಚು ಮಾತನ್ನು ಹೇಳದಿರುವ ಹತ್ತನೇ ದಿನವನ್ನು ಮುಗಿಸಿದಮೇಲೆ ಇನ್ನೇನೂ ಹೆಚ್ಚು ಕಾರ್ಯಕಲಾಪಗಳು ಉಳಿಯುವುದಿಲ್ಲ. ಇಲ್ಲಿಗೆ ದ್ವಾದಶಾಹವೆಂಬ ಸತ್ರಯಾಗವು ಮುಗಿದಂತಾಯಿತು. ಇಲ್ಲಿಂದ ಮುಂದಕ್ಕೆ ಅಗ್ನಿಹೋತ್ರವೆಂಬ ಕರ್ಮವನ್ನು ಹೇಳಲಾಗುವುದು. ಆಗ ಯಜಮಾನನು ಅಧ್ವರ್ಯುವನ್ನು ಉದ್ದೇಶಿಸಿ ಅಗ್ನ್ಯುದ್ಧರಣ ಕಾರ್ಯವನ್ನು ಮಾಡಬೇಕೆಂದು ಹೇಳುವನು. ಈ ವಿಷಯದಲ್ಲಿ ಆಪಸ್ತಂಬಮಹರ್ಷಿಯು — **ಉದ್ಧರೇತ್ಯೇವ ಸಾಯಮಾಹ ಯಜಮಾನ ಉದ್ಧರೇತಿ ಪ್ರಾತಃ** ಎಂದು ಹೇಳಿರುವರು. ಈಗ ಸಾಯಂಕಾಲದಲ್ಲಿ ಮಾಡಬೇಕಾದ ಕರ್ತವ್ಯವನ್ನು

ತಿಳಿಸುವರು—ಅಗ್ನಿ ಹೋತ್ರವೆಂಬ ಕರ್ಮಕ್ಕೆ (ಹೋಮಕ್ಕೆ) ಅಧ್ವರ್ಯು ಒಬ್ಬನೇ ಋತ್ವಿಕ್ಕು (ಪುರೋಹಿತನು). ಶಾಖಾಂತರದಲ್ಲಿ ಈರೀತಿ ಹೇಳಿರುವುದು—ತಸ್ಮಾದಗ್ನಿಹೋತ್ರಸ್ಯ ಕ್ರತೋರೇಕ ಋತ್ವಿಕ್ ಎಂದರೆ ಅಗ್ನಿಹೋತ್ರವೆಂಬ ಕರ್ಮಕ್ಕೆ ಅಧ್ವರ್ಯುವೆಂಬ ಒಬ್ಬನೆ ಋತ್ವಿಜನಿರುವನು. ಯಜಮಾನನು ಅಧ್ವರ್ಯುವನ್ನು ಕುರಿತು—ಎಲೈ ಅಧ್ವರ್ಯುವೇ, ಆಹವನೀಯವೆಂಬ ಅಗ್ನಿಯನ್ನು ತೆಗೆದುಕೊಂಡು ಬಾ ಎಂದು ಹೇಳುವನು. ಎಂದರೆ ಪ್ರಕಾಶಮಾನವಾಗಿ ಉರಿಯುತ್ತಿರುವ ಗಾರ್ಹಪತ್ಯ ಎಂಬ ಅಗ್ನಿಯಿಂದ ಸ್ವಲ್ಪಭಾಗವನ್ನು ತೆಗೆದುಕೊಂಡುಬಂದು ಪೂರ್ವದಿಕ್ಕಿನಲ್ಲಿರುವ ಆಹವನೀಯವೆಂಬ ಅಗ್ನಿಯ ಸ್ಥಾನದಲ್ಲಿಡು ಎಂದಭಿಪ್ರಾಯವು. ಈ ವಿಷಯದಲ್ಲಿ ಆಶ್ವಲಾಯನರು—ಗಾರ್ಹಪತ್ಯಾದಾಹವನೀಯಂ ಜ್ವಲಂತಮುದ್ಧರೇತ್ ಎಂದು ಹೇಳಿರುವರು. ಎಂದರೆ ಉರಿಯುತ್ತಿರುವ ಗಾರ್ಹಪತ್ಯಾಗ್ನಿಯಿಂದ ಸ್ವಲ್ಪಭಾಗವನ್ನು ತೆಗೆದುಕೊಂಡುಬಂದು ಆಹವನೀಯ ಸ್ಥಾನದಲ್ಲಿ ಇಡು ಎಂದು ಇದರ ಅಭಿಪ್ರಾಯವು. ಹೀಗೆ ಹೇಳುವಾಗ ಯಜಮಾನನು ಅಧ್ವರ್ಯುವನ್ನುದ್ದೇಶಿಸಿ ಸಾಯಂಕಾಲದಲ್ಲಿ ಸೂರ್ಯಾಸ್ತಮಯಕ್ಕೆ ಮುಂಚಿತವಾಗಿ ಎಂದರೆ (ಅಪರಾಹ್ಣದಲ್ಲಿ) ಆಹವನೀಯಾಗ್ನಿಯಲ್ಲಿ ಗಾರ್ಹಪತಾಗ್ನಿಯ ಸ್ವಲ್ಪಭಾಗವನ್ನು ತಂದಿಡು ಎಂದು ಹೇಳಬೇಕು. ಹೀಗೆ ಮಾಡುವುದರಿಂದ ಯಜಮಾನನು ಹಗಲಿನಲ್ಲಿ ಮಾಡಿರಬಹುದಾದ ಪುಣ್ಯಕೆಲಸವೆಲ್ಲವನ್ನೂ ತೆಗೆದುಕೊಂಡುಬಂದು ಆಹವನೀಯಸ್ಥಾನದಲ್ಲಿ ಇಟ್ಟಂತಾಗುವುದು.

**ಉದ್ಧರಾಹವನೀಯಮಿತಿ ಪ್ರಾತರಾಹ ಯದೇವ ರಾತ್ರ್ಯಾ ಸಾಧು ಕರೋತಿ ತದೇವ ತತ್ಪ್ರಾಙುದ್ಧೃತ್ಯ ತದಭಯೇ ನಿಧತ್ತೇ ॥**

ಪ್ರಾತಃಕಾಲೀನಂ ಯಜಮಾನಕರ್ತವ್ಯಂ ವಿಧತ್ತೇ—ಪೂರ್ವವದ್ವ್ಯಾಖ್ಯೇಯಂ ॥

ಪ್ರಾತಃಕಾಲದಲ್ಲಿ ಯಜಮಾನನು ಮಾಡಬೇಕಾದ ಕರ್ತವ್ಯವನ್ನು ತಿಳಿಸುವರು. ಮೇಲೆ ಹೇಳಿದಂತೆ ಯಜಮಾನನು ಅಧ್ವರ್ಯುವನ್ನು ಕುರಿತು—ಉದ್ಧರಾಹವನೀಯಂ ಆಹವನೀಯಾಗ್ನಿಗೆ ಗಾರ್ಹಪತ್ಯದಿಂದ ಅಗ್ನಿಯನ್ನು ತಂದಿಡು ಎಂದು ಹೇಳುವನು. ಈ ಮಾತನ್ನು ಪ್ರಾತಃಕಾಲದಲ್ಲಿ ಹೇಳುವನು. ಇದರಿಂದ ರಾತ್ರಿಯಲ್ಲಿ ಮಾಡಿದ ಪುಣ್ಯವೆಲ್ಲವನ್ನು ಆಹವನೀಯ ಸ್ಥಾನದಲ್ಲಿ ತಂದಿಟ್ಟಂತಾಗುವುದು.

**ಯಜ್ಞೋ ವಾ ಆಹವನೀಯಃ ಸ್ವರ್ಗೋ ಲೋಕ ಆಹವನೀಯಃ ಯಜ್ಞ ಏವ ತತ್ಸ್ವರ್ಗೇ ಲೋಕೇ ಸ್ವರ್ಗಂ ಲೋಕಂ ನಿಧತ್ತೇ ಯ ಏವಂ ವೇದ ॥**

ಆಹವನೀಯೋದ್ಧರಣಂ ಪ್ರಶಂಸತಿ—ಆಹವನೀಯಸ್ಯ ಯಜ್ಞನಿಷ್ಪಾದನೇನ ಸ್ವರ್ಗಹೇತುತ್ವಾದುಭಯರೂಪತ್ವಂ ॥

ವೇದನಂ ಪ್ರಶಂಸತಿ—ಆಹವನೀಯೋದ್ಧರಣಸ್ಯ ವೇದಿತಾ ಸ್ವರ್ಗಸಾಧನಯಜ್ಞಾತ್ಮಕೇ ಸ್ಥಾನೇ ಸ್ವರ್ಗಂ ಲೋಕಂ ಸ್ಥಾಪಿತವಾನ್ಭವತಿ ॥

ಈ ಆಹವನೀಯಾಗ್ನಿಯು ಯಜ್ಞಸ್ವರೂಪವು ಮತ್ತು ಇದು ಸ್ವರ್ಗಲೋಕದ ಸಂಕೇತವಾಗಿರುವುದು. ಇಂತಹ ಸ್ವರ್ಗಸಾಧನವಾಗಿರುವ ಆಹವನೀಯಾಗ್ನಿಯನ್ನು ತೆಗೆದುಕೊಂಡು ಬರುವುದರಿಂದ ಸ್ವರ್ಗಲೋಕವನ್ನು ಮೊದಲೇ ಕಾದಿಟ್ಟಂತಾಗುವುದು. ಈ ವಿಷಯವನ್ನು ಯಾವ ಪುರುಷನು ತಿಳಿದಿರುವನೋ ಅವನಿಗೆ ಸ್ವರ್ಗಲೋಕವು ಸಿಕ್ಕಿದಂತಾಗುವುದು.

**ಯೋ ವಾ ಅಗ್ನಿಹೋತ್ರಂ ವೈಶ್ವದೇವಂ ಷೋಳಶಕಲಂ ಪಶುಷು ಪ್ರತಿಷ್ಠಿತಂ ವೇದ ವೈಶ್ವದೇವೇನಾಗ್ನಿಹೋತ್ರೇಣ ಷೋಳಶಕಲೇನ ಪಶುಷು ಪ್ರತಿಷ್ಠಿತೇನ ರಾಧ್ನೋತಿ ॥**

ಅಥಾಗ್ನಿಹೋತ್ರಹೋಮದ್ರವ್ಯಂ ಕ್ಷೀರಾದಿರೂಪಂ ಪ್ರಶಂಸಿತುಮುಪಕ್ರಮತೇ—ಯಃ ಪುಮಾನಗ್ನಿಹೋತ್ರಶಬ್ದೇನ ಕರ್ಮವಾಚಿನೋಪಲಕ್ಷಿತಹೋಮದ್ರವ್ಯಂ ವೇದ ಸ ಪುಮಾನಗ್ನಿಹೋತ್ರಕರ್ಮಣಾ ರಾಧ್ನೋತಿ ಸಮೃದ್ಧೋ ಭವತಿ ॥ ಕೀದೃಶಮಗ್ನಿಹೋತ್ರದ್ರವ್ಯಂ ವೈಶ್ವದೇವಂ ವಕ್ಷ್ಯಮಾಣಾ ರುದ್ರಾದಯೋ ವಿಶ್ವೇದೇವಾಸ್ತೇಷಾಂ ಸಂಬಂಧಿ ಷೋಳಶಕಲಂ ಷೋಳಶಾವಸ್ಥಂ । ತೇ ಚಾವಸ್ಥಾವಿಶೇಷಾ ರೌದ್ರಂ ಗವೀತ್ಯಾದಿನಾ ವಕ್ಷ್ಯಂತೇ । ಗವಿ ಸ್ಥಿತತ್ವಾದೇವ ಪಶುವತ್ಪ್ರತಿಷ್ಠಿತಮಗ್ನಿಹೋತ್ರೇಣೇತ್ಯತ್ರಾಪಿ ವಿಶೇಷಣತ್ರಯಂ ದ್ರವ್ಯದ್ವಾರಾ ಯೋಜನೀಯಮ್ ॥

ಅಗ್ನಿಹೋತ್ರದ ಹೋಮದ್ರವ್ಯಗಳಾದ ಕ್ಷೀರಾದಿಗಳನ್ನು ಪ್ರಶಂಸೆಮಾಡುವರು. ಯಾವ ಪುರುಷನು ಅಗ್ನಿಹೋತ್ರಶಬ್ದದಿಂದ ಸ್ಪಷ್ಟಪಡುವ ಹೋಮದ್ರವ್ಯಾದಿಗಳನ್ನು ಚೆನ್ನಾಗಿ ತಿಳಿದುಕೊಂಡಿರುವನೋ ಆ ಪುರುಷನು ಅಗ್ನಿಹೋತ್ರವೆಂಬ ಕರ್ಮದಿಂದ ಸಕಲ ಸಮೃದ್ಧಿಯನ್ನೂ ಪಡೆಯುವನು. ಅಗ್ನಿಹೋತ್ರದ್ರವ್ಯವೆಂದರೆ ಯಾವುದು? ಮುಂದೆ ಹೇಳುವ ವಿಶ್ವದೇವತಾಕವಾದುದು. ಎಂದರೆ ರುದ್ರಾದಿವಿಶ್ವೇದೇವತಾಕವಾದ ಷೋಳಶ (ಹದಿನಾರು) ಕಲಾತ್ಮಕವಾದುದು. ಇವುಗಳು ಅವಸ್ಥಾ ವಿಶೇಷಗಳಿಂದ ರೌದ್ರ ಗವಿ ಎಂದು ಮುಂತಾದಾಗಿ ಹೇಳಲ್ಪಟ್ಟಿವೆ. ಇಲ್ಲಿ ಗವಿ (ಹಸುವಿನಲ್ಲಿ) ಎಂದು ಹೇಳಿರುವುದರಿಂದ ಆಯಾ ದ್ರವ್ಯಗಳಿಗೆ ಆಯಾ ವಿಶೇಷಣಗಳನ್ನು ಸೇರಿಸಿ ಉಪಯೋಗಿಸಬೇಕು.

ಅಗ್ನಿಹೋತ್ರವೆಂದರೆ ಪ್ರತಿದಿನವೂ (ಆಜೀವಪರ್ಯಂತರವೂ) ಪುರುಷನು ಮಾಡುವ ಹೋಮವಿಶೇಷವು. ಇದನ್ನು ಪ್ರಾತಃಕಾಲ, ಸಾಯಂಕಾಲ ಎಂಬ ಎರಡು ಸಮಯಗಳಲ್ಲಿಯೂ ಹೊಸದಾಗಿ ಕರೆದ ಹಾಲಿನಿಂದ ಮಾಡುವರು. ಈ ಅಗ್ನಿಹೋತ್ರವನ್ನು ಪ್ರಾರಂಭಿಸುವುದಕ್ಕಿಂತ ಮುಂಚೆ ಆ ಪುರುಷನು ಆಧಾನವೆಂಬ ಕರ್ಮವನ್ನು ಮಾಡಿ ಗಾರ್ಹಪತ್ಯದಕ್ಷಿಣಾಗ್ನಿ, ಆಹವನೀಯ ಎಂಬ ಮೂರುವಿಧ ಅಗ್ನಿಯನ್ನು ಸಿದ್ಧಪಡಿಸಬೇಕು. ಅನಂತರ ಈ ಅಗ್ನಿಹೋತ್ರವನ್ನು ಯಾವಾಗಲೂ ನಿಲ್ಲಿಸದೆ ಪ್ರಾತಃಕಾಲ, ಸಾಯಂಕಾಲಗಳೆರಡರಲ್ಲಿಯೂ ತಪ್ಪದೆ ಮಾಡಬೇಕು. ಈ ಪುರುಷನಿಗೆ ಅಗ್ನಿಹೋತ್ರಿ ಎಂದು ಹೆಸರು. ಇವನಿಗೆ ದರ್ಶಪೂರ್ಣಮಾಸೇಷ್ಟಿ ಮತ್ತು ಸೋಮಯಾಗ ಮತ್ತು ಇತರ ಯಾಗಗಳನ್ನು ಪ್ರಾರಂಭಿಸಿ ಮಾಡುವ ಅಧಿಕಾರವು ಬರುವುದು. ಇದನ್ನು ಆಜೀವಪರ್ಯಂತರವೂ ಮಾಡುತ್ತಿರಬೇಕು.

**ರೌದ್ರಂ ಗವಿ ಸದ್ವಾಯವ್ಯಮುಪಾವಸೃಷ್ಟಮಾಶ್ವಿನಂ ದುಹ್ಯಮಾನಂ ಸೌಮ್ಯಂ ದುಗ್ಧಂ ವಾರುಣಮಧಿಶ್ರಿತಂ ಪೌಷ್ಣಂ ಸಮುದಯಂತಂ ಮಾರುತಂ ವಿಷ್ಯಂದಮಾನಂ ವೈಶ್ವದೇವಂ ಬಿಂದುಮನ್ಮೈತ್ರಂ ಶರೋಗೃಹೀತಂ ದ್ಯಾವಾಪೃಥಿವೀಯಮುದ್ವಾಸಿತಂ ಸಾವಿತ್ರಂ ಪ್ರಕ್ರಾಂತಂ ವೈಷ್ಣವಂ ಹ್ರಿಯಮಾಣಂ ಬಾರ್ಹಸ್ಪತ್ಯಮುಪಸನ್ನಮಗ್ನೇಃ ಪೂರ್ವಾಹುತಿಃ ಪ್ರಜಾಪತೇರುತ್ತರೈಂದ್ರಂ ಹುತಂ ॥**

ಹೋಮದ್ರವ್ಯಸ್ಯ ಬಹುದೇವತಾಸಂಬಂಧಂ ಷೋಳಶಾವಸ್ಥೋಪೇತತ್ವಂಚ ದರ್ಶಯತಿ ।— ಹೋಮದ್ರವ್ಯಂ ಕ್ಷೀರಂ ಗವಿ ಸದ್ಗೋಃಶರೀರೇ ಯದಾ ತಿಷ್ಠತಿ ತದಾ ರೌದ್ರಂ ರುದ್ರದೇವತಾಕಂ ವೇದಿತವ್ಯಮ್ । ಉಪಾವಸೃಷ್ಟಂ ವತ್ಸೇನ ಸಂಸೃಷ್ಟಂ ಪ್ರಸ್ನುತಂ ಯದಾ ಭವತಿ ತದಾ ವಾಯುದೇವತಾಕಂ ದುಹ್ಯಮಾನತ್ವದಶಾಯಾಮಶ್ವಿದೇವತಾಕಂ ದುಗ್ಧತ್ವದಶಾಯಾಂ ಸೋಮದೇವತಾಕಮಧಿಶ್ರಿತಂ ಪಾಕಾರ್ಥಮಗ್ನೌ ಸ್ಥಾಪಿತಂ ವರುಣದೇವತಾಕಂ । ಸಮುದಯಂತಂ ಪಾತ್ರಮಧ್ಯೇ ಸ್ಥಿತ್ವಾ ಸಂತಾಪವಶೇನ ಸಮ್ಯಗೂರ್ಧ್ವದಶಾಯಾಂ ಪೂಷದೇವತಾಕಮ್ । ವಿಷ್ಯಂದಮಾನಮೂರ್ಧ್ವಮುದ್ಗತಸ್ಯ ಪಾತ್ರಾದ್ಬಹಿರ್ವಿಶೇಷೇಣ ಸ್ಯಂದನದಶಾಪನ್ನಂ ಮರುದ್ದೇವತಾಕಂ । ಬಿಂದುವದ್ಬುದ್ಬುದವದ್ವಿಶ್ವೇಷಾಂ ದೇವಾನಾಂ ಸಂಬಂಧಿ । ಶರೋಗೃಹೀತಂ ಸಾರಪ್ರಚಯಭಾವಾಪನ್ನಂ ಮಿತ್ರದೇವತಾಕಂ । ಉದ್ವಾಸಿತಮಗ್ನಿಸ್ಥಾನಾದ್ಬಹಿರವಸ್ಥಾಪಿತಂ ದ್ಯಾವಾಪೃಥಿವೀದೇವತಾಕಂ । ಪ್ರಕ್ರಾಂತಂ ಹೋತುಂ ಹರಣಾಯೋಪಕ್ರಾಂತಂ ಸವಿತೃದೇವತಾಕಂ । ಹ್ರಿಯಮಾಣಂ ಹೋಮಸ್ಥಾನೇ ನೀಯಮಾನಂ ವಿಷ್ಣುದೇವತಾಕಂ । ಉಪಸನ್ನಂ ನೀತ್ವಾ ವೇದ್ಯಾಮಾಸಾದಿತಂ ಬೃಹಸ್ಪತಿದೇವತಾಕಂ । ತೇನ ದ್ರವ್ಯೇಣ ಯಾ ಪೂರ್ವಾऽऽಹುತಿಃ ಸಾಽಗ್ನಿಸಂಬಂಧಿನೀ । ಉತ್ತರಾಽಽಹುತಿಸ್ತು ಪ್ರಜಾಪತಿಸಂಬಂಧಿನೀ । ಹುತಂ ಹೋಮೋತ್ತರಕಾಲೀನಮಿಂದ್ರದೇವತಾಕಂ । ಏವಂ ಹವಿಷಃ ಷೋಡಶಾವಸ್ಥಾಸ್ತತ್ತದ್ದೇವತಾಸಂಬಂಧಾಶ್ಚ ದರ್ಶಿತಾಃ ॥

ಹೋಮದ್ರವಕ್ಕೆ ಬಹುದೇವತಾಸಂಬಂಧವನ್ನೂ ಷೋಳಶಾ (ಹದಿನಾರು) ವಸ್ಥೆಯನ್ನೂ ತಿಳಿಸುವರು. ಹೋಮದ್ರವ್ಯವಾದ ಕ್ಷೀರವು (ಹಾಲು) ಯಾವಾಗಲೂ ಗೋವಿನಲ್ಲಿರುವುದರಿಂದ ಆ ಕ್ಷೀರವು ರುದ್ರದೇವತಾಕವಾದ ಹೋಮದ್ರವ್ಯವೆಂದು ತಿಳಿಯಬೇಕು. ಕರುವು ಕುಡಿಯುವುದಕ್ಕಾಗಿ ಹಸುವಿನಲ್ಲಿಯೇ ಬಿಟ್ಟಿರತಕ್ಕ ಭಾಗವು ವಾಯುದೇವತಾಕವಾದುದು. ಹಸುವಿನ ಮೊಲೆಯಿಂದ ಕರೆಯಲ್ಪಡಬೇಕಾದ ಭಾಗವು ಅಶ್ವಿನೀದೇವತಾಕವು ಹಸುವಿನಿಂದ ಕರೆಯಲ್ಪಡುವ ಹಾಲು ಸೋಮದೇವತಾಕವಾದುದು. ಕರೆದ ಹಾಲನ್ನು ಕಾಯಿಸುವುದಕ್ಕಾಗಿ ಬೆಂಕಿಯಮೇಲೆ ಇಟ್ಟರೆ ಅದು ವರುಣದೇವತಾಕವಾಗುವುದು. ಹಾಲು ಕಾಯುತ್ತಿರುವಾಗ ಗುಳ್ಳೆಗಳ್ಳೆಯಾಗಿ ನೊರೆಗಟ್ಟುವುದು ಪೂಷದೇವತಾಕವು. ಹಾಲು ಕಾಯುತ್ತಿರುವಾಗ ಕಾದು ಉಕ್ಕಿ ಸುರಿಯುವ ಭಾಗವು ಮರುದ್ದೇವತಾಕವು. ಗುಳ್ಳೆಗಳಾಗಿ ನೊರೆಗಟ್ಟುವ ಭಾಗವು ವಿಶ್ವೇದೇವತೆಗಳಿಗೆ ಸೇರಿದುದು. ಕೆನೆಕಟ್ಟುವ ಭಾಗವು ಮಿತ್ರದೇವತಾಕವು. ಹಾಲು ಕಾಯುವುದರಿಂದ ಉಕ್ಕಿಹೋಗುವ ಭಾಗವು ದ್ಯಾವಾಪೃಥಿವೀದೇವತಾಕವು. ಕುದಿಯುತ್ತಿರುವ ಹಾಲಿನ ಭಾಗವು ಸವಿತೃದೇವತಾಕವು. ಕಾದ ಹಾಲನ್ನು ಬೆಂಕಿಯಿಂದ ಕೆಳಗಿಳಿಸಿ ಹೋಮಸ್ಥಾನದಲ್ಲಿ ತಂದಿಡುವುದು ವಿಷ್ಣುದೇವತಾಕವು. ಬೆಂಕಿಯಿಂದ ಕೆಳಗಿಳಿಸಿದ ಹಾಲನ್ನು ವೇದಿಯ ಬಳಿಗೆ ತಂದಿಡುವುದು ಬೃಹಸ್ಪತಿದೇವತಾಕವು. ಈರೀತಿ ಅಗ್ನಿಯ ಸಮೀಪಕ್ಕೆ ಆಹುತಿಗಾಗಿ ತಂದಿಡುವ ಹಾಲಿನ ಭಾಗವು ಅಗ್ನಿದೇವತಾಕವು ಅಗ್ನಿಗೆ ಆದನಂತರ ಬಾಕಿ ಉತ್ತರಾಹುತಿಯು ಪ್ರಜಾಪತಿಸಂಬಂಧವಾದುದು ಹೋಮಮಾಡಲ್ಪಟ್ಟ ಭಾಗವು ಇಂದ್ರದೇವತಾಕವಾದುದು. ಈರೀತಿ ಹದಿನಾರು ಭಾಗಗಳಾಗಿ ವಿಂಗಡಿಸಲ್ಪಟ್ಟ ಹೋಮದ್ರವ್ಯವು ಆಯಾ ದೇವತೆಗಳ (ಎಲ್ಲಾ ದೇವತೆಗಳಿಗೂ) ಸಂಬಂಧಪಟ್ಟದ್ದಾಗಿರುವುದು.

ಏತದ್ವಾ ಅಗ್ನಿಹೋತ್ರಂ ವೈಶ್ವದೇವಂ ಷೋಳಶಕಲಂ ಪಶುಷು ಪ್ರತಿಷ್ಠಿತಂ ॥

ತತ್ಸರ್ವಮುಪಸಂಹರತಿ— ಅಗ್ನಿಹೋತ್ರಂ ತದರ್ಥಂ ಕ್ಷೀರಮ್ ॥

ಈರೀತಿಯಾದ ವಿಶೇದೇವತೆಗಳಿಗೆ(ಎಲ್ಲಾ ದೇವತೆಗಳಿಗೂ) ಸಂಬಂಧಪಟ್ಟ ಅಗ್ನಿಹೋತ್ರದ್ರವ್ಯವು (ಹದಿನಾರು ಕಲೆಗಳಿಂದ ಕೂಡಿದ್ದಾಗಿ) ಗೋವುಗಳಲ್ಲಿ ಇಡಲ್ಪಟ್ಟಿರುವುದು. ಇಲ್ಲಿ ಅಗ್ನಿಹೋತ್ರದ್ರವ್ಯವೆಂದರೆ ಕ್ಷೀರವೆಂದರ್ಥವು.

## ವೈಶ್ವದೇವೇನಾಗ್ನಿಹೋತ್ರೇಣ ಷೋಳಶಕಲೇನ ಪಶುಷು ಪ್ರತಿಷ್ಠಿತೇನ ರಾಧ್ನೋತಿ ಯ ಏವಂ ವೇದ ॥

ತದ್ವೇದನಂ ಪ್ರಶಂಸತಿ—

ಹದಿನಾರು ಕಲೆಗಳಿಂದ ಸಹಿತವಾಗಿ ಸಮಸ್ತದೇವತೆಗಳಿಗೂ ಸೇರಿದ ಈ ಅಗ್ನಿಹೋತ್ರದ ಹೋಮದ್ರವ್ಯವು ಪಶುಗಳಲ್ಲಿ (ಗೋವುಗಳಲ್ಲಿ) ಇಡಲ್ಪಟ್ಟಿರುವುದನ್ನು ಯಾವ ಪುರುಷನು ಚೆನ್ನಾಗಿ ತಿಳಿದಿರುವನೋ ಅವನು ಸಮಸ್ತ ಕಾರ್ಯಗಳಲ್ಲಿಯೂ ಅಭಿವೃದ್ಧಿಯನ್ನು ಪಡೆದು ಸುಖಿಸುವನು.

*English Translation*

**(The Agnihotram. On the duties of the Brahma Priest)**

**(The Agnihotram. When the sacrificer has to order his priest to bring fire to the Ahavaniya. The sixteen parts of the Agnihotram.)**

The Agnihotri says to his Adhvaryu, "Take from here the Garhapatya fire the Ahavaniya fire." Thus he says at evening ; for what good he was doing during the day, all that is taken away (together with the fire and brought) eastwards and put in safety. If he says at morning time, "Take from here the Ahavaniya" then he takes with him all the good he was doing during the night, brings it eastwards and put it in safety. The Ahavaniya fire is the sacrifice sacrificial fire); the Ahavaniya is the heaven-world (the real heaven) in the) heaven-world, which is represented by the sacrifice alone. Who knows the Agnihotram which belongs to all gods, which consists of sixteen parts, and is placed among cattle, is successful by means of it.

What in it (the offering of which the Agnihotram consists) is of the cow (such as milk) belongs to Rudra. What is joined to the calf belongs to Vayu. What is being milked belongs to the Asvins. What has been milked, belongs to Soma. What is put on the fire to boil belongs to Taruna. What bubbles up in boiling belongs to Pushan. What is dripping down belongs to the Maruts. What has bubbles, belongs to the Visvedevas. The cream of the milk gathered belongs to Mitra. What falls out of the pot belongs to heaven and earth. Wha

turns up in boiling belongs to Savitar. What is seized and placed in the vessel belongs to Vishnu. What is placed on the Vedi belongs to Brisaspati. The first offering is Agni's, the latter portion is Prajapati's. the offering itself chief portion belongs to Indra. This is the Agnihotram, belonging to all gods, which comprises sixteen parts.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಪಂಚವಿಂಶಾಧ್ಯಾಯಸ್ಯ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೈದನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವಾದುದು.



# ಅಥ ಪಂಚವಿಂಶಾಧ್ಯಾಯೇ ದ್ವಿತೀಯಃ ಖಂಡಃ

## ಇಪ್ಪತ್ತೈದನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು

[ಅಗ್ನಿಹೋತ್ರದ ಆಹುತಿಗಳನ್ನು ಅಗ್ನಿಯಲ್ಲಿ ಅರ್ಪಿಸುವಾಗ ಕಾರಣಾಂತರಗಳಿಂದ ಸಂಭವಿಸಬಹುದಾದ ಕೆಲವು ಅಪಘಾತಗಳನ್ನು ಪುರೋಹಿತನು ಹೇಗೆ ಪರಿಹರಿಸಬೇಕೆಂಬ ವಿಚಾರ.]



**ಯಸ್ಯಾಗ್ನಿಹೋತ್ರ್ಯುಪಾವಸೃಷ್ಟಾ ದುಹ್ಯಮಾನೋಪವಿಶೇತ್ಕಾ ತತ್ರ ಪ್ರಾಯಶ್ಚಿತ್ತಿರಿತಿ ತಾಮಭಿಮಂತ್ರಯೇತ್ ॥**

ಅಥಾಗ್ನಿಹೋತ್ರೇ ವೈಕಲ್ಯನಿಮಿತ್ತಂ ಪ್ರಶ್ನಪೂರ್ವಕಂ ಪ್ರಾಯಶ್ಚಿತ್ತಂ ವಿಧೀಯತೇ—ಅಗ್ನಿಹೋತ್ರಾರ್ಥಂ ಸಂಪಾದಿತಾ ಗೌರಗ್ನಿಹೋತ್ರೀ । ಸಾ ಚೋಪಾವಸೃಷ್ಟಾ ದೋಹನಾರ್ಥಂ ವತ್ಸೇನ ಸಂಯೋಜಿತಾ । ಊರ್ಧ್ವಂ ದುಹ್ಯಮಾನಾ ಸತೀ ದೋಹನಮಧ್ಯೇ ಯದ್ಯುಪವಿಶೇತ್ತದಾನೀಂ ಶಾಸ್ತ್ರೀಯಸ್ಯ ದೋಹನಸ್ಯ ವಿನಷ್ಟತ್ವಾದ್ಯಸ್ಯ ಯಜಮಾನಸ್ಯ ತತ್ರಾಗ್ನಿಹೋತ್ರ್ಯುಪವೇಶನೇ ಪ್ರಾಯಶ್ಚಿತ್ತಿರಪೇಕ್ಷಿತಾ ಸಾ ಚ ಕೀದೃಶೀತಿ ಪ್ರಶ್ನಃ । ತಾಮಗ್ನಿಹೋತ್ರೀಂ ವಕ್ಷ್ಯಮಾಣೇನ ಮಂತ್ರೇಣಾಭಿಮಂತ್ರಯೇತೇತಿ ಪ್ರಾಯಶ್ಚಿತ್ತವಿಧಿಃ ॥

ಅಗ್ನಿಹೋತ್ರಮಾಡುವಾಗ ಕಾರಣಾಂತರಗಳಿಂದ ಸಂಭವಿಸಬಹುದಾದ ಲೋಪದೋಷಗಳನ್ನು ಪರಿಹರಿಸುವುದಕ್ಕಾಗಿ ಮಾಡಬೇಕಾದ ಪ್ರಾಯಶ್ಚಿತ್ತ ವಿಧಾನಗಳನ್ನು ಪ್ರಶ್ನೋತ್ತರರೂಪವಾಗಿ ವಿವರಿಸುವರು. ಅಗ್ನಿಹೋತ್ರದಲ್ಲಿ ಹೋಮಾರ್ಥವಾಗಿ ಬೇಕಾಗುವ ಹಾಲನ್ನು ಕರೆಯುವ ಗೋವಿಗೆ ಅಗ್ನಿಹೋತ್ರೀ ಎಂದು ಹೆಸರು. ಹಸುವಿನಿಂದ ಹಾಲನ್ನು ಕರೆಯುವಾಗ ಮೊದಲು ಕರುವನ್ನು ಹಸುವಿನ ಬಳಿಗೆ ಬಿಡುವರು. ಆಗ ಹಾಲನ್ನು ಕರೆಯುವುದಕ್ಕೆ ಮುಂಚೆ ಅಥವಾ ಕರೆಯುತ್ತಿರುವ ಸಮಯದಲ್ಲಿ ಹಸುವು ಕುಳಿತುಕೊಂಡರೆ ಹಾಲನ್ನು ಕರೆಯಲು ವಿಘ್ನವುಂಟಾಗುವುದು. ಇಂತಹ ಸಂದರ್ಭದಲ್ಲಿ ಪ್ರಾಯಶ್ಚಿತ್ತವನ್ನು ಮಾಡಬೇಕಾಗಿರುವುದು ಆ ಪ್ರಾಯಶ್ಚಿತ್ತದ ವಿಧಾನವೇನು? ಎಂದರೆ ಹಾಲು ಕರೆಯುತ್ತಿರುವ ಆ ಹಸುವನ್ನು ಮುಂದೆ ಹೇಳುವ ಮಂತ್ರಗಳಿಂದ ಅಭಿಮಂತ್ರಣ (ಪ್ರೋಕ್ಷಣ) ಮಾಡಬೇಕು. ಈ ವಿಧಿಯೇ ಇಲ್ಲಿ ಪ್ರಾಯಶ್ಚಿತ್ತಿಯು.

**ಯಸ್ಮಾದ್ಭೀಷಾ ನಿಷೀದಸಿ ತತೋ ನೋ ಅಭಯಂ ಕೃಧಿ । ಪಶೂನ್ನಃ ಸರ್ವಾನ್ಗೋಪಾಯ ನಮೋ ರುದ್ರಾಯ ಮೀಳ್ಹುಷ ಇತಿ ॥**

ತತ್ರ ಮಂತ್ರಂ ದರ್ಶಯತಿ— ಹೇಽಗ್ನಿಹೋತ್ರಿ ತ್ವಂ ಯಸ್ಮಾದ್ವಿರೋಧಿನಃ ಶಂಕ್ಯಮಾನಾನ್ಮನಸಾ ಸ್ಮರ್ಯಮಾಣಾದ್ವ್ಯಾಘ್ರಾದೇರ್ಭೀಷಾ ಭಯೇನ ನಿಷೀದಸ್ಯುಪವಿಶಸಿ ತತೋ ಭಯಹೇತೋಃ ಸಕಾಶಾನ್ನೋಽಸ್ಮಾಕಮಭಯಂ ಕೃಧಿ ಕುರು । ತಥಾ ನೋಽಸ್ಮಾಕಂ ಸರ್ವಾನ್ಪಶೂನ್‌ಗೋಪಾಯ ರಕ್ಷ ಮೀಳ್ಹುಷೇ ಸೇಚನಸಮರ್ಥಾಯ ರುದ್ರಾಯ ಪಶುಸ್ವಾಮಿನೇ ನಮೋಽಸ್ತು । ಇತಿಶಬ್ದೋ ಮಂತ್ರಸಮಾಪ್ತ್ಯರ್ಥಃ ॥

ಆ ಮಂತ್ರವನ್ನು ಇಲ್ಲಿ ತಿಳಿಸುವರು. ಎಲೈ ಅಗ್ನಿಹೋತ್ರಿಯಾದ ಗೋವೇ, ತ್ವಂ-ನೀನು । **ಯಸ್ಮಾತ್**-ನಿನಗೆ ವಿರೋಧಿಗಳಾದ ವ್ಯಾಘ್ರ ಮೊದಲಾದ ದುಷ್ಟಪ್ರಾಣಿಗಳನ್ನು ಮನಸ್ಸಿನಲ್ಲಿ ಯೋಚಿಸಿ ಆ ದುಷ್ಟಪ್ರಾಣಿಗಳ ಭಯದಿಂದ **ಭೀಷಾ**-ಭಯದಿಂದ ಕೂಡಿದವಳಾಗಿ । **ನಿಷೀದಸಿ**-ಕುಳಿತುಕೊಳ್ಳುವಿಯೋ **ತತಃ**-ಆ ಭಯಕಾರಣದಿಂದ **ನಃ**-ನಮಗೆ **ಅಭಯಂಕೃಧಿ** ಅಭಯವನ್ನುಂಟುಮಾಡು. ಹಾಗೆಯೇ **ನಃ**-ನಮ್ಮ **ಸರ್ವಾನ್ ಪಶೂನ್**-ಸಮಸ್ತ ಗೋವುಗಳೇ ಮೊದಲಾದ ಪಶುಗಳನ್ನು **ಗೋಪಾಯ**-ರಕ್ಷಿಸು । **ಮೀಳ್ಹುಷೇ**-ಸೇಚನಸಮರ್ಥನೂ ಪಶುಗಳಿಗೆ ಸ್ವಾಮಿಯೂ ಆದ ರುದ್ರನಿಗೆ **ನಮೋಽಸ್ತು**-ನಮಸ್ಕಾರ ವಿರಲಿ. ಇದು ಮಂತ್ರದ ಅರ್ಥವು.

**ತಾಮುತ್ಥಾಪಯೇತ್ ।**

ಅಭಿಮಂತ್ರಣಾದೂರ್ಧ್ವಂ ತಸ್ಯಾ ಅಗ್ನಿಹೋತ್ರ್ಯಾ ಮಂತ್ರಾಂತರೇಣೋತ್ಥಾಪನಂ ವಿಧತ್ತೇ—

ಮೇಲೆ ಹೇಳಿದ ಮಂತ್ರದಿಂದ ಅಗ್ನಿಹೋತ್ರಿಯಾದ ಗೋವನ್ನು ಅಭಿಮಂತ್ರಣಮಾಡಿ ಬಳಿಕ ಆ ಹಸುವನ್ನು ಎದ್ದು ನಿಲ್ಲುವಂತೆ ಮಾಡುವ ಮಂತ್ರವನ್ನು ಹೇಳುವರು.

**ಉದಸ್ಥಾದ್ದೇವ್ಯದಿತಿರಾಯುರ್ಯಜ್ಞಪತಾವಧಾತ್ ।**
**ಇಂದ್ರಾಯ ಕೃಣ್ವತೀ ಭಾಗಂ ಮಿತ್ರಾಯ ವರುಣಾಯ ಚೇತಿ ॥**

ತಸ್ಮಿನ್ನುತ್ಥಾಪನೇ ಮಂತ್ರಮಾಹ— ಅದಿತಿರದೀನಾ ದೇವೀ ದೇವತಾರೂಪಾಽಗ್ನಿಹೋತ್ರ್ಯುದಸ್ಥಾದುತ್ಥಿತವತ್ಯುತ್ಥಾಯ ಚ ಯಜ್ಞಪತೌ ಯಜಮಾನ ಆಯುರಧಾತ್ಸಂಪಾದಿತವತೀ। ಕೀದೃಶ್ಯಗ್ನಿಹೋತ್ರೀ। ಇಂದ್ರಮಿತ್ರವರುಣಾನಾಮಪೇಕ್ಷಿತಂ ಹವಿರ್ಭಾಗಂ ಕೃಣ್ವತೀ ಸಂಪಾದಯಂತೀ। ಇತಿಶಬ್ದೋ ಮಂತ್ರಸಮಾಪ್ತ್ಯರ್ಥಃ ॥

ಹಸುವನ್ನು ಎದ್ದು ನಿಲ್ಲುವಂತೆ ಮಾಡುವಾಗ ಹೇಳುವ ಮಂತ್ರವಿದು. ಇದರ ಅರ್ಥವಿದು— **ಅದಿತಿಃ**-ಅದೀನಳಾದ **ದೇವೀ**-ದೇವತಾರೂಪಳೂ ಆದ ಈ ಅಗ್ನಿಹೋತ್ರಿಯು (ಗೋವು) **ಉದಸ್ಥಾತ್**-ಎದ್ದು **ಯಜ್ಞಪತೌ**-ಯಜ್ಞವನ್ನು ಮಾಡುತ್ತಿರುವ ಈ ಯಜಮಾನನಲ್ಲಿ **ಆಯುರಧಾತ್**-ಆಯುಸ್ಸನ್ನುಂಟುಮಾಡಲಿ ಈ ಗೋವು ಎಂತಹ ಗೋವೆಂದರೆ **ಇಂದ್ರಾಯ**-ಇಂದ್ರನಿಗಾಗಿಯೂ **ಮಿತ್ರಾಯ**-ಮಿತ್ರನಿಗಾಗಿಯೂ **ವರುಣಾಯ ಚ**-ವರುಣದೇವನಿಗಾಗಿಯೂ **ಭಾಗಂ**-ಅವರವರ ಭಾಗವನ್ನು **ಕೃಣ್ವತೀ**-ಹವಿರ್ಭಾಗವನ್ನು ಸಂಪಾದಿಸಿ (ಒದಗಿಸಿ) ಕೊಡುವವಳು.

**ಅಥಾಸ್ಯಾ ಉದಪಾತ್ರಮೂಧಸಿ ಚ ಮುಖೇ ಚೋಪಗೃಹ್ಣೀಯಾದಥೈನಾಂ ಬ್ರಾಹ್ಮಣಾಯ ದದ್ಯಾತ್ಸಾ ತತ್ರ ಪ್ರಾಯಶ್ಚಿತ್ತಿಃ ॥**

ಉತ್ಥಾಪನಾನಂತರಕರ್ತವ್ಯಂ ದರ್ಶಯತಿ-- ಅಸ್ಯಾ ಅಗ್ನಿಹೋತ್ರ್ಯಾ ಊಧಸಿ ಉದಕಪಾತ್ರಗ್ರಹಣಂ ನಾಮ ಜಲಸ್ಯೋತ್ಕ್ಷೇಪಣಂ ಮುಖೇ ಗೃಹೀತ್ವಾ ಜಲಂ ಪಾಯಯಿತ್ವಾ ತಾದೃಶ್ಯಾ ಬ್ರಾಹ್ಮಣಾಯ ದಾನಂ ಯದಸ್ತಿ ಸಾ ತತ್ರ ವೈಕಲ್ಯೇ ಪ್ರಾಯಶ್ಚಿತ್ತಿರವಗಂತವ್ಯಾ ॥

ಹಸುವನ್ನು ಎಬ್ಬಿ ನಿಲ್ಲಿಸಿದಮೇಲೆ ಮುಂದೆ ಮಾಡುವ ಕರ್ತವ್ಯವನ್ನು ತಿಳಿಸುವರು. ಹಸುವು ಎದ್ದನಂತರ ಒಂದು ಪಾತ್ರೆಯಲ್ಲಿ ನೀರನ್ನು ಹಾಕಿ ತೆಗೆದುಕೊಂಡು ಹೋಗಿ ಆ ಹಸುವಿನ ಮುಖಕ್ಕೆ ಪ್ರೋಕ್ಷಿಸಿ ಆ ನೀರನ್ನು ಅದಕ್ಕೆ ಕುಡಿಸಿ ಆ ನೀರು ಕುಡಿದ ಪಾತ್ರೆಯನ್ನು ಬ್ರಾಹ್ಮಣನಿಗೆ ದಾನವಾಗಿ ಕೊಡಬೇಕು. ಇದೇ ಇಲ್ಲಿ ಮಾಡಬೇಕಾದ ಪ್ರಾಯಶ್ಚಿತ್ತವಿಧಾನವು.

**ಯಸ್ಯಾಗ್ನಿಹೋತ್ರ್ಯುಪಾವಸೃಷ್ಟಾ ದುಹ್ಯಮಾನಾ ವಾಶ್ಯೇತ ಕಾ ತತ್ರ ಪ್ರಾಯಶ್ಚಿತ್ತಿರಿತ್ಯಶನಾಯಾಂ ಹ ವಾ ಏಷಾ ಯಜಮಾನಸ್ಯ ಪ್ರತಿಖ್ಯಾಯ ವಾಶ್ಯತೇ ತಾಮನ್ನಮುಪಾದಯೇಚ್ಛಾಂತ್ಯೈ ಶಾಂತಿರ್ವಾ ಅನ್ನಂ ಸೂಯವಸಾದ್ಭಗವತೀ ಹಿ ಭೂಯಾ ಇತಿ ಸಾ ತತ್ರ ಪ್ರಾಯಶ್ಚಿತ್ತಿಃ ॥**

ಅಥ ದೋಹನಕಾಲೇ ಧ್ವನಿಕರಣೇ ಪ್ರಾಯಶ್ಚಿತ್ತಂ ವಿಧತ್ತೇ-- ವಾಶ್ಯೇತ ಹಂಭಾರವಂ ಕುರ್ವೀತ ತದಾನೀಮೇವಾಗ್ನಿಹೋತ್ರೀ ಸ್ವಕೀಯಮಶನಾಯಾಂ ಕ್ಷುಧಾಂ ಯಜಮಾನಸ್ಯ ಪ್ರತಿಖ್ಯಾಯ ಪ್ರಖ್ಯಾಪನಾರ್ಥಂ ವಾಶ್ಯತೇ ಧ್ವನಿಂ ಕರೋತಿ । ತಸ್ಮಾತ್ತಾಮಗ್ನಿಹೋತ್ರೀಂ ವಾಶ್ಯಮಾನಾಮನ್ನಮುಪಾದಯೇತ್ । ಅಪಿ ಶಬ್ದಾತ್ತೃಣಾದಿಕಮಪಿ । ತಚ್ಚ ಭಕ್ಷಣಂ ಕ್ಷುಧಾ. ಶಾಂತ್ಯೈ ಸಂಪದ್ಯತೇ । ಅನ್ನಂ ಶಾಂತಿಹೇತುರಿತಿ ಪ್ರಸಿದ್ಧಂ । ಸೂಯವಸಾದಿತ್ಯಾದಿ ಮಂತ್ರಃ । ಹೇಽಗ್ನಿಹೋತ್ರಿ ಭಗವತೀ ಪೂಜ್ಯಾ ತ್ವಂ ಸೂಯವಸಾದ್ಭೂಯಾಃ । ಸುಷ್ಠು ಯವಸಂ ತೃಣಂ

ಸೂಯವಸಂ । ತದತ್ತಿ ಭಕ್ಷಯತೀತಿ ಸೂಯವಸಾತ್ । ತಾದೃಶೀ ಭವೇತಿ ಮಂತ್ರಾರ್ಥಃ । ಮಂತ್ರೇಣಾನ್ನಮಾದಯೇದಿತಿ ಯದಸ್ತಿ ಸೈವ ತತ್ರ ಧ್ವನೌ ಪ್ರಾಯಶ್ಚಿತ್ತಿರ್ದೃಷ್ಟವ್ಯಾ ॥

ಹಸುವಿನಿಂದ ಹಾಲನ್ನು ಕರೆಯುವ ಕಾಲದಲ್ಲಿ ಹಸುವು ಕೂಗಿದರೆ ಅದಕ್ಕೆ ಪ್ರಾಯಶ್ಚಿತ್ತವನ್ನು ಹೇಳುವರು. ಹಸುವಿನಿಂದ ಹಾಲನ್ನು ಕರೆಯುತ್ತಿರುವ ಕಾಲದಲ್ಲಿ ಹಸುವು ಅಂಬಾ ಎಂದು ಕೂಗುತ್ತಿದ್ದರೆ ಹಸುವು ತನಗೆ ಹಸಿವಾಗುತ್ತಿದೆ ಎಂದ ಯಜಮಾನನಿಗೆ ತಿಳಿಸುವುದಕ್ಕಾಗಿ ಆರೀತಿ ಕೂಗುತ್ತಿದೆ ಎಂದು ತಿಳಿಯಬೇಕು. ಆದ್ದರಿಂದ ಅಗ್ನಿಹೋತ್ರಿಯಾದ ಆ ಹಸುವಿಗೆ ಕ್ಷುದ್ಬಾಧಾಪರಿಹಾರಾರ್ಥವಾಗಿ ಅನ್ನವನ್ನು ನೀಡಬೇಕು. ಇಲ್ಲಿ ಅನ್ನವೆಂದರೆ, ಹುಲ್ಲು ಮೊದಲಾದ ಹಸುವು ಭಕ್ಷಿಸುವ ಪದಾರ್ಥವು. ಅದನ್ನು ತಿನ್ನುವುದರಿಂದ ಆ ಹಸುವಿನ ಕ್ಷುದ್ಬಾಧೆಯು (ಹಸಿವು) ತೀರುವುದೆಂದಭಿಪ್ರಾಯವು. ಆದ್ದರಿಂದ ಇಲ್ಲಿ ಸೂಯವಸಾ ಎಂಬ ಮಂತ್ರವನ್ನು ಹೇಳಿ ಹುಲ್ಲನ್ನು ತಿನ್ನಿಸಬೇಕು. ಹೇ ಅಗ್ನಿಹೋತ್ರಿ-ಎಲೈ ಅಗ್ನಿಹೋತ್ರಿಯಾದ ಹಸುವೇ, ತ್ವಂ-ನೀನು ಭಗವತೀ ಪೂಜ್ಯಳು. ಸೂಯವಸಾದ್ಭೂಯಾ-ಚೆನ್ನಾಗಿ ಹುಲ್ಲನ್ನು ತಿನ್ನು ಎಂದು ಮಂತ್ರಾರ್ಥವು. ಹಸುವು ಆಹಾರಾರ್ಥವಾಗಿ ಕೂಗಿದಾಗ ಇದೇ ಇಲ್ಲಿ ಮಾಡಬೇಕಾದ ಪ್ರಾಯಶ್ಚಿತ್ತವು.

**ಯಸ್ಯಾಗ್ನಿಹೋತ್ರ್ಯುಪಾವಸೃಷ್ಟಾ ದುಹ್ಯಮಾನಾ ಸ್ಪಂದೇತ ಕಾ ತತ್ರ ಪ್ರಾಯಶ್ಚಿತ್ತಿರಿತಿ ಸಾ ಯತ್ತತ್ರ ಸ್ಕಂದಯೇತ್ತದಭಿಮೃಶ್ಯ ಜಪೇತ್ ॥**

ದೋದುಹ್ಯಮಾನಸ್ಯ ಕ್ಷೀರಸ್ಯಾಗ್ನಿಹೋತ್ರ್ಯಾ ಸ್ಥಾನಚಲನೇನ ಭೂಮೌ ಪತನೇ ಪ್ರಾಯಶ್ಚಿತ್ತಂ ವಿಧತ್ತೇ– ಸ್ಪಂದೇತ ಕಿಂಚಿಚ್ಚಲೇತ್ । ಸಾ ಚಲಂತೀ ಯದಿ ತತ್ರ ಭೂಮೌ ಸ್ಕಂದಯೇದೀಷತ್ಕ್ಷೀರಂ ಪಾತಯೇತ್ತತ್ಕ್ಷೀರಂ ಹಸ್ತೇನ ಸ್ಪೃಷ್ಟ್ವಾ ಮಂತ್ರಂ ಜಪೇತ್ ॥

ಹಾಲನ್ನು ಕರೆಯುತ್ತಿರುವಾಗ ಹಸುವು ಅಕ್ಕಪಕ್ಕಗಳಿಗೆ ಚಲಿಸಿ (ಅಡ್ಡಾಡಿ) ಹಾಲು ಭೂಮಿಯಮೇಲೆ ತುಳುಕಿ ಚೆಲ್ಲಿ ಹೋದರೆ ಆಗ ಮಾಡಬೇಕಾದ ಪ್ರಾಯಶ್ಚಿತ್ತವನ್ನು ತಿಳಿಸುವರು. ಹಸುವಿನಿಂದ ಹಾಲನ್ನು ಕರೆಯುತ್ತಿರುವಾಗ ಹಸುವು ಅಕ್ಕಪಕ್ಕಗಳಿಗೆ ಚಲಿಸಿ ಹಾಲು ಭೂಮಿಯಮೇಲೆ ಚೆಲ್ಲಿಹೋದರೆ ಆ ಹಾಲನ್ನು (ಪಾತ್ರೆಯಲ್ಲಿ ಉಳಿದ ಹಾಲನ್ನು) ಕೈಯಿಂದ ಮುಟ್ಟಿ ಮಂತ್ರವನ್ನು ಪಠಿಸಬೇಕು.

**ಯದದ್ಯ ದುಗ್ಧಂ ಪೃಥಿವೀಮಸೃಪ್ತ ಯದೋಷಧೀರತ್ಯಸೃಪದ್ಯದಾಪಃ । ಪಯೋ ಗೃಹೇಷು ಪಯೋ ಅಘ್ನ್ಯಾಯಾಂ ಪಯೋ ವತ್ಸೇಷು ಪಯೋ ಅಸ್ತು ತನ್ಮಯಿತಿ ॥**

ತಂ ಮಂತ್ರಂ ದರ್ಶಯತಿ— ಅಥೇದಾನೀಂ ಯದ್ದುಗ್ಧಂ ಕ್ಷೀರಂ ಪೃಥಿವೀಮಸೃಪ್ತ ಪ್ರಾಪ್ನೋತ್ । ಯಚ್ಚೌಷಧೀಃ ಪತಿತಂ ತೃಣಜಾತಮತ್ಯಸೃಪದತಿಶಯೇನ ಪ್ರಾಪ್ನೋತ್ । ಯದಪಿ ತತ್ಕ್ಷೀರಂ ಬಿಂದುರೂಪಮಾಪೋಭೂಮಿಷ್ಠಂ ಜಲಂ ಪ್ರಾಪ್ನೋತ್ । ಆಪ ಇತಿ ದ್ವಿತೀಯಾರ್ಥೇ ಪ್ರಥಮಾ । ತತ್ಸರ್ವಮಸ್ಮದೀಯೇಷು ಗೃಹೇಷ್ವಘ್ನ್ಯಾಯಾಮಸ್ಮದೀಯಾ-

**ಯಾಂ ಧೇನ್ವಾಂ ವತ್ಸೇಷ್ವಸ್ಮದೀಯೇಷು ಮಯಿ ಮದುದರೇ ವಾಽಸ್ತು ತಿಷ್ಠತು । ಪೃಥಗನ್ವ-ಯಾರ್ಥಂ ಪಯಃ ಶಬ್ದಾವೃತ್ತಿಃ । ಇತಿ ಶಬ್ದೋ ಮಂತ್ರಸಮಾಪ್ತ್ಯರ್ಥಃ ॥**

ಆ ಮಂತ್ರವನ್ನು ತಿಳಿಸುವರು. ಅದ್ಯ ಈಗ **ಯತ್ ದುಗ್ಧಂ**-ಕರೆಯಲ್ಪಟ್ಟ ಯಾವ ಹಾಲು **ಪೃಥಿವೀಸಮೃಪ್ತ** ಭೂಮಿಯಮೇಲೆ ಚೆಲ್ಲಿಹೋಯಿತೋ ಮತ್ತು **ಯತ್** ಯಾವ ಕರೆಯಲ್ಪಟ್ಟ ಹಾಲು **ಓಷಧೀರಪ್ಯಸೃಪ್ಯತ ಅಪಃ** ಗಿಡ ಗಳಮೇಲೂ ನೀರಿನಲ್ಲಿಯೂ **ಅಸೃಪ್ತ**-ಚೆಲ್ಲಿಹೋಯಿತೋ, **ತತ್ಪಯಃ**-ಆ ಹಾಲೆಲ್ಲವೂ **ಗೃಹೇಷು**-ನಮ್ಮ ಮನೆಗಳ ಲ್ಲಿರುವ **ಅಘ್ನ್ಯಾಯಾಂ**-ಹಸುಗಳಲ್ಲಿಯೂ **ವತ್ಸೇಷು**-ಕರುಗಳಲ್ಲಿಯೂ ತನ್ಮಯಿ-ನಮ್ಮ ಉದರದಲ್ಲಿಯೂ, **ಅಸ್ತು**-ನಿಲ್ಲಲಿ ಎಂದು ಮಂತ್ರದ ಅರ್ಥವು.

## ತತ್ರ ಯತ್ಪರಿಶಿಷ್ಟಂ ಸ್ಯಾತ್ತೇನ ಜುಹುಯಾದ್ಯದ್ಯಲಂ ಹೋಮಾಯ ಸ್ಯಾತ್ ॥

**ಉಕ್ತಪ್ರಾಯಶ್ಚಿತ್ತಾದೂರ್ಧ್ವಂ ಹೋಮಂ ವಿಧತ್ತೇ—ತತ್ರ ದೋಹನಪಾತ್ರೇ ಯತ್-ಕ್ಷೀರಂ ಭೂಮೌ ಪತಿತ್ವಾ ಪರಿಶಿಷ್ಟಂ ಸ್ಯಾತ್ತದ್ಯದಿ ಹೋಮಾಯಾಲಂ ಪರ್ಯಾಪ್ತಂ ಭವೇತ್ತ-ದಾನೀಂ ತೇನ ಜುಹುಯಾತ್ ॥**

ಪ್ರಾಯಶ್ಚಿತ್ತಾನಂತರ ಮಾಡಬೇಕಾದ ಹೋಮವಿಧಾನವನ್ನು ತಿಳಿಸುವರು. ಮೇಲೆ ಹೇಳಿದಂತೆ ಹಸುವಿನಿಂದ ಕರೆದ ಹಾಲು ಚೆಲ್ಲಿಹೋಗಿ ಎಷ್ಟು ಉಳಿಯುವುದೋ ಅಷ್ಟನ್ನೇ ಹೋಮಾರ್ಥವಾಗಿ ದೊರೆತ ಹಾಲೆಂದು ಭಾವಿಸಿ ಅದನ್ನೇ ಹೋಮ ಕಾಲದಲ್ಲಿ ಉಪಯೋಗಿಸಬೇಕು.

## ಯದ್ಯು ವೈ ಸರ್ವಂ ಸಿಕ್ತಂ ಸ್ಯಾದಥಾನ್ಯಾಮಾಹೂಯ ತಾಂ ದುಗ್ಧ್ವಾ ತೇನ ಜುಹುಯಾದಾ ತ್ವೇವ ಶ್ರದ್ಧಾಯೈ ಹೋತವ್ಯಂ ಸಾ ತತ್ರ ಪ್ರಾಯಶ್ಚಿತ್ತಿಃ ॥

**ಅಪರ್ಯಾಪ್ತಾವುಪಾಯಾಂತರಮಾಹ—ಯದ್ಯು ವೈ ಯದಿ ಚ ಸರ್ವಂ ದುಹ್ಯಮಾನಂ ಕ್ಷೀರಂ ಸಿಕ್ತಂ ಭೂಮೌ ಪತಿತಂ ಸ್ಯಾತ್ತದಾನೀಮನ್ಯಾಂ ಕಾಂಚಿದ್ಗಾಮಾಹೂಽಽನೀಯ ತಾಂ ದುಗ್ಧ್ವಾ ತದೀಯೇನ ಕ್ಷೀರೇಣ ಜುಹುಯಾತ್ । ಯದ್ಯನ್ಯಾಪಿ ನ ಲಭೇತ ತದಾನೀಮಪ್ಯಗ್ನಿ-ಹೋತ್ರಂ ನ ಪರಿತ್ಯಾಜ್ಯಂ । ಕಿಂತ್ವಾ ಶ್ರದ್ಧಾಯೈ ಹೋತವ್ಯಂ । ಆಙೋಽತ್ರಾಭಿವಿಧಿರರ್ಥಃ । ಆ ಶ್ರದ್ಧಾಯಾಃ ಶ್ರದ್ಧಾಸಹಿತಂ ಸರ್ವವಸ್ತುಜಾತಂ ಹೋತವ್ಯಂ ಹೋಮಯೋಗ್ಯಂ । ಅಯ-ಮರ್ಥಃ । ದಧಿಯವಾಗ್ವಾದೀನಾಂ ಮಧ್ಯೇ ಯೇನ ಕೇನಾಪಿ ದ್ರವ್ಯೇಣ ಹೋತವ್ಯಂ । ಸರ್ವಾ-ಲಾಭೇ ತ್ವಂತತಃ ಶ್ರದ್ಧಾಮಪಿ ಜುಹುಯಾತ್ । ಅಹಂ ಶ್ರದ್ಧಾಂ ಜುಹೋಮೀತಿ ಸಂಕಲ್ಪಃ ಶ್ರದ್ಧಾಹೋಮಃ । ಅಗ್ನಿಹೋತ್ರಸ್ಯ ನಿತ್ಯತ್ವಾತ್ಸರ್ವಾತ್ಮನಾ ಪರಿತ್ಯಾಗೋ ನ ಯುಕ್ತ ಇತಿ ॥**

ಹೋಮಾರ್ಥವಾಗಿ ಹಾಲು ಒದಗದೇಹೋದಪಕ್ಷದಲ್ಲಿ ಬೇರೆ ವಿಧ ಉಪಾಯವನ್ನು ತಿಳಿಸುವರು. ಒಂದು ವೇಳೆ ಹಸುವಿನಿಂದ ಕರೆದ ಹಾಲೆಲ್ಲವೂ ಚೆಲ್ಲಿಹೋದರೆ, ಆಗ ಬೇರೆ ಒಂದು ಹಸುವನ್ನು ತೆಗೆದುಕೊಂಡು ಬಂದು ಅದರ ಹಾಲನ್ನು

ಕರೆದು ಉಪಯೋಗಿಸಬೇಕು. ಆ ಹಸುವಿನಿಂದಲೂ ಸಾಕಷ್ಟು ಹಾಲು ದೊರೆಯದಿದ್ದರೆ ಅಗ್ನಿಹೋತ್ರವನ್ನು ಮಾಡದೆ ಬಿಡಬಾರದು. ಶ್ರದ್ಧೆಯಿಂದ ಸಹಿತವಾಗಿ, ದಧಿ(ಮೊಸರು) ಯವ (ಅಕ್ಕಿ) ಮೊದಲಾದ ಯಾವ ದ್ರವ್ಯದಿಂದಾಗಲಿ (ಶ್ರದ್ಧೆಯಿಂದ ಸಹಿತವಾಗಿ) ಹೋಮಮಾಡಬೇಕು. ಯಾವ ವಸ್ತುವಾದರೂ ಸರಿ ಶ್ರದ್ಧೆಯಿಂದ ಮಾತ್ರ ಹೋಮಮಾಡಬೇಕು. ಯಾವ ಕಾರಣದಿಂದಲೂ ಹೋಮವನ್ನು ಬಿಡಬಾರದು. ಯಾವ ದ್ರವ್ಯವೂ ಸಿಕ್ಕದಿದ್ದರೆ **ಅಹಂ ಶ್ರದ್ಧಾಂಜುಹೋಮಿ** ಎಂದು ಶ್ರದ್ಧಾಮಂತ್ರವನ್ನೇ ಉಚ್ಚರಿಸಿ ಹೋಮಮಾಡಬೇಕು. ಅಗ್ನಿಹೋತ್ರವು ನಿತ್ಯವಾದ್ದರಿಂದ ಶ್ರದ್ಧಾಹೋಮದಿಂದಲೇ ಹೋಮ ಮಾಡಬೇಕು. ಯಾವ ಕಾರಣದಿಂದಲೂ ಇದರ ಹೋಮವನ್ನು ಬಿಡಕೂಡದು. ಏಕಂದರೆ ಅಗ್ನಿಹೋತ್ರ ಹೋಮವು ನಿತ್ಯವು.

**ಸರ್ವಂ ವಾ ಅಸ್ಯ ಬರ್ಹಿಷ್ಯಂ ಸರ್ವಂ ಪರಿಗೃಹೀತಂ ಯ ಏವಂ ವಿದ್ವಾನಗ್ನಿಹೋತ್ರಂ ಜುಹೋತಿ ||**

**ವೇದನಪೂರ್ವಕಮನುಷ್ಠಾನಂ ಪ್ರಶಂಸತಿ—ವಿದಿತ್ವಾಽನುಷ್ಠಾತುರಸ್ಯ ಪುರುಷಸ್ಯ ಸರ್ವಮಪಿ ದ್ರವ್ಯಂ ಬರ್ಹಿಷ್ಯಂ ಯಜ್ಞಯೋಗ್ಯಂ । ಅತಃ ಸರ್ವಂ ದ್ರವ್ಯಮನೇನ ಹೋಮಾರ್ಥಂ ಪರಿಗೃಹೀತಂ ಭವತಿ ||**

ಈ ಅಗ್ನಿಹೋತ್ರವನ್ನು ಯಾವ ಸಂದರ್ಭದಲ್ಲಿಯೂ ಬಿಡದೆ ಯಾವ ಪುರುಷನು ಮಾಡುವನೋ ಅವನಿಗೆ ಸಕಲ ದ್ರವ್ಯವೂ ಯಜ್ಞವಾಗಿಯೇ ಆಗುವವು. ಆದ್ದರಿಂದ ಆ ಪುರುಷನು ಈ ವಿಷಯವನ್ನು ತಿಳಿದು ಆ ಕಾಲಕ್ಕೆ ಯಾವ ಹೋಮ ದ್ರವ್ಯವು ದೊರೆಯುವುದೋ ಆದರಿಂದಲೇ ಅಗ್ನಿಹೋತ್ರವನ್ನು ಬಿಡದೆ ಮಾಡುವನು. (ಮಾಡಬೇಕು).

*English Translation*

**(How the Prtest has to make good certain casualities which may happen when the Agnihotram is offered)**

If the cow of an Agnihotri, which is joined to her calf, sit down during the time of beiug milked, what is the penance for it ? He shall repeat over it, this mantra, " Why dost thou sit down out of fear ? from this grant us safety ! protect all our cattle ! Praise to Rudra the giver !" By repeating the following mantra he should raise her up. " The divine Aditi (eow) rose, and put long life in the sacrifice, she who provides. Indra, Mitra and Varuna with their respective shares in the sacrifice." Or he may hold on her udder and mouth a vessel filled with water and give her (the cow) then to a Brahman. This is another Prayaschitta (penance).

If the cow of an Agnihotri, which is joined to her calf, cries during the time of being milked, how is this to be atoned for? If she cries out of hunger to indicate to the sacrificer what she is in need of, then he shall give her more food in order to appease her. For food is appeasing. The mantra sugavasad bhugavati (1, 64, 40) is to be repeated. This is the Prayaschitta.

If the cow of an Agnihotri which is joined to her calf moves during the time of being milked, what is the Prayaschitta? Should she in moving spill some milk then he shall stroke her, and whisper the following words: "What of the milk might have fallen to the ground to-day, what might have gone to the herbs, what to the waters, may this milk be in my houses, my cow, my calves, and in me." He shall then bring a burnt offering with what has remained, if it be sufficient for making the burnt offering (Homa).

Should all in the vessel have been spilt by the moving of the cow, then he shall call another cow, milk her and bring the burnt offering with that milk, and sacrifice it. It is to be offered alone in faith.

This is the Prayaschitta. He who with such a knowledge offers the Agnihotram, has only offerings in readiness which are fit and has consequently all accepted by the gods.

**ಐತರೇಯಬ್ರಾಹ್ಮಣಭಾಷ್ಯಸ್ಯ ಪಂಚವಿಂಶಾಧ್ಯಾಯೇ ದ್ವಿತೀಯಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೈದನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವಾದುದು.**



## ಅಥ ಪಂಚವಿಂಶಾಧ್ಯಾಯೇ ತೃತೀಯಃ ಖಂಡಃ

### ಇಪ್ಪತ್ತೈದನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ಅಗ್ನಿಹೋತ್ರದ ಅರ್ಥವು. ಅದನ್ನು ಸರಿಯಾದ ಕ್ರಮದಲ್ಲಿ ಅನುಷ್ಠಾನಮಾಡಿದರೆ ಅದರ ನಿಜವಾದ ಅರ್ಥವು. ಇದು ದಕ್ಷಿಣೆಯನ್ನು ತಿಳಿಸುವುದು. ಆಶ್ವಿನಶಸ್ತ್ರ, ಮಹಾವ್ರತ, ಅಗ್ನಿಚಯನ ಎಂಬ ಕಾರ್ಯಗಳು ಇದರಲ್ಲಿ ಭಾಸವಾಗುವವು].



**ಅಸೌ ವಾ ಅಸ್ಯಾऽऽದಿತ್ಯೋ ಯೂಪಃ ಪೃಥಿವೀ ವೇದಿರೋಷಧಯೋ ಬರ್ಹಿರ್ವನಸ್ಪತಯ ಇಧ್ಮಾ ಆಪಃ ಪ್ರೋಕ್ಷಣ್ಯೋ ದಿಶಃ ಪರಿಧಯಃ ॥**

ಯಥಾ ಶ್ರದ್ಧಾಹೋಮಃ ಪೂರ್ವಮುಕ್ತಸ್ತಥಾ ಭಾವನಾರೂಪೋ ಹೋಮೋऽಗ್ನಿಹೋತ್ರಪ್ರಶಂಸಾರ್ಥಮೇವ ಪ್ರದರ್ಶ್ಯತೇ— ಅಸ್ಯ ಭಾವನಾರೂಪಂ ಯಜ್ಞಂ ಕುರ್ವತಃ ಪುರು-

ಷಸಸ್ಯಾsಸೌ ವಾ ಆದಿತ್ಯೋ ಯೂಪಸ್ಥಾನೀಯಃ ಪೃಥಿವೀ ವೇದಿಸ್ಥಾನೀಯೌಷಧಯೋ ಬರ್ಹಿಸ್ಥಾನೀಯಾ ವನಸ್ಪತಯ ಇಧ್ಮಸ್ಥಾನೀಯಾ ಭೂಮೌ ವಿದ್ಯಮಾನಾ ಆಪಃ ಸರ್ವಾ ಅಪಿ ಸಂಸ್ಕೃತಪ್ರೋಕ್ಷಣೀಸ್ಥಾನೀಯಾಃ ಪ್ರಾಚ್ಯಾದಿದಿಶಃ ಪರಿಧಿಸ್ಥಾನೀಯಾಃ । ಈದೃಶೀ ಭಾವನೈವಾಗ್ನಿಹೋತ್ರಹೋಮಃ । ಇತರಸಂಪತ್ತ್ಯಭಾವೇಽಪ್ಯೇತಾದೃಶೋ ವಾ ಹೋಮಃ ಕರ್ತವ್ಯಃ ॥

ಶ್ರದ್ಧಾಹೋಮವನ್ನು ಹಿಂದೆ ಹೇಳಲಾಯಿತು. ಅದರಂತೆಯೇ ಭಾವನಾರೂಪವಾದ ಹೋಮವನ್ನು ಅಗ್ನಿಹೋತ್ರ ಪ್ರಶಂಸಾರ್ಥವಾಗಿ ವಿವರಿಸುವರು. ಈ ಭಾವನಾರೂಪವಾದ ಯಜ್ಞವನ್ನು ಮಾಡುವ ಪುರುಷನಿಗೆ ಈ ಆದಿತ್ಯನೇ ಯೂಪಸ್ಥಾನೀಯನು (ಯೂಪವು). ಈ ಪೃಥಿವಿಯೇ ವೇದಿಸ್ಥಾನೀಯವು. ಓಷಧಿಗಳೇ ಬರ್ಹಿಸ್ಥಾನೀಯವು. ವನಸ್ಪತಿಗಳೇ ಎಂದ ಸಸ್ಯಾದಿವೃಕ್ಷಗಳೇ ಇಧ್ಮಸ್ಥಾನೀಯವು. ಭೂಮಿಯ ಮೇಲಿರುವ ಈ ಉದಕಗಳೆಲ್ಲವೂ ಪ್ರೋಕ್ಷಣಸ್ಥಾನೀಯವಾದ ಉದಕಗಳು. ಪೂರ್ವಾದಿದಿಕ್ಕುಗಳು ಪರಿಧಿಗಳು. ಈ ವಿಧವಾದ ಭಾವನೆಗಳೇ ಅಗ್ನಿಹೋತ್ರಹೋಮವು. ಹೋಮಕ್ಕಾಗಿ ಇತರ ಪದಾರ್ಥಗಳು ದೊರೆಯದಿದ್ದರೆ ಈ ವಿಧವಾದ ಭಾವನೆಗಳಿಂದಲೇ ಹೋಮವನ್ನು ಮಾಡಬೇಕು.

ಯದ್ಧ ವಾ ಅಸ್ಯ ಕಿಂಚ ನಶ್ಯತಿ ಯನ್ಮ್ರಿಯತೇ ಯದಪಾಜಂತಿ ಸರ್ವಂ ಹೈವೈನಂ ತದಮುಷ್ಮಿಂಲ್ಲೋಕೇ ಯಥಾ ಬರ್ಹಿಷಿ ದತ್ತಮಾಗಚ್ಛೇದೇವಮಾಗಚ್ಛತಿ ಯ ಏವಂ ವಿದ್ವಾನಗ್ನಿಹೋತ್ರಂ ಜುಹೋತಿ ॥

ಈದೃಗ್ಭಾವನಾಯಾಂ ಫಲಂ ದರ್ಶಯತಿ—ಯಃ ಪುಮಾನಾದಿತ್ಯೋ ಯೂಪ ಇತ್ಯಾದಿಕಂ ವಿದ್ವಾನ್ಭಾವಯನ್ನಗ್ನಿಹೋತ್ರಂ ಜುಹೋತಿ । ಏನಂ ಪುರುಷಮಮುಷ್ಮಿನ್ ಸ್ವರ್ಗೇ ಲೋಕೇ ತತ್ಸರ್ವಮಾಗಚ್ಛತಿ ॥ ಕಿಂ ಕಿಮಿತಿ ತದುಚ್ಯತೇ । ಅಸ್ಯ ಪುರುಷಸ್ಯ ಯದ್ಧ ವೈ ಕಿಂಚಾಸ್ಮಿನ್ ಲೋಕೇ ಯತ್ಕಿಮಪಿ ವಸ್ತು ನಶ್ಯತಿ । ಯಚ್ಚ ಪುತ್ರಾದಿಕಂ ಮ್ರಿಯತೇ ಯದಪ್ಯನ್ಯದಪಾಜಂತಿ, ಅಪಗಚ್ಛತಿ ಸ್ವಸ್ಮಾದ್ವಿಯುಕ್ತಂ ಭವತಿ । ತತ್ಸರ್ವಂ ಪ್ರಾಪ್ಯತೇ । ತತ್ರ ದೃಷ್ಟಾಂತಃ । ಯಥಾ ಬರ್ಹಿಷಿ ಯಜ್ಞೇ ದತ್ತಂ ವಸ್ತು ಸ್ವರ್ಗೇ ಯಜಮಾನಮಾಗಚ್ಛೇದೇವಂ ನಷ್ಟಂ ಮೃತಮುಪಗತಂ ಚ ಸರ್ವಮಾಗಚ್ಛತಿ । ಯೋಽಯಂ ಶ್ರದ್ಧಾಹೋಮಃ ಪೂರ್ವಮುಕ್ತಸ್ತಸ್ಯೈವ ಪುನರಪಿ ಯೂಪವೇದ್ಯಾದಿಭಾವನಾರೂಪಮನುಷ್ಠಾನಮುಕ್ತಂ ॥

ಮೇಲೆ ಹೇಳಿದ ಭಾವನೆಯಿಂದ ಅಗ್ನಿಹೋತ್ರಹೋಮಮಾಡಿದರೆ ಅದರಿಂದ ಉಂಟಾಗುವ ಫಲವನ್ನು ತಿಳಿಸುವರು ಮೇಲೆ ಹೇಳಿದಂತೆ ಯಾವ ಪುರುಷನು ಭಾವನಾಗ್ನಿಹೋತ್ರವನ್ನು ಆಚರಿಸುವನೋ ಅವನು ಪರಲೋಕದಲ್ಲಿ ಅದಕ್ಕಾಗಿ ಹೇಳಿರುವ ಸಮಸ್ತಫಲವನ್ನೂ ಅನುಭವಿಸುವನು. ಅಲ್ಲದೆ ಆ ಪುರುಷನಿಗೆ ಈ ಲೋಕದಲ್ಲಿ ಯಾವ ಯಾವ ವಸ್ತುವು ನಷ್ಟವಾಗುವುದೋ ಅದೆಲ್ಲವನ್ನೂ ಪುನಃ ಪಡೆಯುವನು. ಆ ಪುರುಷನಿಗೆ ಇಲ್ಲಿ ಪುತ್ರಾದಿಗಳು ಮೃತರಾಗುವರೋ ಅಥವಾ ಇತರ ಪ್ರಿಯ ಜನರು ಮೃತರಾಗುವರೋ ಅವರೆಲ್ಲರೂ ಪುನಃ ಪರಲೋಕದಲ್ಲಿ ದೊರೆಯುವರು. ಹೇಗೆಂದರೆ ಯಜ್ಞದಲ್ಲಿ ಯಜಮಾನನು ಉಪಯೋಗಿಸುವ ಬರ್ಹಿಸ್ಸು ಮೊದಲಾದ ವಸ್ತುಗಳು ಕೆಲವು ಕಾಲಾನಂತರ ನಷ್ಟವಾಗಿ ಹೋದರೂ ಅವು ಪುನಃ ಪರಲೋಕದಲ್ಲಿ ಯಜಮಾನನನ್ನು ಸೇರುವಂತೆ ಅವನಿಗೆ ಪ್ರಿಯವಾದ ವಸ್ತುಗಳು ಪುನಃ ಅವನನ್ನು ಸೇರುವವು. ಆದ್ದರಿಂದ ಯಾವ ಪುರುಷನು ಭಾವನಾರೂಪವಾಗಿ ಶ್ರದ್ಧಾಹೋಮವನ್ನು ಮಾಡುವನೋ ಅವನು ಅದರ ಫಲವೆಲ್ಲವನ್ನೂ ಪಡೆಯುವನು. ಆದ್ದರಿಂದ ಭಾವನಾರೂಪವಾದ ಅನುಷ್ಠಾನವನ್ನು ಮಾಡುವುದು ಯುಕ್ತವು.

ಉಭಯಾನ್ವಾ ಏಷ ದೇವಮನುಷ್ಯಾನ್ವಿಪರ್ಯಾಸಂ ದಕ್ಷಿಣಾ ನಯತಿ ಸರ್ವಂ ಚೇದಂ ಯದಿದಂ ಕಿಂಚ ॥

ಇದಾನೀಂ ಭಾವನಾರೂಪಾಂ ದಕ್ಷಿಣಾಮಾಹ—ಏಷ ಶ್ರದ್ಧಾಹೋಮಸ್ಯ ಕರ್ತಾ ದೇವಾನ್ಮನುಷ್ಯಾಂಶ್ಚೋಭಯವಿಧಾನ್ವಿಪರ್ಯಾಸಂ ವಿಪರ್ಯಸ್ಯ ದಕ್ಷಿಣಾಃ ಕೃತ್ವಾ ನಯತಿ ಋತ್ವಿಗ್ಭ್ಯಃ ಸಮರ್ಪಯತಿ । ಯತ್ರ ದೇವಾನಾಂ ದಕ್ಷಿಣಾರೂಪತ್ವಂ ನ ತತ್ರ ಮನುಷ್ಯಾಣಾಂ ತದ್ರೂಪತ್ವಂ । ಯತ್ರ ತು ಮನುಷ್ಯಾಣಾಂ ದಕ್ಷಿಣಾತ್ವಂ ನ ತತ್ರ ದೇವಾನಾಮಿತ್ಯೇವಂ ವಿಪರ್ಯಾಸಃ । ಅನೇನ ವಿಪರ್ಯಾಸೇನ ದೇವೇಷು ಮನುಷ್ಯೇಷು ಚ ದಕ್ಷಿಣಾತ್ವಸಂಕಲ್ಪಃ ಕರ್ತವ್ಯಃ । ನ ಕೇವಲಂ ದೇವಮನುಷ್ಯಾಣಾಮೇವ ದಕ್ಷಿಣಾತ್ವಂ ಕಿಂ ತರ್ಹಿ ಯತ್ಕಿಂಚೇದಂ ಜಗದಸ್ತಿ ತತ್ಸರ್ವಮಿದಂ ಶ್ರದ್ಧಾಹೋಮೀ ಹೋಮದಕ್ಷಿಣಾ ನಯತಿ । ಸರ್ವಸ್ಮಿನ್ ಜಗತಿ ದಕ್ಷಿಣೀಯಮಿತಿ ಸಂಕಲ್ಪಃ ಕರ್ತವ್ಯಃ ॥

ಭಾವನಾರೂಪವಾಗಿ ಮಾಡುವ ಕರ್ಮಗಳಿಗೆ ಕೊಡಬೇಕಾದ ದಕ್ಷಿಣೆಯನ್ನು ತಿಳಿಸುವರು. ಶ್ರದ್ಧಾಹೋಮವನ್ನು ಮಾಡುವ ಪುರುಷನು ದೇವತೆಗಳನ್ನೂ ಮನುಷ್ಯರನ್ನೂ ಸಂತೋಷಪಡಿಸಿ ಅವರಿಗೆ ಕೊಡಬೇಕಾದ ದಕ್ಷಿಣಾದಾನಗಳನ್ನು ಋತ್ವಿಕ್ಕುಗಳಿಗೆ ಅರ್ಪಿಸುವನು. ಎಲ್ಲಿ ಎಂದರೆ ಯಾವ ಕರ್ಮದಲ್ಲಿ ದೇವತೆಗಳಿಗೆ ದಕ್ಷಿಣೆಯನ್ನು ಕೊಡಬೇಕಾದ ಅವಶ್ಯಕತೆ ಇಲ್ಲವೋ ಅಲ್ಲಿ ಮನುಷ್ಯರಾದ ಋತ್ವಿಜರಿಗೆ ಕೊಡಬೇಕು. ಎಲ್ಲಿ ಮನುಷ್ಯರಿಗೆ ಕೊಡಬೇಕೊ ಅಲ್ಲಿ ದೇವತೆಗಳಿಗೆ ಕೊಡಬೇಕಾಗಿಲ್ಲ. ಈ ವಿಧವಾದ ವಿಪರ್ಯಾಸದಿಂದ ದೇವತೆಗಳಿಗೂ ಮನುಷ್ಯರಿಗೂ ದಕ್ಷಿಣೆಯನ್ನು ಕೊಡಬೇಕು. ಹೋಮಕಾಲದ ದಕ್ಷಿಣೆಯನ್ನು ಕೊಡುವ ವಿಷಯದಲ್ಲಿ ಮಾತ್ರ ಈ ವಿಧಿಯನ್ನು ಅನುಸರಿಸಬೇಕಾಗಿಲ್ಲ. ಆದರೆ ಈ ಶ್ರದ್ಧಾಹೋಮದಲ್ಲಿ ಹೋಮಮಾಡುವ ಪುರುಷನು ತನಗೆ ಸೇರಿದ ಯಾವ ವಸ್ತುವನ್ನಾದರೂ ದಕ್ಷಿಣಾರೂಪವಾಗಿ ಕೊಡಬೇಕು. ಆ ಪುರುಷನು ಸಂಕಲ್ಪಮಾಡುವಾಗಲೂ ಈ ಜಗತ್ತಿನಲ್ಲಿ ತನ್ನದಾಗಿ ಯಾವ ಯಾವ ವಸ್ತುಗಳಿರುವುವೋ ಅವೆಲ್ಲವನ್ನೂ ದಾನಮಾಡುವೆನೆಂದು ಮೊದಲೇ ಸಂಕಲ್ಪಮಾಡಿ ಆದರಂತೆ ನಡೆಯಬೇಕು.

ಮನುಷ್ಯಾನ್ವಾ ಏಷ ಸಾಯಮಾಹುತ್ಯಾ ದೇವೇಭ್ಯೋ ದಕ್ಷಿಣಾ ನಯತಿ ಸರ್ವಂ ಚೇದಂ ಯದಿದಂ ಕಿಂಚ ತ ಏತೇ ಪ್ರಲೀನಾ ನ್ಯೋಕಸ ಇವ ಶೇರೇ ಮನುಷ್ಯಾ ದೇವೇಭ್ಯೋ ದಕ್ಷಿಣಾ ನೀತಾಃ ॥

ಮನುಷ್ಯಾಣಾಂ ಕುತ್ರ ದಕ್ಷಿಣಾತ್ವಮಿತ್ಯಾಶಂಕ್ಯ ತದ್ದರ್ಶಯತಿ—ಯೋಽಯಂ ಶ್ರದ್ಧಾಹೋಮೇ ಸಾಯಮಾಹುತಿಸ್ತಯಾಽಽಹುತ್ಯಾ ತದಾಹುತಿನಿಮಿತ್ತಂ ದೇವೇಭ್ಯ ಋತ್ವಿಕ್‌ಸ್ಥಾನೀಯೇಭ್ಯೋ ಮನುಷ್ಯಾನ್ಗೋಸುವರ್ಣಸ್ಥಾನೀಯಾನ್ದಕ್ಷಿಣಾಃ ಕೃತ್ವಾ ನಯತಿ ಸಮರ್ಪಯತಿ ನ ಕೇವಲಂ ಮನುಷ್ಯಾನ್ಕಿಂತು ಯತ್ಕಿಂಚಿದಿದಂ ಜಗದಸ್ತಿ ತತ್ಸರ್ವಂ ದಕ್ಷಿಣಾಃ ಕೃತ್ವಾ ಸಮರ್ಪಯತಿ । ಕಥಂ ಮನುಷ್ಯಾಣಾಂ ರಾತ್ರೌ ದಕ್ಷಿಣಾತ್ವಮಿತಿ ತದುಚ್ಯತೇ । ಏತೇ ಮನುಷ್ಯಾ ಯಸ್ಮಾತ್ಸಾಯಂ ದೇವೇಭ್ಯೋ ದಕ್ಷಿಣಾ ನೀತಾಸ್ತಸ್ಮಾದ್ರಾತ್ರೌ ಪ್ರಲೀನಾಃ ಸ್ವಸ್ವವ್ಯಾಪಾರರಹಿತಾ ನ್ಯೋಕೋಭ್ಯ ಇವ ನಿವೃತ್ತನೋಕಃ ಸ್ಥಾನಂ ಗೃಹರೂಪಂ ಯೇಷಾಂ ತೇ ನ್ಯೋಕಸೋ

**ಮದೀಯಂ ಗೃಹಮಿತ್ಯಭಿಮಾನರಹಿತಾ ಏವ ಸಂತಃ ಶೇರೇ ಶೇರತೇ ಸುಷುಪ್ತಿಂ ಗಚ್ಛಂತೀ-ತ್ಯರ್ಥಃ । ಯಥರ್ತ್ವಿಗ್ಭ್ಯಃ ಸಮರ್ಪಿತಂ ಗವಾದಿಕಂ ದಕ್ಷಿಣಾದ್ರವ್ಯಂ ಪರಾಧೀನಂ ಭವತ್ಯೇವಂ ರಾತ್ರೌ ಮನುಷ್ಯಾ ದೇವಾಧೀನತ್ವಾತ್ಸ್ವವ್ಯಾಪಾರಾಕ್ಷಮಾಸ್ತದಿದಂ ಪಾರವಶ್ಯಂ ದಕ್ಷಿಣಾತ್ವೇ ಲಿಂಗಂ ॥**

ಮನುಷ್ಯರಿಗೆ ಯಾವ ಸಂದರ್ಭದಲ್ಲಿ ದಕ್ಷಿಣೆಯನ್ನು ಕೊಡಬೇಕೆಂಬ ವಿಷಯವನ್ನು ತಿಳಿಸುವರು. ಈ ಶ್ರದ್ಧಾಹೋಮವನ್ನು ಮಾಡುವಾಗ ಸಾಯಂಕಾಲದ ಆಹುತಿಯಾಗಿದ್ದರೆ ಆ ಆಹುತಿನಿಮಿತ್ತವಾಗಿ ಋತ್ವಿಕ್ಸ್ಥಾನೀಯರಾದ ದೇವತೆಗಳನ್ನುದ್ದೇಶಿಸಿ ಮನುಷ್ಯರಿಗೆ ಗೋಸುವರ್ಣ ಮೊದಲಾದ ವಸ್ತುಗಳನ್ನು ದಕ್ಷಿಣೆಯೆಂದು ಭಾವಿಸಿ ಸಮರ್ಪಿಸಬೇಕು. ಇಷ್ಟನ್ನು ಮಾತ್ರವೇ ಅಲ್ಲ. ಜಗತ್ತಿನಲ್ಲಿ ಉತ್ಕೃಷ್ಟವಾದ ಯಾವ ವಸ್ತುಗಳಿರುವವೋ ಅವೆಲ್ಲವನ್ನೂ ದಕ್ಷಿಣೆಯೆಂದು ಭಾವಿಸಿ ಸಮರ್ಪಿಸಬೇಕು. ಮನುಷ್ಯರಿಗೆ ರಾತ್ರಿಕಾಲದಲ್ಲಿ ದಕ್ಷಿಣೆಯನ್ನು ಹೇಗೆ ಕೊಡಬೇಕೆಂಬ ವಿಚಾರವನ್ನು ತಿಳಿಸುವರು. ಈ ಮನುಷ್ಯರು ಸಾಯಂಕಾಲ ಅಥವಾ ರಾತ್ರಿಕಾಲಗಳಲ್ಲಿ ತಮ್ಮ ತಮ್ಮ ವ್ಯಾಪಾರಗಳಿಂದ(ಕೆಲಸಗಳಿಂದ) ವಿಮುಕ್ತರಾಗಿ ತಮ್ಮ ನಿವೃತ್ತಿಸ್ಥಾನವಾದ ಮನೆಯನ್ನು ಸೇರಿ ನಿದ್ರಿಸುವರು. ಮತ್ತು ಋತ್ವಿಜರಿಗೆ ಅರ್ಪಿಸಲ್ಪಟ್ಟ ಗೋವುಗಳು ಮೊದಲಾದ ದಕ್ಷಿಣಾದ್ರವ್ಯವು ಯಾವರೀತಿ ಪರಾಧೀನವಾಗುವವೋ ಅದರಂತೆ ಮನುಷ್ಯರಿಗೆ ರಾತ್ರಿಕಾಲದಲ್ಲಿ ಅರ್ಪಿಸಲ್ಪಟ್ಟ ದಕ್ಷಿಣಾದ್ರವ್ಯವು ಸ್ವವ್ಯಾಪಾರರಹಿತವಾದ (ನಿದ್ರಾಸಕ್ತರಾದ) ಮನುಷ್ಯಗೆ ಅರ್ಪಿತವಾಗುವುದರಿಂದ ಅವೆಲ್ಲವೂ ದೇವತೆಗಳ ಅಧೀನವಾಗುವವು.

**ದೇವಾನ್ವಾ ಏಷ ಪ್ರಾತರಾಹುತ್ಯಾ ಮನುಷ್ಯೇಭ್ಯೋ ದಕ್ಷಿಣಾ ನಯತಿ ಸರ್ವಂ ಚೇದಂ ಯದಿದಂ ಕಿಂಚ ತ ಏತೇ ವಿವಿದಾನಾ ಇವೋತ್ಪತಂತ್ಯದೋಽಹಂ ಕರಿಷ್ಯೇಽದೋಽಹಂ ಗಮಿಷ್ಯಾಮೀತಿ ವದಂತಃ ॥**

**ಅಥ ದೇವಾನಾಂ ದಕ್ಷಿಣಾತ್ವಂ ದರ್ಶಯತಿ—ಏಷ ಶ್ರದ್ಧಾಹೋಮೀ ಪ್ರಾತರಾಹುತ್ಯಾ ನಿಮಿತ್ತಭೂತಯಾ ಮನುಷ್ಯೇಭ್ಯ ಋತ್ವಿಕ್ಸ್ಥಾನೀಯೇಭ್ಯೋ ದೇವಾನ್ ಗವಾದಿದ್ರವ್ಯಸ್ಥಾ-ನೀಯಾನ್ದಕ್ಷಿಣಾಃ ಕೃತ್ವಾ ಸಮರ್ಪಯತಿ । ಯತ್ಕಿಂಚಿದಿದಂ ಜಗದಸ್ತಿ ತದಪಿ ಸರ್ವಂ ದಕ್ಷಿಣಾ-ತ್ವೇನ ಸಮರ್ಪಯತಿ । ಅತಸ್ತ ಏತೇ ದೇವಾ ದಕ್ಷಿಣಾರೂಪೇಣ ಮನುಷ್ಯಪಾರವಶ್ಯಂಗತಾ ವಿವಿದಾನಾ ಇವೋತ್ಪತಂತಿ ಸ್ವಸ್ವಾಮಿಭೂತಾನಾಂ ಮನುಷ್ಯಾಣಾಮಭಿಪ್ರಾಯಂ ವಿಶೇಷೇಣ ಜಾನಂತ ಏವೋದ್ಯೋಗಂ ಕುರ್ವಂತಿ । ಕಿಂ ಕುರ್ವಂತಃ । ಅಸ್ಯ ಮನುಷ್ಯಸ್ಯಾದಃ ಕಾರ್ಯ-ಮಹಂ ಕರಿಷ್ಯ ಇತ್ಯಸ್ಮಾದದೋ ಮನುಷ್ಯಸ್ಯ ಸಮೀಪಮಹಂ ಗಮಿಷ್ಯಾಮೀತಿ ವದಂತಃ । ಅಹನಿ ದೇವಾ ಮನುಷ್ಯೈಃ ಪೂಜ್ಯಮಾನಾಸ್ತತ್ಸಮೀಪಂ ಗತ್ವಾ ತದೀಯಮಿದಮಾಯುರಾ-ರೋಗ್ಯಾದಿರೂಪಂ ಕಾರ್ಯಂ ಕರಿಷ್ಯಾಮ ಇತಿ ವದಂತೋ ಮನುಷ್ಯಾಧೀನಾ ಅವತಿಷ್ಠಂತೇ । ತದಿದಂ ದೇವಾನಾಂ ದಕ್ಷಿಣಾತ್ವಮ್ । ಅಥವಾ ತ ಏತ ಇತಿ ವಾಚ್ಯಂ(ಕ್ಯಂ) ಮನುಷ್ಯಪರತ್ವೇನ ಯೋಜನೀಯಂ । ತ ಏತೇ ಮನುಷ್ಯಾಃ ಪ್ರಾತಃಕಾಲೇ ನಿದ್ರಾಪಾರವಶ್ಯಂ ಪರಿತ್ಯಜ್ಯ ದೇವತಾ-ನುಗ್ರಹರೂಪಾ ದಕ್ಷಿಣಾ ಗೃಹೀತ್ವಾ ವಿವಿದಾನಾ ಇವ ವಿಶೇಷೇಣ ಸ್ವಸ್ವಕಾರ್ಯಂ ಜಾನಂತ ಏವೋತ್ಪತಂತಿ ಶಯನಾದುತ್ತಿಷ್ಠಂತ್ಯುತ್ಥಾಯ ಚಾಹಮಿದಂ ಸಂಧ್ಯಾವಂದನಂ ಕರಿಷ್ಯೇಹಮಿದಂ**

ರಾಜಗೃಹಂ ಗಮಿಷ್ಯಾಮೀತ್ಯೇವಂ ವದಂತೋ ವರ್ತಂತೇ । ತದೇವ ಮನುಷ್ಯಾಣಾಂ ಸ್ವಾತಂತ್ರ್ಯಂ ದೇವತಾರೂಪದಕ್ಷಿಣಾಪ್ರತಿಗ್ರಹಸ್ಯ ಲಿಂಗಂ ॥

ದೇವತೆಗಳಿಗೆ ಸಮರ್ಪಿಸುವ ದಕ್ಷಿಣೆಯ ವಿಷಯವನ್ನು ತಿಳಿಸುವರು. ಶ್ರದ್ಧಾಹೋಮವನ್ನು ಆಚರಿಸುವ ಪುರುಷನು ಕೇವಲ ನಿಮಿತ್ತಭೂತರಾದ ಮನುಷ್ಯರನ್ನುದ್ದೇಶಿಸಿ ದೇವತೆಗಳಿಗೆ ಗೋವುಗಳೇ ಮೊದಲಾದ ದಕ್ಷಿಣಾದಿಗಳನ್ನು ಸಮರ್ಪಿಸುವನು ಮತ್ತು ಈ ಜಗತ್ತಿನಲ್ಲಿ ಇರುವ ಉತ್ಕೃಷ್ಟವಸ್ತುಗಳೆಲ್ಲವನ್ನೂ ಸಮರ್ಪಿಸುವನು. ಆದ್ದರಿಂದ ಈ ದೇವತೆಗಳು ಮನುಷ್ಯರು ಮಾಡುವ ಕಾರ್ಯಗಳ ಅಭಿಪ್ರಾಯವನ್ನು ತಿಳಿದುಕೊಂಡು ಅದಕ್ಕನುಸಾರವಾಗಿ ಆಚರಿಸುವರು. ತಮ್ಮನ್ನುದ್ದೇಶಿಸಿ ಈ ಮನುಷ್ಯರು ಮಾಡಿದ ಕಾರ್ಯದ ಅಭಿಪ್ರಾಯವೇನೆಂದು ತಿಳಿದು ಇವರಿಗೆ ಉಪಕಾರವನ್ನು ಮಾಡುತ್ತೇವೆಂದು ಮನುಷ್ಯರ ಸಮೀಪದಲ್ಲಿಯೇ ಇದ್ದು ಅವರಿಂದ ಪೂಜಿಸಲ್ಪಟ್ಟು ಅವರ ಆಯುರಾರೋಗ್ಯ ಮೊದಲಾದವುಗಳನ್ನು ಸರಿಯಾಗಿ ನೋಡಿಕೊಳ್ಳುತ್ತಾ ಅವರ ಸಮೀಪದಲ್ಲಿಯೇ ಇರುವರು. ದೇವತೆಗಳಿಗೆ ಕೊಡುವ ದಕ್ಷಿಣೆಯಿಂದ ಆಗುವ ಪ್ರಯೋಜನವೇ ಇದು. ಅಥವಾ ಮನುಷ್ಯಾದಿಗಳ ಪರವಾಗಿಯೂ ಇದನ್ನು ಹೇಳಬಹುದು. ಹೇಗೆಂದರೆ ಮನುಷ್ಯರು ಪ್ರಾತಃಕಾಲದಲ್ಲಿ ನಿದ್ರೆಯನ್ನು ಬಿಟ್ಟೆದ್ದು ದೇವತಾನುಗ್ರಹರೂಪವಾದ ದಕ್ಷಿಣೆಯನ್ನು ಸ್ವೀಕರಿಸಿ ತಮ್ಮ ತಮ್ಮ ಕಾರ್ಯಗಳಲ್ಲಿ ಆಸಕ್ತರಾಗಿ ಎಂದರೆ ನಾನು ಈಗ ಸಂಧ್ಯಾವಂದನೆಯನ್ನು ಮಾಡುವೆನು, ನಾನು ಈಗ ರಾಜಗೃಹಕ್ಕೆ ಹೋಗುವೆನು ಎಂದು ಮೊದಲಾದ ಕಾರ್ಯಗಳಲ್ಲಿ ಉದ್ಯುಕ್ತರಾಗಿ ಇರುವರು. ಇದೇರೀತಿಯಾಗಿ ಮನುಷ್ಯರು ದೇವತಾರೂಪದಕ್ಷಿಣೆಯನ್ನು ಸ್ವೀಕರಿಸಿ ಮಾಡುವ ಕಾರ್ಯಾದಿಗಳು.

ಯಾವಂತಂ ಹ ವೈ ಸರ್ವ ಮಿದಂ ದತ್ವಾ ಲೋಕಂ ಜಯತಿ ತಾವಂತಂ ಹ ಲೋಕಂ ಜಯತಿ ಯ ಏವಂ ವಿದ್ವಾನಗ್ನಿಹೋತ್ರಂ ಜುಹೋತಿ ॥

ಉಕ್ತಾರ್ಥವೇದನಪೂರ್ವಕಮಗ್ನಿಹೋತ್ರಾನುಷ್ಠಾನಂ ಪ್ರಶಂಸತಿ—ಇದಂ ಸರ್ವಂ ಸ್ವಕೀಯಂ ಧನಂ ದತ್ವಾ ತದ್ದಾನಫಲರೂಪಂ ಯಾವಂತಂ ಲೋಕಂ ಪುರುಷಃ ಪ್ರಾಪ್ನೋತಿ ತಾವಂತಮೇವ ಲೋಕಂ ಶ್ರದ್ಧಾಹೋಮವೇದನಪೂರ್ವಕಾಗ್ನಿಹೋತ್ರಾನುಷ್ಠಾಯೀ ಪ್ರಾಪ್ನೋತಿ ॥

ಮೇಲೆ ಹೇಳಿದ ಅನುಷ್ಠಾನವನ್ನು ಪ್ರಶಂಸೆಮಾಡುವರು. ಪುರುಷನಾದವನು ಭೂಮಿಯಲ್ಲಿ ತನಗಿರುವ ಸಮಸ್ತ ಧನವನ್ನೂ ದಾನವಾಗಿ ಕೊಟ್ಟರೆ ಯಾವ ಉತ್ತಮ ಲೋಕವನ್ನು ಪಡೆಯುವನೋ ಅಂತಹ ಫಲವನ್ನು ಶ್ರದ್ಧಾಹೋಮಪೂರ್ವಕವಾಗಿ ಅಗ್ನಿಹೋತ್ರವನ್ನು ಅನುಷ್ಠಾನಮಾಡುವ ಪುರುಷನೂ ಪಡೆಯುವನು.

ಅಗ್ನಯೇ ವಾ ಏಷ ಸಾಯಮಾಹುತ್ಯಾಽಽಶ್ವಿನಮುಪಾಕರೋತಿ ತದ್ವಾಕ್ಪ್ರತಿಗೃಣಾತಿ ವಾಗ್ವಾಗಿತಿ ॥

ತದೇವಂ ಶ್ರದ್ಧಾಹೋಮಾದಿರೂಪೇಣಾಗ್ನಿಹೋತ್ರಂ ಪ್ರಶಸ್ಯಾಥ ಗವಾಮಯನಸಂಪಾದನೇನ ಪ್ರಶಂಸತಿ—ಯೋಽಯಮಗ್ನಿಹೋತ್ರಸ್ಯ ಸಾಯಮಾಹುತಿರಗ್ನಿದೇವತಾರ್ಥಾ ತಯಾಽಗ್ನಿಹೋತ್ರೀ ಗವಾಮಯನಸಂಬದ್ಧಮಾಶ್ವಿನಶಸ್ತ್ರಮುಪಾಕರೋತಿ। ಸಾಯಂಹೋಮಃ

**ಶಸ್ತ್ರೋಪಕ್ರಮ ಇತ್ಯರ್ಥಃ । ಅಸ್ಯಾಃ ಸಾಯಮಾಹುತೇರಗ್ನಿರ್ದೇವತಾ । ಆಶ್ವಿನಶಸ್ತ್ರಸ್ಯಾಽಽದಾವಪ್ಯಗ್ನಿರ್ಹೋತಾ ಗೃಹಪತಿರಿತಿ ಮಂತ್ರೇಽಗ್ನಿಃ ಶ್ರುತಃ । ತದಿದಂ ಸಾದೃಶ್ಯಂ ತಚ್ಚಾಽಽಹುತಿರೂಪಂ ಶಸ್ತ್ರಂ ವಾಕ್‌ಪ್ರತಿಗೃಹ್ಣಾತಿ । ಯಥಾ ಶಸ್ತ್ರಸ್ಯ ಪ್ರತಿಗರ ಏವಮತ್ರ ವಾಕ್‌ಶಬ್ದಃ ಪ್ರಯುಜ್ಯತೇ । ತಥಾಽಗ್ನಿಹೋತ್ರೋದ್ಧರಣಮಂತ್ರೇ ವಾಚಾ ತ್ವಾ ಹೋತ್ರೇತಿ ವಾಕ್‌ಶಬ್ದಃ ಪ್ರಯುಜ್ಯತೇ । ತದಿದಂ ಪ್ರತಿಗರಸದೃಶಂ । ವಾಗ್ವಾಗಿತಿ ವೀಪ್ಸಾ ಪ್ರಯೋಗಬಾಹುಲ್ಯಾಪೇಕ್ಷಯಾ । ಗವಾಮಯನಸ್ಯ ಪ್ರಾಯಣೀಯಮಹರತಿರಾತ್ರಸಂಸ್ಥಂ । ಅತಿರಾತ್ರೇ ಚಾಽಽಶ್ವಿನಂ ಶಸ್ತ್ರಂ ಶಸ್ಯತೇ । ತೇನ ಸಾಯಂ ಹೋಮಸ್ಯ ಗವಾಮಯನಪ್ರಾರಂಭಸಾದೃಶ್ಯಂ ಪ್ರತಿಪಾದಿತಂ ಭವತಿ ॥**

ಮೇಲೆ ಹೇಳಿದಂತೆ ಅಗ್ನಿಹೋತ್ರವನ್ನು ಶ್ರದ್ಧಾಹೋಮಪೂರ್ವಕವಾಗಿ ಪ್ರಶಂಸೆಮಾಡಿ ಗವಾಮಯನವನ್ನು ಪ್ರಶಂಸೆ ಮಾಡುವರು. ಅಗ್ನಿಹೋತ್ರದಲ್ಲಿ ಮಾಡುವ ಸಾಯಂಕಾಲನ ಆಹುತಿಯು ಅಗ್ನಿದೇವತೆಯನ್ನುದ್ದೇಶಿಸಿ ಮಾಡಲ್ಪಡುವುದು. ಇದರಿಂದ ಸಾಯಂಕಾಲದಲ್ಲಿ ಅಗ್ನಿಹೋತ್ರಮಾಡುವ ಪುರುಷನು ಗವಾಮಯನ ಸಂಬಂಧವಾದ ಆಶ್ವಿನಶಸ್ತ್ರವನ್ನು ಪಠಿಸಿದಂತಾಗುವುದು. ಎಂದರೆ ಸಾಯಂಕಾಲದಲ್ಲಿ ಮಾಡಬೇಕಾದ ಹೋಮವನ್ನು ಪ್ರಾರಂಭಿಸಿದಂತಾಗುವುದು. ಏಕೆಂದರೆ ಈ ಅಗ್ನಿಹೋತ್ರಕ್ಕೆ ಸಾಯಂಕಾಲದಲ್ಲಿ ಅಗ್ನಿಯು ದೇವತೆಯು. ಆಶ್ವಿನಶಸ್ತ್ರಕ್ಕೂ ಅಗ್ನಿಯೇ ದೇವತೆಯೆಂದು **ಅಗ್ನಿರ್ಹೋತಾ ಗೃಹಪತಿಃ** ಎಂದು ಮಂತ್ರದಿಂದಲೇ ತಿಳಿದುಬರುವುದು. ಈ ವಿಧವಾದ ಸಾದೃಶ್ಯವು ಆಹುತಿರೂಪವಾದ ಶಸ್ತ್ರಮಂತ್ರದಿಂದಲೂ ತಿಳಿದುಬರುವುದು. ಹೇಗೆಂದರೆ ಶಸ್ತ್ರಮಂತ್ರದಲ್ಲಿ ವಾಕ್ಶಬ್ದವು ಪ್ರತಿಗರಮಂತ್ರವಾಗಿ ಉಪಯೋಗಿಸಲ್ಪಡುವುದು. ಹಾಗೆಯೇ ಅಗ್ನಿಹೋತ್ರೋದ್ಧರಣಮಂತ್ರದಲ್ಲಿಯೂ **ವಾಚಾ ತ್ವಾ ಹೋತ್ರಾ** ಎಂದು ವಾಕ್‌ಶಬ್ದವು ಉಪಯೋಗಿಸಲ್ಪಡುವುದು. ಇದು ಪ್ರತಿಗರಶಬ್ದಕ್ಕೆ ಸದೃಶವು ಪ್ರಯೋಗಬಾಹುಲ್ಯದಿಂದ ಇಲ್ಲಿ ವಾಗ್ವಾಕ್ ಎಂದು ವೀಪ್ಸಾಪ್ರಯೋಗವಿರುವುದು. ಇಲ್ಲಿ ಪ್ರಾಯಣೀಯವು ಗವಾಮಯನಕ್ಕೆ ಅತಿರಾತ್ರಸಂಸ್ಥೆಯಾಗಿರುವುದು. ಅತಿರಾತ್ರದಲ್ಲಿ ಆಶ್ವಿನಮಂತ್ರವು ಪಠಿಸಲ್ಪಡುವುದು. ಈ ಕಾರಣದಿಂದ ಸಾಯಂಕಾಲದಲ್ಲಿ ಮಾಡಲ್ಪಡುವ (ಅಗ್ನಿಹೋತ್ರ) ಹೋಮಕ್ಕೆ ಗವಾಮಯನ ಪ್ರಾರಂಭದ ಸಾದೃಶ್ಯವಿರುವುದು.

ಅಗ್ನಿನಾ ಹಾಸ್ಯ ರಾತ್ರ್ಯಾಶ್ವಿನಂ ಶಸ್ತಂ ಭವತಿ ಯ ಏವಂ ವಿದ್ವಾನಗ್ನಿಹೋತ್ರಂ ಜುಹೋತಿ ॥

**ಉಕ್ತಾರ್ಥವೇದನಪೂರ್ವಕಮನುಷ್ಠಾನಂ ಪ್ರಶಂಸತಿ - ಅಸ್ಯ ವಿದಿತ್ವಾಽನುಷ್ಠಾತುಃ ಸಾಯಮಾಹುತಿದೇವೇನಾಗ್ನಿನಾ ರಾತ್ರೌ ವಿಹಿತಮಾಶ್ವಿನಂ ಶಸ್ತ್ರಂ ಶಸ್ತಂ ಭವತಿ ॥**

ಮೇಲೆ ಹೇಳಿದ ಅನುಷ್ಠಾನವನ್ನು ಪ್ರಶಂಸೆಮಾಡುವರು. ಮೇಲೆ ಹೇಳಿದ ಅನುಷ್ಠಾನವಿಧಿಯನ್ನು ತಿಳಿದು ಅದರಂತೆ ಸಾಯಂಕಾಲದ ಆಹುತಿಯನ್ನು ಅಗ್ನಿಯಲ್ಲಿ ಸಮರ್ಪಿಸುವ ಪುರುಷನು ರಾತ್ರಿಕಾಲದಲ್ಲಿ ಪಠಿಸಬೇಕಾದ ಆಶ್ವಿನಶಸ್ತ್ರಮಂತ್ರವನ್ನು ಪಠಿಸಿದಂತಾಗುವುದು.

ಆದಿತ್ಯಾಯ ವಾ ಏಷ ಪ್ರಾತರಾಹುತ್ಯಾ ಮಹಾವ್ರತಮುಪಾಕರೋತಿ ತತ್ಪ್ರಾಣಃ ಪ್ರತಿಗೃಣಾತ್ಯನ್ನಮನ್ನಮಿತಿ ॥

ಸಾಯಮಾಹುತಿಂ ಪ್ರಾಯಣೀಯಾತಿರಾತ್ರರೂಪೇಣ ಪ್ರಶಸ್ಯ ಪ್ರಾತರಾಹುತಿಂ ಗವಾಮಯನಗತಮಹಾವ್ರತರೂಪೇಣ ಪ್ರಶಂಸತಿ—ಆದಿತ್ಯಾರ್ಥಂ ಹೂಯಮಾನಾ ಯೇಯಂ ಪ್ರಾತರಾಹುತಿಸ್ತಯೈವೈಷೋಽಗ್ನಿಹೋತ್ರೀ ಮಹಾವ್ರತಾಖ್ಯಂ ಗವಾಮಯನಸ್ಯೋಪಾಂತಿಮಮಹಃ ಪ್ರಾರಭತೇ। ತದಿದಾಸೇತ್ಯಾದಿತ್ಯದೇವತಾಕೇನ ಮಂತ್ರೇಣ ತಸ್ಮಿನ್ನಹನಿ ನಿಷ್ಕೇವಲ್ಯಶಸ್ತ್ರಪ್ರಾರಂಭಾತ್। ತಚ್ಚಾಽಽಹುತಿರೂಪಂ ಶಸ್ತ್ರಂ ಪ್ರಾಣಃ ಪ್ರತಿಗೃಹ್ಣಾತಿ॥ ಕಥಮೇತದಿತಿ ತದುಚ್ಯತೇ। ಅನ್ನಂ ಪಯೋ ರೇತೋಽಸ್ಮಾಸ್ವಿತ್ಯಗ್ನಿಹೋತ್ರಭಕ್ಷಣಮಂತ್ರಃ। ತೇನಾನ್ನಮಿತಿ ಪ್ರತಿಗೃಹ್ಣಾತೀತ್ಯುಚ್ಯತೇ। ಅನ್ನಂ ಚ ಪ್ರಾಣತ್ವೇನ ಸಂಸ್ತುತಮನ್ನಂ ಪ್ರಾಣಮನ್ನಮುಪಾಸಮಿತಿ ಶ್ರುತೇಃ। ಅನ್ನಮನ್ನಮಿತಿ ವೀಪ್ಸಾ ಪ್ರಯೋಗಬಾಹುಲ್ಯಾಪೇಕ್ಷಯಾ॥ ತಸ್ಮಾದಸ್ತಿ ಮಹಾವ್ರತಸ್ಯ ಪ್ರಾತರಾಹುತಿಗತಾದಿತ್ಯಸಂಬಂಧಃ॥

ಅಗ್ನಿಹೋತ್ರದ ಸಾಯಮಾಹುತಿಯನ್ನು ಪ್ರಾಯಣೀಯಾತಿರಾತ್ರರೂಪದಿಂದ ಪ್ರಶಂಸೆಮಾಡಿ ಪ್ರಾತರಾಹುತಿಯನ್ನು ಗವಾಮಯನಸಂಬಂಧವಾದ ಮಹಾವ್ರತರೂಪದಿಂದ ಪ್ರಶಂಶೆಮಾಡುವರು. ಆದಿತ್ಯನನ್ನುದ್ದೇಶಿಸಿ ಅರ್ಪಿಸಲ್ಪಟ್ಟ ಈ (ಅಗ್ನಿಹೋತ್ರದ) ಪ್ರಾತರಾಹುತಿಯನ್ನು ಅಗ್ನಿಹೋತ್ರಿಯು ಮಹಾವ್ರತಾಖ್ಯ ಕರ್ಮ ಗವಾಮಯನದ ಕೊನೆಯ ದಿನವನ್ನು ಪ್ರಾರಂಭ ಮಾಡಿದಂತಾಗುತ್ತದೆ. ಏಕೆಂದರೆ ಆದಿನು ತದಿದಾಸ ಮೊದಲಾದ ಮಂತ್ರಗಳ ಪಠನದಿಂದ ನಿಷ್ಕೇವಲ್ಯಶಸ್ತ್ರವನ್ನು ಪ್ರಾರಂಭ ಮಾಡಿದಂತಾಗುವುದು. ಹಾಗೆಯೇ ಆಹುತಿರೂಪವಾದ ಶಸ್ತ್ರಮಂತ್ರವನ್ನು ಪ್ರಾಣವು ಸ್ವೀಕರಿಸುವುದು. ಹೇಗೆಂದರೆ ಅಗ್ನಿಹೋತ್ರಮಂತ್ರದಲ್ಲಿ ಅನ್ನಂ ಪಯೋ ರೇತೋ ಅಸ್ಮಾಸು ಎಂದು ಭಕ್ಷಣಮಂತ್ರದಲ್ಲಿ ಹೇಳಿರುವುದು. ಇಂತಹ ಅನ್ನವನ್ನು ಭಕ್ಷಣಾರ್ಥವಾಗಿ ಸ್ವೀಕರಿಸುತ್ತೇನೆ ಎಂದು ಇದರ ಅರ್ಥವು. ಅನ್ನವೇ ಪ್ರಾಣವೆಂದು ಅನ್ನಂ ಪ್ರಾಣಮನ್ನಮುಪಾಸಂ ಎಂದು ಶ್ರುತಿವಾಕ್ಯವಿರುವುದು. ಇಲ್ಲಿ ಅನ್ನಂ ಅನ್ನಂ ಎಂದು ಉಪಯೋಗಿಸಿರುವ ಶಬ್ದವು ವೀಪ್ಸಾರ್ಥವಾಗಿ. ಆದ್ದರಿಂದ ಇಲ್ಲಿ ಮಹಾವ್ರತದ ಪ್ರಾತರಾಹುತಿಯಾದ ಆದಿತ್ಯನ ಸಂಬಂಧವಿರುವುದು.

ಆದಿತ್ಯೇನ ಹಾಸ್ಯಾಹ್ನಾ ಮಹಾವ್ರತಂ ಶಸ್ತಂ ಭವತಿ ಯ ಏವಂ ವಿದ್ವಾನಗ್ನಿಹೋತ್ರಂ ಜುಹೋತಿ॥

ಉಕ್ತಾರ್ಥವೇದನಪೂರ್ವಕಮನುಷ್ಠಾನಂ ಪ್ರಶಂಸತಿ—ಪೂರ್ವವದ್ವ್ಯಾಖ್ಯೇಯಂ॥

ಹಿಂದೆ ಹೇಳಿದ ಅನುಷ್ಠಾನಪೂರ್ವಕವಾಗಿ ಪ್ರಶಂಸೆಮಾಡುವರು. ಯಾವ ಪುರುಷನು ಅಗ್ನಿಹೋತ್ರನನ್ನು ಹೋಮ ಮಾಡಿ ಆಚರಿಸುವನೋ ಆ ವಿದ್ವಾಂಸನಾದ ಪುರುಷನು ಆದಿತ್ಯನ ಪ್ರಶಂಸೆಯಿಂದ ಎಂದರೆ ಆದಿತ್ಯನ ಪ್ರಶಂಸೆಮಾಡುವ ದಿನದಂದು ಮಹಾವ್ರತವೆಂಬ ಕರ್ಮವನ್ನು ಪ್ರಶಂಸೆಮಾಡಿದಂತಾಗುವುದು.

ತಸ್ಯ ವಾ ಏತಸ್ಯಾಗ್ನಿಹೋತ್ರಸ್ಯ ಸಪ್ತ ಚ ಶತಾನಿ ವಿಂಶತಿಶ್ಚ ಸಂವತ್ಸರೇ ಸಾಯಮಾಹುತಯಃ ಸಪ್ತಚೋ ಏವ ಶತಾನಿ ವಿಂಶತಿಶ್ಚ ಸಂವತ್ಸರೇ ಪ್ರಾತರಾಹುತಯಸ್ತಾವತ್ಯೋಽಗ್ನೇರ್ಯಜುಷ್ಮತ್ಯ ಇಷ್ಟಕಾಃ॥

ಪ್ರಕಾರಾಂತರೇಣ ಗವಾಮಯನಸಾಮ್ಯಂ ಸಂಪಾದ್ಯ ಪ್ರಶಂಸತಿ—ಏಕೈಕಸ್ಯಾಂ ರಾತ್ರೌ ದ್ವೇ ದ್ವೇ ಆಹುತೀ । ತಥಾ ಸತಿ ಷಷ್ಟ್ಯಧಿಕಶತತ್ರಯಸಂಖ್ಯಾಕಾಸು ಸಂವತ್ಸರಸ್ಯ ರಾತ್ರಿಷು ತತ್ಸಂಖ್ಯಾದ್ವೈಗುಣ್ಯೇನ ವಿಂಶತ್ಯಧಿಕಸಪ್ತಶತಸಂಖ್ಯಾಕಾಃ ಸಾಯಮಾಹುತಯಃ ಸಂಪದ್ಯಂತೇ। ಪ್ರಾತರಾಹುತಯೋಽಪಿ ಸಂವತ್ಸರಸ್ಯೈತಾವತ್ಯ ಏವ । ಸಪ್ತಚೋ ಇತ್ಯುಕಾರೋ ನಿಪಾತೋ ವಾಕ್ಯೋಪನ್ಯಾಸಾರ್ಥಃ । ಮಿಲಿತ್ವಾ ಸರ್ವಾಹುತೀನಾಂ ಚತ್ವಾರಿಂಶದಧಿಕೇನ ಶತಚತುಷ್ಟಯೇನ ಯುಕ್ತಾ ಸಹಸ್ರಸಂಖ್ಯಾ ಸಂಪದ್ಯತೇ । ಗವಾಮಯನೇ ಚಿತ್ಯಸ್ಯಾಗ್ನೇರ್ಯಜುಷ್ಮತ್ಯೋ ಮಂತ್ರಯುಕ್ತಾ ಇಷ್ಟಕಾ ಅಪಿ ತಾವತ್ಯಃ । ಅತೋಽಗ್ನಿಹೋತ್ರಸ್ಯೇಷ್ಟಕಾಸಂಖ್ಯಾದ್ವಾರಾ ಗವಾಮಯನಸಾದೃಶ್ಯಮ್ ॥

ಗವಾಮಯನಸಾಮ್ಯದಿಂದ ಪ್ರಕಾರಾಂತರವಾಗಿ ಪ್ರಶಂಸೆಮಾಡುವರು. ಅಗ್ನಿಹೋತ್ರಮಾಡುವಾಗ ಪ್ರಾತಃಕಾಲದಲ್ಲಿ ಎರಡು ಸಾಯಂಕಾಲದಲ್ಲಿ ಎರಡು ಎಂದು ದಿನಕ್ಕೆ ಎರಡಾವರ್ತಿ ನಾಲ್ಕು ಆಹುತಿಗಳನ್ನು ಸಮರ್ಪಿಸುವರು. ಒಂದು ಸಂವತ್ಸರದಲ್ಲಿ ೩೬೦ ದಿನಗಳಿರುವವು. ದಿನಕ್ಕೆ ನಾಲ್ಕರಂತೆ ೩೬೦ ದಿನಗಳಿಗೂ ಒಟ್ಟು ೧೪೪೦ ಆಹುತಿಗಳಾದವು. ಗವಾಮಯನದಲ್ಲಿ ಅಗ್ನಿಚಯನಕ್ಕಾಗಿ ಉಪಯೋಗಿಸುವ ಇಟ್ಟಿಗೆಗಳೂ ೧೪೪೦ ಆಗಿರುವವು. ಈರೀತಿಯಾಗಿ ಅಗ್ನಿಹೋತ್ರಕ್ಕೂ ಅಗ್ನಿಚಯನಕ್ಕೂ ಸಾದೃಶ್ಯವಿರುವುದು. ಅಗ್ನಿಚಯನದಲ್ಲಿ ಈ ೧೪೪೦ ಇಟ್ಟಿಗೆಗಳನ್ನು ಸೇರಿಸಿ ಕಟ್ಟುವಾಗ ಮಂತ್ರಪೂರ್ವಕವಾಗಿ ಕಟ್ಟುವರು. ಆದ್ದರಿಂದ ಇಲ್ಲಿ ಅಗ್ನಿಹೋತ್ರಕ್ಕೂ ಗವಾಮಯನಕ್ಕೂ ಸಾದೃಶ್ಯವಿರುವುದು.

**ಸಂವತ್ಸರೇಣ ಹಾಸ್ಯಾಗ್ನಿನಾ ಚಿತ್ಯೇನೇಷ್ಟಂ ಭವತಿ ಯ ಏವಂ ವಿದ್ವಾನಗ್ನಿಹೋತ್ರಂ ಜುಹೋತಿ ॥**

ಏತದ್ವೇದನಪೂರ್ವಕಮನುಷ್ಠಾನಂ ಪ್ರಶಂಸತಿ—ತ(ಅ)ಸ್ಯ ವಿದಿತ್ವಾನುಷ್ಠಾತುಃ ಸಂವತ್ಸರಸತ್ರೇಣ ಚಿತ್ಯಾಗ್ನಿಯುಕ್ತೇನೇಷ್ಟಂ ಭವತಿ ॥

ಈ ಅಗ್ನಿಹೋತ್ರಾನುಷ್ಠಾನವನ್ನು ವೇದನಪೂರ್ವಕವಾಗಿ ಪ್ರಶಂಸೆಮಾಡುವರು. ಮೇಲೆ ಹೇಳಿದ ವಿಷಯವೆಲ್ಲವನ್ನು ತಿಳಿದಿರುವ ವಿದ್ವಾಂಸನಾದ ಪುರುಷನು ಅಗ್ನಿಹೋತ್ರವನ್ನು ಮಾಡಿದರೆ ಅದರಿಂದ ಆ ಪುರುಷನು ಒಂದು ಸಂವತ್ಸರದವರೆಗೂ ಅಗ್ನಿಚಯನದಿಂದ ಕೂಡಿದ ಸಂವತ್ಸರ ಸತ್ರಯಾಗವನ್ನು ಮಾಡಿದಂತಾಗುವುದು.

*English Translation*

**On the meaning of the Agnihotram : if performed in perfect faith. It represents Dakshina. The Asvina Shastra, Mahavrata and Agnichayana are hinted at in it.**

That Aditya (the sun) is his (the Agnihotri's) sacrificial post, the earth is his alter, the herbs are his Barhis (seat of grass), the trees are his fuel, the waters his sprinkling vessels, the directions the wooden sticks laid round about the hearth. If anything belonging to the Agnihotri should be destroyed, or if he should die, or if he should be deprived of it, then he should received all this in

the other world, placed, as it were, on the Barhis (sacrificial litter). And the man who, having this knowledge, performs the Agnihotram, will actually obtain all this.

He brings as Dakshina (donation) both gods and men mutually and everything the whole world. By his evening offering he presents men to the gods, and the whole world. For men, if being fast asleep without shelter, as it were, are offered as gifts to the gods. By the morning offering he presents the gods as gifts to men, and the whole world. The gods, after having understood the intemtion of men that the gods shoul serve them make efforts to do it, saying "I will do it, I will go." What world a man, who has presented all this property to the gods, might gain, the same world, gains he who, with this knowledge, performs the Agnihotram.

By offering the evening oblation to Agni, the Agnihotri commences the Asvina Shastra which commences with a verse addressed to Agni. By using the term vach, i.e. speech when taking out the Agnihotram, he makes a pratigara, i.e. response just as is done at the repetition of a Shastra.

By thus repeating every day "Vach" the Asvina Shastra is recited by Agni at night, for him who, having this knowledge, brings the Agnihotram.

By offering the morning oblation to Aditya, he commences the Mahavrata ceremony. By using a term equivalent to prana i.e. life (when eating the remainder of the Agnihotram) he makes a pratigara also. By thus repeating every day the word "food" (life), the Mahavrata Shastram is recited by Aditya at day for him who, with this knowledge, performs the Agnihotram.

The Agnihotri has to perform during the year 720 evening offerings and also 720 morning offerings, just as many bricks (1440) marked by sacrificial formulas as are required at the Gavam ayanam. He who with such a knowledge brings the Agnihotram, has the sacrifice performed with a Sastra lasting all the year and with Agni Chitya the hearth constructed at the Chayana ceremony.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಪಂಚವಿಂಶಾಧ್ಯಾಯಸ್ಯ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತಐದನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವಾದುದು.



# ಅಥ ಪಂಚವಿಂಶಾಧ್ಯಾಯೇ ಚತುರ್ಥಃ ಖಂಡಃ

## ಇಪ್ಪತ್ತಐದನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ಅಗ್ನಿಹೋತ್ರಿಯಾದವನು ಅಗ್ನಿಹೋತ್ರಹೋಮವನ್ನು ಪ್ರಾತಃಕಾಲದಲ್ಲಿ ಮಾಡುವ ಅಗ್ನಿಹೋತ್ರವನ್ನು ಸೂರ್ಯೋದಯಕ್ಕೆ ಪೂರ್ವದಲ್ಲಿ ಮಾಡಬೇಕೇ ಅಥವಾ ಸೂರ್ಯೋದಯವಾದನಂತರ ಮಾಡಬೇಕೇ ಎಂಬ ವಿಷಯ].



**ವೃಷಶುಷ್ಮೋ ಹ ವಾತಾವತ ಉವಾಚ ಜಾತೂಕರ್ಣ್ಯೋ ವಕ್ತಾಸ್ಮೋ ವಾ ಇದಂ ದೇವೇಭ್ಯೋ ಯದ್ವೈತದಗ್ನಿಹೋತ್ರಮುಭಯೇದ್ಯುರಹೂಯತಾನ್ಯೇದ್ಯುರ್ವಾವ ತದೇತರ್ಹಿ ಹೂಯತ ಇತಿ ॥**

ಅಥಾನುದಿತಹೋಮನಿಂದೋದಿತಹೋಮಸ್ತುತಿಶ್ಚ ಪ್ರಾರಭ್ಯತೇ— ವತಾವನ್ನಾಮ್ನೋ ಮಹರ್ಷೇರಪತ್ಯಂ ವಾತಾವತೋ ಜತೂಕರ್ಣಸ್ಯ ಪೌತ್ರೋ ಜಾತೂಕರ್ಣ್ಯಃ । ಸ ಚ ವೃಷಶುಷ್ಮೋ ವೃಷಭಸ್ಯೇವ ಶುಷ್ಮೋ ಬಲಂ ಯಸ್ಯ ಮಹರ್ಷೇಃ ಸೋಽಯಂ ವೃಷಶುಷ್ಮಃ । ತಾದೃಶೋ ಮಹರ್ಷಿಃ ಕದಾಚಿದಗ್ನಿಹೋತ್ರಿಣಾಮಗ್ರೇ ಪ್ರಸಂಗಾದಿದಮುವಾಚ । ಹೇಽಗ್ನಿಹೋತ್ರಿಣೋ ಭವದೀಯಮಿದಮಾಚರಣಂ ದೇವೇಭ್ಯೋ ವಕ್ತಾಸ್ಮೋ ವಯಂ ವಕ್ಷ್ಯಾಮಃ । ಕಿಂ ತದಾಚರಣಮಿತಿ ತದುಚ್ಯತೇ । ಏತದಗ್ನಿಹೋತ್ರಂ ಪುರಾತನೈರ್ಮಹರ್ಷಿಭಿರುಭಯೇದ್ಯುರಹೂಯತ ದಿನದ್ವಯೇ ಹುತಮಾಸೀತ್ । ಪೂರ್ವದಿನಸ್ಯ ರಾತ್ರಾವಗ್ನಿಮುದ್ದಿಶ್ಯ ಹೋಮಃ ಪರದಿನಸ್ಯ ಪ್ರಾತಃ ಸೂರ್ಯಮುದ್ದಿಶ್ಯ ಹೋಮ ಇತ್ಯೇವಂ ದಿನದ್ವಯಾನುಷ್ಠಾನಂ ಪೂರ್ವೈಃ ಕೃತಂ । ತದುಲ್ಲಂಘ್ಯೇದಾನೀಮೇತದಗ್ನಿಹೋತ್ರಂ ಮನುಷ್ಯೈರನ್ಯೇದ್ಯುರನ್ಯತರಸ್ಮಿನ್ನೇವ ದಿವಸೇ ಹೂಯತೇಽಸ್ತಮಯಾದೂರ್ಧ್ವಮಗ್ನಯೇ ಹೋಮಃ ಪುನರಪಿ ಸೂರ್ಯೋದಯಾತ್ಪ್ರಾಗೇವ ಸೂರ್ಯಾಯ ಹೋಮ ಇತ್ಯೇವಮೇಕಸ್ಯಾಮೇವ ರಾತ್ರೌ ಹೋಮದ್ವಯಮನುಚಿತಂ ಕ್ರಿಯತ ಇತ್ಯೇತದಾಚರಣಂ ಶಾಸ್ತ್ರವಿರುದ್ಧಂ ದೇವತಾನಾಮಗ್ರೇ ಕಥಯಿಷ್ಯಾಮೀತಿ ವೃದ್ಧಸ್ಯ ಮಹರ್ಷೇರ್ವಾಕ್ಯಂ ॥

ಈ ಅಗ್ನಿಹೋತ್ರಹೋಮವನ್ನು ಮಾಡುವ ಸೂರ್ಯೋದಯಕ್ಕೆ ಮುಂಚಿತವಾಗಿ ಮಾಡುವ ಹೋಮದ ನಿಂದೆಯನ್ನೂ ಸೂರ್ಯೋದಯಾನಂತರ ಮಾಡುವ ಹೋಮದ ಸ್ತುತಿಯನ್ನೂ ವಿವರಿಸುವರು. ವತಾವತ್ ಎಂಬ ಮಹರ್ಷಿಯ ಪುತ್ರನಿಗೆ ವಾತಾವತ ಎಂದು ಹೆಸರು. ಇವನಿಗೆ ಜತೂಕರ್ಣನೆಂತಲೂ ಹೆಸರು. ಇವನ ಪುತ್ರನಿಗೆ ಜಾತೂಕರ್ಣ್ಯ ಎಂದು ಹೆಸರು. ಈ ಋಷಿಗೆ ಬಹಳವಾದ ಎಂದರೆ ಒಂದು ವೃಷಭ(ಎತ್ತು)ಕ್ಕಿರುವಂತೆ ಬಲವಿದ್ದಿತು. ಈ ಮಹರ್ಷಿಯು ಒಂದಾನೊಂದು ಸಮಯದಲ್ಲಿ ಅಗ್ನಿಹೋತ್ರವನ್ನು ಮಾಡುವ ಬ್ರಾಹ್ಮಣರ ಎದುರಿಗೆ ಈರೀತಿ ಹೇಳಿದನು. ಅಗ್ನಿಹೋತ್ರಮಾಡುವ

ಎಲೈ ಋಷಿಗಳೇ ನೀವು ಮಾಡುತ್ತಿರುವ ಅಗ್ನಿಹೋತ್ರದ ವಿಷಯದಲ್ಲಿ ಒಂದೆರಡು ಮಾತನ್ನು ಹೇಳುವೆನು. ಏನೆಂದರೆ ಈ ಅಗ್ನಿಹೋತ್ರವನ್ನು ಪೂರ್ವದ ಮಹರ್ಷಿಗಳು ಎರಡುದಿನಗಳಿಗೊಂದಾವರ್ತಿ ಮಾಡುತ್ತಿದ್ದರು. ಹೇಗೆಂದರೆ, ಮೊದಲದಿವಸ ರಾತ್ರಿಯಲ್ಲಿ (ಸಾಯಂಕಾಲದಲ್ಲಿ) ಅಗ್ನಿಯನ್ನು ಉದ್ದೇಶಿಸಿ ಅಗ್ನಿಹೋತ್ರವನ್ನು ಮಾಡುತ್ತಿದ್ದರು. ಮಾರನೆಯ ದಿನ ಪ್ರಾತಃಕಾಲದಲ್ಲಿ ಸೂರ್ಯನನ್ನುದ್ದೇಶಿಸಿ ಅಗ್ನಿಹೋತ್ರವನ್ನು ಮಾಡುತ್ತಿದ್ದರು. ಆದರೆ ಈಗ ಆ ಕ್ರಮವನ್ನುಲ್ಲಂಘಿಸಿ ಒಂದೇದಿನದಲ್ಲಿ ಎರಡಾವರ್ತಿ ಅಗ್ನಿಹೋತ್ರವನ್ನು ಮಾಡುತ್ತಿದ್ದೀರಿ. ಹೇಗೆಂದರೆ ಸಾಯಂಕಾಲದಲ್ಲಿ ಅಗ್ನಿಯನ್ನುದ್ದೇಶಿಸಿಯೂ ಪುನಃ ಪ್ರಾತಃಕಾಲದಲ್ಲಿ ಸೂರ್ಯನು ಉದಯಿಸುವುದಕ್ಕಿಂತ ಮುಂಚೆಯೇ ಸೂರ್ಯನನ್ನುದ್ದೇಶಿಸಿ ಇನ್ನೊಂದಾವರ್ತಿಯೂ ಅಗ್ನಿಹೋತ್ರವನ್ನು ಮಾಡುತ್ತಿದ್ದೀರಿ. ಇದು ಶಾಸ್ತ್ರವಿರುದ್ಧವು. ಈ ವಿಷಯವನ್ನು ನಾನು ದೇವತೆಗಳ ಸನ್ನಿಧಿಯಲ್ಲಿ ಹೇಳುವೆನು ಎಂದನು.

ಏತದು ಹೈವೋವಾಚ ಕುಮಾರೀ ಗಂಧರ್ವಗೃಹೀತಾ ವಕ್ತಾಸ್ಮೋ ವಾ
ಇದಂ ಪಿತೃಭ್ಯೋ ಯದ್ವೈತದಗ್ನಿಹೋತ್ರಮುಭಯೇದ್ಯುರಹೂ-
ಯತಾನ್ಯೇದ್ಯುರ್ವಾವ ತದೇತರ್ಹಿ ಹೂಯತ ಇತಿ ॥

ಅಸ್ಮಿನ್ನೇವಾರ್ಥೇ ಕುಮಾರೀವಾಕ್ಯಮುಪ್ಯುದಾಹರತಿ—ಋಷೇಃ ಪುತ್ರೀ ಕಾಚಿದ್ಬಾಲಾ ತದ್ಗೃಹಸ್ವಾಮಿನಾ ಗಂಧರ್ವೇಣ ಕದಾಚಿದ್ಗೃಹೀತಾ ಸತೀ ಪ್ರಸಂಗಾದೇತದೇವ ವಾಕ್ಯಮಗ್ನಿ-ಹೋತ್ರಿಣಾಮಗ್ರ ಉವಾಚ । ವಕ್ತಾಸ್ಮ ಇತ್ಯಾದಿಕಮೇತದ್ವಾಕ್ಯಂ । ಪಿತೃಭ್ಯ ಇತ್ಯೇತಾವಾನೇವ ವಿಶೇಷಃ ॥

ಈ ವಿಷಯದಲ್ಲಿ ಓರ್ವ ಗಂಧರ್ವನ ಕುಮಾರೀವಾಕ್ಯವನ್ನು ತಿಳಿಸುವರು. ಓರ್ವ ಋಷಿಪುತ್ರಿಯು ಪ್ರಸಂಗವಶದಿಂದ ಅಗ್ನಿಹೋತ್ರಿಗಳ ಎದುರಿಗೆ ಈರೀತಿ ಹೇಳಿದಳು. ಅಗ್ನಿಹೋತ್ರವು ಪೂರ್ವದಿವಸದ ಸಾಯಂಕಾಲದಲ್ಲಿಯೂ ಮಾರನೇದಿನ ಪ್ರಾತಃಕಾಲದಲ್ಲಿಯೂ (ಸೂರ್ಯೋದಯಾನಂತರ) ಎರಡು ದಿನಗಳಲ್ಲಿ ಎರಡಾವರ್ತಿ ಮಾಡಲ್ಪಡಬೇಕೆಂದು ಪಿತೃಗಳ ಸನ್ನಿಧಿಯಲ್ಲಿ ಹೇಳುವೆವು.

ಏತದ್ವಾ ಅಗ್ನಿಹೋತ್ರಮನ್ಯೇದ್ಯುರ್ಹೂಯತೇ ಯದಸ್ತಮಿತೇ ಸಾಯಂ
ಜುಹೋತ್ಯನುದಿತೇ ಪ್ರಾತರಥೈತದಗ್ನಿಹೋತ್ರಮುಭಯೇದ್ಯು-
ರ್ಹೂಯತೇ ಯದಸ್ತಮಿತೇ ಸಾಯಂಜುಹೋತ್ಯುದಿತೇ ಪ್ರಾತಃ ॥

ಋಷೇಃ ಕುಮಾರ್ಯಾಶ್ಚ ವಾಕ್ಯತಾತ್ಪರ್ಯಂ ದರ್ಶಯತಿ—ಇದಾನೀಂತನೋ ಯದ-ಗ್ನಿಹೋತ್ರಂ ಸೂರ್ಯೇಽಸ್ತಮಿತೇ ಸಾಯಂ ಜುಹೋತಿ ಪುನಃ ಸೂರ್ಯೇಽನುದಿತ ಏವಂ (ವ) ಸತಿ ಪ್ರಾತರ್ಜುಹೋತ್ಯೇತದೇವಾಗ್ನಿಹೋತ್ರಹೋಮದ್ವಯಮನ್ಯೇದ್ಯುಸ್ತ್ವೇಕಸ್ಮಿನ್ನೇವ ದಿನೇ ಹೂಯತೇ ರಾತ್ರಿಮಧ್ಯ ಏವ ದ್ವಿವಿಧಹೋಮನಿಷ್ಪತ್ತೇಃ । ಅಥೈತದ್ವೈಪರೀತ್ಯೇನ ಪುರಾತ-ನಾನಾಂ ಶಾಸ್ತ್ರಜ್ಞಾನಾಂ ಯದಗ್ನಿಹೋತ್ರಂ ಸೂರ್ಯೇಽಸ್ತಮಿತೇಽಧ್ವರ್ಯುಃ ಸಾಯಂ ಜುಹೋತಿ ಪರೇದ್ಯುಃ ಪ್ರಾತರುದಿತೇ ಸೂರ್ಯೇ ಪಶ್ಚಾಜ್ಜುಹೋತ್ಯೇತದಗ್ನಿಹೋತ್ರಮುಭ-ಯೇದ್ಯುರ್ದಿನದ್ವಯ ಏವ ಹೂಯತೇ ॥

ಸಾಯಂಕಾಲದಲ್ಲಿ ಸೂರ್ಯನು ಅಸ್ತಮಿತನಾದಮೇಲೆ ಅಗ್ನಿಹೋತ್ರವನ್ನು ಹೋಮಮಾಡಿ ಪುನಃ ಮಾರನೆಯ ದಿನ ಸೂರ್ಯೋದಯಕ್ಕೆ ಮೊದಲೇ (ಅದು ರಾತ್ರಿಗೇ ಸೇರಿದ್ದು) ಪ್ರಾತಃಕಾಲದ ಹೋಮವನೆಂದು ಪುನಃ ಮಾಡಿದರೆ ಆಗ ರಾತ್ರಿಕಾಲದಲ್ಲಿ ಎರಡಾವರ್ತಿ ಹೋಮಮಾಡಿದಂತಾಗುವುದು. ಆದ್ದರಿಂದ ಪೂರ್ವಿಕರಾದ ಶಾಸ್ತ್ರಜ್ಞರು ಈರೀತಿ ಮಾಡಬೇಕೆಂದು ಹೇಳುವರು – ಮೊದಲದಿವಸ ಸೂರ್ಯನು ಅಸ್ತಂಗತನಾದಮೇಲೆ ಅಗ್ನಿಯನ್ನುದ್ದೇಶಿಸಿ ಅಗ್ನಿಹೋತ್ರಹೋಮವನ್ನು ಮಾಡಬೇಕು. ಬಳಿಕ ಮಾರನೇ ದಿನ ಸೂರ್ಯನು ಉದಯವಾದನಂತರ ಸೂರ್ಯನನ್ನುದ್ದೇಶಿಸಿ ಅಗ್ನಿಹೋತ್ರವನ್ನು ಮಾಡಬೇಕು. ಹೀಗೆ ಮಾಡಿದರೆ ಎರಡು ದಿನಗಳಲ್ಲಿ ಎರಡಾವರ್ತಿ ಹೋಮಮಾಡಿದಂತಾಗುವುದು.

ತಸ್ಮಾದುದಿತೇ ಹೋತವ್ಯಂ ॥

ಏವಮಿದಾನೀಂತನಾನಾಮೇಕದಿನಾನುಷ್ಠಾನರೂಪಾಂ ನಿಂದಾಂ ಪುರಾತನಾನಾಂ ದಿನದ್ವಯಾನುಷ್ಠಾನರೂಪಾಂ ಸ್ತುತಿಂ ಚ ಪ್ರದರ್ಶ್ಯೋದಿತೇ ಹೋಮಂ ಪ್ರಾತಃಕಾಲೇ ವಿಧತ್ತೇ—

ಈ ಪ್ರಕಾರವಾಗಿ ಈಗಿನವರು ಮಾಡುತ್ತಿರುವ ಒಂದೇ ದಿನದಲ್ಲಿ ಮಾಡುವ ಎರಡು ಹೋಮಗಳನ್ನು (ಸೂರ್ಯಾಸ್ತಮಯವಾದಮೇಲೆ ಒಂದು ಹೋಮ ಸೂರ್ಯನು ಪುನಃ ಉದಯವಾಗುವುದಕ್ಕೆ ಮೊದಲೇ ಮಾಡುವ ಮತ್ತೊಂದು ಹೋಮ, ಈ ಎರಡನ್ನೂ) ನಿಂದೆಮಾಡಿ ಪೂರ್ವಿಕರು ಹಿಂದೆ ಮಾಡುತ್ತಿದ್ದ ಎರಡು ದಿನಗಳಲ್ಲಿ ಎರಡು ಹೋಮಗಳನ್ನು (ಎಂದರೆ ಸಾಯಂಕಾಲದಲ್ಲಿ ಸೂರ್ಯಾಸ್ತಮವಾದಮೇಲೆ ಒಂದು ಹೋಮ, ಪುನಃ ಮಾರನೇದಿವಸ ಸೂರ್ಯೋದಯಾನಂತರ ಮತ್ತೊಂದು ಹೋಮ) ಮಾಡುವುದು ಸರಿಯೆಂದು ಪ್ರಶಂಸೆಮಾಡಿ, ಸೂರ್ಯೋದಯಾನಂತರ ಪ್ರಾತಃಕಾಲದಲ್ಲಿ ಮಾಡಬೇಕಾದ ಹೋಮವನ್ನು ತಿಳಿಸುವರು.

ಚತುರ್ವಿಂಶೇ ಹ ವೈ ಸಂವತ್ಸರೇಽನುದಿತಹೋಮೀ ಗಾಯತ್ರೀಲೋಕಮಾಪ್ನೋತಿ ದ್ವಾದಶ ಉದಿತಹೋಮೀ ಸ ಯದಾ ದ್ವೌ ಸಂವತ್ಸರಾವನುದಿತೇ ಜುಹೋತ್ಯಥ ಹಾಸ್ಯೈಕೋ ಹುತೋ ಭವತ್ಯಥ ಯ ಉದಿತೇ ಜುಹೋತಿ ಸಂವತ್ಸರೇಣೈವ ಸಂವತ್ಸರಮಾಪ್ನೋತಿ ಯ ಏವಂ ವಿದ್ವಾನುದಿತೇ ಜುಹೋತಿ ತಸ್ಮಾದುದಿತೇ ಹೋತವ್ಯಂ ॥

ಪ್ರಕಾರಾಂತರೇಣೋದಿತಹೋಮಂ ಪ್ರಶಂಸತಿ– ಯಃ ಪುರುಷೋಽನಭಿಜ್ಞಃ ಇದಾನೀಂತನೋಽನುದಿತಹೋಮೀ ಸ ಪುರುಷಶ್ಚತುರ್ವಿಂಶತಿಸಂಖ್ಯಾಪೂರಕೇ ಸಂವತ್ಸರೇ ಗಾಯತ್ರೀದೇವತಾಯಾ ಲೋಕಂ ಪ್ರಾಪ್ನೋತಿ ತಾವದ್ಭಿಃ ಸಂವತ್ಸರೈರ್ಗಾಯತ್ರ್ಯಕ್ಷರಸಂಖ್ಯಾನಿಷ್ಪತ್ತೇಃ । ಉದಿತಹೋಮೀ ತು ದ್ವಾದಶಸಂಖ್ಯಾಪೂರಕ ಏವ ಸಂವತ್ಸರೇ ತಂ ಗಾಯತ್ರೀಲೋಕಂ ಪ್ರಾಪ್ನೋತಿ ತಾವತೈವೋಕ್ತಸಂಖ್ಯಾನಿಷ್ಪತ್ತೇಃ । ಕಥಮೇತದಿತಿ ತದುಚ್ಯತೇ । ಸೋಽನುದಿತಹೋಮೀ ಯದಾ ದ್ವೌ ಸಂವತ್ಸರಾವನುದಿತೇ ಸೂರ್ಯೇ ಪ್ರಾತರ್ಜುಹೋತ್ಯಥ ತದಾನೀಂ ತಸ್ಯಾನುದಿತಹೋಮಿನ ಏಕ ಏವ ಸಂವತ್ಸರೋ ಹುತೋ ಭವತಿ । ಅಸ್ತಮಯಾದೂರ್ಧ್ವಂ ಪುನರುದಯಾತ್ಪೂರ್ವಂ ಚ ಕಾಲೈಕ್ಯೇನ ಹೋಮದ್ವಯನಿಷ್ಪತ್ತ್ಯಭಾವಾತ್ । ಅಥ

**ತದ್ದ್ವೈಲಕ್ಷಣ್ಯೇನ ಯಃ ಶಾಸ್ತ್ರಾಭಿಜ್ಞ ಉದಯಾದೂರ್ಧ್ವಂ ಪ್ರಾತರ್ಜುಹೋತಿ ತಸ್ಯ ಕಾಲದ್ವಯಾನುಷ್ಠಾನಸಿದ್ಧೇಃ ಸಂವತ್ಸರದ್ವಯಮಿತರೇಣಾನುಷ್ಠಿತಂ ಫಲಮೇಕೇನೈವ ಸಂವತ್ಸರೇಣಾಸ್ಯ ಸಿಧ್ಯತಿ । ತಸ್ಮಾದ್ದ್ವಾದಶೇ ಸಂವತ್ಸರೇ ದ್ವಿಗುಣಸಂಖ್ಯಯಾ ಗಾಯತ್ರೀಲೋಕಪ್ರಾಪ್ತಿರುಪಪದ್ಯತೇ । ಸಂವತ್ಸರೇಣೇತ್ಯಾದಿಕಂ ವಾಕ್ಯಂ ವಿದ್ವತ್ಪ್ರಶಂಸಾರ್ಥಂ ಪುನರಪ್ಯಾವರ್ತನೀಯಂ । ಯೋ ವಿದ್ವಾನ್ ಜುಹೋತಿ ಸ ಕಾಲದ್ವಯಾನುಷ್ಠಾನಾತ್ಸಂವತ್ಸರಮಾತ್ರೇಣ ಸಂವತ್ಸರದ್ವಯಫಲಂ ಲಭತೇ । ತಸ್ಮಾದುದಿತೇ ಸೂರ್ಯೇ ಸತಿ ಪಶ್ಚಾದೇವ ಹೋತವ್ಯಂ ॥**

ಸೂರ್ಯೋದಯಾನಂತರ ಮಾಡಬೇಕಾದ ಹೋಮವನ್ನು ಪ್ರಕಾರಾಂತರವಾಗಿ ಪ್ರಶಂಸೆಮಾಡುವರು. ಯಾವ ಪುರುಷನು ಎಂದರೆ ಅನಭಿಜ್ಞನಾದ ಪುರುಷನು ಪ್ರತಿದಿನವೂ ಸೂರ್ಯನು ಉದಯಿಸುವುದಕ್ಕೆ ಮುಂಚೆ ಅಗ್ನಿಹೋತ್ರವನ್ನು ಹೋಮಮಾಡುವನೋ ಆ ಪುರುಷನು ಗಾಯತ್ರೀ ಮಂತ್ರದಲ್ಲಿರುವ ಅಕ್ಷರಗಳಿಗನುಸಾರವಾಗಿ ಎಂದರೆ ಒಂದು ಸಂವತ್ಸರದಲ್ಲಿ ಇಪ್ಪತ್ತನಾಲ್ಕರಂತೆ ಗಾಯತ್ರೀಲೋಕವನ್ನು ಪಡೆಯುವನು. ಎಂದರೆ ಗಾಯತ್ರಿಯಲ್ಲಿ ಇಪ್ಪತ್ತುನಾಲ್ಕು ಅಕ್ಷರಗಳಿರುವವು. ಸಂವತ್ಸರದಲ್ಲಿಯೂ ಇಪ್ಪತ್ತುನಾಲ್ಕು ಅರ್ಧಮಾಸಗಳಿರುವವು. ಈ ಸಂಖ್ಯೆಗನುಸಾರವಾಗಿ ಈ ಪುರುಷನು ಒಂದು ಸಂವತ್ಸರದವರೆಗೂ ಅಗ್ನಿಹೋತ್ರವನ್ನು ಮಾಡಿದರೆ ಅವನಿಗೆ ಗಾಯತ್ರೀಲೋಕವು ಪ್ರಾಪ್ತವಾಗುವುದು. ಆದರೆ ಸೂರ್ಯಾಸ್ತಮಯಾನಂತರರಾತ್ರಿಯಲ್ಲಿ ಒಂದು ಹೋಮವನ್ನೂ ಮಾರನೆಯ ದಿನ ಪ್ರಾತಃಕಾಲದಲ್ಲಿ ಸೂರ್ಯೋದಯಾನಂತರ ಮತ್ತೊಂದು ಹೋಮವನ್ನೂ ಮಾಡುವ ಅಭಿಜ್ಞನಾದ ಪುರುಷನು ಹಿಂದೆ ಹೇಳಿದ ಪುರುಷನು ಗಾಯತ್ರೀಲೋಕವನ್ನು ಹೊಂದುವ ಅರ್ಧಕಾಲದಲ್ಲಿಯೇ ಗಾಯತ್ರೀಲೋಕವನ್ನು ಪಡೆಯುವನು. ಏಕೆಂದರೆ ಒಂದು ದಿನದಲ್ಲಿ ಪ್ರಾತಃಕಾಲ (ಸೂರ್ಯೋದಯಾನಂತರ) ಒಂದು ಹೋಮವನ್ನೂ ಅದೇ ದಿನದಲ್ಲಿ ಸೂರ್ಯಾಸ್ತಮಯಾನಂತರ (ರಾತ್ರಿಕಾಲದಲ್ಲಿ) ಮತ್ತೊಂದು ಹೋಮವನ್ನೂ ಮಾಡುವುದರಿಂದ ಆ ಪುರುಷನು ಮೊದಲು ಹೇಳಿದ ಪುರುಷನು ಪಡೆಯುವ ಅರ್ಧಸಮಯದಲ್ಲಿಯೇ ಗಾಯತ್ರೀಲೋಕವನ್ನು ಪಡೆಯುವನು ಎಂದರೆ ಮೊದಲ ಪುರುಷನು ಎರಡು ವರ್ಷದಲ್ಲಿ ಹೋಮಮಾಡಿ ಪಡೆಯುವ ಲೋಕವನ್ನು ಒಂದೇ ಸಂವತ್ಸರದಲ್ಲ ಪಡೆಯುವನು. ಏಕೆಂದರೆ ಅಸ್ತಮಾಯಾನಂತರವೂ ಪುನಃ ಸೂರ್ಯೋದಯಕ್ಕೆ ಪೂರ್ವದಲ್ಲಿಯೂ ಸೇರಿ ಎರಡು ಹೋಮಗಳನ್ನು ಮಾಡಿದರೂ ಆ ಎರಡು ಹೋಮಗಳೂ ಸೂರ್ಯ ನಿಲ್ಲದಿರುವಾಗ ರಾತ್ರಿಕಾಲದಲ್ಲಿಯೇ ಮಾಡಲ್ಪಡುವುದರಿಂದ ಆ ಎರಡು ಹೋಮಗಳೂ ಸೇರಿ ಒಂದೇ ಹೋಮವೆಂದು ಪರಿಗಣಿಸಲ್ಪಡುವುದು. ಈ ಕಾರಣದಿಂದ ಪ್ರಾತಃಕಾಲದಲ್ಲಿ ಸೂರ್ಯೋದಯಾನಂತರ ಅಗ್ನಿಹೋತ್ರವನ್ನು ಮಾಡುವ ಶಾಸ್ತ್ರಾಭಿಜ್ಞನಾದ ಪುರುಷನು ಒಂದೇ ಸಂವತ್ಸರದಲ್ಲಿ (ಬೇರೆ ಪುರುಷನು ಎರಡು ಸಂವತ್ಸರದಲ್ಲಿ ಮಾಡುವ) ಫಲವನ್ನು ಪಡೆಯುವನು. ಈ ಕಾರಣಕ್ಕೋಸ್ಕರ ಅಭಿಜ್ಞನಾದವನು ಪ್ರಾತಃಕಾಲದಲ್ಲಿ ಸೂರ್ಯೋದಯಾನಂತರವೇ ಅಗ್ನಿಹೋತ್ರವನ್ನು ಮಾಡಬೇಕು.

## ಏಷ ಹ ವಾ ಅಹೋರಾತ್ರಯೋಸ್ತೇಜಸಿ ಜುಹೋತಿ ಯೋಽಸ್ತಮಿತೇ ಸಾಯಂ ಜುಹೋತ್ಯುದಿತೇ ಪ್ರಾತರಗ್ನಿನಾ ವೈ ತೇಜಸಾ ರಾತ್ರಿಸ್ತೇಜಸ್ವಿನ್ಯಾದಿತ್ಯೇನ ತೇಜಸಾಽಹಸ್ತೇಜಸ್ವಿತ್ ॥

**ಪುನರಪಿ ಪ್ರಕಾರಾಂತರೇಣೋದಿತಹೋಮಂ ಪ್ರಶಂಸತಿ—ಯಃ ಸಾಯಂ ಪ್ರಾತರ್ಹೋಮೌ ಕಾಲಭೇದೇನ ಜುಹೋತ್ಯೇಷ ಪುಮಾನಹೋರಾತ್ರಯೋಃ ಸಂಬಂಧಿನಿ ವಿವಿಧೇ ತೇಜಸಿ ಜುಹೋತಿ । ಕಥಮೇತದಿತಿ ತದುಚ್ಯತೇ । ಯೇಯಂ ರಾತ್ರಿಃ ಸೇಯಮಗ್ನಿನೈವ**

**ತೇಜಸಾ ಯುಕ್ತಾ ಸತೀ ತೇಜಸ್ವಿನೀ ಭವತಿ । ಯದಿದಮುಹಸ್ತ ದೇತದಾದಿತ್ಯೇನ ತೇಜಸಾ ತೇಜಸ್ವದ್ಭವತಿ । ತಸ್ಮಾತ್ಸಾಯಂಪ್ರಾತಃಕಾಲದ್ವಯೋ ಜುಹ್ವತಸ್ತೇಜೋದ್ವಯೋ ಹೋಮಸಿದ್ಧಿಃ ॥**

ಸೂರ್ಯೋದಯಾನಂತರ ಮಾಡುವ ಅಗ್ನಿಹೋತ್ರಹೋಮವನ್ನು ಪ್ರಕಾರಾಂತರವಾಗಿ ಪ್ರಶಂಸೆಮಾಡುವರು. ಯಾವ ಪುರುಷನು ಸಾಯಂ ಪ್ರಾತರ್ಹೋಮಗಳನ್ನು ಕಾಲಭೇದಗಳನ್ನನುಸರಿಸಿ ಎಂದರೆ ಸೂರ್ಯಾಸ್ತಮಯವಾದಮೇಲೆ ಸಾಯಂಕಾಲದಲ್ಲಿ ಒಂದಾವರ್ತಿಯೂ ಪ್ರಾತಃಕಾಲದಲ್ಲಿ ಸೂರ್ಯೋದಯಾನಂತ ಮತ್ತೊಂದಾವರ್ತಿಯೂ ಹೋಮಮಾಡುವನೋ ಅವನು ಎರಡುವಿಧವಾದ ತೇಜಸ್ಸಿನಿಂದ ಬೆಳಗುವನು. ಹೇಗೆಂದರೆ ರಾತ್ರಿಕಾಲದಲ್ಲಿ ಸೂರ್ಯನು ಇಲ್ಲದ್ದರಿಂದ ಆ ಕಾಲವು ಅಗ್ನಿಯ ತೇಜಸ್ಸಿನಿಂದ ಕೂಡಿ ಬೆಳಗುತ್ತಿರುವುದು. ಆದರೆ ಹಗಲು ಸೂರ್ಯೋದಯಾನಂತರ ಸೂರ್ಯನ ತೇಜಸ್ಸಿನಿಂದ ಹಗಲು ಬೆಳಗುತ್ತಿರುವುದು. ಆದ್ದರಿಂದ ಅಗ್ನಿ ಮತ್ತು ಸೂರ್ಯ ಎಂಬಿಬ್ಬರ ಎರಡುವಿಧವಾದ ತೇಜಸ್ಸಿನಿಂದಲೂ ಅಗ್ನಿಹೋತ್ರಿಯು ಬೆಳಗುತ್ತಿರುವನು.

ಅಹೋರಾತ್ರಯೋರ್ಹಾಸ್ಯ ತೇಜಸಿ ಹುತಂ ಭವತಿ ಯ ಏವಂ ವಿದ್ವಾನುದಿತೇ ಜುಹೋತಿ ॥

**ವೇದನಪೂರ್ವಕಮನುಷ್ಠಾನಂ ಹೋಮಂ ಪ್ರಶಂಸತಿ—**

ಈ ವಿಷಯವನ್ನು ಚೆನ್ನಾಗಿ ತಿಳಿದುಕೊಂಡು ಅಗ್ನಿಹೋತ್ರಮಾಡುವುದನ್ನು ಪ್ರಶಂಸೆಮಾಡುವರು. ಯಾವ ಪುರುಷನು ಸೂರ್ಯೋದಯಾನಂತರ ಅಗ್ನಿಹೋತ್ರವನ್ನು ಹೋಮಮಾಡುವನೋ ಆ ಪುರುಷನು ಅಹೋರಾತ್ರಿಗಳಲ್ಲಿರುವ (ಅಗ್ನಿ ಮತ್ತು ಸೂರ್ಯರ) ಎರಡುವಿಧವಾದ ತೇಜಸ್ಸುಗಳಲ್ಲಿ ಅಗ್ನಿಹೋತ್ರವನ್ನು ಹೋಮಮಾಡಿದಂತಾಗುವುದು.

ತಸ್ಮಾದುದಿತೇ ಹೋತವ್ಯಂ ॥

**ಉಪಪಾದಿತಮರ್ಥಂ ನಿಗಮಯತಿ—**

ಆದ್ದರಿಂದ ಪ್ರಾಜ್ಞನಾದ ಪುರುಷನು ಪ್ರಾತಃಕಾಲದಲ್ಲಿ ಮಾಡಬೇಕಾದ ಅಗ್ನಿಹೋತ್ರಹೋಮವನ್ನು ಸೂರ್ಯೋದಯಾನಂತರವೇ ಮಾಡಬೇಕು. ಈ ಅಗ್ನಿಹೋತ್ರಹೋಮದ ಕ್ರಮಗಳನ್ನು ತೈತ್ತಿರೀಯಬ್ರಾಹ್ಮಣದ ಎರಡನೇ ಕಾಂಡದ ಮೊದಲನೇ ಅಧ್ಯಾಯದ ಪ್ರಾರಂಭದ ಅನುವಾಕಗಳಲ್ಲಿ ವಿವರಿಸಲಾಗಿದೆ. ಅದನ್ನು ಅಲ್ಲಿ ನೋಡಿ ತಿಳಿದುಕೊಳ್ಳಬಹುದು. (ತೈ. ಬ್ರಾ. ೨-೧-೧ ಮತ್ತು ೨).

*English Translation*

**(Whether the morning oblation of the Agnihotri is to be offered before or after sunrtse.)**

Vrishasushma, the son of Vatavata, the son of Jatukarna, said, "we shall tell this to the gods, that they perform now the Agnihottam, which was brought on both days, on the evening of the preceding, and the morning of the following

day only every other day." And a girl who was possessed by a Gandharva, spoke thus, " we shall tell it to the Pitaras (ancestors), that the Agnihotram, which was performed on both days, is now performed every other day."

The Agnihotram performed every other day is performed at evening after sunset, and at morning before sunrise. The Agnihotram performed on both days is performed at evening after sunset, and at morning after sunrise. For he who offers the Agnihotram before sunset, reaches in the twenty-fourth year the Gayatri world, but if he brings it after sunrise, in the twelflh. When he brings the Agnihotram before sunrise during two years, then has actually sacrifieed during one year only. But if he sacrifices after sunrise, then he conpletes the yearly amount of offerings in one year. Therefore the Agnihotram is to be brought after sunrise. He who sacrifices after sunset at the evening and after sunrise in the morning, brings the offering in the lustre of the day-night (Ahoratra). For the night receives light from Agni and the day from the sun (Aditya). By means of this light the day is illuminated. Therefore he who sacrifices after sunrise, performs the sacrifice only in the light of Ahoratra that is, he receives the light only once, instead of twice, the offering brought before sunrise belonging to the night and being illuminated by Agni, not by Aditya.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಪಂಚವಿಂಶಾಧ್ಯಾಯಸ್ಯ ಚತುರ್ಥಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೈದನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು
ಸಮಾಪ್ತವಾದುದು.**



# ಅಥ ಪಂಚವಿಂಶಾಧ್ಯಾಯೇ ಪಂಚಮಃ ಖಂಡಃ

## ಇಪ್ಪತ್ತಐದನೆಯ ಅಧ್ಯಾಯದಲ್ಲಿ ಐದನೆಯ ಖಂಡವು

[ ಅಗ್ನಿಹೋತ್ರವನ್ನು ಸೂರ್ಯೋದಯಾನಂತರ ಮಾಡಬೇಕೆಂಬ ವಿಚಾರವನ್ನು ಸಮರ್ಥಿಸುವುದಕ್ಕಾಗಿ ಹೇಳಲಾದ ಕೆಲವು ಋಕ್ಕುಗಳು.]

**ಏತೇ ಹ ವೈ ಸಂವತ್ಸರಸ್ಯ ಚಕ್ರೇ ಯದಹೋರಾತ್ರೇ ತಾಭ್ಯಾಮೇವ ಸಂವತ್ಸರಮೇತಿ ಸ ಯೋಽನುದಿತೇ ಜುಹೋತಿ ಯಥೈಕತಶ್ಚಕ್ರೇಣ ಯಾಯಾತ್ತಾದೃಕ್ತದಥ ಯ ಉದಿತೇ ಜುಹೋತಿ ಯಥೋ-ಭಯತಶ್ಚಕ್ರೇಣ ಯಾನ್ಕ್ಷಿಪ್ರಮಧ್ವಾನಂ ಸಮಶ್ನುವೀತ ತಾದೃ-ಕ್ತತ್ ॥**

ದೃಷ್ಟಾಂತಪೂರ್ವಕಮುದಿತಹೋಮಂ ಪುನಃ ಪ್ರಶಂಸತಿ ಯೇ ಏವಾಹೋರಾತ್ರೇ ವಿದ್ಯೇತೇ ಏತೇ ಏವ ರಥಸ್ಥಾನೀಯಸ್ಯ ಸಂವತ್ಸರಸ್ಯ ಚಕ್ರಸ್ಥಾನೀಯೇ । ಏವಂ ಸತಿ ಸ ಪುರುಷೋ ಲೌಕಿಕಸ್ತಾಭ್ಯಾಮೇವಾಹೋರಾತ್ರಚಕ್ರಾಭ್ಯಾಂ ಸಂವತ್ಸರರಥಂ ಪ್ರಾಪ್ನೋತಿ ಏವ-ಮಹೋರಾತ್ರಯೋಃ ಸಂವತ್ಸರಪ್ರಾಪ್ತಿಸಾಧನತ್ವೇ ಸ್ಥಿತೇ ಸತಿ ಯಃ ಪುಮಾನುದಯಾತ್ಪ್ರಾ-ಗೇವ ಪ್ರಾತರ್ಜುಹೋತಿ । ತಸ್ಯ ದೃಷ್ಟಾಂತೋಽಭಿಧೀಯತೇ । ಯಥಾ ಲೋಕೇ ರಥಸ್ಯೈಕತ ಏಕಸ್ಮಿನ್ನೇವ ಪಾರ್ಶ್ವೇ ಸ್ಥಿತೇನ ಚಕ್ರೇಣ ಯಾಯಾನ್ಮಾರ್ಗಂ ಗಚ್ಛೇತ್ತಾದೃಕ್‌ತದನುಷ್ಠಾನಂ ಸ್ಯಾತ್ । ಏಕಂ ಚಕ್ರಂ ಯಥಾ ಗಮನಕ್ಷಮಂ ನ ಭವತಿ ತಥೈವಾನುದಿತಹೋಮ ಏಕಕಾಲ-ಮಾತ್ರವರ್ತಿತ್ವಾದಿತ್ಯರ್ಥಃ । ಅಥೋಕ್ತವೈಲಕ್ಷಣ್ಯೇನ ಯಃ ಪುಮಾನುದಿತೇ ಜುಹೋತಿ ತಸ್ಯ ದೃಷ್ಟಾಂತೋಽಭಿಧೀಯತೇ । ಯಥಾ ಪಾರ್ಶ್ವದ್ವಯೇ ಚಕ್ರಯುಕ್ತೇನ ರಥೇನ ಯಾನ್ಗಚ್ಛನ್ಪು-ರುಷಃ ಕ್ಷಿಪ್ರಂ ಶೀಘ್ರಂ ಮಾರ್ಗಂ ಪ್ರಾಪ್ನೋತಿ ತಾದೃಕ್ತತ್ಕಾಲದ್ವಯಾನುಷ್ಠಾನಮವಿಘ್ನೇನ ಫಲಪ್ರದಮಿತ್ಯರ್ಥಃ ॥

ಸೂರ್ಯೋದಯಾನಂತರ ಮಾಡಬೇಕಾದ ಅಗ್ನಿಹೋತ್ರಹೋಮವನ್ನು ದೃಷ್ಟಾಂತಪೂರ್ವಕವಾಗಿ ಪುನಃ ಪ್ರಶಂಸೆ ಮಾಡುವರು. ಸಂವತ್ಸರವೆಂಬುದೇ ರಥವು. ಆ ರಥಕ್ಕೆ ಅಹೋರಾತ್ರಿಗಳು (ಹಗಲು ಮತ್ತು ರಾತ್ರಿಗಳು) ಎರಡು ಚಕ್ರಗಳಂತಿ ರುವುವು. ಯಾವ ಪುರುಷನು ಅಹೋರಾತ್ರಿಗಳೆಂಬ ಚಕ್ರಗಳಿಂದ ಕೂಡಿದ ಸಂವತ್ಸರವೆಂಬ ರಥದಲ್ಲಿ ಕುಳಿತು ಪ್ರಯಾಣ ಮಾಡುವನೋ ಆ ಪುರುಷನು ನಿರ್ದಿಷ್ಟಸ್ಥಾನವನ್ನು ಯಾವ ತೊಂದರೆಯೂ ಇಲ್ಲದೆ ಹೋಗಿ ಸೇರುವನು. ಆದರೆ ಸೂರ್ಯೋ ದಯಕ್ಕೆ ಮುಂಚಿತವಾಗಿಯೇ ಯಾವ ಪುರುಷನು ಅಗ್ನಿಹೋತ್ರವನ್ನು ಮಾಡುವನೋ ಅವನು ಮಾಡುವ ಅಗ್ನಿಹೋತ್ರವು

ಹೇಗಾಗುವುದೆಂಬ ವಿಷಯಕ್ಕೆ ಒಂದು ದೃಷ್ಟಾಂತವನ್ನು ಹೇಳುವರು. ರಥವಲ್ಲಿ ಒಂದೇ ಚಕ್ರವಿದ್ದು ಅದರಲ್ಲಿ ಕುಳಿತ ಪುರುಷನು ಸಂಚಾರಮಾಡಲು ಹೇಗೆ ಸಾಧ್ಯವಿಲ್ಲವೋ ಅದರಂತೆ ಸೂರ್ಯೋದಯಕ್ಕೆ ಪೂರ್ವದಲ್ಲಿ ಹೋಮಮಾಡುವ ಪುರುಷನು ಒಂದು ಚಕ್ರಮಾತ್ರವಿರುವ ರಥದಲ್ಲಿ ಕುಳಿತು ಸಂಚಾರಮಾಡಲು ಸಾಧ್ಯವಿಲ್ಲದವನಂತೆ ಆಗುವನು. ಸೂರ್ಯೋದಯಾನಂತರ ಹೋಮ ಮಾಡುವ ಪುರುಷನು ಎರಡುಚಕ್ರಗಳಿರುವ ರಥದಲ್ಲಿ ಕುಳಿತು ಸಂಚಾರಮಾಡುವ ಪುರುಷನಂತೆ ತನ್ನ ಕಾರ್ಯವನ್ನು ಸುಗಮವಾಗಿ ನೆರವೇರಿಸಲು ಸಾಧ್ಯವಾಗುವುದು. ಎರಡು ಚಕ್ರಗಳಿರುವ ರಥದಲ್ಲಿ ಕುಳಿತು ಸಂಚಾರಮಾಡುವ ಪುರುಷನು ಯಾವ ತೊಂದರೆಯೂ ಇಲ್ಲದೆ ನಿರ್ಬಾಧಿತವಾಗಿ ಸಂಚರಿಸುವಂತೆ ಸೂರ್ಯೋದಯಾನಂತರ ಅಗ್ನಿಹೋತ್ರವನ್ನು ಮಾಡುವ ಪುರುಷನು ನಿರ್ಬಾಧಿತವಾಗಿ ತನ್ನ ಉದ್ದಿಷ್ಟಫಲವನ್ನು ಪಡೆಯುವನು.

**ತದೇಷಾಭಿ ಯಜ್ಞಗಾಥಾ ಗೀಯತೇ ॥**

**ಉಕ್ತಾರ್ಥದಾರ್ಢ್ಯಾಯ ಗಾಥಾಮುದಾಹರತಿ-ತತ್ತಸ್ಮಿನ್ಕಾಲದ್ವಯಹೋಮವಿಷಯೇ ಕಾಚಿದ್ಯಜ್ಞಪ್ರತಿಪಾದಿಕಾ ಗಾಥಾ ಸರ್ವೈರಭಿತೋ ಗೀಯತೇ । ಸುಭಾಷಿತತ್ವೇನ ಸರ್ವೈರ್ಗೀಯಮಾನಾ ಗಾಥಾ ॥**

ಮೇಲೆ ಒಂದು ವಿಷಯವನ್ನು ಸಮರ್ಥಿಸುವುದಕ್ಕಾಗಿ ಎಲ್ಲರೂ ಪ್ರಶಂಸೆಮಾಡುವಾಗ ಒಂದು ಗಾಥೆಯನ್ನು ಇಲ್ಲಿ ತಿಳಿಸುವರು. ಆ ಗಾಥೆ ಯಾವುದೆಂದರೆ,

**ಬೃಹದ್ರಥಂತರಾಭ್ಯಾಮಿದಮೇತಿ ಯುಕ್ತಂ ಯದ್ಭೂತಂ ಭವಿಷ್ಯಚ್ಚಾಪಿ ಸರ್ವಂ । ತಾಭ್ಯಾಮಿಯಾದಗ್ನೀನಾಧಾಯ ಧೀರೋ ದಿವೈವಾನ್ಯಜ್ಜುಹುಯಾನ್ನಕ್ತಮನ್ಯದಿತಿ ॥**

**ತಾಂ ಗಾಥಾಮುದಾಹರತಿ— ಯದ್ಭೂತಂ ಜಗದಸ್ತಿ ಯಚ್ಚ ಭವಿಷ್ಯದಿದಂ ಸರ್ವಮಪಿ ಬೃಹದ್ರಥಂತರಾಭ್ಯಾಂ ಸಾಮಭ್ಯಾಂ ಯುಕ್ತಂ ಸದೇತಿ ಪ್ರವರ್ತತೇ । ತಸ್ಮಾದ್ಧೀರೋ ಬುದ್ಧಿಮಾನಗ್ನೀನಾಧಾಯ ಪಶ್ಚಾತ್ತಾಭ್ಯಾಂ ಬೃಹದ್ರಥಂತರಾಭ್ಯಾಂ ಪೃಷ್ಠಸ್ತೋತ್ರನಿಷ್ಪಾದಕಾಭ್ಯಾಮಿಯಾತ್ಸೋಮಯಾಗಮನುತಿಷ್ಠೇತ್ । ಪ್ರತಿದಿನಂ ಚ ದಿವೈವ ಸೂರ್ಯದೇವತಾಮನ್ಯದಗ್ನಿಹೋತ್ರಂ ಜುಹುಯಾತ್ । ನಕ್ತಂ ರಾತ್ರಾವನ್ಯದಗ್ನಿದೇವತಾಕಮಗ್ನಿಹೋತ್ರಂ ಜುಹುಯಾತ್ । ಇತಿಶಬ್ದೋ ಗಾಥಾಸಮಾಪ್ತ್ಯರ್ಥಃ ॥**

ಈ ಜಗತ್ತಿನಲ್ಲಿ ಈಗ ಯಾವುದಿದೆಯೋ ಮುಂದೆ ಭವಿಷ್ಯತ್ಕಾಲದಲ್ಲಿ ಯಾವುದು ಇರುವುದೋ ಅವೆಲ್ಲವೂ ಸದಾಕಾಲ ದಲ್ಲಿಯೂ ಬೃಹದ್ರಥಂತರಗಳೆಂಬ ಸಾಮಮಂತ್ರಸಹಿತವಾಗಿ ಇರುವವು. ಆದ್ದರಿಂದ ಬುದ್ಧಿವಂತನಾದ ಪುರುಷನು ಪ್ರತಿದಿನವೂ ಅಗ್ನಿಯನ್ನು ಆಧಾನಮಾಡಿ ಪೃಷ್ಠಸ್ತೋತ್ರನಿಷ್ಪಾದಕವಾದ ಬೃಹದ್ರಥಂತರಗಳೆಂಬ ಸಾಮಮಂತ್ರಗಳಿಂದ ಸೋಮಯಾಗವನ್ನು ಹೋಮಮಾಡಬೇಕು. ಪ್ರತಿದಿನವೂ ಸೂರ್ಯೋದಯಾನಂತ ಸೂರ್ಯನನ್ನುದ್ದೇಶಿಸಿ ಒಂದಾವರ್ತಿಯೂ ರಾತ್ರಿಕಾಲದಲ್ಲಿ ಅಗ್ನಿಯನ್ನುದ್ದೇಶಿಸಿ ಇನ್ನೊಂದಾವರ್ತಿಯೂ (ದಿನಕ್ಕೆ ಎರಡಾವರ್ತಿ) ಅಗ್ನಿಹೋತ್ರವನ್ನು ಹೋಮಮಾಡಬೇಕು.

ರಾಥಂತರೀ ವೈ ರಾತ್ರ್ಯಹರ್ಬಾರ್ಹತಮಗ್ನಿರ್ವೈ ರಥಂತರಮಾದಿತ್ಯೋ ಬೃಹದೇತೇ ಹ ವಾ ಏನಂ ದೇವತೇ ಬ್ರಧ್ನಸ್ಯ ವಿಷ್ಟಪಂ ಸ್ವರ್ಗಂ ಲೋಕಂ ಗಮಯತೋ ಯ ಏವಂ ವಿದ್ವಾನುದಿತೇ ಜುಹೋತಿ ತಸ್ಮಾದುದಿತೇ ಹೋತವ್ಯಂ ॥

ದಿವಾಹೋಮಂ ರಾತ್ರಿಹೋಮಂ ಚ ಬೃಹದ್ರಥಂತರಸಂಬಂಧೇನ ಪ್ರಶಂಸನ್ನುದಿತ-ಹೋಮಂ ನಿಗಮಯತಿ ।—ಸರ್ವಸ್ಯ ಜಗತೋ ಬೃಹದ್ರಥಂತರಾಧೀನತ್ವಾದಹೋರಾತ್ರಯೋ-ರಪಿ ತತ್ಸಂಬಂಧೋಽಸ್ತಿ । ತತ್ರ ರಾತ್ರೀ ರಥಂತರಸಾಮಸಂಬಂಧಿನೀ, ಅಹಸ್ತು ಬೃಹತ್ಸಾಮಸಂ-ಬಂಧಿ, ತಯೋಃ ಕಾಲಯೋರಭಿಮಾನಿನ್ಯೌ ಯೇ ಉಭೇ ದೇವತೇ ಅಗ್ನ್ಯಾದಿತ್ಯರೂಪೇ ತಯೋ ರಥಂತರಬೃಹದ್ರೂಪತ್ವಂ ತತ್ಸಾಮಾಭಿಮಾನಿತ್ವಾದವಗಂತವ್ಯಂ । ಏವಂ ಸತಿ ಯಃ ಪುಮಾನ್-ಶಾಸ್ತ್ರರಹಸ್ಯಂ ವಿದ್ವಾನ್ಸಾಯಮಗ್ನಿಹೋತ್ರಂ ಹುತ್ವಾ ಪಶ್ಚಾತ್ಪ್ರಾತರುದಿತೇ ಜುಹೋತಿ । ಏವಮುದಿತಹೋಮಿನಂ ಬೃಹದ್ರಥಂತರಾಭಿಮಾನಿನ್ಯೌ ದೇವತೇ ಬ್ರಧ್ನಸ್ಯಾಽಽದಿತ್ಯಸ್ಯ ವಿಷ್ಟಪಂ ಸ್ಥಾನಂ ಸ್ವರ್ಗಂ ಲೋಕಂ ಪ್ರಾಪಯತಃ । ತಸ್ಮಾತ್ಕಾರಣಾತ್ಪ್ರಾತರುದಿತೇ ಹೋತವ್ಯಂ ॥

ಹಗಲು ಮತ್ತು ರಾತ್ರಿಕಾಲಗಳಲ್ಲಿ ಮಾಡಬೇಕಾದ ಅಗ್ನಿಹೋತ್ರಹೋಮವನ್ನು ಬೃಹದ್ರಥಸಂಬಂಧದಿಂದ ಪ್ರಶಂಸೆ ಮಾಡುವುದಕ್ಕಾಗಿ ಸೂರ್ಯೋದಯಾನಂತರ ಮಾಡುವ ಅಗ್ನಿಹೋತ್ರವನ್ನು ತಿಳಿಸುವರು. ಸಮಸ್ತ ಜಗತ್ತೂ ಸಹ ಬೃಹದ್ರಥಂತರಾಧೀನವಾದವು. ಆದ್ದರಿಂದ ಅಹೋರಾತ್ರಿಗಳೂ ಸಹ ಅವುಗಳ ಸಂಬಂಧವೇ ಆಗಿವೆ ಎಂದರೆ ರಾತ್ರಿಯು ರಥಂತರಸಾಮ ಸಂಬಂಧವಾದದ್ದು. ಹಗಲು ಬೃಹತ್ಸಾಮಸಂಬಂಧವಾದದ್ದು. ಈ ರಾತ್ರಿ ಮತ್ತು ಹಗಲು ಕಾಲಗಳ ಅಭಿಮಾನಿದೇವತೆಗಳು ಅಗ್ನಿ ಮತ್ತು ಆದಿತ್ಯರುಗಳೆಂದು ತಿಳಿಯಬೇಕು. ಈ ವಿಷಯವನ್ನು ಚೆನ್ನಾಗಿ ತಿಳಿದ ವಿದ್ವಾಂಸನಾದ ಪುರುಷನು ಸಾಯಂಕಾಲದ ಅಗ್ನಿಹೋತ್ರವನ್ನು ಮೊದಲು ಹೋಮಮಾಡಿ ಅನಂತರ ಪ್ರಾತಃಕಾಲದಲ್ಲಿ ಸೂರ್ಯೋದಯವಾದಮೇಲೆ ಪ್ರಾತರಗ್ನಿಹೋತ್ರವನ್ನು ಹೋಮಮಾಡಬೇಕು. ಈರೀತಿ ಸಾಯಂಕಾಲದಲ್ಲಿ ಸಾಯಂಕಾಲದ ಅಗ್ನಿಹೋತ್ರವನ್ನು ಪ್ರಾತಃಕಾಲದಲ್ಲಿ ಸೂರ್ಯನು ಉದಯಿಸಿದಮೇಲೆ ಪ್ರಾತರಗ್ನಿಹೋತ್ರವನ್ನೂ ಮಾಡುವ ಪುರುಷನನ್ನು ಬೃಹದ್ರಥಂತರ ಸಾಮಗಳಿಗೆ ಅಭಿಮಾನಿಗಳಾದ ದೇವತೆಗಳು ಆದಿತ್ಯನ ಸ್ಥಾನವಾದ ಸ್ವರ್ಗಲೋಕಕ್ಕೆ ಒಯ್ಯುವರು. ಆದ್ದರಿಂದ ಪ್ರಾತಃಕಾಲದಲ್ಲಿ ಸೂರ್ಯನು ಉದಯಿಸಿದನಂತರವೇ ಪ್ರಾತರಗ್ನಿಹೋತ್ರವನ್ನು ಮಾಡಬೇಕು.

ತದೇಷಾಭಿ ಯಜ್ಞಗಾಥಾ ಗೀಯತೇ ॥

ಉದಿತಹೋಮಂ ಪ್ರಶಸ್ಯಾನುದಿತಹೋಮಂ ನಿಂದಿತುಂ ಗಾಥಾಮುದಾಹರತಿ—ತತ್ತಸ್ಮಿನ್ನನುದಿತಹೋಮನಿಂದಾರೂಪೇಽರ್ಥೇ ಏಷಾ ವಕ್ಷ್ಯಮಾಣಾ ಗಾಥಾ ಯಾಜ್ಞಿಕೈಃ ಸರ್ವೈ-ರ್ಗೀಯಮಾನಾ ಸುಭಾಷಿತರೂಪಾಽಭಿತಃ ಸರ್ವತೋ ಗೀಯತೇ ವಕ್ಷ್ಯತೇ ॥

ಸೂರ್ಯೋದಯಾನಂತರ ಮಾಡುವ ಪ್ರಾತಃಕಾಲದ ಅಗ್ನಿಹೋತ್ರವನ್ನೂ ಪ್ರಶಂಸೆಮಾಡಲು ಮತ್ತು ಸೂರ್ಯನು ಉದಯಿಸುವುದಕ್ಕೆ ಮುಂಚಿತವಾಗಿ ಮಾಡುವ ಪ್ರಾತರಗ್ನಿಹೋತ್ರವನ್ನು ನಿಂದಿಸುವುದಕ್ಕಾಗಿಯೂ ಒಂದು ಗಾಥೆಯನ್ನು

ತಿಳಿಸುವರು. ಸೂರ್ಯೋದಯಕ್ಕೆ ಮುಂಚಿತವಾಗಿ ಹೋಮಮಾಡುವ ಪ್ರಾತರಗ್ನಿಹೋತ್ರವನ್ನು ನಿಂದಿಸುವ ಉದ್ದೇಶದಿಂದ ಯಾಜ್ಞಿಕರು ಹೇಳುವ ಒಂದು ಗಾಥೆಯು ರೂಢಿಯಲ್ಲಿರುವುದು ತದನ್ನೇ ಎಲ್ಲರ ತಿಳುವಳಿಕೆಗಾಗಿ ಇಲ್ಲಿ ಹೇಳಲಾಗುವುದು.

ಯಥಾ ಹ ವಾಽಸ್ಥೂರಿಣೈಕೇನ ಯಾಯಾದಕೃತ್ವಾಽನ್ಯದುಪಯೋಜನಾಯ । ಏವಂ ಯಂತಿ ತೇ ಬಹವೋ ಜಹವೋ ಜನಾಸಃ ಪುರೋದಯಾಜ್ಜುಹ್ವತಿ ಯೇಽಗ್ನಿಹೋಗ್ನಿಹೋತ್ರಮಿತಿ ॥

ತಾಂ ಗಾಥಾಮುದಾಹರತಿ—ಅಸ್ಥೂರಿನಾಮಾಽಶ್ವೋ ರಥವಾಜೀ । ಯಥಾ ಲೋಕೇ ಕಶ್ಚಿನ್ಮಂದಬುದ್ಧಿರುಪಯೋಜನಾಯ ರಥೇ ಯೋಜಯಿತುಮನ್ಯದಕೃತ್ವಾಽಶ್ವಾಂತರಮಸಂಪಾದ್ಯೈಕೇನೈವಾಸ್ಥೂರಿಣಾಽಶ್ವೇನ ರಥನಿಯುಕ್ತೇನ ಯಾಯಾನ್ಮಾರ್ಗಂ ಗಚ್ಛೇದೇವಮೇವ ಯೇ ಶಾಸ್ತ್ರರಹಸ್ಯಾನಭಿಜ್ಞಾಃ ಸೂರ್ಯೋದಯಾತ್ಪುರಾಽಗ್ನಿಹೋತ್ರಂ ಜುಹ್ವತಿ ತೇ ಬಹವೋ ಜನಾಸಃ ಪುರುಷಾ ಯಂತಿ ಗಚ್ಛಂತಿ । ಏಕಾಶ್ವಯುಕ್ತೋ ರಥೋ ಯಥಾ ಮಾರ್ಗಪಾರಂ ನೇತುಮಸಮರ್ಥ ಏವಂ ರಾತ್ರಿರೂಪಮೇ(ಏ) ಕಸ್ಮಿನ್ನೇವ ಕಾಲೇ ಕೃತಮಗ್ನಿಹೋತ್ರಂ ಫಲದಂ ನ ಭವತೀತ್ಯರ್ಥಃ । ಇತಿಶಬ್ದೋ ಗಾಥಾಸಮಾಪ್ತ್ಯರ್ಥಃ ॥

ಆ ಗಾಥೆಯನ್ನು ಇಲ್ಲಿ ವಿವರಿಸುತ್ತಾರೆ. ಅಸ್ಥೂರಿ ಎಂಬುದು ರಥಕ್ಕೆ ಕಟ್ಟುವ ಒಂದು ಕುದುರೆಯು. ಲೋಕವ್ಯವಹಾರದಲ್ಲಿ ಮೂಢನಾದ ಒಬ್ಬ ಪುರುಷನು ಬೇರೆ ಮತ್ತೊಂದು ಕುದುರೆಯು ಸಿಕ್ಕಲಿಲ್ಲವೆಂಬ ಕಾರಣದಿಂದ ಅಸ್ಥೂರಿ ಎಂಬ ಒಂದು ಕುದುರೆಯನ್ನು ಮಾತ್ರವೇ ರಥಕ್ಕೆ ಹೂಡಿ ಮಾರ್ಗದಲ್ಲಿ ಪ್ರಯಾಣಮಾಡಲು ಉದ್ಯುಕ್ತನಾಗುವನು. ಈ ಪುರುಷನಂತೆಯೇ ಮೂಢರಾದ ಮಂದಬುದ್ಧಿಗಳಾದ ಅನೇಕ ಪುರುಷರು ಸೂರ್ಯೋದಯಕ್ಕೆ ಮುಂಚಿತವಾಗಿಯೇ ಅಗ್ನಿಹೋತ್ರವನ್ನು ಹೋಮ ಮಾಡುವರು. ಮೇಲೆ ಹೇಳಿದಂತೆ ಒಂದು ಕುದುರೆಯನ್ನು ಮಾತ್ರ ಕಟ್ಟಿದ ರಥವು ಹೇಗೆ ಮಾರ್ಗಾತಿಕ್ರಮಣಮಾಡಲಾರದೋ ಹಾಗೆಯೇ ರಾತ್ರೆಕಾಲದಲ್ಲಿ ಮಾತ್ರ ಅಗ್ನಿಹೋತ್ರವನ್ನು ಮಾಡಿದ ಪುರುಷರು (ಸೂರ್ಯೋದಯಕ್ಕೆ ಪೂರ್ವದಲ್ಲಿ ಮಾಡಿದ ಅಗ್ನಿಹೋತ್ರವು ವ್ಯರ್ಥವಾಗುವುದರಿಂದ ಒಂದು ಅಗ್ನಿಹೋತ್ರವನ್ನು ಮಾತ್ರ ಮಾಡಿದಂತಾಗಿ ಅದು ಯಾವ ಫಲವನ್ನೂ ಉಂಟುಮಾಡದೆ ವ್ಯರ್ಥವಾಗುವುದು. ಇದೇ ಗಾಥೆಯ ಮುಖ್ಯಾಭಿಪ್ರಾಯವು.

ತಾಂ ವಾ ಏತಾಂ ದೇವತಾಂ ಪ್ರಯತೀಂ ಸರ್ವಮಿದಮನುಪ್ರೈತಿ ಯದಿದಂ ಕಿಂ ಚೈತಸ್ಯೈ ಹೀದಂ ದೇವತಾಯಾ ಅನುಚರಂ ಸರ್ವಂ ಯದಿದಂ ಕಿಂ ಚ ಸೈಷಾನುಚರವತೀ ದೇವತಾ ॥

ಉದಿತಹೋಮೋತ್ಕರ್ಷಾರ್ಥಮಾದಿತ್ಯದೇವತಾಂ ಪ್ರಶಂಸತಿ–ಯತ್ಕಿಂಚಿದಿದಂ ಸ್ಥಾವರಜಂಗಮರೂಪಂ ಜಗದಸ್ತಿ ತದಿದಂ ಸರ್ವಂ ತಾಮೇತಾಮಾದಿತ್ಯದೇವತಾಂ ಪ್ರಯತೀಮುದಯಾಸ್ತಮಯೌ ಗಚ್ಛಂತೀಮನು ಪಶ್ಚಾತ್ ಪ್ರೈತಿ ಪ್ರವರ್ತತೇ । ತಥಾ ಚ ಶಾಖಾಂತರೇ ಶ್ರೂಯತೇ—'ಯೋಽಸೌ ತಪನ್ನುದೇತಿ ಸ ಸರ್ವೇಷಾಂ ಭೂತಾನಾಂ ಪ್ರಾಣಾನಾದಾಯೋದೇತಿ' ಅಸೌ ಯೋಽಸ್ತಮೇತಿ ಸ ಸರ್ವೇಷಾಂ ಭೂತಾನಾಂ ಪ್ರಾಣಾನಾದಾಯಾಸ್ತಮೇತಿ'। ಇತಿ।

**ಸೂರ್ಯೋದಯಮನು ಸರ್ವೇಷಾಮಿಂದ್ರಿಯೋದಯಾದ್ದಿವಾ ಸರ್ವೇ ಚೇಷ್ಟಂತೇ । ಸೂರ್ಯಾ-ಸ್ತಮಯಮನು ಸರ್ವೇಷಾಮಿಂದ್ರಿಯಾಸ್ತಮಯಾದ್ರಾತ್ರೌ ಸರ್ವೇ ನಿದ್ರಾಂ ಕುರ್ವಂತಿ । ಅನೇನ ಪ್ರಕಾರೇಣ ಯತ್ಕಿಂಚಿಜ್ಜಗದಸ್ತಿ ತತ್ಸರ್ವಮೇತಸ್ಯಾ ಆದಿತ್ಯದೇವತಾಯಾ ಅನುಚರಂ ಭೃತ್ಯಸ್ಥಾನೀಯಂ । ಅತಃ ಸೈಷಾಽದಿತ್ಯದೇವತಾಽನುಚರವತೀ ಬಹುಭೃತ್ಯೋಪೇತಾ ॥**

ಸೂರ್ಯೋದಯಾನಂತರ ಮಾಡುವ ಅಗ್ನಿಹೋತ್ರವು ಶ್ರೇಷ್ಠವಾದುದರಿಂದ ಆ ವಿಚಾರವಾಗಿ ಆದಿತ್ಯನನ್ನು ಪ್ರಶಂಸೆ ಮಾಡುವರು. ಪ್ರಪಂಚದಲ್ಲಿ ಕಾಣುವ ಸ್ಥಾವರಜಂಗಮರೂಪವಾದ ಜಗತ್ತೆಲ್ಲವೂ ನಮಗೆ ಕಾಣಿಸುತ್ತಿರುವ ಸೂರ್ಯನನ್ನೇ ಅನುಸರಿಸಿ ಪ್ರವರ್ತಿಸುತ್ತಿರುವವು. ಈ ವಿಷಯವು ಶಾಖಾಂತರದಲ್ಲಿ (ತೈತ್ತಿರೀಯ ಆರಣ್ಯಕದಲ್ಲಿ) ಈರೀತಿ ಹೇಳಲಾಗಿರುವುದು— **ಯೋಽಸೌ ತಪನ್ನುದೇತಿ । ಸ ಸರ್ವೇಷಾಂ ಭೂತಾನಾಂ ಪ್ರಾಣಾನಾದಾಯೋದೇತಿ । ಅಸೌ ಯೋಽಸ್ತ-ಮೇತಿ ।** ಎಂದು. ಎಂದರೆ ಈ ಆದಿತ್ಯನು ಉದಯಿಸಿದಕೂಡಲೇ ಸಕಲ ಪ್ರಾಣಿಗಳ (ಚೈತನ್ಯ) ಪ್ರಾಣಗಳನ್ನು ತನ್ನೊಂದಿಗೆ ತಂದು ಉದಯಿಸುವನು. ಅಸ್ತಮಕಾಲದಲ್ಲಿ ಈ ಪ್ರಾಣಿಗಳ ಚೈತನ್ಯಗಳನ್ನು ಪ್ರಾಣಗಳನ್ನು ತನ್ನೊಂದಿಗೇ ತೆಗೆದುಕೊಂಡುಹೋಗುವನು. ಸೂರ್ಯನಿರುವಾಗ ಅವನ ಮೂಲಕ ಸಮಸ್ತ ಪ್ರಾಣಿಗಳೂ ಚೇಷ್ಟಾರೂಪವಾದ ವ್ಯಾಪಾರಗಳನ್ನು ಮಾಡುತ್ತವೆ. ಸೂರ್ಯನು ಮುಳುಗಿದನೆಂದರೆ ಸಕಲ ಪ್ರಾಣಿಗಳ ವ್ಯಾಪಾರಗಳೂ ನಿಂತುಹೋಗುತ್ತವೆ. ಸೂರ್ಯನಿಂದಲೇ ಸಕಲ ಪ್ರಾಣಿಗಳ ವ್ಯಾಪಾರವೂ ನಡೆಯುವವು. ಸೂರ್ಯನಿಲ್ಲದಿದ್ದರೆ ಯಾವ ಪ್ರಾಣಿಗಳೂ ಯಾವ ವ್ಯಾಪಾರಗಳನ್ನೂ ಮಾಡಲಾರವು. ರಾತ್ರಿಕಾಲದಲ್ಲಿ ಸೂರ್ಯ ನಿಲ್ಲದಿರುವುದರಿಂದ ಸಕಲ ಪ್ರಾಣಿಗಳ ವ್ಯಾಪಾರಗಳು ನಿಂತುಹೋಗುತ್ತವೆ. ಆದ್ದರಿಂದ ಈ ಜಗತ್ತೂ ಮತ್ತು ಈ ಜಗತ್ತಿನಲ್ಲಿರುವ ಪ್ರಾಣಿಗಳೂ ಸಹ ಆದಿತ್ಯನನ್ನೇ ಅನುಚರ (ಭೃತ್ಯ) ರಂತೆ ಅನುಸರಿಸಿ ನಡೆಯುತ್ತವೆ. ಎಂದರೆ ಈ ಪ್ರಪಂಚ (ಜಗತ್ತು) ವೆಲ್ಲವೂ ಆದಿತ್ಯನ ಭೃತ್ಯರಂತೆಯೇ ಇರುವುದು.

## ವಿಂದತೇ ಹ ವಾ ಅನುಚರಂ ಭವತ್ಯಸ್ಯಾನುಚರೋ ಯ ಏವಂ ವೇದ ॥

**ವೇದನಂ ಪ್ರಶಂಸತಿ— ವೇದಿತಾ ಸ್ವಯಂ ಧನಿಕೋ ಭೂತ್ವಾ ಜೀವಿತಪ್ರದಾನೇನಾನು-ಚರಂ ಲಭತೇ । ಅತೋಽಸ್ಯ ಸರ್ವದಾಽನುಚರೋ ಭೃತ್ಯವರ್ಗೋ ಭವತ್ಯೇವ ॥**

ಇದರ ಫಲವನ್ನು ತಿಳಿಸುವರು. ಮೇಲಿನ ವಿಷಯವೆಲ್ಲವನ್ನೂ ಚೆನ್ನಾಗಿ ತಿಳಿದವನು ಧನಿಕನಾಗುವನು ಮತ್ತು ಅನೇಕ ಭೃತ್ಯರುಗಳು (ಸೇವಕರು) ಇವನ ಅನುಚರರಾಗಿ ಇವನನ್ನು ಸದಾ ಸೇವಿಸುತ್ತಲಿರುವರು.

## ಸ ವಾ ಏಷ ಏಕಾ ತಿಥಿಃ ಸ ಏಷ ಜುಹ್ವತ್ಸು ವಸತಿ ॥

**ಪ್ರಕಾರಾಂತರೇಣಾದಿತ್ಯದೇವತಾಂ ಪ್ರಶಂಸತಿ— ಏಷ ಆದಿತ್ಯಃ ಸ್ವಯಮೇಕಾತಿಥಿಃ । ಯಥಾ ಲೋಕೇ ಕಶ್ಚಿದ್ವೈದೇಶಿಕೋ ಬಂಧುರಹಿತಃ ಸ್ವಯಮೇಕ ಏವಾತಿಥಿರ್ಭೂತ್ವಾ ಗೃಹೇಷು ಗಚ್ಛತಿ ಏವಂ ಸ ಏಷಃ ಆದಿತ್ಯೋ ಜುಹ್ವತ್ಸ್ವಗ್ನಿಹೋತ್ರಿಷು ಪ್ರಾತಃ ಸಮಾ-ಗತ್ಯ ತಿಷ್ಠತಿ ॥**

ಆದಿತ್ಯನನ್ನು ಪ್ರಕಾರಾಂತರವಾಗಿ ಪ್ರಶಂಸೆಮಾಡುವರು. ಈ ಆದಿತ್ಯನು ತಾನೇ ಒಬ್ಬ ಅತಿಥಿಯಾಗಿರುವನು. ಲೋಕ ವ್ಯವಹಾರದಲ್ಲಿ ಒಬ್ಬಾನೊಬ್ಬ ಅತಿಥಿಯು ಒಬ್ಬರ ಮನೆಗೆ ಬರುವನು. ಅವನಿಗೆ ಆ ಪ್ರಾಂತ್ಯದಲ್ಲಿ ಬಂಧುಗಳು, ನೆಂಟರು ಮುಂತಾ

ದವರು ಯಾರೂ ಇರುವುದಿಲ್ಲ. ಅದರಂತೆ ಈ ಆದಿತ್ಯನೂ ಪ್ರಾತಃಕಾಲದಲ್ಲಿ ಮಾಡುವ ಅಗ್ನಿಹೋತ್ರಕಾಲದಲ್ಲಿ ಬರುವುದರಿಂದ ಅತಿಥಿಯಂತೆ ಸತ್ಕರಿಸಲ್ಪಟ್ಟು ಪೂಜಿಸಲ್ಪಡುವನು.

ತದ್ಯದದೋ ಗಾಥಾ ಭವತಿ ॥

ಅಸ್ಮಿನ್ನರ್ಥೇ ಕಾಂಚಿದ್ಗಾಥಾಮುದಾಹರತಿ - ಯದಿದಮಾದಿತ್ಯಸ್ಯೈಕಾತಿಥಿತ್ವಂ ತತ್ತಸ್ಮಿನ್ನರ್ಥೇ ಕಾಚಿದ್ಗಾಥಾ ಸರ್ವೈರ್ಗಾತುಂ ಯೋಗ್ಯಾ ಗೀತಿರ್ವಿದ್ಯತೇ ॥

ಈ ವಿಷಯದಲ್ಲಿ ಒಂದು ಗಾಥೆ ಇರುವುದು. ಅದನ್ನು ತಿಳಿಸುತ್ತಾರೆ. ಈ ಆದಿತ್ಯನು ಮುಖ್ಯವಾದ ಅತಿಥಿಯಾಗಿ ಮನೆಗೆ ಬರುವ ವಿಷಯವನ್ನು ಒಂದು ಗಾಥೆಯ ಮೂಲಕ ಎಲ್ಲರೂ ಹೇಳುವರು. ಅದನ್ನು ಇಲ್ಲಿ ಹೇಳಲಾಗಿದೆ.

ಅನೇನಸಮೇನಸಾ ಸೋಽಭಿಶಸ್ತಾದೇನಸ್ವತೋ ವಾಽಪಹರಾದೇನಃ ।
ಏಕಾತಿಥಿಮಪ ಸಾಯಂ ರುಣದ್ಧಿ ಬಿಸಾನಿ ಸ್ತೇನೋ ಅಪ ಸೋ ಜಹಾರೇತಿ ॥

ತಾಂ ಗಾಥಾಮುದಾಹರತಿ— ಪುರಾ ಕದಾಚಿತ್ಸಪ್ತರ್ಷೀಣಾಂ ಸಂವಾದಪ್ರಸಂಗೇ ಕಶ್ಚಿತ್ಪುರುಷೋ ಬಿಸಸ್ತೈನ್ಯಲಕ್ಷಣಮಪವಾದಂ ಪ್ರಾಪ್ಯ ತತ್ಪರಿಹಾರಾರ್ಥಮೃಷೀಣಾಮಗ್ರೇ ಶಪಥಂ ಚಕಾರ । ತದೀಯ ಶಪಥೋಕ್ತಿರೂಪೇಯಂ ಗಾಥಾ । ಬಿಸಾನಿ ಪದ್ಮಮೂಲಾನಿ ತೇಷಾಮಪಹರ್ತಾ ಪ್ರತ್ಯವಾಯಪರಂಪರಾಂ ಪ್ರಾಪ್ನೋತು । ಪಾಪರಹಿತೇ ಪುರುಷೇ ಪಾಪವಿಷಯಮಪವಾದಂ ಕೃತವತೋ ಯಃ ಪ್ರತ್ಯವಾಯಃ ಪಾಪಿನಃ ಪುರುಷಸ್ಯ ಸಂಬಂಧೀ ಪಾಪಂ ಸ್ವೀಕುರ್ವತೋ ಯಃ ಪ್ರತ್ಯವಾಯಃ ಸೇಯಂ ಪ್ರತ್ಯವಾಯಪರಂಪರಾ ಬಿಸಸ್ತೈನ್ಯೇ ಸತಿ ಮಮ ಭೂಯಾದಿತ್ಯೇವಂ ಶಪಥಃ । ಅಕ್ಷರಾರ್ಥಸ್ತು । ಅಪ್ರಸಿದ್ಧೋ ಮಾದೃಶಃ ಪುರುಷಃ ಸ್ತೇನಶ್ಚೋರೋ ಭೂತ್ವಾ ಬಿಸಾನ್ಯಪಜಹಾರ ಚೇತ್ಸ ಪುಮಾನನೇನಸಂ ಪಾಪರಹಿತಂ ಪುರುಷಂ ಶ್ರೋತ್ರಿಯಮೇನಸಾಽಭಿಶಸ್ತಾತ್ಪಾಪೇನಾಭಿಶಂಸನಮಪವಾದಂ ಕುರ್ಯಾತ್ । ತಥೈವ ಸ ಬಿಸಾಪಹಾರೀ, ಏನಸ್ವತಃ ಪಾಪಯುಕ್ತಸ್ಯ ಪುರುಷಸ್ಯ ಯದೇನಃ ಪಾಪಮಸ್ತಿ ತದಪಹರೇತ್ಸ್ವೀಕುರ್ಯಾತ್ । ತಥಾ ಸ ಬಿಸಾಪಹಾರೀ ಸಾಯಂಕಾಲೇ ಗೃಹೇ ಸಮಾಗತಮೇಕಾತಿಥಿಮಪರುಣದ್ಧಿ ಭೋಜನಮದತ್ವಾ ನಿಃ ಸಾರಯೇತ್ । ಯದ್ವಾ । ಅಗ್ನಿಹೋತ್ರಾರ್ಥಂ ಸಾಯಂ ಸಮಾಗತಮೇಕಾತಿಥಿಂ ದೇವಮಪರುಣದ್ಧಿ ಹೋಮರಾಹಿತ್ಯೇನ ನಿರಾಕುರ್ಯಾತ್ । ಇತಿಶಬ್ದೋ ಗಾಥಾಸಮಾಪ್ತ್ಯರ್ಥಃ ॥

ಆ ಗಾಥೆಯನ್ನು ಇಲ್ಲಿ ತಿಳಿಸುವರು. ಪೂರ್ವದಲ್ಲಿ (ಒಂದಾನೊಂದು ಸವನದಲ್ಲಿ) ಸಪ್ತರ್ಷಿಗಳಲ್ಲಿ ಒಂದು ಸಂವಾದ ವುಂಟಾಯಿತು. ಓರ್ವ ಪುರುಷನು ಒಂದು ತಾವರೆ ಹೂವನ್ನೂ ಅದರ ತಂತುಗಳನ್ನು ಕದ್ದನೆಂಬ ಅಪವಾದವುಂಟಾಗಲು ಅದರ ಪರಿಹಾರಕ್ಕಾಗಿ ಅವರ ಮುಂದೆ ಈರೀತಿ ಒಂದು ಶಪಥವನ್ನು ಮಾಡಿದನು. ಆ ಶಪಥವೇ ಈ ಗಾಥಾರೂಪವಾಗಿರುವುದು. ತಾವರೇದಂಟು ತಾವರೇಹೂವಿನ ಮೂಲವು (ಕಾಂಡವು) ಅದನ್ನು ಕದ್ದವನಿಗೆ ಅಪವಾದವುಂಟಾಗಲಿ. ಏನೂ ಯಾವ ಪಾಪ

ವನ್ನೂ ಮಾಡದ ಪುರುಷನ ವಿಷಯದಲ್ಲಿ ಅವನಮೇಲೆ ಇಲ್ಲದ ಅಪವಾದವನ್ನು ಹೊರಿಸುವ ಪುರುಷನಿಗೆ ಯಾವ ಪಾಪವು ಬರುವುದೋ ಅಂತಹ ಅಪವಾದವು ಸಾಯಂಕಾಲದಲ್ಲಿ ಮನೆಗೆ ಬರುವ ಅತಿಥಿಗೆ ಅಡ್ಡಿಯನ್ನುಂಟುಮಾಡು ಪುರುಷನಿಗೆ (ನಾನು ತಾವರೇದಂಟನ್ನು ಕದ್ದ ನನಗೆ) ಉಂಟಾಗಲಿ. ಇದೇ ಆ ಪುರುಷನು ಮಾಡಿದ ಶಪಥವು. ಅಪ್ರಸಿದ್ಧನಾದ ನನ್ನಂತಹ ಪುರುಷನು ಕಳ್ಳನಾಗಿ ತಾವರೇದಂಟನ್ನು ಕದ್ದರೆ ಪಾಪರಹಿತನಾದ ಆ ಪುರುಷನು ಶ್ರೋತ್ರಿಯಗೃಹದಿಂದ ಕಳ್ಳತನಮಾಡಿದವನೆಂಬ ಅಪವಾದ ವನ್ನು ಹೊಂದಲಿ. ಮತ್ತು ಆ ತಾವರೇದಂಟನ್ನು ಕದ್ದ ಪುರುಷನಿಗೆ ಯಾವ ಪಾಪವು ಸಂಭವಿಸುವುದೋ ಆ ಪಾಪವು ಅವನಿಗೆ ಸಂಭವಿಸಲಿ. ಮತ್ತು (ಕಳ್ಳನಾದ) ಆ ಪುರುಷನಿಗೆ (ತಾವರೇದಂಟನ್ನು ಕದ್ದ ಪುರುಷನಿಗೆ) ಸಾಯಂಕಾಲದಲ್ಲಿ ಭೋಜನಾರ್ಥಿ ಯಾಗಿ ಬರುವ ಅಥಿತಿಗೆ ಭೋಜನವನ್ನು ಹಾಕದೆ ಹಾಗೆಯೇ ಹಿಂದಕ್ಕಟ್ಟುವನೋ ಅವನಿಗೆ ಬರುವ ಪಾಪವು ಬರಲಿ. ಅಥವಾ ಸಾಯಂಕಾಲದ ಅಗ್ನಿಹೋತ್ರಸಮಯದಲ್ಲಿ ಅಥಿತಿಯಾಗಿ ಬರುವ ದೇವನನ್ನು (ನಿಗೆ) ಹೋಮಮಾಡದೆ ನಿರಾಕರಿಸುವನೋ (ಹಾಗೆಯೇ ಕಳುಹಿಸುವನೋ) ಆ ಪಾಪವು ಕೇವಲ ಅಪವಾದವನ್ನು ಹೊಂದಿರುವ ನನಗೆ ಪ್ರಾಪ್ತವಾಗಲಿ ಎಂದು ಶಪಥದ ಮುಖ್ಯಾಭಿಪ್ರಾಯವು.

**ಏಷ ಹ ವೈ ಸ ಏಕಾತಿಥಿಃ ಸ ಏಷ ಜುಹ್ವತ್ಸು ವಸತ್ಯೇತಾಂ ವಾವ ಸ ದೇವತಾಮುಪರುಣದ್ಧಿ ಯೋಽಲಮಗ್ನಿಹೋತ್ರಾಯ ಸನ್ನಾಗ್ನಿ-ಹೋತ್ರಂ ಜುಹೋತಿ ತಮೇಷಾ ದೇವತಾಪರುದ್ಧಾಽಪರುಣ-ದ್ಧ್ಯಸ್ಮಾಚ್ಚ ಲೋಕಾದಮುಷ್ಮಾಚ್ಚೋಭಾಭ್ಯಾಂ ಯೋಽಲಮಗ್ನಿ-ಹೋತ್ರಾಯ ಸನ್ನಾಗ್ನಿಹೋತ್ರಂ ಜುಹೋತಿ ॥**

ಅಸ್ಯಾಂ ಗಾಥಾಯಾಮೇಕಾತಿಥಿಮುಪ ಸಾಯಂ ರುಣದ್ಧೀತ್ಯಸ್ಯ ಭಾಗಸ್ಯ ಪ್ರಕೃತೋ-ಪಯುಕ್ತತ್ವಾತ್ತಸ್ಯ ತಾತ್ಪರ್ಯಂ ದರ್ಶಯತಿ— ಏಷ ದೃಶ್ಯಮಾನಃ ಆದಿತ್ಯ ಏವ ಗಾಥಾಯಾ-ಮುಕ್ತ ಏಕಾತಿಥಿಃ । ಸ ಏಷ ದೇವಃ ಪ್ರಾತಃಕಾಲೇ ಸಮಾಗತ್ಯ ಜುಹ್ವತ್ಸ್ವಗ್ನಿಹೋತ್ರಿಷು ತಿಷ್ಠತಿ । ಏವಂ ಸತಿ ಯಃ ಪುಮಾನಗ್ನಿಹೋತ್ರಾಯಾಲಂ ಸಮರ್ಥಃ ಸನ್ನಗ್ನಿಹೋತ್ರಂ ನ ಜುಹೋತಿ ಸ ಪುಮಾನೇತಾಮಗ್ನಿಹೋತ್ರಹೋಮಾರ್ಥಮಾಗತಾಂ ದೇವತಾಮುಪರುಣದ್ಧಿ ನಿರಾಕರೋತಿ । ಏಷಾ ಚ ದೇವತಾ ತೇನಾಪರುದ್ಧಾ ಸತೀ ತಂ ನಾಸ್ತಿಕಂ ಭೂಲೋಕಸ್ವರ್ಗ-ಲೋಕಾಭ್ಯಾಮುಭಾಭ್ಯಾಮುಪರುಣದ್ಧಿ ನಿಃ ಸಾರಯತಿ । ಯೋಽಲಮಿತ್ಯಾದೇಃ ಪುನರುಕ್ತಿರುಪ-ಸಂಹಾರಾರ್ಥಾ । ಯೋ ನ ಜುಹೋತಿ ತಸ್ಯಾಯಂ ದೇವತಾದ್ರೋಹಃ ॥

ಮೇಲೆ ಹೇಳಿರುವ ಗಾಥೆಯಲ್ಲಿ ಸಾಯಂಕಾಲದಲ್ಲಿ ಮನೆಗೆ ಬಂದ ಅತಿಥಿಯನ್ನು ಸತ್ಕರಿಸದೆ ಹಾಗೆಯೇ ಹಿಂದಕ್ಕಟ್ಟುವ ವಿಷಯದಲ್ಲಿ (ಅದರ ಪ್ರಯೋಜನವಿರುವುದರಿಂದ) ಅದರ ತಾತ್ಪರ್ಯವನ್ನು ತಿಳಿಸುವರು. ಇಲ್ಲಿ ಎಂದರೆ ಗಾಥೆಯಲ್ಲಿ ಅತಿಥಿಯೆಂದರೆ ನಮಗೆ ಕಾಣಿಸುತ್ತಿರುವ ಆದಿತ್ಯನು. ಈ ದೇವನೇ ಪ್ರಾತಃಕಾಲದಲ್ಲಿ ಅಗ್ನಿಹೋತ್ರಮಾಡುವ ಪುರುಷನ ಸಮೀಪಕ್ಕೆ ಬಂದು ಅಲ್ಲಿಯೇ ನೆಲಸಿರುವನು. ಅಗ್ನಿಹೋತ್ರಮಾಡುವ ಪುರುಷನು ಅಗ್ನಿಹೋತ್ರವನ್ನು ಮಾಡಲು ಸಮರ್ಥನಾಗಿದ್ದರೂ ಬಂದ ಅಥಿತಿ ಯನ್ನು ಸತ್ಕರಿಸದೆ ನಿರಾಕರಿಸುವನೋ ಅವನು ಮನೆಗೆ ಬಂದ ಆದಿತ್ಯದೇವನನ್ನೇ (ಹೋಮಮಾಡದೆ) ನಿರಾಕರಿಸಿದಂತಾಗುವುದು. ಈರೀತಿ ನಿರಾಕರಿಸಲ್ಪಟ್ಟ ಆದಿತ್ಯದೇವತೆಯು ಈ ನಾಸ್ತಿಕನಾದ ಪುರುಷನಿಗೆ ಭೂಲೋಕಸ್ವರ್ಗಲೋಕಗಳಲ್ಲಿ ಯಾವ ಸ್ಥಾನವನ್ನೂ

(ಪದವಿ) ಕೊಡದೆ ಅವನನ್ನು ಹಿಂದಕ್ಕೆ ಕಳುಹಿಸುವನು. ಎಂದರೆ ಯಾವ ಪುರುಷನು ಅತಿಥಿಸತ್ಕಾರಪೂರ್ವಕವಾಗಿ ಅಗ್ನಿಹೋತ್ರವನ್ನು ಹೋಮಮಾಡುವುದಿಲ್ಲವೋ ಅವನಿಗೆ ದೇವತಾದ್ರೋಹವನ್ನು ಮಾಡಿದ ಪಾಪವು ಸಂಭವಿಸುವುದು.

ತಸ್ಮಾದ್ಯೋಽಲಮಗ್ನಿಹೋತ್ರಾಯ ಸ್ಯಾಜ್ಜುಹುಯಾತ್ ॥

ವಿಪಕ್ಷೇ ಬಾಧಕಮುಕ್ತ್ವಾ ಸ್ವಪಕ್ಷಂ ದರ್ಶಯತಿ—ಅಗ್ನಿಹೋತ್ರಾಯಾಲಮಾಹಿತಾಗ್ನಿತ್ವೇನ ಸಮರ್ಥೋ ಭವೇತ್ಸೋಽವಶ್ಯಂ ಜುಹುಯಾತ್ ॥

ಮೇಲೆ ಹೇಳಿದ ವಿಷಯಕ್ಕೆ ವಿರುದ್ಧವಾಗಿ ಮಾಡಿದರೆ ಅದರಿಂದ ಉಂಟಾಗುವ ಬಾದಕವನ್ನೂ ವಿರುದ್ಧವಿಲ್ಲದ ಕ್ರಮವಾಗಿ ಮಾಡಿದರೆ ಉಂಟಾಗುವ ಫಲವನ್ನೂ ತಿಳಿಸುವರು. ಅಗ್ನಿಹೋತ್ರವನ್ನು ಮಾಡಲು ಸಮರ್ಥನಾದ ಪುರುಷನು ಹೋಮವನ್ನು ಅವಶ್ಯಕವಾಗಿಯೂ ಕ್ರಮವಾಗಿಯೂ ಮಾಡಬೇಕು.

ತಸ್ಮಾದಾಹುರ್ನ ಸಾಯಮತಿಥಿರಪರುಧ್ಯ ಇತಿ ॥

ಅಗ್ನಿಹೋತ್ರಸ್ಯಾಽಽವಶ್ಯಕತ್ವೇ ದೃಷ್ಟಾಂತರೂಪವಿವಕ್ಷಾಯಾಂ ಸ್ಮಾರ್ತಂ ಶಾಸ್ತ್ರಾರ್ಥಂ ದರ್ಶಯತಿ—ಯಸ್ಮಾದ್ದೇವಸ್ಯ ಮನುಷ್ಯಸ್ಯ ಚಾತಿಥೇರಪರೋಧೇ ಪ್ರತ್ಯವಾಯೋಽಸ್ತಿ ತಸ್ಮಾಚ್ಛಾಸ್ತ್ರಜ್ಞಾ ಏವಮಾಹುಃ ಸಾಯಂಕಾಲೇ ಸಮಾಗತೋಽತಿಥಿರ್ನಾಪರುಧ್ಯೋ ನ ನಿರಾಕರಣೀಯ ಇತಿ । ಅತೋ ಲೌಕಿಕಾತಿಥಿವದ್ದೇವತಾತಿಥಯೇ ಹೋತವ್ಯಮಿತ್ಯರ್ಥಃ ॥

ಅಗ್ನಿಹೋತ್ರವನ್ನು ಅವಶ್ಯಕವಾಗಿ ಮಾಡಲೇಬೇಕೆಂಬ ವಿಷಯದಲ್ಲಿ ಇರುವ ಶಾಸ್ತ್ರಾರ್ಥವನ್ನು ದೃಷ್ಟಾಂತಪೂರ್ವಕವಾಗಿ ತಿಳಿಸುವರು. ದೇವತಾರೂಪನಾದ ಅಥಿತಿ ಅಥವಾ ಮನುಷ್ಯನಾದ ಅತಿಥಿ ಇವರುಗಳು ಬಂದಾಗ ಆದರಿಸದೆ ಹಾಗೆಯೇ ಅಗ್ನಿಹೋತ್ರವನ್ನು ಮಾಡಿದಲ್ಲಿ ಪಾಪವುಂಟಾಗುವುದೆಂಬುದನ್ನು ಶಾಸ್ತ್ರಜ್ಞರು ಹೀಗೆ ಹೇಳಿರುವರು. ಸಾಯಂಕಾಲ ಸಮಯದಲ್ಲಿ ದೇವತೆಯಾಗಲಿ, ಮನುಷ್ಯರಾಗಲಿ ಅತಿಥಿರೂಪದಿಂದ ಮನೆಗೆ ಬಂದರೆ ಅವರನ್ನು ಆದರಿಸದೆ (ಸತ್ಕಾರಮಾಡದೆ) ನಿರಾಕರಿಸಬಾರದು ಮಾನವರು (ಲೌಕಿಕಾತಿಥಿ) ಬಂದರೆ ಯಾವರೀತಿ ಸತ್ಕರಿಸಿ ಉಪಚಾರಮಾಡಬೇಕೋ ಅದರಂತೆ ದೇವತಾತಿಥಿಯು ಬಂದಾಗ ಎಂದರೆ ಅಗ್ನಿಹೋತ್ರಸಮಯದಲ್ಲಿ ದೇವತೆಯನ್ನು ಅಹ್ವಾನಮಾಡಿದಾಗ ಕ್ರಮವಾಗಿ ಹೋಮಾದಿಗಳನ್ನು ನೆರವೇರಿಸಬೇಕು.

ಏತದ್ಧ ಸ್ಮ ವೈ ತದ್ವಿದ್ವಾನ್ನಗರೀ ಜಾನಶ್ರುತೇಯ ಉದಿತಹೋಮಿನಮೈಕಾದಶಾಕ್ಷಂ ಮಾನುತಂತವ್ಯಮುವಾಚ ಪ್ರಜಾಯಾಮೇನಂ ವಿಜ್ಞಾತಾಸ್ಮೋ ಯದಿ ವಿದ್ವಾನ್ವಾ ಜುಹೋತ್ಯವಿದ್ವಾನ್ವೇತಿ ತಸ್ಯೋ ಹೈಕಾದಶಾಕ್ಷೇ ರಾಷ್ಟ್ರಮಿವ ಪ್ರಜಾ ಬಭೂವ ರಾಷ್ಟ್ರಮಿವ ಹ ವಾ ಅಸ್ಯ ಪ್ರಜಾ ಭವತಿ ಯ ಏವಂ ವಿದ್ವಾನುದಿತೇ ಜುಹೋತಿ ತಸ್ಮಾದುದಿತೇ ಹೋತವ್ಯಂ ॥

ಅಗ್ನಿಹೋತ್ರಸ್ಯಾಽಽವಶ್ಯಕಕರ್ತವ್ಯತಾಮುಕ್ತ್ವಾ ಪುನರಪಿ ಪ್ರಕಾರಾಂತರೇಣೋದಿತಹೋಮಂ ಪ್ರಶಂಸತಿ ಜನಶ್ರುತಾಖ್ಯಸ್ಯ ಕಸ್ಯಚಿನ್ಮಹರ್ಷೇಃ ಪುತ್ರೋ ಜಾನಶ್ರುತೇಯಃ । ಸ

**ಚ ರಾಜಪುರೋಹಿತತ್ವಾನ್ನಿತ್ಯಂ ನಗರೇ ವಸತೀತಿ ನಗರೀ । ಸ ಮಹರ್ಷಿಸ್ತದೇತದುದಿತಮಾಹಾತ್ಮ್ಯಂ ವಿದ್ವಾನ್ರಾಜಪುತ್ರಂ ಕಂಚಿದುದಿತಹೋಮಿನಮುದ್ದಿಶ್ಯ ಸ್ವಮನಸ್ಯೇವಮುವಾಚ । ಕೀದೃಶಮುದಿತಹೋಮಿನಮೈಕಾದಶಾಕ್ಷಮೇಕಾದಶಾಕ್ಷನಾಮಕಸ್ಯ ರಾಜ್ಞಃ ಪುತ್ರಂ ಮಾನುತಂತವ್ಯಂ ಮನುತಂತುನಾಮಕಸ್ಯ ರಾಜ್ಞಃ ಪೌತ್ರಂ । ತಮುದ್ದಿಶ್ಯ ಮನಸಿ ಕಿಮುವಾಚೇತಿ ತದಭಿಧೀಯತೇ । ಅಯಮೈಕಾದಶಾಕ್ಷೋ ರಾಜಪುತ್ರೋ ಯದಿ ವಿದ್ವಾನ್ ಜುಹೋತಿ ಯದಿ ವಾ ಶಾಸ್ತ್ರಾರ್ಥಮವಿದ್ವಾನಿತಿ ಮಮ ಸಂಶಯೋ ಜಾಯತೇ । ತಥಾ ಸತಿ ಪ್ರಜಾಯಾಮೇತದೀಯಪುತ್ರಪೌತ್ರಾದಿಸಂತತೌ ಪರ್ಯಾಲೋಚ್ಯೈತಮೈಕಾದಶಾಕ್ಷಂ ವಿಜ್ಞಾತಾಸ್ಮೋ ವಿಶೇಷೇಣ ಜ್ಞಾಸ್ಯಾಮಃ । ಯದಿ ಪ್ರಜಾ ವರ್ಧತೇ ತದಾನೀಮಯಂ ವಿದ್ವಾನನ್ಯಥಾ ತ್ವವಿದ್ವಾನಿತಿ ನಿಶ್ಚಿತ್ಯ ಯದಾ ತದೀಯಾಂ ಪ್ರಜಾಮಪಶ್ಯತ್ತದಾನೀ ತಸ್ಯಾಪಿ ರಾಜಪುತ್ರಸ್ಯ ಪ್ರಜಾ ಪುತ್ರಪೌತ್ರಾದಿರೂಪಾ ರಾಷ್ಟ್ರಮಿವ ಬಭೂವ । ಯಥಾ ರಾಷ್ಟ್ರಂ ಬಹುಜನಾಕೀರ್ಣಂ ತದ್ವದತಿಸಮೃದ್ಧಾ ಪ್ರಜಾಽಽಸೀತ್ । ಏಕಾದಶಾಕ್ಷಸ್ಯಾಪತ್ಯಮೈಕಾದಶಾಕ್ಷಿರಿಕಾರಾಂತಃ ಶಬ್ದಸ್ತಸ್ಯ ಷಷ್ಠ್ಯೇಯಮೈಕಾದಶಾಕ್ಷೇರಿತಿ । ಯಃ ಪುಮಾನೇವಂ ವಿದ್ವಾನ್ ಪ್ರಾತರುದಿತೇ ಜುಹೋತಿ ಅಸ್ಯ ರಾಷ್ಟ್ರಮಿವ ಬಹುಲಾ ಪ್ರಜಾ ಭವತಿ । ತಸ್ಮಾದುದಿತೇ ಹೋತವ್ಯಮಿತಿ ॥**

ಅಗ್ನಿಹೋತ್ರಹೋಮವನ್ನು ಅವಶ್ಯಕವಾಗಿ ಮಾಡಲೇಬೇಕೆಂಬ ವಿಷಯವನ್ನು ಹೇಳಿ ಈಗ ಸೂರ್ಯೋದಯಾನಂತರ ಹೋಮಮಾಡಬೇಕೆಂಬ ವಿಷಯವನ್ನು ಪ್ರಕಾರಾಂತರವಾಗಿ ಪ್ರಶಂಸೆಮಾಡುತ್ತಾರೆ. ಅಜಶ್ರುತ ಎಂಬ ಒಬ್ಬ ಋಷಿಗೆ ಜಾನಶ್ರುತೇಯನೆಂಬ ಒಬ್ಬ ಪುತ್ರನಿದ್ದನು. ಅವನು ರಾಜಪುರೋಹಿತನಾದ್ದರಿಂದ ರಾಜಧಾನಿಯಾದ ನಗರದಲ್ಲಿ ವಾಸಮಾಡುತ್ತಿದ್ದನು. ಈ ಕಾರಣದಿಂದ ಅವನಿಗೆ ನಗರೀ ಎಂದೂ ಹೆಸರು. ಈ ಮಹರ್ಷಿಯು ವಿದ್ವಾಂಸ (ಎಲ್ಲವನ್ನೂ ತಿಳಿದ) ರಾಜಪುತ್ರನೊಡನೆ ಅಗ್ನಿಹೋತ್ರದ ವಿಷಯವಾಗಿ ಮಾತನಾಡುತ್ತಿದ್ದನು. ಆ ರಾಜಪುತ್ರನು ಸೂರ್ಯೋದಯಾನಂತರ ಅಗ್ನಿಹೋತ್ರವನ್ನು ಮಾಡತಕ್ಕವನು ಆ ರಾಜಪುತ್ರನು ಏಕಾದಶಾಕ್ಷ ಎಂಬ ರಾಜನ ಪುತ್ರನಾದ ಐಕಾದಶಾಕ್ಷನೆಂಬುವನು ಮತ್ತು ಅವನು ಮನುತಂತು ಎಂಬುವನ ಪೌತ್ರ (ಮೊಮ್ಮಗ) ನಾದ ಮಾನುತಂತವ್ಯನೆಂಬುವನು. ಮೇಲೆ ಹೇಳಿದ ಜಾನಶ್ರುತನೆಂಬ ಪುರೋಹಿತನು ತನ್ನ ಮನಸ್ಸಿನಲ್ಲಿ ಈರೀತಿ ಆಲೋಚನೆಮಾಡಿದನು ಈ ರಾಜಪುತ್ರನಾದ ಐಕಾದಶಾಕ್ಷನೆಂಬುವನು ಎಲ್ಲವನ್ನೂ ತಿಳಿದ ವಿದ್ವಾಂಸನಾಗಿರುವನು. ಇಂತಹ ರಾಜಪುತ್ರನು ನಿತ್ಯವೂ ಅಗ್ನಿಹೋತ್ರವನ್ನು ಮಾಡುತ್ತಿರುವನು. ಇವನು ಎಲ್ಲವನ್ನೂ ತಿಳಿದ ವಿದ್ವಾಂಸನಾದ್ದರಿಂದ ಪ್ರಾತಃಕಾಲದಲ್ಲಿ ಸೂರ್ಯನು ಉದಯಿಸಿದಮೇಲೆ ಅಗ್ನಿಹೋತ್ರವನ್ನು ಹೋಮಮಾಡುವನೇ ಅಥವಾ ಏನೂ ತಿಳಿಯದ ಅಜ್ಞನಂತೆ ಸೂರ್ಯೋದಯಕ್ಕೆ ಮುಂಚಿತವಾಗಿ ಅಗ್ನಿಹೋತ್ರವನ್ನು ಮಾಡುವನೇ ಎಂಬ ಈ ವಿಷಯದಲ್ಲಿ ನನಗೆ ಸಂಶಯವುಂಟಾಗಿರುವುದು. ಆದ್ದರಿಂದ ಈ ಸಂಶಯಪರಿಹಾರಕ್ಕಾಗಿ ಈ ರಾಜಪುತ್ರನ ಸಂತತಿ ಎಂದರೆ ಪುತ್ರಪೌತ್ರಾದಿಗಳಲ್ಲಿ ಈ ವಿಷಯವನ್ನು ಕೇಳಿ ತಿಳಿದುಕೊಳ್ಳೋಣ. ಹೇಗೆಂದರೆ ಈ ರಾಜನು ಪುತ್ರಾದಿಸಂತತಿಗಳಿಂದ ವೃದ್ಧಿಯನ್ನು ಹೊಂದುತ್ತಿದ್ದರೆ, ಆಗ ಇವನು ವಿದ್ವಾಂಸನು ಎಂದರೆ ಸಕಲವನ್ನೂ ತಿಳಿದವನು, ಇಲ್ಲದಿದ್ದರೆ ಮೂಢನು (ಏನೂ ತಿಳಿಯದವನು) ಎಂದು ನಿಶ್ಚಯಿಸಿ ಆ ರಾಜನ ಪುತ್ರಾದಿಗಳನ್ನು ನೋಡಿ ಮಾತನಾಡಿದನು. ಆ ರಾಜಪುತ್ರನ ಸಂತತಿಯವರಾದರೋ (ಮಕ್ಕಳು, ಮೊಮ್ಮಕ್ಕಳು ಮೊದಲಾದವರು) ಒಂದು ರಾಷ್ಟ್ರದ (ದೇಶದ) ಪ್ರಜೆಗಳಂತೆ ಬಹಳಮಂದಿ ಇದ್ದರು. ಎಂದರೆ ದೇಶದಲ್ಲಿ ಅನೇಕ ಜನರಿರುವಂತೆ ಈ ರಾಜಪುತ್ರನ ಸಂತತಿಯವರು ಬಹಳಮಂದಿ ಇದ್ದರು. ಏಕಾದಶಾಕ್ಷನ ಪುತ್ರನಾದ ಈ ರಾಜಪುತ್ರನಿಗೆ ಐಕದಶಾಕ್ಷನೆಂಬ ಹೆಸರಿದ್ದಿತು. ಯಾವ ಪುರುಷನು ಪ್ರಾತಃಕಾಲದಲ್ಲಿ ಸೂರ್ಯೋದಯಾನಂತರವೇ ಅಗ್ನಿಹೋತ್ರವನ್ನು ಅನುಷ್ಠಾನಮಾಡುವನೋ ಅವನಿಗೆ ದೇಶದಲ್ಲಿರುವ ಜನರಂತೆ ಅನೇಕಮಂದಿ ಪುತ್ರಪೌತ್ರಾದಿಸಂತತಿಯವರಿರುತ್ತಾರೆ. ಎಂದರೆ ಬಹುಮಂದಿ ಮಕ್ಕಳು,

ಮೊಮ್ಮಕ್ಕಳು ಮುಂತಾದ ಸಂತತಿಯವರಿರುತ್ತಾರೆ. ಆದ್ದರಿಂದ ಯಾವ ಪುರುಷನೇಆಗಲಿ ಅವನು ಪ್ರಾತಃಕಾಲದಲ್ಲಿ ಅಗ್ನಿ ಹೋತ್ರವನ್ನು ಮಾಡಬೇಕಾದರೆ ಸೂರ್ಯೋದಯಾನಂತರವೇ ಮಾಡಬೇಕು.

*English Translation*

**(Several stanzas quoted regarding the necessityy to bring the Agnihotram after sunrise)**

Day and night are the two wheels of the year. By means of both he passes the year. He who sacrifices before sunrise, goes by one wheel, as it were, only. But he who sacrifices after sunrise, is going through the year with both wheels, as it were, and reaches his destination soon. There is a sacrificial Gatha (stanza) which runs as follows:

"All that was, and will be, is connected with the two Samans Brihat and Rathantaram and subsists through them. The wise man, after having established the sacred hearths (the Agnihotri) shall bring a different sacrifice at day and a different one at night i.e. devoted to different deities."

The night belongs to the Rathantaram, the day to the Brihat. Agni is the Rathantaram, Aditya the Brihat. Both these deities cause him to go to the heaven-world, to the place of splendour (bradhna), who with this knowledge sacrifices (the Agnihotram) after sunrise. Thence it is to be sacrificed after sunrise. Regarding this there is a sacrificial Gatha chanted, which runs as follows:

"Just as a man who drives with one pack horse only without purchasing another one, act all those men who bring the Agnihotram before sunrise."

For all beings whatever follow this deity (Aditya) when he stretches the arms at sunrise and sunset. He who has this ksowledge, is followed by this deity, after whom all follows and he follows her. For this Aditya is the "one guest" who lives among those who bring the sacrifice after sunrise. Concerning this there is a Gatha (stanza, which runs as follows):

"He who has stolen lotus fibres and does not receive even one guest on the evening, will charge with this guilt the not guilty and take off the guilt from the guilty."

This Aditya is the "one guest" (ekatihih) he is it "who lives among the sacrificers." The man who thinking, it is enoogh of the Agnihotram, does not sacrifice to this deity (Aditya), shuts him out from being his guest. Therefore

this deity, if shut out, shuts each an Agnihotri out from both this world and that one.

Therefore he who thinks, it is enough of the Agnihotram, may nevertheless bring sacrificers. Thence they say, a guest who comes at evening is not to be sent away. It happened that once a learned man, Janasruteya, a resident of a town (A Nagari) said to an Aikadasaksha, a descendant of Manutantu, "We recognise from the children whether one brings the Agnihotram with or without the proper knowledge." Aikdasaksha had as many children as are required to filla kingdom. Just as many children will he obtain who brings the Agnihotram after sunrise.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಪಂಚವಿಂಶಾಧ್ಯಾಯಸ್ಯ ಪಂಚಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತಐದನೆಯ ಅಧ್ಯಾಯದಲ್ಲಿ ಐದನೆಯ ಖಂಡವು ಸಮಾಪ್ತವಾದುದು.



## ಅಥ ಪಂಚವಿಂಶಾಧ್ಯಾಯೇ ಷಷ್ಠಃ ಖಂಡಃ

### ಇಪ್ಪತ್ತೈದನೆಯ ಅಧ್ಯಾಯದಲ್ಲಿ ಆರನೆಯ ಖಂಡವು



[ಪ್ರಾತರಗ್ನಿಹೋತ್ರವನ್ನು ಯಾವಾಗಲೂ ಸೂರ್ಯೋದಯಾನಂತರವೇ ಮಾಡಬೇಕು]



ಉದ್ಯನ್ನು ಖಲು ವಾ ಆದಿತ್ಯ ಆಹವನೀಯೇನ ರಶ್ಮೀನ್ಸಂದಧಾತಿ ಸ ಯೋಽನುದಿತೇ ಜುಹೋತಿ ಯಥಾ ಕುಮಾರಾಯ ವಾ ವತ್ಸಾಯ ವಾಽಜಾತಾಯ ಸ್ತನಂ ಪ್ರತಿದಧ್ಯಾತ್ತಾದೃಕ್ತದಥ ಯ ಉದಿತೆ ಜು-

ಹೋತಿ ಯಥಾ ಕುಮಾರಾಯ ವಾ ವತ್ಸಾಯ ಜಾತಾಯ ಸ್ತನಂ ಪ್ರತಿದಧ್ಯಾತ್ತಾದೃಕ್ತತ್ತಮಸ್ಮೈ ಪ್ರತಿಧೀಯಮಾನಮುಭಯೋರ್ಲೋಕಯೋರನ್ನಾದ್ಯಮನು ಪ್ರತಿಧೀಯತೇಽಸ್ಮಾಚ್ಚ ಲೋಕಾದಮುಷ್ಮಾಚ್ಚೋಭಾಭ್ಯಾಂ ॥

ಪ್ರಕಾರಾಂತರೇಣಾನುದಿತಹೋಮನಿಂದಾಮುದಿತಹೋಮಪ್ರಶಂಸಾಂ ಚಾಽಽಹ— ಆದಿತ್ಯಃ ಸ್ವಯಮುದ್ಯನ್ನೇವ ಹವ್ಯಾರ್ಥೀ ಸನ್ನಾಹವನೀಯೇನ ಸಹ ಸ್ವಕೀಯಾನ್ರಶ್ಮೀನ್ಸಂದಧಾತಿ ಸಂಯೋಜಯತಿ । ಏವಂ ಸತಿ ಯಃ ಪುಮಾನ್ ಸೂರ್ಯೋದಯಾತ್ಪೂರ್ವಂ ಜುಹೋತಿ ಸ ಮೂಢ ಇತಿ ಶೇಷಃ । ತತ್ರ ದೃಷ್ಟಾಂತಃ । ಯಥಾ ಲೋಕೇ ಕಸ್ಮೈಚಿದಜಾತಾಯಾನುತ್ಪನ್ನಾಯ ಸ್ತನಂ ಪ್ರತಿದಧ್ಯಾತ್ಪಾತುಂ ಸಮರ್ಪಯೇತ್ತಾದೃಗೇವ ತದ್ದ್ರಷ್ಟವ್ಯಂ । ಅಥ ತದ್ವೈಲಕ್ಷಣ್ಯೇನ ಯಃ ಪುಮಾನುದಯಾದೂರ್ಧ್ವಂ ಜುಹೋತಿ ಸ ವಿವೇಕೀ । ತತ್ರಾಯಂ ದೃಷ್ಟಾಂತಃ ಉತ್ಪನ್ನಾಯ ಸ್ತನಪ್ರದಾನಂ ಯಾದೃಶಂ ಭವತಿ ತಾದೃಗೇವ ತದಿತಿ । ಏವಂ ಸತಿ ಅಸ್ಮೈ ಸೂರ್ಯಾಯ ಪ್ರತಿಧೀಯಮಾನಂ ಹವಿಃ ಸಮರ್ಪಯೇತ್ತಂ (ಯಂತಂ) ತಮಗ್ನಿಹೋತ್ರಿಣಮನು ಲೋಕದ್ವಯೇಽಪ್ಯನ್ನಾದ್ಯಂ ಸಂಪದ್ಯತೇ । ಲೋಕಯೋರಿತ್ಯಸ್ಯೈವ ವ್ಯಾಖ್ಯಾನಮಸ್ಮಾಚ್ಚೇತ್ಯಾದಿ ಸಪ್ತಮ್ಯರ್ಥೇ ಪಂಚಮೀ । ಅಸ್ಮಿನ್ನಮುಷ್ಮಿಂಶ್ಚೋಭಯೋರ್ಲೋಕಯೋರಿತ್ಯರ್ಥಃ ॥

ಪ್ರಕಾರಾಂತರವಾಗಿ ಸೂರ್ಯೋದಯಕ್ಕೆ ಮುಂಚಿತವಾಗಿ ಮಾಡುವ ಅಗ್ನಿಹೋತ್ರ ಹೋಮದ ನಿಂದೆಯನ್ನೂ ಸೂರ್ಯೋದಯಾನಂತರ ಮಾಡುವ ಅಗ್ನಿಹೋತ್ರದ ಪ್ರಶಂಸೆಯನ್ನೂ ಮಾಡುವರು. ಆದಿತ್ಯನು ಪ್ರಾತಃಕಾಲದಲ್ಲಿ ಉದಯಿಸುವಾಗ ಆಹವನೀಯಾಗ್ನಿಯೊಡನೆ ತನ್ನ ರಶ್ಮಿ(ಕಿರಣ)ಗಳನ್ನು ಸೇರಿಸಿಯೇ ಉದಯಿಸುತ್ತಾನೆ. ಹೀಗಿರುವಾಗ ಸೂರ್ಯೋದಯಕ್ಕೆ ಮುಂಚಿತವಾಗಿ ಯಾವ ಪುರುಷನು ಅಗ್ನಿಹೋತ್ರಹೋಮವನ್ನು ಮಾಡುವನೋ ಅವನು ಮೂಢನೇ ಸರಿ. ಈ ವಿಷಯದಲ್ಲಿ ಒಂದು ದೃಷ್ಟಾಂತವನ್ನು ಹೇಳುತ್ತೇವೆ. ಲೋಕವ್ಯವಹಾರದಲ್ಲಿ ಯಾರಾದರೂ ಇನ್ನೂ ಹುಟ್ಟದಿರುವ ಮಗುವಿಗೆ ಸ್ತನ್ಯಪಾನವನ್ನು (ಹಾಲನ್ನು ಕುಡಿಸುವುದಕ್ಕೆ) ಮಾಡಿಸಲು ಉದ್ಯುಕ್ತರಾಗುವರೋ ಅವರಂತೆ ಮೂಢರೇ ಸರಿ. ಹಾಗಲ್ಲದೆ ಇದಕ್ಕೆ ವಿರುದ್ಧವಾಗಿ ಯಾವ ಪುರುಷನು ಸೂರ್ಯೋದಯಾನಂತರ ಅಗ್ನಿಹೋತ್ರವನ್ನು ಹೋಮಮಾಡುವನೋ ಅವನು ವಿವೇಕಿಯು. ಅದು ಹೇಗೆಂದರೆ ಮಗುವು ಹುಟ್ಟಿದಮೇಲೆ ಅದಕ್ಕೆ ಸ್ತನ್ಯಪಾನಮಾಡಿಸಲು (ಹಾಲನ್ನು ಕುಡಿಸಲು) ಉದ್ಯುಕ್ತರಾದ ಪುರುಷರಂತೆ ಸೂರ್ಯೋದಯಾನಂತರ ಮಾಡುವ ಹೋಮವು ಸಾರ್ಥಕವಾಗುವುದು. ವಸ್ತುಸ್ಥಿತಿಯು ಹೀಗಿರುವಲ್ಲಿ ಸೂರ್ಯೋದಯಾನಂತರ ಸೂರ್ಯನಿಗೆ ಹವಿಸ್ಸನ್ನು ಸಮರ್ಪಿಸುವ ಪುರುಷನು ಈ ಭೂಲೋಕ, ಸ್ವರ್ಗಲೋಕಗಳೆಂಬ ಎರಡು ಲೋಕಗಳಲ್ಲಿಯೂ ಅನ್ನ (ಆಹಾರ) ಸಮೃದ್ಧಿಯನ್ನು ಹೊಂದುತ್ತಾನೆ.

ಸ ಯೋಽನುದಿತೇ ಜುಹೋತಿ ಯಥಾ ಪುರುಷಾಯ ವಾ ಹಸ್ತಿನೇ ವಾಽಪ್ರಯತೇ ಹಸ್ತ ಆದಧ್ಯಾತ್ತಾದೃಕ್ತದಥ ಯ ಉದಿತೇ ಜುಹೋತಿ ಯಥಾ ಪುರುಷಾಯ ವಾ ಹಸ್ತಿನೇ ವಾ ಪ್ರಯತೇ ಹಸ್ತ

ಆದಧ್ಯಾತ್ತಾದೃಕ್ತತ್ತಮೇಷ ಏತೇನೈವ ಹಸ್ತೇನೋರ್ಧ್ವಂ ಹತ್ವಾ ಸ್ವರ್ಗೇ ಲೋಕ ಆದಧಾತಿ ಯ ಏವಂ ವಿದ್ವಾನುದಿತೇ ಜುಹೋತಿ ತಸ್ಮಾದುದಿತೇ ಹೋತವ್ಯಂ ॥

ಪುನರಪ್ಯನ್ಯೇನ ದೃಷ್ಟಾಂತೇನಾನುದಿತಹೋಮನಿಂದಾಮುದಿತಹೋಮಪ್ರಶಂಸಾಂ ಚ ದರ್ಶಯತಿ– ಯೋಽನುದಿತಹೋಮೀ ಸ ಮೂಢಃ ಯಥಾ ಲೋಕೇ ಪುರುಷಸ್ಯ ಹಸ್ತಿನೋ ವಾ ಗ್ರಾಸಾರ್ಥಮಪ್ರಯತೇಽಪ್ರಸಾರಿತಹಸ್ತೇ ಗ್ರಾಸಂ ಪ್ರಕ್ಷಿಪೇತ್ತಾದೃಗೇವ ತತ್ । ಉದಿತ-ಹೋಮಸ್ತು ಪ್ರಸಾರಿತಹಸ್ತೇ ಗ್ರಾಸಪ್ರಕ್ಷೇಪಸಮಾನಃ। ಯಃ ಪುಮಾನ್ನಿದಿತ್ಯೋದಿತಹೋಮೀ ಸ್ಯಾತ್ತಂ ಪುಮಾಂಸಮೇಷ ಆದಿತ್ಯ ಏತೇನೈವ ಹವಿಃ ಸ್ವೀಕಾರಾರ್ಥಂ ಪ್ರಸಾರಿತೇನ ಹಸ್ತೇ-ನೋರ್ಧ್ವಂ ಹೃತ್ವಾ ನೀತ್ವಾ ಸ್ವರ್ಗೇ ಲೋಕೇ ಸ್ಥಾಪಯತಿ । ತಸ್ಮಾದುದಯಾದೂರ್ಧ್ವಂ ಹೋತವ್ಯಂ ॥

ಸೂರ್ಯೋದಯಕ್ಕೆ ಮುಂಚೆ ಮಾಡುವ ಅಗ್ನಿಹೋತ್ರದ ನಿಂದೆಯನ್ನೂ ಸೂರ್ಯೋದಯಾನಂತರ ಮಾಡುವ ಅಗ್ನಿಹೋತ್ರದ ಪ್ರಶಂಸೆಯನ್ನೂ ಪ್ರಕಾರಾಂತರವಾಗಿ (ಬೇರೆ ವಿಧವಾಗಿ) ಮಾಡುವರು. ಸೂರ್ಯೋದಯಕ್ಕೆ ಮುಂಚಿತವಾಗಿ ಅಗ್ನಿಹೋತ್ರಹೋಮಮಾಡುವವನು ಮೂಢನು ಲೋಕದಲ್ಲಿ ಯಾವ ಪುರುಷನು ಆಹಾರವನ್ನು ಕೊಡುವುದಕ್ಕಾಗಿ ಕೈಯನ್ನು ನೀಡದ ಪುರುಷನಿಗೆ ಅಥವಾ ತನ್ನ ಸೊಂಡಿಲನ್ನು ಮುಂದಕ್ಕೆ ಚಾಚದ ಆನೆಯ ಸೊಂಡಲಿಗೆ ಗ್ರಾಸವನ್ನು (ಆಹಾರವನ್ನು)ನೀಡಲು ಯತ್ನಿಸುವನೋ ಅದರಂತೆ ಆ ಕಾರ್ಯವು ವ್ಯರ್ಥವು. ಇದು ಸೂರ್ಯೋದಯಕ್ಕೆ ಮುಂಚಿತವಾಗಿ ಹೋಮಮಾಡುವವನಿಗೆ ಹೇಳಿದ ದೃಷ್ಟಾಂತವು ಆದರೆ ಸೂರ್ಯೋದಯಾನಂತರ ಹೋಮಮಾಡುವ ಪುರುಷನು ಕೈಯನ್ನು ನೀಡುವ ಪುರುಷನಿಗೆ ಅಥವಾ ಸೊಂಡಿಲನ್ನು ಚಾಚಿದ ಆನೆಗೆ ಕೊಡುವ ಆಹಾರದಂತೆ ಆ ಆಹಾರವು ಸಾರ್ಥಕವಾಗುವುದು. ಇದು ಸೂರ್ಯೋದಯಾನಂತರ ಮಾಡುವ ಅಗ್ನಿಹೋತ್ರಕ್ಕೆ ಸಮನಾಗಿರುವುದು. ಆದ್ದರಿಂದ ಯಾವ ಪುರುಷನು ಈ ವಿಷಯವನ್ನು ಚೆನ್ನಾಗಿ ತಿಳಿದುಕೊಂಡು ಸೂರ್ಯೋದಯಾನಂತರ ಎಂದರೆ ಸೂರ್ಯನು ತನ್ನ ಕಿರಣಗಳನ್ನು ಪ್ರಸಾರಮಾಡಿದನಂತರ ಹೋಮವನ್ನು ಮಾಡುವನೋ ಅವನು ಸ್ವರ್ಗಲೋಕವನ್ನು ಪಡೆಯುತ್ತಾನೆ. ಆದ್ದರಿಂದ ಪ್ರಾತಃಕಾಲದಲ್ಲಿ ಸೂರ್ಯೋದಯಾನಂತರವೇ ಹೋಮಮಾಡಬೇಕು.

ಉದ್ಯನ್ನು ಖಲು ವಾ ಆದಿತ್ಯಃ ಸರ್ವಾಣಿ ಭೂತಾನಿ ಪ್ರಣಯತಿ ತಸ್ಮಾ-ದೇನಂ ಪ್ರಾಣ ಇತ್ಯಾಚಕ್ಷತೇ ಪ್ರಾಣೇ ಹಾಸ್ಯ ಸಂಪ್ರತಿ ಹುತಂ ಭವತಿ ಯ ಏವಂ ವಿದ್ವಾನುದಿತೇ ಜುಹೋತಿ ತಸ್ಮಾದುದಿತೇ ಹೋತವ್ಯಂ ॥

ಪ್ರಕಾರಾಂತರೇಣೋದಿತಹೋಮಂ ಪ್ರಶಂಸತಿ––ಆದಿತ್ಯಃ ಸ್ವಯಮುದ್ಯನ್ನೇವ ಸರ್ವ-ಪ್ರಾಣಿನಃ ಪ್ರಣಯತಿ ಚೇಷ್ಟಯತಿ ತಸ್ಮಾತ್ಪ್ರಣಯತೀತಿ ವ್ಯುತ್ಪತ್ತ್ಯಾಽಽದಿತ್ಯಸ್ಯ ಪ್ರಾಣ ಇತಿ ನಾಮ । ಏವಂ ಸತ್ಯುದಿತಹೋಮೀ ಯೋಽಸ್ತಿ ತಸ್ಯ ಪ್ರಾಣರೂಪ ಆದಿತ್ಯೇ ಸಂಪ್ರತಿ ಸಮ್ಯಗ್-ದ್ರವ್ಯಂ ಹುತಂ ಭವತಿ । ತಸ್ಮಾದುದಯಾದೂರ್ಧ್ವಂ ಹೋತವ್ಯಂ ॥

ಸೂರ್ಯೋದಯಾನಂತರ ಮಾಡುವ ಅಗ್ನಿಹೋತ್ರಹೋಮವನ್ನು ಪ್ರಕಾರಾಂತರವಾಗಿ ಪ್ರಶಂಸೆಮಾಡುತ್ತಾರೆ. ಆದಿತ್ಯನು ಪ್ರಾತಃಕಾಲದಲ್ಲಿ ಉದಯಿಸಿದ ಕೂಡಲೇ ಸಮಸ್ತ ಪ್ರಾಣಿಗಳನ್ನೂ ಅವರವರ ವ್ಯಾಪಾರದಲ್ಲಿ ಪ್ರವೃತ್ತರಾಗುವಂತೆ ಮಾಡುತ್ತಾನೆ. ಆದ್ದರಿಂದ (ಪ್ರಣಯತಿ-ಪ್ರವೃತ್ತರಾಗುವಂತೆ ಮಾಡುತ್ತಾನೆ) ಈ ಆದಿತ್ಯನು ಸರ್ವಪ್ರಾಣಿಗಳಿಗೂ ಪ್ರಾಣದಂತೆ ಇರುತ್ತಾನೆ. ಈ ಕಾರಣದಿಂದಲೇ ಈ ಆದಿತ್ಯನು ಪ್ರಾಣನೆಂದು ಹೇಳಲ್ಪಡುತ್ತಾನೆ. ಸೂರ್ಯೋದಯಾನಂತರ ಹೋಮ ಮಾಡುವ ಪುರುಷನು ಪ್ರಾಣಸ್ವರೂಪನಾದ ಪುರುಷ(ಆದಿತ್ಯ)ನಲ್ಲಿಯೇ ಹೋಮಮಾಡಿದಂತಾಗುವುದು. ಆದ್ದರಿಂದ ವಿದ್ವಾಂಸನಾದ (ತಿಳಿವಳಿಕೆಯುಳ್ಳ) ಪುರುಷನು ಅಗ್ನಿಹೋತ್ರವನ್ನು ಮಾಡುವಾಗ ಯಾವಾಗಲೂ ಸೂರ್ಯನು ಉದಯಿಸಿದ ಮೇಲೆಯೇ ಮಾಡಬೇಕು.

**ಏಷ ಹ ವೈ ಸತ್ಯಂ ವದನ್ಸತ್ಯೇ ಜುಹೋತಿ ಯೋಽಸ್ತಮಿತೇ ಸಾಯಂ ಜುಹೋತ್ಯುದಿತೇ ಪ್ರಾತರ್ಭೂರ್ಭುವಃ ಸ್ವರೋಂ ಽಗ್ನಿರ್ಜ್ಯೋತಿ-ರ್ಜ್ಯೋತಿರಗ್ನಿರಿತಿ ಸಾಯಂ ಜುಹೋತಿ ಭೂರ್ಭುವಃ ಸ್ವರೋಂಽ ಸೂರ್ಯೋ ಜ್ಯೋತಿರ್ಜ್ಯೋತಿಃ ಸೂರ್ಯ ಇತಿ ಪ್ರಾತಃ ಸತ್ಯಂ ಹಾಸ್ಯ ವದತಃ ಸತ್ಯೇ ಹುತಂ ಭವತಿ ಯ ಏವಂ ವಿದ್ವಾನುದಿತೇ ಜುಹೋತಿ ತಸ್ಮಾದುದಿತೇ ಹೋತವ್ಯಂ ॥**

ಪುನರಪಿ ಯುಕ್ತ್ಯಂತರೇಣೋದಿತಹೋಮಂ ಪ್ರಶಂಸತಿ — ಸಾಯಂಕಾಲೀನಮಗ್ನಿ-ಹೋತ್ರಮಸ್ತಮಯಾದೂರ್ಧ್ವಂ ಪ್ರಾತಃಕಾಲೀನಂ ಚ ಸೂರ್ಯೋದಯಾದೂರ್ಧ್ವಂ ಜುಹೋತಿ ಏಷ ಪುಮಾನ್ವಾಚಾ ಸತ್ಯಂ ಯಥಾರ್ಥವಾದಿನಮೇವ ಮಂತ್ರಂ ಬ್ರುವನ್ಸತ್ಯೇ ಪರಮಾರ್ಥೇ ದೇವೇ ಜುಹೋತಿ । ಕಥಮಿತಿ ತದುಚ್ಯತೇ । ಭೂರ್ಭುವಃ ಸ್ವರಿತ್ಯಾದಿಕಃ ಸಾಯಂಕಾಲೀನೋ ಮಂತ್ರಃ । ತಸ್ಯಾಯಮರ್ಥಃ । ಭೂರಾದಯಸ್ತ್ರಯೋ ಲೋಕಾ ಮದೀಯಂ ಹೋಮಮೋ-ಮಂಗೀಕುರ್ವಂತು । ಯೋಽಗ್ನಿರ್ದೇವಃ ಸ ಏವ ಜ್ಯೋತಿರ್ದೀಪಾದಿರೂಪಃ ಪ್ರಕಾಶೋ ಯಚ್ಚ ಜ್ಯೋತಿರ್ದೀಪಾದಿರೂಪಃ ಪ್ರಕಾಶೋ ಯಚ್ಚ ಜ್ಯೋತಿರ್ದೀಪಾದಿರೂಪಃ ಪ್ರಕಾಶಃ ಸ ಏವಾಗ್ನಿರ್ದೇವಸ್ತಸ್ಮೈ ದೇವಾಯ ಸ್ವಾಹುತಮಿದಮಸ್ತ್ವಿತಿ । ಏವಂ ಪ್ರಾತಃಕಾಲೀನಮಂ-ತ್ರೇಽಪಿ ದ್ರಷ್ಟವ್ಯಂ । ಭೂರಾದಯೋ ಲೋಕಾ ಮದೀಯಂ ಹೋಮಂ ಸ್ವೀ ಕುರ್ವಂತು । ಸೂರ್ಯೋ ದೇವಃ ಸ ಏವ ಜ್ಯೋತಿರ್ದಿವಸಗತಂ ಪ್ರಭಾರೂಪಂ ಯಚ್ಚೇದಂ ಪ್ರಭಾರೂಪಂ ಜ್ಯೋತಿಃ ಸ ಏವ ಸೂರ್ಯೋ ದೇವಸ್ತಸ್ಮೈ ಸ್ವಾಹುತಮಿದಮಸ್ತು । ತತ್ರ ಯೋ ವಿದ್ವಾನೇವಂ ಜುಹೋತಿ ತಸ್ಯ ಸಾಯಂಕಾಲೀನಂ ಜ್ಯೋತಿರಗ್ನಿಃ ಪ್ರಾತಃಕಾಲೀನಂ ಜ್ಯೋತಿಃ ಸೂರ್ಯ ಇತ್ಯೇವಂ ಸತ್ಯಂ ಪರಮಾರ್ಥಂ ವದತಃ ಪುರುಷಸ್ಯ ಸತ್ಯೇ ಪರಮಾರ್ಥರೂಪೇಽಗ್ನೌ ಸೂರ್ಯೇ ಚ ಹುತಂ ಭವತಿ । ತಸ್ಮಾತ್ಪ್ರಾತರುದಯಾದೂರ್ಧ್ವಂ ಹೋತವ್ಯಂ ॥

ಸೂರ್ಯೋದಯಾನಂತರ ಮಾಡುವ ಹೋಮವನ್ನು ಯುಕ್ತಿಸಹಿತವಾಗಿ ಪ್ರಶಂಸೆಮಾಡುತ್ತಾರೆ. ಸಾಯಂಕಾಲದಲ್ಲಿ ಸೂರ್ಯಾಸ್ತಮಯಾನಂತರ ಮಾಡುವ ಅಗ್ನಿಹೋತ್ರವೂ ಪ್ರಾತಃಕಾಲದಲ್ಲಿ ಸೂರ್ಯೋದಯಾನಂತರ ಮಾಡುವ ಅಗ್ನಿಹೋತ್ರವೂ

ಸತ್ಯವನ್ನು ಪ್ರಶಂಸೆಮಾಡುತ್ತಾ ಸಾಯಂಕಾಲದಲ್ಲಿ ಅಗ್ನಿಯನ್ನೂ ಪ್ರಾತಃಕಾಲದಲ್ಲಿ ಸೂರ್ಯನನ್ನೂ ಉದ್ದೇಶಿಸಿ ಹೋಮಮಾಡಲ್ಪಡುತ್ತವೆ. ಇದಕ್ಕಾಗಿ ಹೇಳುವ ಮಂತ್ರವೂ ಪರಮಾರ್ಥವಾಗಿಯೇ ಎಂದರೆ ಸತ್ಯವಾಗಿಯೇ ಇರುತ್ತವೆ. ಹೇಗೆಂದರೆ, **ಭೂರ್ಭುವಃಸ್ವಃ** ಎಂಬುದು ಸಾಯಂಕಾಲದ ಮಂತ್ರವು. ಇದರ ಅರ್ಥವು—**ಭೂಃಭುವಃಸುವಃ** ಎಂಬ ಈ ಮೂರೂ ಭೂರಾದಿ ಮೂರು ಲೋಕಗಳೂ ನನ್ನ ಈ ಹೋಮವನ್ನು ಸ್ವೀಕರಿಸಲಿ. ಅಗ್ನಿದೇವನು ಜ್ಯೋತಿಃ ಎಂದರೆ ಪ್ರಕಾಶಸ್ವರೂಪನು ಪ್ರಕಾಶವೂ (ಸಹ ಬೆಳಕು) ದೀಪಾದಿ ಪ್ರಕಾಶವು. ಇದು ಅಗ್ನಿಸ್ವರೂಪವೇ ಆಗಿರುವುದು. ಇಂತಹ ಈ ಅಗ್ನಿದೇವನಿಗೆ ನಾನು ಮಾಡುವ ಹೋಮವು ಅರ್ಪಿತವಾಗಲಿ. ಇದು ಸಾಯಂಕಾಲದ ಹೋಮಮಂತ್ರದ ಅರ್ಥವು. ಪ್ರಾತಃಕಾಲದ ಹೋಮ ಮಂತ್ರದ ಅರ್ಥವೂ ಈರೀತಿ ಇರುವುದು-ಭೂರಾದಿ ಮೂರು ಲೋಕಗಳೂ ನಾನು ಅರ್ಪಿಸುವ ಹೋಮವನ್ನು ಸ್ವೀಕರಿಸಲಿ ಹಗಲಿನಲ್ಲಿ ಬೆಳಗುತ್ತಿರುವ ಪ್ರಕಾಶವು ಸೂರ್ಯನ ಜ್ಯೋತಿಯೇ ಆಗಿರುವುದು ಮತ್ತು ಹಗಲಿನ ಪ್ರಕಾಶವು ಸೂರ್ಯಾತ್ಮಕವೇ (ಸೂರ್ಯನೇ) ಆಗಿರುವುದು. ಇಂತಹ ಸೂರ್ಯದೇವನಿಗೆ ನಾನು ಅರ್ಪಿಸುತ್ತಿರುವ ಈ ಹೋಮವು ಸಮರ್ಪಿತವಾಗಲಿ. ಇದು ಪ್ರಾತಃಕಾಲದ ಹೋಮಮಂತ್ರದ ಅರ್ಥವು. ಸಾಯಂಕಾಲದ ಜ್ಯೋತಿಯೇ ಅಗ್ನಿಯು, ಪ್ರಾತಃಕಾಲದ ಪ್ರಕಾಶವೇ ಸೂರ್ಯನು ಎಂದು ಭಾವಿಸಿ ಯಾವ ತಿಳುವಳಿಕೆಯುಳ್ಳ ಪುರುಷನು ಅಗ್ನಿಯನ್ನೂ ಸೂರ್ಯನನ್ನೂ ಉದ್ದೇಶಿಸಿ ಸಾಯಂಪ್ರಾತ ಕಾಲಗಳಲ್ಲಿ ಅಗ್ನಿಹೋತ್ರಹೋಮ ಮಾಡುವನೋ ಅವನು ಮಾಡುವ ಹೋಮವು ಪರಮಾರ್ಥಸ್ವರೂಪರಾದ ಸೂರ್ಯಾಗ್ನಿಗಳಲ್ಲಿ ಸಮರ್ಪಿತವಾಗುತ್ತದೆ. ಆದ್ದರಿಂದ ಪ್ರಾತಃಕಾಲದ ಅಗ್ನಿಹೋತ್ರಹೋಮವನ್ನು ಸೂರ್ಯೋದಯಾನಂತರವೇ ಹೋಮ ಮಾಡಬೇಕು.

ತದೇಷಾಽಭಿ ಯಜ್ಞಗಾಥಾ ಗೀಯತೇ ॥

**ಉದಿತಹೋಮಂ ಪ್ರಶಸ್ಯಾನುದಿತಹೋಮಂ ನಿಂದಿತುಂ ಗಾಥಾಮುದಾಹರತಿ**—

ಸೂರ್ಯೋದಯಾನಂತರ ಮಾಡುವ ಹೋಮವನ್ನು ಪ್ರಶಂಸೆಮಾಡಿ ಸೂರ್ಯೋದಯಕ್ಕೆ ಮುಂಚಿತವಾಗಿ ಮಾಡುವ ಪ್ರಾತಃಕಾಲದ ಅಗ್ನಿಹೋತ್ರಹೋಮವನ್ನು ನಿಂದಿಸುವುದಕ್ಕಾಗಿ ಒಂದು ಗಾಥೆಯನ್ನು ಹೇಳುವರು.

ಪ್ರಾತಃ ಪ್ರಾತರನೃತಂ ತೇ ವದಂತಿ ಪುರೋದಯಾಜ್ಜುಹ್ವತಿ ಯೇಽಗ್ನಿ-
ಹೋತ್ರಂ । ದಿವಾಕೀರ್ತ್ಯಮದಿವಾ ಕೀರ್ತಯಂತಃ ಸೂರ್ಯೋ
ಜ್ಯೋತಿರ್ನ ತದಾ ಜ್ಯೋತಿರೇಷಾಮಿತಿ ॥

**ತಾಂ ಗಾಥಾಮಾಹ**— ಯೇಽಗ್ನಿಹೋತ್ರಿಣ ಉದಯಾತ್ಪೂರ್ವಮಗ್ನಿಹೋತ್ರಂ ಜುಹ್ವತಿ ತೇ ಪುರುಷಾ ದಿವಾಕೀರ್ತ್ಯಮಹನಿ ಕೀರ್ತನೀಯಂ ಸೂರ್ಯಮದಿವಾ ರಾತ್ರೌ ಕೀರ್ತಯಂತಃ ಪ್ರಾತಃ ಪ್ರಾತಃ ಪ್ರತಿದಿನಂ ಪ್ರಾತಃಕಾಲೇಽನೃತಮಸತ್ಯಂ ವದಂತಿ । ಕಥಮಸತ್ಯತ್ವಮಿತಿ ತದುಚ್ಯತೇ । ಸೂರ್ಯೋ ಜ್ಯೋತಿರಿತಿ ಹಿ ಮಂತ್ರಪಾಠಃ । ತದಾನೀಮುದಯಾತ್ಪುರಾ ತೇಷಾಮಗ್ನಿಹೋತ್ರಿಣಾಂ ಸೂರ್ಯರೂಪಂ ಜ್ಯೋತಿರ್ನಾಸ್ತಿ ತಸ್ಮಾದಸತ್ಯವಾದಿನಃ । ಇತಿಶಬ್ದೋ ಗಾಥಾಸಮಾಪ್ತ್ಯರ್ಥಃ ॥

ಮೇಲೆ ತಿಳಿಸುವ ಗಾಥೆಯನ್ನು ಹೇಳುವರು. ಯಾವ ಪುರುಷನು ಪ್ರಾತಃಕಾಲದಲ್ಲಿ ಮಾಡಬೇಕಾದ ಅಗ್ನಿಹೋತ್ರವನ್ನು ಸೂರ್ಯೋದಯಕ್ಕೆ ಮುಂಚಿತವಾಗಿಯೇ ಹೋಮಮಾಡುತ್ತಾನೆಯೋ ಆ ಪುರುಷನು ಮಾಡುವ ಪ್ರಾತಃಕಾಲದ

ಹೋಮವು (ಸೂರ್ಯನು ಉದಯಿಸದಿಲ್ಲದ್ದರಿಂದ) ಪ್ರಾತಃಕಾಲದ ಹೋಮವಾಗದೆ ರಾತ್ರಿಯಲ್ಲಿ ಮಾಡುವ ಹೋಮವಾಗುತ್ತದೆ. ಪ್ರತಿದಿನವೂ ಹೀಗೆ ಮಾಡುವುದರಿಂದ ಆ ಹೋಮವು ಪ್ರಾತಃಕಾಲದಲ್ಲಿ ಅನೃತವನ್ನು (ಸುಳ್ಳನ್ನು) ಹೇಳಿದಂತಾಗುವುದು. ಹೇಗೆಂದರೆ, ಮಂತ್ರವು **ಸೂರ್ಯೋ ಜ್ಯೋತಿಃ** ಎಂದಿರುವುದು. ಆದರೆ ಸೂರ್ಯನು ಉದಯಿಸುವುದಕ್ಕೆ ಮುಂಚೆ ಸೂರ್ಯನು ಕಾಣಿಸುವುದಿಲ್ಲ ಎಂದರೆ ಆ ಅಗ್ನಿಹೋತ್ರಮಾಡುವ ಪುರುಷನಿಗೆ ಸೂರ್ಯನ ಪ್ರಕಾಶವು ಕಾಣಿಸುತ್ತಿರುವುದಿಲ್ಲ. ಆದ್ದರಿಂದ ಆ ಪುರುಷನು ಅಸತ್ಯವನ್ನು (ಸುಳ್ಳನ್ನು) ಹೇಳಿದಂತಾಗುವುದು. ಇದೇ ಗಾಥೆಯ ಅರ್ಥವು.

## *English Translation*

**The Agnihotram is to be offered after sunrise)**

In rising the sun joins his rays to the Ahavaniya fire. Who therefore sacrifices before sunrise is like a female giving her breast to an unborn child, or a cow giving her udder to an unborn calf. But he who sacrifices after sunrise is like a female giving her breast to a child which is born, or a like a cow giving her udder to calf which is born. The Agnihotram being thus offered to him (Surya), he (Surya) gives to the Agnihotri in return food in both worlds, in this one and that one. He who brings the Agnihotram before sunrise is like such an one who throws food before a man or an elephant, who do not stretch forth their hands (not caring for it). But he who brings the Agnihotram, before sunrise is like such an one who throws food before a man or an elephants who do not stretch forth their hands not caring for it. But he who sacrifices after sunrise is like such an one who thoows food before a man or an elephant who stretch forth their honds. He who has this knowledge, and sacrifices after sunrise, lifts up with this hand (Aditya's hand) his sacrifice, and puts it down in the heaven-world. Therefore the sacrifice is to be brought after sunrise.

When rising, the sun brings all beings into motion (pranayati). Therefore he is called prana (breath). The offerings of him who knowing this, sacrifices after sunrise, are well stored up in this prana (Aditya). Therefore it is to be sacrificed after sunrise.

That man is speaking the truth, who in the evening after sunset, and in the morning after sunrise, brings his offerings. He commences the evening sacrifice by the words "Bhur, Buvah, Svar, Om! Agni is Light. Light is Agni;" and the morning sacrifice by "Bhut, Bhuvah, Svar, Om! Sun is Light, Light is Sun." The truth-speaking man offers thus in truth, when he brings his sacrifice after sunrise. Therefore it must be sacrificed after sunrice. This is well expressed in a sacrificial stanza which is chanted.

"Those who sacrifice before sunrise tell every morning an untruth; for if celebrathing the Agnihotram at night whieh ought to be celebrated at day, they say, Sun is Light, but then they have no light (for the sun has not risen)."

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಪಂಚವಿಂಶಾಧ್ಯಾಯಸ್ಯ ಷಷ್ಠಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೈದನೆಯ ಅಧ್ಯಾಯದಲ್ಲಿ ಆರನೆಯ ಖಂಡವು ಸಮಾಪ್ತವಾದುದು.



## ಅಥ ಪಂಚವಿಂಶಾಧ್ಯಾಯೇ ಸಪ್ತಮಃ ಖಂಡಃ

### ಇಪ್ಪತ್ತೈದನೆಯ ಅಧ್ಯಾಯದಲ್ಲಿ ಏಳನೆಯ ಖಂಡವು



[ಪ್ರಪಂಚಸೃಷ್ಟಿವಿಚಾರ, ವೇದ ಮತ್ತು ಇತರ ಸದ್ಗ್ರಂಥಗಳ ಉತ್ಪತ್ತಿಯು ಯಜ್ಞಯಾಗಾದಿಗಳಲ್ಲಿ ಸಂಭವಿಸುವ ಲೋಪದೋಷಗಳಿಗೆ ಪರಿಹಾರಾರ್ಥವಾಗಿ ಮಾಡಬೇಕಾದ ಪ್ರಾಯಶ್ಚಿತ್ತಾದಿ ವಿಧಿಗಳು].



ಪ್ರಜಾಪತಿರಕಾಮಯತ ಪ್ರಜಾಯೇಯ ಭೂಯಾನ್ಸ್ಯಾಮಿತಿ ಸ ತಪೋ-ತಪ್ಯತ ಸ ತಪಸ್ತಪ್ತ್ವೇಮಾಂಲ್ಲೋಕಾನಸೃಜತ ಪೃಥಿವೀಮಂತರಿಕ್ಷಂ ದಿವಂ ತಾಂಲ್ಲೋಕಾನಭ್ಯತಪತ್ತೇಭ್ಯೋಽಭಿತಪ್ತೇಭ್ಯಸ್ತ್ರೀಣಿ ಜ್ಯೋ-ತೀಂಷ್ಯಜಾಯಂತಾಗ್ನಿರೇವ ಪೃಥಿವ್ಯಾ ಅಜಾಯತ ವಾಯುರಂ-ತರಿಕ್ಷಾದಾದಿತ್ಯೋ ದಿವಸ್ತಾನಿ ಜ್ಯೋತೀಂಷ್ಯಭ್ಯತಪತ್ತೇಭ್ಯೋಽಭಿ-ತಪ್ತೇಭ್ಯಸ್ತ್ರಯೋ ವೇದಾ ಅಜಾಯಂತ ಋಗ್ವೇದ ಏವಾಗ್ನೇ-ರಜಾಯತ ಯಜುರ್ವೇದೋ ವಾಯೋಃ ಸಾಮವೇದ ಆದಿತ್ಯಾ-ತ್ತಾನ್ವೇದಾನಭ್ಯತಪತ್ತೇಭ್ಯೋಽಭಿತಪ್ತೇಭ್ಯಸ್ತ್ರೀಣಿ ಶುಕ್ರಾಣ್ಯಜಾ-

ಯಂತ ಭೂರಿತ್ಯೇವ ಋಗ್ವೇದಾದಜಾಯತ ಭುವ ಇತಿ ಯಜು-
ರ್ವೇದಾತ್ಸ್ವರಿತಿ ಸಾಮವೇದಾತ್ ॥

ಅಥಾಗ್ನಿಹೋತ್ರಮಂತ್ರಪ್ರಸಂಗಾದ್ಬುದ್ಧಿಸ್ಥಸ್ಯ ಸರ್ವಪ್ರಾಯಶ್ಚಿತ್ತಸಂಪಾದಕಸ್ಯ ವ್ಯಾಹೃತಿತ್ರಯಸ್ಯ ಸೃಷ್ಟಿಂ ವಕ್ತುಮುಪಕ್ರಮತೇ— ಪುರಾ ಪ್ರಜಾಪತಿರೇಕೋ ಭೂತ್ವಾ ಪ್ರಜೋತ್ಪಾದನೇನ ಬಹುವಿಧಃ ಸ್ಯಾಮಿತಿ ಕಾಮಯಿತ್ವಾ ತತ್ಸಿದ್ಧ್ಯರ್ಥಂ ತಪಃ ಪರ್ಯಾಲೋಚನಮಕರೋತ್ । ಇದಂ ವಸ್ತ್ವೀದೃಶಮಿತಿ ಪರ್ಯಾಲೋಚನರೂಪಂ ತಪಃ ಕೃತ್ವಾ ಪರ್ಯಾಲೋಚನಪ್ರಕಾರೇಣೋತ್ಪದ್ಯತಾಮಿತಿ ಸಂಕಲ್ಪ್ಯ ತೇನ ಸಂಕಲ್ಪೇನ ಲೋಕತ್ರಯಮಸೃಜತ । ತಾನ್ ಲೋಕಾನ್ಪುನರಪ್ಯಭಿತಃ ಪರ್ಯಾಲೋಚಿತವಾನ್ಕಿಮೇಷು ಲೋಕೇಷು ಸಾರಭೂತಂ ಸಂಪಾದನೀಯಮಿತಿ ಪರ್ಯಾಲೋಚನಮ್ । ತಥಾ ಪರ್ಯಾಲೋಚಿತೇಭ್ಯೋ ಲೋಕೇಭ್ಯಃ ಪ್ರಜಾಪತಿಃ ಸಂಕಲ್ಪಾನುಸಾರೇಣಾಗ್ನಿವಾಯ್ವಾದಿತ್ಯರೂಪಾಣಿ ಜ್ಯೋತೀಂಷ್ಯಜಾಯಂತ । ತತ್ರಾಪಿ ಸಾರಂ ಪರ್ಯಾಲೋಚ್ಯತ್ರಿಭ್ಯೋ ಜ್ಯೋತಿರ್ಭ್ಯೋ ವೇದತ್ರಯಮುತ್ಪಾದಿತವಾನ್ । ತೇಭ್ಯಶ್ಚ ವೇದೇಭ್ಯೋ ವ್ಯಾಹೃತಿತ್ರಯರೂಪಾಣಿ ಶುಕ್ರಾಣಿ ಜ್ಯೋತೀಂಷಿ ಪಾಪಾಖ್ಯತಮೋನಿವಾರಣಸಮರ್ಥಾನ್ಯಜಾಯಂತ ॥

ಅಗ್ನಿಹೋತ್ರಮಂತ್ರಗಳನ್ನು ವಿವರಿಸುವ ಸಂದರ್ಭದಲ್ಲಿ ಬುದ್ಧಿವಂತನೂ ಯಜ್ಞಾದಿಗಳಲ್ಲಿ ಸಂಭವಿಸಬಹುದಾದ ಲೋಪದೋಷಗಳ ಪರಿಹಾರಕ್ಕಾಗಿ ಮಾಡಬೇಕಾದ ಪ್ರಾಯಶ್ಚಿತ್ತಾದಿಗಳ ಸ್ವರೂಪವಾಗಿರುವ ಮೂರು ವ್ಯಾಹೃತಿಗಳ (**ಭೂಃ, ಭುವಃ ಸ್ವಃ** ಎಂಬಂತೇ ವ್ಯಾಹೃತಿತ್ರಯಗಳು) ಸೃಷ್ಟಿಯನ್ನು ಹೇಳಲು ಉಪಕ್ರಮಿಸಲ್ಪಡುತ್ತದೆ. ಪೂರ್ವದಲ್ಲಿ ಪ್ರಜಾಪತಿಯು (ಪರಮೇಶ್ವರನು) ಸೃಷ್ಟಿಗೆ ಪೂರ್ವದಲ್ಲಿ ಒಬ್ಬನೇ ಇದ್ದನು. ಆಗ ಆ ಪ್ರಜಾಪತಿಗೆ ಅನೇಕ ವಿಧವಾದ ಪ್ರಜೆಗಳನ್ನೂ ಪ್ರಾಣಿಗಳನ್ನೂ ಇತರ ವಸ್ತುಗಳನ್ನೂ ಸೃಷ್ಟಿಮಾಡಬೇಕೆಂಬ ಮನಸ್ಸುಂಟಾಯಿತು. ಇದಕ್ಕಾಗಿ ಪ್ರಜಾಪತಿಯು ತಪಸ್ಸನ್ನು ಮಾಡಿದನು. ಪ್ರಜಾಪತಿಯು ಮಾಡುವ ತಪಸ್ಸೆಂದರೆ ಇತರ ದೇವಮನುಷ್ಯಾದಿಗಳು ಮಾಡುವ ತಪಸ್ಸಿನಂತಲ್ಲ. ಇಂತಹ ಕಾರ್ಯವು ಈ ರೀತಿ ಆಗಬೇಕೆಂದು ಮನಸ್ಸಿನಲ್ಲಿ ಕೇವಲ ಸಂಕಲ್ಪಮಾಡುವುದೇ ತಪಸ್ಸು. ಈರೀತಿ ಸಂಕಲ್ಪಮಾಡಿ ಮೂರು ಲೋಕಗಳನ್ನು ಸೃಷ್ಟಿಮಾಡಿದನು. ಮತ್ತು ಈ ಮೂರು ಲೋಕಗಳಲ್ಲಿ ಸಾರಭೂತವಾದ ಬೇರೆ ಯಾವ ವಸ್ತುಗಳನ್ನು ಸೃಷ್ಟಿಮಾಡಲಿ ಎಂದು ಯೋಚಿಸಿದನು. ಹೀಗೆ ಯೋಚನೆಮಾಡಿ ಆ ಮೂರು ಲೋಕಗಳಿಂದ ಅಗ್ನಿ ವಾಯು ಆದಿತ್ಯ ಎಂಬ ಮೂರು ವಿಧವಾದ ಜ್ಯೋತಿಸ್ಸುಗಳನ್ನು ಸೃಷ್ಟಿಮಾಡಿದನು. ಈ ಸೃಷ್ಟಿಯನ್ನು ಪ್ರಜಾಪತಿಯು ಕೇವಲ ಸಂಕಲ್ಪಮಾತ್ರದಿಂದಲೇ ಸೃಷ್ಟಿಮಾಡಿದನು. ಈ ರೀತಿ ಪ್ರಜಾಪತಿಯು ಮೂರು ಲೋಕಗಳಿಂದ ಅವುಗಳ ಸಾರಭೂತಗಳಾದ ಅಗ್ನಿವಾಯ್ವಾದಿತ್ಯ ಎಂಬ ಮೂರುವಿಧ ಜ್ಯೋತಿಗಳನ್ನು ಸೃಷ್ಟಿಮಾಡಿದನು. ಮೂರು ಲೋಕಗಳ ಸಾರಭೂತವಾದ ಈ ಮೂರುವಿಧ ಜ್ಯೋತಿಸ್ಸುಗಳಿಂದ ಮೂರು ವೇದಗಳನ್ನು ಸೃಷ್ಟಿಮಾಡಿದನು. ಪಾಪರೂಪವಾದ ಎಂದರೆ ಅಜ್ಞಾನರೂಪವಾದ ತಮಸ್ಸನ್ನು ಪರಿಹಾರಮಾಡುವುದಕ್ಕಾಗಿ ಮೂರುವಿಧ ವ್ಯಾಹೃತಿರೂಪದಿಂದಿರುವ ಪ್ರಕಾಶಮಾನವಾದ ಜ್ಯೋತಿಸ್ಸುಗಳು ಈರೀತಿ ಉತ್ಪನ್ನವಾದವು.

ತಾನಿ ಶುಕ್ರಾಣ್ಯಭ್ಯತಪತ್ತೇಭ್ಯೋಽಭಿತಪ್ತೇಭ್ಯಸ್ತ್ರಯೋವರ್ಣಾ ಅಜಾ-
ಯಂತಾಕಾರ ಉಕಾರೋ ಮಕಾರ ಇತಿ ತಾನೇಕಧಾಸಮಭರತ್ತ-

**ದೇತದೋಮಿತಿ ತಸ್ಮಾದೋಮೋಮಿತಿ ಪ್ರಣೌತ್ಯೋಮಿತಿ ವೈ ಸ್ವರ್ಗೋ ಲೋಕ ಓಮಿತ್ಯಸೌ ಯೋಽಸೌ ತಪತಿ ॥**

ಏವಂ ವ್ಯಾಹೃತಿತ್ರಯಸ್ಯೋತ್ಪತ್ತಿಮುಕ್ತ್ವಾ ಪ್ರಣವಸ್ಯೋತ್ಪತ್ತಿಮಾಹ-ತಾನಿ ಶುಕ್ರಾಣಿ ವ್ಯಾಹೃತಿತ್ರಯರೂಪಾಣಿ ಜ್ಯೋತೀಂಷಿ ಸಾರೋತ್ಪಾದನಾಯ ಪರ್ಯಾಲೋಚಿತವಾನ್ । ತೇಭ್ಯಃ ಪರ್ಯಾಲೋಚಿತೇಭ್ಯಃ ಪ್ರಜಾಪತಿಸಂಕಲ್ಪಾದ್ವರ್ಣತ್ರಯಮಜಾಯತ । ತಚ್ಚ ತ್ರಯಮನೇಕಧಾ ಸಂಯೋಜಿತವಾನ್ । ತದೇತದೇಕೀಭೂತಂ ವರ್ಣತ್ರಯಮೋಮಿತ್ಯೇವಂ ಸಂಪನ್ನಂ । ತಸ್ಮಾತ್ಸರ್ವಸಾರತ್ವಾದ್ಧೋತಾ ಯಃ (ಯಂ) ಪ್ರಯೋಗಮಧ್ಯ ಓಮಿತಿ ಪ್ರಣವಂ ಕರೋತಿ । ಸರ್ವಪ್ರಯೋಗಸಂಗ್ರಹಾರ್ಥಾ ವೀಪ್ಸಾ । ಸೋಽಯಮೋಂಕಾರಃ ಸ್ವರ್ಗಪ್ರಾಪ್ತಿಹೇತುತ್ವಾತ್ತದಾತ್ಮಕಃ । ತಥಾ ಯೋಽಸಾವಾದಿತ್ಯಸ್ತಪತ್ಯಸಾವಪ್ಯೋಂಕಾರಸ್ವರೂಪಃ । ಆದಿತ್ಯಪ್ರಾಪ್ತೇರಪ್ಯೋಂಕಾರಸಾಧನತ್ವಾತ್ । ಓಂಕಾರಸ್ಯ ಸರ್ವಫಲಹೇತುತ್ವಂ ಕಠಾ ಆಮನಂತಿ ।—'ಏತದ್ಧ್ಯೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛಸಿ ತಸ್ಯ ತತ್ ಇತಿ ॥

ಈ ಮೇಲಿನಂತೆ ಮೂರು ವ್ಯಾಹೃತಿಗಳ ಉತ್ಪತ್ತಿಕ್ರಮವನ್ನು ಹೇಳಿ ಈಗ ಪ್ರಣವದ (ಓಂ) ಉತ್ಪತ್ತಿಯನ್ನು ತಿಳಿಸುವರು. ಮೇಲೆ ಹೇಳಿದಂತೆ ಪ್ರಕಾಶಮಾನವಾದ ಮೂರುವಿಧ ಜ್ಯೋತಿಸ್ಸುಗಳನ್ನು ವ್ಯಾಹೃತಿತ್ರಯದಿಂದ ಉತ್ಪತ್ತಿಮಾಡಿದನು. ಇವುಗಳಿಂದ ಪ್ರಜಾಪತಿಸಂಕಲ್ಪಮಾತ್ರದಿಂದಲೇ ಮೂರು ವರ್ಣಗಳು ಉತ್ಪನ್ನವಾದವು. ಈ ಮೂರು ವರ್ಣಗಳನ್ನೂ ಒಂದೆಡೆ ಒಟ್ಟಿಗೆ ಸೇರಿಸಿದನು. ಇದರಿಂದ (ಅ+ಉ+ಮ್=ಓಂ) ಓಂ ಎಂಬ ಪ್ರಣವವು ಉತ್ಪನ್ನವಾಯಿತು. ಆದ್ದರಿಂದ ಎಂದರೆ ಸರ್ವಸಾರವಾದ ಈ ಪ್ರಣವವನ್ನು ಹೋತೃವು ಅವಶ್ಯಕವಾದೆಡೆ ಉಪಯೋಗಿಸುತ್ತಾನೆ. ಈ ಓಂಕಾರವು ಸೃಷ್ಟಿಗೆ ಕಾರಣವಾಗಿರುವುದು. ಆದ್ದರಿಂದ ಇದು ಸೃಷ್ಟ್ಯಾತ್ಮಕವಾಗಿರುವುದು. ಹೇಗೆಂದರೆ— **ಯೋಽಸಾವಾದಿತ್ಯಸ್ತಪತ್ಯಸಾವಪ್ಯೋಂಕಾರಸ್ವರೂಪಃ** ಎಂಬ ಮಂತ್ರದಲ್ಲಿ ಅಸೌ ಎಂಬ ಪದವು ಓಂಕಾರಸ್ವರೂಪವಾಗಿರುವುದು. ಏಕೆಂದರೆ ಆದಿತ್ಯನ ಸಾಕ್ಷಾತ್ಕಾರಕ್ಕಾಗಿ ಓಂಕಾರವು ಮುಖ್ಯಸಾಧನವಾಗಿರುವುದು. ಈ ಓಂಕಾರವು ಸಮಸ್ತಫಲವನ್ನೂ ಉಂಟುಮಾಡುವುದಕ್ಕೆ ಕಾರಣವಾಗಿರುವುದು. ಈ ವಿಷಯವನ್ನು ಕಠೋಪನಿಷತ್ತಿನಲ್ಲಿ— **ಏತದ್ಧ್ಯೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್** ಎಂದು ಹೇಳಲಾಗಿದೆ. ಎಂದರೆ, ಯಾವ ಪುರುಷನು ತನ್ನ ಮನಸ್ಸಿನಲ್ಲಿ ಯಾವ ಅಪೇಕ್ಷೆಯನ್ನು ಬಯಸುತ್ತಾನೆಯೋ ಆ ಪುರುಷನು ಈ ಓಂಕಾರಜಪದಿಂದ ಪಡೆಯುತ್ತಾನೆ ಎಂದು.

**ಸ ಪ್ರಜಾಪತಿರ್ಯಜ್ಞಮತನುತ ತಮಾಹರತ್ತೇನಾಯಜತ ಸ ಋಚೈವ-ಹೋತ್ರಮಕರೋದ್ಯಜುಷಾಽಽಧ್ವರ್ಯವಂ ಸಾಮ್ನೋದ್ಗೀಥಂ ಯದೇತತ್ತ್ರಯ್ಯೈ ವಿದ್ಯಾಯೈ ಶುಕ್ರಂ ತೇನ ಬ್ರಹ್ಮತ್ವಮಕರೋತ್॥**

ಅಥ ಪ್ರಾಯಶ್ಚಿತ್ತಂ ವಿಧಾತುಮುಪಯುಕ್ತಮುಪಾಖ್ಯಾನಮಾಹ—ಪುರಾ ಪ್ರಜಾಪತಿಃ ಸ್ವೇಚ್ಛಯಾ ಯಜ್ಞಮತನುತ ವಿಸ್ತಾರಿತವಾನ್ । ಕೇನ ಪ್ರಕಾರೇಣೇತಿ ಸೋಽಭಿಧೀಯತೇ । ವೇದತ್ರಯಗತಂ ಯಜ್ಞಸಾಧನಸಮೂಹಮಾಹೃತ್ಯ ತೇನ ಸಾಧನೇನ ಯಾಗಂ ಕೃತವಾನ್ । ವೇದತ್ರಯಗತೈರ್ಮಂತ್ರೈಃ ಕ್ರಮೇಣ ಹೌತ್ರಾಧ್ವರ್ಯವೌದ್ಗಾತ್ರಾಣಿ ನಿಷ್ಪಾದ್ಯ ತತಸ್ತ್ರಯ್ಯೈ ವಿದ್ಯಾಯೈ

ವೇದತ್ರಯರೂಪಾಯಾಂ ವಿದ್ಯಾಯಾಂ ಯದೇತಚ್ಛುಕ್ರಂ ಸಾರಂ ವ್ಯಾಹೃತಿತ್ರಯಾದಿರೂಪಂ ತೇನ ಸಾರೇಣ ಬ್ರಹ್ಮತ್ವಂ ಕೃತವಾನ್ ॥

ಯಜ್ಞಾದಿಗಳಲ್ಲಿ ಪ್ರಾಯಶ್ಚಿತ್ತವನ್ನು ಮಾಡಲು ಉಪಯೋಗವಾಗುವ ಒಂದು ಉಪಾಖ್ಯಾನವನ್ನು ಹೇಳುವರು. ಪೂರ್ವದಲ್ಲಿ ಪ್ರಜಾಪತಿಯು ತನ್ನ ಸ್ವೇಚ್ಛೆಯಿಂದ ಯಜ್ಞವನ್ನು ವಿಸ್ತಾರವಾಗಿ ಮಾಡಿದನು. ಹೇಗೆಂದರೆ, ಯಜ್ಞಕ್ಕೆ ಬೇಕಾದ ಎಂದರೆ ಸಾಧನಭೂತವಾದ ಸಕಲ ಸಾಮಗ್ರಿಗಳನ್ನು ಒದಗಿಸಿಕೊಂಡು ಯಜ್ಞವನ್ನು ಮಾಡಿದನು. ಋಗ್ವೇದಾದಿ ಮೂರು ವೇದಗಳಲ್ಲಿರುವ ಸಾರಭೂತವಾದ ಮಂತ್ರಗಳನ್ನು ಉಪಯೋಗಿಸಿ ಹೋತೃ, ಅಧ್ವರ್ಯು, ಉದ್ಗಾತೃ ಎಂಬ ಋತ್ವಿಜರ ಪಾತ್ರಗಳನ್ನು ನಿರ್ವಹಿಸಿದನು. ಮತ್ತು ಈ ಮೂರು ವೇದಗಳಲ್ಲಿರುವ ಸಾರಭೂತವಾದ ವ್ಯಾಹೃತಿತ್ರಯದ ಸಾರವನ್ನೂ ಉಪಯೋಗಿಸಿ ಬ್ರಹ್ಮತ್ವವನ್ನೂ (ಬ್ರಹ್ಮನೆಂಬ ಋತ್ವಿಜನ ಪಾತ್ರವನ್ನೂ ಕ್ರಮವಾಗಿ ನಿರ್ವಹಿಸಿದನು.)

ಸ ಪ್ರಜಾಪತಿರ್ಯಜ್ಞಂ ದೇವೇಭ್ಯಃ ಸಂಪ್ರಾಯಚ್ಛತ್ತೇ ದೇವಾ ಯಜ್ಞ-
ಮತನ್ವತ ತಮಾಹರಂತ ತೇನಾಯಜಂತ ತ ಋಚೈವ ಹೌತ್ರ-
ಮಕುರ್ವನ್ಯಜುಷಾಧ್ವರ್ಯವಂ ಸಾಮ್ನೋದ್ಗೀಥಂ ಯದೇವೈ-
ತತ್ತ್ರಯ್ಯೈ ವಿದ್ಯಾಯೈ ಶುಕ್ರಂ ತೇನ ಬ್ರಹ್ಮತ್ವಮಕುರ್ವನ್ ॥

**ಅಥ ಬ್ರಹ್ಮಯಜ್ಞವದ್ದೇವತಾಯಜ್ಞಂ ದರ್ಶಯತಿ— ಪೂರ್ವವದ್ವ್ಯಾಖ್ಯೇಯಂ ॥**

ಈಗ ಬ್ರಹ್ಮಯಜ್ಞದಂತೆ ದೇವತಾಯಜ್ಞವನ್ನು ಮಾಡುವ ಕ್ರಮವನ್ನು ತಿಳಿಸುವರು. ಆ ಪ್ರಜಾಪತಿಯು ತಾನು ಮಾಡಿದ ಯಜ್ಞವಿಧಾನವನ್ನು ದೇವತೆಗಳಿಗೂ ತಿಳಿಸಿಕೊಟ್ಟನು. ಆ ಯಜ್ಞವನ್ನು ವಿಸ್ತಾರವಾಗಿ ಮಾಡಿದರು. ಆ ಯಜ್ಞವನ್ನು ಮಾಡುವ ಕಾಲದಲ್ಲಿ ಋಗ್ವೇದದ ಋಕ್ಕುಗಳಿಂದ ಹೌತ್ರಪ್ರಯೋಗವನ್ನೂ ಯಜುರ್ವೇದಮಂತ್ರಗಳಿಂದ ಅಧ್ವರ್ಯುಪ್ರಯೋಗವನ್ನೂ, ಸಾಮವೇದಮಂತ್ರಗಳಿಂದ ಉದ್ಗೀಥವನ್ನೂ (ಸಾಮಗಾನವನ್ನೂ) ಮಾಡಿದರು. ಈರೀತಿ ಮೂರುವೇದಗಳ ಮಂತ್ರಗಳನ್ನು ಉಪಯೋಗಿಸಿ ಎಲ್ಲಾ ಕರ್ಮಾಂಗಗಳನ್ನೂ ಬ್ರಹ್ಮತ್ವ (ಬ್ರಹ್ಮನು ನೆರವೇರಿಸುವ ಕಾರ್ಯಭಾಗ)ವನ್ನೂ ಮಾಡಿ ಮುಗಿಸಿದರು.

ತೇ ದೇವಾ ಅಬ್ರುವನ್ಪ್ರಜಾಪತಿಂ ಯದಿ ನೋ ಯಜ್ಞ ಋಕ್ತ ಆರ್ತಿಃ
ಸ್ಯಾದ್ಯದಿ ಯಜುಷ್ಟೋ ಯದಿ ಸಾಮತೋ ಯದ್ಯವಿಜ್ಞಾತಾ
ಸರ್ವವ್ಯಾಪದ್ವಾ ಕಾ ಪ್ರಾಯಶ್ಚಿತ್ತಿರಿತಿ ಸ ಪ್ರಜಾಪತಿರಬ್ರವೀ-
ದ್ದೇವಾನ್ಯದಿ ವೋ ಯಜ್ಞ ಋಕ್ತ ಆರ್ತಿರ್ಭವತಿ ಭೂರಿತಿ
ಗಾರ್ಹಪತ್ಯೇ ಜುಹವಾಥ ಯದಿ ಯಜುಷ್ಟೋ ಭುವ ಇತ್ಯಾಗ್ನೀ-
ಧ್ರೀಯೇಽನ್ವಾಹಾರ್ಯಪಚನೇ ವಾ ಹವಿರ್ಯಜ್ಞೇಷು ಯದಿ
ಸಾಮತಃ ಸ್ವರಿತ್ಯಾಹವನೀಯೇ ಯದ್ಯವಿಜ್ಞಾತಾ ಸರ್ವವ್ಯಾಪದ್ವಾ
ಭೂರ್ಭುವಃ ಸ್ವರಿತಿ ಸರ್ವಾ ಅನುದ್ರುತ್ಯಾಽಽಹವನೀಯ ಏವ
ಜುಹವಾಥೇತಿ ॥

**ಅಥ ಪ್ರಶ್ನೋತ್ತರಾಭ್ಯಾಂ ಪ್ರಾಯಶ್ಚಿತ್ತಂ ವಿಧತ್ತೇ— ತೇ ದೇವಾಃ ಪ್ರಜಾಪತಿಂ ಪ್ರತ್ಯೇವಮಪೃಚ್ಛನ್ನೋಽಸ್ಮದೀಯೇ ಯಜ್ಞೇ ಯದಿ ಕದಾಚಿದೃಕ್ತ ಋಙ್ಮಂತ್ರಾದಾರ್ತಿರ್ನಾಶೋ ಭವೇತ್ । ತಥಾ ಯಜುರ್ಮಂತ್ರಾತ್ಸಾಮಮಂತ್ರಾದ್ವಾ ಕದಾಚಿದಾರ್ತಿಃ ಸ್ಯಾತ್ । ಏತಾಃ ಸರ್ವಾ ಆರ್ತಯೋಽಸ್ಮಾಭಿರ್ವಿಜ್ಞಾತಾ ಯದಿ ಕದಾಚಿದವಿಜ್ಞಾತಾ ಕಾಚಿದಾರ್ತಿರ್ಭವೇತ್ । ಯದಿ ವಾ ಸರ್ವಥಾ ಯದ್ವೇದತ್ರಯಮಂತ್ರನಿಮಿತ್ತಾಽಸ್ಮಾಭಿರ್ವಿಜ್ಞಾತಾಽಸ್ಮಾಭಿರಜ್ಞಾತಾ ಚ ಸರ್ವಾ- ಪ್ಯಾರ್ತಿರ್ಭವೇತ್ । ಇದಾನೀಂ ಪ್ರಾಯಶ್ಚಿತ್ತಿರ್ವಕ್ತವ್ಯೇತಿ ದೇವಪ್ರಶ್ನಃ । ಋಙ್ಮಂತ್ರವೈಕಲ್ಯೇ ಗಾರ್ಹಪತ್ಯೇ ಭೂರಿತಿ ಹೋಮಃ । ಯಜುರ್ಮಂತ್ರವೈಕಲ್ಯೇ ಸತ್ಯಾಗ್ನೀಧ್ರೀಯೇ ಧಿಷ್ಣಯೇ ಭುವ ಇತಿ ಹೋಮಃ । ಸೋಽಯಂ ಸೋಮಯಾಗೇ ದ್ರಷ್ಟವ್ಯಃ । ಹವಿರ್ಯಾಗ ಆಗ್ನೀಧ್ರೀಯಾಭಾವಾತ್ । ಅಗ್ನ್ಯಾಧೇಯಮಗ್ನಿಹೋತ್ರಂ ದರ್ಶಪೂರ್ಣಮಾಸಾವಾಗ್ರಯಣಂ ಚಾತುರ್ಮಾಸ್ಯಾನಿ ದಾಕ್ಷಾಯಣಯಜ್ಞಃ ಕೌಂಡಪಾಯಿನಾಮಯನಂ ಸೌತ್ರಾಮಣೀ ವಾ ಸಪ್ತಮೀತ ಏತೇ ಹವಿರ್ಯಜ್ಞಾಸ್ತೇಷ್ವಾಗ್ನೀಧ್ರೀಯಾಭಾವಾದನ್ವಾಹಾರ್ಯಪಚನೇ ದಕ್ಷಿಣಾಗ್ನೌ ಜುಹವಾಥ ಹೇ ದೇವಾ ಯೂಯಂ ಜುಹುತ । ಸಾಮಭ್ರೇಷೇ ಸ್ವರಿತ್ಯಾಹವನೀಯೇ ಹೋಮಃ । ಯದ್ಯವಿಜ್ಞಾತೋ ಭ್ರೇಷೋ ಯದಿ ವಾ ವೇದತ್ರಯಭ್ರೇಷಸಮುಚ್ಚಯಸ್ತತ್ರೋಭಯತ್ರಾಪಿ ಭೂರ್ಭುವಃ ಸ್ವರಿತ್ಯೇತಾಸ್ತಿಸ್ರೋ ವ್ಯಾಹೃತೀಃ ಸರ್ವಾ ಅನುದ್ರುತ್ಯಾಹವನೀಯ ಏವ ಜುಹುತ ॥**

ಪ್ರಾಯಶ್ಚಿತ್ತವಿಧಾನವನ್ನು ಪ್ರಶ್ನೋತ್ತರರೂಪದಿಂದ ತಿಳಿಸುವರು. ಆ ದೇವತೆಗಳು ಪ್ರಜಾಪತಿಯನ್ನು ಈರೀತಿ ಪ್ರಶ್ನೆ ಮಾಡಿದರು—ಎಲೈ ಪ್ರಜಾಪತಿಯೇ ನಾವು ಮಾಡುವ ಯಜ್ಞದಲ್ಲಿ ಋಗ್ವೇದಮಂತ್ರಗಳನ್ನು ಪಠಿಸುವಾಗ ಯಾವಾಗಲಾದರೂ ತಪ್ಪು ಆಗಬಹುದು ಮತ್ತು ಯಜುರ್ವೇದ ಅಥವಾ ಸಾಮವೇದಮಂತ್ರಗಳನ್ನು ಪಠಿಸುವಾಗ ಯಾವುದಾದರೂ ಪ್ಪುಗಳುಂಟಾಗಬಹುದು. ಈ ತಪ್ಪುಗಳು ಸಂಭವಿಸುವಾಗ ನಮಗೆ ತಿಳಿದಂತೆಯೇ ಆಗಬಹುದು ಅಥವಾ ನಮ್ಮ ಗಮನಕ್ಕೆ ಬರದಂತೆಯೇ ಆಗಬಹುದು. ಈ ಮೂರು ವೇದಗಳ ಮಂತ್ರಗಳನ್ನು ಪಠಿಸುವಾಗ ಸಂಭವಿಸುವ ತಪ್ಪುಗಳು ನಮಗೆ ತಿಳಿದು ಅಥವಾ ತಿಳಿಯದೇ ಆದರೂ ಆಗ ಆ ತಪ್ಪುಗಳ ಪರಿಹಾರಕ್ಕಾಗಿ ನಾವು ಮಾಡಬೇಕಾದ ಪ್ರಾಯಶ್ಚಿತ್ತವೇನು ? ಎಂದು ದೇವತೆಗಳು ಪ್ರಶ್ನೆಮಾಡಿದರು. ಅದಕ್ಕೆ ಪ್ರಜಾಪ್ರತಿಯ ಉತ್ತರವು ಈರೀತಿ ಇರುವುದು— ಋಗ್ವೇದಮಂತ್ರಗಳನ್ನು ಪಠಿಸುವಾಗ ತಪ್ಪುಗಳು ಸಂಭವಿಸಿದರೆ ಆಗ ಗಾರ್ಹಪತ್ಯಾಗ್ನಿಯಲ್ಲಿ ಭೂಃ ಎಂಬ ವ್ಯಾಹೃತಿಯಿಂದ ಹೋಮಮಾಡಬೇಕು. ಯಜುರ್ಮಂತ್ರಗಳ ವಿಷಯದಲ್ಲಿ ತಪ್ಪುಗಳು ಸಂಭವಿಸಿದರೆ ಆಗ ಆಗ್ನೀಧ್ರಿಯ ಕುಂಡದಲ್ಲಿ ಎಂದರೆ ಧಿಷ್ಣಿಯಲ್ಲಿ ಭುವಃ ಎಂಬ ವ್ಯಾಹೃತಿಯಿಂದ ಹೋಮಮಾಡಬೇಕು. ಈ ವಿಧಾನವು ಸೋಮಯಾಗದಲ್ಲಿ ಕಂಡುಬರುವುದು. ಆಗ್ನಿಧ್ರಿಯವಲ್ಲಿ ಹವಿರ್ಯಾಗವಿರುವುದಿಲ್ಲ. ಏಕೆಂದರೆ ಅನ್ವಾಧೇಯ, ಅಗ್ನಿಹೋತ್ರ, ದರ್ಶಪೂರ್ಣಮಾಸ, ಆಗ್ರಯಣ, ಚಾತುರ್ಮಾಸ್ಯ, ದಾಕ್ಷಾಯಣಯಜ್ಞ, ಕೌಂಡಪಾಯಿನಾಮಯನ ಅಥವಾ ಸೌತ್ರಾಮಣೀ ಎಂಬಿವುಗಳು ಏಳು ಹವಿರ್ಯಜ್ಞಗಳು. ಇವುಗಳಲ್ಲಿ ಆಗ್ನೀಧ್ರೀಯಕುಂಡವಿರುವುದಿಲ್ಲ. ಆದ್ದರಿಂದ ಈ ಯಜ್ಞಗಳಲ್ಲಿ ಅನ್ವಾಹಾರ್ಯಪಚನವೆಂಬ ದಕ್ಷಿಣಾಗ್ನಿಯಲ್ಲಿ ಮೇಲೆ ಹೇಳಿದ ಭುವಃ ಎಂಬ ವ್ಯಾವೃತಿಯಿಂದ ಹೋಮಮಾಡಬೇಕು. ಸಾಮವೇದಮಂತ್ರಗಳಲ್ಲಿ ತಪ್ಪುಗಳು ಸಂಭವಿಸಿದರೆ ಆಹವನೀಯಾಗ್ನಿಯಲ್ಲಿ ಸ್ವಃ ಎಂಬ ವ್ಯಾಹೃತಿಯಿಂದ ಹೋಮಮಾಡಬೇಕು. ಮಂತ್ರಪಠನಕಾಲದಲ್ಲಿ ತಿಳಿದಾಗಲಿ, ತಿಳಿಯದೇ ಆಗಲಿ ತಪ್ಪುಗಳು ಸಂಭವಿಸಿದರೆ ಆಗ ಎಂದರೆ ಮೂರುವೇದಗಳ ಮಂತ್ರಗಳಲ್ಲಿ ಜ್ಞಾತಾಜ್ಞಾತದೋಷಗಳು ಸಂಭವಿಸಿದಲ್ಲಿ ಆಗ ಭೂರ್ಭುವಃಸ್ವಃ ಎಂಬ ಮೂರು ವ್ಯಾಹೃತಿಗಳನ್ನೂ ಒಟ್ಟಿಗೆ ಸೇರಿಸಿ ಆಹವನೀಯಾಗ್ನಿಯಲ್ಲಿ ಹೋಮಮಾಡಬೇಕು. ಇದು ವ್ಯಾಹೃತಿಗಳಿಂದ ಮಾಡಬೇಕಾದ ಪ್ರಾಯಶ್ಚಿತ್ತವಿಧಾನವು.

ಏತಾನಿ ಹ ವೈ ವೇದಾನಾಮಂತಃಶ್ಲೇಷಣಾನಿ ಯದೇತಾ ವ್ಯಾಹೃತಯಸ್ತ-
ದ್ಯಥಾಽಽತ್ಮನಾಽಽತ್ಮಾನಂ ಸಂದಧ್ಯಾದ್ಯ ಪರ್ವಣಾ ಪರ್ವ ಯಥಾ
ಶ್ಲೇಷ್ಮಣಾ ಚರ್ಮಣ್ಯಂ ವಾಽನ್ಯದ್ವಾ ವಿಶ್ಲಿಂಷ್ಟಂ ಸಂಶ್ಲೇಷಯೇ-
ದೇವಮೇವೈತಾಭಿರ್ಯಜ್ಞಸ್ಯ ವಿಶ್ಲಿಷ್ಟಂ ಸಂದಧಾತಿ ಸೈಷಾ ಸರ್ವ-
ಪ್ರಾಯಶ್ಚಿತ್ತಿರ್ಯದೇತಾ ವ್ಯಾಹೃತಯಸ್ತಸ್ಮಾದೇಷೈವ ಯಜ್ಞೇ
ಪ್ರಾಯಶ್ಚಿತ್ತಿಃ ಕರ್ತವ್ಯಾ ॥

ಅನೇನಾರ್ಥವಾದೇನ ಪ್ರಾಯಶ್ಚಿತ್ತವಿಧಿಮುನ್ನೀಯ ವ್ಯಾಹೃತಿಪ್ರಶಂಸಾಪೂರ್ವಕಂ ತಂ ವಿಧಿಮುಪಸಂಹರತಿ ॥– ಯಾ ಏತಾ ವ್ಯಾಹೃತಯಃ ಸಂತಿ ಏತಾನಿ ಹ ವೈ ತ್ರೀಣ್ಯೇವ ವ್ಯಾಹೃತಿರೂಪಾಣಿ ವೇದಾನಾಂ ಸಂಬಂಧೀನ್ಯಂತಃ ಶ್ಲೇಷಣಾನ್ಯಂತರ್ಬಂಧನಸಾಧನಾನಿ । ತತ್ರ ದೃಷ್ಟಾಂತೋಽಭಿಧೀಯತೇ । ಯಥಾ ಲೋಕ ಆತ್ಮನಾಽತ್ಮಾನಂ ಸಂದಧ್ಯಾತ್ । ಆತ್ಮಶಬ್ದಃ ಸ್ವರೂಪಮಾತ್ರವಾಚಿತ್ವಾತ್ಸರ್ವದ್ರವ್ಯಪರಃ । ಏಕೇನ ದ್ರವ್ಯೇಣ ದ್ರವ್ಯಾಂತರಂ ಸಂಧೀಯತೇ । ಏತಚ್ಛಂದೋಗೈರ್ವಿಸ್ಪಷ್ಟಮಾಮ್ನಾತಂ । ತದ್ಯಥಾ ಲವಣೇನ ಸುವರ್ಣಂ ಸಂದಧ್ಯಾತ್ । ಸುವರ್ಣೇನ ರಜತಂ । ರಜತೇನ ತ್ರಪು । ತ್ರಪುಣಾ ಸೀಸಂ । ಸೀಸೇನ ಲೋಹಂ । ಲೋಹೇನ ದಾರು । ದಾರುಣಾ ಚರ್ಮೇತಿ । ಕ್ಷಾರಾದಿನಾ ಸುವರ್ಣಾದೀನಾಂ ಸಂಧಾನಂ ಸುವರ್ಣಕಾರಾದಿಷು ಪ್ರಸಿದ್ಧಂ । ತದಭಿಪ್ರೇತ್ಯಾತ್ಮನಾತ್ಮಾನಂ ಸಂದಧ್ಯಾದಿತ್ಯುಕ್ತಂ । ಯಥಾ ಚ ಹಸ್ತಪಾದಾದಿಷ್ವೇಕೇನ ಪರ್ವಣಾ ಪರ್ವಾಂತರಂ ಶಂಶ್ಲಿಷ್ಟಂ ಯಥಾ ಚ ಶ್ಲೇಷ್ಮಣಾ ಧಾತ್ವಂತರಂ ಸಂಶ್ಲಿಷ್ಟಂ ಚರ್ಮಣಾ ಚ ಚರ್ಮಣ್ಯಂ ಪಾದತ್ರಾಣಾದಿಕಮನ್ಯದ್ವಾ ಶಕಟಾದಿಷು ಕಿಂಚಿದ್ವಿಶ್ಲಿಷ್ಟಮಂಗಂ ಚರ್ಮಮಯ್ಯಾ ರಜ್ವಾ ಸಂಶ್ಲೇಷಯೇತ್ । ಅನೇನೈವ ಪ್ರಕಾರೇಣೈತಾಭಿರ್ವ್ಯಾಹೃತಿಭಿರ್ಯಜ್ಞಸ್ಯ ವಿಶ್ಲಿಷ್ಟಮಂಗಂ ಸಂಶ್ಲಿಷ್ಟಂ ಭವತಿ ಯಾ ಏತಾ ವ್ಯಾಹೃತಯಃ ಸೈಷಾ ಸರ್ವಸ್ಯ ವೈಕಲ್ಯಸ್ಯ ಪ್ರಾಯಶ್ಚಿತ್ತಿಃ । ತಸ್ಮಾದ್ಯಜ್ಞೇ ವೈಕಲ್ಯಪರಿಹಾರಾರ್ಥಮೇಷೈವ ಪ್ರಾಯಶ್ಚಿತ್ತಿಃ ಕರ್ತವ್ಯಾ ॥

ಈರೀತಿಯಾಗಿ ಮೇಲೆ ಹೇಳಿದಂತೆ ಪ್ರಾಯಶ್ಚಿತ್ತಿ ವಿಧಾನವನ್ನು ತಿಳಿಸಿ ಈ ವಿಧಿಯನ್ನು ವ್ಯಾಹೃತಿಪ್ರಶಂಸಾಪೂರ್ವಕವಾಗಿ ಉಪಸಂಹಾರಮಾಡುವರು (ಮುಗಿಸುವರು) ಈಗ ಮೇಲೆ ಹೇಳಿದ ವ್ಯಾಹೃತಿಗಳು ಮೂರುಮಾತ್ರವಿರುವವು. ಈ ಮೂರು ವ್ಯಾಹೃತಿಗಳೂ ಮೂರು ವೇದಗಳ ಸಂಬಂಧವಾಗಿರುವವು. ಇವುಗಳು ಮೂರು ವೇದಮಂತ್ರಗಳನ್ನು ಒಂದಕ್ಕೊಂದನ್ನು ಸೇರಿಸಿ ಗಂಟುಹಾಕಿ ಕಟ್ಟಿದಂತಿರುವವು. ಇದಕ್ಕೊಂದು ದೃಷ್ಟಾಂತವಿರುವುದು. ಲೋಕದಲ್ಲಿ ಆತ್ಮವು (ತಾನು) ಇತರವಸ್ತುಗಳೊಡನೆ ಪರಸ್ಪರ ಸಂಬಂಧಪಟ್ಟಂತಿರುವುದು. ಆತ್ಮವು ಸಮಸ್ತ ವಸ್ತುಗಳಿಗೂ ಸಂಬಂಧಪಟ್ಟಿರುವುದು. ಒಂದು ದ್ರವ್ಯಕ್ಕೂ ಮತ್ತೊಂದು ದ್ರವ್ಯಕ್ಕೂ ಸಂಬಂಧಿಸಿರುವಂತೆ ಸೇರಿಸಲಾಗಿರುವುದು. ಇದನ್ನು ಸಾಮಗರು ಸ್ಪಷ್ಟವಾಗಿ ವಿವರಿಸಿರುವರು––ಹೇಗೆಂದರೆ ಲವಣ (ಉಪ್ಪು) ದಿಂದ ಚಿನ್ನವೂ, ಚಿನ್ನದಿಂದ ಬೆಳ್ಳಿಯೂ, ಬೆಳ್ಳಿಯಿಂದ ಸೀಸವೂ, ಸೀಸದಿಂದ ಲೋಹವೂ, ಲೋಹದಿಂದ ಮರವೂ, ಮರದಿಂದ ಚರ್ಮವೂ ಸೇರಿರುವುದು ಎಂದರೆ ಉಪ್ಪಿನಿಂದ ಚಿನ್ನವನ್ನು ಅಕ್ಕಸಾಲಿಗರು ಶುದ್ಧಿಮಾಡುವುದು ಪ್ರಸಿದ್ಧವಾಗಿದೆ. ಇದನ್ನನುಸರಿಸಿ ಆತ್ಮದಿಂದ ಆತ್ಮವನ್ನು ಕಟ್ಟಿಸೇರಿಸುವುದೆಂದು ಹೇಳಲಾಗಿದೆ. ಹೇಗೆಂದರೆ ಕೈಕಾಲುಗಳಲ್ಲಿ ಒಂದೊಂದು ಗಂಟನ್ನು

ಹಾಕಿ ಕಟ್ಟುವರು. ಆ ಗಂಟಿನೊಡನೆ ಬೇರೆ ಧಾತು (ಲೋಹ) ವನ್ನು ಸೇರಿಸಿ ಕಟ್ಟುವರು. ಅದರೊಡನೆ ಚರ್ಮವನ್ನೂ ಚರ್ಮದೊಡನೆ ಪಾದರಕ್ಷೆಯನ್ನೂ ಸೇರಿಸಿ ಕಟ್ಟುವರು. ಅಥವಾ ಹಗ್ಗದಿಂದ ಗಾಡಿಗೆ ಸೇರಿಸಿ ಇತರ ವಸ್ತುಗಳನ್ನು ಬಿಗಿದು ಕಟ್ಟುವಂತೆ ಅಥವಾ ಚರ್ಮದ ಪಟ್ಟಿಯಿಂದ ಸೇರಿಸಿ ಕಟ್ಟುವಂತೆ ವೇದಮಂತ್ರಗಳನ್ನು ವ್ಯಾಹೃತಿಗಳೆಂಬ ಹಗ್ಗಗಳಿಂದ ಬಿಗಿದು ಕಟ್ಟುವರು. ಈ ವ್ಯಾಹೃತಿಗಳು ಸಮಸ್ತ ಪ್ರಾಯಶ್ಚಿತ್ತಗಳಿಗೂ ಪರಿಹಾರೂಪವಾಗಿರುವವು. ಆದ್ದರಿಂದ ಯಜ್ಞದಲ್ಲಿ ವೈಕಲ್ಯ ಪರಿಹಾರಾರ್ಥವಾಗಿ ಈ ಪ್ರಾಯಶ್ಚಿತ್ತಿ ವಿಧಾನವನ್ನು ಅವಶ್ಯಕವಾಗಿ ಮಾಡಬೇಕು.

*English Translation*

**(On the creation of the world· The origin of the Vedas and the sacred words. The penances for mistakes committed at a sacrifice.)**

Prajapathi had the desire of creating beings and multiplying himself. He underwent (consequently) austerities. Having finished them, he created these worlds viz., earth› air and heaven. He heated them with the lustre of his mind, pursuing a course of austerities ; three lights were produced ; Agni from the earth, vayu from the air, and Aditya from heaven. He heated them again, in consequence of which the three Vedas were produced. The Rigveda came from Agni, the Yajurveda from Yavu, and the Samaveda from Aditya. He heated these Vedas, in consequence of which three luminaries arose, viz., Bhur came from the Rigveda, Bhuvah from the Yajurveda, and Svar from the Samaveda. He heated these luminaries again, and three sounds came out of them a, u and m. By putting them together he made the syllable om. Therefore he (the priest) repeats " Om ! Om ! " for Om is the heaven-world, and Om is that one who burns Aditya.

Prajapati spread the sacrifice extending it, took it, and sacrificed with it. By means of the Rich (Rigveda), he performed the duties of theHotar ; by means of the Yajus, those of the Adhvaryu, and by means of the Saman, those of the Udgatar. Out of the splendour (seed) which is inherent in this three-fold knowledge (the three Vedas,) he made the Brahma essence.

Prajapati offered then the sacrifice to the gods. The gods spread it, and sacrified with it, and did just as Prajapati had done regarding the office of the Hotar &c. The gods said to Prajapati, " If a mistake has been committed in the Rik, or in the Yajus, or in the Saman, in our sacrifice, or in consequence of ignorance, or of a general misfortune, what is the atonement for it ? " Prajapati answered, " What you commit a mistale in the Rik, you shall sacrifice in the Garhapatya, saying Bhuh. When you commit one in the Yajus, then you shall sacrifice in the Agnidhriya fire or in the absence of it as is the case in the Havis offerings in the cooking fire Dakshina Agni saying, Bhuvah. When a

mistake is committed in the Saman, then it is to be sacrificed in the Ahavaniya fire by saying Svar. When a mistake has been committed out of ignorance, or in consequence, of a general mishap, then you shall sacrifice in the Ahavaniya fire, reciting all three words, Bhuh, Bhuvah, Svar. These three "great words" (vyahriii) are like nooses to tie together the Vedas. It is just like joining one thing to another, one link to another link, like the stringing of anything made of leather, or of any other thing, and connecting that which was disconnected, that one puts together by means of these great words all that was insolated in the sacrifice. These Vyahrits, are general Prayaschitta (penance); thence the penances for mistakes at a sacrifice are to be made with them.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಪಂಚವಿಂಶಾಧ್ಯಾಯಸ್ಯ ಸಪ್ತಮಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೈದನೆಯ ಅಧ್ಯಾಯದಲ್ಲಿ ಏಳನೆಯ ಖಂಡವು ಸಮಾಪ್ತವಾದುದು.**

## ಅಥ ಪಂಚವಿಂಶಾಧ್ಯಾಯೇ ಅಷ್ಟಮಃ ಖಂಡಃ

### ಇಪ್ಪತ್ತೈದನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು

[ಯಜ್ಞದಲ್ಲಿ ಬ್ರಹ್ಮನೆಂಬ ಋತ್ವಿಜನ ಕರ್ತವ್ಯವು. ಯಜ್ಞದಲ್ಲಿ ಮಾಡಲ್ಪಡುವ ಮುಖ್ಯವಾದ ಕಾರ್ಯಕಲಾಪಗಳಲ್ಲಿ ಅವನು ಸುಮ್ಮನಿ (ಮೌನವಾಗಿ) ರಬೇಕು.]



ತದಾಹುರ್ಮಹಾವದಾಃ ಯದೃಚೈವ ಹೌತ್ರಂ ಕ್ರಿಯತೇ ಯಜು-
ಷಾಽಽಧ್ವರ್ಯವಂ ಸಾಮ್ನೋದ್ಗೀಥಂ ವ್ಯಾರಬ್ಧಾ ತ್ರಯೀ ವಿದ್ಯಾ
ಭವತ್ಯಥ ಕೇನ ಬ್ರಹ್ಮತ್ವಂ ಕ್ರಿಯತ ಇತಿ ತ್ರಯ್ಯಾ ವಿದ್ಯಯೇತಿ
ಬ್ರೂಯಾತ್ ॥

ವ್ಯಾಹೃತಿಹೋಮಪ್ರಸಂಗೇನ ಬ್ರಹ್ಮಾ ಬುದ್ಧಿಸ್ಥಸ್ತಸ್ಯ ತತ್ಕರ್ತೃತ್ವಾತ್ । ತಥಾ ಚಾಶ್ವಲಾಯನ ಆಹ—ಜುಹೋತಿ ಜಪತೀತಿ ಪ್ರಾಯಶ್ಚಿತ್ತೇ ಬ್ರಹ್ಮಾಣಮಿತಿ ॥ ಅತಃ ಪ್ರಶ್ನೋತ್ತರಾಭ್ಯಾಂ ಬ್ರಹ್ಮತ್ವಂ ನಿರ್ಣೇತುಮುಪಕ್ರಮತೇ—ತತ್ತತ್ರ ಪ್ರಾಯಶ್ಚಿತ್ತಪ್ರಸಂಗೇ ಮಹಾವದಾ ಬ್ರಹ್ಮವಾದಿನ ಆಹುಶ್ಚೋದಯಂತಿ । ಮಹಾಂತಂ ಪ್ರೌಢಂ ವೇದಂ ವದಂತೀತಿ ಮಹಾವದಾಃ । ಪ್ಲುತಿಸ್ತೇಷಾಂ ಪ್ರಶಂಸಾರ್ಥಾ । ಯದ್ಯಸ್ಮಾತ್ಕಾರಣಾದೃಗ್ಯಜುಃ ಸಾಮೇತಿ ಹೌತ್ರಾಧ್ವರ್ಯವೌದ್ಗಾತ್ರಾಣಾಂ ಕರಣಾತ್ತ್ರಯೀ ವೇದತ್ರಯರೂಪಾ ವಿದ್ಯಾ ವ್ಯಾರಬ್ಧಾ ವಿವಿಚ್ಯ ಹೋತ್ರಾದಿಭಿಃ ಸ್ವೀಕೃತಾ ಭವತಿ । ಅಥರ್ವವೇದಶ್ಚ ನಾತ್ರ ಮಿಶ್ರಯಿತುಂ ಶಕ್ಯತೇ । ಆಹವನೀಯಾದಿಕರ್ತವ್ಯಸ್ಯ ತತ್ರಾಭಾವಾತ್ । ಅಥ ತಸ್ಮಾತ್ಕಾರಣಾತ್ಕೇನ ಸಾಧನೇನ ಬ್ರಹತ್ವಂ ಕ್ರಿಯತ ಇತಿ ಚೋದ್ಯಂ । ತಸ್ಯ ತ್ರಯ್ಯಾ ವೇದತ್ರಯರೂಪಯಾ ವಿದ್ಯಯಾ ಬ್ರಹ್ಮತ್ವಂ ಕರ್ತವ್ಯಮಿತ್ಯುತ್ತರಂ ಪ್ರತಿಬ್ರೂಯಾತ್ । ಅತ ಏವ ಸಂಪ್ರದಾಯವಿದ ಆಹುಃ—

" ಅಥರ್ವಕ್ಷೇತ್ರವಾನ್ಬ್ರಹ್ಮಾ ವೇದೇಷ್ವನ್ಯೇಷು ಭಾಗವಾನ್ ।
ತಸ್ಮಾದ್ಬ್ರಹ್ಮಾಣಂ ಬ್ರಹ್ಮಿಷ್ಠಮಿತಿ ಹ್ಯಾರಣ್ಯಕೇ ಶ್ರುತಂ ॥ " ಇತಿ

ಬ್ರಹ್ಮ ಎಂಬ ಋತ್ವಿಜನು ಮಾಡಬೇಕಾದ ಕರ್ತವ್ಯವನ್ನು ಪ್ರಶ್ನೋತ್ತರರೂಪದಿಂದ ವಿವರಿಸುವರು. ಮೇಲಿನ ವಾಕ್ಯದಲ್ಲಿ ಮಹಾವದಾಃ ಎಂಬ ಶಬ್ದದ ಪ್ರಯೋಗವಿದೆ. ಮಹಾವದಾಃ ಎಂದ ಪ್ರೌಢವಾದ ವೇದ ಮುಂತಾದ ಗ್ರಂಥಗಳನ್ನು ಹೇಳು (ವಿಮರ್ಶಿಸು) ವವರೆಂದು ಅರ್ಥವು. ಪ್ಲುತಿಯು ಮರ್ಯಾದಾರ್ಥವಾಗಿ ಉಪಯೋಗಿಸಲ್ಪಟ್ಟಿದೆ. ಸಾಧಾರಣವಾಗಿ ಯಜ್ಞಾದಿಗಳಲ್ಲಿ ಋಗ್ಯಜುಸ್ಸಾಮಗಳೆಂಬ ಮುಖ್ಯವಾದ ಮೂರು ವೇದಗಳು ಹೊತೃ, ಅಧ್ವರ್ಯು, ಉದ್ಗಾತೃ ಎಂಬ ಋತ್ವಿಜರಿಂದಲೂ ಅವರ ಸಹಾಯಕರಾದ ಇತರ ಋತ್ವಿಜರಿಂದಲೂ ಉಪಯೋಗಿಸಲ್ಪಡುತ್ತವೆ. ಈ ಸಂದರ್ಭದಲ್ಲಿ ಅಥರ್ವವೇದವನ್ನು ಸೇರಿಸಿ ಪಠಿಸಲು ಸಾಧ್ಯವಾಗುವುದಿಲ್ಲ. ಏಕೆಂದರೆ ಆಹವನೀಯಾದಿ ಅಗ್ನಿಗಳಲ್ಲಿ ಪ್ರಯೋಗಿಸಲ್ಪಡುವ ಮಂತ್ರಗಳಲ್ಲಿ ಅಥರ್ವವೇದಮಂತ್ರಗಳು ಇರುವುದಿಲ್ಲ. ಆದ್ದರಿಂದ ಬ್ರಹ್ಮನೆಂಬ ಋತ್ವಿಜನು ಯಾವ ವೇದಮಂತ್ರಗಳನ್ನನುಸರಿಸಿ ಯಜ್ಞಾದಿಗಳಲ್ಲಿ ಬ್ರಹ್ಮತ್ವವನ್ನು (ಬ್ರಹ್ಮನ ಕರ್ತವ್ಯವನ್ನು) ಮಾಡುವನೆಂಬ ವಿಷಯದಲ್ಲಿ ಎಲ್ಲರಿಗೂ ಕುತೂಹಲವುಂಟಾಗುವುದು ಸಹಜವು. ಇದಕ್ಕೆ ಕಾರಣವಿಲ್ಲ. ಈ ಬ್ರಹ್ಮನು ಋಗ್ಯಜುಸ್ಸಾಮಗಳೆಂಬ ಮೂರು ವೇದಗಳನ್ನೂ ಸಂದರ್ಭಾನುಸಾರ ಉಪಯೋಗಿಸಿ ತನ್ನ ಕರ್ತವ್ಯವನ್ನು ನೆರವೇರಿಸುವನು ಎಂದು ಹೇಳಬಹುದು. ಆದ್ದರಿಂದ ಸಂಪ್ರದಾಯವನ್ನು ತಿಳಿದಿರುವಯಜ್ಞಾನುಷ್ಠಾನಕುಶಲರು ಈರೀತಿ ಹೇಳುವರು—

ಅಥರ್ವಕ್ಷೇತ್ರವಾನ್ಬ್ರಹ್ಮಾ ವೇದೇಷ್ವನ್ಯೇಷು ಭಾಗವಾನ್ ।
ತಸ್ಮಾದ್ಬ್ರಹ್ಮಾಣಂ ಬ್ರಹ್ಮಿಷ್ಠಮಿತಿ ಹ್ಯಾರಣ್ಯಕೇ ಶ್ರುತಂ ॥

ಬ್ರಹ್ಮನೆಂಬ ಋತ್ವಿಜನು ಅಥರ್ವಣವೇದವನ್ನೇ ಮುಖ್ಯವಾಗಿ ಆಶ್ರಯಿಸಿ ಕಾರ್ಯಕ್ರಮಗಳನ್ನು ನಡೆಸುವನು ಅಲ್ಲದೆ ಇತರ ಋಗ್ವೇದಾದಿ ಮೂರುವೇದಗಳಲ್ಲಿಯೂ ಸಂದರ್ಭಾನುಸಾರ ಭಾಗವಹಿಸುವನು. ಆದ್ದರಿಂದಲೇ ಬ್ರಹ್ಮನಿಗೆ ಬ್ರಹ್ಮನೆಂಬ ಹೆಸರು ಬಂದಿರುವುದು ಎಂದು ಆರಣ್ಯಕದಲ್ಲಿ ಹೇಳಲಾಗಿದೆ.

**ಅಯಂ ವೈ ಯಜ್ಞೋ ಯೋಽಯಂ ಪವತೇ ತಸ್ಯ ವಾಕ್ಚ ಮನಶ್ಚ ವರ್ತನ್ಯೌ ವಾಚಾ ಚ ಹಿ ಮನಸಾ ಚ ಯಜ್ಞೋ ವರ್ತತ ಇಯಂ**

ನ್ಯೈ ವಾಗದೋ ಮನಸ್ತದ್ವಾಚಾ ತಯ್ಯಾ ವಿದ್ಯಯೈಕಂ ಪಕ್ಷಂ ಸಂಸ್ಕುರ್ವಂತಿ ಮನಸೈವ ಬ್ರಹ್ಮಾ ಸಂಸ್ಕರೋತಿ ॥

**ಬ್ರಹ್ಮಣೋ ಮನಸಾ ವೈಕಲ್ಯರಾಹಿತ್ಯಾನುಸಂಧಾನಂ ವಿಧತ್ತೇ- ಸೋಽಯಂ ವಾಯುಃ ಪವತೇಽಂತರಿಕ್ಷೇ ಸಂಚರತಿ ಅಯಮೇವ ಯಜ್ಞಸ್ವರೂಪೋ ವಾಯುಸದೃಶೋ ಯಜ್ಞಃ । ಯಥಾ ವಾಯೋಃ ಸಂಚಾರಮಾರ್ಗಸ್ತಥಾ ತಸ್ಯ ಯಜ್ಞಸ್ಯ ವಾಕ್ಚ ಮನಶ್ಚ ವರ್ತನ್ಯೌ ಪ್ರವೃತ್ತಿಮಾರ್ಗೌ । ಯಸ್ಮಾದ್ವಾಚಾ ಮಂತ್ರರೂಪಯಾ ಮನಸಾ ಚ ಪ್ರಯೋಗಾನುಸಂಧಾತ್ರಾ ಯಜ್ಞೋ ವರ್ತತೇ ತಸ್ಮಾದುಭೌ ಮಾರ್ಗೌ । ತತ್ರ ವಾಗಿಯಂ ವೈ ಭೂಮಿಸ್ವರೂಪೈವ ಮನಸ್ತ್ವದಃ ಸ್ವರ್ಗರೂಪಂ । ತತ್ತಥಾ ಸತಿ ವಾಗ್ರೂಪಯಾ ತ್ರಯ್ಯಾ ವಿದ್ಯಯಾ ಹೋತ್ರಾದಯೋ ರಥಸ್ಥಾನೀಯಸ್ಯ ಯಜ್ಞಸ್ಯೈಕಂ ಪಕ್ಷಂ ಭಾಗಂ ಸಂಸ್ಕುರ್ವಂತಿ ಸಮ್ಯಕ್ ಸಂಪಾದಯಂತಿ । ಬ್ರಹ್ಮಾ ಮನಸೈವ ಸಂಸ್ಕರೋತಿ ಸಮ್ಯಕ್ಸಂಪಾದಯತಿ । ಅನ್ಯಂ ಭಾಗಮಿತಿ ಶೇಷಃ । ಹೋತ್ರಾದಿಭಿರ್ವಾಚಾಽನುಷ್ಠೀಯಮಾನೇಷ್ವಂಗೇಷು ವೈಕಲ್ಯರಾಹಿತ್ಯಂ ಬ್ರಹ್ಮಾಽನುಸಂದಧ್ಯಾದಿತ್ಯರ್ಥಃ । ಛಂದೋಗಾಶ್ಚೈತಮರ್ಥಮಾಮನಂತಿ–'ಏಷ ಏವ ಯಜ್ಞಸ್ತಸ್ಯ ಮನಶ್ಚ ವಾಕ್ಚ ವರ್ತನೀ ತಯೋರನ್ಯತರಾಂ ಮನಸಾ ಸಂಸ್ಕರೋತಿ ಬ್ರಹ್ಮಾ ವಾಚಾ ಹೋತಾಽಧ್ವರ್ಯುರುದ್ಗಾತಾಽನ್ಯತರಾಮ್' ಇತಿ ॥**

ಬ್ರಹ್ಮನೆಂಬ ಋತ್ವಿಜನು ಮನಸ್ಸಿನಲ್ಲಿ ವೈಕಲ್ಯರಹಿತವಾಗಿ ಮಾಡಬೇಕಾದ ಅನುಸಂಧಾನವನ್ನು ತಿಳಿಸುವರು. ನಮ್ಮ ಸುತ್ತಲೂ ಇರುವ ವಾಯುವು ಅಂತರಿಕ್ಷದಲ್ಲಿ ಸಂಚರಿಸುವುದು. ಯಜ್ಞಸ್ವರೂಪವು ಈ ವಾಯುವಿನಂತೆಯೇ ಇರುವುದು. ಹೇಗೆಂದರೆ ವಾಯುವಿನ ಸಂಚಾರಮಾರ್ಗವಾದ ಅಂತರಿಕ್ಷದಂತೆ ಯಜ್ಞಕ್ಕೆ ವಾಕ್ ಮತ್ತು ಮನಸ್ಸು ಎಂಬ ಎರಡು ಮಾರ್ಗಗಳಿರುವವು. ಹೇಗೆಂದರೆ ವಾಕ್ಕಿನಿಂದ ಮಂತ್ರಾದಿಗಳನ್ನು ಪಠಿಸುವರು. ಮನಸ್ಸಿನಿಂದ ಪ್ರಯೋಗಾದಿ ಕಾರ್ಯಕಲಾಪಗಳನ್ನು ಹೇಗೆ ಮಾಡಬೇಕೆಂಬುವುದನ್ನು ನಿಶ್ಚಯಿಸುವರು. ಆದ್ದರಿಂದ ವಾಕ್ ಮತ್ತು ಮನಸ್ಸು ಎಂಬಿವೆರಡೂ ಯಜ್ಞಾನುಷ್ಠಾನಕ್ಕೆ ಆವಶ್ಯಕವಾದ ಎರಡು ಮಾರ್ಗಗಳು. ಇವುಗಳಲ್ಲಿ ವಾಕ್ ಎಂಬುದು ಭೂಮಿಸ್ವರೂಪವು. ಮನಸ್ಸು ಸ್ವರ್ಗಸ್ವರೂಪವು. ಹೀಗಿರುವಾಗ ಹೋತ್ರಾದಿಋತ್ವಿಜರ ವಾಗ್ರೂಪವಾದ ಮೂರು ವೇದಗಳ ಮಂತ್ರಗಳನ್ನು ಪಠಿಸಿ ಯಜ್ಞವೆಂಬ ರಥದ ಒಂದು ಪಕ್ಕದಲ್ಲಿ ಕಟ್ಟಿರುವ ಅಶ್ವಗಳನ್ನು ಚೆನ್ನಾಗಿ ನಡೆಸುತ್ತಾರೆ. ಬ್ರಹ್ಮನೆಂಬ ಋತ್ವಿಜನು ಯಜ್ಞವೆಂಬ ರಥದ ಇನ್ನೊಂದು ಪಕ್ಕದಲ್ಲಿ ಕಟ್ಟಿರುವ ಅಶ್ವಗಳನ್ನು ಮನಸ್ಸಿನಿಂದಲೇ ನಡೆಸುತ್ತಾನೆ ಎಂದರೆ ಯಜ್ಞದ ಕಾರ್ಯಕಲಾಪಗಳನ್ನು ಹೀಗೆ ಹೀಗೇ ಮಾಡಬೇಕೆಂದು ಮನಸ್ಸಿನಲ್ಲಿಯೇ ನಿಶ್ಚಯಿಸಿ ಅದರಂತೆ ನಡೆಸಲು ನಿಯಮಿಸುತ್ತಾನೆ ಎಂದರೆ ಹೋತ್ರಾದಿ ಋತ್ವಿಜರು ನಡೆಸುವ ಯಜ್ಞದ ಕಾರ್ಯಕಲಾಪಗಳಲ್ಲಿ ಸಂಭವಿಸುವ ತಪ್ಪುಗಳು ವೈಕಲ್ಯಾದಿಗಳು ಮುಂತಾದವುಗಳನ್ನು ಮನಸ್ಸಿನಲ್ಲಿ ನಿಶ್ಚಯಿಸಿ ತಿದ್ದಿ ಅವುಗಳು ಸರಿಯಾಗುವಂತೆ ತಿದ್ದುವನು. ಈ ವಿಷಯದಲ್ಲಿ ಛಂದೋಗರು ಎಂದರೆ ಸಾಮಗರು **ಏಷ ಏವ ಯಜ್ಞಸ್ತಸ್ಯ ಮನಶ್ಚ ವಾಕ್ಚ ವರ್ತನೀ ತಯೋರನ್ಯತರಾಂ ಮನಸಾ ಸಂಸ್ಕರೋತಿ ಬ್ರಹ್ಮಾ ವಾಚಾ ಹೋತಾಽಧ್ವರ್ಯುರುದ್ಗಾತಾನ್ಯತರಾಂ** ಎಂದು ಹೇಳುವರು. ಎಂದರೆ ಈ ಯಜ್ಞಕ್ಕೆ ವಾಕ್ಕು ಮತ್ತು ಮನಸ್ಸು ಎಂಬೆರಡು ಮುಖ್ಯಮಾರ್ಗಗಳಿರುವವು. ಹೋತ್ರಾದಿಗಳು ವಾಕ್ ಎಂಬ ಮಾರ್ಗದಲ್ಲಿ ಹೋಗುವವರು ಎಂದರೆ ವಾಗ್ರೂಪವಾದ ಮಂತ್ರಗಳನ್ನು ಪಠಿಸುವರು. ಅವರು ಪಠಿಸುವ ಮಂತ್ರಾದಿಗಳಲ್ಲಿರಬಹುದಾದ ವೈಕಲ್ಯಾದಿಗಳನ್ನು (ತಪ್ಪು ಮುಂತಾದವುಗಳನ್ನು) ಬ್ರಹ್ಮನೆಂಬ ಋತ್ವಿಜನು ಮನಸ್ಸೆಂಬ ಎರಡನೇ ಮಾರ್ಗದಿಂದ ನಿಶ್ಚಯಿಸಿ ತಿದ್ದಿ ವಾಕ್ಕೆಂಬ ಮಾರ್ಗದಿಂದ ಸರಿಯಾದ ಮಾರ್ಗದಲ್ಲಿ ಹೋಗುವಂತೆ ಹೋತ್ರಾದಿಗಳನ್ನು ನಿಯಮಿಸುವನು. ಇದೇ ಬ್ರಹ್ಮನು ಮಾಡಬೇಕಾದ ಮುಖ್ಯ ಕರ್ತವ್ಯವು.

ತೇ ಹೈಕೇ ಬ್ರಹ್ಮಣಾ ಉಪಾಕೃತೇ ಪ್ರಾತರನುವಾಕೇ ಸ್ತೋಮಭಾಗಾ೯ ಜಪಿತ್ವಾ ಭಾಷಮಾಣಾ ಉಪಾಸತೇ ತದ್ಧೈತದುವಾಚ ಬ್ರಾಹ್ಮಣ ಉಪಾಕೃತೇ ಪ್ರಾತರನುವಾಕೇ ಬ್ರಹ್ಮಾಣಂ ಭಾಷಮಾಣಂ ದೃಷ್ಟ್ವಾಽರ್ಧಮಸ್ಯ ಯಜ್ಞಸ್ಯಾಂತರಗುರಿತಿ ತದ್ಯಥೈಕಪಾತ್ಪುರುಷೋ ಯನ್ನೇ ಕತಶ್ಚಕ್ರೋ ವಾ ರಥೋ ವರ್ತಮಾನೋ ಭ್ರೇಷಂ ನ್ಯೇತ್ಯೇವಮೇವ ಸ ಯಜ್ಞೋ ಭ್ರೇಷಂ ನ್ಯೇತಿ ಯಜ್ಞಸ್ಯ ಭ್ರೇಷಮನು ಯಜಮಾನೋ ಭ್ರೇಷಂ ನ್ಯೇತಿ ॥

ಅಥ ಬ್ರಹ್ಮಣೋ ಮೌನಂ ವಿಧಾತುಂ ವಾಗ್ವ್ಯವಹಾರೇ ಬಾಧಾಂ ದರ್ಶಯತಿ—ಕೇಷುಚಿದ್ಯಜ್ಞಪ್ರಯೋಗೇಷು ವರ್ತಮಾನಾಸ್ತೇ ವೇದತ್ರಯಾಭಿಜ್ಞತ್ವೇನ ಪ್ರಸಿದ್ಧಾ ಏಕೇ ಬ್ರಹ್ಮಾಣಃ ಕೇಚಿದ್ಬ್ರಹ್ಮಸಂಜ್ಞಕಾ ಋತ್ವಿಜೋ ಹೋತ್ರಾ ಪಠಿತವ್ಯೇ ಪ್ರಾತರನುವಾಕೇಽಧ್ವರ್ಯುಣೋಪಕೃತೇಽನುಜ್ಞಾತೇ ಸತಿ ತತ ಊರ್ಧ್ವಂ ರಶ್ಮಿರಸಿ ಕ್ಷಯಾಯ ತ್ವೇತ್ಯಾದೀನ್ ಸ್ತೋಮಭಾಗಸಂಜ್ಞಕಾನ್ ಮಂತ್ರಾನ್ ಜಪಿತ್ವಾ ಮೌನಮುತ್ಕೃತ್ವಾ ಭಾಷಮಾಣಾ ವಾಗ್ವ್ಯವಹಾರಂ ಕುರ್ವಂತ ಉಪಾಸತೇ ಸಮೀಪೇ ತಿಷ್ಠಂತಿ । ತದಾನೀಂ ಕಶ್ಚಿಚ್ಛಾಸ್ತ್ರಾಭಿಜ್ಞೋ ಬ್ರಾಹ್ಮಣ ಆಗತ್ಯ ಕಸ್ಮಿಂಶ್ಚಿದ್ಯಜ್ಞೇ ಪ್ರಾತರನುವಾಕೋಪಾಕರಣಾದೂರ್ಧ್ವಂ ಭಾಷಮಾಣಂ ವಾಗ್ವ್ಯವಹಾರಂ ಕುರ್ವಂತಂ ಬ್ರಹ್ಮಾಣಂ ದೃಷ್ಟ್ವಾ ವಾಕ್ಯಮೇತದುವಾಚ ಅಸ್ಯ ಯಜ್ಞಸ್ಯಾರ್ಧಮಂತರಗುರಿತಿ । ಋತ್ವಿಗ್ಯಜಮಾನಾ ಏಕಂ ಯಜ್ಞಭಾಗಮಂತರಿತಂ ಕೃತವಂತ ಇತಿ । ತಥಾ ಸತಿ ಯಥಾಲೋಕೇ ಕಶ್ಚಿದೇತಪಾತ್ಪುರುಷೋ ದ್ವಿತೀಯಂ ಪಾದಂ ಸಂಕುಚಿತಂ ಕೃತ್ವಾ ಪ್ರಸಾರಿತೇನೈಕೇನೈವ ಪಾದೇನ ಯನ್ಮಾರ್ಗೇ ಗಚ್ಛನ್ ಭ್ರೇಷಂ ಭೂಮೌ ಪಾತಂ ನ್ಯೇತಿ ನಿತರಾನೇತಿ ಯಥಾ ವಾ ಕಶ್ಚಿದ್ರಥ ಏಕಚಕ್ರೋ ಭೂಮೌ ಪ್ರವರ್ತಮಾನೋ ಭ್ರೇಷಂ ಪ್ರಾಪ್ನೋತಿ ಏವಮೇವ ಮೌನರಹಿತೇನ ಬ್ರಹ್ಮಣಾ ಯುಕ್ತಃ ಸ ಯಜ್ಞೋ ಭ್ರೇಷಂ ನ್ಯೇತಿ । ತಂ ಚ ಯಜ್ಞಭ್ರೇಷಮನು ಪಶ್ಚಾದ್ಯಜಮಾನೋ ಭ್ರೇಷಂ ನ್ಯೇತಿ ॥

ಬ್ರಹ್ಮನೆಂಬ ಋತ್ವಿಜನು ವಾಗ್ವ್ಯವಹಾರದಲ್ಲಿ (ಮಾತನಾಡುವುದರಲ್ಲಿ) ಉದ್ಯುಕ್ತನಾದರೆ ಅದರಿಂದ ಉಂಟಾಗುವ ಬಾಧೆಯನ್ನೂ ಅದಕ್ಕಾಗಿ ಮೌನವಾಗಿರಬೇಕೆಂಬ ವಿಷಯವನ್ನೂ ತಿಳಿಸುವರು. ಯಜ್ಞಪ್ರಯೋಗಗಳಲ್ಲಿ ಕುಶಲರಾದವರೂ ಮೂರು ವೇದಗಳನ್ನು ತಿಳಿದವರೂ ಆದ ಕೆಲವು ಬ್ರಹ್ಮತ್ವವನ್ನು ಮಾಡುವ ಋತ್ವಿಜರು, ಅಧ್ವರ್ಯುವಿನಿಂದ ಅನುಮತಿ ಪಡೆದು ಪ್ರಾತರನುವಾಕಮಂತ್ರಗಳನ್ನು ಪಠಿಸುತ್ತಿರಲಾಗಿ ತಾವು (ಬ್ರಹ್ಮನೆಂಬ ಋತ್ವಿಜರು) ರಶ್ಮಿರಸಿ ಕ್ಷಯಾಯತ್ವಾ ಮೊದಲಾದ ಸ್ತೋಮಭಾಗಮಂತ್ರಗಳನ್ನು ಜಪಿಸಿ ಬಳಿಕ ಮೌನವಾಗಿರಬೇಕಾದ ಸಂದರ್ಭವನ್ನು ಬಿಟ್ಟು ಪಕ್ಕದಲ್ಲಿರುವ ಬ್ರಾಹ್ಮಣರೊಡನೆ ವ್ಯವಹಾರಾದಿಮಾತುಗಳನ್ನು ಆಡುತ್ತಾ ಸಮೀಪದಲ್ಲಿಯೇ ಕಾಲಕಳೆಯುತ್ತಿರುವರು. ಆ ಸಮಯದಲ್ಲಿ ಶಾಸ್ತ್ರವನ್ನು ಚೆನ್ನಾಗಿ ತಿಳಿದ ಒಬ್ಬ ಬ್ರಾಹ್ಮಣನು ಅಲ್ಲಿಗೆ ಬಂದು ಆ ಯಜ್ಞದಲ್ಲಿ ಪ್ರಾತರನುವಾಕಾನಂತರ ವ್ಯವಹಾರಾದಿ ವಿಷಯಗಳನ್ನು ಮಾತನಾಡುತ್ತಿರುವ ಬ್ರಹ್ಮನೆಂಬ ಋತ್ವಿಜನನ್ನು ಕುರಿತು ಈರೀತಿ ಹೇಳುವನು. ಈ ಯಜ್ಞದಲ್ಲಿ ಋತ್ವಿಕ್ಕುಗಳೂ ಯಜಮಾನನೂ ಒಂದು ವಿಧವಾದ ವಿಘ್ನವನ್ನು ಮಾಡುತ್ತಿರುವರು. ಹೇಗೆಂದರೆ ಲೋಕದಲ್ಲಿ ಒಂದು ಕಾಲು ಕುಂಟಾಗಿರುವ ಪುರುಷನು ಸರಿಯಾಗಿರುವ

ಇನ್ನೊಂದು ಕಾಲಿನಿಂದ ಮಾತ್ರವೇ ಮಾರ್ಗದಲ್ಲಿ ನಡೆಯುತ್ತಾ ಆಯಾಸದಿಂದ ನಡೆಯಲಾರದೆ ಮಾರ್ಗಮಧ್ಯದಲ್ಲಿ ಬಿದ್ದುಬಿಡುವನು ಮತ್ತು ಎರಡು ಚಕ್ರಗಳಿರುವ ರಥದ ಒಂದು ಚಕ್ರವು ಮುರಿದುಹೋಗಿ ಉಳಿದ ಒಂದೇ ಚಕ್ರದಿಂದ ರಥವು ಸಾಗುತ್ತಿದ್ದರೆ ಆ ರಥವೂ ಬಿದ್ದುಹೋಗುವುದು ಇದನ್ನು ಎಲ್ಲರೂ ಬಲ್ಲರು. ಇದರಂತೆಯೇ ಈ ಯಜ್ಞದಲ್ಲಿಯೂ ಮೌನವನ್ನು ಬಿಟ್ಟು ಲೋಕವ್ಯವಹಾರಗಳೆಂಬ ಮಾತುಗಳನ್ನು ಬ್ರಹ್ಮನು ಆಡುತ್ತಿದ್ದರೂ ಆ ಯಜ್ಞವು ಕೆಟ್ಟುಹೋಗುವುದು. ಯಜ್ಞವು ಕೆಟ್ಟುಹೋದರೆ ಅದರಿಂದ ಯಜಮಾನನಿಗೆ ಹಾನಿಯೂ ತಟ್ಟುವುದು.

**ತಸ್ಮಾದ್ಬ್ರಹ್ಮೋಪಾಕೃತೇ ಪ್ರಾತರನುವಾಕೇ ವಾಚಂಯಮಃ ಸ್ಯಾದೋಪಾಂಶ್ವಂತರ್ಯಾಮಯೋರ್ಹೋಮಾದುಪಾಕೃತೇಷು ಪವಮಾನೇಷ್ವೋದೃಚೋಽಥ ಯಾನಿ ಸ್ತೋತ್ರಾಣಿ ಸಶಸ್ತ್ರಾಣ್ಯಾ ತೇಷಾಂ ವಷಟ್ಕಾರಾದ್ವಾಚಂಯಮ ಏವ ಸ್ಯಾತ್ತದ್ಯಥೋ ಭಯತಃ ಪಾತ್ಪುರುಷೋ ಯನ್ನುಭಯತಶ್ಚಕ್ರೋ ವಾ ರಥೋ ವರ್ತಮಾನೋ ನ ರಿಷ್ಯತ್ಯೇವಮೇವ ಸ ಯಜ್ಞೋ ನ ರಿಷ್ಯತಿ ಯಜ್ಞಸ್ಯಾರಿಷ್ಟಿಮನು ಯಜಮಾನೋ ನ ರಿಷ್ಯತಿ ॥**

ಇತ್ಥಂ ವಾಗ್ವ್ಯವಹಾರೇ ಬಾಧಮುಕ್ತ್ವಾ ಮೌನಂ ವಿಧತ್ತೇ—ಯಸ್ಮಾದ್ಭಾಷಣೇ ಬಾಧೋಽಸ್ತಿ ತಸ್ಮಾದ್ಬ್ರಹ್ಮಾ ಪ್ರಾತರನುವಾಕೋಪಾಕರಣಾದೂರ್ಧ್ವಂ ವಾಚಂಯಮೋ ಮೌನೀ ಸ್ಯಾತ್ । ಕಿಯಂತಂ ಕಾಲಮಿತಿ ತದುಚ್ಯತೇ । ಉಪಾಂಶ್ವಂತರ್ಯಾಮಯೋರ್ಗ್ರಹಯೋರಾ ಹೋಮಾದ್ಧೋಮಸಮಾಪ್ತಿಪರ್ಯಂತಂ ತಥಾ ಪವಮಾನಸ್ತೋತ್ರೇಷು ತ್ರಿಷ್ವಪ್ಯಧ್ವರ್ಯುಣೋಪಾಕೃತೇಷ್ವನುಜ್ಞಾತೇಷು ಸತ್ಸು ಓದೃಚ ಉತ್ತಮ (ಮಾ) ಸಮಾಪ್ತಿಕಾಲೀನಾ ಯೇಯಮೃಗಸ್ತಿ ತತ್ಸಮಾಪ್ತಿಪರ್ಯಂತಂ । ವಾಚಂಯಮಃ ಸ್ಯಾದಿತ್ಯನುವರ್ತತೇ । ಅಥಾನಂತರಂ ಯಾನ್ಯನ್ಯಾನ್ಯಾಜ್ಯಾದಿಸ್ತೋತ್ರಾಣಿ ಶಸ್ತ್ರಸಹಿತಾನಿ ಸಂತಿ ತೇಷಾಮಾ ವಷಟ್ಕಾರಾದ್ವಾಷಟ್ಕೃತಿಮಂತ್ರೋಚ್ಚಾರಣಪರ್ಯಂತಂ ತತ್ತತ್ಸ್ತೋತ್ರಪ್ರಾರಂಭಾದೂರ್ಧ್ವಂ ತದಾ ತದಾ ವಾಚಂಯಮ ಏವ ಸ್ಯಾತ್ । ತಥಾ ಸತಿ ಲೋಕೇ ಯಥೋಭಯತಃ ಪಾತ್ಯಾದದ್ವಯೋಪೇತಃ ಪುರುಷೋ ಯನ್ಮಾರ್ಗೇ ಗಚ್ಛನ್ನ ರಿಷ್ಯತಿ ನ ವಿನಶ್ಯತಿ ತಥಾ ಚೋಭಯತಶ್ಚಕ್ರಶ್ಚಕ್ರದ್ವಯೋಪೇತೋ ಮಾರ್ಗೇ ಪ್ರವರ್ತಮಾನೋ ನ ವಿನಶ್ಯತಿ ಏವಮೇವ ಮೌನಿನಾ ಬ್ರಹ್ಮಣಾ ಯುಕ್ತಃ ಸ ಯಜ್ಞೋ ನ ವಿನಶ್ಯತಿ । ಯಜ್ಞಸ್ಯಾರಿಷ್ಟಿಂ ವಿನಾಶಾಭಾವಮನು ಯಜಮಾನೋಽಪಿ ನ ರಿಷ್ಯತಿ ನ ವಿನಶ್ಯತಿ ॥

ಈ ರೀತಿಯಾಗಿ ಬ್ರಹ್ಮನು ವಾಗ್ವ್ಯವಹಾರದಲ್ಲಿ ತೊಡಗಿದರೆ ಅದರಿಂದ ಉಂಟಾಗುವ ಹಾನಿಯನ್ನು ತಿಳಿಸಿ ಮೌನವನ್ನು ವಿವರಿಸುವರು. ಪ್ರಾತರನುವಾಕಪಠನಾನಂತರ ಬ್ರಹ್ಮನು ಮಾತನಾಡುವುದರಿಂದ ಬಾಧೆಯುಂಟಾಗುವುದೆಂದು ತಿಳಿದು ಮೌನವಾಗಿರಬೇಕು. ಎಷ್ಟುಕಾಲದವರೆಗೆ ಮೌನವಾಗಿರಬೇಕು ಎಂದರೆ, ಉಪಾಂಶು ಮತ್ತು ಅಂತರ್ಯಾಮಗ್ರಹಹೋಮಸಮಾಪ್ತಿಯಾಗುವವರೆಗೂ ಹಾಗೆಯೇ ಅಧ್ವರ್ಯುವಿನಿಂದ ಅನುಜ್ಞಾತರಾದ ಋತ್ವಿಜರು ಮೂರು ಪವಮಾನಸ್ತೋತ್ರಗಳನ್ನು ಪಠಿಸುವವ

ರೆಗೂ ಕೊನೆಯ ಋಕ್ಕನ್ನು ಹೇಳಿ ಮುಗಿಸುವವರೆಗೂ ಮೌನದಿಂದ ಎಂದರೆ ವಾಙ್ನಿಯಮದಿಂದ ಇರಬೇಕು. ಇಷ್ಟು ಅಲ್ಲದೆ ಆಜ್ಯಸ್ತೋತ್ರಗಳು, ಅವುಗಳಿಗೆ ಸಂಬಂಧಪಟ್ಟ ಶಸ್ತ್ರಮಂತ್ರಗಳು ಮತ್ತು ವಷಟ್ಕಾರ ಎಂದರೆ ವೌಷಟ್ ಎಂದು ಉಚ್ಚರಿಸುವ ವರೆಗೂ ವಾಙ್ನಿಯಮದಿಂದ ಇರಬೇಕು. ಹೀಗೆ ಮಾಡಿದಲ್ಲಿ ಎರಡು ಕಾಲುಗಳೂ ಗಟ್ಟಿಯಾಗಿರುವ ಪುರುಷನು ಅನಾಯಾಸ ವಾಗಿ ಮಾರ್ಗಾನುಕ್ರಮಣಮಾಡುವಂತೆ ಅಥವಾ ಎರಡು ಚಕ್ರಗಳೂ ಗಟ್ಟಿಯಾಗಿರುವ ರಥವು ಚಲಿಸುವಂತೆ ಆ ಯಜ್ಞವು ಮೌನದಿಂದಿರುವ ಬ್ರಹ್ಮನಿಂದ ನಿರ್ವಿಘ್ನವಾಗಿ ನೆರವೇರುವುದು. ಯಜ್ಞವು ಸಾಂಗವಾಗಿಯೂ ನಿರ್ವಿಘ್ನವಾಗಿಯೂ ನೆರವೇರು ವುದರಿಂದ ಯಜಮಾನನಿಗೆ ಯಾವ ವಿಧವಾದ ಹಾನಿಯೂ ತಟ್ಟುವುದಿಲ್ಲ.

*English Translation*

**(On the office of the Brahma priest. He ought to remain silent during all the principal ceremonies)**

The great sages (mahavadah) ask, "When the duties of a Hotar are performed by the Rik, those of the Adhyaryus by the Yajus, and those of the Udgatar by the Saman, and the three-fold science is thus properly carried into effect by the several priests employed, by what means then are the duties of the Brahma priest performed?" To this one should answer, "This is done just by means of the three-fold science."

He who blows (Vayu) is the sacrifice. He has two roads, viz., speech and mind. By their means (speech and mind) the sacrifice is performed. In the sacrifice there are both, speech and mind required. By means of speech the three priests of the three-fold science perform one part (assigned to Vach); but the Brahma priest performs his duty by the mind only. Some Brahma priests after having muttered the Stomabhagas when all arrangements have been made for the repetition of the Prataranuvaka—the morning prayer sit down and speak without performing any of the ceremonies.

Respecting this (the silence on the part of the Brahma priests) a Brahman, who saw a Brahma priest at the Prataranuvaka talk, said once "they (the priests and the sacrificer) have made one-half of this sacrificer to disappear." Just as a man who walks with one foot only, or a carriage which has one wheel only, falls to the ground, in the same manner the sacrifice falls to the ground (bhreskan nyeti), and if the sacrifice has fallen, the sacrificer falls after it too (if the Brahma priests talk during the time they ought to be silent). Therefore the Brahma priest should, after the order for repeoting the Pratarnuvaka has been given, refrain from speaking till the oblations from the Upamsu and Antaryama (Grahas) are over. After the order for chanting the Pavamana Stotra has been given, (he ought also to refrain from speaking) till the last verse of the Stora is done.

And again, he should during the chanting of the other Stotras and the repeating of the Shastras, refrain from speaking, till the Vashatkara (at the end of the Yajya verse of the Shastra) is pronounced. Likewise as a man walking on both his legs, and a carriage going on both its wheels, does not suffer any injury; in the same way such a sacrifice (if performed in this manner), does not suffer any injury, nor the sacrificer either, if the sacrifice be not injured.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಐತರೇಯಬ್ರಾಹ್ಮಣಭಾಷ್ಯಸ್ಯ ಪಂಚವಿಂಶಾಧ್ಯಾಯಸ್ಯ ಅಷ್ಟಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೈದನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು ಸಮಾಪ್ತವಾದುದು.



## ಅಥ ಪಂಚವಿಂಶಾಧ್ಯಾಯೇ ನವಮಃ ಖಂಡಃ

### ಇಪ್ಪತ್ತೈದನೆಯ ಅಧ್ಯಾಯದಲ್ಲಿ ಒಂಬತ್ತನೆಯ ಖಂಡವು



[ ಬ್ರಹ್ಮನೆಂಬ ಋತ್ವಿಜನು ಯಜ್ಞದಲ್ಲಿ ನೆರವೇರಿಸುವ ಭಾಗವು ಸಾಮಗಾನ ಮಾಡುವವರನ್ನು ಗಾನಮಾಡುವಂತೆ ಅನುಮತಿಯೀಯುವುದು.]



ತದಾಹುರ್ಯದ್ವಹಾನ್ಮೇಽಗ್ರಹೀತ್ಪ್ರಾಚಾರೀನ್ಮ ಆಹುತೀರ್ಮೇಽಹೌಷೀ-
ದಿತ್ಯಧ್ವರ್ಯವೇ ದಕ್ಷಿಣಾ ನೀಯಂತ ಉದಗಾಸೀನ್ಮ ಇತ್ಯು-
ದ್ಗಾತ್ರೇಽನ್ವವೋಚನ್ಮೇಽಶಂಸೀನ್ಮೇಽಯಾಕ್ಷೀನ್ಮ ಇತಿ ಹೋತ್ರೇ
ಕಿಂಸ್ವಿದೇವ ಚಕ್ರುಷೇ ಬ್ರಹ್ಮಣೇ ದಕ್ಷಿಣಾ ನೀಯಂತೇಽಕೃತ್ವಾಽಽ
ಹೋಸ್ವಿದೇವ ಹರತಾ ಇತಿ ॥

ಅಥ ಬ್ರಹ್ಮಣಃ ಕಾಂಶ್ಚಿತ್ಕರ್ತವ್ಯವಿಶೇಷಾನ್ವಿಧಾತುಂ ಚೋದ್ಯಮುದ್ಭಾವಯತಿ ತತ್ತ-ಸ್ಮಿನ್ ಬ್ರಹ್ಮಣಿ ಚೋದ್ಯಮಾಹುಃ । ಕಿಂ ಚೋದ್ಯಮಿತಿತದುಚ್ಯತೇ । ಯಜಮಾನೇನಾಧ್ವರ್ಯವೇ ಯದಾ ದಕ್ಷಿಣಾ ನೀಯಂತೇ ಪ್ರದೀಯಂತೇ ತದಾನೀಂ ಯಜಮಾನಸ್ಯಾಯಮಭಿಪ್ರಾಯಃ—

ಅಸಾವಧ್ವರ್ಯುರ್ಮೇ ಮದರ್ಥಂ ಗ್ರಹಾನೈಂದ್ರವಾಯವಾದೀನಗ್ರಹೀತ್ । ತಥಾ ಮೇ ಮದರ್ಥಂ ಪ್ರಾಚಾರೀತ್, ಗ್ರಹಪ್ರಚಾರಂ ಕೃತವಾನ್ । ತಥಾ ಮೇ ಮದರ್ಥಮಾಹುತೀರಹೌಷೀತ್, ಹುತವಾನಿತಿ । ಯದೋದ್ಗಾತ್ರೇ ದಕ್ಷಿಣಾ ನೀಯಂತೇ ತದಾನೀಮಯಮಭಿಪ್ರಾಯಃ— ಅಸಾವುದ್ಗಾತಾ ಮೇ ಮದರ್ಥಮುದಗಾಸೀತ್, ಔದ್ಗಾತ್ರಂ ಕೃತವಾನಿತಿ । ಯದಾ ಹೋತ್ರೇ ದಕ್ಷಿಣಾ ನೀಯಂತೇ ತದಾನೀಮಯಮಭಿಪ್ರಾಯಃ— ಅಯಂ ಹೋತಾ ಮೇ ಮದರ್ಥಮನ್ವವೋಚತ್ಪುರೋನುವಾಕ್ಯಾದೀನಾಮನುವಚನಂ ಕೃತವಾನ್ । ತಥಾ ಮೇ ಮದರ್ಥಮಶಂಸೀತ್ । ಶಂಸನಂ ಕೃತವಾನ್ । ತಥಾ ಮೇ ಮದರ್ಥಮಯಾಕ್ಷೀತ್ ಯಾಜ್ಯಾಂ ಪಠಿತವಾನಿತಿ । ಏವಂ ತೇನ ತೇನ ಕೃತಂ ಕಾರ್ಯಂ ಸ್ಮೃತ್ವಾ ಯಸ್ಮಾದ್ದಕ್ಷಿಣಾಂ ದದಾತಿ ತಸ್ಮಾದ್ಬ್ರಹ್ಮಣೇಽಪಿ ತತ್ಕೃತಂ ಕಾರ್ಯಂ ಸ್ಮೃತ್ವಾ ದಕ್ಷಿಣಾ ದಾತವ್ಯಾ । ತಥಾ ಸತಿ ಕಿಂಸ್ವಿದೇವ ಕಿಂ ನಾಮ ಕಾರ್ಯಂ ಚಕೃ(ಕ್ರು)ಷೇ ಕೃತವತೇ ಬ್ರಹ್ಮಣೇ ಯಜಮಾನೇನ ದಕ್ಷಿಣಾ ನೀಯಂತ ಆಹೋಸ್ವಿದಕೃತ್ವೈವ । ಅಥವಾ ಕಿಮಪಿ ಕಾರ್ಯಮಕೃತ್ವಾ ಹರತಾ ಏವ ಬ್ರಹ್ಮಾ ದಕ್ಷಿಣಾ ಹರೇತ । ಏತಚ್ಚಾಯುಕ್ತಮಿತಿ ಚೋದ್ಯಂ ॥

ಬ್ರಹ್ಮನೆಂಬ ಋತ್ವಿಜನು ಮಾಡಬೇಕಾದ ಒಂದು ವಿಶೇಷ ಕರ್ತವ್ಯವನ್ನು ತಿಳಿಸುತ್ತಾರೆ. ಈ ಬ್ರಹ್ಮನೆಂಬ ಋತ್ವಿಜನ ವಿಷಯದಲ್ಲಿ ಒಂದು ವಿಶೇಷಸಂಗತಿ ಇರುವುದು. ಏನೆಂದರೆ, ಅಧ್ವರ್ಯುವೆಂಬ ಋತ್ವಿಜನಿಗೆ ಯಜ್ಞದಲ್ಲಿ ಮಾಡಿದ ಕೆಲಸ ಕಾರ್ಯಗಳಿಗಾಗಿ ದಕ್ಷಿಣೆಯನ್ನು ತೆಗೆದುಕೊಂಡು ಹೋಗಿ ಕೊಡುವಾಗ ಯಜಮಾನನ ಮನಸ್ಸಿನಲ್ಲಿ ಈ ರೀತಿಯಾದ ಅಭಿಪ್ರಾಯವಿರುವುದು. ಈ ಅಧ್ವರ್ಯುವು ಈ ಯಜ್ಞದಲ್ಲಿ ನನಗೋಸ್ಕರ ಐಂದ್ರವಾಯವಾದಿಗ್ರಹಗಳನ್ನು ಸ್ವೀಕರಿಸಿರುವನು. ಮತ್ತು ನನಗಾಗಿಯೇ ಗ್ರಹಪ್ರಚಾರವನ್ನೂ ಮಾಡಿರುವನು. ನನಗಾಗಿಯೇ ಹೋಮಾದಿಗಳನ್ನೂ ಹೋಮಮಾಡಿರುವನು. ಉದ್ಗಾತೃವೆಂಬ ಋತ್ವಿಜನಿಗೆ ದಕ್ಷಿಣೆಯನ್ನು ಕೊಡುವಾಗ ಯಜಮಾನನ ಅಭಿಪ್ರಾಯವು ಹೀಗಿರುವುದು. ಈ ಉದ್ಗಾತೃವೆಂಬ ಋತ್ವಿಜನು ನನಗೋಸ್ಕರ ಔದ್ಗಾತೃವಿನ ಕರ್ತವ್ಯವನ್ನು ಮಾಡಿ ಸಾಮವೇದಗಾನಾದಿಗಳನ್ನು ಮಾಡಿರುವನು. ಹಾಗೆಯೇ ಈ ಹೋತೃವೆಂಬ ಋತ್ವಿಜನು ನನಗಾಗಿಯೇ ಪುರೋನುವಾಕ್ಯ ಮೊದಲಾದ ಮಂತ್ರಗಳನ್ನು ಆಗಾಗ ಪಠಿಸಿರುವನು. ಮತ್ತು ನನಗಾಗಿಯೇ ಯಾಜ್ಯಾದಿಮಂತ್ರಗಳನ್ನು ಹೋಮಾರ್ಥವಾಗಿ ಪಠಿಸಿರುವನು. ಈ ರೀತಿಯಾಗಿ ಆಯಾ ಋತ್ವಿಜರಿಗೆ ದಕ್ಷಿಣೆಯನ್ನು ಕೊಡುವಾಗ ಅವರವರು ಮಾಡಿದ ಕಾರ್ಯಗಳನ್ನು ಮನಸ್ಸಿನಲ್ಲಿ ಚಿಂತಿಸಿ ದಕ್ಷಿಣಾದಿಗಳನ್ನು ಕೊಡುವನು. ಅದರಂತೆ ಬ್ರಹ್ಮನೆಂಬ ಋತ್ವಿಜನಿಗೂ ಅವನು ಮಾಡಿದ ಕರ್ತವ್ಯವನ್ನು ಯೋಚಿಸಿ ದಕ್ಷಿಣೆಯನ್ನು ಕೊಡಬೇಕು. ಆದರೆ ಈ ಬ್ರಹ್ಮನು ಮಾಡಿರುವ ಕಾರ್ಯವಾದರೂ ಏನು ಇವನು ಮುಖ್ಯವಾದ ಕಾರ್ಯವನ್ನೇನೂ ಮಾಡಿದಂತಿಲ್ಲ. ಏನೂ ಮಾಡದೆ ಸುಮ್ಮನೆ ದಕ್ಷಿಣೆಯನ್ನು ಮಾತ್ರ ತೆಗೆದುಕೊಳ್ಳುವನು. ಇದು ಅನ್ಯಾಯವಲ್ಲವೇ ಎಂದು ಮನಸ್ಸಿನಲ್ಲಿ ಆಶರ್ಯವನ್ನು ವ್ಯಕ್ತಪಡಿಸುವನು.

**ಯಜ್ಞಸ್ಯ ಹೈವ ಭಿಷಗ್ಯದ್ಬ್ರಹ್ಮಾ ಯಜ್ಞಾಯೈವ ತದ್ಭೇಷಜಂ ಕೃತ್ವಾ ಹರತಿ ॥**

ತಸ್ಯೋತ್ತರಮಾಹ— ಯೋ ಬ್ರಹ್ಮಾಽಸ್ತಿ ಏಷ ಯಜ್ಞಸ್ಯ ಭಿಷಕ್ ಚಿಕಿತ್ಸಕಃ । ತತ್ತಸ್ಮಾತ್ಕಾರಣಾದ್ಯಜ್ಞಾಯೈವ ಭೇಷಜಂ ಕೃತ್ವಾ ಯಜ್ಞಸ್ಯಾಂಗವೈಕಲ್ಯರೋಗಂ ಶಮಯಿತ್ವಾ ದಕ್ಷಿಣಾಂ ಹರತಿ । ತಸ್ಮಾದ್ಧೋತ್ರಾದಿವದುಪಕಾರಿತ್ವಾದಯಂ ದಕ್ಷಿಣಾಯಾ ಯೋಗ್ಯ ಏವ ॥

ಇದಕ್ಕೆ ಉತ್ತರವನ್ನು ಹೇಳುವರು. ಈ ಬ್ರಹ್ಮನೆಂಬ ಋತ್ವಿಜನು ಯಜ್ಞದಲ್ಲಿ ನಡೆಯುವ ಕಾರ್ಯಕಲಾಪಗಳಿಗೆ (ಭಿಷಕ್) ಚಿಕಿತ್ಸಕನಂತಿರುವನು. ಆದ್ದರಿಂದ ಯಜ್ಞದಲ್ಲಿ ಸಂಭವಿಸುವ ಲೋಪದೋಷಾದಿಗಳನ್ನು ತಕ್ಕ ಚಿಕಿತ್ಸೆಯಿಂದ (ಪ್ರಾಯಶ್ಚಿತ್ತಾದಿಗಳಿಂದ) ಸರಿಪಡಿಸಿ ಅದಕ್ಕಾಗಿ ತನಗೆ ಬರಬೇಕಾದ ದಕ್ಷಿಣಾದಿಗಳನ್ನು ಸ್ವೀಕರಿಸುವನು. ಆದ್ದರಿಂದ ಈ ಬ್ರಹ್ಮನು ಹೋತ್ರಾದಿ ಋತ್ವಿಜರಂತೆಯೇ ದಕ್ಷಿಣಾದಿಗಳಿಗೆ ಅರ್ಹನಾಗಿರುವನು.

ಅಥೋ ಯದ್ಭೂಯಿಷ್ಠೇನೈವ ಬ್ರಹ್ಮಣಾ ಛಂದಸಾಂ ರಸೇನಾಽಽರ್ತ್ವಿಜ್ಯಂ ಕರೋತಿ ಯದ್ಬ್ರಹ್ಮಾ ತಸ್ಮಾದ್ಬ್ರಹ್ಮಾಽರ್ಧಭಾಗ್ಘ ವಾ ಏಷ ಇತರೇಷಾಮೃತ್ವಿಜಾಮಗ್ರ ಆಸ ಯದ್ಬ್ರಹ್ಮಾಽರ್ಧಮೇವ ಬ್ರಹ್ಮಣ ಆಸಾರ್ಧಮಿತರೇಷಾಮೃತ್ವಿಜಾಂ ॥

ಪಕ್ಷಾಂತರರೂಪೇಣ ಬ್ರಹ್ಮಣೋ ದಕ್ಷಿಣಾಧಿಕ್ಯಂ ದರ್ಶಯತಿ — ಅಪಿ ಯೋ ಬ್ರಹ್ಮಾಽಸ್ತಿ ಭೂಯಿಷ್ಠೇನೈನಾತಿಬಹುಲೇನೈವ ಛಂದಸಾಂ ರಸೇನ ವೇದಸಾರಭೂತೇನ ವ್ಯಾಹೃತಿಪ್ರಣವರೂಪೇಣ ಬ್ರಹ್ಮಣಾ ಮಂತ್ರೇಣೈವ ಯದ್ಯಸ್ಮಾತ್ಕಾರಣಾದಾರ್ತ್ವಿಜ್ಯಂ ಕರೋತಿ ತಸ್ಮಾತ್ಕಾರಣಾದುಪಕಾರಬಾಹುಲ್ಯಾದಯಂ ಬ್ರಹ್ಮೇತಿವಿಶಿಷ್ಟೇನ ನಾಮ್ನಾ ವ್ಯವಹ್ರಿಯತ ಇತಿ ಶೇಷಃ । ಕಿಂಚ ಯೋ ಬ್ರಹ್ಮಾಸ್ತಿ ಏಷೋಽಗ್ರೇ ಪ್ರಥಮಮೇವೇತರೇಷಾಮೃತ್ವಿಜಾಮರ್ಧಭಾಗ್ಘ ವಾ ಅರ್ಧಪ್ರಯೋಗಂ ಭಜತ್ಯೇವ । ವೇದತ್ರಯೇ ಯಾವಾನ್ಪ್ರಯೋಗೋ ವಿತತೋಽಸ್ತಿ ಸ ಚ ಸರ್ವೋಽಪೀತರೈಶ್ಚರ್ತ್ವಿಗ್ಭಿರ್ವಾಚಾಽನುಷ್ಠೀಯತೇ । ಬ್ರಹ್ಮಣಾ ತು ಮನಸೇತ್ಯೇತಾವಾನೇವ ವಿಶೇಷಃ । ಪ್ರಯೋಗಸ್ತೂಭಯತ್ರ ಸಮಾನ ಏವ । ಅಯಮೇವಾರ್ಥೋಽರ್ಧಮೇವೇತ್ಯಾದಿನಾ ಸ್ಪಷ್ಟೀಕ್ರಿಯತೇ । ಬ್ರಹ್ಮಣೋ ಯಜ್ಞಸ್ಯಾರ್ಧಮೇವ ಮನಸಾನುಷ್ಠೀಯಮಾನಮಿತರೇಷಾಮೃತ್ವಿಜಾಂ ಹೋತ್ರಾದೀನಾ ವಾಚಾಽನುಷ್ಠೀಯಮಾನಾರ್ಧಂ ತಸ್ಮಾದುಪಕಾರಬಾಹುಲ್ಯಂ ಸಿದ್ಧಮ್ ॥

ಬ್ರಹ್ಮನೆಂಬ ಋತ್ವಿಜನಿಗೆ ಕೊಡಬೇಕಾದ ದಕ್ಷಿಣಾದ್ರವ್ಯದ ವಿಷಯವನ್ನು ಪ್ರಕಾರಾಂತರವಾಗಿ ವಿವರಿಸುವರು. ಈ ಬ್ರಹ್ಮನೆಂಬ ಋತ್ವಿಜನು ಅನೇಕ ಛಂದಸ್ಸುಗಳ ಸಾರಭೂತವಾದ ವ್ಯಾಹೃತಿ ಮೊದಲಾದವುಗಳಿಂದ ಪ್ರಯೋಗಾದಿಗಳನ್ನು ನೆರವೇರಿಸುತ್ತಾನೆ. ಆದ್ದರಿಂದ ಈ ಋತ್ವಿಜನಿಗೆ ಬ್ರಹ್ಮನೆಂಬ ಮರ್ಯಾದಸೂಚಕವಾದ ಅರ್ಥವು ಅನ್ವಯಿಸುವುದು. ಇದಲ್ಲದೆ ಈ ಬ್ರಹ್ಮನು ಇತರ ಋತ್ವಿಜರು ಮಾಡುವ ಕಾರ್ಯಾದಿಗಳಲ್ಲಿ ಅರ್ಧಭಾಗವನ್ನು ಇವನೇ ಮಾಡುವನು. ಮೂರು ವೇದಗಳಲ್ಲಿ ಇತರ ಋತ್ವಿಕ್ಕುಗಳು ಅನೇಕ ಮಂತ್ರಗಳನ್ನು ಪಠಿಸಿ ಕಾರ್ಯಕಲಾಪಗಳನ್ನು ನೆರವೇರಿಸುವರು. ಆದರೆ ಬ್ರಹ್ಮನೊಬ್ಬನೇ ಈ ಋತ್ವಿಜರು ಪಠಿಸುವ ಮಂತ್ರಗಳನ್ನೆಲ್ಲಾ ಮನಸ್ಸಿನಲ್ಲಿಯೇ ಉಚ್ಚರಿಸಿ ಅರ್ಧಪ್ರಯೋಗವನ್ನೆಲ್ಲಾ ಮಾಡುವನು. ಪ್ರಯೋಗವನ್ನು ನೆರವೇರಿಸುವುದರಲ್ಲಿ ಈ ಬ್ರಹ್ಮನು ಇತರ ಎಲ್ಲಾ ಋತ್ವಿಕ್ಕುಗಳಿಗೆ ಸಮನಾಗಿಯೇ ಮಾಡುವನು. ಇತರ ಋತ್ವಿಜರೆಲ್ಲರೂ ಸೇರಿ ಮಾಡುವ ಕಾರ್ಯಕಲಾಪಗಳನ್ನೆಲ್ಲಾ ಈ ಬ್ರಹ್ಮನೊಬ್ಬನೇ ಮನಸ್ಸಿನಲ್ಲಿಯೇ ನೆರವೇರಿಸುವುದರಿಂದ ಯಜ್ಞಪ್ರಯೋಗ ಅರ್ಧಭಾಗವನ್ನೆಲ್ಲಾ ಈ ಬ್ರಹ್ಮನೊಬ್ಬನೇ ಮಾಡಿದ ಹಾಗಾಯ್ತದು. ಆದ್ದರಿಂದ ಈ ಬ್ರಹ್ಮನ ಕರ್ತವ್ಯವು ಇತರ ಎಲ್ಲಾ ಋತ್ವಿಜರಿಗಿಂತ ಅತಿಶಯವಾಗಿರುವುದು.

ತಸ್ಮಾದ್ಯದಿ ಯಜ್ಞ ಋಕ್ತ ಆರ್ತಿಃ ಸ್ಯಾದ್ಯದಿ ಯಜುಷ್ಟೋ ಯದಿ ಸಾಮತೋ ಯದ್ಯವಿಜ್ಞಾತಾ ಸರ್ವವ್ಯಾಪದ್ವಾ ಬ್ರಹ್ಮಣ ಏವ ನಿವೇದಯಂತೇ ತಸ್ಮಾದ್ಯದಿ ಯಜ್ಞ ಋಕ್ತ ಆರ್ತಿರ್ಭವತಿ ಭೂರಿತಿ ಬ್ರಹ್ಮಾ ಗಾರ್ಹಪತ್ಯೇ ಜುಹುಯಾದ್ಯದಿ ಯಜುಷ್ಟೋ ಭುವ ಇತ್ಯಾಗ್ನೀಧ್ರೀಯೇಽನ್ವಾಹಾರ್ಯಪಚನೇ ವಾ ಹವಿರ್ಯಜ್ಞೇಷು ಯದಿ ಸಾಮತಃ ಸ್ವರಿತ್ಯಾಹವನೀಯೇಯದ್ಯವಿಜ್ಞಾತಾ ಸರ್ವವ್ಯಾ-ಪದ್ವಾ ಭೂರ್ಭುವಃಸ್ವರಿತಿ ಸರ್ವಾ ಅನುದ್ರುತ್ಯಾಽಽಹವನೀಯ ಏವ ಜುಹುಯಾತ್ ॥

ಪೂರ್ವವದ್ವ್ಯಾಹೃತಿ ಪ್ರಾಯಶ್ಚಿತ್ತಮುಕ್ತಂ ತತ್ಕರ್ತೃತ್ವಂ ಬ್ರಹ್ಮಣೋವಿಧತ್ತೇ—ತಸ್ಮಾ-ದ್ಬ್ರಹ್ಮಾ ಯಜ್ಞಭಾರಮರ್ಧಂ ವಹತಿ । ಭಿಷಕ್ತ್ವೇನ ಯಜ್ಞವೈಕಲ್ಯಂ ಪರಿಹರ್ತುಂ ಚ ಶಕ್ನೋತಿ ತಸ್ಮಾದ್ಯದಿ ಋಗಾದಿಭ್ಯಃ ಕಿಂಚಿದ್ವೈಕಲ್ಯಂ ಭವೇತ್ತದಾನೀಮಿತರೇ ಸರ್ವೇ ತೇ ತಸ್ಮೈ ಬ್ರಹ್ಮಣ ಏವ ತದ್ವೈಕಲ್ಯಂ ನಿವೇದಯಂತೇ । ತಸ್ಮಾದಿತರೈರ್ನಿವೇದಿತತ್ವಾತ್ಸ ಬ್ರಹ್ಮಾ ಪೂರ್ವೋಕ್ತಪ್ರಕಾರೇಣ ತತ್ತತ್ಪ್ರಾಯಶ್ಚಿತ್ತಂ ಜುಹುಯಾತ್ ॥

ಹಿಂದೆ ಹೇಳಿದಂತೆ ವ್ಯಾಹೃತಿಗಳಿಂದ ಮಾಡಬೇಕಾದ ಪ್ರಾಯಶ್ಚಿತ್ತವು ಬ್ರಹ್ಮನು ನೆರವೇರಿಸಬೇಕಾದ ಕಾರ್ಯವೆಂದು ತಿಳಿಸುವರು. ಯಜ್ಞದಲ್ಲಿ ಅರ್ಧಭಾಗವನ್ನು ಬ್ರಹ್ಮನೇ ನೆರವೇರಿಸುವನು. ಎಂದರೆ ಋಗ್ವೇದ, ಯಜುರ್ವೇದ, ಸಾಮವೇದಾದಿಗಳಲ್ಲಿ ಯಾವ ವಿಧವಾದ ವೈಕಲ್ಯವುಂಟಾದರೂ ಅವುಗಳನ್ನೆಲ್ಲಾ ಸಂಬಂಧಪಟ್ಟ ಆಯಾ ಋತ್ವಿಜರು ಅವುಗಳನ್ನು ಬ್ರಹ್ಮನಿಗೆ ತಿಳಿಸುವರು. ಆಗ ಬ್ರಹ್ಮನು ಅವುಗಳನ್ನು ಸರಿಪಡಿಸುವನು. ಎಂದರೆ ಋಗ್ವೇದವಿಷಯದಲ್ಲಿ ಏನಾದರೂ ತಪ್ಪು ಸಂಭವಿಸಿದಲ್ಲಿ ಅದನ್ನು ಹೋತೃವು ಬ್ರಹ್ಮನಿಗೆ ವರದಿಮಾಡುವನು. ಆಗ ಬ್ರಹ್ಮನು ಗಾರ್ಹಪತ್ಯಾಗ್ನಿಯಲ್ಲಿ ಭೂಃಸ್ವಾಹಾ ಎಂದು ಹೋಮವನ್ನು ಮಾಡುವನು. ಯಜುರ್ವೇದದಲ್ಲಿ ತಪ್ಪುಗಳು ಸಂಭವಿಸಿದಲ್ಲಿ ಅಧ್ವರ್ಯುವು ಅವುಗಳನ್ನು ಬ್ರಹ್ಮನಿಗೆ ತಿಳಿಸುವನು. ಆಗ ಬ್ರಹ್ಮನು ಪೂರ್ವದಲ್ಲಿ ಆಗ್ನೀಧ್ರಿಯದಲ್ಲಿ ಅಥವಾ ಅನ್ವಾಹಾರ್ಯಪಚನವೆಂಬ ಅಗ್ನಿಕುಂಡದಲ್ಲಿ ಭುವಃಸ್ವಾಹಾ ಎಂದು ಹೋಮಮಾಡುವನು. ಮತ್ತು ಸಾಮವೇದವು ವೈಕಲ್ಯದಲ್ಲಿ ಸಂಭವಿಸಿದಲ್ಲಿ ಆಗ ಉದ್ಗಾತೃವೆಂಬ ಋತ್ವಿಜನು ಅವುಗಳನ್ನು ಬ್ರಹ್ಮನಿಗೆ ನಿವೇದಿಸಿದನು. ಆಗ ಬ್ರಹ್ಮನು ಆಹವನೀಯಾಗ್ನಿಯಲ್ಲಿ ಸ್ವಃ(ಸುವಃ) ಸ್ವಾಹಾ ಎಂದು ಹೋಮಮಾಡುವನು. ಇದಲ್ಲದೆ ಇತರ ಸಂದರ್ಭಗಳಲ್ಲಿ ತಿಳಿಯದೆ ಸಂಭವಿಸಬಹುದಾದ ತಪ್ಪುಗಳ ಪರಿಹಾರಕ್ಕಾಗಿ ಬ್ರಹ್ಮನು ಆಹವನೀಯಾಗ್ನಿಯಲ್ಲಿ ಭೂರ್ಭುವಃಸ್ವಃಸ್ವಾಹಾ ಎಂದು ಹೋಮಮಾಡುವನು. ಈ ವಿಧವಾದ ವ್ಯಾಹೃತಿಹೋಮವೇ ಯಜ್ಞದಲ್ಲಿ ಸಂಭವಿಸುವ ವೈಕಲ್ಯಗಳಿಗೆ ಪ್ರಾಯಶ್ಚಿತ್ತವು.

ಸ ಪ್ರಸ್ತೋತೋಪಾಕೃತೇ ಸ್ತೋತ್ರ ಆಹ ಬ್ರಹ್ಮನ್‌ಸ್ತೋಷ್ಯಾಮಃ ಪ್ರಶಾ-ಸ್ತರಿತಿ ಸ ಭೂರಿತಿ ಬ್ರಹ್ಮಾ ಪ್ರಾತಃಸವನೇ ಬ್ರೂಯಾದಿಂದ್ರವಂತಃ ಸ್ತುಧ್ವಮಿತಿ ಭುವ ಇತಿ ಮಾಧ್ಯಂದಿನೇ ಸವನೇ ಬ್ರೂಯಾದಿಂದ್ರ-

ವಂತಃ ಸ್ತುಧ್ವಮಿತಿ ಸ್ವರಿತಿ ತೃತೀಯಸವನೇ ಬ್ರೂಯಾದಿಂದ್ರ-ವಂತಃ ಸ್ತುಧ್ವಮಿತಿ ಭೂರ್ಭುವಃ ಸ್ವರಿತ್ಯುಕ್ಥೇವಾಽತಿರಾತ್ರೇ ವಾ ಬ್ರೂಯಾದಿಂದ್ರವಂತಃ ಸ್ತುಧ್ವಮಿತಿ ॥

ಬ್ರಹ್ಮಣಃ ಕರ್ತವ್ಯಾಂತರಂ ದರ್ಶಯತಿ-ಅಧ್ವರ್ಯುಣಾ ಸ್ತೋತ್ರ ಉಪಾಕೃತೇ ಪ್ರಾರಬ್ಧಮನುಜ್ಞಾತೇ ಸತಿ ಪ್ರಸ್ತೋತಾ ಸ್ತೋತ್ರಸಾಧನೇ ಸಾಮ್ನಿ ಪ್ರಥಮಸ್ಯ ಪ್ರಸ್ತಾವಭಾಗಸ್ಯ ಪ್ರಾ(ಗಾ)ತಾ ಪ್ರಸ್ತೋತೃನಾಮಕ ಋತ್ವಿಕ್‌ಬ್ರಹ್ಮಾಣಂ ಪ್ರತ್ಯನುಜ್ಞಾಮನೇನ ಮಂತ್ರೇಣ ಪ್ರಾರ್ಥಯೇತ್ । ಬ್ರಹ್ಮನ್ನಿತ್ಯಾದಿರ್ಮಂತ್ರಃ । ಹೇ ಪ್ರಶಾಸ್ತರಸ್ಮಾಕಂ ಪ್ರಶಾತ(ಸ) ನಸ್ಯಾಽಽಜ್ಞಾಪನಸ್ಯ ಕರ್ತರ್ಹೇ ಬ್ರಹ್ಮಂಸ್ತ್ವದನುಜ್ಞಯಾ ವಯಂ ಸ್ತೋಷ್ಯಾಮ ಇತಿ । ತತಸ್ತೇನ ಪ್ರಾರ್ಥಿತೋ ಬ್ರಹ್ಮಾ ಭೂರಿತ್ಯೇತಾಂ ಪ್ರಥಮಾಂ ವ್ಯಾಹೃತಿಮುಕ್ತ್ವಾ ಹೇ, ಉದ್ಗಾತಾರ ಇಂದ್ರವಿಷಯಸ್ತುತಿಪರಾಃ ಸಂತಃ ಸ್ತುಧ್ವಂ ಸ್ತೋತ್ರಂ ಕುರುತೇತಿ ಬ್ರೂಯಾತ್ । ಏವಮಿತರತ್ರಾಪಿ ಯೋಜ್ಯಮ್ ॥

ಬ್ರಹ್ಮನೆಂಬ ಋತ್ವಿಜನು ಮಾಡಬೇಕಾದ ಕರ್ತವ್ಯವನ್ನು ತಿಳಿಸುವರು. ಅಧ್ವರ್ಯುವು ಪ್ರಸ್ತೋತೃವನ್ನುದ್ದೇಶಿಸಿ ಸ್ತೋತ್ರಮಾಡಲು ಅನುಜ್ಞೆಯನ್ನೀಯಲು ಆಗ ಪ್ರಸ್ತೋತೃವು ಸ್ತೋತ್ರಸಾಧನವಾದ ಸಾಮಮಂತ್ರದಲ್ಲಿ ಪ್ರಸ್ತಾವಭಾಗವನ್ನು ಗಾನಮಾಡಲು ಬ್ರಹ್ಮನೆಂಬ ಋತ್ವಿಜನನ್ನು ಪ್ರಾರ್ಥಿಸಬೇಕು. ಬ್ರಹ್ಮನ್ ಎಂಬುದೇ ಆ ಮಂತ್ರವು. ಎಲೈ ಪ್ರಶಾಸ್ತೃವೇ ಬ್ರಹ್ಮನ (ನಿನ್ನ) ಅನುಜ್ಞೆಯಿಂದ ನಾವು ಸ್ತೋತ್ರವನ್ನು ಗಾನಮಾಡುತ್ತೇವೆ ನಮಗೆ ಅನುಜ್ಞೆಯನ್ನು ಕೊಡು ಎಂದು ಪ್ರಾರ್ಥಿಸಲು ಆಗ ಬ್ರಹ್ಮನು ಉದ್ಗಾತೃ ಮೊದಲಾದವರಿಂದ ಪ್ರಾರ್ಥಿತನಾಗಿ ಎಲೈ ಉದ್ಗಾತೃ ಮೊದಲಾದ ಋತ್ವಿಜರೇ, ನೀವು ಇಂಥ ವಿಷಯವಾದ ಸ್ತೋತ್ರಗಳಲ್ಲಿ ಮನಸ್ಸನ್ನಿಟ್ಟು ಗಾನಮಾಡಿರಿ. ಭೂಃ ಎಂದು ಪ್ರಾತಸ್ಸವನಕಾಲದಲ್ಲಿ ಹೇಳಲು ಅದರಂತೆ ಉದ್ಗಾತೃ ಮೊದಲಾದವರು ಸ್ತೋತ್ರವನ್ನು ಗಾನಮಾಡುವರು. ಅದರಂತೆ ಬ್ರಹ್ಮನು ಮಾಧ್ಯಂದಿನಸವನಕಾಲದಲ್ಲಿ ಭುವಃ ಎಂದೂ ತೃತೀಯ ಸವನಕಾಲದಲ್ಲಿ ಸ್ವಃ ಎಂದೂ ಹೇಳಿ ಇಂದ್ರನನ್ನು ಧ್ಯಾನಿಸುತ್ತಾ ಮಂತ್ರವನ್ನು ಪಠಿಸಬೇಕೆಂದು ಹೇಳಲು ಅದರಂತೆ ಋತ್ವಿಜರು ಆರೀತಿ ಮಾಡುವರು.

ಸ ಯದಾಹೇಂದ್ರವಂತಃ ಸ್ತುಧ್ವಮಿತ್ಯೈಂದ್ರೋ ವೈ ಯಜ್ಞ ಇಂದ್ರೋ ಯಜ್ಞಸ್ಯ ದೇವತಾ ಸೇಂದ್ರಮೇವ ತದುದ್ಗೀಥಂ ಕರೋತೀಂದ್ರಾನ್ಮಾ ಗಾದಿಂದ್ರವಂತಃ ಸ್ತುಧ್ವಮಿತ್ಯೇವೈನಾಂಸ್ತದಾಹ ತದಾಹ ॥

ಬ್ರಹ್ಮಣಾ ಪ್ರಯುಕ್ತಸ್ಯಾನುಜ್ಞಾನಮಂತ್ರಸ್ಯಾಭಿಪ್ರಾಯಂ ದರ್ಶಯತಿ—ಸ ಬ್ರಹ್ಮೇಂದ್ರವಂತಃ ಸ್ತುಧ್ವಮಿತಿ ಯದ್ವಾಕ್ಯಮಾಹ ತಸ್ಯಾಭಿಪ್ರಾಯ ಉಚ್ಯತೇ । ಯಜ್ಞಃ ಸೋಮಯಾಗ ಐಂದ್ರೋ ವಾ ಇಂದ್ರಸಂಬಂಧ ಏವ । ಇಂದ್ರೋಹಿ ತಸ್ಯ ಯಜ್ಞಸ್ಯ ದೇವತಾಽತಸ್ತದುದ್ಗೀಥಂ ಸಾಮಗೈಃ ಕ್ರಿಯಮಾಣಮುದ್ಗಾನಂ ಸೇಂದ್ರಮಿಂದ್ರಸಹಿತಮೇವ ಕರೋತಿ । ಇಂದ್ರಮುದ್ಗೀ-

**ಥಮಿಂದ್ರಾನ್ನಾಗಾನ್ಮಾಽಪಗಚ್ಛತು। ತಸ್ಮಾದ್ಧೇ, ಉದ್ಗಾತಾರೋ ಯೂಯಮಿಂದ್ರವಂತ ಇಂದ್ರ-ವಿಷಯತಾತ್ಪರ್ಯವಂತ ಏವಂ ಭೂತ್ವಾ ಸ್ತುಧ್ವಮಿತ್ಯನೇನೈವ ಪ್ರಕಾರೇಣೈನಾನುದ್ಗಾತೄನ್ಪ್ರತಿ ಬ್ರಹ್ಮಾ ತದ್ವಾಕ್ಯಮಾಹ। ಅಭ್ಯಾಸೋಽಧ್ಯಾಯಪರಿಸಮಾಪ್ತ್ಯರ್ಥಃ ॥**

ಬ್ರಹ್ಮನು ಋತ್ವಿಜರಿಗೆ ಮಂತ್ರಪಠನಕ್ಕಾಗಿ ಅನುಜ್ಞೆಮಾಡಿದ ಮಂತ್ರದ ಅಭಿಪ್ರಾಯವನ್ನು ತಿಳಿಸುವರು. ಬ್ರಹ್ಮನು ಉದ್ಗಾತೃ ಮೊದಲಾದವರನ್ನುದ್ದೇಶಿ—ಎಲೈ ಉದ್ಗಾತೃಗಳೇ (ಸಾಮಗಾನಮಾಡುವವರೇ) ನೀವು ಮನಸ್ಸಿನಲ್ಲಿ ಇಂದ್ರನನ್ನು ಧ್ಯಾನಿಸುತ್ತಾ ಸಾಮಮಂತ್ರದಿಂದ ಗಾನಮಾಡಿರಿ. ಈ ಇಂದ್ರನು ಸೋಮಯಾಕ್ಕೆ ಅಧಿಪತಿಯು. ಆದ್ದರಿಂದ ಈ ಯಾಗವು ಇಂದ್ರಸಂಬಂಧವೇ ಆಗಿರುವುದು. ಇಂದ್ರನು ಈ ಯಜ್ಞಕ್ಕೆ ಅಧಿದೇವತೆಯಾಗಿರುವುದರಿಂದ ಈ ಯಜ್ಞದಲ್ಲಿ ಇಂದ್ರನನ್ನು ಗಾನಗಳಿಂದ ಸಂತೋಷಪಡಿಸುವುದು ಯುಕ್ತವಾಗಿಯೇ ಇದೆ. ಇಂದ್ರನನ್ನು ಸ್ತುತಿಸುವ ಈ ಗಾನವನ್ನು ಬಿಡಬೇಡಿರಿ. ಆದ್ದರಿಂದ ಎಲೈ ಗಾಯಕರೇ ನೀವು ಗಾನಗಳಿಂದ ಇಂದ್ರನನ್ನು ಮನಸ್ಸಿನಲ್ಲಿ ಸ್ತುತಿಸುತ್ತಾ ಸ್ತೋತ್ರಗಳಿಂದ ಗಾನಮಾಡಿರಿ. ಈರೀತಿಯಾಗಿ ಬ್ರಹ್ಮನೆಂಬ ಋತ್ವಿಜನು ಉದ್ಗೀತೃ ಮೊದಲಾದವರಿಗೆ ತಿಳಿಸಿ ಹೇಳುವನು. ಇಲ್ಲಿ ಅಧ್ಯಾಯಸಮಾಪ್ತಿಯನ್ನು ಸೂಚಿಸುವುದಕ್ಕಾಗಿ ಅಧ್ಯಾಯದ ಕೊನೆಯ ತದಾಹ ಎಂಬುದನ್ನು ಎರಡಾವರ್ತಿ ಹೇಳಲಾಗಿದೆ.

*English Translation*

**(On the work done by the Brahmha. He permits the chanters to chant.)**

They say, Waen the socrificer has the reward (dakshina) given to the Adhvaryu, he thinks, "This priest has seized with his hands my Grahas (Soma cups,) he has walked for me, he has sacrificed for me." And when he has the reward given to the Udgatar, he thinks, "he has sung for me;" and when he has the reward given to the Hotar, he thinks, "this priest has spoken for me the Anuvakya, and the Yajyas, and repeated the Shastras." But on account of what work done is the Brahma priest to receive his reward? Shall he receive the reward, thinks the sacrificer, without having done any work whatever? Yes he receives it for his medical attendance upon the sacrifice, for the Brahma is the physician of the sacrifice, for the Brahma is the physician of the sacrifice (which is regarded as man). Because of the Brahma priest performing his priestly function with the Brahma, which is the quintessence of the metres. He does one-half of the work, for he was at the head of the other priests, and the others (Abhvaryu, Hotar, Udgatar) do the other half. (The Brahma priests tell if any mistake has been committed in the sacrifice, and perform the Prayaschittas, as described above.)

The Prastotar says, after the order for chanting the Stotram has been given, "O Brahma, we shall now chant, our commanper!" The Brahma then shall say at the morning libation, "Bhut! filled with the thought of Indra, ye

may sing." At the midday libation he says, "Bhuvah! filled with the thought of Indra, ye may sing;" and at the evening libation, he says, "Svar! filled with the thought of Indra, ye may sing."

At the time of the Ukthya or Atiratra sacrifice, all the three great words, Bhir, Bhuvah, Svar, are required. If the Brahma says, "Filled with the thought of Indra, ye may sing." this means, that that the sacrifice is Indra's, for Indra is the deity of the sacrifice. By the words, "Filled with the thought of Indra," the Brahma priest connects the Udgitha the principal part of the chant with Indra. This saying of the Brahma means, "Do not leave Indra; filled with him, ye may sing." Thus he tells them.

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ಪಂಚವಿಂಶಾಧ್ಯಾಯೇ
ನವಮಃ ಖಂಡಃ ಸಮಾಪ್ತಃ

ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದಲ್ಲಿ
ಇಪ್ಪತ್ತೈದನೆಯ ಅಧ್ಯಾಯದಲ್ಲಿ ಒಂಬತ್ತನೆಯ ಖಂಡವು ಸಮಾಪ್ತವಾದುದು.

ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.



# ಅಥೈತರೇಯಬ್ರಾಹ್ಮಣೇ ಷಡ್ತ್ರಿಂಶಾಧ್ಯಾಯೇ ಪ್ರಥಮಃ ಖಂಡಃ

## ಇಪ್ಪತ್ತಆರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು



[ಗ್ರಾವಸ್ತುತ್ ಮತ್ತು ಸುಬ್ರಹ್ಮಣ್ಯ ಎಂಬ ಋತ್ವಿಜರ ಕರ್ತವ್ಯ ಕರ್ಮಗಳು.]

[ಗ್ರಾವಸ್ತುತ್ ಎಂಬ ಋತ್ವಿಜನ ಕರ್ತವ್ಯದ ವಿಷಯದಲ್ಲಿ ಪೂರ್ವೇತಿಹಾಸವು ಸರ್ಪಋಷಿ ಎಂದು ಹೆಸರಿನಿಂದ ಪ್ರಸಿದ್ಧನಾದ ಅರ್ಬುದಋಷಿಯ ವಿಷಯವು.]



ಅಥಾಗ್ನಿಹೋತ್ರಂ ಪಯಸಃ ಪ್ರಶಂಸಾ
ತದ್ದೋಹನಾಪತ್ತಿವಿನಿಷ್ಕೃತಿಶ್ಚ ॥
ತಸ್ಯ ಪ್ರಶಂಸಾಽಪ್ಯುದಿತೇ ಚ ಹೋಮೋ
ಬ್ರಹ್ಮರ್ತ್ವಿಜೋ ವ್ಯಾಹೃತಯೋಽಪ್ಯಧೀತಾಃ ॥ ೧ ॥

ದೇವಾ ಹ ವೈ ಸರ್ವಚರೌ ಸತ್ರಂ ನಿಷೇದುಸ್ತೇ ಹ ಪಾಪ್ಮಾನಂ ನಾಪಜಘ್ನಿರೇ ತಾನ್ಹೋವಾಚಾರ್ಬುದಃ ಕಾದ್ರವೇಯಃ ಸರ್ಪಋಷಿರ್ಮಂತ್ರಕೃದೇಕಾ ವೈ ವೋ ಹೋತ್ರಾಽಕೃತಾ ತಾಂ ವೋಽಹಂ ಕರವಾಣ್ಯಥ ಪಾಪ್ಮಾನಮಪಹನಿಷ್ಯಥ್ವ ಇತಿ ತೇ ಹ ತಥೇತ್ಯೂಚುಸ್ತೇಷಾಂ ಹ ಸ್ಮ ಸ ಮಧ್ಯಂದಿನೇ ಮಧ್ಯಂದಿನ ಏವೋಪೋದಾಸರ್ಪದ್ಗ್ರಾವ್ಣೋಽಭಿಷ್ಟೌತಿ ॥

ಬ್ರಹ್ಮಣಃ ಕರ್ತವ್ಯವಿಧಾನೇನ ಗ್ರಾವಸ್ತುದ್ಬುದ್ಧಿಸ್ಥಸ್ತಸ್ಯಾಗ್ನಿಷ್ಟೋಮೇ ಕರ್ತವ್ಯಂ ವಿಧಾತುಮುಪಾಖ್ಯಾನಮಾಹ— ಪುರಾ ಕದಾಚಿದ್ದೇವಾಃ ಸರ್ವಚರುನಾಮಕೇ ದೇಶವಿಶೇಷೇ ಸತ್ರಂ ಕಿಂಚಿದನುಷ್ಠಿತವಂತಃ । ತೇ ದೇವಾಸ್ತೇನ ಸತ್ರೇಣ ಸ್ವಕೀಯಂ ಪಾಪ್ಮಾನಂ ದಾರಿದ್ರ್ಯಹೇತುಂ ನಾಪಜಘ್ನಿರೇ ನ ನಾಶಿತವಂತಃ । ತಾನ್ಪಾಪಕ್ಷಯರಹಿತಾನ್ದೇವಾನರ್ಬುದನಾಮಕಃ ಕಶ್ಚಿದೃಷಿರಾಗತ್ಯೋವಾಚ । ಕೀದೃಶೋಽರ್ಬುದಃ ಕಾದ್ರವೇಯಃ ಕದ್ರುನಾಮಧಾರಿಣ್ಯಾಃ ಸ್ತ್ರಿಯಾಃ ಪುತ್ರಃ ಸರ್ಪಃ ಸರ್ಪಜಾತೀಯದೇಹಧಾರೀ, ಋಷಿರತೀಂದ್ರಿಯಾರ್ಥದ್ರಷ್ಟಾ ಮಂತ್ರಕೃತ್ಕರೋತಿಧಾತುಸ್ತತ್ರ ದರ್ಶನಾರ್ಥಃ । ಮಂತ್ರಸ್ಯ ಪ್ರೈತೇ ವದಂತು ಪ್ರ ವಯಂ ವದಾಮೇ-

ತ್ಯಾದಿಸೂಕ್ತಸ್ಯ ದ್ರಷ್ಟಾ । ತೇನಾರ್ಬುದೇನ ಕಿಮುಕ್ತಮಿತಿ ತದುಚ್ಯತೇ । ಹೇ ದೇವಾ ಏಕಾ ವೈ ವೋ ಹೋತ್ರ್ಯೈಕೈವ ಹೋತೃವೇದೋತ್ಪನ್ನಾ ಕ್ರಿಯಾ ವೋ ಯುಷ್ಮಾಕಮಕೃತಾ ನಾನುಷ್ಠಿತಾ ತದ್ವೈಕಲ್ಯೇನ ಪಾಪಕ್ಷಯೋ ನಾಽಽಸೀತ್ । ತಾಂ ಕ್ರಿಯಾಂ ವೋ ಯುಷ್ಮದರ್ಥಮಹಂ ಕರವಾಣ್ಯನಂತರಂ ಪಾಪ್ಮಾನಂ ಯೂಯಮಪಹನಿಷ್ಯಥ್ವ ಇತ್ಯೇತದೃಷಿವಾಕ್ಯಂ ದೇವಾ ಅಂಗೀಚಕ್ರುಸ್ತತಃ ಸೋಽರ್ಬುದಸ್ತೇಷಾಂ ದೇವಾನಾಂ ಸತ್ರೇ ಪ್ರತಿದಿನಂ ಮಾಧ್ಯಂದಿನಸಮಯ ಏವೋಪಸಮೀಪಮುತ್ಸುಕಃ ಸನ್ನಾಗಚ್ಛತ್ । ಆಗತ್ಯ ಚ ಯೇ ಸೋಮಾಭಿಷವಾರ್ಥಾ ಗ್ರಾವಾಣಃ ಪಾಷಾಣಾಃ ಸಂತಿ ತಾನ್ ಪೂರ್ವೋಕ್ತೇನ ಸೂಕ್ತೇನಾಭಿಷ್ಟೌತಿ ಅಭಿತಃ ಸ್ತುತಿಂ ಕೃತವಾನ್ ॥

ಬ್ರಹ್ಮನೆಂಬ ಋತ್ವಿಜನು ತನ್ನ ಕರ್ತವ್ಯವನ್ನು ನೆರವೇರಿಸುವಾಗ ಗ್ರಾವಸ್ತುತ್ ಎಂಬ ಋತ್ವಿಜನು ಅಗ್ನಿಷ್ಟೋಮ ಯಾಗದಲ್ಲಿ ಮಾಡುವ ಕರ್ತವ್ಯದ ವಿಷಯದಲ್ಲಿ ಒಂದು ಪೂರ್ವೇತಿಹಾಸವನ್ನು ತಿಳಿಸುವರು. ಪೂರ್ವದಲ್ಲಿ ಒಂದಾನೊಂದು ಸಮಯದಲ್ಲಿ ದೇವತೆಗಳು ಸರ್ಪಚರು ಎಂಬ ದೇಶದಲ್ಲಿ ಸತ್ರಯಾಗವನ್ನು ಮಾಡುತ್ತಿದ್ದರು. ಆ ಸತ್ರಯಾಗದಿಂದ ದೇವತೆಗಳ ಪಾಪಗಳಾಗಲಿ, ದರಿದ್ರವಾಗಲಿ ನಾಶವಾಗಲಿಲ್ಲ. ತಮ್ಮ ಪಾಪಗಳು ನಾಶವಾಗದಿರುವುದನ್ನು ನೋಡಿ ದೇವತೆಗಳು ಚಿಂತಾಕ್ರಾಂತರಾಗಿರಲು ಆಗ ಅರ್ಬುದ ಎಂಬ ಹೆಸರಿನ ಒಬ್ಬ ಋಷಿಯು ಅಲ್ಲಿಗೆ ಬಂದು ದೇವತೆಗಳನ್ನು ಕುರಿತು ಈರೀತಿ ಹೇಳಿದನು. ಈ ಅರ್ಬುದಋಷಿಯು ಯಾರೆಂದರೆ ಕದ್ರು ಎಂಬ ಹೆಸರಿನ ಸ್ತ್ರೀಯ ಪುತ್ರನು. ಆವನು ಸರ್ಪಜಾತೀಯ ದೇಹವನ್ನು ಧರಿಸಿರುವನು. ಈ ಋಷಿಯು **ಪ್ರೈತೇ ವದಂತು ಪ್ರವಯಂ ವದಾಮ** ಎಂಬ ಮಂತ್ರಕ್ಕೆ ದ್ರಷ್ಟೃವು. ಎಲೈ ದೇವತೆಗಳೇ, ನೀವು ಮಾಡುತ್ತಿರುವ ಈ ಯಜ್ಞದಲ್ಲಿ ಹೋತೃವೇದವಾದ ಋಗ್ವೇದಕ್ಕೆ ಸಂಬಂಧಪಟ್ಟ ಮುಖ್ಯವಾದ ಒಂದು ಕ್ರಿಯಾಕಲಾಪವನ್ನು ಮರವೆನಿಂದ ಮಾಡದೆ ಬಿಟ್ಟಿದ್ದೀರಿ. ಆ ಬಿಟ್ಟುಹೋದ ಕಾರ್ಯವನ್ನು ನಾನು ನಿಮಗೋಸ್ಕರ ಮಾಡುತ್ತೇನೆ. ಆದರಿಂದ ನಿಮ್ಮ ಪಾಪವು ಕ್ಷಯವಾಗುವುದು ಎಂದು ಹೇಳಲು ದೇವತೆಗಳು ಆ ಅರ್ಬುದಋಷಿಯ ವಾಕ್ಯವನ್ನು ಕೇಳಿ ಹಾಗೆಯೇ ಆಗಲೆಂದು ಒಪ್ಪಿದರು. ಅನಂತರ ಆ ಅರ್ಬುದಋಷಿಯು ಆ ದೇವತೆಗಳ ಯಜ್ಞಕ್ಕೆ ಮಾಧ್ಯಂದಿನಸವನಕಾಲಕ್ಕೆ ಸರಿಯಾಗಿ ಪ್ರತಿದಿನವೂ ಬರುತ್ತಿದ್ದನು. ಅದನಂತರ ಸೋಮಾಭಿಷವಾರ್ಥವಾಗಿ (ಸೋಮಲತೆಗಳನ್ನು ಜಜ್ಜುವ ಕಲ್ಲುಗಳನ್ನು) ಹಿಂದೆ ಹೇಳಿದ **ಪ್ರೈತೇ ವದಂತು** ಎಂಬ ಸೂಕ್ತದಿಂದ ಗ್ರಾವಾಣವೆಂಬ ಕಲ್ಲುಗಳನ್ನು ಚೆನ್ನಾಗಿ ಸ್ತೋತ್ರಮಾಡುತ್ತಿದ್ದನು. ಈ ಕ್ರಮವನ್ನೇ ಅನುಸರಿಸಿ ಈಗಲೂಕೂಡ ಋತ್ವಿಜರು ಸೋಮಲತೆಗಳನ್ನು ಜಜ್ಜುವ ಕಲ್ಲುಗಳನ್ನು ಚೆನ್ನಾಗಿ ಸ್ತೋತ್ರಮಾಡುವರು.

ತಸ್ಮಾನ್ಮಧ್ಯಂದಿನೇ ಮಧ್ಯಂದಿನ ಏವ ಗ್ರಾವ್ಣೋಽಭಿಷ್ಟುವಂತಿ ತದನುಕೃತಿ ।

ಇದಾನೀಂ ಗ್ರಾವಸ್ತುತ ಋತ್ವಿಜಸ್ತೇ (ಸ್ತೈವೇ) ತತ್ಸೂಕ್ತೇನ ಗ್ರಾವ್ಣಾಮಭಿಷ್ಟವಂ ವಿಧತ್ತೇ - ಯಸ್ಮಾದರ್ಬುದೇನಾಭಿಷ್ಟುತಿಃ ಕೃತಾ ತಸ್ಮಾತ್ಸೋಮಪ್ರಯೋಗೇಷು ಸತ್ರೇಷು ತತ್ತನ್ಮಧ್ಯಂದಿನೇ ಕಾಲ ಏವ ಪ್ರೈತೇ ವದಂತ್ವಿತಿ ಸೂಕ್ತೇನ ಗ್ರಾವ್ಣಾಮಭಿಷ್ಟವಮೃತ್ವಿಜಃ ಕುರ್ಯುಃ । ತದನುಕೃತೀತಿ ಕ್ರಿಯಾವಿಶೇಷಣಂ । ತಸ್ಯಾರ್ಬುದಸ್ಯಾನುಕೃತ್ಯ (ತಿರಾ) ನುರೂಪಂ (ಪ್ಯಂ) ಯಥಾ ಭವತಿ ತಥೇತ್ಯರ್ಥಃ ॥

ಹಿಂದೆ ಅರ್ಬುದಋಷಿಯು ಮಾಡಿದುದನ್ನು ಅನುಸರಿಸಿಯೇ ಈಗಲೂ ಋತ್ವಿಜರು ಪ್ರತಿದಿನ ಮಾಧ್ಯಂದಿನಸವನ ಕಾಲದಲ್ಲಿ ಪ್ರೈತೇ ವದಂತು ಎಂಬ ಸೂಕ್ತದಿಂದ ಸೋಮರಸಕ್ಕಾಗಿ ಲತೆಗಳನ್ನು ಜಜ್ಜುವ ಕಲ್ಲುಗಳನ್ನು ಸ್ತೋತ್ರಮಾಡುತ್ತಾರೆ.

**ಸ ಹ ಸ್ಮ ಯೇನೋಪೋದಾಸರ್ಪತ್ತದ್ಧಾಪ್ಯೇತರ್ಹ್ಯರ್ಬುದೋದಾಸರ್ಪಣೀ ನಾಮ ಪ್ರಪದಸ್ತಿ ॥**

ಅರ್ಬುದಸ್ಯ ವೃತ್ತಾಂತಂ ಲೋಕಪ್ರಸಿದ್ಧ್ಯೈ ದ್ರಢಯತಿ—ಸ ತು ಹ ಸೋಽರ್ಬುದಾಖ್ಯಃ ಸರ್ಪದೇಹೋ ಮಹರ್ಷಿರ್ಯೇನ ಮಾರ್ಗೇಣೋಪೋದಾಸರ್ಪತ್ತತ್ಸಮೀಪಂ ಪ್ರತಿ ಬಿಲಾದುದ್ಗಮ್ಯಾಽಽಗಚ್ಛತ್ । ತದ್ಧ ತಸ್ಮಿನ್ನೇವ ದೇಶ ಏತರ್ಹೀದಾನೀಮಪ್ಯರ್ಬುದೋದಾಸರ್ಪಣೀತ್ಯನೇನ ನಾಮಧೇಯೇನ ಯುಕ್ತಾ ಪ್ರಪನ್ಮಾರ್ಗೋಽಸ್ತಿ । ಪ್ರಪದ್ಯತೇ ಗಮ್ಯತೇಽನಯೇತಿ ಪ್ರಪತ್ ॥

ಅರ್ಬುದಋಷಿಯ ವೃತ್ತಾಂತವನ್ನು ತಿಳಿಸುವರು. ಈ ಅರ್ಬುದನೆಂಬ ಋಷಿಗೆ ಸರ್ಪಾಕೃತಿಯ ದೇಹವಿದ್ದಿತು. ಇವನು ಆ ಕಾಲದಲ್ಲಿ ಸಮೀಪದಲ್ಲಿದ್ದ ಒಂದು ಬಿಲದಿಂದಲೇ ಈಚೆಗೆ ಬರುತ್ತಿದ್ದನು. ಈ ಕಾರಣದಿಂದಲೇ ಇವನಿಗೆ ಈ ಹೆಸರು ಬಂದಿರುವುದು.

**ತಾನ್ಹ ರಾಜಾ ಮದಯಾಂಚಕಾರ ತೇ ಹೋಚುರಾಶೀವಿಷೋ ವೈ ನೋ ರಾಜಾನಮವೇಕ್ಷತೇ ಹಂತಾಸ್ಯೋಷ್ಣೀಷೇಣಾಕ್ಷ್ಯಾವಪಿನಹ್ಯಾಮೇತಿ ತಥೇತಿ ತಸ್ಯ ಹೋಷ್ಣೀಷೇಣಾಕ್ಷ್ಯಾವಪಿನಹ್ಯುಸ್ತಸ್ಮಾದುಷ್ಣೀಷಮೇವ ಪರ್ಯಸ್ಯ ಗ್ರಾವ್ಣೋಽಭಿಷ್ಟುವಂತಿ ತದನುಕೃತಿ ॥**

ಅಥಾಭಿಷ್ಟವಕಾಲೇ ಗ್ರಾವಸ್ತುತ ಉಷ್ಣೀಷೇಣ ನೇತ್ರವೇಷ್ಟನಂ ವಿಧತ್ತೇ ಗ್ರಾವ್ಣಾಮಭಿಷವಾರ್ಥಮರ್ಬುದಾಖ್ಯೇ ಸರ್ಪರೂಪೇ ಮಹರ್ಷೌ ಸಮಾಗತೇ ಸತಿ ತದೀಯವಿಷದೃಷ್ಟ್ಯಾಽವಲೋಕಿತಃ ಸೋಮೋ ರಾಜಾ ವಲ್ಲ್ಯಾತ್ಮಕಃ ಸ್ವಯಮಪಿ ವಿಷಯುಕ್ತಃ ಸನ್ಸಮೀಪವರ್ತಿನೋ ದೇವಾನ್ಮದಯಾಂಚಕಾರೋನ್ಮತ್ತಾನ್ಪರವಶಾನ್ ಕೃತವಾನ್ । ತದಾನೀಂ ತೇ ದೇವಾಃ ಪರಸ್ಪರಮಿದಮೂಚುಃ । ಆಶೀವಿಷಃ ಸರ್ಪರೂಪೋಽಯಮರ್ಬುದೋ ನೋಽಸ್ಮಾಕಂ ರಾಜಾನಂ ವಿಷದೃಷ್ಟ್ಯಾಽವೇಕ್ಷತೇ ಹಂತ ಕಷ್ಟಮೇತತ್ಸಂಪನ್ನಮತಸ್ತತ್ಪರಿಹಾರಾಯ ಕೇನಚಿದುಷ್ಣೀಷೇಣ ಶಿರೋವೇಷ್ಟನಸಾಧನೇನಾಲ್ಪವಸ್ತ್ರೇಣಾಸ್ಯಾರ್ಬುದಸ್ಯಾಕ್ಷ್ಯಾವಪಿನಹ್ಯಾಮ ಚಕ್ಷುಷೋರ್ಬಂಧನಂ ಕರವಾಮೇತಿ ವಿಚಾರ್ಯ ತ್ರಿಃ ಪ್ರದಕ್ಷಿಣಂ ತಸ್ಯ ಮುಖಮುಷ್ಣೀಷೇಣ ವೇಷ್ಟಯಿತ್ವಾ ತದೀಯಚಕ್ಷುಷೋರ್ಬಂಧನಂ ಕೃತವಂತಃ । ಯಸ್ಮಾದ್ದೇವೈರೇವಂ ಕೃತಂ ತಸ್ಮಾದೃತ್ವಿಜೋಽಪ್ಯುಷ್ಣೀಷಮೇವ ಪರ್ಯಸ್ಯ ಪರಿತೋ ಮುಖಂ ವೇಷ್ಟಯಿತ್ವಾ ಗ್ರಾವ್ಣಃ ಸೋಮಾಭಿಷವಾರ್ಥಾನ್ಪಾಷಾಣಾನಭಿಷ್ಟುವಂತಿ । ತಸ್ಯಾರ್ಬುದಸ್ಯಾನುಕೃತಿಃ ಸಾದೃಶ್ಯಂ ಯಥಾ ಭವತಿ ತಥೇತ್ಯನೇನಾಭಿಪ್ರಾಯೇಣ ವೇಷ್ಟನಂ ॥

ಗ್ರಾವಸ್ತುತ ಎಂಬ ಕಲ್ಲುಗಳನ್ನು ಸ್ತುತಿಸುವಾಗ ಋತ್ವಿಜರು ಉಷ್ಣೀಷವೆಂಬ (ಶಿರೇವೇಷ್ಟನ, ತಲೆಗೆ ಕಟ್ಟಿಕೊಳ್ಳುವ ಬಟ್ಟೆ) ಬಟ್ಟೆಯನ್ನು ತಲೆಗೂ ಕಣ್ಣುಗಳಿಗೂ ಕಟ್ಟಿಕೊಂಡು ಮಂತ್ರಪಠಿಸುವುದನ್ನು ತಿಳಿಸುತ್ತಾರೆ. ಮೇಲೆ ಹೇಳಿದಂತೆ ಅರ್ಬುದ

ಋಷಿಯು ಮಂತ್ರಪಠನಕ್ಕಾಗಿ ಬಿಲದಿಂದ ಹೊರಗೆಬಂದು ಮಂತ್ರಪಠಿಸುವ ಕಾಲದಲ್ಲಿ ಆ ಋಷಿಯ ವಿಷದೃಷ್ಟಿಯಿಂದ ಸಮೀಪದಲ್ಲಿದ್ದ ದೇವತೆಗಳೂ, ಋತ್ವಿಜರೂ ಅತ್ಯುಲ್ಬಣವಾದ ಆ ವಿಷದೃಷ್ಟಿಯಿಂದ ಮೂರ್ಛೆಹೋಗಿ ಸೋಮರಾಜನೂ ದೇವತೆಗಳೊಡನೆ ಉನ್ಮತ್ತನಾದನು. ಆಗ ಅಲ್ಲಿದ್ದ ದೇವತೆಗಳು ಪರಸ್ಪರ ಈರೀತಿ ಮಾತನಾಡಿಕೊಂಡರು. ಈ ಅರ್ಬುದಋಷಿಯು ಆಶೀವಿಷ (ತೀಕ್ಷ್ಣವಾದ ವಿಷ) ದಿಂದ ನಮ್ಮನ್ನೂ ಈ ಸೋಮದೇವತೆಯನ್ನೂ ನೋಡುತ್ತಾನೆ. ಇವನ ದೃಷ್ಟಿಯು ಕೇವಲ ವಿಷಪೂರಿತವಾಗಿದೆ. ಇದು ನಮ್ಮ ದುರದೃಷ್ಟವು. ಇದರ ಪರಿಹಾರಕ್ಕಾಗಿ ಈ ಅರ್ಬುದಋಷಿಯು ನಮ್ಮ ಕಣ್ಣಿಗೆ ಬೀಳದಿರುವಂತೆ ನಾವುಗಳೆಲ್ಲಾ ನಮ್ಮ ತಲೆಗೂ ಕಣ್ಣಿಗೂ (ಶಿರೋವೇಷ್ಟನ) ಬಟ್ಟೆಯನ್ನು ಕಟ್ಟಿಕೊಳ್ಳಬೇಕೆಂದು ನಿಶ್ಚಯಿಸಿ ಅದರಂತೆ ಒಂದು ಸಣ್ಣ ಬಟ್ಟೆಯನ್ನು ತಮ್ಮ ಕಣ್ಣುಗಳಿಗೂ ತಲೆಗೂ ಮೂರುಪಟ್ಟು ಸುತ್ತಿ ಬಿಗಿದುಕೊಂಡರು ಆದ್ದರಿಂದ ದೇವತೆಗಳು ಹಿಂದೆ ಮಾಡಿದಂತೆ ಈಗಲೂ ಋತ್ವಿಜರು ಸೋಮರಸವನ್ನು ಹಿಂಡುವ ಕಾಲದಲ್ಲಿ ಜಜ್ಜುವ ಕಲ್ಲುಗಳನ್ನು ತಲೆಗೆ ಮತ್ತು ಕಣ್ಣುಗಳಿಗೆ ಬಟ್ಟೆಯನ್ನು ಕಟ್ಟಿಕೊಂಡೇ ಸ್ತೋತ್ರಮಾಡುವುದು ಪದ್ಧತಿಯಾಗಿದೆ. ಹಿಂದೆ ಅರ್ಬುದಋಷಿಯು ಹೀಗೆಯೇ ಮಾಡಿದನು. ಅವನು ಮಾಡಿದ್ದನ್ನೇ ಅನುಸರಿಸಿ ಋತ್ವಿಜರು ಈಗಲೂ ಹಾಗೆಯೇ ಮಾಡವಲು.

ತಾನ್ಹ ರಾಜಾ ಮದಯಾಮೇವ ಚಕಾರ ತೇ ಹೋಚುಃ ಸ್ವೇನ ವೈ ನೋ
ಮಂತ್ರೇಣ ಗ್ರಾವ್ಣೋಽಭಿಷ್ಟೌತಿ ಹಂತಾಸ್ಯಾನ್ಯಾಭಿಋಗ್ಭಿರ್ಮಂ-
ತ್ರಮಾಪೃಣಚಾಮೇತಿ ತಥೇತಿ ತಸ್ಯ ಹಾನ್ಯಾಭಿರ್ಋಗ್ಭಿರ್ಮಂತ್ರ-
ಮಾಪಪೃಚುಸ್ತತೋ ಹೈನಾನ್ನ ಮದಯಾಂಚಕಾರ ತದ್ಯದಸ್ಯಾ-
ನ್ಯಾಭಿರ್ಋಗ್ಭಿರ್ಮಂತ್ರಮಾಪೃಂಚಂತಿ ಶಾಂತ್ಯಾ ಏವ ||

ಅಥ ಗ್ರಾವಸ್ತುತಃ ಪೂರ್ವೋಕ್ತಸೂಕ್ತಾದನ್ಯಾ ಅಪ್ಯೃಚೋ ವಿಧತ್ತೇ ಪುನರಪಿ ಸೋಮೋ ರಾಜಾ ತಾನ್ದೇವಾನ್ಪೂರ್ವವನ್ಮದಯಾಂಚಕಾರೈವ ತತಸ್ತೇ ದೇವಾಃ ಪರಸ್ಪರಮೂಚುರ್ದೃಷ್ಟಿವಿಷಪರಿಹಾರೇಽಪ್ಯಯಂ ಸರ್ಪದೇಹ ಋಷಿಃ ಸ್ವಕೀಯೇನೈವ ಸೂಕ್ತರೂಪೇಣ ಮಂತ್ರೇಣ ಗ್ರಾವ್ಣೋಽಭಿಷ್ಟೌತಿ । ಅತೋ ಮಂತ್ರಸಂಬದ್ಧೇನ ವಿಷೇಣಾಸ್ಮಾಕಮುನ್ಮಾದೋ ಜಾಯತೇ ಹಂತ ಕಷ್ಟಮೇತತ್ । ಅತೋ ಮಂತ್ರಗತವಿಷಪರಿಹಾರಾಯಾಸ್ಯಾರ್ಬುದಸ್ಯ ಮಂತ್ರಸೂಕ್ತಮನ್ಯಾಭಿರಾಪ್ಯಾಯಸ್ವ ಸಮೇತು ತ ಇತ್ಯಾದಿಭಿರ್ಋಗ್ಭಿರಾಪೃಣಚಾಮ ಪೃಚೀ ಸಂಪರ್ಕ ಇತಿ ಧಾತುಃ ಸರ್ವತಃ ಸಂಪೃಕ್ತಂ ಕರವಾಮ । ತದೇತತ್ಸರ್ವೇ ದೇವಾ ಅಂಗೀಕೃತ್ಯ ತಥೈವ ಚಕ್ರುಃ । ತತಃ ಪ್ರಾಗಂತರಸಂಪರ್ಕಾತ್ತತ್ಸೂಕ್ತಗತೋಗ್ರತ್ವೇ ಸತ್ಯೇತಾನ್ದೇವಾನ್ಸೋಮೋ ರಾಜಾ ಸ ಮದಯಾಂಚಕಾರೋನ್ಮಾದಂ ನಾಕರೋತ್ । ತಸ್ಮಾತ್ಕಾರಣಾದರ್ಬುದಸ್ಯ ಮಂತ್ರಸೂಕ್ತಮನ್ಯಾಭಿರಾಪ್ಯಾಯಸ್ವೇತ್ಯಾದಿಭಿರಭಿಷ್ಟವಕಾಲೇ ಸಂಪೃಕ್ತಂ ಕುರ್ಯುಃ । ತಚ್ಚ ಶಾಂತ್ಯರ್ಥಮೇವ ಭವತಿ ||

ಅನಂತರ ಈ ಗ್ರಾವಸ್ತುತರು (ಸೋಮಲತೆಗಳನ್ನು ಜಜ್ಜಿ ರಸವನ್ನು ತೆಗೆಯುವ ಕಲ್ಲುಗಳನ್ನು ಸ್ತುತಿಸುವ ಋತ್ವಿಜರು) ಹಿಂದೆ ಹೇಳಿದ ಸೂಕ್ತವಲ್ಲದೆ ಬೇರೊಂದು ಸೂಕ್ತವನ್ನೂ ಹೇಳುವರು. ಹಿಂದೆ ಹೇಳಿದಂತೆ ಶಿರೋವೇಷ್ಟನ ಮತ್ತು ಚಕ್ಷುರ್ವೇಷ್ಟವನ್ನು ಧರಿಸಿದ್ದರೂ ಸೋಮದೇವತೆಯು ಆ ದೇವತೆಗಳನ್ನು ವಿಷಜ್ವಾಲೆಯಿಂದ ಉನ್ಮತ್ತರನ್ನಾಗಿಯೇ ಮಾಡಿದನು. ಆಗ ದೇವತೆಗಳು ಮತ್ತೆ ಈರೀತಿ ಪರಸ್ಪರ ಮಾತನಾಡಿಕೊಂಡರು ಶಿರೋವೇಷ್ಟನಾದಿಗಳಿಂದ ನಮ್ಮ ದೃಷ್ಟಿವಿಷವು ಸ್ವಲ್ಪಮಟ್ಟಿಗೆ

ಪರಿಹಾರವಾದರೂ ಈ ಅರ್ಬುದಋಷಿಯು ಪಠಿಸುತ್ತಿರುವ ಗ್ರಾವಸ್ತುತಿರೂಪವಾದ ಮಂತ್ರದಿಂದ ನಮಗೆ ಉನ್ಮಾದವೇ ಉಂಟಾಗುತ್ತಿದೆ. ಇದು ನಮ್ಮ ದೌರ್ಭಾಗ್ಯವು. ಇದಕ್ಕೆ ಏನುಮಾಡೋಣ ಎಂದು ಆಲೋಚಿಸಿ ಮಂತ್ರಗತವಿಷಪರಿಹಾರಾರ್ಥವಾಗಿ **ಆಪ್ಯಾಯಸ್ವ ಸಮೇತು ತೇ** ಎಂಬ ಬೇರೊಂದು ಮಂತ್ರವನ್ನು ಪಠಿಸಲು ಪ್ರಾರಂಭಿಸಿದರು. ಇದು (ಈ ಸೂಕ್ತಪಠನವು) ಸಕಲರಿಗೂ ಶಾಂತಿಯನ್ನುಂಟುಮಾಡುವ ಸಾಮರ್ಥ್ಯವಿದ್ದುದರಿಂದ ದೇವತೆಗಳಿಗುಂಟಾದ ಬಾಧೆಯು ನಿವೃತ್ತಿಯಾಗಿ ಪೂರ್ವದಂತೆ ಶಾಂತಿಯಿಂದಿರಲು ಅವಕಾಶವಾಯಿತು. ಉನ್ಮಾದ ಮೊದಲಾದ ಯಾವ ಬಾಧೆಯೂ ಉಂಟಾಗಲಿಲ್ಲ. ಆದ್ದರಿಂದ ಈಗಲೂ ಅರ್ಬುದಋಷಿದೃಷ್ಟವಾದ **ಪ್ರೈತೇ ವದಂತು** ಎಂಬ ಸೂಕ್ತವನ್ನು ಪಠಿಸಿದನಂತರ ಶಾಂತಿಗಾಗಿ ಆಪ್ಯಾಯಸ್ವ ಸಮೇತು ತೇ ಎಂಬ ಶಾಂತಿಕಾರಕಮಂತ್ರವನ್ನು ಪಠಿಸುವುದು ರೂಢಿಯಾಗಿದೆ.

ತೇ ಹ ಪಾಪ್ಮಾನಮಪಜಘ್ನಿರೇ ತೇಷಾಮನ್ವಪಹತಿಂ ಸರ್ಪಾಃ ಪಾಪ್ಮಾನಮಪಜಘ್ನಿರೇ ತ ಏತೇಽಪಹತಪಾಪ್ಮಾನೋ ಹಿತ್ವಾ ಪೂರ್ವಾಂ ಜೀರ್ಣಾಂ ತ್ವಚಂ ನವಯೈವ ಪ್ರಯಂತಿ ॥ ಅಪ ಪಾಪ್ಮಾನಂ ಹತೇ ಯ ಏವಂ ವೇದ ॥

**ದೇವಾನಾಮಭಿಷ್ಟವಕೃತಾಂ ಪಾಪಶಾಂತಿಂ ದರ್ಶಯತಿ— ತೇ ದೇವಾ ಅರ್ಬುದಾನುಷ್ಠಿತೇನಾಭಿಷ್ಟವೇನ ದಾರಿದ್ರ್ಯಾದಿಹೇತುಂ ಪಾಪ್ಮಾನಂ ನಾಶಿತವಂತಃ । ತೇಷಾಂ ದೇವಾನಾಮುಪಹತಿಂ ಪಾಪವಿನಾಶಮನು ಪಶ್ಚಾದರ್ಬುದಸಂಬಂಧಿನಃ ಸರ್ಪಾಃ ಸರ್ವೇಽಪಿ ಸ್ವಕೀಯಂ ಪಾಪ್ಮಾನಂ ನಾಶಿತವಂತಃ । ಯೇ ಸರ್ಪಾಃ ಸ್ವಶರೀರಗತಾಂ ಪೂರ್ವಸಿದ್ಧಾಂ ಜೀರ್ಣಾಂ ತ್ವಚಂ ಹಿತ್ವಾ ನವಯೈವ ನೂತನಯೈವ ತ್ವಚಾ ಯುಕ್ತಾಃ ಪ್ರಯಂತಿ ಸರ್ವತಃ ಪ್ರಸರ್ಪಂತಿ ಏತೇ ನೂತನತ್ವಗ್ಯುಕ್ತಾಃ ಸರ್ಪಾ ಅಪಹತಪಾಪ್ಮಾನ ಇತ್ಯುಚ್ಯಂತೇ । ವೇದನಂ ಪ್ರಶಂಸತಿ—**

ದೇವತೆಗಳು ಮಾಡಿದ ಸ್ತೋತ್ರಗಳಿಂದ ಪಾಪಶಾಂತಿಯಾಗುವುದನ್ನು ತಿಳಿಸುತ್ತಾರೆ. ಆ ದೇವತೆಗಳು ಮೇಲೆ ಹೇಳಿದಂತೆ ಅರ್ಬುದಋಷಿಯು ಮಾಡಿದ ಸ್ತೋತ್ರಾದಿಗಳಿಂದ ತಮ್ಮ ದಾರಿದ್ರ್ಯಹೇತುವಾದ ಪಾಪವನ್ನೆಲ್ಲಾ ಕಳೆದುಕೊಂಡರು. ಈ ದೇವತೆಗಳು ತಮ್ಮ ದರಿದ್ರವನ್ನೂ ಪಾಪವನ್ನೂ ಕಳೆದುಕೊಂಡಂತೆ ಅರ್ಬುದಋಷಿಯ ಸಂಬಂಧಿಗಳಾದ ಸಮಸ್ತ ಸರ್ಪಗಳೂ ತಮ್ಮ ಪಾಪಗಳನ್ನು ಕಳೆದುಕೊಂಡು ಶುದ್ಧವಾದವು. ಸರ್ಪಗಳು ತಮ್ಮ ಶರೀರದ ಹಳೆಯ ಪೊರೆಯನ್ನು ಕಳೆದುಕೊಂಡು ಹೊಸ ಚರ್ಮವನ್ನು ಧರಿಸಿ ಓಡಾಡುತ್ತವೆ. ಈವಿಧಕಾರ್ಯವೇ ಸರ್ಪಗಳು ತಮ್ಮ ಪಾಪಗಳನ್ನು ಕಳೆದುಕೊಂಡು ಶುದ್ಧವಾಗುವ ಚಿಹ್ನೆಯು. ಇದರಿಂದ ಈ ಸರ್ಪಗಳು ತಮ್ಮ ಪಾಪಗಳನ್ನು ಕಳೆದುಕೊಂಡು ಶುದ್ಧವಾದ ಹೊಸ ಚರ್ಮವನ್ನು ಧರಿಸುವವು ಎಂದು ಹೇಳುವುದು ರೂಢಿಯು.

*English Translation*

**(On the offices of the Gravastut and Subrahmanya)**

**(On the origin of the office of the Gravastut. The serpent Rishi Arbuda)**

The gods held once upon a time a sacrificial session in Sarvacharu. They did not succeed in destroying the consequences of guilt. Arbude, the son of

Kadru, the Serpent Rishi, the framer of mantras, said to them, " You have overlooked one ceremony which is to be performed by the Hotar. I will perform it for you, then you will destroy the consequences of guilt." They said, " Well, let it be done." At every midday libation he then came forth from his hole, approached them, and repeated spells over the Soma squeezing stones. Thence they repeat spells at every midday libation over the Soma squeezing stones, in imitation of him (the Serpent Rishi). The way on which this Serpent Rishi used to go when coming from (his hole) is known by the name Arbudoda Sarpani (at the sacrificial compound).

The King Soma made the gods drunk. They then said, " A poisonous serpent (asivish) looks at our King! Well, let us tie a band round his eyes." They then tied a band round his eyes; Therefore they recite the spells over the Soma squeezing stones, when having tied round the eyes a band in imitation of what the gods did. The King Soma made them drunk. They said, " He (the Serpent Rishi) repeats his own mantra over the Soma squeezing stones. Well, let us mix with his mantra other verses." They then mixed with his mantra other verses, in consequence of which he Soma did not make them drunk. By mixing his mantra with other verses for effecting propitiation, they succeeded in destroying the consequences of guilt.

In imitation of this feat achieved by the gods, the Serpents, destroyed all consequenes of their own guilt. Having in this state (being quite free from guilt and sin) left off the old skin torn, they obtain a new one. Who knows this destroys the consequences of his own guilt.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಷಡ್ವಿಂಶಾಧ್ಯಾಯಸ್ಯ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತಆರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು
ಸಮಾಪ್ತವಾದುದು.



## ಅಥ ಷಡ್ವಿಂಶಾಧ್ಯಾಯೇ ದ್ವಿತೀಯಃ ಖಂಡಃ

### ಇಪ್ಪತ್ತಆರನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ಹಿಂದೆ ಹೇಳಿದಂತೆ ಈ ಗ್ರಾವಸ್ತುತ್ ಎಂಬ ಸೋಮಲತೆಗಳನ್ನು ಜಜ್ಜುವ ಕಲ್ಲುಗಳನ್ನು ಸ್ತುತಿಸುವಾಗ ಎಷ್ಟು ಋಕ್ಕುಗಳನ್ನು ಪಠಿಸಬೇಕು ? ಅವುಗಳನ್ನು ಹೇಗೆ ಪಠಿಸಬೇಕು. ಈ ಸ್ತುತಿಗಳನ್ನು ಯಾವಾಗಲೂ ಮಾಧ್ಯಂದಿನಸವನಕಾಲದಲ್ಲಿ ಮಾತ್ರ ಪಠಿಸಬೇಕು. ಇತರಕಾಲದಲ್ಲಿ ಪಠಿಸಕೂಡದು.]



**ತದಾಹುಃ ಕಿಯತೀಭಿರಭಿಷ್ಟುಯಾದಿತಿ ಶತೇನೇತ್ಯಾಹುಃ ಶತಾಯುರ್ವೈ ಪುರುಷಃ ಶತವೀರ್ಯಃ ಶತೇಂದ್ರಿಯ ಆಯುಷ್ಯೈವೈನಂ ತದ್ವೀರ್ಯ ಇಂದ್ರಿಯೇ ದಧಾತಿ ॥**

**ಅಥ ಪ್ರಶ್ನೋತ್ತರಾಭ್ಯಾಮಭಿಷ್ಟವಗತಾನಾಮೃಚಾಂ ಸಂಖ್ಯಾಂ ವಿಧತ್ತೇ—ಶತಸಂಖ್ಯಾಕಾಸು ನಾಡೀಷು ಸಂಚಾರಾದಿಂದ್ರಿಯಾಣಾಂ ತದೀಯವೀರ್ಯಸ್ಯಚ ಶತಸಂಖ್ಯಾ । ತತ್ಸಂಖ್ಯಾಕಾನಾಮೃಚಾಂ ಪಾಠೇನೈನಂ ಯಜಮಾನಂ ದೀರ್ಘಾಯುಷ್ಯಾದಿಗುಣಯುಕ್ತಂ ಭವತಿ ॥**

ಈಗ ಅಭಿಷ್ಟವದಲ್ಲಿರುವ ಋಕ್ಕುಗಳ ಸಂಖ್ಯೆಯನ್ನು ಪ್ರಶ್ನೋತ್ತರರೂಪವಾಗಿ ವಿವರಿಸುತ್ತಾರೆ. ಶರೀರದಲ್ಲಿರುವ ನಾಡಿಗಳ ಸಂಖ್ಯೆಯು ನೂರು. ಈ ನಾಡಿಗಳಲ್ಲಿಯೂ ಅವುಗಳಲ್ಲಿ ಸಂಚಾರಮಾಡುವ ವೀರ್ಯದಲ್ಲಿಯೂ ರಕ್ತವು ಸಂಚರಿಸುವುದರಿಂದ ಪುರುಷನ ಆಯುಃ ಪ್ರಮಾಣವು ಒಂದುನೂರು ವರ್ಷಗಳಾಗುವವು.

**ತ್ರಯಸ್ತ್ರಿಂಶತ್ಯಾ ವೇತ್ಯಾಹುಸ್ತ್ರಯಸ್ತ್ರಿಂಶತೋ ವೈ ಸ ದೇವಾನಾಂ ಪಾಪ್ಮನೋಽಪಾಹಂಸ್ತ್ರಯಸ್ತ್ರಿಂಶದ್ವೈ ತಸ್ಯ ದೇವಾ ಇತಿ ॥**

**ಪಕ್ಷಾಂತರಂ ವಿಧತ್ತೇ—ಅಥವಾ ತ್ರಯಸ್ತ್ರಿಂಶತ್ಯಾ, ಋಚಾಂ ತ್ರಯಸ್ತ್ರಿಂಶತ್ಸಂಖ್ಯಯಾಽಭಿಷ್ಟುವ ಇತ್ಯಾಹುಃ । ತತ್ರ ಹೇತುರುಚ್ಯತೇ । ದೇವಾನಾಂ ಸಂಬಂಧಿನೀ ಯಾ ತ್ರಿಂಶದಸ್ತ್ಯಸ್ಯಾಃ ಸಕಾಶಾತ್ಸೋಽರ್ಬುದಃ ಪಾಪ್ಮನೋಽಪಾಹನ್ನಿನಾಶಿತವಾನ್ । ತಸ್ಯಾರ್ಬುದಸ್ಯ ಸಮೀಪಸ್ಥಾ ದೇವಾಸ್ತ್ರಯಸ್ತ್ರಿಂಶದ್ವೈ । ಅಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಃ ಪ್ರಜಾಪತಿಶ್ಚ ವಷಟ್ಕಾರಶ್ಚೇತ್ಯೇವಂ ದೇವಸಂಖ್ಯಾ ದ್ರಷ್ಟವ್ಯಾ ॥**

ನೂರು ಋಕ್ಕುಗಳನ್ನು ಪಠಿಸುವುದರಿಂದ ಯಜ್ಞಮಾಡುವ ಯಜಮಾನನು ನೂರುವರ್ಷಗಳವರೆಗೆ ಜೀವಿಸುವನು. ಅವನ ಗುಣಗಳೂ ನೂರು ಇರುವವು. ಈ ವಿಷಯದಲ್ಲಿ ಬೇರೆವಿಧವಾಗಿ ವಿವರಿಸುವರು. ಮೂವತ್ತಮೂರ ಋಕ್ಕುಗಳನ್ನು

ಮೂರಾವರ್ತಿ ಪಠಿಸುವುದರಿಂದ ನೂರು ಋಕ್ಕುಗಳಾಗುವವು. ದೇವತೆಗಳ ಸಂಖ್ಯೆಯು ಮೂವತ್ತಮೂರು ಹೇಗೆಂದರೆ-- ಎಂಟು ವಸುಗಳು, ಹನ್ನೊಂದುಮಂದಿ ರುದ್ರರು, ಹನ್ನೆರಡುಮಂದಿ ಆದಿತ್ಯರು ಇವರ ಜತೆಗೆ ಪ್ರಜಾಪತಿ ಮತ್ತು ವಷಟ್ಕಾರಾಭಿಮಾನಿ ದೇವತೆಗಳು ಸೇರಿದರೆ ಮೂವತ್ತಮೂರುಮಂದಿ ದೇವತೆಗಳಾಗುವರು. ಈ ದೇವತೆಗಳೆಲ್ಲರೂ ಸರ್ಪಋಷಿಯಾದ ಅರ್ಬುದನ ಸವಿಾಪದಲ್ಲಿ ಮಂತ್ರಪಠನಕಾಲದಲ್ಲಿ ಇರುವರು. ಇವರ ಜತೆಯಲ್ಲಿದ್ದ ಅರ್ಬುದಋಷಿಯು ತನ್ನ ಪಾಪಗಳೆಲ್ಲವನ್ನೂ ಪರಿಹಾರಮಾಡಿಕೊಂಡನು.

ಅಪರಿಮಿತಾಭಿರಭಿಷ್ಟುಯಾದಪರಿಮಿತೋ ವೈ ಪ್ರಜಾಪತಿಃ ಪ್ರಜಾಪತೇರ್ವಾ ಏಷಾ ಹೋತ್ರಾ ಯದ್ಗ್ರಾವಸ್ತೋತ್ರೀಯಾ ತಸ್ಯಾಂ ಸರ್ವೇ ಕಾಮಾ ಅನರುಧ್ಯಂತೇ ಸ ಯದಪರಿಮಿತಾಭಿರಭಿಷ್ಟೌತಿ ಸರ್ವೇಷಾಂ ಕಾಮಾನಾಮವರುದ್ಧ್ಯೈ ॥ ಸರ್ವಾನ್ಕಾಮಾನವರುಂಧೇ ಯ ಏವಂ ವೇದ ॥

**ಪಕ್ಷಾಂತರಂ ವಿಧತ್ತೇ— ಏತಾವತ್ಯೇವೇತಿಸಂಖ್ಯಾನಿರ್ಬಂಧರಹಿತಾ ಅಪರಿಮಿತಾಃ । ಪ್ರಜಾಪತೇರಪರಿಮಿತಮಹಿಮತ್ವಾದ್ಗ್ರಾವಸ್ತೋತ್ರಸಂಬಂಧಿನ್ಯಾ ಹೋತ್ರಾ(ತ್ರ) ವೇದೋತ್ಪನ್ನಾಯಾಃ ಕ್ರಿಯಾಯಾಃ ಪ್ರಜಾಪತಿಸಂಬಂಧತ್ವಾದಪರಿಮಿತತ್ವಂ ಯುಕ್ತಂ । ತಸ್ಯಾಂ ಚ ಕ್ರಿಯಾಯಾಂ ಸರ್ವೇ ಕಾಮಾಃ ಸ್ವಾಧೀನಾ ಭವಂತಿ । ಅತೋಽಪರಿಮಿತಾಭಿರಭಿಷ್ಟವಃ ಸರ್ವಕಾಮಪ್ರಾಪ್ತ್ಯೈ ಸಂಪದ್ಯತೇ ॥ ವೇದನಂ ಪ್ರಶಂಸತಿ—**

ಮೇಲೆ ಹೇಳಿದ ವಿಷಯವನ್ನು ಬೇರೆವಿಧವಾಗಿ ತಿಳಿಸುವರು. ಈ ಗ್ರಾವಸ್ತುತಿಯಲ್ಲಿ ಇಷ್ಟೇ ಋಕ್ಕುಗಳನ್ನು ಪಠಿಸಬೇಕೆಂಬ ನಿರ್ಬಂಧವೇನೂ ಇರುವುದಿಲ್ಲ. ಏಕೆಂದರೆ ಇದಕ್ಕೆ ಪ್ರಜಾಪತಿಯ ಸಂಬಂಧವಿರುವುದು. ಪ್ರಜಾಪತಿಯ ಮಹಿಮೆಗಳೂ ಅಪರಿಮಿತಗಳಾಗಿರುವವು. ಆದ್ದರಿಂದ ಈ ಗ್ರಾವಸ್ತುತಿಯಲ್ಲಿ (ನೂರಕ್ಕೆ ಕಮ್ಮಿ ಇಲ್ಲದೆ) ಋಗ್ವೇದದ ಎಷ್ಟು ಋಕ್ಕುಗಳನ್ನಾದರೂ ಪಠಿಸಬಹುದು. ಇದರಿಂದ ಯಜಮಾನನ ಸಮಸ್ತ ಅಭೀಷ್ಟಗಳೂ ಸಿದ್ಧಿಸುವವು. ಈ ವಿಷಯವನ್ನು ಚೆನ್ನಾಗಿ ತಿಳಿದ ಪುರುಷನ ಅಭೀಷ್ಟಗಳೂ ಸಿದ್ಧಿಸುವವು.

ತಸ್ಮಾದಪರಿಮಿತಾಭಿರೇವಾಭಿಷ್ಟುಯಾತ್ ॥

**ತೃತೀಯಸ್ಯ ಪಕ್ಷಸ್ಯ ಮುಖ್ಯತ್ವಂ ದರ್ಶಯತಿ—**

ಆದ್ದರಿಂದ ಅಪರಿಮಿತವಾದ (ಅಸಂಖ್ಯವಾದ, ಅನೇಕ) ಋಕ್ಕುಗಳಿಂದ ಈ ಗ್ರಾವಸ್ತುತಿಯನ್ನು ಮಾಡಬಹುದು.

ತದಾಹುಃ ಕಥಮಭಿಷ್ಟುಯಾದಿತ್ಯಕ್ಷರಶಾಃ ಚತುರಕ್ಷರಶಾಃ ಪಚ್ಛಾಃ ಅರ್ಧರ್ಚಶಾಃ ಋಕ್ಶಾಃ ಇತಿ ತದ್ಯದೃಕ್ಶೋ ನ ತದವಕಲ್ಪತೇಽಥ ಯತ್ಪಚ್ಛೋ ನೋ ಏವ ತದವಕಲ್ಪತೇಽಥ ಯದಕ್ಷರಶಶ್ಚತುರಕ್ಷರಶೋ ವಿ ತಥಾ ಛಂದಾಂಸಿ ಲುಪ್ಯೇರನ್ಬಹೂನಿ ತಥಾಽ-

ಕ್ಷರಾಣಿ ಹೀಯೇರನ್ನರ್ಧರ್ಚಶ ಏವಾಭಿಷ್ಟುಯಾತ್ಪ್ರತಿಷ್ಠಾಯಾ ಏವ ॥

ಪ್ರಶ್ನೋತ್ತರಾಭ್ಯಾಮಭಿಷ್ಟವೇ ಪ್ರಕಾರವಿಶೇಷಂ ವಿಧತ್ತೇ— ತತ್ರತ್ರಾಭಿಷ್ಟವೇ ಬ್ರಹ್ಮವಾದಿನಃ ಪ್ರಶ್ನಮಾಹುಃ ಕೇನ ಪ್ರಕಾರೇಣಾಭಿಷ್ಟುಯಾದಿತಿ ಕಿಯಂತಃ ಪ್ರಕಾರಾಃ ಸಂಭಾವ್ಯಂತ ಇತಿ ವಾ ಕಾಂಕ್ಷಾಯಾಂ ತೇ ಪ್ರಕಾರಾ ಉಪನ್ಯಸ್ಯಂತೇ— ಅಕ್ಷರಶೋಽಭಿಷ್ಟುಯಾದಿತ್ಯೇಕಃ ಪ್ರಕಾರಃ ಪ್ರತ್ಯಕ್ಷರಮವಸಾಯಾವಸಾಯಾಭಿಷ್ಟುಯಾದಿತ್ಯರ್ಥಃ । ಅಕ್ಷರಚತುಷ್ಟಯೇಽವಸಾನಂ ದ್ವಿತೀಯಃ ಪ್ರಕಾರಃ । ಪಾದೇಽವಸಾನಂ ತೃತೀಯಃ ಪ್ರಕಾರಃ । ಅರ್ಧರ್ಚೇಽವಸಾನಂ ಚತುರ್ಥಃ । ಋಚಿ ಸಮಾಪ್ತಾಯಾಮವಸಾನಂ ಪಂಚಮಃ । ಪ್ಲುತಯಃ ಸರ್ವಾ ವಿಚಾರಾರ್ಥಾಃ । ಕಿಂ ಪ್ರತ್ಯಕ್ಷರಮವಸಾನಮುತಾಕ್ಷರಚತುಷ್ಟಯೇಽವಸಾನಮುತ ಪಾದೇಽವಸಾನಮಾಹೋಸ್ವಿದರ್ಧರ್ಚೇಽವಸಾನಮುಥವಾ ಕೃತ್ಸ್ನಾಯಾಮೃಚ್ಯವಸಾನಮಿತಿ ಸಂಶಯಃ । ತತ್ರ ಪಕ್ಷಾಂತರಾಣಿ ದೂಷಯಿತ್ವಾಽರ್ಧರ್ಚಪಕ್ಷ ಏವ ಸ್ವೀಕಾರ್ಯಃ । ಕಥಮಿತಿ ತದುಚ್ಯತೇ । ಯದಿ ಋಚೀ(ಋಚ್ಯವಸಾನಮಿ)ತಿ ಪಕ್ಷಸ್ಯಾ(ಸ್ತ್ವ)ತ್ಯಂತಂ ನಾವಕಲ್ಪತೇ ನ ಸಂಭವತಿ । ಅಧ್ಯಯನವೈಪರೀತ್ಯಪ್ರಸಂಗಾತ್ । ಅಧ್ಯಯನಕಾಲೇಽರ್ಧರ್ಚೇಽವಸಾನಂ ಕುರ್ವಂತಿ ನ ತು ಕೃತ್ಸ್ನಾಮೃಚಂ ಮಧ್ಯೇಽವಸಾನರಹಿತಾಂ ಪಠಂತಿ ಪಾದಾವಸಾನಪಕ್ಷೇಽಪಿ ಸ ಏವ ದೋಷಃ । ಏಕೈಕಾಕ್ಷರಚತುರಕ್ಷರಪಕ್ಷಯೋರ್ದೋಷಾಂತರಮಪ್ಯಸ್ತಿ ತಥಾ ಪಕ್ಷದ್ವಯಾಂಗೀಕಾರೇ ಛಂದಾಂಸಿ ವಿಲುಪ್ಯೇರನ್ । ಕಥಂ ವಿಲೋಪ ಇತಿ ತದುಚ್ಯತೇ । ತಥಾ ಸತ್ಯಕ್ಷರಾವಸಾನಪಕ್ಷೇ ಬಹೂನ್ಯಕ್ಷರಾಣಿ ಹೀಯೇರನ್ವಿನಶ್ಯೇಯುಃ । ಸಂಹಿತಾಕಾಲೀನಸ್ಯ ದ್ವಿತ್ವಾದೇರಭಾವಾತ್ । ತತಶ್ಛಂದೋಭಂಗಃ ಅರ್ಧರ್ಚಪಕ್ಷೇತು ಯಥಾಧ್ಯಯನಮೇವಾಭಿಷ್ಟವಾನ್ನ ಕೋಽಪಿ ದೋಷಃ । ತಸ್ಮಾದಯಮೇವ ಪಕ್ಷಃ ಸಿದ್ಧಾಂತಃ । ಅರ್ಧರ್ಚಯೋರ್ದ್ವಿತ್ವಾತ್ಪಕ್ಷದ್ವಯಸಾದೃಶ್ಯೇನ ಪ್ರತಿಷ್ಠಾರ್ಥಮೇತತ್ಸಂಪದ್ಯತೇ ॥

ಪ್ರಕಾರಭೇಧವನ್ನು ಪ್ರಶ್ನೋತ್ತರರೂಪವಾಗಿ ವಿವರಿಸುವರು. ಈ ಅಭಿಷ್ಟವದಲ್ಲಿ (ಸ್ತುತಿಯಲ್ಲಿ) ಬ್ರಹ್ಮವಾದಿಗಳು (ಯಜ್ಞಕರ್ಮಕಶಲರು) ಈರೀತಿ ಪ್ರಶ್ನೆ ಮಾಡುವರು— ಯಾವ ಪ್ರಕಾರವಾಗಿ ಈ ಗ್ರಾವಃಸ್ತುತಿಯನ್ನು ಮಾಡಬೇಕು. ಇದರಲ್ಲಿ ಎಷ್ಟು ವಿಧಗಳಿವೆ ಎಂದು ಆ ಪ್ರಕಾರಗಳು ಯಾವವೆಂದರೆ ಒಂದಕ್ಕೊಂದು ಅಕ್ಷರವಾಗಿ (ಬಿಡಿಸಿ) ಎಂದರೆ ಒಂದೊಂದು ಅಕ್ಷರವನ್ನು ಹೇಳಿ ನಿಲ್ಲಿಸಿ ಹೇಳುವುದು ಒಂದು ಪ್ರಕಾರವು. ನಾಲ್ಕು ನಾಲ್ಕು ಅಕ್ಷರಗಳನ್ನು ಹೇಳಿ ನಿಲ್ಲಿಸಿ ಅದರಂತೆ ಪಠಿಸುವುದು ಎರಡನೆಯ ಪ್ರಕಾರವು; ಋಕ್ಕಿನ ಒಂದೊಂದು ಪಾದವನ್ನು ಹೇಳಿ ನಿಲ್ಲಿಸಿ ಮುಂದೆ ಪಠಿಸುವುದು ಮೂರನೆಯ ಪ್ರಕಾರವು; ಅರ್ಧ ಋಕ್ಕಿಗೆ ನಿಲ್ಲಿಸಿ ನಿಲ್ಲಿಸಿ ಪಠಿಸುವುದು ನಾಲ್ಕನೆಯ ಪ್ರಕಾರವು; ಒಂದೊಂದು ಋಕ್ಕನ್ನು ಪಠಿಸುವುದು ಐದನೆಯ ಪ್ರಕಾರವು. ಇಲ್ಲಿ (ಮೇಲಿನ ವಾಕ್ಯದಲ್ಲಿ) ತೋರಿಸಿರುವ (೩ ಎಂಬ) ಪ್ಲುತಿಗಳು ವಿಚಾರಾರ್ಥ (ಸಂಶಯ) ಗಳನ್ನು ತಿಳಿಸುವವು. ಪ್ರತಿ ಅಕ್ಷರಕ್ಕೂ ನಿಲ್ಲಿಸಬೇಕೇ, ನಾಲ್ಕು ಅಕ್ಷರಗಳಿಗೆ ಒಂದಾವರ್ತಿ ನಿಲ್ಲಿಸಿ ನಿಲ್ಲಿಸಿ ಹೇಳಬೇಕೇ ಅಥವಾ ಪಾದಪಾದವಾಗಿ ಪಠಿಸಬೇಕೆ, ಅರ್ಧಋಕ್ಕಿಗೆ ನಿಲ್ಲಿಸಿ ನಿಲ್ಲಿಸಿ ಪಠಿಸಬೇಕೆ ಅಥವಾ ಒಂದು ಋಕ್ಕನ್ನು ಪೂರ್ತಾ ಹೇಳಿ ನಿಲ್ಲಿಸಿ ಅದರಂತೆ ಮುಂದೆ ಹೇಳಬೇಕೇ ಎಂಬ ವಿಚಾರಗಳಲ್ಲಿ ಸಂಶಯ ಉಂಟಾಗುವುದು ಸಹಜವು. ಅದನ್ನೇ ಇಲ್ಲಿ ಪ್ಲುತಿಗಳ ಮೂಲಕ ತಿಳಿಸಲಾಗಿದೆ. ಆದರೆ ಇಲ್ಲಿ ಅನೇಕವಿಧಗಳನ್ನು ಸೂಚಿಸಿದ್ದರೂ ಅರ್ಧಋಕ್ಕುಗಳಿಗೆ ನಿಲ್ಲಿಸಿ ನಿಲ್ಲಿಸಿ ಪಠಿಸುವ ವಿಧಾನವೇ ಸರಿಯಾದ ಕ್ರಮವು. ಅದು ಹೇಗೆ ಎಂಬುದನ್ನು ತಿಳಿಸುವರು. ಒಂದು

ಋಕ್ಕನ್ನು ಪೂರ್ತಿ ಪಠಿಸುವ ಕ್ರಮವು ಯುಕ್ತವಲ್ಲ. ಏಕೆಂದರೆ ಅಧ್ಯಯನಕಾಲದಲ್ಲಿ ಅರ್ಧಋಕ್ಕಿಗೆ ಸಿಲ್ಲಿಸಿ ಪಠಿಸುವರು ಪೂರ್ತಿಋಕ್ಕನ್ನು ಪಠಿಸುವ ಪದ್ಧತಿ ಇಲ್ಲ. ಪಾದಪಾದವಾಗಿ ಪಠಿಸುವುದರಲ್ಲಿಯೂ ಈ ವಿಧವಾದ ದೋಷವೇ ಇರುವುದು. ಒಂದೊಂದು ಅಕ್ಷರ ಮತ್ತು ನಾಲ್ಕು ನಾಲ್ಕು ಅಕ್ಷರಗಳನ್ನು ಪಠಿಸುವ ಕ್ರಮದಲ್ಲಿಯೂ ಈ ದೋಷವೇ ಇರುವುದಲ್ಲದೆ ಅಲ್ಲಲ್ಲಿ ನಿಲ್ಲಿಸಿ ಪಠಿಸುವುದರಿಂದ ಛಂದಸ್ಸುಗಳಿಗೂ ಲೋಪವುಂಟಾಗುವುದು. ಹೇಗೆಂದರೆ ಪ್ರತಿಅಕ್ಷರವನ್ನೂ ನಿಲ್ಲಿಸಿ ಪಠಿಸುವುದರಿಂದ ಅನೇಕ ಅಕ್ಷರಗಳಿಗೆ ಲೋಪಬರುವುದು. ಸಂಹಿತಾಕಾಲದಲ್ಲಿ ಪಠಿಸಬೇಕಾದ ವರ್ತ್ತಾಕ್ಷರಗಳನ್ನು ಸರಿಯಾಗಿ ಪಠಿಸಲಾಗುವುದಿಲ್ಲ. ಇದರಿಂದ ಛಂದೋಭಂಗವಾಗುವುದು. ನಾಲ್ಕು ಅಕ್ಷರಗಳನ್ನು ಪಠಿಸುವುದರಲ್ಲಿಯೂ ಈ ವಿಧವಾದ ದೋಷವೇ ಇರುವುದು. ಆದರೆ ಅರ್ಧಋಕ್ಕನ್ನು ಪಠಿಸುವ ವಿಧಾನದಲ್ಲಿ ಈ ಯಾವವಿಧವಾದ ದೋಷವೂ ಬರಲವಕಾಶವಿಲ್ಲ. ಆದ್ದರಿಂದ ಈರೀತಿ ಅರ್ಧ ಋಕ್ಕನ್ನಾಗಿ ಪಠಿಸುವುದೇ ಯೋಗ್ಯವಾಗ ಕ್ರಮವೆಂದು ಸಿದ್ಧಾಂತವಾಗಿರುವುದು.

ದ್ವಿಪ್ರತಿಷ್ಠೋ ವೈ ಪುರುಷಶ್ಚತುಷ್ಪಾದಾಃ ಪಶವೋ ಯಜಮಾನಮೇವ ತದ್ವಿಪ್ರತಿಷ್ಠಂ ಚತುಷ್ಪಾತ್ಸು ಪಶುಷು ಪ್ರತಿಷ್ಠಾಪಯತಿ ತಸ್ಮಾದ-ರ್ಧರ್ಚಶ ಏವಾಭಿಷ್ಟುಯಾತ್ ॥

ಇಮಮರ್ಧರ್ಚಪಕ್ಷಂ ಪ್ರಶಂಸತಿ — ಅರ್ಧರ್ಚಯೋರ್ದ್ವಿತ್ವಾದ್ಯಜಮಾನಸಾಮ್ಯ-ಮೃಚಾಂ ಪಾದಚತುಷ್ಟಯೋಪೇತತ್ವಾತ್ಪಶುಸಾಮ್ಯಮ್ ॥

ಅರ್ಧಋಕ್ಕಿನಂತೆ ಪಠಿಸುವ ವಿಧಾನವನ್ನು ಪ್ರಶಂಸೆಮಾಡುವರು. ಒಂದುಋಕ್ಕಿನಲ್ಲಿ ಎರಡು ಅರ್ಧಋಕ್ಕುಗಳಿರುವವು ಪುರುಷನಿಗೆ ಎರಡು ಪಾದ (ಕಾಲು) ಗಳಿರುವವು. ಆದ್ದರಿಂದ ಇವುಗಳಿಗೆ ಸಾಮ್ಯವಿದ್ದಂತಾಯಿತು. ಹಾಗೆಯೇ ನಾಲ್ಕು ಅಕ್ಷರ ಗಳನ್ನು ಪಠಿಸುವ ವಿಧಾನದಲ್ಲಿಯೂ ಪಶುಗಳಿಗೆ ನಾಲ್ಕು ಕಾಲುಗಳಿರುವವು. ಈ ಕಾರಣದಿಂದ ಎರಡುಪಾದಗಳಿರುವ ಪುರುಷನೇ ನಾಲ್ಕುಕಾಲುಗಳಿರುವ ಪಶುಗಳಿಗೆ ಸ್ವಾಮಿ (ಒಡೆಯ) ನೆಂದು ಪ್ರಸಿದ್ಧಿಯಾಗಿರುವುದು. ಈ ಕಾರಣದಿಂದಲೇ ಅರ್ಧಋಕ್ಕಿನಂತೆ ಪಠಿಸಬೇಕು.

ತದಾಹುರ್ಯನ್ಮಧ್ಯಂದಿನೇ ಮಧ್ಯಂದಿನ ಏವ ಗ್ರಾವ್ಣೋಽಭಿಷ್ಟೌತಿ ಕಥ-ಮಸ್ಯೇತರಯೋಃ ಸವನಯೋರಭಿಷ್ಟುತಂ ಭವತೀತಿ ಯದೇವ ಗಾಯತ್ರೀಭಿರಭಿಷ್ಟೌತಿ ಗಾಯತ್ರಂ ವೈ ಪ್ರಾತಸ್ಸವನಂ ತೇನ ಪ್ರಾತಃ ಸವನೇಽಥ ಯಜ್ಜಗತೀಭಿರಭಿಷ್ಟೌತಿ ಜಾಗತಂ ವೈ ತೃತೀ-ಯಸವನಂ ತೇನಸ್ಯತೃತೀಯಸವನೇ ॥

ಅಥ ಮಾಧ್ಯಂದಿನಕಾಲೀನಮಭಿಷ್ಟವಂ ಪ್ರಶ್ನೋತ್ತರಾಭ್ಯಾಂ ಪ್ರಶಂಸತಿ — ತತ್ರತ್ರಾಭಿ-ಷ್ಟವೇ ಚೋದ್ಯಮಾಹುಃ । ಯಸ್ಮಾತ್ಕಾರಣಾದಯಂ ಗ್ರಾವಸ್ತುತ್ತತ್ಪ್ರಯೋಗಸಂಬಂಧಿನಿ ಮಧ್ಯಂದಿನ ಏವ ಸವನೇ ಗ್ರಾವ್ಣಾಮಭಿಷ್ಟವಂ ಕರೋತಿ । ಏವಂ ಸತಿ ಕೇನ ಪ್ರಕಾರೇಣಾಸ್ಯ ಗ್ರಾವಸ್ತುತಃ ಪ್ರಾತಃಸವನತೃತೀಯಸವನಯೋರಭಿಷ್ಟವಃ ಸಿಧ್ಯತೀತಿ ಪ್ರಶ್ನಃ । ಋಙ್ಮಯ-

ದ್ಗಾಯತ್ರೀ ಜಗತೀಛಂದೋಧ್ವಯಂ ತದ್ದ್ವಾರಾನ್ಯಯೋರಪಿ ಸವನಯೋರಭಿಷ್ಟವಸಿದ್ಧಿರಿತ್ಯು-ತ್ತರವ್ ॥

ಮಧ್ಯಂದಿನ (ಮಧ್ಯಾಹ್ನ) ಕಾಲದಲ್ಲಿ ಪಠಿಸುವ ಅಭಿಷ್ಟವನ್ನು ಪ್ರಶ್ನೋತ್ತರರೂಪವಾಗಿ ಪ್ರಶಂಸೆಮಾಡುವರು. ಈ ಸ್ತುತಿಯನ್ನು ಮಾಡುವುದರಲ್ಲಿ ಒಂದು ವಿಶೇಷಸಂಗತಿಯನ್ನು ತಿಳಿಸುವರು. ಈ ಗ್ರಾವಸ್ತುತಿಪ್ರಯೋಗದ ವಿಷಯದಲ್ಲಿ ಮಾಧ್ಯಂದಿನಸವನಕಾಲದಲ್ಲಿ ಮಾತ್ರ ಈ ಗ್ರಾವಸ್ತುತಿಯನ್ನು ಮಾಡುವರು. ಇತರ ಸವನಗಳಲ್ಲಿ ಅಲ್ಲ. ಹೀಗೆ ಮಾಡುವುದರಿಂದ ಇತರ ಸವನಗಳಲ್ಲಿ ಎಂದರೆ ಪ್ರಾತಸ್ಸವನ ಮತ್ತು ತೃತೀಯಸವನಗಳಲ್ಲಿಯೂ ಗ್ರಾವಸ್ತುತಿಯನ್ನು ಮಾಡಿದಂತಾಗುವುದು ಹೇಗೆ? ಎಂಬುದೇ ಪ್ರಶ್ನೆಯು. ಇದಕ್ಕೆ ಪರಿಹಾರವೇನೆಂದರೆ, ಗಾಯತ್ರೀ ಮತ್ತು ಜಗತೀಛಂದಸ್ಸು ಎಂಬ ಎರಡು ಛಂದಸ್ಸುಗಳಿರುವುದರಿಂದ (ಮಾಧ್ಯಂದಿನಸವನದಲ್ಲಿ) ಈ ಎರಡು ಛಂದಸ್ಸುಗಳ ಮೂಲಕವೇ ಇತರ ಛಂದಸ್ಸುಗಳನ್ನು (ಇತರ ಸವನಗಳನ್ನು) ಸ್ತುತಿಸಿದಂತಾಗುವುದು ಎಂಬುವುದೇ ಸರಿಯಾದ ಉತ್ತರವು.

**ಏವಮು ಹಾಸ್ಯ ಮಧ್ಯಂದಿನೇ ಮಧ್ಯಂದಿನ ಏವ ಗ್ರಾವ್ಣೋಽಭಿಷ್ಟುವತಃ ಸರ್ವೇಷು ಸವನೇಷ್ವಭಿಷ್ಟುತಂಭವತಿ ಯ ಏವಂ ವೇದ ॥**

ವೇದನಂ ಶಂಸತಿ— ಏವಮು ಹಾನೇನೈವ ಗಾಯತ್ರೀಜಗತೀಛಂದೋದ್ವಾರೇಣ ॥

ಈರೀತಿಯಾಗಿ ಇತರ ಸವನಗಳನ್ನು ಬಿಟ್ಟು ಮಾಧ್ಯಂದಿನದಲ್ಲಿ ಮಾತ್ರ ಗ್ರಾವಸ್ತುತಿಯನ್ನು ಮಾಡುವುದರಿಂದ ಎಲ್ಲಾ (ಮೂರು) ಸವನಗಳಲ್ಲಿಯೂ ಗ್ರಾವಸ್ತುತಿಯನ್ನು ಮಾಡಿದಂತಾಗುವುದು. ಇದನ್ನು ತಿಳಿದಿರುವ ಪುರುಷನೂ ಅದರ ಫಲವನ್ನು ಪಡೆಯುವನು.

**ತದಾಹುರ್ಯದಧ್ವರ್ಯುರೇವಾನ್ಯಾನೃತ್ವಿಜಃ ಸಂಪ್ರೇಷ್ಯತ್ಯಥ ಕಸ್ಮಾದೇಷ ಏತಾಮಸಂಪ್ರೇಷಿತಃ ಪ್ರತಿಪದ್ಯತ ಇತಿ ಮನೋ ವೈ ಗ್ರಾವಸ್ತೋತ್ರೀಯಾಽಸಂಪ್ರೇಷಿತಂ ವಾ ಇದಂ ಮನಸ್ತಸ್ಮಾದೇಷ ಏತಾಮ-ಸಂಪ್ರೇಷಿತಃ ಪ್ರತಿಪದ್ಯತೇ ॥**

ಅಥ ಗ್ರಾವಸ್ತುತಃ ಸಂಪ್ರೈಷನಿರಪೇಕ್ಷತ್ವಂ ಪ್ರಶ್ನೋತ್ತರಾಭ್ಯಾಂ ದರ್ಶಯತಿ—ತತ್ರತ್ರ ಗ್ರಾವಸ್ತುದ್ವಿಷಯೇ ಪ್ರಶ್ನಮಾಹುಃ । ಯಸ್ಮಾತ್ಕಾರಣಾದಧ್ವರ್ಯುಃ ಸರ್ವಾನನ್ಯಾನೃತ್ವಿಜಃ ಸಂಪ್ರೇಷ್ಯತ್ಯೇವ ನ ತೂದಾಸ್ತೇ । ತಥಾ ಸತ್ಯೃತ್ವಿಗಂತರವದ್ಗ್ರಾವಸ್ತುದಧ್ವರ್ಯುಣಾ ಸಂಪ್ರೇ-ಷಣೀಯಃ । ತಚ್ಚ ನಾಸ್ತಿ ಕಸ್ಮಾತ್ಕಾರಣಾದಸಂಪ್ರೇಷಿತ ಏವ ಗ್ರಾವಸ್ತುದೇತಾಮೃಚಂ ಪ್ರಾರ-ಭತ ಇತಿ ಪ್ರಷ್ಟೄಣಾಮಭಿಪ್ರಾಯಃ । ತತ್ರೇದಮುತ್ತರಂ ಯೇಯಮೃಗ್ಗ್ರಾವಸ್ತೋತ್ರಸಂ-ಬಂಧಿನೀ ವಿದ್ಯತೇ ಸೇಯಂ ಮನಃ ಸ್ವರೂಪಾ । ಮನಶ್ಚೇದಮಿಂದ್ರಿಯಾಂತರೇಣ ಕೇನಚಿದಪ್ಯ-ಸಂಪ್ರೇಷಿತಮೇವ ಪ್ರವರ್ತತೇ । ತಸ್ಮಾದೇಷ ಗ್ರಾವಸ್ತುತ್ಸಂಪ್ರೈಷನಿರಪೇಕ್ಷ ಏವೈತಾಂ ಸ್ತೋ-ತ್ರೀಯಾಮೃಚಂ ಪ್ರತಿಪದ್ಯತೇ ॥

ಈಗ ಗ್ರಾವಸ್ತುತಿಮಾಡುವ ಋತ್ವಿಜನನ್ನು ಪ್ರೈಷಮಂತ್ರದಿಂದ ಆಹ್ವಾನಮಾಡಬೇಕಾಗಿಲ್ಲವೆಂಬ ವಿಷಯವನ್ನು ಪ್ರಶ್ನೋತ್ತರರೂಪವಾದ ವಾಕ್ಯಗಳಿಂದ ತಿಳಿಸುವರು. ಈ ಗ್ರಾವಸ್ತುತಿ ವಿಷಯದಲ್ಲಿ ಕೆಲವರು ಈರೀತಿ ಪ್ರಶ್ನೆಮಾಡುವರು. ಋತ್ವಿಗ್ವರಣಕಾಲದಲ್ಲಿ ಅಧ್ವರ್ಯುವು ಇತರ ಎಲ್ಲಾ ಋತ್ವಿಜರನ್ನೂ ಪ್ರೈಷಮಂತ್ರದ ಮೂಲಕ ಇಂತಹ ಕಾರ್ಯವನ್ನು ಮಾಡಬೇಕೆಂದು ನಿರ್ದೇಶಮಾಡುವನು. ಆದರೆ ಗ್ರಾವಸ್ತುತಿಮಾಡುವ ಋತ್ವಿಜನಿಗೆ ಪ್ರೈಷಮಂತ್ರದ ಮೂಲಕ ನಿರ್ದೇಶನಮಾಡುವುದಿಲ್ಲ. ಇತರ ಋತ್ವಿಜರಂತೆ ಗ್ರಾವಸ್ತುತಿಯನ್ನು ಮಾಡುವ ಋತ್ವಿಜನಿಗೂ ಪ್ರೈಷಮಂತ್ರದ ಮೂಲಕ ನಿರ್ದೇಶಿಸಬೇಡವೇ ಎಂದರೆ, ಅದು ಅವಶ್ಯಕವಿಲ್ಲ. ಪ್ರೈಷಮಂತ್ರದಿಂದ ನಿರ್ದೇಶವಿಲ್ಲದೆ ಆ ಋತ್ವಿಜನು ಗ್ರಾವಸ್ತುತಿಯನ್ನು ಹೇಗೆ ಮಾಡುವನು ಎಂದು ಕೆಲವರು ಪ್ರಶ್ನೆಮಾಡುವರು. ಅದಕ್ಕೆ ಇದೇ (ಮುಂದೆ ಹೇಳುವುದೇ) ಉತ್ತರವು. ಈ ಗ್ರಾವಸ್ತುತಿಸಂಬಂಧವಾದ ಋಕ್ಕುಗಳು ಮನಃಸ್ವರೂಪವಾದವು (ಮನಸ್ಸಿನಲ್ಲಿ ಮೆತ್ತನೆಯ ಧ್ವನಿಯಲ್ಲಿ ಪಠಿಸಲ್ಪಡಬೇಕಾದವು. ಮನಸ್ಸಿನಲ್ಲಿ ಮೆತ್ತಗೆ ಪಠಿಸಲ್ಪಡಬೇಕಾದ ಮಂತ್ರಾದಿಗಳನ್ನು ಪಠಿಸು ಎಂಬ ಸಂಪ್ರೇಷಣೆ ಏನೂ ಅವಶ್ಯಕವಿರುವುದಿಲ್ಲ. ಆದ್ದರಿಂದ ಗ್ರಾವಸ್ತುತಿಯನ್ನು ಮಾಡುವ ಋತ್ವಿಜನಿಗೆ ಪ್ರೈಷಮಂತ್ರದ ಮೂಲಕ ನಿರ್ದೇಶಮಾಡುವುದು ಅವಶ್ಯಕವಿರುವುದಿಲ್ಲ.

*English Translation*

**(How many verses are to be repeated over the Gravanas. How they ought to be repeated. They are required only at the midday libation. No order for repeating them necessary.)**

They say, with how many mantras should he (the Gravastut) pray over the Soma squeezing stones? The answer is, with a hundred, for the life of a man is a hundred years, he has a hundred powers, and a hundred bodily organs; by doing so, he makes man participate in age, strength and bodily organs. Others say, he ought to repeat thirty-three verses, for he (the Serpent Rishi) destroyed the sins of thirty-three gods, for there are thirty-three gods. Others says, He ought to recite an unlimited number of such mantras. For Prajapati is unlimited number of such mantras. For Prajapati is unlimited; and this recital of the mantras referring to the Soma squeezing stones belongs to Prajapati, and in it all desires are comprised. Who does so, obtains all he desires. Thence he ought to repeat an unlimited number of such mantras.

Now they ask, In what way should he repeat these mantras over the Soma squeezing stones? Syllable by syllable, or should he take four syllables together, or pada by pada, or half verse by half verse, or verse by verse: With whole verses repeated without stopping one does not perform any ceremony, nor with stopping at every pada. If the verses are repeated with stopping at every syllable, or every four syllables, then the metres become mutilated, for many syllables (sounds) would thus be lost. Thence he ought to repeat these as one half verse by another. For man has two legs, and cattle are four-

footed. For man has two legs and cattle are four-footed. By doing so, he places the two-legged sacrificer among the four-legged cattle. Thence he ought to repeat these mantras by half verses.

Since the Gravastut repeats only at every midday libation mantras over the Soma squeezing stones, how do mantras become repeated over them at the two other (morning and evening) libations? By repeating verses in the Gayatri metre is appropriate to the morning libation; and by repeating verses in the Jagati metre, he provides for the evening libation; for the Jagati metre is appropriate to the evening libation. In this way he who, with this knowledge, repeats the mantras over the Soma squeezing stones only at the midday libation, supplies these praises for the morning and evening libations.

They say, What is the reason, that, whilst the Adhvaryu calls upon the other priests to do their respective duties, the Gravastut repeats this mantra without being called upon (without receiving a praisha)? The ceremony of repeating mantras over the Soma squeezing stones is of the same nature as the mind which is not called upon. Therefore the Gravastut repeats his mantra without being called upon.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಷಡ್ವಿಂಶಾಧ್ಯಾಯಸ್ಯ ದ್ವಿತೀಯಃ ಖಂಡಃ.

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತಆರನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು
ಸಮಾಪ್ತವಾದುದು.



# ಅಥ ಷಡ್ವಿಂಶಾಧ್ಯಾಯೇ ತೃತೀಯಃ ಖಂಡಃ

## ಇಪ್ಪತ್ತಆರನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ಸುಬ್ರಹ್ಮಣ್ಯನೆಂಬ ಋತ್ವಿಜನು ಪಠಿಸಬೇಕಾದ ಮಂತ್ರಗಳು ಮತ್ತು ಅವುಗಳ ಸ್ವರೂಪವು. ಇವುಗಳನ್ನು ಯಾರು ಪಠಿಸಬೇಕು? ಪಾತ್ನೀವತಗ್ರಹದಿಂದ ಮಾಡುವ ಆಹುತಿಯು. ಅಗ್ನಿಧ್ರದಿಂದ ಮಾಡುವ ಯಾಜ್ಯಾಮಂತ್ರವು.]



**ವಾಗ್ವೈ ಸುಬ್ರಹ್ಮಣ್ಯಾ ತಸ್ಯೈ ಸೋಮೋರಾಜಾ ವತ್ಸಃ ಸೋಮೇ ರಾಜನಿ ಕ್ರೀತೇ ಸುಬ್ರಹ್ಮಣ್ಯಾಮಾಹ್ವಯಂತಿ ಯಥಾ ದೇನುಮುಪಹ್ವಯೇತ್ತೇನ ವತ್ಸೇನ ಯಜಮಾನಾಯ ಸರ್ವಾನ್ಕಾಮಾನ್ದುಹೇ। ಸರ್ವಾನಸ್ಮೈ ಕಾಮಾನ್ವಾಗ್ದುಹೇ ಯ ಏವಂ ವೇದ ॥**

ಗ್ರಾವಸ್ತುತ ಋತ್ವಿಜಃ ಕರ್ತವ್ಯಮಭಿಧಾಯ ಸುಬ್ರಹ್ಮಣ್ಯಾಖ್ಯಸ್ಯ ಋತ್ವಿಜಃ ಕರ್ತವ್ಯಂ ನಿರೂಪಯತಿ— ಸುಬ್ರಹ್ಮಣ್ಯಾಶಬ್ದೇನೇಂದ್ರಾಗಚ್ಛ ಹರಿವ ಆಗಚ್ಛೇತ್ಯಾದಿನಿಗದ ಉಚ್ಯತೇ। ಸಾ ಚ ಸುಬ್ರಹ್ಮಣ್ಯಾ ವಾಗೇವ ಶಬ್ದರೂಪತ್ವಾತ್ ಸತೀ ಧೇನುಸದೃಶೀ ತಸ್ಯಾಃ ಸುಬ್ರಹ್ಮಣ್ಯಾಯಾ ಧೇನೋಃ ಸೋಮೋ ರಾಜಾ ವತ್ಸಸ್ಥಾನೀಯಸ್ತಸ್ಮಾತ್ಸೋಮಕ್ರಯಾದೂರ್ಧ್ವಮೃತ್ವಿಜಸ್ತತ್ತತ್ಪ್ರಯೋಗೇಷು ಸುಬ್ರಹ್ಮಣ್ಯಾಮಾಹ್ವಯೇಯುರುಕ್ತನಿಗದಂ ಪಠೇಯುರಿತ್ಯರ್ಥಃ । ಯಥಾ ಲೋಕೇ ದೋಹನಾರ್ಥಂ ಕಾಂಚಿದ್ಧೇನುಂ ತದೀಯವತ್ಸಪ್ರದರ್ಶನೇನ ಸಮೀಪಂ ಪ್ರತ್ಯಾಹ್ವಯತೇ ತದ್ವದೇತದ್ದ್ರಷ್ಟವ್ಯಮ್ । ಏತೇ ನಾಽಽಹ್ವಾನೇನ ಯಜಮಾನಾರ್ಥಂ ಸರ್ವಾನ್ ಕಾಮಾನ್ದುಹೇ ಸಂಪಾದಯತಿ ॥ ವೇದನಂ ಪ್ರಶಂಸತಿ—

ಗ್ರಾವಸ್ತುತ್ ಎಂಬ ಋತ್ವಿಜರ ಕರ್ತವ್ಯವನ್ನು ಹೇಳಿದ್ದಾಯಿತು. ಈಗ ಸುಬ್ರಹ್ಮಣ್ಯ ಎಂಬ ಋತ್ವಿಜನ ಕರ್ತವ್ಯವನ್ನು (ಮಾಡಬೇಕಾದ ಕೆಲಸವನ್ನು) ತಿಳಿಸುವರು. ಸುಬ್ರಹ್ಮಣ್ಯಶಬ್ದವು (ಇಂದ್ರಾಗಚ್ಛ ಹರಿವ ಆಗಚ್ಛ) ಎಂಬ ನಿಗದ ಮಂತ್ರವನ್ನು (ವೇದಮಂತ್ರವನ್ನು) ತಿಳಿಸುತ್ತದೆ. ಈ ಸುಬ್ರಹ್ಮಣ್ಯಾ ಎಂಬ ದೇವತೆಯು ವಾಕ್ಸ್ವರೂಪವು ಮತ್ತು ಶಬ್ದಸದೃಶವಾದ ಗೋವು ಎಂದು ಹೇಳಲ್ಪಡುವುದು. ಈ ಸುಬ್ರಹ್ಮಣ್ಯವೆಂಬ ಧೇನುವಿನ ಕರುವು (ವತ್ಸವು) ಸೋಮರಾಜನೆಂದು ಹೇಳಲ್ಪಡುವುದು. ಈ ಕಾರಣದಿಂದ ಸೋಮಕ್ರಯಾನಂತರ ಆ ಪ್ರಯೋಗಾನಂತರ ಸುಬ್ರಹ್ಮಣ್ಯಾ ಎಂದು ಗೋವನ್ನು ಆಹ್ವಾನ ಮಾಡುವದು ಲೋಕವ್ಯವಹಾರದಲ್ಲಿ ಕರುವನ್ನು ಮುಂದೆ ತೋರಿಸಿ ಅದರ ಮಾತೆಯಾದ ಗೋವನ್ನು ಕರೆಯುವಂತೆ ಇಲ್ಲಿಯೂ ಸಹ ಸುಬ್ರಹ್ಮಣ್ಯಾ ಎಂಬ ಧೇನುವನ್ನು ಆಹ್ವಾನಮಾಡುವರು. ಈರೀತಿ ಆಹ್ವಾನಮಾಡುವುದರಿಂದ ಯಜ್ಞಮಾಡುವ ಯಜಮಾನನ ಸಮಸ್ತ ಅಭೀಷ್ಟಗಳೂ ಸಿದ್ಧಿಸುವವು. ಈ ವಿಷಯವನ್ನು ಚೆನ್ನಾಗಿ ತಿಳಿದಿರುವ ಪುರುಷನ ಅಭೀಷ್ಟಗಳೂ ಸಿದ್ಧಿಸುವವು.

**ತದಾಹುಃ ಕಿಂ ಸುಬ್ರಹ್ಮಣ್ಯಾಯೈ ಸುಬ್ರಹ್ಮಣ್ಯಾತ್ವಮಿತಿ ವಾಗೇವೇತಿ ಬ್ರೂಯಾದ್ವಾಗ್ಘ್ಯೈ:ಬ್ರಹ್ಮ ಚ ಸುಬ್ರಹ್ಮ ಚೇತಿ ॥**

ಪ್ರಶ್ನೋತ್ತರಾಭ್ಯಾಂ ಸುಬ್ರಹ್ಮಣ್ಯಾಂ ಪ್ರಶಂಸತಿ ತತ್ರತ್ರ ಸುಬ್ರಹ್ಮಣ್ಯಾಖ್ಯೇ ನಿಗದ-ರೂಪೇ ಮಂತ್ರೇ ನಾಮನಿಮಿತ್ತಂ ಪೃಚ್ಛಂತಿ । ವಾಗವೇತಿ ತದುತ್ತರಂ । ವಾಗ್ವಾ ಇತ್ಯಾದಿ ತದು-ಪಪಾದನಂ । ಬ್ರಹ್ಮ ವೇದೋ ವಾಗ್ಘ್ಯೈ ವಾಗಾತ್ಮಕ ಏವ ತಸ್ಮಿನ್ನಪಿ ವೇದೇ ಸುಷ್ಠು ಬ್ರಹ್ಮ ಸಾರಭೂತಂ ವೇದವಾಕ್ಯಂ ತದ್ರೂಪೇಯಂ ವಾಗ್ದೇವತಾ । ತಸ್ಮಾತ್ಸಾರಭೂತಸ್ಯ ನಿಗದಸ್ಯ ಸುಬ್ರಹ್ಮಣ್ಯೇತಿ ನಾಮಧೇಯಂ । ಪುಲ್ಲಿಂಗಶಬ್ದಾಭಿಧೇಯಸ್ಯ ನಿಗದಸ್ಯ ಸುಬ್ರಹ್ಮಣ್ಯೇತಿ ಸ್ತ್ರೀಲಿಂ-ಗಶಬ್ದೇನಾಭಿಧಾನಂ ವಾಗ್ರೂಪತ್ವವಿವಕ್ಷಯೇತಿ ॥

ಪ್ರಶ್ನೋತ್ತರರೂಪದಿಂದ ಸುಬ್ರಹ್ಮಣ್ಯ ಎಂಬ ದೇವತೆಯನ್ನು ಪ್ರಶಂಸೆಮಾಡುವರು. ವೇದಮಂತ್ರದಲ್ಲಿ ಸುಬ್ರಹ್ಮಣ್ಯ ಎಂಬ ಶಬ್ದಪ್ರಯೋಗವಿದೆ. ಈ ಶಬ್ದಕ್ಕೆ ಅರ್ಥವೇನು ಎಂದು ಕೆಲವರು ಕೇಳುವರು. ಸುಬ್ರಹ್ಮಣ್ಯ ಎಂಬ ಶಬ್ದವು ಬ್ರಹ್ಮ ಎಂಬ ಶಬ್ದದಿಂದ ನಿಷ್ಪನ್ನವಾಗಿದೆ. ಬ್ರಹ್ಮವೆಂದರೆ ವಾಗಾತ್ಮಕವಾದ ವೇದವೇ ಆಗಿರುವುದು. ಆ ವೇದದಲ್ಲಿಯೂ ಸಾರಭೂತವಾದ ವಾಕ್ಯಕ್ಕೆ ಎಂದರೆ ವಾಗ್ದೇವತೆಗೆ ಸುಬ್ರಹ್ಮಣ್ಯಾ ಎಂಬ ಹೆಸರಿರುವುದು. ಆದರೆ ಸುಬ್ರಹ್ಮಣ್ಯ ಶಬ್ದವು ಪುಲ್ಲಿಂಗವಾಚಕವಾಗಿದ್ದರೂ ಇದು ವಾಗ್ರೂಪವಾದ್ದರಿಂದ ಸ್ತ್ರೀಲಿಂಗದಲ್ಲಿ ಪ್ರಯುಕ್ತವಾಗಿರುವುದೆಂದು ಇಲ್ಲಿ ಹೇಳಿದೆ.

**ತದಾಹುರಥ ಕಸ್ಮಾದೇನಂ ಪುಮಾಂಸಂ ಸಂತಂ ಸ್ತ್ರೀಮಿವಾಽಚಕ್ಷತ ಇತಿ ವಾಗ್ಘಿ ಸುಬ್ರಹ್ಮಣ್ಯೇತಿ ಬ್ರೂಯಾತ್ತೇನೇತಿ ॥**

ಏತಮರ್ಥಂ ಪ್ರಶ್ನೋತ್ತರಾಭ್ಯಾಂ ದರ್ಶಯತಿ—

ಮತ್ತೆ ಕೆಲವರು ಈರೀತಿ ಹೇಳುವರು. ಈ ಸುಬ್ರಹ್ಮಣ್ಯ ಎಂಬ ಹೆಸರಿನ ಋತ್ವಿಜನು ಪುರುಷನಾದರೂ ಏತಕ್ಕಾಗಿ ಇವನನ್ನು ಸ್ತ್ರೀಯಂತೆ ಭಾವಿಸಿ ಸ್ತ್ರೀಲಿಂಗ ಶಬ್ದದಿಂದ ವ್ಯವಹರಿಸುವರು? ಎಂದು. ಇದಕ್ಕೆ ಉತ್ತರವೇನೆಂದರೆ, ಸುಬ್ರಹ್ಮಣ್ಯ ಗೋವು) ಎಂಬುವುದು ವಾಕ್ಸ್ವರೂಪವು. ವಾಕ್ ಯಾವಾಗಲೂ ಸ್ತ್ರೀಲಿಂಗವು. ಆದ್ದರಿಂದ ಇಲ್ಲಿ ಸ್ತ್ರೀಲಿಂಗಪ್ರಯೋಗವು ಅನುಚಿತವಲ್ಲ.

**ತದಾಹುರ್ಯದಂತರ್ವೇದೀತರ ಋತ್ವಿಜ ಆರ್ತ್ವಿಜ್ಯಂ ಕುರ್ವಂತಿ ಬಹಿ-ರ್ವೇದಿ ಸುಬ್ರಹ್ಮಣ್ಯಾಕಥಮಸ್ಯಾಂತರ್ವೇದ್ಯಾರ್ತ್ವಿಜ್ಯಂ ಕೃತಂ ಭವತೀತಿ ವೇದೇರ್ವಾ ಉತ್ಕರಮುತ್ಕಿರಂತಿ ಯದೇವೋತ್ಕರೇ ತಿಷ್ಠನ್ನಾಹ್ವಯತೀತಿ ಬ್ರೂಯಾತ್ತೇನೇತಿ ॥**

ಪುನರಪಿ ಪ್ರಶ್ನೋತ್ತರಾಭ್ಯಾಂ ಸುಬ್ರಹ್ಮಣ್ಯಾಹ್ವಾನಸ್ಯ ದೇಶವಿಶೇಷಂ ನಿರೂಪಯತಿ— ಅಧ್ವರ್ಯುಹೋತೃಪ್ರಭೃತಯಃ ಸರ್ವೇಽಪ್ಯೃತ್ವಿಜೋ ವೇದಿಮಧ್ಯ ಏವಾರ್ತ್ವಿಜ್ಯಂ ಕುರ್ವಂತಿ ಸುಬ್ರಹ್ಮಣ್ಯಾ ವೇದೇರ್ಬಹಿರ್ಭಾಗೇ ಸುಬ್ರಹ್ಮಣ್ಯಾಖ್ಯೇನ ಋತ್ವಿಜಾಹೂಯತೇ । ತಥಾ ಸತಿ ಕೇನ ಪ್ರಕಾರೇಣಾಸ್ಯ ಸುಬ್ರಹ್ಮಣ್ಯಾ (ಣ್ಯ) ನಾಮ್ನಾ ಋತ್ವಿಜೋ ವೇದಿಮಧ್ಯ ಆರ್ತ್ವಿಜ್ಯಂ ಕೃತಂ

ಸ್ಯಾದಿತಿ ಪ್ರಶ್ನಃ । ತಸ್ಯೇದಮುತ್ತರಂ ವೇದೇಃ ಸಕಾಶಾದುತ್ಕರಮುದ್ಧರ್ತವ್ಯಂ ಪಾಂಸುಮುತ್ಕಿರಂತ್ಯುತ್ಕರಸ್ಯ ಬಹಿರ್ದೇಶಂ ವೇದೇರುತ್ತರಭಾಗೇ ಪ್ರಕ್ಷಿಪಂತಿ । ತತ್ರ ಕೃತಂ ಸುಬ್ರಹ್ಮಣ್ಯಾಹ್ವಾನಂ ವೇದಿಮಧ್ಯ ಏವ ಕೃತಂ ಭವೇತ್ । ಯಸ್ಮಾದೇವ ಕಾರಣಾದಯಂ ಸುಬ್ರಹ್ಮಣ್ಯ(ಣ್ಯ) ಉತ್ಕರದೇಶೇ ತಿಷ್ಠನ್ಸುಬ್ರಹ್ಮಣ್ಯಾಮಾಹ್ವಯತಿ ತೇನ ಕಾರಣೇನೇತ್ಯುತ್ತರವಾದಿನೋ ವಚನಂ ॥

ಪುನಃ ಪ್ರಶ್ನೋತ್ತರರೂಪದಿಂದ ಸುಬ್ರಹ್ಮಣ್ಯನೆಂಬ ಋತ್ವಿಜನ ಆಹ್ವಾನಪ್ರದೇಶವನ್ನು ತಿಳಿಸುವರು. ಅಧ್ವರ್ಯು, ಹೋತೃ ಮೊದಲಾದ ಋತ್ವಿಜರೆಲ್ಲರೂ ಯಜ್ಞವೇದಿಯ ಮಧ್ಯದಲ್ಲಿದ್ದುಕೊಂಡೇ ತಮ್ಮ ತಮ್ಮ ಕರ್ತವ್ಯಕರ್ಮಗಳನ್ನು ನಿರ್ವಹಿಸುವರು. ಆದರೆ ಸುಬ್ರಹ್ಮಣ್ಯನೆಂಬ ಋತ್ವಿಜನು ವೇದಿಯ ಹೊರಗೆ ನಿರತುಕೊಂಡೇ ಸುಬ್ರಹ್ಮಣ್ಯಾ ಎಂಬ ಗೋವನ್ನು ಆಹ್ವಾನಿಸುವನು? ಹೀಗಿರುವಾಗ ಸುಬ್ರಹ್ಮಣ್ಯನೆಂಬ ಋತ್ವಿಜನಿಗೆ ವೇದಿಮಧ್ಯದಲ್ಲಿ ಸ್ಥಾನವನ್ನು ಏತಕ್ಕೆ ಕಲ್ಪಿಸಬೇಕು? ಎಂಬುದೇ ಪ್ರಶ್ನೆಯು. ಇದಕ್ಕೆ ಉತ್ತರವೇನೆಂದರೆ—ವೇದಿಯಲ್ಲಿ ಬಿದ್ದ ಧೂಳನ್ನು ತೆಗೆದು ವೇದಿಯ ಉತ್ತರಭಾಗದಲ್ಲಿ ಹೊರಗೆ ಹಾಕುವರು ಅಲ್ಲಿ (ವೇದಿಯ ಹೊರಗೆ) ಮಾಡಬೇಕಾದ ಆಹ್ವಾನವನ್ನು ವೇದಿಮಧ್ಯದಲ್ಲಿಯೇ ಮಾಡಿದಂತಾಯಿತು. ಆದ್ದರಿಂದ ಧೂಳು ತುಂಬಿರುವ ವೇದಿಪ್ರದೇಶದಲ್ಲಿ ನಿಂತು ಸುಬ್ರಹ್ಮಣ್ಯವೆಂಬ ಗೋವನ್ನು ಆಹ್ವಾನಮಾಡುವುದರಿಂದ ವೇದಿಯ ಹೊರಗಡೆ ಹಾಕಲ್ಪಡುವ ಧೂಳಿನಮೇಲೆ ನಿಂತುಕೊಂಡೇ ಸುಬ್ರಹ್ಮಣ್ಯನನ್ನು ಆಹ್ವಾನಮಾಡಿದಂತಾಯಿತು. ಇದೇ ಮೇಲಿನ ಪ್ರಶ್ನೆಗೆ ಪ್ರತ್ಯುತ್ತರವು.

ತದಾಹುರಥ ಕಸ್ಮಾದುತ್ಕರೇ ತಿಷ್ಠನ್ಸುಬ್ರಹ್ಮಣ್ಯಾಮಾಹ್ವಯತೀತ್ಯೃಷಯೋ ವೈ ಸತ್ರಮಾಸತ ತೇಷಾಂ ಯೋ ವರ್ಷಿಷ್ಠ ಆಸೀತ್ತಮಬ್ರುವನ್ಸುಬ್ರಹ್ಮಣ್ಯಾಮಾಹ್ವಯ ತ್ವಂ ನೋ ನೇದಿಷ್ಠಾದ್ದೇವಾನ್ಹ್ವಯಿಷ್ಯಸೀತಿ ವರ್ಷಿಷ್ಠಮೇವೈನಂ ತತ್ಕುರ್ವಂತ್ಯಥೋ ವೇದಿಮೇವ ತತ್ಸರ್ವಾಂ ಪ್ರೀಣಾತಿ ॥

ಸುಬ್ರಹ್ಮಣ್ಯಾಹ್ವಾನಸ್ಯೋತ್ಕರದೇಶಂ ವಿಧಾಯ ಪುನಃ ಪ್ರಶ್ನೋತ್ತರಾಭ್ಯಾಂ ಪ್ರಶಂಸತಿ—ಆಹವನೀಯದೇಶಾನ್ಪರಿತ್ಯಜ್ಯ ಸುಬ್ರಹ್ಮಣ್ಯಾಹ್ವಾನಸ್ಯೋತ್ಕರದೇಶಸ್ವೀಕಾರೇ ಕಿಂ ಕಾರಣಮಿತಿ ಪ್ರಶ್ನಃ । ತಸ್ಯೇದಮುತ್ತರಂ । ಋಷಯೋ ಹಿ ಪುರಾ ಸತ್ರಮಾಸತ ತೇಷಾಮೃಷೀಣಾಂ ಮಧ್ಯೇ ಯೋ ವರ್ಷಿಷ್ಠೋಽತಿಶಯೇನ ವೃದ್ಧ ಆಸೀತ್ತಂ ಪ್ರತ್ಯೇವಮಬ್ರುವನ್ । ಹೇ ಮಹರ್ಷೇ ಸುಬ್ರಹ್ಮಣ್ಯಾಮಾಹ್ವಯ ನೋಽಸ್ಮಾಕಂ ಮಧ್ಯೇ ತ್ವಮೇವ ನೇದಿಷ್ಠಾದ್ವಯೋವೃದ್ಧತ್ವೇನ ದೇವಲೋಕಪ್ರಾಪ್ತೇಃ ಪ್ರತ್ಯಾಸನ್ನತ್ವೇ ಸತ್ಯಂತಿಕತಮತ್ವಾದ್ದೇವಾನ್ಹ್ವಯಿಷ್ಯಸ್ಯಾಹ್ವಾತುಂ ಸಮರ್ಥೋಽಸಿ । ಏವಮೃಷಿಭಿರುಕ್ತತ್ವಾದತ್ರಾಪ್ಯುತ್ಕರದೇಶೇ ತಿಷ್ಠಂತಂ ಸುಬ್ರಹ್ಮಣ್ಯಾಹ್ವಾನಕರ್ತಾರಮೇನಂ ವರ್ಷಿಷ್ಠಮೇವಾತಿಶಯೇನ ವೃದ್ಧಮೇವ ಕುರ್ವಂತಿ । ಉತ್ಕರಸ್ಯ ವೇದಿಗತಪಾಂಸುರೂಪತ್ವಾತ್ತತ್ರಾವಸ್ಥಾನೇ ಸತಿ ವೇದಿಂ ಸರ್ವಾಂ ನಿರವಶೇಷಾಂ ಪ್ರೀಣಾತಿ ತೋಷಯತಿ ॥

ಸುಬ್ರಹ್ಮಣ್ಯಾಹ್ವಾನವನ್ನು ಧೂಳುತುಂಬಿದ (ಉತ್ಕರ) ಪ್ರದೇಶವೆಂದು ಹೇಳಿ ಪುನಃ ಈ ವಿಷಯವನ್ನು ಪ್ರಶ್ನೋತ್ತರರೂಪದಿಂದ ಪ್ರಶಂಸೆಮಾಡುವರು. ಸುಬ್ರಹ್ಮಣ್ಯನನ್ನು ಆಹ್ವಾನಮಾಡುವುದಕ್ಕಾಗಿ ಆಹವನೀಯ ಪ್ರದೇಶವನ್ನು ಬಿಟ್ಟು ಉತ್ಕರ

(ಧೂಳು) ಪ್ರದೇಶಕ್ಕೆ ಹೋಗಿ ಕರೆಯಬೇಕಾದ ಕಾರಣವೇನು? ಎಂಬುದು ಪ್ರಶ್ನೆಯು. ಅದಕ್ಕೆ ಇದೇ ಉತ್ತರವು—ಋಷಿಗಳೆಲ್ಲರೂ ಪೂರ್ವದಲ್ಲಿ ಸತ್ರಯಾಗವನ್ನು ಮಾಡುತ್ತಿದ್ದರು. ಆ ಋಷಿಗಳ ಮಧ್ಯದಲ್ಲಿ ಒಬ್ಬ ಋಷಿಯು ಅತಿವೃದ್ಧನಾಗಿದ್ದನು. ಆ ವೃದ್ಧಋಷಿಯನ್ನು ಕುರಿತು ಇತರ ಋಷಿಗಳು ಇಂತೆಂದರು—ಎಲೈ ಮಹರ್ಷಿಯೇ ನೀನು ನಮಗಾಗಿ ಈ ಯಜ್ಞದಲ್ಲಿ ಸುಬ್ರಹ್ಮಣ್ಯನನ್ನು ಆಹ್ವಾನಮಾಡು. ಏಕೆಂದರೆ, ನೀನು ನಮ್ಮೆಲ್ಲರಿಗಿಂತ ವಯೋವೃದ್ಧನಾಗಿರುವೆ. ದೇವಲೋಕಪ್ರಾಪ್ತಿಯು ಎಲ್ಲರಿಗಿಂತ ನಿನಗೆ ಸನ್ನಿಹಿತವಾಗಿದೆ. ಆದ್ದರಿಂದ ನೀನು ಸುಬ್ರಹ್ಮಣ್ಯನನ್ನು ಆಹ್ವಾನಮಾಡಲು ಸಮರ್ಥನಾಗಿರುವೆ ಎಂದು ಪ್ರಾರ್ಥಿಸಲು ಆ ವೃದ್ಧಋಷಿಯು ಅವರ ಪ್ರಾರ್ಥನೆಯನ್ನಂಗೀಕರಿಸಿ ಅದರಂತೆ ಮಾಡಿದನು. ಆದ್ದರಿಂದ ಅದೇ ಪದ್ಧತಿಯನ್ನನುಸರಿಸಿ ಈಗಲೂ ಯಜ್ಞಾದಿಗಳಲ್ಲಿ ವಯೋವೃದ್ಧನಾದ ಬ್ರಾಹ್ಮಣನೇ ಸುಬ್ರಹ್ಮಣ್ಯನನ್ನು ಆಹ್ವಾನಮಾಡುವನು. ವೇದಿಯಿಂದ ತೆಗೆದ ಉತ್ಕರ (ಪಾಂಸು) ವು ಆ ಸುಬ್ರಹ್ಮಣ್ಯನ ಸಮೀಪದಲ್ಲಿರುವುದರಿಂದ ವೇದಿಯು ಬಹಳವಾಗಿ ಸಂತೋಷಯುಕ್ತವಾಗಿರುವುದು.

**ತದಾಹುಃ ಕಸ್ಮಾದಸ್ಮಾ ಋಷಭಂ ದಕ್ಷಿಣಾಮಭ್ಯಾಜಂತೀತಿ ವೃಷಾ ವಾ ಋಷಭೋ ಯೋಷಾ ಸುಬ್ರಹ್ಮಣ್ಯಾ ತನ್ಮಿಥುನಂ ತಸ್ಯ ಮಿಥುನಸ್ಯ-ಪ್ರಜಾತ್ಯಾ ಇತಿ ॥**

**ಅಥ ಸುಬ್ರಹ್ಮಣ್ಯಾಖ್ಯಸ್ಯರ್ತ್ವಿಜಃ ಸಮೀಪೇ ದಕ್ಷಿಣಾತ್ವೇನ ವೃಷಭಾನಯನಂ ಪ್ರಶ್ನೋತ್ತರಾಭ್ಯಾಂ ನಿರೂಪಯತಿ—ತತ್ತಸ್ಮಿನ್ಸುಬ್ರಹ್ಮಣ್ಯಸ್ಯ ವಿಷಯೇ ಪ್ರಶ್ನಮಾಹುಸ್ತಸ್ಮೈ ಸುಬ್ರಹ್ಮಣ್ಯಾಯ ಋಷಭಂ ಪುಂಗವಂ ದಕ್ಷಿಣಾಂ ಕೃತ್ವಾಽಭ್ಯಾಜಂತಿ ಸಮೀಪಮಾನಯಂತಿ ತತ್ರ ಕಿಂ ಕಾರಣಮಿತಿ ಪ್ರಶ್ನಾಭಿಪ್ರಾಯಃ । ತಸ್ಯೇದಮುತ್ತರಂ ಯೋಽಯಂ ದಕ್ಷಿಣಾತ್ವೇನ ನೀಯಮಾನ ಋಷಭಃ ಸೋಽಯಂ ವೃಷಾ ವೈ ಸೇಚನಸಮರ್ಥಃ ಪುರುಷಸ್ವರೂಪ ಏವ ಸುಬ್ರಹ್ಮಣ್ಯಾ ತು ಸ್ತ್ರೀಲಿಂಗಶಬ್ದಾಭಿಧೇಯತ್ವಾದ್ಯೋಷಿದ್ರೂಪಾ ತದುಭಯಂ ಮಿಲಿತ್ವಾ ಮಿಥುನಂ ಭವತಿ । ತಸ್ಯ ಮಿಥುನಸ್ಯ ಪ್ರಜಾತ್ಯೈ ಪ್ರಜೋತ್ಪಾದನಾರ್ಥಮೃಷಭಾನಯನಮಿತ್ಯು-ತ್ತರವಾದಿನೋಽಭಿಪ್ರಾಯಃ ॥**

ಈಗ ಸುಬ್ರಹ್ಮಣ್ಯಾ ಎಂಬ ಋತ್ವಿಜನ ಸಮೀಪಕ್ಕೆ ದಕ್ಷಿಣಾರ್ಥವಾಗಿ ತಂದು ನಿಲ್ಲಿಸಿರುವ ವೃಷಭದ ವಿಷಯವನ್ನು ಪ್ರಶ್ನೋತ್ತರಗಳಿಂದ ತಿಳಿಸುವರು. ಈ ಸುಬ್ರಹ್ಮಣ್ಯನೆಂಬ ಋತ್ವಿಜನ ವಿಷಯದಲ್ಲಿ ಕೆಲವರು ಒಂದು ಪ್ರಶ್ನೆಯನ್ನು ಕೇಳುವರು. ಈ ಸುಬ್ರಹ್ಮಣ್ಯನೆಂಬ ಋತ್ವಿಜನಿಗೆ ಯಜ್ಞದಲ್ಲಿ ದಕ್ಷಿಣೆಗಾಗಿ ಕೊಡಬೇಕಾದ ಒಂದು ವೃಷಭ(ಹೋರಿ) ವನ್ನು ಆ ಋತ್ವಿಜನ ಸಮೀಪದಲ್ಲಿ ನಿಲ್ಲಿಸುವರು. ಇದಕ್ಕೆ ಕಾರಣವೇನು ಎಂದು ಕೆಲವರ ಪ್ರಶ್ನೆಯು. ಇದಕ್ಕೆ ಉತ್ತರವೇನೆಂದರೆ ಸುಬ್ರಹ್ಮಣ್ಯಾ ಎಂಬ ಋತ್ವಿಜನಿಗೆ ದಕ್ಷಿಣಾರೂಪವಾಗಿ ಕೊಡಬೇಕಾದ ವೃಷಭವು (ಹೋರಿಯು) ವೀರ್ಯವನ್ನು ಗೋವಿನಲ್ಲಿ ಸೇಚನಮಾಡಿ ಕರುವನ್ನು ಉತ್ಪಾದನೆಮಾಡಲು ಸಮರ್ಥವಾಗಿರುವುದು. ಆದ್ದರಿಂದ ಇದು ಪುರುಷಸ್ವರೂಪವಾಗಿರುವುದು. ಸುಬ್ರಹ್ಮಣ್ಯಾ ಎಂಬ ಶಬ್ದವು ವಾಕ್ಸ್ವರೂಪವಾಗಿರುವುದರಿಂದ ಸ್ತ್ರೀಲಿಂಗದ ಪ್ರತೀಕವು. ಈರೀತಿ ಪುಲ್ಲಿಂಗ ಸ್ತ್ರೀಲಿಂಗಗಳ ಶಬ್ದಸಂಕೇತವಿರುವುದರಿಂದ ಈ ಮಿಲನವು ಮಿಥುನವಾಗುವುದು ಎಂದರೆ ಪ್ರಜೋತ್ಪಾದನೆಮಾಡಲು ಸಮರ್ಥವಾಗುವುದು ಎಂದು ಉತ್ತರವಾದಿಗಳ ಅಭಿಪ್ರಾಯವು.

**ಉಪಾಂಶು ಪಾತ್ನೀವತಸ್ಯಾಽಽಗ್ನೀಧ್ರೋ ಯಜತಿ ರೇತೋ ವೈ ಪಾತ್ನೀ-ವತ ಉಪಾಂಶ್ವಿವ ವೈ ರೇತಸಃ ಸಿಕ್ತಿಃ ॥**

ಸುಬ್ರಹ್ಮಣ್ಯಸ್ಯ ಕರ್ತವ್ಯಮುಕ್ತ್ವಾಗ್ನೀಧ್ರಸ್ಯರ್ತ್ವಿಜಃ ಕರ್ತವ್ಯಂ ವಿಧತ್ತೆ— ಪಾತ್ನೀವತಾಖ್ಯೋ ಯೋ ಗ್ರಹವಿಶೇಷಸ್ತಸ್ಯ ಮಂತ್ರ ಉಪಾಂಶು ಶನೈರುಚ್ಚಾರ್ಯಾಗ್ನೀಧ್ರೋ ಯಜೇತ್ । ಯೋಽಯಂ ಪಾತ್ನೀವತಗ್ರಹಃ ಸ ರೇತಸಃ ಸ್ವರೂಪಮ್ । ಲೋಕೇಽಪಿ ರೇತಸಃ ಸಿಕ್ತಿಃ ಸೇಚನಮುಪಾಂಶ್ವಿವ ವೈ ಧ್ವನಿಮಂತರೇಣ ರಹಸ್ಯೇವ ಕ್ರಿಯತೇಽತಸ್ತತ್ಸಾಮ್ಯಾರ್ಥಮುಪಾಂಶುತ್ವಂ ಯುಕ್ತಮ್ ॥

ಸುಬ್ರಹ್ಮಣ್ಯವೆಂಬ ಋತ್ವಿಜನ ಕರ್ತವ್ಯವನ್ನು ಹೇಳಿ ಈಗ ಆಗ್ನೀಧ್ರನೆಂಬ ಋತ್ವಿಜನ ಕರ್ತವ್ಯವನ್ನು ಹೇಳುವರು ಪಾತ್ನೀವತವೆಂಬ ಗ್ರಹವನ್ನು (ಪಾತ್ರೆಯನ್ನು ಹೋಮಮಾಡುವಾಗ ಆದನ್ನು ಆಗ್ನೀಧ್ರನೆಂಬ ಋತ್ವಿಜನು ಬಹಳ ಮೆತ್ತನೆಯ ಧ್ವನಿಯಿಂದ ಉಚ್ಚರಿಸುತ್ತಾ ಹೋಮಮಾಡಬೇಕು. ಏಕೆಂದರೆ ಪಾತ್ನೀವತಗ್ರಹವೆಂಬುವುದು ರೇತಸ್ಸಿನ ಸ್ವರೂಪವು (ಸಂಕೇತವು) ಲೋಕದಲ್ಲಿ ಪುರುಷನು ರೇತಸ್ಸನ್ನು ಸ್ತ್ರೀಯೋನಿಯಲ್ಲಿ ಸೇಚನಮಾಡುವಾಗ ರಹಸ್ಯಪ್ರದೇಶದಲ್ಲಿ ಯಾರಿಗೂ ತಿಳಿಯದಂತೆ ನಿಶ್ಶಬ ವಾಗಿ ಸೇಚನಮಾಡುವನು. ಆದ್ದರಿಂದ ಆಗ್ನೀಧ್ರನು ಈ ಪಾತ್ನೀವತಗ್ರಹವನ್ನು ಹೋಮಮಾಡುವಾಗ ಉಪಾಂಶು (ಬಹಳ ಮೆತ್ತನೆಯ) ಸ್ವರದಿಂದ ಅಗ್ನಿಯಲ್ಲಿ ಹೋಮಮಾಡುವುದು ಯುಕ್ತವೇ ಆಗಿದೆ.

**ನಾನುವಷಟ್ಕರೋತಿ ಸಂಸ್ಥಾ ವಾ ಏಷಾ ಯದನುವಷಟ್ಕಾರೋ ನೇದ್ರೇತಃ ಸಂಸ್ಥಾಪಯಾನೀತ್ಯಸಂಸ್ಥಿತಂ ವೈ ರೇತಸಃ ಸಮೃದ್ಧಂ ತಸ್ಮಾನ್ನಾನುವಷಟ್ಕರೋತಿ ॥**

ಅತ್ರ ಪಾತ್ನೀವತಗ್ರಹೇ ಸೋಮಸ್ಯಾಗ್ನೇ ವೀಹೀತ್ಯೇತಮನುವಷಟ್ಕಾರಂ ನಿಷೇಧತಿ— ಸರ್ವತ್ರ ಗ್ರಹೇಷು ವಷಟ್ಕಾರಾನುವಷಟ್ಕಾರಾಭ್ಯಾಂ ಹೂಯತೇ । ಅತ್ರ ತು ಪಾತ್ನೀವತಗ್ರಹೇ ವಷಟ್ಕಾರಹೋಮ ಏಕ ಏವ ನ ತ್ವಿತರಃ । ತತ್ರ ಹೇತುಃ ಸಂಸ್ಥಾವಾ ಇತ್ಯಾದಿಃ । ಯೋಽಯಮನುವಷಟ್ಕಾರೋಽಸ್ತಿ ಸೋಽಯಂ ಸಂಸ್ಥಾ ವೈ ಗ್ರಹಸ್ಯ ಸಮಾಪ್ತಿರೇವ । ತಥಾ ಸತಿ ಸ ಪಾತ್ನೀವತಗ್ರಹರೂಪಂ ರೇತೋ ನೇತ್ಸಂ ಸ್ಥಾಪಯಾನಿ ಸರ್ವಥಾ ಸಮಾಪ್ತಿಂ ನ ಕರವಾಣೀತ್ಯಭಿಪ್ರೇತ್ಯ ತತ್ಸಮಾಪ್ತೇರ್ಭೀತೋ ಭವೇತ್ । ಅಸಂಸ್ಥಿತಮಸಮಾಪ್ತಮನುಪರತಂ ರೇತಸಃ ಸೇಚನಮುತ್ಪತ್ತ್ಯೋತ್ಪತ್ತ್ಯಾ ಸಮೃದ್ಧಂ ಭವತಿ । ತಸ್ಮಾದೇವ ನಾನುವಷಟ್ಕುರ್ಯಾತ್ । ತಥಾ ಚ ಯಜ್ಞಗಾಥಾಂ ಪಠಂತಿ ॥

"ಋತುಯಾಜಾನ್ ದ್ವಿದೇವತ್ಯಾನ್ಯಶ್ಚ ಪಾತ್ನೀವತೋ ಗ್ರಹಃ ।
ಆದಿತ್ಯಗ್ರಹಸಾವಿತ್ರೌ ತಾನ್ಸ್ಮ ಮಾಽನುವಷಟ್ಕೃತಾಃ ॥" ಇತಿ.

ಪಾತ್ನೀವತಗ್ರಹವನ್ನು ಹೋಮಮಾಡುವಾಗ ಅಗ್ನೇ ವೀಹಿ ಎಂದು ವಷಟ್ಕಾರಪೂರ್ವಕವಾಗಿ ಹೋಮಮಾಡುವುದನ್ನು ನಿಷೇಧಿಸುತ್ತಾರೆ— ಇತರ ಎಲ್ಲಾ ಗ್ರಹಗಳನ್ನು ಹೋಮಮಾಡುವಾಗ ವಷಟ್ಕಾರ ಮತ್ತು ಅನುವಷಟ್ಕಾರಗಳಿಂದ ಹೋಮಮಾಡುವರು. ಆದರೆ ಇಲ್ಲಿ ಎಂದರೆ ಪಾತ್ನೀವತಗ್ರಹವನ್ನು ಹೋಮಮಾಡುವಾಗ ವಷಟ್ಕಾರವೊಂದರಿಂದಲೇ ಹೋಮ ಮಾಡುವರು. ಅನುವಷಟ್ಕಾರವನ್ನು ಉಪಯೋಗಿಸುವುದಿಲ್ಲ. ಏಕೆಂದರೆ ವಷಟ್ಕಾರ ಮತ್ತು ಅನುವಷಟ್ಕಾರಗಳೆರಡೂ ಇದ್ದರೆ ಅದಕ್ಕೆ ಸಂಸ್ಥೆಯೆಂದು ಹೆಸರು ಎಂದರೆ ಒಂದು ಪ್ರಕರಣಪೂರ್ತಿಯು ಸಮಾಪ್ತಿಯಾದಂತಾಗುವುದು. ಈ ಪಾತ್ನಿವತಗ್ರಹ

ಹೋಮವು ಸಮಾಪ್ತಿಯಾದರೆ ರೇತಸ್ಸಿನ ಸೇಚನ (ಸಾಮರ್ಥ್ಯವು) ಅಂತ್ಯವಾಗುವುದು, ಮುಂದೇ ರೇರಸ್ಸೇಚನವನ್ನು ಮಾಡಲು ಸಾಮರ್ಥ್ಯವಿರುವುದಿಲ್ಲವಾದ್ದರಿಂದ ಈ ಪಾತ್ನೀವತಗ್ರಹವನ್ನು ಪೂರ್ತಿಮಾಡಲು ಭಯಪಡುವರು. ಇದನ್ನು ಪೂರ್ತಿಮಾಡದಿರುವುದರಿಂದ ರೇತಸ್ಸುಪುರುಷನಲ್ಲಿ ಸಮೃದ್ಧವಾಗಿ ಇರುವುದು. ಈ ಕಾರಣದಿಂದ ಪಾತ್ನೀವತಗ್ರಹವನ್ನು ಹೋಮಮಾಡುವಾಗ ಅನುವಷಟ್ಕಾರವನ್ನು ಉಪಯೋಗಿಸಬಾರದು. ಈ ವಿಷಯದಲ್ಲಿ ಒಂದು ಯಜ್ಞಗಾಥೆಯನ್ನು ತಿಳಿಸುವರು.

ಋತುಯಾಜಾನ್ ದ್ವಿದೇವತ್ಯಾನ್ಯಶ್ಚ ಪಾತ್ನೀವತೋ ಗ್ರಹಃ ।
ಆದಿತ್ಯಗ್ರಹಸಾವಿತ್ರೌ ತಾನ್ಸ್ಮ ಮಾಽನುವಷಟ್ಕೃಥಾಃ ॥

ಯಜ್ಞಮಾಡುವಾಗ ಋತುಯಾಜಾದಿಹೋಮಗಳನ್ನೂ ದ್ವಿದೇವತ್ಯ (ಎರಡು ದೇವತೆಗಳಿರುವ ಮಂತ್ರಗಳನ್ನೂ ಪಾತ್ನೀವತಗ್ರಹವನ್ನೂ, ಆದಿತ್ಯ, ಸವಿತೃ ಎಂಬ ದೇವತಾಕವಾದ ಗ್ರಹಗಳನ್ನೂ ಅನುವಷಟ್ಕಾರಪೂರ್ವಕವಾಗಿ ಹೋಮಮಾಡಬಾರದು ಎಂದು ಹೇಳಿದೆ.

**ನೇಷ್ಟುರುಪಸ್ಥ ಆಸೀನೋ ಭಕ್ಷಯತಿ ಪತ್ನೀಭಾಜನಂ ವೈ ನೇಷ್ಟಾಗ್ನಿಃ ಪತ್ನೀಷು ರೇತೋ ದಧಾತಿ ಪ್ರಜಾತ್ಯಾ ಅಗ್ನಿನೈವ ತತ್ಪತ್ನೀಷು ರೇತೋ ದಧಾತಿ ಪ್ರಜಾತ್ಯೈ ॥ ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥**

ಅಥ ಪಾತ್ನೀವ್ರತಗ್ರಹಭಕ್ಷಣೇ ದೇಶಂ ವಿಧತ್ತೇ—ಯೋಽಯಮಾಗ್ನೀಧ್ರಃ ಪಾತ್ನೀವತಂ ಯಜತಿ ಸೋಽಯಂ ನೇಷ್ಟುರುಪಸ್ಥೇ ಸಮೀಪ ಆಸೀನಃ ಶೇಷಂ ಭಕ್ಷಯೇತ್ । ನೇಷ್ಟೃನಾಮಕ ಋತ್ವಿಕ್‌ಪತ್ನೀಭಾಜನಂ ವೈ ಪತ್ನೀಸ್ಥಾನೀಯೋ ನೇಷ್ಟಾ ಪತ್ನೀಮುದಾನಯತ್ಯೇವಂ ನೇಷ್ಟೃಪತ್ನ್ಯೋರಾನಯನದ್ವಾರಾ ಸಂಬಂಧಶ್ರವಣಾತ್ । ಅತಸ್ತತ್ಸಮೀಪೇ ಭಕ್ಷಣೇ ಸತ್ಯಗ್ನೀರೂಪ ಆಗ್ನೀಧ್ರಃ ಪತ್ನೀಷು ರೇತಃ ಸ್ಥಾಪಯತಿ । ತತ್ರ(ಚ) ಪ್ರಜನನಾಯ ಸಂಪದ್ಯತೇ। ತತ್ತೇನಾನುಷ್ಠಾನೇನ ಯಜಮಾನೋಽಪ್ಯಗ್ನಿನೈವಾಗ್ನ್ಯನುಗ್ರಹೇಣೈವ ಪತ್ನೀಷು ರೇತೋಽವಸ್ಥಾಪಯತಿ । ತದಪಿ ಪ್ರಜಾತ್ಯೈ ಸಂಪದ್ಯತೇ ॥ ವೇದನಂ ಪ್ರಶಂಸತಿ—

ಪಾತ್ನೀವತಗ್ರಹ (ಶೇಷ) ಭಕ್ಷಣಮಾಡಬೇಕಾದ ಪ್ರದೇಶವನ್ನು ತಿಳಿಸುವರು. ಈ ಪಾತ್ನೀವತಗ್ರಹವನ್ನು ಹೋಮಮಾಡುವ ಆಗ್ನೀಧ್ರನೆಂಬ ಋತ್ವಿಜನು ನೇಷ್ಟಾ ಎಂಬ ಋತ್ವಿಜನ ಸಮೀಪದಲ್ಲಿ ಕುಳಿತುಕೊಂಡು ಗ್ರಹಶೇಷವನ್ನು (ಹೋಮಶೇಷ) ಭಕ್ಷಿಸಬೇಕು. ಯಜ್ಞದಲ್ಲಿ ಯಜಮಾನ ಪತ್ನಿಯನ್ನು ಯಜ್ಞವೇದಿಯ ಬಳಿಗೆ ನೇಷ್ಟೃವೆಂಬ ಋತ್ವಿಜನು ಕರೆತರುವುದರಿಂದ ಯಜಮಾನನ ಪತ್ನಿಗೂ ನೇಷ್ಟೃವಿಗೂ ಒಂದುವಿಧ ಸಂಬಂಧವಿದ್ದಂತಾಯಿತು. ಈ ಕಾರಣದಿಂದ ಅಗ್ನಿಸ್ವರೂಪನಾದ ಆಗ್ನೀಧ್ರನು ಪತ್ನಿಯಲ್ಲಿ ರೇತಸ್ಸನ್ನು ಸ್ಥಾಪಿಸುವನು ಆದ್ದರಿಂದ ಸಂತಾನೋತ್ಪತ್ತಿಯಾಗುವುದು. ಈರೀತಿ ಮಾಡುವುದರಿಂದ ಯಜ್ಞಮಾಡುವ ಯಜಮಾನನು ಅಗ್ನಿಯ ಅನುಗ್ರಹದಿಂದ ತನ್ನ ಪತ್ನಿಯಲ್ಲಿ ರೇತಸ್ಸನ್ನು ಸ್ಥಾಪಿಸಲು ಸಮರ್ಥನಾಗುವನು. ಇದರಿಂದ ಸಂತಾನೋತ್ಪತ್ತಿಯಾಗುವುದು. ಈ ವಿಷಯವನ್ನು ಚೆನ್ನಾಗಿ ತಿಳಿದಿರುವ ಪುರುಷನು ಪುತ್ರಸಂತತಿಯನ್ನೂ ಪಶುಗಳನ್ನೂ ಪಡೆದು ಸುಖಿಸುವನು.

ದಕ್ಷಿಣಾ ಅನು ಸುಬ್ರಹ್ಮಣ್ಯಾ ಸಂತಿಷ್ಠತೇ ವಾಗ್ಘ್ಯೈ ಸುಬ್ರಹ್ಮಣ್ಯಾನ್ನಂ ದಕ್ಷಿಣಾನ್ನಾದ್ಯ ಏವ ತದ್ವಾಚಿ ಯಜ್ಞಮಂತತಃ ಪ್ರತಿಷ್ಠಾಪಯಂತಿ ಪ್ರತಿಷ್ಠಾಪಯಂತಿ ॥

ಅಥ ಸುಬ್ರಹ್ಮಣ್ಯಾವಿಷಯೇ ಕಂಚಿದ್ವಿಶೇಷಂ ವಿಧತ್ತೇ ದಕ್ಷಿಣಾಸು ನೀತಾಸು ತಾ ದಕ್ಷಿಣಾ ಅನು ಪಶ್ಚಾತ್ಸುಬ್ರಹ್ಮಣ್ಯಾ ಸಂತಿಷ್ಠತೇ ಸಮಾಪ್ಯತೇ । ಸುಬ್ರಹ್ಮಣ್ಯಾಯಾ ವಾಗ್ರೂಪತ್ವಾದ್ದಕ್ಷಿಣಾಯಾಶ್ಚಾನ್ನರೂಪತ್ವಾದಂತತಃ ಸಮಾಪ್ತಿವೇಲಾಯಾಮಿಮಂ ಯಜ್ಞಮನ್ನಾದ್ಯೇ ವಾಚಿ ದ್ವಯೋರೇತಯೋಃ ಪ್ರತಿಷ್ಠಾಪಯಂತಿ ಪ್ರತಿಷ್ಠಿತಂ ಕುರ್ವಂತಿ। ಅಭ್ಯಾಸೋಽಧ್ಯಾಯಸಮಾಪ್ತ್ಯರ್ಥಃ ॥

ಈಗ ಸುಬ್ರಹ್ಮಣ್ಯ ಎಂಬ ಋತ್ವಿಜನ ವಿಷಯದಲ್ಲಿ ಒಂದು ವಿಶೇಷ ಸಂಗತಿಯನ್ನು ತಿಳಿಸುವರು. ಯಜ್ಞದಲ್ಲಿ ಋತ್ವಿಕ್ಕುಗಳಿಗೆ ದಕ್ಷಿಣೆಯನ್ನು (ಸಂಭಾವನೆಯನ್ನು) ಕೊಡುವಾಗ ಸುಬ್ರಹ್ಮಣ್ಯನಿಗೆ ಕೊಟ್ಟನಂತರ ಯಜ್ಞವು ಸಮಾಪ್ತಿಗೊಳ್ಳುವುದು. ಏಕೆಂದರೆ ಸುಬ್ರಹ್ಮಣ್ಯನು ವಾಗ್ರೂಪನು, ದಕ್ಷಿಣೆಯು ಅನ್ನಸ್ವರೂಪವು ಇವುಗಳನ್ನು ಕೊಟ್ಟನಂತರ ಯಜ್ಞವು ಸಮಾಪ್ತಿಯಾಗುವುದು.

*English Translation*

**(The Subrahmanya formula. On its nature. By whom it is to be repeated. The oblation from the Patnivata Graha. The Yajya of the Agnidhra.)**

The Snbrahmanya is Vach. Her son is the king Soma. At the time of buying Soma, they call the Subrahmanya (thither) just as one calls a cow. Through this son the Subrahmanya priest milks (obtains) all desires for the sacrificer. For Vach grants all desires of him who has this knowledge. They ask, what is the nature of this Subrahmanya? One should answer, She is Vach. For Vach is Brahma, and Subrahma (good Brahma).

They ask, why does one call him (the Subrahmanya's priest) who is male, a female? They answer Subrahmanya represents Vach which is in the feminine gender.

They further ask, when all the other priests are to perform their respective duties within the Vedi, and the Subrahmanya outside the Vedi, how is it that the duty of the Subrahmanya in this particular case becomes performed inside the Vedi? One should answer, The Vedi has an outlet where things, which are no more required, are thrown; if the Subrahmanya priest calls the Subrahmanya when standing in this outlet, then, in this way, his duty is performed within the

bounds of the Vedi. They ask, why does he, standing in the outlet, repeat the Subrahmanya? On this they tell the following story.)

The Rishis held once a sacrificial session. They said to the most aged man among them, "Call the Subrahmanya. Thou shalt call the gods standing among us on account of thy age, as it were, nearest to them. In consequence of this the gods make him (the Subrahmanya) very aged. In this way he pleases the whole Vedi.

They ask, why do they present to him (the Subramanya) a bull as a reward for his services? The answer is the bull is a male (vrisha), the Subrahmanya is a female, both making thus a couple. This is done for producing offsping from this pair.

The Agnidhra repeats the Yajya mantra for the Patnivata Graha (a Soma vessel) wiih a low voice. For the Patnivata is the semen virile, and the effusion of the semen virile passing on without noise, as it were, he does not make the Anuvashtkara. For the Anuvashatara is a stop. Thinking, I will not stop the effusion of the semen, he does not make the Anuvashtkara, for the semen which is not disturbed in its effusion, bears fruit. Sitting near the Neshtar, he then eats for the Neshtar is in the room of women. Agni (Agnidhra) pours semen in women, to produce children. He who has this knowledge provides through Agni his fameles with semen and is blessed with children and cattle.

The Subrahmanya ends after the distribution of the Dakshina, for she is Vach. The Dakshina is food, thus they place finally the sacrifice in food, which is Speech.

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ಷಡ್ವಿಂಶಾಧ್ಯಾಯೇ
ತೃತೀಯಃ ಖಂಡಃ ಸಮಾಪ್ತಃ

ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದಲ್ಲಿ
ಇಪ್ಪತ್ತಆರನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವಾದುದು.

ಇಪ್ಪತ್ತಆರನೆಯ ಅಧ್ಯಾಯವು ಮುಗಿದುದು.



# ಅಥೈತರೇಯಬ್ರಾಹ್ಮಣೇ ಸಪ್ತವಿಂಶಾಧ್ಯಾಯೇ ಪ್ರಥಮಃ ಖಂಡಃ

## ಇಪ್ಪತ್ತೇಳನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು



[ಸತ್ರಯಾಗದಲ್ಲಿ ಋತ್ವಿಕ್ಕುಗಳಿಗೆ ಸಹಾಯಕರಾದ ಹೋತ್ರಕರೆಂಬ ಋತ್ವಿಕ್ಕುಗಳು (ಋತ್ವಿಗ್ವರ್ಗದವರು) ಪಠಿಸಬೇಕಾದ ಕೆಲವು ಶಸ್ತ್ರಮಂತ್ರಗಳು]

[ಪ್ರಾತಸ್ಸವನ ಮತ್ತು ತೃತೀಯಸವನಗಳಲ್ಲಿ ಹೋತ್ರವರ್ಗದವರು ಪಠಿಸಬೇಕಾದ ಶಸ್ತ್ರಮಂತ್ರಗಳು.]



ಗ್ರಾವಸ್ತೋತ್ರೋಕ್ತಿಃ ಸವಮಾವೇಷ್ಟಿತಮೂರ್ಧಾ
ಮಂತ್ರೈರನ್ಯೈರರ್ಬುದಸೂಕ್ತಂ ವಿಪೃಣಕ್ತಿ ।
ಕಿಯತ್ತ್ಯೋ ವಾಽಭಿಷ್ಟುನೀಯಾಃ ಕಥಮೇತಾಃ
ಸುಬ್ರಹ್ಮಣ್ಯಾಹ್ವಾನಮಿತೀಹ ಪ್ರವದಂತಿ ॥೧॥

ದೇವಾ ವೈ ಯಜ್ಞಮತನ್ವತ ತಾಂಸ್ತನ್ವಾನಾನಸುರಾ ಅಭ್ಯಾಯನ್ಯಜ್ಞವೇಶಸಮೇಷಾಂ ಕರಿಷ್ಯಾಮ ಇತಿ ತಾಂ ದಕ್ಷಿಣತ ಉಪಾಯನ್ಯತ ಏಷಾಂ ಯಜ್ಞಸ್ಯ ತನಿಷ್ಠಮಮನ್ಯಂತ ತೇ ದೇವಾಃ ಪ್ರತಿಬುಧ್ಯ ಮಿತ್ರಾವರುಣೌ ದಕ್ಷಿಣತಃ ಪರ್ಯೌಹಂಸ್ತೇ ಮಿತ್ರಾವರುಣಾಭ್ಯಾಮೇವ ದಕ್ಷಿಣತಃ ಪ್ರಾತಸ್ಸವನೇಽಸುರರಕ್ಷಾಂಸ್ಯಪಾಘ್ನತ ತಥೈವೈತದ್ಯಜಮಾನಾ ಮಿತ್ರಾವರಣಾಭ್ಯಾಮೇವ ದಕ್ಷಿಣತಃ ಪ್ರಾತಃಸವನೇಽಸುರರಕ್ಷಾಂಸ್ಯಪಘ್ನತೇ ತಸ್ಮಾನ್ಮೈತ್ರಾವರುಣಂ ಮೈತ್ರಾವರುಣಃ ಪ್ರಾತಃಸವನೇ ಶಂಸತಿ ಮಿತ್ರಾವರುಣಾಭ್ಯಾಂ ಹಿ ದೇವಾ ದಕ್ಷಿಣತಃ ಪ್ರಾತಃಸವನೇಽಸುರರಕ್ಷಾಂಸ್ಯಪಾಘ್ನತೇ ॥

ಗ್ರಾವಸ್ತುತ್ಸುಬ್ರಹ್ಮಣ್ಯಾಖ್ಯಯೋರ್ಋತ್ವಿಜೋಃ ಕರ್ತವ್ಯಮುಕ್ತ್ವಾ ಮೈತ್ರಾವರುಣಬ್ರಾಹ್ಮಣಾಚ್ಛಂಸ್ಯಚ್ಛಾವಾಕನಾಮ್ನಾಂ ಹೋತ್ರಕಾಣಾಂ ಶಸ್ತ್ರಾಣಿ ವಿಧಾತುಮಾಖ್ಯಾಯಿಕಾಮಾಹ—ಯದಾ ದೇವಾ ಯಜ್ಞಮಕುರ್ವತ ತದಾ ತಾನ್ ಕುರ್ವಾಣಾನ್ದೇವಾನಸುರಾ ಅಭಿತ ಆಗಚ್ಛನ್ । ಅಸುರಶಬ್ದೇನ ರಕ್ಷಾಂಸ್ಯಪ್ಯುಪಲಕ್ಷ್ಯಂತೇ । ಏಷಾಂ ದೇವಾನಾಂ

**ಯಜ್ಞವೇಶಸಂ ಯಜ್ಞವಿಘಾತಂ ಕರಿಷ್ಯಾಮ ಇತ್ಯಸುರಾಣಾಮಭಿಪ್ರಾಯಃ । ಏಷಾಂ ದೇವಾನಾಂ ಸಂಬಂಧಿನೋ ಯಜ್ಞೋಪಲಕ್ಷಿತಸ್ಯ ದೇವಯಜನದೇಶಸ್ಯ ಯತೋ ಯಸ್ಮಿನ್ದ-ಕ್ಷಿಣದೇಶಭಾಗೇ ತನಿಷ್ಠಮತಿಶಯೇನ ತನುರೂಪಮತ್ಯಂತದುರ್ಬಲಂ ಸ್ಥಾನಮಿದಮಿತ್ಯಸುರಾ ಅಮನ್ಯಂತ । ಸರ್ವೇಽಪ್ಯೃತ್ವಿಜಾವಮಾಹವನೀಯಾದಿ ದೇಶೇಷ್ವವಸ್ಥಿತತ್ವೇನ ಸದಸೋ ದಕ್ಷಿಣಭಾಗೇ ರಕ್ಷಕಾಭಾವಾದ್ದುರ್ಬಲಸ್ಥಾನಮಿತ್ಯಸುರಾಣಾಂ ಬುದ್ಧಿರಾಸೀತ್ । ದಕ್ಷಿಣತಸ್ತ-ಸ್ಮಿನ್ಸದಸೋ ದಕ್ಷಿಣಭಾಗೇ ತಾನ್ದೇವಾನಸುರಾ ಉಪಾಯನ್ ಪ್ರಾಪ್ತವಂತಃ । ತೇ ದೇವಾಸ್ತ-ಸ್ಕರರೂಪೇಣ ಸಮಾಗತಾನಸುರಾನ್ಪ್ರತಿಬುದ್ಧ್ಯ ತಸ್ಮಿನ್ದಕ್ಷಿಣತೋ ಮಿತ್ರಾವರುಣೌ ದ್ವೌ ದೇವೌ ಪರ್ಯೌಹನ್ರಕ್ಷಕತ್ವೇನವಸ್ಥಾಪಿತವಂತಃ । ತತಸ್ತೇ ದೇವಾ ಮಿತ್ರಾವರುಣಾಭ್ಯಾಮೇವ ಧಾನುಷ್ಕಾಭ್ಯಾಮತ್ಯಂತಶೂರಾಭ್ಯಾಂ ದಕ್ಷಿಣದೇಶೇ ಪ್ರಾತಃಸವನಕಾಲೇ ತಾನಸುರಾನ್ರಕ್ಷಾಂಸಿ ಚಾಪಾಘ್ನತಾಪಸಾರಿತವಂತಃ । ತಥೈವೇದಾನೀಂತನಾ ಅಪಿ ಯಜಮಾನಾಃ ಪ್ರಾತಃಸವನಕಾಲೇ ದಕ್ಷಿಣದೇಶೇ ಮಿತ್ರಾವರುಣಾಭ್ಯಾಮೇವ ದೇವಾಭ್ಯಾಮಸುರಾನ್ರಕ್ಷಾಂಸಿ ಚಾಪಸಾರಯಂತಿ ತಸ್ಮಾದಪಸಾರಣಾರ್ಥಂ ಮಿತ್ರಾವರುದೇವತಾಕಂ ಶಸ್ತ್ರಮಾ ನೋ ಮಿತ್ರಾವರುಣೇತ್ಯಾದಿಕಂ ಮೈತ್ರಾವರುಣಾಖ್ಯ ಋತ್ವಿಕ್ಪ್ರಾತಃ ಸವನೇ ಶಂಸೇತ್ । ತಸ್ಮಾದ್ದೇವಾ ಮಿತ್ರಾವರುಣಾಭ್ಯಾ-ಮಪಸಾರಿತವಂತಃ । ತಸ್ಮಾನ್ಮೈತ್ರಾವರುಣಂ ಶಸ್ತ್ರಂ ಯುಕ್ತಮ್ ॥**

ಇದುವರೆಗೂ ಗ್ರಾವಸ್ತುತ್ ಮತ್ತು ಸುಬ್ರಹ್ಮಣ್ಯ ಎಂಬ ಹೋತ್ರಕರ (ಹೋತೃವರ್ಗದ) ಋತ್ವಿಕ್ಕುಗಳ ಕರ್ತವ್ಯವನ್ನು ಹೇಳಿದ್ದಾಯಿತು. ಈಗ ಮೈತ್ರಾವರುಣ ಬ್ರಾಹ್ಮಣಾಚ್ಛಂಸಿ, ಅಚ್ಛಾವಾಕ ಎಂಬ ಹೋತ್ರಕರು ಪಠಿಸಬೇಕಾದ ಶಸ್ತ್ರಮಂತ್ರಗಳನ್ನು ಪಠಿಸುವಸಂದರ್ಭದಲ್ಲಿ ಹೇಳಬೇಕಾದ ಒಂದು ಉಪಾಖ್ಯಾನವಿರುವುದು ಅದನ್ನು ತಿಳಿಸುವರು. ದೇವತೆಗಳು ಯಜ್ಞಮಾಡಲು ಪ್ರಾರಂಭಿಸಿದಾಗ ಅಸುರರು ಯಜ್ಞಕ್ಕೆ ವಿಘ್ನವನ್ನುಂಟುಮಾಡಬೇಕೆಂಬ ಅಭಿಪ್ರಾಯದಿಂದ ಯಜ್ಞಭೂಮಿಗೆ ಸುತ್ತಲೂ ಬಂದು ಸೇರಿದರು. ಯಜ್ಞಭೂಮಿಗೆ ಬಂದಮೇಲೆ ಆ ಅಸುರರು ಈ ದೇವತೆಗಳ ಯಜ್ಞಭೂಮಿಯು ದಕ್ಷಿಣಭಾಗದಲ್ಲಿ ದುರ್ಬಲವಾಗಿರುವುದೆಂದು ಯೋಚಿಸಿ ಅಲ್ಲಿ ಮುತ್ತಿಗೆಯನ್ನು ಹಾಕಬೇಕೆಂದು ನಿಶ್ಚಯಿಸಿದರು. ಯಜ್ಞದ ಎಲ್ಲಾ ಋತ್ವಿಕ್ಕುಗಳೂ ಆಹವನೀಯ ಪ್ರದೇಶದಲ್ಲಿ ಒಟ್ಟಾಗಿ ಸೇರಿರುವುದರಿಂದ ಯಜ್ಞವೇದಿಯ ದಕ್ಷಿಣಭಾಗವು ಸಮರ್ಥರಾದ ರಕ್ಷಕರಿಲ್ಲದ್ದರಿಂದ ದುರ್ಬಲವಾಗಿರುವುದೆಂದು ಅಸುರರು ಯೋಚಿಸಿದರು. ಆದ್ದರಿಂದ ಯಜ್ಞವೇದಿಯ ದಕ್ಷಿಣಭಾಗವನ್ನೇ ಅಸುರರು ಮೊದಲು ಮುತ್ತಿಗೆ ಹಾಕಿದರು. ಆಗ ದೇವತೆಗಳು ಯಜ್ಞವೇದಿಯ ದಕ್ಷಿಣಭಾಗದಲ್ಲಿ ಕಳ್ಳರವೇಷದಿಂದ ಬಂದು ನೆರದಿದ್ದ ಅಸುರರು ಯಜ್ಞವಿಘಾತಕ್ಕಾಗಿ ಬಂದಿರುವರೆಂದು ತಿಳಿದು ತಮ್ಮಲ್ಲಿದ್ದ ಮಿತ್ರಾವರಣರೆಂಬ ದೇವತೆಗಳನ್ನು ಅಲ್ಲಿ ಎಂದರೆ ದಕ್ಷಿಣಭಾಗದ ಪ್ರದೇಶವನ್ನು ರಕ್ಷಿಸುವಂತೆ ನಿಯಮಿಸಿದರು. ಆದರಿಂದ ಆ ಮಿತ್ರಾವರುಣರು ದಕ್ಷಿಣಪ್ರದೇಶದಲ್ಲಿ ಪ್ರಾತಃಸವನಕಾಲದಲ್ಲಿ ಅಲ್ಲಿ ಎಚ್ಚರಿಕೆಯಿಂದಿದ್ದು ಧನುಸ್ಸನ್ನು ಧರಿಸಿ ಅಲ್ಲಿದ್ದ ಅಸುರರನ್ನು ಮತ್ತು ರಾಕ್ಷಸರನ್ನು ಅಲ್ಲಿಂದ ಹೊಡೆದೋಡಿಸಿದರು. ಆದ್ದರಿಂದ ಈ ಕಾಲದಲ್ಲಿಯೂ ಸಹ ಮೇಲೆ ಹೇಳಿದ ವಿಷಯದ ಪ್ರತೀಕವಾಗಿ ಯಜ್ಞಮಾಡುವ ಯಜಮಾನರು ಪ್ರಾತಸ್ಸವನಕಾಲದಲ್ಲಿ ಯಜ್ಞವೇದಿಯ ದಕ್ಷಿಣ ಪ್ರದೇಶದಲ್ಲಿ ಮಿತ್ರಾವರುಣರ ಮೂಲಕ ಯಜ್ಞಕ್ಕೆ ವಿಘ್ನವನ್ನುಂಟುಮಾಡುವ ಅಸುರರನ್ನೂ ರಾಕ್ಷಸರನ್ನೂ ಓಡಿಸುತ್ತಾರೆ. ಈ ಕಾರಣಕ್ಕಾಗಿ ಪ್ರಾತಸ್ಸವನಕಾಲದಲ್ಲಿ ಮೈತ್ರಾವರುಣನೆಂಬ ಋತ್ವಿಜನು ಆ ನೋ ಮಿತ್ರಾವರುಣಾ ಎಂದು ಮೊದಲಾದ ಶಸ್ತ್ರಮಂತ್ರಗಳನ್ನು ಪಠಿಸುವನು. ಈ ಶಸ್ತ್ರಪಠನದಿಂದ ದೇವತೆಗಳು ಮಿತ್ರಾವರುಣರ ಮೂಲಕ ಅಸುರರನ್ನು ಯಜ್ಞಭೂಮಿಯಿಂದ ಓಡಿಸಿದರು. ಆದ್ದರಿಂದ ಇಲ್ಲಿ ಮೈತ್ರಾವರುಣಶಸ್ತ್ರವನ್ನು ಪಠಿಸುವುದು ಯುಕ್ತವಾಗಿದೆ.

ತೇ ವೈ ದಕ್ಷಿಣತೋಽಪಹತಾ ಅಸುರಾ ಮಧ್ಯತೋ ಯಜ್ಞಂ ಪ್ರಾವಿ-
ಶಂಸ್ತೇ ದೇವಾಃ ಪ್ರತಿಬುಧ್ಯೇಂದ್ರಂ ಮಧ್ಯತೋಽದಧುಸ್ತ ಇಂದ್ರೇ-
ಣೈವ ಮಧ್ಯತಃ ಪ್ರಾತಃಸವನೇಽಸುರರಕ್ಷಾಂಸ್ಯಪಾಘ್ನತ ತಥೈವೈ-
ತದ್ಯಜಮಾನಾ ಇಂದ್ರೇಣೈವ ಮಧ್ಯತಃ ಪ್ರಾತಃಸವನೇಽಸುರರಕ್ಷಾಂ-
ಸ್ಯಪಾಘ್ನತೇ ತಸ್ಮಾದೈಂದ್ರಂ ಬ್ರಾಹ್ಮಣಾಚ್ಛಂಸೀ ಪ್ರಾತಃಸವನೇ
ಶಂಸತೀಂದ್ರೇಣ ಹಿ ದೇವಾ ಮಧ್ಯತಃ ಪ್ರಾತಃಸವನೇಽಸುರರಕ್ಷಾಂ-
ಸ್ಯಪಾಘ್ನತ ॥

ಉಪಾಖ್ಯಾನಮುಖೇನ ಮೈತ್ರಾವರುಣಸ್ಯ ಶಸ್ತ್ರಂ ವಿಧಾಯ ತಥೈವ ಬ್ರಾಹ್ಮಣಾಚ್ಛಂಸಿನಃ ಶಸ್ತ್ರಂ ವಿಧತ್ತೇ—ತೇ ದಕ್ಷಿಣದೇಶಾದಪಸಾರಿತಾ ಅಸುರಾಃ ಪ್ರಾಚೀನವಂಶಸ್ಯ ಸದಸಶ್ಚ ಮಧ್ಯೇ ಯಜ್ಞಭೂಮಿಂ ಪ್ರಾವಿಶನ್ । ಆಯಾಹಿ ಸುಷುಮಾಹಿತ ಇತ್ಯಾದಿಕಮಿಂದ್ರದೇವತಾಕಂ ಶಸ್ತ್ರಮ್ । ಅನ್ಯತ್ಪೂರ್ವವದ್ವ್ಯಾಖ್ಯೇಯಮ್ ॥

ಮೇಲೆ ಹೇಳಿದಂತೆ ಮೈತ್ರಾವರುಣಶಸ್ತ್ರವನ್ನು ಉಪಾಖ್ಯಾನಮೂಲಕವಾಗಿ ತಿಳಿಸಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರವನ್ನು ತಿಳಿಸುವರು. ದಕ್ಷಿಣದಿಕ್ಕಿನಿಂದ ಓಡಿಸಲ್ಪಟ್ಟ ಅಸುರರು ಯಜ್ಞವೇದಿಯ ಮಧ್ಯಭಾಗದಲ್ಲಿರುವ ಪ್ರಾಚೀನವಂಶವೆಂಬ ವೇದಿಯನ್ನು ಮುತ್ತಿದರು. ಇದನ್ನು ತಿಳಿದು ದೇವತೆಗಳು ಆ ಪ್ರದೇಶವನ್ನು ರಕ್ಷಿಸುವುದಕ್ಕಾಗಿ ಮತ್ತು ಪ್ರಾತಸ್ಸವನವನ್ನು ಅಸುರರಿಂದ ಕಾಪಾಡುವುದಕ್ಕಾಗಿ ಇಂದ್ರನನ್ನು ಅಲ್ಲಿದ್ದು ಅಸುರರನ್ನು ಓಡಿಸುವಂತೆ ಪ್ರಾರ್ಥಿಸಿದರು. ಅದರಂತೆ ಇಂದ್ರನು ಆ ಅಸುರರನ್ನು ಅಲ್ಲಿಂದ ಓಡಿಸಿದನು. ಈ ಕಾರಣವನ್ನೇ ಅನುಸರಿಸಿ ಈಗಲೂ ಬ್ರಾಹ್ಮಣಾಚ್ಛಂಸೀ ಎಂಬ ಋತ್ವಿಜನು ಪ್ರಾಚೀನವಂಶದ ಮಧ್ಯಭಾಗದಲ್ಲಿ ಪ್ರಾತಸ್ಸವನವು ನಡೆಯುತ್ತಿರುವಾಗ ಇಂದ್ರದೇವತಾಕವಾದ ಆಯಾಹಿ ಸುಷುಮಾಹಿತ ಎಂಬ ಶಸ್ತ್ರಮಂತ್ರವನ್ನು ಪಠಿಸುವುದು ರೂಢಿಯಲ್ಲಿ ಬಂದಿದೆ.

ತೇ ವೈ ಮಧ್ಯತೋಽಪಹತಾ ಅಸುರಾ ಉತ್ತರತೋ ಯಜ್ಞಂ ಪ್ರಾವಿ-
ಶಂಸ್ತೇ ದೇವಾಃ ಪ್ರತಿಬುಧ್ಯೇಂದ್ರಾಗ್ನೀ ಉತ್ತರತಃ ಪರ್ಯೌ-
ಹಂಸ್ತ ಇಂದ್ರಾಗ್ನಿಭ್ಯಾಮೇವೋತ್ತರತಃ ಪ್ರಾತಃಸವನೇಽಸುರರ-
ಕ್ಷಾಂಸ್ಯಪಾಘ್ನತ ತಥೈವೈತದ್ಯಜಮಾನಾ ಇಂದ್ರಾಗ್ನಿಭ್ಯಾಮೇವೋ-
ತ್ತರತಃ ಪ್ರಾತಸ್ಸವನೇಽಸುರರಕ್ಷಾಂಸ್ಯಪಾಘ್ನತೇ ತಸ್ಮಾದೈಂದ್ರಾ-
ಗ್ನಮಚ್ಛಾವಾಕಃ ಪ್ರಾತಃಸ್ಸವನೇ ಶಂಸತೀಂದ್ರಾಗ್ನಿಭ್ಯಾಂ ಹಿ
ದೇವಾ ಉತ್ತರತಃ ಪ್ರಾತಃಸವನೇ ಸುರರಕ್ಷಾಂಸ್ಯಪಾಘ್ನತ ॥

ಇದಾನೀಮಚ್ಛಾವಾಕಸ್ಯ ಶಸ್ತ್ರಂ ವಿಧತ್ತೇ—ಇಂದ್ರಾಗ್ನೀ ಆಗತಂ ಸುತಮಿತ್ಯಾದಿಕಮೈಂದ್ರಾಗ್ನಂ ಶಸ್ತ್ರಮ್ । ಅನ್ಯತ್ ಪೂರ್ವವದ್ವ್ಯಾಖ್ಯೇಯಮ್ ॥

ಈಗ ಅಚ್ಛಾವಾಕನೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರವನ್ನು ವಿವರಿಸುವರು. ಯಜ್ಞವೇದಿಯ ಮಧ್ಯ ಪ್ರದೇಶದಿಂದ ಇಂದ್ರನ ಮೂಲಕ ಓಡಿಸಲ್ಪಟ್ಟ ಅಸುರರು ಉತ್ತರದಿಗ್ಭಾಗದಲ್ಲಿ ಯಜ್ಞವೇದಿಯನ್ನು ಮುತ್ತಿಗೆಹಾಕಿದರು. ಇದನ್ನು ತಿಳಿದ ದೇವತೆಗಳು ಉತ್ತರದಿಗ್ಭಾಗದಲ್ಲಿ ಯಜ್ಞವೇದಿಯನ್ನು ಪ್ರಾತಸ್ಸವನಕಾಲದಲ್ಲಿ ರಕ್ಷಿಸುವಂತೆ ಇಂದ್ರಾಗ್ನಿಗಳೆಂಬ ದೇವತೆಗಳನ್ನು ಕೇಳಿಕೊಂಡರು. ಅದರಂತೆ ಇಂದ್ರಾಗ್ನಿಗಳು ಯಜ್ಞವೇದಿಯ ಬಳಿ ಕಾವಲಿದ್ದು ಅಸುರರನ್ನು ಅಲ್ಲಿಂದ ಓಡಿಸಿದರು ಅದರಂತೆ ಯಜ್ಞಮಾಡುವ ಯಜಮಾನನು ಈಗಲೂ ಯಜ್ಞಮಾಡುವಾಗ ಇಂದ್ರಾಗ್ನಿಗಳ ಸಹಾಯದಿಂದ ಅಸುರರನ್ನು ಯಜ್ಞ ವೇದಿಯಿಂದ ಓಡಿಸುವನು. ಈ ಕಾರಣವನ್ನನುಸರಿಸಿ ಅಚ್ಛಾವಾಕನೆಂಬ ಋತ್ವಿಜನು ಈಗಲೂ ಕೂಡ ಇಂದ್ರಾಗ್ನಿಗಳನ್ನು ಸ್ತುತಿಸುವ ಶಸ್ತ್ರಮಂತ್ರವನ್ನು ಪಠಿಸುವುದು ರೂಢಿಯಲ್ಲಿ ಬಂದಿದೆ.

ತೇ ವಾ ಉತ್ತರತೋಽಪಹತಾ ಅಸುರಾಃ ಪುರಸ್ತಾತ್ಪರ್ಯದ್ರವನ್ಸಮ-
ನೀಕತಸ್ತೇ ದೇವಾಃ ಪ್ರತಿಬುಧ್ಯಾಗ್ನಿಂ ಪುರಸ್ತಾತ್ಪ್ರಾತಃಸವನೇ
ಪರ್ಯೌಹಂಸ್ತೇಽಗ್ನಿನೈವ ಪುರಸ್ತಾತ್ಪ್ರಾತಃಸವನೇಽಸುರರಕ್ಷಾಂಸ್ಯ-
ಪಾಘ್ನತ ತಥೈವೈತದ್ಯಜಮಾನಾ ಅಗ್ನಿನೈವ ಪುರಸ್ತಾತ್ಪ್ರಾತಸ್ಸವ-
ನೇಽಸುರರಕ್ಷಾಂಸ್ಯಪಘ್ನತೇ ತಸ್ಮಾದಾಗ್ನೇಯಂ ಪ್ರಾತಃಸವನಂ ॥
ಅಪಪಾಪ್ಮಾನಂ ಹತೇ ಯ ಏವಂ ವೇದ ॥

ಪ್ರಾತಃ ಸವನಾಭಿಮಾನೀ ದೇವೋಽಗ್ನಿರಿತ್ಯೇತಮರ್ಥಂ ದರ್ಶಯತಿ ತ ಇಂದ್ರಾಗ್ನಿಭ್ಯಾ-ಮುತ್ತರತೋಽಪಸಾರಿತಾ ಅಸುರಾಃ ಸಮನೀಕತಃ ಸಂಗ್ರಾಮಾರ್ಥಂ ಸಮೀಚೀನಸೈನ್ಯೈ-ರ್ಯುಕ್ತಾಃ ಪುರಸ್ತಾದ್ಯಜ್ಞಭೂಮೇಃ ಪೂರ್ವಸ್ಯಾಂದಿಶಿ ಪರ್ಯದ್ರವನ್ಪರಿತಃ ಪ್ರಾಪ್ತಾಃ । ತೇ ದೇವಾಃ ಪ್ರತಿಬುದ್ಧ್ಯೇತ್ಯಾದಿ ಪೂರ್ವವತ್ । ಯಸ್ಮಾತ್ಪೂರ್ವಸ್ಯಾಂ ದಿಶಿ ರಕ್ಷಕೋಽಗ್ನಿ-ಸ್ತಸ್ಮಾದಿದಂ ಪ್ರಾತಃಸವನಮಗ್ನಿಸಂಬದ್ಧಂ ದ್ರಷ್ಟವ್ಯಮ್ ॥ ವೇದನಂ ಶಂಸತಿ—

ಉತ್ತರದಿಕ್ಕಿನಲ್ಲಿ ಇಂದ್ರಾಗ್ನಿಗಳಿಂದ ಓಡಿಸಲ್ಪಟ್ಟ ಅಸುರರು ಪುನಃ ಯಜ್ಞಭೂಮಿಯ ಬಳಿಗೆ ಬಂದು ದೊಡ್ಡ ಸೈನ್ಯ ಸಮೇತರಾಗಿ ಪೂರ್ವದಿಕ್ಕಿನಲ್ಲಿ ಮುತ್ತಿಗೆ ಹಾಕಿದರು. ಈ ಪೂರ್ವಭಾಗದಲ್ಲಿ ರಕ್ಷಕನಾಗಿ ಅಗ್ನಿಯು ನಿಂತಿದ್ದನು. ಅಗ್ನಿಯು ಅವರನ್ನು ಹೊಡೆದೋಡಿಸಿದನು. ಯಜ್ಞಮಾಡುವ ಯಜಮಾನನು ಈಗಲೂ ಅಸುರಾದಿಗಳನ್ನು ಯಜ್ಞಭೂಮಿಯಿಂದ ಓಡಿಸುವನು. ಇದಕ್ಕಾಗಿಯೇ ಅಸುರಾದಿಗಳನ್ನು ಓಡಿಸುವುದಕ್ಕಾಗಿ ಪ್ರಾತಃಸವನಕಾಲದಲ್ಲಿ ಅಗ್ನಿಪರವಾದ ಮಂತ್ರಗಳನ್ನು ಪಠಿಸುವುದು ರೂಢಿಯಲ್ಲಿ ಬಂದಿದೆ. ಈ ಕಾರಣಕ್ಕಾಗಿಯೇ ಈ ಪ್ರಾತಃಸ್ಸವನವನ್ನು ಅಗ್ನಿದೇವತಾಕವೆಂದು ಹೇಳಲಾಗಿದೆ. ಈ ವಿಷಯವನ್ನು ಚೆನ್ನಾಗಿ ತಿಳಿದಿರುವ ಪುರುಷನು ತನ್ನ ಪಾಪಗಳನ್ನೆಲ್ಲಾ ಕಳೆದುಕೊಂಡು ಪರಿಶುದ್ಧನಾಗುವನು.

ತೇ ವೈ ಪುರಸ್ತಾದಪಹತಾ ಅಸುರಾಃ ಪಶ್ಚಾತ್ಪರೀತ್ಯ ಪ್ರಾವಿಶಂಸ್ತೇ
ದೇವಾಃ ಪ್ರತಿಬುಧ್ಯ ವಿಶ್ವಾನ್ದೇವಾನಾತ್ಮಾನಂ ಪಶ್ಚಾತ್ತೃತೀಯ-
ಸವನೇ ಪರ್ಯೌಹಂಸ್ತೇ ವಿಶ್ವೈರೇವ ದೇವೈರಾತ್ಮಭಿಃ ಪಶ್ಚಾತ್ತೃ-
ತೀಯಸವನೇಽಸುರರಕ್ಷಾಂಸ್ಯಪಾಘ್ನತ ತಥೈವೈತದ್ಯಜಮಾನಾ

ವಿಶ್ವೈರೇವ ದೇವೈರಾತ್ಮಭಿಃ ಪಶ್ಚಾತ್ತೃತೀಯಸವನೇಽಸುರರಕ್ಷಾಂ-
ಸ್ಯಪಘ್ನತೇ ತಸ್ಮಾದ್ವೈಶ್ವದೇವಂ ತೃತೀಯಸವನಂ ॥ ಅಪ ಪಾ-
ಪ್ಮಾನಂ ಹತೇ ಯ ಏವಂ ವೇದ ॥

ಪ್ರಾತಃಸವನಾಭಿಮಾನಿನಮಗ್ನಿಂ ಪ್ರಶಸ್ಯ ತೃತೀಯಸವನಾಭಿಮಾನಿನೋ ವಿಶ್ವಾನ್ದೇವಾನ್ಪ್ರಶಂಸತಿ--ಅಗ್ನಿನಾ ಪ್ರಾಚ್ಯಾ ದಿಶೋಽಪಸಾರಿತಾ ಅಸುರಾ ರಕ್ಷಾಂಸಿ ಚ ಪ್ರತೀಚ್ಯಾಂ ದಿಶಿ ಪರಿತೋ ಗತ್ವಾ ಯಜ್ಞಭೂಮಿಂ ಪ್ರಾವಿಶನ್ । ದೇವಾಶ್ಚ ಪ್ರತಿಬುದ್ಧ್ಯ ವಿಶ್ವಾನ್ದೇವಾಂಸ್ತೃತೀಯಸವನವೇಲಾಯಾಂ ಪ್ರತೀಚ್ಯಾಂ ದಿಶಿರಕ್ಷಾರ್ಥಂ ಪ್ರೇಷಿತವಂತಃ । ಆತ್ಮಾನಮಿತಿ । ವಿಶ್ವೇಷಾಂ ದೇವಾನಾಂ ವಿಶೇಷೇಣ ಯೇ ಪ್ರೇರಕಾ ದೇವಾಸ್ತೇಷಾಮಾತ್ಮಭೂತಾನ್ಸ್ವಶರೀರವದತ್ಯಂತಮಾಪ್ತಾನ್ವಿಶ್ವಾನ್ದೇವಾನಿತ್ಯರ್ಥಃ । ತೈರ್ವಿಶ್ವೈರ್ದೇವೈರಿತರದೇವಾತ್ಮಭೂತೈರಸುರಾಣಾಂ ತೃತೀಯಸವನೇಽಪಹತತ್ವಾದಿದಂ ತೃತೀಯಸವನಂ ವೈಶ್ವದೇವಮ್ ॥ ವೇದನಂ ಶಂಸತಿ—

ಮೇಲೆ ಹೇಳಿದಂತೆ ಪೂರ್ವದಿಕ್ಕಿನಲ್ಲಿ ಅಗ್ನಿಯಿಂದ ಓಡಿಸಲ್ಪಟ್ಟ ಅಸುರರು ಪಶ್ಚಿಮದಿಕ್ಕಿನಲ್ಲಿ ಯಜ್ಞಭೂಮಿಗೆ ಹೋಗಿ ಅಲ್ಲಿ ಸುತ್ತಲೂ ಮುತ್ತಿದರು. ಇದನ್ನು ತಿಳಿದ ದೇವತೆಗಳು ವಿಶ್ವೇದೇವತೆಗಳನ್ನು ಪಶ್ಚಿಮದಿಕ್ಕಿನಲ್ಲಿ ರಕ್ಷಣಾರ್ಥವಾಗಿ ಸ್ಥಾಪಿಸಿದರು. ಅನಂತರ ವಿಶ್ವೇದೇವತೆಗಳು ಮತ್ತು ಅವರ ಸಹಾಯಕರಾದ ಇತರ ದೇವತೆಗಳೂ ಸೇರಿ ತೃತೀಯಸವನಕಾಲದಲ್ಲಿ ಅಸುರರನ್ನು ಪಶ್ಚಿಮದಿಕ್ಕಿನಿಂದ ಓಡಿಸಿದರು. ಆದ್ದರಿಂದ ಈಗಲೂ ತೃತೀಯಸವನವು ವಿಶ್ವೇದೇವತಾಕವೆಂದು ಹೇಳಲ್ಪಡುವುದು. ಈ ವಿಷಯವನ್ನು ತಿಳಿದ ಪುರುಷನು ತನ್ನ ಪಾಪಗಳೆಲ್ಲವನ್ನೂ ಕಳೆದುಕೊಳ್ಳುತ್ತಾನೆ.

ತೇ ವೈ ದೇವಾ ಅಸುರಾನೇವಮಪಾಘ್ನತ ಸರ್ವಸ್ಮಾದೇವ ಯಜ್ಞಾ-
ತ್ತತೋ ವೈ ದೇವಾ ಅಭವನ್ಪರಾಸುರಾಃ ॥ ಭವತ್ಯಾತ್ಮನಾ ಪರಾಸ್ಯ
ದ್ವಿಷನ್ಪಾಪ್ಮಾ ಭ್ರಾತೃವ್ಯೋ ಭವತಿ ಯ ಏವಂ ವೇದ ॥

ಪುನರಪಿ ಪ್ರದೇಶಾಂತರೇ ಪ್ರವೇಶಶಂಕಾಂ ವಾರಯಿತುಮಸುರಾಣಾಂ ಸರ್ವಾತ್ಮನಾ ವಿನಾಶಂ ದರ್ಶಯತಿ--ಉಕ್ತಕ್ರಮೇಣ ಸರ್ವತೋಽಪಸಾರಿತೇಷ್ವಸುರೇಷು ದೇವಾಃ ಶತ್ರುರಹಿತಾಃ ಅಭವನ್ । ಅಸುರಾಶ್ಚ ಪರಾಭೂತಾಃ ॥ ವೇದನಂ ಪ್ರಶಂಸತಿ--ಆತ್ಮನಾ ಸ್ವೇನೈವ ರೂಪೇಣ ಶತ್ರುರಹಿತೇನ ಸುಖೀ ಭವತಿ । ದ್ವೇಷೀ ತು ಪಾಪ್ಮಾ ಪರಾಭವಂತಿ ॥

ಈರೀತಿಯಾಗಿ ದೇವತೆಗಳು ಅಸುರರನ್ನು ಸೋಲಿಸಿ ಓಡಿಸಿದರು. ಎಂದರೆ ಯಜ್ಞದ ಎಲ್ಲಾ ಭಾಗಗಳಿಂದಲೂ ದೇವತೆಗಳು ಅಸುರರನ್ನು ಸೋಲಿಸಿ ಓಡಿಸಿದರು. ಅಸುರರು ಸೋತುಹೋದರು ಈ ವಿಷಯವನ್ನು ಚೆನ್ನಾಗಿ ತಿಳಿರುವ ಪುರುಷನು ಶತ್ರುರಹಿತನಾಗಿ ಬಾಳುವನು.

ತೇ ದೇವಾ ಏವಂ ಕ್ಲೃಪ್ತೇನ ಯಜ್ಞೇನಾಪಾಸುರಾನ್ಪಾಪ್ಮಾನಮಘ್ನತಾ-
ಜಯನ್ಸ್ವರ್ಗಂ ಲೋಕಂ ॥ ಅಪ ಹ ವೈ ದ್ವಿಷಂತಂ ಪಾಪ್ಮಾನಂ

**ಭ್ರಾತೃವ್ಯಂ ಹತೇ ಜಯತಿ ಸ್ವರ್ಗಂ ಲೋಕಂ ಯ ಏವಂ ವೇದ ಯಶ್ಚೈವಂ ವಿದ್ವಾನ್ಸವನಾನಿ ಕಲ್ಪಯತಿ ॥**

ಉಪಾಖ್ಯಾನಮುಪಸಂಹರತಿ— ಏವಂ ಪೂರ್ವೋಕ್ತಪ್ರಕಾರೇಣ ಕ್ಲಪ್ತೇನ ಮಿತ್ರಾವರುಣಾದಿಭಿರ್ದಕ್ಷಿಣಾದಿದೇಶವಿಶೇಷೇಷು ರಕ್ಷಿತೋ ಯೋ ಯಜ್ಞಸ್ತೇನ ಪಾಪರೂಪಾನಸುರಾನಪಹತ್ಯ ದೇವಾಃ ಸ್ವರ್ಗಂ ಲೋಕಂ ಪ್ರಾಪ್ನುವನ್ । ವೇದನಂ ತತ್ಪೂರ್ವಕಮನುಷ್ಠಾನಂ ಚ ಪ್ರಶಂಸತಿ—ಸದನಗತಾನಾಂ ಹೋತ್ರಕಾಣಾಂ ಮೈತ್ರಾವರುಣಾದಿಶಸ್ತ್ರಸಂಪಾದನಮೇವ ಸವನಕಲ್ಪನಮ್ ॥

ಈರೀತಿಯಾಗಿ ದೇವತೆಗಳು ಶತ್ರುಗಳಾದ ಅಸುರರನ್ನು ಯಜ್ಞದಿಂದ ಹೊಡೆದೋಡಿಸಿದರು ಮತ್ತು ಯಜ್ಞವನ್ನು ಕ್ರಮವಾಗಿ ಆಚರಿಸಿ ಸ್ವರ್ಗಲೋಕಕ್ಕೆ ಹೋಗಿಸೇರಿದರು. ಈ ವಿಷಯವನ್ನು ತಿಳಿದಿರುವ ಪುರುಷನು ಮಾಡುವ ಸವನಾದಿ ಕರ್ಮಗಳು ಸಾಂಗವಾಗಿ ನೆರವೇರುತ್ತವೆ.

*English Translation*

**(On the Shastras of the minor Hotri-priests at the Sattras)**

**(On the Shastras of minor Hotri-priests at the morning and evening libations).**

The Devas spread the sacrifice. When doing so, the Asuras approached them, thinking, let us obstruct their sacrifice. They attacked them from the right side, thinking this to be the weak point. The Devas awoke and posted two of their number, Mitra and Varuna, on the right side. Through ths assistance of these two, the Devas drove the Asuras and Rakshas away from the morning libation. And thus the sacrificers drive them away if they have the Maitravaruna Shastra repeated; thence the Maitravaruna priest repeats the Maitravaruna Shastra at the morning libation. The Asuras, defeated on the right side, attacked the centre of the sacrifice. The Devas awoke, posted them Indra, and defeated through his assistance the enemies. Therefore the Brahmanacamsi repeats at the morning libation on the Indra Shastra.

The Asuras, thus defeated, attacked the sacrifice on the northern side. The Devas posted on this side Indragni and defeated thus the Asuras. Therefore the Achhavaka repeats the Aindragna Shastra at the morning libation. For by means of Indragni the Devas drove the Asuras and Rakshas away from the northern side.

The Asuras, defeated on the northern side, marched arrayed in battle lines towards the eastern part. The Devas awoke and posted Agni eastwards at the morning libation. Through Agni the Devas drove the Asuras and Rakshas

away from the eastern front. In the same way the sacrificers drive away from the eastern front the Asuras and Rakshas. Thence the morning libation is Agni's. He who has such a knowledge destroys the evil consequences of his sin.

In this manner the Devas drove the Asuras out of the whole sacrifice. Thence the Devas became masters of the Asuras. He who has this kuowledge becomes therefore through himself alone master of his adversary and enemy, and destroys the consequences of his sin. The Devas drove away the Asuras and destroyed the consequences of sin by means of the sacrifice arranged in such a way and conquered the heaven-world. He who has this knowledge and he who, knowing this, prepares these libations required in the said manner, drives away his enemy and hater, destroys the consequences of his guilt, and gains the heven-world.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಸಪ್ತವಿಂಶಾಧ್ಯಾಯಸ್ಯ ಪ್ರಥಮಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೆಳನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವಾದುದು.**



## ಅಥ ಸಪ್ತವಿಂಶಾಧ್ಯಾಯೇ ದ್ವಿತೀಯಃ ಖಂಡಃ

### ಇಪ್ಪತ್ತೆಳನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ಮೂರನೇ ದಿನದ ಶಾಸ್ತ್ರಾದಿಗಳನ್ನು ಹಿಂದಿನ ದಿನದ ಅನುರೂಪ ಮಂತ್ರಗಳನ್ನಾಗಿ ಹೋತ್ರವರ್ಗದವರು ಪಠಿಸುವರು. ಇದು ಅನೇಕ ದಿನಗಳವರೆಗೂ ನಡೆಯುವುದು.



ಸ್ತೋತ್ರಿಯಂ ಸ್ತೋತ್ರಿಯಸ್ಯಾನುರೂಪಂ ಕುರ್ವಂತಿ ಪ್ರಾತಃಸವನೇಽ-ಹರೇವ ತದಹ್ನೋಽನುರೂಪಂ ಕುರ್ವಂತ್ಯವರೇಣೈವ ತದಹ್ನಾ ಪರಮಹರಭ್ಯಾರಭಂತೇ ॥

ಅಥ ತೇಷಾಂ ಹೋತ್ರಕಾಣಾಮಹರ್ಗಣೇಷು ಶಸ್ತ್ರೇಷು ಪ್ರಕಾರವಿಶೇಷಂ ವಿಧತ್ತೇ— ಪೃಷ್ಠ್ಯಷಲ(ಡ)ಹಾದಿಷ್ವಹರ್ಗಣೇಷು ಬಹೂನ್ಯಹಾನಿ ವಿದ್ಯಂತೇ । ತೇಷು ಪ್ರಾತಃಸವನೇ ದ್ವಿತೀಯಸ್ಯಾಹ್ನೋ ಯಃ ಸ್ತೋತ್ರಿಯಸ್ತ್ರ್ಯಚಸ್ತಂ ತ್ರ್ಯೃಚಂ ಪ್ರಥಮೇಽಹನಿ ಸ್ತೋತ್ರಿಯಸ್ಯ ತ್ರ್ಯೃಚಸ್ಯಾನುರೂಪಂ ಕುರ್ಯುಃ । ಸಾಮಗಾ ಯಸ್ಮಿಂಸ್ತ್ರ್ಯಚೇ ಸ್ತೋತ್ರಂ ಕುರ್ವಂತಿ ಸ ತ್ರ್ಯೃಚಃ ಸ್ತೋತ್ರಿಯಃ । ತಸ್ಯ ಸ್ತೋತ್ರಿಯಸ್ಯ ಛಂದೋದೇವತಾದಿನಾ ಸದೃಶೋಽನ್ಯೋ ಯಸ್ತ್ರ್ಯೃಚಃ ಸೋಽನುರೂಪಃ । ತಥಾ ಸತಿ ಸರ್ವೇಷ್ವಹಃಸ್ವೇಕೈಕಸ್ಮಿಂಸ್ತ್ರ್ಯೃಚೇ ಸಾಮಗಾಃ ಸ್ತೋತ್ರಂ ಕುರ್ವಂತಿ । ತೇ ಸರ್ವೇ ತ್ರ್ಯೃಚಾಃ ಸ್ತೋತ್ರಿಯಾಃ । ತತ್ರ ಸರ್ವತ್ರೋತ್ತರದಿನಗತಂ ಸ್ತೋತ್ರಿಯಂ ಪೂರ್ವದಿನೇ ಸ್ತೋತ್ರಿಯಸ್ಯಾನಂತರಭಾವಿನಮನುರೂಪಂ ಕುರ್ಯಾತ್ । ಅಯಂ ಚ ನಿಯಮೋ ಹೋತ್ರಕಾಣಾಂ ಶಸ್ತ್ರೇಷು ಪ್ರಾತಃಸವನೇ ದ್ರಷ್ಟವ್ಯಃ । ಏವಂ ಸತ್ಯುತ್ತರಮಹರೇವ ಪೂರ್ವಸ್ಯಾಹ್ನೋ ರೂಪಂ ಕುರ್ವಂತಿ । ತತ್ತಥಾ ಸತ್ಯವರೇಣೈವಾತೀತೇ-ನೈವ ಪೂರ್ವೇಣಾಹ್ನಾ ಪರಮುತ್ತರಮಹರಭಿಮುಖೀಕೃತ್ಯಾರಭಂತ ಉಪಕ್ರಮಂತೇ ॥

ಹೋತೃವರ್ಗದ ಋತ್ವಿಜರು ಅಹರ್ಗಣಗಳಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳಲ್ಲಿರುವ ವಿಶೇಷಸಂಗತಿಯನ್ನು ತಿಳಿಸುವರು. ಪೃಷ್ಠ್ಯಷಡಹ ಮೊದಲಾದ ಅಹರ್ಗಣಗಳಲ್ಲಿ ಅನೇಕ ದಿನಗಳಿರುವವು. ಆ ದಿನಗಳಲ್ಲಿ ಎರಡನೇ ದಿನ ಪ್ರಾತಃಸವನದಲ್ಲಿ ಸ್ತೋತ್ರಿಯಸ್ತೃಚವನ್ನಾಗಿ ಯಾವ ಮಂತ್ರವನ್ನು ಪಠಿಸುವರೋ ಆ ತೃಚವನ್ನು ಮೊದಲನೇ ದಿನ ಸ್ತೋತ್ರಿಯತೃಚದ ಅನುರೂಪವನ್ನಾಗಿ ಪಠಿಸುವರು. ಸಾಮಗರು ಯಾವ ತೃಚದಲ್ಲಿ ಸ್ತೋತ್ರವನ್ನು ಸೇರಿಸಿ ಪಠಿಸುವರೋ ಅದನ್ನೇ ಸ್ತೋತ್ರಿಯತೃಚವೆಂದು ಹೇಳುವರು. ಆ ಸ್ತೋತ್ರಿಯ ತೃಚಕ್ಕೆ ಛಂದಸ್ಸು ದೇವತೆಗಳು ಮುಂತಾದ ವಿಷಯಗಳಲ್ಲಿ ಸಮನಾಗಿರುವ (ಸೇರಿಹೋಗುವ) ಬೇರೊಂದು ತೃಚವನ್ನು ಅನುರೂಪತೃಚವೆಂದು ಹೇಳುವರು. ಈರೀತಿ ಇರುವಾಗ ಪ್ರತಿದಿನವೂ ಸಾಮಗರು ಒಂದೊಂದು ತೃಚದಲ್ಲಿ ಸ್ತೋತ್ರವನ್ನು ಸೇರಿಸಿ ಪಠಿಸುವರು. ಈ ಎಲ್ಲಾ ತೃಚಗಳೂ ಸ್ತೋತ್ರಿಯಋಕ್ಕುಗಳು. ಅವುಗಳಲ್ಲಿ ಕೊನೆಯದಿನ ಪಠಿಸುವ ಸ್ತೋತ್ರಿಯವು ಹಿಂದಿನ ದಿನ ಸ್ತೋತ್ರಿಯತೃಚದಮುಂದೆ ಪಠಿಸುವ ಮಂತ್ರಗಳನ್ನು ಅನುರೂಪವನ್ನಾಗಿ ಮಾಡಿ ಪಠಿಸಬೇಕು. ಈ ನಿಯಮವು ಹೋತೃವರ್ಗದವರು ಪಠಿಸುವ ಶಸ್ತ್ರಮಂತ್ರಗಳಲ್ಲಿ ಪ್ರಾತಃಸವನಕಾಲದಲ್ಲಿ ಕಂಡುಬರುವುದು. ಈರೀತಿ ನಿಯಮವಿರುವಾಗ ಮುಂದಿನ ದಿನದಲ್ಲಿ ಹಿಂದಿನ ದಿನದ ಮಂತ್ರಗಳು ಅನುರೂಪವನ್ನಾಗಿ ಮಾಡಿ ಪಠಿಸುವರು. ವಿಷಯವು ಹೀಗಿರುವಾಗ ಕಳೆದುಹೋದ ಹಿಂದಿನ ದಿನ ಪೂರ್ವಾಹ್ನದಲ್ಲಿ ಮುಂದಿನ ದಿನಕ್ಕೆ ಅಭಿಮುಖವಾಗಿ ಕುಳಿತುಕೊಂಡು ಮಂತ್ರಗಳನ್ನು ಪಠಿಸಲು ಪ್ರಾರಂಭಿಸಬೇಕು.

**ಅಥ ತಥಾ ನ ಮಧ್ಯಂದಿನೇ ಶ್ರೀರ್ವೈ ಪೃಷ್ಠಾನಿ ತಾನಿ ತಸ್ಮೈ ನ ತತ್ಸ್ಥಾನಾನಿ ಯತ್ಸ್ತೋತ್ರಿಯಂ ಸ್ತೋತ್ರಿಯಸ್ಯಾನುರೂಪಂ ಕುರ್ಯುಃ ॥**

ಮಾಧ್ಯಂದಿನಸವನೇಽಪ್ಯಸ್ಯ ನ್ಯಾಯಸ್ಯ ಪ್ರಸಕ್ತೌ ತಂ ನಿಷೇಧತಿ ಅಥ ಪ್ರಾತಃಸವನಾ-ನಂತರಂ ಮಾಧ್ಯಂದಿನೇ ತಥಾ ನ ತೇನ ಪೂರ್ವೋಕ್ತಪ್ರಕಾರೇಣ ನ ಕುರ್ಯಾದಿತಿ ಶೇಷಃ । ತತ್ರ ಹೇತುಃ—ಶ್ರೀರ್ವೈ ಪೃಷ್ಠಾನೀತಿ । ಯಾನಿಮಾಧ್ಯಂದಿನಸವನೇ ಪೃಷ್ಠಸ್ತೋತ್ರಾಣಿ ತಾನಿ ಶ್ರೀರ್ವೈ ಸಂಪದ್ರೂಪಾಣ್ಯೇವ । ಶ್ರೀರೂಪತ್ವೇನ ಸಾಮಗೈಃ ಸ್ತುತತ್ವಾತ್ । ನ ಹಿ ಶ್ರೀರೂಪಾಣಾಂ

ಸ್ವತಂತ್ರಾಣಾಮನ್ಯಾನುವೃತ್ತಿತ್ವಲಕ್ಷಣಮನುರೂಪತ್ವಂ ಯುಕ್ತಮ್ । ತಸ್ಮಾತ್ತಾನಿ ಪೃಷ್ಠ-ಸ್ತೋತ್ರಾಣಿ ತಸ್ಮೈ ತಸ್ಮಿನ್ಮಾಧ್ಯಂದಿನೇ ಸವನೇ ತತ್‌ಸ್ಥಾನಾನಿ ಪ್ರಾತಃಸವನಸ್ಥಾನಾನಿ ನ ಭವಂತಿ ತತ್ಸದೃಶಾನಿ ನ ಭವಂತೀತ್ಯರ್ಥಃ । ಪ್ರಾತಃಸವನೇ ಹ್ಯುತ್ತರದಿನಗತಂ ಸ್ತೋತ್ರಿಯಂ ಪೂರ್ವದಿನಗತಸ್ತೋತ್ರಿಯಸ್ಯಾನುರೂಪಂ ಕುರ್ವಂತಿ । ಯದ್ಯಸ್ಮಾತ್ಕಾರಣಾದತ್ರಾಪಿ ತಥಾ ಕುರ್ಯುಸ್ತಾದೃಶಂ ಕಾರಣಂ ನಾಸ್ತಿ ತುಲ್ಯಚ್ಛಂದಸ್ತ್ವಾದೀನಾಮಭಾವಾತ್ । ತಸ್ಮಾತ್ಪೃಷ್ಠ-ಸ್ತೋತ್ರಾಣಾಂ ಪೂರ್ವೋತ್ತರದಿನೇಷು ಸಾದೃಶ್ಯಾಭಾವಾತ್ಪ್ರಾತಃ ಸವನನ್ಯಾಯೋಽತ್ರ ನ ಘಟತೇ ॥

ಮಧ್ಯಂದಿನಸವನಕಾಲದಲ್ಲಿ ಮೇಲೆ ಹೇಳಿದ ನ್ಯಾಯದ ವಿಷಯದಲ್ಲಿ ಕ್ರಮವನ್ನು ನಿಷೇಧಿಸುತ್ತಾರೆ. ಮುಂದೆ ಪ್ರಾತಃ ಸವನಾನಂತರ ಮಾಧ್ಯಂದಿನಸವನದಲ್ಲಿ ಹಿಂದೆ ಹೇಳಿದ ಕ್ರಮವನ್ನು ಅನುಸರಿಸಬಾರದು. ಆದಕ್ಕೆ ಕಾರಣವೇನೆಂದರೆ ಸಂಪತ್ತೀ ಪೃಷ್ಠಸ್ತೋತ್ರವು. ಮಧ್ಯಂದಿನ ಸವನದಲ್ಲಿ ಯಾವ ಪೃಷ್ಠಸ್ತೋತ್ರಗಳಿರುವವೋ ಅವೆಲ್ಲವೂ ಸಂಪದ್ರೂಪಗಳೇ. ಏಕೆಂದರೆ ಸಾಮಗರು ಅವುಗಳನ್ನು ಶ್ರೀರೂಪದಿಂದ ಸ್ತುತಿಸುವರು. ಶ್ರೀರೂಪವಾದ ಮಂತ್ರಗಳು ಸ್ವತಂತ್ರವಾದ ಮಂತ್ರಗಳು. ಇತರ ಸ್ವಭಾವಯುಕ್ತವಾದ ಬೇರೆ ಮಂತ್ರಗಳು ಈ ಶ್ರೀರೂಪಮಂತ್ರಗಳಿಗೆ ಅನುರೂಪವಾಗಿರುವವು. ಆದ್ದರಿಂದ ಆ ಪೃಷ್ಠಸ್ತೋತ್ರಗಳು ಮಾಧ್ಯಂದಿನ ಸವನದಲ್ಲಿ ಪ್ರಾತಸ್ಸವನಕ್ಕಿರುವ ಸ್ಥಾನವನ್ನು ಪಡೆಯಲಾರವು. ಎಂದರೆ ಅದರ ಸಮಾನವಾಗಲಾರವು. ಪ್ರಾತಃ ಸ್ಸವನಕಾಲದಲ್ಲಿ ಮುಂದಿನ ದಿನದ ಸ್ತೋತ್ರಿಯವನ್ನೂ ಸ್ತೋತ್ರಿಯದ ಅನುರೂಪವನ್ನೂ ಪಠಿಸುತ್ತಾರೆ. ಹಾಗೆ ಮಾಡಲು ಇಲ್ಲಿ ಸರಿಯಾದ ಕಾರಣವಿರುವುದಿಲ್ಲ. ಏಕೆಂದರೆ ಇಲ್ಲಿ ಸಮಾನವಾದ ಛಂದಸ್ಸುಗಳ ಪ್ರಯೋಗವಿರುವುದಿಲ್ಲ. ಈ ಕಾರಣದಿಂದ ಪೃಷ್ಠಸ್ತೋತ್ರಗಳ ಮಂತ್ರಗಳಲ್ಲಿ ಹಿಂದಿನ ಮತ್ತು ಮುಂದಿನ ದಿನಗಳಲ್ಲಿ ಸಾದೃಶ್ಯ (ಸಮಾನತ್ವ) ವಿರುವುದಿಲ್ಲ. ಆದ್ದರಿಂದ ಇಲ್ಲಿ ಪ್ರಾತಸ್ಸವನ ವಿಷಯದಲ್ಲಿ ಉಪಯೋಗಿಸುವ ನ್ಯಾಯವು ಇಲ್ಲಿ ಅನ್ವಯಿಸುವುದಿಲ್ಲ.

### ತಥೈವ ವಿಭಕ್ತ್ಯಾ ತೃತೀಯಸವನೇ ನ ಸ್ತೋತ್ರಿಯಂ ಸ್ತೋತ್ರಿಯಸ್ಯಾನು-ರೂಪಂ ಕುರ್ವಂತಿ ॥

ಮಾಧ್ಯಂದಿನಸವನನ್ಯಾಯಂ ತೃತೀಯಸವನೇಽತಿದಿಶತಿ—ವಿಭಕ್ತಿಶಬ್ದಃ ಪ್ರಕಾರವಾಚೀ। ತೇನೈವ ಮಾಧ್ಯಂದಿನೋಕ್ತಪ್ರಕಾರೇಣ ತೃತೀಯಸವನೇಽಪ್ಯುತ್ತರದಿನಗತಂ ಸ್ತೋತ್ರಿಯಂ ಪೂರ್ವದಿನಗತಸ್ಯ ಸ್ತೋತ್ರಿಯಸ್ಯಾನುರೂಪಂ ನ ಕುರ್ವಂತಿ ॥

ಮಾಧ್ಯಂದಿನಸವನ ವಿಷಯದಲ್ಲಿ ಉಪಯೋಗಿಸುವ ನ್ಯಾಯಕ್ರಮವನ್ನು ಇಲ್ಲಿಯೂ ಉಪಯೋಗಿಸುವರು. ವಿಭಕ್ತಿಯು ಪ್ರಕಾರ (ಕ್ರಮ) ವನ್ನು ತೋರಿಸುವುದು ಮಾಧ್ಯಂದಿನೋಕ್ತಪ್ರಕಾರವಾಗಿ ತೃತೀಯಸವನದಲ್ಲಿಯೂ ಮುಂದಿನ ದಿನದ ಸ್ತೋತ್ರಿಯವನ್ನು ಪೂರ್ವದಿನದ ಸ್ತೋತ್ರಿಯಾನುರೂಪವನ್ನಾಗಿ ಮಾಡಲಾಗುವುದಿಲ್ಲ.

*English Translation*

**(The Storia of the following day ie made the Anurupa of the preceding day in the Shastras of the minor Hotri-priests at Soma Sacrifices lasting for several days).**

They use at the morning libation the Stotriya (triplet) of the following day as Anurupas of the preceding day. They make in this way the following

day the Anurupa (corresponding to the preceding day. Thus they commence the performance of the preceding day with a view to that of the following. But this is not done at the midday libation; for the Prishthas used then are happiness they are independent; they have at this the midday libation not that position which the verses have at the morning libation that they could use the Stotriya of the following day as Anurupa of the preceding day. Likewise they do not use at the third libation, the Stotriya of the following day as Anurupa of the preceding day.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಸಪ್ತವಿಂಶಾಧ್ಯಾಯೇ ದ್ವಿತೀಯಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೇಳನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವಾದುದು.**



## ಅಥ ಸಪ್ತವಿಂಶಾಧ್ಯಾಯೇ ತೃತೀಯಃ ಖಂಡಃ

### ಇಪ್ಪತ್ತೇಳನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ಅಹವನೀಯ ಸೋಮಯಜ್ಞದಲ್ಲಿ ಹೋತೃವರ್ಗದ ಋತ್ವಿಜರು ಪಠಿಸಬೇಕಾದ ಪ್ರಾರಂಭದ ಋಕ್ಕುಗಳನ್ನೊಳಗೊಂಡ ಶಸ್ತ್ರಮಂತ್ರಗಳು ಈ ಯಜ್ಞಭಾಗವು ಅನೇಕದಿನಗಳವರೆಗೂ ನಡೆಯುವುದು]



ಅಥಾತ ಆರಂಭಣೀಯಾ ಏವ ॥

**ಹೋತ್ರಕಾಣಾಂ ಸ್ತೋತ್ರಿಯಾನುರೂಪಮುಕ್ತ್ವಾಽರಂಭಣೀಯಾ ಋಚೋ ವಿಧತ್ತೇ— ಅಥ ಸ್ತೋತ್ರಿಯಾನುರೂಪಾನಂತರಂ ಯಸ್ಮಾಚ್ಛಸ್ತ್ರಸ್ತೋತ್ರರಭಾವಿನ ಆರಂಭೋ ಯುಕ್ತೋಽತೋಽಸ್ಮಾತ್ಕಾರಣಾದಾರಂಭಣೀಯಾ ಋಚೋ ವಿಧೀಯಂತೇ । ಏವಕಾರೋಽಹರ್ಗಣೇಷು ಚೋದಕಪ್ರಾಪ್ತಾಯಾ ಋಚೋ ವ್ಯಾವೃತ್ತ್ಯರ್ಥಃ ॥**

ಹೋತೃಗಳ ಈ ಋಕ್ಕುಗಳು ಪಠಿಸಬೇಕಾದ ಸ್ತೋತ್ರಿಯ ಮತ್ತು ಅನುರೂಪವೆಂಬ ಋಕ್ಕುಗಳ ಪಠನಕ್ರಮವನ್ನು ವಿವರಿಸಿ ಈಗ ಪ್ರಾರಂಭದಲ್ಲಿ ಪಠಿಸಬೇಕಾದ ಋಕ್ಕುಗಳನ್ನು ತಿಳಿಸುವರು. ಈಗ ಸ್ತೋತ್ರಿಯಾನಂತರ ಅನುರೂಪ ಋಕ್ಕುಗಳನ್ನು ಪಠಿಸಲು ಪ್ರಾರಂಭವಾದುದರಿಂದ ಆ ಮಂತ್ರದ ಪ್ರಾರಂಭದ ಋಕ್ಕುಗಳನ್ನು ಹೇಳುವುದು ಯುಕ್ತವು. ಮೇಲಿನ ವಾಕ್ಯದಲ್ಲಿ ಏನ ಎಂಬ ಶಬ್ದವು ಆ ಕರ್ಮಗಳಲ್ಲಿ ಮಂತ್ರಗಳನ್ನು ಪ್ರಾರಂಭಮಾಡಬೇಕೆಂಬ ವಿಷಯವನ್ನು ಸೂಚಿಸುವುದು.

**ಋಜುನೀತೀ ನೋ ವರುಣ ಇತಿ ಮೈತ್ರಾವರುಣಸ್ಯ ಮಿತ್ರೋ ನಯತು ವಿದ್ವಾನಿತಿ ಪ್ರಣೇತಾ ವಾ ಏಷ ಹೋತ್ರಕಾಣಾಂ ಯನ್ಮೈತ್ರಾವರುಣಸ್ತಸ್ಮಾದೇಷಾ ಪ್ರಣೇತೃಮತೀ ಭವತಿ ॥**

ತತ್ರ ಮೈತ್ರಾವರುಣಾಖ್ಯಸ್ಯ ಹೋತ್ರಕಸ್ಯಾಽಽರಂಭಣೀಯ(ಯಾ)ಯಾಂ) ದರ್ಶಯತಿ— ಋಜುನೀತೀತ್ಯಸ್ಯಾಮೃಚಿ ಮಿತ್ರೋ ನಯತ್ವಿತಿ ದ್ವಿತೀಯಃ ಪಾದಃ । ತತ್ರ ನಯತ್ವಿತಿ ಪ್ರಣೇತೃವಾಚಕಂ ಪದಂ ದೃಶ್ಯತೇ । ಮೈತ್ರಾವರುಣಶ್ಚ ಹೋತ್ರಕಾಣಾಂ ಪ್ರಣೇತಾ ಪ್ರವರ್ತಕಸ್ತಸ್ಮಾದೃಗೇಷಾ ಪ್ರಣೇತೃವಾಚಿ(ಚ)ಕಶಬ್ದವಾಚೀ ಭವತಿ ತಚ್ಚ ಯುಕ್ತಮಿತ್ಯರ್ಥಃ ।

ಮೇಲೆ ಹೇಳಿದಂತೆ ಹೋತೃವರ್ಗದವರು ಪ್ರಾರಂಭದಲ್ಲಿ ಪಠಿಸಬೇಕಾದ ಮಂತ್ರಗಳಲ್ಲಿ ಮೊದಲು ಪಠಿಸಬೇಕಾದ ಮೈತ್ರಾವರುಣನೆಂಬ ಋತ್ವಿಜನು ಪ್ರಾರಂಭಿಸುವ ಮಂತ್ರವನ್ನು ತಿಳಿಸುವರು. ಋಜುನೀತೀ (ಋ. ಸಂ. ೧-೯೦-೧) ಎಂಬ ಋಕ್ಕಿನಲ್ಲಿ ಮಿತ್ರೋ ನಯತು ಎಂಬುವುದು ಎರಡನೆಯಪಾದವು. ಆದ್ದರಿಂದ ಇಲ್ಲಿ ಪ್ರಣೇತೃ (ನಡೆಸುವವನು) ಎಂಬರ್ಥವುಳ್ಳ ಶಬ್ದವಿರುವುದು. ಮೈತ್ರಾವರುಣನೇ ಮೊದಲಾದ ಹೋತ್ರಕರಲ್ಲಿ ಕಾರ್ಯವನ್ನು ನಡೆಸಿ ಮುಂದುವರೆಯುವಂತೆ ಮಾಡುವವನು ಮಿತ್ರಾವರುಣನೆಂಬ ಋತ್ವಿಜನಾದ್ದರಿಂದ ಈ ಶಬ್ದಪ್ರಯೋಗವಿರುವ ಮಂತ್ರವನ್ನು ಈ ಮೈತ್ರಾವರುಣನೇ ಪಠಿಸುವುದು ಯುಕ್ತವು.

**ಇಂದ್ರಂ ವೋ ವಿಶ್ವತಸ್ಪರೀತಿ ಬ್ರಾಹ್ಮಣಾಚ್ಛಂಸಿನೋ ಹವಾಮಹೇ ಜನೇಭ್ಯ ಇತೀಂದ್ರಮೇವೈತಯಾಽಹರಹರ್ನಿಹ್ವಯಂತೇ ॥ ನ ಹೈಷಾಂ ವಿಹವೇಽನ್ಯ ಇಂದ್ರಂ ವೃಂಕ್ತೇ ಯತ್ರೈವಂ ವಿದ್ವಾನ್ಬ್ರಾಹ್ಮಣಾಚ್ಛಂಸ್ಯೇತಾಮನ್ವಹಃ ಶಂಸತಿ ॥**

ಅನ್ಯಸ್ಯಾಽಽರಂಭಣೀಯ(ಯಾಂ)ವಿಧತ್ತೇ—ಇಂದ್ರಂ ವ ಇತ್ಯಸ್ಯಾಮೃಚಿ ಹವಾಮಹ ಇತಿ ದ್ವಿತೀಯಃ ಪಾದಃ । ತತ್ರಾಹ್ವಾನವಾಚಿನಃ ಶಬ್ದಸ್ಯ ವಿದ್ಯಮಾನತ್ವಾದೇತಯರ್ಚಾ ಪ್ರತಿದಿನಮಿಂದ್ರಂ ನಿತರಾಮಾಹೂ(ಹ್ವ)ಯಂತೇ ॥ ವೇದನಂ ಪ್ರಶಂಸತಿ—ಏವಂ ವಿದ್ವಾನಿಂದ್ರಾಹ್ವಾನಪ್ರತಿಪಾದಿಕೇಯಮೃಗಿತಿ ವಿದ್ವಾನ್ಯತ್ರ ಶಂಸತಿ ತಸ್ಮಿನ್ನೇಷಾಂ ಯಜಮಾನಾನಾಂ ಸಂಬಂಧಿನಿ ವಿಹವೇ ವಿಶೇಷೇಣಾಹ್ವಾನಯುಕ್ತೇ ಯಜ್ಞೇಽನ್ಯಃ ಕಶ್ಚಿಚ್ಛತ್ರುರಿಂದ್ರಂ ನ ಹ ನೈವ ವೃಂಕ್ತೇ ಪರಾಙ್ಮುಖ್ಯಂ ಕರೋತಿ ಯದೀಯೋ ಯಜ್ಞೋ ಇಂದ್ರಾಗಮನಂ ನಿರಾಕರ್ತುಂ ನ ಶಕ್ನೋತೀತ್ಯರ್ಥಃ ॥

ಮುಂದಿನ ಪ್ರಾರಂಭದ ಮಂತ್ರವನ್ನು ತಿಳಿಸುವರು. **ಇಂದ್ರಂ ವೋ ವಿಶ್ವತಸ್ಪರಿ** (ಋ. ಸಂ. ೧-೮-೧೦) ಎಂಬ ಮಂತ್ರದಲ್ಲಿ **ಹವಾಮಹೇ ಜನೇಭ್ಯಃ** ಎಂಬುದು ಎರಡನೆಯ ಪಾದವು. **ಹವಾಮಹೇ** ಎಂಬ ಆಹ್ವಾನಸೂಚಕವಾದ ಶಬ್ದವು ಇಲ್ಲಿರುವುದರಿಂದ ಇಂದ್ರನನ್ನು ಋತ್ವಿಜರು ಪ್ರತಿದಿನವೂ ಆಹ್ವಾನಮಾಡುತ್ತಾರೆ. ವಿದ್ವಾಂಸನಾದ ಮತ್ತೊಬ್ಬ ಪುರುಷನು ಇಂದ್ರನನ್ನು ಆಹ್ವಾನಮಾಡುವಾಗ ಪ್ರಶಂಸೆಮಾಡುವನೋ ಮತ್ತು ಯಜಮಾನನಿಗೆ ಶತ್ರುವಾದ ಮತ್ತೊಬ್ಬ ಪುರುಷನು ಇಂದ್ರನನ್ನು ಆಹ್ವಾನಮಾಡುವುದಿಲ್ಲವೋ ಆ ಪುರುಷನ ಯಜ್ಞಕ್ಕೆ ಇಂದ್ರನು ಹೋಗಲಿಷ್ಟಪಡುವುದಿಲ್ಲ.

**ಯತ್ಸೋಮ ಆ ಸುತೇ ನರ ಇತ್ಯಚ್ಛಾವಾಕಸ್ಯೇಂದ್ರಾಗ್ನೀ ಅಜೋಹವು-ರಿತೀಂದ್ರಾಗ್ನೀ ಏವೈತಯಾಽಹರಹರ್ನಿಹ್ವಯಂತೇ ನ ಹೈಷಾಂ ವಿಹವೇಽನ್ಯ ಇಂದ್ರಾಗ್ನಿ ವೃಂಕ್ತೇ ಯತ್ರೈವಂ ವಿದ್ವಾನಚ್ಛಾವಾಕ ಏತಾಮಹರಹಃ ಶಂಸತಿ ॥**

**ಅನ್ಯಸ್ಯಾರಂಭಣೀಯಾಂ ವಿಧತ್ತೇ— ಯತ್ಸೋಮ ಇತ್ಯಸ್ಯಾಮೃಚೀಂದ್ರಾಗ್ನೀ ಇತಿ ದ್ವಿತೀಯಃ ಪಾದಃ । ಅಜೋಹವುರಿತಿ ಹೋಮಾರ್ಥ ಆಹ್ವಾನಾರ್ಥೋ ವಾ ಧಾತುಃ । ಅನ್ಯತ್ಪೂರ್ವವದ್ವ್ಯಾಖ್ಯೇಯಮ್ ॥**

ಪ್ರಾರಂಭಮಾಡುವ ಇನ್ನೊಂದು ಋಕ್ಕನ್ನು ತಿಳಿಸುವರು— **ಯತ್ಸೋಮ ಆ ಸುತೇ ನರಃ** (ಋ. ಸಂ. ೭-೫೪-೧೦) ಎಂಬ ಋಕ್ಕಿನ ಎರಡನೇ ಪಾದದಲ್ಲಿ ಇಂದ್ರಾಗ್ನೀ ಎಂಬ ಶಬ್ದವಿರುವುದು. ಮತ್ತು ಈ ಋಕ್ಕಿನಲ್ಲಿಯೇ **ಅಜೋಹವುಃ** ಎಂಬ ಶಬ್ದಪ್ರಯೋಗವೂ ಇರುವುದು. ಈ ಶಬ್ದಕ್ಕೆ ಹೋಮಕ್ಕಾಗಿ ಈ ಯಜ್ಞಭೂಮಿಗೆ ಬರಬೇಕೆಂದು ಪ್ರಾರ್ಥಿಸಲಾಗಿರುವುದು. ಈ ಮಂತ್ರವನ್ನು ಅಚ್ಛಾವಾಕನೆಂಬ ಋತ್ವಿಜನು ಪ್ರತಿದಿನವೂ ಆಹ್ವಾನಾರ್ಥವಾಗಿ ಪಠಿಸುವನು.

**ತಾ ವಾ ಏತಾಃ ಸ್ವರ್ಗಸ್ಯ ಲೋಕಸ್ಯ ನಾವಃ ಸಂಪಾರಿಣ್ಯಃ ಸ್ವರ್ಗಮೇ-ವೈತಾಭಿರ್ಲೋಕಮಭಿಸಂತರಂತಿ ॥**

**ಉಕ್ತಾನಾಮಾರಂಭಣೀಯಾನಾಮೃಚಾಂ ತ್ರಯಂ ಪ್ರಶಂಸತಿ— ತಾಃ ಪೂರ್ವೋಕ್ತಾ ಋಜುನೀತೀ ಇಂದ್ರಂ ವೋ ಯತ್ಸೋಮ ಇತ್ಯೇತಾಸ್ತಿಸ್ರಃ ಸ್ವರ್ಗಪ್ರಾಪ್ತಯೇ ನೌಸ್ಥಾನೀಯಾಃ ಸಮ್ಯಕ್ಪಾರಂ ನಯಂತೀತಿ ಸಂಪಾರಿಣ್ಯಃ । ಯಥಾ ನಾವಾ ನದೀಂ ತರತಿ ತಥೈತಾಭಿರ್ಋಗ್ಭಿಃ ಸ್ವರ್ಗಂ ಲೋಕಮಭಿಲಕ್ಷ್ಯ ನದೀಸ್ಥಾನೀಯಂ ಪ್ರೌಢಂ ಮಾರ್ಗಂ ಸಮ್ಯಕ್ತರಂತಿ ॥**

ಹಿಂದೆ ಹೇಳಿದ ಮೂರು ಆರಂಭಣೀಯ (ಪ್ರಾರಂಭದ) ಋಕ್ಕುಗಳನ್ನು ಪ್ರಶಂಸೆಮಾಡುವರು. ಹಿಂದೆ ಹೇಳಿದ **ಋಜುನೀತೀ ಇಂದ್ರಂ ವೋ, ಯತ್ಸೋಮ** ಎಂಬ ಮೂರು ಋಕ್ಕುಗಳು ನೌಕಸದೃಶವಾದವುಗಳು ಎಂದರೆ ಅಗಾಧವಾದ ದೂರಪ್ರದೇಶವನ್ನು ದಾಟಿಸಿ ಸ್ವರ್ಗಲೋಕಪ್ರಾಪ್ತಿಯನ್ನುಂಟುಮಾಡುವವು. ಭೂಮಿಗೂ ಸ್ವರ್ಗಕ್ಕೂ ಇರುವ ದೂರಪ್ರದೇಶವು ನದಿಯಂತೆ ದಾಟಲು ಕಷ್ಟವಾಗಿರುವುದು. ನಾವೆಗಳು ನದಿಯನ್ನು ಹೇಗೆ ದಾಟಿಸಿ ದೂರದ ತೀರವನ್ನು ಹೊಂದಲು ಸಹಾಯಕವಾಗಿರುವುದೋ ಅದರಂತೆ ಮೇಲೆ ಹೇಳಿದ ಋಜುನೀತಿ ಮೊದಲಾದ ಮೂರು ಮಂತ್ರಗಳು ಯಜ್ಞಮಾಡುವ ಯಜಮಾನನನ್ನು ಭೂಮಿಯಿಂದ ಸ್ವರ್ಗದವರೆಗೆ ನೌಕೆಗಳಂತಿದ್ದು ಸ್ವರ್ಗದವರೆಗೆ ಒಯ್ಯುವವು.

*English Translation*

**The opening verses of the Shastras of the minor Hotri priests at the Ahargana Soma sacrifice, i.e. such ones as last for a series of days.**

Now follow the opening verses of these Shastras after the Storiyas have been repeated. Rijunti no Varuna. (1. 90, 1) is that of the Maitravaruna Shastra; for in its second pada is said, "Mitra, the wise may lead!" for the Maitravaruna is the leader of the Hotri-priests. Therefore is this leading verse.

By Indram vo visvatas pari (1, 7, 10) commences the Brahmanachhamsi; for by the words "we call him (Indra) to the people" they call Indra every day. When the Brahmanachhamsi, with this knowledge, recites this verse every day, then no other sacrificer, notwithstanding he (Indra) might be called by different parties at the same time, can get Indra away.

Yat soma sute nara (7, 94, 10) is the verse of the Achhavaka. By its words "they called hither Indragni," they call Indragni every day. When the Achhavaka is doing this every day, no other one can wrest from them Indragni. These verses (riguniti &c) are the boats which lead to the shores of the heavenly world. By their means the sacrificers cross the sea and reach the heavenly world.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಸಪ್ತವಿಂಶಾಧ್ಯಾಯಸ್ಯ ತೃತೀಯಃ ಖಂಡಃ**

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತಏಳನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವಾದುದು.



# ಅಥ ಸಪ್ತವಿಂಶಾಧ್ಯಾಯೇ ಚತುರ್ಥಃ ಖಂಡಃ

## ಇಪ್ಪತ್ತೇಳನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ಹೋತೃವರ್ಗದ ಋತ್ವಿಕ್ಕುಗಳು ಪಠಿಸುವ ಅಹೀನ ಮತ್ತು ಐಕಾಹಿಕ ಎಂಬ ಯಜ್ಞಕರ್ಮದ ಶಸ್ತ್ರಮಂತ್ರಗಳಲ್ಲಿರುವ ಋಕ್ಕುಗಳು]



**ಅಥಾತಃ ಪರಿಧಾನೀಯಾ ಏವ ॥**

ಹೋತ್ರಕಾಣಾಂ ಶಸ್ತ್ರಾರಂಭಣಸಾಧನಭೂತಾ ಋಚೋ ವಿಧಾಯ ಸಮಾಪ್ತಿಸಾಧನಭೂತಾ ಋಚೋ ವಿಧತ್ತೇ—ಅಥ ಶಸ್ತ್ರಪ್ರಾರಂಭಾನಂತರಂ ಯಸ್ಮಾತ್ಪರಿಧಾನಂ ಸಮಾಪನಮಪೇಕ್ಷಿತಂ ತಸ್ಮಾತ್ಪರಿಧಾನೀಯಾ ಋಚೋ ವಿಧೀಯಂತೇ । ಏವಕಾರಃ ಪ್ರಕೃತವ್ಯಾವೃತ್ತ್ಯರ್ಥಃ॥

ಹೋತೃವರ್ಗದವರು ಹಿಂದೆ ಹೇಳಿದಂತೆ ಶಸ್ತ್ರಾರಂಭಣಮಂತ್ರಪಠನಕ್ರಮವನ್ನು ತಿಳಿಸಿ ಈಗ ಆ ಮಂತ್ರಗಳ ಪಠಿಸಮಾಪ್ತಿಯನ್ನು ತಿಳಿಸುವರು. ಶಸ್ತ್ರಮಂತ್ರಗಳನ್ನು ಪ್ರಾರಂಭಿಸುವಾಗ ಪರಿಸಮಾಪ್ತಿಯನ್ನು ಹೇಳಲೇಬೇಕಾಗಿರುವುದರಿಂದ ಆ ಪಠಿಸಮಾಪ್ತಿಯನ್ನು ಇಲ್ಲಿ ತಿಳಿಸುವರು.

**ತೇ ಸ್ಯಾಮ ದೇವ ವರುಣೇತಿ ಮೈತ್ರಾವರುಣಸ್ಯೇಷಂ ಸ್ವಶ್ಚ ಧೀಮಹೀತ್ಯಯಂ ವೈ ಲೋಕ ಇಷಮಿತ್ಯಸೌ ಲೋಕಃ ಸ್ವರಿತ್ಯುಭಾವೇವೈತಯಾ ಲೋಕಾವಾರಭಂತೇ ॥**

ಏಕಸ್ಯ ಸ್ತೋತ್ರಕಸ್ಯ ಪರಿಧಾನೀಯಾಂ ವಿಧತ್ತೇ—ತೇ ಸ್ಯಾಮೇತ್ಯಸ್ಯಾಮೃಚೀಷಂ ಸ್ವಶ್ಚೇತಿ ತೃತೀಯಃ ಪಾದಃ ತತ್ರೇಷಮಿತ್ಯನೇನ ಪದೇನಾಭಿಷ್ಟತ್ವಾದಯಂ ಲೋಕೋ ವಿವಕ್ಷಿತಃ । ಸ್ವರಿತ್ಯನೇನ ಪದೇನಾಸೌ ಸ್ವರ್ಗಲೋಕಃ । ತಥಾ ಸತಿ ಲೋಕದ್ವಯಂ ಧೀಮಹಿ ಧ್ಯಾಯೇಮೇತಿ ಮಂತ್ರೇಽಭಿಧಾನಾದೇತಯರ್ಚಾ ದ್ವಾವಪಿ ಲೋಕಾವಾರಭಂತೇ ಪ್ರಾಪ್ನುವಂತಿ ॥ .

ಮೊದಲನೇ ಸ್ತೋತ್ರದ ಸಮಾಪ್ತಿಯನ್ನು ತಿಳಿಸುವರು. **ತೇ ಸ್ಯಾಮ ದೇವ ವರುಣ** (ಋ. ಸಂ. ೭-೬೬-೯) ಎಂಬುದು ಸಮಾಪ್ತಿಋಕ್ಕು. ಇದರ ಮೂರನೆಯ ಪಾದದಲ್ಲಿ **ಇಷಂ ಸ್ವಶ್ಚ** ಎಂದಿರುವುದು. ಇಲ್ಲಿ **ಇಷಂ** ಎಂಬ ಶಬ್ದವು. ಈ ಲೋಕದಲ್ಲಿ ಜನರು ಅಪೇಕ್ಷಿಸುವ ಅನ್ನಾದ್ಯಾಹಾರವನ್ನು ಸೂಚಿಸುವುದರಿಂದ ಈ **ಇಷಂ** ಎಂಬ ಶಬ್ದವು ಈ ಲೋಕವೆಂಬರ್ಥ

ವನ್ನು ಸೂಚಿಸುವುದು. ಸ್ವಃ ಎಂಬ ಪದವು ಸ್ವಗಲೋಕವನ್ನು ಸೂಚಿಸುವುದು. ಈರೀತಿ ಎರಡು ಲೋಕಗಳ ಹೆಸರನ್ನೂ ಉಚ್ಚರಿಸಿ ಅವುಗಳನ್ನು ಧ್ಯಾಯೇಮ ಎಂದು ಮಂತ್ರಗಳಲ್ಲಿಯೇ ಹೇಳಿರುವುದರಿಂದ ಈ ಎರಡು ಲೋಕಗಳನ್ನೂ ಯಜ್ಞಕರ್ತರು ಹೊಂದುತ್ತಾರೆ ಎಂದಭಿಪ್ರಾಯವು.

ವ್ಯಂತರಿಕ್ಷಮತಿರದಿತಿ ಬ್ರಾಹ್ಮಣಾಚ್ಛಂಸಿನೋ ವಿವತ್ತ್ಯೃಚಂ ಸ್ವರ್ಗಮೇ-
ವೈಭ್ಯ ಏತಯಾ ಲೋಕಂ ವಿವೃಣೋತಿ ॥ ಮದೇ ಸೋಮಸ್ಯ
ರೋಚನಾ । ಇಂದ್ರೋ ಯದಭಿನದ್ವಲಮಿತಿ ॥

ಅನ್ಯಸ್ಯ ಪರಿಧಾನೀಯಾಂ ವಿಧತ್ತೇ—ಯಸ್ಮಿಂಸ್ತೃಚೇ ವ್ಯಂತರಿಕ್ಷಮಿತ್ಯೃಗೇಷಾ ಶ್ರೂಯತೇ ಸೋಽಯಂ ವಿಶಬ್ದತ್ವಾದ್ವಿವತ್ತೃಚಶಬ್ದೇನಾಭಿಧೀಯತೇ। ತೇನ ತೃಚೇನ ಸಾಧ್ಯೋ ಯಃ ಸ್ವರ್ಗೋ ಲೋಕಸ್ತಮೇತಯಾ ವ್ಯಂತರಿಕ್ಷಮಿತ್ಯೃಚಾ ಯಜಮಾನೇಭ್ಯೋ ವಿವೃಣೋತಿ ವಿವೃತದ್ವಾರಂ ಕರೋತಿ । ತಸ್ಯಾಮೃಚಿ ದ್ವಿತೀಯತೃತೀಯಪಾದೌ ಪಠತಿ-ತಸ್ಯಾ ಋಚೋಽಯಮರ್ಥಃ । ಇಂದ್ರೋ ದೇವಃ ಸೋಮಸ್ಯ ರೋಚನಾ ರುಚಿಂ ಪ್ರಾಪ್ಯೇತಿ ಶೇಷಃ । ತತೋ ಮದೇ ಹರ್ಷೇ ಸತ್ಯಂತರಿಕ್ಷಂ ವ್ಯತಿರತ್ । ವಿಶೇಷೇಣ ಯಜಮಾನಾನಾಂ ಗಮನಯೋಗ್ಯ-ಮಕರೋತ್ । ಯದ್ಯಸ್ಮಾತ್ಕಾರಣಾದ್ವಲನಾಮಾನಮಸುರಮಭಿನದ್ವಿದಾರಿತವಾಂಸ್ತಸ್ಮಾದಂತ-ರಿಕ್ಷಮಾರ್ಗಃ ಸುಗಮಃ ॥

ಇನ್ನೊಂದು ಮಂತ್ರದ ಪರಿಸಮಾಪ್ತಿಯನ್ನು ತಿಳಿಸುವರು. ಯಾವ ತೃಚದಲ್ಲಿ ವ್ಯಂತರಿಕ್ಷಂ (ಋ. ಸಂ. ೮-೧೪-೭) ಎಂಬ ಋಕ್ಕು ಇರುವುದೋ ಆ ತೃಚವು ವಿವೃತ್ತಶಬ್ದದಿಂದ ತಿಳಿಯಲ್ಪಡುವುದು. ಆ ತೃಚದಿಂದ ಸಾಧ್ಯವಾದ ಸ್ವರ್ಗಲೋಕದ ಬಾಗಿಲನ್ನು ಯಜಮಾನನು ವ್ಯಂತರಿಕ್ಷವೆಂಬ ಋಕ್ಕಿನಿಂದ ತೆಗೆದು ಪ್ರವೇಶಿಸುತ್ತಾನೆ. ಮೇಲೆ ಹೇಳಿದ ಋಕ್ಕಿನ ಎರಡು ಮತ್ತು ಮೂರನೇ ಪಾದಗಳನ್ನು ತಿಳಿಸುವರು. ಆ ಋಕ್ಕಿಗೆ ಈ ಕೆಳಗಿನ ಅರ್ಥವಿರುವುದು. ಇಂದ್ರಃ-ಇಂದ್ರದೇವನು, ಸೋಮಸ್ಯ-ಸೋಮರಸದ, ರೋಚನಾ-ಕಾಂತಿಯನ್ನು ಪಡೆದಿರುವನು. ಮದೇ-ಆ ಸಂತೋಷದಿಂದ ಇರುವಾಗ, ವ್ಯತಿರತ್-ಅಂತರಿಕ್ಷವನ್ನು ಯಜಮಾನನಿಗೆ ಯೋಗ್ಯವಾದ ಮಾರ್ಗವನ್ನಾಗಿ ಮಾಡಿದನು. ಹಿಂದೆ ಇಂದ್ರನು ಬಲನೆಂಬ ಅಸುರನನ್ನು ಅಂತರಿಕ್ಷದಲ್ಲಿ ಸೀಳಿ ಕೊಂದದ್ದರಿಂದ ಅಂತರಿಕ್ಷಮಾರ್ಗವು ಸಜ್ಜನರಿಗೆ ಸುಗಮವಾದ ಮಾರ್ಗವಾಯಿತೆಂದಭಿಪ್ರಾಯವು.

ಸಿಷಾಸವೋ ವಾ ಏತೇ ಯದ್ದೀಕ್ಷಿತಾಸ್ತಸ್ಮಾದೇಷಾ ಬಲವತೀ ಭವತಿ ॥

ಅತ್ರ ವಲಭೇದನಮಭಿಪ್ರೇತ್ಯ ತಾಮೃಚಂ ಪ್ರಶಂಸತಿ—ಯೇ ದೀಕ್ಷಿತಾಃ ಸಂತಿ ತೇ ಸಿಷಾಸವೋ ಲಬ್ಧಕಾಮಾಃ ಫಲಾರ್ಥಿನಸ್ತಸ್ಮಾತ್ಕಾರಣಾದೃಗೇಷಾ ವಲವತೀ ವಲನಾಮಕಾ-ಸುರಭೇದಪ್ರತಿಪಾದಿಕಾ ಕರ್ತವ್ಯಾ ಭವತಿ ॥

ಬಲನಾಮಕ ಅಸುರರನ್ನು ಸಂಹಾರಮಾಡಿದ ವಿಷಯದಲ್ಲಿ ಆ ಋಕ್ಕನ್ನು ಪ್ರಶಂಸೆಮಾಡುವರು. ಯಾವ ಪುರುಷರು ಯಜ್ಞದೀಕ್ಷೆಯನ್ನು ವಹಿಸಿ ತಮ್ಮ ಇಷ್ಟಾರ್ಥಗಳನ್ನು ಪಡೆಯಲಿಚ್ಛಿಸುವರೋ ಇಷ್ಟಾರ್ಥವನ್ನಪೇಕ್ಷಿಸುವ ಆ ಪುರುಷರು ಆ ಉದ್ದೇಶದಿಂದಲೇ ಬಲನಾಮಕಾಸುರನನ್ನು ನಿಗ್ರಹಿಸಿದ ಋಕ್ಕನ್ನೇ ಭಜಿಸುತ್ತಾರೆ.

ಉದ್ಗಾ ಆಜದಂಗಿರೋಭ್ಯ ಆವಿಷ್ಕೃಣ್ವನ್ಗುಹಾ ಸತೀಃ । ಅರ್ವಾಂಚಂ ನುನುದೇ ಬಲಮಿತಿ ಸನಿಮೇವೈಭ್ಯ ಏತಯಾಽವರುಂಧೇ ॥

ಯದ್ಯಪೀಯಮೃಕ್ಪರಿಧಾನೀಯಾ ನ ಭವತಿ ತಥಾಪ್ಯೇತದಾದಿಕೇತ್ರ್ಯೃಚ ಉಪಕ್ರಾಂತಸ್ತಸ್ಮಿನ್ಪ್ರಥಮಾಮೃಚಮನೂದ್ಯ ವ್ಯಾಖ್ಯಾಯ ದ್ವಿತೀಯಾಮೃಚಮನೂದ್ಯ ವ್ಯಾಚಷ್ಟೇ ಅಂಗಿರೋಭ್ಯ ಮಹರ್ಷಿಭ್ಯಃ ಸತೀರ್ವಿದ್ಯಮಾನಾ ಗಾ ಉದಾಜದೂರ್ಧ್ವಂ ಪ್ರೇರಿತವಾನ್ । ಕಿಂ ಕುರ್ವನ್ಗುಹಾ ವಲಸ್ಯಾಸುರಸ್ಯ ಸಂಬಂಧಿ ಗೂಢಂ ಸ್ಥಾನಮಾವಿಷ್ಕುರ್ವನ್ । ಅರ್ವಾಂಚಮತಿನೀಚಂ ವಲನಾಮಕಮಸುರಂ ನುನುದೇ ವಿನಾಶಿತವಾನ್ । ಅಯಮರ್ಥಃ । ವಲನಾಮಾಖ್ಯಃ ಕಶ್ಚಿದಸುರೋ ಮಹರ್ಷೀಣಾಂ ಗಾ ಅಪಹೃತ್ಯತ್ಯ ಕಸ್ಮಿಂಶ್ಚಿದ್ಬಿಲೇಽವಸ್ಥಾಪ್ಯ ಪಾಷಾಣೇನ ಬಿಲದ್ವಾರಮಾಚ್ಛಾದ್ಯಾವಸ್ಥಿತಸ್ತಂ ವೃತ್ತಾಂತಮಿಂದ್ರೋಽವಗತ್ಯ ಗುಹಾದ್ವಾರಮುದ್ಘಾಟ್ಯ ವಲನಾಮಾನಮಸುರಮಪನುದ್ಯ ತತ್ರಾವಸ್ಥಿತಾಮಹರ್ಷೀಣಾಂ ಗಾ ಬಿಲಾದುದ್ಧೃತ್ಯ ಮಹರ್ಷಿಭ್ಯೋ ದತ್ತವಾನಿತಿ । ಅಯಮರ್ಥಃ ಶಾಖಾಂತರೇ ವಿಸ್ಪಷ್ಟಮಾಮ್ನಾಯತೇ—'ಇಂದ್ರೋ ವಲಸ್ಯ ಬಿಲಮಪೌರ್ಣೋತ್ । ಸ ಯ ಉತ್ತಮಃ ಪಶುರಾಸೀತ್ । ತಂ ಪೃಷ್ಠಂ ಪ್ರತಿಸಂಗೃಹ್ಯೋದಕ್ಖಿದತ್ತಂ ಸಹಸ್ರಂ ಪಶವೋಽನೂದಯನ್ಸ ಉನ್ನತೋಽಭವತ್' ಇತಿ । ಏತಯಾ ತ್ರ್ಯೃಚಗತಯಾ ದ್ವಿತೀಯಯರ್ಚಾ ಸನಿಮೇವ ಲಾಭಮೇವೈಭ್ಯೋಽವರುಂಧೇ ಸಂಪಾದಯತಿ ॥

ಈ ಋಕ್ಕು ಪರಿಸಮಾಪ್ತಿ (ಪರಿಧಾನೀಯ) ಋಕ್ಕಾಗಿರುವುದಿಲ್ಲ. ಆದರೂ ಈ ಋಕ್ಕನ್ನು ಕೊನೆಯ ಋಕ್ಕಿನೊಂದಿಗೆ ಸೇರಿಸಿ ಪಠಿಸುವರು. ಈ ವಿಷಯದಲ್ಲಿ ಈ ತೃಚದ ಮೊದಲನೇ ಋಕ್ಕನ್ನು ಹೇಳಿದ್ದಾಯಿತು. ಈಗ ಎರಡನೇ ಋಕ್ಕನ್ನು ತಿಳಿಸುವರು. ಪೂರ್ವದಲ್ಲಿ ಅಂಗಿರಾಋಷಿಗಳೆಂದು ಪ್ರಸಿದ್ಧರಾದ ಋಷಿಗಳಿದ್ದರು. ಅವರ ಗೋವುಗಳನ್ನು ಬಲನೆಂಬ ಅಸುರನು ಅಪಹರಿಸಿ ಒಂದು ಪರ್ವತದ ಗುಹೆಯಲ್ಲಿ ಬಚ್ಚಿಟ್ಟಿದ್ದನು. ಇಂದ್ರನು ಈ ಬಲನೆಂಬ ಅಸುರನನ್ನು ಸಂಹರಿಸಿ ಋಷಿಗಳ ಗೋವುಗಳನ್ನು ಅವರಿಗೆ ಹಿಂದಕ್ಕೆ ಕೊಟ್ಟನು. ಈ ವಿಷಯವು ಋಗ್ವೇದದಲ್ಲಿ ಅನೇಕಕಡೆ ಹೇಳಲ್ಪಟ್ಟಿದೆ. ಆ ವಿಷಯವನ್ನು ಇಲ್ಲಿ ಪ್ರಸ್ತಾಪಮಾಡಲಾಗಿದೆ. ಅದನ್ನೇ ಭಾಷ್ಯಕಾರರು ಇಲ್ಲಿ ವಿವರಿಸಿದ್ದಾರೆ ಪೂರ್ವದಲ್ಲಿ ಒಬ್ಬ ನೀಚನಾದ ವಲನೆಂಬ ಅಸುರನು ಅಂಗಿರಾಋಷಿಗಳ ಗೋವುಗಳನ್ನು ಅಪಹರಿಸಿ ಒಂದು ಪರ್ವತದ ಗುಹೆಯಲ್ಲಿ ಬಚ್ಚಿಟ್ಟು ಆ ಗುಹೆಯ ಬಾಗಿಲಿಗೆ ಅಡ್ಡಲಾಗಿ ಒಂದು ದೊಡ್ಡ ಕಲ್ಲನ್ನು ಮುಚ್ಚಿದನು. ಇಂದ್ರನು ಈ ವಿಷಯವನ್ನು ತಿಳಿದು ಗುಹಾದ್ವಾರಕ್ಕೆ ಅಡ್ಡಲಾಗಿ ಇಟ್ಟಿದ್ದ ಕಲ್ಲುಬಂಡೆಯನ್ನು ನಾಶಮಾಡಿ ಋಷಿಗಳ ಗೋವುಗಳನ್ನು ಅವರಿಗೆ ಹಿಂದಕ್ಕೆ ತಂದುಕೊಟ್ಟನು ಎಂದು ಹೇಳಲಾಗಿದೆ. ಈ ವಿಷಯವು ಶಾಖಾಂತರದಲ್ಲಿಯೂ (ಯಜುರ್ವೇದದಲ್ಲಿಯೂ) ಈರೀತಿ ಹೇಳಲ್ಪಟ್ಟಿದೆ—ಇಂದ್ರೋ ವಲಸ್ಯ ಬಿಲಮಪೌರ್ಣೋತ್ । ಸ ಯ ಉತ್ತಮಃ ಪಶುರಾಸೀತ್ । ತಂ ಪೃಷ್ಠಂ ಪ್ರತಿಸಂಗೃಹ್ಯೋದಕ್ಖಿದತ್ತಂ ಸಹಸ್ರಂ ಪಶವೋಽನೂದಾಯನ್ಸ ಉನ್ನತೋಽಭವತ್ ॥ ಎಂದು ಹೇಳಲಾಗಿದೆ.

ಇಂದ್ರೇಣ ರೋಚನಾ ದಿವ ಇತಿ ಸ್ವರ್ಗೋ ವೈ ಲೋಕ ಇಂದ್ರೇಣ ರೋಚನಾ ದಿವಃ ॥

ಅಥ ತೃತೀಯಾಮೃಚಂ ಪರಿಧಾನೀಯಾಂ ವಿವಕ್ಷುಃ ಪ್ರಥಮಪಾದಮನೂದ್ಯ ವ್ಯಾಚಷ್ಟೇ—ದಿವಃ ಸ್ವರ್ಗವಿಶೇಷಾ ಇಂದ್ರೇಣ ದೇವೇನ ರೋಚನಾ ರೋಚಮಾನಾ ದೀಪ್ತಿಯುಕ್ತಾಃ ಕೃತಾ ಇತಿ ಶೇಷಃ । ಅನೇನ ಪಾದೇನ ಸ್ವರ್ಗಲೋಕವರ್ಣನಂ ವಿವಕ್ಷಿತಮ್ । ಇಂದ್ರೇಣೇತ್ಯಾದಿಕಸ್ಯಾರ್ಥಸ್ಯ ತತ್ರ ವಿದ್ಯಮಾನತ್ವಾತ್ ॥

ಈಗ ಪರಿಸಮಾಪ್ತಿಯ ಮೂರನೇ ಋಕ್ಕನ್ನು ತಿಳಿಸುವರು. ಅದರಲ್ಲಿ ಮೊದಲನೇ ಪಾದವನ್ನು ವಿವರಿಸುವರು, ಸ್ವರ್ಗಲೋಕವು ಇಂದ್ರನಿಂದ ಪ್ರಕಾಶಿತವಾಗಿದೆ. ಇದರಿಂದ ಸ್ವರ್ಗಲೋಕದ ವರ್ಣನೆಯನ್ನು ತಿಳಿಸಿದಂತಾಯಿತು. ಇಂದ್ರನ ವಿಷಯವೂ ಇಲ್ಲಿ ತಿಳಿಸಲಾಗಿದೆ.

ದೃಳ್ಹಾನಿ ದೃಂಹಿತಾನಿ ಚ । ಸ್ಥಿರಾಣಿ ನ ಪುರಾಣುದ ಇತಿ ॥ ಸ್ವರ್ಗ ಏವೈತಯಾ ಲೋಕೇಽಹರಹಃ ಪ್ರತಿತಿಷ್ಠಂತೋ ಯಂತಿ ॥

ದ್ವಿತೀಯತೃತೀಯಪಾದಾವನುವದತಿ—ತಸ್ಮಿನ್ಸ್ವರ್ಗೇ ಯಾನಿ ದೃಳ್ಹಾನಿ ಪ್ರಕಾಶರೂಪಾಣಿ ನಕ್ಷತ್ರಾಣಿ ಯಾನಿ ಚ ಪೂರ್ವಮಧೃಢಾನ್ಯಪಿ ದೃಂಹಿತಾನೀಂದ್ರೇಣ ದೃಢೀಕೃತಾನಿ ತಾನಿ ಸರ್ವಾಣ್ಯಪಿ ಸ್ಥಿರಾಣಿ ಕೃತ್ವಾ ನ ಪರಾಣುದ ಇಂದ್ರೋ ನ ವಿನಾಶಿತವಾನ್ ॥ ಅಸ್ಯಾಮೃಚಿ ಸ್ಥಿರಾಣಾಂ ಸ್ವರ್ಗಸ್ಥಾನಾನಾಂ ನಕ್ಷತ್ರಾದಿಶರೀರಾಣಾಂ ಶ್ರೂಯಮಾಣತ್ವಾದೇತಯರ್ಚಾ ಪರಿಧಾನೇ ಸತಿ ಪ್ರತಿದಿನಂ ಸ್ವರ್ಗ ಏವ ಲೋಕೇ ಪ್ರತಿಷ್ಠಾಂ ಪ್ರಾಪ್ತವಂತೋ ಯಂತಿ ವರ್ತಂತೇ ॥

ಎರಡನೇ ಪಾದವನ್ನು ತಿಳಿಸುವರು. ಆ ಸ್ವರ್ಗದಲ್ಲಿ ಪ್ರಕಾಶದಿಂದ ಬೆಳಗುತ್ತಿರುವ ನಕ್ಷತ್ರಗಳನ್ನೂ ದೃಢವಾಗಿಲ್ಲದೆ ದುರ್ಬಲವಾಗಿರುವ ನಕ್ಷತ್ರಗಳನ್ನೂ ಇಂದ್ರನು ಸ್ಥಿರವಾಗಿಯೂ ದೃಢವಾಗಿಯೂ ಇರುವಂತೆ ಮಾಡಿದನು. ನಾಶಮಾಡಲಿಲ್ಲ. ಈ ಋಕ್ಕಿನಲ್ಲಿ ಸ್ವರ್ಗಲೋಕದಲ್ಲಿ ನಕ್ಷತ್ರಗಳು ಸ್ಥಿರವಾಗಿ ಸ್ಥಾಪಿಸಲ್ಪಟ್ಟಿರುವವೆಂದು ಹೇಳಿರುವುದರಿಂದ ಈ ಋಕ್ಕನ್ನು ಕೊನೆಯ ಋಕ್ಕನ್ನಾಗಿ ಪಠಿಸುವುದು ಯುಕ್ತವಾಗಿದೆ.

ಆಽಹಂ ಸರಸ್ವತೀವತೋರಿತ್ಯಚ್ಛಾವಾಕಸ್ಯ ವಾಗ್ವೈ ಸರಸ್ವತೀ ವಾಗ್ವತೋರಿತಿ ಹೈತದಾಹೇಂದ್ರಾಗ್ನ್ಯೋರವೋ ವೃಣ ಇತ್ಯೇತದ್ಧ ವಾ ಇಂದ್ರಾಗ್ನ್ಯೋಃ ಪ್ರಿಯಂ ಧಾಮ ಯದ್ವಾಗಿತಿ ಪ್ರಿಯೇಣೈವೈನೌ ತದ್ಧಾಮ್ನಾ ಸಮರ್ಧಯತಿ ॥ ಪ್ರಿಯೇಣ ಧಾಮ್ನಾ ಸಮರ್ಧಯತೇ ಯ ಏವಂ ವೇದ ॥

ಅನ್ಯಸ್ಯ ಪರಿಧಾನೀಯಾಂ ವಿಧತ್ತೇ—ಆಽಹಮಿತ್ಯಾದಿಃ ಪ್ರಥಮಃ ಪಾದ ಇಂದ್ರಾಗ್ನ್ಯೋರಿತ್ಯಾದಿರ್ದ್ವಿತೀಯಃ ಪಾದಃ । ತಸ್ಯಾರ್ಥರ್ಚಸ್ಯಾಯಮರ್ಥಃ । ಅಹಮನುಷ್ಠಾತಾ ಸರಸ್ವತೀವತೋಃ ಸರಸ್ವತೀಯುಕ್ತಯೋರಿಂದ್ರಾಗ್ನ್ಯೋರ್ದೇವಯೋಃ ಸಂಬಂಧಿ ಯದವಃ ಸುರಕ್ಷಿತಂ ಸ್ಥಾನಮಸ್ತಿ ತದಾವೃಣೇ ಸರ್ವತಃ ಪ್ರಾರ್ಥಯೇತಿ । ಅತ್ರ ಪ್ರಥಮಪಾದೇ ಸರಸ್ವತೀಶಬ್ದೇನ

ವೇದಶಾಸ್ತ್ರಸ್ವರೂಪಾ ವಾಗೇವ ವಿವಕ್ಷಿತಾಽತಃ ಸರಸ್ವತೀವತೋರಿತ್ಯೇವಂ ರೂಪೋ ಮಂತ್ರೋ ವಾಗ್ವತೋರಿತ್ಯೇತಮೇವಾರ್ಥಮಾಹ । ದ್ವಿತೀಯಪಾದೇ ತ್ವವಃಶಬ್ದೇನ ಸುರಕ್ಷಿತಮಿಂದ್ರಾಗ್ನಿದೇವತಯೋರ್ಯತ್ಪ್ರಿಯಂ ಧಾಮ ತಿವಕ್ಷಿತಂ ತದ್ವಾಗ್ರೂಪಮೇವ ವಾಗ್ವ್ಯವಹಾರೇ ತಯೋರತ್ಯಂತಪ್ರೀತಿಮತ್ತ್ವಾತ್ । ತಸ್ಮಾದೇತಾಮೃಚಂ ಪಠನ್ನೇವ ತ್ವಿಂದ್ರಾಗ್ನೀ ಪ್ರಿಯೇಣೈವ ಧಾಮ್ನಾ ಸ್ಥಾನೇನೈವ ಸಮರ್ಧಯತಿ ಸಮೃದ್ಧೌ ಕರೋತಿ ॥ ವೇದನಂ ಪ್ರಶಂಸತಿ—

ಮತ್ತೊಂದು ಪರಿಸಮಾಪ್ತಿಯ ಋಕ್ಕನ್ನು ವಿವರಿಸುವರು. ಈ ಋಕ್ಕಿನಲ್ಲಿ **ಅಽಹಂ** ಎನ್ನುವುದು ಮೊದಲನೆಯ ಪಾದವು. **ಇಂದ್ರಾಗ್ನ್ಯೋಃ** ಎನ್ನುವುದು ಎರಡನೆಯ ಪಾದವು. ಈ ಅರ್ಧಋಕ್ಕಿಗೆ ಮುಂದಿನಂತೆ ಅರ್ಥವಿರುವುದು—ಅನುಷ್ಠಾತನಾದ ನಾನು ಸರಸ್ವತೀಯುಕ್ತರಾದ ಇಂದ್ರಾಗ್ನಿ ದೇವತೆಗಳ ಸಂಬಂಧವಾದ ಯಾವ ಸುರಕ್ಷಿತವಾದ ಸ್ಥಾನವಿದೆಯೋ ಅದನ್ನು ನಾನು ಪ್ರಾರ್ಥಿಸುತ್ತೇನೆ. ಪ್ರಥಮಪಾದದಲ್ಲಿರುವ ಸರಸ್ವತೀಶಬ್ದವು ವೇದಶಾಸ್ತ್ರರೂಪವಾದ ವಾಕ್ಯವೆಂಬ ಅರ್ಥವನ್ನು ತಿಳಿಸುವುದು. ಆದ್ದರಿಂದ **ಸರಸ್ವತೀವತೋಃ** ಎಂಬ ಮಂತ್ರವು ವಾಕ್ಯಗಳುಳ್ಳ ಎಂಬರ್ಥವನ್ನು ತಿಳಿಸುವುದು. ಎರಡನೆಯ ಪಾದದಲ್ಲಿ **ಅವಃ** ಶಬ್ದವು ಇಂದ್ರಾಗ್ನಿದೇವತೆಗಳಿಗೆ ಪ್ರಿಯವಾದ ಯಾವ ಸ್ಥಾನವಿರುವುದೋ ಅದನ್ನು ತಿಳಿಸುವುದು. ಆದ್ದರಿಂದ ಈ ಋಕ್ಕನ್ನು ಪಠಿಸುವುದರಿಂದ ಇಂದ್ರಾಗ್ನಿಗಳೆಂಬ ದೇವತೆಗಳು ತಮಗೆ ಪ್ರಿಯವಾದ ಸ್ಥಾನವನ್ನು ಕೊಟ್ಟು ಯಜಮಾನನನ್ನು ಸಮೃದ್ಧನನ್ನಾಗಿ ಮಾಡುವರು ಎಂಬ ಅರ್ಥವು ಉಕ್ತವಾಗಿದೆ. ಈ ವಿಷಯವನ್ನು ಚೆನ್ನಾಗಿ ತಿಳಿದಿರುವ ಪುರುಷನು ತನಗೆ ಪ್ರಿಯವಾದ ಸ್ಥಾನವನ್ನು ಪಡೆದು ಸುಖಿಸುವನು.

### *English Translation*

### (The concluding verses of the same Shastras at the Ahargana Somn Sacrifices)

Now follow the concluding verses of these Shastras: Te syama deva varuna (7, 66, 9) is that of the Maitravaruna Shastra. For by its words, "we contemplate food (isham) and light (svar)," they get hold of both worlds; for "food" is this world, and "light" is that world.

By the triplet vyantariksham atirad (8, 14, 7–9), which has the characteristics vi, i.e. asunder, the Brahmanachhamsi opens the gates of the heavenly world. The words, "Indra, inebriated by Soma, cleft the hole and made appear the lights" (8, 14, 7), refer to the passionate dasire of those who are initiated into the sacrificial art (for heaven); thence it is called the Balavati verse. The words, "He drove out the cows, and revealed them which were hidden, to the Angiras, and flung away Bala" contain the expression of a gift to them "The Angiras). By the words, "indrena rochana divi (verse 9) the heaven-world is alluded to. By the words, "The fixed lights (stars) of heaven have been fastened by Indra, the fixed ones he does not flying away, "the sacrificers approach every day heaven and walk there.

Aham sarasvativator (8, 38, 10) is the verse of the Achhavaka. For Sarasvathi is the voice; (the dual is used) for this day belongs to the "two who

have the voice". As to who they are is expressed by the words—"I choose the tone of Indragni. "Through this residence one makes both successful. Who has this knowledge will be successful in his own residence (his own way).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಸಪ್ತವಿಂಶಾಧ್ಯಾಯಸ್ಯ ಚತುರ್ಥಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೇಳನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವಾದುದು.



## ಅಥ ಸಪ್ತವಿಂಶಾಧ್ಯಾಯೇ ಪಂಚಮಃ ಖಂಡಃ

### ಇಪ್ಪತ್ತೇಳನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ಹೋತೃವರ್ಗದ ಋತ್ವಿಜರು ಪಠಿಸಬೇಕಾದ ಅಹೀನ ಮತ್ತು ಐಕಾಹಿಕ ಎಂಬ ಕರ್ಮಗಳಲ್ಲಿ ಶಸ್ತ್ರಮಂತ್ರಗಳು ಇತ್ಯಾದಿ]



**ಉಭಯ್ಯಃ ಪರಿಧಾನೀಯಾ ಭವಂತಿ ಹೋತ್ರಕಾಣಾಂ ಪ್ರಾತಃಸವನೇ ಚ ಮಾಧ್ಯಂದಿನೇ ಚಾಹೀನಾಶ್ಚೈಕಾಹಿಕಾಶ್ಚ ॥**

ಅಥ ಪರಿಧಾನೀಯಾಂ ಸ್ತೋತುಮುಪಕ್ರಮತೇ—ಹೋತ್ರಕಾಣಾಂ ಮೈತ್ರಾವರುಣ ಬ್ರಾಹ್ಮಣಾಚ್ಛಂಸ್ಯಚ್ಛಾವಾಕಾನಾಂ ಸವನದ್ವಯೇ ಪರಿಧಾನೀಯಾ ದ್ವಿವಿಧಾ ಭವಂತಿ । ಕಥಂ ತದುಚ್ಯತೇ । ಅಹೀನಾ ಅಹರ್ಗಣೇಷು ವಿಹಿತಾ ಐಕಾಹಿಕಾ ಏಕಾಹೇ ಪ್ರಕೃತಿರೂಪೇ ವಿಹಿತಾ ಇತ್ಯೇವಂ ದ್ವೈವಿಧ್ಯಂ ॥

ಈಗ ಪರಿಸಮಾಪ್ತಿಯ ಋಕ್ಕುಗಳಿಂದ ಸ್ತೋತ್ರಮಾಡುವುದನ್ನು ತಿಳಿಸುವರು. ಹೋತೃವರ್ಗದ ಮೈತ್ರಾವರಣ, ಬ್ರಾಹ್ಮಣಾಚ್ಛಂಸಿ, ಅಚ್ಛಾವಾಕ ಎಂಬ ಋತ್ವಿಜರು ಉಳಿದ ಎರಡು ಸವನಗಳಲ್ಲಿಯೂ ಪಠಿಸಬೇಕಾದ ಪರಿಸಮಾಪ್ತಿಯ ಋಕ್ಕುಗಳು ಎರಡುವಿಧವಾಗಿರುವವು. ಹೇಗೆಂದರೆ ಅಹೀನ ಎಂಬ ಯಾಗಕರ್ಮದಲ್ಲಿ ಅಹರ್ಗಣಗಳಲ್ಲಿ (ಎಲ್ಲಾ ದಿನಗಳಲ್ಲಿಯೂ) ಪಠಿಸಬೇಕಾದ ಋಕ್ಕುಗಳು ಒಂದುವಿಧ; ಐಕಾಹಿಕಾ ಎಂಬ ಕರ್ಮದಲ್ಲಿ ಪಠಿಸಬೇಕಾದ ಪ್ರಕೃತಿರೂಪವಾದ ಋಕ್ಕುಗಳು ಮತ್ತೊಂದು ವಿಧ ಎಂದು ಎರಡುವಿಧಗಳಾಗಿರುವವು.

**ತತ ಏಕಾಹಿಕಾಭಿರೇವ ಮೈತ್ರಾವರುಣಃ ಪರಿದದಾತಿ, ತೇನಾಸ್ಮಾಲ್ಲೋಕಾನ್ನ ಪ್ರಚ್ಯವತೇ ॥**

ತತ್ರ ಹೋತ್ರಕವಿಶೇಷಸ್ಯ ಪರಿಧಾನೀಯಾವಿಶೇಷಂ ದರ್ಶಯತಿ—ತತಸ್ತಾಸೂಭಯವಿಧಾಸು ಮೈತ್ರಾವರುಣಾಖ್ಯಋತ್ವಿಗೈಕಾಹಿಕಾಭಿರೇವ ಪರಿದಧ್ಯಾತ್ । ತೇ ಸ್ಯಾಮ ದೇವ ವರುಣೇತಿ ಪ್ರಕೃತೌ ಪ್ರಾತಃಸವನೇ ಮೈತ್ರಾವರುಣಸ್ಯ ಪರಿಧಾನೀಯಾ ವಿಹಿತಾ । ಮಾಧ್ಯಂದಿನಸವನೇ ನೂ ಷ್ಟುತ ಇಂದ್ರ ನೂ ಗೃಣಾನ ಇತೀಷಾ ವಿಹಿತಾ । ಅಹೀನೇ ವಿಕೃತಿರೂಪೇಽಪಿ ಸವನದ್ವಯೇ ತದೇವ ಪರಿಧಾನೀಯಾದ್ವಯಂ ಮೈತ್ರಾವರುಣಸ್ಯ ದ್ರಷ್ಟವ್ಯಮ್ । ಕಥಮಿತಿ ತದುಚ್ಯತೇ । ಅಹರ್ಗಣಸ್ಯ ಪ್ರಾತಃಸವನೇ ಹಿ ಮೈತ್ರಾವರುಣಸ್ಯ ಪ್ರತಿ ವಾಂ ಸೂರ ಉದಿತ ಇತ್ಯಸ್ಯ ಪರ್ಯಾಯತ್ರ್ಯೃಚಸ್ಯಾಂತ್ಯಾ ತೇ ಸ್ಯಾಮ ದೇವ ವರುಣೇತ್ಯೇಷಾ ಪರಿಧಾನೀಯಾ । ಐಕಾಹಿಕ್ಯಾಽಪಿ ಸೈವ ಪರಿಧಾನೀಯಾ ಭವತಿ । ತಥಾ ಹಿ ಪ್ರಕೃತೌ ಮೈತ್ರಾವರುಣಸ್ಯ ಪ್ರ ಮಿತ್ರಯೋರ್ವರುಣಯೋರಿತಿ ನವಾಯಾತಂ ಮಿತ್ರಾವರುಣೇತಿ ಯಾಜ್ಯೇತಿ ಸೂತ್ರಕಾರವಚನಾನ್ನವಾನಾಮಂತ್ಯಾ ಸೈವೇತ್ಯೈಕಾಹಿಕಾಭಿರೇವ ಮೈತ್ರಾವರುಣಃ ಪರಿದಧಾತೀತ್ಯೇತದುಪಪನ್ನಂ ಭವತಿ । ತಥಾ ಮಾಧ್ಯಂದಿನ ಸವನೇಽಪ್ಯಾ ಸತ್ಯೋ ಯಾತ್ವಿತ್ಯಹೀನಸೂಕ್ತಮಿತಿ ವಕ್ಷ್ಯತಿ । ಯಾಽಹೀನಸೂಕ್ತಾಂತ್ಯಾ ಸಾಹೀನಸ್ಯ ತತ್ರ ಪರಿಧಾನೀಯಾ । ಅಹೀನಸೂಕ್ತಾಂತಂ ಹಿ ಮಾಧ್ಯಂದಿನಸವನೇ ಮೈತ್ರಾವರುಣಶಸ್ತ್ರಂ ತಸ್ಯ ನೂ ಷ್ಟುತ ಇಂದ್ರ ನೂ ಗೃಣಾನ ಇತ್ಯೇಷಾಂತ್ಯಾ । ತಥಾ ಪ್ರಕೃತಾವಪಿ ಸೈವ ಪರಿಧಾನೀಯಾ । ತಥಾ ಹಿ । ಕಯಾ ನಶ್ಚಿತ್ರ ಆಭುವತ್ಕಯಾ ತ್ವಂ ನ ಊತ್ಯಾ ಕಸ್ತಮಿಂದ್ರ ತ್ವಾ ವಸುಂ ಸದ್ಯೋಹ ಜಾತ ಏವಾ ತ್ವಾಮಿಂದ್ರೋಶನ್ನು ಷು ಣಃ ಸುಮನಾ ಉಪಾಕ ಇತಿ ಯಾಜ್ಯೇತಿ ಸೂತ್ರಕಾರವಚನಾದೇವಾ ತ್ವಾಮಿಂದ್ರ ವಜ್ರಿನ್ನತ್ರೇತ್ಯೇತಸ್ಯೈಕಾದಶರ್ಚಸ್ಯಾಂತ್ಯಾ ನೂ ಷ್ಟುತ ಇಂದ್ರ ನೂ ಗೃಣಾನ ಇತ್ಯೇಷೈವೇತಿ ಮೈತ್ರಾವರುಣಸ್ಯ ಪ್ರಾತಃಸವನೇ ಮಾಧ್ಯಂದಿನಸವನೇ ಚೈಕಾಹಿಕಾಭಿಃ ಪರಿಧಾನಮುಪಪನ್ನಂ ಭವತಿ । ಐಕಾಹಿಕಾಭಿರೇವೇತ್ಯೇವಕಾರೋಽನ್ಯಶಂಕಾವ್ಯಾವೃತ್ಯರ್ಥಃ । ಯಾ ಐಕಾಹಿಕಾಃ ಪರಿಧಾನೀಯಾಸ್ತಾಃ ಏವ ಚಾಹರ್ಗಣೇ ಮೈತ್ರಾವರುಣಸ್ಯ ಪರಿಧಾನೀಯಾ ನ ತ್ವನ್ಯಾ ಇತ್ಯರ್ಥಃ । ಯದ್ಯಪಿ ಮೈತ್ರಾವರುಣಸ್ಯ ಪ್ರಕೃತೌ ಸವನಯೋರುಭಯೋರ್ದ್ವೇ ಏವ ಪರಿಧಾನೀಯೇ ತಥಾಪಿ ಪ್ರಯೋಗಬಹುತ್ವಾಪೇಕ್ಷಮೈಕಾಹಿಕಾಭಿರಿತಿ ಬಹುವಚನಮ್ । ತೇನ ಮೈತ್ರಾವರುಣಸ್ಯ ಪ್ರಕೃತಿವಿಕೃತ್ಯೋಃ ಪರಿಧಾನೀಯಾಭೇದರಾಹಿತ್ಯೇನಾಯಂ ಮೈತ್ರಾವರುಣೋಽಸ್ಮಾಲ್ಲೋಕಾತ್ಕದಾಚಿದಪಿ ನ ಪ್ರಚ್ಯವತೇ ॥

ಮೈತ್ರಾವರುಣನೆಂಬ ಹೋತ್ರಕನು ಪಠಿಸಬೇಕಾದ ಮಂತ್ರವಿಶೇಷವನ್ನು ತಿಳಿಸುವರು. ಹೋತೃವರ್ಗದವರು ಪಠಿಸಬೇಕಾದ ಪರಿಸಮಾಪ್ತಿ ಮಂತ್ರಗಳು ಎರಡುವಿಧಗಳಾಗಿರುವವು ಎ ದು ಹಿಂದೆ ಹೇಳಿದೆಯಷ್ಟೆ. ಅವುಗಳಲ್ಲಿ ಮೈತ್ರಾವರುಣನೆಂಬ ಋತ್ವಿಜನು ಏಕಾಹಿಕವೆಂಬ ಕರ್ಮದಲ್ಲಿ ಪರಿಸಮಾಪ್ತಿಯ ಋಕ್ಕನ್ನು ಪಠಿಸುವನು. ಮೈತ್ರಾವರುಣನು ಪ್ರಾತಃಸವನಕಾಲದಲ್ಲಿ **ತೇ ಸ್ಯಾಮ ದೇವ ವರುಣ** ಎಂಬ ಮಂತ್ರವನ್ನು ಪರಿಸಮಾಪ್ತಿಯ (ಕೊನೆಯ) ಮಂತ್ರವನ್ನಾಗಿ ಪಠಿಸುವನು. ಮಾಧ್ಯಂದಿನ ಸವನಕಾಲದಲ್ಲಿ **ನೂ ಷ್ಟುತ ಇಂದ್ರ ನೂ ಗೃಣಾನ** ಎಂಬ ಮಂತ್ರವು ಪರಿಸಮಾಪ್ತಿಯ ಮಂತ್ರವು. ಅಹೀನಯಾಗದಲ್ಲಿ

(ವಿಕೃತಿರೂಪವಾದ) ಎರಡು ಸವನಗಳಲ್ಲಿಯೂ ಮೇಲೆ ಹೇಳಿದ ಮಂತ್ರವೇ ಪರಿಸಮಾಪ್ತಿಯ ಮಂತ್ರವು. ಇದನ್ನು ಮೈತ್ರಾವರುಣನು ಗಮನಿಸಬೇಕು. ಹೇಗೆಂದರೆ ಅಹರ್ಗಣದ ಪ್ರಾತಸ್ಸವನಕಾಲದಲ್ಲಿ ಮೈತ್ರಾವರುಣರು **ಪ್ರತಿ ವಾಂ ಸೂರ ಉದಿತ** ಎಂಬ ತೃಚದ ಕೊನೆಯ ಋಕ್ಕಾದ **ತೇ ಸ್ಯಾಮ ದೇವ ವರುಣ** ಎಂಬ ಋಕ್ಕನ್ನು ಪರಿಸಮಾಪ್ತಿಯ ಋಕ್ಕನ್ನಾಗಿ ಪಠಿಸಬೇಕು. ಏಕಾಹಿಕದಲ್ಲಿಯೂ ಅದನ್ನೇ ಕೊನೆಯ ಋಕ್ಕನ್ನಾಗಿ ಪಠಿಸಬೇಕು. ಪ್ರಕೃತಿಯಾಗದಲ್ಲಿಯೂಕೂಡ ಮಿತ್ರಾವರುಣನೆಂಬ ಋತ್ವಿಜನು **ಆ ಯಾತಂ ಮಿತ್ರಾವರುಣಾ** ಎಂಬ ಮಂತ್ರವನ್ನು ಕೊನೆಯ ಮಂತ್ರವನ್ನಾಗಿ ಪಠಿಸಬೇಕೆಂಬ ಸೂತ್ರಕಾರರ ವಚನದಂತೆ ಏಕಾಹಿಕ ಕರ್ಮದಲ್ಲಿಯೂ ಕೊನೆಯ ಋಕ್ಕನ್ನಾಗಿ ಪಠಿಸಬೇಕು. ಹಾಗೆಯೇ ಮಾಧ್ಯಂದಿನಸವನದಲ್ಲಿಯೂ **ಆ ಸತ್ಯೋ ಯಾತು** ಎಂಬ ಮಂತ್ರವನ್ನು ಅಹೀನಸೂಕ್ತವನ್ನಾಗಿ ಪಠಿಸುತ್ತಾನೆ. ಅಹೀನಸೂಕ್ತದ ಕೊನೆಯ ಮಂತ್ರವೇ ಅದಕ್ಕೆ ಪರಿಸಮಾಪ್ತಿಯ ಮಂತ್ರವು. ಮತ್ತು ಪ್ರಕೃತಿಯಲ್ಲಿಯೂ ಇದು ಪರಿಸಮಾಪ್ತಿಯ ಮಂತ್ರವೇ ಆಗಿರುವುದು. **ಕಯಾ ನಶ್ಚಿತ್ರ ಆ ಭುವತ್, ಕಥಾ ತ್ವಂ ನ ಊತ್ಯಾ, ಕಸ್ತಮಿಂದ್ರ ತ್ವಾ ವಸುಂ ಸದ್ಯೋ ಹ ಜಾತ ಏವಾಸ್ಯಮಿಂದ್ರೋ ಏಶನ್ನು ಷು ಣಃಸುಮನಾ ಉಪಾ ಕ** ಎಂಬ ಮಂತ್ರಗಳು ಯಾಜ್ಯಾಮಂತ್ರಗಳೆಂದು ಸೂತ್ರಕಾರರ ವಚನವು. **ಏವಾತ್ವಾಮಿಂದ್ರ ವಜ್ರಿನ್ನತ್ರ** ಎಂಬ ಹನ್ನೊಂದು ಋಕ್ಕುಗಳಿರುವ ಸೂಕ್ತದ ಕೊನೆಯ **ಆ ನು ಷ್ಟುತ ಇಂದ್ರ ನೂ ಗೃಣಾನ** ಎಂಬ ಋಕ್ಕೆ ಪ್ರಾತಸ್ಸವನದಲ್ಲಿ ಮೈತ್ರಾವರುಣನಿಗೆ ಏಕಾಹಕ್ಕೆ ಪರಿಸಮಾಪ್ತಿಯ ಋಕ್ಕಾಗಿರುವುದು. ಇಲ್ಲಿ **ಐಕಾಹಿಕಾಭಿರೇವ** ಎಂದು ಏವಕಾರವಿರುವುದು. ಅಹರ್ಗಣದಲ್ಲಿ ಮೈತ್ರಾವರುಣನು ಇದನ್ನು ಪರಿಸಮಾಪ್ತಿಯ ಋಕ್ಕನ್ನಾಗಿ ಪಠಿಸಬೇಕು. ಬೇರೆ ಯಾವ ಋಕ್ಕನ್ನೂ ಅಲ್ಲ ಎಂಬ ವಿಷಯವನ್ನು ಮಾತ್ರ ತಿಳಿಸುವುದು. ಮೈತ್ರಾವರುಣನು ಪ್ರಕೃತಿಯಾಗದಲ್ಲಿ ಎರಡು ಸವನಗಳಲ್ಲಿ ಮಾತ್ರ ಪರಿಸಮಾಪ್ತಿಯ ಋಕ್ಕುಗಳನ್ನು ಪಠಿಸಬೇಕು ಎಂದು ವಿಧಿ ಇದ್ದರೂ ಇಲ್ಲಿ ಪ್ರಯೋಗಬಾಹುಲ್ಯದಿಂದ ಬಹುವಚನವನ್ನು ಪ್ರಯೋಗಿಸಲಾಗಿದೆ. ಮೈತ್ರಾವರುಣನು ಪ್ರಕೃತಿವಿಕೃತಿಯಾಗಗಳ ಪರಿಸಮಾಪ್ತಿ ಮಂತ್ರಗಳನ್ನು ಪಠಿಸುವನಾದರೂ ಪ್ರಯೋಗದಲ್ಲಿ ವಿಶೇಷ ಭೇದವಿಲ್ಲದ್ದರಿಂದ ಮೈತ್ರಾವರುಣನಿಗೆ ಈ ಲೋಕದಲ್ಲಿ ಸ್ಥಾನಭೇಧವು ಸಂಭವಿಸುವುದಿಲ್ಲ.

ಅಹೀನಾಭಿರಚ್ಛಾವಾಕಾಃ ಸ್ವರ್ಗಸ್ಯ ಲೋಕಸ್ಯಾಪ್ತ್ಯೈ ||

ಮೈತ್ರಾವರುಣಸ್ಯ ಪ್ರಕೃತಿವಿಕೃತ್ಯೋಃ ಪರಿಧಾನೀಯಾಮೇಕಾಮುಕ್ತ್ವಾಽಚ್ಛಾವಾಕಸ್ಯ ಪ್ರಕೃತಿವಿಲಕ್ಷಣಂ ಸವನದ್ವಯೇ ಪರಿಧಾನೀಯಾದ್ವಯಂ ದರ್ಶಯತಿ--ಯೋಽಯಮಚ್ಛಾವಾಕಃ ಸೋಽಯಮಹೀನಗತಾಭಿರ್ಋಗ್ಭಿಃ ಪರಿದಧ್ಯಾನ್ನತ್ವೈಕಾಹಿಕಾಭಿಃ । ತಥಾ ಹಿ । ಆಹಂ ಸರಸ್ವತೀವತೋರಿತ್ಯಚ್ಛಾವಾಕಸ್ಯೇತಿ ಪೂರ್ವಸ್ಮಿನ್ಖಂಡೇ ವಿಹಿತತ್ವಾತ್ ಪ್ರಾತಃಸವನ ಏಷಾಹರ್ಗಣಸಂಬಂಧಿನೀ ಪರಿಧಾನೀಯಾ । ಏಕಾಹಿಕೇ ತು ಗೋಮದ್ಧಿರಣ್ಯವದಿತ್ಯೇಷೈವ ಪರಿಧಾನೀಯಾ ಮಾಧ್ಯಂದಿನೇಽಚ್ಛಾವಾಕಸ್ಯ ನೂನಂ ಸಾ ತ ಇತ್ಯಹರ್ಗಣಗತಾ ಪರಿಧಾನೀಯಾ । ಏಕಾಹೇ ತು ಶುನಂ ಹುವೇಮೇತಿ ಮಧ್ಯಂದಿನೇ ಪರಿಧಾನೀಯಾ । ಏವಂ ಸತ್ಯಚ್ಛಾವಾಕಸ್ಯೈಕಾಹಿಕ ಪರಿಧಾನೀಯಾಪರಿತ್ಯಾಗೇನಾಹರ್ಗಣಸ್ಯ ಸಂಬಂಧಿನ್ಯಾಃ ಪರಿಧಾನೀಯಾಯಾಃ ಸ್ವೀಕಾರ ಉಪರಿ ಚ ಸ್ವರ್ಗಲೋಕಪ್ರಾಪ್ತ್ಯೈ ಸಂಪದ್ಯತೇ ||

ಹಿಂದೆ ಮೈತ್ರಾವರುಣನಿಗೆ ಪ್ರಕೃತಿವಿಕೃತಿಯಾಗಗಳಲ್ಲಿ ಪಠಿಸುವ ಪರಿಧಾನೀಯ ಮಂತ್ರಗಳಲ್ಲಿ ಭೇದರಾಹಿತ್ಯವನ್ನು ಹೇಳಿ ಈಗ ಅಚ್ಛಾವಾಕನೆಂಬ ಋತ್ವಿಜನು ಪಠಿಸಬೇಕಾದ ಪ್ರಕೃತಿವಿಕೃತಿ ಲಕ್ಷಣಗಳನ್ನು (ಪರಿಸಮಾಪ್ತಿಯಲ್ಲಿ) ತಿಳಿಸುವರು. ಈ

ಅಚ್ಛಾವಾಕನೆಂಬ ಋತ್ವಿಜನು ಪರಿಸಮಾಪ್ತಿಯ ಋಕ್ಕುಗಳನ್ನು ಪಠಿಸುವಾಗ ಅಹೀನಕರ್ಮಕ್ಕೆ ಹೇಳಿರುವ ಮಂತ್ರಗಳಿಂದ ಸಮಾಪ್ತಿಗೊಳಿಸಬೇಕು. ಐಕಾಹಿಕಕರ್ಮಕ್ಕೆ ಹೇಳಿರುವ ಮಂತ್ರಗಳಿಂದಲ್ಲ. ಹಿಂದಿನ ಖಂಡದಲ್ಲಿ ಹೇಳಿರುವಂತೆ ಪ್ರಾತಸ್ಸವನದಲ್ಲಿ ಅಹರ್ಗಣಸಂಬಂಧವಾಗಿ ಪರಿಸಮಾಪ್ತಿಯ ಋಕ್ಕುಗಳನ್ನು ಪಠಿಸಬೇಕು. ಐಕಾಹಿಕದಲ್ಲಿ ಗೋಮದ್ಧಿರಣ್ಯವದಿತಿ ಎಂಬುದನ್ನು ಪರಿಸಮಾಪ್ತಿ ಋಕ್ಕನ್ನಾಗಿ ಪಠಿಸಬೇಕು. ಮಾಧ್ಯಂದಿನಸವನದಲ್ಲಿ ಅಚ್ಛಾವಾಕನೆಂಬ ಋತ್ವಿಜನು ನೂನಂ ಸಾ ತೇ ಎಂಬ ಋಕ್ಕನ್ನು ಅರ್ಹರ್ಗಣದಲ್ಲಿ ಪರಿಸಮಾಪ್ತಿ ಋಕ್ಕನ್ನಾಗಿ ಪಠಿಸಬೇಕು. ಹೀಗೆ ಮಾಡುವುದರಿಂದ ಅಚ್ಛಾವಾಕನು ಐಕಾಹಿಕದ ಪರಿಧಾನೀಯ (ಪರಿಸಮಾಪ್ತಿಯ) ಋಕ್ಕನ್ನು ಪಠಿಸಿದನಂತರ ಮುಂದಿನ ಅಹರ್ಗಣಕ್ಕೆ ಸಂಬಂಧಿಸಿದ ಪರಿಸಮಾಪ್ತಿ ಋಕ್ಕನ್ನು ಪಠಿಸುವುದರಿಂದ ಸ್ವರ್ಗಲೋಕಪ್ರಾಪ್ತಿಯುಂಟಾಗುವುದು.

ಉಭಯಾಭಿರ್ಬ್ರಾಹ್ಮಣಾಚ್ಛಂಸೀ ತೇನೋ ಸ ಉಭೌ ವ್ಯನ್ವಾರಭಮಾಣ ಏತೀಮಂ ಚಾಮುಂ ಚ ಲೋಕಮಥೋ ಮೈತ್ರಾವರುಣಂ ಚಾಚ್ಛಾವಾಕಂ ಚಾಥೋ ಅಹೀನಂ ಚೈಕಾಹಂ ಚಾಥೋ ಸಂವತ್ಸರಂ ಚಾಗ್ನಿಷ್ಟೋಮಂ ಚೈವಮು ಸ ಉಭೌ ವ್ಯನ್ವಾರಭಮಾಣ ಏತಿ ॥

ಅಥ ಬ್ರಾಹ್ಮಣಾಚ್ಛಂಸಿನಃ ಪರಿಧಾನೀಯಾಂ (ಯಾ) ದರ್ಶಯತಿ– ಯೋಽಯಂ ಬ್ರಾಹ್ಮಣಾಚ್ಛಂಸೀ ಸೋಽಯಮುಭಯವಿಧಾಭಿರೈಕಾಹಿಕಾಭಿರಹೀನಗತಾಭಿಶ್ಚ ಋಗ್ಭಿಃ ಪರಿದಧ್ಯಾತ್ । ಪ್ರಾತಃಸವನೇ ಪ್ರಕೃತೌ ಸ ನ ಇಂದ್ರಃ ಶಿವಃ ಸಖೇತಿ ಪರಿಧಾನೀಯಾ । ವಿಕೃತೌ ತು ಇಂದ್ರೇಣ ರೋಚನಾ ದಿವ ಇತಿ ಪೂರ್ವಖಂಡೇಽಭಿಹಿತಾ । ಮಾಧ್ಯಂದಿನಸವನೇ ಪ್ರಕೃತೌ ವಿಕೃತೌ ಚೈವೇದಿಂದ್ರಂ ವೃಷಣಂ ವಜ್ರಬಾಹುಮಿತ್ಯೇಕೈವ ಪರಿಧಾನೀಯಾ । ಏವಂ ಚ ಸತ್ಯಸ್ಯ ಬ್ರಾಹ್ಮಣಾಚ್ಛಂಸಿನಃ ಪ್ರಾತಃಸವನೇಽಚ್ಛಾವಾಕಸಾಮ್ಯಂ ಮಾಧ್ಯಂದಿನಸವನೇ ಮೈತ್ರಾವರುಣಸಾಮ್ಯಂ ಸಂಪನ್ನಂ । ತೇನೋ ತೇನೈವೈಕಾಹಿಕಾಹೀನಗತೋಭಯವಿಧಶಂಸನೇನೈವ ಸ ಬ್ರಾಹ್ಮಣಾಚ್ಛಂಸೀ ಭೂಲೋಕಸ್ವರ್ಗಲೋಕಾ ಉಭಾವಪಿ ವ್ಯನ್ವಾರಭಮಾಣೋ ವಿವಿಧಂ ಸ್ಪೃಶನ್ನೇತಿ ಗಚ್ಛತಿ ವರ್ತತೇ ಇತ್ಯರ್ಥಃ । ಪ್ರಾತಃಸವನೇ ಪ್ರಕೃತಿವಿಕೃತ್ಯೋಃ ಪರಿಧಾನೀಯಾವಿಲಕ್ಷಣತ್ವಾಲ್ಲೋಕದ್ವಯಸ್ಯ ಪೃಥಗೇವ ಸ್ಪರ್ಶಃ । ಮಾಧ್ಯಂದಿನಸವನೇ ಪ್ರಕೃತಿವಿಕೃತ್ಯೋಃ ಪರಿಧಾನೀಯೈಕ್ಯಾಲ್ಲೋಕದ್ವಯಸ್ಯ ಸಹಸ್ಪರ್ಶ ಇತ್ಯೇವಂ ವಿವಿಧಸ್ಪರ್ಶೋ ವ್ಯನ್ವಾರಂಭಣಶಬ್ದೇನ ವಿವಕ್ಷಿತಃ । ಅಥೋ ಅಪಿ ಚಾಯಂ ಬ್ರಾಹ್ಮಣಾಚ್ಛಂಸೀ ಮೈತ್ರಾವರುಣಂ ಚಾಚ್ಛಾವಾಕಂ ಚೋಭಾವೃತ್ವಿಜೌ ವ್ಯನ್ವಾರಭಮಾಣ ಏತಿ ವಿವಿಧಮುಪಸ್ಪೃಶನ್ವರ್ತತೇ । ಕಥಮಿತಿ ತದುಚ್ಯತೇ । ಯಥಾ ಮೈತ್ರಾವರುಣಸ್ಯ ಪ್ರಕೃತಿವಿಕೃತ್ಯೋಃ ಪರಿಧಾನೀಯೈಕ್ಯಂ ತಥಾ ಬ್ರಾಹ್ಮಣಾಚ್ಛಂಸಿನೋಽಪಿ ಮಾಧ್ಯಂದಿನಸವನೇ ತದೈಕ್ಯಮ್ । ಯಥಾಽಚ್ಛಾವಾಕಸ್ಯ ಪ್ರಕೃತಿವಿಕೃತ್ಯೋಃ ಪರಿಧಾನೀಯಾವೈಲಕ್ಷಣ್ಯಂ ಏವಂ ಬ್ರಾಹ್ಮಣಾಚ್ಛಂಸಿನಃ ಪ್ರಾತಃಸವನೇ ತದ್ವೈಲಕ್ಷಣ್ಯಮಿತಿ । ಮೈತ್ರಾವರುಣಾಚ್ಛಾವಾಕವಿಷಯೋಽಯಂ ವಿವಿಧಸ್ಪರ್ಶಸ್ತಥೈವಾಹೀನೈಕಾಹ-

ವಿಷಯೇಽಪಿ ವಿವಿಧಸ್ಪರ್ಶ ಊಹನೀಯಃ। ಕಥಮಿತಿ ತದುಚ್ಯತೇ । ಪ್ರಾತಃಸವನೇಽಹೀನೈ-ಕಾಹಯೋರ್ವೈಲಕ್ಷಣ್ಯೇನ ಸ್ಪರ್ಶಃ। ಮಾಧ್ಯಂದಿನೇ ಸವನೇ ಸಾದೃಶ್ಯೇನ ಸ್ಪರ್ಶ ಇತ್ಯುಭಯ-ವಿಧತ್ವಂ। ತಥಾ ಸಂವತ್ಸರಂ ಗವಾಮಯನಮೂಲಪ್ರಕೃತಿರ್ಪೂರ್ವಮಗ್ನಿಷ್ಟೋಮಂ ಚ ವಿವಿಧಂ ಸ್ಪೃಶತಿ। ಅಹೀನೈಕಾಹಸ್ಪರ್ಶವದೇತದುಭಯಸ್ಪರ್ಶಸ್ಯ ಯೋಜನೀಯತ್ವಾತ್ ॥

ಈಗ ಬ್ರಾಹ್ಮಣಾಚ್ಛಂಸಿಯು ಪಠಿಸಬೇಕಾದ ಪರಿಧಾನೀಯ (ಪರಿಸಮಾಪ್ತಿ) ಮಂತ್ರವನ್ನು ತಿಳಿಸುವರು. ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪರಿಸಮಾಪ್ತಿ ಮಂತ್ರವನ್ನು ಪಠಿಸುವಾಗ ಏಕಾಹಿಕ ಮತ್ತು ಅಹೀನ ಎಂಬ ಎರಡುವಿಧ ಕರ್ಮಗಳ ಪರಿಸಮಾಪ್ತಿ ಮಂತ್ರಗಳನ್ನೂ ಪಠಿಸುವನು. ಪ್ರಾತಸ್ಸವನದಲ್ಲಿ (ಪ್ರಕೃತಿ) ಸ ನ ಇಂದ್ರಃ ಶಿವಃ ಸಖಾ ಎಂಬ ಋಕ್ಕನ್ನು ಪರಿಸಮಾಪ್ತಿಮಂತ್ರವನ್ನಾಗಿ ಪಠಿಸಬೇಕು. ವಿಕೃತಿಯಾಗದಲ್ಲಿ ಇಂದ್ರೇಣ ರೋಚನಾ ದಿವಃ ಎಂಬ ಮಂತ್ರವನ್ನು ಪಠಿಸಬೇಕೆಂದು ಹಿಂದಿನ ಖಂಡದಲ್ಲಿಯೇ ಹೇಳಿದೆ. ಮಾಧ್ಯಂದಿನಸವದದಲ್ಲಿ ಪ್ರಕೃತಿ ಮತ್ತು ವಿಕೃತಿಯಾಗಗಳೆರಡರಲ್ಲಿಯೂ **ಇಂದ್ರಂ ವೃಷಣಂ ವಜ್ರಬಾಹುಃ** ಎಂಬ ಒಂದು ಋಕ್ಕನ್ನು ಪರಿಸಮಾಪ್ತಿಋಕ್ಕನ್ನಾಗಿ ಪಠಿಸಬೇಕು. ಹೀಗೆ ಮಾಡುವುದರಿಂದ ಬ್ರಾಹ್ಮಣಾಚ್ಛಂಸಿಯು ಪ್ರಾತಸ್ಸವನದಲ್ಲಿ ಅಚ್ಛಾವಾಕನಂತೆಯೂ ಮಾಧ್ಯಂದಿನಸವನದಲ್ಲಿ ಮೈತ್ರಾವರುಣನಂತೆಯೂ ಪಠಿಸಿದಂತಾಗುವುದು. ಹೀಗೆ ಮಾಡುವುದರಿಂದ ಎಂದರೆ ಬ್ರಾಹ್ಮಣಾಚ್ಛಂಸಿಯು ಏಕಾಹಿಕ ಮತ್ತು ಅಹೀನ ಎಂಬ ಎರಡುವಿಧವಾಗಿ ಮಂತ್ರಗಳನ್ನು ಪಠಿಸುವುದರಿಂದ ಭೂಲೋಕ ಸ್ವರ್ಗಲೋಕಗಳೆರಡರಲ್ಲಿಯೂ ಸಂಬಂಧವುಳ್ಳವನಾಗಿರುವನು. ಇಲ್ಲಿ ನ್ಯನ್ವಾರಂಭಣವೆಂದರೆ ಮಾಧ್ಯಂದಿನಸವನದಲ್ಲಿ ಪ್ರಕೃತಿವಿಕೃತಿಗಳ ಪರಿಸಮಾಪ್ತಿಯು ಇರುವುದರಿಂದ ಎರಡು ಲೋಕಗಳ ಸಂಬಂಧವೂ ಇರುವುದೆಂಬ ವಿಷಯವನ್ನು ಸೂಚಿಸಿವುದು. ಪ್ರಾತಸ್ಸವನದಲ್ಲಿ ಪ್ರಕೃತಿವಿಕೃತಿಗಳಿಗೆ ಸಮಾನಸಮಾಪ್ತಿ ಇರುವುದರಿಂದ ಇವುಗಳಿಗೆ ಸಹಸ್ಪರ್ಶ (ಪರಸ್ಪರಸ್ಪರ್ಶ) ವಿರುವುದನ್ನು ಸೂಚಿಸುವುದು. ಇದೇ ನ್ಯನ್ವಾರಭಣಶಬ್ದದ ಅರ್ಥವು. ಮತ್ತು ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಮೈತ್ರಾವರುಣ ಮತ್ತು ಅಚ್ಛಾವಾಕ ಎಂಬ ಋತ್ವಿಜರೊಡನೆ ವಿವಿಧವಾಗಿ ಸಂಪರ್ಕ (ಸಂಬಂಧ) ವುಳ್ಳವನಾಗಿರುವನು. ಮೈತ್ರಾವರುಣನು ಯಾವರೀತಿ ಪ್ರಕೃತಿವಿಕೃತಿಗಳಲ್ಲಿ ಪರೀಧಾನೀಯವನ್ನು ಒಂದೇ ಆಗಿ ಹೊಂದಿರುವನೋ ಅದರಂತೆ ಬ್ರಾಹ್ಮಣಾಚ್ಛಂಸಿಯು ಮಾಧ್ಯಂದಿನಸವನದಲ್ಲಿ ಸಮಾನಪಾತ್ರವನ್ನು ವಹಿಸುವನು. ಅದರಂತೆ ಅಚ್ಛಾವಾಕನು ಪ್ರಕೃತಿವಿಕೃತಿಗಳಲ್ಲಿ ವಿಲಕ್ಷಣಸಂಬಂಧವುಳ್ಳವನಾಗಿರುವನೋ ಅದರಂತೆ ಬ್ರಾಹ್ಮಣಾಚ್ಛಂಸಿಯು ಪ್ರಾತಸ್ಸವನದಲ್ಲಿ ವಿಲಕ್ಷಣಸಂಬಂಧವುಳ್ಳವನಾಗಿರುವನು. ಮೈತ್ರಾವರುಣ ಮತ್ತು ಅಚ್ಛಾವಾಕರ ವಿಷಯದಲ್ಲಿ ಯಾವರೀತಿ ಭಿನ್ನಸಂಬಂಧವುಳ್ಳವರೋ ಅದರಂತೆ ಅಹೀನ ಮತ್ತು ಏಕಾಹಿಕವಿಷಯದಲ್ಲಿಯೂ ಭಿನ್ನಸಂಬಂಧವುಳ್ಳವರಾಗಿರುವರೆಂದು ಊಹಿಸಬೇಕು. ಹೇಗೆಂದರೆ ಪ್ರಾತಸ್ಸವನದಲ್ಲಿ ಅಹೀನ ಮತ್ತು ಏಕಾಹಿಕಗಳಿಗೆ ವೈಲಕ್ಷಣ್ಯವೆಂಬ ಸ್ಪರ್ಶವಿರುವುದು. ಮಾಧ್ಯಂದಿನಸವನದಲ್ಲಿ ಇದೇ ವಿಧವಾ ಸ್ಪರ್ಶವು ಸಾದೃಶ್ಯವಾಗಿರುವುದು. ಹಾಗೆಯೇ ಸಂವತ್ಸರಾತ್ಮಕವಾದ ಗವಾಮಯನವೆಂಬ ಪ್ರಕೃತಿರೂಪ, ಅಗ್ನಿಷ್ಟೋಮವು ಪರಸ್ಪರ ಸ್ಪರ್ಶಯುಕ್ತವಾಗಿರುವವು. ಏಕೆಂದರೆ ಅಹೀನ ಮತ್ತು ಏಕಾಹಗಳ ಪರಸ್ಪರ ಸ್ಪರ್ಶಯುಕ್ತನಾಗಿರುವವು.

**ಅಥ ತತ ಏಕಾಹಿಕಾ ಏವ ತೃತೀಯಸವನೇ ಹೋತ್ರಕಾಣಾಂ ಪರಿಧಾ-ನೀಯಾ ಭವಂತಿ ಪ್ರತಿಷ್ಠಾ ವಾ ಏಕಾಹಃ ಪ್ರತಿಷ್ಠಾಯಮೇವ ತದ್ಯಜ್ಞಮಂತತಃ ಪ್ರತಿಷ್ಠಾಪಯಂತಿ ॥**

ಇತ್ಥಂ ಹೋತ್ರಕಾಣಾಂ ಸವನದ್ವಯಗತಾಃ ಪರಿಧಾನೀಯಾಃ ಪ್ರಶಸ್ಯ ತೃತೀಯಸವನ-ಗತಾಃ ಪರಿಧಾನೀಯಾಃ ಪ್ರಶಂಸತಿ—ಏಕಾಹೇ ಮೂಲಪ್ರಕೃತೌ ಜ್ಯೋತಿಷ್ಟೋಮೇ ಹೋತ್ರ-

ಕಾಣಾಂ ಯಾ ಏವ ಪರಿಧಾನೀಯಾಸ್ತಾ ಏವಾಹರ್ಗಣೇ ತೃತೀಯಸವನೇ ದ್ರಷ್ಟವ್ಯಾಃ । ತಥಾ ಹಿ । ಆವಾಂ ರಾಜಾನಾವಿತಿ ನಿತ್ಯನ್ಯೈಕಾಹಿಕಮಿತಿ ವಚನಾನ್ಮೈತ್ರಾವರುಣಸ್ಯ ವಾಂ ರಾಜಾನಾವಿತಿ ಸೂಕ್ತಸ್ಯಾಂತ್ಯಾ ಪರಿಧಾನೀಯಾ ಭವತಿ । ತಥಾ ಬ್ರಾಹ್ಮಣಾಚ್ಛಂಸಿನೋಽಪ್ಯಚ್ಛಾ ವ ಇಂದ್ರಮಿತಿ ನಿತ್ಯನ್ಯೈಕಾಹಿಕಮಿತಿ ವಚನಾದಚ್ಛಾ ವ ಇಂದ್ರಮಿತಿ ಸೂಕ್ತಸ್ಯಾಂತ್ಯಾ ಪರಿಧಾನೀಯಾ ಭವತಿ । ತಥಾಚ್ಛಾವಾಕಸ್ಯ ಋತುರ್ಜನಿತ್ರೀತಿ ನಿತ್ಯಾನ್ಯೈಕಾಹಿಕಾಹಿಕಾನೀತಿ ವಚನಾತ್ಸಂ ವಾಂ ಕರ್ಮಣೇತಿ ಸೂಕ್ತಸ್ಯಾಂತ್ಯಾ ಪರಿಧಾನೀಯಾ ಭವತಿ । ಯೋಽಯಮೇಕಾಹಃ ಸ ಮೂಲಪ್ರಕೃತಿತ್ವಾತ್ಪ್ರತಿಷ್ಠಾ ಸರ್ವಾಸಾಂ ವಿಕೃತೀನಾಮಾಧಾರಃ । ಅತಸ್ತೇನೈಕಾಹಿಕಾ(ಕ) ಪರಿಧಾನೀಯಾಶಂಸನೇನ ಯಜ್ಞಮಂತತೋಽವಸಾನಕಾಲೇ ಪ್ರತಿಷ್ಠಾಯಾಂ ಸರ್ವಧಾರೇ ಪ್ರತಿಷ್ಠಾಪಯಂತಿ ॥

ಈರೀತಿ ಹೋತೃವರ್ಗದ ಋತ್ವಿಜರು ಪ್ರಾತಸ್ಸವನ ಮಾಧ್ಯಂದಿನಸವನಗಳಲ್ಲಿ ಪಠಿಸಬೇಕಾದ ಪರಿಸಮಾಪ್ತಿಯ ಋಕ್ಕುಗಳನ್ನು ಹೇಳಿ ಈಗ ತೃತೀಯಸವನದಲ್ಲಿ ಪಠಿಸಬೇಕಾದ ಪರಿಧಾನೀಯ ಋಕ್ಕುಗಳನ್ನು ವಿವರಿಸುವರು. ಮೂಲಪ್ರಕೃತಿಯಾದ ಜ್ಯೋತಿಷ್ಟೋಮವೆಂಬ ಏಕಾಹದಲ್ಲಿ ಹೋತೃವರ್ಗದ ಋತ್ವಿಜರು ಯಾವ ಪರಿಧಾನೀಯಸೂಕ್ತವನ್ನು ಹೇಳುವರೋ ಅದನ್ನೇ ತೃತೀಯಸವನದಲ್ಲಿಯೂ ಪಠಿಸುವರು. ಆವಾಂ ರಾಜಾನಂ ಎಂಬ ಏಕಾಹಿಕವಚನದಂತೆ ಮೈತ್ರಾವರುಣನು ಪಠಿಸುವ ಆವಾಂ ರಾಜಾನವೆಂಬ ಸೂಕ್ತಸ್ಯ ಕೊನೆಯ ಋಕ್ಕೆ ಪರಿಧಾನೀಯವು (ಪರಿಸಮಾಪ್ತಿಯು) ಹಾಗೆಯೇ ಬ್ರಾಹ್ಮಣಾಚ್ಛಂಸಿಯೂ ಅಚ್ಛಾ ವ ಇಂದ್ರ ಏಕಾಹಿಕವಚನದಂತೆ ಅಚ್ಛಾ ವ ಇಂದ್ರಂ ಎಂಬ ಸೂಕ್ತದ ಕೊನೆಯ ಋಕ್ಕೆ ಪರಿಧಾನೀಯ ಋಕ್ಕನ್ನಾಗಿ ಪಠಿಸಬೇಕು ಮತ್ತು ಅಚ್ಛಾವಾಕನೆಂಬ ಋತ್ವಿಜನೂ ಋತುರ್ಜನಿತ್ರಿ ಎಂ ನಿತ್ಯಾನ್ಯೈಕಾಹಿಕಾನಿ ಎಂಬ ವಚನದಲ್ಲಿ ಸಂ ವಾ ಕರ್ಮಣಾ ಎಂಬ ಸೂಕ್ತದ ಕೊನೆಯ ಋಕ್ಕನ್ನಾಗಿ ಪಠಿಸುವನು. ಏಕಾಹವೆಂಬುವದು ಮೂಲಪ್ರಕೃತಿಯಾಗಿರುವುದರಿಂದ ಇದು ಸಮಸ್ತ ವಿಕೃತಿಯಾಗಗಳಿಗೂ ಆಧಾರಭೂತವಾಗಿರುವುದು. ಆದ್ದರಿಂದ ಏಕಾಹಿಕಾಪರಿಧಾನೀಯವನ್ನೂ (ಪರಿಸಮಾಪ್ತಿಯನ್ನು) ಪಠಿಸುವುದರಿಂದ ಯಜ್ಞದ ಅವಸಾನಕಾಲದಲ್ಲಿ ಸರ್ವಾಧಾರವಾದ ಏಕಾಹದಲ್ಲಿ ಎಲ್ಲವನ್ನೂ ಮಾಡಿದಂತೆ ಆಗುವುದು.

**ಅನವಾನಂ ಪ್ರಾತಃಸವನೇ ಯಜೇತ್ ॥**

ಇತ್ಥಂ ಪರಿಧಾನೀಯಾಃ ಪ್ರಶಸ್ಯ ಪ್ರಾತಃಸವನಗತಾನಾಂ ಯಾಜ್ಯಾದೀನಾಂ ಮಧ್ಯೇಽವಸಾನಾಭಾವಂ ವಿಧತ್ತೇ—ಅನವಾನಮನುಚ್ಛ್ವಸೋ ಮಧ್ಯೇ ಯಥಾ ಭವತಿ ತಥಾ ಯಾಜ್ಯಾಂ ಪಠೇತ್ ॥

ಈರೀತಿಯಾಗಿ ಪರಿಧಾನೀಯ ಮಂತ್ರಗಳನ್ನು ಹೇಳಿದಮೇಲೆ ಪ್ರಾತಸ್ಸವನದಲ್ಲಿರುವ ಯಾಜ್ಯಾ ಮೊದಲಾದ ಮಂತ್ರಗಳ ಅವಸಾನ (ಅಂತ್ಯ) ವನ್ನು ತಿಳಿಸುವರು. ಈ ಯಾಜ್ಯಾಮಂತ್ರಗಳನ್ನು ಪಠಿಸುವಾಗ ಆ ಮಂತ್ರವನ್ನು ಮಧ್ಯದಲ್ಲಿ ಎಲ್ಲಿಯೂ ನಿಲ್ಲಿಸದೆ ಕೊನೆಯವರೆಗೂ ಪಠಿಸಬೇಕು.

**ಏಕಾಂ ದ್ವೇ ಸ್ತೋಮಮತಿಶಂಸೇತ್ತದ್ಯಥಾಽಭಿಹೇಷತೇ ಪಿಪಾಸತೇ ಕ್ಷಿಪ್ರಂ ಪ್ರಯಚ್ಛೇತ್ತಾದೃಕ್ತದಥೋ ಕ್ಷಿಪ್ರಂ ದೇವೇಭ್ಯೋಽ-**

ನ್ನಾದ್ಯಂ ಸೋಮಪೀಥಂ ಪ್ರಯಚ್ಛಾನೀತಿ ಕ್ಷಿಪ್ರಂ ಹಾಸ್ಮಿಂ-
ಲ್ಲೋಕೇ ಪ್ರತಿತಿಷ್ಠತಿ ॥

ಸ್ತೋಮವೃದ್ಧೌ ನಿಯಮವಿಶೇಷಂ ವಿಧತ್ತೇ—ತ್ರಿವೃತ್ಪಂಚದಶಸಪ್ತದಶೈಕವಿಂಶತ್ರಿಣ(ನ)ವತ್ರಯಸ್ತ್ರಿಂಶಾದಯಃ ಸ್ತೋಮಾ ವಿಹಿತಾಃ । ವಿಹಿತಸ್ಯ ಸಪ್ತದಶಸ್ತೋಮಸ್ಯ ವಿವೃದ್ಧ್ಯಾಽಷ್ಟಾದಶಾದಿಸ್ತೋಮಾ ನಿಷ್ಪಾದ್ಯಂತೇ । ತಥಾ ವಿಹಿತಸ್ಯೈಕವಿಂಶಸ್ಯ ವಿವೃದ್ಧ್ಯಾ ದ್ವಾವಿಂಶಾದಯಃ ಸ್ತೋಮಾಃ ಸಂಪದ್ಯಂತೇ । ಅನೇನೈವ ದೃಷ್ಟಾಂತೇನ ಶಂಸನೇಽಪ್ಯಾಧಿಕ್ಯಂ ಪ್ರಸಕ್ತಂ ಯಥಾ ವಾವ ಸ್ತೋತ್ರಮೇವಂ ಶಸ್ತ್ರಮಿತಿ ನ್ಯಾಯಾತ್ । ಸ ತ(ತ್ವ)ತ್ರ ಪ್ರಕೃತಾಃ ಸ್ತೋಮಾಃ ಸ್ತೋಮೇ ವರ್ಧಮಾನೇ ಸತಿ ತಾಂ ಸ್ತೋಮಗತಾಮೃಕ್ಸಂಖ್ಯಾಮತಿಕ್ರಮ್ಯ ಶಂಸನಂ ತದತಿಶಂಸನಂ ಯದಾ ಕ್ರಿಯತೇ ತದಾನೀಮೇಕಸ್ಯಾ ದ್ವಯೋರ್ವಾ ಋಚೋರಭ್ಯನುಜ್ಞಾ ನೇ(ನ) ತ್ವಧಿಕಾನಾಮೃಚಾಂ । ಅಕ್ಷರಾರ್ಥಸ್ತು ಯದಾ ಸ್ತೋಮಮತಿಶಂಸೇತ್ ಸ್ತೋಮಸಂಖ್ಯಾಮತಿಕ್ರಮ್ಯ ಶಂಸನಂ ಕುರ್ಯಾತ್ತದಾನೀಮೇಕಾಂ ದ್ವೇ ವಾತಿಕ್ರಮ್ಯ(ನ) ಶಂಸೇತ್ । ಕಿಂ ತ್ವೇಕಯೈವ ವಾದ್ವಾಭ್ಯಾಮೇವ ವಾತಿಶಂಸೇತ್ । ತಥಾ ಚ ಸೂತ್ರಕಾರ ಆಹ—‘ ಅತಿಶಂಸನಮೇಕಯಾ ದ್ವಾಭ್ಯಾಂ ವಾ ಪ್ರಾತಃಸವನೇ ’ ಇತಿ । ತತೋಽಧಿಕಾನಾಂ ಶಂಸನಾಭಾವೇ ಯುಕ್ತಿರ್ದೃಷ್ಟಾಂತಮುಖೇನೋಚ್ಯತೇ । ತತ್ರಾಯಂ ದೃಷ್ಟಾಂತೋಽವಗಂತವ್ಯಃ । ಯಥಾ ಲೋಕೇಽಭಿಹೇಷತೇ ಘಾಸಾರ್ಥಮಾಭಿಮುಖ್ಯೇನ ಹೇಷಾಶಬ್ದಂ ಕುರ್ವತೇಽಶ್ವಾಯ ಪಿಪಾಸತೇಽತ್ಯಂತಂ ತೃಷಾರ್ತಾಯ ಪುರುಷೋಽನ್ನಾದ್ಯಂ ಪಾನೀಯಂ ಕ್ಷಿಪ್ರಂ ಪ್ರಯಚ್ಛೇತ್ತಾದೃಗೇವ ತಾದೃಗ್ಬಾಹುಲ್ಯಾ ಭಾವೇನಾತಿಶಂಸನಂ । ಅಥೋ ಅಪಿ ಚ ಕ್ಷಿಪ್ರಮೇವ ದೇವೇಭ್ಯಃ ಸೋಮಪಾನರೂಪಮನ್ನಾದ್ಯಂ ಪ್ರಯಚ್ಛತೀ(ಚ್ಛಾನೀ)ತ್ಯಭಿಪ್ರೇತ್ಯ ಋಗ್ಬಾಹುಲ್ಯೇನ ವಿಲಂಬಮಕೃತ್ವೈಕಯಾ ದ್ವಾಭ್ಯಾಂ ವಾಽತಿಶಂಸನಂ ಕುರ್ಯಾತ್ । ತಥಾ ಸತಿ ಕ್ಷಿಪ್ರಂ ಶೀಘ್ರಮೇವಾಸ್ಮಿನ್ ಲೋಕೇ ಪ್ರತಿಷ್ಠಿತೋ ಭವತಿ ॥

ಸ್ತೋಮವೃದ್ಧಿಯಲ್ಲಿ (ಸ್ತೋಮವನ್ನು ಹೆಚ್ಚಾಗಿ ಹೇಳುವುದು) ವಿಶೇಷನಿಯಮವನ್ನು ತಿಳಿಸುವರು. ಇಲ್ಲಿ ತ್ರಿವೃತ್ ಪಂಚದಶ, ಸಪ್ತದಶ, ಏಕವಿಂಶ, ತ್ರಿಣವ, ತ್ರಯಸ್ತ್ರಿಂಶ ಮೊದಲಾದ ಸ್ತೋಮಗಳನ್ನು ಹೇಳಲೇಬೇಕಾಗಿರುವುದು. ಇವುಗಳಲ್ಲಿ ಸಪ್ತದಶಸ್ತೋಮವನ್ನು ವೃದ್ಧಿ (ಹೆಚ್ಚು) ಮಾಡುವುದರಿಂದ ಅಷ್ಟಾದಶಾದಿಸ್ತೋಮಗಳು ಉಂಟಾಗುವವು. ಈ ವಿಧಶಂಸನದಿಂದ ಎಂದರೆ ಸ್ತೋಮವೃದ್ಧಿಯಿಂದ ಶಸ್ತ್ರಮಂತ್ರವನ್ನು ಹೇಳಿದಂತೆ ಆಗುವುದು. ಸ್ತೋಮದಲ್ಲಿರುವ ಮಂತ್ರಗಳನ್ನು ಹೆಚ್ಚುಮಾಡುವುದರಿಂದ ಸ್ತೋಮದಲ್ಲಿರುವ ಋಕ್ಸಂಖ್ಯೆಗಳನ್ನು ಒಂದೆರಡು ಋಕ್ಕುಗಳಷ್ಟು ಮಾತ್ರ ಹೆಚ್ಚುಮಾಡಿ ಹೇಳಬೇಕು. ಅಕ್ಷರಸಂಖ್ಯೆಯಲ್ಲಿಯೂ ಸ್ತೋಮದಲ್ಲಿರುವ ಅಕ್ಷರಸಂಖ್ಯೆಯಷ್ಟೇ ಅಥವಾ ಒಂದೆರಡು ಅಕ್ಷರಗಳಷ್ಟುಮಾತ್ರ ಅಧಿಕವಾಗಿರುವಂತೆ ಪಠಿಸಬೇಕು. ಈ ವಿಷಯದಲ್ಲಿ ಸೂತ್ರಕಾರರು ಈರೀತಿ ಹೇಳಿರುವರು—**ಅತಿಶಂಸನಮೇಕಯಾ ದ್ವಾಭ್ಯಾಂ ವಾ ಪ್ರಾತಃಸವನೇ** ಎಂದು ಹೆಚ್ಚಾಗಿ ಹೇಳದೆ ಇರುವ ಸಂದರ್ಭದಲ್ಲಿ ಒಂದು ದೃಷ್ಟಾಂತವನ್ನು ಹೇಳುವರು. ಲೋಕದಲ್ಲಿ ಹುಲ್ಲನ್ನು ತಿನ್ನುವುದಕ್ಕಾಗಿ ಕುದುರೆಯು ಹೇಷಾರವವನ್ನು ಮಾಡುವಾಗ ಪುರುಷನು ಅದಕ್ಕೆ ಹುಲ್ಲನ್ನೂ ನೀರನ್ನೂ ನೀಡುವನು. ಬರೀಹುಲ್ಲನ್ನುಮಾತ್ರವಲ್ಲ. ಹಾಗೆಯೇ ದೇವತೆಗಳೂ ಸೋಮಪಾನಮಾಡಲು ಆತುರವಾಗಿರುವುದರಿಂದ ಅತಿಹೆಚ್ಚು ಋಕ್ಕುಗಳನ್ನು ಪಠಿಸಿ ವಿಲಂಬಮಾಡದಂತೆ

ಕೇವಲ ಎರಡು ಋಕ್ಕುಗಳನ್ನು ಮಾತ್ರ ಪಠಿಸಬೇಕು. ಹೀಗೆ ಮಾಡುವುದರಿಂದ ಯಜ್ಞಮಾಡುವ ಯಜಮಾನನು ಈ ಲೋಕದಲ್ಲಿ ಜನರಲ್ಲಿ ವಿಶೇಷವಾಗಿ ಪ್ರಾಧಾನ್ಯತೆ (ಗಣ್ಯತೆ) ಯನ್ನು ಪಡೆಯುವನು.

**ಅಪರಿಮಿತಾಭಿರುತ್ತರಯೋಃ ಸವನಯೋರಪರಿಮಿತೋ ವೈ ಸ್ವರ್ಗೋ ಲೋಕಃ ಸ್ವರ್ಗಸ್ಯ ಲೋಕಸ್ಯಾಽಪ್ತ್ಯೈ ॥**

ಸವನಾಂತರಯೋರುಕ್ತವೈಪರೀತ್ಯಂ ವಿಧತ್ತೇ—ಇಯತ್ಯ ಏವೇತ್ಯೇವಂ ನಿಯಮರಹಿತಾಭಿರ್ಬಹ್ವೀಭಿರ್ಋಗ್ಭಿರತಿಶಂಸನಮ ಸವನದ್ವಯೋ ಕುರ್ಯಾತ್ । ಸ್ವರ್ಗಸ್ಯ ಲೋಕಸ್ಯೇಯತ್ತಾರಹಿತತ್ವಾತ್ । (ಸ್ವರ್ಗ) ಪ್ರಾಪ್ತ್ಯರ್ಥಮಿದಮತಿಶಂಸನಂ ಸಂಪದ್ಯತೇ । ಯತ್ರಾತಿಶಂಸನಂ ಕರ್ತವ್ಯಂ ಭವತಿ ತತ್ರ ತದರ್ಥಮೃಚಾಮಾಗಮನಂ ಕರ್ತವ್ಯಮ್ ॥

ಮುಂದಿನ ಸವನಗಳಲ್ಲಿ ಇಷ್ಟೇ ಎಂದು ನಿಯಮವಿಲ್ಲದೆ ಅಧಿಕವಾಗಿ ಋಕ್ಕುಗಳನ್ನು ಪಠಿಸಬೇಕು. ಸ್ವರ್ಗಲೋಕ ಪ್ರಾಪ್ತಿಗಾಗಿ ಇಷ್ಟೇ ಹೇಳಬೇಕೆಂಬ ನಿಯಮವಿಲ್ಲ. ಎಷ್ಟು ಹೆಚ್ಚಾಗಿ ಹೇಳಿದರೆ ಅಷ್ಟು ಸ್ವರ್ಗಲೋಕಪ್ರಾಪ್ತಿಗೆ ಸಹಾಯವಾಗುವುದು. ಆದ್ದರಿಂದ ಹೆಚ್ಚಾಗಿ ಋಕ್ಕುಗಳನ್ನು ಪಠಿಸಬೇಕು.

**ಕಾಮಂ ತದ್ಧೋತಾ ಶಂಸೇದ್ಧೋತ್ರಕಾಃ ಪೂರ್ವೇದ್ಯುಃ ಶಂಸೇಯುರ್ಯದ್ವಾ ಹೋತಾ ತದ್ಧೋತ್ರಕಾಃ ಪ್ರಾಣೋ ವೈ ಹೋತಾಽಙ್ಗಾನಿ ಹೋತ್ರಕಾಃ ಸಮಾನೋ ವಾ ಅಯಂ ಪ್ರಾಣೋಽಙ್ಗಾನ್ಯನುಸಂಚರತಿ ತಸ್ಮಾತ್ತತ್ಕಾಮಂ ಹೋತಾ ಶಂಸೇದ್ಧೋತ್ರಕಾಃ ಪೂರ್ವೇದ್ಯುಃ ಶಂಸೇಯುರ್ಯದ್ವಾ ಹೋತಾ ತದ್ಧೋತ್ರಕಾಃ ॥**

ತಾಸಾಮೃಚಾಂ ದೇಶವಿಶೇಷಂ ದರ್ಶಯತಿ—ಅಹರ್ಗಣೇಷು ವರ್ತಮಾನಾದಿನಾತ್ಪೂರ್ವೇದ್ಯುರ್ಮೈತ್ರಾವರುಣಾದಯೋ ಹೋತ್ರಕಾ ಯತ್ಸೂಕ್ತಂ ಶಂಸೇಯುಸ್ತದೇವ ಸೂಕ್ತಂ ಪರೇದ್ಯುರ್ಹೋತಾ ಕಾಮಮವಿಶಂಕಯೈವ ಶಂಸೇತ್ । ಯದಿ ಹೋತುರತಿಶಂಸನಂ ಪ್ರಸಕ್ತಂ ತದಾನೀಂ ಪೂರ್ವೇದ್ಯುಃ ಹೋತ್ರಕೈಃ ಶಸ್ತ್ರಾತ್ಸೂಕ್ತಾದೃಚ ಆನೇತವ್ಯಾಃ । ಯದಿ ತು ಹೋತ್ರಕಾಣಾಮತಿಶಂಸನಂ ಪ್ರಸಕ್ತಂ ತದಾನೀಂ ಪೂರ್ವೇದ್ಯುರ್ಹೋತಾ ಯತ್ಸೂಕ್ತಂ ಶಂಸತಿ ತಸ್ಮಾತ್ಸೂಕ್ತಾದ್ಧೋತ್ರಕೈರಪೇಕ್ಷಿತಾ ಋಚ ಆನೇತವ್ಯಾಃ । ಹೋತುಃ ಪ್ರಾಣಸ್ಥಾನೀಯತ್ವಾದ್ಧೋತ್ರಕಾಣಾಂ ಹಸ್ತಪಾದಾದ್ಯವಯವಸ್ಥಾನೀಯತ್ವಾತ್ಪರಸ್ಪರಸೂಕ್ತಾದೃಗಾನಯನೇ ಸತ್ಯಯಂ ಪ್ರಾಣಃ ಸರ್ವೇಷ್ವವಯವೇಷು ಪಕ್ಷಪಾತಮಂತರೇಣ ತುಲ್ಯ ಏವಾನುಸಂಚರತಿ । ತಸ್ಮಾತ್ತತ್ಕಾಮಮಿತ್ಯುಕ್ತಾರ್ಥೋಪಸಂಹಾರಃ ॥

ಅಹರ್ಗಣಗಳಲ್ಲಿ ಸೂಕ್ತವನ್ನು ಪಠಿಸುವುದಕ್ಕೆ ಮೊದಲದಿನ ಮೈತ್ರಾವರುಣಾದಿ ಹೋತ್ರಕರು ಯಾವ ಸೂಕ್ತವನ್ನು ಪಠಿಸುವರೋ ಅದೇ ಸೂಕ್ತವನ್ನು ಹೋತೃವು ಮುಂದಿನದಿನ ಪಠಿಸುವನು. ಹೋತೃವು ಹಿಂದಿನದಿನ ಪಠಿಸುವಾಗ ಸೂಕ್ತವನ್ನು ಪಠಿಸಬೇಕು. ಹೋತ್ರಕರು ಪ್ರಸಕ್ತನಾದ ಮಂತ್ರವನ್ನು ಹಿಂದಿನದಿನ ಪಠಿಸಿದರೆ ಅದನ್ನು ಹಾಗೆಯೇ ಪಠಿಸಬೇಕು. ಹೋತೃ

ವರ್ಗದವರು ಹಿಂದಿನ ದಿನದಂತೆ ಯಾವ ಸೂಕ್ತವನ್ನು ಪ್ರಾಣಸ್ಥಾನೀಯವಾದ ಋಕ್ಕನ್ನು ಪಠಿಸಬೇಕು. ಹೋತೃವಿನ ಪ್ರಾಣ ಸ್ಥಾನೀಯವಾದ ಹೋತೃವರ್ಗದವರ ಹಸ್ತಪಾದಾದ್ಯವಗಳನ್ನು ಸಂಚಾರ ಮಾಡುವುದರಿಂದ ಉಪಸಂಹಾರವಾಗುವುದು.

ಸೂಕ್ತಾಂತ್ಯೈರ್ಹೋತಾ ಪರಿದಧದೇತ್ಯಥ ಸಮಾನ್ಯ ಏವ ತೃತೀಯಸವನೇ ಹೋತ್ರಕಾಣಾಂ ಪರಿಧಾನೀಯಾ ಭವಂತ್ಯಾತ್ಮಾ ವೈ ಹೋತಾಂ-ಗಾನಿ ಹೋತ್ರಾಕಾಃ ಸಮಾನಾ ವಾ ಇಮೇಽಙ್ಗಾನಾಮಂತಾಸ್ತ-ಸ್ಮಾತ್ಸಮಾನ್ಯ ಏವ ತೃತೀಯಸವನೇ ಹೋತ್ರಕಾಣಾಂ ಪರಿಧಾ-ನೀಯಾ ಭವಂತಿ ಭವಂತಿ ‖

ಇತ್ಥಂ ಪರಿಧಾನೀಯಾಪ್ರಸಂಗೇನ ಬುದ್ಧಿಸ್ಥಯಾಜ್ಯಾಯಾ ಅನವಾನತ್ವಮತಿಶಂಸನಂ ಚ ನಿರ್ಣೀಯಾಥ ಪ್ರಕೃತಾಮೇವ ಪರಿಧಾನೀಯಾಸ್ತುತಿಮನುಸರತಿ—ಸೂಕ್ತಾನಾಮಂತಿಮಾ ಋಚಃ ಸೂಕ್ತಾಂತಾಸ್ತಾಭಿರ್ಋಗ್ಭಿರ್ಹೋತಾ ಪರಿದಧಚ್ಛಸ್ತ್ರಸಮಾಪನಂ ಕುರ್ವನ್ನತಿವರ್ತತೇ । ಅಥ ಹೋತುರನಂತರಂ ಹೋತ್ರಕಾಣಾಮುಚ್ಯತೇ । ತೇಷಾಂ ತೃತೀಯಸವನೇ ಪರಿಧಾನೀ-ಯಾಃ ಸಮಾನ್ಯಸ್ತುಲ್ಯಾ ಏವ ಭವಂತಿ । ಏಕಾಹೇ ಯಾಃ ಪರಿಧಾನೀಯಾಸ್ತಾ ಏವಾಹರ್ಗ-ಣೇಷು ಭವಂತಿ । ತಥಾ ಚ ಪೂರ್ವಮುಕ್ತಂ—'ಐಕಾಹಿಕಾ ಏವ ತೃತೀಯಸವನೇ' ಇತಿ । ತದೇವಾತ್ರ ಹೋತ್ರಾ ಸಹ ಪ್ರಶಂಸಾರ್ಥಮನೂದ್ಯತೇ । ಯೋಽಯಂ ಹೋತಾ ಸೋಽಯ-ಮಾತ್ಮಾ ವೈ ದೇಹ ಏವ ಹೋತ್ರಕಾಸ್ತು ಹಸ್ತಪಾದಾದ್ಯವಯವಾಃ । ತೇಷಾಂ ಚ ಹಸ್ತಾದೀ-ನಾಮಂತಾಃ ಸಮಾನಾಸ್ತುಲ್ಯಾ ಏವ ದೃಶ್ಯಂತೇ । ದಕ್ಷಿಣಹಸ್ತಸ್ಯಾಂತೋ ಯಾದೃಶಃ ಪಂಚಾಂ-ಗುಲ್ಯುಪೇತಸ್ತಾದೃಶ ಏವ ವಾಮಹಸ್ತಸ್ಯಾಂತೋಽಪಿ । ಏವಂ ಪಾದಯೋಃ ಸ್ತನಕರ್ಣಾದಿ-ಯುಗ್ಮಯೋಸ್ತುಲ್ಯಾಂತತ್ವಂ ದ್ರಷ್ಟವ್ಯಂ । ತಸ್ಮಾತ್ಸಮಾನ್ಯ ಇತ್ಯುಪಸಂಹಾರಃ ಪದಾಭ್ಯಾ-ಸೋಽಧ್ಯಾಯಸಮಾಪ್ತ್ಯರ್ಥಃ ‖

ಸೂಕ್ತದ ಕೊನೆಯ ಋಕ್ಕುಗಳನ್ನು ಹೋತೃವು ಸಮಾಪನಋಕ್ಕನ್ನಾಗಿ ಪಠಿಸುವನು. ಹೋತೃವು ಪಠಿಸಿದಮೇಲೆ ಹೋತೃವರ್ಗದವರು ಪರಿಧಾನೀಯ ಋಕ್ಕುಗಳನ್ನು ಪಠಿಸುವರು. ಹಾಗೆಯೇ ಹೀಗೆ ಹೇಳಲಾಗಿರುವುದು **ಐಕಾಹಿಕಾ ಏವ ತೃತೀಯಸವನೇ** ಎಂದು ಹೇಳಲಾಗಿದೆ. ಹೀಗೆಂದೇ ಹೋತೃವು ಪ್ರಶಂಸಾರ್ಥವಾಗಿ ಹೇಳಿರುವನು. **ಹೋತೃವು** ಹಸ್ತಪಾದಾದಿ ಅವಯವಗಳನ್ನು ಸಮಾನವಾಗಿರುವುದು ದಕ್ಷಿಣ ಹಸ್ತದ ಕೊನೆಯು ಇರುವಂತೆ ವಾಮಹಸ್ತವೂ ಅದರಂತೆಯೇ ಇರುವುದು. ಹಾಗೆಯೇ ಪಾದಗಳಲ್ಲಿಯೂ ಸ್ತನಕರ್ಣಾದಿಗಳಂತೆಯೇ ಅಂತ್ಯವು ಇರುವುದು. ಆದ್ದರಿಂದ ಉಪಸಂಹಾರವು ಸಾಮಾನ್ಯವಾಗಿರುವುದು. ಕೊನೆಯ ಪದಗಳನ್ನು ಎರಡಾವರ್ತಿ ಪಠಿಸುವುದರಿಂದ ಅಧ್ಯಾಯದ ಕೊನೆಯೆಂದು ತಿಳಿಯಬೇಕು.



*English Translation*

**(On the Ahina and Aikahika concluding verses of the Shastras of the minor Hotri-priests)**

The concluding verses of the Hotri-priests (Maitravaruna, Brahmanachhamsi, and Achhavaka) are, at the morning and midday libations, of two kinds, viz., ahina (which are proper for Soma sacrifices which last for several days successively) and aikahika which are proper for Soma sacrifices (which last for one day only). The Maitravaruna uses the aikahikas, preventing thus the sacrificer from falling out of this world. The Achhavaka uses the ahinas for making the sacrificer obtain heaven. The Brahmanachhamsi uses both; for thus he holds both worlds (with his hands) and walks in them. In this way he (the Brahmanachhamsi) walks holding both, the Maitravaruna and the Achhavaka, the Ahina and Ekaha and farther the sacrificial session lasting all the year round such as the Gavam ayanam and the Agnishtoma the model of all Aikahikas.

The Hotri-priests require at the third libation Ekahas only for concluding. For the Ekaha is the footing and thus they place the sacrifice at the end on a footing.

At the morning libation he must read the Yajya verses without stopping (anavanam). The Hotar shall not recite one or two additional verses (atis amsanam) for the Stoma. It is just the same case as if one who asks for food and drink must be speedily supplied. Thinking, I will quickly supply the gods their food, he speedily gets a footing in this world. He should make the Shastram at the two latter libations with an unlimited number of verses; for the heaven-world is unlimited. This is done for obtaining the heaven-world. The Hotar may, if he like, recite those verses which the minor Hotri-priests used to repeat on a previous day. Or the Hotri-priests may, if they like, repeat those verses, which the Hotar used to repeat on the previous day. For the Hotar as well as the Hotri-priests form parts of one body only. For the Hotar is the breath and the Hotri-priests are the limbs. Thence the Hotar should, if he like, recite those verses which the miuor Hotri-priests used to recite on the previous day.

Or the Hotri-priests may, if they like, repeat those verses which the Hotar used to repeat on the previous day. The last verses of the hymns with which the Hotar concludes, are the same with the concluding verses of the minor Hotri-priests at the evening libation. For the Hotar is the soul, and the Hotri-priests are the limbs; the ends of the limbs are equal, therefore the three Hotri-priests use, at the evening libation, the same concluding verses.

**ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ಸಪ್ತವಿಂಶೋಽಧ್ಯಾಯೇ ಪಂಚಮಃ ಖಂಡಃ ಸಮಾಪ್ತಃ**

**ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೇಳನೆಯ ಅಧ್ಯಾಯದಲ್ಲಿ ಐದನೆಯ ಖಂಡವು ಸಮಾಪ್ತವಾದುದು.**

**ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.**



# ಅಥೈತರೇಯಬ್ರಾಹ್ಮಣೇ ಅಷ್ಟಾವಿಂಶಾಧ್ಯಾಯೇ ಪ್ರಥಮಃ ಖಂಡಃ

## ಇಪ್ಪತ್ತೆಂಟನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು



[ಪ್ರಾತಃಸವನ, ಮಾಧ್ಯಂದಿನಸವನ, ತೃತೀಯಸವನಗಳಲ್ಲಿ ಬಟ್ಟಲುಗಳನ್ನು ಸೋಮರಸದಿಂದ ತುಂಬುವಾಗ ಅವುಗಳನ್ನು ಮೇಲಕ್ಕೆತ್ತುವಕಾಲದಲ್ಲಿ ಹೋತೃವು ಪಠಿಸುವ ಮಂತ್ರಗಳು.]



ಪ್ರಾತಸ್ಸವನೇ ಹೋತ್ರಕಶಸ್ತ್ರಾಣ್ಯನುರೂಪೋ
ಯಸ್ಮಿನ್ನೇವ ಸ್ತುವತೇ ಸ್ತೋತ್ರೀಯ ಏಷಃ ।
ಆರಂಭಾದ್ಯಾ ಆಹವನೀಯಾಃ ಪರಿಧಾಯಾ
ವೃದ್ಧೇ ಸ್ತೋಮೇ ಸ್ಯಾದತಿಶಂಸಾರ್ಥತೃಚಶ್ಚ ॥

### ಪೂರ್ವಪೀಠಿಕೆಯು

ಸವನತ್ರಯಗಳಲ್ಲಿ ಹೋತೃವೇ ಮೊದಲಾದ ಏಳುಮಂದಿ ಋತ್ವಿಜರು ಪಠಿಸಿ ಹೋಮಮಾಡುವ **ಗಾಯತ್ರೀ, ತ್ರಿಷ್ಟುಪ್, ಜಗತೀ** ಎಂಬ ಛಂದಸ್ಸಿನ ಏಳು ಏಳು ಮಂತ್ರಗಳನ್ನು ಹೇಳಿ ಈಗ ಪ್ರಾತಃಸವನಕಾಲದಲ್ಲಿ ಅನುಸರಿಸಬೇಕಾದ ಕ್ರಮ, ಪಠಿಸಬೇಕಾದ ಮಂತ್ರಗಳು ಮುಂತಾದ ವಿವರಣೆಗಳನ್ನು ಐತರೇಯಬ್ರಾಹ್ಮಣದಲ್ಲಿ ಹೇಳಿರುವಂತೆ (ಐ. ಬ್ರಾ. ೨೭ ನೆಯ ಅಧ್ಯಾಯ) ಇಲ್ಲಿ ವಿವರಿಸಲಾಗಿದೆ.

ಸವನಕಾಲದಲ್ಲಿ ಹೋಮಮಾಡುವುದಕ್ಕೆ ಪೂರ್ವಭಾವಿಯಾಗಿ ಋತ್ವಿಕ್ಕುಗಳು ಸೋಮರಸವನ್ನು ಚಮಸಪಾತ್ರೆಯಲ್ಲಿ (ಹೋಮ ಮಾಡುವುದಕ್ಕೆ ಉಪಯೋಗಿಸುವ ಸೌಟಿನಂತಿರುವ ಮರದ ಪಾತ್ರೆಯಲ್ಲಿ) ತುಂಬಿ ಸಿದ್ಧರಾಗಿರುವಾಗ ಅಧ್ವರ್ಯುವು ಮೈತ್ರಾವರುಣನೆಂಬ ಋತ್ವಿಜನನ್ನುದ್ದೇಶಿಸಿ ಉನ್ನೀಯಮಾನಸೂಕ್ತವನ್ನು ಪಠಿಸುವಂತೆ ಪ್ರೈಷಮಂತ್ರದಿಂದ ನಿರ್ದೇಶಿಸುವನು. ಉನ್ನೀಯಮಾನಸೂಕ್ತವೆಂದರೆ ಸೋಮರಸವನ್ನು ಹೋಮಮಾಡುವುದಕ್ಕಾಗಿ ಮೇಲಕ್ಕೆ ಎತ್ತಿ ಹಿಡಿದುಕೊಂಡಿರುವಾಗ ಪಠಿಸುವ ಸೂಕ್ತವು. ಪ್ರಾತಃಸವನಕಾಲದಲ್ಲಿ ಪಠಿಸುವ ಈ ಉನ್ನೀಯಮಾನಸೂಕ್ತವು ಗಾಯತ್ರೀಛಂದಸ್ಕವಾಗಿಯೂ, ಮಾಧ್ಯಂದಿನ ಸವನದಲ್ಲಿ ತ್ರಿಷ್ಟುಪ್‌ಛಂದಸ್ಕವಾಗಿಯೂ, ತೃತೀಯಸವನದಲ್ಲಿ ಜಗತೀಛಂದಸ್ಕವಾಗಿಯೂ ಇರಬೇಕು. ಇದಲ್ಲದೆ ಪ್ರಾತಃಸವನದಲ್ಲಿ ಒಂಭತ್ತು ಋಕ್ಕಿನ ಸೂಕ್ತವನ್ನೂ, ಮಾಧ್ಯಂದಿನಸವನದಲ್ಲಿ ಹತ್ತು ಋಕ್ಕಿನ ಸೂಕ್ತವನ್ನೂ, ತೃತೀಯಸವನದಲ್ಲಿ ಒಂಭತು ಋಕ್ಕಿನ ಸೂಕ್ತವನ್ನೂ ಉನ್ನೀಯಮಾನಸೂಕ್ತವನ್ನಾಗಿ ಪಠಿಸಬೇಕೆಂಬ ನಿಯಮವಿದೆ. ಇದಲ್ಲದೆ ಮಂತ್ರಪಠನ ವಿಷಯದಲ್ಲಿ ಇನ್ನೂ ಒಂದು ವಿಶೇಷವಿದೆ. ಸೂರ್ಯನ ಗತಿಯನ್ನನುಸರಿಸಿ ಈ ಮೂರು ಸವನಕಾಲಗಳಲ್ಲಿ ಮಂತ್ರಗಳನ್ನು ಪಠಿಸಬೇಕು. ಹೇಗೆಂದರೆ ಪ್ರಾತಃಕಾಲದಲ್ಲಿ ಸೂರ್ಯನ ತೇಜಸ್ಸು ಬಹಳ ಮಂದವಾಗಿರುವುದರಿಂದ ಪ್ರಾತಃಸವನದಲ್ಲಿ ಮಂತ್ರಗಳನ್ನು ಮೆಲ್ಲಗಿರುವ ಧ್ವನಿಯಿಂದ ಪಠಿಸಬೇಕು. ಮಧ್ಯಾಹ್ನಕಾಲದಲ್ಲಿ ಸೂರ್ಯನ ತೇಜಸ್ಸು ಬಹು ತೀಕ್ಷ್ಣವಾಗಿರುವುದರಿಂದ ಮಾಧ್ಯಂದಿನ ಸವನಕಾಲದಲ್ಲಿ ಮಂತ್ರಗಳನ್ನು ಉಚ್ಚಧ್ವನಿಯಿಂದ ಎಂದರೆ ಬಹಳ ಘಟ್ಟಿಯಾಗಿ ಉಚ್ಚರಿಸಬೇಕು. ಸಾಯಂಕಾಲದಲ್ಲಿ ಸೂರ್ಯನ ತಾಪವು ಇಳಿಮುಖವಾಗಿ ಕಮ್ಮಿಯಾಗಿರುವುದರಿಂದ ತೃತೀಯಸವನಕಾಲದಲ್ಲಿ ಮಂತ್ರಗಳನ್ನು ಮೆಲ್ಲಗಿರುವ ಧ್ವನಿಯಿಂದಲೇ ಪಠಿಸಬೇಕು.

## ಪ್ರಾತಃಸವನಕಾಲದಲ್ಲಿ ಪಠಿಸಬೇಕಾದ ಉನ್ನೀಯಮಾನ ಸೂಕ್ತವು

ಅಧ್ವರ್ಯುವು ಮೈತ್ರಾವರುಣನಿಗೆ ಪ್ರಾತಃಸವನಕಾಲದಲ್ಲಿ ಉನ್ನೀಯಮಾನಸೂಕ್ತವನ್ನು ಪಠಿಸಬೇಕೆಂದು ಪ್ರೈಷ ಮಂತ್ರದ ಮೂಲಕ ನಿರ್ದೇಶಮಾಡಿದ ಕೂಡಲೇ ಮೈತ್ರಾವರುಣನು ಅದಕ್ಕನುಸಾರವಾಗಿ **ಆ ತ್ವಾ ವಹಂತು ಹರಯಃ** (ಋ. ಸಂ. ೧-೧೬) ಎಂಬ ಸೂಕ್ತವನ್ನು ಪಠಿಸುವನು.

**ಆ ತ್ವಾ ವಹಂತು ಹರಯೋ ವೃಷಣಂ ಸೋಮಪೀತಯೇ ।**
**ಇಂದ್ರ ತ್ವಾ ಸೂರಚಕ್ಷಸಃ ॥ ೧ ॥**

**ಇಮಾ ಧಾನಾ ಘೃತಸ್ನುವೋ ಹರೀ ಇಹೋಪ ವಕ್ಷತಃ ।**
**ಇಂದ್ರಂ ಸುಖತಮೇ ರಥೇ ॥ ೨ ॥**

**ಇಂದ್ರಂ ಪ್ರಾತರ್ಹವಾಮಹ ಇಂದ್ರಂ ಪ್ರಯತ್ಯಧ್ವರೇ ।**
**ಇಂದ್ರಂ ಸೋಮಸ್ಯ ಪೀತಯೇ ॥ ೩ ॥**

**ಉಪ ನಃ ಸುತಮಾ ಗಹಿ ಹರಿಭಿರಿಂದ್ರ ಕೇಶಿಭಿಃ ।**
**ಸುತೇ ಹಿ ತ್ವಾ ಹವಾಮಹೇ ॥ ೪ ॥**

**ಸೇಮಂ ನಃ ಸ್ತೋಮಮಾ ಗಹ್ಯುಪೇದಂ ಸವನಂ ಸುತಂ ।**
**ಗೌರೋ ನ ತೃಷಿತಃ ಪಿಬ ॥ ೫ ॥**

**ಇಮೇ ಸೋಮಾಸ ಇಂದವಃ ಸುತಾಸೋ ಅಧಿ ಬರ್ಹಿಷಿ ।**
**ತಾঁ ಇಂದ್ರ ಸಹಸೇ ಪಿಬ ॥ ೬ ॥**

**ಅಯಂ ತೇ ಸ್ತೋಮೋ ಅಗ್ರಿಯೋ ಹೃದಿಸ್ಪೃಶಸ್ತು ಶಂತಮಃ ।**
**ಅಥಾ ಸೋಮಂ ಸುತಂ ಪಿಬ ॥ ೭ ॥**

**ವಿಶ್ವಮಿತ್ಸವನಂ ಸುತಮಿಂದ್ರೋ ಮದಾಯ ಗಚ್ಛತಿ ।**
**ವೃತ್ರಹಾ ಸೋಮಪೀತಯೇ ॥ ೮ ॥**

**ಸೇಮಂ ನಃ ಕಾಮಮಾ ಪೃಣ ಗೋಭಿರಶ್ವೈಃ ಶತಕ್ರತೋ ।**
**ಸ್ತವಾಮ ತ್ವಾ ಸ್ವಾಧ್ಯಃ ॥ ೯ ॥** (ಋ. ಸಂ. ೧-೧೬-೧ ರಿಂದ ೯)

ಮೈತ್ರಾವರುಣನು ಈರೀತಿ ಮೇಲಿನ ಸೂಕ್ತವನ್ನು ಪಠಿಸುವನು. ಈ ಸೂಕ್ತವನ್ನು ಪ್ರಾತಃಸವನಕಾಲದಲ್ಲಿ ಏತಕ್ಕೆ ಉಪಯೋಗಿಸಬೇಕೆಂಬ ವಿಷಯವನ್ನೂ, ಸವನವಿಷಯವಾಗಿ ಈ ಸೂಕ್ತದಲ್ಲಿರುವ ವೈಶಿಷ್ಟ್ಯವನ್ನೂ ಈಗ ವಿವರಿಸುವರು.

ಆ ತ್ವಾ ವಹಂತು ಹರಯ ಇತಿ ಪ್ರಾತಃಸವನ ಉನ್ನೀಯಮಾನೇಭ್ಯೋಽನ್ವಾಹ ವೃಷಣ್ವತೀಃ ಪೀತವತೀಃ ಸುತವತೀರ್ಮದ್ವತೀ ರೂಪಸಮೃದ್ಧಾಃ ।

**ಅಥೋನ್ನೀಯಮಾನಸೂಕ್ತಾನಿ ವಿಧಾತುಮುಪಕ್ರಮತೇ—ಯದಾ ಚಮಸಾ ಉನ್ನೀಯಂತೇ ಸೋಮೇನ ಪೂರ್ಯಂತೇ ತದಾನೀಮಧ್ವರ್ಯುಣಾ ಪ್ರೇಷಿತೋ ಮೈತ್ರಾವರುಣ ಆ ತ್ವಾ ವಹಂತ್ವಿತಿ ಸೂಕ್ತಮನುಬ್ರೂಯಾತ್ । ತಸ್ಮಿನ್ಸೂಕ್ತೇ ಸ್ಥಿತಾ ಋಚೋ ವೃಷಶಬ್ದೇನ ಪಿತಶಬ್ದೇನ ಸುತಶಬ್ದೇನ ಮದಶಬ್ದೇನ ಚ ಯುಕ್ತಾಃ । ತಚ್ಚ (ತ್ರ) ದ್ವಿತೀಯಪಾದೇ ವೃಷಣಂ ಸೋಮಪೀತಯ ಇತಿ ವೃಷಶಬ್ದ ಪೀತಶಬ್ದೌ ವಿದ್ಯೇತೇ । ಅಷ್ಟಮಾಯಾಮೃಚೀಂದ್ರೋ ಮದಾಯ ಗಚ್ಛತೀತಿ ಮದಶಬ್ದೋ ವಿದ್ಯತೇ । ಯದ್ಯಪ್ಯೇತೇ ಶಬ್ದಾಃ ಸರ್ವಾಸ್ವೃಕ್ಷು ನ ಸಂತಿ ತಥಾಪಿ ಕ್ವಚಿಚ್ಛ್ರವಣಾತ್ಸರ್ವಾ ಅಪಿ ಛತ್ರಿನ್ಯಾಯೇನ ತೈಃ ಶಬ್ದೈರ್ಯುಕ್ತಾ ಭವಂತಿ । ವರ್ಷಣಕ್ಷಮ ಇಂದ್ರಃ ಸೋಮಂ ಪೀತ್ವಾ ಮಾದ್ಯತೀತ್ಯಸ್ಯಾರ್ಥಸ್ಯೋಕ್ತಶಬ್ದಚತುಷ್ಟಯೇನ ಪ್ರತೀಯಮಾನತ್ವಾದ್ವಿವಕ್ಷಿತಾರ್ಥಕೂಲ್ಯೇನ ರೂಪಸಮೃದ್ಧತ್ವಮ್ ।**

ಈ ಸೂಕ್ತದಲ್ಲಿರುವ ೯ ಋಕ್ಕುಗಳೂ ಗಾಯತ್ರೀಛಂದಸ್ಸಿನಲ್ಲಿಯೇ ಇರುವವು. ಮತ್ತು ಈ ಸೂಕ್ತದಲ್ಲಿರುವ ಋಕ್ಕುಗಳಲ್ಲಿ ವೃಷ, ಸುತ, ಮದ ಮೊದಲಾದ ಸೋಮಪಾನಾರ್ಥವಾಗಿ ಉಪಯೋಗಿಸಲ್ಪಡುವ ಶಬ್ದಗಳ ಪ್ರಯೋಗವಿರುವುದು ಮೊದಲನೆಯ ಋಕಿನ ಎರಡನೆಯ ಪಾದದಲ್ಲಿ **ವೃಷಣಂ ಸೋಮಪೀತಯೇ** ಎಂದು ವೃಷ ಮತ್ತು ಪೀತಶಬ್ದಗಳ ಪ್ರಯೋಗವೂ ಇರುವುದು. ನಾಲ್ಕನೆಯ ಋಕ್ಕಿನಲ್ಲಿರುವ **ಸುತೇ ಹಿ ತ್ವಾ ಹವಾಮಹೇ** ಎಂಬ ವಾಕ್ಯದಲ್ಲಿ ಸುತ ಎಂಬ ಶಬ್ದದ ಪಠನವಿರುವುದು. ಎಂಟನೆಯ ಋಕ್ಕಿನಲ್ಲಿರುವ **ಇಂದ್ರೋ ಮದಾಯ ಗಚ್ಛತಿ** ಎಂಬ ವಾಕ್ಯದಲ್ಲಿ ಮದಶಬ್ದವಿರುವುದು. ಈ ಶಬ್ದಗಳೆಲ್ಲವೂ ಪ್ರತಿಋಕ್ಕಿನಲ್ಲಿಯೂ ಇಲ್ಲದಿದ್ದರೆ ಒಟ್ಟು ಸೂಕ್ತದಲ್ಲಿ ಅಲ್ಲಲ್ಲಿ ಅನೇಕಾವರ್ತಿ ಪಠಿತವಾಗಿರುವುದು. ವೃಷ್ಟಿಪ್ರದನಾದ ಇಂದ್ರನು ಸೋಮರಸವನ್ನು ಪಾನಮಾಡಿ ಹರ್ಷಗೊಳ್ಳುವನು ಎಂಬ ಅಭಿಪ್ರಾಯವು ವೃಷಣ, **ಸುತ, ಸೋಮ, ಮದಾಯ** ಎಂಬ ನಾಲ್ಕು ಶಬ್ದಗಳಿಂದ ವ್ಯಕ್ತವಾಗುವುದು. ಆದುದರಿಂದ ಈ ಸೂಕ್ತವು ಇಂದ್ರನ ಸೋಮಪಾನವಿಚಾರದಲ್ಲಿ ರೂಪಸಮೃದ್ಧವಾಗಿರುವುದು. ರೂಪಸಮೃದ್ಧವೆಂದರೆ – ಒಂದು ನಿರ್ದಿಷ್ಟವಾದ ವಿಷಯವನ್ನು ಉದ್ದೇಶಿಸಿ ಹೇಳುವಾಗ ಅಲ್ಲಿ ಉಪಯೋಗಿಸುವ ಮಂತ್ರಗಳು ಆ ವಿಷಯವನ್ನು ವಿವರಿಸುವ ಅರ್ಥವನ್ನೊಳಗೊಂಡಿರಬೇಕು. ಹೀಗೆ ಆಯಾ ಕರ್ಮಗಳಲ್ಲಿ ಆಯಾ ಕರ್ಮಗಳ ವಿವರಣೆಯನ್ನೂ, ಅರ್ಥವನ್ನೂ ಸೂಚಿಸುವ ಶಬ್ದಗಳನ್ನೊಳಗೊಂಡಿರುವ ಮಂತ್ರಗಳನ್ನು ಸಂದರ್ಭೋಚಿತವಾಗಿ ಉಪಯೋಗಿಸುವುದೇ ರೂಪಸಮೃದ್ಧವೆನಿಸುವುದು.

ಐಂದ್ರೀರನ್ವಾಹೈಂದ್ರೋ ವೈ ಯಜ್ಞೋ ಗಾಯತ್ರೀರನ್ವಾಹ ಗಾಯತ್ರಂ ವೈ ಪ್ರಾತಸ್ಸವನಂ ನವ ನ್ಯೂನಾಃ ಪ್ರಾತಸ್ಸವನೇಽನ್ವಾಹ ನ್ಯೂನೇ ವೈ ರೇತಃ ಸಿಚ್ಯತೇ ।

ದೇವತಾದ್ವಾರಾ ತಾ ಋಚಃ ಪ್ರಶಂಸತಿ—ಇಂದ್ರ ತ್ವಾ ಸೂರಚಕ್ಷಸ ಇಂದ್ರಂ ಸುಖತಮೇ ರಥ ಇತಿ ಶ್ರವಣಾದಿಂದ್ರದೇವತಾಕಾ ಋಚಃ ಸೋಮಯಾಗಶ್ಚೇಂದ್ರ ದೇವತಾಕೋಽತಸ್ತತ್ರ ತಾ ಯುಜ್ಯಂತೇ ॥

ಛಂದೋದ್ವಾರಾ ಪ್ರಶಂಸತಿ—ಪ್ರಾತಸವನಸ್ಯ ಗಾಯತ್ರೀಛಂದಸ್ಕತ್ವಾತ್ತಚ್ಛಂದಸ್ಕಾ ಋಚಸ್ತತ್ರ ಯೋಗ್ಯಾಃ ॥

**ಋಕ್ಸಂಖ್ಯಾದ್ವಾರಾ ಪ್ರಶಂಸತಿ–ಮಾಧ್ಯಂದಿನಸವನೇ ದಶಸಂಖ್ಯಾಕಾ ವಕ್ಷ್ಯಂತೇ ತಾಂ ಸಂಖ್ಯಾಮುಪೇಕ್ಷ್ಯಾತ್ರ ಯಾ ನವಸಂಖ್ಯಾಕಾಸ್ತಾ ಏಕಯರ್ಚಾ ನ್ಯೂನಾಃ। ಲೋಕೇಽಪಿ ನ್ಯೂನೇ ಸ್ವಲ್ಪೇ ಗರ್ಭಧಾರಣಸ್ಥಾನೇ ರೇತಃ ಸಿಚ್ಯತೇಽತೋ ನ್ಯೂನತ್ವಮತ್ರ ಯುಕ್ತಮ್ ॥**

ಈ ಸೂಕ್ತವು ಇಂದ್ರದೇವತಾಕವು. ಎಂದರೆ ಈ ಸೂಕ್ತದಲ್ಲಿ ಇಂದ್ರನು ಯಾಗಶಾಲೆಗೆ ಬಂದು ಸೋಮಪಾನ ಮಾಡಬೇಕೆಂದು ಪ್ರಾರ್ಥಿಸಲಾಗಿದೆ. ಆದುದರಿಂದ ಈ ಸೂಕ್ತದಲ್ಲಿರುವ ಋಕ್ಕುಗಳೆಲ್ಲವೂ ಇಂದ್ರನನ್ನೇ ಪ್ರಶಂಸಿಸುವುದಾಗಿದೆ. ಈಗ ಇಲ್ಲಿ ಒಂದು ಸಂಶಯವು ತಲೆದೋರುವುದು. ಇಂದ್ರನನ್ನುದ್ದೇಶಿಸಿ ಮಾಡುವ ಯಜ್ಞದಲ್ಲಿ ಇಂದ್ರದೇವತಾಕವಾದ ಸೂಕ್ತವನ್ನೂ, ಋಕ್ಕುಗಳನ್ನೂ ಪಠಿಸುವುದೇನೋ ನ್ಯಾಯವಾಗಿದೆ. ಆದರೆ ಈ ಪ್ರಾತಸ್ಸವನವೆಂಬ ಕರ್ಮವು ಇತರ ಯಜ್ಞಗಳಲ್ಲಿಯೂ ಆಚರಿಸಲ್ಪಡುವುದರಿಂದ ಆಯಾ ಯಜ್ಞಗಳಲ್ಲಿ ಇತರ ದೇವತೆಗಳ ಪರವಾದ ಸೂಕ್ತವನ್ನೂ, ಋಕ್ಕುಗಳನ್ನೂ ಪಠಿಸಬೇಕೇ ಎಂದರೆ ಹಾಗಲ್ಲ. ಎಲ್ಲಾ ಯಜ್ಞಗಳಲ್ಲಿಯೂ ಎಂದರೆ ಇಂದ್ರನನ್ನಲ್ಲದೆ ಇತರ ದೇವತೆಗಳನ್ನುದ್ದೇಶಿಸಿ ಮಾಡುವ ಯಜ್ಞಗಳಲ್ಲಿಯೂ ಇಂದ್ರದೇವತಾಕವಾದ ಈ ಸೂಕ್ತವನ್ನೇ ಪಠಿಸಬೇಕು. ಏಕೆಂದರೆ **ಇಂದ್ರೋ ವೈ ಯಜ್ಞಃ** ಎಂದರೆ ಇಂದ್ರನೇ ಯಜ್ಞವು ಅಥವಾ ಯಜ್ಞವು ಇಂದ್ರಸ್ವರೂಪವಾಗಿರುವುದು ಎಂದು ಶ್ರುತಿವಚನವಿರುವುದರಿಂದ ಯಾವ ಯಜ್ಞದಲ್ಲಾದರೂ ಇಂದ್ರದೇವತಾಕವಾದ ಈ ಸೂಕ್ತವನ್ನು ಸವನಕಾಲದಲ್ಲಿ ಪಠಿಸುವುದು ನ್ಯಾಯವಾಗಿರುವುದು ಎಂದಭಿಪ್ರಾಯವು. ಹಾಗಾದರೆ ಇಂದ್ರದೇವತಾಕಸೂಕ್ತಪಠನವು ಎಲ್ಲಾ ಯಜ್ಞಗಳಲ್ಲಿಯೂ ನ್ಯಾಯವೆಂದು ಒಪ್ಪಿಕೊಳ್ಳೋಣ. ಆದರೆ ಗಾಯತ್ರೀಛಂದಸ್ಸಿನ ಮಂತ್ರಗಳನ್ನೇ ಏಕೆ ಪಠಿಸಬೇಕು ಎಂದರೆ **"ಗಾಯತ್ರಂ ವೈ ಪ್ರಾತಸ್ಸವನಂ", "ಪ್ರಾತಸ್ಸವನೇ ವೈ ಗಾಯತ್ರೇಣ ಛಂದಸಾ"** (ತೈ. ಸಂ. ೭-೧-೨-೧) ಇತ್ಯಾದಿ ಶ್ರುತಿವಾಕ್ಯಗಳಲ್ಲಿ ಪ್ರಾತಃಸವನಕರ್ಮವನ್ನು ಗಾಯತ್ರೀಛಂದಸ್ಸಿನ ಮಂತ್ರಗಳ ಪಠನದಿಂದಲೇ ನೆರವೇರಿಸಬೇಕೆಂಬ ವಿಧಿಯಿರುವುದರಿಂದ ಇಲ್ಲಿ ಗಾಯತ್ರೀಛಂದಸ್ಸಿನ ಋಕ್ಕುಗಳನ್ನೊಳಗೊಂಡ **ಆ ತ್ವಾ ವಹಂತು ಹರಯಃ** ಎಂಬ ಮೇಲೆ ಹೇಳಿದ ಉನ್ನೀಯಮಾನ ಸೂಕ್ತವನ್ನೂ ಅದರಂತೆ ಹೋತ್ರಾದಿ ಸಪ್ತಋತ್ವಿಕ್ಕುಗಳು ಯಾಜ್ಯಾಮಂತ್ರಗಳಿಗಾಗಿ (ಹೋಮಮಂತ್ರ) ಉಪಯೋಗಿಸುವ **"ಇದಂ ತೇ ಸೋಮ್ಯಂ ಮಧು"** ಎಂದು ಮೊದಲಾದ ಗಾಯತ್ರೀಛಂದಸ್ಸಿನ ಏಳು ಮಂತ್ರಗಳನ್ನೂ ಪ್ರಾತಃಸವನಕಾಲದಲ್ಲಿ ಉಪಯೋಗಿಸುವುದು ನ್ಯಾಯವಾಗಿದೆ. ಇದಲ್ಲದೆ ಇಲ್ಲಿ ಮತ್ತೊಂದು ವಿಷಯವೂ ವಿಮರ್ಶನಾರ್ಹವಾದುದು. ಉನ್ನೀಯಮಾನ ಸೂಕ್ತಕ್ಕಾಗಿ ಪ್ರಾತಃಸವನಕಾಲದಲ್ಲಿ ಒಂಭತ್ತು ಋಕ್ಕಿನ ಸೂಕ್ತವನ್ನೂ, ಮಾಧ್ಯಂದಿನಸವನದಲ್ಲಿ ಹತ್ತು ಋಕ್ಕಿನ ಸೂಕ್ತವನ್ನೂ, ತೃತೀಯಸವನದಲ್ಲಿ ಪುನಃ ಒಂಭತ್ತು ಸೂಕ್ತವನ್ನೂ ಪಠಿಸಬೇಕೆಂದು ವಿಧಿ ಇರುವುದಷ್ಟೆ. ಈ ಸಂದರ್ಭದಲ್ಲಿ ಮಾಧ್ಯಂದಿನಸವನದಲ್ಲಿ ಪಠಿಸುವುದಕ್ಕಿಂತ ಪ್ರಾತಃಸವನದಲ್ಲಿ ಪಠಿಸುವ ಸೂಕ್ತದಲ್ಲಿ ಒಂದು ಋಕ್ಕು ಕಮ್ಮಿ ಇರುವುದು. ಈರೀತಿ ಒಂದುಋಕ್ಕು ಕಮ್ಮಿಯಾಗಿರುವುದರಿಂದ ಯಜ್ಞಕರ್ಮಕ್ಕೆ ನ್ಯೂನತೆಯುಂಟಾಗಿ ಅದರಿಂದ ಯಜ್ಞಮಾಡುವ ಯಜಮಾನನಿಗೆ ಕೆಡಕುಂಟಾಗುವುದಿಲ್ಲವೇ? ಎಂದರೆ ಅದಕ್ಕವಕಾಶವಿಲ್ಲ. ಲೋಕವ್ಯವಹಾರದಲ್ಲಿ ಗರ್ಭಧಾರಣ ಕಾಲದಲ್ಲಿ ಸೇಚನೆಮಾಡುವ ರೇತಸ್ಸು ಅತಿಸ್ವಲ್ಪವಾಗಿದ್ದರೂ ಅದರಿಂದ ಪ್ರಜೋತ್ಪಾದನೆಗೆ ನ್ಯೂನತೆಯುಂಟಾಗುವುದಿಲ್ಲ. ಅದರಂತೆ ಪ್ರಾತಃಸವನದಲ್ಲಿ ಮಾಧ್ಯಂದಿನಕ್ಕಿಂತ ಒಂದುಋಕ್ಕು ಕಮ್ಮಿಯಾಗಿದ್ದರೂ ಮಂತ್ರಸಾಮರ್ಥ್ಯದಿಂದ ಯಜ್ಞಕರ್ಮಕ್ಕೆ ನ್ಯೂನತೆಯಾಗಲಿ, ಯಜಮಾನನಿಗೆ ಕೆಡಕಾಗಲಿ ಆಗಲು ಕಾರಣವಿಲ್ಲ ಎಂದಭಿಪ್ರಾಯವು.

ದಶ ಮಧ್ಯಂದಿನೇಽನ್ವಾಹ ನ್ಯೂನೇ ವೈ ರೇತಃ ಸಿಕ್ತಂಮಧ್ಯಂ ಸ್ತ್ರಿಯೈ ಪ್ರಾಪ್ಯ ಸವಿಷ್ಠಂ ಭವತಿ ॥

ಅಥ ಮಾಧ್ಯಂದಿನೇ ಸವನೇಽಸಾವಿ ದೇವಂ ಗೋಋಜೀಕಮಂಧ ಇತ್ಯೇತತ್ಸೂಕ್ತಗತಾ ದಶಸಂಖ್ಯಾಕಾ ಋಚೋ ವಿಧತ್ತೇ ಲೋಕೇ ಸ್ವಲ್ಪೇ ಗರ್ಭಸ್ಥಾನೇ ಸಿಕ್ತಂ ರೇತಃ ಸ್ತ್ರೀಶರೀರಸ್ಯ

**ಮಧ್ಯಸ್ಥಾನಂ ಪ್ರಾಪ್ಯ ಗರ್ಭರೂಪೇಣ ಸ್ಥವಿಷ್ಠಮತಿಸ್ಥೂಲಂ ಭವತಿ । ಅತೋ ರೇತಃ ಸೇತ-ಸ್ಥಾನೀಯಾಯಾ ಅತ್ರ ಗರ್ಭಸ್ಥಾನೀಯ ಸಂಖ್ಯಾಧಿಕ್ಯಂ ಯುಕ್ತಮ್ ॥**

ಇನ್ನು ಮಾಧ್ಯಂದಿನಸವನದಲ್ಲಿ ಪಠಿಸುವ ಸೂಕ್ತವನ್ನು ವಿವರಿಸುವರು. ಮಾಧ್ಯಂದಿನಸವನದಲ್ಲಿ **ಅಸಾವಿ ದೇವಂ ಗೋಋಜೀಕಮಂಧಃ** ಎಂಬ ಸೂಕ್ತವನ್ನು (ಋ. ಸಂ. ೭-೧೨ ನೆಯ ಸೂಕ್ತ) ಉನ್ನೀಯಮಾನಸೂಕ್ತವನ್ನಾಗಿ ಪಠಿಸಬೇಕು.

## ಮಾಧ್ಯಂದಿನ ಸವನಕಾಲದಲ್ಲಿ ಪಠಿಸಬೇಕಾದ ಉನ್ನೀಯಮಾನ ಸೂಕ್ತವು

**ಅಸಾವಿ ದೇವಂ ಗೋಋಜೀಕಮಂಧೋ ನ್ಯಸ್ಮಿನ್ನಿಂದ್ರೋ ಜನುಷೇಮುವೋಚ ।**
**ಬೋಧಾಮಸಿ ತ್ವಾ ಹರ್ಯಶ್ವ ಯಜ್ಞೈರ್ಬೋಧಾ ನಃ ಸ್ತೋಮಮಂಧಸೋ ಮದೇಷು ॥ ೧ ॥**

**ಪ್ರ ಯಂತಿ ಯಜ್ಞಂ ವಿಪಯಂತಿ ಬರ್ಹಿಃ ಸೋಮಮಾದೋ ವಿದಥೇ ದುಧ್ರವಾಚಃ ।**
**ನ್ಯು ಭ್ರಿಯಂತೇ ಯಶಸೋ ಗೃಭಾದಾ ದೂರಉಪಬ್ದೋ ವೃಷಣೋ ನೃಷಾಚಃ ॥ ೨ ॥**

**ತ್ವಮಿಂದ್ರ ಸ್ರವಿತವಾ ಅಪಸ್ಕಃ ಪರಿಷ್ಠಿತಾ ಅಹಿನಾ ಶೂರ ಪೂರ್ವೀಃ ।**
**ತ್ವದ್ವಾವಕ್ರೇ ರಥ್ಯೋ೩ ನ ಧೇನಾ ರೇಜಂತೇ ವಿಶ್ವಾ ಕೃತ್ರಿಮಾಣಿ ಭೀಷಾ ॥ ೩ ॥**

**ಭೀಮೋ ವಿವೇಷಾಯುಧೇಭಿರೇಷಾಮಪಾಂಸಿ ವಿಶ್ವಾ ನರ್ಯಾಣಿ ವಿದ್ವಾನ್ ।**
**ಇಂದ್ರಃ ಪುರೋ ಜರ್ಹೃಷಾಣೋ ವಿ ದೂಧೋದ್ವಿ ವಜ್ರಹಸ್ತೋ ಮಹಿನಾ ಜಘಾನ ॥ ೪ ॥**

**ನ ಯಾತವ ಇಂದ್ರ ಜೂಜುವುರ್ನೋ ನ ವಂದನಾ ಶವಿಷ್ಠ ವೇದ್ಯಾಭಿಃ ।**
**ಸ ಶರ್ಧದರ್ಯೋ ವಿಷುಣಸ್ಯ ಜಂತೋರ್ಮಾ ಶಿಶ್ನದೇವಾ ಅಪಿ ಗುರ್ಋತಂ ನಃ ॥ ೫ ॥**

**ಅಭಿ ಕ್ರತ್ವೇಂದ್ರ ಭೂರಧ ಜ್ಮನ್ ನ ತೇ ವಿವ್ಯಙ್ ಮಹಿಮಾನಂ ರಜಾಂಸಿ ।**
**ಸ್ವೇನಾ ಹಿ ವೃತ್ರಂ ಶವಸಾ ಜಘಂಥ ನ ಶತ್ರುರಂತಂ ವಿವಿದದ್ಯುಧಾತೇ ॥ ೬ ॥**

**ದೇವಾಶ್ಚಿತ್ತೇ ಅಸುರ್ಯಾಯ ಪೂರ್ವೇಽನು ಕ್ಷತ್ರಾಯ ಮಮಿರೇ ಸಹಾಂಸಿ ।**
**ಇಂದ್ರೋ ಮಘಾನಿ ದಯತೇ ವಿಷಹ್ಯೇಂದ್ರಂ ವಾಜಸ್ಯ ಜೋಹುವಂತ ಸಾತೌ ॥ ೭ ॥**

**ಕೀರಿಶ್ಚಿದ್ಧಿ ತ್ವಾಮವಸೇ ಜುಹಾವೇಶಾನಮಿಂದ್ರ ಸೌಭಗಸ್ಯ ಭೂರೇಃ ।**
**ಅವೋ ಬಭೂಥ ಶತಮೂತೇ ಅಸ್ಮೇ ಅಭಿಕ್ಷತ್ತುಸ್ತ್ವಾವತೋ ವರೂತಾ ॥ ೮ ॥**

**ಸಖಾಯಸ್ತ ಇಂದ್ರ ವಿಶ್ವಹ ಸ್ಯಾಮ ನಮೋವೃಧಾಸೋ ಮಹಿನಾ ತರುತ್ರ ।**
**ವನ್ವಂತು ಸ್ಮಾ ತೇಽವಸಾ ಸಮೀಕೇ೩ಽಭೀತಿಮರ್ಯೋ ವನುಷಾಂ ಶವಾಂಸಿ ॥ ೯ ॥**

**ಸ ನ ಇಂದ್ರ ತ್ವಯತಾಯಾ ಇಷೇ ಧಾಸ್ತ್ಮನಾ ಚ ಯೇ ಮಘವಾನೋ ಜುನಂತಿ ।**
**ವಸ್ವೀ ಷು ತೇ ಜರಿತ್ರೇ ಅಸ್ತು ಶಕ್ತಿರ್ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೧೦ ॥**

(ಋ. ಸಂ. ೭-೨೧-೧ ರಿಂದ ೧೦)

ಈ ಸೂಕ್ತದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಸಿನವು ಮತ್ತು ಈ ಸೂಕ್ತದಲ್ಲಿ ಹತ್ತು ಋಕ್ಕುಗಳಿರುವುವು. ಇಲ್ಲಿಯೂ ಗರ್ಭದ ಉದಾಹರಣೆಯನ್ನು ಕೊಟ್ಟಿದೆ. ಲೋಕದಲ್ಲಿ ಸ್ತ್ರೀಯ ಅಲ್ಪಪ್ರಮಾಣದಲ್ಲಿರುವ ಗರ್ಭಕೋಶದಲ್ಲಿ ಸಿಕ್ತವಾಗುವ ಅಲ್ಪಪ್ರಮಾಣದ ರೇತಸ್ಸು ಸ್ತ್ರೀಶರೀರದ ಮಧ್ಯಭಾಗದಲ್ಲಿ ಸೇರಿ ಗರ್ಭರೂಪದಿಂದ ಅಭಿವೃದ್ಧಿಯನ್ನೈದಿ ಅತಿಸ್ಥೂಲರೂಪವಾದ ಶಿಶುವಾಗುವಂತೆ ಗರ್ಭಸ್ಥಾನೀಯರೂಪವಾದ ಎಂದರೆ ಮೂರು ಸವನಗಳ ಮಧ್ಯಭಾಗದಲ್ಲಿರುವ ಈ ಮಾಧ್ಯಂದಿನ ಸವನದಲ್ಲಿ ಪಠಿಸಲ್ಪಡುವ ಹತ್ತು ಋಕ್ಕುಗಳ ಸೂಕ್ತವು ಫಲಾಧಿಕ್ಯವನ್ನುಂಟುಮಾಡುವುದೆಂದು ಅಭಿಪ್ರಾಯವು.

## ನವ ನ್ಯೂನಾಸ್ತೃತೀಯಸವನೇಽನ್ವಾಹ ನ್ಯೂನಾದ್ವೈ ಪ್ರಜಾಃ ಪ್ರಜಾಯಂತೇ ॥

ತೃತೀಯಸವನ ಇಹೋಪ ಯಾತ ಶವಸೋ ನಪಾತ ಇತ್ಯೇತತ್ಸೂಕ್ತಗತಾ ನವಸಂಖ್ಯಾಕಾ ಋಚೋ ವಿಧತ್ತೇ—ಪೂರ್ವವದ್ದಶಸಂಖ್ಯಾಪೇಕ್ಷಯಾಽತ್ರ ನ್ಯೂನತ್ವಮ್ । ಲೋಕೇ ಹಿ ನ್ಯೂನಾದಲ್ಪಾದ್ಯೋನಿದ್ವಾರಾತ್ ಪ್ರೌಢಾಃ ಪ್ರಜಾ ಉತ್ಪದ್ಯಂತೇ । ಅತೋ ಗರ್ಭೋತ್ಪಾದನಾರ್ಥಂ ಮಂತ್ರನ್ಯೂನತ್ವಂ ಯುಕ್ತಮ್ । ಏತೇಷು ಸೂಕ್ತೇಷು ಮತದ್ವಯಮಸ್ತಿ ಸಂಪೂರ್ಣಸೂಕ್ತಾನುವಚನಮಿತ್ಯೇಕಂ ಮತಮ್ । ಪ್ರತಿಸೂಕ್ತಂ ಸಪ್ತಾನಾಮೇವರ್ಚಾಮನುವಚನಮಿತಿ ದ್ವಿತೀಯಂ ಮತಮ್ ॥

ತೃತೀಯಸವನಕಾಲದಲ್ಲಿ **ಇಹೋಪ ಯಾತ ಶವಸೋ ನಪಾತಃ** (ಋ. ಸಂ. ೪-೩೫-೧) ಎಂಬ ಸೂಕ್ತವನ್ನು ಉನ್ನೀಯಮಾನ ಸೂಕ್ತವನ್ನಾಗಿ ಪಠಿಸಬೇಕು.

## ತೃತೀಯ ಸವನಕಾಲದಲ್ಲಿ ಪಠಿಸಬೇಕಾದ ಉನ್ನೀಯಮಾನ ಸೂಕ್ತವು

ಇಹೋಪ ಯಾತ ಶವಸೋ ನಪಾತಃ ಸೌಧನ್ವನಾ ಋಭವೋ ಮಾಪ ಭೂತ ।
ಅಸ್ಮಿನ್ ಹಿ ವಃ ಸವನೇ ರತ್ನಧೇಯಂ ಗಮಂತ್ವಿಂದ್ರಮನು ವೋ ಮದಾಸಃ ॥ ೧ ॥

ಆಗನ್ನೃಭೂಣಾಮಿಹ ರತ್ನಧೇಯಮಭೂತ್ಸೋಮಸ್ಯ ಸುಷುತಸ್ಯ ಪೀತಿಃ ।
ಸುಕೃತ್ಯಯಾ ಯತ್ಸ್ವಪಸ್ಯಯಾ ಚ ಏಕಂ ವಿಚಕ್ರ ಚಮಸಂ ಚತುರ್ಧಾ ॥ ೨ ॥

ವ್ಯಕೃಣೋತ ಚಮಸಂ ಚತುರ್ಧಾ ಸಖೇ ವಿ ಶಿಕ್ಷೇತ್ಯಬ್ರವೀತ ।
ಅಥೈತ ವಾಜಾ ಅಮೃತಸ್ಯ ಪಂಥಾಂ ಗಣಂ ದೇವಾನಾಮೃಭವಃ ಸುಹಸ್ತಾಃ ॥ ೩ ॥

ಕಿಂಮಯಃ ಸ್ವಿಚ್ಚಮಸ ಏಷ ಆಸ ಯಂ ಕಾವ್ಯೇನ ಚತುರೋ ವಿಚಕ್ರ ।
ಅಥಾ ಸುನುಧ್ವಂ ಸವನಂ ಮದಾಯ ಪಾತ ಋಭವೋ ಮಧುನಃ ಸೋಮ್ಯಸ್ಯ ॥ ೪ ॥

ಶಚ್ಯಾಕರ್ತ ಪಿತರಾ ಯುವಾನಾ ಶಚ್ಯಾಕರ್ತ ಚಮಸಂ ದೇವಪಾನಂ ।
ಶಚ್ಯಾ ಹರೀ ಧನುತರಾವತಷ್ಟೇಂದ್ರವಾಹಾವೃಭವೋ ವಾಜರತ್ನಾಃ ॥ ೫ ॥

ಯೋ ವಃ ಸುನೋತ್ಯಭಿಪಿತ್ವೇ ಅಹ್ನಾಂ ತೀವ್ರಂ ವಾಜಾಸಃ ಸವನಂ ಮದಾಯ ।
ತಸ್ಮೈ ರಯಿಮೃಭವಃ ಸರ್ವವೀರಮಾ ತಕ್ಷತ ವೃಷಣೋ ಮಂದಸಾನಾಃ ॥ ೬ ॥

**ಪ್ರಾತಃ ಸುತಮಪಿಬೋ ಹರ್ಯಶ್ವ ಮಾಧ್ಯಂದಿನಂ ಸವನಂ ಕೇವಲಂ ತೇ ।**
**ಸಮೃಭುಭಿಃ ಪಿಬಸ್ವ ರತ್ನಧೇಭಿಃ ಸಖೀಯರ್ಾ ಇಂದ್ರ ಚಕೃಷೇ ಸುಕೃತ್ಯಾ ॥ ೭ ॥**

**ಯೇ ದೇವಾಸೋ ಅಭವತಾ ಸುಕೃತ್ಯಾ ಶ್ಯೇನಾ ಇವೇದಧಿ ದಿವಿ ನಿಷೇದ ।**
**ತೇ ರತ್ನಂ ಧಾತ ಶವಸೋ ನಪಾತಃ ಸೌಧನ್ವನಾ ಅಭವತಾಮೃತಾಸಃ ॥ ೮ ॥**

**ಯತ್ತೃತೀಯಂ ಸವನಂ ರತ್ನಧೇಯಮಕೃಣುಧ್ವಂ ಸ್ವಪಸ್ಯಾ ಸುಹಸ್ತಾಃ ।**
**ತದೃಭವಃ ಪರಿಷಿಕ್ತಂ ವ ಏತತ್ಸಂ ಮದೇಭಿರಿಂದ್ರಿಯೇಭಿಃ ಪಿಬಧ್ವಂ ॥ ೯ ॥**

(ಋ. ಸಂ. ೪-೩೫-೧ ರಿಂದ ೯)

ಈ ಸೂಕ್ತದಲ್ಲಿಯೂ ಪ್ರಾತಸ್ಸವನದಲ್ಲಿ ಪಠಿಸುವ ಸೂಕ್ತದಂತೆ ಒಂಭತ್ತು ಋಕ್ಕುಗಳಿರುವುವು. ಈ ಋಕ್ಕುಗಳೆಲ್ಲವೂ ಜಗತೀಛಂದಸ್ಕವಾಗಿರಬೇಕು. (ಆದರೆ ಹಾಗಿಲ್ಲ. ತ್ರಿಷ್ಟುಪ್ ಛಂದಸ್ಕವಾಗಿವೆ) ಮಾಧ್ಯಂದಿನಸವನದ ಸೂಕ್ತದಲ್ಲಿರುವ ಹತ್ತು ಋಕ್ಕುಗಳಿಗೆ ಈ ತೃತೀಯಸವನದ ಒಂಭತ್ತು ಋಕ್ಕುಗಳನ್ನು ಹೋಲಿಸಿದರೆ ಇಲ್ಲಿಯೂ ಒಂದು ಋಕ್ಕಿನ ನ್ಯೂನತೆಯು ಕಂಡು ಬರುವುದು ಎಂದರೆ ಕಮ್ಮಿಯಾಗಿರುವುದು. ಲೋಕದಲ್ಲಿ ಅಲ್ಪಪ್ರಾಣದಲ್ಲಿರುವ ಎಂದರೆ ಸಣ್ಣದಾದ ಯೋನಿದ್ವಾರದಿಂದ ಜನಿಸುವ ಪ್ರಜೆಗಳು (ಮಕ್ಕಳು) ಪ್ರೌಢರಾಗಿ (ದೊಡ್ಡವರಾಗಿ) ಬೆಳೆಯುವುದು ಪ್ರಸಿದ್ಧಿಯಾಗಿದೆ. ಆದ್ದರಿಂದ ಗರ್ಭೋತ್ಪಾದನಾರ್ಥವಾಗಿ ಮಂತ್ರನ್ಯೂನತ್ವ ಯುಕ್ತವಾಗಿರುವುದು. **ನ್ಯೂನಾದ್ಧಿ ಪ್ರಜಾಃ ಪ್ರಜಾಯಂತೇ** ಎಂದು ತೈತ್ತಿರೀಯ ಶ್ರುತಿವಾಕ್ಯವೂ ಇರುವುದು.

## ತದ್ಯದೇತಾನಿ ಕೇವಲಸೂಕ್ತಾನ್ಯನ್ವಾಹಾ ಯಜಮಾನಮೇವ ತದ್ಗರ್ಭಂ ಭೂತಂ ಪ್ರಜನಯತಿ ಯಜ್ಞಾದ್ದೇವಯೋನ್ಯೈ ॥

**ತತ್ರ ಪ್ರಥಮಂ ಮತಂ ಪ್ರಶಂಸತಿ – ಕೇವಲಶಬ್ದಃ ಸಂಪೂರ್ಣವಾಚೀ । ತದನುವಚನೇನ ಸಂಪೂರ್ಣಗರ್ಭಂ ಪ್ರಾಪ್ತಂ ಯಜಮಾನಮೇವ ಯಜ್ಞರೂಪಾದ್ದೇವಯೋನ್ಯೈ ದೇವಸಂಬಂಧಿಯೋನಿಸ್ಥಾನಾದುತ್ಪಾದಯತಿ । ಅತಃ ಸಂಪೂರ್ಣಾನುವಚನಂ ಯುಕ್ತಮ್ ॥**

ಈ ಉನ್ನೀಯಮಾನಸೂಕ್ತಗಳನ್ನು ಪಠಿಸುವ ಕ್ರಮದಲ್ಲಿ ಮತಭೇದಗಳಿರುವುವು. ಹೇಗೆಂದರೆ ಈ ಸೂಕ್ತದಲ್ಲಿರುವ ಋಕ್ಕುಗಳೆಲ್ಲವನ್ನೂ ಪಠಿಸಬೇಕೆಂದು ಒಂದು ಮತ. ಏಳು ಜನ ಋತ್ವಿಕ್ಕುಗಳು ಈ ಸವನಗಳಲ್ಲಿ ಮುಖ್ಯಪಾತ್ರ ವಹಿಸುವುದರಿಂದ ಒಬ್ಬೊಬ್ಬ ಋತ್ವಿಕ್ಕಿಗೆ ಒಂದೊಂದು ಋಕ್ಕಿನಂತೆ ಪ್ರತಿಸೂಕ್ತದಲ್ಲಿಯೂ ಒಟ್ಟು ಏಳು ಋಕ್ಕುಗಳನ್ನು ಮಾತ್ರ ಪಠಿಸಬೇಕೆಂದು ಮತ್ತೊಂದು ಮತ. ಈ ಮತದ್ವಯಗಳಲ್ಲಿ ಸಂಪೂರ್ಣಸೂಕ್ತವನ್ನು ಪಠಿಸಬೇಕೆಂದು ವಿಧಿಸುವ ಕ್ರಮವೇ ಯುಕ್ತವಾದುದು. ಏಕೆಂದರೆ ಸಂಪೂರ್ಣ ಗರ್ಭಸ್ವರೂಪವನ್ನು ಹೊಂದಿರುವ ಯಜಮಾನನನ್ನು ಯಜ್ಞರೂಪಾತ್ಮಕವಾದ ದೇವಯೋನಿಯ ಮೂಲಕ ಉತ್ಪತ್ತಿಮಾಡುವುದೆಂದು ಪ್ರಸಿದ್ಧವು ಎಂದರೆ ಸಂಪೂರ್ಣಸೂಕ್ತಪಠನದಿಂದ ಕರ್ಮವು ಸಾಂಗವಾಗಿ ನೆರವೇರಿಸಿದಂತಾಗಿ ಯಜಮಾನನಿಗೂ ಯಜ್ಞದ ಸಂಪೂರ್ಣಫಲವು ದೊರಕುವುದೆಂದಭಿಪ್ರಾಯವು. ಆದುದರಿಂದ ಸಂಪೂರ್ಣ ಸೂಕ್ತವನ್ನು ಪಠಿಸುವ ಕ್ರಮವೇ ಯುಕ್ತವಾದುದು.

**ತೇ ಹೈಕೇ ಸಪ್ತ ಸಪ್ತಾನ್ಯಾಹುಃ ಸಪ್ತ ಪ್ರಾತಃಸವನೇ ಸಪ್ತ ಮಾಧ್ಯಂದಿನೇ ಸವನೇ ಸಪ್ತ ತೃತೀಯಸವನೇ ಯಾವತ್ಯೋ ವೈ ಪುರೋನುವಾಕ್ಯಾಸ್ತಾವತ್ಯೋ ಯಾಜ್ಯಾಃ ಸಪ್ತ ವೈ ಪ್ರಾಂಚೋ ಯಜಂತಿ ಸಪ್ತ ವಷಟ್ಕುರ್ವಂತಿ ತಾಸಾಮೇತಾ ಪುರೋನುವಾಕ್ಯಾ ಇತಿ ವದಂತಃ ॥**

ದ್ವಿತೀಯಂ ಮತಂ ದರ್ಶಯತಿ--ತೇ ಪ್ರಸಿದ್ಧಾ ಋತ್ವಿಜ ಏಕೇ ಕೇಚಿತ್ತತ್ತದ್ಯಜ್ಞೇಷು ಯಥೋಕ್ತಸೂಕ್ತಗತಾ ಋಚಃ ಪ್ರತಿಸೂಕ್ತಂ ಸಪ್ತಸಂಖ್ಯಾಕಾ ಏವಾನ್ಯಾಹುರ್ನ ತು ಸಂಪೂರ್ಣಸೂಕ್ತಾನಿ । ತಸ್ಯೈವ ವ್ಯಾಖ್ಯಾನಂ ಸಪ್ತ ಪ್ರಾತಃಸವನ ಇತ್ಯಾದಿ । ಯಾವತ್ಯ ಇತ್ಯಾದಿನಾ ತದೀಯಾ ಯುಕ್ತಿರುಚ್ಯತೇ । ಪುರೋನುವಾಕ್ಯಾನಾಂ ಯಾಜ್ಯಾನಾಂ ಚ ಸಂಖ್ಯಾ ಪ್ರಾಯೇಣ ಸಮಾನೈವ ದೃಶ್ಯತೇ । ತಥಾ ಸತ್ಯತ್ರ ಸಪ್ತಸಂಖ್ಯಾಕಾ ಋತ್ವಿಜೋ ಹೋತಾ ಮೈತ್ರಾವರುಣೋ ಬ್ರಾಹ್ಮಣಾಚ್ಛಂಸೀ ನೇಷ್ಟಾ ಪೋತಾಗ್ನೀಧ್ರೋಽಚ್ಛಾವಾಕಶ್ಚೇತ್ಯೇತೇ ಪ್ರಾಙ್ಮುಖಾ ಯಜಂತಿ ಯಾಜ್ಯಾಃ ಪಠಂತಿ । ತಸ್ಯೈವ ವ್ಯಾಖ್ಯಾನಂ ಸಪ್ತ ವಷಟ್ಕುರ್ವಂತೀತಿ । ತಾಸಾಂ ಸಪ್ತಭಿಃ ಪಠ್ಯಮಾನಾನಾಂ ಯಾಜ್ಯಾನಾಂ ತಾಃ ಸೂಕ್ತಗತಾಃ ಸಪ್ತಸಂಖ್ಯಾಕಾ ಋಚಃ ಪುರೋನುವಾಕ್ಯಾ ಭವಂತೀತ್ಯೇಕೇ ತಾದೃಶೀಂ ಯುಕ್ತಿಂ ವದಂತಃ ಸಪ್ತ ಸಪ್ತಾನ್ಯಾಹುರಿತ್ಯನ್ವಯಃ ॥

ಮೊದಲನೇ ಮತಭೇದವನ್ನು ವಿವರಿಸಿ ಈಗ ಎರಡನೇ ಮತಭೇದದ ಸ್ವರೂಪವನ್ನು ಹೇಳುವರು. ಯಜ್ಞಾದಿಗಳಲ್ಲಿ ಇರುವ ಕ್ರಮದಂತೆ ಪ್ರಾತಸ್ಸವನಾದಿ ಮೂರು ಸವನಗಳಲ್ಲಿಯೂ ಹೋತೃ, ಮೈತ್ರಾವರುಣ, ಬ್ರಾಹ್ಮಣಾಚ್ಛಂಸೀ, ನೇಷ್ಟೃ, ಪೋತೃ, ಆಗ್ನೀಧ್ರ, ಅಚ್ಛಾವಾಕ ಎಂಬ ಏಳುಮಂದಿ ಋತ್ವಿಕ್ಕುಗಳು ಪಾತ್ರವಹಿಸುವರು. ಇವರಲ್ಲಿ ಪ್ರತಿಯೊಬ್ಬರೂ ಒಂದೊಂದು ಮಂತ್ರದಂತೆ ಪಠಿಸುವ ಯಾಜ್ಯಾಮಂತ್ರಗಳು ಒಟ್ಟು ಸೇರಿದರೆ ಏಳಾಗುವವು. ಸಾಧಾರಣವಾಗಿ ಪ್ರತಿಯೊಂದು ಯಾಜ್ಯಾ ಮಂತ್ರವನ್ನು (ಹೋಮಮಾಡುವ ಮಂತ್ರವನ್ನು) ಪಠಿಸುವುದಕ್ಕೆ ಪೂರ್ವಭಾವಿಯಾಗಿ ದೇವತೆಯನ್ನು ಆಹ್ವಾನಮಾಡುವುದಕ್ಕಾಗಿ **ಪುರೋನುವಾಕ್ಯಾ** ಎಂಬ ಮಂತ್ರವನ್ನು ಪಠಿಸಬೇಕು. ಆದುದರಿಂದ ಎಷ್ಟು ಯಾಜ್ಯಾಮಂತ್ರಗಳಿರುವುವೋ ಅಷ್ಟೇ ಸಂಖ್ಯೆಯ ಪುರೋನುವಾಕ್ಯಾಮಂತ್ರಗಳಿರಬೇಕೆಂದಾಯಿತು. ಪ್ರಾತಃಸ್ಸವನಾದಿಗಳಲ್ಲಿ ಪ್ರತಿಸವನದಲ್ಲಿಯೂ ಏಳುಜನ ಋತ್ವಿಕ್ಕುಗಳು ಏಳು ಯಾಜ್ಯಾಮಂತ್ರಗಳನ್ನು ಮಾತ್ರ ಪಠಿಸುವುದರಿಂದ ಅವುಗಳಿಗೆ ಪೂರ್ವಭಾವಿಯಾಗಿ ಪಠಿಸುವ ಈ ಉನ್ನಿಯಮಾನಸೂಕ್ತದ ಋಕ್ಕುಗಳೇ ಪುರೋನುವಾಕ್ಯಾಮಂತ್ರಗಳಿಗಾಗಿ ಈ ಸೂಕ್ತದ ಏಳು ಋಕ್ಕುಗಳನ್ನು ಮಾತ್ರ ಪಠಿಸಬೇಕಾಗುವುದು ಆದುದರಿಂದ ಮೂರು ಉನ್ನೀಯಮಾನಸೂಕ್ತಗಳಲ್ಲಿರುವ ೯, ೧೦, ೯ ಋಕ್ಕುಗಳನ್ನು ಪೂರ್ತಿ ಪಠಿಸದೆ ಅವುಗಳಲ್ಲಿ ಪ್ರತಿಸೂಕ್ತದಲ್ಲಿಯೂ ಏಳೇಳು ಋಕ್ಕುಗಳನ್ನು ಮಾತ್ರ ಹೇಳುವ ಕ್ರಮವು ಎರಡನೆಯ ಮತಭೇದವು. ಈ ಎರಡನೆಯ ಮತವು ಸರಿಯಾದುದಲ್ಲವೆಂಬುವುದನ್ನು ಇಲ್ಲಿ ಸ್ಪಷ್ಟವಾಗಿ ವಿವರಿಸಲಾಗುವುದು.

**ತತ್ತಥಾ ನ ಕುರ್ಯಾದ್ಯಜಮಾನಸ್ಯ ಹ ತೇ ರೇತೋ ವಿಲುಂಪಂತ್ಯಥೋ ಯಜಮಾನಮೇವ ಯಜಮಾನೋ ಹಿ ಸೂಕ್ತಂ ॥**

ತದಿದಂ ಮತಂ ದೂಷಯತಿ ಸಪ್ತೇತಿ ಯನ್ಮತಂ ತತ್ತಥಾ ನ ಕುರ್ಯಾತ್ । ತೇ ಸಪ್ತಸಂಖ್ಯಾವಾದಿನಃ ಸಂಪೂರ್ಣಸೂಕ್ತಾಭಾವಾದ್ಯಜಮಾನಸ್ಯ ಪ್ರಜೋತ್ಪಾದಕಂ ರೇತೋ

**ವಿನಾಶಯಂತಿ । ಅಥೋ ಅಪಿ ಚ ಯಜಮಾನಮೇವ ವಿನಾಶಯಂತಿ । ಸೂಕ್ತಸ್ಯ ಯಜಮಾನರೂಪತ್ವೇನ ಸಂಪೂರ್ಣಸೂಕ್ತವಿಲೋಪ ಏವ ಯಜಮಾನವಿಲೋಪಃ ॥**

ಹಿಂದೆ ಹೇಳಿದ ಎರಡುವಿಧ ಕ್ರಮಗಳಲ್ಲಿ ಪ್ರತಿ ಸೂಕ್ತದಲ್ಲಿಯೂ ಏಳೇಳು ಋಕ್ಕುಗಳನ್ನು ಮಾತ್ರ ಪಠಿಸಬೇಕೆಂಬ ಎರಡನೇ ಕ್ರಮವನ್ನು ಖಂಡಿತ ಅನುಸರಿಸಬಾರದು. ಏಕೆಂದರೆ, ಸಂಪೂರ್ಣ ಸೂಕ್ತವನ್ನು ಪಠಿಸದಿದ್ದರೆ ಅದರಿಂದ ಯಜಮಾನನ ಪ್ರಜೋತ್ಪಾದನ ಸಾಮರ್ಥ್ಯವು ಎಂದರೆ ರೇತಸ್ಸು ನಾಶವಾಗುವುದು. ಇದಲ್ಲದೆ ಯಜಮಾನನಿಗೂ ನಾಶವು ಸಂಭವಿಸುವುದು. ಸೂಕ್ತವು ಯಜಮಾನಸ್ವರೂಪವಾಗಿರುವುದರಿಂದ ಸಂಪೂರ್ಣ ಸೂಕ್ತ ಪಠಿಸದಿದ್ದರೆ ಅದರಿಂದ ಯಜಮಾನನಿಗೆ ಹಾನಿಯೇ ಉಂಟಾಗುವುದು.

ನವಭಿರ್ವಾ ಏತಂ ವೈತ್ರಾವೆರುಣೋಽಸ್ಮಾಲ್ಲೋಕಾದಂತರಿಕ್ಷಲೋಕಮಭಿಪ್ರವಹತಿ ದಶಭಿರಂತರಿಕ್ಷಲೋಕಾದಮುಂ ಲೋಕಮಭ್ಯಂತರಿಕ್ಷಲೋಕೋ ಹಿ ಜ್ಯೇಷ್ಠೋ ನವಭಿರಮುಷ್ಮಾಂಲ್ಲೋಕಾತ್ಸ್ವರ್ಗಂ ಲೋಕಮಭಿ ನ ಹ ವೈತೇ ಯಜಮಾನಂ ಸ್ವರ್ಗಂ ಲೋಕಮಭಿ ವೋಳ್ಹುಮರ್ಹಂತಿ ಯೇ ಸಪ್ತ ಸಪ್ತಾನ್ಯಾಹುಸ್ತಸ್ಮಾತ್ಕೇವಲಶ ಏವ ಸೂಕ್ತಾನ್ಯನುಬ್ರೂಯಾತ್ ॥

**ಪರಮತೇ ದೋಷಂ ದರ್ಶಯಿತ್ವಾ ಸ್ವಮತೇ ಗುಣಂ ದರ್ಶಯತಿ ಪ್ರಥಮಸೂಕ್ತಗತಾಭಿರ್ನವಭಿರ್ಋಗ್ಭಿರೇತಂ ಯಜಮಾನಂ ಭೂಲೋಕಾದಂತರಿಕ್ಷಲೋಕಮಭಿಲಕ್ಷ್ಯ ನಯತಿ । ದ್ವಿತೀಯಸೂಕ್ತಗತಾಭಿರ್ದಶಭಿರ್ಋಗ್ಭಿರಂತರಿಕ್ಷಲೋಕಾದಮುಂ ಲೋಕಂ ನಾಕಪೃಷ್ಠಾಖ್ಯಂ ಲೋಕಮಭಿಲಕ್ಷ್ಯ ನಯತಿ । ಅಂತರಿಕ್ಷಸ್ಯ ಯಃ ಸಮೀಪವರ್ತೀ ಸ್ವರ್ಗಾಭಾಸೋ ನಾಕಪೃಷ್ಠಾಖ್ಯೋ ಲೋಕಃ ಸ ಚ ಪ್ರವೃದ್ಧಾದಂತರಿಕ್ಷಾಜ್ಜ್ಯೇಷ್ಠೋಽತಿಪ್ರವೃದ್ಧಸ್ತಂ ದಶಭಿಃ ಪ್ರಾಪ್ಯ ತಸ್ಮಾನ್ನಾಕ ಪೃಷ್ಠಾಖ್ಯಾದಮುಷ್ಮಾತ್ ಸ್ವರ್ಗಾಲ್ಲೋಕಾದುಪರಿತನಂ ಬಹುಭೋಗಯುಕ್ತಂ ಸ್ವರ್ಗಂ ಲೋಕಂ ತೃತೀಯಸೂಕ್ತಗತಾಭಿರ್ನವಭಿರ್ಋಗ್ಭಿರ್ಯಜಮಾನಮಭಿವಹತಿ ॥**

**ಸ್ವಮತೇ ಗುಣಾನ್ದರ್ಶಯಿತ್ವಾ ತದ್ರಾಹಿತ್ಯಂ ಪರಮತೇ ದರ್ಶಯತಿ— ಯೇ ಪೂರ್ವಪಕ್ಷಿಣಃ ಪ್ರತಿಸೂಕ್ತಂ ಸಪ್ತಸಂಖ್ಯಾಕಾ ಏವಾನ್ಯಾಹುಸ್ತೇ ಸಂಖ್ಯಾನ್ಯೂನತ್ವಾತ್ಪೂರ್ವೋಕ್ತರೀತ್ಯಾ ಸ್ವರ್ಗಂ ಪ್ರತಿ ಯಜಮಾನಂ ವೋಳ್ಹುಂ ನಾರ್ಹಂತಿ ॥**

**ಸ್ವಮತಂ ನಿಗಮಯತಿ— ಕೇವಲಶಃ ಪ್ರತಿಸೂಕ್ತಂ ಸಂಪೂರ್ಣಮೇವೇತ್ಯರ್ಥಃ ॥**

ದ್ವಿತೀಯ ಕ್ರಮದಲ್ಲಿರುವ ದೋಷವನ್ನು ತೋರಿಸಿ, ಪ್ರಥಮ ಕ್ರಮದ ಗುಣಗಳನ್ನು ಪ್ರಶಂಸಿಸುವರು. ಪ್ರಾತಃಸವನ ಕಾಲದಲ್ಲಿ ಪಠಿಸುವ ಒಂಭತ್ತು ಋಕ್ಕುಗಳುಳ್ಳ ಉನ್ನೀಯಮಾನಸೂಕ್ತವು ಯಜ್ಞಮಾಡುವ ಯಜಮಾನನನ್ನು ಭೂಲೋಕದಿಂದ ಅಂತರಿಕ್ಷ ಲೋಕದವರಿಗೆ ಕೊಂಡೊಯ್ಯುವುದು. ಅನಂತರ ಮಾಧ್ಯಂದಿನಸವನಕಾಲದಲ್ಲಿ ಪಠಿಸುವ ಹತ್ತು ಋಕ್ಕುಗಳುಳ್ಳ ಉನ್ನೀಯಮಾನಸೂಕ್ತವು ಯಜಮಾನನನ್ನು ಅಂತರಿಕ್ಷ ಲೋಕದಿಂದ ಸ್ವರ್ಗದ ತಳಭಾಗವಾದ ನಾಕಪೃಷ್ಠವೆಂಬ ಲೋಕಕ್ಕೆ

ಒಯ್ಯುವುದು. ಈ ನಾಕಪೃಷ್ಠವೆಂಬುದು ಅಂತರಿಕ್ಷದ ಮೇಲುಭಾಗದಲ್ಲಿ ಅತಿ ವಿಸ್ತಾರವಾಗಿಯೂ, ಪ್ರಶಸ್ತವಾಗಿಯೂ ಇರುವುದು. ಇಂತಹ ಶ್ರೇಷ್ಠಲೋಕವನ್ನು ಹತ್ತು ಋಕ್ಕುಗಳಿರುವ ಉನ್ನೀಯಮಾನ ಸೂಕ್ತಪಠನದಿಂದ ಹೋಗಿ ಸೇರಿ, ಅನಂತರ ತೃತೀಯ ಸವನಕಾಲದಲ್ಲಿ ಪಠಿಸುವ ಒಂಭತ್ತು ಋಕ್ಕುಗಳುಳ್ಳ ಉನ್ನೀಯಮಾನಸೂಕ್ತದಿಂದ ಯಜಮಾನನು ನಾಕಪೃಷ್ಠಲೋಕದಿಂದ ಹೊರಟು, ನೇರವಾಗಿ ಸ್ವರ್ಗಲೋಕವನ್ನು ಹೋಗಿ ಸೇರುವನು. ಹಿಂವೆ ಹೇಳಿದ ದ್ವಿತೀಯ ಕ್ರಮವು ಎಂದರೆ, ಉನ್ನೀಯಮಾನಸೂಕ್ತಗಳಲ್ಲಿ ಏಳೇಳು ಋಕ್ಕುಗಳನ್ನು ಪಠಿಸುವ ಕ್ರಮವು ಋಕ್ಸಂಖ್ಯೆಗಳ ನ್ಯೂನತೆಯಿಂದ ಯಜಮಾನನನ್ನು ಸ್ವರ್ಗಕ್ಕೆ ಒಯ್ಯಲು ಅಸಮರ್ಥವಾಗಿರುವುದು. ಎಂದರೆ, ಎರಡನೆಯ ಕ್ರಮ ಅನುಸರಿಸಿದರೆ ಯಜಮಾನನಿಗೆ ಸ್ವರ್ಗ ಪ್ರಾಪ್ತಿಯಾಗುವುದಿಲ್ಲ. ಆದುದರಿಂದ ಯಜಮಾನನಿಗೆ ಸ್ವರ್ಗ ಪ್ರಾಪ್ತಿಯಾಗುವುದಕ್ಕಾಗಿ ಸವನಕಾಲಗಳಲ್ಲಿ ಉನ್ನೀಯಮಾನ ಸೂಕ್ತಗಳನ್ನು ಸಂಪೂರ್ಣವಾಗಿಯೇ ಪಠಿಸಬೇಕು.

ಇಲ್ಲಿಗೆ ಉನ್ನೀಯಮಾನಸೂಕ್ತಪಠನಕ್ರಮವು ಸಮಾಪ್ತವು.

*English Translation*

**(The hymns for lifting the Chamasa (Soma cups) The Prashthita Yajyas of the seven Hotars concluding this ceremony. The two different kinds of Hotars. Explanation of some apparent anomalies in the performances of the minor Hotris· The Jagati hymns for Indra. The eoncluding verses of the minor Hotri-priests. On a peculiarily in the Shastras of the Achhavaka).**

When at the morning libation the Soma cups are lifted and filled, he (the Maitravaruna) recites the hymn, a tva vahanu harayah (1, 16) the several verses of which contain the words, vrishan (male), pita (drunk), suta (squeeze, mad (drunk) are complete in their form and are addressed to Indra, for the sacrifice is Indra's. He repeats Gayatris; for Gayatri is the metre of the morning libation. At the morning libation he recites nine verses only, one less than ten. For the semen is poured into a place made narrow (nyuna). At the midday libation he repeats ten verses; for the semen which was poured in a narrow place grows very large, after having reached the centre of the woman's body. At the evening libation he repeats nine verses, one less than ten; for from a narrow place represented by the third libation men are born. If he recites these hymns complete, then he makes the sacrificer bring forth the embryo of his spiritual body begotten in the sacrifice, which is the womb of the gods.

Some recite every time only seven verses at the morning, midday and evening libations, asserting that there must be as many Puronuvakyas as there are Yajyas. Seven (Hotri priests) having their faces turned towards the fire recite the Yajyas and pronounce Vaushat! Now they assert that those seven verses are the Puronuvakyas of these seven Yajyas; but the Hotar ought not to do so to recite only seven verses. For in this way they spoil the semen of the sacrificer and consequently the sacrificer himself.

The Maitravaruna carries in this way the sacrificer for the sacrificer is the hymn, by means of nine verses from this world to the airy region; but by means of ten he carries him further on to that heaven world; for the airy region is the oldest; from that world he takes him by means of nine verses up to the celestial world. Those who recite only seven verses do not wish to raise the Sacrificer to heaven. Therefore the hymns are to be recited complete only.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಅಷ್ಟವಿಂಶಾಧ್ಯಾಯಸ್ಯ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವಾದುದು.



## ಅಥ ಅಷ್ಟವಿಂಶಾಧ್ಯಾಯೇ ದ್ವಿತೀಯಃ ಖಂಡಃ

### ಇಪ್ಪತ್ತೆಂಟನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ಪ್ರಾತಃಸವನಕಾಲದಲ್ಲಿ ಸಪ್ತಹೋತೃಗಳು ಪಠಿಸಬೇಕಾದ ಮಂತ್ರಗಳ ವಿವರಣೆಯು]



ಅಥಾಹ ಯದೈಂದ್ರೋ ವೈ ಯಜ್ಞೋಽಥ ಕಸ್ಮಾದ್ದ್ವಾವೇವ ಪ್ರಾತಃ-ಸವನೇ ಪ್ರಸ್ಥಿತಾನಾಂ ಪ್ರತ್ಯಕ್ಷಾದೈಂದ್ರೀಭ್ಯಾಂ ಯಜತೋ ಹೋತಾ ಚೈವ ಬ್ರಾಹ್ಮಣಾಚ್ಛಂಸೀ ಚೇದಂ ತೇ ಸೋಮ್ಯಂ ಮಧ್ವಿತಿ ಹೋತಾ ಯಜತೀಂದ್ರ ತ್ವಾ ವೃಷಭಂ ವಯಮಿತಿ ಬ್ರಾಹ್ಮಣಾಚ್ಛಂಸೀ ನಾನಾದೇವತ್ಯಾಭಿರಿತರೇ ಕಥಂ ತೇಷಾ-ಮೈಂದ್ರ್ಯೋ ಭವಂತೀತಿ ॥

ಅಥ ಪ್ರಸ್ಥಿತಯಾಜ್ಯಾವಿಷಯಂ ಚೋದ್ಯಮುದ್ಭಾವಯತಿ—ಅಥೋಽನ್ನಿಯಮಾನ-ಸೂಕ್ತನಿರ್ಣಯಾನಂತರಂ ಕಶ್ಚಿದ್ಬ್ರಹ್ಮವಾದೀ ಚೋದ್ಯಮಾಹ । ಯಸ್ಮಾತ್ಕಾರಣಾದ್ಯಜ್ಞ

ಐಂದ್ರೋ ವಾ ಇಂದ್ರದೇವತಾಕ ಏವ । ತಥೈವಂಸತಿ ಸರ್ವೇಷಾಮೃತ್ವಿಜಾಮಿಂದ್ರದೇವತಾಕಾ ಏವ ಯಾಜ್ಯಾ ಅಪೇಕ್ಷಿತಾಃ । ಅತ್ರ ತು ಪ್ರಸ್ಥಿತಸೋಮಾನಾಂ ಯಾಗೇ ಪ್ರಾತಃಸವನಕಾಲೀನೇ ಹೋತೃಬ್ರಾಹ್ಮಣಾಚ್ಛಂಸಿನೌ ದ್ವಾವೇವ ಪ್ರತ್ಯಕ್ಷಾ ಚೋದ್ಯೇತ್ರಪ್ರತ್ಯಕ್ಷೇಣ ವಾ ಶ್ರೂಯಮಾಣಾಭ್ಯಾಮಿಂದ್ರದೇವತಾಕಾಭ್ಯಾಮೃಗ್ಭ್ಯಾಂ ಯಜತೋ ನ ತ್ವಿತರೇ । ಇದಂ ತೇ ಸೋಮ್ಯಮಿತಿ ಹೋತುರ್ಯಾಜ್ಯಾ । ತಸ್ಯಾಸ್ತೃತೀಯಪಾದೇ ಜುಷಾಣ ಇಂದ್ರೇತಿ ಪ್ರತ್ಯಕ್ಷ ಇವೇಂದ್ರಶಬ್ದಃ ಶ್ರೂಯತೇ । ಇಂದ್ರ ತ್ವಾ ವೃಷಭಂ ವಯಮಿತಿ ಬ್ರಾಹ್ಮಣಾಚ್ಛಂಸಿನೋ ಯಾಜ್ಯಾ । ತತ್ರ ಸ್ಪಷ್ಟ ಏವೇಂದ್ರಶಬ್ದಃ । ಇತರೇ ಪಂಚರ್ತ್ವಿಜೋ ನಾನಾದೇವತ್ಯಾಭಿರ್ಋಗ್ಭಿರ್ಯಜಂತಿ । ತೇಷಾಮೃತ್ವಿಜಾಂ ತಾ ಋಚಃ ಕಥಮಿಂದ್ರದೇವತಾಕಾ ಭವಂತೀತಿ ಚೋದ್ಯಮ್ ॥

ಈಗ ಪ್ರಾತಃಸವನಕಾಲದಲ್ಲಿ ಸಪ್ತಹೋತೃಗಳು ಪಠಿಸುವ ಪ್ರಸ್ಥಿತ ಯಾಜ್ಯಾಮಂತ್ರಗಳ ಸ್ವರೂಪವನ್ನು ವಿವರಿಸುವರು. ಉನ್ನೀಯಮಾನಸೂಕ್ತಪಠನಾನಂತರ ಸಪ್ತ ಋತ್ವಿಜರು ಪ್ರಸ್ಥಿತ ಯಾಜ್ಯಾಮಂತ್ರಗಳನ್ನು ಪಠಿಸುವರು. ಹಿಂದೆ ಹೇಳಿರುವಂತೆ **ಯಜ್ಞೋ ವಾ ಐಂದ್ರಃ** ಎಂದರೆ ಯಜ್ಞವು ಇಂದ್ರದೇವತಾಕವಾಗಿರುವುದು. ಆದುದರಿಂದ ಸವನಕಾಲಗಳಲ್ಲಿ ಇಂದ್ರದೇವತಾಕವಾದ ಮಂತ್ರಗಳನ್ನು ಪಠಿಸಬೇಕಾದುದು ನ್ಯಾಯವು. ಆದರೆ ಈಗ ಸಪ್ತಹೋತೃಗಳಲ್ಲಿ ಹೋತೃ ಮತ್ತು ಬ್ರಾಹ್ಮಣಾಚ್ಛಂಸೀ ಎಂಬ ಇಬ್ಬರು ಋತ್ವಿಕ್ಕುಗಳುಮಾತ್ರ ಪಠಿಸುವ ಮಂತ್ರಗಳು ಇಂದ್ರದೇವತಾಕವಾಗಿರುವವು. ಉಳಿದ ಐದುಜನ ಋತ್ವಿಜರು ಪಠಿಸುವ ಮಂತ್ರಗಳು ಇಂದ್ರದೇವತಾಕವಾಗಿರುವುದಿಲ್ಲ. ಇತರ ದೇವತಾಕವಾಗಿರುವುದು. ಹೇಗೆಂದರೆ ಹೋತೃವು **ಇದಂ ತೇ ಸೋಮ್ಯಂ** (ಋ. ಸಂ. ೮-೬೫-೮) ಎಂಬ ಋಕ್ಕನ್ನು ಪಠಿಸುವನು. ಇದು ಹೋತೃವು ಪಠಿಸುವ ಯಾಜ್ಯಾಮಂತ್ರವು. ಈ ಋಕ್ಕಿನ ಮೂರನೆಯ ಪಾದದಲ್ಲಿ ಇರುವ **ಜುಷಾಣ ಇಂದ್ರ** ಎಂಬ ಶಬ್ದಗಳು ಪ್ರತ್ಯಕ್ಷವಾಗಿ ಇಂದ್ರನನ್ನು ಸಂಬೋಧಿಸಿ ಸ್ತುತಿಸುವವು. ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪಠಿಸುವ **ಇಂದ್ರ ತ್ವಾ ವೃಷಭಂ** (ಋ. ಸಂ. ೩-೪೦-೧) ಎಂಬ ಯಾಜ್ಯಾಮಂತ್ರದಲ್ಲಿ ಪ್ರಥಮಪಾದದಲ್ಲಿಯೇ ಇಂದ್ರ ಎಂಬ ಶಬ್ದವು ಸ್ಪಷ್ಟವಾಗಿ ಪಠಿತವಾಗಿರುವುದು. ಆದುದರಿಂದ ಹೋತ ಮತ್ತು ಬ್ರಾಹ್ಮಣಾಚ್ಛಂಸೀ ಎಂಬ ಇಬ್ಬರು ಋತ್ವಿಜರು ಪಠಿಸುವ ಯಾಜ್ಯಾಮಂತ್ರಗಳು ಇಂದ್ರದೇವತಾಕವೆಂದು ನಿಶ್ಚಯವಾಯಿತು. ಆದರೆ ಇತರ ಐದುಮಂದಿ ಋತ್ವಿಜರು ಪಠಿಸುವ ಐದು ಯಾಜ್ಯಾಮಂತ್ರಗಳು ನಾನಾ ದೇವತಾಕವಾಗಿರುವವು. ಇಂದ್ರದೇವತಾಕವಾಗಿರುವುದಿಲ್ಲ. ಇದು ವಿಚಿತ್ರವಲ್ಲವೇ ?

**ಮಿತ್ರಂ ವಯಂ ಹವಾಮಹ ಇತಿ ಮೈತ್ರಾವರುಣೋ ಯಜತಿ ವರುಣಂ ಸೋಮಪೀತಯ ಇತಿ ಯದ್ವೈ ಕಿಂಚ ಪೀತವತ್ಪದಂ ತದೈಂದ್ರಂ ರೂಪಂ ತೇನೇಂದ್ರಂ ಪ್ರೀಣಾತಿ ।**

ತತ್ರ ಪಂಚಾನಾಮೃತ್ವಿಜಾಂ ಯಾಜ್ಯಾಸ್ವಿಂದ್ರದೇವತಾಕತ್ವಂ ಸಂಪಾದನೀಯಂ ತತ್ರೈಕಸ್ಯಾಂ ಯಾಜ್ಯಾಯಾಂ ತತ್ಸಂಪಾದಯತಿ—ಮೈತ್ರಾವರುಣಸ್ಯ ಮಿತ್ರಂ ವಯಮಿತಿ ಯೇಯಂ ಯಾಜ್ಯಾ ತಸ್ಯಾಂ ವರುಣಮಿತ್ಯಾದಿಕಂ ದ್ವಿತೀಯಪಾದೇ ಪೀತವತ್ಪಿಬತಿಧಾತುಯುಕ್ತಂ ಯತ್ಕಿಂಚಿತ್ಪದಮಸ್ತಿ ತದಿಂದ್ರಸಂಬಂಧಿ ರೂಪಮಿಂದ್ರಸ್ಯ ಸೋಮಪಾನಪ್ರಿಯತ್ವಾತ್ । ತೇನ ಹಿ ಪೀತವತ್ಪದೇನೇಂದ್ರಂ ಪರಿತೋಷಯತಿ ॥

ಎಂದರೆ ಅದಕ್ಕೆ ಸಮಾಧಾನವನ್ನು ಹೇಳುವರು. ಇತರ ಐದುಮಂದಿ ಋತ್ವಿಜರು ಪಠಿಸುವ ಋಕ್ಕುಗಳು ಇಂದ್ರದೇವತಾಕವಲ್ಲದೆ ಇತರ ದೇವತಾಕವಾಗಿದ್ದರೂ ಅವು ಇಂದ್ರದೇವತಾಕವೆಂದೇ ಪರಿಗಣಿಸಲು ಕಾರಣವಿರುವುದು. ಹೇಗೆಂದರೆ ಮೈತ್ರಾವರುಣನು ಪಠಿಸುವ—ಮಿತ್ರಂ ವಯಂ ಹವಾಮಹೇ (ಋ. ಸಂ. ೧-೨೩-೪) ಎಂಬ ಯಾಜ್ಯಾಮಂತ್ರದಲ್ಲಿ **ವರುಣಂ ಸೋಮಪೀತಯೇ** ಎಂಬ ಶಬ್ದಗಳಿರುವವು. ಇಂದ್ರನಿಗೆ ಸೋಮಪಾನದಲ್ಲಿ ಬಹಳ ಆಸಕ್ತಿ ಇರುವುದು. ಸೋಮಪಾನಾರ್ಥವಾಗಿ ಉಪಯೋಗಿಸಲ್ಪಡುವ ಶಬ್ದಗಳು ಇಂದ್ರನಿಗೆ ಪ್ರೀತಿಯನ್ನುಂಟುಮಾಡುವುದರಿಂದ ಆ ಶಬ್ದಗಳ ಪ್ರಯೋಗವಿರುವ ಋಕ್ಕುಗಳು ಇಂದ್ರದೇವತಾಕವೆಂದೇ ಪರಿಗಣಿಸಬಹುದು. ಪ್ರಕೃತ ಋಕ್ಕಿನಲ್ಲಿ ಸೋಮಪೀತಯೇ ಎಂಬ ಪದಪ್ರಯೋಗವಿರುವುದರಿಂದ ಈ ಮಂತ್ರವು ಇಂದ್ರನಿಗೆ ಪ್ರೀತಿಯನ್ನುಂಟುಮಾಡುವುದಾಗಿರುವುದು. ಇಂದ್ರನಿಗೆ ಪ್ರೀತಿದಾಯಕವಾದ ಮಂತ್ರವು ಇಂದ್ರದೇವತಾಕವೆಂದೇ ಭಾವಿಸಬೇಕು.

**ಮರುತೋ ಯಸ್ಯ ಹಿ ಕ್ಷಯ ಇತಿ ಪೋತಾ ಯಜತಿ ಸ ಸುಗೋಪಾತಮೋ ಜನ ಇತೀಂದ್ರೋ ವೈ ಗೋಪಾಸ್ತದೈಂದ್ರಂ ರೂಪಂ ತೇನೇಂದ್ರಂ ಪ್ರೀಣಾತಿ ।**

**ಪೋತುರ್ಯಾಜ್ಯಾಯಾ ಐಂದ್ರತ್ವಂ ದರ್ಶಯತಿ—ಮರುತ ಇತ್ಯಸ್ಯಾಂ ಯಾಜ್ಯಾಯಾಂ ತೃತೀಯಪಾದೇ ಗೋಪಾಶಬ್ದೇನೇಂದ್ರೋಽಭಿಧೀಯತೇ । ಗೋಪ್ತೃತ್ವಂ ರಕ್ಷಕತ್ವಮಿಂದ್ರಸಂಬಂಧಿ ರೂಪಂ ತೇನೇಂದ್ರಸ್ಯ ಪ್ರೀತಿಃ ॥**

ಪೋತೃವೆಂಬ ಋತ್ವಿಜನು ಮರುತೋ ಯಸ್ಯ ಹಿ ಕ್ಷಯೇ (ಋ. ಸಂ. ೧-೮೬-೧) ಎಂಬ ಯಾಜ್ಯಾಮಂತ್ರವನ್ನು ಪಠಿಸುವನು. ಈ ಮಂತ್ರದ ಮೂರನೆಯ ಪಾದದಲ್ಲಿ ಗೋಪಾ ಎಂಬ ಶಬ್ದವಿರುವುದು. ಗೋಪ್ತೃತ್ವವು ಎಂದರೆ ರಕ್ಷಿಸುವುದು ಸರ್ವಸಮರ್ಥನಾದ ಇಂದ್ರನಿಗೆ ಸಂಬಂಧಪಟ್ಟಿರುವುದರಿಂದ ಈ ಋಕ್ಕಿನ ಪಠನದಿಂದ ಇಂದ್ರನಿಗೆ ಪ್ರೀತಿಯಾಗುವುದು.

**ಅಗ್ನೇ ಪತ್ನೀರಿಹಾವಹೇತಿ ನೇಷ್ಟಾ ಯಜತಿ ತ್ವಷ್ಟಾರಂ ಸೋಮಪೀತಯ ಇತೀಂದ್ರೋ ವೈ ತ್ವಷ್ಟಾ ತದೈಂದ್ರಂ ರೂಪಂ ತೇನೇಂದ್ರಂ ಪ್ರೀಣಾತಿ ।**

**ನೇಷ್ಟುರ್ಯಾಜ್ಯಾಯಾ ಐಂದ್ರತ್ವಂ ಸಂಪಾದಯತಿ—ಅಗ್ನೇ ಪತ್ನೀರಿತ್ಯಸ್ಯಾ ಯಾಜ್ಯಾಯಾಸ್ತೃತೀಯಪಾದೇ ಯಸ್ತ್ವಷ್ಟಾ ಸ ಏವೇಂದ್ರಃ । ಶತ್ರೂಣಾಂ ತನೂಕರಣಾದಿಂದ್ರಸ್ಯ ತ್ವಷ್ಟೃತ್ವಮ್ ॥**

ನೇಷ್ಟೃವೆಂಬ ಋತ್ವಿಜನು **ಅಗ್ನೇ ಪತ್ನೀರಿಹಾವಹ** (ಋ. ಸಂ. ೧-೨೨-೯) ಎಂಬ ಯಾಜ್ಯಾಮಂತ್ರವನ್ನು ಪಠಿಸುವನು. ಈ ಋಕ್ಕಿನಲ್ಲಿ ತ್ವಷ್ಟಾರಂ ಸೋಮಪೀತಯೇ ಎಂಬ ಶಬ್ದಗಳ ಪ್ರಯೋಗವಿರುವುದು. ಇಲ್ಲಿ ತ್ವಷ್ಟಾ ಎಂದರೆ **ಶತ್ರೂಣಾಂ** ತನೂಕರಣಾದಿಂದ್ರಸ್ಯ ತ್ವಷ್ಟೃತ್ವಂ ಶತ್ರುಗಳನ್ನು ಲಕ್ಷಿಸದೆ ಅವರನ್ನು ಪರಾಭವಗೊಳಿಸುವವನಾದುದರಿಂದ ಇಂದ್ರನು ತ್ವಷ್ಟೃಶಬ್ದವಾಚ್ಯನು. ಆದುದರಿಂದ ಈ ಋಕ್ಕಿನಲ್ಲಿ ಇಂದ್ರನನ್ನು ಪ್ರತಿಪಾದಿಸಿದಂತಾಯಿತು.

ಉಕ್ಷನ್ನಾಯ ವಶನ್ನಾಯೇತ್ಯಾಗ್ನೀಧ್ರೋ ಯಜತಿ ಸೋಮಪೃಷ್ಠಾಯ ವೇಧಸ ಇತೀಂದ್ರೋ ವೈ ವೇಧಾಸ್ತದೈಂದ್ರಂ ರೂಪಂ ತೇನೇಂದ್ರಂ ಪ್ರೀಣಾತಿ ।

ಆಗ್ನೀಧ್ರಸ್ಯ ಯಾಜ್ಯಾಯಾ ಐಂದ್ರತ್ವಂ ಸಂಪಾದಯತಿ ಉಕ್ಷಾನ್ನಾಯೇತಿ ಯಾಜ್ಯಾಯಾ ದ್ವಿತೀಯಪಾದೇ ಯೋ ವೇಧಾಃ ಸ ಏವೇಂದ್ರ ಇಂದ್ರಸ್ಯ ಜಗದ್ವ್ಯವಸ್ಥಾವಿಧಾಯಕತ್ವೇನ ವೇಧಃ ಶಬ್ದವಾಚ್ಯತ್ವಾತ್ ॥

ಆಗ್ನೀಧ್ರನೆಂಬ ಋತ್ವಿಜನು ಪಠಿಸಿ ಹೋಮಮಾಡುವ— **ಉಕ್ಷಾನ್ನಾಯ ವಶಾನ್ನಾಯ** (ಋ. ಸಂ. ೮-೪೩-೧೧) ಎಂಬ ಯಾಜ್ಯಾಮಂತ್ರದ ಎರಡನೆಯ ಪಾದದಲ್ಲಿ **ವೇಧಸೇ** ಎಂದು ವೇಧಶ್ಶಬ್ದವು ಪಠಿತವಾಗುವುದು. ವೇಧಶ್ಶಬ್ದಕ್ಕೆ ಜಗದ್ವ್ಯವಸ್ಥೆಯನ್ನು ವಿಧಾಯಕಮಾಡುವವನು ಎಂದರ್ಥವಿರುವುದು. ಜಗದ್ವ್ಯವಸ್ಥಾವಿಧಾಯಕನಾದುದರಿಂದ ಇಂದ್ರನು ವೇಧಃಶಬ್ದವಾಚ್ಯನಾಗಿರುವನು. ಆದುದರಿಂದ ಈ ಋಕ್ಕು ಇಂದ್ರನಿಗೆ ಪ್ರೀತಿದಾಯಕವಾದುದು.

ಪ್ರಾತರ್ಯಾವಭಿರಾಗತಂ ದೇವೇಭಿರ್ಜೇನ್ಯಾವಾಸೂ । ಇಂದ್ರಾಗ್ನೀ ಸೋಮಪೀತಯ ಇತಿ ಸ್ವಯಂ ಸಮೃದ್ಧಾಚ್ಛಾವಾಕಸ್ಯ ।

ಅಚ್ಛಾವಾಕಸ್ಯ ಯಾಜ್ಯಾಯಾ ಐಂದ್ರತ್ವಂ ಸಂಪಾದಯತಿ—ಹೇ ಇಂದ್ರಾಗ್ನೀ ಜೇನ್ಯಾವಸೂ ಜೇನ್ಯಂ ಜೇತವ್ಯಂ ವಸು ಧನಂ ಯಯೋಸ್ತೌ ತಾದೃಶೌ ಭೂತ್ವಾ ಪ್ರಾತರ್ಯಾವಭಿಃ ಪ್ರಾತಃಸವನಗಾಮಿಭಿರ್ದೇವೈಃ ಸಹ ಸೋಮಪೀತಯೇ ಸೋಮಪಾನಾರ್ಥಮಾಗತಮಾಗಚ್ಛತಮ್ । ಅಸ್ಯಾಮೃಚೀಂದ್ರಾಗ್ನೀ(ಗ್ನಿ) ಶ್ರವಣೇऽಪೀಂದ್ರಶಬ್ದಸ್ಯ ಪ್ರತ್ಯಕ್ಷಸ್ಯ ವಿದ್ಯಮಾನತ್ವಾತ್ಸ್ವಯಮೇವೇಂದ್ರತ್ವಾಯ ಸಮೃದ್ಧಾ ಸಂಪೂರ್ಣಾ ನ ತ್ವೈಂದ್ರತ್ವಂ ಸಂಪಾದನೀಯಮಸ್ತಿ ॥

ಅಚ್ಛಾವಾಕನೆಂಬ ಋತ್ವಿಜನು **ಪ್ರಾತರ್ಯಾವಭಿರಾಗತಂ** (ಋ. ಸಂ. ೮-೩೮-೭) ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಿ ಹೋಮಮಾಡುವನು. ಈ ಋಕ್ಕಿನ ಮುಖ್ಯಾಭಿಪ್ರಾಯವು—ಎಲೈ ಇಂದ್ರ ಮತ್ತು ಅಗ್ನಿ ಎಂಬ ದೇವತೆಗಳೇ, ನೀವು ಶತ್ರುಗಳನ್ನು ಜಯಿಸಿ ಅವರಲ್ಲಿರುವ ಧನಗಳನ್ನು ಪಡೆದಿರುವವರು. ಇಂತಹ ನೀವು ಪ್ರಾತಃಕಾಲದಲ್ಲಿ ಪ್ರಾತಃಸವನವನ್ನುದ್ದೇಶಿಸಿ ಯಜ್ಞಭೂಮಿಗೆ ಬರುವ ದೇವತೆಗಳೊಡನೆ ಕೂಡಿಕೊಂಡು ಸೋಮಪಾನಾರ್ಥವಾಗಿ ಇಲ್ಲಿಗೆ ಬನ್ನಿ—ಎಂದಿರುವುದು. ಈ ಋಕ್ಕಿನಲ್ಲಿ ಇಂದ್ರಾಗ್ನೀ ಎಂಬ ಪ್ರಯೋಗವಿದ್ದು ಅಗ್ನಿ ಮತ್ತು ಇಂದ್ರ ಎಂಬ ದೇವತೆಗಳಿಬ್ಬರನ್ನೂ ನಿರ್ದೇಶಿಸಿದ್ದರೂ ಪ್ರತ್ಯಕ್ಷವಾಗಿ ಇಂದ್ರಶಬ್ದಪ್ರಯೋಗವಿರುವುದರಿಂದ ಈ ಋಕ್ಕು ಇಂದ್ರನಿಗೆ ಸಂತೋಷಜನಕವಾಗಿರುವುದು ಎಂದಭಿಪ್ರಾಯವು.

ಏತಮು ಹೈತಾ ಐಂದ್ರ್ಯೋ ಭವಂತಿ ಯನ್ನಾನಾದೇವತ್ಯಾಸ್ತೇನಾನ್ಯಾ ದೇವತಾಃ ಪ್ರೀಣಾತಿ । ಯದು ಗಾಯತ್ರ್ಯಸ್ತೇನಾಗ್ನೇಯ್ಯಃ ಏತದು ಹೈತಾಭಿಸ್ತ್ರಯಮುಪಾಪ್ನೋತಿ ॥

ಋಚಾಂ ಸಂಪಾದಿತಮೈಂದ್ರತ್ವಂ ನಿಗಮಯತಿ—

ತಾಸ್ವೃಕ್ಷು ದೇವತಾಂತರಪ್ರೀತಿಂ ದರ್ಶಯತಿ— ಮಿತ್ರಾವರುಣೌ ಮರುತೋಽಗ್ನಿರ್ವೇಧಾ ಇಂದ್ರಾಗ್ನೀ ಇತ್ಯೇತಾಭಿರ್ನಾನಾದೇವತಾಭಿರ್ಯುಕ್ತಾ ಋಚ ಇತಿ ಯದಸ್ತಿ ತೇನೇಂದ್ರವ್ಯತಿರಿಕ್ತಾ ದೇವತಾಸ್ತೋಷಯತಿ ॥

ತತ್ರತ್ಯಂ ಛಂದಃ ಪ್ರಶಂಸತಿ— ಅಗ್ನಿಗಾಯತ್ರ್ಯೋಃ ಪ್ರಜಾಪತಿಮುಖಜತ್ವಸಂಬಂಧಾದ್ಗಾಯತ್ರೀಛಂದಸಾಂ ತಾಸಾಮಗ್ನಿದೇವತಾಕತ್ವಂ ಸಂಪದ್ಯತೇ ॥

ಉಕ್ತಾಂ ಪ್ರಶಂಸಾಂ ನಿಗಮಯತಿ— ಏತಾಭಿರ್ಋಗ್ಭಿರೇತದು ಹ ಪೂರ್ವೋಕ್ತಮೇವ ತ್ರಯಂ ತ್ರಿವಿಧದೇವತಾಸಂಬಂಧತ್ವಂ 'ಪ್ರಾಪ್ನೋತಿ' ತತ್ರ ತತ್ರ ಪ್ರತೀಯಮಾನನಾನಾವಿಧದೇವತಾಕತ್ವಂ ಪೂರ್ವೋಕ್ತರೀತ್ಯಾ ಸಂಪಾದಿತಮೈಂದ್ರತ್ವಂ ಗಾಯತ್ರೀದ್ವಾರೇಣಾಗ್ನೇಯತ್ವಂ ಚೇತಿ ತ್ರಯಂ ವೇದಿತವ್ಯಮ್ ॥

ಈರೀತಿಯಾಗಿ ಸಪ್ತ ಋತ್ವಿಕ್ಕುಗಳು ಪಠಿಸುವ ಯಾಜ್ಯಾಮಂತ್ರಗಳಿಗೆ ಇಂದ್ರತ್ವಸಮೃದ್ಧಿಯನ್ನು ನಿರೂಪಿಸಿದಂತಾಯಿತು. ಇದಲ್ಲದೆ ಈ ಋಕ್ಕುಗಳಲ್ಲಿ ಪ್ರತಿಪಾದ್ಯರಾದ ಮಿತ್ರಾವರುಣರು, ಮರುತ್ತುಗಳು, ಅಗ್ನಿ, ವೇಧಾಃ, ಇಂದ್ರಾಗ್ನೀ ಎಂಬ ದೇವತೆಗಳನ್ನೂ ಸಂತೋಷಪಡಿಸಿದಂತಾಯಿತು. ಈ ಋಕ್ಕುಗಳೆಲ್ಲವೂ ಗಾಯತ್ರೀಛಂದಸ್ಕಗಳಾಗಿರುವುದರಿಂದ ಇವು ಅಗ್ನಿಗೆ ಸಂಬಂಧಪಟ್ಟಿರುವವು. ಹೇಗೆಂದರೆ—ಅಗ್ನಿ ಮತ್ತು ಗಾಯತ್ರಿಯು ಇಬ್ಬರೂ ಪ್ರಜಾಪತಿಮುಖದಿಂದಲೇ ಉತ್ಪನ್ನರಾಗಿರುವ ಕಾರಣ ಗಾಯತ್ರೀಛಂದಸ್ಸಿನ ಋಕ್ಕುಗಳಿಗೆಲ್ಲಾ ಪರೋಕ್ಷವಾಗಿ ಅಗ್ನಿಯ ಸಂಬಧವಿದ್ದೇ ಇರುವುದು. ಆದುದರಿಂದ ಈ ಯಾಜ್ಯಾಮಂತ್ರಗಳಲ್ಲಿ ನಾನಾವಿಧ ದೇವತೆಗಳ ಪ್ರತಿಪಾದನೆಯೂ ಇಂದ್ರದೇವತಾಸಮೃದ್ಧಿಯೂ (ಇಂದ್ರನಿಗೆ ಸಂಬಂಧಿಸಿದ ವರ್ಣನೆಯೂ), ಗಾಯತ್ರೀಛಂದಸ್ಸಿನ ಮೂಲಕ ಅಗ್ನಿಸಂಬಂಧವೂ ಎಂಬ ಮೂರುವಿಧ ಸಂಬಂಧಗಳನ್ನೂ ವಿವರಿಸಿದಂತಾಯಿತು.

ಇಲ್ಲಿಗೆ ಪ್ರಾತಃಸವನ ವಿವರಣೆಯು ಸಮಾಪ್ತವು.

*English Translation*

**(On the Prasthita Yajyas of the Hotars at the morning libation)**

Some one (a theologian) has asked, when the sacrifice is Indra's, why do only two, the Hotar and Brahmanachhamsi, at the morning libation, for the Soma drops which are in readiness, repeat Yajyas where Indra's very name is mentioned, the Yajya of the Hotar being idam te somvam madhu (8, 54, 8), that of the Brahmanachhamsi, indra tva vrishabham vayam (3, 40, 1)?

When the other priests repeat verses addressed to different deities, how do they concernIndra? For the Yajya of the Maitravaruna is mitram vayam havamahe (1, 23, 4), "We invoke Mitra;" but in its words varunam somapitaye, i.e. "we call Varuna to the Soma beverage; 2 there is an allusion to Indra; for whatever word refers to "drinking," hints at Indra and plesses him.

The Yajyas of the Potar is, Maruto yasya hi kshya (1, 86, 1); its words sa sugopatamo janah, i.e. "he is the best protector," allude to Indra; for Indra is the gopa, which is a characteristic of Indra. Thus he plesses Indra.

The Yajya of the Neshtar is, agne patnir iha vaha (1, 22, 9); in its words, tvastaram somapitaye, there is an allusion to Indra; for Indra is Tyashtar, which is a characteristic of Indra. Thus he pleases him.

The Yajya of the Agnidhra is, Ukshannaya (8, 43, 11); in its words Soma prishthaya vedhase, there is an allusion to Indra; for Indra is Vedhas (striker beater), which is a characteristic of Indra. Thus he pleases him.

The verse of the Acchavaka, which is directly addressed to Indra, is complete, viz., prataryavabhir (8, 38, 7). for in the last part of it there is the term Indragni. Thus all these verses refer to Indra. Though there are different deities mentioned in them such as Mitra, Varuna &c. the sacrificer does not satisfy other deities alone. The verses being in the Gayatri metre and this being sacred to Agni, the sacrificer gains, by means of these verses, the favour of three deities, i.e. Indra, the nan devatas or different deities and Agni.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಅಷ್ಟವಿಂಶಾಧ್ಯಾಯಸ್ಯ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತಎಂಟನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು
ಸಮಾಪ್ತವಾದುದು.



# ಅಥ ಅಷ್ಟಾವಿಂಶಾಧ್ಯಾಯೇ ತೃತೀಯಃ ಖಂಡಃ

## ಇಪ್ಪತ್ತೆಂಟನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



## ಮಾಧ್ಯಂದಿನಸವನ ವಿವರಣೆಯು



ಮಾಧ್ಯಂದಿನಸವನದಲ್ಲಿ ಪ್ರೈಷಮಂತ್ರದಿಂದ ಉನ್ನೀಯಮಾನಸೂಕ್ತವನ್ನು ಪಠಿಸಬೇಕೆಂದು ನಿರ್ದೇಶಿಸಿದಕೂಡಲೇ ಮೈತ್ರಾವರುಣನು—**ಅಸಾವಿ ದೇವಂ ಗೋಋಜೀಕಮಂಧಃ** (ಋ. ಸಂ. ೭-೨೧ನೆಯ ಸೂಕ್ತ) ಎಂಬ ಸೂಕ್ತವನ್ನು ಪಠಿಸುವನು.

**ಅಸಾವಿ ದೇವಂ ಗೋಋಜೀಕಮಂಧ ಇತಿ ಮಧ್ಯಂದಿನ ಉನ್ನೀಯಮಾನೇಭ್ಯೋಽನ್ವಾಹ ವೃಷಣ್ವತೀಃ ಸುತವತೀರ್ಮದ್ವತೀಃ ರೂಪಸಮೃದ್ಧಾಃ ।**

**ಅಥ ಮಾಧ್ಯಂದಿನ ಉನ್ನೀಯಮಾನಸೂಕ್ತಂ ವಿಧತ್ತೇ—ಮಾಧ್ಯಂದಿನೇ ಸವನೇಽಧ್ವರ್ಯುಣಾ ಪ್ರೇಷಿತೋಽಸಾವಿ ದೇವಮಿತ್ಯಾದಿಕಂ ಸೂಕ್ತಮನುಬ್ರೂಯಾತ್ । ತತ್ರತ್ಯಾ ಋಚೋ ವೃಷಪೀತಸುತಮದಶಬ್ದೋಪೇತಾಃ ಪೂರ್ವತ್ರ ದಶ ಮಧ್ಯಂದಿನೇಽನ್ವಾಹೇತಿ ಸಂಖ್ಯೈವೋಕ್ತಾ ನ ತು ಸೂಕ್ತಂ ದರ್ಶಿತಂ । ಅತ್ರತ್ವಸಾವಿ ದೇವಮಿತಿ ಸೂಕ್ತಂ ಪ್ರದರ್ಶ್ಯತೇ । ಅಸ್ಯ ಸೂಕ್ತಸ್ಯ ದ್ವಿತೀಯಸ್ಯಾಮೃಚಿ ವೃಷಣೋ ನೃಷಾಚ ಇತಿ ವೃಷಣ್ವಚ್ಛಬ್ದಃ ಶ್ರುತಸ್ತೃತೀಯಸ್ಯಾಮೃಚಿರಥ್ಯೋ ನ ಧೇನೇತಿ ಧೇನಾಶಬ್ದಃ ಪಿಬತಿಧಾತ್ವರ್ಥಃ । ತೇನ ಪೀತವತ್ತ್ವಂ । ಧೇಟ್ ಪಾನೇ ಇತಿ ಹಿ ಧಾತುಃ । ಅಸಾವೀತಿ ಸುನೋತಿಧಾತೋಃ ಶ್ರೂಯಮಾಣತ್ವಾತ್ಸುತವತ್ತ್ವಮ್ । ಪ್ರಥಮಾಯಾ ಋಚೋಽವಸಾನೇಂಧಸೋ ಮದೇಷ್ವಿತಿ ಮದ್ವತ್ತ್ವಂ ಶ್ರುತಮ್ । ರೂಪಸಮೃದ್ಧತ್ವಂ ಪೂರ್ವವದ್ಯೋಜ್ಯಮ್ ॥**

ಈ ಸೂಕ್ತದಲ್ಲಿ ಹಿಂದೆ ಹೇಳಿದಂತೆ ಹತ್ತು ಋಕ್ಕುಗಳಿರುವುವು. ಈ ಸೂಕ್ತದಲ್ಲಿರುವ ಋಕ್ಕುಗಳಲ್ಲಿ ವೃಷ, ಪೀತ, ಸುತ, ಮದ ಎಂಬ ಸೋಮಪಾನಾರ್ಥವಾಗಿ ಉಪಯೋಗಿಸಲ್ಪಡುವ ಶಬ್ದಗಳಿರುವುವು. ಹೇಗೆಂದರೆ ಈ ಸೂಕ್ತದ ಎರಡನೆಯ ಋಕ್ಕಿನಲ್ಲಿ **ವೃಷಣೋ ನೃಷಾಚ** ಎಂದು ವೃಷಣಶಬ್ದವು ಪಠಿತವಾಗಿರುವುದು. ಮೂರನೆಯ ಋಕ್ಕಿನಲ್ಲಿ—ರಥ್ಯೋ ನ ಧೇನಾ ಎಂದು

**ಧೇನಾ** ಶಬ್ದವಿರುವುದು. ಈ ಶಬ್ದವು **ಧೇಟ್ ಪಾನೇ**–ಪಾನಮಾಡು ಎಂಬ ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ ಈ ಶಬ್ದಪ್ರಯೋಗವು ಪೀತಶಬ್ದಾರ್ಥವನ್ನು ಸೂಚಿಸುವುದು. ಸೂಕ್ತದ ಪ್ರಾರಂಭದಲ್ಲಿಯೇ ಇರುವ **ಅಸಾವಿ** ಎಂಬ ಶಬ್ದವು ಸುನೋತಿಧಾತುವಿನಿಂದ ನಿಷ್ಪನ್ನವಾಗಿ ಸುತಶಬ್ದಾರ್ಥವನ್ನೂ ಮತ್ತು ಮೊದಲನೆಯ ಋಕ್ಕಿನ ಅಂತ್ಯದಲ್ಲಿ **ಅಂಧಸೋ ಮದೇಷು** ಎಂಬಲ್ಲಿರುವ **ಮದೇಷು** ಎಂಬ ಶಬ್ದವು ಮದತ್ವವನ್ನೂ ಸೂಚಿಸುವುದಾಗಿರುವುದು. ಆದುದರಿಂದ ಈ ಸೂಕ್ತವು **ವೃಷ, ಪೀತ, ಸುತ, ಮದ** ಎಂಬ ಸೋಮಪಾನಾರ್ಥವಾದ ಶಬ್ದಗಳನ್ನೊಳಗೊಂಡು ಪ್ರಕೃತಸಂದರ್ಭೋಚಿತವಾದ ಅರ್ಥವುಳ್ಳದ್ದಾಗಿರುವುದರಿಂದ ಈ ಸೂಕ್ತದಲ್ಲಿ ರೂಪಸಮೃದ್ಧತ್ವವು ಇದ್ದಂತಾಯಿತು.

## ಐಂದ್ರೀರನ್ವಾಹೈಂದ್ರೋ ವೈ ಯಜ್ಞಸ್ತ್ರಿಷ್ಟುಭೋಽನ್ವಾಹ ತ್ರೈಷ್ಟುಭಂ ವೈ ಮಾಧ್ಯಂದಿನಂ ಸವನಂ ।

**ದೇವತಾದ್ವಾರಾ ಛಂದೋದ್ವಾರಾ ಚ ತಾ ಋಚಃ ಪ್ರಶಂಸತಿ—ದ್ವಿತೀಯಪಾದೇಽಸ್ಮಿನ್ನಿಂದ್ರ ಇತಿ ಶ್ರವಣಾದೈಂದ್ರತ್ವಮ್ । ಏವಮೃಗಂತರೇಷ್ವಪ್ಯುದಾಹರಣೀಯಂ । ಮಾಧ್ಯಂದಿನಸವನಸ್ಯ ತ್ರೈಷ್ಟುಭತ್ವಂ ಪ್ರಸಿದ್ಧಮ್ ॥**

ಈ ಸೂಕ್ತದಲ್ಲಿರುವ ಋಕ್ಕುಗಳನ್ನೂ, ಅವುಗಳ ಛಂದಸ್ಸು ಮತ್ತು ದೇವತೆಗಳ ವಿಷಯವನ್ನೂ ವಿಮರ್ಶಿಸುವರು. **ಐಂದ್ರೋ ವೈ ಯಜ್ಞಃ** ಎಂಬ ಶ್ರುತಿವಾಕ್ಯದಂತೆ ಯಜ್ಞವು ಇಂದ್ರಸ್ವರೂಪವಾಗಿರಬೇಕಷ್ಟೆ. ಅದರಂತೆ ಪ್ರಥಮಋಕ್ಕಿನ ಎರಡನೆಯ ಪಾದದಲ್ಲಿ ಇಂದ್ರಶಬ್ದಪ್ರಯೋಗವಿರುವುದರಿಂದ ಈ ಸೂಕ್ತಕ್ಕೆ ಇಂದ್ರತ್ವವನ್ನು ಹೇಳಿದಂತಾಯಿತು. ಇತರ ಋಕ್ಕುಗಳಲ್ಲಿಯೂ ಇದೇರೀತಿ ಇಂದ್ರತ್ವವು ಸೂಚಿತವಾಗಿರುವುದು. ಮಾಧ್ಯಂದಿನಸವನದಲ್ಲಿ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳನ್ನು ಪಠಿಸಬೇಕೆಂಬ ವಿಧಿಯಂತೆ ಈ ಸೂಕ್ತವು ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳನ್ನೊಳಗೊಂಡಿರುವುದು ಪ್ರಸಿದ್ಧವಾಗಿಯೇ ಇದೆ.

## ತದಾಹುರ್ಯತ್ತೃತೀಯಸವನಸ್ಯೈವ ರೂಪಂ ಮದ್ವದಥ ಕಸ್ಮಾನ್ಮಧ್ಯಂದಿನೇ ಮದ್ವತೀರನು ಚಾಹ ಯಜಂತಿ ಚಾಭಿರಿತಿ ।

**ಮದ್ವತೀರಿತಿ ಯದುಕ್ತಂ ತಸ್ಯಾಕ್ಷೇಪಮುದ್ಭಾವಯತಿ ತೃತೀಯಸವನೇ ಸರ್ವೇಷಾಂ ದೇವಾನಾಂ ಸೋಮಪಾನಾದೂರ್ಧ್ವಂ ಹರ್ಷಸಂಭವಾನ್ಮದ್ವತ್ವಂ ತೃತೀಯಸವನಸ್ಯೈವ ರೂಪಂ। ತಥಾ ಸತಿ ಮಧ್ಯಂದಿನೇ ಸವನೇ ಮದ್ವತೀನಾಮೃಚಾಮನುವಚನಮಾಭಿರ್ಮದ್ವತೀಭಿರ್ಯಜನಂ ಚ ಕಸ್ಮಾತ್ಕಾರಣಾದಿತಿ ಚೋದ್ಯಂ ॥**

ಈ ಸೂಕ್ತದಲ್ಲಿ ಮದೇಷು ಎಂದು ಸೋಮಪಾನಮಾಡಿ ಅದರಿಂದುಂಟಾದ ಮದಸಂಬಂಧವಾದ ವಿಷಯವು ಉಕ್ತವಾಗಿರುವುದು. ಆದರೆ ದಿನಾಂತ್ಯದಲ್ಲಿ ಮಾಡುವ ಕೊನೆಯ ಸವನವಾದ ತೃತೀಯಸವನದಲ್ಲಿ ಸಮಸ್ತ ದೇವತೆಗಳಿಗೂ ಸೋಮಪಾನಮಾಡಿದನಂತರ ಹರ್ಷಸಂಭವವಿರುವುದರಿಂದ ಆಗ ಮದಶಬ್ದವನ್ನು ಉಪಯೋಗಿಸಬೇಕಾದುದು ಸಹಜ. ಆದರೆ ಆರೀತಿಯಾಗಿಲ್ಲದೆ ಮಾಧ್ಯಂದಿನಸವನದಲ್ಲಿಯೇ ಮದಶಬ್ದಪ್ರಯೋಗವಿರುವ ಋಕ್ಕುಗಳ ಪಠನವು ಅನುಚಿತವಲ್ಲವೇ? ಇದು ವಿಚಿತ್ರವಾಗಿ ತೋರುವುದು ಎಂದರೆ—

**ಮಾದ್ಯಂತೀವ ವೈ ಮಧ್ಯಂದಿನೇ ದೇವತಾಃ ಸರ್ವೇವ ತೃತೀಯಸವನೇ ಮಾದಯಂತೇ ತಸ್ಮಾನ್ಮಧ್ಯಂದಿನೇ ಮದ್ವತೀರನು ಚಾಹ ಯಜಂತಿ ಚಾಭಿಃ ।**

**ತಸ್ಯೋತ್ತರಮಾಹ— ಮಾಧ್ಯಂದಿನೇ ಸವನೇಽಪಿ ದೇವಾನಾಂ ಸೋಮಪಾನಸದ್ಭಾವಾತ್ತಾ ಮಾದ್ಯಂತೀವ ತೃತೀಯಸವನೇ ತು ನಿರವಶೇಷಾಣಾಂ ದೇವಾನಾಂ ಸೋಮಪಾನಸಂಪತ್ತ್ಯಾ ಸಂಮಾದಯಂತೇ ಸಂಭೂಯ ಹೃಷ್ಯಂತೀತ್ಯೇತಾವಾನೇವ ವಿಶೇಷಃ । ತಸ್ಮಾನ್ಮಾದಸ್ಯ ಹರ್ಷಸ್ಯ ಮಧ್ಯಂದಿನಸವನೇಽಪಿ ಸದ್ಭಾವಾತ್ತತ್ರ ಮದ್ವತೀರೃಚೋ ಮೈತ್ರಾವರುಣೋಽನ್ವಾಹ । ಹೋತ್ರಾದಯಶ್ಚ ಸಪ್ತರ್ತ್ವಿಜ ಆಭಿರ್ಮದ್ವತೀರ್ಯಜಂತಿ ॥**

ಅದಕ್ಕೆ ಸಮಾಧಾನವನ್ನು ಹೇಳುವರು. ಮಾಧ್ಯಂದಿನಸವನಕಾಲದಲ್ಲಿಯೂ ಸಹ ಕೆಲವು ಮುಖ್ಯರಾದ ದೇವತೆಗಳು ಸೋಮಪಾನಮಾಡಿ ಹರ್ಷಿತರಾಗುವರು. ತೃತೀಯಸವನದಲ್ಲಿ, ಮಾಧ್ಯಂದಿನಸವನದಲ್ಲಿ ಸೋಮಪಾನಮಾಡದಿರುವ ಇತರ ದೇವತೆಗಳೂ ಸಹ ಸೋಮಪಾನಮಾಡಿ ಹರ್ಷಿತರಾಗುವರು. ಆದುದರಿಂದ ಮಾಧ್ಯಂದಿನಸವನಕಾಲದಲ್ಲಿ ಮದಶಬ್ದಪ್ರಯೋಗವಿರುವ ಋಕ್ಕುಗಳನ್ನು ಮೈತ್ರಾವರುಣನು ಪಠಿಸುವುದು ಯುಕ್ತವಾಗಿದೆ. ಅದರಂತೆ ಹೋತ್ರಾದಿ ಸಪ್ತ ಋತ್ವಿಕ್ಕುಗಳೂ ಸಹ ಮಾಧ್ಯಂದಿನಸವನಕಾಲದಲ್ಲಿ ಮದಶಬ್ದಪ್ರಯೋಗವಿರುವ ಯಾಜ್ಯಾಮಂತ್ರಗಳಿಂದಲೇ ಹೋಮಮಾಡುವರು.

**ತೇ ವೈ ಖಲು ಸರ್ವ ಏವ ಮಾಧ್ಯಂದಿನೇ ಪ್ರಸ್ಥಿತಾನಾಂ ಪ್ರತ್ಯಕ್ಷಾದೈಂದ್ರೀಭಿರ್ಯಜಂತಿ ಅಭಿತೃಣ್ಣವತೀಭಿರೇಕೇ ।**

**ಅಥ ತಾಃ ಪ್ರಸ್ಥಿತಯಾಜ್ಯಾ ವಿಧತ್ತೇ— ತೇ ಹೋತ್ರಾದಯಃ ಸಪ್ತರ್ತ್ವಿಜಃ ಸರ್ವೇಽಪಿ ಮಾಧ್ಯಂದಿನೇ ಸವನೇ ಪ್ರಸ್ಥಿತಸೋಮಾನಾಂ ಸಂಬಂಧಿನೀಭಿಃ ಪ್ರತ್ಯಕ್ಷಾತ್ಪ್ರತ್ಯಕ್ಷೇಣ ಪಠ್ಯಮಾನೇನೈವೇಂದ್ರ ಶಬ್ದೇನ ಪ್ರಯುಕ್ತಾಭಿರಿಂದ್ರ ದೇವತಾಕಾಭಿಋರ್ಗ್ಭಿರ್ಯಜೇಯುಃ । ತೇಷು ಸಪ್ತಸ್ವೃ(ತ್ವಿ)ಕ್ಷು ಮಧ್ಯೇ ಹೋತೃಮೈತ್ರಾವರುಣ ಬ್ರಾಹ್ಮಣಾಚ್ಛಂಸಿನಾಂ ತ್ರಯಾಣಾಂ ಸಂಬಂಧಿನೀಷು ಯಾಜ್ಯಾಸು ನ ಕೇವಲಮೈಂದ್ರತ್ವಂ ಕಿಂತು ಅಭಿತೃಣ್ಣವತ್ತ್ವಮ(ಪೀತ್ಯ)ಪರಂ ವಿಶೇಷಂ ದರ್ಶಯತಿ ॥**

ಈಗ ಹೋತ್ರಾದಿ ಋತ್ವಿಕ್ಕುಗಳು ಹೋಮಮಾಡುವ ಪ್ರಸ್ಥಿತಯಾಜ್ಯಾಮಂತ್ರಗಳ ಸ್ವರೂಪವನ್ನು ವಿವರಿಸುವರು. ಈ ಮಾಧ್ಯಂದಿನಸವನದಲ್ಲಿ ಹೋತ್ರಾದಿ ಸಪ್ತ ಋತ್ವಿಕ್ಕುಗಳು ಹೋಮಾರ್ಥವಾಗಿ ಉಪಯೋಗಿಸುವ ಪ್ರಸ್ಥಿತಯಾಜ್ಯಾಮಂತ್ರಗಳಲ್ಲಿ ಪ್ರತ್ಯಕ್ಷವಾಗಿ ಇಂದ್ರಶಬ್ದಪ್ರಯೋಗವಿರಬೇಕು. ಆದರೆ ಹೋತೃ, ಮೈತ್ರಾವರುಣ, ಬ್ರಾಹ್ಮಣಾಚ್ಛಂಸೀ ಎಂಬ ಮೂವರು ಋತ್ವಿಕ್ಕುಗಳು ಪಠಿಸುವ ಯಾಜ್ಯಾಮಂತ್ರಗಳಲ್ಲಿ ಮಾತ್ರ ಇಂದ್ರತ್ವಸೂಚಕವಾದ ಶಬ್ದಗಳಿರುವುದಲ್ಲದೆ ಪಾನಶಬ್ದವನ್ನು ಸೂಚಿಸುವ ಅಭಿತೃಣ್ಣ ಶಬ್ದಪ್ರಯೋಗವೂ ಇರುವುದು. ಅಭಿತೃಣ್ಣಶಬ್ದವು ಅಭಿ ಎಂಬ ಉಪಸರ್ಗದಿಂದ ಯುಕ್ತವಾದ ತೃದಿಧಾತುವಿನಿಂದ ನಿಷ್ಪನ್ನವಾಗಿ ಪಾನಾರ್ಥವನ್ನು ಸೂಚಿಸುವುದಾಗಿರುವುದು.

**ಪಿಬಾ ಸೋಮಮಭಿ ಯಮುಗ್ರ ತರ್ದ್ರ ಇತಿ ಹೋತಾ ಯಜತಿ ।**

ತತ್ರ ಹೋತುರ್ಯಾಜ್ಯಾಂ ದರ್ಶಯತಿ—ತತ್ರಾಭಿಶಬ್ದಸ್ಯ ತರ್ದಶಬ್ದಸ್ಯ (ಚ) ವಿದ್ಯಮಾನತ್ವಾದಭಿತೃಣ್ಣವತ್ತ್ವಮ್ ॥

ಹೋತ್ರಾದಿ ಏಳುಜನ ಋತ್ವಿಕ್ಕುಗಳು ಪ್ರತ್ಯೇಕವಾಗಿ ಪಠಿಸುವ ಯಾಜ್ಯಾಮಂತ್ರಗಳನ್ನು ವಿವರಿಸುವರು. ಪ್ರಾರಂಭದಲ್ಲಿ ಹೋತೃವು ಪಿಬಾ ಸೋಮಮಭಿ ಯಮುಗ್ರ ತರ್ದಃ (ಋ. ಸಂ. ೬-೧೭-೧) ಎಂಬ ಋಕ್ಕನ್ನು ಪಠಿಸುವನು. ಈ ಋಕ್ಕಿನಲ್ಲಿ ಅಭಿ ಮತ್ತು ತರ್ದ ಎಂಬ ಶಬ್ದಗಳು ಸೇರಿ ಅಭಿತೃಣ್ಣ ಶಬ್ದವನ್ನು ಸೂಚಿಸುವುದು.

## ಸಂ ಈ ಪಾಹಿ ಯ ಋಜೀಷ ತರುತ್ರ ಇತಿ ಮೈತ್ರಾವರುಣೋ ಯಜತಿ ।

ಮೈತ್ರಾವರುಣಸ್ಯ ಯಾಜ್ಯಾಂ ದರ್ಶಯತಿ—ಸ ಈಂ ಪಾಹೀತ್ಯಸ್ಯಾಮೃಚಶ್ಚತುರ್ಥೇ ಪಾದೇಽಭಿತೃಂಧಿ ವಾಜಾನಿತಿ ಶ್ರವಣಾದಭಿತೃಣ್ಣವತ್ತ್ವಮ್ ॥

ಮೈತ್ರಾವರುಣನೆಂಬ ಋತ್ವಿಜನು ಸ ಈಂ ಪಾಹಿ ಯ ಋಜೀಷೀ ತರುತ್ರಃ (ಋ. ಸಂ. ೧-೧೭-೨) ಎಂಬ ಋಕ್ಕನ್ನು ಪಠಿಸುವನು. ಈ ಋಕ್ಕಿನ ನಾಲ್ಕನೆಯ ಪಾದದಲ್ಲಿ ಅಭಿತೃಂಧಿ ಎಂಬ ಶಬ್ದವು ಅಭಿತೃಣ್ಣ ಶಬ್ದಾರ್ಥವನ್ನು ಸೂಚಿಸುವುದು.

## ಏವಾ ಪಾಹಿ ಪ್ರತ್ನಥಾ ಮಂದತು ತ್ವೇತಿ ಬ್ರಾಹ್ಮಣಾಚ್ಛಂಸೀ ಯಜತಿ ।

ಬ್ರಾಹ್ಮಣಾಚ್ಛಂಸಿನೋ ಯಾಜ್ಯಾಂ ದರ್ಶಯತಿ—ಏವಾ ಪಾಹೀತ್ಯಸ್ಯಾಮೃಚಿ ಚತುರ್ಥಪಾದೇಽಭಿ ಗಾ ಇಂದ್ರ ತೃಂಧೀತಿ ಶ್ರವಣಾದಭಿತೃಣ್ಣವತ್ತ್ವಮ್ । ಏತಾಂಸ್ತ್ರೀನೃತ್ವಿಜೋಽಭಿಪ್ರೇತ್ಯಾಭಿತೃಣ್ಣವತೀಭಿರೇಕ ಇತ್ಯುಕ್ತಮ್ ॥

ಬ್ರಾಹ್ಮಣಾಚ್ಛಂಸೀ ಎಂಬ ಋತ್ವಿಜನು—ಏವಾ ಪಾಹಿ ಪ್ರತ್ನಥಾ ಮಂದತು ತ್ವಾ (ಋ. ಸಂ. ೬-೧೭-೩) ಎಂಬ ಋಕ್ಕನ್ನು ಪಠಿಸುವನು. ಈ ಋಕ್ಕಿನ ನಾಲ್ಕನೆಯ ಪಾದದಲ್ಲಿ ಅಭಿಗಾ ಇಂದ್ರ ತೃಂಧಿ ಎಂದು ಅಭಿತೃಂಧಿಶಬ್ದದ ಪ್ರಯೋಗವಿರುವುದು. ಈರೀತಿಯಲ್ಲಿ ಹೋತೃ, ಮೈತ್ರಾವರುಣ, ಬ್ರಾಹ್ಮಣಾಚ್ಛಂಸೀ ಎಂಬ ಮೂವರು ಋತ್ವಿಕ್ಕುಗಳು ಪಠಿಸುವ ಯಾಜ್ಯಾಮಂತ್ರಗಳಲ್ಲಿ ಇಂದ್ರ ಮತ್ತು ಅಭಿತೃಣ್ಣ (ಪಾನ) ಶಬ್ದಗಳ ಪ್ರಯೋಗವಿದ್ದಂತಾಯಿತು.

## ಅರ್ವಾಙೇಹಿ ಸೋಮಕಾಮಂ ತ್ವಾಹುರಿತಿ ಪೋತಾ ಯಜತಿ ತವಾಯಂ ಸೋಮಸ್ತ್ವಮೇಹ್ಯರ್ವಾಙಿತಿ ನೇಷ್ಟಾ ಯಜತಿ ಇಂದ್ರಾಯ ಸೋಮಾಃ ಪ್ರದಿವೋ ವಿದಾನಾ ಇತ್ಯಚ್ಛಾವಾಕೋ ಯಜತಿ ಆಪೂರ್ಣೋ ಅಸ್ಯ ಕಲಶಃ ಸ್ವಾಹೇತ್ಯಾಗ್ನೀಧ್ರೋ ಯಜತಿ ।

ಪೋತುರ್ಯಾಜ್ಯಾಂ ದರ್ಶಯತಿ—
ನೇಷ್ಟುರ್ಯಾಜ್ಯಾಂ ದರ್ಶಯತಿ—
ಅಚ್ಛಾವಾಕಸ್ಯ ಯಾಜ್ಯಾಂ ದರ್ಶಯತಿ—
ಆಗ್ನೀಧ್ರಸ್ಯ ಯಾಜ್ಯಾಂ ದರ್ಶಯತಿ—

ಇನ್ನು ಉಳಿದ ನಾಲ್ಕುಜನ ಋತ್ವಿಕ್ಕುಗಳು ಪಠಿಸುವ ಯಾಜ್ಯಾಮಂತ್ರಗಳನ್ನು ನಿರ್ದೇಶಿಸುವರು. **ಪೋತೃ**ವೆಂಬ ಋತ್ವಿಜನು— **ಅರ್ವಾಙೇಹಿ ಸೋಮಕಾಮಂ ತ್ವಾಹುಃ** (ಋ. ಸಂ. ೧-೧೦೪-೯) ಎಂಬ ಋಕ್ಕನ್ನೂ, **ನೇಷ್ಟೃ**ವೆಂಬ ಋತ್ವಿಜನು **ತವಾಯಂ ಸೋಮಸ್ತ್ವಮೇಹ್ಯರ್ವಾಙ್** (ಋ. ಸಂ. ೩-೩೫-೬) ಎಂಬ ಋಕ್ಕನ್ನೂ, **ಅಚ್ಛಾವಾಕ**ನೆಂಬ ಋತ್ವಿಜನು— **ಇಂದ್ರಾಯ ಸೋಮಾಃ ಪ್ರದಿವೋ ವಿದಾನಾಃ**(ಋ. ಸಂ. ೩-೩೬-೨) ಎಂಬ ಋಕ್ಕನ್ನೂ, **ಆಗ್ನೀಧ್ರ**ನೆಂಬ ಋತ್ವಿಜನು— **ಆಪೂರ್ಣೋ ಅಸ್ಯ ಕಲಶಃ ಸ್ವಾಹಾ** (ಋ. ಸಂ. ೩-೩೨-೧೫) ಎಂಬ ಋಕ್ಕನ್ನೂ ತಮ್ಮ ತಮ್ಮ ಯಾಜ್ಯಾ ಮಂತ್ರಗಳನ್ನಾಗಿ ಪಠಿಸುವರು.

**ತಾಸಾಮೇತಾ ಅಭಿತೃಣ್ಣವತ್ಯೋ ಭವಂತೀಂದ್ರೋ ವೈ ಪ್ರಾತಃಸವನೇ ನ ವ್ಯಜಯತ ಸ ಏತಾಭಿರೇವ ಮಾಧ್ಯಂದಿನಂ ಸವನಮಭ್ಯತೃಣದ್ಯದ-ಭ್ಯತೃಣತ್ತಸ್ಮಾದೇತಾ ಅಭಿತೃಣ್ಣವತ್ಯೋ ಭವಂತಿ ।**

**ಉಕ್ತಾನಾಂ ಸಪ್ತಾನಾಂ ಯಾಜ್ಯಾನಾಂ ಮಧ್ಯೇ ಪಿಬಾಸೋಮಂ ಸ ಈಂ ಪಾಹ್ಯೇವಾ ಪಾಹೀತಿ ತಿಸ್ರ ಋಚೋಽಭಿತೃಣ್ಣವತ್ತ್ವೇನ ಪ್ರಶಂಸತಿ— ಅಭಿಪೂರ್ವತರ್ದನ (ತೃದಿ) ಧಾತು-ಯುಕ್ತತ್ವಾದಭಿತೃಣ್ಣವತ್ತ್ವಂ ಯಥಾ ಭವತಿ ತಥೈವ ಧಾತ್ವರ್ಥಸಂಭವಾದಪ್ಯಭಿತೃಣ್ಣವತ್ತ್ವಂ ದ್ರಷ್ಟವ್ಯಮ್ । ಕಥಮೇತದಿತಿ ತದುಚ್ಯತೇ । ಇಂದ್ರಃ ಪುರಾ ಪ್ರಾತಃಸವನೇ ಸಮಾಪ್ತೇ ಸಾತ ತಾವತಾ ನ ವ್ಯಜಯತ ವಿಜಯಂ ನ ಪ್ರಾಪ್ತವಾನ್ । ಮಧ್ಯಂದಿನಸವನಸ್ಯ ಗುರುತ್ವೇನ ಗಲಿ-ತತ್ವಾತ್ । ತದಾನೀಮಿಂದ್ರಸ್ತಸ್ಯ ಮಧ್ಯಂದಿನಸವನಸ್ಯ ಸ್ಥಿತಿಸಿದ್ಧ್ಯರ್ಥಂ ಪಿಬಾ ಸೋಮೇತ್ಯಾ-ದಿಭಿಸ್ತಿಸೃಭಿರ್ಋಗ್ಭಿರ್ಮಾಧ್ಯಂದಿನಸವನಮಭಿತಃ ಪ್ರಥಮತೃತೀಯಯೋರ್ಮಧ್ಯೇಽತೃಣತ್ತ-ರ್ದನಮಕರೋತ್, ದೃಢಬಂಧೇನ ಸ್ಥಿತಿಂ ಕೃತವಾನಿತ್ಯರ್ಥಃ । ತಸ್ಮಾತ್ತರ್ದನಸ್ಯಾರ್ಥಸ್ಯ ಯುಕ್ತತ್ವಾದೇತಾಸಾಂ ತಿಸೃಣಾಮಭಿತೃಣವತ್ತ್ವಮ್ ॥**

ಮೇಲೆ ವಿವರಿಸಿರುವ ಏಳು ಯಾಜ್ಯಾಮಂತ್ರಗಳಲ್ಲಿ ಮೊದಲನೆಯ ಮೂರು ಋಕ್ಕುಗಳು ಅಭಿತೃಣ್ಣವತಿ ಮಂತ್ರಗಳೆಂದು ಪ್ರಸಿದ್ಧವಾಗಿರುವುವು. ಏಕೆಂದರೆ ಈ ಋಕ್ಕುಗಳಲ್ಲಿ ಅಭಿ ಎಂಬ ಉಪಸರ್ಗಪೂರ್ವಕವಾದ ತೃದಿಧಾತುವಿನಿಂದ ನಿಷ್ಪನ್ನವಾದ ಶಬ ಪ್ರಯೋಗವಿರುವುದರಿಂದ ಈ ಋಕ್ಕುಗಳಿಗೆ ಅಭಿತೃಣ್ಣವತೀ ಋಕ್ಕುಗಳೆಂದು ಹೆಸರು ಬಂದಿರುವುದು. ತೃದಿಧಾತುವಿಗೆ ಹಿಂಸಿಸು ಕೊಲ್ಲು ಎಂಬರ್ಥವಿರುವುದರಿಂದ **ಅಭಿತರ್ದನ** ಅಥವಾ **ಅಭಿತೃಣ್ಣ** ಎಂಬ ಶಬ್ದಗಳು ಇಂದ್ರನ ಶತ್ರುನಿಗ್ರಹಸಾಮರ್ಥ್ಯವನ್ನು ಸೂಚಿಸುವುದು— ಹೇಗೆಂದರೆ ಪೂರ್ವದಲ್ಲಿ ಇಂದ್ರನು ಪ್ರಾತಃಸವನಕಾಲದಲ್ಲಿ ಸೋಮಪಾನಮಾಡಿ ಶತ್ರುಗಳನ್ನು ಜಯಿಸಲು ಹೊರಟಾಗ ಅವನಿಗೆ ಜಯವು ಲಭಿಸಲಿಲ್ಲ. ಆದರೆ ಮಾಧ್ಯಂದಿನಸವನಕಾಲದಲ್ಲಿ ಋತ್ವಿಕ್ಕುಗಳು ಶತ್ರುನಿಗ್ರಹವನ್ನು ಸೂಚಿಸುವ ಅಭಿತರ್ದ (ಅಭಿತೃಣ್ಣ) ಶಬ್ದಪ್ರಯೋಗವಿರುವ **ಪಿಬಾ ಸೋಮಂ** ಮೊದಲಾದ ಋಕ್ಕುಗಳನ್ನು ಪಠಿಸಿ ಇಂದ್ರನ ಸಾಮರ್ಥ್ಯ ವನ್ನು ವೃದ್ಧಿಪಡಿಸಿದರು. ಮತ್ತು ಇಂದ್ರನೂ ಸಹ ಮಾಧ್ಯಂದಿನಸವನದಲ್ಲಿ ಅತಿಶಯವಾಗಿ ಸೋಮಪಾನಮಾಡಿ ಅದರಿಂದ ಹರ್ಷ ಗೊಂಡು ಶತ್ರುಗಳನ್ನು ಸೋಲಿಸಲು ಸಮರ್ಥನಾದನು. ಈರೀತಿ **ಪಿಬಾ ಸೋಮಂ** ಎಂಬ ಮೊದಲ ಮೂರು ಋಕ್ಕುಗಳಲ್ಲಿ ಅಭಿತರ್ದಶಬ್ದದಿಂದ ಸ್ಥಿತಿಯನ್ನು (ಇಂದ್ರನ ಸಾಮರ್ಥ್ಯವನ್ನು) ದೃಢಬಂಧನಯುಕ್ತವನ್ನಾಗಿ ಮಾಡಿರುವುದರಿಂದ ಈ ಮೂರು ಋಕ್ಕುಗಳಿಗೆ ಅಭಿತೃಣ್ಣವತೀ ಋಕ್ಕುಗಳೆಂಬ ಹೆಸರು ಅನ್ವರ್ಥವಾಗಿರುವುದು.

ಇಲ್ಲಿಗೆ ಮಾಧ್ಯಂದಿನಸವನದ ವಿವರಣೆಯು ಸಮಾಪ್ತವು.

*English Translation*

**(The hymn to be repeated over the Soma cups being lifted and the Prasthita Yajyas at the midday libation.)**

At the midday libation, when the Soma cups are being lifted, the Hotar repeats, Asavi devam gorichikam (7, 21). This hymn contains the words, vrishan, pita, suta, mad; its verses are complete in form and addressed to Indra. For the sacrifice belongs to Indra. The verses are in the Trishtubh metre; for this metre is appropriate to the midday libation. They say, if the term mad "to be drunk" is only appropriate to the third libation, why do they recite such verses containing this term at the midday libation as Anuvakyas and Yajyas? The gods get drunk, as it were, at the midday libation and are then consequently at the third libation in a state of complete drunkenness. Thence he repeats verses containing the term mad as Anuvakyas and Yajyas at the midday libation.

At the midday libation all te priests repeat Yajyas addressed to Indra by his very name for the Soma drops which are in readiness. Some (the Hotar, Maitravaruna and Brahmanachhamsi make the Yajyas with verses containing besides the name of Indra the words, abhi trid. So the Hotar repeats, piba somam abhi yam ugra tarda (6, 17, 1); the Maitravaruna, sa im pahi ya rijishi (6, 17, 2); and the Brahmanachhamsi, eva pahi pralnatha (6, 17, 3).

The Yajya of the Potar is, arvang ehi somakamam (1, 104, 9). The Yajya of the Neshtar is, tava yam somas tvam (3, 35, 6). The Yajya of the Acchavaka is, indraya somah pra divo vidana (3, 36, 2). The Vajya of the Agnidhra is, apuro asya kalasah svahi (3, 32, 15).

Among these verses there are those containing the words abhi trid. For Indra once did not conquer at the morning libation; but by means of these verses he broke down the barriers and made himself master (abhi trinat) of the midday libation. Thence these verses.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಅಷ್ಟಾವಿಂಶಾಧ್ಯಾಯಸ್ಯ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವಾದುದು.



# ಅಥ ಅಷ್ಟಾವಿಂಶಾಧ್ಯಾಯೇ ಚತುರ್ಥಃ ಖಂಡಃ

## ಇಪ್ಪತ್ತೆಂಟನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



## ತೃತೀಯಸವನದ ವಿವರಣೆಯು



ಹಿಂದೆ ಹೇಳಿದಂತೆ ತೃತೀಯಸವನದ ಪ್ರಾರಂಭದಲ್ಲಿ ಉನ್ನೀಯಮಾನಸೂಕ್ತವನ್ನು ಮೈತ್ರಾವರುಣನೆಂಬ ಋತ್ವಿಜನು ಪಠಿಸುವನು.

**ಇಹೋಪ ಯಾತ ಶವಸೋ ನಪಾತ ಇತಿ ತೃತೀಯಸವನ ಉನ್ನೀಯಮಾನೇಭ್ಯೋಽನ್ವಾಹ ವೃಷಣ್ವತೀಃ ಪೀತವತೀಃ ಸುತವತೀರ್ಮದ್ವತೀ ರೂಪಸಮೃದ್ಧಾಸ್ತಾ ಐಂದ್ರಾರ್ಭವ್ಯೋ ಭವಂತಿ ।**

**ಅಥ ತೃತೀಯಸವನ ಉನ್ನೀಯಮಾನಸೂಕ್ತಂ ವಿಧತ್ತೇ—ಅಧ್ವರ್ಯುಣಾ ಚಮಸೋನ್ನಯನಕಾಲೇ ಪ್ರೇಷಿತೋ ಮೈತ್ರಾವರುಣ ಇಹೋಪ ಯಾತೇತಿ ಸೂಕ್ತಮನುಬ್ರೂಯಾತ್ । ತತ್ರತ್ಯಾ ಋಚೋ ವೃಷಪೀತಸುತಮದಶಬ್ದೋಪೇತಾ ಆ ತಕ್ಷತ ವೃಷಣ ಇತಿ ವೃಷಣ್ಶಬ್ದಃ ಸುಷತಸ್ಯ ಪೀತಿರಿತಿ ಸುನೋತಿಧಾತುನಾ ಪಿಬತಿಧಾತುನಾ ಚ ಯೋಗೋಽನುವೋ ಮದಾಸ ಇತಿ ಮದಿಧಾತುಯೋಗಃ । ತತ್ರತ್ಯಾ ಋಚಃ ಐಂದ್ರಾರ್ಭವ್ಯಃ । ಇಂದ್ರಶ್ಚ ಋಭವಶ್ಚ ತಾಸಾಂ ದೇವತಾಃ ಸೌಧನ್ವನಾ ಋಭವೋ ಮದ(ಗನು)ನ್ವಿಂದ್ರಮಿತಿ ತತ್ರ ಶ್ರವಣಾತ್ ।**

ತೃತೀಯಸವನದ ಪ್ರಾರಂಭದಲ್ಲಿ ಅಧ್ವರ್ಯುವು ಮೈತ್ರಾವರುಣನನ್ನುದ್ದೇಶಿಸಿ-- ಉನ್ನೀಮಾನಸೂಕ್ತವನ್ನು ಪಠಿಸಬೇಕೆಂದು ಪ್ರೈಷಮಂತ್ರದಿಂದ ನಿರ್ದೇಶಿಸಿದಕೂಡಲೇ ಮೈತ್ರಾವರುಣನು ಒಂಭತ್ತು ಋಕ್ಕುಗಳುಳ್ಳ—**ಇಹೋಪ ಯಾತ ಶವಸೋ ನಪಾತ** (ಋ. ಸಂ. ೪-೩೫ ನೇ ಸೂಕ್ತ) ಎಂಬ ಸೂಕ್ತವನ್ನು ಪಠಿಸುವನ. ಈ ಸೂಕ್ತದಲ್ಲಿರುವ ಋಕ್ಕುಗಳಲ್ಲಿ **ವೃಷ, ಪೀತ, ಸುತ, ಮದ** ಎಂಬ ಶಬ್ದಗಳ ಪ್ರಯೋಗವಿರುವುದು. ಹೇಗೆಂದರೆ ಈ ಸೂಕ್ತದ ೬ ನೆಯ ಋಕ್ಕಿನ ನಾಲ್ಕನೆಯ ಪಾದದಲ್ಲಿ **ಆ ತಕ್ಷತ ವೃಷಣೋ ಮಂದಸಾನಾಃ** ಎಂದಿರುವುದರಿಂದ ವೃಷಣಶಬ್ದವೂ, ೨ ನೆಯ ಋಕ್ಕಿನ ಎರಡನೆಯ ಪಾದದಲ್ಲಿ **ಸುಷುತಸ್ಯ ಪೀತಿಃ** ಎಂದು ಇರುವುದರಿಂದ ಸುತ ಮತ್ತು ಪೀತಶಬ್ದಗಳೂ, ಮೊದಲನೆಯ ಋಕ್ಕಿನ ನಾಲ್ಕನೆಯ ಪಾದದಲ್ಲಿ **ಇಂದ್ರವಾನು ವೋ ಮದಾಸಃ** ಎಂದು ಮದಶಬ್ದವೂ ಇರುವುದರಿಂದ ಈ ಸೂಕ್ತವು ರೂಪಸಮೃದ್ಧಿಯುಳ್ಳದ್ದಾಗಿ

ರುವುದು. ಈ ಸೂಕ್ತದ ಋಕ್ಕುಗಳಿಗೆ ಇಂದ್ರನೂ, ಸುಧನ್ವಪುತ್ರರಾದ ಋಭುಗಳೂ ದೇವತೆಗಳಾಗಿರುವರು. ಅನುಕ್ರಮಣಿಕೆಯಲ್ಲಿ ಈ ಸೂಕ್ತಕ್ಕೆ ಋಭುಗಳು ದೇವತೆಯೆಂದು ನಿರ್ದೇಶಿಸಿದ್ದರೂ ಮೊದಲನೇ ಋಕ್ಕಿನಲ್ಲಿ **ಸೌಧನ್ವನಾ ಋಭುಪೋ........ ಗಮತ್ವಿಂದ್ರಮನು ವೋ ಮದಾಸಃ** ಎಂದೂ ೭ನೆಯ ಋಕ್ಕಿನಲ್ಲಿ ಸಮೃಭುಭಿಃ........**ಸಖೀಯಾನ್ ಇಂದ್ರ** ಎಂದೂ, ಋಭುಗಳ ಜತೆಗೆ ಇಂದ್ರನನ್ನು ಉದ್ದೇಶಿಸಿ ಸೋಮಪಾನಮಾಡಬೇಕೆಂದು ಪ್ರಾರ್ಥಿಸಿರವುದರಿಂದ ಈ ಸೂಕ್ತಕ್ಕೆ ಇಂದ್ರನೂ ದೇವತೆಯೆಂಬ ವಿಷಯದಲ್ಲಿ ಸಂಶಯಕ್ಕೆ ಕಾರಣವಿಲ್ಲ.

**ತದಾಹುರ್ಯನ್ನಾರ್ಭವೀಷು ಸ್ತುವತೇಽಥ ಕಸ್ಮಾದಾರ್ಭವಃ ಪವಮಾನ ಇತ್ಯಾಚಕ್ಷತ ಇತಿ ।**

ಋಭುದೇವತಾಪ್ರಸಂಗೇನ ತೃತೀಯಸವನಗತೇ ಪವಮಾನಸ್ತೋತ್ರೇ ಕಿಂಚಿಚ್ಚೋದ್ಯಮುದ್ಭಾವಯತಿ- ತತ್ರಸ್ಮಿನ್ನೃಭುಸಂಬಂಧವಿಷಯೇ ಚೋದ್ಯಮಾಹುಃ । ಯಸ್ಮಾತ್ಕಾರಣಾದೃಭುದೇವತಾಸ್ವೃಕ್ಷು ಸಾಮಗಾಸ್ತೃತೀಯಸವನೇ ಪವಮಾನಸ್ತೋತ್ರೇಣ ನ ಸ್ತುವತೇ ಕಿಂತು ಸ್ವಾದಿಷ್ಠಯಾ ಮದಿಷ್ಠಯೇತ್ಯನ್ಯದೇವತಾಕಾಸ್ವೇವ ಸ್ತುವತೇ । ಅಥೈವಂ ಸತಿ ಕಸ್ಮಾತ್ಕಾರಣಾತ್ಪವಮಾನಸ್ತೋತ್ರಸ್ಯಾರ್ಭವತ್ವಮಾಚಕ್ಷತ ಇತಿ ಚೋದ್ಯಮ್ ॥

ತೃತೀಯಸವನಕಾಲದಲ್ಲಿ ಋಭುಗಳ ಸಂಬಂಧ ಇರುವ ವಿಷಯವು ಚೋದ್ಯವಲ್ಲವೇ ? ಮತ್ತು ಯಜ್ಞದಲ್ಲಿ ಸಾಮಗಾನ ಮಾಡುವವರು ತೃತೀಯಸವನದಲ್ಲಿ ಋಭುದೇವತಾಕವಾದ ಋಕ್ಕುಗಳನ್ನು ಸೇರಿಸಿ ಪವಮಾನ ಸ್ತೋತ್ರದಿಂದ ಋಭುಗಳನ್ನು ಸ್ತುತಿಸುವುದಿಲ್ಲ. ಆದರೆ ಸ್ವಾದಿಷ್ಠಯಾ ಮದಿಷ್ಠಯಾ ಎಂಬ ಋಭುಗಳಲ್ಲದ ಅನ್ಯದೇವತಾಕವಾದ ಮಂತ್ರಗಳಿಂದ ಸ್ತುತಿಸುತ್ತಾರೆ. ಆದುದರಿಂದ ಪವಮಾನಸ್ತೋತ್ರಕ್ಕೆ ಆರ್ಭವತ್ವ ಎಂದರೆ ಋಭುಗಳ ಸಂಬಂಧವು ಹೇಗಾಯಿತು ಎಂಬುದೂ ಸಹ ವಿಚಿತ್ರವಾಗಿದೆ ಎಂದರೆ ಅದಕ್ಕೆ ಸಮಾಧಾನವನ್ನು ಹೇಳುವರು.

**ಪ್ರಜಾಪತಿರ್ವೈ ಪಿತ ಋಭೂನ್ಮರ್ತ್ಯಾನ್ಸತೋಽಮರ್ತ್ಯಾನ್ಕೃತ್ವಾ ತೃತೀಯಸವನ ಆಭಜತ್ತಸ್ಮಾನ್ನಾರ್ಭವೀಷು ಸ್ತುವತೇಽಥಾರ್ಭವಃ ಪವಮಾನ ಇತ್ಯಾಚಕ್ಷತೇ ॥**

ತಸ್ಯೋತ್ತರಮಾಹ– ಪುರಾ ಪ್ರಜಾಪತಿಃ ಪಿತಾ ಭೂತ್ವಾ ಮರ್ತ್ಯಾನ್ ಮನುಷ್ಯಾನ್ಸತ ಋಭೂನಮರ್ತ್ಯಾನ್ದೇವಾನ್ಕೃತ್ವಾ ತೃತೀಯಸವನ ಆಭಜದ್ಭಾಗಿನೋಽಕರೋತ್ । ತದಿದಮುಪಾಖ್ಯಾನಮಾರ್ಭವಂ ಶಂಸತೀತ್ಯತ್ರ ಪ್ರದರ್ಶಿತಮ್ । ಏವಂ ಚ ಸತ್ಯೃಭೂಣಾಂ ಸ್ತೋತ್ರದೇವತಾತ್ವಾಭಾವಾದಾರ್ಭವೀಷ್ವೃಕ್ಷೂದ್ಗಾತಾರೋ ನ ಸ್ತುವತೇ ।

ಅಥಾಪ್ಯೃಭೂಣಾಂ ತೃತೀಯಸವನಸಂಬಂಧಸದ್ಭಾವಾತ್ತೃತೀಯಸವನಗತಸ್ಯ ಪವಮಾನಸ್ತೋತ್ರಸ್ಯಾಪ್ಯಾರ್ಭವತ್ವಂ ವ್ಯವಹರಂತಿ ॥

ತೃತೀಯಸವನಕಾಲದಲ್ಲಿ ಹಾಡುವ ಪವಮಾನಸ್ತೋತ್ರವನ್ನು ಆರ್ಭವ (ಋಭುಸಹಿತರಾದ) ಪವಮಾನವೆಂದು ಏತಕ್ಕೆ ಕರೆಯುತ್ತಾರೆ? ಈ ಸ್ತೋತ್ರದ ಋಕ್ಕುಗಳೂ ಋಭುದೇವತಾಕವಾದ ಮಂತ್ರಗಳಿರುವುದಿಲ್ಲವಲ್ಲಾ ಎಂದರೆ ಈ ವಿಷಯದಲ್ಲಿ

ಒಂದು ಪೂರ್ವೇತಿಹಾಸವಿರುವುದು. ಪೂರ್ವದಲ್ಲಿ ಸಕಲರಿಗೂ ತಂದೆಯಾದ ಪ್ರಜಾಪತಿಯು ಮನುಷ್ಯರಾಗಿದ್ದ ಋಭುಗಳನ್ನು ಮರಣರಹಿತರಾದ ದೇವತೆಗಳನ್ನಾಗಿ ಮಾಡಿ (ಈ ವಿಷಯವನ್ನು ನಾವು ಹಿಂದೆ ಋಭು ಸೂಕ್ತಗಳಲ್ಲಿ ವಿವರಿಸಿದ್ದೇವೆ.) ತೃತೀಯ ಸವನದಲ್ಲಿ ಅವರಿಗೂ ಸೋಮಪಾನಮಾಡುವ ಅರ್ಹತೆಯನ್ನು ಕಲ್ಪಿಸಿಕೊಟ್ಟನು. ಆದ್ದರಿಂದ ಋಭುಗಳು ತೃತೀಯಸವನದಲ್ಲಿ ಮಾತ್ರ ಸೋಮಭಾಗಾರ್ಹರು. ಈ ಕಾರಣದಿಂದ ಇಲ್ಲಿ **ಆರ್ಭವಂ ಶಂಸತಿ** (ಋಭುಗಳನ್ನು ಸ್ತುತಿಸಲಾಗುವುದು) ಎಂದು ಹೇಳಲಾಗಿದೆ. ಹೀಗಿರುವುದರಿಂದ ಋಭುಗಳಿಗೆ ಸೋತ್ರಗಳಲ್ಲಿ ದೇವತಾತ್ವಭಾವವಿಲ್ಲದಿರುವುದರಿಂದ ಸಾಮಗಾಯಕರಾದ ಉದ್ಗಾತ್ರಾದಿ ಋತ್ವಿಜರು ಪವಮಾನ ಸ್ತೋತ್ರಗಳಲ್ಲಿ ಋಭುಗಳನ್ನು ಸ್ತುತಿಸುವುದಿಲ್ಲ. ಆದರೂ ಅನ್ಯದೇವತೆಯನ್ನು (ಪವಮಾನಸೋಮ) ಸ್ತುತಿಸುವ ಪವಮಾನಸೂಕ್ತವೇ ಆರ್ಭವಪವಮಾನಸೂಕ್ತವೆಂದು ಹೇಳಲ್ಪಡುವುದು.

**ಅಥಾಹ ಯದ್ಯಥಾಚ್ಛಂದೆಸಂ ಪೂರ್ವಯೋಃ ಸವನಯೋರನ್ವಾಹ ಗಾಯತ್ರೀಃ ಪ್ರಾತಃಸವನೇ ತ್ರಿಷ್ಟುಭೋ ಮಾಧ್ಯಂದಿನೇऽಥ ಕಸ್ಮಾಜ್ಜಾಗತೇ ಸತಿ ತೃತೀಯಸವನೇ ತ್ರಿಷ್ಟುಭೋऽನ್ವಾಹೇತಿ ॥**

**ಪ್ರಾಸಂಗಿಕಂ ಪರಿಸಮಾಪ್ಯ ಪ್ರಕೃತ ಏವ ಸೂಕ್ತೇ ಚೋದ್ಯಮುದ್ಭಾವಯತಿ ಉನ್ನೀಯಮಾನಸೂಕ್ತವಿಧಾನಾನಂತರಂ ತತ್ರ ಕಶ್ಚಿದ್ಬ್ರಹ್ಮವಾದೀ ಚೋದ್ಯಮಾಹ । ಯದ್ಯಸ್ಮಾತ್ಕಾರಣಾದ್ಯಥಾಛಂದಸಂ ತತ್ರ ತತ್ರೋಚಿತಂ ಛಂದೋऽನತಿಕ್ರಮ್ಯ ಸವನದ್ವಯೋ ಗಾಯತ್ರೀಸ್ತ್ರಿಷ್ಟುಭಶ್ಚ ಕ್ರಮೇಣಾನ್ವಾಹ । ತೃತೀಯಸವನಂ ತು ಜಾಗತಮ್ । ತಥಾ ಸತಿ ಜಗತೀಮತಿಕ್ರಮ್ಯೇಹೋಪ ಯಾತೇತ್ಯಾದ್ಯಾಸ್ತ್ರಿಷ್ಟುಭಃ ಕಸ್ಮಾದನುಬ್ರೂತ ಇತಿ ಚೋದ್ಯಮ್ ॥**

ತೃತೀಯಸವನದಲ್ಲಿ ಋಭುಗಳಿಗಿರುವ ಸೋಮಪಾನಸಂಬಂಧವನ್ನು ಹೇಳಿದ್ದಾಯಿತು. ಈಗ ತೃತೀಯಸವನದಲ್ಲಿ ಪಠಿಸುವ ಉನ್ನೀಯಮಾನಸೂಕ್ತದ ಛಂದಸ್ಸಿನ ವಿಷಯವಾಗಿ ಒಂದು ವಿಚಿತ್ರ ಸಂಗತಿ ಇರುವುದನ್ನು ವಿಮರ್ಶೆಮಾಡುವರು. ಪ್ರಾತಃಸವನದಲ್ಲಿ ಗಾಯತ್ರೀಛಂದಸ್ಸಿನ ಮಂತ್ರಗಳನ್ನೂ, ಮಾಧ್ಯಂದಿನಸವನದಲ್ಲಿ ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳನ್ನೂ ತೃತೀಯ ಸವನದಲ್ಲಿ ಜಗತೀಛಂದಸ್ಸಿನ ಮಂತ್ರಗಳನ್ನೂ ಪಠಿಸಬೇಕೆಂಬ ವಿಧಿ ಇರುವುದನ್ನು ಹಿಂದೆಯೇ ತಿಳಿಸಲಾಗಿದೆಯಷ್ಟೆ. ಅದರಂತೆ ಪ್ರಾತಃಸವನದಲ್ಲಿ ಉನ್ನೀಯಮಾನಸೂಕ್ತವನ್ನು ಗಾಯತ್ರೀಛಂದಸ್ಸಿನ ಋಕ್ಕುಗಳಿಂದಲೂ, ಮಾಧ್ಯಂದಿನಸವನದಲ್ಲಿ ತ್ರಿಷ್ಟುಪ್ ಛಂದಸ್ಸಿನ ಋಕ್ಕುಗಳಿಂದಲೂ ಪಠಿಸುತ್ತಿರುವುದು ನ್ಯಾಯವಾಗಿದೆ. ಆದರೆ ತೃತೀಯಸವನದಲ್ಲಿ ಪಠಿಸುವ— **ಇಹೋಪ ಯಾತ** (ಋ. ಸಂ. ೪-೩೫) ಎಂಬ ಉನ್ನೀಯಮಾನಸೂಕ್ತದಲ್ಲಿ ಜಗತೀಛಂದಸ್ಸಿನ ಋಕ್ಕುಗಳಿರುವುದಿಲ್ಲ ತ್ರಿಷ್ಟುಪ್ ಛಂದಸ್ಸಿನ ಋಕ್ಕುಗಳೇ ಇರುವವು. **ಜಾಗತಂ ತೃತೀಯಸವನಂ** ಎಂಬ ಶ್ರುತಿವಾಕ್ಯವನ್ನತಿಕ್ರಮಿಸಿ ತ್ರಿಷ್ಟುಪ್ ಛಂದಸ್ಸಿನ **ಇಹೋಪ ಯಾತ** ಎಂಬೀ ಉನ್ನೀಯಮಾನಸೂಕ್ತವನ್ನು ಪಠಿಸಿರುವುದು ವಿಚಿತ್ರವಾಗಿ ಕಾಣಿಸುವುದಲ್ಲವೇ ಎಂದರೆ ಅದಕ್ಕೆ ಸಮಾಧಾನವನ್ನು ಹೇಳುವರು.

**ಧೀತರಸಂ ವೈ ತೃತೀಯಸವನಮಥೈತದಧೀತರಸಂ ಶುಕ್ರಿಯಂ ಛಂದೋ ಯತ್ತ್ರಿಷ್ಟುಪ್ಸವನಸ್ಯ ಸರಸತಾಯಾ ಇತಿ ಬ್ರೂಯಾದಥೋ ಇಂದ್ರಮೇವೈತತ್ಸವನೇऽನ್ವಾಭಜತೀತಿ ॥**

ತತ್ರೋತ್ತರಂ ದರ್ಶಯತಿ—ಯದೇತ್ತೃತೀಯಸವನಂ ತದೇತದ್ಧೀತರಸಂ ತದೀಯೋ ರಸೋ ಗಾಯತ್ರ್ಯಾ ಪೀತಃ ಸೋಮಾಪಹರಣಕಾಲೇ ಪದ್ಭ್ಯಾಂ ಸವನದ್ವಯಂ ಮುಖೇನ ತೃತೀಯಸವನಂ ಚ ಗೃಹೀತ್ವಾ ತತ್ರತ್ಯಂ ರಸಂ ಗಾಯತ್ರೀ ಪೀತವತೀ । ತಥಾ ಚಾನ್ಯತ್ರ ಶ್ರೂಯತೇ–‘ ಪದ್ಭ್ಯಾಂ ದ್ವೇ ಸವನೇ ಸಮಗೃಹ್ಣಾನ್ಮುಖೇನೈಕಂ ಯನ್ಮುಖೇನ ಸಮಗೃ-ಹ್ಣಾತ್ತದಧಯತ್ತಸ್ಮಾದ್ದ್ವೇ ಸವನೇ ಶುಕ್ರವತೀ ಪ್ರಾತಃಸವನಂ ಮಾಧ್ಯಂದಿನಂ ಚ ತಸ್ಮಾತ್ತೃ-ತೀಯಸವನ ಋಜೀಷಮಭಿಷುಣ್ವಂತಿ ಧೀತಮಿವ ಹಿ ಮನ್ಯಂತೇ ’ ಇತಿ । ತಥೈವ ತ್ರಿಷ್ಟುಪ್-ಛಂದೋ ಯದಸ್ತಿ ಏತದಧೀತರಸಮಪೀತರಸಂ ಮಾಧ್ಯಂದಿನಸವನಸಂಬಂಧಿತ್ವಾತ್ । ಅತ ಏತಚ್ಛುಕ್ರಿಯಂ ರಸಸ್ತದುಪೇತಂ ಶುಕ್ರಿಯಮತೋಽಸ್ಯ ತೃತೀಯಸವನಸ್ಯ ಸರಸತ್ವಾರ್ಥಂ ತ್ರಿಷ್ಟುಭೋಽನ್ವಾಹೇತ್ಯುತ್ತರಂ ಬ್ರೂಯಾತ್ । ಅಥೋ ಅಪಿ ಚ ತೇನ ಸರಸತ್ವೇನೇಂದ್ರಮೇವ ತೃತೀಯಸವನೇ ಭಾಗವಂತಂ ಕರೋತಿ । ತ್ರಿಷ್ಟುಪ್‌ಛಂದಸ ಐಂದ್ರತ್ವಾತ್ । ತೇನೇಂದ್ರಭಾವ-(ಗ)ತ್ವಂ ಯುಕ್ತಮ್ ॥

ಪ್ರಾತಃಸವನ ಮತ್ತು ಮಾಧ್ಯಂದಿನಸವನಗಳಲ್ಲಿರುವಂತೆ ತೃತೀಯಸವನದಲ್ಲಿ ಜಜ್ಜುವ ಸೋಮಲತೆಗಳಲ್ಲಿ ರಸವಿರುವುದಿಲ್ಲ. ಅದರ ರಸವು ಪೂರ್ವದಲ್ಲಿಯೇ ಶ್ಯೇನರೂಪವಾದ ಗಾಯತ್ರಿಯಿಂದ ಪಾನಮಾಡಲ್ಪಟ್ಟಿರುವುದರಿಂದ ಅದು ಅರಸವಾಗಿರುವುದು. ಹೇಗೆಂದರೆ–ಪೂರ್ವದಲ್ಲಿ ಸೋಮವು ಸ್ವರ್ಗದಲ್ಲಿದ್ದಿತು. ಅದನ್ನು ಯಜ್ಞಗಳಲ್ಲಿ ಉಪಯೋಗಿಸುವುದಕ್ಕಾಗಿ ಭೂಮಿಗೆ ತರಬೇಕೆಂದು ದೇವತೆಗಳು ಯೋಚಿಸಿ ಅದಕ್ಕೊಂದು ಉಪಾಯವನ್ನು ಮಾಡಿದರು. ಗಾಯತ್ರೀ ಮೊದಲಾದ ಛಂದಸ್ಸುಗಳಿಗೆ ಸ್ವರ್ಗಕ್ಕೆ ಹೋಗಿ ಸೋಮವನ್ನು ತರುವ ಶಕ್ತಿ ಇರುವುದು. ಆದುದರಿಂದ ಸೋಮವನ್ನು ಭೂಮಿಗೆ ತರಬೇಕೆಂದು ದೇವತೆಗಳು ಗಾಯತ್ರ್ಯಾದಿ ಛಂದಸ್ಸುಗಳನ್ನು ಪ್ರಾರ್ಥಿಸಿದರು. ಆ ಪ್ರಾರ್ಥನೆಯನ್ನಂಗೀಕರಿಸಿ ಗಾಯತ್ರ್ಯಾದಿ ಛಂದಸ್ಸುಗಳು ಸ್ವರ್ಗಕ್ಕೆ ಹೋಗಲು ಸಮ್ಮತಿಸಿದವು. ಈ ವಿಷಯದಲ್ಲಿ ಒಂದು ಉಪಾಖ್ಯಾನವಿರುವುದು. ಅದನ್ನು ಭಾಷ್ಯಕಾರರು ಇಲ್ಲಿ ಉದಾಹರಿಸಿರುವರು —

ಜಗತ್ಯುದಪತಚ್ಚತುರ್ದಶಾಕ್ಷರಾಸತೀ ಸಾಪ್ರಾಪ್ಯ ನ್ಯವರ್ತತ ತಸ್ಯೈ ದ್ವೇ ಅಕ್ಷರೇ ಅಮೀಯೇತಾಗ್‌ಂ ಸಾ ಪಶುಭಿಶ್ಚ ದೀಕ್ಷಯಾ ಚಾಗಚ್ಛತ್ತಸ್ಮಾಜ್ಜಗತೀಛಂದಸಾಂ ಪಶವ್ಯ-ತಮಾ ತಸ್ಮಾತ್ಪಶುಮಂತಂ ದೀಕ್ಷೋಪನಮತಿ ತ್ರಿಷ್ಟುಗುದಪತತ್ತ್ರಯೋದಶಾಕ್ಷರಾಸತೀ ಸಾ-ಪ್ರಾಪ್ಯ ನ್ಯವರ್ತತ ತಸ್ಯೈ ದ್ವೇ ಅಕ್ಷರೇ ಅಮೀಯೇತಾಗ್‌ಂ ಸಾ ದಕ್ಷಿಣಾಭಿಶ್ಚ ತಪಸಾ ಚಾಗ-ಚ್ಛತ್ತಸ್ಮಾತ್ತ್ರಿಷ್ಟುಭೋ ಲೋಕೇ ಮಾಧ್ಯಂದಿನೇ ಸವನೇ ದಕ್ಷಿಣಾನೀಯಂತ ಏತತ್ಖಲು ವಾವ ತಪ ಇತ್ಯಾಹುರ್ಯಃ ಸ್ವಂ ದದಾತೀತಿ ಗಾಯತ್ರ್ಯುದಪತಚ್ಚತುರಕ್ಷರಾ ಸತ್ಯಜಯಾ ಜ್ಯೋತಿ-ಷಾ ತಮಸ್ಯಾ ಅಜಾಭ್ಯರುಂಧತ ತದಜಾಯಾ ಅಜತ್ವಗ್‌ಂ ಸಾ ಸೋಮಂ ಚಾಹರಚ್ಚತ್ವಾರಿ ಚಾಕ್ಷರಾಣಿ ಸಾಷ್ಟಾಕ್ಷರಾ ಸಮಪದ್ಯತ ಬ್ರಹ್ಮವಾದಿನೋ ವದಂತಿ ಕಸ್ಮಾತ್ಸತ್ಯಾದ್ಗಾಯತ್ರೀ ಕನಿಷ್ಠಾ ಛಂದಸಾಗ್‌ಂ ಸತೀ ಯಜ್ಞಮುಖಂ ಪರೀಯಾಯೇತಿ ಯದೇ ವಾದಃ ಸೋಮಮಾ-ಹರತ್ತಸ್ಮಾದ್ಯಜ್ಞಮುಖಂ ಪರ್ಯೈತ್ತಸ್ಮಾತ್ತೇಜಸ್ವಿನೀತಮಾ ಪದ್ಭ್ಯಾಂ ದ್ವೇ ಸವನೇ ಸಮಗೃಹ್ಣಾ-ನ್ಮುಖೇನೈಕಂ ಯನ್ಮುಖೇನ ಸಮಗೃಹ್ಣಾತ್ತದಧಯತ್ತಸ್ಮಾದ್ದ್ವೇ ಸವನೇ ಶುಕ್ರವತೀ ಪ್ರಾತಃ-ಸವನಂ ಚ ಮಾಧ್ಯಂದಿನಂ ಚ ತಸ್ಮಾತ್ತೃತೀಯಸವನಋಜೀಷಮಭಿಷುಣ್ವಂತಿ ಧೀತಮಿವ ಹಿ ಮನ್ಯಂತೇ ॥ (ತೈ. ಸಂ. ೬-೧-೬-೨, ೩, ೪)

ಮೊದಲು ಜಗತೀಛಂದಸ್ಸು ತಾನು ಹೋಗುತ್ತೇನೆಂದು ಹೇಳಿ ಅಂತರಿಕ್ಷಕ್ಕೆ ನೆಗೆಯಿತು. ಆದರೆ ಸ್ವಲ್ಪ ದೂರ ಹೋಗುವುದರೊಳಗಾಗಿ ಶಕ್ತಿಗುಂದಿ, ಮುಂದಕ್ಕೆ ಹೋಗಲು ಸಾಮರ್ಥ್ಯವಿಲ್ಲದೆ ಹಿಂತಿರುಗಬೇಕಾಯಿತು. ಇದರಿಂದ ಜಗತೀ ಛಂದಸ್ಸಿನ ಪಾದದಲ್ಲಿ ಮುಂಚೆ ಇದ್ದ ಹದಿನಾಲ್ಕು ಅಕ್ಷರಗಳಲ್ಲಿ ಎರಡಕ್ಷರಗಳನ್ನು ಕಳೆದುಕೊಂಡಿತು. ಆದುದರಿಂದ ಈಗ ಜಗತೀಛಂದಸ್ಸಿನ ಪ್ರತಿಯೊಂದು ಪಾದಕ್ಕೂ ಹನ್ನೆರಡು ಅಕ್ಷರಗಳು ಮಾತ್ರವಿರುವವು. ಈ ರೀತಿ ಮುಂದೆ ಹೋಗಲು ಸಾಮರ್ಥ್ಯವಿಲ್ಲದೆ ಹಿಂದಕ್ಕೆ ಬರುವಾಗ ಆ ಜಗತೀಛಂದಸ್ಸು ತನ್ನ ಜತೆಯಲ್ಲಿ ಯಜ್ಞಸಾಧನವಾದ ಪಶುವನ್ನೂ ದೀಕ್ಷಾಕ್ರವನ್ನೂ ತಂದಿತು.

ಆದುದರಿಂದ ಜಗತೀಛಂದಸ್ಸಿಗೆ ಪಶುಗಳನ್ನು ಕೊಡುವ ಶಕ್ತಿ ಇರುವುದು. ಯಜ್ಞಮಾಡುವ ಯಜಮಾನನು ಪಶುಸಂಪತ್ತನ್ನು ಅಪೇಕ್ಷಿಸುವವನಾದರೆ ಅವನನ್ನು ಯಜ್ಞದಲ್ಲಿ ದೀಕ್ಷೆಯಿಂದ ಸಂಸ್ಕರಿಸುವಾಗ ಜಗತೀಛಂದಸ್ಸಿನ ಮಂತ್ರಗಳಿಂದಲೇ ಸಂಸ್ಕರಿಸುವರು. ಅನಂತರ ತ್ರಿಷ್ಟುಪ್‌ಛಂದಸ್ಸು ತಾನು ಹೋಗುತ್ತೇನೆಂದು ಹೇಳಿ ಅಂತರಿಕ್ಷಕ್ಕೆ ನೆಗೆಯಿತು. ಸ್ವಲ್ಪದೂರ ಹೋಗುವುದರೊಳಗಾಗಿ ಅದಕ್ಕೂ ಆಯಾಸವಾಗಿ ಅದೂ ಹಿಂತಿರುಗಬೇಕಾಯಿತು. ಆಗ ತ್ರಿಷ್ಟುಪ್‌ಛಂದಸ್ಸಿನ ಪಾದದಲ್ಲಿ ಹದಿಮೂರು ಅಕ್ಷರಗಳಲ್ಲಿ ಎರಡು ಅಕ್ಷರಗಳನ್ನು ಕಳೆದುಕೊಂಡದ್ದರಿಂದ ತ್ರಿಷ್ಟುಪ್‌ಛಂದಸ್ಸಿನ ಪಾದಕ್ಕೆ ಈಗ ಹನ್ನೊಂದಕ್ಷರಗಳು ಮಾತ್ರವಿರುವವು. ಈ ತ್ರಿಷ್ಟುಪ್‌ಛಂದಸ್ಸು ಹಿಂತಿರುಗುವಾಗ ತನ್ನ ಜೊತೆಯಲ್ಲಿ ಯಜ್ಞಕ್ಕೆ ಸಾಧನಭೂತವಾದ ದಕ್ಷಿಣೆಯನ್ನೂ, ತಪಸ್ಸನ್ನೂ ಸ್ವರ್ಗದಿಂದ ತಂದಿತು.

ಆದುದರಿಂದ ಈಗಲೂ ಲೋಕವ್ಯವಹಾರದಲ್ಲಿ ಯಜ್ಞಮಾಡುವಾಗ ಮಾಧ್ಯಂದಿನ ಸವನಕಾಲದಲ್ಲಿ ಋತ್ವಿಜರಿಗೆ ದಕ್ಷಿಣೆಯನ್ನು ಕೊಡುವ ಪದ್ಧತಿ ಇರುವುದು. ಈ ರೀತಿ ಸ್ವಯಾರ್ಜಿತವಾದ ಧನವನ್ನು ದಾನಮಾಡುವುದೇ ತಪಸ್ಸೆಂದು ಹೇಳಲ್ಪಡುವುದು. ಅನಂತರ ಗಾಯತ್ರಿಯು ತಾನು ಹೋಗುತ್ತೇನೆಂದು ಹೇಳಿ ಶ್ಯೇನಪಕ್ಷಿಯ ರೂಪದಿಂದ ಅಂತರಿಕ್ಷಕ್ಕೆ ನೆಗೆದು ಹಾರಿಹೋಯಿತು. ಹೋಗುವಾಗ ಸಹಾಯಕ್ಕಾಗಿ ತನ್ನ ಜತೆಯಲ್ಲಿ ಒಂದು ಹೆಣ್ಣು ಆಡನ್ನು ಕರೆದುಕೊಂಡುಹೋಯಿತು. ಹೋಗುವಾಗ ಗಾಯತ್ರೀಛಂದಸ್ಸಿನ ಪಾದಗಳಿಗೆ ನಾಲ್ಕು ಅಕ್ಷರಗಳು ಮಾತ್ರವಿದ್ದಿತು. ಛಂದಸ್ಸುಗಳಲ್ಲೆಲ್ಲಾ ಅಕ್ಷರಪರಿಮಿತಿಯಿಂದ ಗಾಯತ್ರಿಯು ಸಣ್ಣದಾಗಿದ್ದರೂ ಅದು ತನ್ನ ಸಾಮರ್ಥ್ಯದಿಂದ ಸ್ವರ್ಗವನ್ನು ಸೇರಿ, ಅಲ್ಲಿದ್ದ ಕಾವಲುಗಾರರನ್ನು ಗೆದ್ದು ಸೋಮವನ್ನು ತರುವಾಗ ಜಗತೀ ಮತ್ತು ತ್ರಿಷ್ಟುಪ್‌ಛಂದಸ್ಸುಗಳು ಕಳೆದುಕೊಂಡಿದ್ದ ಎರಡೆರಡು ಅಕ್ಷರಗಳನ್ನು ಹಿಂದಕ್ಕೆ ತಂದಿತು. ಆ ನಾಲ್ಕು ಅಕ್ಷರಗಳೂ ಗಾಯತ್ರೀಛಂದಸ್ಸಿನ ಮೊದಲಿದ್ದ ನಾಲ್ಕು ಅಕ್ಷರಗಳಿಗೆ ಸೇರಿ ಗಾಯತ್ರಿಯ ಪ್ರತಿಪಾದಕ್ಕೂ ಎಂಟು ಅಕ್ಷರಗಳಾದವು. ಸೋಮವನ್ನು ಸ್ವರ್ಗದಿಂದ ತಂದದ್ದರಿಂದ ಗಾಯತ್ರಿಯ ಪ್ರಮಾಣದಲ್ಲಿ ಚಿಕ್ಕದಾಗಿದ್ದರೂ ಅದಕ್ಕೆ ಹೆಚ್ಚಿನ ಶ್ರೇಷ್ಠತೆಯು ದೊರಕಿತು. ಸೋಮವನ್ನು ಭೂಮಿಗೆ ತರುವಾಗ ಶ್ಯೇನಪಕ್ಷಿಯ ರೂಪದಲ್ಲಿದ್ದ ಗಾಯತ್ರಿಯು ಸೋಮವನ್ನು ತನ್ನ ಎರಡು ಪಾದಗಳಲ್ಲಿ ಹಿಡಿದುಕೊಂಡು, ಮತ್ತೊಂದು ಭಾಗವನ್ನು ಕೊಕ್ಕಿನಲ್ಲಿ ಕಚ್ಚಿಕೊಂಡು ಬಂದಿತು. ಎರಡು ಪಾದಗಳಲ್ಲಿ ಹಿಡಿದಿದ್ದ ಸೋಮಲತೆಗಳ ಭಾಗವು ಪ್ರಾತಃಸವನ ಮತ್ತು ಮಾಧ್ಯಂದಿನಸವನಗಳಾದವು. ಕೊಕ್ಕಿನಲ್ಲಿ ಕಚ್ಚಿ ತಂದಿದ್ದ ಭಾಗವು ತೃತೀಯಸವನವಾಯಿತು. ಕೊಕ್ಕಿನಲ್ಲಿ ಕಚ್ಚಿ ತರುವಾಗ ಆ ಶ್ಯೇನಪಕ್ಷಿಯು ಸೋಮಲತೆಯನ್ನು ಕಚ್ಚಿ ರಸವನ್ನು ಹೀರಿದ್ದುದರಿಂದ ಆ ಲತೆಗಳಲ್ಲಿ ಸೋಮರಸವು ಹೆಚ್ಚಾಗಿಲ್ಲದೆ ನಿಸ್ಸಾರವಾಯಿತು. ಅದನ್ನೇ ಇಲ್ಲಿ ತೃತೀಯಸವನವು ಸಾರವತ್ತಾಗಿಲ್ಲದೆ ಅರಸವಾಗಿರುವುದೆಂದು ಹೇಳಿದೆ. ಈಗಲೂ ತೃತೀಯಸವನದಲ್ಲಿ ಹೊಸದಾಗಿ ಸೋಮಲತೆಗಳನ್ನು ಜಜ್ಜಿ ಹಿಂಡದೆ, ಮಾಧ್ಯಂದಿನಸವನಕಾಲದಲ್ಲಿ ರಸವನ್ನು ಹಿಂಡಿ ಉಳಿದಿದ್ದ ಸಿಪ್ಪೆಯಂತಿರುವ ಲತೆಗಳನ್ನೇ ನೀರಿನಲ್ಲಿ ನೆನೆಸಿ ಪುನಃ ರಸವನ್ನು ಹಿಂಡಿ ತೆಗೆಯುವರು. ಈ ಸಿಪ್ಪೆಗಳಲ್ಲಿ ರಸವು ಹೆಚ್ಚಾಗಿಲ್ಲವಾದ್ದರಿಂದ ಇದರ ರಸವನ್ನು ಹೆಚ್ಚಿಸುವುದಕ್ಕಾಗಿ ಇದಕ್ಕೆ ಮಾಧ್ಯಂದಿನಸಂಬಂಧವನ್ನು ಉಂಟುಮಾಡುವರು ಎಂದರೆ ಮಾಧ್ಯಂದಿನಸವನದಲ್ಲಿ ಉಪಯೋಗಿಸುವ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳನ್ನೇ ತೃತೀಯಸವನದಲ್ಲಿಯೂ ಉನ್ನೀಯಮಾನಸೂಕ್ತದಲ್ಲಿಯೂ ಪಠಿಸುವರು. ಹೇಗೆಂದರೆ ಆರಿಹೋದ ಅಥವಾ ಆರಿಹೋಗುತ್ತಿರುವ ಅಗ್ನಿಯನ್ನು ಹೊಸದಾಗಿ

ಕಾಷ್ಠಗಳನ್ನು ಹಾಕಿ ಚೆನ್ನಾಗಿ ಉರಿಯುವಹಾಗೆ ಮಾಡುವಂತೆ ತೃತೀಯಸವನದಲ್ಲಿ ರಸಕ್ಕಾಗಿ ಉಪಯೋಗಿಸುವ ಸಿಪ್ಪೆಗಳಲ್ಲಿ ರಸವು ಹೆಚ್ಚಾಗಿ ಒರುವುದಕ್ಕಾಗಿ ಮಾಧ್ಯಂದಿನಸವನದಂತೆ ತೃತೀಯಸವನದಲ್ಲಿ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳನ್ನು ಪಠಿಸಿ ಇದಕ್ಕೆ ಮಾಧ್ಯಂದಿನಸಂಬಂಧವನ್ನು ಕಲ್ಪಿಸುವರು. ಈರೀತಿ ಸಂಬಂಧಕಲ್ಪನೆಗೆ **ಶುಕ್ರಿಯಂ** ಎಂದು ಹೆಸರು. ಎಂದರೆ ಆರಿಹೋಗಿರುವುದನ್ನೂ ಪುನಃ ಉದ್ದೀಪನಗೊಳಿಸುವುದು ಎಂದರ್ಥವು. ಈರೀತಿ ತೃತೀಯಸವನದಲ್ಲಿ ಉದ್ದೀಪನಗೊಳಿಸುವುದಕ್ಕಾಗಿಯೂ, ಸಿಪ್ಪೆಗಳಲ್ಲಿ ರಸವು ಹೆಚ್ಚಾಗಿ ಒರುವುದಕ್ಕಾಗಿಯೂ ತ್ರಿಷ್ಟುಪ್‌ಛಂದಸ್ಸು ಇಂದ್ರನಿಗೆ ಪ್ರಿಯವಾಗಿರುವುದರಿಂದ ಇಂದ್ರನಿಗೆ ಹಿತವನ್ನುಂಟುಮಾಡಿ ತೃತೀಯಸವನದಲ್ಲಿ ಇಂದ್ರನಿಗೂ ಸಂಬಂಧವನ್ನು ಕಲ್ಪಿಸುವುದಕ್ಕಾಗಿಯೂ, ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳುಳ್ಳ ಉನ್ನೀಯಮಾನಸೂಕ್ತವನ್ನು ತೃತೀಯಸವನದಲ್ಲಿ ಪಠಿಸುವರು. ಜಗತೀಛಂದಸ್ಸಿನ ಋಕ್ಕುಗಳನ್ನು ಉಪಯೋಗಿಸದಿರುವುದಕ್ಕೆ ಇದೇ ಕಾರಣವು.

**ಅಥಾಹ ಯದೈಂದ್ರಾರ್ಭವಂ ವೈ ತೃತೀಯಸವನಮಥ ಕಸ್ಮಾದೇಷ ಏವ ತೃತೀಯಸವನೇ ಪ್ರಸ್ಥಿತಾನಾಂ ಪ್ರತ್ಯಕ್ಷಾದೈಂದ್ರಾರ್ಭವ್ಯಾ ಯಜತೀಂದ್ರ ಋಭುಭಿರ್ವಾಜವದ್ಭಿಃ ಸಮುಕ್ಷಿತಮಿತಿ ಹೋತ್ರೈವ ನಾನಾದೇವತ್ಯಾಭಿರಿತರೇ ಕಥಂ ತೇಷಾಮೈಂದ್ರಾರ್ಭವ್ಯೋ ಭವಂತೀತಿ ।**

**ಉಕ್ತಂ ಚೋದ್ಯಂ ಸಮಾಧಾಯ ಪ್ರಸ್ಥಿತಯಾಜ್ಯಾವಿಷಯೇ ಚೋದ್ಯಮುದ್ಭಾವಯತಿ—ಅಥೋನ್ನೀಯಮಾನಸೂಕ್ತಕಥನಾನಂತರಂ ಕಶ್ಚಿದ್ಬ್ರಹ್ಮವಾದೀ ಚೋದ್ಯಮಾಹ ॥ ಯದ್ಯಸ್ಮಾತ್ಕಾರಣಾತ್ತೃತೀಯಸವನಮೈಂದ್ರಾರ್ಭವಮ್ ತಚ್ಚ ಪೂರ್ವಮುಪಪಾದಿತಮ್ । ಏವಂ ಸತ್ಯೇಕ ಏವ ಹೋತಾ ಪ್ರಸ್ಥಿತಹೋಮಾನಾಂ ಪ್ರತ್ಯಕ್ಷಾತ್ ಪ್ರತ್ಯಕ್ಷೇಣ ಮುಖ್ಯೇನೈವೇಂದ್ರಶಬ್ದೇನ ಋಭುಶಬ್ದೇನ ಚ ಯುಕ್ತಯರ್ಚಾ ಯಜತಿ । ಇಂದ್ರ ಋಭುಭಿರಿತ್ಯಾದ್ಯಾ ಸೇಯಮೃಗವಗಂತವ್ಯಾ । ಹೋತ್ರೈವ ತಯಾ ಯಜತಿ ನ ತ್ವಿತರೇ ಷಡೃತ್ವಿಜಃ । ತೇ ತು ನಾನಾವಿಧದೇವತಾಕಾಭಿರ್ವಕ್ಷ್ಯಮಾಣಾಭಿರೃಗ್ಭಿರ್ಯಜಂತಿ । ತಸ್ಮಾತ್ಕಾರಣಾದೇತತ್ಸಂಪನ್ನಮ್ । ಕಿಂಚ ತೇಷಾಂ ಷಣ್ಣಾಂ ಋತ್ವಿಜಾಂ ಸಂಬಂಧಿನ್ಯೋ ಯಾಜ್ಯಾಃ ಕಥಮೈಂದ್ರಾರ್ಭವ್ಯೋ ದ್ವಿವಿಧದೇವತಾಕಾ ಭವಂತೀತಿ ಚೋದ್ಯಮ್ ॥**

ಇದುವರೆಗೂ ತೃತೀಯಸವನಕ್ಕಾಗಿ ಪಠಿಸುವ ಉನ್ನೀಯಮಾನಸೂಕ್ತದಲ್ಲಿ ಜಗತೀಛಂದಸ್ಸಿಗೆ ಬದಲಾಗಿ ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳನ್ನು ಉಪಯೋಗಿಸಿರುವ ವಿಷಯದಲ್ಲಿ ಆಕ್ಷೇಪಕ್ಕೆ ಸಮಾಧಾನವನ್ನು ಹೇಳಿ ಈಗ ಪ್ರಸ್ಥಿತ ಯಾಜ್ಯಾ ಋಕ್ಕುಗಳ ವಿಷಯದಲ್ಲಿ ಉದ್ಭವಿಸುವ ಸಂಶಯಾದಿಗಳಿಗೆ ಸಮಾಧಾನವನ್ನು ಹೇಳುವರು. ಉನ್ನೀಯಮಾನಸೂಕ್ತಪಠನಾನಂತರ ತೃತೀಯಸವನದಲ್ಲಿ ಹೋತ್ರಾದಿಸಪ್ತಋತ್ವಿಕ್ಕುಗಳು ಪ್ರಸ್ಥಿತಯಾಜ್ಯಾಮಂತ್ರಗಳನ್ನೂ ಐಂದ್ರಾರ್ಭವ ಎಂದರೆ ಇಂದ್ರ ಮತ್ತು ಋಭುದೇವತಾಕವಾದ ಋಕ್ಕುಗಳಿಂದ ಪಠಿಸುವರೆಂದು ಹಿಂದೆ ಹೇಳಿದೆ. ಆದರೆ ಪ್ರಸ್ಥಿತಯಾಜ್ಯಾಮಂತ್ರಪಠನಕಾಲದಲ್ಲಿ ಹೋತವೆಂಬ ಋತ್ವಿಜನು ಇಂದ್ರ ಮತ್ತು ಋಭುಶಬ್ದಗಳನ್ನೊಳಗೊಂಡಿರುವ ಎಂದರೆ **ಇಂದ್ರ ಋಭುಭಿರ್ವಾಜವದ್ಭಿಃ** (ಋ. ಸಂ. ೩-೬೦-೫) ಎಂಬ ಐಂದ್ರಾರ್ಭವದೇವತಾಕವಾದ ಯಾಜ್ಯಾಮಂತ್ರವನ್ನು ಪಠಿಸುವನು. ಏಕೆಂದರೆ ಹೋತೃವು ಪಠಿಸುವ ಯಾಜ್ಯಾಮಂತ್ರದಲ್ಲಿ **ಇಂದ್ರ ಋಭುಭಿಃ** ಎಂಬ ಶಬ್ದಗಳ ಪ್ರಯೋಗವಿರುವುದು. ಹೋತೃವು ಮಾತ್ರ ಇಂತಹ ದ್ವಿದೇವತಾಕವಾದ ಮಂತ್ರವನ್ನು ಪಠಿಸಿ ಹೋಮಮಾಡುವನು. ಆದರೆ ಇತರ ಆರುಮಂದಿ ಋತ್ವಿಜರು ಹಾಗೆ ಮಾಡುವುದಿಲ್ಲ. ಆದರೆ

ಅವರು ನಾನಾದೇವತಾಕವಾದ ಮಂತ್ರಗಳನ್ನು ಪಠಿಸಿ ಹೋಮಮಾಡುವರು. ಆದುದರಿಂದ ಈ ಆರುಮಂದಿ ಋತ್ವಿಜರು ಪಠಿಸುವ ಯಾಜ್ಯಮಂತ್ರಗಳು ಹೇಗೆ ಐಂದ್ರಾರ್ಭವ ಮಂತ್ರಗಳಾಗವುವು ? ಎಂದರೆ ಇವರ ಮಂತ್ರಗಳಲ್ಲಿ ಇಂದ್ರ ಮತ್ತು ಋಭು ಗಳು ಪ್ರಸ್ತಾಪವಿಲ್ಲದಿರುವುದರಿಂದ ಇವರ ಯಾಜ್ಯಾಮಂತ್ರಗಳು ತೃತೀಯಸವನದಲ್ಲಿ ಮುಖ್ಯದೇವತೆಗಳಾದ ಇಂದ್ರ ಮತ್ತು ಋಭು ಗಳನ್ನು ಹೇಗೆ ಸ್ತುತಿಸುವವು ? ಇದು ವಿಚಿತ್ರವಲ್ಲವೇ ?

**ಇಂದ್ರಾವರುಣಾ ಸುತಮಿತಿ ಮೈತ್ರಾವರುಣೋ ಯಜತಿ ಯುವೋ ರಥೋ ಅಧ್ವರಂ ದೇವವೀತಯ ಇತಿ ಬಹೂನಿ ವಾಹ ತದೃಭೂಣಾಂ ರೂಪಂ ।**

ತತ್ರ ಹೋತುರ್ಯಾಜ್ಯಯಾ ಐಂದ್ರಾರ್ಭವತ್ವೇನ ಪರಿತೋಷಾತ್ತಾಂ ತಥೈವಾಂಗೀಕೃತ್ಯೇತರೇಷಾಂ ಯಾಜ್ಯಾಸು ಕ್ರಮೇಣೈಂದ್ರಾರ್ಭವತ್ವ (ತ್ವಂ) ದರ್ಶಯಿತುಕಾಮಃ ಪ್ರಥಮತೋ ಮೈತ್ರಾವರುಣಸ್ಯ ಯಾಜ್ಯಾಯಾಂ ತದ್ದರ್ಶಯತಿ ಇಂದ್ರಾವರುಣೇತ್ಯಸ್ಯಾಂ ಯಾಜ್ಯಾಯಾಂ ಯುವೋ ರಥ ಇತ್ಯಸ್ಮಿನ್ಪಾದೇ ದೇವವೀತಯ ಇತಿ ಪದಂ ವಿದ್ಯತೇ । ದೇವಾನಾಂ ವೀತಿಃ ಪ್ರಾಪ್ತಿರ್ದೇವವೀತಿರಿತಿ ತಸ್ಯ ಸಮಾಸಃ । ತಸ್ಯ ಸಮಾಸೇ ಷಷ್ಠೀಬಹುವಚನಾಂತೇನ ಶಬ್ದೇನ ಬಹೂನ್ಯೇವ ರೂಪಾಣಿ ಪ್ರತೀಯಂತೇ । ತತ್ರ ಬಹುತ್ವಮೃಭೂಣಾಂ ಸ್ವರೂಪಂ ಮನುಷ್ಯರೂಪಾಣಾಮೃಭುಶಬ್ದವಾಚ್ಯಾನಾಂ ಮಹರ್ಷೀಣಾಂ ಬಹುತ್ವಾತ್ । ತಸ್ಮಾದರ್ಥತಃ ಋಭುಸದ್ಭಾವಾದಿಂದ್ರಶಬ್ದಸ್ಯ ಚ ಸಾಕ್ಷಾಚ್ಛ್ರವಣಾದಿಯಮೈಂದ್ರಾರ್ಭವೀ ॥

ಹಿಂದೆ ಹೋತೃವು— ಇಂದ್ರ ಋಭುಭಿರ್ವಾಜವದ್ಭಿಃ ಎಂಬ ಐಂದ್ರಾರ್ಭವ ದೇವತಾಕವಾದ ಯಾಜ್ಯಾಮಂತ್ರ ವನ್ನು ಪಠಿಸುವದೆಂದು ಹೇಳಿದೆಯಷ್ಟೆ. ಈಗ ಇತರ ಋತ್ವಿಕ್ಕುಗಳು ಪಠಿಸುವ ಯಾಜ್ಯಾಮಂತ್ರಗಳಲ್ಲಿ ಐಂದ್ರಾರ್ಭವತ್ವವು ಎಂದರೆ ಇಂದ್ರ ಮತ್ತು ಋಭುದೇವತಾಕವಾದ ಸ್ತುತಿಯು ಇರುವುದನ್ನು ವಿವರಿಸುವರು. ಮೊದಲು ಮೈತ್ರಾವರುಣನು ಪಠಿಸುವ— **ಇಂದ್ರಾವರುಣಾ ಸುತಪಾವಿಮಂ** (ಋ. ಸಂ. ೬-೬೮-೧೦) ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸು ವನು. ಈ ಋಕ್ಕಿನ— **ಯುವೋ ರಥೋ ಅಧ್ವರಂ ದೇವವೀತಯೇ** ಎಂಬ ತೃತೀಯ ಪಾದದಲ್ಲಿ ದೇವವೀತಯೇ ಎಂಬ ಪದವಿರುವುದು. ಈ ಶಬ್ದಕ್ಕೆ ಸಮಾಸಮಾಡುವಾಗ— **ದೇವಾನಾಂ ವೀತಿಃ ಪ್ರಾಪ್ತಿರ್ದೇವವೀತಿರಿತಿ ತಸ್ಯ ಸಮಾಸಃ । ತಸ್ಯ ಸಮಾಸೇ ಷಷ್ಠೀಬಹುವಚನತ್ವೇನ ಶಬ್ದೇನ ಬಹೂನ್ಯೇವ ರೂಪಾಣಿ ಪ್ರತೀಯಂತೇ । ತತ್ರ ಬಹುತ್ವಮೃಭೂಣಾಂ ಸ್ವರೂಪಂ ।** ಎಂದಿರುವುದರಿಂದ ಈ ಶಬ್ದಕ್ಕೆ ದೇವತೆಗಳ ಪ್ರಾಪ್ತಿಗಾಗಿ ಎಂದರ್ಥವಿರುವುದು. ದೇವತೆಗಳ ಎಂಬ ಶಬ್ದವು ಷಷ್ಠೀವಿಭಕ್ತಿಯ ಬಹುವಚನವು. ಈ ಋಕ್ಕಿನಲ್ಲಿ ಇಂದ್ರಶಬ್ದವು ಪ್ರತ್ಯಕ್ಷವಾಗಿ ಇರುವುದರಿಂದ ಬಹುವಚನಶಬ್ದ ದಿಂದ ಬೋಧ್ಯವಾದ ದೇವತೆಗಳ ಎಂಬ ಪದವು ಮೂರುಮಂದಿ ಇರುವ ಋಭುಗಳಿಗೇ ಅನ್ವಯಿಸುವುದು. ಆದುದರಿಂದ ಈ ಋಕ್ಕಿನಲ್ಲಿ ಇಂದ್ರನೂ ಮತ್ತು ಋಭುಗಳೂ ಸ್ತುತರಾಗಿರುವರೆಂದು ಊಹಿಸಬೇಕು.

**ಇಂದ್ರಶ್ಚ ಸೋಮಂ ಪಿಬತಂ ಬೃಹಸ್ಪತ ಇತಿ ಬ್ರಾಹ್ಮಣಾಚ್ಛಂಸೀ ಯಜತ್ಯಾ ವಾಂ ವಿಶಂತ್ವಿಂದವಃ ಸ್ವಾಭುವ ಇತಿ ಬಹೂನಿ ವಾಹ ತದೃಭೂಣಾಂ ರೂಪಂ ॥**

ಬ್ರಾಹ್ಮಣಾಚ್ಛಂಸಿನೋ ಯಾಜ್ಯಾಯಾ ಮಾರ್ಭವತ್ತ್ವಂ ಸಂಪಾದಯತಿ- ಇಂದ್ರಶ್ಚೇ-ತ್ಯಾದಿಯಾಜ್ಯಾಯಾನಾ ನಾಂ ವಿಶಂತ್ವಿತ್ಯಸ್ಮಿನ್ಪಾದೇ ವಿಶಂತ್ವಿತ್ಯಾದೀನಿ ಬಹುವಚನಾಂತಾನಿ ಪದಾನಿ ಶ್ರೂಯಂತೇ ತೈರಭಿಧೇಯಂ ಬಹುತ್ವಮೃಭೂಣಾಂ ಸ್ವರೂಪಂ ॥

ಬ್ರಾಹ್ಮಣಾಚ್ಛಂಸಿಯು— ಇಂದ್ರಶ್ಚ ಸೋಮಂ ಪಿಬತಂ ಬೃಹಸ್ಪತೇ (ಋ. ಸಂ. ೪-೫೦-೧೦) ಎಂಬ ಋಕ್ಕನ್ನು ಪಠಿಸುವನು. ಈ ಋಕ್ಕಿನಲ್ಲಿಯೂ ಇಂದ್ರಶಬ್ದಪ್ರಯೋಗವಿರುವುದು. ಈ ಋಕ್ಕಿನ ಆ ನಾಂ ವಿಶಂತ್ವಿಂದವಃ ಸ್ವಾಭುವಃ ಎಂಬ ಮೂರನೆಯ ಪಾದದಲ್ಲಿ ಇಂದವಃ ಎಂದು ಬಹುವಚನಶಬ್ದಪ್ರಯೋಗವು ಋಭುಗಳಿಗೆ ಅನ್ವಯಿಸುವುದರಿಂದ ಈ ಋಕ್ಕಿನಲ್ಲಿಯೂ ಐಂದ್ರಾರ್ಭವವಿದ್ದಂತಾಯಿತು.

ಆ ವೋ ವಹಂತು ಸಪ್ತಯೋ ರಘುಷ್ಯದ ಇತಿ ಪೋತಾ ಯಜತಿ ರಘುಪತ್ವಾನಃ ಪ್ರ ಜಿಗಾತ ಬಾಹುಭಿರಿತಿ ಬಹೂನಿ ವಾತ ತದೃಭೂಣಾಂ ರೂಪಂ ॥

ಪೋತುರ್ಯಾಜ್ಯಾಯಾ ಮಾರ್ಭವತ್ವಂ ದರ್ಶಯತಿ— ಆ ವೋ ವಹಂತ್ವಿತಿ ಯಾಜ್ಯಾಯಾಂ ರಘುಪತ್ವಾನ ಇತ್ಯಸ್ಮಿನ್ಪಾದೇ ಬಹುವಚನಾಂತೈಃ ಪದೈರಭಿಧೇಯಂ ಬಹುತ್ವಮೃಭೂಣಾಂ ಸ್ವರೂಪಮ್ ॥

ಪೋತೃವೆಂಬ ಋತ್ವಿಜನು— ಆ ವೋ ವಹಂತು ಸಪ್ತಯೋ ರಘುಷ್ಯದಃ (ಋ. ಸಂ. ೧-೮೫-೬) ಎಂಬ ಋಕ್ಕನ್ನು ಪಠಿಸುವನು. ಈ ಋಕ್ಕಿನಲ್ಲಿ ಎರಡನೆಯ ಪಾದದಲ್ಲಿ ರಘುಪತ್ವಾನಃ ಎಂಬ ಬಹುವಚನಾಂತಶಬ್ದವೂ ಇನ್ನೂ ಇತರ ಬಹುವಚನಾಂತಶಬ್ದಗಳೂ ಇರುವುದರಿಂದ ಬಹುವಚನಶಬ್ದಗಳ ಪ್ರಯೋಗವು ಋಭುಗಳನ್ನೂ ನಿರ್ದೇಶಿಸುವುದೆಂದೂ ತಿಳಿಯಬೇಕು.

ಅಮೇವ ನಃ ಸುಹವಾ ಆ ಹಿ ಗಂತನೇತಿ ನೇಷ್ಟಾ ಯಜತಿ ಗಂತನೇತಿ ಬಹೂನಿ ವಾಹ ತದೃಭೂಣಾಂ ರೂಪಂ ॥

ನೇಷ್ಟುರ್ಯಾಜ್ಯಾಯಾ ಮಾರ್ಭವತ್ವಂ ದರ್ಶಯತಿ— ಅಮೇವ ನ ಇತಿ ಯಾಜ್ಯಾಯಾಂ ತಸ್ಮಿನ್ನೇವ ಪಾದೇ ಗಂತನೇತಿ ಪದಸ್ಯ ಗಚ್ಛತೇತ್ಯರ್ಥೇ ಸತಿ ಲೋಣ್ಮಧ್ಯಮಪುರುಷ-ಬಹುವಚನಾಂತೇನ ಪ್ರತೀತಂ ಬಹುತ್ವಮೃಭೂಣಾಂ ಸ್ವರೂಪಮ್ ॥

ನೇಷ್ಟೃವೆಂಬ ಋತ್ವಿಜನು— ಅಮೇವ ನಃ ಸುಹವಾ ಆ ಹಿ ಗಂತನ (ಋ. ಸಂ. ೨-೩೬-೩) ಎಂಬ ಋಕ್ಕನ್ನು ಪಠಿಸಿ ಹೋಮಮಾಡುವನು. ಈ ಯಾಜ್ಯಾಮಂತ್ರದಲ್ಲಿಯೂ ಸಹ ಗಂತನ ಎಂದು ಲೋಣ್ಮಧ್ಯಮಪುರುಷ ಬಹುವಚನಾಂತ ಪದವಿರುವುದರಿಂದ ಈ ಋಕ್ಕಿನಲ್ಲಿಯೂ ಐಂದ್ರಾರ್ಭವಪ್ರತಿಪಾದನೆ ಇರುವುದೆಂದು ತಿಳಿಯಬೇಕು.

ಇಂದ್ರಾವಿಷ್ಣೂ ಪಿಬತಂ ಮಧ್ವೋ ಅಸ್ಯೇತ್ಯಚ್ಛಾವಾಕೋ ಯಜತ್ಯಾವಾಮಂಧಾಂಸಿ ಮದಿರಾಣ್ಯಗ್ಮನ್ನಿತಿ ಬಹೂನಿ ವಾಹ ತದೃಭೂಣಾಂ ರೂಪಂ ॥

ಅಚ್ಛಾವಾಕಸ್ಯ ಯಾಜ್ಯಾಯಾಮಾರ್ಭವತ್ವಂ ದರ್ಶಯತಿ—ಇಂದ್ರಾವಿಷ್ಣೂ ಇತ್ಯಸ್ಯಾಂ ಯಾಜ್ಯಾಯಾಮಾವಾಮಿತ್ಯಸ್ಮಿನ್ಪಾದೇ ಬಹುವಚನಾಂತೈರಂಧಾಂಸೀತ್ಯಾದಿಭಿಃ ಪಾದೈಃ ಪ್ರತೀತಂ ಬಹುತ್ವಮೃಭೂಣಾಂ ಸ್ವರೂಪಂ ||

ಅಚ್ಛಾವಾಕನೆಂಬ ಋತ್ವಿಜನು– ಇಂದ್ರಾವಿಷ್ಣೂ ಪಿಬತಂ ಮಧ್ವೋ ಅಸ್ಯ (ಋ. ಸಂ. ೬-೭೦-೭) ಎಂಬ ಯಾಜ್ಯಾಮಂತ್ರವನ್ನು ಪಠಿಸಿ ಹೋಮಮಾಡುವನು. ಈ ಋಕ್ಕಿನ ತೃತೀಯಪಾದದಲ್ಲಿ ಬಹುವಚನಾಂತಶಬ್ದಗಳಾದ **ಅಂಧಾಂಸಿ** ಮೊದಲಾದ ಶಬ್ದಗಳ ಪ್ರಯೋಗವಿರುವುದರಿಂದ ಇಲ್ಲಿಯೂ ಬಹುವಚನವು ಋಭುಗಳನ್ನು ನಿರ್ದೇಶಿಸುವುದು.

**ಇಮಂ ಸ್ತೋಮಮರ್ಹತೇ ಜಾತವೇದಸ ಇತ್ಯಾಗ್ನೀಧ್ರೋ ಯಜತಿ ರಥಮಿವ ಸಂ ಮಹೇಮಾ ಮನೀಷಯೇತಿ ಬಹೂನಿ ವಾಹ ತದೃಭೂಣಾಂ ರೂಪಂ ||**

ಆಗ್ನೀಧ್ರಸ್ಯ ಯಾಜ್ಯಾಯಾಮಾರ್ಭವತ್ವಂ ದರ್ಶಯತಿ—ಇಮಂ ಸ್ತೋಮಮಿತ್ಯಸ್ಯಾಂ ಯಾಜ್ಯಾಯಾಂ ರಥಮಿವೇತ್ಯಸ್ಮಿನ್ಪಾದೇ ಮಹೇಮೇತ್ಯುತ್ತಮಪುರುಷಬಹುವಚನಾಂತೇನ ಪದೇನ ಪ್ರತೀಯಮಾನಂ ಬಹುತ್ವಮೃಭೂಣಾಂ ಸ್ವರೂಪಂ ||

ಆಗ್ನೀಧ್ರನೆಂಬ ಋತ್ವಿಜನು— ಇಮಂ ಸ್ತೋಮಮರ್ಹತೇ ಜಾತವೇದಸೇ (ಋ. ಸಂ. ೧-೯೪-೧) ಎಂಬ ಋಕ್ಕನ್ನು ಪಠಿಸಿ ಹೋಮಮಾಡುವನು. ಈ ಋಕ್ಕಿನ ದ್ವಿತೀಯ ಪಾದದಲ್ಲಿ ಮಹೇಮ ಎಂದು ಮೊದಲಾದ ಬಹುವಚನಾಂತ ಶಬ್ದಗಳ ಪ್ರಯೋಗವಿರುವುದರಿಂದ, ಈ ಮಂತ್ರವು ಋಭುಗಳ ಸ್ವರೂಪವನ್ನು ವಿವರಿಸುವುದೆಂದು ತಿಳಿಯಬೇಕು.

**ಏವಮು ಹೈತಾ ಐಂದ್ರಾರ್ಭವ್ಯೋ ಭವಂತಿ ಯನ್ನಾನಾದೇವಾತ್ಯಾಸ್ತೇನಾನ್ಯಾ ದೇವತಾಃ ಪ್ರೀಣಾತಿ |**

ಉಕ್ತಮರ್ಥಮುಪಸಂಹರತಿ—ಉಕ್ತೇನ ಪ್ರಕಾರೇಣ ಯಾಜ್ಯಾಸ್ವೃಭುಸಂಬಂಧಸಂಪಾದನಾದಿಂದ್ರಸಂಬಂಧಸ್ಯ ಚ ಸಾಕ್ಷಾದೇವ ಶ್ರೂಯಮಾಣತ್ವಾದೇತಾ ಋಚಃ ಐಂದ್ರಾರ್ಭವ್ಯಃ ಸಂಪದ್ಯಂತೇ ||

ಇಂದ್ರಸ್ಯರ್ಭೂಣಾಂ ಚೋಕ್ತಸಂಬಂಧೇನ ಪ್ರೀತೇಃ ಸಿದ್ಧತ್ವಾದಿತರದೇವತಾನಾಮಪಿ ತಾಭಿರ್ಯಾಜ್ಯಾಭಿಃ ಪ್ರೀತಿಂ ದರ್ಶಯತಿ—ಇಂದ್ರವರುಣಬೃಹಸ್ಪತ್ಯಾದಿನಾನಾವಿಧದೇವತಾಯುಕ್ತಾ ಋಚ ಇತಿ ಯದಸ್ತಿ ತೇನ ಕಾರಣೇನಾನ್ಯಾ ಇಂದ್ರಾದೃಭುಭ್ಯಶ್ಚ ವ್ಯತಿರಿಕ್ತಾ ದೇವತಾಸ್ತೋಷಯತಿ ||

ಈರೀತಿ ಹಿಂದೆ ಹೇಳಿದ ಏಳು ಯಾಜ್ಯಾಮಂತ್ರಗಳು ಇಂದ್ರ ಮತ್ತು ಋಭು ದೇವತೆಗಳನ್ನು ಪ್ರತಿಪಾದಿಸುವುದಲ್ಲದೆ ನಾನಾದೇವತಾಕವಾಗಿರುವುದರಿಂದ ನಾನಾ ದೇವತೆಗಳನ್ನೂ ಸಂತೋಷಪಡಿಸುವುವು.

## ಯದು ಜಗತ್ಪ್ರಾಸಹಾ ಜಾಗತಂ ವೈ ತೃತೀಯಸವನಂ ತೃತೀಯಸವನಸ್ಯೈವ ಸಮೃದ್ಧ್ಯೈ ॥

ಯಾಜ್ಯಾಸ್ವವಸ್ಥಿತಂ ಛಂದಃ ಪ್ರಶಂಸತಿ-ಜಗಚ್ಛಬ್ದೇನ ಜಗತೀಛಂದೋಽಭಿಧೀಯತೇ । ಪ್ರಾಸಾಹಶಬ್ದೋ ಬಾಹುಲ್ಯವಾಚೀ । ಜಗತ್ಯಃ ಪ್ರಾಸಾಹಾ ಬಹುಲಾ ಯಾಸೂಕ್ತಾಸು ಪ್ರಸ್ಥಿತಯಾಜ್ಯಾಸು ತಾ ಜಗತ್ಪ್ರಾಸಾಹಾಸ್ತೃತೀಯಸವನಂ ಚ ಜಾಗತಮಿತಿ ಪ್ರಸಿದ್ಧಮತೋ ಯದು ಯದೇವ ಜಗತೀಬಾಹುಲ್ಯಂ ತೇನ ತೃತೀಯಸವನಸ್ಯ ಸಮೃದ್ಧಿರ್ಭವತಿ ॥

ಐ. ಬ್ರಾ. ೨೮-೧೨)

ಇಲ್ಲಿ **ಜಗತ್** ಎಂದರೆ ಜಗತೀಛಂದಸ್ಸು. ಪ್ರಾಸಹಾ ಶಬ್ದವು ಬಹುತ್ವವನ್ನು ನಿರ್ದೇಶಿಸಿಸುವುದು. ಆದುದರಿಂದ **ಜಗತ್ಪ್ರಾಸಹಾ** ಎಂದರೆ, ಜಗತೀಛಂದಸ್ಸೂ ಮತ್ತು ಬಹುವಚನಾಂತಶಬ್ದಗಳೂ ಇರುವ ಸೂಕ್ತ ಅಥವಾ ಮಂತ್ರಗಳೆಂದರ್ಥವು. ಈ ವಿಧವಾದ ಮಂತ್ರಗಳು ತೃತೀಯಸವನದ ಉನ್ನೀಯಮಾನಸೂಕ್ತದಲ್ಲಿಯೂ, ಯಾಜ್ಯಾಮಂತ್ರಗಳಲ್ಲಿಯೂ ಇರುವುದರಿಂದ– **ಜಾಗತಂ ವೈ ತೃತೀಯಸವನಂ** ತೃತೀಯಸವನವು ಜಗತೀಛಂದಸ್ಸಿನ ಸ್ವರೂಪವಾಗಿರುವುದು ಎಂದು ಹೇಳಲ್ಪಡುವುದು. ಇಂತಹ ಸೂಕ್ತ ಮತ್ತು ಋಕ್ಕುಗಳಿಂದ ನೆರವೇರಿಸಲ್ಪಡುವ ತೃತೀಯಸವನಕರ್ಮವು ಯಜ್ಞಮಾಡುವ ಯಜಮಾನನಿಗೆ ಸಮೃದ್ಧಿಯನ್ನುಂಟುಮಾಡುವುದು.

ಇಲ್ಲಿಗೆ ತೃತೀಯಸವನವು ಸಮಾಪ್ತವು.

*English Translation*

**(The hymn and the Prasthita Yajyas at the evening libation).**

At the third libation the Hotar repeats at the time when the Soma cups are being lifted, the hymn ihopayata savaso napata (4, 35, 1). Its verses which are complete in form, are addressed to Indra and belong to the Ribhus, contain the words vrishan, pita, suta mad. They ask, Why is the Pavamana Stotra at the evening libation called Arbhava, though they do not sing Ribhu verses? (The Answer is) Prajapati, the father, when transforming the Ribhus who were mortals, into immortals, gave them a share in the evening libation. Thence they do not sing Ribhu verses, but they call the Pavamana Stotra Arbhava.

One (great Rishi) asked about the application of metres, viz. for what reason does he use the Trishtubh metre at the third libation, whilst the appropriate metre for this libation is Jagati, as well as the Gayatri that for the morning, and the Trishtubh for the midday libation? One ought to say (in reply), At the third libation the Soma juice is done; bnt if they use a sparkling (suhriyam) metre as the Trishtubh, the juice of which is not done, then they provide the (third) libation with juice (liquor). Then he makes Indra participate in this

libation also. One says, Why, since the third libation belongs to Indra and the Ribhus, and the Hotar alone make the Yajyas for the Soma which are in readiness (prasthita) with an Indra-Ribhu verse, at the third libation, do the other Hotri-priests use verses addressed to various other deities for their Yajyas? In the Yajya of the Hotar, ribhubhir vajadhhịh samukshitam (not in the Rigveda) the Ribhus are mentioned, but in the Yajyas of the other priests they are only hinted at.

The Maitravaruna repeats, iṇdravaruna sutapavimam sutam (6, 68, 10); in the words, yuvo ratho adhvaram devavitaye there is a plurality (in the words devavitaye = devanam vitaye i.e. for the enjoyment of the gods) which is a characteristic of the Ribhus.

The Brahmanachhamsi repeats the verse, indrascha somam pibatam (5, 50, 10); in its words, visantu indavan, i.e. "may the drops come," a plurality is expressed, which is a characteristic of the Ribhus.

The Yayja of the Potar is, a vo vahantu saptayo (1, 85, 5); in its words, raghupatvanah prajigata bahubhir, there is a plurality (these three words are in the plural) expressed, which is the characteristic of the Ribhus.

The Yajya of the Neshtar is, ameva nah suhava (2, 36, 3), in it the word gantana "go ye!" expresses a plurality.

The Yajya of the Achhavaka is, indravishnu pibatam madhvo (6, 69, 7); its words, a vam amdhamsi madirani expresses a plurality.

The Yajya of the Agnidhra is, imam stomam arhate (1, 94, 1); in its words ratham iva sammahema (this is first person plural) there is a plurality expressed.

In this way all these verses become Aindra-Arbhavah. By repeating verses being (apparently) addressed to various deities, he pleases other deities (also), save Indra and the Ribhus. They are the conquerors of the jagat, i.e. world; therefore the Jagati metre is required for the evening libation, to make it successful.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಅಷ್ಟಾವಿಂಶಾಧ್ಯಾಯಸ್ಯ ಚತುರ್ಥಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು
ಸಮಾಪ್ತವಾದುದು.



# ಅಥ ಅಷ್ಟಾವಿಂಶಾಧ್ಯಾಯೇ ಪಂಚಮಃ ಖಂಡಃ

## ಇಪ್ಪತ್ತೆಂಟನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ಶಸ್ತ್ರಮಂತ್ರಗಳ ಸಂಬಂಧವಿಲ್ಲದ ದೇವತೆಗಳ ವಿಷಯದಲ್ಲಿ ಬೇರೆ ಶಸ್ತ್ರಮಂತ್ರಗಳನ್ನು ಹೇಳಬೇಕಾದ ಹೋತೃಗಳ ವಿಷಯ; ತೃತೀಯಸವನಕಾಲದಲ್ಲಿ ಹೋತೃವರ್ಗದ ಋತ್ವಿಜರು ಸಿದ್ಧಪಡಿಸುವ ಶಸ್ತ್ರಮಂತ್ರಗಳು.]



**ಅಥಾಹ ಯದುಕ್ಥಿನ್ಯೋಽನ್ಯಾ ಹೋತ್ರಾ ಅನುಕ್ಥಾ ಅನ್ಯಾಃ ಕಥಮಸ್ಯೈತಾ ಉಕ್ಥಿನ್ಯಃ ಸರ್ವಾಃ ಸಮಾಃ ಸಮೃದ್ಧಾಃ ಭವಂತೀತಿ ॥**

**ಹೋತ್ರಕಾಣಾಂ ಪ್ರಸ್ಥಿತಯಾಜ್ಯಾಃ ಸವನತ್ರಯೇಽಭಿಧಾಯ ಪರಸ್ಪರಂ ಸಾಮ್ಯಂ ವೈಷಮ್ಯಂ ಚ ವಿವೇಕ್ತುಂ ಪ್ರಶ್ನಮುದ್ಭಾವಯತಿ---ಹೋತ್ರಕಾಣಾಂ ಯಾಜ್ಯಾಕಥನಾನಂತರಂ ಕಶ್ಚಿದ್ಬ್ರಹ್ಮವಾದೀ ಚೋದ್ಯಮಾಹ । ಹೋತ್ರಕಾಣಾಂ ಕ್ರಿಯಾ ಹೋತ್ರಶಬ್ದೇನ ವಿವಕ್ಷಿತಾಃ । ತಾಸ್ವನ್ಯಾಃ ಕಾಶ್ಚಿತ್ಕ್ರಿಯಾ ಉಕ್ಥಿನ್ಯಃ ಶಸ್ತ್ರಯುಕ್ತಾಃ । ಅನ್ಯಾ ಇತರಾಃ ಕ್ರಿಯಾ ಅನುಕ್ಥಾಃ ಶಸ್ತ್ರರಹಿತಾಃ ಮೈತ್ರಾವರುಣೋ ಬ್ರಾಹ್ಮಣಾಚ್ಛಂಸ್ಯಚ್ಛಾವಾಕ ಇತ್ಯೇತೇಷಾಂ ತ್ರಯಾಣಾಂ ಶಸ್ತ್ರಸದ್ಭಾವಾದೇತದೀಯಾಃ ಕ್ರಿಯಾ ಉಕ್ಥಿನ್ಯೋ ನೇಷ್ಟೃಪೋತ್ರಾದೀನಾಂ ಶಸ್ತ್ರರಾಹಿತ್ಯಾತ್ತದೀಯಾಃ ಕ್ರಿಯಾ ಅನುಕ್ಥಾಃ । ಏವಂ ವೈಷಮ್ಯೇ ಸ್ಪಷ್ಟೇ ಸತ್ಯಸ್ಯ ಯಜ್ಞಸ್ಯ ಯಜಮಾನಸ್ಯ ವಾ ಸಂಬಂಧಿನ್ಯ ಏತಾ ಹೋತ್ರಾಃ ಸರ್ವಾ ಉಕ್ಥಿನ್ಯಃ ಶಸ್ತ್ರಯುಕ್ತಾ ಭೂತ್ವಾ ಸಮಾ ವೈಷಮ್ಯರಹಿತಾ ಅತ ಏವ ಸಮೃದ್ಧಾಃ ಸಂಪೂರ್ಣಾಃ ಕಥಂ ಭವಂತೀತಿ ಚೋದ್ಯಮ್ ॥**

ಹೋತೃವರ್ಗದ ಋತ್ವಿಜರು ಮೂರುಸವನಗಳಲ್ಲಿಯೂ ಸಿದ್ಧಪಡಿಸಲ್ಪಟ್ಟ (ಪ್ರಸ್ಥಿತ) ಯಾಜ್ಯಾಮಂತ್ರಗಳ ವಿಷಯದಲ್ಲಿ ಪರಸ್ಪರ ಸಾಮ್ಯ ಮತ್ತು ವೈಷಮ್ಯವನ್ನು ತಿಳಿಸುವುದಕ್ಕಾಗಿ ಪ್ರಶ್ನೆಯನ್ನು ಕೇಳುತ್ತಾರೆ. ಹೋತೃವರ್ಗದವರು ಪಠಿಸಬೇಕಾದ ಯಾಜ್ಯಾಮಂತ್ರಗಳನ್ನು ಹೇಳಿದನಂತರ ಕೆಲವರು ಬ್ರಹ್ಮವಾದಿಗಳು ಒಂದು ವಿಶೇಷಸಂಗತಿಯನ್ನು ಪ್ರಶ್ನೆಮೂಲಕ ಕೇಳುವರು. ಹೋತೃವರ್ಗದವರು ಮಾಡಬೇಕಾದ ಕಾರ್ಯಕಲಾಪಗಳಿಗೆ ಹೋತೃಶಬ್ದವೆಂದು ಹೆಸರು. ಅವುಗಳಲ್ಲಿ ಕೆಲವುಗಳಿಗೆ ಉಕ್ಥಿನ್ಯೈ ಎಂದರೆ ಶಸ್ತ್ರಮಂತ್ರಸಹಿತವಾದವು ಎಂದು ಹೆಸರು. ಇನ್ನು ಕೆಲವು ಮಂತ್ರಗಳು ಅನುಕ್ಥಾಃ ಎಂದರೆ ಶಸ್ತ್ರಮಂತ್ರರಹಿತವಾದವು. ಹೇಗೆಂದರೆ ಮೈತ್ರಾವರುಣ, ಬ್ರಾಹ್ಮಣಾಚ್ಛಂಸಿ, ಅಚ್ಛಾವಾಕ ಎಂಬ ಋತ್ವಿಜರು ಪಠಿಸುವ ಮಂತ್ರಗಳಿಗೆ **ಉಕ್ಥಿನ್ಯಃ** ಎಂದರೆ ಶಸ್ತ್ರಮಂತ್ರರಹಿತವಾದವು ಎಂದು ಹೆಸರು. ನೇಷ್ಟೃ, ಪೋತೃ ಮೊದಲಾದ ಹೋತ್ರಕರು ಪಠಿಸುವ ಮಂತ್ರಗಳು (ಮತ್ತು ಕಾರ್ಯಕಲಾಪಗಳು) ಅನುಕ್ಥ ಅಥವಾ ಶಸ್ತ್ರಮಂತ್ರರಹಿತವಾದವು. ವಿಷಯವು ಹೀಗಿರುವಾಗ ಯಜ್ಞಮಾಡುವ ಯಜಮಾನನಿಗೆ ಈ ಹೋತೃವರ್ಗದವರು ಪಠಿಸುವ ಶಸ್ತ್ರಾದಿಮಂತ್ರಗಳು ವೈಷಮ್ಯರಹಿತವಾಗಿಯೂ ಸಮೃದ್ಧ ಅಥವಾ ಸಂಪೂರ್ಣವಾಗುವ ಬಗೆಯು ಹೇಗೆ ಎಂಬುದೇ ಇಲ್ಲಿ ಪ್ರಶ್ನೆಯು.

## ಯದೇವೈನಾಃ ಸಂಪ್ರಗ್ರೀರ್ಯ ಹೋತ್ರಾ ಇತ್ಯಾಚಕ್ಷತೇ ತೇನ ಸಮಾಃ ।

ತಸ್ಯೋತ್ತರಮಾಹ—ಯದೇವ ಯಸ್ಮಾದೇವ ಕಾರಣಾದೇತಾ ಮೈತ್ರಾವರುಣಾದಿ-ಕ್ರಿಯಾಃ ಪೋತೃನೇಷ್ಟ್ರಾದಿಕ್ರಿಯಾಶ್ಚ ಸಂಪ್ರಗೀರ್ಯ ಸಂಭೂಯ ಪ್ರಕರ್ಷೇಣೋಕ್ತ್ವಾ ಹೋತ್ರಾ ಇತಿಶಬ್ದೇನ ಯಾಜ್ಞಿಕಾ ಆಚಕ್ಷತೇ ತೇನ ಸಮಾಃ । ಯಥಾ ಲೋಕೇ ಛತ್ರಯು-ಕ್ತಾಸ್ತದ್ರಹಿತಾಶ್ಚ ಸಂಭೂಯ ಚ್ಛತ್ರಿಣ ಇತ್ಯೇಕೇನೈವ ಶಬ್ದೇನ ವ್ಯವಹ್ರಿಯಂತೇ । ಏವಮ-ತ್ರಾಪಿ ಶಸ್ತ್ರಯುಕ್ತಾ ಮೈತ್ರಾವರುಣಾದಯಃ ಶಸ್ತ್ರರಹಿತಾಃ ಪೋತೃನೇಷ್ಟ್ರಾದಯಶ್ಚ ಸಂಭೂ-ಯೈಕೈನೈವ ಹೋತ್ರಕಶಬ್ದೇನ ವ್ಯವಹ್ರಿಯಂತೇ । ಅತಃ ಶಸ್ತ್ರಿಭಿಃ ಸಮಭಿವ್ಯಾಹಾರಾದಶಸ್ತ್ರಿ-ಣಾಮಪ್ಯುಪಚರಿತಂ ಶಸ್ತ್ರಿತ್ವಂ ತೇನ ಹೋತ್ರಕಶಬ್ದವ್ಯವಹಾರ್ಯೈಕ್ಯೇನ(ಣ) ಸಮಾ ಭವಂತಿ ನ ಚೈತಾವತಾ ಸ್ವಾಭಾವಿಕಂ ಶಸ್ತ್ರಿತ್ವಾಶಸ್ತ್ರಿತ್ವವೈಷಮ್ಯಮುಪಗಚ್ಛತಿ ॥

ಮೇಲಿನ ಪ್ರಶ್ನೆಗೆ ಉತ್ತರವನ್ನು ತಿಳಿಸುವರು. ಮೇಲೆ ಹೇಳಿದಂತೆ ಮೈತ್ರಾವರುಣಾದಿಗಳು ಮಾಡುವ ಕಾರ್ಯ ಕಲಾಪಗಳು ಶಸ್ತ್ರಮಂತ್ರಸಹಿತವಾಗಿರುವವು. ಪೋತೃ, ನೇಷ್ಟೃ ಮೊದಲಾದವರ ಕಾರ್ಯಕಲಾಪಗಳು ಶಸ್ತ್ರಮಂತ್ರರಹಿತ ವಾಗಿರುವವು. ಆದರೂ ಇವರೆಲ್ಲರನ್ನೂ ಒಟ್ಟಿಗೆ ಸೇರಿಸಿ ಹೇಳುವುದರಿಂದ ಶಸ್ತ್ರಮಂತ್ರಸಹಿತರೂ, ಶಸ್ತ್ರಮಂತ್ರರಹಿತರೂ ಎಲ್ಲರೂ ಸೇರಿಹೋಗಿರುವುದರಿಂದ ಎಲ್ಲರೂ ಶಸ್ತ್ರಮಂತ್ರಸಹಿತರೆಂದೇ ಭಾವಿಸಲ್ಪಡುವರು. ಹೇಗೆಂದರೆ ಲೋಕವ್ಯವಹಾರದಲ್ಲಿ ಪ್ರಯಾಣ ಮಾಡುವಾಗ ಕೆಲವರು ಛತ್ರಿಗಳನ್ನು ಹಿಡಿದುಕೊಂಡು ಹೋಗುವರು. ಕೆಲವರಿಗೆ ಛತ್ರಿ ಇರುವುದಿಲ್ಲ. ಆದರೂ ಇವರೆಲ್ಲರೂ ಛತ್ರಿಸಹಿತವಾಗಿಯೇ ಹೋಗುತ್ತಿರುವರೆಂದು ಹೇಳುವ ರೂಢಿ ಇರುವುದು. ಅದರಂತೆ ಇಲ್ಲಿಯೂ ಸಹ ಭಾವಿಸಿಕೊಳ್ಳಬೇಕು ಎಂದರೆ ಕೆಲವರು ಶಸ್ತ್ರಮಂತ್ರವನ್ನು ಪಠಿಸುತ್ತಲೂ ಕೆಲವರು ಪಠಿಸದೆ ಇದ್ದರೂ ಎಲ್ಲರೂ ಮಂತ್ರಗಳನ್ನು ಪಠಿಸುತ್ತಲೇ ಇರುವ ರೆಂದು ಭಾವಿಸಬೇಕು.

## ಯದುಕ್ಥಿನ್ಯೋಽನ್ಯಾ ಹೋತ್ರಾ ಅನುಕ್ಥಾ ಅನ್ಯಾಸ್ತೇನೋ ವಿಷಮಾಃ ॥

ತದೇತದ್ವೈಷಮ್ಯಂ ದರ್ಶಯತಿ ಉಶಬ್ದೋಽಪಿಶಬ್ದಾರ್ಥಃ । ತೇನೋಕ್ಥಿತ್ವಾನುಕ್ಥ-ತ್ವಧರ್ಮದ್ವಯೇನ ವಿಷಮಾ ಅಪಿ ಭವಂತಿ ॥

ಈ ವಿಷಯದಲ್ಲಿ ವೈಷಮ್ಯವನ್ನು ತಿಳಿಸುವರು. ಇ ಉ ಶಬ್ದಕ್ಕೆ ಅಪಿಶಬ್ದಾರ್ಥವಿರುವುದು. ಆದ್ದರಿಂದ ಉಕ್ಥಿತ್ವ ಅನುಕ್ಥಿತ್ವ ಶಬ್ದಗಳಿಗೆ ಪರಸ್ಪರ ವೈಷಮ್ಯವಿರುವುದು. ಈರೀತಿ ಪರಸ್ಪರ ವೈಷಮ್ಯವಿದ್ದರೂ ಸಾಮ್ಯವಿರುವುದನ್ನು ತಿಳಿಸುತ್ತಾರೆ.

## ಏವಮು ಹಾಸ್ಯೈತಾ ಉಕ್ಥಿನ್ಯಃ ಸರ್ವಾಃ ಸಮಾಃ ಸಮೃದ್ಧಾಃ ಭವಂತಿ ॥

ಸತ್ಯಪಿ ವೈಷಮ್ಯ ಔಪಚಾರಿಕೋಕ್ಥಿತ್ವೇನ ಸಾಮ್ಯಂ ಯದುಪಪಾದಿತಂ ತದುಪ-ಸಂಹರತಿ—

ಶಸ್ತ್ರಮಂತ್ರವನ್ನು ಪಠಿಸುವವರೆಲ್ಲರೂ ಸಮನಾಗಿರುವರು. ಪಠಿಸದೆ ಇರುವವರು ವಿಷಮ ಎಂದರೆ ಸಮನಾಗಿಲ್ಲದೆ ಇರುವರು.

ಅಥಾಽಽಹ ಶಂಸಂತಿ ಪ್ರಾತಃಸವನೇ ಶಂಸಂತಿ ಮಾಧ್ಯಂದಿನೇ ಹೋತ್ರಕಾಃ ಕಥಮೇಷಾಂ ತೃತೀಯಸವನೇ ಶಸ್ತ್ರಂ ಭವತೀತಿ ॥

ಹೋತ್ರಕೇಷು ಚೋದ್ಯಾಂತರಮುದ್ಭಾವಯತಿ– ಅಗ್ನಿಷ್ಟೋಮೇ ಮೈತ್ರಾವರುಣ-ಬ್ರಾಹ್ಮಣಾಚ್ಛಂಸ್ಯಚ್ಛಾವಾಕಾನಾಂ ಸವನದ್ವಯೇ ಶಂಸನಂ ವಿಹಿತಂ ತದ್ದೃಷ್ಟಾಂತೇನ ತೃತೀ-ಯಸವನೇಽಪಿ ಶಂಸನಮಪೇಕ್ಷಿತಂ ತಚ್ಚ ನ ವಿಹಿತಂ ತಥಾ ಸತಿ ಕಥಮೇಷಾಂ ತೃತೀಯ-ಸವನೇ ಶಸ್ತ್ರಂ ಭವತಿ ಶಂಸನಂ ಸಿಧ್ಯತೀತಿ ಚೋದ್ಯಮ್ ॥

ಹೋತೃವರ್ಗದ ಋತ್ವಿಜರಲ್ಲಿ ವ್ಯತ್ಯಾಸವನ್ನು ತೋರಿಸುವರು. ಅಗ್ನಿಷ್ಟೋಮಯಾಗದಲ್ಲಿ ಮೈತ್ರಾವರುಣ, ಬ್ರಾಹ್ಮಣಾಚ್ಛಂಸಿ, ಅಚ್ಛಾವಾಕ ಎಂಬ ಋತ್ವಿಜರು ಪ್ರಾತಸ್ಸವನ ಮತ್ತು ಮಾಧ್ಯಂದಿನಸವನಗಳೆಂಬ ಎರಡು ಸವನಗಳಲ್ಲಿ ಮಂತ್ರಗಳನು ಪಠಿಸಬೇಕೆಂದು ಹೇಳಲಾಗಿದೆ. ಆದರೆ ತೃತೀಯಸವನದಲ್ಲಿ ಹೇಳಬೇಕೆಂದು ಹೇಳಿಲ್ಲದಿದ್ದರೂ ಹೇಳುವರೂಢಿ ಇದೆ. ಇದ ಹೇಗೆ ಎಂಬುದೇ ಪ್ರಶ್ನೆಯು.

ಯದೇವ ಮಾಧ್ಯಂದಿನೇ ದ್ವೇ ದ್ವೇ ಸೂಕ್ತೇ ಶಂಸಂತೀತಿ ಬ್ರೂಯಾ-ತ್ತೇನೇತಿ ॥

ತಸ್ಯೋತ್ತರಂ ದರ್ಶಯತಿ—ಮೈತ್ರಾವರುಣಸ್ಯ ಸದ್ಯೋಹ ಜಾತೋ ವೃಷಭಃ ಕನೀನ ಇತ್ಯೇಕಂ ಸೂಕ್ತಂ । ಏವಾ ತ್ವಾಮಿಂದ್ರ ವಜ್ರಿನ್ನಿತಿ ದ್ವಿತೀಯಮ್ । ಬ್ರಾಹ್ಮಣಾಚ್ಛಂಸಿನ ಇಂದ್ರಃ ಪೂರ್ಭಿದಿತ್ಯೇಕಂಸೂಕ್ತಮುದು ಬ್ರಹ್ಮಾಣೀತಿ ದ್ವಿತೀಯಂ । ಅಚ್ಛಾವಾಕಸ್ಯ ಭೂಯ ಇದಿ-ತ್ಯೇಕಮಿಮಾಮೂಷ್ವಿತಿ ದ್ವಿತೀಯಂ । ಏವಮೇತೇ ತ್ರಯೋ ಮಾಧ್ಯಂದಿನೇಸವನೇ ಪ್ರತ್ಯೇಕಂ ದ್ವೇ ದ್ವೇ ಸೂಕ್ತೇ ಶಂಸಂತಿ । ತತ್ರೈಕಂ ಮಾಧ್ಯಂದಿನಸವನಾರ್ಥಂ । ದ್ವಿತೀಯಂ ತು ತೃತೀಯ-ಸವನಾರ್ಥಮಿತ್ಯುಪಚಾರೇಣ ತತ್ರಾಪಿ ಶಂಸನಂ ಸಿಧ್ಯತೀತ್ಯುತ್ತರಂ ಬ್ರೂಯಾತ್ ॥

ಮೇಲಿನ ಪ್ರಶ್ನೆಗೆ ಉತ್ತರವನ್ನು ತಿಳಿಸುವರು. ಮೈತ್ರಾವರುಣನೆಂಬ ಋತ್ವಿಜನು ಮಾಧ್ಯಂದಿನಸವನದಲ್ಲಿ **ಸದ್ಯೋಹ ಜಾತೋ ವೃಷಭಃ ಕನೀನ** ಎಂಬ ಒಂದು ಸೂಕ್ತವನ್ನು ಪಠಿಸುವನು. ಮತ್ತು ಈ ಮೈತ್ರಾವರುಣನ. **ಏವಾ ತ್ವಾಮಿಂದ್ರ ವಜ್ರಿನ್** ಎಂಬ ಇನ್ನೊಂದು ಸೂಕ್ತವನ್ನೂ ಪಠಿಸುವನು. ಹಾಗೆಯೇ ಬ್ರಾಹ್ಮಣಾಚ್ಛಂಸಿಯು **ಇಂದ್ರ ಪೂರ್ಭಿತ್** ಎಂಬ ಒಂದು ಸೂಕ್ತವನ್ನೂ **ಉದು ಬ್ರಹ್ಮಾಣಿ** ಎಂಬ ಇನ್ನೊಂದು ಸೂಕ್ತವನ್ನೂ ಪಠಿಸುವನು. ಅಚ್ಛಾವಾಕನು **ಭೂಯ ಇತ್** ಎಂಬ ಒಂದು ಸೂಕ್ತವನ್ನೂ **ಇಮಾಮೂಷು** ಎಂಬ ಇನ್ನೊಂದು ಸೂಕ್ತವನ್ನೂ ಪಠಿಸುವನು. ಎಂದರೆ ಈ ಮೂರುಜನ ಋತ್ವಿಜರೂ ಪ್ರತಿಯೊಬ್ಬರೂ ಪ್ರತ್ಯೇಕವಾಗಿ ಎರಡೆರಡು ಸೂಕ್ತಗಳನ್ನು ಪಠಿಸಿದಂತಾಯಿತು. ಅವುಗಳಲ್ಲಿ ಒಂದೊಂದು ಸೂಕ್ತವನ್ನು ಮಾಧ್ಯಂದಿನಸವನಕ್ಕಾಗಿಯೂ ಇನ್ನೊಂದು ಸೂಕ್ತವನ್ನು ತೃತೀಯಸವನಕ್ಕಾಗಿಯೂ ಪಠಿಸಲಾಗಿದೆ ಎಂದು ತಿಳಿಯಬೇಕು.

ಅಥಾಽಽಹ ಯದ್ವ್ಯುಕ್ಥೋ ಹೋತಾ ಕಥಂ ಹೋತ್ರಕಾ ದ್ವ್ಯುಕ್ಥಾ ಭವಂತೀತಿ ॥

**ತೇಷ್ವೇವ ಚೋದ್ಯಾಂತರಮುದ್ಭಾವಯತಿ—ಅಥ ತೃತೀಯಸವನೇ ಶಂಸನಸಂಪಾದನಾನಂತರಂ ಪುನರಪಿ ಬ್ರಹ್ಮವಾದೀ ಚೋದ್ಯಾಂತರಮಾಹ । ಯದ್ಯಸ್ಮಾತ್ಕಾರಣಾದ್ಧೋ ತಾ ದ್ವ್ಯುಕ್ಥಃ । ದ್ವೇ ಉಕ್ಥೇ ಶಸ್ತ್ರೇ ಯಸ್ಯಾಸೌದ್ವ್ಯುಕ್ಥಃ । ಪ್ರಾತಃಸವನೇ ಆಜ್ಯಪ್ರುಉಗೇ ದ್ವೇ ಮಾಧ್ಯಂದಿನಸವನೇ ಮರುತ್ವತೀಯನಿಷ್ಕೇವಲ್ಯೇ ದ್ವೇ ತೃತೀಯಸವನೇ ವೈಶ್ವದೇವಾಗ್ನಿಮಾರುತೇ ದ್ವೇ ಏವಂ ಸ್ಥಿತೇ ಹೋತೃವದ್ದೃಷ್ಟಾಂತೇನ ಹೋತ್ರಕಾಣಾಮಪ್ಯುಕ್ಥದ್ವಯೋಪೇತತ್ವಮಪೇಕ್ಷಿತಂ ನ ಚೋಕ್ಥದ್ವಯಂ ವಿಹಿತಮಸ್ತ್ಯತಸ್ತತ್ಕೇನ ಪ್ರಕಾರೇಣ ಸಿಧ್ಯತೀತಿ ಚೋದ್ಯಮ್ ॥**

ಈ ವಿಷಯದಲ್ಲಿ ಮತ್ತೊಂದು ಸಂಗತಿಯನ್ನು ತಿಳಿಸುವರು. ಮೇಲೆ ಹೇಳಿದಂತೆ ತೃತೀಯಸವನಕ್ಕಾಗಿ ಎರಡು ಶಸ್ತ್ರ ಮಂತ್ರಗಳಲ್ಲಿ ಒಂದನ್ನು ವಿನಿಯೋಗಿಸಬಹುದೆಂದು ಹೇಳಲಾಗಿದೆಯಷ್ಟೆ. ಆದರೆ ಹೋತೃವಿಗೆ ದ್ವ್ಯುಕ್ಥಃ ಎಂದರೆ ಎರಡು ಶಸ್ತ್ರಮಂತ್ರಗಳನ್ನು ಪಠಿಸುವವನು ಎಂದು ಹೇಳುವ ರೂಢಿ ಇರುವುದು. ಹೇಗೆಂದರೆ ಪ್ರಾತಸ್ಸವನದಲ್ಲಿ ಆಜ್ಯ, ಪ್ರುಉಗ ಎಂಬ ಎರಡು ಶಸ್ತ್ರಗಳನ್ನೂ ಮಾಧ್ಯಂದಿನಸವನದಲ್ಲಿ ಮರುತ್ವತೀಯ ಮತ್ತು ನಿಷ್ಕೇವಲ್ಯ ಎಂಬ ಎರಡು ಶಸ್ತ್ರಮಂತ್ರಗಳನ್ನೂ ತೃತೀಯ ಸವನದಲ್ಲಿ ವೈಶ್ವದೇವ ಮತ್ತು ಆಗ್ನಿಮಾರುತ ಎಂಬ ಎರಡು ಶಸ್ತ್ರಮಂತ್ರಗಳನ್ನೂ ಪಠಿಸುವ ರೂಢಿ ಇರುವುದು. ಹೋತೃವು ಪ್ರತಿಸವನದಲ್ಲಿಯೂ ಎರಡೆರಡು ಶಸ್ತ್ರಮಂತ್ರಗಳನ್ನು ಹೇಳುವ ರೂಢಿ ಇರುವಂತೆ ಇತರ ಋತ್ವಿಜರೂ (ಮೈತ್ರಾವರುಣ, ಬ್ರಾಹ್ಮಣಾಚ್ಛಂಸಿ, ಅಚ್ಛಾವಾಕ) ಎರಡೆರಡು ಶಸ್ತ್ರಮಂತ್ರಗಳನ್ನು ಹೇಳಬೇಕಲ್ಲವೇ? ಆದರೆ ಮೇಲೆ ಹೇಳಿದಂತೆ ಒಂದೊಂದು ಸವನದಲ್ಲಿ ಒಂದೊಂದು ಶಸ್ತ್ರವನ್ನು ಮಾತ್ರ ಹೇಳಿದಂತಾಯಿತು. ಇದು ಹೇಗೆ ಸಿದ್ಧಿಸುವುದು ಎಂಬುದೇ ಪ್ರಶ್ನೆಯು.

## ಯದೇವ ದ್ವಿದೇವತ್ಯಾಭಿರ್ಯಜಂತೀತಿ ಬ್ರೂಯಾತ್ತೇನೇತಿ ॥

**ತತ್ರೋತ್ತರಮಾಹ—ಪ್ರಸ್ಥಿತಯಾಜ್ಯಾನಾಂ ಶ್ರೂಯಮಾಣದೇವತಯಾ ಸಂಪಾದ್ಯಮಾನದೇವತಯಾ ಚ ದ್ವಿದೇವತ್ಯತ್ವಂ । ತಾದೃಶೀಭಿಋರ್ಗ್ಭಿರ್ಯಸ್ಮಾದ್ಯಜಂತಿ ತೇನ ದ್ವಿಶಸ್ತ್ರತ್ವಮ್ । ತತ್ರೈಕಾ ದೇವತಾ ಯಾಜ್ಯಾರ್ಥಾ । ಇತರಾ ದ್ವಿತೀಯಾ ಶಸ್ತ್ರಾರ್ಥೇತ್ಯೇವಮುತ್ತರಂ ಬ್ರೂಯಾತ್ ॥**

ಮೇಲಿನ ಪ್ರಶ್ನೆಗೆ ಉತ್ತರವನ್ನು ಹೇಳುವರು. ಪ್ರಸ್ಥಿತಯಾಜ್ಯಾಮಂತ್ರಗಳಿಗೆ ಒಂದು ನಿರ್ದಿಷ್ಟ ದೇವತೆ ಇರುವುದು. ಆ ಮಂತ್ರಪ್ರತಿಪಾದ್ಯವಾದ ದೇವತೆಯು ಮತ್ತೊಂದು ಇರುವುದು. ಆದ್ದರಿಂದ ಪ್ರತಿಯೊಂದು ಮಂತ್ರಕ್ಕೂ ಎರಡು ದೇವತೆಗಳು ಇದ್ದಂತಾಯಿತು. ಈರೀತಿ ಎರಡು ದೇವತೆಗಳಿರುವುದರಿಂದ ಯಾಜ್ಯಾರ್ಥ (ಹೋಮಾರ್ಥವಾಗಿ) ಒಂದು ದೇವತೆಯೂ ಶಸ್ತ್ರ ಮಂತ್ರಾರ್ಥವಾಗಿ ಇನ್ನೊಂದು ದೇವತೆಯೂ ಇದ್ದಂತಾಯಿತು. ಇದೇ ಮೇಲಿನ ಪ್ರಶ್ನೆಗೆ ಸರಿಯಾದ ಉತ್ತರವು.

*English Translation*

**(On the relationship of those Hoars who have to repeat a Shastra to those who have none. How the Shastras of the minor Hotri-priests are supplied at the evening libation)**

Some one asks, Some of the duties of the Hotri-priests being performed without Shastra, some with Shastra, how are then all these ceremonies (as it

should be) provided with their respective Shastras, and consequently equal and complete? (The answer is) They call the performance (i.e. the repetition of Yajas) of those (Hotris) who like the Potar, Neshtar and Agnidhra, have no Shastra (to repeat) Hotra (also), on account of their reciting their (respective) verses along with (the other Hotri-priests, such as the Hotar, Maitravaruna, &c. who repeat proper Shastras). In this way they are equal. But in the fact that some Hotri-priests perform their duties with Shastras, others without Shastras, lies their inequality. Thus (both kinds of Hotri performances) become provided with Shastras, equalised and successful (for the Yajyas of all seven Hotri-priests are repeated one after the other).

Now the Hotri-priests (Maitravaruna, Brahmanachhamsi, Achhavaka) repeat Shastras at the morning and midday libations only, in what way is this duty performed at the third libation? One ought to answer, In this way, that they (these three priests just mentioned) repeat at the midday libation two hyms each. Some one may ask, In what way do the Hotri-priests (who properly speaking repeat one Shastra only) repeat two Shasstras, as many as the (chief) Hotar does? One ought to answer, Their Yajyas are addressed to two deities.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಅಷ್ಟವಿಂಶಾಧ್ಯಾಯಸ್ಯ ಪಂಚಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯದಲ್ಲಿ ಐದನೆಯ ಖಂಡವು
ಸಮಾಪ್ತವಾದುದು.



# ಅಥ ಅಷ್ಟವಿಂಶಾಧ್ಯಾಯೇ ಷಷ್ಠಃ ಖಂಡಃ

## ಇಪ್ಪತ್ತೆಂಟನೆಯ ಅಧ್ಯಾಯದಲ್ಲಿ ಆರನೆಯ ಖಂಡವು



[ಆಗ್ನೀಧ್ರ, ಪೋತೃ ಮತ್ತು ನೇಷ್ಟ್ರ ಎಂಬ ಋತ್ವಿಜರ ಶಸ್ತ್ರಮಂತ್ರಗಳು ಹೇಗೆ ಪಠಿಸಲ್ಪಡುತ್ತವೆ. ಪೋತೃ ಮತ್ತು ನೇಷ್ಟ್ರ ಎಂಬ ಋತ್ವಿಜರನ್ನುದ್ದೇಶಿಸಿ ಹೇಳುವ ಪ್ರೈಷಮಂತ್ರಗಳು. ಅಚ್ಛಾವಾಕನು ಪಠಿಸುವ ಹೆಚ್ಚಿನ ಮಂತ್ರವು. ಹೋತೃವು ಪಠಿಸಬೇಕಾದ ಹೋತಾ ಯಕ್ಷತ್ ಎಂದು ಪ್ರಾರಂಭವಾಗುವ ಮಂತ್ರಗಳು ಪೋತೃ, ನೇಷ್ಟ್ರ ಮತ್ತು ಆಗ್ನೀಧ್ರರಿಗೆ ಹೇಗೆ ಅನ್ವಯಿಸುತ್ತವೆ? ಮಂತ್ರವನ್ನು ಪಠಿಸುವವರಿಗೆ ಅನ್ವಯಿಸುವ ಪ್ರೈಷಮಂತ್ರಗಳು. ಅಚ್ಛಾವಾಕನಿಗೆ ಅನ್ವಯಿಸುವ ಪ್ರೈಷಮಂತ್ರವು. ತೃತೀಯಸವನದಲ್ಲಿ ಪಠಿಸಲ್ಪಡುವ ಶಸ್ತ್ರ ಮತ್ತು ಸ್ತೋತ್ರಿಯ ಮಂತ್ರಗಳ ದೇವತೆಗಳಿಗೆ ಇರುವ ಪರಸ್ಪರ ವ್ಯತ್ಯಾಸವು]



**ಅಥಾಹ ಯದೇತಾಸ್ತಿಸ್ರ ಉಕ್ಥಿನ್ಯೋ ಹೋತ್ರಾಃ ಕಥಮಿತರಾ ಉಕ್ಥಿನ್ಯೋ ಭವಂತೀತಿ ॥**

ಸರ್ವತ್ರ ಹೋತ್ರಕಶಬ್ದವ್ಯವಹಾರಸಾಮ್ಯೇನ ಶಸ್ತ್ರರಹಿತಾನಾಮುಪ್ಯುಚರಿತಮುಕ್ಥಿತ್ವಮಿತ್ಯುಕ್ತಂ । ಇದಾನೀಂ ಪ್ರಕಾರಾಂತರೇಣ ತೇಷಾಮುಕ್ಥಿತ್ವಂ ಸಂಪಾದಯಿತುಂ ಪ್ರಶ್ನಮುದ್ಭಾವಯತಿ--ಅಥ ಮೈತ್ರಾವರುಣಾದೀನಾಂ ತ್ರಯಾಣಾಮುಪಚರಿತಂ ದ್ವಿತೀಯಶಸ್ತ್ರಸಂಪಾದನಾನಂತರಂ ಬ್ರಹ್ಮವಾದೀ ಚೋದ್ಯಮಾಹ । ಯದ್ಯಸ್ಮಾತ್ಕಾರಣಾದೇತಾಃ ಪೂರ್ವೋಕ್ತಾ ಹೋತ್ರಾ ಮೈತ್ರಾವರುಣಾದೀನಾಂ ಕ್ರಿಯಾಸ್ತಿಸ್ರ ಉಕ್ಥಿನ್ಯಃ ಶಸ್ತ್ರೋಪೇತಾಸ್ತದ್ದೃಷ್ಟಾಂತೇನೇತರಾಃ ಪೋತ್ರಾದೀನಾಂ ಕ್ರಿಯಾ ಅಪಿ ಶಸ್ತ್ರಯುಕ್ತಾ ಇತಿ ವಕ್ತವ್ಯಂ । ನ ಚಾತ್ರಶಸ್ತ್ರಂ ವಿಹಿತಂ ಅತಃ ಕಥಮೇತಾ ಉಕ್ಥಿನ್ಯ ಇತಿ ಪ್ರಶ್ನಃ ॥

ಹೋತ್ರಕಶಬ್ದವೆಂದರೆ ಸಾಧಾರಣವಾಗಿ ಶಸ್ತ್ರಮಂತ್ರವನ್ನು ಪಠಿಸದೇ ಇರುವ ಹೋತೃವಿನ ಸಹಾಯಕರು ಎಂದರ್ಥವು ಈ ವಿಷಯವನ್ನು ಪ್ರಕಾರಾಂತರವಾಗಿ ವಿವರಿಸುವುದಾದರೆ ಒಂದು ಪ್ರಶ್ನೆಯನ್ನು ವಿವರಿಸಿ ಹೇಳಬೇಕಾಗುವುದು. ಈಗ ಮೈತ್ರಾವರುಣಾದಿ ಮೂರುಮಂದಿ ಋತ್ವಿಜರು ಹೇಳಬೇಕಾದ ಎರಡನೇ ಶಸ್ತ್ರಮಂತ್ರವನ್ನು ಸಿದ್ಧಪಡಿಸಿದಾಗ ಬ್ರಹ್ಮವಾದಿ ಅಥವಾ ಯಜ್ಞಕರ್ಮಕುಶಲನು ಒಂದು ವಿಶೇಷಸಂಗತಿಯನ್ನು ಪ್ರಶ್ನೆಮಾಡುವನು. ಹಿಂದೆ ಹೇಳಿದಂತೆ ಹೋತ್ರಕರಾದ ಮೈತ್ರಾವರುಣಾದಿ ಮೂರುಮಂದಿ ಋತ್ವಿಜರು ಶಸ್ತ್ರಮಂತ್ರಗಳು ಪಠಿಸುವ ಪದ್ಧತಿ ಇರುವುದರಿಂದ ಇವರಿಗೆ **ಉಕ್ಥಿನ್ಯಃ** ಎಂದು ಹೇಳುವ ಸಂಪ್ರದಾಯವಿರುವುದು. ಇದು ನ್ಯಾಯವಾಗಿಯೇ ಇದೆ. ಆದರೆ ಇವರಂತೆ ಇರುವ ಪೋತೃ ಮೊದಲಾದವರು ಶಸ್ತ್ರಮಂತ್ರಗಳನ್ನು ಪಠಿಸುವುದಿಲ್ಲ. ಆದರೂ ಅವರನ್ನು **ಉಕ್ಥಿನ್ಯಃ**–ಶಸ್ತ್ರಮಂತ್ರಗಳನ್ನು ಪಠಿಸುವವರು ಎಂದು ಅವರ ಜತೆಯಲ್ಲಿ ಸೇರಿಸಿ ಹೇಳುವರು ಇದು ಹೇಗೆ? ಎಂಬುದೇ ಇಲ್ಲಿ ಪ್ರಶ್ನೆಯು.

ಆಜ್ಯಮೇವಾಽಽಗ್ನೀಧ್ರೀಯಾಯಾ ಉಕ್ಥಂ ಮರುತ್ವತೀಯಂ ಪೋತ್ರೀ-
ಯಾಯೈ ವೈಶ್ವದೇವಂ ನೇಷ್ಟ್ರೀಯಾಯೈ ತಾ ವಾ ಏತಾ
ಹೋತ್ರಾ ಏವಂ ನ್ಯಂಗಾ ಏವ ಭವಂತಿ ॥

ತತ್ರೋತ್ತರಮಾಹ— ಹೋತುಃ ಪ್ರಾತಃಸವನೇ ಯತ್ಪ್ರಥಮಮಾಜ್ಯಶಸ್ತ್ರಂ ತದೇವಾಽಽಗ್ನೀಧ್ರೀಯಾಯೈ, ಆಗ್ನೀಧ್ರೇಣ ಕ್ರಿಯಮಾಣಾಯಾಃ ಕ್ರಿಯಾಯಾ ಉಕ್ಥಂ ಶಸ್ತ್ರಂ । ಏವಂ ಮರುತ್ವತೀಯವೈಶ್ವದೇವಯೋರಪಿ ಯೋಜ್ಯಂ । ತಥಾ ಸತಿ ತಾ ಏವೈತಾ ಹೋತ್ರಾ ಹೋತ್ರಕಾಣಾಂ ಕ್ರಿಯಾ ಏವಮುಕ್ತೇನ ಪ್ರಕಾರೇಣ ನ್ಯಂಗಾಸ್ತತ್ತಚ್ಚಿಹ್ನಾ ಏವ ಭವಂತಿ । ಅಗ್ನಿಮಾಗ್ನೀಧ್ರೋ ಯಜತಿ । ಆಜ್ಯಶಸ್ತ್ರಂ ಚಾಗ್ನೇಯಂ । ಪೋತಾ ಮರುತೋ ಯಜತಿ । ಮರುತ್ವತೀಯೇ ಚ ಮಾರುತಾನಿ ಸೂಕ್ತಾನಿ ಶಂಸತಿ । ಅಗ್ನೇ ಪತ್ನೀರಿಹಾವಹೇತಿ ನೇಷ್ಟಾ ಯಜತಿ । ತತ್ರ ದೇವಾನಾಮುಶತೀರಿತ್ಯತ್ರ ದೇವಾನಾಮಿತಿ ಶ್ರವಣಮಸ್ತಿ । ಏವಂ ತ್ರಯಾಣಾಮಪ್ಯಾಗ್ನೀಧ್ರಪೋತೃನೇಷ್ಟ್ರೂಣಾಮಾಗ್ನೇಯತ್ವಮಾರುತತ್ವವೈಶ್ವದೇವತ್ವಚಿಹ್ನಾನಿ ವಿದ್ಯಂತೇ ॥

ಮೇಲಿನ ಪ್ರಶ್ನೆಗೆ ಉತ್ತರವನ್ನು ಹೇಳುವರು. ಹೋತೃವು ಪ್ರಾತಸ್ಸವನಕಾಲದಲ್ಲಿ ಪಠಿಸುವ ಆಜ್ಯಶಸ್ತ್ರವೇ ಆಗ್ನೀಧ್ರನಿಗೆ ಪಠಿಸಬೇಕಾದ ಉಕ್ಥಶಸ್ತ್ರವಾಗಿರುವುದು. ಇದೇರೀತಿ ಮರುತ್ವತೀಯ ವೈಶ್ವದೇವಮಂತ್ರಗಳ ವಿಷಯದಲ್ಲಿಯೂ ಊಹಿಸಿಕೊಳ್ಳಬೇಕು. ಇದೇರೀತಿ ಹೋತೃವರ್ಗದ ಇತರ ಋತ್ವಿಜರ ವಿಷಯದಲ್ಲಿ ನ್ಯಂಗಾ ಎಂದೆ ಇದೇವಿಧವಾದ ಚಿಹ್ನೆಯುಳ್ಳದ್ದಾಗಿರುವುದು. ಹೇಗೆಂದರೆ ಆಗ್ನೀಧ್ರನು ಅಗ್ನಿಯಲ್ಲಿ ಹೋಮಮಾಡುವನು. ಆಜ್ಯಶಸ್ತ್ರವೆಂದರೆ ಅಗ್ನಿಯಲ್ಲಿ ಹೋಮಮಾಡುವ ಶಸ್ತ್ರಮಂತ್ರವು. ಪೋತೃವೆಂಬ ಋತ್ವಿಜನು ಮರುದ್ದೇವತೆಗಳನ್ನುದ್ದೇಶಿಸಿ ಹೋಮಮಾಡುವನು. ಹೀಗೆ ಮಾಡುವಾಗ ಮಾರುತಸೂಕ್ತಗಳನ್ನು ಪಠಿಸುವನು. ನೇತೃವೆಂಬ ಹೋತ್ರಕನು ಅಗ್ನೇ ಪತ್ನೀರಿಹಾವಹ ಎಂದು ಹೋಮಮಾಡುವನು. ಈ ಮಂತ್ರದಲ್ಲಿ ದೇವಾನಾಮುಶತೀ ಎಂಬಲ್ಲಿ ದೇವಾನಾಂ ಎಂಬ ಪದಪ್ರಯೋಗವಿರುವುದು. ಈರೀತಿ ಆಗ್ನೀಧ್ರ, ಪೋತೃ, ನೇತೃ ಎಂಬ ಮೂರು ಮಂದಿ ಋತ್ವಿಜರೂ ಸಹ ಹೋಮಮಾಡುವ ಮಂತ್ರಗಳು ವೈಶ್ವದೇವಚಿಹ್ನೆಯಿಂದ ಕೂಡಿವೆ. ಎಂದರೆ ಆಜ್ಯಾದಿ ಉಕ್ಥಮಂತ್ರಗಳನ್ನು ಇವರು ಪಠಿಸಬೇಕಾಗಿರುವುದು. ಈ ಕಾರಣದಿಂದಲೇ ಇವರನ್ನು ಉಕ್ಥಿನಃ ಶಸ್ತ್ರಮಂತ್ರವನ್ನು ಪಠಿಸಲು ಅರ್ಹರು ಎಂದು ಹೇಳುವುದು ಉಚಿತವಾಗಿದೆ.

ಅಥಾಽಽಹ ಯದೇಕಪ್ರೈಷಾ ಅಜ್ಯೇ ಹೋತ್ರಕಾ ಅಥ ಕಸ್ಮಾದ್ದ್ವಿಪ್ರೈಷಃ
ಪೋತಾ ದ್ವಿಪ್ರೈಷೋ ನೇಷ್ಟೇತಿ ॥

ತೇಷಾಮೇವ ಹೋತ್ರಕಾಣಾಂ ಮೃತುಯಾಜೇಷು ಕಸ್ಯಚಿದ್ವಿಶೇಷಸ್ಯ ಪ್ರಶ್ನಮವತಾರಯತಿ— ಪ್ರೈಷಸೂಕ್ತೇ ಯೇ ಪ್ರೈಷಾ ಉಕ್ತಾ ಸ್ತೇಷ್ವೃಪೋತೃವ್ಯತಿರಿಕ್ತಾನಾಂ ಹೋತ್ರಕಾಣಾಂ ತೇಷು ಪ್ರೈಷೇಷ್ವೇಕೈಕಏವ ಪ್ರೈಷಃ ಪೋತುರ್ನೇಷ್ಟುಶ್ಚ ದ್ವೌ ದ್ವೌ ಪ್ರೈಷೌ । ತಥಾ ಚ ಯಜ್ಞಸಂಪ್ರದಾಯವಿದಃ ಪಠಂತಿಹೋಪೋನೇಗ್ನೀಬ್ರಾಪ್ರಹೋಪೋನೇಚ್ಛಾಧ್ವಯುರ್ಗೃಹಪತೀತಿ ಚೇತಿ । ಅಸ್ಯಾಯಮರ್ಥಃ । ತತ್ರ ನಾಮ್ನಾಮಾದ್ಯಕ್ಷರೇಣೈತೇ ಕ್ರತುಪುರುಷಾ ನಿರ್ದಿಶ್ಯಂತೇ । ತಥಾಚ ಹೋತಾ ಪೋತಾ ನೇಷ್ಟಾಗ್ನೀಧ್ರೋ ಬ್ರಾಹ್ಮಣಾಚ್ಛಂಸೀ ಪ್ರಶಾಸ್ತಾ

